॥ ಶ್ರೀಃ ॥

# ಶ್ರೀಮದನುವ್ಯಾಖ್ಯಾನವು.



ಓಂ ॥ ಶ್ರಿಯಃ ಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ
ಪ್ರಭಾಜಾಲೋಲ್ಲಾಸೋಪಹತ ಸಕಲಾವದ್ಯತಮಸೇ ।
ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ
ನಮೋಽಶೇಷಾಮ್ನಾಯ ಸ್ಮೃತಿಹೃದಯದೀಪ್ತಾಯ ಹರಯೇ ॥ ೧ ॥

ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ
ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ತ್ವಂ ಪರಂ ।
ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಚಾಕಾರಿ ಸನ್ಮಾರ್ಗಗ
ಸ್ತೇನ ವ್ಯಾಸದಿವಾಕರೇಣ ಸತತಂ ಮಾತ್ಯಾಜಿ ಮೇ ಮಾನಸಂ ॥ ೨ ॥

ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ
ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೇ ಸಕ್ತಿರ್ನವೈ ಬಾಧಿತೇ ।
ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸ ಮೇ
ಭೂಯಾತ್ತತ್ತ್ವವಿನಿರ್ಣಯಾಯ ಭಗವಾನಾನಂದತೀರ್ಥೋ ಮುನಿಃ ॥ ೩ ॥

ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।
ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥ ೪ ॥

ರಮಾನಿವಾಸೋಚಿತವಾಸಭೂಮಿಃ
ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭ
ತೀರ್ಥಾಮೃತಾಬ್ಧಿರ್ಭವತಾದ್ವಿಭೂತ್ಯೈ ॥ ೫ ॥

ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ಮಮ ॥ ೬ ॥

ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ।
ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥ ೭ ॥

---

* ಈ ೭ ಶ್ಲೋಕಗಳು ಅನುವ್ಯಾಖ್ಯಾನಕ್ಕೆ ಟೀಕೆಯಾದ ಜಯತೀರ್ಥ ಶ್ರೀಮಚ್ಚರಣರು ಮಾಡಿರುವ 'ನ್ಯಾಯಸುಧಾ' ಎನ್ನುವ ಗ್ರಂಥದ ಮಂಗಲಾಚರಣೆಗಳು. ಗಂಭೀರವಾಗಿಯೂ, ವಿಸ್ತಾರವಾಗಿಯೂ ಇರುವ ಈ ನ್ಯಾಯಸುಧೆಯ ಅರ್ಥವನ್ನು ತಿಳಿಸುವ ಈ ಗ್ರಂಥಕ್ಕೂ ಇವನ್ನೇ ಮಂಗಲಾಚರಣವನ್ನಾಗಿಟ್ಟುಕೊಂಡದೆ. ಇವುಗಳ ತಾತ್ಪರ್ಯವು.

"ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಂ । ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ "॥ "ಈ ಅನುವ್ಯಾಖ್ಯಾನಕ್ಕೂ, ಭಾಷ್ಯಕ್ಕೂ ಅತಿವಿಸ್ತೃತಗಳಾದ ಅನೇಕಾರ್ಥ

ಗಳಿವೆ. ಇವುಗಳನ್ನು ಹೆಚ್ಚು ತಿಳಿದವರೇ ವಿಶೇಷತಃ ತಿಳಿಯುತ್ತಾರೆ, ಎನ್ನುವ ಆಚಾರ್ಯರ ವಚನದಲ್ಲಿ ಜನರಿಗೆ ವಿಶ್ವಾಸವನ್ನು ಹುಟ್ಟಿಸುವುದಕ್ಕಾಗಿ ಜಯತೀರ್ಥ ಶ್ರೀಮಚ್ಚರಣರು ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನವನ್ನು ಆರಂಭಿಸುತ್ತಾ ಸಮಾಪ್ತಿ ಮೊದಲಾದ ಪ್ರಯೋಜನವಾಗುವುದಕ್ಕಾಗಿ ಶ್ರೀ ಲಕ್ಷ್ಮೀಪತಿಯಾದ ಶ್ರೀ ನಾರಾಯಣನ ಸ್ತೋತ್ರ ಪ್ರಣಾಮರೂಪಗಳಾದ ಮಂಗಲವನ್ನು ಮಾಡುತ್ತಾರೆ.

ನಿತ್ಯಗಳೂ ಎಣಿಕೆಮಾಡಲಿಕ್ಕೆ ಅಶಕ್ಯಗಳೂ ಆದ ಸರ್ವಸ್ವಾತಂತ್ರ್ಯ ಸರ್ವಜ್ಞಾನ ಸರ್ವಶಕ್ತಿ ಸರ್ವೈಶ್ವರ್ಯ ಮೊದಲಾದ ಗುಣಗಳೆಂಬ ಮಾಣಿಕ್ಯರತ್ನಗಳ ಸ್ವಚ್ಛಪ್ರಭೆಗಳ ಸಮೂಹಗಳ ಆಧಿಕ್ಯದಿಂದ ಎಲ್ಲಾ ದೋಷಗಳೆಂಬ ತಮಸ್ಸಿಗೆ ದೂರನಾದವನು. ಅಂದರೆ ಗುಣಪರಿಪೂರ್ಣನೂ ದೋಷಲೇಶರಹಿತನೂ ಆಗಿರುವವನು, ಜಗತ್ತಿಗೆ ಉತ್ಪತ್ತಿಯು, ಸ್ಥಿತಿಯು, ನಾಶವೂ ಇವುಗಳನ್ನು (ನಿಯಮನಾದಿಗಳನ್ನೂ) ಮಾಡುವ ಸ್ವಭಾವವೇ ಶರೀರವಾಗಿ ಉಳ್ಳವನು (ಅಂದರೆ ಪ್ರಯೋಜನವಿಲ್ಲದಿದ್ದರೂ ಸೃಷ್ಟ್ಯಾದಿ ವ್ಯಾಪಾರವು ಸ್ವಭಾವವು) ವೇದ ವೇದಾನುಸಾರಿಗಳಾದ ಎಲ್ಲಾ ಪೌರುಷೇಯ ಅಪೌರುಷೇಯಾಗಮಗಳೂ ಸ್ಮೃತಿಗಳೂ ಇವುಗಳ ತಾತ್ಪರ್ಯದಿಂದ ಪ್ರಕಾಶಿಸಲ್ಪಟ್ಟವನೂ, (ಅಂದರೆ ವೇದಾದಿಗಳಿಂದಲೇ ತಿಳಿಯಲ್ಪಡತಕ್ಕವನು) ಸರ್ವ ದುಃಖಗಳನ್ನು ಪರಿಹರಿಸಿಕೊಡುವವನೂ ಆದ ಎಲ್ಲಾ ವಚನಗಳಿಗೂ ಮನಸ್ಸಿಗೂ ದೇವತೆಯಾದ ಲಕ್ಷ್ಮೀದೇವಿಯ ಪತಿಯಾದ ಶ್ರೀಮನ್ನಾರಾಯಣದೇವರಿಗೋಸ್ಕರ ನಮಸ್ಕಾರವು ॥ ೧ ॥

ವ್ಯಾಖ್ಯಾನ ಮಾಡಲಿಷ್ಟವಾದ ಅನುವ್ಯಾಖ್ಯಾನಕ್ಕೆ ಮೂಲಭೂತವಾದ ಬ್ರಹ್ಮಸೂತ್ರವನ್ನು ನಿರ್ಮಿಸಿರುವ ಶ್ರೀ ವೇದವ್ಯಾಸರನ್ನು ಸೂರ್ಯದೃಷ್ಟಾಂತದಿಂದ ವರ್ಣಿಸುತ್ತಾರೆ.

ಹೇಗೆ ಸೂರ್ಯನು ಉದಯಿಸಿ ಕಿರಣಗಳ ಸಮೂಹವನ್ನು ವಿಸ್ತರಿಸುತ್ತಾ ಕಮಲಗಳನ್ನು ವಿಕಾಸಗೊಳಿಸಿಕೊಂಡು ಅಂಧಕಾರವನ್ನು ನಾಶಮಾಡಿ ಎಲ್ಲಾ ವಸ್ತುಗಳನ್ನು ಪ್ರಕಾಶಪಡಿಸುವನೋ ಹಾಗೆಯೇ ಯಾವ ವೇದವ್ಯಾಸರು ಭೂಮಂಡಲದಲ್ಲಿ (ಯಮುನಾದ್ವೀಪದಲ್ಲಿ) ಅವತರಿಸಿ ಭಾರತ, ಪುರಾಣ, ಬ್ರಹ್ಮಸೂತ್ರ ಮೊದಲಾದ ಗ್ರಂಥಗಳನ್ನು ನಿರ್ಮಿಸಿ ವೇದಗಳನ್ನು ಅಭಿವ್ಯಕ್ತೀಕರಿಸಿ ದಯೆಯಿಂದ ಸರ್ವೋತ್ಕೃಷ್ಟವಾದ ತತ್ವವನ್ನು ಪ್ರಕಾಶಪಡಿಸಿರುವರೋ ಮತ್ತು ಅಜ್ಞಾನವನ್ನು ನಾಶಮಾಡಿ ಸಜ್ಜನರನ್ನು ಸನ್ಮಾರ್ಗದಲ್ಲಿರುವವರಂತೆ ಮಾಡಿರುವರೋ ಅಂತಹ ವೇದವ್ಯಾಸರಲ್ಲಿಯೇ ಸರ್ವದಾ ನನ್ನ ಮನಸ್ಸು ಆಸಕ್ತವಾಗಿರಲಿ. ॥ ೨ ॥

ವ್ಯಾಖ್ಯಾನಮಾಡಲಿಕ್ಕೆ ಇಷ್ಟವಾಗಿರುವ ಶ್ರೀ ಅನುವ್ಯಾಖ್ಯಾನವನ್ನು ಮಾಡಿರುವ ಶ್ರೀಮದಾನಂದತೀರ್ಥಾಚಾರ್ಯರನ್ನು ಅನುಮಾನ ಸಾಮ್ಯದಿಂದ ವರ್ಣಿಸುತ್ತಾ ತತ್ವವನ್ನು ನಿಶ್ಚಯಿಸಿಕೊಡಬೇಕೆಂದು ಪ್ರಾರ್ಥಿಸುತ್ತಾರೆ.

ಪ್ರತ್ಯಕ್ಷ, ಅನುಮಾನ, ಆಗಮ ಎಂದು ೩ ಪ್ರಮಾಣವು. ಅದರಲ್ಲಿ ಅನುಮಾನವು ಯಥಾರ್ಥಜ್ಞಾನವನ್ನು ಹುಟ್ಟಿಸಬೇಕಾದರೆ ವ್ಯಾಪ್ತ್ಯಾಖ್ಯ ಸಾಮರ್ಥ್ಯದಿಂದ ಸಾಧ್ಯಸಂಶಯವಿಷಯವಾದ ಎಲ್ಲಾ ಪಕ್ಷದಲ್ಲಿ ಹೇತುವಿರಬೇಕು. ಸಾಧ್ಯನಿಶ್ಚಯಕ್ಕೆ ವಿಷಯವಾದ ಸಪಕ್ಷದಲ್ಲಿಯೂ ಹೇತುವಿರಬೇಕು. ಸಾಧ್ಯವಿಲ್ಲವೆಂದು ಎಲ್ಲಿ ನಿಶ್ಚಯವಿದೆಯೋ ಅಂತಹ ವಿಪಕ್ಷದಲ್ಲಿ ಹೇತುವಿರಬಾರದು. ಬಾಧವೂ ಪ್ರತಿಪಕ್ಷಾನುಮಾನವೂ ಇರಬಾರದು. ಅಂತಹ ಅನುಮಾನರೂಪಪ್ರಮಾಣವು ತತ್ವನಿಶ್ಚಯಕ್ಕೆ ಹೇಗೆ ಸಾಧಕವಾಗುವುದೋ, ಹಾಗೆಯೇ ಶ್ರೀ ಹರಿಯು ಸರ್ವೋತ್ತಮನೆನ್ನುವುದು ಯಥಾರ್ಥಜ್ಞಾನವೋ ಐಕ್ಯಜ್ಞಾನವು ಯಥಾರ್ಥಜ್ಞಾನವೋ ಎಂದು ಸಂಶಯವಿರುವ ಭಕ್ತರಲ್ಲಿ ಶ್ರೀ ಹರಿಯು ಸರ್ವೋತ್ತಮನೆನ್ನುವುದೇ ತತ್ವಜ್ಞಾನವು ಎಂದು ಶ್ರೀಮದಾಚಾರ್ಯರು ಸಾಧಿಸಬೇಕಾಗಿರುವುದರಿಂದ ಭಕ್ತರು ಪಕ್ಷವು, ಅವರು ತನ್ನ (ಆಚಾರ್ಯರ) ಮಹಿಮೆಯನ್ನು ಹೆಚ್ಚು ತಿಳಿದವರಾದುದರಿಂದ ಅವರಲ್ಲಿ ಸನ್ನಿಧಾನವಿಶೇಷವಿದೆ. ಆದಕಾರಣ ತನ್ನ ಪ್ರಭಾವದಿಂದ ಯಾವ ಶ್ರೀಮದಾಚಾರ್ಯರು ವ್ಯಾಪಿಸಿಕೊಂಡಿರುತ್ತಾರೋ, ತತ್ವನಿಶ್ಚಯವಿರುವ ಶ್ರೀ ಹರಿಯು ಸಪಕ್ಷನು ಅವನಲ್ಲಿ ಸರ್ವದಾ ಆಸಕ್ತರಾಗಿರುತ್ತಾರೋ, ತತ್ವನಿಶ್ಚಯವಿಲ್ಲದೆ ವಿಪರೀತ ನಿಶ್ಚಯವಿರುವ ಅಯೋಗ್ಯ ಜನರಿಗೆ ಉಪದೇಶಾದಿಗಳನ್ನು ಮಾಡಲಾರರೋ ಮತ್ತು ಭ್ರಾಂತಿರಹಿತರೂ ಪ್ರತಿಭಟರಹಿತರೂ, ಆಗಿರುತ್ತಾರೋ, ಅಂತಹ ಪೂಜ್ಯರಾದ ಆನಂದತೀರ್ಥ ಶ್ರೀಮಚ್ಚರಣರು ನನಗೆ ತತ್ವವನ್ನು ನಿಶ್ಚಯಿಸಿಕೊಡುವುದಕ್ಕಾಗಿ ಅಸದೃಶವೂ, ನಿರ್ದೋಷವೂ ಆದ ಪ್ರಮಾಣವಾಗಲಿ ಅಂದರೆ ಶ್ರೀಮದಾನಂದತೀರ್ಥಾಚಾರ್ಯರೂ ಎಲ್ಲರ ಬುದ್ಧಿಗೆ ನಿಯಾಮಕರಾಗಿರುವುದರಿಂದ ನಮಗೆ ಅನುಮಿತ್ಯಾದಿರೂಪಯಥಾರ್ಥಜ್ಞಾನವನ್ನು ಹುಟ್ಟಿಸುವವರಾಗಲಿ. ಎಲ್ಲಾ ಜ್ಞಾನಗಳಿಗೆ ಮುಖ್ಯಕಾರಣಗಳಾದ ಮನಸ್ಸು ಮೊದಲಾದವುಗಳಿಗೆ ಶಕ್ತಿಯನ್ನು ಬೋಧಿಸಿ ಮುಖ್ಯವಾಗಿ ಯಥಾರ್ಥಜ್ಞಾನಕ್ಕೆ ಕಾರಣರಾಗಿರುವುದರಿಂದ ಶ್ರೀಮದಾನಂದತೀರ್ಥಾಚಾರ್ಯರು ಪ್ರಮಾಣರೆನ್ನಿಸುತ್ತಾರೆ. ॥ ೩ ॥

ಗ್ರಂಥಕರಣವು ವಚನ, ಮನಸ್ಸು ಇವುಗಳ ವ್ಯಾಪಾರಗಳಿಂದ ಸಾಧ್ಯವಾಗಿರುವುದರಿಂದ ವಾಕ್-ಮನಸುಗಳಿಗೆ ದೇವತೆಯಾದ ಭಾರತೀದೇವಿಯನ್ನು ಪ್ರಾರ್ಥಿಸುತ್ತಾರೆ.

ಶ್ರೀಶಪಾದಾಂಬುಜಾಸಕ್ತಃ ಕರುಣಾಪೂರಶೀತಲಃ ।
ಮಧ್ವಾಖ್ಯೋ ಮರುದಂಶೋ ಮೇ ಸಂತಾಪಾನ್ ಹಂತು ಸಂತತಂ ॥
ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ ।
ಪ್ರದರ್ಶಿತೋ ಯೇನ ಸಮ್ಯಕ್ ಜಯತೀರ್ಥಂ ತಮಾಶ್ರಯೇ ॥
ಶ್ರೀಪತಿಂ ವ್ಯಾಸದೇವಂ ಚ ನತ್ವಾ ನಾರಾಯಣಾಭಿಧಃ ।
ಸುಧಾರಸಮನೋಜ್ಞಾನುವ್ಯಾಖ್ಯಾನಾರ್ಥಂ ಬ್ರವೀಮ್ಯಹಂ ॥

ಶ್ರೀಮಧ್ವಸುಮದ್ವೀಪಮಧ್ಯಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಮೂ ॥ *ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥ ೧ ॥

ಅ ॥ ಅಹಂ = ನಾನು, ನಿಖಿಲಪೂರ್ಣಗುಣೈಕದೇಹಂ ನಿಖಿಲ = ನಿಶ್ಶೇಷಗಳಾದ, ಪೂರ್ಣ=ಪ್ರತ್ಯೇಕವಾಗಿಯೂ ಅವಧಿಯಿಲ್ಲದಿರುವ, ಗುಣೈಕ=ಆನಂದಾದಿಗುಣಗಳೇ, ದೇಹಂ= ಶರೀರವಾಗಿವುಳ್ಳವನು, ನಿರ್ದೋಷಂ=ಪಾರತಂತ್ರ್ಯ ಮೊದಲಾದ ದೋಷಲೇಶವಿಲ್ಲದಿರುವವನು,

---

ಹೇಳಲಿಕ್ಕೂ ಕೇಳಲಿಕ್ಕೂ ಅಶಕ್ತನಾದಾಗ್ಯೂ ಯಾವ ಭಾರತಿಯ ಅನುಗ್ರಹದಿಂದ ವಾಗ್ಮಿಯು (ಮಾತನಾಡುವುದರಲ್ಲಿ ಅತಿಪಟುವು) ಆಗುತ್ತಾನೋ, ಮೂಢಬುದ್ಧಿಯೂ ಕೂಡ ಪಂಡಿತಶ್ರೇಷ್ಠನಾಗುತ್ತಾನೋ, ಅಂತಹ ಎಲ್ಲಾ ವಚನಗಳಿಗೂ ಮನಸ್ಸಿಗೂ ಪ್ರೇರಕಳಾದ ಭಾರತೀದೇವಿಯು ನನ್ನ ಮಾತಿನಲ್ಲಿಯೂ ಮನಸ್ಸಿನಲ್ಲಿಯೂ ಸನ್ನಿಧಾನವನ್ನು ಮಾಡಲಿ ॥ ೪ ॥

ಅನುವ್ಯಾಖ್ಯಾನಕ್ಕೆ ಸನ್ನ್ಯಾಯರತ್ನಾವಳಿ ಎನ್ನುವ ಟೀಕೆಯನ್ನು ಮಾಡಿರುವ ತನ್ನ ಪರಮ ಗುರುಗಳಾದ ಪದ್ಮನಾಭತೀರ್ಥ ಶ್ರೀಮಚ್ಚರಣರನ್ನು ಕ್ಷೀರಸಮುದ್ರ ದೃಷ್ಟಾಂತದಿಂದ ವರ್ಣಿಸುತ್ತಾ ಜ್ಞಾನಾದ್ಯೈಶ್ವರ್ಯಗಳನ್ನು ಸಾಧಿಸಿಕೊಡಲಿ ಎಂದು ಪ್ರಾರ್ಥಿಸುತ್ತಾರೆ.

ಲಕ್ಷ್ಮೀದೇವಿಯ ಆವಾಸಕ್ಕೆ ಯೋಗ್ಯನಾದ ಶ್ರೀಹರಿಯ ವಿಶೇಷವಾದ ಸನ್ನಿಧಾನಕ್ಕೆ ಪಾತ್ರರಾದವರು, ಅನುವ್ಯಾಖ್ಯಾನಕ್ಕೆ ಟೀಕೆಯಾದ ಸನ್ನ್ಯಾಯರತ್ನಾವಳಿಯನ್ನು ನಿರ್ಮಿಸಿದವರು, ವಿರಕ್ತಿಯೆನ್ನುವ ಮಹಾಭಾಗ್ಯವುಳ್ಳವರು ಇಂತಹ ಪದ್ಮನಾಭತೀರ್ಥರೆನ್ನುವ ಅಮೃತಸಮುದ್ರವು ನನ್ನ ಐಶ್ವರ್ಯಕ್ಕಾಗಿ ಇರಲಿ. ಅಂದರೆ ಪ್ರಾಚೀನ ಟೀಕಾಕಾರರು ತನಗೆ ಅಭೀಷ್ಟವನ್ನು ದಯಪಾಲಿಸಲಿ. ಇದರಿಂದ ಹೇಗೆ ಸಮುದ್ರವನ್ನು ಮಥನೆ ಮಾಡುವಾಗ ಅಮೃತವು ಲಭಿಸಿಯದೋ ಹಾಗೆಯೇ ಸನ್ನ್ಯಾಯರತ್ನಾವಳಿಕರ್ತೃಗಳಾದ ಪದ್ಮನಾಭತೀರ್ಥರೆನ್ನುವ ಸಮುದ್ರದಿಂದ ಅಮೃತದಂತಿರುವ ನ್ಯಾಯಸುಧಾ ಎನ್ನುವ ಗ್ರಂಥವು ಹುಟ್ಟಿದ್ದೆಂದು ತೋರಿಸಿದಂತೆಯಾಯಿತು ॥ ೫ ॥

ಗುರುಗಳ ಅನುಗ್ರಹವಾಗುವುದಕ್ಕಾಗಿ ತನ್ನ ಗುರುಗಳನ್ನು ನಮಸ್ಕರಿಸುತ್ತಾರೆ.

ವ್ಯಾಕರಣ ಮೀಮಾಂಸಾ ನ್ಯಾಯಶಾಸ್ತ್ರಗಳನ್ನು ತಿಳಿದವರು, ಪ್ರತಿವಾದಿಗಳ ಮದವನ್ನು ನಾಶಮಾಡಿದವರು, ಇಂತಹ ಅಕ್ಷೋಭ್ಯತೀರ್ಥರೆನ್ನುವ ನನ್ನ ಗುರುಗಳನ್ನು ಸರ್ವದಾ ಸ್ಮರಿಸುವೆನು ॥ ೬ ॥

ಹೇಗೆ ಭ್ರಮರವು ಸರೋವರದಲ್ಲಿ ಹುಟ್ಟಿರುವ ಕಮಲ ಪುಷ್ಪದ ಸಂಪೂರ್ಣ ರಸವನ್ನು ಕುಡಿಯಲಿಕ್ಕೂ ಇದನ್ನು ಬಿಟ್ಟು ಬೇರೆಕಡೆಗೆ ಹೋಗಲಿಕ್ಕೂ ಅಸಮರ್ಥವಾದುದಾಗಿ ಅಲ್ಲಲ್ಲಿಯೇ ಹೇಗೆ ತಿರುಗುತ್ತಾ ಇರುತ್ತದೋ, ಹಾಗೆಯೇ ನನ್ನ ಮನಸ್ಸು ಶ್ರೀಮದಾಚಾರ್ಯರು ಮಾಡಿರುವ ಅನೇಕಾರ್ಥಗಳಿರುವ ಈ ಅನುವ್ಯಾಖ್ಯಾನದಲ್ಲಿರುವ ಒಂದು ವಾಕ್ಯದ್ದೂ ಸಂಪೂರ್ಣ ಅರ್ಥವನ್ನು ಹೇಳಲಿಕ್ಕೆ ಅಸಮರ್ಥವಾದುದಾಗಿ ಅದನ್ನು ಬಿಟ್ಟು ಮೇಲಿನ ವಾಕ್ಯವನ್ನು ವ್ಯಾಖ್ಯಾನಮಾಡಲಿಕ್ಕೂ ಅಸಮರ್ಥವಾಗಿ ಅಲ್ಲಿಯೇ ತಿರುಗಾಡುತ್ತಾ ಇರುತ್ತದೆ. ಅಂದರೆ ಅನೇಕಪ್ರಕಾರವಾಗಿ ವ್ಯಾಖ್ಯಾನಮಾಡಲಿಕ್ಕೆ ಮನಸ್ಸು ಪ್ರವೃತ್ತವಾಗುತ್ತದೆ ॥ ೭ ॥

*ಲೋಕವನ್ನುದ್ಧರಿಸುವುದಕ್ಕಾಗಿ ಅವತರಿಸಿರುವ ಶ್ರೀಮದಾಚಾರ್ಯರು ತ್ರಿವಿಕ್ರಮಪಂಡಿತಾಚಾರ್ಯರ

ಅಸ್ಯ=ಈ, (ಕಾಣುವ ಅಂದರೆ ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿರುವಪ್ರಯುಕ್ತ ಬುದ್ಧಿಯಲ್ಲಿ ಸನ್ನಿಹಿತವಾದ, ಪರಮಾತ್ಮನಾದ ತನ್ನನ್ನು ಬಿಟ್ಟಿರುವ) ಸರ್ವ ಪ್ರಪಂಚಕ್ಕೆ, ಅಶೇಷ ವಿಶೇಷತೋಽಪಿ = ಎಲ್ಲಾ ಅವಾಂತರಭೇದಗಳಿಂದೊಡಗೂಡಿದ, ಉದ್ಭವಾದಿದಂ=ಆಯಾಯ ವಸ್ತುಗಳನ್ನನುಸರಿಸಿ ಉತ್ಪತ್ತಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳನ್ನು ಕೊಡುವವನು, ಅಶೇಷವಿಶೇಷತೋಽಪಿ ವಂದ್ಯಂ = ಎಲ್ಲಾ ಅಸಾಧಾರಣ ಧರ್ಮಗಳಿಂದಲೂ ನಮ್ಯನು, ಅಂದರೆ ನಮಸ್ಕಾರಕ್ಕೆ ಅರ್ಹತೆಯನ್ನು ಕೊಡುವ ನಿಮಿತ್ತಭೂತಗಳಾದ ಸರ್ವ ಗುಣಗಳುಳ್ಳವನು, ಅಂದರೆ ಎಲ್ಲಾ ಹೇತುಗಳೂ ಇದ್ದುದರಿಂದ ನಮಸ್ಕರಿಸಿಕೊಳ್ಳಲ್ಪಡತಕ್ಕವನು ಅಥವಾ ಅಶೇಷ=ನಮಸ್ಕರಿಸಿಕೊಳ್ಳಲ್ಪಡತಕ್ಕ ರಮಾ-ಬ್ರಹ್ಮಾದಿ ಸರ್ವ ಜಗತ್ತಿಗಿಂತ, ವಿಶೇಷತೋಽಪಿ=ಅತಿಶಯ (ಬಹೂತ್ತಮತ್ವ) ವಿದ್ದುದರಿಂದಲೂ, ವಂದ್ಯಂ=ನಮಸ್ಕರಿಸಿಕೊಳ್ಳಲ್ಪಡುವವನು, ಅಖಿಲೈಃ ಸುವಾಕ್ಯೈರಪಿ = ಅಪೌರುಷೇಯವಾಗಿರುವುದರಿಂದಲೂ ಅಪೌರುಷೇಯ ಮೂಲಕವಾಗಿರುವುದರಿಂದಲೂ ದೋಷಾದಿಗಳ ಸಂಶಯವೇ ಇಲ್ಲದಿರುವುದರಿಂದ ಮಂಗಳಗಳಾದ ವೇದಮೊದಲಾದ ಎಲ್ಲಾ ವಾಕ್ಯಗಳಿಂದಲೂ ಬ್ರಹ್ಮಸೂತ್ರಗಳಿಂದಲೂ, ಆಪ್ಯತಮಂ= ಅತಿಶಯವಾಗಿ ಪ್ರತಿಪಾದಿಸಲ್ಪಡುವವನು, ಸದಾ = ಯಾವಾಗಲೂ, ಮಮ = ನನಗೆ, ಪ್ರಿಯತಮಂ=ಅತಿಶಯವಾಗಿ ಪ್ರಿಯನಾದವನು, ಇಂತಹ, ನಾರಾಯಣಂ=ಶ್ರೀ ನಾರಾಯಣನನ್ನು, ಸನ್ನಮಾಮಿ=ಭಕ್ತ್ಯಾದ್ಯತಿಶಯಪೂರ್ವಕವಾಗಿ ನಮಸ್ಕರಿಸುತ್ತೇನೆ.

ತಾ || ಸನ್ನ್ಯಾಯರತ್ನಾವಳೀ ವಿಶೇಷಾಂಶ- (1)'ನಿಖಿಲಪೂರ್ಣ' ಇತ್ಯಾದಿ ವಿಶೇಷಣಗಳು ನಾರಾಯಣನೇ ನಮ್ಯನೆಂಬುವುದನ್ನು ಉಪಪಾದಿಸುವುದಕ್ಕಾಗಿ. (2)ಗುಣಗಳಿದ್ದರೂ ಚೇತನನಾದುದರಿಂದ ಬ್ರಹ್ಮಾದಿಗಳಂತೆಯೇ ದೋಷಗಳಿರಬಹುದೆಂದರೆ 'ನಿರ್ದೋಷಂ' ಎಂದರು.

---

ಪ್ರಾರ್ಥನೆಯನ್ನು ಲಾಲಿಸಿ, ಅನುವ್ಯಾಖ್ಯಾನವೆಂಬ ಗ್ರಂಥರತ್ನವನ್ನು ವಿರಚಿಸಿ ಏಕಕಾಲದಲ್ಲಿ 4 ಶಿಷ್ಯರ ಕೈಯಿಂದ 4 ಅಧ್ಯಾಯಗಳನ್ನು ಬರೆಯಿಸಿದರೆಂದು ಶ್ರೀ ಸುಮಧ್ವವಿಜಯದಲ್ಲಿ ವರ್ಣಿಸಲ್ಪಟ್ಟಿದೆ.

ಸರ್ಗ ೧೫. ಶ್ಲೋ. 84-85-86-87 "ಅಪರೋಽಪೀಷ್ಯತೇಽಸ್ಮಾಭಿರ್ಗ್ರಂಥೋಽಸ್ತ್ವೇತೇಷು ಸತ್ಸ್ವಪಿ | ಸತ್ಸ್ವಪೀಂದ್ರಾದಿಷು ಪುರಾ ತಾರಕಾರಿರಿವಾಮರೈಃ || ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ಯುಕ್ತಯೋ ನೋ ದುರುದ್ಧರಾಃ | ಮನೋಮಾಂದ್ಯಾತ್ತತೋ ಗ್ರಂಥಂ ವ್ಯಕ್ತತರ್ಕತತಿಂ ಕುರು || ಇತ್ಯರ್ಥಿತೋ ವ್ಯಧಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಸುಧಾಂ | ದುರ್ವಾದಿ ಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಂ || ಯುಗಪದ್ರಚಯನ್ನೇನಾಂ ಕದಾಚಿತ್ಸ ನಿರಂತರಂ | ಚತುರಶ್ಚತುರಃ ಶಿಷ್ಯಾನ್ಲೀಲಯಾಲೇಖಯತ್ಪಲು" || ಇಂದ್ರಾದಿ ದೇವತೆಗಳಿದ್ದರೂ ದೇವತೆಗಳು ಷಣ್ಮುಖನನ್ನು ಹೇಗೆ ಇಚ್ಛಿಸಿರುವರೋ, ಹಾಗೆಯೇ ಬ್ರಹ್ಮಸೂತ್ರಭಾಷ್ಯ ಮೊದಲಾದ ಅನೇಕ ಗ್ರಂಥಗಳಿದ್ದರೂ ತಾವು ಇನ್ನೊಂದು ಗ್ರಂಥವನ್ನು ಮಾಡಬೇಕೆಂದು ನಾವು ಇಚ್ಛಿಸುತ್ತೇವೆ. ಏಕೆಂದರೆ— ಮೂಢಬುದ್ಧಿಗಳಾದ ನಮಗೆ ಗಂಭೀರಗಳಾದ ಈ ಗ್ರಂಥಗಳಿಂದ ಯುಕ್ತಿಗಳನ್ನು ತಿಳಿಯಲು ಸಾಧ್ಯವಿಲ್ಲ. ಆದಕಾರಣ ಸ್ಪಷ್ಟವಾಗಿ ಯುಕ್ತಿಗಳನ್ನು ತಿಳಿಸುವ ಗ್ರಂಥವನ್ನು ಮಾಡು. ಹೀಗೆ ತ್ರಿವಿಕ್ರಮಪಂಡಿತಾಚಾರ್ಯರಿಂದ ಪ್ರಾರ್ಥಿತರಾದ ಶ್ರೀಮದಾಚಾರ್ಯರು ಸಜ್ಜನರಿಗೆ ಅಮೃತಪ್ರಾಯವಾಗಿಯೂ ದುರ್ವಾದಿಗಳ ಗರ್ವವೆನ್ನುವ ಪರ್ವತಕ್ಕೆ ವಜ್ರಾಯುಧದಂತೆಯೂ ಮಾಯಾವಾದಿಗಳೆಂಬ ಅಂಧಕಾರಕ್ಕೆ ಸೂರ್ಯನ ಪ್ರಕಾಶದಂತೆಯೂ ಇರುವ ಅನುವ್ಯಾಖ್ಯಾನವನ್ನು ನಿರ್ಮಿಸುತ್ತಾ ಏಕಕಾಲದಲ್ಲಿ ನಾಲ್ಕು ಅಧ್ಯಾಯಗಳನ್ನು ನಾಲ್ಕು ಮಂದಿ ಶಿಷ್ಯರಿಂದ ನಿರಾಯಾಸವಾಗಿ ಬರೆಯಿಸುವವರಾದರು.

ಈ ಅನುವ್ಯಾಖ್ಯಾನಕ್ಕೆ ಶ್ರೀಮತ್ಪದ್ಮನಾಭತೀರ್ಥರು ಸನ್ನ್ಯಾಯರತ್ನಾವಳಿ ಎನ್ನುವ ಟೀಕೆಯನ್ನೂ, ನಾರಾಯಣಪಂಡಿತಾಚಾರ್ಯರು ನಯಚಂದ್ರಿಕಾ ಎನ್ನುವ ಟೀಕೆಯನ್ನೂ, ಜಯತೀರ್ಥ ಶ್ರೀಮಚ್ಚರಣರು ನ್ಯಾಯಸುಧಾ ಎನ್ನುವ ಟೀಕೆಯನ್ನೂ ರಚಿಸಿರುವರು. ಪ್ರಕೃತ ಸಾಮಾನ್ಯವಾಗಿ 'ನ್ಯಾಯಸುಧಾ' ಎನ್ನುವ ಗ್ರಂಥವನ್ನು ಅನುಸರಿಸಿ ತಾತ್ಪರ್ಯವನ್ನು ವಿವರಿಸುವೆನು. ಅಲ್ಲಲ್ಲಿ 'ಸನ್ನ್ಯಾಯರತ್ನಾವಳಿ' 'ನಯಚಂದ್ರಿಕಾ' ಇವುಗಳ ವಿಶೇಷಾಂಶವನ್ನೂ ಬರೆಯುತ್ತೇನೆ.

ಅಂದರೆ ದೋಷಲೇಶರಹಿತನು. (3) ಆದುದರಿಂದಲೇ ಎಲ್ಲಾ ಸುವಾಕ್ಯಗಳಿಂದಲೂ ಜ್ಞಾನ ದ್ವಾರಾ ಅತಿಶಯವಾಗಿ ಹೊಂದಲರ್ಹನು. (4) ಸರ್ವ ಪೂರ್ಣ ಗುಣಗಳಿವೆ ಎಂಬುವುದನ್ನು ಉಪಪಾದಿಸುವುದಕ್ಕೋಸ್ಕರ 'ಅಸ್ಯೋದ್ಭವಾದಿದಂ' ಎಂದು ಹೇಳಿರುವರು ಆದಪ್ರಯುಕ್ತವೇ ವಂದ್ಯನು. ಸರ್ವೋತ್ತಮನಾದುದರಿಂದಲೂ ವಂದ್ಯನು. ಯಾರು ಸೃಷ್ಟ್ಯಾದಿಗಳನ್ನು ಮಾಡು ತ್ತಾನೋ ಹೆಚ್ಚು ಗುಣಗಳಿರುವವನೋ, ಆತನೇ ವಂದ್ಯನಾಗುವನು. ಹೀಗೆ ಇರುವುದರಿಂದಲೇ ಪ್ರಿಯವಸ್ತುಗಳಿಂದಲೂ ಅತಿಶಯವಾಗಿ ಪ್ರಿಯನು ಅವುಗಳನ್ನು ಪ್ರಿಯಗಳನ್ನಾಗಿ ಮಾಡುವವನು. (5) ಆಚಾರ್ಯರನ್ನು ಬಿಟ್ಟು ಇತರರಿಗೆ ಪ್ರಾಯಶಃ ಅಂತಹ ಅನುಭವವಿಲ್ಲದಿರುವುದರಿಂದ 'ಮಮ' ಎಂದು ಆಚಾರ್ಯರು ಹೇಳಿರುವರು. (6) ಶ್ರದ್ಧಾ ಭಕ್ತ್ಯತಿಶಯಪೂರ್ವಕವಾಗಿ ನಮಸ್ಕಾರವನ್ನು ಮಾಡಬೇಕೆಂದಭಿಪ್ರಾಯದಿಂದ 'ನಮ್' ಎಂದು ಹೇಳಿರುವರು. (7) ಈ ಶ್ಲೋಕದಿಂದಲೇ ೪ ಅಧ್ಯಾಯಗಳ ಅರ್ಥವನ್ನೂ ಅರ್ಥಾತ್ ಸೂಚಿಸಿದರು. (೧) 'ನಿಖಿಲಪೂರ್ಣ ಗುಣೈಕದೇಹಂ' ಎನ್ನುವುದರಿಂದ ೧ನೇ ಸಮನ್ವಯಾಧ್ಯಾಯದ ಅರ್ಥವನ್ನೂ 'ನಿರ್ದೋಷಂ' ಎನ್ನುವುದರಿಂದ ೨ನೇ ಅವಿರೋಧಾಧ್ಯಾಯದ ಅರ್ಥವನ್ನೂ 'ಅಖಿಲೈಃ ಸುವಾಕ್ಯೈರಾಪ್ಯತಮಂ' ಎನ್ನುವುದರಿಂದ ೩ನೇ ಸಾಧನಾಧ್ಯಾಯದ ಅರ್ಥವನ್ನೂ, 'ಅಸ್ಯೋದ್ಭವಾದಿದಂ' ಎನ್ನುವುದ ರಿಂದ ೪ನೇ ಫಲಾಧ್ಯಾಯದ ಅರ್ಥವನ್ನೂ ಸೂಚಿಸಿದರು. (8) ಈ ಶ್ಲೋಕದಿಂದಲೇ ಶಾಸ್ತ್ರವನ್ನು ಆರಂಭಿಸಲಿಕ್ಕೆ ಆವಶ್ಯಕಗಳಾದ ಅಧಿಕಾರಿ ವಿಷಯ ಪ್ರಯೋಜನ ಸಂಬಂಧಗಳನ್ನೂ ಸೂಚಿಸಿ ದರು. 'ಸನ್ನಮಾಮಿ' ಎನ್ನುವುದರಿಂದ ಅಧಿಕಾರಿಯನ್ನೂ 'ನಾರಾಯಣಂ' ಎನ್ನುವುದರಿಂದ ವಿಷಯವನ್ನೂ 'ಆಪ್ಯತಮಂ' ಎನ್ನುವುದರಿಂದ ಪ್ರಯೋಜನವನ್ನೂ 'ಉದ್ಭವಾದಿದಂ' ಎನ್ನುವು ದರಿಂದ ವಿಷಯಪ್ರಯೋಜನಗಳಿಗೆ ದಾತೃ (ಕೊಡುವವನು) ದೇಯ (ತೆಗೆದುಕೊಳ್ಳುವವನು) ಭಾವರೂಪಸಂಬಂಧವನ್ನೂ ಸೂಚಿಸಿದರು. (9) 'ನಿಖಿಲಪೂರ್ಣ' ಇತ್ಯಾದಿಗಳಿಂದ ನಾರಾಯಣ ಶಬ್ದವನ್ನೇ ವ್ಯಾಖ್ಯಾನಮಾಡಿದರು.

**ನಯಚಂದ್ರಿಕಾ ವಿಶೇಷಾಂಶ-** (1) 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎನ್ನುವ ಪದ್ಯದಿಂದ ಶ್ರೀಮದಾಚಾರ್ಯರು ಇಷ್ಟದೇವತೆಯನ್ನು ನಮಸ್ಕರಿಸುತ್ತಾ ಅಧಿಕಾರಿ ವಿಷಯ ಪ್ರಯೋಜನ ಇವುಗಳ ಸಂಬಂಧವನ್ನೂ ಸೂಚಿಸಿದರು. ಪ್ರಥಮದಲ್ಲಿಯೇ ಪ್ರಯೋಜನ ವನ್ನು ತಿಳಿದರೆ ಪ್ರವೃತ್ತಿಯು ಕೂಡುವಪ್ರಯುಕ್ತ 'ಅಸ್ಯೋದ್ಭವಾದಿದಂ' ಎನ್ನುವಲ್ಲಿದ್ದ ಆದಿ ಶಬ್ದದಿಂದ ಮೋಕ್ಷವೂ, ವಿವಕ್ಷಿತವಾಗಿರುವುದರಿಂದ ದುಃಖಲೇಶವೂ ಇಲ್ಲದೆ ಕೇವಲ ಸುಖ ಸ್ವರೂಪವಾದ ಮೋಕ್ಷವು ಪ್ರಯೋಜನವೆಂದುಕ್ತವಾಯಿತು. (2) 'ಸನ್ನಮಾಮಿ' ಎನ್ನುವುದರಿಂದ **'ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ। ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ'** ॥ ಎನ್ನುವ ಎಂಟು ಅಂಗಗಳಿಂದ ಕೂಡಿರುವ ಪ್ರಣಾಮವೇ ವಿವಕ್ಷಿತವಾಗಿದೆ. ಅಂತೂ ಅಧ್ಯಯನ ಶಮದಮಾದಿಗಳಿಂದ ಸಂಪನ್ನನಾಗಿ ಸುದೃಢಭಕ್ತಿಯಿರು ವವನೇ ಅಧಿಕಾರಿಯು. (3) ಸಮಸ್ತಪೂರ್ಣಗುಣಗಳಿಂದ ಅಭಿನ್ನವಾದ ದೇಹವುಳ್ಳವನು, ಅಂದರೆ ಗುಣರೂಪವಾದ ಶರೀರವಿರುವವನು. ಆಯಾಯ ಶಬ್ದಗಳಿಗೆ ಸಮನ್ವಯವನ್ನು ಹೇಳುವುದ ರಿಂದ ಗುಣಪೂರ್ಣತ್ವವೇ ೧ನೇ ಅಧ್ಯಾಯದಲ್ಲಿ ವಿವಕ್ಷಿತವಾಗಿದೆ. ಅಂದರೆ ಶ್ರೀಹರಿಯು ಸರ್ವ ಗುಣಪರಿಪೂರ್ಣನೆಂದುಪಪಾದಿಸುವರು. ೨ನೇ ಅಧ್ಯಾಯದಲ್ಲಿ ಶ್ರೀ ಹರಿಯು ದೋಷ ಲೇಶರಹಿತನೆಂದುಪಪಾದಿಸುತ್ತಾರೆ. ಅದನ್ನು 'ನಿರ್ದೋಷಂ' ಎನ್ನುವುದರಿಂದ ಹೇಳಿದರು. ವೇದವಾಕ್ಯಗಳಿಗೆ ಪರಬ್ರಹ್ಮನಲ್ಲಿ ಮುಖ್ಯ ತಾತ್ಪರ್ಯವಿರುವುದೆಂದು ನಿಶ್ಚಯಿಸಿಕೊಂಡಿರುವ

ಪುರುಷರು ಸುವಾಕ್ಯರು. ಅವರಿಂದ ಅಪ್ಯತಮನು (ಮುಖ್ಯಜ್ಞೇಯನು) ಇದರಿಂದಲೇ ಜ್ಞಾನ ಸಾಧನವಾದ ವೈರಾಗ್ಯ ಭಕ್ತಿರೂಪ ಉಪಾಯವೂ ಸೂಚಿತವಾಯಿತು. ಇದೇ ೩ನೇ ಅಧ್ಯಾಯದ ಅರ್ಥವು. ೪ನೇ ಅಧ್ಯಾಯದ ಅರ್ಥವು ಮೋಕ್ಷವು 'ಅಶೇಷವಿಶೇಷತೋಽಪ್ಯಸ್ಯೋದ್ಭವಾದಿದಂ' ಎನ್ನುವುದರಿಂದ ಸೂಚಿತವಾಯಿತು. ಸರ್ವವಿಶೇಷಗಳಿಂದ ಕೂಡಿಕೊಂಡು ಉತ್ಪತ್ತ್ಯಾದಿಗಳನ್ನು ಕೊಡುವವನು. ಬ್ರಹ್ಮಾದಿಗಳಲ್ಲಿ ತಾರತಮ್ಯನಿಮಿತ್ತವಾಗಿ ಉತ್ಪತ್ತ್ಯಾದಿವಿಶೇಷಗಳೂ ಪ್ರತಿಕ್ಷಣವಿಶೇಷಗಳೂ ಮೋಕ್ಷಾದಿಗಳಲ್ಲಿ ದೇವತ್ವಾದಿ ಯೋಗ್ಯತಾವಿಶೇಷಗಳೂ ಇರುತ್ತವೆ. (4) ಜ್ಞಾನಾನಂದ ಮೊದಲಾದ ವಿಶೇಷಗಳಿಂದ ಕೂಡಿಕೊಂಡು ನನಗೆ ಸದಾ ವಂದ್ಯನು. ಮುಖ್ಯ ಪ್ರಿಯನು. ಇದರಿಂದ ಅನಂತಾನಂತಗುಣಗಳುಳ್ಳ ಶ್ರೀ ನಾರಾಯಣನನ್ನುಪಾಸನಾ ಮಾಡುವ ವಿಷಯದಲ್ಲಿ ಶ್ರೀಮದಾಚಾರ್ಯರು ಮುಖ್ಯಾಧಿಕಾರಿಗಳೆಂದು ಸೂಚಿತವಾಯಿತು.

**ನ್ಯಾಯಸುಧಾ—** (1) ಭಕ್ತ್ಯಾದ್ಯತಿಶಯಪೂರ್ವಕವಾಗಿ ನಾರಾಯಣನಿಗೆ ನಮಸ್ಕಾರವೇ ಎಲ್ಲಾ ಅಭೀಷ್ಟಗಳ ಸಿದ್ಧಿಗೆ ಅಂಗವು. 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿಗಳು ನಾರಾಯಣನಿಗೆ ವಿಶೇಷಣಗಳು. ಆ ಸ್ತುತಿಪದಗಳಿಗೆ ವಿಶೇಷ್ಯವನ್ನು (ನಾರಾಯಣನನ್ನು) ಪ್ರಶಂಸಾಮಾಡುವುದೇ (ಹೊಗಳುವುದೇ) ಪ್ರಯೋಜನವು (2) ಅಥವಾ ನಾರಾಯಣನಿಗೆ ನಮಸ್ಕರಿಸಲು ಕಾರಣವೇನು? ಮತ್ತು ಬ್ರಹ್ಮರುದ್ರಾದಿ ದೇವತೆಗಳಿರುವಾಗ ನಾರಾಯಣನಿಗೇನೇ ನಮಸ್ಕರಿಸಲು ಕಾರಣವೇನೆಂದರೆ- 'ಅಶೇಷವಿಶೇಷತೋಽಪಿ ವಂದ್ಯಂ' ಆತನೇ ನಮಸ್ಕರಿಸಿಕೊಳ್ಳಲಿಕ್ಕೆ ಉಪಯುಕ್ತಗಳಾದ ಎಲ್ಲಾ ವಿಶೇಷಗಳಿಂದೊಡಗೂಡಿದವನೂ. ಸರ್ವೋತ್ತಮನೂ ಆಗಿರುವನು. ಇವೆರಡೂ ನಾರಾಯಣನಿಗೆ ಹೇಗೆಂದರೆ- 'ನಿಖಿಲೇತ್ಯಾದಿ' ಅಂದರೆ, ವಿಶಿಷ್ಟವಾದುದು (ಸರ್ವೋತ್ತಮವಾದುದು) ಅಧಿಕೃತವಾದದ್ದು, (ಪ್ರಕೃತ ಗ್ರಂಥದಲ್ಲಿ ಪ್ರತಿಪಾದಿಸಲ್ಪಡತಕ್ಕದು.) ಇಷ್ಟವಾದದ್ದು. ಹೀಗೆ ಮೂರು ಕಾರಣಗಳು ಯಾರಲ್ಲಿವೆಯೋ ಅಂತಹ ದೇವತೆಯು ನಮಸ್ಕಾರಕ್ಕೆ ಅರ್ಹವಾದುದು. ವಿಘ್ನಪರಿಹಾರ ಮೊದಲಾದ ಪ್ರಯೋಜನಗಳನ್ನಪೇಕ್ಷಿಸಿ ದೇವತೆಗೆ ನಮಸ್ಕರಿಸುವುದು. ಅಂತಹ ಪ್ರಯೋಜನವನ್ನು ಕೊಡಲಿಕ್ಕೆ ವಿಶಿಷ್ಟ(ಸರ್ವೋತ್ತಮ) ವಾದ ದೇವತೆಯೇ ಸಮರ್ಥನಾಗುತ್ತದೆ. ಅಧಿಕೃತವಾದ ದೇವತೆಯು ತನ್ನನ್ನು ಬೋಧಿಸುವ ಗ್ರಂಥದ ಜ್ಞಾನಾದಿಗಳನ್ನು ಸಂಪಾದಿಸಿಕೊಡುತ್ತದೆ. ವಂದನೆಯು ಭಕ್ತ್ಯಾದಿಗಳಿಂದ ಯುಕ್ತವಾದರೇನೇ ಫಲವನ್ನು ಕೊಡುವುದು. ಆ ಭಕ್ತ್ಯಾದಿಗಳು ಇಷ್ಟವಾದ ದೇವತೆಯಲ್ಲಿಯೇ ಹುಟ್ಟುವುದು. ಅವುಗಳಲ್ಲಿ (ಅಂದರೆ ನಮಸ್ಕರಿಸಿಕೊಳ್ಳಲ್ಪಡುವುದಕ್ಕೆ ಉಪಯುಕ್ತಗಳಾದ ವೈಶಿಷ್ಟ್ಯ ಅಧಿಕೃತತ್ವ ಇಷ್ಟತ್ವ ಇವುಗಳ ಮಧ್ಯದಲ್ಲಿ) ವೈಶಿಷ್ಟ್ಯ (ಸರ್ವೋತ್ತಮತ್ವ) ವನ್ನುಪಪಾದಿಸುವುದಕ್ಕಾಗಿ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' 'ಅಸ್ಯೋದ್ಭವಾದಿದಂ' ಎಂಬುವ ೩ ವಿಶೇಷಣಗಳು. ಅಧಿಕೃತತ್ವವನ್ನು ತೋರಿಸುವುದಕ್ಕಾಗಿ 'ಅಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬುವ ವಿಶೇಷಣವು. (3) (ವ್ಯಾಖ್ಯಾನಮಾಡಲಿಷ್ಟವಾದ ಬ್ರಹ್ಮಮೀಮಾಂಸಾ ಶಾಸ್ತ್ರದಿಂದಲೂ ಅದರಿಂದ ನಿರ್ಣಯಿಸಲು ಯೋಗ್ಯವಾದ ಅರ್ಥವುಳ್ಳ ವೇದಾದಿಗಳಿಂದಲೂ ನಾರಾಯಣನು ಪ್ರತಿಪಾದಿಸಲ್ಪಡುವಪ್ರಯುಕ್ತ ವಂದ್ಯನೆಂದು ಹೇಳುವುದಾದರೆ ಆ ಕಾರಣದಿಂದಲೇ ಧರ್ಮಾದಿಗಳೂ ಪ್ರಾಣಾದಿಗಳೂ ವಂದ್ಯರಾಗಬೇಕಾಗುವರು, ಎಂದಾಶಂಕಿಸಿದರೆ, ಅವುಗಳು ಶ್ರೀ ನಾರಾಯಣನ ಜ್ಞಾನಕ್ಕೆ ಉಪಯುಕ್ತಗಳಾಗಿ ವೇದಾದಿಗಳ ಕೆಲವು ಭಾಗದಲ್ಲಿ ಪ್ರತಿಪಾದಿಸಲ್ಪಟ್ಟವುಗಳು. ನಾರಾಯಣನು ಪ್ರಧಾನವಾಗಿ ಸಕಲವೇದಗಳಿಂದಲೂ ಪರಮ ಮುಖ್ಯ ವೃತ್ತಿಯಿಂದ ಪ್ರತಿಪಾದಿಸಿಕೊಳ್ಳಲ್ಪಡತಕ್ಕವನಾದ ಕಾರಣ ಇಂತಹ ಅಧಿಕೃತತ್ವವು

ನಾರಾಯಣನಿಗೇನೇ ಇದ್ದುದರಿಂದ ಆತನೇ ವಂದ್ಯನು. 'ಸದಾ ಪ್ರಿಯತಮಂ ಮಮ' ಎನ್ನುವುದರಿಂದ ಇಷ್ಟತ್ವವನ್ನು ತೋರಿಸಿದರು. (4) ಅಥವಾ ಯಾರಿಗಾದರೂ ನಮಸ್ಕಾರಮಾಡಬೇಕಾದರೆ ಆತನ ಸ್ವರೂಪವನ್ನು ನಿರ್ಧರಿಸಿಕೊಳ್ಳಬೇಕು. ಸ್ವರೂಪನಿರ್ಧಾರಣೆಯು ಲಕ್ಷಣಹೇಳದೆ ಆಗಲಾರದು, ಅಂದರೆ ಐಶ್ವರ್ಯಜ್ಞಾಪನೆಗಾಗಿ ಅನೇಕ ಲಕ್ಷಣಗಳು ನಾರಾಯಣನಿಗೆ ಇದರಿಂದ ಹೇಳಲ್ಪಡುತ್ತವೆ. ಅದರಲ್ಲಿ 'ನಿಖಿಲ' ಎನ್ನುವ ವಿಶೇಷಣದಿಂದ ನಿಖಿಲಗುಣತ್ವವೂ ಪೂರ್ಣಗುಣತ್ವವೂ ಸ್ವತಃ ಕೇವಲ ಗುಣಸ್ವರೂಪವಾದ ಶರೀರತ್ವವೂ ಹೀಗೆ ಅಭಿಪ್ರಾಯಭೇದದಿಂದ ಮೂರು ಲಕ್ಷಣಗಳು ಹೇಳಲ್ಪಟ್ಟವು. (5) 'ನಿರ್ದೋಷಂ' ಎನ್ನುವುದರಿಂದ ಒಂದು ಲಕ್ಷಣವು ಹೇಳಲ್ಪಟ್ಟಿತು. (6) 'ಆಪ್ಯತಮಂ' ಎನ್ನುವುದರಿಂದ ವೇದಾದಿಗಳ ಮುಖ್ಯಾರ್ಥತ್ವವೂ ಸರ್ವವೇದಾದ್ಯರ್ಥತ್ವವೂ ಹೀಗೆ ಎರಡು ಲಕ್ಷಣಗಳೂ, 'ಅಸ್ಯೋದ್ಭವಾದಿದಂ' ಎನ್ನುವುದರಿಂದ ಎಂಟು ಲಕ್ಷಣಗಳೂ, 'ಅಶೇಷ' ಎನ್ನುವುದರಿಂದ ಮುಖ್ಯ ವಂದ್ಯತ್ವವೂ, 'ಸದಾ' ಎನ್ನುವುದರಿಂದ ಪರಮಪ್ರೇಮಯೋಗ್ಯತ್ವವೂ ಹೀಗೆ ಅನೇಕ ಲಕ್ಷಣಗಳು ಹೇಳಲ್ಪಟ್ಟವೆ. ಈ ಪರಮಪ್ರೇಮ ಮಾಡುವುದಕ್ಕೆ ಅರ್ಹನೆನ್ನುವುದು ಅನುಭವಸಿದ್ಧವಾಗದಿರುವುದರಿಂದ ಕೂಡಲಾರದೆಂದಾಶಂಕಿಸಿದರೆ 'ಸದಾ ಮಮ' ಎಂದು ಹೇಳಿರುವರು. ಅಂದರೆ ಬೇರೆಯವರಿಗೂ ಜ್ಞಾನವು ಬಂದ ಮೇಲೆ ಇದು ಅನುಭವಸಿದ್ಧವಾಗುವುದು. ನನಗೆ ಅಂದರೆ (ಶ್ರೀಮದಾಚಾರ್ಯರಿಗೆ) ಯಾವಾಗಲೂ ಅನುಭವಸಿದ್ಧವು. (7) ಅಥವಾ ನಾರಾಯಣನು 'ನಿಖಿಲ' ಇತ್ಯಾದಿಗಳಲ್ಲಿ ಹೇಳಿದ ಲಕ್ಷಣಗಳಿಂದೊಡಗೂಡಿದವನೆಂದು ಯಾವ ಪ್ರಮಾಣದಿಂದ ತಿಳಿಯಬೇಕೆಂದರೆ 'ಸುವಾಕ್ಯೈರಾಪ್ಯತಮಂ' ಎಂದು ಹೇಳಿರುವರು (ಅಂದರೆ ಮುಖ್ಯವೃತ್ತಿಯಿಂದ ಶ್ರೀಹರಿಯೇ ಸರ್ವವೇದಾದಿಗಳಿಂದ ಪೂರ್ವೋಕ್ತಲಕ್ಷಣಗಳಿಂದೊಡಗೂಡಿದವನೆಂದು ಪ್ರತಿಪಾದಿಸಲ್ಪಡತಕ್ಕವನು.) ಅಂತೂ ಶ್ರೀಹರಿಗೆ ಈ ಲಕ್ಷಣಗಳಿವೆ ಎನ್ನುವಲ್ಲಿ ವೇದಾದಿಶಾಸ್ತ್ರಗಳೇ ಪ್ರಮಾಣಗಳೆಂದು ಹೇಳಲ್ಪಟ್ಟಿತು. ಇಂತಹ ಲಕ್ಷಣಗಳಿಂದೊಡಗೂಡಿದ ನಾರಾಯಣನನ್ನು 'ಸಕಲ ಜಗತ್ತಿಗೆ ನಿಮಿತ್ತ ಕಾರಣನು' ಇತ್ಯಾದಿ ಕಾರಣಗಳಿಂದಲೂ ತಿಳಿಯಬೇಕೆಂಬಭಿಪ್ರಾಯದಿಂದ 'ಅಸ್ಯೋದ್ಭವಾದಿದಂ' ಎಂದು ಹೇಳಿರುವರು. ಅಂದರೆ ಈ ವಿಷಯದಲ್ಲಿ ಅನುಮಾನವೂ ಪ್ರಮಾಣವೆಂದು ಸೂಚಿಸಲ್ಪಟ್ಟಿತು. (8) ಅಥವಾ ನಾರಾಯಣನಿಗೆ ಶರೀರವಿದ್ದರೆ ದುಃಖಾದಿ ದೋಷಗಳು ಬರಬೇಕಾಗುವವು. ಶರೀರವಿಲ್ಲದಿದ್ದರೆ ಜ್ಞಾನಾದಿಗುಣಗಳಿಲ್ಲವೆಂದಾಗುವುದು. ಎರಡುಪ್ರಕಾರದಿಂದಲೂ ಜಗಜ್ಜನ್ಮಾದಿಕಾರಣತ್ವವು (ಚೇತನಾಚೇತನಾತ್ಮಕವಾದ ಜಗತ್ತಿಗೆ ಯಥಾಯೋಗ್ಯವಾಗಿ ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ - ಮೋಕ್ಷಗಳನ್ನು ಮಾಡುವವನೆನ್ನುವುದು) ಕೂಡಲಾರದೆಂದಾಶಂಕಿಸಿದರೆ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂದು. ಶರೀರವಿದ್ದುದರಿಂದ ಜ್ಞಾನಾದಿಗುಣಗಳೂ ಕೂಡುವವು. ಆ ಶರೀರವು ಸರ್ವಪೂರ್ಣಗುಣಸ್ವರೂಪವಾದುದರಿಂದ ಆತನು ದುಃಖಾದಿದೋಷಲೇಶರಹಿತನೂ ಆಗಿರುವನು. (9) ಅಥವಾ ನಾರಾಯಣ ಶಬ್ದವು ಡಿತ್ಥಾದಿ ಸಂಕೇತ ಶಬ್ದಗಳಂತೆಯೇ ಶ್ರೀಹರಿಯಲ್ಲಿ ಸಾಂಕೇತಿಕವೂ ಅಲ್ಲ. ಘಟಾದಿಶಬ್ದಗಳಂತೆಯೇ ಕೇವಲ ರೂಢಿಯನ್ನು ಆಶ್ರಯಿಸಿಕೊಂಡು ಪ್ರವೃತ್ತವಾದುದೂ ಅಲ್ಲ. ಮತ್ತೆ ವಿಶಿಷ್ಟಗುಣಗಳನ್ನು ಹೇಳುತ್ತದೆ ಎಂದು ತಿಳಿಸುತ್ತಾ ನಾರಾಯಣಶಬ್ದಾರ್ಥವನ್ನೇ ಈ ವಿಶೇಷಣಗಳಿಂದ ಹೇಳುತ್ತಾರೆ. ಹೇಗೆಂದರೆ-(೧)ಅರವಿರುದ್ಧತ್ವಾತ್ ಗುಣಾಃ ನಾರಾಃ=ದೋಷಗಳಿಗೆ ವಿರುದ್ಧಗಳಾಗಿರುವುದರಿಂದ ಗುಣಗಳು ನಾರಗಳೆನಿಸುತ್ತವೆ. ನಾರಾಣಾಂ ಅಯನಂ=ಗುಣಗಳಿಗೆ ಆಶ್ರಯನಾದುದರಿಂದ ನಾರಾಯಣನೆನಿಸುತ್ತಾನೆ. (೨) ಅಥವಾ ಅರಾಣಾಂ ಅಯನಂ ನ ಭವತಿ=ದೋಷಗಳಿಗೆ ಆಶ್ರಯನಾಗದಿದ್ದಪ್ರಯುಕ್ತ ನಾರಾಯಣನು.

(೩) ನರಾಣಾಂ ಇಮೇ ನಾರಾಃ=ಮನುಷ್ಯರಿಗೆ ಉಪಕಾರಕಗಳಾಗಿರುವುದರಿಂದ ವೇದವೊದಲಾದವುಗಳು ನಾರಗಳು. ಅವುಗಳಲ್ಲಿ ಪ್ರತಿಪಾದ್ಯನಾಗಿ ವೇದಾದಿಗಳಿಗೆ ಆಶ್ರಯನಾದುದರಿಂದಲೂ ನಾರಾಯಣನೆನಿಸುತ್ತಾನೆ. (೪) ನರಾಣಾಂ ಇದಂ ನಾರಂ=ಮನುಷ್ಯರಿಗೆ ಸಂಬಂಧಪಟ್ಟದ್ದು ಉತ್ಪತ್ತಿ ವೊದಲಾದುದು, ಅವುಗಳನ್ನು ಕೊಡುವವನಾಗಿ ಆಶ್ರಯನಾಗಿದ್ದುದರಿಂದಲೂ ನಾರಾಯಣನೆನಿಸುತ್ತಾನೆ. (೫) ನರಸಮೂಹೋ ನಾರಂ=ಮನುಷ್ಯರ ಸಮೂಹವು ನಾರವು, ಮನುಷ್ಯರ ಸಮೂಹದಿಂದ ವಂದ್ಯನಾಗಿ ಅವರಿಗೆ ಆಶ್ರಯನಾಗಿದ್ದುದರಿಂದಲೂ ನಾರಾಯಣನೆನಿಸುತ್ತಾನೆ. (೬) ನರಾಣಾಂ ಅಧಿಪತಿಃ ನಾರಃ । ತಸ್ಯ ಅಯನಂ ನಾರಾಯಣಃ=ಮನುಷ್ಯರಿಗೆ ಅಧಿಪತಿಯಾದ ಮುಖ್ಯವಾಯುವಿನ ಅತ್ಯಂತಪ್ರೇಮಕ್ಕೆ ಆಸ್ಪದನಾಗಿ ಆಶ್ರಯನಾಗಿದ್ದುದರಿಂದಲೂ ನಾರಾಯಣನೆನಿಸುತ್ತಾನೆ. ಅಂತೂ ಗುಣಪೂರ್ಣತ್ವ, ನಿರ್ದೋಷತ್ವ, ಸರ್ವವೇದಪ್ರತಿಪಾದ್ಯತ್ವ, ಸಕಲಜಗಜ್ಜನ್ಮಾದಿಕಾರಣತ್ವ, ಸರ್ವವಂದ್ಯತ್ವ, ಮುಖ್ಯವಾಯುಪರಮಪ್ರೇಮಾಸ್ಪದತ್ವ ಈ ಆರು ನಾರಾಯಣ ಶಬ್ದದ ಅರ್ಥಗಳೆಂದು ಇದರಿಂದ ತಿಳಿಸಿದರು. (10) ಅಥವಾ ಶ್ರೋತೃಗಳ ಬುದ್ಧಿಯಲ್ಲಿ ವಿಶೇಷಾರ್ಥಜಿಜ್ಞಾಸಾ (ವಿಚಾರ) ಬರುವುದಕ್ಕಾಗಿ ಸರ್ವಶಾಸ್ತ್ರಾರ್ಥವನ್ನೂ ಸಂಕ್ಷೇಪವಾಗಿ ಈ ಪದ್ಯದಿಂದಲೇ ಹೇಳಿದರು. ಸಂಕ್ಷೇಪವಾಗಿ ತಿಳಿದವರು ವಿಸ್ತಾರವಾಗಿ ತಿಳಿಯಲಿಚ್ಛಿಸುವರು. ಅದರಲ್ಲಿ 'ಸದಾ ವಂದ್ಯಂ' ಎನ್ನುವುದರಿಂದ ಪ್ರಥಮಸೂತ್ರಾರ್ಥವು ಉಕ್ತವಾಯಿತು. (11) ಜಿಜ್ಞಾಸಾ ಎನ್ನುವುದು ವಂದನವಿಶೇಷವೇ. ಆ ಹರಿಗೆ ಜೀವಾದಿಗಳಿಂದ ಭೇದವದೆ ಎಂದು ತಿಳಿಸುವುದಕ್ಕಾಗಿ 'ಬ್ರಹ್ಮ' ಎಂದು ಹೇಳಿರುವರು. ಅದರ ಅರ್ಥವು 'ನಿಖಿಲಪೂರ್ಣಗುಣೈಕದೇಹಂ' ಎಂದು. ಅದನ್ನುಪಪಾದಿಸುವುದಕಾಗ್ಗಿ ೨ನೇ ಸೂತ್ರದಲ್ಲಿ ಬ್ರಹ್ಮನಿಗೆ ಲಕ್ಷಣವನ್ನು ಹೇಳಿರುವರು. ಅದನ್ನೇ 'ಅಸ್ಯೋದ್ಭವಾದಿದಂ' ಎನ್ನುವುದರಿಂದ ವಿವರಿಸಿದರು. ಆ ವಿಷಯದಲ್ಲಿ ಶಾಸ್ತ್ರವು ಪ್ರಮಾಣವೆಂದು ೩ನೇ ಸೂತ್ರದಿಂದ ನಿರೂಪಿಸಿ ಮಿಕ್ಕ ಅಧ್ಯಾಯದಿಂದ ಶಾಸ್ತ್ರವಿಷಯತ್ವವನ್ನು ಉಪಪಾದಿಸಿದರು. ಅದನ್ನೇ 'ಆಪ್ಯತಮಂ' ಎನ್ನುವುದರಿಂದ ಹೇಳಿದರು, ೧ನೇ ಅಧ್ಯಾಯದಲ್ಲಿ ಹೇಳಿದ ಅರ್ಥದಲ್ಲಿ ದೋಷಗಳನ್ನು ಶಂಕಿಸಲು ಅವುಗಳನ್ನು ೨ನೇ ಅಧ್ಯಾಯದಲ್ಲಿ ನಿರಾಕರಿಸಿದರು. ಅದನ್ನು 'ನಿರ್ದೋಷಂ' ಎನ್ನುವುದರಿಂದ ಹೇಳಿದರು

ಹೀಗೆ ೨ ಅಧ್ಯಾಯಗಳಿಂದ ಬ್ರಹ್ಮಸ್ವರೂಪವು ನಿಶ್ಚಿತವಾದಮೇಲೆ ಭಗವತ್ಪ್ರಸಾದಕ್ಕೆ ಸಾಧನವಾದ ಸಾಕ್ಷಾತ್ಕಾರವನ್ನು ಅಧಿಕಾರಿಗಳಿಗೆ ಹುಟ್ಟಿಸುವುದಕ್ಕಾಗಿ ವೈರಾಗ್ಯಭಕ್ತಿಪೂರ್ವಕವಾಗಿ ಸರ್ವವೇದಾರ್ಥಗಳ ಶ್ರವಣಾದಿಗಳನ್ನು ಮಾಡಬೇಕೆಂದು ೩ನೇ ಅಧ್ಯಾಯದಲ್ಲಿ ನಿರೂಪಿಸಿರುವರು. ಅದನ್ನೇ 'ಅಶೇಷವಿಶೇಷತೋಽಪಿ ಪ್ರಿಯತಮಂ ಆಪ್ಯತಮಂ' ಎನ್ನುವುದರಿಂದ ಸಂಗ್ರಹಿಸಿ ಹೇಳಿದರು. ಪ್ರಸನ್ನನಾದ ಬ್ರಹ್ಮನು ಎಂತಹ ಪುರುಷಾರ್ಥವನ್ನು ಕೊಡುತ್ತಾನೆಂದರೆ ಅದರ ಸ್ವರೂಪವನ್ನು ೪ನೇ ಅಧ್ಯಾಯದಲ್ಲಿ ನಿರೂಪಿಸುವರು. ಅದನ್ನು 'ಆಪ್ಯತಮಂ' ಎನ್ನುವುದರಿಂದ ಹೇಳಿದರು ॥ ೧ ॥

ಶ್ರೀ ನಾರಾಯಣದೇವರ ಪ್ರಣಾಮದಂತೆ ಗುರುಗಳ ಪ್ರಣಾಮವೂ ಇಷ್ಟಸಿದ್ಧಿಗೆ ಅಂಗವಾಗಿಯದೆ. ಆದಕಾರಣ ಶ್ರೀಮದಾಚಾರ್ಯರಿಗೆ ವೇದವ್ಯಾಸರೇ ಜ್ಞಾನೋಪದೇಶಕರಾದುದರಿಂದ ಸರ್ವದಾ ಅವರಿಗೆ ನಮಸ್ಕರಿಸಿಕೊಂಡಿರುವವರಾದಾಗ್ಯೂ ಗ್ರಂಥಾರಂಭಕಾಲದಲ್ಲಿ ವಿಶೇಷವಾಗಿ ನಮಸ್ಕರಿಸಿ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ವ್ಯಾಖ್ಯೇಯತ್ವವನ್ನು ಸಮರ್ಥಿಸುತ್ತಾ ತಾನು ಇನ್ನುಮುಂದೆ ಇಂತಹ ಗ್ರಂಥವನ್ನು ಮಾಡುತ್ತೇನೆಂದು ಪ್ರತಿಜ್ಞಾ ಮಾಡುವರು.

**ಮೂ ||** ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ
ಜಗದ್ಗುರೂಣಾಂ ಗುರುಮಂಜಸೈವ |
ವಿಶೇಷತೋ ಮೇ ಪರಮಾಖ್ಯವಿದ್ಯಾ
ವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ || ೨ ||

ಅ || ಶಾಸ್ತ್ರಪ್ರಭವಂ=ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ನಿರ್ಮಿಸಿದವನು, ವೇದಾದಿಗಳ ಪ್ರಥಮೋಪಲಬ್ಧಿಗೆ ಕಾರಣನು (ವೇದಾದಿಗಳನ್ನು ಪ್ರಥಮದಲ್ಲಿ ತಿಳಿಸಿಕೊಟ್ಟವನು), ಜಗದ್ಗುರೂಣಾಂ=ಜಗತ್ತಿಗೆ ಈ ಶಾಸ್ತ್ರವನ್ನುಪದೇಶಿಸುವ ಬ್ರಹ್ಮಾದಿಗಳಿಗೆ, ಅಂಜಸಾ=ಮುಖ್ಯವಾಗಿ, ಗುರುಂ=ಈ ಶಾಸ್ತ್ರವನ್ನು ಉಪದೇಶಿಸಿದವನು, ವಿಶೇಷತಃ ಮೇ ಗುರುಂ=ನನಗೆ ಸಾಕ್ಷಾದುಪದೇಶಕನೂ ಆದ, ತಮೇವ=ಪೂರ್ವದಲ್ಲಿ ನಮಸ್ಕರಿಸಲ್ಪಟ್ಟ ನಾರಾಯಣನನ್ನೇ, (ಅಂದರೆ ಶ್ರೀವೇದವ್ಯಾಸರೂಪಿಯನ್ನೇ) ಅನ್ವಪಿ=ಮತ್ತು, ಪ್ರಣಮ್ಯ=ಭಕ್ತ್ಯಾದಿಪೂರ್ವಕವಾಗಿ ನಮಸ್ಕರಿಸಿ, ಅಹಂ=ನಾನು, ಪರಮಾಖ್ಯವಿದ್ಯಾವ್ಯಾಖ್ಯಾಂ=ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ವ್ಯಾಖ್ಯಾನವನ್ನು, ಕರೋಮಿ=ಮಾಡುತ್ತೇನೆ.

**ತಾ ||** ಸ. ರ. ವಿ.— (1) ಶಾಸ್ತ್ರಪ್ರತಿಪಾದ್ಯನೆಂಬುವ ಅಭಿಪ್ರಾಯದಿಂದ ನಮಸ್ಕರಿಸಲ್ಪಟ್ಟ ನಾರಾಯಣನಿಗೇನೇ ಶಾಸ್ತ್ರಪ್ರವಕ್ತೃತ್ವ (ಶಾಸ್ತ್ರಗಳನ್ನುಪದೇಶಿಸುವಿಕೆ) ರೂಪದಿಂದ ಪ್ರಣಾಮವು ಆತನ ಅತಿಶಯಪ್ರೀತಿಗಾಗಿ. (2) ಅನುವ್ಯಾಖ್ಯಾನವನ್ನು ಇತರರಿಗೆ ಮಾಡಲಿಕ್ಕೆ ಶಕ್ತಿಯಿಲ್ಲದಿರುವುದರಿಂದ 'ಅಹಮೇವ' ಎಂದು ಹೇಳಿರುವರು (3) 'ಅಂಜಸೈವ ಜಗದ್ಗುರೂಣಾಂ ಗುರುಂ' ಇದರಿಂದ ಮುಖ್ಯ ಗುರುತ್ವವು ಅಭಿಪ್ರೇತವಾಯಿತು. ಸರ್ವ ಪ್ರಪಂಚವನ್ನು ಸೃಷ್ಟಿಸಿ ಪೋಷಿಸುವುದರಿಂದಲೂ ವಿಘ್ನಗಳನ್ನ ನಿವಾರಿಸುವುದರಿಂದಲೂ ಮನಸ್ಸನ್ನ ಪ್ರೇರಿಸುವುದರಿಂದಲೂ ಯೋಗ್ಯಗುರುಗಳನ್ನ ಸಂಪಾದಿಸಿಕೊಟ್ಟು ಜ್ಞಾನವನ್ನ ಕೊಡುವುದರಿಂದಲೂ ಶ್ರೀ ನಾರಾಯಣನೇ ಮುಖ್ಯ ಗುರುವು. (4) 'ವಿಶೇಷತೋ ಮೇ' ಎನ್ನುವುದರಿಂದ ತನಗೆ ಸಾಕ್ಷಾತ್ ವೇದವ್ಯಾಸರೇ ಗುರುಗಳೆಂದು ಹೇಳಿದರು.

ನ. ಚ. ವಿ.— (1) 'ಶಾಸ್ತ್ರಂ ಭಾವಯತೀತಿ ಶಾಸ್ತ್ರಪ್ರಭವಃ' ಶಾಸ್ತ್ರವನ್ನು ನಿರ್ಮಿಸಿದವರು. (2) 'ಅಂಜಸೈವ' ಎನ್ನುವುದರಿಂದ ಸರ್ವರಿಗೂ ಮುಖ್ಯಗುರುವೆಂದು ಪ್ರತೀತವಾಗುತ್ತದೆ. (3) 'ಅನ್ವಪಿ ಚಾಹಮೇವ' ಎನ್ನುವಲ್ಲಿದ್ದ ಚ ಶಬ್ದದಿಂದ ಇತರರಿಗೆ ಶಕ್ತಿಯಿಲ್ಲವೆಂದು ಸೂಚಿತವಾಯಿತು.

**ನ್ಯಾಯಸುಧಾ**— (1) ಶ್ರೀನಾರಾಯಣನಿಗೆ ಪೂರ್ವಶ್ಲೋಕದಲ್ಲಿ ನಮಸ್ಕರಿಸಿರುವುದರಿಂದ ಪುನಃ ಪ್ರಣಾಮವು ಏತಕ್ಕೆ? ಪ್ರಣಾಮಗಳನ್ನು ಪುನಃ ಮಾಡುವುದು ವಿಘ್ನಪರಿಹಾರಾದಿಗಳಿಗೆ ಕಾರಣವಾಗುತ್ತದೆಂಬುವುದು ಇಲ್ಲ. ಇದ್ದರೆ ಪೂರ್ವಶ್ಲೋಕದಲ್ಲಿಯೇ 'ಬಹುಶಃ ಸನ್ನಮಾಮಿ' ಎಂದು ಹೇಳಬಹುದಿತ್ತು, ಎಂದಾಶಂಕಿಸಿದರೆ ಗುರುಗಳಾದುದರಿಂದ ಪುನಃ ಈ ಶ್ಲೋಕದಲ್ಲಿ ನಮಸ್ಕರಿಸಿದ್ದು. (2) ನಾರಾಯಣನಿಗೆ ಗುರುತ್ವವು ಹೇಗೆಂದರೆ 'ಶಾಸ್ತ್ರಪ್ರಭವಂ' ಶಾಸ್ತ್ರಶಬ್ದದಿಂದ ಬ್ರಹ್ಮಮೀಮಾಂಸಾ ಶಾಸ್ತ್ರವೂ ವೇದಾದಿಗಳೂ ಹೇಳಲ್ಪಡುತ್ತವೆ. ಪ್ರಭವತಿ=ಹುಟ್ಟುತ್ತದೆ, ಮತ್ತು ಪ್ರಥಮತಃ=ಉಪಲಬ್ಧವಾಗುತ್ತದೆ (ತಿಳಿಯಲ್ಪಡುತ್ತದೆ), ಯಸ್ಮಾತ್ಸಃ=ಯಾರಿಂದಲೋ ಅವನು ಪ್ರಭವನು, ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಿರ್ಮಿಸಿದವನು, ವೇದಾದಿಗಳನ್ನು

ಮೊದಲು ತಿಳಿಸಿಕೊಟ್ಟವನು. (3) ಯಾರು ಯಾವ ಶಾಸ್ತ್ರದಲ್ಲಿ ಪ್ರವರ್ತಿಸುತ್ತಾರೋ, ಅವರಿಗೆ ಆ ಶಾಸ್ತ್ರವನ್ನು ಮಾಡಿದವರು ಗುರುಗಳೆನ್ನುವುದು ಪ್ರಸಿದ್ಧವೇ. ನಾರಾಯಣನು ಪ್ರಕೃತ ಶಾಸ್ತ್ರದ ಸಂಪ್ರದಾಯಕ್ಕೆ ಪ್ರವರ್ತಕನಾದುದರಿಂದಲೂ ಗುರುವಾಗಿರುತ್ತಾನೆನ್ನುತ್ತಾರೆ, 'ಜಗದ್ಗುರೂಣಾಂ' ಎಂದು. (4) 'ಶಾಸ್ತ್ರಪ್ರಭವಂ' ಇತ್ಯಾದಿಗಳನ್ನು ಮಾತ್ರ ಹೇಳಿದರೆ ಆಗ ಪ್ರತ್ಯೇಕ ನಮಸ್ಕರಿಸಿದುದರಿಂದ ದೇವತೆಗೂ ಗುರುವಿಗೂ ಭೇದವದೆ ಎಂಬಾಶಂಕೆಯು ಬರಬಹುದು. ಅದನ್ನು ನಿವೃತ್ತಿಗೊಳಿಸುವುದಕ್ಕಾಗಿ 'ತಮೇವ' ಎಂದು ಹೇಳಿರುವರು. ದೇವತ್ವ ಗುರುತ್ವರೂಪ ನಿಮಿತ್ತಗಳೆರಡು ಇದ್ದುದರಿಂದ ನಾರಾಯಣನಿಗೆ ಪ್ರತ್ಯೇಕ ಪ್ರಣಾಮವನ್ನೂ ಮಾಡಿದ್ದು ಯುಕ್ತವೇ. (5) ಶಿಷ್ಯರಿಗೆ ಗುರುನಮಸ್ಕಾರವು ಅವಶ್ಯ ಕರ್ತವ್ಯವೆಂದು ಶಿಕ್ಷಿಸುವುದಕ್ಕಾಗಿ ಗ್ರಂಥದಲ್ಲಿ ಗುರುನಮಸ್ಕಾರವನ್ನು ಮಾಡಿರುವರು. ಶಿಷ್ಯರಿಗೆ ಆಚಾರ್ಯರಂತೆ ಗುರುವೂ ದೇವತೆಯೂ ಒಬ್ಬರೇ ಅಲ್ಲ. ಗುರುದೇವತೆಗಳು ಭಿನ್ನರಾಗಿರುತ್ತಾರೆ. ಈ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿಯೇ 'ಜಗದ್ಗುರೂಣಾಂ ವಿಶೇಷತೋ ಮೇ' ಎಂದೂ ಹೇಳಿರುವರು. (6) 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಗ್ರಂಥಗಳನ್ನು ವ್ಯಾಖ್ಯಾನಮಾಡಲಿಕ್ಕಾಗಿ ದೇವತಾದಿಗಳ ಪ್ರಣಾಮವನ್ನು ಮಾಡಿದ್ದಷ್ಟೆ! ಇದನ್ನು ವ್ಯಾಖ್ಯಾನಮಾಡುವುದೇ ಯೋಗ್ಯವಲ್ಲ. ಅರ್ಥವಿವಕ್ಷೆಯಿರುವ ಪೌರುಷೇಯ ವಾಕ್ಯವನ್ನೇ ವ್ಯಾಖ್ಯಾನಮಾಡುವುದು ಯೋಗ್ಯವು. ಯಾವನೂ ಅರ್ಥವಿವಕ್ಷೆಯಿಲ್ಲದಿರುವ ಕ ಖ ಗ ಘ ಇದುಮೊದಲಾದ ವರ್ಣಗಳ ಮಾಲೆಯನ್ನು ವ್ಯಾಖ್ಯಾನಮಾಡಲಿಕ್ಕೆ ಪ್ರವೃತ್ತಿಮಾಡುವುದಿಲ್ಲವಷ್ಟೆ! ಈ ಗ್ರಂಥಕ್ಕೆ ಅರ್ಥವಿವಕ್ಷೆಯಿದೆ ಎನ್ನುವಲ್ಲಿ ಪ್ರಮಾಣವಿಲ್ಲ. ಯಾವನಾದರೂ ಮಾಡಿದ್ದರಿಂದಲೇ ಅರ್ಥವಿವಕ್ಷೆಯಿದೆ ಎಂದು ಹೇಳಿರುವುದು ಯುಕ್ತವಲ್ಲ. ಪ್ರೇಕ್ಷಾವಂತರು (ಹೆಚ್ಚು ತಿಳುವಳಿಕೆಯುಳ್ಳವರು) ನಿರ್ಮಿಸಿದ್ದೆನ್ನುವುದು ನಿಶ್ಚಿತವಾಗಲಿಲ್ಲ. ಅಥವಾ ಅರ್ಥವಿವಕ್ಷೆಯಿದ್ದರೂ ಅದರಿಂದಲೇ ಉಪಾದೇಯ (ಗ್ರಾಹ್ಯ) ವಾಗಿ ವ್ಯಾಖ್ಯಾನಮಾಡುವುದು ಯೋಗ್ಯವಲ್ಲ. ಏಕೆಂದರೆ— ವಂಚಕಾದಿಗಳ ವಾಕ್ಯವನ್ನೂ ವ್ಯಾಖ್ಯಾನಮಾಡಬೇಕಾಗುವುದು. ಆದಪ್ರಯುಕ್ತ ಯಾಥಾರ್ಥ್ಯ (ಪ್ರಾಮಾಣ್ಯ) ವಿದ್ದರೇನೇ ವ್ಯಾಖ್ಯಾನಮಾಡಬೇಕು. ಇದಕ್ಕೆ ಪ್ರಾಮಾಣ್ಯವಿದೆ ಎನ್ನುವಲ್ಲಿಯೂ ಗಮಕವಿಲ್ಲ. ಯಥಾರ್ಥವೆಂದಂಗೀಕರಿಸಿದರೂ ಅಂತಹ ಬೇರೆ ವಾಕ್ಯಗಳನ್ನು ಬಿಟ್ಟು ಇದನ್ನೇ ವ್ಯಾಖ್ಯಾನಮಾಡಲಿಕ್ಕೆ ಕಾರಣವನ್ನ ಹೇಳಬೇಕು, ಎಂಬುವ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ 'ಪರಮಾಖ್ಯವಿದ್ಯಾ' ಎಂದು ಹೇಳಿರುವರು. ಅಂದರೆ "ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ ||......... ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" ಎಂದು ಅಥರ್ವಣೋಪನಿಷತ್ತಿನಲ್ಲಿ (ಖ. ೧. ಮ. ೫. ಪು. ೨೪೬-೨೫೨.) ಪರವಿದ್ಯೇ ಅಪರವಿದ್ಯೇ ಎಂದು ಎರಡು ವಿದ್ಯೆಗಳು ಹೇಳಲ್ಪಟ್ಟವೆ. ಋಗ್ವೇದಾದಿಗಳು ಅಪರವಿದ್ಯೆಗಳು. ಯಾವ ವಿದ್ಯೆಯಿಂದ ಪರಬ್ರಹ್ಮನು ತಿಳಿಯಲ್ಪಡುತ್ತಾನೋ ಅದು ಪರವಿದ್ಯೆಯೆನ್ನಿಸುತ್ತದೆ, ಎಂದು ಹೇಳಲ್ಪಟ್ಟದೆ. ಬ್ರಹ್ಮಮೀಮಾಂಸಾ ಶಾಸ್ತ್ರವು ಪರಬ್ರಹ್ಮನ ಸ್ವರೂಪವನ್ನು ತಿಳಿಸಿಕೊಡುವುದರಿಂದ ಪರವಿದ್ಯೆಯೆನ್ನಿಸುತ್ತದೆ. ಯಥಾರ್ಥಜ್ಞಾನವೂ ಯಥಾರ್ಥಜ್ಞಾನಸಾಧನವೂ 'ವಿದ್ಯಾ' ಎನ್ನಿಸುತ್ತದೆ. 'ವಿದ್ಯಾ' ಎಂದು ಹೇಳಿರುವುದರಿಂದ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅರ್ಥವಿವಕ್ಷೆಯೂ ಪ್ರಾಮಾಣ್ಯವೂ ಇದೆ ಎಂದು ತಿಳಿಯಲ್ಪಡುತ್ತದೆ. 'ಪರಮ' ಶಬ್ದವನ್ನು ಹೇಳಿರುವುದರಿಂದ ಯಥಾರ್ಥವಾದ ಬೇರೆ ವಾಕ್ಯದಿಂದ ಅತ್ಯುತ್ಕೃಷ್ಟವೆಂದು ಉಕ್ತವಾಯಿತು. ಹೀಗೆ ಆಗಮದಿಂದಲೇ ಈ ಶಾಸ್ತ್ರಕ್ಕೆ ಸರ್ವೋತ್ತಮ ಪ್ರಾಮಾಣ್ಯವು ಸಿದ್ಧಿಸುವುದರಿಂದಲೂ ಅತಿಗಹನಾರ್ಥವಿರುವುದರಿಂದಲೂ ಇತರ ಗ್ರಂಥಗಳನ್ನು ಬಿಟ್ಟು

ಇದನ್ನೇ ವ್ಯಾಖ್ಯಾನಮಾಡುವುದು ಯೋಗ್ಯವು. ಆದಾಗ್ಯೂ ಇತರರೇ ವ್ಯಾಖ್ಯಾನಮಾಡಿರುವುದರಿಂದ ಪುನಃ ಇದನ್ನು ವ್ಯಾಖ್ಯಾನಮಾಡಬೇಕಾಗಿಲ್ಲ ಎಂದರೆ 'ವ್ಯಾಖ್ಯಾಂ' ಎಂದು ಹೇಳಿರುವರು ಇದು ವಿಶಿಷ್ಟವಾದ(ಉತ್ಕೃಷ್ಟವಾದ)ವ್ಯಾಖ್ಯಾನವು. ಇದರಿಂದ ಪರರು ಮಾಡಿದ್ದು ಅಪವ್ಯಾಖ್ಯಾನವೆಂದುಕ್ತವಾಯಿತು. (7) ಆದಾಗ್ಯೂ ತಾನು ಮಾಡಿದ ಭಾಷ್ಯದಿಂದಲೇ ಅರ್ಥವನ್ನು ನಿರೂಪಿಸಿರುವುದರಿಂದ ಪುನಃ ಈ ಗ್ರಂಥವು ಏತಕ್ಕೆಂದರೆ 'ಅನ್ವಪಿ ಚ' ಎಂದು ಹೇಳಿರುವರು. ವಿಶೇಷ ಪ್ರಯೋಜನವಿದೆ, ಅದನ್ನು ಮೇಲೆ ಹೇಳುವರು. (8) ಪ್ರಯೋಜನವಿದ್ದರೆ ಶಿಷ್ಯರೇ ಭಾಷ್ಯದ ರೀತಿಯಾಗಿ ವ್ಯಾಖ್ಯಾನಮಾಡುವರೆಂದರೆ 'ಅಹಮೇವ' ಎನ್ನುವುದರಿಂದ ಬೇರೆಯವರಿಗೆ ಸಾಮರ್ಥ್ಯವಿಲ್ಲವೆಂದು ಸೂಚಿತವಾಯಿತು ॥ ೨ ॥

ಸ ರ. ವಿ.— 'ಶಾಸ್ತ್ರಪ್ರಭವಂ' ಎಂದು ಹೇಳಿದ್ದನ್ನೇ ವಿವರಣಮಾಡುತ್ತಾರೆ —

ನ. ಚ. ವಿ.— ಸೂತ್ರಗಳಿಗೆ ಪ್ರಾಮಾಣ್ಯವನ್ನು ಸಾಧಿಸುವುದಕ್ಕಾಗಿ ಆಪ್ತಿಮೂಲತ್ವಾದಿಗಳನ್ನು ತೋರಿಸುತ್ತಾರೆ —

ನ್ಯಾಯಸುಧಾ— (1) ಶ್ರೀನಾರಾಯಣನು ಈ ಶಾಸ್ತ್ರವನ್ನು ನಿರ್ಮಿಸಿದ್ದೆಂದು ಹೇಳಿದ್ದು ಅಯುಕ್ತವು. ವೇದವ್ಯಾಸರು ಮಾಡಿದ್ದೆಂದೇ ಪ್ರಸಿದ್ಧಿಯಿರುವುದು. ನಾರಾಯಣನೇ ವ್ಯಾಸನೆಂದೂ ಹೇಳಕೂಡದು. ನಾರಾಯಣನು ಹುಟ್ಟಲಾರನು. ವೇದವ್ಯಾಸರು ಹುಟ್ಟಿರುವರು. ಮತ್ತು ಕೃತಕೃತ್ಯನಾದ ನಾರಾಯಣನಿಗೆ ಪ್ರಯೋಜನವಿಲ್ಲದಿರುವುದರಿಂದ ಆತನು ಶಾಸ್ತ್ರವನ್ನು ನಿರ್ಮಿಸಿದ್ದಾನೆ ಎನ್ನುವುದೂ ಕೂಡಲಾರದು. (2) ಶ್ರುತಿಯಲ್ಲಿರುವ 'ಪರವಿದ್ಯಾ' ಎಂಬ ಹೆಸರಿನಿಂದ ಇದಕ್ಕೆ ಸರ್ವೋತ್ತಮಪ್ರಾಮಾಣ್ಯವು ಸಿದ್ಧಿಸುತ್ತದೆ ಎಂದು ಹೇಳಿದ್ದೂ ಅಯುಕ್ತವು. ಪರಶಬ್ದಕ್ಕೆ ಅನೇಕಾರ್ಥಗಳಿವೆ. ವಿದ್ಯಾಶಬ್ದಕ್ಕೆ ಅರ್ಥವಿವಕ್ಷೆಯಿಲ್ಲದಿರುವ ಮಂತ್ರದಲ್ಲಿಯೂ ಪ್ರಯೋಗವಿದ್ದುದರಿಂದ 'ಪರವಿದ್ಯಾ' ಎಂಬ ಹೆಸರಿನಿಂದ ಸರ್ವೋತ್ತಮಪ್ರಾಮಾಣ್ಯವು ನಿಶ್ಚಿತವಾಗಲಾರದು. (3) ಮತ್ತು ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯೆಯೆಂದು ಹೆಸರು ಎನ್ನುವಲ್ಲಿಯೂ ಗಮಕವಿಲ್ಲ ಎಂದಾಶಂಕಿಸಿದರೆ —

**ಮೂ ॥ ಪ್ರಾದುರ್ಭೂತೋ ಹರಿರ್ವ್ಯಾಸೋ ವಿರಿಂಚಿ(ಚ)ಭವಪೂರ್ವಕೈಃ ।**
**ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಂ ॥ ೩ ॥**

ಅ ॥ ಹರಿಃ=ಶ್ರೀ ನಾರಾಯಣನು (ಕೃತಕೃತ್ಯನಾದಾಗ್ಯೂ), ವಿರಿಂಚಿ(ಚ)ಭವಪೂರ್ವಕೈಃ=(ತನಗೆ ದಯಾಪಾತ್ರರಾದ) ಬ್ರಹ್ಮ ರುದ್ರ ಮೊದಲಾದ ದೇವತೆಗಳಿಂದ, ಅರ್ಥಿತಃ=ಪ್ರಾರ್ಥಿಸಲ್ಪಟ್ಟವನಾಗಿ, ವ್ಯಾಸಃ=ವ್ಯಾಸನಾಮಕನಾಗಿ, ಪ್ರಾದುರ್ಭೂತಃ=ಅವತರಿಸಿದವನಾಗಿ, ಪರವಿದ್ಯಾಖ್ಯಂ=ಪರವಿದ್ಯೆಯೆಂದು ಹೆಸರುಳ್ಳ, ಅನುತ್ತಮಂ= (ನಾಸ್ತಿ ಉತ್ತಮಂ ಶಾಸ್ತ್ರಂ ಅಸ್ಮಾತ್ ಇತ್ಯನುತ್ತಮಂ) ಇದರಿಂದ ಬೇರೊಂದು ಉತ್ತಮಶಾಸ್ತ್ರವಿಲ್ಲದಿರುವ (ಅಂದರೆ ಸರ್ವೋತ್ತಮವಾದ) ಶಾಸ್ತ್ರಂ=(ಶಿಷ್ಯತೇ ಯಥಾಸ್ಥಿತಂ ಪ್ರತಿಪಾದ್ಯತೇ ತತ್ವಂ ಅನೇನೇತಿ ಶಾಸ್ತ್ರಂ= ಇದರಿಂದ ತತ್ವವು ಇದ್ದಹಾಗೆ ಪ್ರತಿಪಾದಿಸಲ್ಪಡುತ್ತದೆ,) ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಚಕ್ರೇ=ಮಾಡಿದರು.

ತಾ ॥ ನ. ಚ. ವಿ.—(1) ವೇದವ್ಯಾಸರು ಶಾಸ್ತ್ರೋಪದೇಶಕರಾದ ಬ್ರಹ್ಮಾದಿಗಳಿಗೆ ಗುರುಗಳಾಗಿರುವುದರಿಂದ ಬ್ರಹ್ಮಾದಿಗಳ ವಚನದಿಂದ ವಿರೋಧವಿಲ್ಲ. ಬ್ರಹ್ಮಾದಿಗಳ ವಚನವು

ಪ್ರತಿಕೂಲವಾಗಿದ್ದರೆ ತನ್ನ ಗುರುಗಳಿಗೆ ವಿರುದ್ಧವಾಗಿರುವಪ್ರಯುಕ್ತ ಅದೇ ಅಪ್ರಮಾಣವಾಗುವುದು. (2)ಭಾರತಾದಿಶಾಸ್ತ್ರಗಳನ್ನು ಇವರೇ ನಿರ್ಮಿಸಿರುವುದರಿಂದ ಭಾರತಾದಿಗಳವಿರೋಧವೂ ಇಲ್ಲ. ಆದಪ್ರಯುಕ್ತವೇ ವೇದವ್ಯಾಸರು ಹೇಳಿದ್ದು ಆಪ್ತಿಮೂಲಕವಾಗಿರುವುದರಿಂದ ಪ್ರಮಾಣವು.

**ನ್ಯಾಯಸುಧಾ**— (1) ಶ್ರೀಹರಿಯು ಬ್ರಹ್ಮಾದಿಗಳಿಂದ ಪ್ರಾರ್ಥಿಸಲ್ಪಟ್ಟು ವ್ಯಾಸನಾಮಕನಾಗಿ ಪ್ರಾದುರ್ಭವಿಸಿ ಈ ಗ್ರಂಥವನ್ನು ನಿರ್ಮಿಸಿದನು ಎನ್ನುವುದರಿಂದ ನಾರಾಯಣನು ಶಾಸ್ತ್ರವನ್ನು ನಿರ್ಮಿಸಿದನೆನ್ನುವಲ್ಲಿ ಅನುಪಪತ್ತಿಯು ಪರಿಹೃತವಾಯಿತು ಕೇವಲ ದಯಾಪರವಶರಾಗಿಯೇ ಪರೋಪಕಾರಕ್ಕಾಗಿ ಪ್ರವರ್ತಿಸುವವರು ಲೋಕದಲ್ಲಿ ಕಾಣಲ್ಪಡುತ್ತಾರಷ್ಟೆ! ಹೀಗೆ ಇರಲು ಅವರಿಂದ ಪ್ರಾರ್ಥಿತರಾಗಿ ಪರೋಪಕಾರಕ್ಕಾಗಿ ಪ್ರವೃತ್ತಿಮಾಡುವರೆನ್ನುವುದು ಸ್ವತಃ ಸಿದ್ಧವು. ಆದಪ್ರಯುಕ್ತವೇ ಪರಪ್ರಯೋಜನವನ್ನು ತನಗೆ ಸಂಬಂಧಪಟ್ಟದ್ದೆಂದು ಭಗವಂತನು ತಿಳಿದು ಶಾಸ್ತ್ರವನ್ನು ನಿರ್ಮಿಸಿದ್ದೆಂದು ತಿಳಿಸುವುದಕ್ಕಾಗಿ 'ಚಕ್ರೇ' ಎಂದು ಆತ್ಮನೇಪದವನ್ನು ಪ್ರಯೋಗಿಸಿರುವರು. ಈ ವಿಷಯದಲ್ಲಿ 'ನಾರಾಯಣಾದ್ವಿನಿಷ್ಪನ್ನಂ' ಇದುಮೊದಲಾದ ಆಗಮವು ಪ್ರಮಾಣವು. (2) 'ಪರವಿದ್ಯಾ' ಎಂಬ ಹೆಸರಿನಿಂದ ಇದಕ್ಕೆ ಸರ್ವೋತ್ತಮಪ್ರಾಮಾಣ್ಯವು ಸಿದ್ಧಿಸುತ್ತದೆ ಎಂದು ತಿಳಿಸುವುದಕ್ಕಾಗಿ 'ಪರವಿದ್ಯಾಖ್ಯಂ' ಎಂದನುವಾದಮಾಡಿ ಅನುತ್ತಮಂ ಶಾಸ್ತ್ರಂ' ಎಂದು ವ್ಯಾಖ್ಯಾನಮಾಡಿದರು ಅಂದರೆ "**ದ್ವೇ ವಿದ್ಯೇ ವೇದಿತವ್ಯೇ**।... ಪರಾ ಚೈವಾಪರಾ ಚ" ॥ ಎಂದು ೨ ವಿದ್ಯೆಗಳನ್ನುದ್ದೇಶಿಸಿ 'ತತ್ರಾಪರಾ' ಇತ್ಯಾದಿಗಳಿಂದ ಋಗಾದಿಸರ್ವವೇದಗಳನ್ನೂಶಿಕ್ಷಾದ್ಯಂಗಗಳನ್ನೂಅಪರವಿದ್ಯೆಯೆಂದುಹೇಳಿ '**ಅಥ ಪರಾ ಯಯಾ ತದಕ್ಷರಮಧಿಗಮ್ಯತೇ**' ಎಂದು ಪರವಿದ್ಯೆಯು ತೋರಿಸಲ್ಪಟ್ಟಿತು. ಆ ಪರವಿದ್ಯೆಯು ವೇದಾದಿ ಶಾಸ್ತ್ರಗಳ ಪ್ರಕರಣದಲ್ಲಿದ್ದುದರಿಂದಲೂ ಪರಬ್ರಹ್ಮನ ಜ್ಞಾನಕ್ಕೆ ಕರಣವಾದದ್ದು ಎಂದು ಹೇಳಿದುದರಿಂದಲೂ ಶಾಸ್ತ್ರವೇ ಆಗಿರಬೇಕು. 'ಪರವಿದ್ಯಾ' ಎನ್ನುವ ಶಬ್ದದಿಂದ ಶಾಸ್ತ್ರಬಿಟ್ಟು ಬೇರೆ ಅರ್ಥವನ್ನು ಇಟ್ಟುಕೊಂಡರೆ ಒಮ್ಮೆ ಹೇಳಿದ ವಿದ್ಯಾಶಬ್ದಕ್ಕೆ ಅನೇಕಾರ್ಥಗಳನ್ನು ಕಲ್ಪಿಸಬೇಕಾಗುವುದು. ಶಾಸ್ತ್ರ (ಯಥಾವಸ್ಥಿತವಾದ ಅರ್ಥವನ್ನು ಪ್ರತಿಪಾದಿಸುವುದು)ವೆಂದು ಹೇಳಿ ಅದು ಅಪ್ರಮಾಣವೆಂದು ಹೇಳುವುದು ವಿರುದ್ಧವಾಗಿದೆ. ಆ ಶಾಸ್ತ್ರಕ್ಕೆ ಪರತ್ವವೆಂದರೆ ಸರ್ವೋತ್ತಮತ್ವವೇ. ಆ ಸರ್ವೋತ್ತಮತ್ವವು ವಿದ್ಯಾಪದದ ಸನ್ನಿಧಾನಬಲದಿಂದ ಪ್ರಾಮಾಣ್ಯಕ್ಕೆ ಉತ್ಕೃಷ್ಟತ್ವವಿದ್ದುದರಿಂದಲೇ ಹೇಳಬೇಕು. ಋಗಾದಿ ಸರ್ವಶಾಸ್ತ್ರಗಳನ್ನೂ ಅಪರವಿದ್ಯೆಯೆಂದು ಹೇಳಿರುವುದರಿಂದ ಬ್ರಹ್ಮಮೀಮಾಂಸಾ ಶಾಸ್ತ್ರವೇ ಪರವಿದ್ಯೆಯಾಗಬೇಕು. ಆದಪ್ರಯುಕ್ತ ಪರವಿದ್ಯೆ ಎಂಬ ಹೆಸರಿನಿಂದ ಈ ಶಾಸ್ತ್ರಕ್ಕೆ ಸರ್ವೋತ್ತಮಪ್ರಾಮಾಣ್ಯವನ್ನು ಸಾಧಿಸಿದ್ದು ಯುಕ್ತವು. (3) '**ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನವಾಚಕಾಃ। ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ**' ॥ ಎಂದು ಆಥರ್ವಣ ಭಾಷ್ಯದಲ್ಲಿ (ಪು. ೨೪೭.) ಹೇಳಿದಪ್ರಕಾರ ವಿಶೇಷಾಂಶವನ್ನು ಈ ವಿಷಯದಲ್ಲಿ ತಿಳಿಯತಕ್ಕದ್ದು. ತಥಾಚ ವೇದಾದಿಗಳ ಇತಿ ಕರ್ತವ್ಯತಾ (ಅರ್ಥವನ್ನು ನಿರ್ಣಯಿಸಿಕೊಡುವ) ರೂಪವಾದ ಈ ಬ್ರಹ್ಮಮೀಮಾಂಸಾಶಾಸ್ತ್ರವು ವೇದಾದಿಗಳಂತೆಯೇ ಮುಖ್ಯ ಪ್ರಮಾಣವು ॥ ೩ ॥

**ಸ. ರ. ವಿ.**— ಸೂತ್ರಗಳಿಗೆ ಪ್ರಾಮಾಣ್ಯವು ಸಿದ್ಧಿಸಿದರೆ ವ್ಯಾಖ್ಯಾನಮಾಡಲಿಕ್ಕೆ ಅರ್ಹವೆನ್ನುವುದು ಸಿದ್ಧವಾಗುವುದು. ಅದು ಹೇಗೆಂದಾಶಂಕಿಸಿದರೆ —

**ನ್ಯಾಯಸುಧಾ**-ಹೀಗೆ ಆಗಮದಿಂದ ಸರ್ವೋತ್ತಮಪ್ರಾಮಾಣ್ಯವನ್ನು ಈ ಶಾಸ್ತ್ರಕ್ಕೆ ಸಾಧಿಸಿ ಈಗ ಅನುಮಾನದಿಂದಲೂ ಸಾಧಿಸಲಿಚ್ಛಿಸುವವರಾಗಿ ಪ್ರಾಮಾಣ್ಯ ಮಾತ್ರದಲ್ಲಿ ಅನುಮಾನವನ್ನು ಹೇಳಲಿಕ್ಕೆ ಆವಶ್ಯಕ ಪ್ರಮೇಯಗಳನ್ನು ನಿರೂಪಿಸುತ್ತಾರೆ —

**ಮೂ ॥ ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ ।**
**ಯತಸ್ತದುದಿತಂ ಮಾನಮಜಾದಿಭ್ಯಸ್ತದರ್ಥತಃ ॥ ೩ ॥**

ಅ ॥ ಯತಃ=ಯಾವ ಕಾರಣದಿಂದ, ಬಾದರಾಯಣಃ=ವೇದವ್ಯಾಸರು, ಗುರೂಣಾಂ=ಜಗತ್ತಿಗೆ ತತ್ತ್ವೋಪದೇಶಕರಾದ ಬ್ರಹ್ಮಾದಿಗಳಿಗೆ, ಗುರುಃ=ಉಪದೇಶಕರೋ, ಜ್ಞಾನವನ್ನು ಕೊಟ್ಟವರೋ, ಶಾಸ್ತ್ರಾಣಾಂ=ಮಹಾಭಾರತಾದಿ ಶಾಸ್ತ್ರಗಳಿಗೆ, ಪ್ರಭವಃ=ಉತ್ಪಾದಕರೋ, ಅಥವಾ ಗುರೂಣಾಂ ಶಾಸ್ತ್ರಾಣಾಂ=ಅಶೇಷಾರ್ಥಗಳನ್ನು ಪ್ರತಿಪಾದಿಸುವ ಸವಿಸ್ತರಗಳಾದ ವೇದಾದಿ ಶಾಸ್ತ್ರಗಳಿಗೆ, ಗುರುಃ ಪ್ರಭವಃ=ಮುಖ್ಯವಾಗಿ ಪ್ರವರ್ತಕರೋ, (ಸಂಪ್ರದಾಯವನ್ನು ಮಾತ್ರ ಪ್ರವರ್ತಿಸಿದವರಲ್ಲ.) ಮತ್ತು ಅಜಾದಿಭ್ಯಃ=ಚತುರ್ಮುಖಾದಿ ಶ್ರೋತೃಗಳಿಗೋಸ್ಕರ, ತದರ್ಥತಃ=ಅವರಿಗೆ ಮೋಕ್ಷರೂಪಪ್ರಯೋಜನಕ್ಕಾಗಿ, ತದುದಿತಂ = ಆ ವೇದವ್ಯಾಸರಿಂದ ಉಪದಿಷ್ಟವಾಗಿಯದೋ, (ಆದಪ್ರಯುಕ್ತ) ಇದಂ ಶಾಸ್ತ್ರಂ=ಈ ಶಾಸ್ತ್ರವು, ಮಾನಂ=ಪ್ರಮಾಣವಾಗಲರ್ಹವಾಗಿದೆ.

ತಾ ॥ ನ್ಯಾಯಸುಧಾ— (1) 'ಗುರುರ್ಗುರೂಣಾಂ' ಇತ್ಯಾದಿ ಹೇತುಗಳಿಂದ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯ ಇವುಗಳನ್ನೇ ಸಾಕ್ಷಾತ್ ಸಾಧಿಸಬೇಕು. 'ಮಾನಂ' ಎನ್ನುವುದು ಮುಖ್ಯ ಸಾಧ್ಯನಿರ್ದೇಶವು. (2) ಹೇಳಲಿಷ್ಟವಾದ ಅರ್ಥದ ತತ್ತ್ವಜ್ಞಾನವು, ಇಂದ್ರಿಯಗಳಲ್ಲಿ ಪಟುತ್ವವು, ಹೇಳಬೇಕೆಂಬ ಇಚ್ಛೆಯು ಇವು ಮೂರು ವಕ್ತ್ರಾನುಕೂಲ್ಯವು. (3) ತತ್ತ್ವಜ್ಞಾನಕ್ಕೆ ಯೋಗ್ಯತೆಯು, ಹೇಳುವವನ ಪ್ರೀತಿಗೆ ಪಾತ್ರರಾಗಿರುವಿಕೆಯು ಇವೆರಡು ಶ್ರೋತೃವಿನ ಅನುಕೂಲ್ಯವು. (4) ಕೇಳುವವನಿಗೆ ಪ್ರಯೋಜನವಾಗಬೇಕೆಂಬ ಉದ್ದೇಶವು ಪ್ರಸಂಗಕ್ಕೆ ಅನುಕೂಲ್ಯವು.(5) 'ಗುರೂಣಾಂ ಗುರುಃ' ಎನ್ನುವುದು ವೇದವ್ಯಾಸರಿಗೆ ಹೇಳಬೇಕೆಂದಿರುವ ವಿಷಯದ ಯಥಾರ್ಥಜ್ಞಾನವಿದೆ ಎಂದು ಸಾಧಿಸಲಿಕ್ಕೆ ಹೇತುವಾಗುವುದು. ಯಾರು ಯಾರಿಗೆ ತತ್ತ್ವವನ್ನುಪದೇಶಿಸುವನೋ ಆತನು ಅವನಿಗಿಂತ ಹೆಚ್ಚಾಗಿ ತತ್ತ್ವಜ್ಞಾನವುಳ್ಳವನಾಗಿ ಕಂಡಿರುವನು. ಇವರಾದರೂ ಸರ್ವಜ್ಞಕಲ್ಪರಾದ ಬ್ರಹ್ಮಾದಿಗಳಿಗೆ ತತ್ತ್ವೋಪದೇಶಕರೆನ್ನುವುದು 'ಬ್ರಹ್ಮರುದ್ರಾದಿ ದೇವೇಷು' ಎಂಬುವ ಆಗಮದಿಂದ ತಿಳಿಯಲ್ಪಡುತ್ತದೆ. ಆದಪ್ರಯುಕ್ತ ಸರ್ವಜ್ಞರೇ ಸರಿ. (6) 'ಗುರೂಣಾಂ ಶಾಸ್ತ್ರಾಣಾಂ ಗುರುಃ ಪ್ರಭವಃ' ಎನ್ನುವುದರಿಂದಲೂ ತತ್ತ್ವಜ್ಞಾನವೂ ಇಂದ್ರಿಯಗಳಲ್ಲಿ ಪಟುತ್ವವೂ ಸಾಧಿಸಲ್ಪಡುತ್ತದೆ. ಯಾರು ಎಷ್ಟು ಅರ್ಥವನ್ನು ಪ್ರತಿಪಾದಿಸತಕ್ಕ ಆಗಮವನ್ನು ಮಾಡಿದವರೋ, ಅವರು ಅಷ್ಟು ಅರ್ಥವನ್ನು ಯಥಾರ್ಥವಾಗಿ ತಿಳಿದವರು. ಈ ವೇದವ್ಯಾಸರು ಎಲ್ಲಾ ಅರ್ಥಗಳನ್ನು ಪ್ರತಿಪಾದಿಸುವ ಆಗಮವನ್ನು ನಿರ್ಮಿಸಿದವರೆಂದು **'ಅನುಕ್ತಂ ಪಂಚಭಿರ್ವೇದೈಃ, ಉತ್ಸನ್ನಾನ್ ಭಗವಾನ್ವೇದಾನ್'** ಇದುಮೊದಲಾದ ಆಗಮಗಳಿಂದ ತಿಳಿಯಲ್ಪಡುತ್ತದೆ. ಆದಪ್ರಯುಕ್ತ ಇವರು ಸರ್ವಜ್ಞರೇ ಆಗಿರಬೇಕು. (7) ಯಾವನು ಅನೇಕಾಗಮಗಳನ್ನು ಮಾಡಿದವನೋ, ಆತನು ಬೇರೆ ಕಾರಣಗಳಿಲ್ಲದಿದ್ದರೆ ಪಟುಕರಣನಾಗಿಯೇ ಕಾಣಲ್ಪಟ್ಟಿರುವನು. ಈ ವೇದವ್ಯಾಸರಾದರೂ ಅಪರಿಮಿತಗಳಾದ ವೇದಾದಿಗಳನ್ನು ಪ್ರವರ್ತಿಸಿದವರು. ಆದಪ್ರಯುಕ್ತ ಇಂದ್ರಿಯಪಾಟವವುಳ್ಳವರೇ ಆಗಿರಬೇಕು.

(8) 'ತದುದಿತಂ' ಎಂದು ವಚನರೂಪಕಾರ್ಯದಿಂದ ಹೇಳುವುದಕ್ಕೆ ಕಾರಣಭೂತವಾದ ಹೇಳಬೇಕೆಂಬ ಇಚ್ಛೆ ಇದೆ ಎಂದು ತಿಳಿಯುತ್ತದೆ. (9) 'ಗುರೂಣಾಂ' ಎನ್ನುವುದು ಶ್ರೋತೃಗಳಿಗೆ ತತ್ವಜ್ಞಾನಾರ್ಹತೆಯುಂಟೆನ್ನುವುದಕ್ಕೆ ಕಾರಣವು. ತಾನು ತತ್ವಜ್ಞಾನಕ್ಕೆ ಅಯೋಗ್ಯನಾಗಿ ಪರರಿಗೆ ತತ್ವೋಪದೇಶಕನಾಗಿ ಕಾಣಲ್ಪಡಲಾರನು. (10) ವಕ್ತೃಗಳ (ಹೇಳುವವರ) ಪ್ರೀತಿಗೆ ಪಾತ್ರರಾಗಿರುವರೆಂದುಪಪಾದಿಸಲಿಕ್ಕಾಗಿ 'ಅಜಾದಿಭ್ಯಃ' ಎಂದು ಹೇಳಿದ್ದು. ಬ್ರಹ್ಮಾದಿಗಳು ಶ್ರೀ ಹರಿಗೆ ಪ್ರೀತಿಪಾತ್ರರಾಗಿರುವವರೆಂದು ಸುಪ್ರಸಿದ್ಧವಾಗಿದೆ. (11) 'ತದರ್ಥತಃ' ಎನ್ನುವುದರಿಂದ ಪ್ರಸಂಗಾನುಕೂಲ್ಯವನ್ನುಪಪಾದಿಸಿದರು. ಈ ಶ್ಲೋಕದಲ್ಲಿ ಹೇಳಿದ ಗುರುಗುರುತ್ವಾದಿ ಹೇತುಗಳಿಂದ ಹಿಂದೆ ಹೇಳಿದಪ್ರಕಾರ ವಕ್ತ್ರನುಕೂಲ್ಯ, ಶ್ರೋತ್ರನುಕೂಲ್ಯ, ಪ್ರಸಂಗಾನುಕೂಲ್ಯ ಇವುಗಳನ್ನು ಸಾಧಿಸಿ ಅನುಕೂಲವಕ್ತ್ರಾದಿಮತ್ವದಿಂದ ಭಾರತದಂತೆ ಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಸಾಧಿಸಿದಂತೆಯೇ ಆಯಿತು ॥ ೪ ॥

**ಸ. ರ. ವಿ.**– ಪೌರುಷೇಯವಾಕ್ಯಗಳಿಗೆ ಆಪ್ತನು ಹೇಳಿರುವುದರಿಂದ ಪ್ರಾಮಾಣ್ಯವಿರುವುದೆಂದು ನಿಶ್ಚಯಿಸಲ್ಪಟ್ಟದೆ. ಆದಪ್ರಯುಕ್ತ ಈ ಶಾಸ್ತ್ರವನ್ನು ಆಪ್ತನು ಹೇಳಿದ್ದು ಎನ್ನುವುದು ಹೇಗೆಂದರೆ–

**ನ. ಚ. ವಿ.**— ಬ್ರಹ್ಮಾದಿಗಳು ಪ್ರಾರ್ಥಿಸಿದಾಗ ವೇದವ್ಯಾಸರು ಹೇಳಿದ್ದು ಎನ್ನುವುದರಿಂದ ಆಪ್ತಿಮೂಲತ್ವವು ಹೇಗೆಂದರೆ —

**ನ್ಯಾಯಸುಧಾ**— ಹಾಗಾದರೆ ಹಿಂದಿನ ಶ್ಲೋಕದಿಂದ ಹೀಗೆ ಅನುಮಾನವು ಹೇಳಿದಹಾಗಾಯಿತು. 'ಏತಚ್ಛಾಸ್ತ್ರಂ ಪ್ರಮಾಣಂ ಅನುಕೂಲವಕ್ತ್ರಾದಿಮತ್ವಾತ್ ಭಾರತಾದಿವತ್' ಭಾರತಾದಿಗಳಂತೆಯೇ ಅನುಕೂಲ ವಕ್ತ್ರಾದಿಗಳು ಇದ್ದುದರಿಂದ ಈ ಬ್ರಹ್ಮಮೀಮಾಂಸಾ ಶಾಸ್ತ್ರವು ಪ್ರಮಾಣವು. ವಕ್ತ್ರಾದ್ಯಾನುಕೂಲ್ಯವು 'ಗುರುಗುರೂಣಾಂ' ಇತ್ಯಾದಿ ಹೇತುಗಳಿಂದ ಸಿದ್ಧವಾಗಿದೆ ಎಂದು. ಇದು ಅಯುಕ್ತವು. ಏಕೆಂದರೆ– ಆ ಅನುಮಾನದಲ್ಲಿ ಆಪ್ತವಾಕ್ಯತ್ವವು ಉಪಾಧಿಯಾಗಿದೆ. ಸಾಧ್ಯವ್ಯಾಪಕವಾಗಿಯೂ ಸಾಧನಾವ್ಯಾಪಕವಾಗಿಯೂ ಇರುವ ಧರ್ಮವು ಉಪಾಧಿಯು.

* ವಾಕ್ಯವಾಗಿ ಪ್ರಾಮಾಣ್ಯವೆಲ್ಲಿದೆಯೋ, ಅಲ್ಲಿ ಆಪ್ತವಾಕ್ಯತ್ವವಿದೆ, ಭಾರತಾದಿಗಳಲ್ಲಿ. ಹೀಗೆ ಸಾಧ್ಯವ್ಯಾಪಕತ್ವವು. ಅನುಕೂಲ ವಕ್ತ್ರಾದಿಗಳುಳ್ಳ ಈ ಶಾಸ್ತ್ರದಲ್ಲಿ ಆಪ್ತವಾಕ್ಯತ್ವವಿಲ್ಲ. ಹೀಗೆ ಸಾಧನಾವ್ಯಾಪಕತ್ವವು. ಆದಾಗ್ಯೂ ಅಪೌರುಷೇಯವಾದ ವೇದದಲ್ಲಿ ಸಾಧ್ಯವಿದ್ದು ಉಪಾಧಿಯಾದ ಆಪ್ತವಾಕ್ಯತ್ವವಿಲ್ಲದಿರುವುದರಿಂದ ಈ ಆಪ್ತವಾಕ್ಯತ್ವವು ಉಪಾಧಿಯಾಗುವುದಿಲ್ಲನೆಂದರೆ ವೇದಕ್ಕೆ ಅಪೌರುಷೇಯತ್ವವನ್ನೇ ಒಪ್ಪುವುದಿಲ್ಲ. ಒಪ್ಪಿದರೂ ಪೌರುಷೇಯವಾಕ್ಯವಾಗಿ ಪ್ರಾಮಾಣ್ಯವೆಲ್ಲಿದೆಯೋ ಅಲ್ಲಿ ಆಪ್ತವಾಕ್ಯತ್ವವು. ಹೀಗೆ ಪಕ್ಷಧರ್ಮಾವಚ್ಛಿನ್ನ ಸಾಧ್ಯವ್ಯಾಪಕವಾದ ಉಪಾಧಿಯನ್ನಂಗೀಕರಿಸಿದರೆ ಉಪಾಧಿತ್ವವು ಕೂಡುತ್ತದೆ, ಎಂದರೆ ಹೀಗೆ ಹೇಳಕೂಡದು. ನಮ್ಮ ಅಭಿಪ್ರಾಯವೇ ನಿಮಗೆ ತಿಳಿಯಲಿಲ್ಲ. (ನಾವು ವಕ್ತ್ರಾದ್ಯಾನುಕೂಲ್ಯದಿಂದ ಸಾಕ್ಷಾತ್ ಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಸಾಧಿಸಲಿಕ್ಕೆ ಹೊರಟವರಲ್ಲ. ಹಾಗಿದ್ದರೆ ನೀವು ಹೇಳಿದ ಉಪಾಧಿಯೂ ಕೂಡಬಹುದಿತ್ತು. ಮತ್ತೇನೆಂದರೆ– ಅನುಕೂಲವಕ್ತ್ರಾದಿಮತ್ವಕ್ಕೆ ಆಪ್ತವಾಕ್ಯತ್ವದಿಂದ

---

* ಉದಾ = ಪರ್ವತಃ ಧೂಮವಾನ್ ವಹ್ನೇಃ । ಪರ್ವತವು ಹೊಗೆಯುಳ್ಳದ್ದು. ಬೆಂಕಿಯಿದ್ದುದರಿಂದ ಎನ್ನುವಲ್ಲಿ ಆರ್ದ್ರೇಂಧನ ಸಂಯೋಗವು ಉಪಾಧಿಯು. ಧೂಮವಿದ್ದ ಪ್ರದೇಶಗಳಲ್ಲೆಲ್ಲ ಆರ್ದ್ರೇಂಧನ ಸಂಯೋಗವಿದೆ. ಆದಕಾರಣ ಸಾಧ್ಯವ್ಯಾಪಕವು. ಬೆಂಕಿಯಿರುವ ಕಬ್ಬಿಣ ಗೋಲದಲ್ಲಿ ಆರ್ದ್ರೇಂಧನ ಸಂಯೋಗವಿಲ್ಲ. ಆದಕಾರಣ ಸಾಧನಾವ್ಯಾಪಕವಾಯಿತು.

ವ್ಯಾಪ್ತಿಯಿದ್ದಪ್ರಯುಕ್ತ ಅನುಕೂಲವಕ್ತ್ರಾದಿಮತ್ವದಿಂದ ಆಪ್ತವಾಕ್ಯತ್ವವನ್ನು ಸಾಧಿಸಿ ಆ ಆಪ್ತ ವಾಕ್ಯತ್ವದಿಂದ ಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಸಾಧಿಸುತ್ತೇವೆ ಎಂದಭಿಪ್ರಾಯವುಳ್ಳವರಾಗಿ ವಿವರಿಸುತ್ತಾರೆ —

**ಮೂ || ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ |**
**ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ || ೫ ||**
**ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ |**
**ದೃಶ್ಯತೇ ಬ್ರಹ್ಮಸೂತ್ರಾಣಾಮೇಕಧಾಽನ್ಯತ್ರ ಸರ್ವಶಃ || ೬ ||**

ಅ || ಯತ್ = ಯಾವ ವಾಕ್ಯದಲ್ಲಿ, ವಕ್ತೃಶ್ರೋತೃಪ್ರಸಕ್ತೀನಾಂ ಅನುಕೂಲತಾ= ವಕ್ತೃಶ್ರೋತೃ ಪ್ರಸಂಗಗಳಿಗೆ ಅನುಕೂಲತೆಯಿದೆಯೋ, (ತತ್ರ=ಅಲ್ಲಿ) ಆಪ್ತಿಃ=ಆಪ್ತಿಯು, ಅಂದರೆ ಯಾವುದು ವಕ್ತ್ರಾದ್ಯಾನುಕೂಲ್ಯದಿಂದೊಡಗೂಡಿಯುದೋ, ಅದು ಆಪ್ತವಾಕ್ಯವು (ಯಾವ ಕಾರಣದಿಂದ ಹೀಗೆ ವ್ಯಾಪ್ತಿಯಿದೆಯೋ ಯಾವುದರಿಂದ ಈ ಶಾಸ್ತ್ರಕ್ಕೆ ಅನುಕೂಲ ವಕ್ತ್ರಾದಿಗಳಿವೆಯೋ,) ತೇನ=ಅದರಿಂದ ಸಿದ್ಧವಾದ, ಆಪ್ತವಾಕ್ಯತಯಾ=ಆಪ್ತವಾಕ್ಯತ್ವರೂಪ ಹೇತುವಿನಿಂದ, ಮಾನಂ=ಈ ಶಾಸ್ತ್ರವು ಪ್ರಮಾಣವು. (ಹೀಗೆ ಸಾಧಿಸಲ್ಪಟ್ಟಿತು) ಶ್ರುತಿಮೂಲ ತಯಾ ತಥಾ=(ಹೇಗೆ ಆಪ್ತವಾಕ್ಯತ್ವದಿಂದಲೋ) ಹಾಗೆ ಶ್ರುತಿಮೂಲತ್ವದಿಂದಲೂ, ಯುಕ್ತಿ ಮೂಲತಯಾ= ಯುಕ್ತಿಮೂಲತ್ವದಿಂದಲೂ, (ಈ ಶಾಸ್ತ್ರವು ಪ್ರಮಾಣವು.) ಬ್ರಹ್ಮಸೂತ್ರಾಣಾ ಮೇವ=ಬ್ರಹ್ಮಸೂತ್ರಗಳಿಗೇನೆ, ಪ್ರಾಮಾಣ್ಯಂ=ಪ್ರಾಮಾಣ್ಯವು, ತ್ರಿವಿಧಂ=ಮೂರು ಪ್ರಕಾರ ವಾಗಿ, ದೃಶ್ಯತೇ=ಆಪ್ತವಾಕ್ಯತ್ವ ಮೊದಲಾದ ಮೂರು ಪ್ರಮಾಣಗಳಿಂದ ತಿಳಿಯಲ್ಪಡುತ್ತದೆ. (ಆದಪ್ರಯುಕ್ತ ಈ ಪ್ರಾಮಾಣ್ಯವು) ಮಹತ್=ಸರ್ವೋತ್ತಮವೆಂದು ತಿಳಿಯತಕ್ಕದು. ಅನ್ಯತ್ರ ಸರ್ವಶಃ=ಬೇರೆ ಎಲ್ಲಾ ಕಡೆಗಳಲ್ಲಿ, ಏಕಧಾ=ಏಕಪ್ರಕಾರವಾದ ಪ್ರಾಮಾಣ್ಯವು.

ತಾ || ಸ. ರ. ವಿ.— (1) ವಕ್ತೃಶ್ರೋತೃ ಪ್ರಸಕ್ತಿಗಳ ಆನುಕೂಲ್ಯವೇ ಆಪ್ತೋಕ್ತತ್ವವು. (2) ವೇದವ್ಯಾಸರೇ ವಕ್ತೃಗಳಾಗಿರುವುದರಿಂದ ಸೂತ್ರಗಳಿಗೆ ವಕ್ತ್ರಾನುಕೂಲ್ಯವಿದೆ. (3) ಬ್ರಹ್ಮಾದಿಗಳೇ ಶ್ರೋತೃಗಳಾಗಿರುವುದರಿಂದ ಶ್ರೋತ್ರಾನುಕೂಲ್ಯವಿದೆ. (4) ಅಜ್ಞಾನವನ್ನು ನಾಶಮಾಡುವುದಕ್ಕಾಗಿ ಪ್ರವೃತ್ತಿಯಿದ್ದುದರಿಂದ ಪ್ರಸಂಗಾನುಕೂಲ್ಯವೂ ಇದೆ. ಇವುಗಳಲ್ಲಿ ಒಂದೊಂದು ಆನುಕೂಲ್ಯವಿಲ್ಲದಿದ್ದರೆ ಅನಾಪ್ತತ್ವವು. ಹೇಗೆಂದರೆ- ಜೈನವಾಕ್ಯಗಳಲ್ಲಿ ವಕ್ತ್ರಾನು ಕೂಲ್ಯವಿಲ್ಲದಿರುವುದರಿಂದ ಆಪ್ತಿಯಿಲ್ಲ. ಬುದ್ಧವಾಕ್ಯಗಳಲ್ಲಿ ಶ್ರೋತ್ರಾನುಕೂಲ್ಯವಿಲ್ಲದಿರುವುದ ರಿಂದ ಆಪ್ತಿಯಿಲ್ಲ. ನರ್ಮಾದಿ ವಾಕ್ಯಗಳಲ್ಲಿ ಪ್ರಸಂಗಾನುಕೂಲ್ಯವಿಲ್ಲದಿರುವುದರಿಂದ ಆಪ್ತಿಯಿಲ್ಲ. ಈ ವಿಷಯವು ಭಾರತದಲ್ಲಿದೆ. "**ನ ನರ್ಮಯುಕ್ತಮನೃತಂ ಹಿನಸ್ತಿ ನ ಸ್ತ್ರೀಷು ರಾಜನ್ನ ವಿವಾಹಕಾಲೇ । ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತ ಕಾನಿ**" || ಎಂದು. (5) ಆಪ್ತನು ಹೇಳಿರುವುದರಿಂದ ಮಾತ್ರ ಪ್ರಾಮಾಣ್ಯವಲ್ಲ. ಶ್ರುತಿಮೂಲಕ ವಾಗಿರುವುದರಿಂದಲೂ ಯುಕ್ತಿಮೂಲಕವಾಗಿರುವುದರಿಂದಲೂ ಪ್ರಾಮಾಣ್ಯವನ್ನು ಅಂಗೀಕರಿಸ ಬೇಕು. ಆದಪ್ರಯುಕ್ತ ಬ್ರಹ್ಮಸೂತ್ರಗಳಿಗೆ ಮೂರು ಪ್ರಕಾರವಾಗಿಯೂ ಪ್ರಾಮಾಣ್ಯವಿದೆ. ಜೈಮಿ ನ್ಯಾದಿ ವಾಕ್ಯಗಳಲ್ಲಿ ಆದರೂ ಇಂತಹ ಪ್ರಾಮಾಣ್ಯವಿಲ್ಲ. ಆದಪ್ರಯುಕ್ತ ಬ್ರಹ್ಮಸೂತ್ರಕ್ಕೆ ಸದೃಶ ವಾದದ್ದು, ಮುಖ್ಯ ಪ್ರಮಾಣವಾದುದು ಯಾವುದೂ ಇಲ್ಲ. **ಆದಕಾರಣ ಮುಖ್ಯಪ್ರಮಾಣವಾಗಿ ರುವುದರಿಂದ ವ್ಯಾಖ್ಯಾನಮಾಡಲರ್ಹವಾಗಿದೆ.**

**ನ್ಯಾಯಸುಧಾ—** (1) 'ವಕ್ತೃಶ್ರೋತೃಪ್ರಸಕ್ತೀನಾಂ' ಇತ್ಯಾದಿಗಳಿಂದ ಈ ಅನುಮಾನವು ಉಕ್ತವಾಯಿತು. (೧) 'ವಿಮತಂ ಆಪ್ತವಾಕ್ಯಂ ಅನುಕೂಲೇನ ವಕ್ತ್ರಾ ಅನುಕೂಲಾನ್ ಶ್ರೋತೄನ್ ಪ್ರತಿ ತದೀಯಹಿತಸಾಧನಬೋಧಾಯೋಪದಿಷ್ಟತ್ವಾತ್ ಸಂಪ್ರತಿಪನ್ನವತ್'=ವಿವಾದ ವಿಷಯವಾದ ಬ್ರಹ್ಮಸೂತ್ರವು, ಆಪ್ತವಾಕ್ಯವು, ಅನುಕೂಲನಾದ ವಕ್ತೃವಿನಿಂದ ಅನುಕೂಲರಾದ ಶ್ರೋತೃಗಳನ್ನು ಕುರಿತು ಅವರಿಗೆ ಹಿತಸಾಧನವನ್ನು ತಿಳಿಸುವುದಕ್ಕಾಗಿ ಉಪದೇಶಮಾಡಿರುವುದರಿಂದ, ಸಮ್ಮತವಾದ ಭಾರತದಂತೆ. (೨) ವಿಮತಂ ಪ್ರಮಾಣಂ ಆಪ್ತವಾಕ್ಯತ್ವಾತ್ ಸಂಪ್ರತಿಪನ್ನವತ್=ವಿವಾದವಿಷಯವಾದ ಬ್ರಹ್ಮಮೀಮಾಂಸಾ ಶಾಸ್ತ್ರವು, ಪ್ರಮಾಣವು, ಆಪ್ತನ ವಾಕ್ಯವಾಗಿರುವುದರಿಂದ, ಸಮ್ಮತವಾದ ಭಾರತದಂತೆ. (2) ಹೇಳುವವನ ಆನುಕೂಲ್ಯವಿಲ್ಲದಿರುವುದರಿಂದ ಜೈನಾದಿಗಳ ವಾಕ್ಯವು ಅನಾಪ್ತವಾಕ್ಯವು. ಶ್ರೋತ್ರಾನುಕೂಲ್ಯವಿಲ್ಲದಿರುವುದರಿಂದ ಬೌದ್ಧಾದಿಗಳ ವಾಕ್ಯವು ಅನಾಪ್ತವಾಕ್ಯವು. ಪ್ರಸಂಗಾನುಕೂಲ್ಯವಿಲ್ಲದಿರುವುದರಿಂದ ನರ್ಮಾದಿ (ಚಾಟು) ವಾಕ್ಯವು ಅನಾಪ್ತವಾಕ್ಯವು. (3) (೧) ಆಪ್ತನೆಂದರೆ ಯಾವನು? ಕಂಡಹಾಗೆ ಹೇಳುವವನೆಂದರೆ- ಚಿಪ್ಪನ್ನು ನೋಡಿ ಬೆಳ್ಳಿ ಎಂದು ಹೇಳುವವನೂ ಆಪ್ತನಾಗಬೇಕಾಗುವನು (೨)ಪ್ರಮಾಣ ದೃಷ್ಟವಾದ ಅರ್ಥವನ್ನು ಹೇಳುವವನೆಂದರೆ— ಪ್ರಮಾಣದೃಷ್ಟವನ್ನೇ ಪ್ರಮಾದಾದಿಗಳಿಂದ ಬೇರೆ ರೀತಿಯಾಗಿ ಹೇಳುವವನೂ ಆಪ್ತನಾಗಬೇಕಾಗುವನು. (೩) ಪ್ರಮಾಣದಿಂದ ಕಂಡಹಾಗೆ ಹೇಳುವವನೆಂದರೆ— ಏಕದೇಶವನ್ನು ಹಾಗೆ ಹೇಳಿದರೂ ಬೇರೆ ಅಂಶವನ್ನು ಅಯಥಾರ್ಥವಾಗಿ ಹೇಳುವವನೂ ಆಪ್ತನಾಗಬೇಕಾಗುವನು. (೪) ಎಷ್ಟು ಪ್ರಮಾಣದಿಂದ ಕಾಣಲ್ಪಡುತ್ತದೋ ಅಷ್ಟನ್ನು ಹೇಳುವವನೆಂದರೆ ಪ್ರಾಯಶಃ ಹಾಗೆ ಹೇಳುವವರು ಇಲ್ಲದಿರುವುದರಿಂದ ಲಕ್ಷಣಕ್ಕೆ ಅವ್ಯಾಪ್ತಿಯೇ ಬರುವುದು. (೫) ನಿರ್ದೋಷನು ಆಪ್ತನೆಂದರೆ ಆಪ್ತರೆಂದಭಿಮತರಾದ ವಸಿಷ್ಠಾದಿಗಳಿಗೂ ಕೆಲವುಕಡೆ ರಾಗಾದಿಗಳು ಸಂಭವಿಸುವುದರಿಂದ ಅವರೂ ಅನಾಪ್ತರಾಗಬೇಕಾಗುವರು. (೬) ಯಾವ ವಿಷಯದಲ್ಲಿ ನಿರ್ದೋಷನೋ ಆ ವಿಷಯದಲ್ಲಿ ಆಪ್ತನೆಂದರೆ ಯತ್ ತತ್ ಶಬ್ದಗಳು ವಿಶೇಷವಿಷಯಕಗಳಾದುದರಿಂದ ಅವ್ಯಾಪ್ತವಾಗುವುದೆಂದರೆ— ವಿವಕ್ಷಿತಾರ್ಥ ತತ್ವಜ್ಞಾನವು, ಅವಿಪ್ರಲಿಪ್ಸೆ (ವಂಚಿಸಬೇಕೆಂಬ ಇಚ್ಛೆಯಿಲ್ಲದಿರುವುದು) ವಿವಕ್ಷೆ (ಹೇಳಬೇಕೆಂಬ ಇಚ್ಛೆ)ಯೂ, ಕರಣಪಾಟವ (ಇಂದ್ರಿಯಗಳಲ್ಲಿ ಪಟುತ್ವವು) ಈ ನಾಲ್ಕು ಆಪ್ತಿಯೆನ್ನಿಸುತ್ತದೆ. ಆಪ್ತಿಯಿರುವವನೇ ಆಪ್ತನು. ಇಂತಹ ಆಪ್ತಿಮೂಲಕ ವಾಕ್ಯವೇ ಆಪ್ತವಾಕ್ಯವೆಂದಭಿಮತವಾಗಿದೆ. ಇಂತಹ ಆಪ್ತಿಮೂಲಕ ವಾಕ್ಯತ್ವರೂಪಹೇತುವಿನಿಂದ ಪ್ರಾಮಾಣ್ಯವನ್ನು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಾಧಿಸಿರುವುದರಿಂದ ಭವಭೂತ್ಯಾದಿಗಳು ಮಾಡಿದ ಮಾಲತೀಮಾಧವಾದಿ ನಾಟಕಗಳಲ್ಲಿ ಆಪ್ತಿಮೂಲಕ ವಾಕ್ಯತ್ವರೂಪವಾದ ಆಪ್ತವಾಕ್ಯತ್ವವೇ ಇಲ್ಲದಿರುವುದರಿಂದ ಪ್ರಾಮಾಣ್ಯ ಬರಲಿ ಎಂಬುವ ಆಶಂಕೆಗೆ ಅವಕಾಶವಿರುವುದಿಲ್ಲ. (4) ಅಬೋಧಕವು ಅಥವಾ ವಿಪರೀತವಾಗಿ ತಿಳಿಸಿಕೊಡತಕ್ಕ ವಾಕ್ಯವು ಅಪ್ರಮಾಣವೆನ್ನಿಸಿಕೊಳ್ಳುತ್ತದೆ. ಹೇಳುವವನಿಗೆ ಇಂದ್ರಿಯಗಳಲ್ಲಿ ಪಾಟವವಿಲ್ಲದಿದ್ದರೆ ಅಬೋಧಕವಾಗುವುದು. ಹೇಳುವವರಿಗೆ ವಿಪರೀತಜ್ಞಾನಾದಿಗಳಿದ್ದರೆ ವಿಪರೀತ ಬೋಧಕವಾಗುವುದು. ಆದಕಾರಣ ಹೇಳುವವರಲ್ಲಿ ವಿವಕ್ಷಿತಾರ್ಥ ತತ್ವಜ್ಞಾನಾದಿರೂಪವಾದ ಆಪ್ತಿಯಿದ್ದರೆ ಅಂತಹವರ ವಾಕ್ಯವು ಅಬೋಧಕವೂ ವಿಪರೀತ ಬೋಧಕವೂ ಆಗದೆ ಯಥಾವಸ್ಥಿತಾರ್ಥ ಬೋಧಕವೇ ಆಗುವಪ್ರಯುಕ್ತ ಆಪ್ತಿಪೂರ್ವಕ ವಾಕ್ಯತ್ವಕ್ಕೂ ಪ್ರಾಮಾಣ್ಯಕ್ಕೂ ವ್ಯಾಪ್ತಿಯು ನಿಶ್ಚಿತವೇ ಆಗಿದೆ. (5) ಅನುಕೂಲವಕ್ತ್ರಾದಿಮತ್ವದಿಂದ ಪ್ರಾಮಾಣ್ಯವನ್ನೇ ಸಾಧಿಸಬಹುದು. ಮಧ್ಯೇ ಆಪ್ತವಾಕ್ಯತ್ವವನ್ನು ಏತಕ್ಕೆ ಸಾಧಿಸಿದ್ದು, ಎಂದರೆ ವಕ್ತ್ರಾದ್ಯಾನುಕೂಲ್ಯದಿಂದ ಪ್ರಾಮಾಣ್ಯವನ್ನು ಸಾಧಿಸುವವರೂ ಕೂಡ ಕೊನೆಗೆ ವಕ್ತೃವಿಗೆ ಆಪ್ತಿಯಿದ್ದುದರಿಂದಲೇ

ಆ ವಾಕ್ಯವು ಪ್ರಮಾಣವೆಂದು ಹೇಳಲೇಬೇಕು. ಇಲ್ಲವಾದರೆ ವಕ್ತೃತ್ವದ್ಯಾನುಕೂಲ್ಯವಿರಲಿ,ವಕ್ತೃವಿಗೆ ವಂಚಿಸಬೇಕೆಂಬ ಇಚ್ಛೆಯಿದ್ದುದರಿಂದ ಅವನ ವಾಕ್ಯವು ಅಪ್ರಮಾಣವೇ ಆಗಲಿ ಎಂಬುವ ಶಂಕೆಗೆ ಪರಿಹಾರವೇ ಆಗಲಿಕ್ಕಿಲ್ಲ. ಆದುದರಿಂದ ವಕ್ತೃತ್ವದ್ಯಾನುಕೂಲ್ಯದಿಂದ ಆಪ್ತವಾಕ್ಯತ್ವವನ್ನು ಸಾಧಿಸಿ ಅದರಿಂದ ಪ್ರಾಮಾಣ್ಯವನ್ನು ಸಾಧಿಸಬೇಕೆಂದು ಹೇಳಿದ್ದು ಯುಕ್ತವೇ. (6) ಯದ್ಯಪಿ ಪ್ರಾಮಾಣ್ಯವು * ಸ್ವತ ಏವ ಅಂದರೆ ಶಾಸ್ತ್ರಕ್ಕೆ ಜ್ಞಾನವನ್ನು ಹುಟ್ಟಿಸುವ ಶಕ್ತಿಯು ಯಾವುದರಿಂದ ತಿಳಿದು ಬರುತ್ತದೋ, ಅದರಿಂದಲೇ ಆ ಶಾಸ್ತ್ರಕ್ಕೆ ಪ್ರಮಾಣವನ್ನು ಹುಟ್ಟಿಸುವ ಶಕ್ತಿಯೆಂಬ ಪ್ರಾಮಾಣ್ಯವೂ ಕೂಡ ತಿಳಿದುಬರುತ್ತದೆ, ಎಂಬುವ ಕರಣಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಸಿದ್ಧಾಂತದಲ್ಲಿ ಒಪ್ಪಿರುವುದರಿಂದ ಶಾಸ್ತ್ರಪ್ರಾಮಾಣ್ಯಸಾಧನೆಗಾಗಿ ಆಪ್ತವಾಕ್ಯತ್ವರೂಪ ಹೇತುವನ್ನು ಹೇಳಿದ್ದು ಯುಕ್ತವಲ್ಲವೆಂದರೆ— ಆಪ್ತವಾಕ್ಯತ್ವರೂಪ ಹೇತುವಿನಿಂದ ಪ್ರಾಮಾಣ್ಯವನ್ನು ಸಾಧಿಸುವುದೇ ಇಲ್ಲ. ಅಪ್ರಾಮಾಣ್ಯಶಂಕಾನಿರಾಸಕ್ಕಾಗಿಯೇ ಆಪ್ತವಾಕ್ಯತ್ವರೂಪ ಹೇತುವನ್ನು ಹೇಳಿರುವುದರಿಂದ ಸಿದ್ಧಾಂತವಿರೋಧವೂ ಇರುವುದಿಲ್ಲ. (7) ಹೀಗೆ ವಿಜಾತೀಯ ಸಂವಾದದಿಂದ ಈ ಶಾಸ್ತ್ರವು ಪ್ರಮಾಣವೆಂದುಪಪಾದಿಸಿ ಆ ಶಾಸ್ತ್ರಪ್ರಾಮಾಣ್ಯಕ್ಕೆ ಸರ್ವೋತ್ಕೃಷ್ಟತ್ವವು ಸಿದ್ಧಿಸುವುದಕ್ಕಾಗಿ ಸಜಾತೀಯ ಎರಡು ಸಂವಾದಗಳನ್ನು '**ಶ್ರುತಿಮೂಲತಯಾ**' ಇತ್ಯಾದಿಗಳಿಂದ ಹೇಳಿರುವರು (8) ಯದ್ಯಪಿ 'ಶ್ರುತಿಯುಕ್ತಿಮೂಲ' ಶಬ್ದಗಳು ಶ್ರುತಿ ಯುಕ್ತಿಗಳಿಂದ ಅರ್ಥವನ್ನು ತಿಳಿದು ನಿರ್ಮಿಸಿದವುಗಳನ್ನು ಹೇಳತಕ್ಕವುಗಳು. ಆದಾಗ್ಯೂ ವೇದವ್ಯಾಸರು ಸ್ವತಃ ಸರ್ವಜ್ಞರಾದುದರಿಂದ ಮುಖ್ಯಾರ್ಥವು ಸರ್ವಥಾ ಕೂಡಲಾರದಾದಕಾರಣ ಶ್ರುತಿ ಯುಕ್ತಿ ಸಂವಾದಿಯಾದವುಗಳನ್ನು ಹೇಳತಕ್ಕವುಗಳೆಂದು ವ್ಯಾಖ್ಯಾನಮಾಡತಕ್ಕದ್ದು. (9) ತಥಾಚ ಯಾವುದು ಶ್ರುತಿಸಂವಾದವುಳ್ಳದ್ದೋ ಅದು ಪ್ರಮಾಣವು, ಮನ್ವಾದಿಗಳ ವಾಕ್ಯದಂತೆ. ಈ ಶಾಸ್ತ್ರವು ಶ್ರುತ್ಯರ್ಥವಿಚಾರಪರವಾಗಿರುವುದರಿಂದ ಶ್ರುತಿಸಂವಾದವುಳ್ಳದ್ದು. ಈ ವಿಷಯವು "**ಪುನಸ್ತಸ್ಯಾರ್ಥವಿತ್ತಯೇ । ಚಕಾರ ಬ್ರಹ್ಮಸೂತ್ರಾಣಿ**" ಇತ್ಯಾದ್ಯಾಗಮಗಳಿಂದ ಸಿದ್ಧವಾಗಿದೆ. (10) ಯಾವುದು ಯುಕ್ತಿಸಂವಾದವುಳ್ಳದ್ದೋ, ಅದು ಪ್ರಮಾಣವು. ಉದಾ=ಧೂಮವುಳ್ಳ ಪರ್ವತವನ್ನುದ್ದೇಶಿಸಿ 'ಈ ಪರ್ವತವು ಅಗ್ನಿಯುಳ್ಳದ್ದು' ಎಂಬುವ ವಾಕ್ಯವು. ಈ ಶಾಸ್ತ್ರವು ಯುಕ್ತ್ಯನುಸಂಧಾನಾತ್ಮಕ ಮೀಮಾಂಸಾಜನಕವಾಗಿರುವುದರಿಂದ ಯುಕ್ತಿಸಂವಾದವುಳ್ಳದ್ದು. ಆದಪ್ರಯುಕ್ತ ಪ್ರಮಾಣವು. ಇಲ್ಲವಾದರೆ ಶ್ರುತಿಯುಕ್ತಿಗಳಿಗೆ ಅಪ್ರಾಮಾಣ್ಯವು ಬರಬೇಕಾಗುವುದು. (11) ಬ್ರಹ್ಮ=ವೇದವು, ಮತ್ತು ವೇದಾರ್ಥಭೂತನಾದ ಪರಬ್ರಹ್ಮನು, ಅದರ ಸೂತ್ರಗಳು ಬ್ರಹ್ಮಸೂತ್ರಗಳು. ಅಂದರೆ ಸರ್ವ ವೇದಗಳ ಅರ್ಥಭೂತನಾದ ಪರಬ್ರಹ್ಮನ ಸ್ವರೂಪವನ್ನು ನಿರ್ಣಯಿಸುವವುಗಳು.) "**ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ । ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ**" ॥ ಎಷ್ಟು ಅಕ್ಷರಗಳಿಲ್ಲದೆ ನಿರ್ವಾಹವಿಲ್ಲವೋ ಅದಕ್ಕಿಂತ ಹೆಚ್ಚು ಅಕ್ಷರಗಳನ್ನು ಹೇಳದೆ ಅಷ್ಟೇ ಅಕ್ಷರಗಳನ್ನು ಹೇಳುವುದು, ಸಂಶಯಗ್ರಸ್ತವಾಗದಿರುವುದು, ಶ್ರೇಷ್ಠವಾದ ಅರ್ಥವನ್ನು ಪ್ರತಿಪಾದಿಸುವುದು, ಸರ್ವ ಶಾಖೆಗಳನ್ನು ನಿರ್ಣಯಿಸುವುದು, ವ್ಯರ್ಥಾಕ್ಷರಗಳಿಲ್ಲದಿರುವುದು, ದೋಷವಿಲ್ಲದಿರುವುದು,

---

* 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' (ಬ್ರ. ಸೂ. ಅಧ್ಯಾ. ೨ ಪಾ. ೧ ಸೂ. ೪) ಎಂದು ವೇದವ್ಯಾಸರು ಹೇಳಿರುವರು. ಜೈಮಿನ್ಯಾಚಾರ್ಯರೂ ಕೂಡ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯ ಜ್ಞಾನಮುಪದೇಶೋಽವ್ಯತಿರೇಕಶ್ಚಾರ್ಥೇಽನುಪಲಬ್ಧೇ ತತ್ಪ್ರಮಾಣಂ ಬಾದರಾಯಣಸ್ಯಾನಪೇಕ್ಷತ್ವಾತ್ ಜೈ. ಸೂ. ಅಧ್ಯಾ. ೧. ಪಾ. ೧. ಸೂ. ೫.)

ಇಂತಹದನ್ನು ಸೂತ್ರವೆಂದು ಸೂತ್ರಜ್ಞರು ಹೇಳುತ್ತಾರೆ, ಎಂಬ ಆಗಮದಿಂದ ಸೂತ್ರ ಶಬ್ದಾರ್ಥವನ್ನು ತಿಳಿಯತಕ್ಕದು. (12) ಇದರಿಂದ ಈ ಶಾಸ್ತ್ರವನ್ನು ಪ್ರತಿಪಾದಿಸುವ ಶಾರೀರಕ ಶಬ್ದಕ್ಕೆ 'ಶರೀರದಲ್ಲಿರುವ ಜೀವನನ್ನು ಅಧಿಕರಿಸಿರುವ ಗ್ರಂಥವು' ಎಂಬುವ ವ್ಯಾಖ್ಯಾನವು ನಿರಸ್ತವಾಯಿತು. ಬ್ರಹ್ಮಸೂತ್ರ ಶಬ್ದಾರ್ಥದಿಂದ ವಿರುದ್ಧವಾಗಿದೆ. 'ತ್ವಂ' ಎಂಬ ಪದದಿಂದ ವಾಚ್ಯನಾದ ಜೀವನಿಗೆ 'ತತ್' ಪದವಾಚ್ಯಬ್ರಹ್ಮಸ್ವರೂಪತ್ವ ವಿಚಾರವು ಎಂದು ವ್ಯಾಖ್ಯಾನಮಾಡಿರುವುದರಿಂದ ವಿರೋಧವಿಲ್ಲವೆಂದರೆ ಇಂತಹ ಅರ್ಥವು ಸರ್ವಥಾ ಕೂಡಲಾರದು. ಏತಕ್ಕೆಂದರೆ, ಜನ್ಮಾದಿಸೂತ್ರಗಳು ಅಭೇದಪ್ರತಿಪಾದಕಗಳಲ್ಲ. ಮತ್ತೆ ಐಕ್ಯವನ್ನು ನಿರಾಕರಿಸುವವುಗಳು. ಆದಪ್ರಯುಕ್ತ ಶಾರೀರಕನು ಪರಮಾತ್ಮನೇ. "ಶಾರೀರೌ ತಾವುಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತಃ" ಎಂದು. ಆದುದರಿಂದ ಅಂತಹ ಶ್ರೀ ಹರಿಯು ಸಕಲಗುಣಪರಿಪೂರ್ಣನು ಇತ್ಯಾದಿ ವಿಚಾರವೇ 'ಶಾರೀರಕ ಮೀಮಾಂಸಾ' ಎನ್ನಿಸುತ್ತದೆ. ಈ ವಿಷಯವು 'ಸರ್ವದೋಷವಿಹೀನತ್ವಂ' ಇತ್ಯಾದಿಗಳಲ್ಲಿ ಹೇಳಲ್ಪಟ್ಟದೆ. (13) ಯಾವ ಕಾರಣದಿಂದ ಹೀಗೆ ಬ್ರಹ್ಮಸೂತ್ರಗಳಿಗೆ ಆಪ್ತವಾಕ್ಯತ್ವ ಮೊದಲಾದ ಮೂರು ಪ್ರಮಾಣಗಳಿಂದ ಪ್ರಾಮಾಣ್ಯವು ಕಾಣಲ್ಪಡುತ್ತದೋ, ಆದಪ್ರಯುಕ್ತ ಈ ಶಾಸ್ತ್ರವು ಸರ್ವೋತ್ಕೃಷ್ಟವು. (14) ಇಂತಹ ಪ್ರಾಮಾಣ್ಯವು ಬೇರೆ ಕಡೆಗಳಲ್ಲಿಯೂ ಇದ್ದರೆ ಇವುಗಳಿಗೇನೇ ಉತ್ತಮತ್ವವು ಹೇಗೆಂದರೆ- ಬ್ರಹ್ಮಸೂತ್ರಾಣಾಮೇವ= ಎಂದು ಹೇಳಿರುವುದರಿಂದ ಇತರ ಗ್ರಂಥಗಳಲ್ಲಿಲ್ಲ. (೧) ಕೆಲವು ಕಡೆ ಒಂದು ವಿಧದಿಂದ ಪ್ರಾಮಾಣ್ಯವು. ಲೌಕಿಕವಿಷಯವಾದ ಪಿತೃವಾಕ್ಯದಲ್ಲಿ ಆಪ್ತಿಮೂಲಕತ್ವದಿಂದ. (೨) ಧರ್ಮಾದಿಗಳನ್ನು ವಿಷಯೀಕರಿಸಿರುವ ಪ್ರತಿವಾದಿಯು ಹೇಳಿದ ವಚನದಲ್ಲಿ ಶ್ರುತಿಸಂವಾದದಿಂದ ಪ್ರಾಮಾಣ್ಯವು. (೩) ಪ್ರತಿವಾದಿಯು ಹೇಳಿದ 'ಪರ್ವತವು ಬೆಂಕಿಯುಳ್ಳದ್ದು' ಎಂಬುವ ವಾಕ್ಯದಲ್ಲಿ ಯುಕ್ತಿಸಂವಾದದಿಂದ ಪ್ರಾಮಾಣ್ಯವು. (15) ಕೆಲವುಕಡೆ ಎರಡು ವಿಧದಿಂದ ಪ್ರಾಮಾಣ್ಯವು. (೧) ಮನ್ವಾದಿವಾಕ್ಯಗಳಲ್ಲಿ ಆಪ್ತಿಶ್ರುತಿಗಳಿಂದ ಪ್ರಾಮಾಣ್ಯವು. (೨) 'ಪರ್ವತವು ಬೆಂಕಿಯುಳ್ಳದ್ದು' ಇದುಮೊದಲಾದ ಪಿತೃವಾಕ್ಯದಲ್ಲಿ ಆಪ್ತಿಯುಕ್ತಿಗಳಿಂದ ಪ್ರಾಮಾಣ್ಯವು. (೩) ಪ್ರತಿವಾದಿಯು ಹೇಳಿದ 'ಈಶ್ವರನು ಸರ್ವಜ್ಞನು' ಎಂಬುವ ವಚನದಲ್ಲಿ ಶ್ರುತಿಯುಕ್ತಿಗಳಿಂದ ಪ್ರಾಮಾಣ್ಯವು. (16) ಜೈಮಿನ್ಯಾದಿಗಳ ವಾಕ್ಯದಲ್ಲಿ ಮೂರು ವಿಧದಿಂದಲೂ ಪ್ರಾಮಾಣ್ಯವು ಇದೆ, ಎಂದರೆ ಬ್ರಹ್ಮಸೂತ್ರಗಳಲ್ಲಿದ್ದಂತೆಯೇ ಅಲ್ಲ. ಬ್ರಹ್ಮಸೂತ್ರವು ನಿರವಧಿಕ ಆಪ್ತ್ಯಾದಿ ಮೂಲಕವಾಗಿದೆ. ॥ ೫ ॥ ೬ ॥

**ನ್ಯಾಯಸುಧಾ**— ಈ ಪ್ರಕಾರ ಶ್ರುತ್ಯನುಮಾನಗಳಿಂದ ಈ ಶಾಸ್ತ್ರವೇ ಸರ್ವೋತ್ಕೃಷ್ಟ ಪ್ರಮಾಣವು. ಬೇರೆ ಯಾವುದೂ ಇಂತಹಪ್ರಮಾಣವಿಲ್ಲವೇ ಇಲ್ಲವೆಂದುಪಸಂಹಾರಮಾಡುತ್ತಾರೆ—

**ಮೂ ॥ ಅತೋ ನೈತಾದೃಶಂ ಕಿಂಚಿತ್ಪ್ರಮಾಣತಮಮಿಷ್ಯತೇ ॥**

ಅ ॥ ಅತಃ=ಆದಪ್ರಯುಕ್ತ, ಏತಾದೃಶಂ=ಇಂತಹುದು, ಕಿಂಚಿತ್=ಯಾವುದೊಂದು, ಪ್ರಮಾಣತಮಂ = ಸರ್ವೋತ್ಕೃಷ್ಟ ಪ್ರಮಾಣವಾದುದು, (ಪ್ರಾಮಾಣಿಕರಿಂದ) ನೇಷ್ಯತೇ= ಅಂಗೀಕರಿಸಲ್ಪಡುವುದಿಲ್ಲ.

ತಾ ॥ **ನ್ಯಾಯಸುಧಾ**-(1) ಸರ್ವಶಾಸ್ತ್ರಗಳಲ್ಲಿ ಇದೇ ಅತ್ಯುತ್ಕೃಷ್ಟವಾದುದರಿಂದ ಇತರ ಗ್ರಂಥಗಳನ್ನು ಬಿಟ್ಟು ಇದನ್ನೇ ವ್ಯಾಖ್ಯಾನಮಾಡುವುದು ಯುಕ್ತವು. (2) **"ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ। ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ**

ತದ್ದ್ವಯಂ" || ಎನ್ನುವಲ್ಲಿ ಭಾರತಕ್ಕೇನೇ ಸರ್ವೋತ್ತಮತ್ವವನ್ನು ಹೇಳಿರುವುದರಿಂದ ಬ್ರಹ್ಮ ಸೂತ್ರಗಳಿಗೇನೇ ಸರ್ವೋತ್ಕೃಷ್ಟತ್ವವೆನ್ನುವುದು ಹೇಗೆ ಕೂಡಬಹುದೆಂದರೆ— ವಿಚಾರ್ಯಶಾಸ್ತ್ರ ಗಳಲ್ಲಿ (ಪ್ರಮೇಯಗ್ರಂಥಗಳಲ್ಲಿ) ಭಾರತವು ಶ್ರೇಷ್ಠವು. ಪ್ರಮಾಣಗ್ರಂಥಗಳಲ್ಲಿ (ನಿರ್ಣಾಯಕ ಶಾಸ್ತ್ರಗಳಲ್ಲಿ) ಬ್ರಹ್ಮಸೂತ್ರವು ಶ್ರೇಷ್ಠವು. ಆದಪ್ರಯುಕ್ತ ಯಾವ ವಿರೋಧವೂ ಇಲ್ಲ ||

**ನ್ಯಾಯಸುಧಾ-** ಹಾಗಾದರೆ ಈ ಶಾಸ್ತ್ರಕ್ಕೆ ಆರಂಭಣೀಯತ್ವವನ್ನು ಸೂತ್ರಕಾರರೇ ಪ್ರಥಮ ಸೂತ್ರದಲ್ಲಿ ಸಮರ್ಥಿಸಿರುವರು. ಪ್ರಥಮ ಸೂತ್ರದ ವ್ಯಾಖ್ಯಾನದಿಂದಲೇ ಸರ್ವವೂ ತಿಳಿದುಬರುತ್ತದೆ. ಶಾಸ್ತ್ರಕ್ಕೆ ಪ್ರಾಮಾಣ್ಯಸಮರ್ಥನಪರಗಳಾದ ಈ ಶ್ಲೋಕಗಳಿಂದ ಏನು ಪ್ರಯೋಜನವು? ಪ್ರಥಮ ಸೂತ್ರದಲ್ಲಿಯೇ ಪ್ರವೃತ್ತಿಯು ಹೇಗೆಂದರೆ, ಪ್ರಥಮ ಭಾಷ್ಯದಲ್ಲಿಯೂ ಹೇಗೆ? ಪ್ರಥಮ ಭಾಷ್ಯಕ್ಕೆ ಆರಂಭಣೀಯತ್ವವಿದೆಯೋ ಇಲ್ಲವೋ, ಎಂಬುವ ಸಂಶಯದಿಂದ ಪ್ರವರ್ತಿಸಿದವನಿಗೆ ಹೇಳಿದ ಪ್ರಮಾಣಗಳಿಂದ ನಿರ್ಣಯವಾಗುವುದೆಂದರೆ, ಈ ಸಮಾಧಾನವು ಪ್ರಥಮ ಸೂತ್ರದಲ್ಲಿಯೂ ಸಮಾನವೇ ಎಂದನ್ನಕೂಡದು. ವಿಷಯಾದಿಗಳನ್ನ ತಿಳಿಸಿಕೊಟ್ಟೇ ಪ್ರಥಮ ಸೂತ್ರದಲ್ಲಿ ಆರಂಭಣೀಯತ್ವವನ್ನು ಸಮರ್ಥಿಸಿದ್ದು. ವಿಷಯಾದಿ ಸಮರ್ಥನೆಯಿಂದಲೇ ಆರಂಭಣೀಯತ್ವವು ಕೂಡುವುದಿಲ್ಲ ಪ್ರಾಮಾಣ್ಯಸಮರ್ಥನೆಯೂ ಆವಶ್ಯಕವು. ಆದಕಾರಣ ಸೂತ್ರಾಕ್ಷಿಪ್ತವಾದ ಪ್ರಾಮಾಣ್ಯವನ್ನು ಶಿಷ್ಯರ ಪ್ರವೃತ್ತಿಗಾಗಿ ಭಾಷ್ಯಕಾರರು ಹೇಳಿದ್ದು ಯುಕ್ತವೇ. ಆದಾಗ್ಯೂ ಭಾಷ್ಯದಲ್ಲಿ ವ್ಯಾಖ್ಯಾತವಾಗಿರುವುದರಿಂದ ಪುನಃ ಈ ಬ್ರಹ್ಮಸೂತ್ರವನ್ನು ವ್ಯಾಖ್ಯಾನಮಾಡಕೂಡದು, ಎಂದರೆ ಪ್ರಯೋಜನಾಂತರವನ್ನು ವಿವರಿಸುತ್ತಾರೆ—

**ಮೂ || ಸ್ವಯಂ ಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ || ೭ ||**

**ಅ ||** ಯದ್ಯಪಿ, ತದ್ವ್ಯಾಖ್ಯಾ=ಬ್ರಹ್ಮಸೂತ್ರಗಳ ವ್ಯಾಖ್ಯಾನವು, ಸ್ವಯಂ=ತನ್ನಿಂದಲೇ, ಕೃತಾ=ಭಾಷ್ಯದಲ್ಲಿ ಮಾಡಲ್ಪಟ್ಟದೆ. ಆದಾಗ್ಯೂ, ಸ್ಪಷ್ಟತಾರ್ಥತಃ=ಸ್ಪಷ್ಟತ್ವರೂಪಪ್ರಯೋಜನಕ್ಕಾಗಿ, ಕ್ರಿಯತೇ=ಮಾಡಲ್ಪಡುತ್ತದೆ.

**ತಾ || ನ್ಯಾಯಸುಧಾ-** (1)ಭಾಷ್ಯದಲ್ಲಿ ಸ್ಪಷ್ಟವಾಗದಿರುವ ಅರ್ಥವನ್ನು ಸ್ಪಷ್ಟೀಕರಿಸುವುದಕ್ಕಾಗಿ ಈ ಗ್ರಂಥವನ್ನು ಮಾಡಿದ್ದು. ಸ್ಪಷ್ಟೀಕರಣವು ಅನೇಕಪ್ರಕಾರವಾದುದು. ಕೆಲವುಕಡೆ ಹೇಳದೆ ಇದ್ದ ಅಂಶವನ್ನು ಹೇಳುವುದು, ಕೆಲವುಕಡೆ ಅತಿಸಂಕ್ಷೇಪದಿಂದ ಹೇಳಿದ್ದನ್ನು ವಿಸ್ತರಿಸುವುದು, ಕೆಲವುಕಡೆ ಅತಿವಿಸ್ತೃತವಾಗಿ ಹೇಳಿರುವುದರಿಂದ ಬುದ್ಧಿಯಲ್ಲಿ ಆರೂಢವಾಗದಿರುವುದನ್ನು ಸಂಕ್ಷೇಪದಿಂದ ಹೇಳುವುದು, ಕೆಲವುಕಡೆ ವಿಕ್ಷಿಪ್ತವನ್ನು (ಅಲ್ಲಿ ಅಲ್ಲಿ ಹೇಳಿದ್ದನ್ನು) ಏಕೀಕರಿಸುವುದು, (ಒಂದೇ ಕಡೆ ಹೇಳುವುದು) ಕೆಲವುಕಡೆ ಹೇಳಿದ್ದನ್ನುಪಪಾದಿಸುವುದು, ಕೆಲವುಕಡೆ ಅಪವ್ಯಾಖ್ಯಾನವನ್ನು ನಿರಾಕರಿಸಿ ದೃಢೀಕರಿಸುವುದು, ಇತ್ಯಾದಿ ರೀತಿಯಾಗಿ ತಿಳಿಯತಕ್ಕದ್ದು. (2) ಹಾಗಾದರೆ ಹೇಳತಕ್ಕದ್ದೆಲ್ಲವನ್ನು ಒಂದೇ ಗ್ರಂಥದಲ್ಲಿ ಹೇಳಬೇಕಿತ್ತು. ಗ್ರಂಥಭೇದದಿಂದ ಪ್ರಯೋಜನವೇನು? ಎಂದನ್ನಕೂಡದು. ಸಂಕ್ಷೇಪದಿಂದ ಹೇಳಿ ಮತ್ತೆ ವಿಸ್ತರವಾಗಿ ಹೇಳಿದರೇನೇ ಶ್ರೋತೃಗಳಿಗೆ ಸುಖದಿಂದ ತಿಳಿಯಲರ್ಹವೂ ಒಳ್ಳೇ ಪ್ರಯೋಜನವುಳ್ಳದ್ದೂ ಆಗುವುದು. **"ಸಂಕ್ಷೇಪವಿಸ್ತರಾಭ್ಯಾಂ ತು ಕಥಯಂತಿ ಮನೀಷಿಣಃ । ಬಹುವಾರಸ್ಮೃತೇಸ್ತಸ್ಯ ಫಲಬಾಹುಲ್ಯಕಾರಣಾತ್"** || ಜ್ಞಾನಿಗಳು ಅನೇಕಾವರ್ತಿ ಸ್ಮರಿಸಿದರೆ ಫಲವು ಹೆಚ್ಚು ಲಭಿಸುವುದರಿಂದ ಸಂಕ್ಷೇಪದಿಂದ ಹೇಳಿ ಪುನಃ ವಿಸ್ತರವಾಗಿ ಹೇಳುವರು. ಭಾಷ್ಯದ ೧ನೇ ಶ್ಲೋಕದ ಅರ್ಥವು ಈ ಗ್ರಂಥದಲ್ಲಿ ಮೂರು ಶ್ಲೋಕಗಳಲ್ಲಿ ವಿವರಿಸಲ್ಪಟ್ಟಿತು. (3)'**ಗುಣೈಃಸರ್ವೈರುದೀರ್ಣಂ**' ಸರ್ವ

ಗುಣಗಳಿಂದ ಪರಿಪೂರ್ಣನು ಎಂಬ ವಚನದಿಂದ ಗುಣ ಗುಣಿಗೆ ಭೇದವದೆಎಂಬ ಶಂಕೆಯು ಪ್ರಾಪ್ತವಾಗುವುದು. ಅದನ್ನು (ಆ ಸಂಶಯವನ್ನು) 'ನಿಖಿಲಪೂರ್ಣಗುಣೈಕದೇಹಂ' ಎನ್ನುವುದರಿಂದ ನಿರಾಕರಿಸಿದರು. (4) ಜ್ಞೇಯತ್ವ ಗಮ್ಯತ್ವಗಳು ಇತರರಲ್ಲಿಯೂ ಸಾಧಾರಣವಾಗಿದ್ದುದರಿಂದ 'ಜ್ಞೇಯಂ ಗಮ್ಯಂ' ಎನ್ನುವುದು ನಾರಾಯಣನಿಗೇನೇ ವಿಶೇಷಣವೆನ್ನುವುದು ಹೇಗೆ ಎಂಬ ಆಶಂಕೆಯನ್ನು 'ಅಪ್ಯತಮಂ' ಎನ್ನುವುದರಿಂದ ಪರಿಹರಿಸಿದರು. 'ಗುರೂಂಶ್ಚಾಪಿ' ಎನ್ನುವಲ್ಲಿದ್ದ 'ಅಪಿ' ಶಬ್ದವು ಬೇರೆ ವಿಶೇಷಣಗಳಿಗೆ ಸಮುಚ್ಚಾಯಕವು. ಅದನ್ನು 'ಅಸ್ಮ್ಯೋದ್ಭವಾದಿದಂ' ಎನ್ನುವುದರಿಂದ ವಿವರಿಸಿದರು (5) 'ತಮೇವ ಶಾಸ್ತ್ರಪ್ರಭವಂ' ಇತ್ಯಾದಿಗಳಿಂದ ಅನೇಕಪ್ರಕಾರ ಗುರುತ್ವವನ್ನುಪಪಾದಿಸಿದರು. ಆದರಿಂದ 'ಗುರೂಂಶ್ಚ' ಎಂಬ ಬಹುವಚನಾಂತ ಪದವನ್ನು ವಿವರಿಸಿದರು. (6) ಶ್ರೀಮದಾಚಾರ್ಯರಿಗೆ ಗುರುವೂ ದೇವತೆಯೂ ಒಬ್ಬನೇ ಆದುದರಿಂದ ಅವರ ಭೇದವಿಷಯದಲ್ಲಿ ಅರುಚಿಯನ್ನು 'ಗುರೂಂಶ್ಚಾಪಿ' ಎನ್ನುವಲ್ಲಿದ್ದ ಅಪಿ ಪದದಿಂದ ಸೂಚಿಸಿರುವರು. ಅದನ್ನು 'ತಮೇವ' ಎನ್ನುವುದರಿಂದ ವಿವರಿಸಿದರು. (7) 'ಸೂತ್ರಾರ್ಥ ಉಚ್ಯತೇ' ಎನ್ನುವಲ್ಲಿ ನಿರುಪಪದವಾದ ಸೂತ್ರ ಎಂಬ ಶಬ್ದವನ್ನು ಗ್ರಹಣಮಾಡಿರುವುದರಿಂದ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮ ಪ್ರಾಮಾಣ್ಯವು ಸೂಚಿಸಲ್ಪಟ್ಟಿತು. ಅದನ್ನು 'ಪರಮಾಖ್ಯವಿದ್ಯಾ' ಎನ್ನುವುದರಿಂದುಪಪಾದಿಸಿದರು. (8) 'ದ್ವಾಪರೇ' ಇತ್ಯಾದಿ ಭಾಷ್ಯಗಳಿಗೆ ಸಂಗತಿಯೇ ಇಲ್ಲ. ಸೂತ್ರಾರ್ಥವನ್ನು ಹೇಳುತ್ತೇನೆಂದು ಪ್ರತಿಜ್ಞಾಮಾಡಿ ಸೂತ್ರಗಳ ಉತ್ಪತ್ತಿಕ್ರಮವನ್ನು ಹೇಳುವುದಕ್ಕೆ ಉಪಯೋಗವು ತೋರಲಾರದು, ಎಂದು ಹೇಳಕೂಡದು. ಏಕೆಂದರೆ- ಆಪ್ತಿಮೂಲತ್ವ ಮೊದಲಾದ ಯುಕ್ತಿಗಳಿಂದಲೂ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮ ಪ್ರಾಮಾಣ್ಯವನ್ನು ಸಮರ್ಥಿಸುವುದಕ್ಕಾಗಿ 'ದ್ವಾಪರೇ' ಇತ್ಯಾದಿ ಭಾಷ್ಯವು, ಎಂದು 'ಗುರುಗುರ್ರೂಣಾಂ' ಇತ್ಯಾದಿಗಳಿಂದ ತೋರಿಸುತ್ತಾರೆ. (9) (ಆದಾಗ್ಯೂ ಮಂಗಲಾಚರಣವಿಲ್ಲದಿರುವುದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವ್ಯಾಖ್ಯಾನಮಾಡಕೂಡದು. ಮಂಗಲಾಚರಣವನ್ನು ಮಾಡಿಕೊಂಡು ಮಾಡಿದ ಕರ್ಮಗಳು ನಿರ್ವಿಘ್ನವಾಗಿ ಸಮಾಪ್ತಗಳೂ ಪ್ರಖ್ಯಾತಗಳೂ ಆಗುತ್ತವೆ. ಆದಕಾರಣ ಮಂಗಲಕ್ಕೂ ಸಮಾಪ್ತಿ ಪ್ರಚಯಾದಿಗಳಿಗೂ ಕಾರ್ಯಕಾರಣಭಾವವು ಶ್ರುತ್ಯಾದಿಗಳಿಂದ ಸಿದ್ಧವಾಗಿರುವುದರಿಂದ ಆವಶ್ಯಕವಾದ ಅಂತಹ ಮಂಗಲವನ್ನು ಮಾಡದಿರುವುದರಿಂದ ಪ್ರಚಯರೂಪವ್ಯಾಖ್ಯಾನವು ಯುಕ್ತವಲ್ಲವೆಂಬ ಶಂಕೆಯು ಪ್ರಾಪ್ತವಾದರೆ ಕಾರ್ಯಾರಂಭದಲ್ಲಿ ಮಂಗಲಾಚರಣವನ್ನು ಮಾಡಲೇಬೇಕು. ಸೂತ್ರಕಾರರೂ ಮಂಗಲಾಚರಣವನ್ನು ಮಾಡಿರುತ್ತಾರೆ. ಗ್ರಂಥಾದಿಯಲ್ಲಿಯೂ ಬರೆದಿರುತ್ತಾರೆ. ಆದಿಯಲ್ಲಿ ಹೇಳಿರುವುದರಿಂದ ಓಂಕಾರ ಅಥಶಬ್ದಗಳು ಮಾಂಗಲಿಕಗಳಾಗಿವೆ. "ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ । ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ " ॥ ಪೂರ್ವದಲ್ಲಿ ಓಂಕಾರ ಅಥಶಬ್ದಗಳು ಪರಬ್ರಹ್ಮನ ಕಂಠವನ್ನು ನಿರ್ಭೇದಿಸಿ ಹೊರಟಿವೆ. ಆದಪ್ರಯುಕ್ತ ಇವುಗಳು ಮಾಂಗಲಿಕಗಳು. ಅಂತೂ ಸೂತ್ರಾದಿಯಲ್ಲಿ ಓಂಕಾರ ಅಥ ಶಬ್ದಗಳನ್ನು ಪ್ರಯೋಗಮಾಡಿರುವುದರಿಂದ ಈ ಶಾಸ್ತ್ರದಲ್ಲಿ ಮಂಗಲಾಚರಣವಿದೆ)॥ ೭ ॥

ನ್ಯಾಯಸುಧಾ- (1) (ಸೂತ್ರದ ಬುಡದಲ್ಲಿ ಪ್ರಯೋಗಿಸಿರುವ ಓಂಕಾರ ಅಥ ಶಬ್ದಗಳು ಮಾಂಗಲಿಕಗಳಾಗಿರುವುದಾದರೆ ವಿಘ್ನವಿಘಾತಾದಿಗಳಿಗೆ ಕಾರಣವಾಗಿ ಸರ್ವ ಶಾಸ್ತ್ರಗಳಿಗೂ ಅಂಗವೇ ಆಗಿರುವುದರಿಂದ ಪ್ರಥಮಸೂತ್ರದ ಅವಯವವು ಆಗದೆ ಹೋಗಬೇಕಾಗುವುದು. (2) ಹಾಗಾದರೆ ಅಧಿಕಾರ್ಯಾದಿಗಳನ್ನು ಪ್ರತಿಪಾದಿಸತಕ್ಕ ಬೇರೆ ಪದಗಳಿಲ್ಲದಿರುವುದರಿಂದ

ಪ್ರಥಮ ಸೂತ್ರವು ನ್ಯೂನವಾಗಬೇಕಾಗುವುದು. ಅಧಿಕಾರ್ಯಾದಿಗಳನ್ನು ಪ್ರತಿಪಾದಿಸುವುದಾವಶ್ಯಕವೇ. ಇಲ್ಲದಿದ್ದರೆ ಅಧಿಕಾರಿ ವಿಷಯ ಗಳು ಇಲ್ಲದಿರುವುದರಿಂದ ಶಾಸ್ತ್ರವನ್ನು ಆರಂಭಿಸಕೂಡದೆಂಬ ಆಕ್ಷೇಪವು ನಿರಾಕೃತವಾಗದಿರುವ ಪ್ರಯುಕ್ತ ಸೂತ್ರವು ವ್ಯರ್ಥವಾಗಬೇಕಾಗುವುದೆಂದರೆ—

**ಮೂ ॥ ತತ್ರ ತಾರಾಥಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ॥**

ಅ ॥ ತಾರಾಥಮೂಲತ್ವಂ= (ತರಂತಿ ಅನೇನ ಅನಿಷ್ಟನಿಚಯಂ=ಇದರಿಂದ ಅನಿಷ್ಟ ಸಮುದಾಯವನ್ನು ದಾಟುತ್ತಾರೆ, ಇತಿ ತಾರಃ=ಓಂಕಾರವು.) ಓಂಕಾರ ಅಥ ಶಬ್ದಗಳಿಗೆ ಕ್ರಮದಿಂದ ಆದಿತ್ವವು (ಅಂದರೆ ಆದಿಯಲ್ಲಿ ಪ್ರಯುಕ್ತಗಳಾದ ಓಂಕಾರ ಅಥ ಶಬ್ದಗಳು) ತತ್ರ= ಪ್ರಥಮ ಸೂತ್ರದಲ್ಲಿ ಅವಯವವಾಗಿಯೂ, ಸರ್ವಶಾಸ್ತ್ರಸ್ಯ ಚ=ಎಲ್ಲಾ ಶಾಸ್ತ್ರಗಳಿಗೆ ಅಂಗವಾಗಿಯೂ, ಇಷ್ಯತೇ=(ಸೂತ್ರಕಾರರಿಂದ) ಅಂಗೀಕರಿಸಲ್ಪಡುತ್ತದೆ.

ತಾ ॥ **ನ್ಯಾಯಸುಧಾ-** (1) ಆದಿ ಸೂತ್ರದಲ್ಲಿ ಅಧಿಕಾರ್ಯಾದಿಗಳನ್ನು ಪ್ರತಿಪಾದಿಸುವುದಕ್ಕಾಗಿ ಸ್ವೀಕರಿಸಲ್ಪಟ್ಟ ಓಂಕಾರ ಅಥ ಶಬ್ದಗಳು ಶಂಖ, ವೀಣೆ, ವೇಣು ಇವುಗಳ ಧ್ವನಿಯಂತೆ ಶ್ರವಣಮಾತ್ರದಿಂದಲೇ ಮಂಗಲವನ್ನು ಕೊಡತಕ್ಕವುಗಳಾದುದರಿಂದ ಸರ್ವ ಶಾಸ್ತ್ರಗಳಿಗೂ ನಿರ್ವಿಘ್ನವಾಗಿ ಸಮಾಪ್ತ್ಯಾದಿಗಳನು ಮಾಡುತ್ತವೆ. ಬೇರೆ ಉದ್ದೇಶದಿಂದ ತರಲ್ಪಟ್ಟ ಪೂರ್ಣಕಲಶವನ್ನು ನೋಡಿದರೆ ಹೇಗೆ ಮಂಗಲವಾಗುವುದೋ ಹಾಗೆಯೇ.) ಇದರಿಂದ (ಅಂದರೆ ಆನಂತರ್ಯ ಎನ್ನುವ ಅರ್ಥವನ್ನು ಹೇಳುವ ಅಥ ಶಬ್ದವು ಶ್ರವಣಮಾತ್ರದಿಂದ ಮಂಗಲಪ್ರಯೋಜನವುಳ್ಳದ್ದೆಂದು ಹೇಳಿರುವುದರಿಂದ) 'ಅಥ ಶಬ್ದೋ ಮಂಗಲಾರ್ಥಃ' ಇತ್ಯಾದಿ ಭಾಷ್ಯಗಳನ್ನು ವಿವರಿಸಿದಂತೆಯೇ ಆಯಿತು. (2) (ಮಂಗಲವೆನ್ನುವುದು ಅಥ ಶಬ್ದದ ಪ್ರಯೋಜನವೆಂದು ಹೇಳಿರುವುದರಿಂದ ಮಂಗಲವೇ ಅಥ ಶಬ್ದದಿಂದ ತಿಳಿಯಲ್ಪಡತಕ್ಕ ಅರ್ಥವೆಂದು ಇಟ್ಟುಕೊಂಡು ಅದ್ವೈತಿಗಳು ಹೇಳಿದ ದೂಷಣಗಳು ಅಸಂಗತವೆಂದು ತಿಳಿಯತಕ್ಕದ್ದು. ನಾವು (ಸಿದ್ಧಾಂತಿಗಳು) 'ಅಥ' ಶಬ್ದವು ಆನಂತರ್ಯವೆಂದರ್ಥವುಳ್ಳದ್ದು. ಶ್ರವಣಮಾತ್ರದಿಂದ ಮಂಗಲಪ್ರಯೋಜನವುಳ್ಳದ್ದೆಂದಂಗೀಕರಿಸಿರುತ್ತೇವೆ) ॥

**ನ್ಯಾಯಸುಧಾ-** (1) (ಹಾಗಾದರೆ ಸೂತ್ರದ ಬುಡದಲ್ಲಿ ಓಂಕಾರವೇ ಇಲ್ಲ. ಓಂಕಾರ ಅಥ ಶಬ್ದಗಳು ಮೂಲಗಳೆಂದು ಹೇಳಿದ್ದು ಹೇಗೆ ಕೂಡುತ್ತದೆ?) (2) ಯದ್ಯಪಿ ಅಧ್ಯಯನ ಮಾಡುವ ಶಿಷ್ಯರು ಉಚ್ಚರಿಸುವುದು ಪ್ರತ್ಯಕ್ಷ ಸಿದ್ಧವಾಗಿದೆ. ಆದಾಗ್ಯೂ ಓಂಕಾರವು ಸೂತ್ರದ ಅವಯವವಲ್ಲ. **'ಈದೂದೇದ್ದ್ವಿವಚನಂ ಪ್ರಗೃಹ್ಯಂ' 'ವಿವೃತಾವವಿಸರ್ಗಃ ಸ್ಯಾತ್' 'ವಿಶ್ಲಿಷ್ಟಾರ್ಥೇ ಚ ವಿಶಿಷ್ಟಂ'** ಇದುಮೊದಲಾದ ಲಕ್ಷಣ (ಸೂತ್ರ) ವಿಶೇಷಗಳು ಇಲ್ಲದಿರಲು ಸಂಹಿತಾ ಪಾಠಕಾಲದಲ್ಲಿ ಸಂಧಿ (ವರ್ಣಗಳ ಅತಿಶಯ ಸಾಮೀಪ್ಯ) ಇಲ್ಲದೆ ಎಲ್ಲರೂ ಹೇಳುವುದರಿಂದ, ವೇದಾಧ್ಯಯನವನ್ನುಪಕ್ರಮ ಮಾಡುವಾಗ ಅಧ್ಯಯನಮಾಡುವವರು ಉಚ್ಚರಿಸುವ ಓಂಕಾರದಂತೆ. (ಇಲ್ಲವಾದರೆ 'ಅಥ' ಶಬ್ದದಂತೆ ಸಂಧಿಯುಳ್ಳದ್ದಾಗಿ ನಿರ್ದೇಶಿಸಲ್ಪಡಬೇಕಾಗುವುದು.) (3) ದೃಷ್ಟಾಂತದಲ್ಲಿ **ಸಾಧ್ಯ** ವೈಕಲ್ಯವಿಲ್ಲ. ವೇದಾಧ್ಯಯನದ ಉಪಕ್ರಮ, ಸಮಾಪ್ತಿ, ಇದರ ವೈಚಿತ್ರ್ಯದಿಂದ ಆಯಾಯ **ಸ್ಥಾನ** ಬಿಟ್ಟು ಬೇರೆಬೇರೆ ಸ್ಥಾನಗಳಲ್ಲಿ ಸರ್ವರೂ ಪಠನಮಾಡುವ ಓಂಕಾರವು ವೇದವಾಕ್ಯದ ಅವಯವವಲ್ಲವೆಂದು ಅತಿ ಪ್ರಸಿದ್ಧವಾಗಿದೆ. ಇದರಿಂದ 'ವಿಮತಃ ಓಂಕಾರಃ ನ ವೇದ ವಾಕ್ಯಾವಯವಃ **ಅನ್ಯಾನ್ಯಸ್ಥಾನೇ ಪಠ್ಯಮಾನತ್ವಾತ್ ಸಾಮ್ನಿ ಸ್ತೋಭಾಕ್ಷರವತ್ ವ್ಯತಿರೇಕೇಣ ವೇದಗತ ಪದವತ್'** ವಿವಾದಕ್ಕೆ ವಿಷಯವಾದ ಓಂಕಾರವು ವೇದವಾಕ್ಯಗಳ ಅವಯವವಲ್ಲ, ಬೇರೆ ಬೇರೆ **ಸ್ಥಾನಗಳಲ್ಲಿ**

ಹೇಳಲ್ಪಡುವುದರಿಂದ, ಸಾಮದಲ್ಲಿರುವ ಸ್ತೋಭ (ವ್ಯರ್ಥ) ಅಕ್ಷರದಂತೆ, ವ್ಯತಿರೇಕದಿಂದ ವೇದದಲ್ಲಿರುವ ಪದದಂತೆ ಎಂದು ಸೂಚಿತವಾಯಿತು. ಇಲ್ಲವಾದರೆ '**ಓಮಿತಿ ಬ್ರಹ್ಮ**' '**ಓಮಿತೀದಂ ಸರ್ವಂ**' ಇತ್ಯಾದಿಗಳಲ್ಲಿದ್ದಂತೆಯೇ ನಿಯತಸ್ಥಾನವುಳ್ಳದ್ದಾಗಿ ಪಾಠವಿರಬೇಕಿತ್ತು. (4) 'ಅಯಮೋಂಕಾರಃ ಸೂತ್ರವೇದಯೋರವಯವೋ ಭವಿತುಮರ್ಹತಿ ತದಾದಾವಧ್ಯೇತೃಭಿರ್ನಿಯಮೇನ ಪಠ್ಯಮಾನತ್ವಾತ್ ಅಥಾದಿ ಪದವತ್' (ಅಥ ಮೊದಲಾದ ಪದಗಳಂತೆಯೇ ಈ ಓಂಕಾರವು ಸೂತ್ರ ಮತ್ತು ವೇದ ಇವುಗಳ ಅವಯವವು ಆಗಲಿಕ್ಕೆ ಯೋಗ್ಯವಾಗಿದೆ, ಆದಿಯಲ್ಲಿ ಅಧ್ಯಯನ ಮಾಡುವವರು ನಿಯಮವಾಗಿ ಹೇಳುವುದರಿಂದ, ಹೀಗೆ ಅವಯವ ಎನ್ನುವ ವಿಷಯದಲ್ಲಿಯೂ ಪ್ರಮಾಣವಿದೆ ಎಂದರೆ ಪಕ್ಷಸಪಕ್ಷಗಳಲ್ಲಿ ಆದಿಯಲ್ಲಿ ಉಚ್ಚಾರಣವಾದರೂ "**ಪ್ರಾಗ್ವೋದಗ್ವಾ ಗ್ರಾಮಾನ್ನಿಷ್ಕ್ರಮ್ಯಾಪ ಆಪ್ಲುತ್ಯ ಶುಚೌ ದೇಶೇ ಯಜ್ಞೋಪವೀತ್ಯಾಚಮ್ಯ— ಪ್ರಾಙ್ಮುಖ ಉಪವಿಶ್ಯ ಅಧೀಯೀತ**" ಎಂದು ಹೇಳಲ್ಪಟ್ಟ ಆಶ್ವಲಾಯನ ಸೂತ್ರದಲ್ಲಿಯೂ "**ಬ್ರಹ್ಮಯಜ್ಞೇನ ಯಕ್ಷ್ಯಮಾಣಃ**" ಎಂದು ತೈತ್ತಿರೀಯಾದಿಗಳಲ್ಲಿಯೂ ಹೇಳಿದ ಪ್ರಕಾರ (ಪೂರ್ವಾಭಿಮುಖವಾಗಿ ಶುಚಿದೇಶದಲ್ಲಿರುವಿಕೆ, ಶುಚಿತ್ವ ಮೊದಲಾದುದು ಅಧ್ಯಯನಕ್ಕೆ ಅಂಗವೆಂದು ಹೇಗೆ ಹೇಳಲ್ಪಡುತ್ತದೋ, ಹಾಗೆಯೇ ಓಂಕಾರವೂ ಆಗಲಿ. ಸೂತ್ರಾವಯವವು ಅಲ್ಲ. ತಥಾ ಚ ಓಂಕಾರವನ್ನು ಸೂತ್ರಕಾರರು ಮಂಗಲರೂಪಪ್ರಯೋಜನಕ್ಕಾಗಿ ಸೂತ್ರಾರಂಭದಲ್ಲಿ ನಿಬಂಧಿಸಿರುವರು ಎನ್ನುವುದು ಕೂಡಲಾರದು ಎಂದರೆ—

**ಮೂ ॥ ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ॥ ೮ ॥**

ಅ ॥ ಅಖಿಲೈಃ=ಸೂತ್ರಪಾಠಕರೆಲ್ಲರಿಂದಲೂ, (ಯಾವುದು) ಪೃಥಕ್=ಪ್ರತ್ಯೇಕವಾಗಿ ಅಂದರೆ ವರ್ಣಗಳಿಗೆ ಅತಿ ಸಾಮೀಪ್ಯವಿಲ್ಲದೆ, ಓಂಕ್ರಿಯತೇ = ಓಂ ಎಂದು ಉಚ್ಚರಿಸಲ್ಪಡುತ್ತದೋ, (ಅದು) ಸರ್ವತ್ರ=ಎಲ್ಲಾ ಸೂತ್ರಗಳಲ್ಲಿಯೂ, ಅನುಗತತ್ವೇನ=ಅನುಗತವಾಗಿರುವುದರಿಂದ ಅನುವೃತ್ತಿಯುಳ್ಳದ್ದೆಂದಭಿಪ್ರಾಯವಿರುವುದರಿಂದ ಯುಕ್ತವಾಗುತ್ತದೆ.

ತಾ ॥ **ನ್ಯಾಯಸುಧಾ-** (1) ಪ್ರತಿ ಸೂತ್ರಗಳೂ ಪ್ರತ್ಯೇಕವಾಗಿ ಅನೇಕ ವೇದವಾಕ್ಯಗಳ ವಿಚಾರಪರಗಳಾಗಿರುವುದರಿಂದ ಅವಾಂತರ ಬ್ರಹ್ಮವಿದ್ಯೆಗಳೆನ್ನಿಸಿಕೊಳ್ಳುತ್ತವೆ. (2) "**ಪ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ**" ಆದಿಯಲ್ಲಿ ಓಂಕಾರವಿಲ್ಲದೆ ಉಚ್ಚರಿತವಾದ ಬ್ರಹ್ಮವಿದ್ಯೆಯು ಸುಕೃತವನ್ನು ಹುಟ್ಟಿಸುವುದಿಲ್ಲ. ಅಂತ್ಯದಲ್ಲಿ ಓಂಕಾರವನ್ನುಚ್ಚರಿಸದಿದ್ದರೆ ಫಲವನ್ನು ಹುಟ್ಟಿಸುವುದಿಲ್ಲ ಎಂಬ ಶ್ರುತಿಯಲ್ಲಿ ಹೇಳಿದ ನಿಂದಾರೂಪವಾದ ಅರ್ಥವಾದದ ಬಲದಿಂದ ಸ್ರವಣ ವಿಶರಣಗಳು ಆಗಬಾರದೆಂದು ಇಚ್ಛಿಸುವವನು "**ಆದ್ಯಂತಯೋರೋಂಕುರ್ಯಾತ್**" ಎಂಬ ಕಲ್ಪಿತವಿಧಿವಾಕ್ಯದಿಂದ ಎಲ್ಲಾ ಬ್ರಹ್ಮವಿದ್ಯೆಗಳಲ್ಲಿಯೂ ಆದಿ, ಅಂತ್ಯಗಳಲ್ಲಿ ಓಂಕಾರವನ್ನಧ್ಯಾಹಾರ ಮಾಡಬೇಕೆಂದು ತಿಳಿಯುತ್ತದೆ.) ಅಧ್ಯಾಹರಿಸಲ್ಪಡತಕ್ಕದ್ದು ವಾಕ್ಯಬೋಧ್ಯವಾದ ಅನ್ವಯ ಪ್ರತಿಯೋಗಿ ಸಮರ್ಪಕವಾಗುವುದಿಲ್ಲವೆಂದು ಹೇಳಲು ಶಕ್ಯವಾಗುವುದಿಲ್ಲ. ಮಂತ್ರಗಳಲ್ಲಿಯೂ ಅಧ್ಯಾಹಾರಮಾಡಲ್ಪಡತಕ್ಕದ್ದು ಮಂತ್ರದ ಅವಯವವಾಗದೆ ಹೋಗಬೇಕಾಗುವುದು. (ಅಂತೂ ಪ್ರತಿಸೂತ್ರಗಳ ಆದ್ಯಂತಗಳಲ್ಲಿ ಓಂಕಾರವು ಆವಶ್ಯಕವಾಗಿರುವುದರಿಂದ ದ್ವಿತೀಯಾದಿ ಸೂತ್ರಗಳಲ್ಲಿಯೂ ಆದ್ಯಂತಗಳಲ್ಲಿ ಓಂಕಾರವನ್ನು ಅನುವರ್ತಿಸಬೇಕೆಂಬ ಬುದ್ಧಿಯಿಂದ ಆದಿ ಸೂತ್ರದಲ್ಲಿ ಓಂಕಾರವು ಅಸಂಶ್ಲಿಷ್ಟವಾಗಿ (ಸಂಧಿಯಿಲ್ಲದೆ) ಉಚ್ಚರಿತವಾಗಿದೆ. ಅಂತಹ ಓಂಕಾರವನ್ನು ಸಂಶ್ಲಿಷ್ಟವಾಗಿ ಅಂದರೆ '**ಓಮಥಾತೋ ಬ್ರಹ್ಮ ಜಿಜ್ಞಾಸಾ**' ಎಂದು ಅಧ್ಯಯನ ಮಾಡಿದರೆ

ಈ ಓಂಕಾರವು ಪ್ರಥಮ ಸೂತ್ರದ ಅವಯವವೆಂದೇ ತಿಳಿಯಲ್ಪಡುವುದು. ದ್ವಿತೀಯಾದಿ ಸೂತ್ರಗಳಲ್ಲಿ ಕೇವಲ ಅದೃಷ್ಟೋಪಕಾರಕವಾಗಿ ಅನುವೃತ್ತಿಯು ತಿಳಿಯಲ್ಪಡದೆ ಹೋಗುವುದು. ಅದಕ್ಕಾಗಿ ಓಂಕಾರವನ್ನು ಅಸಂಶ್ಲಿಷ್ಟವಾಗಿ (ಸಂಧಿಯಿಲ್ಲದೆ) ಉಚ್ಚರಿಸಿದ್ದು. (3) ಉತ್ತರ ಸೂತ್ರಗಳಲ್ಲಿ ಅನುವರ್ತಿಸಬೇಕೆನ್ನುವುದು ವ್ಯಾಖ್ಯಾನದಿಂದಲೂ ತಿಳಿಯಬಹುದಾದುದರಿಂದ ಸಂಧಿ ಇಲ್ಲದೆ ಉಚ್ಚರಿಸಿದ್ದು ವ್ಯರ್ಥವೆಂದನ್ನಕೂಡದು. ಅಂತರಂಗ (ಅಸಂಹಿತೆಯಾಗಿ ಪಾಠವು) ಜ್ಞಾಪಕವಿಲ್ಲದಿದ್ದರೇನೇ ಬಹಿರಂಗ (ವ್ಯಾಖ್ಯಾನ)ವನ್ನು ಹುಡುಕಬೇಕು. (4) ಆದಪ್ರಯುಕ್ತ 'ಸರ್ವತ್ರ' ಎನ್ನುವ ಅರ್ಥದಿಂದ ಅಸಂಹಿತೆಯಾಗಿ ನಿರ್ದೇಶಮಾಡಲಿಕ್ಕೆ ಕಾರಣಾಂತರವನ್ನು ಹೇಳುವವರು ಹೇತುವಿಗೆ ಅನ್ಯಥಾ ಸಿದ್ಧಿಯನ್ನು ಹೇಳಿದರು (5) ಶ್ರುತಿಯಲ್ಲಿ ಹೇಳಲ್ಪಟ್ಟ ಅರ್ಥವಾದದ ಬಲದಿಂದ ಆದ್ಯಂತ್ಯಗಳಲ್ಲಿ ಓಂಕಾರವನ್ನು ಅವಯವವಾಗಿ ಅಧ್ಯಾಹಾರಮಾಡಬೇಕೆಂದಾಗಲೀ ಪ್ರಾಙ್ಮುಖತ್ವಾದಿಗಳಂತೆಯೇ ಬಹಿರ್ಭೂತವಾದುದನ್ನೇ ಉಚ್ಚರಿಸಬೇಕೆಂದಾಗಲೀ ವಿಧಿಸಬೇಕೆಂದು ಸಂದೇಹ ಬರುವುದು ಎಂದರೆ— ಹೇಗೆ ಸಂದೇಹವಿದ್ದರೂ ಆ ರೀತಿಯಿಂದ ಅನುಮಾನಕ್ಕೆ ಸಂಧಿಗ್ಧವಾದ ಅನ್ಯಥಾ ಸಿದ್ಧಿಯಿಂದಲೂ ಆಭಾಸತ್ವವೇ ಇದೆ. (6) 'ಓತತ್ವವಾಚೀ ಹ್ಯೋಂಕಾರಃ' ಇತ್ಯಾದಿ ನ್ಯಾಯದಿಂದ ಓಂಕಾರಾರ್ಥಕ್ಕೆ ಪ್ರಥಮಸೂತ್ರದ ವಾಕ್ಯಾರ್ಥದಲ್ಲಿ ಸಮನ್ವಯವಿರುವುದರಿಂದ ಅವಯವತ್ವವು ನಿಶ್ಚಿತವಾದಮೇಲೆ ಅನವಯವತ್ವಸಾಧಕವಾದ ಅನುಮಾನವು ಬಾಧಿತವಾಗುವುದು. (7) ಅಥವಾ 'ಸರ್ವತ್ರಾನುಗತತ್ವೇನ' ಎನ್ನುವ ಅರ್ಥದಿಂದ ದೃಷ್ಟಾಂತದೋಷವು ಹೇಳಲ್ಪಡುತ್ತದೆ. ಹೇಗೆಂದರೆ— ವೇದಪಾಠಕರೆಲ್ಲರೂ ಸ್ಥಾನಗತ ವ್ಯತ್ಯಾಸದಿಂದ ಓಂ ಎಂದು ಉಚ್ಚರಿಸುವರೋ, ಅದು ಹಿಂದಿನ ನ್ಯಾಯದಿಂದ ಆದಿಯಲ್ಲಿ ಉಚ್ಚರಿಸಿದುದರಿಂದಲೇ ಲಬ್ಧವಾದ ಸರ್ವತ್ರ ಅನುಗತವಾಗಿದೆ ಎನ್ನುವುದರಿಂದಲೇ ಯುಕ್ತವಾಗುವಪ್ರಯುಕ್ತ 'ವೇದೋಪಕ್ರಮೇ ಪಠ್ಯಮಾನ ಓಂಕಾರರೂಪ ದೃಷ್ಟಾಂತ'ದಲ್ಲಿ ಓಂಕಾರವು ವೇದಗಳ ಅವಯವವಲ್ಲವೆಂದು ಸಾಧಿಸುವ 'ಅನ್ಯಾನ್ಯಸ್ಥಾನೇ ಪಠ್ಯಮಾನತ್ವರೂಪವಾದ' ಹೇತುವಿಗೆ ಅನ್ಯಥಾ ಸಿದ್ಧಿಯು ಪ್ರತಿಪಾದಿಸಲ್ಪಟ್ಟಿತು. ಅಂತೂ ದೃಷ್ಟಾಂತದಲ್ಲಿ ಅನವಯವತ್ವರೂಪವಾದ ಸಾಧ್ಯಕ್ಕೆ ವೈಕಲ್ಯವು. ಹೀಗೆ ಓಂಕಾರವು ಸೂತ್ರದ ಅವಯವವಲ್ಲವೆಂದು ಸಾಧಿಸತಕ್ಕ ಅನುಮಾನವನ್ನು ನಿರಾಕರಿಸಿದಮೇಲೆ ನಿಷ್ಕಂಟಕವಾಗಿ ಆದಿಯಲ್ಲಿ ಉಚ್ಚರಿಸಿದುದರಿಂದಲೇ ಓಂಕಾರವು ಪ್ರಥಮ ಸೂತ್ರದ ಅವಯವವೆಂದು ಸಿದ್ಧಿಸಿದುದರಿಂದ 'ತಾರಾಥಮೂಲತ್ವಂ' ಎಂದು ಹೇಳಿದ್ದು ಯುಕ್ತವು ॥ ೮ ॥

**ನ್ಯಾಯಸುಧಾ-** (1) ಈ ಪ್ರಕಾರ ಪ್ರಾಮಾಣ್ಯ ಮಂಗಲಾಚರಣಗಳಿಂದ ಯುಕ್ತವಾಗಿರುವುದರಿಂದ ಈ ಶಾಸ್ತ್ರವನ್ನು ವ್ಯಾಖ್ಯಾನಮಾಡಬೇಕೆಂದು ಸಿದ್ಧವಾದಮೇಲೆ ಪಂಡಿತರ ಪ್ರವೃತ್ತಿಗೆ ವಿಷಯವಾದುದೇ ಆರಂಭಿಸಲಿಕ್ಕೆ ಅರ್ಹವಾದುದರಿಂದ ಪ್ರಯೋಜನ ವಿಷಯ ಸಂಬಂಧವಿರತಕ್ಕದರಲ್ಲಿಯೇ ಪಂಡಿತರು ಪ್ರವೃತ್ತಿಮಾಡುವುದರಿಂದ ಆರಂಭಣೀಯವೆಂದು ಸಿದ್ಧಿಸುವುದಕ್ಕಾಗಿ ಪ್ರೇಕ್ಷಾವಂತರನ್ನುಪ್ರವೃತ್ತಿಗೊಳಿಸುವುದಕ್ಕಾಗಿ ಪ್ರಯೋಜನಾದಿಗಳನ್ನುಪ್ರತಿಪಾದಿಸತಕ್ಕಪ್ರಥಮ ಸೂತ್ರದ ವ್ಯಾಖ್ಯಾನವನ್ನು 'ಓತತ್ವವಾಚೀ'ಇತ್ಯಾದಿಗಳಿಂದ ಆರಂಭಿಸಿರುತ್ತಾರೆ.(2)ಬ್ರಹ್ಮಜ್ಞಾನವು ಮೋಕ್ಷಕ್ಕೆ ಕಾರಣವೆನ್ನುವುದು ಶಾಸ್ತ್ರದಲ್ಲಿ ಪ್ರವೃತ್ತಿಮಾಡುವುದಕ್ಕಿಂತ ಮೊದಲೇ ಬೇರೆ ಪ್ರಮಾಣಗಳಿಂದ ಸಿದ್ಧವಾಗಿದ್ದರೆ ಶಾಸ್ತ್ರದಲ್ಲಿ ಆರೀತಿಯಾಗಿ ಹೇಳುವುದು ವ್ಯರ್ಥವಾಗುವುದು. ಎಲ್ಲಿಯೂ ಬೇರೆ ಪ್ರಮಾಣಗಳಿಂದ ಸಿದ್ಧವಾದ ಸ್ಥಳದಲ್ಲಿ ಉಪದೇಶವೇ ಅಗತ್ಯವಿಲ್ಲ. ಈ ಗ್ರಂಥದಲ್ಲಿಯೇ ಹಾಗೆ ನಿಶ್ಚಯವಾಗುವುದಾದರೆ ಪ್ರವೃತ್ತಿಮಾಡಿದರೆ ಪ್ರಯೋಜನಾದಿಗಳ ನಿಶ್ಚಯವಾಗುವುದು

ಪ್ರಯೋಜನಾದಿಗಳು ನಿಶ್ಚಿತಗಳಾದರೆ ಪ್ರವೃತ್ತಿಯಾಗುವುದು. ಹೀಗೆ ಅನ್ಯೋನ್ಯಾಶ್ರಯವು. (3) ಹಾಗಾದರೆ ಪ್ರಥಮ ಸೂತ್ರದಿಂದ ಹಾಗೆ ನಿಶ್ಚಯವಾಗುವುದು ಎಂದರೆ— ಒಂದನೇ ಸೂತ್ರದಲ್ಲಿಯೇ ಹೇಗೆ ಪ್ರವೃತ್ತಿಯು? ಅದಕ್ಕಾಗಿ ಬೇರೆ ಪ್ರಯೋಜನಗಳನ್ನು ಹೇಳಿದರೆ ಅನವಸ್ಥೆಯು. ಅಂದರೆ ಹೇಗೆ 'ಜನ್ಮಾದ್ಯಸ್ಯಯತಃ' ಇದುಮೊದಲಾದ ಶಾಸ್ತ್ರಗಳ ಪ್ರವೃತ್ತಿಗೆ ಕಾರಣವಾಗಿರುವುದರಿಂದ ಅದಕ್ಕೆ ಬ್ರಹ್ಮಜ್ಞಾನದ್ವಾರಾ ಪ್ರಯೋಜನಾದಿಗಳನ್ನು ತಿಳಿಸಿಕೊಡುವುದಕ್ಕಾಗಿ ಪ್ರಥಮ ಸೂತ್ರವೆಂದು ಹೇಳುತ್ತೀರೋ, ಹಾಗೆಯೇ ಒಂದನೇ ಸೂತ್ರದಲ್ಲಿಯೂ ಪ್ರವೃತ್ತಿಯಾಗುವುದಕ್ಕಾಗಿ ಒಂದನೇ ಸೂತ್ರಕ್ಕೂ ಪ್ರಯೋಜನಾದಿಗಳನ್ನು ತಿಳಿಸುವುದಕ್ಕಾಗಿ ಬೇರೆ ಸೂತ್ರವು, ಅಲ್ಲಿಯೂ ಹೀಗೆ. ಹೀಗೆ ಅನವಸ್ಥೆಯು. (4) ಪ್ರಯೋಜನನಿಶ್ಚಯವಿಲ್ಲದೇನೇ ಒಂದನೇ ಸೂತ್ರದಲ್ಲಿ ಪ್ರವೃತ್ತಿಯಾಗುವುದಾದರೆ ಮೇಲಿನ ಸೂತ್ರಗಳಲ್ಲಿಯೂ ಹಾಗೆಯೇ ಪ್ರವೃತ್ತಿಯಾಗಲಿ ಎಂದು ಪ್ರಸಕ್ತವಾಗುವುದರಿಂದ ಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳುವುದೇ ವ್ಯರ್ಥವಾಗುವುದು ಎಂದಾಶಂಕಿಸಿದರೆ— ಹೀಗೆ ಸಮಾಧಾನವನ್ನು ಇಟ್ಟುಕೊಳ್ಳತಕ್ಕದ್ದು. ಪುರುಷನ ಚಿತ್ತ ವ್ಯಾಪಾರವು ೧ ಅನುಭವ ೨ ಇಚ್ಛೆ, ೩ ಪ್ರಯತ್ನ ಎಂದು ಮೂರು ಪ್ರಕಾರವು. ಸಾಧನವಿಷಯಕ, ಫಲವಿಷಯಕ ಎಂಬುವ ಭೇದದಿಂದ ಇಚ್ಛೆಯೂ ೨ ಪ್ರಕಾರವು. ಅವುಗಳಲ್ಲಿ ಸಾಧನ ವಿಷಯಕಗಳಾದ ಇಚ್ಛೆ, ಪ್ರಯತ್ನ ಇವುಗಳಿಗೆ ಪ್ರವೃತ್ತಿಯೆಂದು ಹೆಸರು. ಅನುಭವ ಫಲವಿಷಯಕ ಇಚ್ಛೆ ಇವುಗಳು ಪ್ರವೃತ್ತಿಯೆನ್ನಿಸಿಕೊಳ್ಳುವುದಿಲ್ಲ. ಆದಕಾರಣ ಅವುಗಳಿಗೆ ಪ್ರಯೋಜನದ ನಿಶ್ಚಯಾಪೇಕ್ಷೆಯಿರುವುದಿಲ್ಲ. ಪುರುಷಾರ್ಥಕ್ಕೆ ಸಾಧನವಾದ ಶಾಸ್ತ್ರದಲ್ಲಿ ಪ್ರಾರಂಭಿಸಬೇಕೆಂಬ ಇಚ್ಛಾರೂಪವಾದ ಪ್ರವೃತ್ತಿಯಾಗಲೀ, ಶ್ರವಣಾದ್ಯನುಕೂಲ ಪ್ರಯತ್ನರೂಪವಾದ ಪ್ರವೃತ್ತಿಯಾಗಲೀ ಸ್ವರಸಸಿದ್ಧವಲ್ಲ. ಅಂದರೆ, ಪುರುಷಾರ್ಥಕ್ಕೆ ಕಾರಣವಾಗಿದೆ ಎಂಬುವ ಜ್ಞಾನವೂ, ಫಲೇಚ್ಛೆಯೂ ಇಲ್ಲದೆ ಸಿದ್ಧಿಸಲಾರದು. ಯಾರೊಬ್ಬನೂ ಹಸಿವೆಯ ನಿವೃತ್ತಿಯು ಭೋಜನ ಸಾಧ್ಯವೆಂದು ಅನುಸಂಧಾನವಾಡಿಕೊಳ್ಳದೆ ಭೋಜನ ಮಾಡಲಿಕ್ಕೆ ಇಚ್ಛೆಯನ್ನೂ ಪ್ರಯತ್ನವನ್ನೂ ಮಾಡಲಾರನು. ಆದುದರಿಂದ ಯಾರು ಯಾರನ್ನು ಎಲ್ಲಿ ಪ್ರವೃತ್ತಿಮಾಡಿಸುವರೋ, ಅವರು ಅದರ ಪ್ರಯೋಜನಾದಿಗಳನ್ನು ತೋರಿಸಿಯೇ ಪ್ರವೃತ್ತಿಮಾಡಿಸಬೇಕಾದುದರಿಂದ ಅಧಿಕಾರಿಗಳನ್ನು ಶಾಸ್ತ್ರದಲ್ಲಿ ಪ್ರವೃತ್ತಿಮಾಡಿಸುವುದಕ್ಕಾಗಿ ಸೂತ್ರಕಾರರು ಸೂತ್ರದಲ್ಲಿ ಪ್ರಯೋಜನಾದಿಗಳನ್ನು ಹೇಳಿದ್ದು ಯುಕ್ತವೇ. (5) ಸೂತ್ರದಲ್ಲಿ ಪ್ರಯೋಜನ ಹೇಳಿದರೂ ಶ್ರೋತೃವಿಗೆ ಅದರಲ್ಲಿ ನಂಬಿಕೆ ಹೇಗೆ, ನಂಬಿಕೆ ಇಲ್ಲದಿರುವವನು ಹೇಗೆ ಪ್ರವೃತ್ತಿಮಾಡುವನು? ಎಂಬುವ ಶಂಕೆಯು ಪುನಃ ಅವಶಿಷ್ಟವಾಗುವುದು.

ಈ ವಿಷಯದಲ್ಲಿ ಕೆಲವರು ಹೀಗೆ ಸಮಾಧಾನವನ್ನು ಹೇಳುವರು.— (೧) ಸೂತ್ರಕಾರರು ಆಪ್ತರೆಂದು ತಿಳಿದವನು ಅವರ ಮಾತಿನಿಂದಲೇ (ಪ್ರಥಮಸೂತ್ರದಿಂದಲೇ) ವಿಶ್ವಾಸಪಡುವನು. ಯದ್ಯಪಿ ಆಪ್ತನೆಂದು ನಿಶ್ಚಯವಾದರೆ ಪ್ರಯೋಜನಾದಿಗಳನ್ನು ಹೇಳದಿದ್ದರೂ ಆಪ್ತನು ಹೇಳಿರುವುದರಿಂದ ಈ ಶಾಸ್ತ್ರವು ಪ್ರಯೋಜನಾದಿಗಳುಳ್ಳದ್ದೆಂದು ಸಾಮಾನ್ಯವಾಗಿ ನಿಶ್ಚಯವಾಗುತ್ತದೇಯೆ. ಆದರೂ ಈ ಸಾಮಾನ್ಯನಿಶ್ಚಯವು ಪ್ರವೃತ್ತಿಗೆ ಕಾರಣವಲ್ಲ ಏಕೆಂದರೆ— ಯಾರೊಬ್ಬನೂ ಏನಾದರೂ ಪ್ರಯೋಜನಾದಿಗಳಿವೆ ಎಂದೇ ಪ್ರವರ್ತಿಸಲಾರನು. ಮತ್ತೆ ನಮಗಿಷ್ಟವಾದ ಪ್ರಯೋಜನಾದಿಗಳಿವೆ ಎಂದು ತಿಳಿದೇ ಪ್ರವರ್ತಿಸುವನು. ಆ ಪ್ರಯೋಜನಾದಿವಿಶೇಷವು ಹೇಳಿದರೇನೇ ನಿಶ್ಚಿತವಾಗುವುದು. ಆದುದರಿಂದ ಪ್ರಥಮಸೂತ್ರದಲ್ಲಿ ಹಾಗೆ ಹೇಳಿದ್ದು ಸಾರ್ಥಕವೇ ಆಯಿತು. (೨) ಅಥವಾ ಕೃಷ್ಯಾದಿಗಳಲ್ಲಿ ನಿಯತವಾಗಿ ಫಲವು ಆಗುತ್ತದೆ ಎಂದು ನಿಶ್ಚಯ

ವಿಲ್ಲದಿದ್ದರೂ ಫಲವು ಆಗಬಹುದೆಂಬ ಸಂಶಯದಿಂದ ಪ್ರವೃತ್ತಿಯು ಹೇಗೋ ಹೀಗೆಯೇ ಸೂತ್ರಕಾರರಲ್ಲಿ ಆಪ್ತತ್ವ ನಿಶ್ಚಯವಿಲ್ಲವಿದ್ದರೂ ಫಲಸಂದೇಹದಿಂದ ಶಾಸ್ತ್ರದಲ್ಲಿ ಪ್ರವೃತ್ತಿಯು ಕೂಡಬಹುದು. (೩) ಪ್ರಯೋಜನ ಸಂದೇಹದಿಂದ ಪ್ರವೃತ್ತಿಯು ಕೂಡಬಹುದೆಂಬ ಪಕ್ಷದಲ್ಲಿಯೂ ಸೂತ್ರಕಾರರು ಪ್ರಥಮ ಸೂತ್ರದಲ್ಲಿ ಪ್ರಯೋಜನ ಹೇಳಿದ್ದು ವ್ಯರ್ಥವೆಂದು ಹೇಳಕೂಡದು. ಯಾವನು ಯಾರ ಮಾತಿನಿಂದ ಸಂದೇಹಪಟ್ಟು ಪ್ರವರ್ತಿಸುವನೋ, ಅವನು ಆ ಸಂಶಯಕ್ಕೆ ಕಾರಣವಾದ ಕೋಟಿಸ್ಮೃತಿಯನ್ನು ಅವನ ವಚನದಿಂದಲೇ ಹೊಂದುವನಲ್ಲದೆ ಸ್ವಾತಂತ್ರ್ಯದಿಂದುತ್ಪ್ರೇಕ್ಷಿಸಲಾರನು. ಆದಕಾರಣ ಸಂದೇಹದಿಂದ ಪ್ರವರ್ತಿಸುವವನಿಗೂ ಸಂದೇಹಕಾರಣವಾದ ಕೋಟಿಸ್ಮೃತಿಗಾಗಿ ಸೂತ್ರದಲ್ಲಿ ಪ್ರಯೋಜನ ಹೇಳಿದ್ದು ಯುಕ್ತವೇ. ಆದುದರಿಂದ ಎರಡು ರೀತಿಯಾಗಿಯೂ (ಸೂತ್ರಕಾರರಲ್ಲಿ ಆಪ್ತತ್ವನಿಶ್ಚಯವಿದ್ದರೂ, ಇಲ್ಲದಿದ್ದರೂ) ಪ್ರಯೋಜನಾದಿಗಳನ್ನು ಹೇಳಿದ್ದು ಯುಕ್ತವು. (6) ಈ ಎರಡು ಸಮಾಧಾನವೂ ಅಯುಕ್ತವು. (೧) ಈ ಸೂತ್ರಗಳು ಆಪ್ತವಾಕ್ಯಗಳಾಗಿ ಪ್ರಯೋಜನಾದಿಗಳನ್ನು ನಿಶ್ಚೈಸಿಕೊಡುವುದಾದರೆ ಆಗಮವೇ ಆಗುವುದರಿಂದ ನ್ಯಾಯಸೂತ್ರ ಎನ್ನುವುದಕ್ಕೆ ಹಾನಿ ಬರಬೇಕಾಗುವುದು. ಮತ್ತು ಸೂತ್ರಕಾರರಿಗೆ ಯಾವ * ವೇದಾದಿ ಪ್ರಮಾಣಗಳಿಂದ ಆಪ್ತತ್ವವನ್ನು ತಿಳಿಯುತ್ತೇವೋ, ಅವುಗಳಿಂದಲೇ ಶಾಸ್ತ್ರಕ್ಕೆ ಪ್ರಯೋಜನಾದಿಗಳ ಸಂಬಂಧವೂ ತಿಳಿದುಬರುವುದಾದುದರಿಂದ ಅವುಗಳನ್ನು ಹೇಳಿದ್ದು ವ್ಯರ್ಥವಾಗಬೇಕಾಗುವುದು. (೨) ಆಪ್ತತ್ವನಿಶ್ಚಯವಿಲ್ಲದಿದ್ದರೂ ಅರ್ಥಸಂಶಯದಿಂದಲೇ ಪ್ರವೃತ್ತಿಯಾಗುವುದೆನ್ನುವುದು ಅತಿ ಸ್ಥೂಲ ಸಮಾಧಾನವು. ಯಾರೊಬ್ಬನೂ ಪ್ರಯೋಜನಾದಿಗಳ ಸಂಶಯವಿರುವಾಗ ಮಹಾಯಾಸ ಸಾಧ್ಯವಾದುದರಲ್ಲಿ ಪ್ರವರ್ತಿಸಲಾರನು. ಆದುದರಿಂದ ಪ್ರಯೋಜನಾದಿಗಳನ್ನು ಪ್ರತಿಪಾದಿಸುವ ಪ್ರಥಮ ಸೂತ್ರವು ಆಪ್ತಭಾವದಿಂದ ಉಪದೇಶರೂಪಮಾತ್ರವಲ್ಲ. ಮತ್ತೆ "ತದ್ವಿಜಿಜ್ಞಾಸಸ್ವ" "ಯಸ್ಯ ಪ್ರಸಾದಾತ್" ಇತ್ಯಾದಿಗಳಲ್ಲಿ ಶ್ರುತವಾದ ಪ್ರಯೋಜನಾದಿಗಳನ್ನು ನ್ಯಾಯದಿಂದ (ಅಂದರೆ ಮೋಕ್ಷವು ತತ್ಸಾಧನವಾದ ಜ್ಞಾನ ಪ್ರಸಾದ ಇವುಗಳಲ್ಲಿ ಕರ್ಮಸಾಧ್ಯವೆಂಬ ಶಂಕೆಯನ್ನು ನಿವಾರಿಸಿ ಮತ್ತು ವಿಷಯಭೂತನಾದ ಬ್ರಹ್ಮನು ಜೀವಾಭಿನ್ನನೆಂಬುವ ಶಂಕೆಯನ್ನು ನಿವಾರಿಸಿ ಇತ್ಯಾದಿರೀತಿಯಾಗಿ ಮೋಕ್ಷಾದಿಗಳಿಗೆ ಕರ್ಮಾದ್ಯಜನ್ಯತ್ವಾದಿರೂಪನ್ಯಾಯದಿಂದ) ಪ್ರಯೋಜನಾದಿಗಳನ್ನುಪಪಾದಿಸುವುದಕ್ಕಾಗಿ ಎಂದೇ ಪರಿಹಾರವು. ನ್ಯಾಯವ್ಯುತ್ಪಾದಕವಾದುದರಿಂದಲೇ ಈ ಸೂತ್ರವು ಶ್ರುತ್ಯರ್ಥವನ್ನು ನಿರ್ಣಯಿಸಿಕೊಡುವ ನ್ಯಾಯವನ್ನು ಪ್ರತಿಪಾದಿಸುವ ಶಾಸ್ತ್ರದಿಂದ ಬಹಿರ್ಭೂತವಲ್ಲ. "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬುವ ವಾಕ್ಯವು ಎಲ್ಲಾ ವೇದಗಳಿಗೂ ಅಧ್ಯಯನವನ್ನು ವಿಧಿಸುವುದಾಗಿ ತನಗೂ ಅಧ್ಯಯನವನ್ನು ವಿಧಿಸುತ್ತದೆ. ಅಪರಂತೆಯೇ ಪ್ರಥಮ ಸೂತ್ರಕ್ಕೂ ಈ ಸೂತ್ರದಿಂದಲೇ ಆರಂಭಣೀಯತ್ವವು ಸಿದ್ಧಿಸುವುದರಿಂದ ಅನವಸ್ಥಾದಿದೋಷವಿಲ್ಲವು. (8) ಈಸೂತ್ರಕ್ಕೆ ವಿಷಯಾದಿಗಳು ಯಾವುವೆಂದರೆ— (೧) ಸೂತ್ರಕಾರರಿಗೆ ಪ್ರಾರಂಭಿಸಬೇಕೆಂಬ ಇಚ್ಛೆಯಿಂದ ಬುದ್ಧಿಸನ್ನಿಹಿತವಾದ ಶಾಸ್ತ್ರವು ವಿಷಯವು. ಆ ವಿಷಯದಲ್ಲಿ ಇದನ್ನು ಆರಂಭಿಸಬೇಕೋ, ಬೇಡವೋ ಎಂದು

---

* 'ಪಾರಾಶರ್ಯಶ್ಚ ಕಪಿಲೋ ದೈಕುಂಠೋ ಋಷಭಸ್ತಥಾ । ಯಜ್ಞೋ ಧನ್ವಂತರಿಶ್ಚೈವ ಸ್ತ್ರೀರೂಪಸ್ತಾಪಸೋ ಮನುಃ ॥ ನಾರಾಯಣೋ ಹರಿಃ ಕೃಷ್ಣಃ ಉಪೇಂದ್ರಃ ಸರ್ವಏವ ಚ । ಏವಮಾದ್ಯಾಃ ಹರೇಃ ಸಾಕ್ಷಾತ್ಪ್ರಾದುರ್ಭಾವಾಃ ಪ್ರಕೀರ್ತಿತಾಃ' ॥ ಇತಿ ಪೈಂಗಿಶ್ರುತಿಃ ॥ 'ನಾರಾಯಣಾದ್ವಿನಿಷ್ಪನ್ನಂ' ಇತಿ ಚ ಸ್ಮೃತಿಃ ॥ 'ಗುಣೋತ್ಕರ್ಷೋ ದೇವದೇವಸ್ಯ ವಿಷ್ಣೋಃ' 'ತಮೇವಂ ವಿದ್ವಾನಮೃತ ಇಹ ಭವತಿ' ಇದುಮೊದಲಾದ ಪ್ರಮಾಣಗಳು.

ಸಂಶಯವು. ಆರಂಭಿಸಲಿಕ್ಕೆ ಅರ್ಹಗಳು, ಅನರ್ಹಗಳೂ ಆದ ಎರಡುವಿಧ ವಾಕ್ಯಗಳೂ ಉಪ
ಲಬ್ಧಗಳಾಗುತ್ತವೆ. ಇದೂ ವಾಕ್ಯವಾಗಿದೆ. ಆರಂಭಿಸಬೇಕೆನ್ನುವುದನ್ನು ತಿಳಿಸಿಕೊಡುವ ವಿಶೇಷ
ವಾಗಲೀ ಆರಂಭಿಸಕೂಡದೆನ್ನುವುದನ್ನು ತಿಳಿಸಿಕೊಡುವ ವಿಶೇಷವಾಗಲೀ ತಿಳಿದುಬಾರದಿರುವುದ
ರಿಂದ. ಎರಡರಲ್ಲಿ ಯಾವ ಪಕ್ಷವೂ ನಿಶ್ಚಿತವಾಗಲಿಲ್ಲ. (8) ಹಾಗಾದರೆ ಈ ಸಂಶಯವು ಯಾರಿಗೆ?
ವಿಶೇಷವನ್ನು ತಿಳಿದಿರುವುದರಿಂದ ಸೂತ್ರಕಾರರಿಗೆ ಎಂದನ್ನಕೂಡದು. ಸೂತ್ರಕಾರರಿಗೂ ವಿಶೇಷ
ಜ್ಞಾನವಿಲ್ಲವಾದರೆ ನಿರ್ಣಾಯಕ ಸೂತ್ರವನ್ನು ನಿರ್ಮಿಸಿದ್ದೇ ಕೂಡದೆ ಹೋಗುವುದು. ಗ್ರಂಥ
ನಿರ್ಮಾಣಮಾಡುವ ಪರ್ಯಂತವೂ ಶಾಸ್ತ್ರವು ಉಪಲಬ್ಧವಾಗದಿರುವುದರಿಂದ ಪರರಿಗೆ ಸಂಶಯ
ವೆಂದನ್ನಕೂಡದು. ಉಪಲಬ್ಧವಾಗದಿದ್ದರೆ ಸಾಧಾರಣ ಧರ್ಮದರ್ಶನಾದಿಗಳು ಕೂಡದಿರುವುದ
ರಿಂದ ಸಂಶಯವೇ ಹುಟ್ಟಲಾರದು. ಎಂದರೆ ಹೀಗೆ ಹೇಳಕೂಡದು. 'ಈ ಶಾಸ್ತ್ರವು ಪರರಿಗೆ ಉಪ
ಲಬ್ಧವಾದರೆ ಹಿಂದೆ ಹೇಳಿದ ಸಂಶಯಕಾರಣವು ಕೂಡುವಾಗ ನಾವು ಇದರಿಂದ ಪ್ರಯೋಜನ
ವನ್ನು ಹೊಂದಬೇಕೆಂಬ ಫಲೇಚ್ಛೆಯಿಂದ ವಿಶೇಷ ಸ್ಮರಣೆಯಿರುವವರಿಗೆ ಹೀಗೆ ಸಂಶಯವು
ಹುಟ್ಟಬಹುದೆಂದು ಸೂತ್ರಕಾರರು ಪರರಿಗೆ ಸಂಭಾವಿತವಾಗುವ ಸಂಶಯವನ್ನು ಇಟ್ಟುಕೊಂಡು
ಸೂತ್ರವನ್ನು ನಿರ್ಮಿಸಿರುವರು. (9) ಹಾಗಾದರೆ ಯುಕ್ತ್ಯನುಸಂಧಾನಾತ್ಮಕವಾದ ವಿಚಾರ
(ಮೀಮಾಂಸಾ)(ಮನನ) ನಾಮಕವಾದ ಜಿಜ್ಞಾಸಾಕ್ಕೆ ಅಂಗವಾದ ನ್ಯಾಯನಿಬಂಧನಾತ್ಮಕವಾದ
ಶಾಸ್ತ್ರವು ಜಿಜ್ಞಾಸಾಕ್ಕೆ ಕರ್ತವ್ಯತ್ವವಿದ್ದರೆ ಆರಂಭಣೀಯವಾಗುವುದು. ವಿಚಾರವನ್ನುಮಾಡಬೇಕು,
ಅದಕ್ಕೆ ದ್ವಾರವಾದ ನ್ಯಾಯನಿಬಂಧನವನ್ನು ಆರಂಭಿಸಕೂಡದೆನ್ನುವುದು ಕೂಡುವುದಿಲ್ಲ. ಸಾಧನ
ವಿಲ್ಲದ ವಿಚಾರವೇ ಹುಟ್ಟಲಾರದು. ವಿಚಾರವೇ ಕರ್ತವ್ಯವಾಗದಿದ್ದರೆ ಶಾಸ್ತ್ರವೇ ಆರಂಭಣೀಯವಾಗ
ಲಾರದಾದಕಾರಣ ವಿಚಾರರೂಪವಾದ ಜಿಜ್ಞಾಸಾವನ್ನೇ ವಿಷಯವೆಂದು ಹೇಳಬೇಕಿತ್ತು. ಶಾಸ್ತ್ರವು
ವಿಷಯವೆಂದು ಹೇಳಿದ್ದು ಯುಕ್ತವಲ್ಲ, ಎಂದರೆ— ಸತ್ಯವೇ. ಈ ಶಾಸ್ತ್ರದಿಂದ ಬೋಧ್ಯವಾಗುವ
ನ್ಯಾಯಗಳೇ ಕರಣಗಳಾಗಿರುವ ಜಿಜ್ಞಾಸಾದಲ್ಲಿ ಎರಡು ವಿಧ (ಕರ್ತವ್ಯಾಕರ್ತವ್ಯ)ವ್ಯಾಪಾರವು
ಕಾಣುವುದರಿಂದಲೂ, ವಿಶೇಷತೋರದಿರುವುದರಿಂದಲೂ ಜಿಜ್ಞಾಸಾ ಮಾಡಬೇಕೋ ಬೇಡವೋ
ಎಂಬ ಸಂಶಯವು ಹುಟ್ಟುವುದು. ತಥಾಚ ಯುಕ್ತಿಪ್ರತಿಪಾದಕವಾದ ಶಾಸ್ತ್ರವೂ ಆರಂಭಣೀ
ಯವೋ. ಅನಾರಂಭಣೀಯವೋ ಎಂಬುವ ಸಂಶಯವೂ ಬರುವುದು. (10) ಹಾಗಾದರೆ 'ತದ್ವಿ
ಜಿಜ್ಞಾಸಸ್ವ' ಎಂದು ವಿಚಾರವು ಶ್ರುತಿಯಲ್ಲಿ ವಿಹಿತವಾಗಿರುವುದರಿಂದ ವಿಶೇಷವು ಕಾಣುವುದಿಲ್ಲ
ವೆನ್ನುವುದು ಹೇಗೆ ಕೂಡುತ್ತದೆ ಎಂದು ಹೇಳಕೂಡದು. ವಿಷಯಪ್ರಯೋಜನಾದಿರೂಪವಾದ
ನ್ಯಾಯಾನುಸಂಧಾನವಿಲ್ಲದೆ ಜಿಜ್ಞಾಸಾ ಮಾಡಬೇಕೆನ್ನುವ ಶ್ರುತ್ಯರ್ಥವು ಈಗಲೂ ನಿಶ್ಚಿತವಾಗ
ದಿರುವುದರಿಂದ ಸಂಶಯವು ಬರುವುದು. ಈ ವಿಷಯದಲ್ಲಿ ವಿಚಾರವು ಮಾಡಕೂಡದೆಂದು
ಪೂರ್ವಪಕ್ಷವು. ಏಕೆಂದರೆ— ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿ ಎಂಬುವ ೪ ಅನು
ಬಂಧಗಳಿಲ್ಲವು. ವಿಷಯಾದಿಗಳಿದ್ದದ್ದೇ ಗ್ರಾಹ್ಯವಾಗುವುದು. ಜಿಜ್ಞಾಸಾ ಮಾಡಬೇಕಾದರೆ ವಿಷ
ಯಾದಿಗಳಿರುವುದೇ ಆವಶ್ಯಕವು. (೧)ಸಂದಿಗ್ಧವಾದುದೇ ವಿಷಯವಾಗುವುದು. ನಿಶ್ಚಿತವಾದುದು
ವಿಷಯವಾಗಲಾರದು. ವಿಷಯವಿಲ್ಲದಿರುವುದರಿಂದ ಚಲೋ ಬೆಳಕಿನಲ್ಲಿರುವ ಘಟವು ಮನಸ್ಸಿ
ನಿಂದಲೂ, ಬೇರೆ ಇಂದ್ರಿಯಗಳಿಂದಲೂ ಸಂಬದ್ಧವಾಗಿದ್ದರೂ ಅದರ ವಿಚಾರವನ್ನು ಮಾಡುವುದಿಲ್ಲ.
(೨)ಪ್ರಯೋಜನವಿಲ್ಲದಿರುವುದರಿಂದಲೇ ಕಾಗೆಗಳ ಹಲ್ಲು ಸಂಧಿಗ್ಧವಾದಾಗ್ಯೂ ಅವುಗಳನ್ನು ವಿಚಾರ
ಮಾಡುವುದಿಲ್ಲ.(೩)ಸಂಬಂಧವಿಲ್ಲದಿರುವುದರಿಂದಲೇ ಸಾಧುವಾದ ಶಬ್ದಗಳ ಜ್ಞಾನದಲ್ಲಿ ಪ್ರಯೋಜನ
ವಿಷಯಗಳಿದ್ದರೂ ಅವುಗಳನ್ನು ಅರ್ಥಿಸುವವನು ವೈದ್ಯಶಾಸ್ತ್ರದಲ್ಲಿ ಪ್ರವರ್ತಿಸಲಾರನು. (೪) ಅಧಿ
ಕಾರವಿಲ್ಲದಿರುವುದರಿಂದಲೇ ಮೋಕ್ಷವನ್ನು ಬಯಸುವವನಿಗೆ ಕಾಮಶಾಸ್ತ್ರದಲ್ಲಿ ಪ್ರವೃತ್ತಿಯಾಗ

ಲಾರದು. ಜಿಜ್ಞಾಸಾದಲ್ಲಿ ವಿಷಯಾದಿಗಳ ರಾಹಿತ್ಯವು ಹೇಗೆಂದರೆ — ಜಿಜ್ಞಾಸಾಕ್ಕೆ ತೃಣ ಮೊದಲಾದ ಜಡಪದಾರ್ಥಗಳು ಪ್ರತ್ಯಕ್ಷಾದಿಗಳಿಂದಲೇ ನಿಶ್ಚಿತಗಳಾಗಿರುವುದರಿಂದ ವಿಷಯವೆಂದನ್ನ ಕೂಡದು. ಸಂದಿಗ್ಧವಾದ ಅರ್ಥವು ನ್ಯಾಯವಿಷಯವಾಗುವುದು. ಈ ತೃಣಾದಿಯು ವಿಚಾರಿತವಾಗಿ ಯಾವ ಪ್ರಯೋಜನಕ್ಕೂ ಸಮರ್ಥವಾಗಲಾರದು. ಇಂತಹದರಲ್ಲಿ ಅಧಿಕಾರಿಯು ಸುತರಾಂ ಇಲ್ಲವು. ಏಕೆಂದರೆ— ಅರ್ಥಿಯು (ಫಲಸಾಧನಗಳಲ್ಲಿಚ್ಛೆಯಿರುವವನು) ಸಮರ್ಥನು (ಇಂದ್ರಿಯ ಪಾಟವವಿರುವವನು), ವಿದ್ವಾಂಸನು (ಕರ್ತವ್ಯೋಪಯುಕ್ತಜ್ಞಾನವಿರುವವನು) ಅಧಿಕಾರಿಯಾಗುವನು. ಇಂತಹ ಅರ್ಥದಲ್ಲಿ ಯಾರಿಗೂ ಅರ್ಥಿತ್ವವು ಕೂಡಲಾರದು. (11) ಧರ್ಮಾದಿಗಳಾದರೂ ಬೇರೆ ಶಾಸ್ತ್ರಗಳಿಂದಲೇ ನಿಶ್ಚಯಿಸಲ್ಪಟ್ಟಿರುವುದರಿಂದ ಅವುಗಳೂ ಜಿಜ್ಞಾಸಕ್ಕೆ ವಿಷಯಗಳಾಗಲಾರವು (12) ಜೀವನು ವಿಷಯನೆಂದರೆ — ಶರೀರ, ಇಂದ್ರಿಯಾದಿಗಳ ಸಮೂಹ ಇವುಗಳಿಂದ ಹೊರತಾದ ಜೀವನು ಇಲ್ಲವೇ ಇಲ್ಲ. ಶರೀರಾದಿಗಳಾದರೂ ಪ್ರತ್ಯಕ್ಷಾದಿಗಳಿಂದಲೇ ನಿಶ್ಚಿತಗಳಾಗಿವೆ. ಶರೀರಾದಿಗಳಿಂದ ವ್ಯತಿರಿಕ್ತನಾದ ಆತ್ಮನು 'ಅಹಂ' ಎಂದು ಸಂಶಯ ವಿಪರ್ಯಾಸಗಳಿಲ್ಲದೆ ಸಾಕ್ಷಾತ್ ಪ್ರತೀತಿಯಿಂದಲೇ ನಿಶ್ಚಿತನಾಗಿರುವನು ಎಂದರೆ — ಆದಪ್ರಯುಕ್ತವೇ ಜಿಜ್ಞಾಸಾರ್ಹನಲ್ಲ. ಆದಪ್ರಯುಕ್ತವೇ ಅನಾದಿಯಿಂದ ಆವನ ತತ್ವಜ್ಞಾನವಿದ್ದರೂ ಇಷ್ಟಪ್ರಾಪ್ತಿ, ಅನಿಷ್ಟಪರಿಹಾರಗಳು ಕಾಣದಿರುವುದರಿಂದ ಜೀವನು ಜಿಜ್ಞಾಸಿತನಾಗಿ ಯಾವ ಪ್ರಯೋಜನಕ್ಕೂ ಸಮರ್ಥನಾಗಲಾರನು. (13) ಈಶ್ವರನು ವಿಷಯನೆಂದರೆ— ಈಶ್ವರನು ಪ್ರಮಿತನೋ ಅಲ್ಲವೋ, ಪ್ರಮಿತನಾಗದಿದ್ದರ ಅನುಗ್ರಾಹ್ಯಪ್ರಮಾಣವಿಲ್ಲದಿರುವುದರಿಂದ ಜಿಜ್ಞಾಸಾ ಕೂಡದೆ ಹೋಗಬೇಕಾಗುವುದು. ಪ್ರಮಿತನಾದರೆ ನಿಶ್ಚಿತನಾಗಿರುವುದರಿಂದಲೇ ಜಿಜ್ಞಾಸಾ ಕೂಡಲಾರದು. (14) ಮತ್ತು ಈಶ್ವರವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಲಾರದು. ಪ್ರತ್ಯಕ್ಷವು ಆಪಾತತಃ ಈಶ್ವರನಿಲ್ಲವೆಂದೇ ತಿಳಿಸಿಕೊಡುವುದು. (15) ಈಶ್ವರನನ್ನು ಪ್ರತಿಪಾದಿಸುವ ಹೇತು ವಿಲ್ಲದಿರುವುದರಿಂದ ಅನುಮಾನವೂ ಆಗಲಾರದು. (16) ಆಗಮವು ಕಾರ್ಯವನ್ನೇ ಬೋಧಿಸುವುದರಿಂದ ಸಿದ್ಧನಾದ ಈಶ್ವರನನ್ನು ತಿಳಿಸಲಿಕ್ಕೆ ಸಮರ್ಥವಾಗುವುದಿಲ್ಲ. ಇದು ಹೊರತು ಬೇರೆ ಪ್ರಮಾಣವಿಲ್ಲ. ಆಗಮವಾದರೂ ಆಗುವುದಾದರೆ ವೇದವೇ ಆಗಬೇಕು. ಬೇರೆ ಯಾವುದನ್ನೂ ಶಂಕಿಸಕೂಡದು. ವೇದಮೂಲಕವಾದ ಪಂಚರಾತ್ರಾದಿಯು ವೇದಪ್ರಾಮಾಣ್ಯದ ಅಧೀನವಾಗಿದೆ. ವೇದವು ಪೌರುಷೇಯವೆಂದರೂ, ಅಪೌರುಷೇಯವೆಂದರೂ ಆಪ್ತೋಕ್ತತ್ವರೂಪವಾದ ಪ್ರಾಮಾಣ್ಯ ಕಾರಣವಿಲ್ಲದಿರುವುದರಿಂದ ಪ್ರಾಮಾಣ್ಯವನ್ನೇ ಹೇಳಲು ಸಾಧ್ಯವಿಲ್ಲ. ಸ್ವತಃ ಪ್ರಾಮಾಣ್ಯವನ್ನಂಗೀಕರಿಸಿದರೆ ವೇದವಿರುದ್ಧಗಳಾದ ಬೌದ್ಧಾದಿ ವಚನಗಳಿಗೂ ಪ್ರಾಮಾಣ್ಯವು ಬರಬೇಕಾದುದರಿಂದ ಪುನಃ ವೇದಗಳಿಗೆ ಅಪ್ರಾಮಾಣ್ಯವು ಸಿದ್ಧವಾಗುವುದು. (17) ಮತ್ತು ಅರ್ಥಸಂಪರ್ಕವಿಲ್ಲದಿರುವುದರಿಂದ ಶಬ್ದಕ್ಕೇನೇ ಪ್ರಾಮಾಣ್ಯವು ಇಲ್ಲ. ಶಬ್ದವಿಶೇಷವಾದ ವೇದಕ್ಕೂ ಪ್ರಾಮಾಣ್ಯವಿಲ್ಲವೆಂದು ಸುತರಾಂ ಸಿದ್ಧವಾಯಿತು. (18) ಈಶ್ವರ ಜಿಜ್ಞಾಸಾಕ್ಕೆ ಪ್ರಯೋಜನವು ಅಭ್ಯುದಯವಾಗಲೀ, ಮೋಕ್ಷವಾಗಲೀ ಆಗಬೇಕು. ಅವುಗಳಲ್ಲಿ ಅಭ್ಯುದಯವು ಧರ್ಮಾದಿ ಲಘೂಪಾಯಗಳಿಂದ ಸಾಧ್ಯವಾಗುವುದರಿಂದ ಬೇರೆ ಶಾಸ್ತ್ರಗಳ ಪ್ರಯೋಜನವಾಗಿದೆ. ಮುಕ್ತಿಯೆಂದೂ ಅನ್ನ ಕೂಡದು. ಮುಕ್ತಿಯೂ "ಅಪಾಮ ಸೋಮಮಮೃತಾ ಅಭೂಮ" ಎಂದು ಸೋಮಪಾನವು ಮುಕ್ತಿಕಾರಣವೆಂದು ಶ್ರುತವಾಗಿದೆ. ಆದಕಾರಣ ಲಘೂಪಾಯಗಳಿಂದ ಸಾಧ್ಯವೆಂದು ಅವಗತವಾಗಿದೆ.) ಒಂದೇ ಕರ್ಮವು ಅಭ್ಯುದಯಕ್ಕೂ, ಮುಕ್ತಿಗೂ ಕಾರಣವೆನ್ನುವುದು ವಿರುದ್ಧವೆಂದನ್ನಕೂಡದು. ಫಲೇಚ್ಛೆಯಿದ್ದರೆ ಅಭ್ಯುದಯಕ್ಕೂ, ಫಲೇಚ್ಛೆಯಿಲ್ಲದಿದ್ದರೆ ಮುಕ್ತಿಗೂ ಕಾರಣವೆಂದು ವಿಶೇಷವು ಕೂಡುತ್ತದೆ. (19) ಜಿಜ್ಞಾಸಾ ಎನ್ನುವುದು ಸಾಕ್ಷಾತ್ತಾಗಿಯೇ

ಮುಕ್ತಿಗೆ ಸಾಧನವೋ, ಜ್ಞಾನವನ್ನು ಹುಟ್ಟಿಸಿ ಮುಕ್ತಿಗೆ ಸಾಧನವೋ, ಸಾಕ್ಷಾತ್ತಾಗಿ ಎಂದನ್ನ ಕೂಡದು.- ದೃಷ್ಟವಾದುದನ್ನು ಬಿಟ್ಟು ಅದೃಷ್ಟವನ್ನು ಕಲ್ಪಿಸಬೇಕಾಗುವುದು. ಜ್ಞಾನವನ್ನು ಹುಟ್ಟಿಸಿ ಎಂದೂ ಅನ್ನಕೂಡದು.'ಕರ್ಮಣಾ ಜ್ಞಾನಮಾಪ್ನೋತಿ' ಕರ್ಮದಿಂದ ಜ್ಞಾನವನ್ನು ಸಂಪಾದಿಸುತ್ತಾನೆ ಎಂಬುವ ಆಗಮದಿಂದ ಜ್ಞಾನವು ಉಪಾಯದಿಂದ ಸಾಧ್ಯವೆಂದು ನಿಶ್ಚಿತ ವಾಗಿದೆ. ಜ್ಞಾನವೂ ಸಾಕ್ಷಾತ್ ಮುಕ್ತಿಗೆ ಕಾರಣವೆಂದು ಒಡಂಬಟ್ಟರೆ ಅದೃಷ್ಟಕಲ್ಪನೆಯೇ ಆಗುವುದು. ಜ್ಞಾನವೂ ಈಶ್ವರನ ಪ್ರಸಾದವನ್ನು ಹುಟ್ಟಿಸಿ ಮುಕ್ತಿಗೆ ಕಾರಣವೆಂದೂ ಹೇಳ ಕೂಡದು. ಜ್ಞಾನವು ಪ್ರಸಾದಕ್ಕೆ ಕಾರಣವೆಂದು ಎಲ್ಲಿಯೂ ದೃಷ್ಟವಾಗಲಿಲ್ಲ. (20)"ತತ್ಕರ್ಮ ಹರಿತೋಷಂ ಯತ್" ಇತ್ಯಾದಿಗಳಿಂದ ಈಶ್ವರನ ಪ್ರಸಾದವು ಕರ್ಮ ಮೊದಲಾದ ಅಲ್ಪ ಉಪಾಯಗಳಿಂದ ಸಾಧ್ಯವೆಂದು ಪ್ರತೀತವಾಗುವುದು. ಮತ್ತು ಈ ಆತ್ಮನ ಅವಿದ್ಯೆಯಿಂದ ಕಲ್ಪಿಸಲ್ಪಟ್ಟ ಬಂಧವು ಆ ಆತ್ಮನ ಜ್ಞಾನದಿಂದಲೇ ನಿವೃತ್ತವಾಗುವುದು. ಆದಕಾರಣ ಬಂಧನಿವೃತ್ತಿ ರೂಪವಾದ ಮುಕ್ತಿಯಲ್ಲಿ ಈಶ್ವರಪ್ರಸಾದಕ್ಕೆ ಉಪಯೋಗವಿಲ್ಲ ಈಶ್ವರನ ಜ್ಞಾನವೂ ಆತನ ಜಿಜ್ಞಾಸೆಯೂ ಮೋಕ್ಷಕ್ಕೆ ಉಪಯುಕ್ತಗಳಲ್ಲವೆಂದು ಸುತರಾಂ ಸಿದ್ಧವು. ಈ ಸಂಸಾರ ಬಂಧವು ಪಾರಮಾರ್ಥಿಕವಾದರೆ ಜ್ಞಾನದಿಂದ ನಿವೃತ್ತವಾಗಲಾರದು. ಸತ್ಯವೂ, ಅನಾದಿಯೂ ಆದ ಆತ್ಮಸ್ವರೂಪವನ್ನು ಮಾತ್ರ ಅನುಸರಿಸುತ್ತಿರುವ ಬಂಧವು ಆತ್ಮಸ್ವರೂಪವಂತೆಯೇ ಯಾವುದರಿಂ ದಲೂ ನಿವೃತ್ತವಾಗಲಾರದು.

(21) ಮತ್ತು ಮುಕ್ತನಿಗೆ ಶರೀರ ಇಂದ್ರಿಯ ವಿಷಯಾದಿಗಳ ಸಂಸರ್ಗವಿದ್ದರೆ ಮುಕ್ತತ್ವವು ಕೂಡಲಾರದು. ದುಃಖಾದಿಗಳೂ ಇರಬೇಕಾಗುವವು ಶರೀರಾದಿಗಳು ಇಲ್ಲವಾದರೆ ಶರೀರ ಸಾಧ್ಯಸುಖವಿಲ್ಲದಿರುವುದರಿಂದ ಯಾರಿಗೂ ಮುಕ್ತಿಯಲ್ಲಿ ಅಪೇಕ್ಷೆಯು ಕೂಡದಿರುವುದರಿಂದ ಶಾಸ್ತ್ರಕ್ಕೆ ಅಧಿಕಾರಿಗಳೇ ಇಲ್ಲವೆಂದಾಗುವುದು.ಯಾರೊಬ್ಬನೂ ಸುಖ ಮತ್ತು ಅವರ ಸಾಧನಗಳನ್ನು ಬಿಡಲಿಕ್ಕೆ ಉತ್ಸಾಹಪಡಲಾರನು. ಆದಕಾರಣ ವಿಷಯಾದ್ಯನುಬಂಧಗಳು ಇಲ್ಲದಿರುವುದರಿಂದ ಜಿಜ್ಞಾಸಾ(ವಿಚಾರ)ವನ್ನು ಮಾಡಕೂಡದು (22) ವಿಚಾರವನ್ನು ವಿಧಿಸತಕ್ಕ ವಾಕ್ಯಗಳೂ ಪ್ರಮಾಣ ವಲ್ಲ. ವಿಚಾರಪರವಾದ ಈ ಶಾಸ್ತ್ರವನ್ನೂ ಆರಂಭಿಸಕೂಡದು. ಎಂದು ಪೂರ್ವಪಕ್ಷಬರಲು ಬಾದರಾಯಣಾಚಾರ್ಯರು —

## "ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ"

ಎಂದು ಸೂತ್ರವನ್ನು ನಿರ್ಮಿಸಿದರು.

(ಅಥ=ಅಧ್ಯಯನ ಶಮ (ಶ್ರೀ ಹರಿಯಲ್ಲಿಯೇ ಆಸಕ್ತವಾದ ಬುದ್ಧಿಯು) ದಮಾ (ಇಂದ್ರಿಯನಿಗ್ರಹವು) ದಿ ರೂಪವಾದ ಅಧಿಕಾರವು ಲಭಿಸಿದಮೇಲೆ, ಅತಃ=ಅ ಎನ್ನುವುದರಿಂದ ವಾಚ್ಯನಾದ (ಹೇಳಲ್ಪಡತಕ್ಕ) ಪ್ರಸನ್ನನಾದ ಶ್ರೀ ಹರಿಯಿಂದ, ಅಥವಾ ಜ್ಞಾನದಿಂದುಂಟಾಗತಕ್ಕ ಪ್ರಸಾದದಿಂದ ಹುಟ್ಟುವ ಮೋಕ್ಷರೂಪವಾದ ಫಲವಿದ್ದಪ್ರಯುಕ್ತ, ಅಥವಾ ಬಂಧವು ಸತ್ಯವಾಗಿ ರುವುದರಿಂದ, ಅಥವಾ ಆಗಮವು ಪ್ರಮಾಣವಾಗಿರುವುದರಿಂದ, ಅಥವಾ ಸಿದ್ಧಾರ್ಥವನ್ನು ತಿಳಿಸಿ ಕೊಡುವುದರಿಂದ, ಓಂ ಬ್ರಹ್ಮ=ಗುಣಪರಿಪೂರ್ಣನಾದ ಶ್ರೀ ವಿಷ್ಣುವಿನ, ಜಿಜ್ಞಾಸಾ=ವಿಚಾರವು, ಕರ್ತವ್ಯಾ=ಮಾಡತಕ್ಕದ್ದು. ಅಂದರ - ಪರಬ್ರಹ್ಮನ ಜ್ಞಾನಕ್ಕಾಗಿ ಸಮಸ್ತವೇದವಿಷಯಕವಾದ ಶ್ರವಣ ಮನನ ನಿದಿಧ್ಯಾಸನರೂಪವಾದ "ತದ್ವಿಜಿಜ್ಞಾಸಸ್ವ" ಇತ್ಯಾದಿ ಶ್ರುತಿಗಳಲ್ಲಿ ವಿಹಿತವಾದ ಜಿಜ್ಞಾಸಾ (ವಿಚಾರ) ವನ್ನ ಮಾಡತಕ್ಕದ್ದು. ಎಂದು ಸೂತ್ರಾರ್ಥವು) ॥ ೧ ॥

(23) ವಿಷಯವಿಲ್ಲದಿರುವುದರಿಂದ ಬ್ರಹ್ಮಜಿಜ್ಞಾಸಾ (ವಿಚಾರ)ವನ್ನು ಮಾಡಬಾರದೆಂದು ಹೇಳಿದ್ದು ಅಯುಕ್ತವು. ಜಡಜೀವರು ವಿಷಯರಾಗದಿದ್ದರೂ ಈಶ್ವರನು ವಿಷಯನಾಗ ಬಹುದು. ಜೀವನಿಂದ ಬೇರೆಯಾದ ಈಶ್ವರನೇ ಇಲ್ಲ ಎಂದು ಹೇಳಿದ್ದನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು ಓಂಕಾರ ಬ್ರಹ್ಮಶಬ್ದಗಳನ್ನು ಪ್ರಯೋಗಿಸಿರುವರು. ಅದರಿಂದ "ಓಮಿತ್ಯೇ ತದಕ್ಷರಮುದ್ಗೀಥಮುಪಾಸೀತ" | "ತದ್ವಿಜಿಜ್ಞಾಸಸ್ವ ತದ್ಬ್ರಹ್ಮ" ಇತ್ಯಾದಿ ಶ್ರುತಿಗಳಲ್ಲಿ ಓಂಕಾರ ಬ್ರಹ್ಮಶಬ್ದಗಳು ಜಿಜ್ಞಾಸ್ಯ ವಸ್ತುವಿನಲ್ಲಿ ಶ್ರುತಗಳಾಗಿವೆ. ಆ ಓಂಕಾರ ಬ್ರಹ್ಮಶಬ್ದಗಳಿಂದ ಜಿಜ್ಞಾಸ್ಯ ವಸ್ತುವು ಸಮಸ್ತ ಜೀವಜಡಾತ್ಮಕ ಪ್ರಪಂಚದಿಂದ ವಿಲಕ್ಷಣವೆಂದು ಅವಗತವಾಗುತ್ತದೆ, ಎನ್ನುವ ಅರ್ಥವನ್ನು ಸೂಚಿಸಿದರು.) ಅದು ಅಯುಕ್ತವೆಂದು ತೋರುತ್ತದೆ. ಓಮಾದಿ ಪದಗಳಿಗೆ ಅಲೌಕಿಕಾರ್ಥ (ಪ್ರತ್ಯಕ್ಷಾಗೋಚರವಾದ ಅರ್ಥ)ದಲ್ಲಿ ಸಂಗತಿಯು (ವಾಚ್ಯವಾಚಕ ಭಾವರೂಪ ಸಂಬಂಧವು) ತಿಳಿಯಲ್ಪಡಲಿಲ್ಲ. ಪದವು ಚಕ್ಷುರಾದಿಗಳಂತೆಯೇ ಅಪ್ರತೀತವಾದ ಅರ್ಥದಲ್ಲಿಯೇ ಪ್ರತೀತಿಯನ್ನು ಹುಟ್ಟಿಸಲಾರದು. ಆದಕಾರಣ ಪದಪ್ರಯೋಗದಿಂದಲೇ ಅಪೂರ್ವಾರ್ಥವನ್ನು ತಿಳಿಯಲಾರೆವು. ಪದಪ್ರಯೋಗದಿಂದಲೇ ಸ್ವರ್ಗಾಪೂರ್ವ ದೇವತಾದಿಗಳ ಅರ್ಥವೂ ಸಿದ್ಧವಾಗುವುದಿಲ್ಲ. ಮತ್ತೆ ಸನ್ನಿಹಿತಗಳಾದ ಅನೇಕ ವಾಕ್ಯಾರ್ಥಗಳ ಸಾಮರ್ಥ್ಯದಿಂದ ಲಬ್ಧವಾಗುತ್ತದೆ ಎಂದಾಶಂಕಿಸಿದರೆ ಭಾಷ್ಯಕಾರರು ಹೇಳುತ್ತಾರೆ—

ಮೂ || ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಂ |
ಸ ಏವ ಬ್ರಹ್ಮಶಬ್ದಾರ್ಥೋ ನಾರಾಯಣಪದೋದಿತಃ || ೯ ||
ಸ ಏವ ಭರ್ಗಶಬ್ದಾರ್ಥೋ ವ್ಯಾಹೃತೀನಾಂ ಚ ಭೂಮತಃ |
ಭಾವನಾಚ್ಚೈವ ಸುತ್ವಾಚ್ಚ ಸೋಽಯಂ ಪುರುಷ ಇತ್ಯಪಿ ||
ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ ||೧೦||

ಅ || ಹಿ=ಯಾವ ಕಾರಣದಿಂದ, ಓಂಕಾರಃ=ಓಂಕಾರವು, ಓತತ್ವವಾಚೀ=ಗತತ್ವವನ್ನು ಪ್ರವಿಷ್ಟತ್ವವನ್ನಾಗಲೀ ಪ್ರತಿಪಾದಿಸುತ್ತದೋ, ಅಸೌ=ಈ ಓಂಕಾರವು, ತದ್ಗುಣೋತತಾಂ ತತ್=ಆ ಜಿಜ್ಞಾಸ್ಯನಿಗೆ, ಗುಣ=ಆನಂದಾದ್ಯನಂತಕಲ್ಯಾಣಗುಣಗಳಿಂದ, ಅಥವಾ ಗುಣಗಳನ್ನು, ಓತತಾಂ=ಪ್ರವಿಷ್ಟತ್ವವನ್ನು, ವಕ್ತಿ=ಹೇಳುತ್ತದೆ. (ಅಂತೂ ಅನಂತಾನವದ್ಯ ಕಲ್ಯಾಣಗುಣಪರಿಪೂರ್ಣತ್ವವೇ ಓಂಕಾರಕ್ಕೆ ಅರ್ಥವು) ಸ ಏವ=ಅದೇವೇ, (ಗುಣಪರಿಪೂರ್ಣತ್ವವೇ) ಬ್ರಹ್ಮಶಬ್ದಾರ್ಥಃ=ಬ್ರಹ್ಮ ಶಬ್ದಕ್ಕೂ ಅರ್ಥವು. ನಾರಾಯಣಪದೋದಿತಃ='ನಾರಾಯಣ' ಎಂಬ ಪದದಿಂದ ಹೇಳಲ್ಪಟ್ಟ ಅರ್ಥವೂ, ಸ ಏವ = ಗುಣಪೂರ್ಣತ್ವವೇ. ಭೂಮತಃ=ಪೂರ್ಣತ್ವದಿಂದಲೂ, ಭಾವನಾಚ್ಚೈವ = ಜಗತ್ತನ್ನು ಸೃಷ್ಟಿಸುವುದರಿಂದಲೂ, ಸುತ್ವಾಚ್ಚ=ಸುಖರೂಪತ್ವದಿಂದಲೂ, ಸ ಏವ=ಆ ಶ್ರೀಹರಿಯೇ, ವ್ಯಾಹೃತೀನಾಂ=ಭೂರಾದಿ ವ್ಯಾಹೃತಿಗಳ ಅರ್ಥವು. ಸ ಏವ=ಆ ಶ್ರೀಹರಿಯೇ, ಭರ್ಗಶಬ್ದಾರ್ಥಃ=ಭರಣ ಗಮನಗಳ ಯೋಗದಿಂದ, ಭರ್ಗಶಬ್ದಾರ್ಥನು. ಸೋಽಯಂ=ಆ ಈ ಬ್ರಹ್ಮನು, ಪುರುಷ ಇತ್ಯಪಿ=ಪೂರ್ಣತ್ವಾದಿಗಳಿಂದ ಪುರುಷನೆನ್ನಿಸುತ್ತಾನೆ ಸ ಏವ=ಆತನೇ, ಸರ್ವವೇದಾರ್ಥಃ=ಸಮಸ್ತ ವೇದಗಳಿಗೂ ಅರ್ಥಭೂತನು. ಅಯಂ=ಈತನು, (ಹಿಂದೆ ಹೇಳಿದಪ್ರಕಾರ ಜೀವಜಡಾತ್ಮಕ ಪ್ರಪಂಚದಿಂದ ಅತ್ಯಂತ ವಿಲಕ್ಷಣನೆಂದು ನಿಶ್ಚಿತನಾಗಿ ವಿಷಯಭೂತನಾದವನೂ) ಸಮಸ್ತ ವೇದಗಳ ಅರ್ಥಭೂತನಾಗಿ ಪ್ರತಿಪಾದಿಸಲಿಕ್ಕೆ ಶಕ್ಯನೂ ಆದ ಶ್ರೀಹರಿಯು ಜಿಜ್ಞಾಸ್ಯಃ=ವಿಚಾರ್ಯನಾಗಿ, ವಿಧೀಯತೇ=ವಿಧಿಸಲ್ಪಡುತ್ತಾನೆ.

ತಾ || ಸ. ರ. ವಿ— ಓಂಕಾರಾರ್ಥನಾದ ಶ್ರೀ ವಿಷ್ಣುವೇ ಗುಣಪರಿಪೂರ್ಣನಾದುದರಿಂದ ಬ್ರಹ್ಮಶಬ್ದಾರ್ಥನು. ಆತನೇ ಗುಣಾಶ್ರಯನಾದುದರಿಂದ ನಾರಾಯಣಪದದಿಂದ ಹೇಳಲ್ಪಟ್ಟವನು. ಅವನೇ ಗಾಯತ್ರೀ ಪ್ರತಿಪಾದ್ಯನಾಗಿ ಭರಣ ಗಮನಗಳ ಯೋಗದಿಂದ ಭರ್ಗಶಬ್ದಾರ್ಥನು. ಪೂರ್ಣತೆಯಿಂದಲೂ ಸ್ರಷ್ಟೃತ್ವದಿಂದಲೂ ಸರ್ವೋತ್ಕೃಷ್ಟನಾಗಿದ್ದುದರಿಂದಲೂ ಭೂರಾದಿ ವ್ಯಾಹೃತಿಗಳಿಗೆ ಅವನೇ ಅರ್ಥನು. ಆತನೇ ಪುರುಷಸೂಕ್ತಪ್ರತಿಪಾದ್ಯನಾಗಿ ಷಡ್ಗುಣ ಪರಿಪೂರ್ಣನಾದುದರಿಂದ ಪುರುಷಶಬ್ದವಾಚ್ಯನು. ಆತನೇ ಓಂಕಾರಾದಿ ಪಂಚರೂಪಗಳಾದ ವೇದಗಳಿಗೆ ಅರ್ಥಭೂತನು. ಇಂತಹ ನಾರಾಯಣನು ಸರ್ವವೇದಗಳ ಅರ್ಥಭೂತನಾದಾಗ್ಯೂ ಕುಬುದ್ಧಿಗಳು ಬೇರೆರೀತಿಯಾಗಿ ತಿಳಿಯುವುದರಿಂದ ಜಿಜ್ಞಾಸ್ಯನಾಗಿ ವಿಧಿಸಲ್ಪಡುತ್ತಾನೆ.

ನ. ಚ. ವಿ— (1) ಯಾವ ವಿಷ್ಣುವು ನಾರಾಯಣಪದದಿಂದ ಹೇಳಲ್ಪಟ್ಟಿದ್ದಾನೋ ಆತನೇ ಬ್ರಹ್ಮಶಬ್ದಾರ್ಥನು. ಈ ಎರಡು ಶಬ್ದಗಳೂ ಗುಣಪೂರ್ತಿಯೆನ್ನುವ ಅರ್ಥವನ್ನು ಹೇಳತಕ್ಕದಾದುದರಿಂದ ಪರ್ಯಾಯಗಳು. ಈ ಓಂಕಾರವೂ ಗುಣಪೂರ್ಣತ್ವವನ್ನು ಹೇಳುತ್ತದೆ. ಆತನೇ ಗಾಯತ್ರೀ ಪ್ರತಿಪಾದ್ಯನಾಗಿ (ಪಾಪಸ್ಯ ಭರ್ಜನಾತ್ ಭರ್ಗಃ) ಪಾಪವನ್ನು ಪರಿಹರಿಸಿರುವುದರಿಂದ ಭರ್ಗನೆನಿಸುತ್ತಾನೆ. ಆತನೇ ವ್ಯಾಹೃತ್ಯರ್ಥನು. ಆ ಈ ಶ್ರೀಹರಿಯು ಸಹಸ್ರ ಶಿರಸ್ಸುಗಳುಳ್ಳ ಪುರುಷನೆನಿಸುತ್ತಾನೆ. "ಷಕಾರಃ ಪ್ರಾಣ ಆತ್ಮಾ" ಎಂಬುವ ಶ್ರುತಿಯಿಂದ ಉತ್ಕೃಷ್ಟಪ್ರಾಣನಾದ ಪ್ರಯುಕ್ತ ಪುರುಷನೆನ್ನಿಸುತ್ತಾನೆ. (2) ಹೀಗೆ ಓಂಕಾರಾದ್ಯಶೇಷವೇದಗಳಿಗೂ ಅರ್ಥಭೂತನಾದ ನಾರಾಯಣನು ಜಿಜ್ಞಾಸ್ಯನಾಗಿ ವಿಧಿಸಲ್ಪಡುತ್ತಾನೆ.

ನ್ಯಾಯಸುಧಾ— (1) (ಅನಂತ ಅನವದ್ಯ ಕಲ್ಯಾಣಗುಣಗಳಿಂದ ಪರಿಪೂರ್ಣತ್ವವೇ ಓಂಕಾರಕ್ಕೆ ಅರ್ಥವು. ಬ್ರಹ್ಮಶಬ್ದಕ್ಕೂ ಅದೇ ಅರ್ಥವು. ಆದಕಾರಣ ಈ ಯೌಗಿಕಗಳಾದ ಓಂಕಾರಬ್ರಹ್ಮಶಬ್ದಗಳೂ ಜಿಜ್ಞಾಸ್ಯನಿಗೆ "**ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ**" ಇತ್ಯಾದಿ ಶ್ರುತಿಗಳಿಂದ ಅನಂತಗುಣಪರಿಪೂರ್ಣತ್ವವನ್ನು ಪ್ರತಿಪಾದಿಸುವುವುಗಳಾಗಿ ಆ ಗುಣಪರಿಪೂರ್ಣತ್ವವು ಜೀವ ಜಡಗಳಿಗೆ ಕೂಡದಿರುವುದರಿಂದ ಜೀವಜಡಗಳಿಂದ ಭಿನ್ನವೇ ಆದ ವಸ್ತುವನ್ನು ತಿಳಿಸಿಕೊಡುತ್ತವೆ. ಬ್ರಹ್ಮನು ತಿಳಿಯಲ್ಪಡದಿರುವುದರಿಂದ ಜಿಜ್ಞಾಸಾ (ವಿಚಾರ) ವಿಷಯನಾಗಿರುತ್ತಾನೆ. (2) ಅದ್ವೈತಿಗಳು, 'ಓಮ್' ಎನ್ನುವಲ್ಲಿ ಅಕಾರವಾಚ್ಯವಾದ ತತ್ ಪದಾರ್ಥದಿಂದ ಉಕಾರವಾಚ್ಯವಾದ ತ್ವಂ ಪದಾರ್ಥಕ್ಕೆ ಅಭೇದವು ಮಕಾರದಿಂದ ಹೇಳಲ್ಪಡುತ್ತದೆ. ಬ್ರಹ್ಮಶಬ್ದದಿಂದ ಸಕಲ ವಸ್ತುಸ್ವರೂಪತ್ವರೂಪವಾದ ಪೂರ್ಣತ್ವವು ಹೇಳಲ್ಪಡುತ್ತದೆ ಎಂದು ವ್ಯಾಖ್ಯಾನಮಾಡಿರುವರು. ಆ ವ್ಯಾಖ್ಯಾನಕ್ಕೆ ಪ್ರಮಾಣವಿಲ್ಲ. ಪ್ರಮಾಣ ವಿರೋಧವೂ ಇದೆ.) (3) "**ಗುಣೋತತಾಂ**" ಎನ್ನುವಲ್ಲಿ "**ವೃದ್ಧಿರೇಚಿ**" ಎನ್ನುವುದರಿಂದ ವೃದ್ಧಿ ಬಂದು "**ಗುಣೌತತಾಂ**" ಎಂದಾಗಬೇಕಿದ್ದಿತು. ಎಂದರೆ "**ಓಮಾಙೋಶ್ಚ**" ಓಮ್ ಆಙ್ ಪರದಲ್ಲಿರುವಾಗ ಪರರೂಪವು ಬರುವುದು. ಎನ್ನುವಲ್ಲಿ ಚ ಶಬ್ದದಿಂದ ಬೇರೆ ಕಡೆಯಲ್ಲಿಯೂ ಪರರೂಪ ಬರುತ್ತದೆಂದು ವಿಧಿಸಿರುವರು. ಅಥವಾ ಊಙ್ ಧಾತುವಿನದ್ದೇ ರೂಪವು. ಆದಕಾರಣ "ಗುಣೋತತಾಂ" ಎನ್ನುವ ರೂಪವು ಕೂಡುತ್ತದೆ. (4) ತಥಾಚ ಓಂಕಾರ ಬ್ರಹ್ಮಶಬ್ದಗಳಿಂದ ಜೀವ ಜಡಗಳಿಂದ ಭಿನ್ನನಾದ ಜಿಜ್ಞಾಸ್ಯನು ಸಿದ್ಧಿಸಲಿ. ಆದಾಗ್ಯೂ ಈಶ್ವರ ವಿಷಯದಲ್ಲಿ ಏನಾಯಿತೆಂದರೆ ಅವನೇ ನಾರಾಯಣನೆನ್ನಿಸುವನು. ನಾಮವಿಷಯದಲ್ಲಿ ವಿಪ್ರತಿಪತ್ತಿಯಿಲ್ಲ. ಅಂದರೆ ಹೆಸರು ಯಾವುದಾದರೂ ಚಿಂತಿಲ್ಲ. (5) ಅಥವಾ ಸೂತ್ರಕಾರರು ಹೇಳಿದ ಓಂಕಾರ ಬ್ರಹ್ಮಶಬ್ದಗಳು ಉಪಲಕ್ಷಣವು. (ತನ್ನ ಅರ್ಥವನ್ನು ಬಿಡದೇನೇ ಬೇರೆ

ಅರ್ಥವನ್ನು ಸ್ವೀಕರಿಸುವವುಗಳು) 'ನಾರಾಯಣಂ ಮಹಾಜ್ಞೇಯಂ' ಇತ್ಯಾದಿ ಶ್ರುತಿಗಳಲ್ಲಿ ನಾರಾಯಣನೂ ಜಿಜ್ಞಾಸ್ಯನಾಗಿ ಶ್ರುತನಾಗಿರುತ್ತಾನೆ. ನಾರಾಯಣಪದದಿಂದ ಸಿಗತಕ್ಕ ಅರ್ಥವು ಗುಣಪೂರ್ಣತ್ವವೇ. ಆದಕಾರಣ ನಾರಾಯಣಶಬ್ದದಿಂದಲೂ ಜೀವಾದಿಗಳಿಂದ ಭಿನ್ನನಾದ ಜಿಜ್ಞಾಸ್ಯನೇ ಸಿದ್ಧಿಸುವನು ಎಂದು ಇದರಿಂದ ಹೇಳಲ್ಪಡುತ್ತದೆ. (6) ನಾರಾಯಣಶಬ್ದವೂ ಉಪಲಕ್ಷಣವು ಆತ್ಮ ಅನಂತ ಈಶ್ವರಾದಿ ಶಬ್ದಗಳನ್ನೂ ತಿಳಿಯಬೇಕು. "**ಆತ್ಮಾನಮೇವ ಲೋಕಮುಪಾಸೀತ ಸ ಏಷ ಪರೋಽವರೀಯಾನುದ್ಗೀಥಃ ಸ ಏಷೋಽನಂತಃ**" ಇತ್ಯಾದಿ ಶ್ರುತಿಗಳಲ್ಲಿ ಜಿಜ್ಞಾಸ್ಯನಲ್ಲಿ ಆತ್ಮಾದಿ ಶಬ್ದಗಳೂ ಶ್ರುತಗಳಾಗಿವೆ. ಗುಣಪರಿಪೂರ್ಣತ್ವವನ್ನೂ ಹೇಳುತ್ತವೆ. (7) ಈಶ್ವರನು ಪ್ರಮಿತನೋ (ಪ್ರಮಾಣದಿಂದ ಸಿದ್ಧಿಸುವನೋ) ಇಲ್ಲವೋ ಎಂದರೆ ಪ್ರಮಿತನೆಂದೇ ಹೇಳುವೆವು. ತಥಾಚ ಶಾಸ್ತ್ರಕ್ಕೆ ವಿಷಯಸಂಬಂಧವು ಸಿದ್ಧವಾಯಿತು. (8) ಯಾವ ಪ್ರಮಾಣದಿಂದ ಸಿದ್ಧಿಸುವನೆಂದರೆ- ವೇದದಿಂದ ಎಂದೇ ಹೇಳುವೆವು. ವೇದವು ಈಶ್ವರ ವಿಷಯಕವಾಗುವುದು ಹೇಗೆಂದರೆ— ಅದಕ್ಕಾಗಿಯೇ ಸೂತ್ರಕಾರರು ಓಂಕಾರವನ್ನು ಬ್ರಹ್ಮನಲ್ಲಿ ಪ್ರಯೋಗಿಸಿರುವರು. ಈ ಓಂಕಾರದಿಂದ ಈಶ್ವರನಿಗೆ ಸರ್ವವೇದಾರ್ಥತ್ವವು ಹೇಗೆ ಸಿದ್ಧಿಸುವುದೆಂದರೆ "ಓಮಿತಿ ಬ್ರಹ್ಮ" ಇತ್ಯಾದಿ ಶ್ರುತಿಗಳಿಂದ ಓಂಕಾರವು ಈಶ್ವರನನ್ನು ಪ್ರತಿಪಾದಿಸುತ್ತದೆ. ಆದಕಾರಣ ಆತನೇ ಭೂರಾದಿ ವ್ಯಾಹೃತಿಗಳಿಗೆ ಅರ್ಥನೆಂದು ತಿಳಿಯುತ್ತದೆ. "**ಪ್ರಣವಾರ್ಥಾ ವ್ಯಾಹೃತಯಃ ವ್ಯಾಹೃತ್ಯರ್ಥಾ ಋಗಾದಯಃ**" ಎಂಬುವ ಆಗಮದಿಂದ "**ಭೂಃ ಭುವಃ ಸುವಃ**" ಎನ್ನುವ ಮೂರು ವ್ಯಾಹೃತಿಗಳು ಅ, ಉ, ಮ್, ಎನ್ನುವ ಮೂರು ವರ್ಣಗಳ ಸ್ವರೂಪವಾದ ಓಂಕಾರದ ವ್ಯಾಖ್ಯಾನವೆಂದು ತಿಳಿಯುತ್ತದೆ. ಅಂತೂ ಪ್ರಣವದ ಅರ್ಥವನ್ನೇ ವ್ಯಾಹೃತಿಯು ಪ್ರತಿಪಾದಿಸುವುದು. ಅದರ ಅರ್ಥವನ್ನೇ ಗಾಯತ್ರಿಯು ಪ್ರತಿಪಾದಿಸುವುದು. ಗಾಯತ್ರಿಯ ಅರ್ಥವನ್ನೇ ಪುರುಷಸೂಕ್ತವು ಪ್ರತಿಪಾದಿಸುವುದು ಅದರ ಅರ್ಥವನ್ನೇ ಸಮಸ್ತ ವೇದಗಳು ಪ್ರತಿಪಾದಿಸುವವು ಹೀಗೆ ಸರ್ವವೇದಗಳು ಓಂಕಾರದ ವ್ಯಾಖ್ಯಾನಗಳಾದಪ್ರಯುಕ್ತ ಶ್ರೀ ಹರಿಯು ಓಂಕಾರಾರ್ಥನೆಂದು ಹೇಳಿರುವುದರಿಂದ ಆ ಬ್ರಹ್ಮನು ಸರ್ವವೇದಾರ್ಥನೆಂದೂ ಸಿದ್ಧಿಸುವನು.) (9) ವ್ಯಾಹೃತಿಗಳು ಅಗ್ನಿ, ವಾಯು, ಸೂರ್ಯ, ದೇವತೆಗಳನ್ನು ಪ್ರತಿಪಾದಿಸುತ್ತವೆ ಎಂಬ ಭ್ರಾಂತಿಯನ್ನು ನಿವಾರಿಸುವುದಕ್ಕಾಗಿ 'ಸ ಏವ' ಎನ್ನುವಲ್ಲಿದ್ದ 'ಏವ' ಶಬ್ದವು. ಅಗ್ನ್ಯಾದಿದೇವತೆಗಳು ಅಧಿದೇವತೆ (ಅಭಿಮಾನಿದೇವತೆ) ಗಳೆಂದಂಗೀಕರಿಸಿರುವುದರಿಂದ ಪ್ರಸಿದ್ಧಿಯು ಕೂಡುತ್ತದೆ. (10) (ಯಾವ ನಿಮಿತ್ತದಿಂದ ವ್ಯಾಹೃತಿಗಳಿಗೆ ಅದೇ ಅರ್ಥವೆಂದರೆ ಗುಣಪೂರ್ಣತ್ವವಿದ್ದುದರಿಂದ 'ಭೂಃ' ಎಂದೂ ಜಗತ್ತನ್ನು ಸೃಷ್ಟಿಸುವುದರಿಂದ 'ಭುವಃ' ಎಂದೂ ಸುಖರೂಪತ್ವವಿದ್ದುದರಿಂದ 'ಸ್ವಃ' ಎಂದೂ ಎನ್ನಿಸುತ್ತಾನೆ. "**ಪೂರ್ಣೋ ಭೂತಿವರೋಽನಂತ ಸುಖೋ ಯದ್ವ್ಯಾಹೃತೀರಿತಃ**" ಎಂದು ಋಗ್ಭಾಷ್ಯದಲ್ಲಿ ಹೇಳಿಯದೆ. ಈ ನಿಮಿತ್ತಗಳಿಂದಲೇ ವ್ಯಾಹೃತಿಗಳಿಗೆ ಅರ್ಥನು. ಭೂರಾದಿ ಮೂರು ಲೋಕಗಳ ಸ್ವರೂಪನಾದುದರಿಂದ ವ್ಯಾಹೃತಿಗಳಿಗೆ ಅರ್ಥನೆಂದಲ್ಲ. ಆ ಲೋಕತ್ರಯಸ್ವರೂಪನೆಂಬುವ ಅರ್ಥವು "**ಪುರುಷೇಣೇದಂ ಸರ್ವಂ ವ್ಯಾಪ್ತಂ**" "**ಮಯಾ ತತಮಿದಂ ವಿಶ್ವಂ**" "**ಇದಂ ಹಿ ವಿಶ್ವಂ ಭಗವಾನಿವೇತರಃ**" ಇದು ಮೊದಲಾದ ಪ್ರಮಾಣಗಳಿಂದ ವಿರುದ್ಧವಾಗಿದೆ. "**ಭೂರಿತಿ ವಾ ಅಯಂ ಲೋಕಃ**" ಇದು ಮೊದಲಾದ ಶ್ರುತಿಗಳೂ ಲೋಕತ್ರಯಗಳಲ್ಲಿ ಅಂತರ್ಗತನಾದ ಪರಮಾತ್ಮನನ್ನೇ ವಿಷಯೀಕರಿಸುತ್ತವೆ ಎಂದು 'ಏವ' ಶಬ್ದಾರ್ಥವು (11) (ಈಶ್ವರನು ವ್ಯಾಹೃತ್ಯರ್ಥನಾದಾಗ್ಯೂ ವ್ಯಾಹೃತಿಗಳೇ ವೇದವಲ್ಲ, ಆದಕಾರಣ ಪ್ರಕೃತವೇನಾಯಿತೆಂದರೆ, ವ್ಯಾಹೃತ್ಯರ್ಥನಾದುದರಿಂದ ಪರಮೇಶ್ವರನು ಗಾಯತ್ರೀಪ್ರತಿಪಾದ್ಯನೆಂದವಗತನಾಗುತ್ತದೆ. ಮೂರು ಪಾದವುಳ್ಳ ಗಾಯತ್ರಿಯು

ಮೂರು ವ್ಯಾಹೃತಿಗಳ ವ್ಯಾಖ್ಯಾನವೆಂದು ಆಗಮಗಳಲ್ಲಿ ಸಿದ್ಧವಾಗಿದೆ. (12) ಹಾಗಾದರೆ ಯಾವ ಭರ್ಗನು ನಮ್ಮ ಬುದ್ಧಿಗಳನ್ನು ಪ್ರೇರಿಸುವನೋ ಅಂತಹ ಸೂರ್ಯದೇವರ ಶ್ರೇಷ್ಠವಾದ ರೂಪವನ್ನು ಧ್ಯಾನಿಸುವೆವು " ಎಂದು ಗಾಯತ್ರಿಯಲ್ಲಿ ಭರ್ಗನೆನಿಸುವ ಸೂರ್ಯನು ಪ್ರತಿಪಾದ್ಯನೆಂದು ಕಾಣಲ್ಪಡುವುದರಿಂದ ಗಾಯತ್ರಿಯು ಭಗವಂತನನ್ನು ಪ್ರತಿಪಾದಿಸುತ್ತದೆ ಎನ್ನುವುದು ಹೇಗೆ ಕೂಡುತ್ತದೆ ಎಂದರೆ— ಭರಣ ಗಮನಗಳ ಸಂಬಂಧದಿಂದ ಶ್ರೀ ಪರಬ್ರಹ್ಮನೇ ಭರ್ಗನೆನಿಸುವನು. ಆತನೇ ಜಗತ್ತನ್ನು ಸೃಷ್ಟಿಸುವುದರಿಂದ 'ಸವಿತಾ' ಎನ್ನಿಸುತ್ತಾನೆ. "**ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ**" ಇತ್ಯಾದ್ಯಾಗಮಗಳಿಂದ ವಿರೋಧವಿದ್ದುದರಿಂದ ಗಾಯತ್ರೀ ಪ್ರತಿಪಾದ್ಯನು ಸರ್ವಥಾ ಸೂರ್ಯನಲ್ಲ. (13) ಪರಬ್ರಹ್ಮನೇ ಗಾಯತ್ರೀ ಪ್ರತಿಪಾದ್ಯನಾದುದರಿಂದ ಪುರುಷಸೂಕ್ತಪ್ರತಿಪಾದ್ಯನೂ ಆತನೇ ಎಂದು ಸಿದ್ಧಿಸುವುದು. '**ತದ್ಭೇದಃ ಪೌರುಷಂ ಸೂಕ್ತಂ ವೇದಾಃ ಪುರುಷಸೂಕ್ತಗಾಃ**' ಎಂಬ ಆಗಮದಿಂದ ಮೂರು ವರ್ಗಗಳುಳ್ಳ ಪುರುಷಸೂಕ್ತವು ಮೂರು ಪಾದಗಳುಳ್ಳ ಗಾಯತ್ರಿಯ ವ್ಯಾಖ್ಯಾನವೆಂದು ಸಿದ್ಧಿಸುತ್ತದೆ. (14) ಪುರುಷಸೂಕ್ತದಲ್ಲಿ ಪುರುಷಾಖ್ಯ ಪಶುವನ್ನು ಹಿರಣ್ಯಗರ್ಭನನ್ನಾಗಲೀ ಪ್ರತಿಪಾದಿಸುವುದರಿಂದ ನಾರಾಯಣನು ಪ್ರತಿಪಾದ್ಯನೆನ್ನುವುದು ಹೇಗೆ ಕೂಡುತ್ತದೆ ಎಂದರೆ— '**ಸ ಪೂರ್ಣತ್ವಾತ್ಪುಮಾನ್ನಾಮ**' ಎಂದು ಋಗ್ಭಾಷ್ಯದಲ್ಲಿ ಹೇಳಿರುವುದರಿಂದ ಪೂರ್ಣತ್ವಾದಿಗಳು ಇದ್ದಪ್ರಯುಕ್ತ ಆತನೇ ಪುರುಷನೆನ್ನಿಸುವನು. "**ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂಚನಾನಾವೃತಂ ನೈನೇನ ಕಿಂಚನಾಸಂವೃತಂ**" ಎಂದು ಕಾಣ್ವ ಶ್ರುತಿಯು. (15) ಶ್ರೀ ವಿಷ್ಣುವೇ ಪುರುಷಸೂಕ್ತಪ್ರತಿಪಾದ್ಯನೆಂದು ಸಿದ್ಧಿಸಿದ ಮೇಲೆ "**ವೇದಾಃ ಪುರುಷಸೂಕ್ತಗಾಃ**" ಎಂಬ ಆಗಮದಿಂದ ವೇದಗಳೆಲ್ಲವೂ ಪುರುಷಸೂಕ್ತದ ಅರ್ಥವನ್ನು ಪ್ರತಿಪಾದಿಸುತ್ತವೆ ಎಂದು ತಿಳಿದುಬರುವುದರಿಂದ ಸರ್ವವೇದಪ್ರತಿಪಾದ್ಯನೂ ಆತನೇ ಎಂದು ಸಿದ್ಧಿಸುವುದು. "**ಸ ಏವ ಸರ್ವವೇದಾರ್ಥಃ**" ಎನ್ನುವಲ್ಲಿದ್ದ 'ಏವ' ಶಬ್ದವು ವೇದಕ್ಕೆ ಕಾರ್ಯರೂಪ ಅರ್ಥಪ್ರತಿಪಾದಕತ್ವವಿಲ್ಲವೆಂದು ತೋರಿಸುವುದಕ್ಕಾಗಿ. (16) ಭಗವಂತನು ಸರ್ವವೇದಾರ್ಥನೆಂದು "**ಸರ್ವೇ ವೇದಾ ಯತ್ಪದಮಾಮನಂತಿ**" ಇತ್ಯಾದಿ ಶ್ರುತಿಗಳಿಂದ ಸಿದ್ಧವಾದಾಗ್ಯೂ ನ್ಯಾಯದಿಂದ ಉಪಪಾದಿಸುವುದಕ್ಕಾಗಿ ಸೂತ್ರಕಾರರದ್ದು ಓಂಕಾರೋಚ್ಚಾರಣರೂಪವಾದ ಈ ಪ್ರಯತ್ನವು (೧) ಭಗವಾನ್ ಸರ್ವವೇದಾರ್ಥಃ ತದ್ವ್ಯಾಖ್ಯೇಯಪುರುಷಸೂಕ್ತಪ್ರತಿಪಾದ್ಯತ್ವಾತ್=ಶ್ರೀ ಹರಿಯು ಸಮಸ್ತ ವೇದಪ್ರತಿಪಾದ್ಯನು ವೇದವ್ಯಾಖ್ಯೇಯವಾದ ಪುರುಷಸೂಕ್ತದಲ್ಲಿ ಪ್ರತಿಪಾದಿಸಲ್ಪಡುವುದರಿಂದ. (೨) ಭಗವಾನ್ ಪುರುಷಸೂಕ್ತಾರ್ಥಃ ತದ್ವ್ಯಾಖ್ಯೇಯಗಾಯತ್ರ್ಯರ್ಥತ್ವಾತ್=ಭಗವಂತನು ಪುರುಷಸೂಕ್ತಪ್ರತಿಪಾದ್ಯನು ಪುರುಷಸೂಕ್ತವ್ಯಾಖ್ಯೇಯವಾದ ಗಾಯತ್ರಿಯ ಅರ್ಥನಾದುದರಿಂದ. (೩) ಭಗವಾನ್ ಗಾಯತ್ರ್ಯರ್ಥಃ ತದ್ವ್ಯಾಖ್ಯೇಯವ್ಯಾಹೃತ್ಯರ್ಥತ್ವಾತ್=ಭಗವಂತನು ಗಾಯತ್ರೀಪ್ರತಿಪಾದ್ಯನು, ವ್ಯಾಹೃತಿಪ್ರತಿಪಾದ್ಯನಾದುದರಿಂದ. (೪) ಭಗವಾನ್ ವ್ಯಾಹೃತ್ಯರ್ಥಃ ತದ್ವ್ಯಾಖ್ಯೇಯಪ್ರಣವಾರ್ಥತ್ವಾತ್ = ಭಗವಂತನು ವ್ಯಾಹೃತಿಪ್ರತಿಪಾದ್ಯನು ವ್ಯಾಹೃತಿವ್ಯಾಖ್ಯೇಯವಾದ ಪ್ರಣವ ಪ್ರತಿಪಾದ್ಯನಾದುದರಿಂದ. ಎಂದು ಅನುಮಾನವು. (17) (೧) ಈಶ್ವರಃ ಸರ್ವವೇದಾರ್ಥಃ ತದ್ವ್ಯಾಖ್ಯೇಯೋಂಕಾರಾರ್ಥತ್ವಾತ್ ಯೋಯದ್ವ್ಯಾಖ್ಯೇಯಾರ್ಥಃ ಸಃ ತದರ್ಥಃ ಯಥಾ. ಸಂಪ್ರತಿಪನ್ನಃ = ಶ್ರೀ ಹರಿಯು ಸರ್ವವೇದಪ್ರತಿಪಾದ್ಯನು ವೇದವ್ಯಾಖ್ಯೇಯವಾದ ಓಂಕಾರ ಪ್ರತಿಪಾದ್ಯನಾದುದರಿಂದ, ಯಾವುದು ಯಾವ ವ್ಯಾಖ್ಯೇಯದ ಅರ್ಥವೋ ಅದು ಅದರ ಅರ್ಥವು, ಸಮ್ಮತವಾದುದರಂತೆ. (೨) ಸರ್ವೋ ವೇದಃ ಈಶ್ವರಪರಃ ತತ್ಪರೋಂಕಾರವ್ಯಾಖ್ಯಾನತ್ವಾತ್=

ಸಮಸ್ತವೇದವು ಈಶ್ವರನನ್ನು ಪ್ರತಿಪಾದಿಸುತ್ತದೆ. ಈಶ್ವರನನ್ನು ಪ್ರತಿಪಾದಿಸುವ ಓಂಕಾರದ ವ್ಯಾಖ್ಯಾನವಾದುದರಿಂದ ಎಂದಾಗಲೀ ಸಾಕ್ಷಾತ್ತಾಗಿಯೇ ಅನುಮಾನವನ್ನು ಏತಕ್ಕೆ ಹೇಳುವುದಿಲ್ಲ? **"ತದ್ಯಥಾ ಸರ್ವಾಣಿ ಪರ್ಣಾನಿ ಶಂಕುನಾ ಸಂತೃಣ್ಣಾನ್ಯೇವಮೋಂಕಾರೇಣೈವ ಸರ್ವಾ ವಾಕ್ ಸಂತೃಣ್ಣಾ"** ಇತ್ಯಾದಿ ಶ್ರುತಿಗಳಿಂದ ಹೇತ್ವರ್ಥವನ್ನು ಸಮರ್ಥಿಸಲಿಕ್ಕೆ ಬರುವುದರಿಂದ ಹೀಗೆ ಪರಂಪರಾ ವ್ಯಾಖ್ಯಾನದಿಂದ ಪ್ರಯೋಜನವೇನು ಎಂದರೆ ಸತ್ಯವೇ. ಆದಾಗ್ಯೂ **"ಪ್ರಣವಾರ್ಥಾ ವ್ಯಾಹೃತಯಃ"** ಎಂಬುವ ವಾಕ್ಯಾಂತರದ ಬಲದಿಂದ ಸಮಸ್ತವಾಕ್ಯವೂ ಓಂಕಾರದ ವ್ಯಾಖ್ಯಾನವು ಸಾಕ್ಷಾತ್ತಾಗಿ ಅಲ್ಲ. ಪರಂಪರೆಯಾಗಿಯೇ ಎಂದು ತಿಳಿಸುವುದಕ್ಕಾಗಿ ಹೀಗೆ ವ್ಯಾಖ್ಯಾನವು. (18) ಈಶ್ವರನಲ್ಲಿ ಪ್ರಮಾಣವನ್ನು ಕೇಳಿದವನಿಗೆ ಓಂಕಾರ ಬ್ರಹ್ಮಶಬ್ದಗಳನ್ನೇ ಹೇಳಬಹುದಿತ್ತು. ಹಿಂದೆ ಹೇಳಿದ ರೀತಿಯಿಂದ ಸರ್ವವೇದವೂ ಪ್ರಮಾಣವೆಂದು ಬ್ರಹ್ಮನಲ್ಲಿ ಪ್ರಮಾಣವಾಗಿ ವೇದಾನುಮಾನದಿಂದ ಪ್ರಯೋಜನವೇನು? ಪದವು ಅಪ್ರಮಾಣವೆಂದು ಹೇಳಕೂಡದು. ಯೌಗಿಕ ಪದವು ಪ್ರಮಾಣವೆಂದು ಹೇಳಿಯದೆ, ಎಂದರೆ ಹೀಗೆ ಹೇಳಕೂಡದು. ಮೀಮಾಂಸಾನುಗ್ರಾಹ್ಯವಾದ ಪ್ರಮಾಣವನ್ನು ಕೇಳಿದ್ದು. ಓಂಕಾರಾದಿಗಳು ಮಾತ್ರ ಹಾಗೆ ವಿವಕ್ಷಿತವಾಗಲಿಲ್ಲ. ಸಮಸ್ತವೇದವೇ. (19) ಈಶ್ವರನು ಸರ್ವವೇದಾರ್ಥನಾದರೆ ಪ್ರಕೃತವೇನಾಯಿತೆಂದರೆ, ವಿಷಯಸಂಬಂಧವು ಕೂಡುವುದರಿಂದ ವಿಚಾರವನ್ನು ಮಾಡಬೇಕು, ಶಾಸ್ತ್ರವನ್ನೂ ಆರಂಭಿಸಬೇಕೆಂದು ಸಿದ್ಧವಾಯಿತು. ಎಂದಭಿಪ್ರಾಯದಿಂದ ಸಾಕಾಂಕ್ಷಿತವಾದ ವಾಕ್ಯಾಭಾಸವು ಪ್ರತಿಪಾದಕವಾಗುವುದಿಲ್ಲ. ಆದಕಾರಣ ಆಕಾಂಕ್ಷಿತವಾದ ಅಧ್ಯಾಹಾರವನ್ನು ಸೂಚಿಸುತ್ತಾ ಸೂತ್ರವಾಕ್ಯಾರ್ಥವನ್ನು ನಿರೂಪಿಸಿದರು. "ಜಿಜ್ಞಾಸ್ಯೋಽಯಂ ವಿಧೀಯತೇ" ಎಂದು. (20) ಹಾಗಾದರೆ ವೇದಗಳು ಈಶ್ವರನ ಜ್ಞಾನವನ್ನು ಹುಟ್ಟಿಸುವುದರಿಂದ ಈಶ್ವರನ ವಿಷಯಕಗಳಾಗಲಿ. ಶಾಸ್ತ್ರವಾದರೂ ವೇದಗಳು ಈಶ್ವರನನ್ನು ಪ್ರತಿಪಾದಿಸುತ್ತವೆ ಎನ್ನುವುದನ್ನನುಸರಿಸುವುದರಲ್ಲಿ ಉಪಯುಕ್ತವಾದ ನ್ಯಾಯವನ್ನು ಪ್ರತಿಪಾದಿಸುವುದು, ಈಶ್ವರನನ್ನು ಪ್ರತಿಪಾದಿಸುವುದೆಂದು ಹೇಗೆ ಹೇಳುವುದು? ಹೀಗೆ ಹೇಳಕೂಡದು. ಈಶ್ವರನನ್ನು ತಿಳಿಸಿಕೊಡತಕ್ಕ ವೇದಗಳಿಗೆ ಸಹಕಾರಿಭೂತವಾದುದು, ಮೀಮಾಂಸಾ. ಉಪಕಾರಕವಾದುದರಿಂದ ಮೀಮಾಂಸಾ ಎನ್ನುವುದು ವೇದವಿಷಯಕವಾಗುವುದು. ತದ್ದ್ವಾರಾ ಶಾಸ್ತ್ರವೂ ಬ್ರಹ್ಮವಿಷಯಕವಾಗುತ್ತದೆ. ಈಶ್ವರವಿಷಯದಲ್ಲಿ ವೇದಗಳೇ ಪ್ರಮಾಣಗಳಾಗಿದ್ದರೆ ಅವುಗಳಿಂದಲೇ ನಿಶ್ಚಿತನಾದಪ್ರಯುಕ್ತ ಮೀಮಾಂಸಾ ಏತಕ್ಕೆ ಎಂದು ಹೇಳಕೂಡದು. ಯುಕ್ತ್ಯಾಭಾಸ, ವಾಕ್ಯಾಭಾಸಗಳಿಂದುಂಟಾಗುವ ವಿಪ್ರತಿಪತ್ತಿರೂಪವಾದ ಪ್ರತಿಬಂಧಕದಿಂದ ವೇದಾರ್ಥ ನಿರ್ಣಯವಾಗದೆ ಇರಲು ಆ ಪ್ರತಿಬಂಧಕವನ್ನು ನಿವೃತ್ತಿಗೊಳಿಸುವುದಕ್ಕಾಗಿ ಮೀಮಾಂಸಾ ಆವಶ್ಯಕವೇ. ಆ ವಿಪ್ರತಿಪತ್ತಿಯಾವುದೆಂದರೆ— ವೇದಪ್ರಾಮಾಣ್ಯವನ್ನೇ ಅಂಗೀಕರಿಸದಿದ್ದವರು ಕೆಲವರು (ಬೌದ್ಧಾದಿಗಳು) ಈಶ್ವರನೇ ಇಲ್ಲವೆಂದು ತಿಳಿಯುವರು. ಇತರರು (ಮೀಮಾಂಸಕರು) ವೇದಪ್ರಾಮಾಣ್ಯವನ್ನಂಗೀಕರಿಸಿದರೂ ತದ್ವಾಚಕ ಪದಗಳು ಜೀವಾದಿಪರಗಳೆಂದು ಹೇಳುವವರಾಗಿ ಈಶ್ವರನೇ ಇಲ್ಲವೆನ್ನುವರು. ಇನ್ನು ಕೆಲವರು (ಮಾಯಾವಾದಿಗಳು) ಈಶ್ವರನು ಇರುತ್ತಾನೆ, ಪಾರಮಾರ್ಥಿಕವಾಗಿ ನಿರ್ಗುಣನೇ ಎನ್ನುತ್ತಾರೆ. ಬೇರೆ ಕೆಲವರು (ಸೇಶ್ವರಸಾಂಖ್ಯರು) ಸಗುಣನಾದಾಗ್ಯೂ ಜಗತ್ತಿಗೆ ಕಾರಣನಲ್ಲ, ಉದಾಸೀನನೇ ಎನ್ನುತ್ತಾರೆ. ಕೆಲವರು (ಪರಿಣಾಮ ವಾದಿಗಳು) ಉಪಾದಾನಕಾರಣನೆನ್ನುತ್ತಾರೆ. ಕೆಲವರು (ತಾರ್ಕಿಕರು) ನಿಮಿತ್ತಕಾರಣನಾದಾಗ್ಯೂ ಕೆಲವು ಗುಣಗಳುಳ್ಳವನು, ಗುಣಗಳಿಂದ ಭಿನ್ನನು ಎನ್ನುತ್ತಾರೆ. ಇತರರು (ಭಾಸ್ಕರರು) ಭಿನ್ನಾಭಿನ್ನನೆನ್ನುತ್ತಾರೆ. ಇವುಮೊದಲಾದ

ಅನೇಕ ವಿಪ್ರತಿಪತ್ತಿಗಳು ಇರುವಾಗ ತತ್ವಜ್ಞಾನವನ್ನು ಹುಟ್ಟಿಸುವ ವೇದದಿಂದಲೂ ತತ್ವಜ್ಞಾನವು ಹುಟ್ಟದಿರಲು ವಿಪ್ರತಿಪತ್ತಿಯನ್ನು ಪರಿಹರಿಸುವುದರಿಂದ ವೇದಕ್ಕೆ ಸಹಕಾರಿಯಾಗುವ ಜಿಜ್ಞಾಸಾ (ವಿಚಾರ)ವನ್ನು ಮಾಡಬೇಕು (21) ಸೂತ್ರದಲ್ಲಿ 'ಬ್ರಹ್ಮಣೋ ಜಿಜ್ಞಾಸಾ' ಬ್ರಹ್ಮ ಜಿಜ್ಞಾಸಾ ಎಂದು ಕರ್ಮಾರ್ಥದಲ್ಲಿ ಷಷ್ಠೀಸಮಾಸವು. ಅದನ್ನು ತೋರಿಸುವುದಕ್ಕಾಗಿ 'ಜಿಜ್ಞಾಸ್ಯಃ' ಎಂದು ಹೇಳಿರುವರು. ಇಲ್ಲವಾದರೆ 'ಜಿಜ್ಞಾಸಾಽಸ್ಯ ವಿಧೀಯತೇ' ಎಂದು ಹೇಳುತ್ತಿದ್ದರು. ಜಿಜ್ಞಾಸಾ ಎನ್ನುವುದು ಕರ್ಮವನ್ನಪೇಕ್ಷಿಸಿಕೊಂಡಿರುವುದು. ಅಥವಾ ಬ್ರಹ್ಮನು ಕರ್ಮನಾದುದರಿಂದ ಅಪ್ರಧಾನನೆನ್ನುವ ಸಂಶಯವನ್ನು ನಿವರ್ತಿಗೊಳಿಸುವುದಕ್ಕಾಗಿ 'ಜಿಜ್ಞಾಸ್ಯಃ' ಎಂದು ಕರ್ಮಕ್ಕೆ ಪ್ರಾಧಾನ್ಯವನ್ನು ಸೂಚಿಸಿದರು. ಜ್ಞಾನಕ್ಕೆ ವಿಧಾನವಾದರೆ ಬ್ರಹ್ಮನಿಗೆ ಅಪ್ರಾಧಾನ್ಯವು ಬರುವುದು. ಆತನ ಜ್ಞಾನವನ್ನುದ್ದೇಶಿಸಿ ಜಿಜ್ಞಾಸಾವನ್ನು ವಿಧಾನಮಾಡಿದರೆ ಪ್ರಾಧಾನ್ಯವೇ ಲಬ್ಧವಾಗುವುದು. (22) 'ವಿಧೀಯತೇ' ಎನ್ನುವುದರಿಂದ 'ಕರ್ತವ್ಯಾ' ಎನ್ನುವ ಪದದ ಅಧ್ಯಾಹಾರವನ್ನು ಸೂಚಿಸಿದರು.) ವಾಚಸ್ಪತಿಯು ಶಂಕಿಸುವನು. "ಅಸ್ತಿರ್ಭವಂತೀ ಪರಃ ಅಪ್ರಯುಜ್ಯಮಾನೋಽಪ್ಯಸ್ತಿ" ಎಂಬುವ ನ್ಯಾಯದಿಂದ 'ಅಸ್ತಿ' 'ಭವತಿ' ಎನ್ನುವುದನ್ನು ಪ್ರಯೋಗಿಸದಿದ್ದರೂ ಸ್ವತ ಏವ ಸಿದ್ಧವಾಗಿದೆ. ಹೀಗೆ ಹೇಳಕೂಡದು. ಹಾಗೆ ಅಂಗೀಕರಿಸಿದರೆ ಅನುವಾದವೆಂದು ಆಗಬೇಕಾಗುವುದು. ಈ ವಿಷಯದಲ್ಲಿ ಕೆಲವರು ಹೀಗೆ ಹೇಳುವರು.— ಬ್ರಹ್ಮವಿಚಾರವು ಸಿದ್ಧವೇ ಆಗಿರುತ್ತದೆ. "ಅಥಾತೋ ಧರ್ಮಜಿಜ್ಞಾಸಾ" ಎಂದು ಸಮಸ್ತ ವೇದವಿಚಾರವೂ ಹೇಳಲ್ಪಟ್ಟಿದೆ. ಬ್ರಹ್ಮಜ್ಞಾನವು ಚೋದನಾರೂಪವಾಗಿ ಧರ್ಮಸ್ವರೂಪವಾದುದರಿಂದ ಅಭ್ಯಧಿಕಾಶಂಕೆಯು ಇರುವುದಿಲ್ಲ.

ಕೆಲವರು ಅಭ್ಯಧಿಕಾಶಂಕೆಯನ್ನು ತೋರಿಸುತ್ತಾ ಬ್ರಹ್ಮವಿಚಾರವನ್ನು ಪ್ರತ್ಯೇಕ ಆರಂಭಿಸುತ್ತಾರೆ. ಇತರರು (ಮಾಯಾವಾದಿಗಳು) ಕಾರ್ಯನಿಷ್ಠವಾದ ವೇದಭಾಗವೇ ವಿಚಾರ್ಯವಾಗಿ ಪ್ರಕ್ರಾಂತವೂ, ವಿಚಾರಿತವೂ ಆಗಿದೆ. ವಸ್ತುತತ್ವನಿಷ್ಠವಲ್ಲ, ಎಂದಾಶಂಕಿಸಿದರೆ— ವಸ್ತುತತ್ವನಿಷ್ಠವಾದ ವೇದಭಾಗವನ್ನು ವಿಚಾರಮಾಡುವುದಕ್ಕಾಗಿ ಇದನ್ನಾರಂಭಿಸುವುದೆನ್ನುತ್ತಾರೆ. ಈ ರೀತಿಯಾಗಿ ಗತಾರ್ಥವಾಗಿದೆ ಎನ್ನುವ ಶಂಕೆಯೂ, ಅದರ ಸಮಾಧಾನವೂ ಕೂಡುವುದಿಲ್ಲ. ಸಮಸ್ತ ವೇದಗಳೂ ಈಶ್ವರನನ್ನೇ ಪ್ರತಿಪಾದಿಸುವುದರಿಂದ ಸರ್ವವೇದಾರ್ಥವೂ ಇಲ್ಲಿಯೇ (ಈ ಶಾಸ್ತ್ರದಲ್ಲಿಯೇ) ವಿಚಾರ್ಯವಾಗಿದೆ. ಧರ್ಮಜಿಜ್ಞಾಸಾ ಶಾಸ್ತ್ರವಾದರೂ ವೇದೈಕದೇಶದ ಅಮುಖ್ಯಾರ್ಥವಾದ ಧರ್ಮವನ್ನು ವಿಚಾರಮಾಡುವುದಕ್ಕಾಗಿ ಪ್ರವೃತ್ತವಾದುದೆನ್ನುವ ಅಭಿಪ್ರಾಯದಿಂದ "ಸ ಏವ ಭರ್ಗಶಬ್ದಾರ್ಥಃ" ಇತ್ಯಾದಿಗಳನ್ನು ಹೇಳಿರುವರು. 'ಸರ್ವವೇದಾರ್ಥಃ' ಎನ್ನುವುದರಿಂದ ಗತಾರ್ಥವೆನ್ನುವ ಶಂಕಾನಿರಾಸವೂ 'ಸ ಏವ' ಆ ಬ್ರಹ್ಮನೇ, ಕಾರ್ಯಕ್ಕೆ ಅಂಗವಾಗಿ ಅಲ್ಲ, ಎನ್ನುವ ಒಂದನೇ ಸಮಾಧಾನವೂ ('ಉಪಾಸೀತ' ಇತ್ಯಾದಿ ಲಿಙಾದಿಗಳಿಂದ ಹೇಳಲ್ಪಟ್ಟ ಕಾರ್ಯಶೇಷನಾದ ಬ್ರಹ್ಮನಲ್ಲಿ ಪ್ರಾಮಾಣ್ಯವು ಕೂಡುವುದರಿಂದ ಬ್ರಹ್ಮನ ವಿಚಾರವನ್ನು ಮಾಡಬೇಕು ಎನ್ನುವ ಸಮಾಧಾನವೂ) ಎರಡನೇ ಸಮಾಧಾನವೂ (ಕಾರ್ಯನಿಷ್ಠವೇ ಇತ್ಯಾದಿಗಳಿಂದ ಹೇಳಲ್ಪಟ್ಟದ್ದೂ) ನಿರಸ್ತವಾಯಿತು. (23) ಆ ಪರಬ್ರಹ್ಮನು ಸರ್ವವೇದಾರ್ಥನೆನ್ನುವುದನ್ನುಪಪಾದಿಸುವುದಕ್ಕಾಗಿ 'ಓತತ್ಸವಾಚೀ' ಅಥವಾ 'ಸ ಏವ ಭರ್ಗಶಬ್ದಾರ್ಥಃ' ಇತ್ಯಾದಿ ಪೂರ್ವವಾಕ್ಯವು. (24) 'ಸ ಏವ ಸರ್ವವೇದಾರ್ಥಃ' ಎನ್ನುವುದರಿಂದ ಮಾಡಿದ ಗತಾರ್ಥನೆನ್ನುವ ಶಂಕಾ ಸಮಾಧಾನ ನಿರಾಸಕ್ಕೆ ಜಿಜ್ಞಾಸಾ ವಿಧಿರೂಪವಾದ ಫಲವು 'ಜಿಜ್ಞಾಸ್ಯೋಽಯಂ' ಎನ್ನುವುದರಿಂದ ನಿರ್ದೇಶಿಸಲ್ಪಡುತ್ತದೆ. (25)(ತಥಾ ಚ "ಮಂಗಲಾಪ್ರವಣೋ ಯುಕ್ತ

**ವಿಶೇಷದ್ಯೋತನಂ ತಥಾ । ಮೀಮಾಂಸಾನುಗ್ರಾಹ್ಯಮಾನಕೀರ್ತನಂ ಪೂರ್ವತಂತ್ರತಃ। ಅಗತಾರ್ಥತಾ ಸೂಚನಂ ಚೇತ್ಯೇವಂ ಪಂಚಪ್ರಯೋಜನಃ । ಸೌತ್ರಸ್ಪ್ರಾಥಮಿಕೋಂಕಾರಃ ಶ್ರುತಿಸಿದ್ಧೋಽವಧಾರಿತಃ "** ॥ ೧ ಮಂಗಲ ೨ ಅಸ್ರವಣ (ಸುರಿದುಹೋಗದಿರುವುದು, ನಿಷ್ಫಲವಾಗದಿರುವುದು) ೩ ಯುಕ್ತಿವಿಶೇಷವನ್ನು ತೋರಿಸುವುದು, ೪ ಮೀಮಾಂಸಾನುಗ್ರಾಹ್ಯಪ್ರಮಾಣವನ್ನು ಹೇಳುವುದು, ೫ ಪೂರ್ವ ಮೀಮಾಂಸಾದಿಂದ ಗತಾರ್ಥವಾಗಲಿಲ್ಲ ಎಂದು ಸೂಚಿಸುವುದು ಹೀಗೆ ಸೂತ್ರದಲ್ಲಿದ್ದ ಪ್ರಥಮೋಂಕಾರಕ್ಕೆ ಐದು ಪ್ರಯೋಜನಗಳಿವೆ ಎಂದು ಸಿದ್ಧವಾಗಿದೆ. ॥ ೯ ॥ ೧೦ ॥

**ಸ. ರ. ವಿ.** ಹೀಗೆ ಪ್ರತಿಪಾದ್ಯವಾದ ಸ್ವರೂಪವನ್ನು ಹೇಳಿ ಮೋಕ್ಷವನ್ನು ಬಯಸುವ ಅಧಿಕಾರಿಗೆ ಜಿಜ್ಞಾಸಾ ಪ್ರಯೋಜನವು ಮಹತ್ತಾದ ಆಯಾಸದಿಂದಲೇ ಸಾಧ್ಯವೆಂದು ತಿಳಿದರೇನೇ ಪ್ರವೃತ್ತಿಗೆ ಕಾರಣವಾಗಿರುವ ಪ್ರಯುಕ್ತ ಪ್ರಮಾಣ ಪೂರ್ವಕವಾಗಿ ಪ್ರಯೋಜನವನ್ನು ಹೇಳುತ್ತಾರೆ —

**ನ್ಯಾಯಸುಧಾ** – ಹೀಗೆ 'ಓಂ ಬ್ರಹ್ಮ' ಪದಗಳಿಂದಲೂ, ಜೀವಜಡಗಳಿಂದಲೂ ವಿಲಕ್ಷಣವಾದ ವಿಷಯವು ಸಿದ್ಧಿಯಾಗುತ್ತದೆಂದೂ, ಅನುಗ್ರಾಹ್ಯಪ್ರಮಾಣವು ಸೂಚಿತವಾಗುತ್ತದೆಂದೂ ಈ ಶಾಸ್ತ್ರವು ಬೇರೆ ಶಾಸ್ತ್ರಗಳಿಂದ ಗತಾರ್ಥವಾಗಲಿಲ್ಲವೆಂದೂ ಉಪಪಾದಿಸಿ 'ಅಥ' ಎನ್ನುವ ಪದಕ್ಕೆ ಭಾಷ್ಯದಲ್ಲಿಯೇ ಸಂಕ್ಷೇಪ ವಿಸ್ತರವಾಗಿ ಅರ್ಥವನ್ನು ಹೇಳಿದುದರಿಂದ ಇಲ್ಲಿ ಹೇಳಬೇಕಾದ ವಿಶೇಷಾಂಶವಿಲ್ಲದಿರುವುದರಿಂದಲೂ, ಉಪಾಸನಾ ಪಾದದ ಬುಡದಲ್ಲಿ ಸಂಕ್ಷೇಪವಾಗಿ ವ್ಯಾಖ್ಯಾನ ಮಾಡುವುದರಿಂದಲೂ ಪ್ರಕೃತ 'ಅತಃ' ಎನ್ನುವ ಪದವನ್ನೇ ವ್ಯಾಖ್ಯಾನಮಾಡುವರು.

(ಅತಃ ಅಂದರೆ ಜ್ಞಾನಪ್ರಸಾದ—ದ್ವಾರಾ ಮುಕ್ತಿರೂಪ ಫಲವಿರುವುದರಿಂದಲೂ ಬಂಧವು ಸತ್ಯವಾಗಿರುವುದರಿಂದಲೂ, ವೇದವು ಸಿದ್ಧಾರ್ಥವನ್ನು ಹೇಳುವುದರಿಂದಲೂ, ವೇದಕ್ಕೆ ಪ್ರಾಮಾಣ್ಯವಿದ್ದುದರಿಂದಲೂ, ವೇದವು ಯೋಗ್ಯೇತರಾನ್ವಿತಸ್ವಾರ್ಥವನ್ನು ಹೇಳುವುದರಿಂದಲೂ ಹೀಗೆ ಐದು ವಿಧವಾಗಿ ಆಚಾರ್ಯರು "ಜ್ಞಾನೀ ಪ್ರಿಯತಮೋಽತೋ ಮೇ" ಎನ್ನುವುದನ್ನಾರಂಭಿಸಿ "ಸ್ವಯಂ ಭಗವತಾ ವಿಷ್ಣುಃ" ಎನ್ನುವ ತನಕ 'ಅತಃ' ಶಬ್ದವನ್ನು ವ್ಯಾಖ್ಯಾನಮಾಡುವರು. ಬ್ರಹ್ಮ ವಿಚಾರವು ನಿಷ್ಪ್ರಯೋಜನವೆಂದು ಶಂಕಿಸಿದ್ದನ್ನು ತಿರಸ್ಕರಿಸುವುದಕ್ಕಾಗಿ 'ಅತಃ' ಶಬ್ದವನ್ನು ವ್ಯಾಖ್ಯಾನಮಾಡುತ್ತಾರೆ.

**ಮೂ ॥ ಜ್ಞಾನೀ ಪ್ರಿಯತಮೋಽತೋ ಮೇ ತಂ ವಿದ್ವಾನೇವ ಚಾಮೃತಃ ।**
**ವೃಣುತೇ ಯಂ ತೇನ ಲಭ್ಯ ಇತ್ಯಾದ್ಯುಕ್ತಿಬಲೇನ ಹಿ ॥**
**ಜಿಜ್ಞಾಸೋಕ್ತ ಜ್ಞಾನಜಾತ್ತತ್ಪ್ರಸಾದಾದೇವ ಮುಚ್ಯತೇ ॥ ೧೧ ॥ ೧೨ ॥**

ಅ ॥ ಜ್ಞಾನೀ=ಜ್ಞಾನಿಯು, ಪ್ರಿಯತಮಃ=ಮುಖ್ಯ ಪ್ರಿಯನು, ಅತಃ=ಆದುದರಿಂದ, ಮೇ=ನನ್ನ, (ಜ್ಞಾನೇನ=ಜ್ಞಾನದಿಂದ, ಅಸೌ=ಇವನು, ಮಾಂ=ನನ್ನನ್ನು, ಬಿಭರ್ತಿ=ಧರಿಸುತ್ತಾನೆ.) ತಂ=ಆ ಹರಿಯನ್ನು. ವಿದ್ವಾನೇವ ಚ=ತಿಳಿದವನೇ, ಅಮೃತಃ=ಮುಕ್ತನಾಗುತ್ತಾನೆ. (ಶ್ರೀ ಹರಿಯು) ಯಂ=ಯಾರನ್ನು, ವೃಣುತೇ=ಭಕ್ತನನ್ನಾಗಿ ವರಿಸುವನೋ, ತೇನ=ಆತನಿಂದಲೇ ಲಭ್ಯಃ=ಹೊಂದಲರ್ಹನು. ಇತ್ಯಾದ್ಯುಕ್ತಿಬಲೇನ ಹಿ="ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯಃ" ಇದುಮೊದಲಾದ ವಚನಗಳ ಸಾಮರ್ಥ್ಯದಿಂದಲೇ, ಜಿಜ್ಞಾಸೋತ್ಥ

ಜ್ಞಾನಜಾತ್=ವಿಚಾರದಿಂದುಂಟಾಗತಕ್ಕ ಜ್ಞಾನ, ಆ ಜ್ಞಾನದಿಂದ ಹುಟ್ಟತಕ್ಕ, ತತ್ಪ್ರಸಾದಾದೇವ= ಆ ನಾರಾಯಣನ ಪರಮಾನುಗ್ರಹರೂಪವಾದ ಪ್ರಸಾದದಿಂದಲೇ, ಮುಚ್ಯತೇ=ಸಂಸಾರದಿಂದ ಮುಕ್ತನಾಗುತ್ತಾನೆ.

ತಾ || ಸ. ರ. ವಿ- "**ಜ್ಞಾನೀ ಪ್ರಿಯತಮೋಽತೋ ಮೇ**" ಎನ್ನುವ ಭಗವದ್ವಾಕ್ಯದಿಂದಲೂ "**ತಮೇವಂ ವಿದ್ವಾನಮೃತ ಇಹ ಭವತಿ**" ಇದುಮೊದಲಾದ ಶ್ರುತಿಗಳ ಸಾಮರ್ಥ್ಯದಿಂದಲೂ ಜಿಜ್ಞಾಸಾ (ವಿಚಾರ)ದಿಂದ ಜ್ಞಾನವು ಹುಟ್ಟುತ್ತದೆ, ಜ್ಞಾನದಿಂದಲೇ ವಿಷ್ಣುವಿನ ಪ್ರಸಾದವು, ಅದರಿಂದಲೇ ಜ್ಞಾನಿಗೆ ಮೋಕ್ಷವು ಲಭಿಸುವುದು.

**ನ. ಚ. ವಿ.**- (1) "**ಜ್ಞಾನೀ ಪ್ರಿಯತಮೋಽತೋ ಮೇ ಜ್ಞಾನೇನಾಸೌ ಬಿಭರ್ತಿ ಮಾಂ**" ಎಂಬುವ ಭಾಗವತ ವಾಕ್ಯವು, ಜ್ಞಾನವು ಪ್ರಸಾದಕ್ಕೆ ಸಾಧನವೆನ್ನುವಲ್ಲಿ ಪ್ರಮಾಣವು. (2) "**ತಮೇವಂ ವಿದ್ವಾನಮೃತ ಇಹ ಭವತಿ**" ಎನ್ನುವ ಶ್ರುತಿಯು ಜ್ಞಾನವು ಪ್ರಸಾದ ದ್ವಾರಾ ಮೋಕ್ಷಸಾಧನವೆನ್ನುವಲ್ಲಿ ಪ್ರಮಾಣವು. (3) "**ಯಮೇವೈಷ ವೃಣುತೇ ತೇನ ಲಭ್ಯಃ**" ಎನ್ನುವುದು ಪ್ರಸಾದವು ಮೋಕ್ಷಕ್ಕೆ ಸಾಧನವೆನ್ನುವಲ್ಲಿ ಪ್ರಮಾಣವು. (4) ಆದಿಶಬ್ದದಿಂದ "**ಆತ್ಮಾ ವಾ ಅರೇ ದ್ರಷ್ಟವ್ಯಃ**" ಎನ್ನುವುದು ಜಿಜ್ಞಾಸೆಯು ಜ್ಞಾನಕ್ಕೆ ಸಾಧನವೆನ್ನುವಲ್ಲಿ ಪ್ರಮಾಣವು. (5) ಇಂತಹ ಪ್ರಸಾದದಿಂದಲೇ ಮುಕ್ತನಾಗುವುದರಿಂದ ಬ್ರಹ್ಮಜಿಜ್ಞಾಸಾ ಮಾಡತಕ್ಕದ್ದು.

**ನ್ಯಾಯಸುಧಾ**— (1) "**ಜ್ಞಾನೀ ಪ್ರಿಯತಮೋಽತೋ ಮೇ**" ಎನ್ನುವುದರಿಂದ "**ಜ್ಞಾನೀ ಪ್ರಿಯತಮೋಽತೋ ಮೇ ಜ್ಞಾನೇನಾಸೌ ಬಿಭರ್ತಿ ಮಾಂ**" ಎಂಬುವ ಭಾಗವತ ವಾಕ್ಯವೂ "**ತಂ ವಿದ್ವಾನ್**" ಎನ್ನುವುದರಿಂದ "**ತಮೇವಂ ವಿದ್ವಾನಮೃತ ಇಹ ಭವತಿ**" ಎನ್ನುವ ವಾಕ್ಯವೂ 'ಏವ' ಶಬ್ದದಿಂದ "**ನಾನ್ಯಃ ಪಂಥಾ ಅಯನಾಯ ವಿದ್ಯತೇ**" ಎಂಬ ಉತ್ತರವಾಕ್ಯವೂ, "**ವೃಣುತೇ ಯಂ ತೇನ ಲಭ್ಯಃ**" ಎನ್ನುವುದರಿಂದ "**ಯಮೇವೈಷ ವೃಣುತೇ**" ಎಂಬ ವಾಕ್ಯವೂ ಆದಿಪದದಿಂದ "**ಆತ್ಮಾ ವಾ ಅರೇ ದ್ರಷ್ಟವ್ಯಃ**" ಇತ್ಯಾದಿ ವಾಕ್ಯವೂ ಸಂಗ್ರಹಿಸಲ್ಪಟ್ಟಿತು. (2) ಯದ್ಯಪಿ "**ತಮೇವಂ ವಿದ್ವಾನ್**" ಎನ್ನುವಲ್ಲಿ ಪರಮಾತ್ಮನ ಪ್ರಸಾದವು ಶ್ರುತವಾಗಲಿಲ್ಲ. ಆದಾಗ್ಯೂ "**ಯಮೇವೈಷ ವೃಣುತೇ**" ಎಂಬ ವಾಕ್ಯವನ್ನನುಸರಿಸಿ ಅಲ್ಲಿಯೂ ಇಟ್ಟುಕೊಳ್ಳಬೇಕು. (3) "**ತಮೇವಂ ವಿದ್ವಾನ್**" ಎನ್ನುವಲ್ಲಿ ಜ್ಞಾನದಿಂದ ಜ್ಞಾನಜನ್ಯಪ್ರಸಾದವನ್ನು ಲಕ್ಷಣಯಾ ಇಟ್ಟುಕೊಳ್ಳತಕ್ಕದ್ದು. ಮುಮುಕ್ಷುವಿನಲ್ಲಿರತಕ್ಕ ಜ್ಞಾನವೇ ಮುಕ್ತಿಸಾಧನವು. ಕರ್ಮವಲ್ಲ, ಎನ್ನುವ ಅವಧಾರಣಕ್ಕಾಗಿ ಪ್ರಸಾದವು ಸಾಕ್ಷಾತ್ತಾಗಿ ಹೇಳಲ್ಪಡಲಿಲ್ಲ. (4) '**ಯಮೇವೈಷ ವೃಣುತೇ**' ಎನ್ನುವಲ್ಲಿಯೂ ಪ್ರಸಾದವು ಪ್ರತೀತವಾಗುವುದಿಲ್ಲವೆಂದರೆ ವರಣವೆಂದರೆ ಪ್ರಸಾದವೇ. ಪ್ರಸಾದವೆಂದರೆ ಇಚ್ಛಾವಿಶೇಷವು ಅಥವಾ ಗುಣಾಂತರವು. (5) "**ಅಪಾಮ ಸೋಮಮಮೃತಾ ಅಭೂಮ ಅಗನ್ಮ ಜ್ಯೋತಿರವಿದಾಮ ದೇವಾನ್**" ಸೋಮವನ್ನು ಕುಡಿದೆವು ಆದಕಾರಣ ಮುಕ್ತರಾದೆವು, ಇದು ಮೊದಲಾದ ಶ್ರುತಿಗಳಿಗೆ 'ಆಪಾತತಃ' ಪ್ರತೀತವಾದ ಅರ್ಥವನ್ನು ಬಿಟ್ಟು ಬೇರೆ ರೀತಿಯಾಗಿ ಅರ್ಥ ಮಾಡಬೇಕು. ಹೇಗೆಂದರೆ, ಯಾವ ಕಾರಣದಿಂದ ಸೋಮರಸವನ್ನು ಪಾನಮಾಡಿದೆವೋ, ಸೋಮಪಾನಾದಿರೂಪಕರ್ಮದಿಂದ ಅಂತಃಕರಣ ಶುದ್ಧಿಯಾಗಿ ವಿಷ್ಣ್ವಾದಿ ದೇವತೆಗಳನ್ನು ತಾರತಮ್ಯ ಪೂರ್ವಕವಾಗಿ ತಿಳಿದಿರುವೆವೋ, ಆದಕಾರಣ ಬ್ರಹ್ಮನನ್ನು ಹೊಂದಿದೆವು, ಆದ ಪ್ರಯುಕ್ತ ಮುಕ್ತರಾದೆವು. (6) ಈಶ್ವರ ಪ್ರಸಾದವು ಈಶ್ವರನ ಜ್ಞಾನದಿಂದಲೇ ಆಗುತ್ತದೆ. ಕರ್ಮಾದಿಗಳಿಂದಾಗುವುದಿಲ್ಲ, ಎಂದು "**ಜ್ಞಾನೀ ಪ್ರಿಯತಮಃ**" "**ತಮೇವಂ ವಿದ್ವಾನ್**"

ಎಂಬುವ ವಚನ ಬಲದಿಂದ ತಿಳಿಯುತ್ತದೆ. ಈಶ್ವರನ ಜ್ಞಾನವಾದರೂ ಆತನ ಜಿಜ್ಞಾಸಾ (ವಿಚಾರ) ದಿಂದಲೇ ಆಗುವುದು. ಬೇರೆ ಯಾವುದರಿಂದಲೂ ಆಗಲಾರದು, ಎಂದು "ಆತ್ಮಾ ವಾ ಅರೇ ದ್ರಷ್ಟವ್ಯಃ" ಎನ್ನುವಲ್ಲಿ ಪರಮಾತ್ಮ ದರ್ಶನಕ್ಕಾಗಿ ಶ್ರವಣಾದಿಗಳನ್ನು ವಿಧಿಸತಕ್ಕ ವಚನಗಳಿಂದ ಪ್ರತೀತವಾಗುತ್ತದೆ. ಕರ್ಮಗಳು ಅಂತಃಕರಣಕ್ಕೆ ಶುದ್ಧಿಯನ್ನು ಹುಟ್ಟಿಸುತ್ತಾ ಜ್ಞಾನಕ್ಕೆ ಅಂಗಗಳಾಗುತ್ತವೆ, ಹೀಗೆ ಅಂಗೀಕರಿಸಿ ಆ ವಾಕ್ಯವು ಸಾರ್ಥಕವಾಗುವುದು. ಆದ ಕಾರಣ ಬ್ರಹ್ಮ ಜಿಜ್ಞಾಸೆಯನ್ನು ಮಾಡಲೇಬೇಕು. (7) ಯದ್ಯಪಿ ಜಿಜ್ಞಾಸೆಗೆ ಸ್ವರ್ಗಾದಿ ರೂಪವಾದ ಅಭ್ಯುದಯವು ಪ್ರಯೋಜನವಾಗುವುದಿಲ್ಲ. ಆದಾಗ್ಯೂ ಮೋಕ್ಷವು ಪ್ರಯೋಜನ ವಾಗುವುದು. ಅದು ಬೇರೆ ಯಾವುದರಿಂದಲೂ ಸಿಗಲಾರದು. ಮೋಕ್ಷಕ್ಕೆ ಸಾಧನನು "ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ" ಇತ್ಯಾದಿ ವಚನದಿಂದ ಸಾಕ್ಷಾತ್ ಭಗವಂತನೇ. (8) "ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ" ಯಾವ ಶ್ರೀ ಹರಿಯ ಪ್ರಸಾದದಿಂದಲೇ ದುಃಖಸ್ವರೂಪ ವಾದ ಈ ಸಂಸಾರದಿಂದ ಮುಕ್ತನಾಗುತ್ತಾನೆ. ಬೇರೆ ಯಾವುದರಿಂದಲೂ ಮುಕ್ತನಾಗು ವುದಿಲ್ಲ. ಇತ್ಯಾದಿ ಶ್ರುತಿಗಳಿಂದ ಮುಕ್ತಿಯನ್ನು ಇಚ್ಛಿಸುವವನು ಶ್ರೀ ಹರಿಯ ಪ್ರಸಾದವನ್ನು ಹೊಂದಬೇಕು. (9) ಮೋಚಕವಾದ ಈಶ್ವರ ಪ್ರಸಾದವು ಈಶ್ವರನ ಭಕ್ತಿಯಿಂದಲೇ ಸಾಧ್ಯವು. "ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನ ಚಿತ್" ಇತ್ಯಾದಿ ವಾಕ್ಯವು ಶ್ರೀ ಹರಿಯು ಭಕ್ತಿಯಿಂದಲೇ ಸಂತೋಷವನ್ನು ಹೊಂದುತ್ತಾನೆ. ಬೇರೆ ಯಾವುದರಿಂದಲೂ ಸಂತುಷ್ಟನಾಗಲಾರನು. ಹೀಗೆ ಸಾರುತ್ತಿದೆ. (10) ಸ್ವರ್ಗಾದಿಗಳಿಗೆ ಕಾರಣವಾದ ಪ್ರಸಾದ ಮಾತ್ರ ಕರ್ಮಾದಿ ಸಾಧ್ಯವು "ಕರ್ಮಣಾ ತ್ವಧಮಃ ಪ್ರೋಕ್ತಃ ಪ್ರಸಾದಃ ಶ್ರವಣಾದಿಭಿಃ। ಮಧ್ಯಮೋ ಜ್ಞಾನಸಂಪತ್ಯಾ ಪ್ರಸಾದಸ್ತೂತ್ತಮೋ ಮತಃ ॥" ಕರ್ಮದಿಂದ ಅಧಮ ಪ್ರಸಾದವೂ, ಶ್ರವಣಾದಿಗಳಿಂದ ಮಧ್ಯಮಪ್ರಸಾದವೂ, ಜ್ಞಾನದಿಂದ ಉತ್ತಮ ಪ್ರಸಾದವೂ ಸಿಗುತ್ತದೆ, ಇತ್ಯಾದಿ ಸ್ಮೃತಿಗಳು. (11) ಪರಮೇಶ್ವರನ ಭಕ್ತಿಯೆಂದರೆ— "ಮಾಹಾತ್ಮ್ಯ ಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಽಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ ॥" ಎಂದು ಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೧ ಶ್ಲೋಕ ೮೬। "ನಿರವಧಿಕಾನಂತಾನವದ್ಯ ಕಲ್ಯಾಣಗುಣತ್ವಜ್ಞಾನ ಪೂರ್ವಕಃ ಸ್ವಾತ್ಮಾತ್ಮೀಯ ಸಮಸ್ತವಸ್ತುಭ್ಯೋಽನೇಕ ಗುಣಾಧಿಕೋಽಂತರಾಯ ಸಹಸ್ರೇಣಾಪ್ಯಪ್ರತಿ ಬದ್ಧೋ ನಿರಂತರ ಪ್ರೇಮ ಪ್ರವಾಹಃ ॥" ಅವಧಿಯಿಲ್ಲದಿರುವವುಗಳು ದೋಷಲೇಶರಹಿತ ಗಳೂ ಆದ ಅನಂತಾನಂತ ಶುಭಗುಣಗಳಿವೆ ಎಂಬುವ ಜ್ಞಾನಪೂರ್ವಕವಾಗಿ ತನ್ನಿಂದಲೂ ತನ್ನದಾದ ಸಮಸ್ತ ವಸ್ತುಗಳಿಂದಲೂ ಹೆಚ್ಚು ಗುಣಗಳಿದ್ದ ಪ್ರಯುಕ್ತ ಅಧಿಕವಾಗಿಯೂ ಸಾವಿರಾರು ವಿಘ್ನಗಳಿಂದಲೂ ಪ್ರತಿಬಂಧಿಸಲ್ಪಡದಿರುವುದಾಗಿಯೂ ಇರುವ ನಿರಂತರ ಪ್ರೇಮ ಪ್ರವಾಹವು. ಇಂತಹ ಪ್ರೇಮ ಪ್ರವಾಹವನ್ನು ಆಶ್ರಯಿಸಿಯೇ "ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ" "ಯಾ ನಿಶಾ ಸರ್ವ ಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ। ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥" ಇತ್ಯಾದಿ ಶ್ರುತಿಸ್ಮೃತಿಗಳು ಪ್ರವೃತ್ತಗಳಾಗುತ್ತವೆ. (12) ಮುಕ್ತಿ ಕಾರಣವಾದ ಪ್ರಸಾದವು ಭಕ್ತಿಯಿಂದಲೇ ಸಾಧ್ಯವಾಗುವುದರಿಂದ ಜಿಜ್ಞಾಸೆಯು ಏತಕ್ಕೆಂದರೆ— ಇಂತಹ ಭಕ್ತಿಯು ಆತನ ಸಾಕ್ಷಾತ್ಕಾರವಿಲ್ಲದೆ ಕೂಡಲಾರದು. ಅವ್ಯಕ್ತ ಸ್ವಭಾವನಾದ ಭಗವಂತನು ಸಾವಿರಾರು ಪ್ರಯತ್ನಗಳಿಂದಲೂ ಆತನ ಅನುಗ್ರಹವಿಲ್ಲದೆ ಸಾಕ್ಷಾತ್ಕಂಸಲಿಕ್ಕೆ ಶಕ್ಯನಾಗಲಾರನು. ಪ್ರಸನ್ನ

ನಾದ ಶ್ರೀ ಹರಿಯು ಅನಂತ ಅಚಿಂತ್ಯ ಶಕ್ತಿಗಳಿದ್ದುದರಿಂದ ತನ್ನನ್ನು ತೋರಿಸುತ್ತಾನೆ. ಅಂತಹ ಭಗವಂತನ ಸ್ವಯೋಗ್ಯಗುಣವುಳ್ಳ, ನಿರ್ದೋಷವಾದ ಬಿಂಬರೂಪವನ್ನು ಎಡೆಬಿಡದೆ ಆದರದಿಂದ ವಿಷಯಗಳಲ್ಲಿ ವಿರಕ್ತಿ ಆತನ ಭಕ್ತಿಪೂರ್ವಕವಾಗಿ ಚೆನ್ನಾಗಿ ಬಹುಕಾಲದಲ್ಲಿ ಧ್ಯಾನಿಸುತ್ತಿರಬೇಕು. ಹಾಗೆ ಧ್ಯಾನಿಸದೆ ದರ್ಶನಕ್ಕೆ ಸಾಧನವಾದ ಅನುಗ್ರಹವು ಸಿಗಲಾರದು. ನಿದಿಧ್ಯಾಸನವು ವಾಕ್ಯಾರ್ಥಗ್ರಹಣ ರೂಪವಾದ ಶ್ರವಣಮಾಡಿದರೂ ಮನನರೂಪವಾದ ವಿಚಾರ ಮಾಡದೆ ಕೂಡಲಾರದು. ಏಕೆಂದರೆ— ವಿಪರ್ಯಯಗಳು ಸುಸ್ಥಗಳೇ ಆಗಿವೆ ಅವುಗಳಿದ್ದರೆ ಅದರ ನೈರಂತರ್ಯಾದಿಗಳು ಕೂಡಲಾರವು. ಆದ ಪ್ರಯುಕ್ತ ಜಿಜ್ಞಾಸೆಯು ನಿದಿಧ್ಯಾಸನ, ಪರಮೇಶ್ವರಾನುಗ್ರಹ, ಆತನ ಸಾಕ್ಷಾತ್ಕಾರ, ಪರಮ ಭಕ್ತಿ, ಪರಮಾನುಗ್ರಹವಾಗಿ ಮುಕ್ತಿಗೆ ಸಾಧನವಾಗಿರುವುದರಿಂದ ಅವಶ್ಯವಾಗಿ ಮಾಡತಕ್ಕದ್ದು. (13) ಧ್ಯಾನವೇ ಅತಿಪಟುತ್ವವನ್ನು ಹೊಂದಿದಾಗ ಅಪರೋಕ್ಷವಾಗುತ್ತದೆ ಎಂದು ತಿಳಿಯುವ ರಾಮಾನುಜೀಯರ ಮತದಲ್ಲಿ 'ಆತ್ಮಾ ವಾ ಅರೇ ದ್ರಷ್ಟವ್ಯಃ' 'ದೃಷ್ಟ್ವೈವ ತಂ ಮುಚ್ಯತೇ' ಇದು ಮೊದಲಾದ ಶ್ರುತಿಗಳು ಔಪಚಾರಿಕಗಳಾಗಬೇಕಾಗುವುವು. ॥ ೧೧ ॥ ೧೨ ॥

**ಸ. ರ. ವಿ**— ಜ್ಞಾನಸ್ವಭಾವದಿಂದಲೇ ಸಂಸಾರಬಂಧವು ನಷ್ಟವಾಗುತ್ತದೆ. "**ಜ್ಞಾನಾಗ್ನಿಃ ಸರ್ವಕರ್ಮಾಣಿ** ಭಸ್ಮಸಾತ್ಕುರುತೇ ತಥಾ" ಎಂದು ಹೇಳಿರುವುದರಿಂದ ಶ್ರೀ ಹರಿಯು ಪ್ರಸಾದವು ಏಕೆಂದಾಶಂಕಿಸಿದರೆ— ಮುಕ್ತಿಯು ಆತನ ಪರಮ ಪ್ರಸಾದದಿಂದಲೇ ಲಭಿಸುವುದೆಂದು ಪ್ರಮಾಣಪೂರ್ವಕವಾಗಿ ಸಮರ್ಥಿಸುತ್ತಾರೆ —

**ನ. ಚ. ವಿ**— '**ಜ್ಞಾನಾದೇವಾಪವರ್ಗಃ**' ಎಂದು ಪ್ರಮಾಣವಿರುವುದರಿಂದ ಜ್ಞಾನಸ್ವಭಾವದಿಂದಲೇ ಮೋಕ್ಷವು ಸಿಗುವುದರಿಂದ ಪ್ರಸಾದವು ಏತಕ್ಕೆಂದರೆ—

**ನ್ಯಾಯಸುಧಾ**— (1) ಹಿಂದಿನ ಅತಃ ಶಬ್ದವ್ಯಾಖ್ಯಾನವಿಷಯದಲ್ಲಿ ಕೆಲವರು ಹೀಗೆ ಆಶಂಕಿಸುವರು. ಅತಃ ಶಬ್ದವು ಪ್ರಕೃತವಾದ ಅರ್ಥಕ್ಕೆ ಹೇತುತ್ವವನ್ನು ಹೇಳುವುದು. ಅಂದರೆ ಬ್ರಹ್ಮವಿಚಾರವನ್ನು ಏಕೆ ಮಾಡಬೇಕೆನ್ನುವುದನ್ನು ತೋರಿಸುವುದಕ್ಕೆ ಅತಃ ಶಬ್ದವು ಹೊರಟಿದೆ. (2) ಬ್ರಹ್ಮವಿಚಾರಕ್ಕೆ ಪ್ರಯೋಜನವೇನೆಂದು ಆಕಾಂಕ್ಷಾಬಂದರೆ ಇದಕ್ಕೆ ಉತ್ತರವಾಗಿ ಅಥ ಶಬ್ದವು ಹೊರಟಿದೆ. ಅಥ ಅಂದರೆ ಅಧಿಕಾರಸಂಪತ್ತಾದ ಮೇಲೆ ಎಂದರ್ಥವು. ಅಧಿಕಾರಿಯು ಮುಮುಕ್ಷುವಾಗಿರಬೇಕು. ಮುಮುಕ್ಷುವೆಂದರೆ ಮೋಕ್ಷದಲ್ಲಿಚ್ಛೆವುಳ್ಳವನು. ಇದರಿಂದ ಅಧಿಕಾರಿಗೆ ವಿಶೇಷಣವಾಗಿರುವ ಪ್ರಯುಕ್ತ ಮೋಕ್ಷವು ಪ್ರಕೃತವಾಗಿದೆ. ಜ್ಞಾನೇಚ್ಛೆಯನ್ನು ಮುಖ್ಯವೃತ್ತಿಯಿಂದ ಹೇಳುವ ಜಿಜ್ಞಾಸಾ ಶಬ್ದದಿಂದ ಜ್ಞಾನಸಾಧನವಾದ, ಇಚ್ಛಾಸಾಧ್ಯವಾದ ವಿಚಾರವನ್ನು ಲಕ್ಷಣಯಾ. (ಅಮುಖ್ಯವೃತ್ತಿಯಿಂದ) ಇಟ್ಟುಕೊಳ್ಳತಕ್ಕದ್ದು. ವಿಚಾರವು ಜ್ಞಾನದ್ವಾರಾ ಮುಕ್ತಿಗೆ ಸಾಧನವೆಂದು ತಿಳಿಸುವುದಕ್ಕಾಗಿ 'ಜಿಜ್ಞಾಸಾ' ಎಂದು ಲಾಕ್ಷಣಿಕಪದವನ್ನು ಪ್ರಯೋಗಿಸಿರುವರು. "**ಜಿಜ್ಞಾಸಾಶಬ್ದತೋ ಹೀಚ್ಛಾಮಜ್ಞಾತ್ವೈವ ವಿಜಾನತೇ। ವಿಚಾರಂ ಲೌಕಿಕಾಸ್ತೇನ ತತ್ರಾಯಂ ರೂಢ ಇಷ್ಯತೇ**" ॥ ಎಂದು ಹೇಳಿದಪ್ರಕಾರ ಜಿಜ್ಞಾಸಾ ಶಬ್ದವು ಮೀಮಾಂಸಾ ಶಬ್ದದಂತೆ ವಿಚಾರದಲ್ಲಿಯೇ ರೂಢವೆಂದಂಗೀಕರಿಸಿದರೂ ವಿಚಾರವು ಜ್ಞಾನಕ್ಕೆ ಸಾಧನವೆಂದು ತಿಳಿಯುತ್ತದೆ. (3) ಅಂತೂ ಯಾವ ಕಾರಣದಿಂದ ವಿಚಾರವು ಜ್ಞಾನಕ್ಕೆ ಸಾಧನವೋ, ಜ್ಞಾನವು ಮೋಕ್ಷಕ್ಕೆ ಸಾಧನವೋ, ಆದಕಾರಣ ವಿಚಾರ ಮಾಡತಕ್ಕದ್ದು, ಎಂದು ಅರ್ಥವು ಲಬ್ಧವಾಗುವುದು (4) ಮೋಕ್ಷಸಾಧನವಾಗಿ ಈಶ್ವರನ ಪ್ರಸಾದವು ಆವಶ್ಯಕವೆನ್ನುವಲ್ಲಿ ಜ್ಞಾಪಕವು ಯಾವುದೂ ಇಲ್ಲ. ಜ್ಞಾನವು ಮುಕ್ತಿಗೆ ಸಾಧನವಲ್ಲ

ವೆಂದು ಹೇಳಕೂಡದು. ಜ್ಞಾನದಿಂದಲೇ ಮೋಕ್ಷವಾಗದಿರುವುದಾದರೆ ಈಶ್ವರನ ಪ್ರಸಾದವನ್ನು ಮಧ್ಯದಲ್ಲಿ ಅಧ್ಯಾಹಾರಮಾಡಬಹುದಿತ್ತು. ಆತ್ಮನ ಯಥಾರ್ಥಜ್ಞಾನವಿಲ್ಲದಿರುವುದರಿಂದ ಜಡ ಭೂತಗಳಾದ ಶರೀರಾದಿಗಳಲ್ಲಿ ಆತ್ಮತ್ವವನ್ನು ಆರೋಪಿಸಿಕೊಂಡು ದೇಹಕ್ಕೆ ಅನುಕೂಲವಾದು ದರಲ್ಲಿ ರಾಗವೂ ಪ್ರತಿಕೂಲದಲ್ಲಿ ದ್ವೇಷವೂ ಹುಟ್ಟುತ್ತವೆ. ಅವುಗಳಿಂದ ಪ್ರೇರಿತನಾಗಿ ಪುಣ್ಯ ಪಾಪರೂಪ ಪ್ರವೃತ್ತಿಯನ್ನು ಮಾಡುತ್ತಾನೆ. 'ಆದರಿಂದ ಸುರ (ದೇವತೆಗಳು) ನರ (ಮನುಷ್ಯ) ಮೊದಲಾದ ಅನೇಕ ಯೋನಿಗಳಲ್ಲಿ ಹುಟ್ಟುತ್ತಾನೆ. ಅದರಿಂದ ದುಃಖವನ್ನು ಅನುಭವಿಸುತ್ತಾನೆ. ಹೀಗೆ ಅನಾದಿಯಾದ ಕಾರ್ಯಕಾರಣ ಪ್ರವಾಹವು ಸಂಸಾರವೆನ್ನಿಸುತ್ತದೆ. (5) ಆತ್ಮನ ತತ್ವಜ್ಞಾನ ದಿಂದ ಅಜ್ಞಾನವಿಪರ್ಯಯಗಳು ನಿವೃತ್ತಗಳಾಗುತ್ತವೆ. ಮಿಥ್ಯಾಜ್ಞಾನವು ಹೊರಟುಹೋದಮೇಲೆ ರಾಗದ್ವೇಷಗಳು ಹುಟ್ಟಲಾರವು. ಅವುಗಳಿಲ್ಲದಿದ್ದಮೇಲೆ ಪ್ರವೃತ್ತಿಯುಂಟಾಗುವುದಿಲ್ಲ. ಪೂರ್ವಾ ರ್ಜಿತಕರ್ಮಗಳು ಭೋಗದಿಂದಲೇ ನಷ್ಟಗಳಾಗುತ್ತವೆ. ಪ್ರವೃತ್ತಿಯೇ ಇಲ್ಲದಿದ್ದಮೇಲೆ ಜನ್ಮಾಂತ ರವೇ ಇಲ್ಲ. ಜನ್ಮವೇ ಇಲ್ಲದಿದ್ದಮೇಲೆ ನಿಷ್ಕಾರಣವಾಗಿ ದುಃಖವು ಹುಟ್ಟಲಾರದು, ಎಂದು ಈ ರೀತಿಯಾಗಿ ಸಂಪೂರ್ಣವಾಗಿ ದುಃಖನಿವೃತ್ತಿಯೇ ಮುಕ್ತಿಯೆನ್ನಿಸುವುದು. ತಥಾಚ ಜ್ಞಾನಸ್ವಭಾವ ದಿಂದಲೇ ಮುಕ್ತಿಯು ಲಭಿಸುವಾಗ ಈಶ್ವರನ ಪ್ರಸಾದವು ಏತಕ್ಕೆ? "**ದುಃಖಜನ್ಮಪ್ರ ವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾಯೇ ತದನಂತರಾಪಾಯಾದಪ ವರ್ಗಃ**' ಎಂದು ನ್ಯಾಯಸೂತ್ರವು. (6) ಮುಕ್ತಿಯು ಈಶ್ವರನ ಅಧೀನವೆಂದು ಪ್ರತಿಪಾದಿಸುವ '**ಜ್ಞಾನಿನಾಂ ಮೋಕ್ಷದಶ್ಚ ಸಃ**' ಎನ್ನುವ ವಚನವು ಮುಕ್ತಿಕಾರಣಗಳಾದ ಜ್ಞಾನಾದಿಗಳ ಉತ್ಪತ್ತಿಯಲ್ಲಿಯೇ ಈಶ್ವರನು ಕಾರಣನೆಂದು ಪ್ರತಿಪಾದಿಸತಕ್ಕದು. ಆದುದರಿಂದ ಈಶ್ವರನ ಪ್ರಸಾದವು ಮೋಕ್ಷಕ್ಕೆ ಕಾರಣವೆನ್ನುವ ಅರ್ಥವು ಆ ವಾಕ್ಯದಿಂದ ಸಿದ್ಧವಾಗುವುದಿಲ್ಲ. ಆದ ಪ್ರಯುಕ್ತ ಆ ವಾಕ್ಯವಿರೋಧವೂ ಇಲ್ಲ. ಜ್ಞಾನಾದಿಗಳು ಹುಟ್ಟುವುದಕ್ಕಾಗಿಯೇ ಆತನ ಉಪಾಸನಾದಿಗಳು. (7)(ಹೀಗೆ ಜ್ಞಾನಸ್ವಭಾವದಿಂದ ಅಜ್ಞಾನಾದಿಗಳು ನಿವೃತ್ತಗಳಾಗುವಾಗ ಕಾರಣವಿಲ್ಲದಿದ್ದಮೇಲೆ ಕಾರ್ಯವು ಹುಟ್ಟಲಾರದು. ಇದಕ್ಕೆ ಈಶ್ವರನ ಪ್ರಸಾದದ ಅಪೇಕ್ಷೆಯಿಲ್ಲ ದಿರುವುದರಿಂದ 'ಅತಃ' ಶಬ್ದದ ವ್ಯಾಖ್ಯಾನವು ಅಯುಕ್ತವೆಂದರೆ–)

**ಮೂ ॥ ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥ ೧೩ ॥**
**ನತೇ ತ್ವತ್ಕ್ರಿಯತೇ ಕಿಂಚಿದಿತ್ಯಾದೇರ್ನ ಹರಿಂ ವಿನಾ ।**
**ಜ್ಞಾನಸ್ವಭಾವತೋಽಪಿ ಸ್ಯಾನ್ಮುಕ್ತಿಃ ಕಸ್ಯಾಪಿ ಕ್ವಚಿತ್ ॥ ೧೪ ॥**

ಅ ॥ ದ್ರವ್ಯಂ=ಪ್ರಕೃತಿಮೊದಲಾದ ತತ್ವಗಳು, ಕರ್ಮ ಚ=ಧರ್ಮ ಅಧರ್ಮಗಳು, ಕಾಲಶ್ಚ=ಕಾಲವೂ, ಸ್ವಭಾವಃ = ಪ್ರಕೃತ್ಯಾದಿಗಳ ಪರಿಣಾಮಾದಿಗಳು, ಜೀವ ಏವ ಚ= ಪ್ರಕೃತ್ಯಾದಿ ತತ್ವಗಳ ಮತ್ತು ಅದರ ಪರಿಣಾಮಗಳ ಅಭಿಮಾನಿಯು ಅಂದರೆ ಸರ್ವಚೇತನಗೂ, ಇವೆಲ್ಲವೂ, ಯದನುಗ್ರಹತ ಏವ = ಯಾರ ಅನುಗ್ರಹದಿಂದಲೇ, ಸಂತಿ = ಇರುತ್ತವೋ, ಯದುಪೇಕ್ಷಯಾ=ಯಾರ ಉಪೇಕ್ಷೆಯಿಂದ, ನ ಸಂತಿ = ಇರುವುದಿಲ್ಲವೋ, (**ಇದರಿಂದ ಉತ್ಪತ್ತಿಯುಳ್ಳವುಗಳ ಉಪಾದಾನ ನಿಮಿತ್ತಕಾರಣಗಳ ಸ್ಥಿತಿಯೂ ಕೂಡ ಪರಮೇಶ್ವರನ ಅಧೀನ ವೆಂದು ಹೇಳಲ್ಪಡುತ್ತದೆ.**) ತ್ವತ್ ಋತೇ=ನಿನ್ನನ್ನು ಬಿಟ್ಟು, ಕಿಂಚಿತ್=ಯಾವುದೊಂದೂ, ನ

ಕ್ರಿಯತೇ=ಮಾಡಲ್ಪಡುವುದಿಲ್ಲ. ಇತ್ಯಾದೇಃ='ನ ಋತೇ ತ್ವತ್ಕ್ರಿಯತೇ ಕಿಂಚನ' ಎಂಬುವ ಶ್ರುತಿಯಿಂದ, (ಅವಗಮ್ಯತೇ = ತಿಳಿಯಲ್ಪಡುತ್ತದೆ.) ಇದುಮೊದಲಾದ ಆಗಮಗಳಿಂದ, ಜ್ಞಾನಸ್ವಭಾವತೋಽಪಿ=ಜ್ಞಾನಸ್ವಭಾವದಿಂದಲೇ, ಮುಕ್ತಿಃ=ಮೋಕ್ಷವು, ಕಸ್ಯಾಪಿ=ಯಾರಿಗೂ, ಕ್ವಚಿತ್=ಎಲ್ಲಿಯೂ, ಹಿ=ಯಾವ ಕಾರಣದಿಂದ, ಹರಿಂ ವಿನಾ = ಶ್ರೀ ಪರಮಾತ್ಮನನ್ನು ಹೊರತು, (ಶ್ರೀ ಹರಿಯ ಅನುಗ್ರಹವಿಲ್ಲದೆ) ನ ಸ್ಯಾತ್=ಆಗಲಾರದೋ, ಆಗುವುದಿಲ್ಲವೆಂದು ಯಾವ ಕಾರಣದಿಂದ ತಿಳಿದುಬರುತ್ತದೋ, ಆದಪ್ರಯುಕ್ತ ಮೋಕ್ಷವು ಪ್ರಸಾದಸಾಧ್ಯವೆನ್ನುವ ಪೂರ್ವವ್ಯಾಖ್ಯಾನವು ಯುಕ್ತವು.

**ನ್ಯಾಯಸುಧಾ**— (1) ಸರ್ವಕ್ರಿಯೆಗಳೂ ಈಶ್ವರನ ಅಧೀನವೆನ್ನುವುದು "ನ ಋತೇ ತ್ವತ್ಕ್ರಿಯತೇ" ಇದುಮೊದಲಾದ ಆಗಮಗಳಿಂದ ತಿಳಿದುಬರುತ್ತದೆ. (2) ಜೀವನ ಸಂಸಾರ ಬಂಧಕ್ಕೆ ಅಜ್ಞಾನಮಾತ್ರ ಕಾರಣವಲ್ಲ. ಮತ್ತೆ ಪರಮೇಶ್ವರನ ಇಚ್ಛೆಯೂ ಕಾರಣವೆಂದು "ತ್ವಂ ಮುಕ್ತಿದೋ ಬಂಧದೋಽತೋ ಮತೋಽನಃ" ಎನ್ನುವ ಶ್ರುತಿ, "ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ" ಇದುಮೊದಲಾದ ಸ್ಮೃತಿ ಇತಿಹಾಸ, "ತದಿಚ್ಛಯಾ ಯತೋ ಹ್ಯಸ್ಯ ಬಂಧಮೋಕ್ಷೌ ಪ್ರತಿಷ್ಠಿತೌ" ಇತ್ಯಾದಿ ಪುರಾಣ ಇವುಗಳಿಂದ ತಿಳಿದುಬರುತ್ತದೆ. (3) ಅನಾದಿಯಾದ ಜೀವಬ್ರಹ್ಮವಿಭಾಗವು ಅವಿದ್ಯಾಧೀನವೆಂದು ಅದ್ವೈತಿಗಳು ಹೇಗೆ ಅಂಗೀಕರಿಸಿರುವರೋ, ತಾರ್ಕಿಕಾದಿಗಳು ಅನಾದಿಯಾದ ದ್ರವ್ಯತ್ವಕ್ಕೆ ಗುಣವತ್ತ್ವಾಧೀನತ್ವವನ್ನು ಹೇಗೆ ಅಂಗೀಕರಿಸಿರುವರೋ, ಹಾಗೆಯೇ ಅನಾದಿಯಾದ ಬಂಧವೂ ಈಶ್ವರನ ಅಧೀನವೆಂದನ್ನುವುದು ಯುಕ್ತವಾಗುವುದು. (4) ಯದ್ಯಪಿ ಜೀವರು ಜ್ಞಾನಾನಂದಾದಿ ಸ್ವರೂಪರು. ಆದರೂ ಆ ಆನಂದಾದಿಗಳಿಗೆ ಅಭಿವ್ಯಕ್ತಿಯಿಲ್ಲವೆನ್ನುವುದು ಅನುಭವಸಿದ್ಧವಾಗಿರುವುದರಿಂದ ಆವರಕವು (ಮುಚ್ಚು) ಇದೆ ಎಂದು ತಿಳಿಯುತ್ತದೆ. ಆ ಆವರಕವು ಕಾಮಕರ್ಮಾದಿಗಳೆಂದು ಹೇಳಲು ಆಗದಿರುವುದರಿಂದ ಮಾಯಾ, ಅವಿದ್ಯೆ, ಪ್ರಕೃತಿ ಇದುಮೊದಲಾದ ಶಬ್ದಗಳಿಂದ ಹೇಳಲ್ಪಡುವ ಅನಾದಿಯಾದ ದ್ರವ್ಯವನ್ನು ಅಂಗೀಕರಿಸಬೇಕು. ಈ ವಿಷಯದಲ್ಲಿ "ಅನಾದಿಮಾಯಯಾ ಸುಪ್ತಃ" ಇದುಮೊದಲಾದ ಶ್ರುತಿಸ್ಮೃತಿಗಳೂ ಇರುತ್ತವೆ. ಆದ ಕಾರಣ ಪರಮೇಶ್ವರನೇ ಸತ್ವ-ರಜ-ಸ್ತಮೋಗುಣಸ್ವರೂಪವಾದ, ವಿದ್ಯಾವಿರೋಧಿಯಾದ ಅವಿದ್ಯೆಯಿಂದಲೂ, ಸ್ವಾಧೀನವಾದ ಪ್ರಕೃತಿಯಿಂದಲೂ ಅಚಿಂತ್ಯವೂ, ಅತ್ಯಾಶ್ಚರ್ಯಕರವೂ ಆದ ತನ್ನ ಶಕ್ತಿಯಿಂದಲೂ ಜೀವನ ಸ್ವರೂಪಚೈತನ್ಯವನ್ನು ಸ್ವಪ್ರಕಾಶರೂಪವಾದಾಗ್ಯೂ ಆಚ್ಛಾದಿಸು (ಮುಚ್ಚು) ತ್ತಾನೆ ಎನ್ನುವುದು ಯುಕ್ತವು. (5) ಆ ಶ್ರೀಹರಿಯೇ ತನ್ನ ಅಧಿಷ್ಠಾನದಿಂದ ಪರಿಣಾಮವನ್ನು ಹೊಂದಿದ ಮಹತ್ತತ್ವ ಅಹಂಕಾರತತ್ವ ಮೊದಲಾದ ಪ್ರಕೃತ್ಯಂಶಗಳಿಂದ ಜೀವನಿಗೆ ಸಂಬಂಧಿಸಿ ತಾನೇ ಸ್ವತಂತ್ರಕರ್ತನು, ಭೋಗಿಸುವವನು, ಸರ್ವಕಾರಕಗಳಿಗೂ ಫಲಗಳಿಗೂ ತಾನೇ ಸ್ವಾಮಿಯು ಇದುಮೊದಲಾದ ಜೀವನಲ್ಲಿ ಇಲ್ಲದಿರುವವುಗಳನ್ನೇ ಜೀವನಿಗೆ ತೋರಿಸಿ ರಾಗ (ವಿಷಯಗಳಲ್ಲಿಚ್ಛೆ) ಮೊದಲಾದವುಗಳನ್ನು ಹುಟ್ಟಿಸಿ ದುಃಖಾನುಭವವನ್ನು ಕೊಡುತ್ತಾನೆ. (ಹೀಗೆ ಬಂಧವು ಈಶ್ವರನ ಅಧೀನವಾಗಿರುವುದರಿಂದ ಆತನೇ ಮೋಚಕನೆಂದೂ ಅವಶ್ಯವಾಗಿ ಅಂಗೀಕರಿಸಬೇಕು. ಬೇರೆ ಯಾರೂ ಸ್ವತಂತ್ರರಲ್ಲ. ಈ ಶ್ರೀ ಹರಿಯು ಸಂತುಷ್ಟನಾಗಿಯೇ ತನ್ನ ಮಾಯೆಯನ್ನು ವ್ಯಾವೃತ್ತಿಗೊಳಿಸು (ತೆಗಿಯು) ವವನಾದುದರಿಂದ ಆತನ ಪ್ರಸಾದಕ್ಕಾಗಿಯೇ ಇವೆಲ್ಲಾ ಸಾಧನಸಂದರ್ಭಗಳು.) (6) ಹಿಂದಿನ ನ್ಯಾಯದಿಂದ ಜ್ಞಾನಕ್ಕೆ ಮುಖ್ಯವಾಗಿ ಮೋಕ್ಷಸಾಧನತ್ವವು ಸ್ವಭಾವವಲ್ಲವೆಂದು ಸಿದ್ಧವಾಯಿತು. (7) ಆಗಲಿ, ಮೋಕ್ಷವು ಜ್ಞಾನಸ್ವಭಾವ

ದಿಂದ ಆಗುವುದಾದರೂ ಈಶ್ವರನ ಪ್ರಸಾದವು ಅವಶ್ಯಕವು. ಎಲ್ಲಾ ಕಾರಕಗಳೂ ಈಶ್ವರನ ಅಧೀನವಾಗಿರುವುದರಿಂದ ಈಶ್ವರನ ಇಚ್ಛೆಯಿಲ್ಲದೆ ಯಾವ ಕಾರ್ಯವೂ ಹುಟ್ಟಲಾರದು. ಶ್ರೀ ಹರಿಯ ಪ್ರಸಾದ (ಅನುಗ್ರಹ)ದಿಂದಲೇ ಮುಕ್ತನಾಗುತ್ತಾನೆ. ಎಂದು ಹೇಳಿದ ಅರ್ಥವನ್ನು ಸಮರ್ಥಿಸುವುದೇ ಅಂಗೀಕಾರವಾದಕ್ಕೆ ಪ್ರಯೋಜನವು. ಹೇಗೆಂದರೆ— ಜ್ಞಾನವು ಮೋಕ್ಷಕ್ಕೆ ಕಾರಣವೆಂದಂಗೀಕರಿಸುವವರೂ ಈಶ್ವರನ ಇಚ್ಛೆಯನ್ನು ಒಡಂಬಡಬೇಕು. ಈಶ್ವರನು ಮುಕ್ತಿಗೆ ಕಾರಣನು ಎನ್ನುವಲ್ಲಿ ಪ್ರಮಾಣವು ಇದ್ದಹಾಗೆ ಜ್ಞಾನಸ್ವಭಾವವು ಮುಕ್ತಿಗೆ ಕಾರಣವು ಅಂದರೆ ಜ್ಞಾನಸ್ವಭಾವದಿಂದಲೇ ಮುಕ್ತಿಯಾಗುತ್ತದೆನ್ನುವಲ್ಲಿ ಪ್ರಮಾಣವಿಲ್ಲ. ಆದುದರಿಂದ ಮುಕ್ತಿಗೆ ಕಾರಣನು ಈಶ್ವರನೆಂದೇ ಅಂಗೀಕರಿಸಬೇಕು ॥ ೧೩ ॥ ೧೪ ॥

ಸ. ರ. ವಿ — ಹೀಗೆ ಶಾಸ್ತ್ರಾರಂಭಕ್ಕೆ ಕಾರಣಗಳಾದ ವಿಷಯ ಪ್ರಯೋಜನಾದಿಗಳನ್ನು ಹೇಳಿ ನಮ್ಮ ವ್ಯಾಖ್ಯಾನವು ದೃಢವಾಗುವುದಕ್ಕಾಗಿ ಪರರು ಮಾಡಿದ ಅಪವ್ಯಾಖ್ಯಾನವನ್ನು ದೂಷಿಸುತ್ತಾರೆ.

ನ. ಚ. ವಿ — ಬಂಧವು ಸತ್ಯವಾಗಿದ್ದರೆ ನಿವೃತ್ತಿಯು ಕೂಡದಿರುವುದರಿಂದ ಮುಕ್ತಿಗಾಗಿ ಮಿಥ್ಯೆಯೆಂದೇ ಹೇಳಬೇಕು. ಸಂಸಾರ ಬಂಧವು ಜ್ಞಾನದಿಂದ ಬಾಧ್ಯವಾಗುತ್ತದೆಂದಂಗೀಕರಿಸಿರುವುದರಿಂದಲೂ, ಸತ್ಯವಾದುದು ಬಾಧ್ಯವಾಗದಿರುವುದರಿಂದಲೂ, ಮಿಥ್ಯಾಭೂತವಾದುದು ಎಂದಾಶಂಕಿಸಿದರೆ—

ನ್ಯಾಯಸುಧಾ— (ಪೂರ್ವದಲ್ಲಿ ಮೋಕ್ಷಕಾರಣವಾದ ಜ್ಞಾನದಾನವೇ ಈಶ್ವರನಿಂದ ಆಗತಕ್ಕ ಪ್ರಯೋಜನವು ಎಂದು ಹೇಳಿದ್ದು ಯುಕ್ತವಲ್ಲ. ಜ್ಞಾನಪ್ರದಾನಾದಿಗಳಿಂದ ಅತಿರಿಕ್ತವಾದ ಈಶ್ವರನಿಂದ ಆಗತಕ್ಕ ಪ್ರಯೋಜನವನ್ನು ಆಗಮಗಳಲ್ಲಿ ಹೇಳಿರುತ್ತದೆ ಎನ್ನುತ್ತಾರೆ.)

**ಮೂ ॥ ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ ।**
**ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥ ೧೫ ॥**
**ಇತ್ಯುಕ್ತೇರ್ಬಂಧಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ ।**
**ಮಿಥ್ಯಾತ್ವಮಪಿ ಬಂಧಸ್ಯ ನ ಪ್ರತ್ಯಕ್ಷವಿರೋಧತಃ ।**
**ಮಿಥ್ಯಾತ್ವಂ ಯದಿ ದುಃಖಾದೇಸ್ತದ್ವಾಕ್ಯಸ್ಯಾಗ್ರತೋ ಭವೇತ್ ॥ ೧೬ ॥**

ಅ ॥ ವಿಷ್ಣುಃ=ಶ್ರೀ ಹರಿಯು, ಅಜ್ಞಾನಾಂ=ಅಜ್ಞಾನಿಗಳಿಗೆ, ಜ್ಞಾನದಃ=ಜ್ಞಾನವನ್ನು ಕೊಡುವವನು. ಸಃ = ಆ (ಪ್ರಸನ್ನನಾದ) ಶ್ರೀ ಹರಿಯು, ಜ್ಞಾನಿನಾಂ=ಜ್ಞಾನಿಗಳಿಗೆ, ಮೋಕ್ಷದಶ್ಚ=ಹಿಂದೆ ಹೇಳಿದ ಪ್ರಕೃತಿಬಂಧದಿಂದ ಮುಕ್ತಿಯನ್ನು ಕೊಡುವವನು. ಸ ಏವ ಏಕಃ ಜನಾರ್ದನಃ=ಆ ಜನಾರ್ದನನೊಬ್ಬನೇ, ಮುಕ್ತಾನಾಂ = ಮುಕ್ತಿಯನ್ನು ಹೊಂದಿದವರಿಗೆ, ಆನಂದದಶ್ಚ=ಆನಂದವನ್ನು ಕೊಡುವವನು, ಇತಿ ಉಕ್ತೇಃ=ಹೀಗೆ ಮುಕ್ತಿಯು ಭಗವತ್ಪ್ರಸಾದ ಸಾಧ್ಯವೆಂದು ಹೇಳಿರುವುದರಿಂದ, (ಮೋಕ್ಷವು ಭಗವತ್ಪ್ರಸಾದಸಾಧ್ಯವೆಂದು ಹಿಂದೆ ಹೇಳಿದ್ದು ಯುಕ್ತವು.) ಮುಕ್ತಿಃ=ಮೋಕ್ಷವು, ಬಂಧಮಿಥ್ಯಾತ್ವಂ=ಸಂಸಾರಬಂಧಕ್ಕೆ ಮಿಥ್ಯಾತ್ವವನ್ನು, ನೈವ ಅಪೇಕ್ಷತೇ=ಅಪೇಕ್ಷಿಸುವುದಿಲ್ಲ. ಪ್ರತ್ಯಕ್ಷವಿರೋಧತಃ=ಪ್ರತ್ಯಕ್ಷವಿರೋಧವಿದ್ದುದರಿಂದಲೇ, ಬಂಧಸ್ಯ=ಸಂಸಾರಬಂಧಕ್ಕೆ, ಮಿಥ್ಯಾತ್ವಮಪಿ = ಮಿಥ್ಯಾತ್ವವೂ ಕೂಡ, ನ=ಇರುವುದಿಲ್ಲ. ದುಃಖಾದೇಃ=ದುಃಖ ಮೊದಲಾದ ಬಂಧಕ್ಕೆ, ಮಿಥ್ಯಾತ್ವಂ ಯದಿ=ಮಿಥ್ಯಾತ್ವವಿದೆ ಎಂದು

ಹೇಳುವುದಾದರೆ, ತತ್=ಹಾಗಾದರೆ, ತದ್ವಾಕ್ಯಸ್ಯ=ಆತ್ಮಾತಿರಿಕ್ತಗಳಾದ ದುಃಖಾದಿ ಬಂಧಗಳಿಗೆ ಮಿಥ್ಯಾತ್ವವನ್ನು ಪ್ರತಿಪಾದಿಸುತ್ತದೆ ಎಂದು ನೀವು ಹೇಳುವ 'ನೇಹನಾನಾಸ್ತಿ ಕಿಂಚನ' ಇತ್ಯಾದಿ ವಾಕ್ಯಗಳಿಗೆ, ಅಗ್ರತಃ=ಪ್ರಥಮದಲ್ಲಿಯೇ, (ಮಿಥ್ಯಾತ್ವವು) ಭವೇತ್=ಬರುವುದು.

ತಾ || ಸ. ರ. ವಿ— (1) ಮುಕ್ತಿಯು ಶ್ರೀಹರಿಯ ಪ್ರಸಾದದಿಂದಲೇ ಸಿಗತಕ್ಕದೆಂದು ಹೇಳಿರುವುದರಿಂದ ಬಂಧಕ್ಕೆ ಮಿಥ್ಯಾತ್ವವನ್ನು ಅಪೇಕ್ಷಿಸುವುದಿಲ್ಲ. ರಾಜಾದಿಗಳ ಪ್ರಸಾದವು ಸತ್ಯಭೂತವಾದ ಶೃಂಖಲಾದಿ ಬಂಧವನ್ನು (ಜೈಲು ಮೊದಲಾದುದನ್ನು) ಹೋಗಲಾಡಿಸುತ್ತದಷ್ಟೆ! ಬಂಧವು ಜ್ಞಾನದಿಂದ ನಷ್ಟವಾಗುತ್ತದೆಂದು ಅಂಗೀಕರಿಸದಿರುವುದರಿಂದ ಮಿಥ್ಯೆಯಲ್ಲ. (2) ಮತ್ತು ಸತ್ಯವಾದ ವಿಷವು ಗರುಡನ ಧ್ಯಾನದಿಂದ ನಿವೃತ್ತವಾಗುವಂತೆಯೇ ಸತ್ಯವಾದ ಬಂಧವೂ ಜ್ಞಾನದಿಂದ ನಷ್ಟವಾಗುತ್ತದೆ. ನಾನು ದುಃಖವುಳ್ಳವನು, ಇದುಮೊದಲಾದ ಅನುಭವವಿದ್ದುದರಿಂದ ಬಂಧವು ಮಿಥ್ಯೆಯೆನ್ನುವುದು ಪ್ರತ್ಯಕ್ಷಾದಿಗಳಿಂದ ವಿರುದ್ಧವಾಗಿದೆ. (3) ದುಃಖಾದಿ ರೂಪವಾದ ಬಂಧವು ಮಿಥ್ಯೆಯಾದರೆ ಅದನ್ನು ಪ್ರತಿಪಾದಿಸುವ ವಾಕ್ಯವೂ ಮಿಥ್ಯೆಯಾಗಬೇಕಾಗುವುದು ತಥಾಚ ಬಾಧಕವಿಲ್ಲದಿರುವುದರಿಂದ ದುಃಖಾದಿ ಬಂಧವು ಸತ್ಯವೆಂದೇ ಸಿದ್ಧಿಸುವುದು.

ನ. ಚ. ವಿ— (1) ಜ್ಞಾನವು ಹುಟ್ಟಿದಮೇಲೆಯೂ ಸಂಸಾರಬಂಧದಿಂದ ಬಿಡುಗಡೆಯು ಭಗವಂತನ ಪ್ರಸಾದದಿಂದಲೇ ಆಗುವುದೆಂದು ಹೇಳಿರುವುದರಿಂದ ಬಂಧವು ಮಿಥ್ಯೆಯಲ್ಲ. (2) 'ಬಂಧಃ ಮಿಥ್ಯಾ' ಎನ್ನುವ ವಾಕ್ಯಕ್ಕೂ ಮಿಥ್ಯಾತ್ವವು ಬರುವುದು.

ನ್ಯಾಯಸುಧಾ—(ಶಂಕರಭಾಷ್ಯದ ಆದಿಯಲ್ಲಿ ಉಪೋದ್ಘಾತರೂಪವಾಗಿ ಬರೆದಿರುವ ವಿಷಯವನ್ನೂ, ಆ ಉಪೋದ್ಘಾತದ ಮೇಲೆ ಹೊರಟಿರುವ ವ್ಯಾಖ್ಯಾನಗಳನ್ನೂ ನಿರಾಕರಿಸಲು ಆಚಾರ್ಯರು "ಇತ್ಯುಕ್ತೇರ್ಬಂಧ ಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ" ಎಂದು ಹೇಳಿರುತ್ತಾರೆ.

ಪೂರ್ವಪಕ್ಷ ಸಾರಾಂಶ.— ಜೀವನು ಸ್ವಭಾವವಾಗಿ ಬ್ರಹ್ಮನೇ. ಆದರೆ ಅಜ್ಞಾನದಿಂದ ಸಂಸಾರವನ್ನನುಭವಿಸುತ್ತಾನೆ. ಇದರಿಂದ ನಾನು ಕರ್ತನು, ನಾನು ಭೋಕ್ತನು, ನಾನು ತಿಳಿಯುವವನು ಇವೇ ಮೊದಲಾದ ಅನುಭವವೇ ಸಂಸಾರವು. ಇವೆಲ್ಲವೂ ಅಜ್ಞಾನದಿಂದ ಕಲ್ಪಿತಗಳಾದುವು. ಅಂದರೆ ಭ್ರಾಂತಿಕಲ್ಪಿತಗಳು. 'ತತ್ತ್ವಮಸಿ' ಮೊದಲಾದ ವೇದಾಂತ ವಾಕ್ಯವಿಚಾರದಿಂದ ಬ್ರಹ್ಮಾತ್ಮೈಕ್ಯವು (ಜೀವಬ್ರಹ್ಮರಿಗೆ ಭೇದವಿಲ್ಲವೆನ್ನುವುದು) ಯಾವಾಗ ಸಿದ್ಧಿಸುತ್ತದೋ ಆಗ ಭ್ರಾಂತಿ (ಅಜ್ಞಾನ) ಕಲ್ಪಿತವಾದ ಸಂಸಾರವು ನಿವೃತ್ತವಾಗುತ್ತದೆ. ಅಂತೂ ಬ್ರಹ್ಮಾತ್ಮೈಕ್ಯ ಜ್ಞಾನಕ್ಕೆ ವಿರುದ್ಧವಾದುದು ಅಜ್ಞಾನವು. ಅದನ್ನು ಜ್ಞಾನವು ಹೋಗಲಾಡಿಸುತ್ತದೆ. ಸಂಸಾರವು ಮಿಥ್ಯಾಭೂತವಾದ ಅಜ್ಞಾನ ಅಥವಾ ಅವಿದ್ಯಾಕಲ್ಪಿತವಲ್ಲದೆ ಹೋದ ಪಕ್ಷದಲ್ಲಿ ಜ್ಞಾನದಿಂದ ನಿವೃತ್ತವಾಗಲಾರದು. ಆದುದರಿಂದ ಜೀವನ ಮೋಕ್ಷಮಾರ್ಗವನ್ನು ತಿಳಿಸುವುದಕ್ಕಾಗಿ ಹೊರಟ 'ಅಥಾತೋ ಬ್ರಹ್ಮಜಿಜ್ಞಾಸಾ' ಎನ್ನುವ ಸೂತ್ರಕ್ಕೆ ಬಂಧಮಿಥ್ಯಾತ್ವವು ಆರ್ಥಿಕಾರ್ಥವು. ಆದುದರಿಂದಲೇ 'ಯುಷ್ಮದಸ್ಮತ್ಪ್ರತ್ಯಯ ಗೋಚರಯೋಃ' ಎನ್ನುವ ಉಪೋದ್ಘಾತವೂ ಸಂಗತವಾಗುತ್ತದೆ.)

(1) ಅನಾದಿಯಾದ ಪ್ರಕೃತಿಬಂಧಕ್ಕೆ ನಿವೃತ್ತಿಯು ಹೇಗೆ ತಾನೇ ಕೂಡಬಹುದು ಅಂದರೆ 'ಬಂಧೋ ನ ನಿವರ್ತತೇ ಅನಾದಿತ್ವಾತ್' ಅನಾದಿಯಾದುದರಿಂದ ಪ್ರಕೃತಿಬಂಧವು ನಿವೃತ್ತವಾಗುವುದಿಲ್ಲ, ಎಂದು ನೈಯಾಯಿಕರು ಶಂಕಿಸಿದರೆ—

ಈ ವಿಷಯದಲ್ಲಿ ವಿವರಣಕಾರರು ಹೀಗೆ ಸಮಾಧಾನವನ್ನು ಹೇಳುವರು. (೧) ವಿನಾಶಕ್ಕೆ ಸಾದಿತ್ವವು ಅವಿನಾಶಕ್ಕೆ ಅನಾದಿತ್ವವೂ ನಿಮಿತ್ತವಲ್ಲ. ಮತ್ತೆ ನಿವರ್ತಕವಿರುವುದು ಇಲ್ಲದಿರುವುದು, ಇದೇ ನಿಮಿತ್ತವು ಇದರಿಂದ 'ಅನಾದಿತ್ವಾತ್' ಎಂಬ ಹೇತುವು ಅಪ್ರಯೋಜಕವೆಂದುಕ್ತವಾಯಿತು. (೨) ಮತ್ತು 'ಅನಾದಿತ್ವಾತ್' ಎನ್ನುವ ಹೇತುವಿಗೆ ಪ್ರಾಗಭಾವಾದಿಗಳಲ್ಲಿ ವ್ಯಭಿಚಾರವೂ ಅದೆ. ಹೇಗೆಂದರೆ, ಅನಾದಿಯಾದ ಪ್ರಾಗಭಾವವು ನಿವೃತ್ತವಾಗುವುದು. (೩) ಬೌದ್ಧರು ತತ್ವಜ್ಞಾನ ಪ್ರಕರ್ಷದಿಂದ ಅನಾದಿಯಾದ ವಾಸನಾ ಸಂತಾನಗಳಿಗೆ ನಿವೃತ್ತಿಯನ್ನು ಹೇಳುವರು. (೪) ನೈಯಾಯಿಕರ ಮತದಲ್ಲಿ ಅನಾದಿಯಾದ ಮಿಥ್ಯಾಜ್ಞಾನ ಪ್ರವಾಹಕ್ಕೂ ಪೃಥಿವೀ ಪರಮಾಣುಗಳ ಶ್ಯಾಮತ್ವಕ್ಕೂ ನಿವೃತ್ತಿಯಾಗುವುದು. (೫) ಸಾಂಖ್ಯರ ಮತದಲ್ಲಿ ಪ್ರಕೃತಿ ಪುರುಷರ ವಿವೇಕದಿಂದ ಅವಿವೇಕವು ನಿವೃತ್ತವಾಗುವುದು. ಮೀಮಾಂಸಕರ ಮತದಲ್ಲಿ ಅನಾದಿಯಾದ ಧರ್ಮತತ್ವಜ್ಞಾನಪ್ರಾಗಭಾವವು ನಿವೃತ್ತವಾಗುವುದು. ಅನಾದಿಯಾದುದಕ್ಕೆ ನಿವೃತ್ತಿಯಿಲ್ಲವೆನ್ನುವುದು ಸಾಮಾನ್ಯ ವ್ಯಾಪ್ತಿಯು. ಜ್ಞಾನದಿಂದ ಅಜ್ಞಾನವು ನಿವೃತ್ತವಾಗುವುದೆನ್ನುವುದು ವಿಶೇಷವ್ಯಾಪ್ತಿಯು. ಆದ ಪ್ರಯುಕ್ತ ವಿಶೇಷವ್ಯಾಪ್ತಿಯುಳ್ಳ, 'ಅಜ್ಞಾನರೂಪಬಂಧಃ ಜ್ಞಾನೇನ ನಿವರ್ತತೇ ಅಜ್ಞಾನತ್ವಾತ್' ಎನ್ನುವ ಅನುಮಾನವು ಪ್ರಬಲವು. ಆದಕಾರಣ ಈ ಪ್ರಬಲಾನುಮಾನ ವಿರೋಧವು ನಿನ್ನ ಅನುಮಾನಕ್ಕೆ ಬರುವುದು. ಇತ್ಯಾದಿ ಪ್ರಕಾರ ನೈಯಾಯಿಕರ ಮೇಲೆ ವಿವರಣಕಾರರು ಶ್ರುತಿಸ್ಮೃತ್ಯಾದಿಗಳನ್ನು ಆದರಿಸದೆ ಕೇವಲ ಯುಕ್ತಿಯಿಂದ ದೂಷಣೆ ಹೇಳಿದ್ದು ಯುಕ್ತವಲ್ಲವೆಂದು ಸಿದ್ಧಾಂತಿಗಳು ವಿವರಣಕಾರರನ್ನು ದೂಷಿಸುತ್ತಾರೆ.

(2) ಹೇಗೆಂದರೆ— ಸಾದಿತ್ವ-ಅನಾದಿತ್ವಗಳು ವಿನಾಶ-ಅವಿನಾಶಗಳಿಗೆ ನಿಮಿತ್ತವಲ್ಲ ಮತ್ತೆ ವಿನಾಶಕವಿರುವುದು ಇಲ್ಲದಿರುವುದೇ ಪ್ರಯೋಜಕವು, ಎನ್ನುವುದರಿಂದ ನೈಯಾಯಿಕರ 'ಅನುಮಾನಕ್ಕೆ ನಿವರ್ತಕಾಭಾವರೂಪ ಉಪಾಧಿಯಾಗಲೀ ನಿವರ್ತಕವತ್ವರೂಪ ಪ್ರತಿಪಕ್ಷಾನುಮಾನವಾಗಲೀ ಬರುತ್ತದೆಂದು ವಿವರಣಕಾರರು ಹೇಳಿದ್ದು ಸರಿಯಲ್ಲ. ಏಕೆಂದರೆ— 'ಅಜ್ಞಾನಂ ನ ನಿವರ್ತತೇ ಅನಾದಿತ್ವಾತ್ ಆತ್ಮವತ್' ಎನ್ನುವ ನೈಯಾಯಿಕರ ಅನುಮಾನದಲ್ಲಿ ನಿವರ್ತಕಾಭಾವವು ಉಪಾಧಿಯಾಗಲಾರದು. ಏಕೆಂದರೆ— ಇದು ಸಾಧ್ಯವ್ಯಾಪಕವೇ ಆಗುವುದು. 'ಅಜ್ಞಾನಂ ನಿವರ್ತತೇ ನಿವರ್ತಕವತ್ವಾತ್' ನಿವರ್ತಕವಿದ್ದುದರಿಂದ ಅಜ್ಞಾನವು ನಿವೃತ್ತವಾಗುತ್ತದೆ ಎನ್ನುವ ಪ್ರತಿಪಕ್ಷಾನುಮಾನಕ್ಕೆ ಅಸಿದ್ಧಿಯು ಬರುವುದು. (3) ಸಾಧ್ಯವ್ಯಾಪಕತ್ವವೂ ಅಸಿದ್ಧಿಯೂ ಹೇಗೆಂದರೆ— (೧) ಯಾರು ಅಜ್ಞಾನವು ಅನಾದಿಯಾಗಿರುವುದರಿಂದ ನಿವೃತ್ತವಾಗಲಾರದು ಎಂದು ಹೇಳುವರೋ, ಅಂತಹರು ಅದಕ್ಕೆ ನಿವರ್ತಕವನ್ನು ಸರ್ವಥಾ ಒಪ್ಪಲಾರರು. ಮತ್ತು ಹಿಂದೆ ಹೇಳಿದ ಅನಾದಿತ್ವರೂಪ ಹೇತುವಿನಿಂದಲೇ ನಿವರ್ತಕಾಭಾವವನ್ನೇ ಸಾಧಿಸುವರು. (೨) 'ಭಾವತ್ವೇ ಸತಿ ಅನಾದಿತ್ವಾತ್' ಎಂದು ಹೇತುವಿನಲ್ಲಿ ವಿಶೇಷಣಕೊಡುವುದರಿಂದ ಪ್ರಾಗಭಾವದಲ್ಲಿ ವ್ಯಭಿಚಾರ ಹೇಳಿದ್ದೂ ಸರಿಯಲ್ಲ. (೩) ವಾಸನಾ (ಸಂಸ್ಕಾರ) ಗಳಿಗೆ ಅನಾದಿತ್ವವನ್ನು ಬೌದ್ಧರು ಅಂಗೀಕರಿಸದೆ ಇದ್ದುದರಿಂದಲೂ ಅಲ್ಲಿ ವ್ಯಭಿಚಾರವೇ ಬರುವುದಿಲ್ಲ. (೪) ನೈಯಾಯಿಕಾದಿಗಳೂ ಮಿಥ್ಯಾಜ್ಞಾನವು ಅನಾದಿಯೆಂದಂಗೀಕರಿಸಲಾರರು. ಪರಮಾಣುಶ್ಯಾಮತೆಯೂ ಸಾದಿಯೇ ಆಗಿದೆ. ಆದಕಾರಣ ಮಿಥ್ಯಾಜ್ಞಾನ ಪ್ರವಾಹದಲ್ಲಿಯೂ, ಪರಮಾಣು ಶ್ಯಾಮತ್ವದಲ್ಲಿಯೂ ವಿವರಣಕಾರರು ವ್ಯಭಿಚಾರ ಹೇಳಿದ್ದು ಯುಕ್ತವಲ್ಲ, ಇದುಮೊದಲಾದಪ್ರಕಾರ, ಸಿದ್ಧಾಂತಿಗಳು ವಿವರಣಕಾರರು ಹೇಳಿದ್ದನ್ನು ನಿರಾಕರಿಸಿ ಅನಾದಿಯಾದ ಪ್ರಕೃತಿಬಂಧಕ್ಕೆ ನಿವೃತ್ತಿಯುಹೇಗೆ? ಎನ್ನುವ ನೈಯಾಯಿಕ ಆಕ್ಷೇಪಕ್ಕೆ ಸಿದ್ಧಾಂತಿಗಳು ಸಮಾಧಾನವನ್ನು ಹೇಳುವರು.

(4) ಅವಿದ್ಯೆಯು ಅನಾದಿಯಾದುದರಿಂದ ಅದಕ್ಕೆ ನಿವೃತ್ತಿಯಿಲ್ಲವೆನ್ನುವುದು, (೧) ಪ್ರಸಂಗವೋ? ಅಂದರೆ 'ಯದಿ ಅವಿದ್ಯಾ ಅನಾದಿಃ ಸ್ಯಾತ್ ತರ್ಹಿ ನ ನಿವರ್ತೇತ' ಅವಿದ್ಯೆಯು ಅನಾದಿಯಾಗಿದ್ದರೆ ನಿವೃತ್ತಿಯನ್ನು ಹೊಂದಲಾರದು ಎಂದು ತರ್ಕವೋ? (೨) ಸ್ವತಂತ್ರಾನುಮಾನವೋ? 'ಅವಿದ್ಯಾ ನ ನಿವರ್ತತೇ ಅನಾದಿತ್ವಾತ್ ಆತ್ಮವತ್' ಎಂದು ಸಾಧನಾನುಮಾನವೋ? (5) (೧) ಪ್ರಸಂಗವೆಂದನ್ನಕೂಡದು. ಅವಿದ್ಯೆಯು ಅನಾದಿಯು ಎನ್ನುವುದು **"ಅನಾದಿಮಾಯಯಾ ಸುಪ್ತಃ"** ಇತ್ಯಾದಿ ಶ್ರುತಿಯಿಂದಲೂ, ಜೀವಾನಾದಿತ್ವರೂಪಯುಕ್ತಿಯಿಂದಲೂ ಸಿದ್ಧವಾಗಿರುವುದರಿಂದ ಅಜ್ಞಾನವು ಅನಾದಿಯೆಂದಾದರೆ ನಿವೃತ್ತವಾಗದೆ ಹೋಗುವುದು. ನಿವೃತ್ತವಾಗುವುದು. ಆದಪ್ರಯುಕ್ತ ಅನಾದಿಯಲ್ಲವೆಂದು ವಿಪರ್ಯಯಪರ್ಯವಸಾನವಾಡಲಿಕ್ಕೆ ಬರುವುದಿಲ್ಲ. (೨) ಸ್ವತಂತ್ರಾನುಮಾನವೆಂದೂ ಹೇಳಕೂಡದು. ಏಕೆಂದರೆ- ಆ ಅನುಮಾನವು **"ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ"** ಎನ್ನುವ ಶ್ರುತಿಯು, **"ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ"** ಎಂದು ಗೀತೆಯು, **"ತರಂತ್ಯವಿದ್ಯಾಂ ವಿತತಾಂ ಹೃದಿ ಯಸ್ಮಿನ್ನಿವೇಶಿತಃ"** ಎಂದು ವಿಷ್ಣುಪುರಾಣ, ಇವುಗಳಿಂದ ವಿರುದ್ಧವಾಗಿದೆ. (6) ಅನಾದಿಯಾದುದಕ್ಕೂ ನಿವೃತ್ತಿ ಹೇಳಿದರೆ ಬಾಧಕವಿಲ್ಲದಿದ್ದುದರಿಂದ ಅಪ್ರಯೋಜಕವು. ಆತ್ಮನಿಗೂ ನಿವೃತ್ತಿಯು ಪ್ರಸಕ್ತವಾಗುವುದೇ ಬಾಧಕವು ಎಂದನ್ನಕೂಡದು. ಅಜ್ಞಾನಕ್ಕೆ ನಿವೃತ್ತಿಯಿದ್ದರೆ ಆತ್ಮನಿಗೂ ನಿವೃತ್ತಿಯು ಬರಬೇಕೆನ್ನುವ ಪ್ರಸಂಗಕ್ಕೆ ವ್ಯಾಪ್ತಿಯಿರುವುದಿಲ್ಲ. ಅನಾದಿಯಾದುದಕ್ಕೆ ಎಂತಹ ವಿನಾಶವೆಂದರೆ ಸ್ವರೂಪಧ್ವಂಸವೇ. (7) ಅವಿದ್ಯೆಯು ನಿವೃತ್ತವಾಗುವುದಾದರೆ ಒಬ್ಬನಿಗೆ ಮುಕ್ತಿಯಾಗುವಾಗ ಸರ್ವರಿಗೂ ಮುಕ್ತಿಯಾಗಬೇಕಾಗುವುದು, ಎನ್ನುವ ಬಾಧಕವೂ ಇರುವುದಿಲ್ಲ, ಎಂದರೆ— ಪ್ರತಿಜೀವರಿಗೂ ಅವಿದ್ಯೆಗಳು ಬೇರೆ ಬೇರೆ ಇವೆ ಎಂದಂಗೀಕರಿಸಿರುತ್ತೇವೆ. (8) ಜೀವಾವರಣ ವಿಷಯದಲ್ಲಿ ಇನ್ನೂ ವಿಶೇಷವು **"ಸ್ವಗುಣಾಚ್ಛಾದಿಕಾ ತ್ವೇಕಾ ಪರಮಾಚ್ಛಾದಿಕಾ ಪರಾ । ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ ॥ ವ್ಯಾಘುಟ್ಯ ಮೋಕ್ಷಪದಪಂ ದದಾತಿ ಪುರುಷೋತ್ತಮಃ"** ॥ ಇತ್ಯಾದಿ ಶ್ರುತಿಗೀತಾತಾತ್ಪರ್ಯದಲ್ಲಿ ಹೇಳಿದ ಆಗಮದಿಂದ ಅನುಸಂಧಾನಮಾಡಿಕೊಳ್ಳತಕ್ಕದ್ದು. (9) ಬ್ರಹ್ಮಜ್ಞಾನಿಗಳಿಗೂ ಅವಿದ್ಯೆಯು ಇದ್ದಪ್ರಯುಕ್ತ **'ಜ್ಞಾನಿನಾಂ ಮೋಕ್ಷದಃ'** ಇದುಮೊದಲಾದ, ಜ್ಞಾನದಿಂದ ಬಂಧನಿವೃತ್ತಿರೂಪ ಮೋಕ್ಷವನ್ನು ಪ್ರತಿಪಾದಿಸುವ ಶ್ರುತಿಸ್ಮೃತಿಗಳಿಗೆ ಪ್ರಾಮಾಣ್ಯವಿಲ್ಲ. ಬ್ರಹ್ಮಸಾಕ್ಷಾತ್ಕಾರವೇ ಅವಿದ್ಯೆಯನ್ನು ನಿವರ್ತಿಸುವುದು. ಬ್ರಹ್ಮವಿಷಯಕ ಪರೋಕ್ಷಜ್ಞಾನಮಾತ್ರವಲ್ಲ, ಎಂದೆನ್ನಕೂಡದು. ಬ್ರಹ್ಮಸಾಕ್ಷಾತ್ಕಾರವಿದ್ದವರಿಗೂ ಸಂಸಾರವು ದೃಷ್ಟವಾಗಿರುತ್ತದೆ. ಏಕೆಂದರೆ— ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡವರಿಗೆ ಕೂಡಲೇ ಶರೀರಾದಿಗಳು ಹೋಗುವುದಾದರೆ ಬ್ರಹ್ಮಜ್ಞಾನಿಗಳು ಮಾಡತಕ್ಕ ಬ್ರಹ್ಮೋಪದೇಶಗಳು ವಿಶ್ವಾಸಾನರ್ಹಗಳಾಗಬೇಕಾಗುವವು. ಹೀಗೆ ಹೇಳಕೂಡದು. ನೀವು ಹಿಂದಿನ ಅರ್ಥವನ್ನು ಸ್ಮರಿಸುವುದಿಲ್ಲ. ಪ್ರಸನ್ನನಾದ ಪರಮಾತ್ಮನೇ ಅನಾದಿಯಾದ ಸಂಸಾರಬಂಧವನ್ನು ನಾಶಗೊಳಿಸುತ್ತಾನೆಂದು ಹಿಂದೆ ಹೇಳಿರುವೆವು. ಆದಕಾರಣ ಪ್ರಸನ್ನನಾದ ಭಗವಂತನೇ ಅನಾದಿಯಾದ ಬಂಧಕ್ಕೆ ನಿವರ್ತಕನಾಗಿರುವುದರಿಂದ 'ಜ್ಞಾನಿನಾಂ ಮೋಕ್ಷದಶ್ಚ ಸಃ' 'ಆನಂದದಶ್ಚ ಮುಕ್ತಾನಾಂ' ಎಂದು ಹೇಳಿದ್ದು ಯುಕ್ತವೇ. (10) ಹಾಗಾದರೆ ಆನಂದವು ಜೀವನ ಸ್ವರೂಪವೇ ಆಗಿದೆ. ಆ ಆನಂದವು ಅವಿದ್ಯೆಯಿಂದ ಆವೃತವಾಗಿದ್ದದ್ದು ಅವಿದ್ಯೆಯು ನಿವೃತ್ತವಾದಕೂಡಲೇ ಸ್ವತಃ ಸಿದ್ಧವೇ. ಅನುಭವವೂ ಹೀಗೆಯೇ. ಆದಪ್ರಯುಕ್ತ ಮೋಕ್ಷವನ್ನು ಕೊಡುವುದಕ್ಕಿಂತ ಬೇರೆ ಆನಂದಾದಿಗಳನ್ನು

ಕೊಡುವುದು ಎನ್ನುವುದು ಹೇಗೆ ಕೂಡಬಹುದು. ಎಂದರೆ— (11) ಪರಮೇಶ್ವರನ ಶಕ್ತಿಯೇ ಮುಖ್ಯವಾಗಿ ಜೀವಸ್ವರೂಪಕ್ಕೆ ಆವರಣವು. ಅವಿದ್ಯೆಯು ಕೇವಲ ನಿಮಿತ್ತವು. ಆದಪ್ರಯುಕ್ತ ಅವಿದ್ಯೆಯು ಹೊರಟುಹೋದಾಗ್ಯೂ ಸಂಪೂರ್ಣ ಆನಂದಕ್ಕೆ ಅಭಿವ್ಯಕ್ತಿಯಿಲ್ಲ. ಎಷ್ಟು ಕಾಲ ಪರ್ಯಂತ ಈಶ್ವರನು ತನ್ನ ಬಂಧಕಶಕ್ತಿಯನ್ನು ಅದರಿಂದ ತೆಗೆಯುವುದಿಲ್ಲವೋ, ಅಷ್ಟರವರೆಗೆ ಅಭಿವ್ಯಕ್ತಿಯಿಲ್ಲ. ಆದಕಾರಣ ತನ್ನ ಇಚ್ಛಾರೂಪವಾದ ಆವರಣವನ್ನು ಜೀವಸ್ವರೂಪದಿಂದ ತೆಗಿಸಿ ಆನಂದಾಭಿವ್ಯಕ್ತಿಯನ್ನು ಕೊಡುವುದರಿಂದ 'ಆನಂದದಶ್ಚ ಮುಕ್ತಾನಾಂ' ಎಂದು ಹೇಳಿದ್ದು ಯುಕ್ತವು. (12) ಹೀಗೆ ಸಿದ್ಧಾಂತರೀತಿಯಾಗಿ ಸೂತ್ರವನ್ನು ವ್ಯಾಖ್ಯಾನಮಾಡಿ ಅದು ದೃಢವಾಗುವುದಕ್ಕಾಗಿ ಪರರ ಭಾಷ್ಯವನ್ನು 'ಬಂಧಮಿಥ್ಯಾತ್ವಂ' ಇತ್ಯಾದಿಗಳಿಂದ ದೂಷಿಸುತ್ತಾರೆ —

ಮಾಯಾವಾದಿಗಳು ಕರ್ತೃತ್ವ-ಭೋಕ್ತೃತ್ವ-ರಾಗದ್ವೇಷಾದಿ ದೋಷಸಂಸರ್ಗಾದಿರೂಪವಾದ ಬಂಧವು ಆತ್ಮನಲ್ಲಿ ಆರೋಪಿತವಾಗಿರುವುದರಿಂದ ಮಿಥ್ಯೆಯೆಂದು ತಮ್ಮ ಭಾಷ್ಯದ ಆದಿ ಭಾಗದಲ್ಲಿಯೇ ವರ್ಣಿಸಿರುವರು. ಅದಯುಕ್ತವು. ಹೇಗೆಂದರೆ— ಬಂಧವು ಮಿಥ್ಯೆಯೆಂದು ಸೂತ್ರದಲ್ಲಿ ಹೇಳಲಿಲ್ಲ. ಸೂತ್ರದಲ್ಲಿ ಹೇಳದೆ ಇದ್ದ ಅರ್ಥವನ್ನು ಹೇಳಿದರೆ ಆ ಗ್ರಂಥಕ್ಕೆ ಭಾಷ್ಯ ಲಕ್ಷಣವೇ ಇಲ್ಲವೆಂದಾಗುವುದರಿಂದ ಅದು ಭಾಷ್ಯವು ಆಗದೆ ಹೋಗುವುದು. (13) "**ಸೂತ್ರಾರ್ಥೋ ವರ್ಣ್ಯತೇ ಯತ್ರ ವಾಕ್ಯೈಃ ಸೂತ್ರಾನುಕಾರಿಭಿಃ । ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯ ವಿದೋ ವಿದುಃ**" ॥ ಸೂತ್ರವನ್ನನುಸರಿಸುವ ವಾಕ್ಯಗಳಿಂದ ಎಲ್ಲಿ ಸೂತ್ರಾರ್ಥವು ವರ್ಣಿಸಲ್ಪಡುತ್ತದೋ ತನ್ನ (ಭಾಷ್ಯಮಾಡುವವರ) ಪದಗಳೂ ವರ್ಣಿಸಲ್ಪಡುತ್ತವೋ, ಅಂತಹದನ್ನು ಭಾಷ್ಯವೆಂದು ಭಾಷ್ಯಜ್ಞರು ಹೇಳುತ್ತಾರೆ ಹೀಗೆ ಭಾಷ್ಯಲಕ್ಷಣವು. (14) ಈ ವಿಷಯದಲ್ಲಿ (೧) ವಿಷಯೋಪಪಾದಕತ್ವ— (೨) ಪ್ರಯೋಜನೋಪಪಾದಕತ್ವ— (೩) ಉಪೋದ್ಘಾತರೂಪತ್ವ ಹೀಗೆ ಮೂರು ಸಂಗತಿಗಳನ್ನು ಹೇಳಿ ಅಧ್ಯಾಸಭಾಷ್ಯವು ಯುಕ್ತವೆಂದು ಮಾಯಾವಾದಿಗಳು ಹೇಳುತ್ತಾರೆ.

ಶ್ರೌತ (ಪದಗಳಿಂದ ಸಾಕ್ಷಾತ್ತಾಗಿ ತಿಳಿಯತಕ್ಕ ಅರ್ಥ) ೨ ಆರ್ಥ (ಶ್ರೌತಾರ್ಥದಿಂದ ತೋರಿಬರತಕ್ಕ ಅರ್ಥವು) ಹೀಗೆ ಸೂತ್ರಾರ್ಥವು ಎರಡು ವಿಧವು. "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದಲ್ಲಿ ಅನುವಾದತ್ವವನ್ನು ಪರಿಹರಿಸುವುದಕ್ಕಾಗಿಯೂ, ಶಾಸ್ತ್ರದಲ್ಲಿ ಪುರುಷರಿಗೆ ಪ್ರವೃತ್ತಿಯು ಸಿದ್ಧಿಸುವುದಕ್ಕಾಗಿಯೂ 'ಕರ್ತವ್ಯಾ' ಎಂಬ ಪದವನ್ನು ಅಧ್ಯಾಹಾರಮಾಡಬೇಕು. ಜಿಜ್ಞಾಸಾ ಪದವು ಅನುಷ್ಠಾನಕ್ಕೆ ಯೋಗ್ಯವಾದ ವಿಚಾರಕ್ಕೆ ಉಪಲಕ್ಷಣವು. ಹೀಗೆ ಇರಲು ನಿತ್ಯಾನಿತ್ಯ ವಸ್ತುವಿವೇಕ ವಿಷಯವೈರಾಗ್ಯ ಶಮದಮಾದಿ ಮುಮುಕ್ಷಾರೂಪವಾದ ನಾಲ್ಕು ಸಾಧನಗಳಿಂದೊಡಗೂಡಿದವನಿಗೆ ಬ್ರಹ್ಮಜ್ಞಾನಕ್ಕಾಗಿ ವೇದಾಂತವಾಕ್ಯವಿಚಾರವು ಮಾಡತಕ್ಕದ್ದು. ಹೀಗೆ ಸೂತ್ರವಾಕ್ಯಕ್ಕೆ ಶ್ರೌತವಾದ ಅರ್ಥವು. ಅರ್ಥಾತ್ ಅಧಿಕಾರಿಯಲ್ಲಿ ವಿಶೇಷಣಭೂತವಾದ ಮುಕ್ತಿಗೆ ಸಾಧನವು ಬ್ರಹ್ಮಜ್ಞಾನವೆಂದು ಸಿದ್ಧಿಸುವುದು. ಹೀಗೆ ಶ್ರುತಿ ಅರ್ಥ ಇವುಗಳಿಂದ ಅಂದರೆ— ಶ್ರೌತ ಆರ್ಥಿಕವಾಗಿ ನಾಲ್ಕು ಸಾಧನಗಳಿಂದ ಯುಕ್ತನಾದವನು ಮುಕ್ತಿಗೆ ಸಾಧನವಾದ ಬ್ರಹ್ಮಜ್ಞಾನಕ್ಕಾಗಿ ವೇದಾಂತವಾಕ್ಯವಿಚಾರವನ್ನು ಮಾಡಬೇಕು. ಹೀಗೆ ಸೂತ್ರವಾಕ್ಯಕ್ಕೆ ತಾತ್ಪರ್ಯದಿಂದ ಪ್ರತಿಪಾದ್ಯವಾದ ಅರ್ಥವು ತಿಳಿಯುತ್ತದೆ. ಏವಂಚ ಶಾಸ್ತ್ರದಲ್ಲಿ ಪ್ರೇಕ್ಷಾವಂತರ ಪ್ರವೃತ್ತಿಗೆ ಅಂಗವಾಗಿ ಅರ್ಥಾತ್ ಸೂತ್ರದಿಂದ ಬೋಧಿತಗಳಾದ ಪ್ರಯೋಜನಾದಿಗಳಿಗೆ ಉಪಪಾದಕವಾಗಿರುವುದರಿಂದ ಬಂಧಮಿಥ್ಯಾತ್ವವೂ ಸೂತ್ರಾರ್ಥವೇ.

ಬಂಧಮಿಥ್ಯಾತ್ವಕ್ಕೆ ಪ್ರಯೋಜನೋಪಪಾದಕತ್ವವು ಹೇಗೆಂದರೆ— ಬ್ರಹ್ಮಜ್ಞಾನವು ಅನರ್ಥ ಕಾರಣವನ್ನು ನಾಶಗೊಳಿಸತಕ್ಕದ್ದೆಂದು ಸೂತ್ರದಲ್ಲಿ ಹೇಳಲ್ಪಟ್ಟದೆ. ಅನರ್ಥವು ಕರ್ತೃತ್ವ ಭೋಕ್ತೃತ್ವಾದಿರೂಪ ಬಂಧವು. ಅದು ಸತ್ಯವಾಗಿದ್ದರೆ ಜ್ಞಾನದಿಂದ ನಾಶವಾಗಲಾರದು. ಏಕೆಂದರೆ— ಜ್ಞಾನವು ಅಜ್ಞಾನಕ್ಕೇನೇ ನಿವರ್ತಕವು. ಆ ಕರ್ತೃತ್ವಾದಿರೂಪಬಂಧವು ಅಜ್ಞಾನ ಕಾರ್ಯವಾದರೆ ಅದರಿಂದ ಬ್ರಹ್ಮಜ್ಞಾನವು ಅನರ್ಥಕಾರಣವನ್ನು ನಾಶಗೊಳಿಸುವುದೆಂದು ಹೇಳಿದ್ದು ಯುಕ್ತವಾಗಬಹುದು. ಆದಕಾರಣ ಬ್ರಹ್ಮಜ್ಞಾನವು ಅನರ್ಥಕಾರಣವನ್ನು ನಾಶ ಗೊಳಿಸುವುದೆಂದು ಸೂತ್ರಮಾಡಿರುವ ಸೂತ್ರಕಾರರಿಂದಲೇ ಕರ್ತೃತ್ವ ಭೋಕ್ತೃತ್ವಾದಿರೂಪ ಬಂಧವು ಅವಿದ್ಯೆಯೇ ಕಾರಣವಾಗಿ ಉಳ್ಳದ್ದೆಂದು ತೋರಿಸಲ್ಪಟ್ಟಿತು.

ಬಂಧಮಿಥ್ಯಾತ್ವಕ್ಕೆ ವಿಷಯೋಪಪಾದಕತ್ವವು ಹೇಗೆಂದರೆ— ಬ್ರಹ್ಮನು ವಿಚಾರವಿಷಯ ನೆಂದು ಸೂತ್ರದಲ್ಲಿ ಹೇಳಲ್ಪಟ್ಟದೆ. ಜೀವನೇ ಬ್ರಹ್ಮನು. ಆ ಜೀವನಿಗೆ ನಾನು ಕರ್ತನು, ಭೋಕ್ತನು ಎಂದು ತೋರುವ ರೂಪವು ಪಾರಮಾರ್ಥಿಕವಾಗಿದ್ದರೆ ಆಗ ಸಂಶಯಗ್ರಸ್ತನಾಗ ದಿರುವುದರಿಂದ ವಿಚಾರವಿಷಯತ್ವವೇ ಕೂಡಲಾರದು. ಆ ಜೀವನಲ್ಲಿ ತೋರುವ ಕರ್ತೃತ್ವಾದಿ ರೂಪ ಬಂಧವು ಅವಿದ್ಯೆಯಿಂದ ಆರೋಪಿತವು. ನಿಷ್ಕಲತ್ವ- ನಿಷ್ಕ್ರಿಯತ್ವಾದಿ ಬ್ರಹ್ಮರೂಪವೇ ಪಾರಮಾರ್ಥಿಕವು ಎಂದಾದರೆ ಈ ರೂಪದಿಂದ ಅವನು ನಿಶ್ಚಿತನಾಗದಿರುವಪ್ರಯುಕ್ತ ಸಂದಿಗ್ಧ ನಾಗಿರುವುದರಿಂದ ಜೀವನಿಗೆ ವಿಷಯತ್ವವು ಹೇಳಿದ್ದು ಯುಕ್ತವಾಗಬಹುದು. ಆದಕಾರಣ ಆತ್ಮಸ್ವರೂಪವು ವಿಚಾರಕ್ಕೆ ವಿಷಯವು ಎಂದು ಸೂತ್ರಮಾಡಿದ ವೇದವ್ಯಾಸರಿಂದಲೇ ಕರ್ತೃತ್ವಾದಿ ಬಂಧಕ್ಕೆ ಮಿಥ್ಯಾತ್ವವಿದೆ ಎಂದು ಸೂತ್ರದಿಂದ ಹೇಳಿದಂತೆಯೇ ಆಯಿತು. (15) ಶ್ರೌತ ಆರ್ಥಿಕ ಎಂದು ಭೇದವಿರುವುದರಿಂದಲೂ ಸೂತ್ರವಾಗಿರುವುದರಿಂದಲೂ ಸೂತ್ರಕ್ಕೆ ಅನೇಕಾರ್ಥತ್ವವು ಪ್ರಾಪ್ತವಾಯಿತೆನ್ನುವ ದೋಷವಿರುವುದಿಲ್ಲ. ಸೂತ್ರಕ್ಕೆ ಅನೇಕಾರ್ಥವಿರುವುದು ಅಲಂಕಾರವೇ. ಏಕೆಂದರೆ— **"ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ । ಅಸ್ತೋಭಮನ ವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ"** ॥ ಎಷ್ಟು ಅಕ್ಷರಗಳಿಲ್ಲದೆ ನಿರ್ವಾಹವಿಲ್ಲವೋ, ಅಷ್ಟೇ ಅಕ್ಷರಗಳಿರಬೇಕು. ಸಂಶಯವನ್ನು ಹುಟ್ಟಿಸಬಾರದು. ಉತ್ಕೃಷ್ಟಾರ್ಥವನ್ನು ಪ್ರತಿ ಪಾದಿಸಬೇಕು. ಅನೇಕ ಶಾಖೆಗಳನ್ನು ನಿರ್ಣಯಿಸತಕ್ಕದಾಗಿರಬೇಕು. ಅಂದರೆ ಅನೇಕಾರ್ಥ ಗಳಿರಬೇಕು. ವ್ಯರ್ಥಾಕ್ಷರಗಳಿರಬಾರದು. ಅಪಶಬ್ದಗಳಿರಬಾರದು. ಇಂತಹದನ್ನು ಸೂತ್ರ ವೆಂದು ಸೂತ್ರಜ್ಞರು ಹೇಳುವರು. **'ಅಘೂನಿ ಸೂಚಿತಾರ್ಥಾನಿ ಸ್ವಲ್ಪಾಕ್ಷರ ಪದಾನಿ ಚ । ಸರ್ವತಃ ಸಾರಭೂತಾನಿ ಸೂತ್ರಾಣ್ಯಾಹುರ್ಮನೀಷಿಣಃ'** ॥ ಎಷ್ಟು ಅರ್ಥವು ಸೂಚಿತವಾಗು ತ್ತದೋ, ಅವೆಲ್ಲವೂ ಸೂತ್ರಾರ್ಥವು. ಆದಪ್ರಯುಕ್ತ ವಿಧಿಯಿಂದ ಅಪೇಕ್ಷಿತಗಳಾದ ಅಧಿಕಾರಿ, ವಿಷಯ, ಪ್ರಯೋಜನ, ಈ ಅನುಬಂಧಗಳಲ್ಲಿ ಸೂತ್ರದಿಂದ ಆಕ್ಷಿಪ್ತಗಳಾದ ಪ್ರಯೋಜನವಿಷಯ ಗಳನ್ನುಪಪಾದಿಸುವ ಬಂಧಮಿಥ್ಯಾತ್ವವನ್ನು ಪ್ರತಿಪಾದಿಸತಕ್ಕ 'ಯುಷ್ಮದಸ್ಮತ್ಪ್ರತ್ಯಯಗೋಚ ರಯೋಃ' ಇತ್ಯಾದಿ ಭಾಷ್ಯವೂ ಸೂತ್ರಾರ್ಥಸಂಗತವೇ ಸರಿ.

ಹೀಗೆ ಅದ್ವೈತಿಗಳು ವಿಷಯೋಪಪಾದಕತ್ವ ಪ್ರಯೋಜನೋಪಪಾದಕತ್ವ ರೂಪಗಳಾದ ಎರಡು ಸಂಗತಿಗಳನ್ನು ಅಧ್ಯಾಸ ಭಾಷ್ಯಕ್ಕೆ ಹೇಳಿ ಈಗ ಉಪೋದ್ಘಾತರೂಪವಾದ ಸಂಗತಿ ಯನ್ನು ನಿರೂಪಿಸುವರು—

(16) ಪ್ರಥಮತಃ ಜ್ಞಾತವಾದ ಶ್ರೌತಾರ್ಥವನ್ನುಲ್ಲಂಘಿಸಿ ಅಂತ್ಯದಲ್ಲಿ ತಿಳಿಯುವ ಆರ್ಥಿಕಾ ರ್ಥವನ್ನೇ ಉಪಪಾದಿಸುವ ಭಾಷ್ಯಕಾರರು ಅಕುಶಲರೆಂದು ಹೇಳಕೂಡದು. ಏಕೆಂದರೆ—

'ಯುಷ್ಮದಸ್ಮತ್' ಇತ್ಯಾದಿ ಭಾಷ್ಯವು ಪ್ರಥಮ ಸೂತ್ರದಿಂದ ಆಕ್ಷಿಪ್ತವಾದ ಅರ್ಥವನ್ನೇ ಉಪಪಾದಿಸುವುದಾದರೆ ಭಾಷ್ಯಕಾರರಿಗೆ ಅಕೌಶಲ್ಯವು ಬರಬಹುದಿತ್ತು. ಹಾಗಲ್ಲ. ಸಕಲ ಶಾಸ್ತ್ರದ ಉಪೋದ್ಘಾತವೂ ಈ ಭಾಷ್ಯಕ್ಕೆ ಪ್ರಯೋಜನವು. ಜೀವನಿಗೆ ಬ್ರಹ್ಮಚೈತನ್ಯದಿಂದ ಐಕ್ಯವೇ ಪಾರಮಾರ್ಥಿಕ ಸ್ವರೂಪವು. ಹೀಗೆ ವೇದಾಂತಿಗಳಿಗೆ ತಾತ್ಪರ್ಯವಿದೆ ಎಂದು ಹೇಳುವುದೇ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ತಾತ್ಪರ್ಯಾರ್ಥವು. ಅದು ನಾನು ಕರ್ತನು, ಇತ್ಯಾದಿ ಪ್ರತ್ಯಕ್ಷದಿಂದ ವಿರುದ್ಧವಾಗುತ್ತದೆ. ಆ ವಿರೋಧವನ್ನು ಪರಿಹರಿಸುವುದಕ್ಕಾಗಿ ಬ್ರಹ್ಮನ ನಿಷ್ಕಲತ್ವ (೧೬ ಕಲೆಗಳಿಲ್ಲದಿರುವಿಕೆ) ನಿಷ್ಕ್ರಿಯತ್ವ (ಸರ್ವ ಕ್ರಿಯಾರಾಹಿತ್ಯ) ಮೊದಲಾದ ಸ್ವರೂಪದಿಂದ ವಿಪರೀತವಾದ ಕರ್ತೃತ್ವ ಭೋಕ್ತೃತ್ವಾದಿ ರೂಪವು ಜೀವನಿಗೆ ಅವಿದ್ಯಾಕಾರ್ಯ ವೆಂದು ಎಷ್ಟರತನಕ ಪ್ರತಿಪಾದಿಸುವುದಿಲ್ಲವೋ ಅಷ್ಟರತನಕ * ಜರದ್ಗವಾದಿ ವಾಕ್ಯದಂತೆ ಈ ಶಾಸ್ತ್ರವು ಅನರ್ಥಕವೆಂದು ತೋರುವುದು. ಅದನು ನಿವೃತ್ತಿಗೊಳಿಸುವುದಕ್ಕಾಗಿ ಜೀವನಿಗೆ ಬ್ರಹ್ಮಸ್ವರೂಪಕ್ಕಿಂತ ವಿಪರೀತ ಸ್ವರೂಪವು ಅವಿದ್ಯೆಯಿಂದ ತೋರಿದ್ದೆಂದು ಮೊದಲೇ ಪ್ರೇಕ್ಷಾವಂತರ ಪ್ರವೃತ್ತಿಗಾಗಿ ಪ್ರತಿಪಾದಿಸಬೇಕು. ಅದೇ ಈ ಆದಿ ಭಾಷ್ಯದಿಂದ ಪ್ರತಿಪಾದಿಸಲ್ಪಡುತ್ತದೆ.

(17)ಹೀಗೆ ಆದಿಭಾಷ್ಯಕ್ಕೆ ಅದ್ವೈತಿಗಳು ಹೇಳಿದ ಮೂರು ಸಂಗತಿಗಳೂ(ಅಂದರೆ ಪ್ರಯೋಜನವನ್ನುಪಪಾದಿಸುತ್ತದೆ. ವಿಷಯವನ್ನುಪಪಾದಿಸುತ್ತದೆ, ಸರ್ವಶಾಸ್ತ್ರಗಳಿಗೂ ಉಪೋದ್ಘಾತ ರೂಪವು ಹೀಗೆ ೩ ಪ್ರಕಾರವೂ) ಅಸಂಗತವು. ಹೇಗೆಂದರೆ—(ಬಂಧಮಿಥ್ಯಾತ್ವವು ಸೂತ್ರದಲ್ಲಿ ಹೇಳಿಧ ಪ್ರಯೋಜನದಿಂದ ಆಕ್ಷಿಪ್ತವಾಗುತ್ತದೆ ಎನ್ನುವುದು ಅಂದರೆ, (ಬಂಧವು ಮಿಥ್ಯೆಯಲ್ಲದೆ ಹೋದರೆ ಸೂತ್ರದಲ್ಲಿ ಹೇಳಿರುವ ಫಲವು ಕೂಡುವುದಿಲ್ಲವೆಂಬುವುದು ಅಸಂಗತವು. ಯಾವುದು ಪ್ರಮಾಣಸಿದ್ಧವಾದಾಗ್ಯೂ ತಾನು ಕೂಡದಿರುವುದಾಗಿ ತನ್ನ ಉಪಪತ್ತಿಗಾಗಿ ಯಾವುದನ್ನು ಅಪೇಕ್ಷಿಸುತ್ತದೋ, ಅದು ಅದನ್ನು ತಿಳಿಸುತ್ತದೆ. ಬೇರೆ ಯಾವುದನ್ನೂ ತಿಳಿಸುವುದಿಲ್ಲ.)ಉದಾ- ಜೀವಿಸಿಕೊಂಡಿರುವ ದೇವದತ್ತನು ಮನೆಯಲ್ಲಿಲ್ಲವೆನ್ನುವುದು ಹೊರಗೆ ಇದ್ದಾನೆನ್ನುವುದನ್ನು ಮಾತ್ರ ತಿಳಿಸುತ್ತದೆ. ಶಬ್ದಕ್ಕೆ ಅನಿತ್ಯತ್ವವನ್ನು ತಿಳಿಸುವುದಿಲ್ಲ. ಏಕೆಂದರೆ– ಮನೆಯಲ್ಲಿಲ್ಲ ವೆನ್ನುವುದು ಹೊರಗೆ ಇದ್ದಾನೆ ಎನ್ನುವುದರಿಂದಲೇ ಕೂಡುವುದಾಗಿ ಅದನ್ನೇ ಅಪೇಕ್ಷಿಸುತ್ತದೆ. ಅಂತೂ ಪ್ರಯೋಜನವಾಗಿ ಹೇಳಲ್ಪಟ್ಟ ಮುಕ್ತಿಯು ಬಂಧಮಿಥ್ಯಾತ್ವವನ್ನು ಅಪೇಕ್ಷಿಸುವುದಾದರೆ (ಅದನ್ನು ಹೊರತು ಕೂಡದಿರುವುದಾದರೆ) ಅದನ್ನು ತಿಳಿಸೀತು. ಹೀಗೆ ಇಲ್ಲವೇ ಇಲ್ಲವೆನ್ನುತ್ತಾರೆ. (೧) 'ಬಂಧಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ' ಮುಕ್ತಿರೂಪ ಪ್ರಯೋಜನವು ಬಂಧಕ್ಕೆ ಮಿಥ್ಯಾತ್ವವಿಲ್ಲದೇನೇ ಯುಕ್ತವು. ಬಂಧವು ಜ್ಞಾನದಿಂದ ನಿವೃತ್ತವಾಗುವುದಾದರೆ ಬಂಧನಿವೃತ್ತಿ ರೂಪವಾದ ಮುಕ್ತಿಯು ಕಥಂಚಿತ್ ಬಂಧಮಿಥ್ಯಾತ್ವವನ್ನು ಅಪೇಕ್ಷಿಸಬಹುದಿತ್ತು. ಹಾಗಲ್ಲ. ಜ್ಞಾನದಿಂದ ಪ್ರಸನ್ನನಾದ ಶ್ರೀ ಹರಿಯೇ ಬಂಧನಿವೃತ್ತಿಯನ್ನು ಮಾಡುತ್ತಾನೆ. ಸತ್ಯವಾದುದಕ್ಕೂ ಪ್ರಭುವಿನ ಪ್ರಸಾದದಿಂದ ನಿವೃತ್ತಿಯು ಆಗುವುದೆಂದು ಮೇಲೆ ಹೇಳಲ್ಪಡುತ್ತದೆ. ಆದ ಕಾರಣ ಸತ್ಯಕ್ಕೂ ನಿವೃತ್ತಿಯು ಯುಕ್ತವೇ ಆಗುತ್ತದೆ. (೨) ಸತ್ಯಭೂತವಾದ ಬಂಧಕ್ಕೆ ನಾಶವಾಗುವುದಾದರೆ ಸತ್ಯನಾದ ಆತ್ಮನಿಗೂ ನಾಶಬರಲಿ ಎಂದು ಆಪಾದಿಸ(ಹೇಳ)ಕೂಡದು. ಹೀಗೆ ಆಪಾದಿಸಲಿಕ್ಕೆ ವ್ಯಾಪ್ತಿಯಿರುವುದಿಲ್ಲ. ಮತ್ತು ಅಜ್ಞಾನವು ಜ್ಞಾನದಿಂದ ನಿವೃತ್ತವಾಗುತ್ತದೆ ಎಂಬುವ ನಿಮ್ಮ ಪಕ್ಷದಲ್ಲಿಯೂ ಅನಾದಿಯಾದ ಅಜ್ಞಾನಕ್ಕೆ ನಾಶಹೇಳಿದರೆ ಅನಾದಿಯಾದ

* 'ಜರದ್ಗವಃ ಕಂಬಲಪಾದುಕಾಭ್ಯಾಂ ದ್ವಾರಿಸ್ಥಿತೋ ಗಾಯತಿ ಭದ್ರಕಾಣಿ' ಮುದಿಯಾದ ಎತ್ತು ಬಾಗಲಿನಲ್ಲಿದ್ದು ಕಂಬಲಪಾದುಕಗಳಿಂದ ಮಂಗಲಗಳನು ಗಾನಮಾಡುತ್ತದೆ

ಆತ್ಮನಿಗೂ ನಾಶಬರಲಿ ಎಂಬುವ ಅನಿಷ್ಟವು ನಿಮಗೂ ಬರಬಹುದು. ಅಜ್ಞಾನವು ಅನಾದಿಯಾದಾಗ್ಯೂ ಮಿಥ್ಯೆಯಾದಕಾರಣ ನಾಶವನ್ನು ಹೊಂದುತ್ತದೆ. ಆತ್ಮನು ಸತ್ಯನಾದಪ್ರಯುಕ್ತ ಆತನಿಗೆ ನಾಶವಿಲ್ಲವೆನ್ನುತ್ತೇವೆ ಎಂದರೆ ಹೀಗೆ ಹೇಳಕೂಡದು. ಯಾವುದು ಸತ್ಯವೋ ಅದು ನಿವೃತ್ತಿಯನ್ನು ಹೊಂದುವುದಿಲ್ಲ, ಎನ್ನುವ ವ್ಯಾಪ್ತಿಯು ಎಲ್ಲಿಯೂ ದೃಷ್ಟವಾಗಲಿಲ್ಲ. ಮತ್ತು ಸತ್ಯವಾದ ವಿಷವೂ ಗರುಡನ ಧ್ಯಾನದಿಂದ ನಿವೃತ್ತವಾಗುವುದರಿಂದ ಬಂಧವು ಜ್ಞಾನದಿಂದ ನಿವೃತ್ತವಾಗುತ್ತದೆಂದು ಹೇಳಿದರೂ ಬಂಧಕ್ಕೆ ಮಿಥ್ಯಾತ್ವವನ್ನು ಮುಕ್ತಿಯು ಅಪೇಕ್ಷಿಸುವುದೇ ಇಲ್ಲ. ಧ್ಯಾನವು ಕ್ರಿಯಾವಿಶೇಷವು, ಜ್ಞಾನರೂಪವಲ್ಲ, ಎಂದೆನ್ನಕೂಡದು. ಶ್ರವಣ ದರ್ಶನಾದಿಗಳಿಂದುಂಟಾಗತಕ್ಕ ಮಾನಸವಾಸನಾಮಯವಾದ ವಸ್ತುವನ್ನು ಮನಸ್ಸಿನಿಂದ ನೋಡುವುದು ಧ್ಯಾನವೆನ್ನಿಸುತ್ತದೆ. ಮತ್ತು ಸೇತು (ಸಮುದ್ರ) ದರ್ಶನಾದಿಗಳಿಂದ ಸತ್ಯಗಳಾದ ಪಾಪಾದಿಗಳು ನಿವೃತ್ತಗಳಾಗುತ್ತವೆ ಎನ್ನುವುದು "ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ" ಇತ್ಯಾದಿ ಪುರಾಣ ಪ್ರಸಿದ್ಧವು. (೩) ಮತ್ತು ಮುಕ್ತಿಯು ಬಂಧವಿಧ್ವಂಸರೂಪವಾಗಿರುವುದರಿಂದ ಬಂಧಕ್ಕೆ ಮಿಥ್ಯಾತ್ವವನ್ನು ಅಪೇಕ್ಷಿಸುವುದೇ ಇಲ್ಲ. ಸತ್ಯತ್ವವನ್ನೇ ಅಪೇಕ್ಷಿಸುತ್ತದೆ. ಮಿಥ್ಯೆಯಾದ ಶಶವಿಷಾಣಾದಿಗಳಿಗೆ ಧ್ವಂಸವಿಲ್ಲವಷ್ಟೆ! (೪) ಬಂಧಾತ್ಯಂತಾಭಾವವೇ ಮುಕ್ತಿಯೆಂದರೆ ಹೀಗೆ ಶ್ರುತಿಸೂತ್ರಗಳು ಹೇಳುವುದಿಲ್ಲ. 'ತರತಿ ಶೋಕಮಾತ್ಮವಿತ್' ಆತ್ಮಜ್ಞಾನಿಯು ಶೋಕರೂಪವಾದ ಬಂಧವನ್ನು ನಾಶಮಾಡಿಕೊಳ್ಳುತ್ತಾನೆ, ಇತ್ಯಾದಿಗಳಲ್ಲಿ ವಿಪರೀತವಾಗಿಯೇ ಅಂದರೆ ಬಂಧಧ್ವಂಸವೇ ಮೋಕ್ಷವೆಂದು ಹೇಳಿರುತ್ತದೆ. ಅಲ್ಲದೆ ಬ್ರಹ್ಮಜ್ಞಾನವು ಜೀವಗತವಾದ ಬಂಧವನ್ನು ನಿವರ್ತಿಸುತ್ತದೆ ಎಂದು ಸೂತ್ರದಲ್ಲಿ ಹೇಳಿದ ಪ್ರಯೋಜನೋಕ್ತಿಯು ಬಂಧಮಿಥ್ಯಾತ್ವವನ್ನು ಅಪೇಕ್ಷಿಸುವುದಿಲ್ಲ. ಜೀವಜ್ಞಾನವು ಜೀವನಲ್ಲಿರುವ ಬಂಧವನ್ನು ನಿವರ್ತಿಸುತ್ತದೆ ಎಂದು ಪ್ರಯೋಜನೋಕ್ತಿಯು ಸೂತ್ರದಲ್ಲಿರುತ್ತಿದ್ದರೆ ಆಗ ಕಥಂಚಿತ್ ಬಂಧಮಿಥ್ಯಾತ್ವವನ್ನು ಅಪೇಕ್ಷಿಸಬಹುದಿತ್ತು. ಹೀಗೆ ಸೂತ್ರಕಾರರು ಹೇಳಲಿಲ್ಲ (೫) ಬ್ರಹ್ಮಜ್ಞಾನವೆಂದರೆ 'ತ್ವಂ' ಪದಾರ್ಥನಾದ ಜೀವನಿಗೆ 'ತತ್' ಪದಾರ್ಥನಾದ ಬ್ರಹ್ಮನಿಂದ ಐಕ್ಯಾನುಭವವೇ, ಎನ್ನುವ ಮಾತನ್ನು ತಮ್ಮವರಲ್ಲಿ ಮಾತ್ರ ಹೇಳಬಹುದು, ಸಭೆಯಲ್ಲಿ ಹೇಳಲರ್ಹವಲ್ಲ. ಹೀಗೆ ಇಷ್ಟರವರೆಗೆ, ಸೂತ್ರದಲ್ಲಿ ಹೇಳಿದ ಪ್ರಯೋಜನದಿಂದ ಆಕ್ಷಿಪ್ತವಾದ ಬಂಧಮಿಥ್ಯಾತ್ವವು ವರ್ಣಿತವಾಗಿದೆ ಎನ್ನುವುದು ನಿರಾಕರಿಸಲ್ಪಟ್ಟಿತು. (೬) ಅಥವಾ ಬಂಧಮಿಥ್ಯಾತ್ವವು ವಿಷಯೋಕ್ತಿಯಿಂದಲೂ ಆಕ್ಷಿಪ್ತವಾಗುತ್ತದೆ ಎನ್ನುವುದನ್ನು ಇದರಿಂದಲೇ ನಿರಾಕರಿಸುತ್ತಾರೆ—

ಏವಂ ಉಕ್ತಿಃ=ಸೂತ್ರದಲ್ಲಿ ಹೇಳಿದ ಬ್ರಹ್ಮನು ವಿಷಯನೆನ್ನುವ ವಚನವು, ಬಂಧಮಿಥ್ಯಾತ್ವವನ್ನು ಅಪೇಕ್ಷಿಸುವುದೇ ಇಲ್ಲವು. ಸೂತ್ರದಲ್ಲಿ 'ಜೀವಾತ್ಮನು ವಿಷಯನೆನ್ನುವ ವಚನವು ಇರುತ್ತಿದ್ದರೆ ಆಗ ಆ ವಚನವು ಜೀವಾತ್ಮನಿಗೆ ಸಂದಿಗ್ಧತ್ವವು ಸಿದ್ಧಿಸುವುದಕ್ಕಾಗಿ ಕರ್ತೃತ್ವಾದಿ ಬಂಧಕ್ಕೆ ಮಿಥ್ಯಾತ್ವವನ್ನು ಕಥಂಚಿತ್ ಅಪೇಕ್ಷಿಸುತ್ತಿತ್ತು. ಇಲ್ಲಿ ಬ್ರಹ್ಮನೇ ವಿಷಯನೆಂದು ಹೇಳಲ್ಪಡುತ್ತದೆ. ಒಬ್ಬನಿಗೆ ಸಂಶಯ ವಿಷಯತ್ವವಿದ್ದುದರಿಂದ ಇನ್ನೊಬ್ಬನಿಗೆ ವಿಚಾರ ವಿಷಯತ್ವವೆನ್ನುವುದು ಕೂಡಲಾರದಷ್ಟೆ! ಜೀವನೇ ಬ್ರಹ್ಮನೆನ್ನುವ ದುರಾಶೆಯನ್ನು ನಿರಾಕರಿಸುವೆವು. (೭) ಅಥವಾ 'ಯುಷ್ಮದಸ್ಮತ್' ಇತ್ಯಾದಿ ಭಾಷ್ಯಕ್ಕೆ ಸಕಲತಂತ್ರಾರ್ಥಗಳ ಉಪೋದ್ಘಾತವು ಪ್ರಯೋಜನವು ಎನ್ನುವುದನ್ನು ಇದರಿಂದಲೂ ತಿರಸ್ಕರಿಸುತ್ತಾರೆ. ಹೇಗೆಂದರೆ—

ಏವಂ=ಹೀಗೆ (ಅಂದರೆ ಸಕಲ ಪ್ರಪಂಚದ ಉತ್ಪತ್ತ್ಯಾದಿಗಳಿಗೆ ನಿಮಿತ್ತಕಾರಣನೂ ಸಮಸ್ತ ಜೀವ ಜಡಾತ್ಮಕ ಪ್ರಪಂಚದಿಂದ ಅತ್ಯಂತ ಭಿನ್ನನೂ ಆದ ಪರಬ್ರಹ್ಮನೇ ಸರ್ವ ವೇದಗಳಿಂದ

ಪ್ರತಿಪಾದ್ಯನು ಈ ಪ್ರಕಾರ) ಉಕ್ತಿಃ='ತತ್ತು ಸಮನ್ವಯಾತ್' ಇದುಮೊದಲಾದ ವಚನವು, ಜೀವಗತವಾದ ಬಂಧಮಿಥ್ಯಾತ್ವವನ್ನು ಅಪೇಕ್ಷಿಸುವುದೇ ಇಲ್ಲವು. ಈ ವಚನವು ಬ್ರಹ್ಮನಲ್ಲಿಯೇ ಪ್ರಮಾಣಾಭಾಸದಿಂದ ತಿಳಿಯತಕ್ಕ ಜೀವೈಕ್ಯಾದಿಗಳಿಗೇನೇ ಮಿಥ್ಯಾತ್ವವನ್ನು ಅಪೇಕ್ಷಿಸುತ್ತದೆ. ಜೀವನೇ ಬ್ರಹ್ಮನೆನ್ನುವಲ್ಲಿ ಸಮಸ್ತ ವೇದಾಂತಗಳಿಗೂ ಪರ್ಯವಸಾನವೆಂದು ಪ್ರತಿಪಾದಿಸುವುದಕ್ಕಾಗಿ ಈ ಶಾಸ್ತ್ರವು ಪ್ರವೃತ್ತವಾಗಿದ್ದರೆ ಆಗ ವಿರೋಧಗಳ ಶಾಂತಿಗಾಗಿ ಬಂಧಮಿಥ್ಯಾತ್ವದ ಅಪೇಕ್ಷೆಯು ಇರಬಹುದಿತ್ತು ಹೀಗೆ ಇಲ್ಲವು. ಏವಂಚ ಜ್ಞಾನದಿಂದ ಬಂಧನಿವೃತ್ತಿಯು ಬಂಧಕ್ಕೆ ಮಿಥ್ಯಾತ್ವವಿಲ್ಲದೆ ಕೂಡುವುದಿಲ್ಲವೆಂದಿಲ್ಲದಿರುವುದರಿಂದ ಆ ಬಂಧನಿವೃತ್ತಿರೂಪವಾದ ಮುಕ್ತಿಯು ಬಂಧಕ್ಕೆ ಮಿಥ್ಯಾತ್ವವನ್ನು ತಿಳಿಸಲಾರದು. ಆದುದರಿಂದ ಪ್ರಯೋಜನಾಕ್ಷಿಪ್ತವಾದದ್ದು ಬಂಧಕ್ಕೆ ಮಿಥ್ಯಾತ್ವವೆಂದು ಹೇಳಿದ್ದು ಯುಕ್ತವಲ್ಲ. ಅಂದರೆ— ಬಂಧಕ್ಕೆ ಮಿಥ್ಯಾತ್ವವಿಲ್ಲದೆ ಮುಕ್ತಿರೂಪ ಪ್ರಯೋಜನ ಹೇಳಿರುವುದು ಕೂಡುವುದಿಲ್ಲವೆಂಬುವುದು ಸರಿಯಲ್ಲ. (8) ಅರ್ಥಾಪತ್ತಿಗೆ ಬೇರೆ ದೋಷವನ್ನೂ ಹೇಳುತ್ತಾರೆ. ಮುಕ್ತಿಯು ಬಂಧಕ್ಕೆ ಮಿಥ್ಯಾತ್ವವನ್ನು ಮಾತ್ರ ಅಪೇಕ್ಷಿಸುವುದಿಲ್ಲವೆಂದಲ್ಲ ಮತ್ತೆ, ಬಂಧಸ್ಯ=ಬಂಧಕ್ಕೆ, ಮಿಥ್ಯಾತ್ವಂ=ಮಿಥ್ಯಾತ್ವವು, ನಾಪಿ=ಇಷ್ಟವೇ ಇಲ್ಲ. (9) ಏವಂಚ ಬಂಧಮಿಥ್ಯಾತ್ವವು 'ಅಹಂ ಕರ್ತಾ' ಇತ್ಯಾದಿ ಪ್ರತ್ಯಕ್ಷದಿಂದ ವಿರುದ್ಧವಾಗಿರುವ ಪ್ರಯುಕ್ತ ಅರ್ಥಾಪತ್ತಿರೂಪ ಪ್ರಮಾಣದಿಂದ ಸಿದ್ಧವಾಗಲಾರದು ಏಕೆಂದರೆ— ಇದು ಅರ್ಥಾಪತ್ತಿಯ ಸಾಮಗ್ರಿಯು. ಆಕ್ಷೇಪಕವು ಪ್ರಮಾಣಸಿದ್ಧವೂ, ಅನುಪಪದ್ಯಮಾನವೂ ಆಗಬೇಕು. ಆಕ್ಷೇಪ್ಯವು ಉಪಪಾದಕವೂ, ಪ್ರಮಾಣಗಳಿಂದ ಅವಿರುದ್ಧವೂ ಆಗಬೇಕು. ಆದಪ್ರಯುಕ್ತವೇ ಪ್ರಮಿತವಾಗದಿರುವುದೂ, ಅನುಪಪತ್ತಿಯಿಲ್ಲದಿರುವುದೂ ಬೇರೆ ರೀತಿಯಾಗಿಯೂ ಉಪಪತ್ತಿಯು. ಅನ್ಯಥೈವ ಉಪಪತ್ತಿಯೂ ಪ್ರಮಾಣವಿರುದ್ಧಾರ್ಥತ್ವವೂ ಇವುಗಳು ಅರ್ಥಾಪತ್ತಿಗೆ ದೂಷಣಗಳು. ಎಂದರೆ— ಸತ್ಯವೇ. ನಾವೂ ಬಂಧಮಿಥ್ಯಾತ್ವವು 'ನಾನು ಕರ್ತನು, ಭೋಕ್ತನು, ಸುಖಿಯು, ದುಃಖಿಯು' ಇದುಮೊದಲಾದ ಪ್ರತ್ಯಕ್ಷಗಳಿಂದ ವಿರುದ್ಧವಾಗಿರುವುದರಿಂದಲೇ ಅರ್ಥಾಪತ್ತಿಯಿಂದ ತಿಳಿಯಲರ್ಹವಲ್ಲ ಈ ಅಭಿಪ್ರಾಯದಿಂದಲೇ 'ಪ್ರತ್ಯಕ್ಷವಿರೋಧತಃ' ಎಂದು ಪ್ರತ್ಯಕ್ಷವಿರೋಧದಿಂದಲೂ, ಪ್ರಮಾಣಾಂತರಗಳಿಂದಲೂ ವಿರೋಧವದೆ. (10) ಚೇಷ್ಟಾದಿ (ಹಿತಪ್ರಾಪ್ತಿ ಅಹಿತ ಪರಿಹಾರಗಳಿಗೆ ಅನುಕೂಲವಾದ ಪರಿಸ್ಪಂದ ವಿಶೇಷವು) ಲಿಂಗಗಳಿಂದಲೂ "**ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ । ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ॥**" ಇತ್ಯಾದ್ಯಾಗಮಗಳಿಂದಲೂ ಆತ್ಮನು ಕರ್ತೃತ್ವಾದಿಗಳಿಂದ ಯುಕ್ತನೆಂದೇ ಪ್ರಮಾಣಸಿದ್ಧನು. (11) ಅಥವಾ ಅರ್ಥಾಪತ್ತಿಯು ಆಭಾಸವಾಗಿರುವ ಪ್ರಯುಕ್ತ ಆಕ್ಷೇಪದಿಂದ ಸಿದ್ಧವಾಗದಿರುವ ಬಂಧಮಿಥ್ಯಾತ್ವವನ್ನು ವರ್ಣಿಸತಕ್ಕ ಪರರ ಭಾಷ್ಯವು ಅನುಪಯುಕ್ತವು. ಪ್ರತ್ಯಕ್ಷಾದಿಗಳಿಂದ ವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವ ಪ್ರಯುಕ್ತ ಅಯುಕ್ತವೂ ಆಗಿದೆ, ಎಂದೂ 'ಪ್ರತ್ಯಕ್ಷವಿರೋಧತಃ' ಎನ್ನುವ ಮೂಲದಿಂದ ಹೇಳಲ್ಪಟ್ಟಿತು.

**ಸ. ರ. ವಿ.** (1) ರಾಜಾದಿಗಳ ಪ್ರಸಾದವು ಸತ್ಯಶೃಂಖಲೆ (ಸತ್ಯವಾದ ಬೇಡಿ) ಮೊದಲಾದ ಬಂಧವನ್ನು ನಿವರ್ತಿಸುವುದು. ಬಂಧವು ಜ್ಞಾನನಿವರ್ತ್ಯವೆಂದಂಗೀಕರಿಸದಿರುವುದರಿಂದ ಮಿಥ್ಯೆಯಲ್ಲ. ಮತ್ತು ಹೇಗೆ ಗರುಡನ ಧ್ಯಾನದಿಂದ ಸತ್ಯವಿಷವು ನಿವೃತ್ತವಾಗುವುದೋ, ಹಾಗೆಯೇ, ಸತ್ಯವಾದುದೂ (ಬಂಧವು) ಜ್ಞಾನದಿಂದ ನಿವೃತ್ತವಾಗಬಹುದು. (2) 'ನಾನು ದುಃಖಿಯು' ಇದುಮೊದಲಾದ ಅನುಭವವಿದ್ದುದರಿಂದ ಬಂಧವು ಮಿಥ್ಯೆಯೆನ್ನುವುದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ವಿರುದ್ಧವೂ ಆಗಿರುತ್ತದೆ. ದುಃಖ ಮೊದಲಾದ ಬಂಧವು ಮಿಥ್ಯೆಯೆಂದಾದರೆ

ಅದನ್ನು ಪ್ರತಿಪಾದಿಸತಕ್ಕ ವಾಕ್ಯವೂ ಮಿಥ್ಯೆಯಾಗಬೇಕಾಗುವುದು. ವಾಕ್ಯವೇ ಮಿಥ್ಯೆಯಾದರೆ ಆಗ ಬಾಧಕವೇ ಇಲ್ಲದಿರುವುದರಿಂದ ಬಂಧವು ಸತ್ಯವೆನ್ನುವುದು ಸಿದ್ಧಿಸುವುದು.

**ನ್ಯಾಯಸುಧಾ**— ಪುನಃ ಅದ್ವೈತಿಗಳು ಆಶಂಕಿಸುವರು. ಹಿಂದೆ ಹೇಳಿದ 'ಅಹಂ ಕರ್ತಾ' ಇತ್ಯಾದಿ ಪ್ರತ್ಯಕ್ಷವು ಪ್ರಮಾಣವಾಗಿದ್ದರೆ ತದ್ವಿರೋಧವು ಬಂಧಮಿಥ್ಯಾತ್ವಕ್ಕೆ ಬರಬಹುದಿತ್ತು. (ಉಪಕ್ರಮಾದಿ ತಾತ್ಪರ್ಯ ಲಿಂಗಬಲದಿಂದ ನಿರ್ಧರ್ಮಕಾತ್ಮಸ್ವರೂಪದಲ್ಲಿಯೇ ನಿಶ್ಚಿತ ತಾತ್ಪರ್ಯವುಳ್ಳ ಶ್ರುತಿಸ್ಮೃತಿ ಇತಿಹಾಸ ಪುರಾಣಗಳು ಕರ್ತೃತ್ವ ಭೋಕ್ತೃತ್ವಾದಿ ಧರ್ಮ ವಿರಹಿತವೂ,ಅದ್ವಿತೀಯವೂ ಆದ ಆತ್ಮಸ್ವರೂಪವನ್ನು ಪ್ರತಿಪಾದಿಸುತ್ತವೆ. ಅಂತಹ ಶ್ರುತ್ಯಾದಿಗಳಿಂದ ವಿರುದ್ಧವಾದ 'ನಾನು ಕರ್ತನು, ಭೋಕ್ತನು, ಸುಖಿಯು, ದುಃಖಿಯು' ಇದು ಮೊದಲಾದ ಪ್ರತ್ಯಕ್ಷವು ಶ್ರುತ್ಯಾದಿಗಳ ವಿರೋಧದಿಂದ ಅಪ್ರಮಾಣವಾಗಿ ಮಾಡಲ್ಪಡುತ್ತಿರಲು ಬಂಧಕ್ಕೆ ಮಿಥ್ಯಾತ್ವವನ್ನು ವ್ಯುತ್ಪಾದಿಸಿದ್ದು ಅತಿಯುಕ್ತವು ಎಂದು ಶಂಕಿಸಿದರೆ ಹಿಂದಿನ ಮೂಲದಿಂದಲೇ ಸಮಾಧಾನವನ್ನು ಹೇಳುವರು.

**ಮೂ ॥ ಮಿಥ್ಯಾತ್ವಂ ಯದಿ ದುಃಖಾದೇಸ್ತದ್ವಾಕ್ಯಸ್ಯಾಗ್ರತೋ ಭವೇತ್ ॥**

ಅ ॥ ಯದಿ=ಯಾವ ಪಕ್ಷದಲ್ಲಿ, ದುಃಖಾದೇಃ=ದುಃಖಮೊದಲಾದುದಕ್ಕೆ, ಮಿಥ್ಯಾತ್ವಂ= ಮಿಥ್ಯಾತ್ವವು, (ಶ್ರುತ್ಯಾದಿ ಸಾಮರ್ಥ್ಯದಿಂದ ಆಗುವುದಾದರೆ) ತತ್=ಹಾಗಾದರೆ, ತದ್ವಾಕ್ಯಸ್ಯ=ಆ ಶ್ರುತ್ಯಾದಿ ವಾಕ್ಯಕ್ಕೆ, ಅಗ್ರತಃ=ಪ್ರಥಮದಲ್ಲಿಯೇ (ಮಿಥ್ಯಾತ್ವವು) ಭವೇತ್= ಬರುವುದು.

ತಾ ॥ **ನ್ಯಾಯ ಸುಧಾ**— (1) 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ವಾಕ್ಯ ವಿರೋಧದಿಂದ ಪ್ರತ್ಯಕ್ಷವನ್ನು ಆಭಾಸವನ್ನಾಗಿ ಮಾಡಿ ಬಂಧಕ್ಕೆ ಮಿಥ್ಯಾತ್ವವರ್ಣನವು ಆಗಬಹುದಿತ್ತು. ಆದರೆ ಈ ಪ್ರಕ್ರಿಯೆಯು ಅತ್ಯಜ್ಞರಿಗೇನೇ ಮನೋಹರವು. ಆ ವಾಕ್ಯವು ಸರ್ವಕ್ಕೂ ಮಿಥ್ಯಾತ್ವವನ್ನು ಪ್ರತಿಪಾದಿಸುವುದಾದರೆ ಆಗಬಹುದಿತ್ತು. ಹೀಗೆ ಅಲ್ಲ. ಹೇಗೆಂದರೆ— (೧) ಆಪಾತತಃ ತೋರುವುದೇ ವಾಕ್ಯಾರ್ಥವೋ (೨) ಅಥವಾ "**ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ**" ಇದು ಮೊದಲಾಗಿ ಹೇಳಿದ ಲಿಂಗಗಳಿಗೆ ಅನುಗುಣವಾಗಿಯೂ ಅವಿರುದ್ಧವಾಗಿಯೂ ಇದ್ದದ್ದೇ ವಾಕ್ಯಾರ್ಥವೋ? (೧)ನೇದ್ದು ಕೂಡಲಾರದು. ಆಪಾತತಃ ತೋರುವುದೇ ಶ್ರುತ್ಯರ್ಥವಾದರೆ, ಶ್ರುತ್ಯರ್ಥನಿರ್ಣಾಯಕವಾದ, ನ್ಯಾಯವಿಚಾರರೂಪವಾದ ಮೀಮಾಂಸಾರಂಭವೇ ಆಗದೆ ಹೋಗುವುದು. (೨) ಉಪಕ್ರಮಾದಿಗಳು ಆವಶ್ಯಕವೆಂದಾದರೆ ಉಪಕ್ರಮಾದಿ ಲಿಂಗಗಳಲ್ಲಿ ಪ್ರಬಲವಾದ ಉಪಪತ್ತಿಯಿಂದ ವಿರುದ್ಧವಾಗಿರುವುದರಿಂದ ಈ ವಾಕ್ಯವು ಹೇಗೆ ತಾನೇ ಸರ್ವಮಿಥ್ಯಾತ್ವ ಪ್ರತಿಪಾದಕವಾಗುವುದು? (2) ಉಪಪತ್ತಿವಿರೋಧವು ಹೇಗೆಂದರೆ— ಆತ್ಮ ಹೊರತಾದ ದುಃಖಮೊದಲಾದ ಸಮಸ್ತಪ್ರಪಂಚಕ್ಕೂ ಮಿಥ್ಯಾತ್ವವು ಶ್ರುತ್ಯಾದಿ ಬಲದಿಂದ ಆಗುವುದಾದರೆ ಆ ಶ್ರುತ್ಯಾದಿವಾಕ್ಯಕ್ಕೇನೇ ಮಿಥ್ಯಾತ್ವವು ಬರಬೇಕು. ಶ್ರುತ್ಯಾದಿ ವಾಕ್ಯವೂ ಆತ್ಮನಿಂದ ಬೇರೆಯಾಗಿದೆಯಷ್ಟೆ. ಇಲ್ಲದಿದ್ದರೆ ತನ್ನಲ್ಲಿಯೇ ಪ್ರಾಮಾಣ್ಯವು ಭಗ್ನವಾಗಿರುವುದರಿಂದ ಯಾವುದೊಂದು ಅರ್ಥವನ್ನೂ ಪ್ರತಿಪಾದಿಸಲಾರದು. ಈ ವಾಕ್ಯವು ಮಿಥ್ಯೆಯೆಂದಾದರೆ ದುಃಖಾದಿಗಳಿಗೆ ಮಿಥ್ಯಾತ್ವವನ್ನು ಪ್ರತಿಪಾದಿಸಲಾರದು. ಮಿಥ್ಯೆಯಾದ ವಂಧ್ಯಾಸುತನ ಮಾತು ಸಾಧಕವಾಗುವುದಿಲ್ಲವಷ್ಟೆ. ಆದಪ್ರಯುಕ್ತ ಈ ವಾಕ್ಯಕ್ಕೆ ಮಿಥ್ಯಾತ್ವವಿದ್ದರೂ ಇಲ್ಲದಿದ್ದರೂ ಬಂಧಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸಲಿಕ್ಕೆ ಸಾಮರ್ಥ್ಯವಿಲ್ಲದಿರುವ ಪ್ರಯುಕ್ತ

ಪ್ರತ್ಯಕ್ಷವನ್ನು ಬಾಧಿಸುತ್ತದೆ ಎನ್ನುವುದು ಕೂಡದಿರುವುದರಿಂದ ದುಃಖವೊದಲಾದ ಬಂಧಕ್ಕೆ ಮಿಥ್ಯಾತ್ವವು ಸಿದ್ಧಿಸುವುದಿಲ್ಲ.

(3) ಈ ವಿಷಯದಲ್ಲಿ ತತ್ವಜ್ಞರು ಹೀಗೆ ಹೇಳುತ್ತಾರೆ.— ಜೀವರಲ್ಲಿ ಪರಮೇಶ್ವರನ ಅಧೀನಗಳಾದ ಕರ್ತೃತ್ವ, ಭೋಕ್ತೃತ್ವಾದಿಗಳು ಪಾರಮಾರ್ಥಿಕವಾಗಿಯೇ ಇರುತ್ತವೆ. ಅವುಗಳು ಪರಾಧೀನಗಳಲ್ಲವೆಂಬುವುದು ಅವಿದ್ಯಾನಿಮಿತ್ತಕವಾದ ಭ್ರಾಂತಿಯು. ಅವಿದ್ಯಾದಿಗಳು ಸ್ವರೂಪದಿಂದಲೂ ಆತ್ಮಸಂಬಂಧಿಯಾಗಿಯೂ ಪಾರಮಾರ್ಥಿಕವಾಗಿಯೇ ಇರತಕ್ಕವುಗಳು. ಹೀಗೆಯೇ ಬುದ್ಧಿ, ಇಂದ್ರಿಯ, ಶರೀರ ವಿಷಯಗಳೂ ಸತ್ಯಗಳಾಗಿಯೇ ಈಶ್ವರನ ಅಧೀನಗಳಾದಾಗ್ಯೂ ಅವಿದ್ಯಾವಶದಿಂದ ತಮ್ಮ ಅಧೀನವೇ ಎಂದು ಆರೋಪಿಸಲ್ಪಡುತ್ತವೆ. ತಮ್ಮಿಂದ ಭಿನ್ನಗಳಾದಾಗ್ಯೂ ಅವುಗಳನ್ನು ಭಿನ್ನಗಳೆಂದು ಸ್ಪಷ್ಟವಾಗಿ ತಿಳಿಯದೆ ಶರೀರಾದಿಗಳಿಂದುಂಟಾಗತಕ್ಕ ಸತ್ಯಗಳಾದ ದುಃಖಾದಿಗಳನ್ನು ಕೇವಲ ತನ್ನ ಅಧೀನವೇ ಎಂದು ಕಾಣುತ್ತಾ ಅದಕ್ಕೆ ಕಾರಣಗಳೂ ನೀಚೋಚ್ಚ ರೂಪಗಳೂ, ಸತ್ಯಗಳೂ ಆದ ವಿಕಾರಗಳನ್ನೇ ಹೊಂದುತ್ತಾನೆ. ಆದಕಾರಣ ರಾಗ ದ್ವೇಷಗಳಿಂದ ಪ್ರಯುಕ್ತನಾಗಿ ಅವುಗಳ ನಿವೃತ್ತಿಗಾಗಿ ಮಾಡಿದ್ದೆಲ್ಲವೂ ಹೀಗೆಯೇ ಆಗಿರುವುದರಿಂದ ಅನೇಕ ಯೋನಿಗಳಲ್ಲಿ ತಿರುಗುತ್ತಾ ಇರುತ್ತಾನೆ. ಪರಮಾತ್ಮನನ್ನು ಆರಾಧಿಸದೆ ಯಾವಾಗಲೂ, ಯಾವುದರಿಂದಲೂ ಸಂಪೂರ್ಣ ದುಃಖನಿವೃತ್ತಿಯನ್ನು ಹೊಂದಲಾರನು ಎನ್ನುವರು.

(4) ಮಾಯಾವಾದಿಗಳಾದರೂ ದುಃಖಾದಿಗಳನ್ನು ಸ್ವರೂಪದಿಂದಲೂ ಮಿಥ್ಯೆಯೆಂದು ತಿಳಿಯುತ್ತಾರೆ ಈ ರೀತಿಯಾಗಿ ದುಃಖಾದಿಬಂಧಕ್ಕೆ ಪರಾಧೀನತ್ವವಿಲ್ಲವೆನ್ನುವ ಅಂಶವು ಸುಳ್ಳಾದರೂ ದುಃಖಾದಿಗಳು ಸ್ವರೂಪತಃ ಸತ್ಯಗಳೇ ಆಗಿರುವುದರಿಂದ ಮಾಯಾವಾದಿಗಳು ನಿರೂಪಿಸಿರುವ ದುಃಖಾದಿ ಬಂಧಮಿಥ್ಯಾತ್ವವನ್ನು ನಿರಾಕರಿಸಿದ್ದು ಯುಕ್ತವೇ. ಹೀಗೆ ಶ್ರುತಿಯಿಂದ ಸರ್ವಕ್ಕೂ ಮಿಥ್ಯಾತ್ವವನ್ನು ಹೇಳುವುದಾದರೆ ಸರ್ವಾಂತಃಪಾತಿಯಾದ ಶ್ರುತಿಗೇನೇ ಮಿಥ್ಯಾತ್ವವು ಪ್ರಸಕ್ತವಾಗುವುದರಿಂದ ಸಾಧಕವಲ್ಲವೆಂದು ಆಗುವಾಗ ದುಃಖಾದಿ ಬಂಧಕ್ಕೆ ಮಿಥ್ಯಾತ್ವವು ಸಿದ್ಧಿಸದಿರುವುದರಿಂದ ಪ್ರತ್ಯಕ್ಷವು ಅತತ್ವಾವೇದಕವಲ್ಲವೆಂದಾಯಿತು. (5) "ನೇಹ ನಾನಾಸ್ತಿ ಕಿಂಚನ" ಎಂಬುವ ವಾಕ್ಯದಿಂದ ಆತ್ಮ ಹೊರತಾದ ಸಕಲ ವಸ್ತುವೂ ಮಿಥ್ಯೆಯೆಂದು ಒಂದೇ ಬುದ್ಧಿಯು ಹುಟ್ಟುತ್ತದೆ. ಬುದ್ಧಿಗೆ ವಿರಮ್ಯವ್ಯಾಪಾರವಿಲ್ಲ. ಆದಕಾರಣ 'ಅಗ್ರತಃ' ಎಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ— ವಾಕ್ಯದಿಂದ ಒಂದಾವರ್ತಿಯೇ ಹುಟ್ಟಿದ ಸಕಲ ಮಿಥ್ಯಾತ್ವವಿಷಯಕವಾದ ಬುದ್ಧಿಗೆ ಪ್ರಾಮಾಣ್ಯವನ್ನು ನಿರ್ಧರಿಸುವುದಕ್ಕಾಗಿ ಪರೀಕ್ಷಕರ ಬುದ್ಧಿಗಳೇ ಆ ವಿಷಯವನ್ನು ಬುದ್ಧಿಯಿಂದ ವಿಭಾಗಮಾಡಿಕೊಂಡು ಕ್ರಮದಿಂದ ವಿಷಯೀಕರಿಸುತ್ತವೆ. ಆದ ಪ್ರಯುಕ್ತ ದೋಷವಿಲ್ಲ. ॥ ೧೫ ॥ ೧೬ ॥

ನ್ಯಾಯಸುಧಾ— (ಶ್ರುತ್ಯಾದಿಗಳಿಗೆ ಮಿಥ್ಯಾತ್ವವಿದ್ದರೂ ಅವುಗಳು ಸಾಧಕಗಳಾಗಬಹುದು. ನಾವು ಮಿಥ್ಯಾಭೂತಗಳೇ ಸಾಧಕಗಳೆಂದು ಅಂಗೀಕರಿಸಿರುತ್ತೇವೆ.) ಎಂದರೆ—

ಮೂ ॥ ಮಿಥ್ಯಾಯಾಃ ಸಾಧಕತ್ವಂ ಚ ನ ಸಿದ್ಧಂ ಪ್ರತಿವಾದಿನಃ ॥ ೧೭ ॥
ತಚ್ಚ ಮಿಥ್ಯಾಪ್ರಮಾಣೇನ ಸತಾ ವಾ ಸಾಧ್ಯತೇ ತ್ವಯಾ ।
ಸತಾ ಚೇದ್ದ್ವೈತಸಿದ್ಧಿಃ ಸ್ಯಾನ್ನ ಸಿದ್ಧಂ ಚಾನ್ಯಸಾಧನಂ ॥ ೧೮ ॥
ಸಾಧಕತ್ವಂ ಸತಸ್ತೇನ ಸಾಕ್ಷಿಣಾ ಸಿದ್ಧಿಮಿಚ್ಛತಾ ।

**ಸ್ವೀಕೃತಂ ಹ್ಯವಿಶೇಷಸ್ಯ ಸಾಧ್ಯಾ ಸಾಧಕತಾ ಪುನಃ ।**
**ತಚ್ಚಾಪ್ಯವಿಶೇಷಮಾನೇನ ಸಾಧ್ಯಮಿತ್ಯನವಸ್ಥಿತಿಃ ॥ ೧೯ ॥**

ಅ ॥ ಯಾಃ=ಯಾವ ಶ್ರುತ್ಯಾದಿ ವಚನಗಳು, ಮಿಥ್ಯಾ = ಮಿಥ್ಯಾಭೂತಗಳೋ, (ಅವುಗಳಿಗೆ) ಸಾಧಕತ್ವಂ ಚ=ಸಾಧಕತ್ವವಾದರೂ, ಪ್ರತಿವಾದಿನಃ=ಪ್ರತಿವಾದಿಗಳಿಗೆ, ನ ಸಿದ್ಧಂ=ಸಿದ್ಧವಾಗಲಿಲ್ಲ. ತಚ್ಚ=ಮಿಥ್ಯೆಯಾದುದಕ್ಕೇನೇ ಸಾಧಕತ್ವವು, ತ್ವಯಾ = ನಿನ್ನಿಂದ, ಮಿಥ್ಯಾಪ್ರಮಾಣೇನ=ಮಿಥ್ಯೆಯಾದ ಪ್ರಮಾಣದಿಂದ, ಸಾಧ್ಯತೇ=ಸಾಧಿಸಲ್ಪಡುತ್ತದೋ? ಸತಾ ವಾ=ಸತ್ಯವಾದ ಪ್ರಮಾಣದಿಂದ ಸಾಧಿಸಲ್ಪಡುತ್ತದೋ? ಸತಾ ಚೇತ್=ಆತ್ಮಾತಿರಿಕ್ತವಾದ ಸತ್ಯವಾದ ಪ್ರಮಾಣದಿಂದ ಸಾಧಿಸಲ್ಪಡುವುದಾದರೆ, ದ್ವೈತಸಿದ್ಧಿಃ ಸ್ಯಾತ್=ಭೇದವು ಸಿದ್ಧಿಸುವುದು. (ಸತ್ಯವಾದ ಎರಡನೇ ಪದಾರ್ಥವು ಸಿದ್ಧಿಸುವುದು) ಅನ್ಯಸಾಧನಂ = ಸತ್ತಿನಿಂದ ಬೇರೆಯಾದ, ಮಿಥ್ಯೆಯಾದ ಸಾಧನವಾದರೂ, ನ ಸಿದ್ಧಂ ಚ=ಸಿದ್ಧವೇ ಆಗಲಿಲ್ಲ. (ಅಂದರೆ ಮಿಥ್ಯೆಯು ಸಾಧಕವೆನ್ನುವುದನ್ನು ನಾವು ಒಪ್ಪುವುದಿಲ್ಲ.) ಸಾಕ್ಷಿಣಾ=ಸಾಕ್ಷಿಯಿಂದ, ಸಿದ್ಧಿಂ=ಭಾವರೂಪಾಜ್ಞಾನಸಿದ್ಧಿಯನ್ನು, ಇಚ್ಛತಾ=ಇಚ್ಛಿಸುವ, ತೇನ = ಮಾಯಾವಾದಿಯಿಂದ, ಸತಃ=ಸತ್ಪದಾರ್ಥಕ್ಕೆ, ಸಾಧಕತ್ವಂ=ಸಾಧಕತ್ವವು, ಸ್ವೀಕೃತಂ ಹಿ=ಅಂಗೀಕರಿಸಲ್ಪಟ್ಟದಷ್ಟೆ! ಅವಿಶೇಷಸ್ಯ= ನಿರ್ವಿಶೇಷಕ್ಕೆ, ಸಾಧಕತಾ ತು=ಸಾಧಕತ್ವವಾದರೂ, ಪುನಃ=ಮತ್ತು, ಸಾಧ್ಯಾ = (ನಿನ್ನಿಂದ ಪರರನ್ನು ಕುರಿತು) ಸಾಧಿಸತಕ್ಕದೇ. (ಸಿದ್ಧವಾಗಲಿಲ್ಲ.) ತಚ್ಚ=ನಿರ್ವಿಶೇಷಕ್ಕೆ ಸಾಧಕತ್ವವಾದರೂ, ಅವಿಶೇಷಮಾನೇನ=ನಿರ್ವಿಶೇಷಪ್ರಮಾಣದಿಂದ, ಸಾಧ್ಯಂ=ಸಾಧಿಸತಕ್ಕದು. ಇತಿ= ಹೀಗೆ, ಅನವಸ್ಥಿತಿಃ=ಅನವಸ್ಥೆಯು.

ತಾ ॥ ಸ. ರ. ವಿ— (1) ವಾದಿಪ್ರತಿವಾದಿಗಳಿಬ್ಬರಿಗೂ ಸಿದ್ಧವಾದ ಸಾಧನವೇ ಸಾಧಕವಾಗುವುದು. ಮಿಥ್ಯೆಯಾದ ಸಾಧನವು ಸಾಧಕವೆಂದು ಉಭಯಸಮ್ಮತವಲ್ಲ. ರಜ್ಜುಸರ್ಪಾದಿಗಳ ಜ್ಞಾನವೂ ಸತ್ತಾಗಿಯೇ ಭಯಕಂಪಾದಿಗಳನ್ನು ಹುಟ್ಟಿಸುತ್ತದೆ. ಇಲ್ಲವಾದರೆ ರಜ್ಜುಸರ್ಪವೂ ಕಚ್ಚಬೇಕಾದೀತು ಆದಕಾರಣ ಎಲ್ಲಿಯೂ ಮಿಥ್ಯೆಯಾದುದಕ್ಕೆ ಸಾಧಕತ್ವವು ಕಾಣಲ್ಪಡುವುದಿಲ್ಲ. ಮಿಥ್ಯೆಯಾದುದು ಸಾಧಕವೆಂದು ಯಾವ ಪ್ರಮಾಣದಿಂದ ಸಾಧಿಸುವಿರಿ? ಸತ್ಯವಾದ ಪ್ರಮಾಣದಿಂದಲೋ, ಮಿಥ್ಯೆಯಾದ ಪ್ರಮಾಣದಿಂದಲೋ? ಆತ್ಮಹೊರತಾದ ಸತ್ಪ್ರಮಾಣದಿಂದ ಎಂದು ಹೇಳುವುದಾದರೆ ದ್ವೈತವು ಸಿದ್ಧಿಸುವುದು. ಅಸತ್ತಿನಿಂದ ಎಂದೂ ಹೇಳಕೂಡದು. ವಿಪ್ರತಿಪನ್ನವಾಗಿದೆ. (2) ಸತ್ಯಕ್ಕೂ ಸಾಧಕತ್ವವನ್ನು ನಾನು ಅಂಗೀಕರಿಸಲಿಲ್ಲ ಎಂದನ್ನಕೂಡದು. ಸತ್ತಾದ ಸಾಕ್ಷಿಯಿಂದಲೇ ಜಡವು ಸಿದ್ಧಿಸುತ್ತದೆ ಎಂದಂಗೀಕರಿಸಿರುವಿರಿ. (3) ನಿರ್ವಿಶೇಷವಾದ ಸಾಕ್ಷಿಗೆ ಸಾಧಕತ್ವವನ್ನು ಸಾಧಿಸಬೇಕೆನ್ನುವುದು ಯಾವ ಪ್ರಮಾಣದಿಂದ? ಸವಿಶೇಷಪ್ರಮಾಣದಿಂದಲೋ, ನಿರ್ವಿಶೇಷಪ್ರಮಾಣದಿಂದಲೋ? ನಿರ್ವಿಶೇಷಪ್ರಮಾಣದಿಂದ ಎಂದನ್ನುವುದಾದರೆ ಅದಕ್ಕೂ ಸಾಧಕತ್ವವು ನಿರ್ವಿಶೇಷಾಂತರದಿಂದ ಸಾಧಿಸಬೇಕು. ಹೀಗೆ ಅನವಸ್ಥೆಯು. ಸವಿಶೇಷದಿಂದ ಎಂದನ್ನುವುದಾದರೆ ಅದಕ್ಕೂ ಮಿಥ್ಯಾತ್ವವನ್ನಂಗೀಕರಿಸಿರುವುದರಿಂದ ಸಾಧಕತ್ವವು ಉಭಯಸಮ್ಮತವಲ್ಲ. ನಮ್ಮ (ದ್ವೈತಿಗಳ) ಪಕ್ಷದಲ್ಲಿಯಾದರೂ ಸಾಕ್ಷಿಯು ಸವಿಶೇಷವಾದುದರಿಂದ] ಸಾಧಕತ್ವವು ಯುಕ್ತವೇ ಆಗುವುದು.

ನ್ಯಾಯಸುಧಾ— (1) '**ನೇಹ ನಾನಾಸ್ತಿ ಕಿಂಚನ**' ಇತ್ಯಾದಿ ವಾಕ್ಯಗಳಿಂದ ಅದ್ವೈತ ನಿಶ್ಚಯವುಳ್ಳ ಪುರುಷನು ಬೋಧಿಸಲ್ಪಡುತ್ತಾನೆಂದು ಹೇಳಕೂಡದು. ವ್ಯರ್ಥವಾಗುವುದು. ನಿಶ್ಚಯವಿಲ್ಲದಿರುವವನು ಬೋಧಿಸಲ್ಪಡುತ್ತಾನೆಂದರೆ— ಆತನು ಸತ್ಯವಾದುದೇ ಸಾಧಕವು

ಎಂದು ತಿಳಿದುಕೊಂಡಿರುವಪ್ರಯುಕ್ತ ಈ ವಾಕ್ಯವು ಸರ್ವಕ್ಕೂ ಮಿಥ್ಯಾತ್ವವನ್ನು ಪ್ರತಿಪಾದಿಸುವುದಾದರೆ ಸರ್ವಾಂತಃಪಾತಿಯಾದುದರಿಂದ ತಾನೂ ಮಿಥ್ಯೆಯಾಗಬೇಕಾಗುವುದು (2) ಈ ವಾಕ್ಯವು ಮಿಥ್ಯೆಯೆಂದಾದರೆ ಯಾವ ಅರ್ಥಕ್ಕೂ ಸಾಧಕವಾಗಲಾರದು. ಹೀಗೆ ಅನಿಷ್ಟ ಪ್ರಸಂಗವನ್ನು ಕಾಣುವವನು ಕೇವಲ ನಿನ್ನ ಅಂಗೀಕಾರದಿಂದ ತನ್ನ ತರ್ಕಕ್ಕೆ ವಿರುದ್ಧತ್ವ (ಅಪಾದ್ಯಾಭಾವದಿಂದ ವ್ಯಾಪ್ತಿ)ವನ್ನು ಹೇಗೆ ತಿಳಿಯುವನು?

(2) ಮಾಯಾವಾದಿಗಳು ಪುನಃ ಆಶಂಕಿಸುವರು. ಪ್ರತ್ಯಕ್ಷಾದಿಗಳು ಸಾಧಕಗಳೆನ್ನುವುದು ಅನ್ವಯವ್ಯತಿರೇಕಾನುಭವ ಸಿದ್ಧವು. ಅವುಗಳು ಮಿಥ್ಯೆಗಳೆಂದು ಶ್ರುತಿಗಳಿಂದಲೂ ಯುಕ್ತಿಗಳಿಂದಲೂ ತಿಳಿದು ಬರುತ್ತದೆ. ಶ್ರುತಿಯುಕ್ತಿಗಳಿಂದುಂಟಾದ, ಮಿಥ್ಯಾತ್ವಜ್ಞಾನದಿಂದುಂಟಾದ ಸಂಸ್ಕಾರದಿಂದೊಡಗೂಡಿದ ಅನ್ವಯವ್ಯತಿರೇಕಾನುಭವರೂಪವಾದ ಪ್ರಮಾಣವೇ ಮಿಥ್ಯಾಭೂತವೇ ಸಾಧಕವೆಂಬುವ ವಿಶಿಷ್ಟಜ್ಞಾನವನ್ನುಂಟು ಮಾಡುತ್ತದೆ. ಏವಂಚ ಹಿಂದಿನ ಪ್ರಮಾಣದಿಂದಲೇ ಮಿಥ್ಯೆಯಾದುದಕ್ಕೇನೇ ಸಾಧಕತ್ವವು ಸಿದ್ಧಿಸುವಾಗ ಮಿಥ್ಯೆಯಾದರೆ ಸಾಧಕವಾಗಲಾರದು ಎಂಬುವ ತರ್ಕವು ವಿರುದ್ಧವೇ ಆಯಿತು, ಎನ್ನುವುದನ್ನು ದೂಷಿಸುವುದಕ್ಕಾಗಿ ವಿಕಲ್ಪಿಸಿ ಕೇಳುತ್ತಾರೆ. 'ತಚ್ಚ ಮಿಥ್ಯಾ' ಎಂದು. ಆತ್ಮ ಹೊರತಾದ್ದಕ್ಕೆ ಮಿಥ್ಯಾತ್ವದಂತೆ ಮಿಥ್ಯಾಭೂತಕ್ಕೇನೇ ಸಾಧಕತ್ವವು ಸತ್ಪ್ರಮಾಣದಿಂದ ಸಾಧಿಸಲ್ಪಡುತ್ತದೋ, ಅಸತ್ತಿನಿಂದಲೋ? ಅಂದರೆ, ಮಿಥ್ಯೆಯಾದುದಕ್ಕೇನೇ ಸಾಧಕತ್ವವನ್ನು ಸಾಧಿಸುವುದಕ್ಕಾಗಿ ನೀವು ಯಾವ ಪ್ರಮಾಣವನ್ನು ಉಪನ್ಯಾಸ ಮಾಡುವಿರೋ ಆ ಪ್ರಮಾಣವು ಮಿಥ್ಯೆಯೋ? ಸತ್ಯವೋ? ಸತ್ಯವೆಂಬ ಪಕ್ಷವನ್ನು ದೂಷಿಸುತ್ತಾರೆ. 'ಸತಾ ಚೇತ್' ಎಂದು. ಯದ್ಯಪಿ ಪರರು ಅಂಗೀಕರಿಸಬೇಕೆಂದು ಇಚ್ಛಿಸಿರುವುದರಿಂದ ಪ್ರಧಾನವಾಗಿರುವ ಪ್ರಯುಕ್ತ ಮಿಥ್ಯಾತ್ವಪಿಕಲ್ಪವನ್ನು ಪ್ರಶ್ನೆಕಾಲದಲ್ಲಿ ಪ್ರಥಮದಲ್ಲಿಯೇ ನಿರ್ದೇಶಮಾಡಿರುವರು. ಆದಾಗ್ಯೂ ಮಿಥ್ಯಾಸತ್ಯಗಳಲ್ಲಿ ಸತ್ಯವು ಅರ್ಥತಃ ಪ್ರಧಾನವಾದುದರಿಂದ ಆ ಕ್ರಮದಿಂದಲೇ ದೂಷಿಸಿರುವರು. (3) ಸತಾ ಚೇತ್=ಆತ್ಮ ರೂಪವಾದ ಸತ್ಯದಿಂದಲೋ? ಆತ್ಮ ಹೊರತಾದ ಸತ್ಯದಿಂದಲೋ? ಎಂದು ವಿಕಲ್ಪಿಸಿಕೊಳ್ಳಬೇಕು. ಆತ್ಮ ರೂಪವಾದ ಸತ್ಯದಿಂದ ಎನ್ನುವ ಪಕ್ಷಕ್ಕೆ 'ಅವಿಶೇಷಸ್ಯ' ಇತ್ಯಾದಿಗಳಿಂದ ದೂಷಣವನ್ನು ಹೇಳುವರು. ಆತ್ಮ ಹೊರತಾದ ಸತ್ಯದಿಂದ ಎಂದು ಹೇಳಿದರೆ ದ್ವೈತವು ಸಿದ್ಧಿಸುವುದು. ಆತ್ಮನು ಹೊರತು ಬೇರೊಂದು ಸತ್ಯ ಪದಾರ್ಥವನ್ನು ಒಪ್ಪಬೇಕಾಗಿ ಬರುವುದು. ಅಂತೂ ಅದ್ವೈತಪ್ರತಿಪಾದಕ ಶ್ರುತಿಗೆ ಉಪಪತ್ತಿವಿರೋಧವು. (4) ಮಿಥ್ಯಾತ್ವಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ. 'ನ ಸಿದ್ಧಂ ಚಾನ್ಯಸಾಧನಂ' ಎಂದು. ಮಿಥ್ಯೆಯಾದುದು ಸಾಧಕವೆನ್ನುವುದು ಸಿದ್ಧವೇ ಆಗಲಿಲ್ಲ. ಅಂದರೆ— ಯಾವುದು ಮಿಥ್ಯೆಯೋ ಅದು ಸಾಧಕವಲ್ಲ ಎಂಬ ವ್ಯಾಪ್ತಿಯನ್ನಂಗೀಕರಿಸಿ ಯಾರು ಶ್ರುತಿಯು ಮಿಥ್ಯೆಯಾದರ ಸಾಧಕವಾಗಲಾರದು ಎಂದು ಹೇಳುತ್ತಾರೋ, ಅವರು ಮಿಥ್ಯೆಯಾದುದಕ್ಕೇನೇ ಸಾಧಕತ್ವವು ಇರುವುದು ಎಂಬ ಅರ್ಥವನ್ನು ಸಾಧಿಸುವುದಕ್ಕಾಗಿ ಉಪನ್ಯಾಸಮಾಡಿದ ಪ್ರಮಾಣವೂ ಮಿಥ್ಯೆಯಾದರೆ ಸಾಧಕವಾಗುವುದಿಲ್ಲವೆಂದು ಆಪಾದನೆಮಾಡುವರೇ ಸರಿ. ತಥಾಚ ಈ ಪ್ರಮಾಣವು ಸಾಧಕವೆಂದು ಸಿದ್ಧವಾದರೆ ಮಿಥ್ಯೆಯಾದುದಕ್ಕೇನೇ ಸಾಧಕತ್ವವು ಎನ್ನುವ ಅರ್ಥವು ಸಿದ್ಧಿಸುವುದು. ಅದರಿಂದ ಈ ವಾಕ್ಯವು ಮಿಥ್ಯೆಯಾದರೆ ಯಾವುದನ್ನೂ ತಿಳಿಸಲಾರದೆಂಬ ತರ್ಕಕ್ಕೆ ವಿರುದ್ಧ ಹೇತ್ವಾಭಾಸತ್ವವು ಸಿದ್ಧಿಸುವುದು. ಅದರಿಂದ ಈ ಪ್ರಮಾಣವು ಸಾಧಕವೆಂದು ಸಿದ್ಧಿಸುವುದು. ಹೀಗೆ ಚಕ್ರಕಾಶ್ರಯವು ಬರುವುದರಿಂದ ಒಂದು ಅರ್ಥವೂ ಸಿದ್ಧಿಸುವುದಿಲ್ಲ. (5) ಹಾಗಾದರೆ ಶ್ರುತಿಯು ತಾನು ಹೊರತಾದ ದುಃಖಾದಿಗಳಿಗೆ

ಮಿಥ್ಯಾತ್ವವನ್ನು ಪ್ರತಿಪಾದಿಸುವುದರಿಂದ ಉಪಪತ್ತಿವಿರುದ್ಧವು ಹೇಗೆ ಆಗುವುದು ಎಂದರೆ— ಯಾವ ಕಾರಣದಿಂದ ಶ್ರುತ್ಯರ್ಥವನ್ನು ಸಂಕೋಚವಮಾಡುವುದು? ಸಾಧಕತ್ವವು ಯುಕ್ತವಾಗುವುದಿಲ್ಲವೆನ್ನುವ ಪ್ರಮಾಣಬಲದಿಂದ ಎಂದರೆ, ಪ್ರಮಾಣ ಸಿದ್ಧವಾದುದನ್ನು ಬಿಟ್ಟು ಮಿಥ್ಯಾತ್ವವನ್ನು ಹೇಳುವುದು ಹೇಗೆತಾನೆ ದುಃಖಾದಿಗಳಿಗೂ ಮಿಥ್ಯಾತ್ವವನ್ನು ಪ್ರತಿಪಾದಿಸುವುದು? ಅವುಗಳೂಕೂಡ ಪ್ರತ್ಯಕ್ಷ ಸಿದ್ಧಗಳಾಗಿವೆ. (6) ಹಾಗಾದರೆ ಶ್ರುತಿವಿರೋಧದಿಂದ ಪ್ರತ್ಯಕ್ಷವನ್ನು ಆಭಾಸೀಕರಿಸುವುದಕ್ಕಾಗಿ ನಾನು ಉಪಕ್ರಮಿಸಿದ್ದು. ಅದರಿಂದಲೇ ಶ್ರುತಿವಿರೋಧವನ್ನು ಹೇಳಿದರೆ ಅನ್ಯೋನ್ಯಾಶ್ರಯುವು ಬಾರದಿರುವುದು ಹೇಗೆ? ಶ್ರುತಿಗೆ ಅಪ್ರಾಮಾಣ್ಯವು ಹೇಳಿದರೆ ಬಾಧಕವಿಲ್ಲದಿರುವುದರಿಂದ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು. ಪ್ರತ್ಯಕ್ಷವಿರುದ್ಧವಾಗಿರುವುದರಿಂದ ಶ್ರುತಿಗೆ ಅಪ್ರಾಮಾಣ್ಯವು, ಎಂದು ಅದ್ವೈತಿಗಳು ದ್ವೈತಿಗಳೊಡನೆ ಹೇಳಿದರೆ ದ್ವೈತಿಗಳು ಹೀಗೆ ಅನ್ನುವರು. ಅದ್ವೈತಿಗಳಿಗೂ ಅನ್ಯೋನ್ಯಾಶ್ರಯುವು ಇಲ್ಲದೆ ಹೋಗುವುದು ಹೇಗೆ? ಶ್ರುತಿಗಳಿಗೆ ಪ್ರಾಮಾಣ್ಯವಿದ್ದರೆ ಶ್ರುತಿಗಳ ವಿರೋಧದಿಂದ ಪ್ರತ್ಯಕ್ಷಕ್ಕೆ ಅಪ್ರಾಮಾಣ್ಯವು. ಅಂತೂ ಬಾಧಕವಿಲ್ಲದಿರುವ ಪ್ರಯುಕ್ತ ಶ್ರುತಿಗೆ ಪ್ರಾಮಾಣ್ಯವು ಸಿದ್ಧಿಸುವುದು. ಆದಕಾರಣ ಪರಮಾಸ್ತಿಕರೂ, ತತ್ವಜ್ಞಾನಿಶ್ರೇಷ್ಠರೂ ಆದ ಶ್ರೀಮದಾಚಾರ್ಯರು ನಿರೂಪಿಸಿದ ಪ್ರಕಾರ ಭಗವಂತನ ಸ್ವರೂಪಗಳಿಗೆ ಭೇದವಿಲ್ಲವೆನ್ನುವುದೇ 'ನೇಹ ನಾನಾಸ್ತಿ ಕಿಂಚನ' ಎಂಬುವ ಶ್ರುತ್ಯರ್ಥವೆಂದು ನಿರ್ಧರಿಸತಕ್ಕದ್ದು. (7) (ಮಿಥ್ಯಾಭೂತಕ್ಕೆ ಸಾಧಕತ್ವವನ್ನು ನೀವು (ದ್ವೈತಿಗಳು) ಒಪ್ಪುವುದಿಲ್ಲವಾದರೆ— ಸತ್ಯಕ್ಕೆ ಸಾಧಕತ್ವವನ್ನು ನಾವು (ಅದ್ವೈತಿಗಳು) ಒಪ್ಪುವುದಿಲ್ಲವೆಂದರೆ, 'ಸಾಧಕತ್ವಂ ಸತಃ' ಇತ್ಯಾದಿ. ಅಂದರೆ,— ಮಾಯಾವಾದಿಗಳು ಭಾವರೂಪಾಜ್ಞಾನವನ್ನು ಸಾಧಿಸುವಾಗ 'ಅಹಮಜ್ಞಃ ಮಾಮನ್ಯಂ ಚ ನ ಜಾನಾಮೀತ್ಯಾದಿನಾ' ನಾನು ಅಜ್ಞನು. ನನ್ನನ್ನೂ, ಮತ್ತೊಬ್ಬನನ್ನೂ ತಿಳಿಯಲಾರೆ, ಇತ್ಯಾದಿ ಪ್ರತ್ಯಕ್ಷದಿಂದ ಅಜ್ಞಾನವನ್ನು ಸಾಧಿಸುವುದಕ್ಕಾಗಿ ಸಾಕ್ಷಿಪ್ರತ್ಯಕ್ಷವು ಪ್ರಮಾಣವೆಂದಂಗೀಕರಿಸಿರುವರು. ಅಂತೂ ಸಾಕ್ಷಿಯಿಂದ ಅಜ್ಞಾನವು ಸಿದ್ಧಿಸಬೇಕೆಂದು ಇಚ್ಛಿಸುವ ಅದ್ವೈತಿಗಳು ಸತ್ಯಕ್ಕೆ ಸಾಧಕತ್ವವನ್ನು ಸ್ವೀಕರಿಸಿರುತ್ತಾರೆ. ಸಾಕ್ಷಿಚೈತನ್ಯವೂ ಸತ್ಯವೇ ಆಗಿರುತ್ತದೆ. ಆದಪ್ರಯುಕ್ತ ನಾನು ಸತ್ಯಕ್ಕೆ ಸಾಧಕತ್ವವನ್ನು ಅಂಗೀಕರಿಸಲಿಲ್ಲವೆಂದು ಹೇಳಲು ಶಕ್ಯವಾಗುವುದಿಲ್ಲ. ದುಃಖಾದಿಬಂಧವು ಸತ್ಯವೆನ್ನುವ ವಿಷಯದಲ್ಲಿ ನಾವೂ ಸಾಕ್ಷಿಪ್ರತ್ಯಕ್ಷವನ್ನೇ ಉಪನ್ಯಾಸಮಾಡಿರುತ್ತೇವೆ. (8) ಹೀಗೆ ಉಭಯವಾದಿಗಳಿಗೂ ಸಂಪ್ರತಿಪನ್ನಪ್ರಮಾಣವು ತಮ್ಮ (ದ್ವೈತಿಗಳ) ಮತದಲ್ಲಿದೆಯೆಂದು ತೋರಿಸುವುದಕ್ಕಾಗಿ ಸತ್ಯವಾದ ಸಾಕ್ಷಿಯು ಅಜ್ಞಾನಸಾಧಕವೆಂದು ಪರರು ಅಂಗೀಕರಿಸಿದ್ದನ್ನುಪನ್ಯಾಸಮಾಡಿದರು. ಈಗ ಸಾಕ್ಷಿಗೆ ಸಾಧಕತ್ವವನ್ನು ಪರರು ಅಂಗೀಕರಿಸಿದ್ದು ಯುಕ್ತವಾಗುವುದಿಲ್ಲವೆನ್ನುತ್ತಾರೆ. 'ಅವಿಶೇಷಸ್ಯ' ಎಂದು) ಅಂದರೆ— ಭಾವರೂಪ ಅಜ್ಞಾನವನ್ನು ಯಾರು ಅಂಗೀಕರಿಸುವುದಿಲ್ಲವೋ, ಅವರನ್ನು ಕುರಿತು ಆ ವಿಷಯದಲ್ಲಿ ಸಾಕ್ಷಿಪ್ರತ್ಯಕ್ಷವು ಪ್ರಮಾಣವೆಂದು ಮಾಯಾವಾದಿಗಳು ಉಪನ್ಯಾಸಮಾಡಿರುವರು. ಅದು ಯುಕ್ತವಲ್ಲ. ಸಾಕ್ಷಿಗೆ ಯಾವ ವಿಶೇಷವೂ ಇಲ್ಲವೆಂದು ಅವರು ಅಂಗೀಕರಿಸಿರುವರು. ನಿರ್ವಿಶೇಷವೂ ಸಾಧಕವಾಗುತ್ತದೆನ್ನುವುದು ಪರರನ್ನು (ಸಿದ್ಧಾಂತಿಗಳನ್ನು) ನೀವು ಸಾಧಿಸಬೇಕಲ್ಲದೆ ಇವ್ವರವರೇಗೂ ಸಿದ್ಧವಾಗಲಿಲ್ಲ. ಯಾವುದು ಸಾಧಕವಾದದ್ದು ಕರಣವೋ, ಜನ್ಯಜ್ಞಾನಾದಿರೂಪಫಲವೋ, ಈಶ್ವರಸಂಬಂಧಿಯಾದ ನಿತ್ಯಜ್ಞಾನವೋ ಅವೆಲ್ಲವೂ ಜಾತ್ಯಾದಿವಿಶೇಷವುಳ್ಳದ್ದು. ಯಾವುದು ನಿರ್ವಿಶೇಷವಾದ ಶಶವಿಷಾಣಾದಿಯೋ ಅದು ಸಾಧಕವಲ್ಲ. ಹೀಗೆ ದ್ವೈತಿಗಳು ನಿಯಮವನ್ನಂಗೀಕರಿಸಿರುವರು. (9) ಪ್ರಮಾಣವು ವಸ್ತುಸಿದ್ಧಿಯಲ್ಲಿ ಉಪಯುಕ್ತವಾಗುತ್ತದೆ. ಸವಿಶೇಷವಾಗಬೇಕೆಂದು ಏಕೆ ಹೇಳಬೇಕೆಂದರೆ— ನಿರ್ವಿಶೇಷಕ್ಕೆ ಪ್ರಾಮಾ-

ಣ್ಯವೇ ಕೂಡುವುದಿಲ್ಲ, ಆದಕ್ಕಾಗಿಯೇ ವಿಶೇಷವನ್ನನುಸರಿಸುವುದು. (10) ನಿರ್ವಿಶೇಷವಾದ ಸಾಕ್ಷಿಗೆ ಸಾಧಕತ್ವವನ್ನು ವಿಪ್ರತಿಪತ್ತಿಯಿದ್ದರೆ ಸಾಧಿಸುವೆವೆಂದು ಅದ್ವೈತಿಗಳು ಹೇಳಿದರೆ ಹೀಗೆ ಕೇಳಬೇಕು. ಸವಿಶೇಷಪ್ರಮಾಣದಿಂದ ಸಾಧಿಸುವುದೋ, ನಿರ್ವಿಶೇಷಪ್ರಮಾಣದಿಂದಲೋ? ಸವಿಶೇಷಪ್ರಮಾಣದಿಂದೆನ್ನಕೂಡದು. ನಿಮ್ಮ ಮತದಲ್ಲಿ ಅದು ಮಿಥ್ಯೆಯಾಗಿದೆ. ಆದಕಾರಣ ನಿರ್ವಿಶೇಷಪ್ರಮಾಣದಿಂದ ಎಂದೇ ಅಂಗೀಕರಿಸಬೇಕೆನ್ನುತ್ತಾರೆ. 'ತಚ್ಚಾವಿಶೇಷಮಾನೇನ' ಎಂದು. ಅಂದರೆ— ಅವಿಶೇಷಕ್ಕೆ ಸಾಧಕತ್ವವನ್ನಾದರೂ ನಿರ್ವಿಶೇಷಪ್ರಮಾಣಾಂತರದಿಂದ ಸಾಧಿಸಬೇಕು. ಇದರಿಂದ ಅನಿಷ್ಟವೇನೆಂದರೆ— ಆ ನಿರ್ವಿಶೇಷಪ್ರಮಾಣವು ಸಾಕ್ಷಿಯೋ ಬೇರೆಯೋ? ಸಾಕ್ಷಿಯೆಂದರ ಅನ್ಯೋನ್ಯಾಶ್ರಯತ್ವವು. ಸಾಕ್ಷಿಗೆ ಸಾಧಕತ್ವವು ಸಿದ್ಧಿಸಿದರೆ ನಿರ್ವಿಶೇಷಕ್ಕೂ ಸಾಧಕತ್ವವು ಸಿದ್ಧಿಸುತ್ತದೆ. ನಿರ್ವಿಶೇಷಕ್ಕೆ ಸಾಧಕತ್ವವು ಸಿದ್ಧಿಸಿದರೆ ಸಾಕ್ಷಿಗೆ ಸಾಧಕತ್ವವು ಸಿದ್ಧಿಸುವುದು. ನಿರ್ವಿಶೇಷಪ್ರಮಾಣವು ಸಾಕ್ಷಿಯಿಂದ ಬೇರೆಯೆಂದೂ ಹೇಳ ಕೂಡದು. ಅದು ಇಲ್ಲವೇ ಇಲ್ಲ. (11) ಬೇರೊಂದು ನಿರ್ವಿಶೇಷವನ್ನು ಅಂಗೀಕರಿಸಿದರೆ ಆ ನಿರ್ವಿಶೇಷಕ್ಕೂ ಸಾಧಕತ್ವವು ನಿರ್ವಿಶೇಷಪ್ರಮಾಣದಿಂದಲೇ ಸಾಧಿಸಬೇಕು. ಅದಕ್ಕೂ ಅವಿಶೇಷ ಪ್ರಮಾಣದಿಂದಲೇ ಸಾಧಿಸಬೇಕು. ಹೀಗೆ ಅನವಸ್ಥಾ ದೋಷವು ಬರುವುದು.) ॥೧೭॥೧೮ ॥೧೯॥

ನ್ಯಾಯಸುಧಾ— 'ಮಿಥ್ಯಾತ್ವಂ ಯದಿ' ಇತ್ಯಾದಿಗಳಿಂದ ಹೇಳಿದ ಅತಿಪ್ರಸಂಗವನ್ನುಪ ಸಂಹಾರಮಾಡುತ್ತಾರೆ—

ಸೂ ॥ ಅನಂಗೀಕುರ್ವತಾಂ ವಿಶ್ವಸತ್ಯತಾಂ ತನ್ನ ವಾದಿತಾ ॥ ೨೦ ॥
ತಸ್ಮಾದ್ವ್ಯವಹೃತಿಃ ಸರ್ವಾ ಸತ್ಯೇತ್ಯೇವ ವ್ಯವಸ್ಥಿತಾ ।
ವ್ಯಾವಹಾರಿಕಮೇತಸ್ಮಾತ್ಸತ್ಯಮಿತ್ಯೇವ ಚಾಗತಂ ॥ ೨೧ ॥

ಅ ॥ ತತ್= (ಯಾವ ಕಾರಣದಿಂದ ಹೀಗೆ ಮಿಥ್ಯೆಯಾದುದಕ್ಕೆ ಸಾಧಕತ್ವವಿಲ್ಲವೋ) ಆದಕಾರಣ, ವಿಶ್ವಸತ್ಯತಾಂ=ಪ್ರಪಂಚಕ್ಕೆ ಸತ್ಯತ್ವವನ್ನು, ಅನಂಗೀಕುರ್ವತಾಂ=ಅಂಗೀಕರಿಸ ದಿರುವ ಅಂದರೆ ಆತ್ಮಹೊರತಾದವುಗಳಿಗೆಲ್ಲಾದಕ್ಕೂ ಮಿಥ್ಯಾತ್ವವನ್ನು ಪ್ರತಿಪಾದಿಸುವ 'ನೇಹ ನಾನಾ' ಇತ್ಯಾದಿವಾಕ್ಯಗಳಿಗೂ, (ಮಿಥ್ಯಾತ್ವವು ಪ್ರಸಕ್ತವಾಗುವುದರಿಂದ) ವಾದಿತಾ=ಸಾಧಕ ತ್ವವು, ನ=ಆಗಲಾರದು. ('ತದ್ವಾಕ್ಯಸ್ಯ' ಎಂದು ಪ್ರಸ್ತುತವಾದ ಏಕವಚನವು ಸಮೂಹವನ್ನು ವಿಷಯೀಕರಿಸುತ್ತದೆ ಎಂದು ತಿಳಿಸುವುದಕ್ಕಾಗಿ ಉಪಸಂಹಾರದಲ್ಲಿ ಬಹುವಚನವು. ಅಥವಾ ಇದರಿಂದ ಬೇರೆ ಅತಿಪ್ರಸಂಗಗಳನ್ನು ಹೇಳಿದಂತೆ ಆಯಿತು. ಚೈತನ್ಯ ಹೊರತಾದದ್ದೆಲ್ಲವೂ ಮಿಥ್ಯೆಯಾದರೆ ಸರ್ವಾಂತಃಪಾತಿಯಾದ ಕಥಾವ್ಯವಹಾರಕ್ಕೆ ಅಂಗಭೂತಗಳಾದ ಪ್ರಮಾಣಾದಿ ಗಳೂ ಮಿಥ್ಯೆಯಾಗಬೇಕಾಗುವುವು. ಅಂತೂ) ವಿಶ್ವಸತ್ಯತ್ವವನ್ನು ಅಂಗೀಕರಿಸದಿರುವ ಜಗತ್ತಿಗೆ ಮಿಥ್ಯಾತ್ವವನ್ನೇ ಅಂಗೀಕರಿಸುವ ಮಾಯಾವಾದಿಗಳಿಗೂ ಚಾರ್ವಾಕ ಬೌದ್ಧರಿಗೂ ಕಥಕತ್ವವೇ ಕೂಡದೆ ಹೋಗುವುದು. ಏಕೆಂದರೆ— ಹಿಂದೆ ಹೇಳಿದ ಪ್ರಕಾರ ಮಿಥ್ಯೆಯಾದುದು ಸಾಧ ನಾಂಗವೂ ಬಾಧನಾಂಗವೂ ಆಗಲಾರದು. (ಹಿಂದೆ ಹೇಳಿದ್ದಕ್ಕೆ ಪ್ರಸಂಗತ್ವವನ್ನು ಸ್ಪಷ್ಟೀಕರಿ ಸುವುದಕ್ಕಾಗಿ ವಿಪರ್ಯಯ ಪರ್ಯವಸಾನವನ್ನು ಹೇಳುತ್ತಾರೆ.) ತಸ್ಮಾತ್=ಯಾವ ಕಾರಣ ದಿಂದ ಪರರಿಗೆ ವಾದಿತ್ವಾಭಿಮಾನವು ಇದೆಯೋ ಆದುದರಿಂದ, ಸರ್ವಾ ವ್ಯವಹೃತಿಃ=ಕಥಾಂಗ ಭೂತಗಳಾದ ಪ್ರಮಾಣಾದಿಗಳೆಲ್ಲವೂ, ಸತ್ಯೇತ್ಯೇವ=ಸತ್ಯವೆಂತೆಂದೇ, ವ್ಯವಸ್ಥಿತಾ = ನಿಶ್ಚಿತವಾ ಯಿತು. (ಕಥಾಂಗಭೂತವಾದ ಪ್ರಮಾಣಾದಿ ವ್ಯವಹಾರಕ್ಕೆ ಸತ್ಯತ್ವವಿರಲಿ. ದುಃಖಾದಿ ಬಂಧಕ್ಕೆ ಏನಾಯಿತೆಂದರೆ) ಏತಸ್ಮಾತ್=ಪ್ರಮಾಣಾದಿ ವ್ಯವಹಾರವು ಸತ್ಯವಾಗಿರುವುದರಿಂದ,

ನ್ಯಾವಹಾರಿಕಂ=ವ್ಯವಹಾರ ವಿಷಯವಾದ ದುಃಖಾದಿಯು, ಸತ್ಯಮಿತ್ಯೇವ ಚ=ಸತ್ಯವೆಂತೆಂದೇ, ಆಗತಂ=ಪ್ರಾಪ್ತವಾಯಿತು

ತಾ || ಸ. ರ. ವಿ— (1) ಜಗತ್ತಿಗೆ ಸತ್ಯತ್ವವನ್ನಂಗೀಕರಿಸದಿದ್ದವರಿಗೆ ಸಾಧನಾದಿಗಳು ಇಲ್ಲದಿರುವುದರಿಂದ ವಾದಿತ್ವವೂ ಇಲ್ಲದಿರುವ ಪ್ರಯುಕ್ತ ಬೇರೆ ಪಕ್ಷಗಳಿಗೆ ನಿರಾಕರಣವು ಸಿದ್ಧಿಸುವುದಿಲ್ಲ. ಆದಕಾರಣ ಬಾಧಕವಿಲ್ಲದಿರುವುದರಿಂದ ಹಾನಉಪಾದಾನ ಮೊದಲಾದ ವ್ಯವಹಾರವು ಸತ್ಯವೇ ಆಗುವುದು. ಆ ವ್ಯವಹಾರಕ್ಕೆ ವಿಷಯಗಳಾದ ಘಟಾದಿಗಳೂ ಅದರಿಂದಲೇ ಸತ್ಯಗಳೆಂದೇ ನಿಶ್ಚಿತವಾಯಿತು. ಅಸತ್ತಿನಲ್ಲಿ ಹಾನಾದಿ ವ್ಯವಹಾರವು ಎಲ್ಲಿಯೂ ದೃಷ್ಟವಾಗಲಿಲ್ಲ || ೨೦ || ೨೧ ||

ಸ. ರ. ವಿ— ಅಸತ್ತು ಸಾಧಕವಾಗದಿದ್ದರೂ ವ್ಯಾವಹಾರಿಕ ಸತ್ತಾದುದು ಸಾಧಕವಾಗಬಹುದಷ್ಟೇ! ಎಂದಾಶಂಕಿಸಿ ಪೂರ್ವದಂತೆ ಪ್ರಮಾಣವನ್ನು ವಿಕಲ್ಪಿಸಿ ದೂಷಿಸತಕ್ಕದ್ದೆನ್ನುತ್ತಾರೆ.

ನ್ಯಾಯಸುಧಾ— (1) "ನೇಹನಾನಾಸ್ತಿ ಕಿಂಚನ" ಎಂಬುವ ವಾಕ್ಯಬಲದಿಂದ ಆತ್ಮ ಹೊರತಾದದ್ದೆಲ್ಲಾದ್ದಕ್ಕೂ ಅಸತ್ವವನ್ನಂಗೀಕರಿಸಿದರೆ ಹೀಗೆ ಆಗಬಹುದಿತ್ತು. ಹೀಗೆ ಇಲ್ಲ. ಮತ್ತೆ ವ್ಯಾವಹಾರಿಕ ಸತ್ವವನ್ನಂಗೀಕರಿಸುತ್ತೇವೆ. ತಥಾ ಚ ಸರ್ವಾಂತಃ ಪಾತಿಯಾದ, ವ್ಯಾವಹಾರಿಕಸತ್ತಾದ ಪ್ರಮಾಣಾದಿಗಳಿಗೆ ಸಾಧಕತ್ವವು ಕೂಡುವುದರಿಂದ ಹಿಂದೆ ಹೇಳಿದ ಪ್ರಸಂಗವು ಕೂಡುವುದಿಲ್ಲವೆಂದಾಶಂಕಿಸಿದರೆ—

**ಮೂ || ವ್ಯವಹಾರಸತಶ್ಚಾಪಿ ಸಾಧಕತ್ವಂ ತು ಪೂರ್ವವತ್ |**
**ಸತ್ತ್ರೈವಿಧ್ಯಂ ಚ ಮಾನೇನ ಸಿದ್ಧ್ಯೇತ್ಕೇನೇತಿ ಪೃಚ್ಛ್ಯತೇ || ೨೨ ||**
**ತಸ್ಯಾಪ್ಯುಕ್ತಪ್ರಕಾರೇಣ ನೈವ ಸಿದ್ಧಿಃ ಕಥಂ ಚನ |**
**ವೈಲಕ್ಷಣ್ಯಂ ಸದಸತೋರಪ್ಯೇತೇನ ನಿಷಿಧ್ಯತೇ || ೨೩ ||**

ಅ || ಚ = ಯಾವಕಾರಣದಿಂದ, ವ್ಯವಹಾರಸತೋಽಪಿ = ವ್ಯಾವಹಾರಿಕಸತ್ಯಕ್ಕೂ ಸಾಧಕತ್ವಂ ತು=ಸಾಧಕತ್ವವಾದರೂ, ಪೂರ್ವವತ್=ಅಸತ್ತಿಗೆ ಹೇಗೆ ಸಿದ್ಧವಾಗಲಿಲ್ಲವೋ ಹಾಗೆಯೇ ಪ್ರತಿವಾದಿಗೆ ಸಿದ್ಧವೇ ಆಗಲಿಲ್ಲ. (ಆದಕಾರಣ ಹಿಂದಿನ ಅನಿಷ್ಟ ಪ್ರಸಂಗವು ಪರಿಹೃತವಾಗಲಿಲ್ಲ.) ಸತ್ತ್ರೈವಿಧ್ಯಂ ಚ=ಸತ್ಪದಾರ್ಥಗಳ ಮೂರು ಪ್ರಕಾರವು, ಕೇನ ಮಾನೇನ= ಯಾವ ಪ್ರಮಾಣದಿಂದ, (ಅಂದರೆ ಪರಮಾರ್ಥ ಸತ್ಯದಿಂದಲೋ, ವ್ಯಾವಹಾರಿಕಸತ್ಯದಿಂದಲೊ, ಪ್ರಾತಿಭಾಸಿಕಸತ್ಯದಿಂದಲೋ) ಸಿದ್ಧ್ಯೇತ್ = ಸಿದ್ಧಿಸುವುದು. ಇತಿ=ಹೀಗೆ, ಪೃಚ್ಛ್ಯತೇ = (ನಮ್ಮಿಂದ) ಕೇಳಲ್ಪಡುತ್ತದೆ. ತಸ್ಯಾಪಿ=(ಅಸತ್ಯದ ಸಾಧಕತ್ವದಂತೆಯೇ) ಸತ್ತ್ರೈವಿಧ್ಯಕ್ಕೂ, ಕಥಂಚನ=ವಿಕಲ್ಪಿತಪಕ್ಷಗಳಲ್ಲಿ ಯಾವ ಪಕ್ಷದಲ್ಲಿಯೂ, ಉಕ್ತಪ್ರಕಾರೇಣೈವ = ಹಿಂದಿನ ಪ್ರಕಾರದಿಂದಲೇ, ನೈವ ಸಿದ್ಧಿಃ=ಸಿದ್ಧಿಯೇ ಆಗಲಾರದು. ಸದಸತೋಃ ವೈಲಕ್ಷಣ್ಯಮಪಿ = ಪ್ರಪಂಚಕ್ಕೆ ಸದಸತ್ತಿಗಳಿಂದ ವೈಲಕ್ಷಣ್ಯವೂ, ಏತೇನ=ಪ್ರಮಾಣ ವಿಕಲ್ಪಗಳ ನಿರಾಸದಿಂದ, ನಿಷಿಧ್ಯತೇ=ನಿಷೇಧಿಸಲ್ಪಡುತ್ತದೆ.

ತಾ || ಸ. ರ. ವಿ— (1) ಪ್ರಾತೀತಿಕವು, ವ್ಯಾವಹಾರಿಕವು, ಪಾರಮಾರ್ಥಿಕವು ಎಂದು ಸತ್ಪದಾರ್ಥವು ಮೂರು ವಿಧವಿದೆ ಎನ್ನುವಲ್ಲಿ ಪ್ರಮಾಣವೇನೆಂದು ಪ್ರಶ್ನಿಸಬೇಕು. ವಿಪ್ರತಿಪನ್ನವಾದುದರಿಂದ ಪ್ರಾತೀತಿಕ ವ್ಯಾವಹಾರಿಕಗಳು ಪ್ರಮಾಣವಾಗಲಾರವು. ದ್ವೈತವು ಪ್ರಾಪ್ಯವಾಗುವುದರಿಂದ ಪಾರಮಾರ್ಥಿಕವೂ ಆಗಲಾರದು. ಈ ಅಭಿಪ್ರಾಯದಿಂದಲೇ 'ಸತ್ತ್ರೈವಿಧ್ಯಂ

ಚ' ಎಂದು, ಅಂದರೆ ಈ ಪ್ರಮಾಣವನ್ನು ಖಂಡಿಸಿದುದರಿಂದಲೇ ಸದ್ವೈಲಕ್ಷಣ್ಯವನ್ನು ನಿರಾಕರಿಸಿದಂತೆ ಆಯಿತು. ಹೇಗೆಂದರೆ— ೧ ಸದಸದ್ವಿಲಕ್ಷಣವೆನ್ನುವ ವಸ್ತ್ವಂತರವು ಸಿದ್ಧಿಸುವುದಿಲ್ಲ. ಸತ್ಯದಿಂದ ಭಿನ್ನವಾಗಿದ್ದು ಅಸತ್ಯದಿಂದ ಭಿನ್ನವೆಂದು ಹೇಳುವುದಾದರೆ ಸದಸತ್ತಾದ ಬ್ರಹ್ಮಗಗನಕುಸುಮಗಳಿಂದ ಅಂದರೆ, ಸತ್ಯನಾದ ಬ್ರಹ್ಮ ಅಸತ್ತಾದ ಆಕಾಶಪುಷ್ಪ ಇವುಗಳಿಂದ, ಜಗತ್ತಿಗೆ ಭೇದವನ್ನಂಗೀಕರಿಸಿರುವ ಪ್ರಯುಕ್ತ ಭೇದವಾದಿಗಳಿಗೆ ಇದು ಅನಿಷ್ಟವಲ್ಲ. ೨ ಸದ್ವೈಲಕ್ಷಣ್ಯವೆಂದರೆ ಎಲ್ಲಾ ಸತ್ತಾದ ಪದಾರ್ಥಗಳಿಂದಲೂ ಭೇದವೆಂದು ವಿವಕ್ಷಿತವೆಂದನ್ನಕೂಡದು. ಸತ್ಪದಾರ್ಥಗಳಿಗೆ ಬಹುತ್ವವು ಬರುವುದು. ೩ ಯಾವುದೋ ಒಂದು ಸತ್ಪದಾರ್ಥದಿಂದ ಭೇದವೆಂದೂ ಹೇಳಕೂಡದು. ಸದ್ರೂಪನಾದ ಬ್ರಹ್ಮನಿಂದ ಭೇದವನ್ನು ಪ್ರಪಂಚಕ್ಕೆ ಅಂಗೀಕರಿಸಿರುತ್ತೇವೆ. ೪ ಮತ್ತು ಸದಸದ್ವೈಲಕ್ಷಣ್ಯದಲ್ಲಿಯೂ ಸದಸದ್ವೈಲಕ್ಷಣ್ಯವು ಉಂಟೋ, ಇಲ್ಲವೋ? ಇದ್ದರೆ ಅಲ್ಲಿಯೂ ಸದಸದ್ವೈಲಕ್ಷಣ್ಯವು ಹೀಗೆ ಅನವಸ್ಥೆಯು. ಇಲ್ಲವಾದರೆ ಸದಸದ್ವೈಲಕ್ಷಣ್ಯವು ಸತ್ಯವೋ, ಅಸತ್ಯವೋ? ಸತ್ಯವೆಂದು ಅನ್ನಕೂಡದು. ದ್ವೈತವು ಬರಬೇಕಾಗುವುದು. ಅಸತ್ಯವೆಂದೂ ಹೇಳಕೂಡದು. ಪ್ರಪಂಚವು ನಿಮ್ಮ (ಅದ್ವೈತಿಗಳ) ರೀತಿಯಾಗಿಯೇ ಸದಸದ್ವಿಲಕ್ಷಣವು ಆಗದೆ ಹೋಗುವುದು. ೫ ಸದಸದ್ವಿಲಕ್ಷಣವು ಸತ್ತೂ, ಅಸತ್ತೂ ಆಗಿದೆ ಎಂದರೆ ವಿರೋಧವೂ ಅಪಸಿದ್ಧಾಂತವೂ ಬರುವುದು. ೬ ಜ್ಞಾನದಿಂದ ಬಾಧಿಸಲ್ಪಡುವುದೆಂದರೆ— ಶುಕ್ತಿರಜತಾದಿಗಳಲ್ಲಿಯೂ ಸಿದ್ಧವಾಗಲಿಲ್ಲ. ಹೇಗೆಂದರೆ— ಶುಕ್ತಿರಜತವು ಅಸತ್ಯವಾದ ಪ್ರಯುಕ್ತ ಅದಕ್ಕೆ ಜ್ಞಾನದಿಂದ ನಾಶರೂಪವಾದ ಬಾಧವಿಲ್ಲ ಮತ್ತೆ ವಾಸ್ತವ ರೂಪಬಿಟ್ಟು ಬೇರೆ ರೂಪದಿಂದ ತಿಳಿಯಲ್ಪಟ್ಟದ್ದಕ್ಕೆ ಇದ್ದಹಾಗೆಯೇ ತಿಳಿದುಕೊಳ್ಳುವಿಕೆಯು ಬಾಧವು. ಅಸತ್ಯಕ್ಕೆ ಪ್ರತೀತಿಯಿಲ್ಲದಿರುವುದರಿಂದ ಭ್ರಾಂತಿ ವಿಷಯತ್ವವು ಹೇಗೆ ಕೂಡುವುದು? ಎಂದನ್ನಕೂಡದು. ಅಸತ್ತಿಗೆ ಪ್ರತೀತಿಯಿಲ್ಲದಿದ್ದರೆ ಅಸದ್ವೈಲಕ್ಷಣ್ಯವನ್ನೂ ತಿಳಿಯಲು ಸಾಧ್ಯವಿಲ್ಲ. ೭ ಅಸತ್ತಿಗೆ ಅಸತ್ತೆಂದು ಜ್ಞಾನವಿದೆ. ಸತ್ಯವೆಂದು ಜ್ಞಾನವು ಎಲ್ಲಿ ದೃಷ್ಟವಾಗಿದೆ? ಎಂದರೆ— ಒಂದು ವಸ್ತುವಿಗೆ ಇನ್ನೊಂದರ ಆಕಾರವು ಇಲ್ಲದಿರುವುದೇ ಉಂಟೆಂದು ಭ್ರಾಂತಿಯಲ್ಲಿ ತೋರುತ್ತದೆಂದು ನಿಶ್ಚಿತವೇ. ಆ ಅಸ್ತಿತ್ವವು ಅನಿರ್ವಚನೀಯವಾಗಿಯೇ ತೋರುತ್ತದೆನ್ನಕೂಡದು. ಭ್ರಮೆಯಿರುವಾಗ ಸತ್ಯವಾಗಿಯೇ ತೋರುವುದು. ಇಲ್ಲದಿರುವ ಅಸ್ತಿತ್ವವು ತೋರದೆ ಹೋದರೆ ಅನಿರ್ವಚನೀಯವೆಂದಂಗೀಕರಿಸಿದ ಶುಕ್ತಿರಜತದಲ್ಲಿಯೂ ಭ್ರಮಿಸಿದವನಿಗೆ ಪ್ರವೃತ್ತಿಯೇ ಇಲ್ಲದೆ ಹೋಗುವುದು. ಅರ್ಥಕ್ರಿಯಾನರ್ಹವಾದುದರಲ್ಲಿ ಆ ಪ್ರತೀತಿಯೂ ಅಯಥಾರ್ಥವಾಗುವುದು. ಆದಕಾರಣ ಬಂಧಕ್ಕೆ ಮಿಥ್ಯಾತ್ವವನ್ನು ಹೇಳುವುದು ಅನುಪಯುಕ್ತವೂ, ಅಯುಕ್ತವೂ ಆಗಿದೆಂದು ಸಿದ್ಧವಾಯಿತು.

**ನ್ಯಾಯಸುಧಾ**— (1) ವ್ಯಾವಹಾರಿಕ ಸತ್ತೆನ್ನುವುದು ಸತ್ಯವೇ ಆದರೆ ಅದಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸುವುದು ವ್ಯಾಹತವು. ನಮ್ಮ ಇಷ್ಟವು ಸಿದ್ಧವಾಯಿತು. ವ್ಯಾವಹಾರಿಕ ಪದವೂ ವ್ಯರ್ಥವು. ಮತ್ತೂ ವ್ಯಾವಹಾರಿಕಸತ್ಯವು ಅಸತ್ಯವಾದರೆ ಅಸತ್ಯಕ್ಕೆ ಸಾಧಕತ್ವವು ಕೂಡುವುದಿಲ್ಲವೆಂಬುವ ಅನಿಷ್ಟ ಪ್ರಸಂಗವು ಪರಿಹೃತವಾಗದಿರುವ ಪ್ರಯುಕ್ತ ವ್ಯಾವಹಾರಿಕವೆಂದಂಗೀಕರಿಸೋಣದರಿಂದ ಏನು ಪ್ರಯೋಜನವು? (2) ಮುಖ್ಯ, ಅಮುಖ್ಯ ಎಂದು ಸತ್ಯವು ಎರಡು ವಿಧವು. ಅದರಲ್ಲಿ ಯಾವುದು ಸರ್ವಪ್ರಕಾರದಿಂದಲೂ ಬಾಧಿತವಾಗುವುದಿಲ್ಲವೋ ಅದು ಮುಖ್ಯ ಸತ್, ಪಾರಮಾರ್ಥಿಕ ಸತ್ಯವೆಂದೂ ಹೇಳಲ್ಪಡುತ್ತದೆ. ಯಾವುದಕ್ಕೆ ಸತ್ಪ್ರತೀತಿಯೇ ಸತ್ಯವೋ, ಅದು ಅಮುಖ್ಯ ಸತ್ಯವು. (3) ಅಮುಖ್ಯ ಸತ್ಯವು ಎರಡು ವಿಧವು. ಮಾಯೋಪಾಧಿಕವು

*ಪರರಿಗೆ ವ್ಯಾಮೋಹಕವಾದುದು ಮಾಯೆಯು. ಈಶನನ್ನು ಅಶ್ರಯಿಸಿರುವುದು. ಸ್ವಾಶ್ರಯ ವ್ಯಾಮೋಹಕವು ಅವಿದ್ಯೆಯು. ಜೀವಾಶ್ರಿತವು.

ವಿದ್ಯೋಪಾಧಿಕವು ಎಂದು. ಆಕಾಶ ಮೊದಲಾದುದು ಮಾಯೋಪಾಧಿಕವು. ಅದು ಬ್ರಹ್ಮಜ್ಞಾನೇತರದಿಂದ ಬಾಧಿಸಲ್ಪಡದೆ ಹಾನಾದಿ ವ್ಯವಹಾರಗಳನ್ನು ನಿರ್ವಹಿಸುವುದರಿಂದ ವ್ಯಾವಹಾರಿಕ ಸತ್ಯವೆಂದು ಹೇಳಲ್ಪಡುತ್ತದೆ. ಕೆಲವು ಕಾಲದಲ್ಲಿ ಕೆಲವರು ಹಾಗೆ ತಿಳಿಯುವುದರಿಂದಲೇ ಲೌಕಿಕ ವ್ಯವಹಾರವು ಪ್ರತೀತವಾಗುತ್ತದೆ. ಶುಕ್ತಿ, ರಜತ ಮೊದಲಾದುದು ಅವಿದ್ಯೋಪಾಧಿಕವು. ಅದು ಪ್ರತೀತಿಸಮಯದಲ್ಲಿ ಮಾತ್ರ ಇರತಕ್ಕುದು. ಹಾನೋಪಾದಾನಾದಿಗಳಿಗೆ ಕಾರಣವಲ್ಲ. ಅದಕಾರಣ ಪ್ರಾತೀತಿಕವೆನ್ನಿಸುತ್ತದೆ. (4) ಆದಕಾರಣ ಹೀಗೆ ಸತ್ಯವು ಮೂರು ವಿಧವಾಗಿರುವ ಪ್ರಯುಕ್ತ ಆಕಾಶಾದಿ ಜಗತ್ತು ಸತ್ಯವಾದಾಗ್ಯೂ ಪಾರಮಾರ್ಥಿಕವಲ್ಲದಿರುವುದರಿಂದ ಮಿಥ್ಯೆಯೆಂದು ಹೇಳಿದ್ದು ಯುಕ್ತವಾಗುತ್ತದೆ. ವ್ಯಾವಹಾರಿಕ ಸತ್ತಾದುದರಿಂದಲೂ ಅದರಲ್ಲಿ ಸೇರಿದ ಪ್ರಮಾಣಾದಿಗಳು ಕಥೆಗೆ ಅಂಗವಾಗುತ್ತವೆ. ಪಾರಮಾರ್ಥಿಕ ಪ್ರಾತೀತಿಕಗಳನ್ನು ವ್ಯಾವರ್ತಿಸುವುದೇ ಪ್ರಯೋಜನವಾಗಿರುವುದರಿಂದ ವ್ಯಾವಹಾರಿಕ ಪದವೂ ಸಾರ್ಥಕವಾಗುತ್ತದೆಂದರ—

ಪಾರಮಾರ್ಥಿಕಸತ್ಯವೇ ಸತ್ ಅಸತ್ತಾದುದು ಬ್ರಹ್ಮಜ್ಞಾನದಿಂದ ಬಾಧಿಸಲ್ಪಡುವುದು, ಅದರಿಂದ ಬೇರೆಯಾದುದು ಜ್ಞಾನದಿಂದ ಬಾಧಿಸಲ್ಪಡುವುದು, ಹೀಗೆ ಬಾಧಕಭೇದದಿಂದ ಎರಡು ವಿಧವು. ಈ ಪ್ರಕಾರ ಸತ್ತಿಗೆ ಮೂರು ಪ್ರಕಾರವೋ, ಅಥವಾ ಸತ್ತಿನಲ್ಲಿಯೇ (ಪಾರಮಾರ್ಥಿಕ, ವ್ಯಾವಹಾರಿಕ, ಪ್ರಾತಿಭಾಸಿಕ ಎಂಬುವ) ಅವಾಂತರ ಭೇದದಿಂದ ಮೂರು ವಿಧವೋ, ೧ನೇ ಕಲ್ಪದಲ್ಲಿ ಹಿಂದಿನ ದೋಷಗಳು ತಪ್ಪಲಾರವು. ಇದು ಸತ್ ಎಂಬುವ ಜ್ಞಾನಮಾತ್ರದಿಂದ ಅಸತ್ತಾದುದು ಅರ್ಥಕ್ರಿಯೆಗೆ ಯೋಗ್ಯವಾಗಲಾರದಷ್ಟೆ. ಅಂತಹ ಪ್ರಮಾಣಾದಿಗಳೂ ಕಥೆಗೆ ಅಂಗವಾಗುವುದು ಹೇಗೆ? ಹಾಗೆಯೇ ಆಗುವುದಾದರೆ ವಿಷವನ್ನೂ ಅಮೃತವೆಂದು ತಿಳಿದರೆ ಅಮೃತದ ಅರ್ಥಕ್ರಿಯೆಯನ್ನು ಮಾಡಬೇಕಾಗುವುದು. ೨ನೇದ್ದನ್ನು ದೂಷಿಸುತ್ತಾರೆ. 'ಸತ್ತ್ರೈವಿಧ್ಯಂ ಚ' ಎಂದು. ಪಾರಮಾರ್ಥಿಕಸತ್ ಎನ್ನುವಲ್ಲಿಯೂ ಆತ್ಮ ಹೊರತಾದ ಪಾರಮಾರ್ಥಿಕಸತ್ಯವೋ ಆತ್ಮರೂಪವಾದುದೋ, ಎಂದು ಇಟ್ಟುಕೊಳ್ಳಬೇಕು. (5) (ಸತ್ತು ಮೂರು ವಿಧವೆಂದು ಯಾವ ರೀತಿಯಾಗಲೀ ಸಿದ್ಧಿಸಲಾರದು. ಏಕೆಂದರೆ— ಆತ್ಮ ಹೊರತಾದ ಪಾರಮಾರ್ಥಿಕ ಸತ್ಯವೆಂದೆನ್ನಕೂಡದು. ಭೇದವು ಪ್ರಾಪ್ತವಾಗುವುದು. ಆತ್ಮ ರೂಪವಾದ ಪಾರಮಾರ್ಥಿಕಸತ್ಯವು ಎಂದರೆ ಆತನು ನಿರ್ವಿಶೇಷನೆಂದು ಅಂಗೀಕರಿಸಿರುವುದರಿಂದ ಸಾಧಕನಾಗಲಾರನು. ವ್ಯಾವಹಾರಿಕ ಪ್ರಾತೀತಿಕಗಳದ್ದಾದರೂ ಸ್ವರೂಪವೇ ಇಷ್ಟರವರೆಗೂ ಸಿದ್ಧಿಸಲಿಲ್ಲ. (6) ಅಮುಖ್ಯ ಸತ್ ಅಸತ್ಯವೂ ಅಲ್ಲ. ಸತ್ಯವೂ ಅಲ್ಲ. ಅನಿರ್ವಚನೀಯವು. ಅಂದರೆ ಸದಸದ್ವಿಲಕ್ಷಣವು. ಅದು ವ್ಯಾವಹಾರಿಕ ಪ್ರಾತಿಭಾಸಿಕ ಭೇದದಿಂದ ಎರಡು ವಿಧವು. ಅದರಲ್ಲಿ ವ್ಯಾವಹಾರಿಕವಾದ ಸದಸದ್ವಿಲಕ್ಷಣವಾದ ಪ್ರಪಂಚಕ್ಕೆ ಸತ್ಯದಿಂದ ಭೇದವಿದ್ದ ಪ್ರಯುಕ್ತ ಶ್ರುತ್ಯಾದಿಗಳಿಂದ ಮಿಥ್ಯಾತ್ವವನ್ನು ಸಮರ್ಥಿಸಿದ್ದು ಯುಕ್ತವೇ. ಅಸತ್ಯದಿಂದ ವಿಲಕ್ಷಣವಾದುದರಿಂದ ಅದರಲ್ಲಿ ಸೇರಿದ ಪ್ರಮಾಣಾದಿಗಳಿಗೆ ಸಾಧಕತ್ವವೂ ಯುಕ್ತವು. ಹೀಗೆ ಅದ್ವೈತಿಗಳು ಹೇಳಿದರೆ 'ಜಗತ್ತಿಗೆ ಸದಸದ್ವಿಲಕ್ಷಣತ್ವವು ಯಾವ ರೀತಿಯಿಂದಲಾದರೂ ಕೂಡುತ್ತಿದ್ದರೆ ಹೀಗೆ ಆಗ ಬಹುದಿತ್ತು. ಅದೇ ಸರ್ವಥಾ ಕೂಡಲಾರದೆನ್ನುತ್ತಾರೆ. 'ವೈಲಕ್ಷಣ್ಯಂ' ಎಂದು. (7) ಮತ್ತು ಜಗತ್ತು ಸದಸದ್ವಿಲಕ್ಷಣವು ಎನ್ನುವುದನ್ನು ಸತ್ಪ್ರಮಾಣದಿಂದ ಸಾಧಿಸುವಿರೋ? ಅಸತ್ಪ್ರಮಾಣದಿಂದಲೋ? ಸದಸದ್ವಿಲಕ್ಷಣವಾದ ಪ್ರಮಾಣದಿಂದಲೊ? ವಾದಿಯು ಒಡಂಬಡದಿರುವುದರಿಂದ ಒಂದನೇದ್ದು ಕೂಡಲಾರದು. ಪ್ರತಿವಾದಿಗೆ ಸಂಪ್ರತಿಪತ್ತಿಯಿಲ್ಲದಿರುವುದರಿಂದ ಎರಡನೇದ್ದೂ ಮೂರನೇದೂ ಕೂಡಲಾರದು)॥ ೨೨ ॥ ೨೩ ॥

ನ್ಯಾಯಸುಧಾ:— (1) ಸತ್ತ್ವಾದಿ ವಿಕಲ್ಪಗಳನ್ನು ನಿರಾಕರಿಸಿ ದೂಷಣವನ್ನು ಹೇಳುವುದಿರಲಿ, ಪ್ರಪಂಚವು ಅನಿರ್ವಚನೀಯವೆನ್ನುವಲ್ಲಿ ಪ್ರಮಾಣವೇ ಕೂಡುವುದಿಲ್ಲ. 'ನೇಹ ನಾನಾ' ಇತ್ಯಾದಿ ಶ್ರುತಿಗಳು ಜಗತ್ತು 'ಸದಸದ್ವಿಲಕ್ಷಣವಾದ ಅನಿರ್ವಚನೀಯವೆಂದು ಹೇಳುವುದಿಲ್ಲ. (2) "ವಿವಾದಪದಂ ಸದಸದ್ವಿಲಕ್ಷಣಂ ಜ್ಞಾನಬಾಧ್ಯತ್ವಾತ್ ಯದೇವಂ ತದೇವಂ ಯಥಾ ಶುಕ್ತಿರಜತಂ" ವಿವಾದ ವಿಷಯವಾದ ಜಗತ್ತು ಸದಸದ್ವಿಲಕ್ಷಣವು ಜ್ಞಾನದಿಂದ ಬಾಧಿಸಲ್ಪಡುವುದರಿಂದ ಶುಕ್ತಿರಜತದಂತೆಯೇ ಎಂಬ ಅನುಮಾನವು ಜಗತ್ತು ಸದಸದ್ವಿಲಕ್ಷಣವು' ಎನ್ನುವಲ್ಲಿ ಪ್ರಮಾಣವು. ಆ ಅನುಮಾನ ಸಾಮರ್ಥ್ಯದಿಂದ ಶ್ರುತಿಗೂ ಪ್ರಪಂಚಕ್ಕೆ ಅನಿರ್ವಚನೀಯತ್ವವಿದೆ ಎನ್ನುವ ಅರ್ಥದಲ್ಲಿಯೇ ತಾತ್ಪರ್ಯವಿದೆ ಎಂದು ಸಿದ್ಧಿಸುತ್ತದೆ, ಎಂದು ಅದ್ವೈತಿಗಳು ಹೇಳಿದರೆ ಅದು ಕೂಡುವುದಿಲ್ಲ. ಅನುಮಾನವು ಆಭಾಸವಾಗಿದೆ, ಎಂದಭಿಪ್ರಾಯವುಳ್ಳವರಾಗಿ ಪ್ರಥಮಪ್ರಾಪ್ತವಾಗಿರುವುದರಿಂದ ಪ್ರತಿಜ್ಞಾಂಶವನ್ನು ಪ್ರಥಮತಃ ನಿರಾಕರಿಸುತ್ತಾರೆ.

ಮೂ || ವೈಲಕ್ಷಣ್ಯಂ ಸತಶ್ಚಾಪಿ ಸ್ವಯಂ ಸದ್ಭೇದ ವಾದಿನಃ |
ಅಸತಶ್ಚಾಪಿ ವಿಶ್ವಸ್ಯ ತೇನಾನಿಷ್ಟಂ ಕಥಂ ಭವೇತ್ || ೨೪ ||
ಯದ್ಯುಚ್ಯತೇಽಪಿ ಸರ್ವಸ್ಮಾದಿತಿ ಸದ್ಭೇದ ಸಂಸ್ಥಿತಿಃ |
ಸನ್ಮಾತ್ರತ್ವಂ ಬ್ರಹ್ಮಣೋಽಪಿ ತಸ್ಮಾತ್ತದಪಿ ನೋ ಭವೇತ್ || ೨೫ ||

ಅ || (1) (ಸದಸಚ್ಛಬ್ದಗಳು ಭಾವಾಭಾವ ವಾಚಕಗಳೆಂದಂಗೀಕರಿಸಿ ದೂಷಣವನ್ನು ಹೇಳುತ್ತಾರೆ.) ಸತಃ=ಭಾವಸ್ವರೂಪವಾದ ಜಗತ್ತಿಗೆ, ಅಸತಃ=ಅಭಾವದ್ದೆಶೆಯಿಂದ, ವೈಲಕ್ಷಣ್ಯಮಪಿ=ಭೇದವೂ ಕೂಡ, ಭೇದವಾದಿನಃ=ಭಾವಾಭಾವಗಳಿಗೆ ಭೇದವನ್ನು ಹೇಳುವ ನನ್ನ (ಮತದಲ್ಲಿ,) ಸ್ವಯಂ ಸತ್ ಚ=ಸ್ವಾಭಾವಿಕವಾಗಿರತಕ್ಕದ್ದೇ. ಅಸತಃ=ಅಭಾವರೂಪವಾದ, ವಿಶ್ವಸ್ಯ = ಜಗತ್ತಿಗೆ, ಸತಃ = ಭಾವದ್ದೆಶೆಯಿಂದ, (ಭೇದವೂಕೂಡ ಭೇದವಾದಿಗಳಾದ ನಮ್ಮ ಮತದಲ್ಲಿ ಸ್ವಾಭಾವಿಕವಾಗಿರತಕ್ಕದೇ ಆದಕಾರಣ), ತೇನ=ಹಾಗೆ ಸಾಧಿಸಿದುದರಿಂದ, ಅನಿಷ್ಟಂ= (ನನಗೆ) ಅನಿಷ್ಟವು, ಕಥಂ=ಹೇಗೆ, ಭವೇತ್=ಆಗುವುದು. (ಮತ್ತೆ ಸದಸತ್ತುಗಳಿಗೆ ಭೇದವು ಸಿದ್ಧಿಸಿರುವುದರಿಂದಲೂ ಪ್ರತಿಜ್ಞಾತವಾದ ಅರ್ಥವು ಸಿದ್ಧಿಸುವುದರಿಂದ ಪರರಿಗೆ ಅರ್ಥಾಂತರತಾದೋಷವು ಬರುವುದು.) (2) (ಪ್ರತ್ಯೇಕವಾಗಿ ಭಾವಾಭಾವಗಳಿಗೆ ವೈಲಕ್ಷಣ್ಯವು ಹೇಳಬೇಕೆಂದು ಇಷ್ಟವೆಂದರೆ) ಸತೋಽಪಿ ವಿಶ್ವಸ್ಯ=ಭಾವರೂಪವಾದ ಜಗತ್ತಿಗೆ, ಸತಃ = ಭಾವದ್ದೆಸೆಯಿಂದ, ವೈಲಕ್ಷಣ್ಯಮಪಿ=ಭೇದವೂಕೂಡ, ಭೇದವಾದಿನಃ=ಭಾವಗಳಿಗೂ ಭೇದವನ್ನು ಹೇಳುವ ನಮ್ಮ (ಮತದಲ್ಲಿ), ಸ್ವಯಂ ಸದೇವ=ಸ್ವಾಭಾವಿಕವಾಗಿರತಕ್ಕದೇ (ಘಟಕ್ಕೆ ಪಟದಿಂದ ವೈಲಕ್ಷಣ್ಯವು ಸಿದ್ಧವಷ್ಟೇ.) ಅಸತೋಽಪಿ=ಅಭಾವದಿಂದಲೂ, ವೈಲಕ್ಷಣ್ಯಂ=ಭೇದವು, ಭಾವಾಭಾವಗಳಿಗೆ ಭೇದವನ್ನು ಹೇಳುವ ನಮ್ಮ ಮತದಲ್ಲಿ ಸ್ವಭಾವತಃ ಇರತಕ್ಕದೇ. ಹೀಗೆಯೇ ಅಭಾವರೂಪವಾದ ಜಗತ್ತಿಗೆ ಅಭಾವದ್ದೆಶೆಯಿಂದ ವೈಲಕ್ಷಣ್ಯವೂ ಅಭಾವಗಳಿಗೂ ಭೇದವನ್ನು ಹೇಳುವ ನಮ್ಮ ಮತದಲ್ಲಿರತಕ್ಕದೇ. ಭಾವದಿಂದ ವೈಲಕ್ಷಣ್ಯವು ಸುತರಾಂ ಇರತಕ್ಕದೇ. ಆದ ಕಾರಣ ಅನಿಷ್ಟವು ಹೇಗೆ ಆಗುವುದು? (3) ಭಾವಾಭಾವ ವೈಲಕ್ಷಣ್ಯವೆಂದರೆ— ಭಾವತ್ವಾಭಾವತ್ವಾನಧಿಕರಣತ್ವವು ವಿವಕ್ಷಿತವೆಂದರೆ— ಭಾವರೂಪವಾದ ಜಗತ್ತಿಗೆ ಅಭಾವದಿಂದ ವೈಲಕ್ಷಣ್ಯವು ಅಂದರೆ ಅಭಾವತ್ವಕ್ಕೆ ಆಶ್ರಯವಾಗದಿರುವಿಕೆಯೂ ಸ್ವಾಭಾವಿಕವಾಗಿ ಇರತಕ್ಕದೇ. ಅಭಾವ ರೂಪವಾದ ಜಗತ್ತಿಗೆ ಭಾವದಿಂದ ವೈಲಕ್ಷಣ್ಯವೂ ಅಂದರೆ ಭಾವತ್ವಕ್ಕೆ ಆಶ್ರಯವಾಗ-

ವಿರುವಿಕೆಯೂ ನಮ್ಮ (ದ್ವೈತಿಗಳ) ಮತದಲ್ಲಿ ಸ್ವಾಭಾವಿಕವಾಗಿ ಇರತಕ್ಕದೇ. ಭಾವ
ದಲ್ಲಿಯೂ ಅಭಾವತ್ವವನ್ನೂ, ಅಭಾವದಲ್ಲಿಯೂ ಭಾವತ್ವವನ್ನೂ ಅಂಗೀಕರಿಸುವುದಾದರೆ ಭಾವಾ
ಭಾವಗಳಿಗೆ ಭೇದವಿದೆ ಎನ್ನುವ ವಾದವು ಹೇಗೆ ಕೂಡುವುದು? ಹೀಗೆ ಸಾಧಿಸಿದುದರಿಂದ
ನನಗೆ ಅನಿಷ್ಟವು ಹೇಗೆ ಆಗುವುದು? (4) ಪ್ರತ್ಯೇಕವಾಗಿ ಭಾವಾಭಾವತ್ವಗಳಿಗೆ ಅನಧಿಕರಣ
ತ್ವವು ವಿವಕ್ಷಿತವೆಂದರೆ— ಭಾವರೂಪವಾದ ಜಗತ್ತಿಗೂ ಭಾವಾಭಾವಸ್ವರೂಪತ್ವವಿಲ್ಲದಿರುವುದು
ನಮಗೆ ಇರತಕ್ಕದೇ. ಅಭಾವರೂಪವಾದ ಜಗತ್ತಿಗೂ ಇಂತಹ ವೈಲಕ್ಷಣ್ಯವು ಇರತಕ್ಕದೇ.
(ಭಾವಾಭಾವಗಳಿಗೆ ಭೇದವನ್ನು ಹೇಳುವವರೂ ಒಂದೊಂದರ್ಥವು ಉಭಯಸ್ವರೂಪವೆಂದಂಗೀ
ಕರಿಸಲಿಲ್ಲ. ಭಾವದಲ್ಲಿ ಭಾವತ್ವವೇ. ಅಭಾವದಲ್ಲಿ ಅಭಾವತ್ವವೇ. ಇದರಿಂದ ಅನಿಷ್ಟವು ಹೇಗೆ
ಆಗುವುದು.) (5) ಒಂದು ವಸ್ತುವು ಭಾವತ್ವಕ್ಕೆ ಆಶ್ರಯವಲ್ಲ. ಅಭಾವತ್ವಕ್ಕೂ ಆಶ್ರಯ
ವಲ್ಲ. ಹೀಗೆ ಸಾಧಿಸುತ್ತೇವೆ ಎಂದರೆ— ಭಾವರೂಪವಾದ ಜಗತ್ತು ಅಭಾವತ್ವಕ್ಕೆ ಆಶ್ರಯವಲ್ಲ
ಎನ್ನುವುದು ಯುಕ್ತವೇ. ಅಭಾವರೂಪವಾದ ಜಗತ್ತೂ ಭಾವತ್ವಕ್ಕೆ ಆಶ್ರಯವಲ್ಲವೆನ್ನು
ವುದೂ ಸ್ವಾಭಾವಿಕವಾಗಿರತಕ್ಕದ್ದೇ ಇದರಿಂದ ಹೇಗೆ ಅನಿಷ್ಟವಾಗುವುದು? ಇನ್ನು ಅನೇಕಾ
ರ್ಥಗಳನ್ನು ಸುಧಾದಿ ಗ್ರಂಥಗಳಲ್ಲಿ ಹೇಳಿದ ರೀತಿಯಾಗಿ ತಿಳಿಯತಕ್ಕದ್ದು. (6) ತಥಾಚ
ಜಗತ್ತಿನಲ್ಲಿ ಭಾವಾಭಾವ ವಿಭಾಗವನ್ನೂ ಪರರು ಅಂಗೀಕರಿಸಿರುವುದರಿಂದ ಭಾವಾಭಾವಗಳಿಗೆ
ಭೇದವನ್ನು ಹೇಳುವ ನಮಗೆ ಯಾವ ಅನಿಷ್ಟವೂ ಇಲ್ಲ. ಆದಕಾರಣ ಹಾಗೆ ಸಾಧಿಸುವುದು
ಪ್ರಕೃತಕ್ಕೆ ಉಪಯುಕ್ತವಲ್ಲ. (7) ಸದಸಚ್ಛಬ್ದಗಳು ವಿದ್ಯಮಾನ, ಅವಿದ್ಯಮಾನ ಅರ್ಥಗಳನ್ನು
ಹೇಳುವವುಗಳೆಂದರೂ ಇದೇ ಉತ್ತರವು ವಿಶ್ವಸ್ಯ=ಜಗತ್ತಿಗೆ, ಸತಃ=ಸತ್ಯದ್ದೆಸೆಯಿಂದ, ವೈಲ
ಕ್ಷಣ್ಯಮಪಿ = ಭೇದವೂ ಕೂಡ, ನನಗೆ ಸ್ವಾಭಾವಿಕವಾಗಿ ಸಮ್ಮತವೇ. ಅವಿದ್ಯಮಾನವಸ್ತುವಿ
ನಿಂದಲೂ ಭೇದವು ಸಮ್ಮತವೇ. ಆದಕಾರಣ ಹಾಗೆ ಸಾಧಿಸಿದುದರಿಂದ ನನಗೆ ಅನಿಷ್ಟವು ಹೇಗೆ
ಆಗುವುದು? (8) ಹಾಗಾದರೆ ಜಗತ್ತಿಗೆ ಅಸತ್ತಾದ ಶಶವಿಷಾಣಾದಿಗಳಿಂದ ವೈಲಕ್ಷಣ್ಯವು
ಸಮ್ಮತವಾದಾಗ್ಯೂ ಸತ್ಯವಾದ ಪದಾರ್ಥಕ್ಕಿಂತ ವೈಲಕ್ಷಣ್ಯವು ಹೇಗೆಂದರೆ— ಇರತಕ್ಕ ವಸ್ತು
ವಿಗೂ ಅಸತ್ತಿನಿಂದ ಭೇದವನ್ನು ಹೇಳುವ ನನಗೆ ಹೇಗೆ ಜಗತ್ತಿಗೆ ಅಸತ್ತಿನಿಂದ ವೈಲಕ್ಷಣ್ಯವು
ಸಮ್ಮತವೋ ಹಾಗೆಯೇ ಸತ್ತಾದ ಜಗತ್ತಿಗೂ ಸತ್ತಿನಿಂದ ವೈಲಕ್ಷಣ್ಯವು ಸತ್ಪದಾರ್ಥಗಳಿಗೆ ಭೇದ
ವನ್ನು ಹೇಳುವ ನಮಗೆ ಸಮ್ಮತವೇ. (9) (ಅನೇಕ ಸತ್ವಗಳಿಗೆ ಆಶ್ರಯವಲ್ಲದಿರುವುದು ಎನ್ನುವ
ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) ಸರ್ವಸ್ಮಾದಪಿ=ಅನೇಕ ಸತ್ಪದಾರ್ಥದಿಂದಲೂ, ವೈಲ
ಕ್ಷಣ್ಯಂ=ಭೇದವು, ಯದಿ=ಯಾವ ಪಕ್ಷದಲ್ಲಿ, ಇತಿ ಉಚ್ಯತೇ=ಹೀಗೆ ಹೇಳಲ್ಪಟ್ಟರೂ, ಅಂದರೆ
ಜಗತ್ತಿಗೆ ಅನೇಕ ಸತ್ವಾನಧಿಕರಣತ್ವವು ಸಾಧಿಸಲ್ಪಡಬೇಕೆಂದು ಹೇಳಲ್ಪಟ್ಟರೂ, ಸದ್ಭೇದ
ಸಂಸ್ಥಿತಿಃ=ಸತ್ಪದಾರ್ಥಗಳಿಗೆ ಭೇದವು ಚೆನ್ನಾಗಿ ಸಿದ್ಧವಾಯಿತು. ಅಂತೂ ಅಪಸಿದ್ಧಾಂತವು.
(10) ಜಗತ್ತು ಅನೇಕ ಸತ್ವಗಳಿಗೆ ಆಶ್ರಯವಲ್ಲ ಎಂದು ಪ್ರತಿಜ್ಞಾ ಮಾಡುವವನು ಅನೇಕ
ಸತ್ವಗಳನ್ನು ಅಂಗೀಕರಿಸದಿದ್ದರೆ 'ಅನೇಕ' ಎನ್ನುವ ವಿಶೇಷಣಕ್ಕೆ ವೈಯರ್ಥ್ಯವು. ಅನೇಕ ಸತ್ವ
ಗಳನ್ನಂಗೀಕರಿಸಿದರೆ ಸತ್ಯಕ್ಕೆ ಭೇದವು ಸಿದ್ಧಿಸುವುದು. (11) ('ಅವಿಶೇಷಿತ ಸತ್ವಾನಧಿ
ಕರಣತ್ವಂ' ಎನ್ನುವ ಪಕ್ಷವನ್ನು ದೂಷಿಸುತ್ತಾರೆ) ಸನ್ಮಾತ್ರತ್ವಂ=ಅವಿವಕ್ಷಿತವಾದ ವಿಶೇಷವುಳ್ಳ
ಸತ್ವವು. ಬ್ರಹ್ಮಣೋऽಪಿ=(ಯಾವ ಕಾರಣದಿಂದ) ಬ್ರಹ್ಮನಿಗೂ (ಇದೆಯೋ), ತಸ್ಮಾತ್=
ಅಪಪ್ರಯುಕ್ತ. ತಸ್ಮಾತ್=ಸತ್ಯನಾದ ಬ್ರಹ್ಮನಿಂದ, ತತ್=ವೈಲಕ್ಷಣ್ಯವು, ತದಪಿ=ಸತ್ವಾನಧಿ
ಕರಣತ್ವವೂ ಕೂಡ, ಜಗತ್ತಿಗೆ, ನಃ=ನಮಗೆ, ಭವೇತ್=ಸಮ್ಮತವಾಗುವುದು. ತಥಾಚ ಸಿದ್ಧ
ವಾಗಿರುವುದರಿಂದ ಅದೂ ಸಾಧ್ಯವಾಗಲಾರದು.) (12) 'ಸತ್ವಾನಧಿಕರಣತ್ವಂ' ಎನ್ನುವಲ್ಲಿ

ಸತ್ವವೆಂದರೆ— ಸಾಮಾನ್ಯ ಸತ್ವವೆಂದರೆ ಅದನ್ನು ದೂಷಿಸುತ್ತಾರೆ. 'ಯದ್ಯುಚ್ಯತೇऽಪಿ' ಸರ್ವಸ್ಮಾತ್=ಸರ್ವಾರ್ಥಾನುಗತವಾದ ಸಾಮಾನ್ಯದಿಂದ, ವೈಲಕ್ಷಣ್ಯಂ=ಅನಾಶ್ರಯತ್ವವು, ಯದಿ ಉಚ್ಯತೇ=ಸಾಧ್ಯವೆಂದು ಹೇಳಲ್ಪಡುವುದಾದರೂ, ಆಗ ಸದ್ಭೇದಸಂಸ್ಥಿತಿಃ=ಸತ್ಪದಾರ್ಥಗಳಿಗೆ ಭೇದವು ಸಿದ್ಧವಾಯಿತು. (13) ಸ್ವರೂಪ ಸತ್ವವೆಂದರೆ ಅದನ್ನು ದೂಷಿಸುತ್ತಾರೆ. ಸನ್ಮಾತ್ರತ್ವಂ= ಸತ್ತಾನಪೇಕ್ಷವಾದ ಸತ್ವವು, ಸ್ವರೂಪಸತ್ವವು, ಬ್ರಹ್ಮಣೋऽಪಿ=ಬ್ರಹ್ಮನಿಗೂ, (ಯಾವಕಾರಣ ದಿಂದ ಇದೆಯೋ) ತಸ್ಮಾತ್=ಆ ಕಾರಣದಿಂದ, ತಸ್ಮಾತ್=ಆ ಬ್ರಹ್ಮನಿಂದ, ತತ್=ವೈಲಕ್ಷಣ್ಯವು, (ಅಬ್ರಹ್ಮತ್ವವೂ ಕೂಡ,) ವಿಶ್ವಸ್ಯ=ಜಗತ್ತಿಗೆ, ನಃ=ನಮಗೆ, ಭವೇತ್=ಸಮ್ಮತವಾಗುವುದು ॥೨೪॥೨೫॥

ಹೀಗೆ ಪ್ರತಿಜ್ಞೆಯನ್ನು ನಿರಾಕರಿಸಿ ಹೇತುವನ್ನೂ ತಿರಸ್ಕರಿಸುತ್ತಾರೆ —

**ಮೂ ॥ ಜ್ಞಾನಬಾಧ್ಯತ್ವಮಪಿ ತು ನ ಸಿದ್ಧಂ ಪ್ರತಿವಾದಿನಃ ।**
**ವಿಜ್ಞಾತಸ್ಯಾನ್ಯಥಾ ಸಮ್ಯಗ್ವಿಜ್ಞಾನಂ ಹ್ಯೇವ ತನ್ಮತಂ ॥ ೨೬ ॥**

ಅ ॥ ಜ್ಞಾನಬಾಧ್ಯತ್ವಮಪಿ = (ಪ್ರತಿಜ್ಞೆಯು ಮಾತ್ರ ದುಷ್ಟವಲ್ಲ) ಹೇತುಭೂತವಾದ ಜ್ಞಾನಬಾಧ್ಯತ್ವವೂ ಕೂಡ, ಪ್ರತಿವಾದಿನಃ=ಪ್ರತಿವಾದಿಯಾದ ನನಗೆ, ನ ಸಿದ್ಧಂ=ಸಿದ್ಧವಾಗಲಿಲ್ಲ. ತು=ಶಬ್ದವು, ಇದಕ್ಕೆ ಸಿದ್ಧಾಂತಿಗಳಿಗೆ ಅಭಿಮತವಾದ ಜ್ಞಾನಬಾಧ್ಯತ್ವಕ್ಕಿಂತ ಭೇದವದೆ ಎಂದು ತಿಳಿಸಿಕೊಡುತ್ತದೆ. (1) (ಜ್ಞಾನಬಾಧ್ಯತ್ವವು ಅಸಿದ್ಧವು, ವ್ಯಾಪ್ತಿರಹಿತವೂ ಆಗಿದೆ. ನಿಮಗೆ ಅಭಿಮತವಾದ ಜ್ಞಾನಬಾಧ್ಯತ್ವವನ್ನು ಹೇತುವೆಂದು ಇಟ್ಟುಕೊಳ್ಳುವುದಾದರೆ ಪ್ರತಿವಾದಿಗಳಿಗೆ (ದ್ವೈತಿಗಳಿಗೆ) ಸಿದ್ಧವಾಗಲಿಲ್ಲ. ನಮಗೆ ಅಭಿಮತವೆಂದು ಇಟ್ಟುಕೊಳ್ಳುವುದಾದರೆ ವ್ಯಾಪ್ತಿಯಿಲ್ಲವು. ಹೇಗೆಂದರೆ-) ಹಿ=ಯಾವ ಕಾರಣದಿಂದ, ಅನ್ಯಥಾ ವಿಜ್ಞಾತಸ್ಯ=ಬೇರೆ ರೀತಿಯಾಗಿ ತಿಳಿಯಲ್ಪಟ್ಟದ್ದಕ್ಕೆ, ಸಮ್ಯಕ್ ವಿಜ್ಞಾನಮೇವ=ಚೆನ್ನಾಗಿ ತಿಳಿದುಕೊಳ್ಳುವುದೇ (ಇದ್ದದ್ದನ್ನು ಇದ್ದಹಾಗೆ ತಿಳಿದುಕೊಳ್ಳುವುದೇ) (ಬಾಧವು, ಅದಕ್ಕೆ ವಿಷಯವಾದುದೇ ಬಾಧ್ಯವು), ತತ್= ಅಂತಹ ಬಾಧ್ಯತ್ವವು, ಮತಂ=ನಮಗೆ ಸಮ್ಮತವು. (ಅದಾದರೂ ವಿಪಕ್ಷನಾದ ಆತ್ಮನಲ್ಲಿ ಇದ್ದುದರಿಂದ ವ್ಯಾಪ್ತಿಯಿಲ್ಲವು.) (2) (ಆತ್ಮನು ಸತ್ಯನಾದಾಗ್ಯೂ ದೇಹಾದಿಗಳ ಸ್ವರೂಪದಿಂದ ತಿಳಿಯಲ್ಪಟ್ಟವನಾಗಿ ವೇದಾಂತದಿಂದುಂಟಾದ ಯಥಾರ್ಥ ವಿಜ್ಞಾನವೃತ್ತಿಗೆ ವಿಷಯನೆಂದು ಪರರೂ ಅಂಗೀಕರಿಸಿರುವರು. ಇಲ್ಲದಿದ್ದರೆ ಅವಿದ್ಯೆಯೇ ನಿವೃತ್ತವಾಗದೆ ಹೋಗುವುದು.) (3) (ಅಥವಾ ದೃಷ್ಟಾಂತವನ್ನು ನಿರಾಕರಿಸುತ್ತಾರೆ.) ಜ್ಞಾನಬಾಧ್ಯತ್ವಮಪಿ=ಸದಸದ್ವಿಲಕ್ಷಣತ್ವರೂಪವಾದ (ಅನಿರ್ವಾಚ್ಯತ್ವರೂಪವಾದ) ಸಾಧ್ಯವೂ ಜ್ಞಾನಬಾಧ್ಯತ್ವವೂ ಕೂಡ, ಪ್ರತಿವಾದಿನಃ= ಪ್ರತಿವಾದಿಗಳಾದ ನಮಗೆ, ನ ಸಿದ್ಧಂ=ಶುಕ್ತಿರಜತಾದಿಗಳಲ್ಲಿ ಸಿದ್ಧವಾಗಲಿಲ್ಲ. (ಅಂದರೆ ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವು ಪ್ರತಿವಾದಿಗಳಾದ ನಮಗೆ ಸಿದ್ಧವಾಗಲಿಲ್ಲ. ನಾವು ಅಸತ್ತೆಂದು ಅಂಗೀಕರಿಸಿರುವೆವು. ಆದಪ್ರಯುಕ್ತವೇ ಜ್ಞಾನಬಾಧ್ಯತ್ವವು ಶುಕ್ತಿರಜತಾದಿಗಳಲ್ಲಿ ನಮಗೆ ಸಮ್ಮತವಲ್ಲ. ಜ್ಞಾನಬಾಧ್ಯತ್ವವು ಜ್ಞಾನನಿವರ್ತ್ಯತ್ವರೂಪವೆಂದು ಪರರಿಗೆ ಅಭಿಮತವು. ಅದು ಅಸತ್ತಿಗೆ ಕೂಡಲಾರದು. ಅದು ನಿತ್ಯನಿವೃತ್ತವಾಗಿದೆ. ಆದಪ್ರಯುಕ್ತ ಇದು ಸಾಧ್ಯ ಸಾಧನಗಳಿಂದ ವಿರಹಿತವಾದ ದೃಷ್ಟಾಂತಾಭಾಸವು. (4) ಶುಕ್ತಿರಜತಾದಿಗಳಲ್ಲಿ ಬಾಧ್ಯತ್ವವನ್ನು ಒಪ್ಪದಿದ್ದರೆ ಶುಕ್ತಿರಜತವು ಬಾಧ್ಯವೆಂಬುವ ಸರ್ವಜನರ ಅನುಭವದಿಂದ ವಿರೋಧವು ಬರುವುದು, ಎಂದೆನ್ನಕೂಡದು. ನಿಮಗೆ ಅಭಿಮತವಾದದ್ದು ಇಲ್ಲದಿದ್ದರೂ ಬೇರೆ ಬಾಧ್ಯತ್ವವು ಅಲ್ಲಿರುವುದು. ಅದು ಯಾವುದೆಂದರೆ — ರಜತತ್ವಾದಿಗಳಿಂದ ತಿಳಿಯಲ್ಪಟ್ಟ ಪುರೋವರ್ತಿಯಾದುದಕ್ಕೆ ಶುಕ್ತಿತ್ವಾದಿ

ರೂಪದಿಂದ ತಿಳಿದುಕೊಳ್ಳುವುದೇ. ಅನ್ಯಥಾ ವಿಜ್ಞಾತಸ್ಯ ಸಮ್ಯಕ್ ವಿಜ್ಞಾನವು. ಹೀಗೆಯೇ ಅಸತ್ತಾದ ರಜತವು ಸತ್ವಾದಿಗಳಿಂದ ತಿಳಿಯಲ್ಪಟ್ಟದ್ದಾಗಿ ಅಸತ್ತೆಂದು ಚೆನ್ನಾಗಿ ತಿಳಿದುಕೊಳ್ಳುವುದೂ ಅನ್ಯಥಾ ವಿಜ್ಞಾತಕ್ಕೆ ಸಮ್ಯಗ್ವಿಜ್ಞಾನವು ಆಗುವುದು. (5) ಪರರು ಸದಸದ್ವಿಲಕ್ಷಣತ್ವವು ಜ್ಞಾನಬಾಧ್ಯತ್ವವು ಹೀಗೆ ಅನಿರ್ವಚನೀಯಕ್ಕೆ ಎರಡೂ ಲಕ್ಷಣವನ್ನು ಹೇಳಿರುವರು. ಅವುಗಳಲ್ಲಿ ಒಂದನೇದ್ದನ್ನು ನಿರಾಕರಿಸುತ್ತಾರೆ. 'ವೈಲಕ್ಷಣ್ಯಂ ಸತಃ' ಇತ್ಯಾದಿಗಳಿಂದ. ಹಿಂದಿನಂತೆ ಅರ್ಥವು. (6) ಎರಡನೇ ಲಕ್ಷಣವನ್ನೂ ನಿರಾಕರಿಸುತ್ತಾರೆ. 'ಜ್ಞಾನಬಾಧ್ಯತ್ವಂ' ಇತ್ಯಾದಿಗಳಿಂದ.

ತಾ|| (1) **ನ್ಯಾಯಸುಧಾ**— ಜ್ಞಾನಬಾಧ್ಯತ್ವವೆಂದರೆ, ಹಿಂದೆ ಹೇಳಿದಪ್ರಕಾರ ಜ್ಞಾನನಿವರ್ತ್ಯತ್ವ (ಜ್ಞಾನದಿಂದ ತನಗೆ ಉಪಾದಾನಕಾರಣವಾದ ಅಜ್ಞಾನವು ನಷ್ಟವಾದ ಕೂಡಲೆ ನಾಶವಾಗುವಿಕೆ)ವೆಂದರೆ, ಆಕಾಶಾದಿಗಳಲ್ಲಿಯೂ ಶುಕ್ತಿರಜತಾದಿಗಳಲ್ಲಿಯೂ ಸಿದ್ಧವಾಗಲಿಲ್ಲ. ಆಕಾಶಾದಿಗಳು ಸತ್ಯಗಳು ಆಗಿವೆ. ಶುಕ್ತಿರಜತಾದಿಗಳು ಅಸತ್ಯಗಳಾಗಿವೆ. ಆದಪ್ರಯುಕ್ತ ಅವಿದ್ಯೆಯು ಇವುಗಳಿಗೆ ಉಪಾದಾನಕಾರಣವಲ್ಲ. ಅಂತೂ ಲಕ್ಷಣವು ಅಸಂಭವಿಯಾಯಿತು. (2) ಜ್ಞಾನವಿನಾಶ್ಯತ್ವವೆಂದರೆ, ಆಕಾಶಾದಿಗಳಿಗೆ ನಿತ್ಯತ್ವವಿದ್ದಪ್ರಯುಕ್ತವೇ, ಶುಕ್ತಿರಜತಾದಿಗಳಿಗೆ ಅಸತ್ವವಿದ್ದಪ್ರಯುಕ್ತವೇ ಸಿದ್ಧವಾಗದಿರುವುದರಿಂದ ಅವ್ಯಾಪ್ತಿಯು. (3) ಹಾಗಾದರೆ ನೀವು ಯಾವ ಬಾಧ್ಯತ್ವವನ್ನು ಅಂಗೀಕರಿಸುವಿರೋ ಅದೇವೇ ನಮಗೆ ಅನಿರ್ವಚನೀಯಲಕ್ಷಣವಾಗಲಿ ಎಂದರೆ- **'ಪ್ರತಿವಾದಿನಃ ವಿಜ್ಞಾತಸ್ಯ'** ಇತ್ಯಾದಿಗಳಿಂದ. ಅನ್ಯಥಾ ವಿಜ್ಞಾತವಾದುದಕ್ಕೆ ಸಮ್ಯಕ್ ವಿಜ್ಞಾನರೂಪ ಬಾಧ್ಯತ್ವವು ಪ್ರತಿವಾದಿಗಳಾದ ನಮಗೆ ಸಮ್ಮತವು. ಆ ಲಕ್ಷಣವು ಆತ್ಮನಲ್ಲಿ ಇದ್ದುದರಿಂದ ಅತಿವ್ಯಾಪ್ತಿಯು. ಇದರಲ್ಲಿ ಅನೇಕ ವಾದಿಗಳಿಗೆ ವಿಪ್ರತಿಪತ್ತಿಗಳು ಇರುತ್ತವೆ. ಅವುಗಳನ್ನು ಮುಂದೆ ವಿವರಿಸುವೆನು. ಅನ್ಯಥಾ ವಿಜ್ಞಾನವೇ ಭ್ರಾಂತಿಯು. ಮೂಲದಲ್ಲಿ ಅವಧಾರಣಾರ್ಥಕವಾದ 'ಏವ' ಶಬ್ದವನ್ನು ಕೊಟ್ಟಿರುವುದರಿಂದ ಇದಕ್ಕೆ ವಿರುದ್ಧವಾದ ಬೇರೆ ಮತಗಳೆಲ್ಲವೂ ನಿರಾಕೃತಗಳಾದವು ಎಂದು ತಿಳಿಯಬೇಕು. 'ಹಿ' ಶಬ್ದದಿಂದ ಈ ಅರ್ಥವು ಬಹುಪ್ರಮಾಣ ಪ್ರಸಿದ್ಧವೆಂದು ಸೂಚಿತವಾಯಿತು.

### ಅನ್ಯಥಾ ಖ್ಯಾತಿವಾದವು.

ಈ ಅನ್ಯಥಾಖ್ಯಾತಿವಾದವು ಬಹು ಕಠಿನವಾಗಿರುವುದರಿಂದ ಮೊದಲು ಸಂಕ್ಷೇಪವಾಗಿ ಪೂರ್ವಪಕ್ಷ ಸಿದ್ಧಾಂತಗಳ ಸಾರವನ್ನು ಬರೆದು ಮೇಲೆ ಸ್ವಲ್ಪ ವಿಸ್ತಾರವಾಗಿ ಬರೆಯುವೆನು. ಪ್ರಾಭಾಕರ ಮೊದಲಾದ ಐದು ವಾದಿಗಳು "ಖ್ಯಾತಿ" (ಭ್ರಮಾತ್ಮಕ ಜ್ಞಾನ) ಇಲ್ಲವೆಂದು ಹೇಳುವುದರಿಂದ ಅಂದರೆ ಸಿದ್ಧಾಂತಿಗಳು ಒಪ್ಪುವ ಭ್ರಮಾತ್ಮಕಜ್ಞಾನವನ್ನು ಒಪ್ಪದಿರುವುದರಿಂದ ಅಖ್ಯಾತಿ ವಾದಿಗಳು. ಪ್ರಾಭಾಕರ ಮೊದಲಾದ ಐದು ವಾದಿಗಳ **ಪೂರ್ವಪಕ್ಷಗಳ ಸಾರಾಂಶವು.**

(1) ಪ್ರಾಭಾಕರರು ಜ್ಞಾನವೆಲ್ಲವೂ ಯಥಾರ್ಥವೇ, ಭ್ರಮಾತ್ಮಕವಾದ ಖ್ಯಾತಿಯಿಲ್ಲವೆಂದು ಹೇಳುವ ಅಖ್ಯಾತಿವಾದಿಗಳು. (೧) ಮುತ್ತಿನಚಿಪ್ಪನ್ನು ನೋಡಿ ಇದು ಬೆಳ್ಳಿಯು ಎಂದು ಅಸತ್ತಾದ ರಜತವನ್ನು ವಿಷಯೀಕರಿಸುವ ಭ್ರಮಾತ್ಮಕವಾದ 'ಇದಂ ರಜತಂ' ಇದುಮೊದಲಾದ ಜ್ಞಾನವನ್ನು ಒಪ್ಪುವುದಿಲ್ಲ. ಇಂತಹ ಭ್ರಮಾತ್ಮಕಜ್ಞಾನವನ್ನು ಒಪ್ಪುವ ವಾದಿಗಳ ಮೇಲೆ ಪ್ರಾಭಾಕರರು ಹೇಳುವ ಬಾಧಕಗಳು. ಜ್ಞಾನದಲ್ಲಿ ತೋರುವ ಆಕಾರವು ಎದುರಿನಲ್ಲಿರತಕ್ಕ ವಸ್ತುವಿನಲ್ಲಿದ್ದದ್ದಾದರೆ ಆ ಜ್ಞಾನವು ಭ್ರಮೆಯೇ ಆಗಲಾರದು. ಆ ಆಕಾರವು ಬೇರೆಕಡೆ ಇದೆ ಎಂದು ಹೇಳಲು ಬರುವುದಿಲ್ಲ. ಆದುದರಿಂದ ಆ ಆಕಾರವು ಜ್ಞಾನಾಕಾರವೆಂದೇ ಹೇಳಿದರೆ **ಸಾಕಾರ**

ವಿಜ್ಞಾನವಾದಿಗಳಾದ ಬೌದ್ಧರ ಮತವನ್ನು ಪ್ರವೇಶಿಸಬೇಕಾಗುವುದು. (೨) ಮತ್ತು ಜ್ಞಾನದಲ್ಲಿ ತೋರುವ ರಜತಾಕಾರವು ಅತ್ಯಂತಾಸತ್ತಾದರೆ ಅಸತ್ತಿಗೆ ಪ್ರತೀತಿಯನ್ನು ಒಪ್ಪಿದಂತೆಯೇ ಆಯಿತು. ಅಸತ್ತಿಗೆ ಪ್ರತೀತಿಯೇ ಕೂಡುವುದಿಲ್ಲ. (೩) ರಜತಾಕಾರವನ್ನುಲ್ಲೇಖಿಸುವುದು ಮತ್ತು ಶುಕ್ತಿಯನ್ನು ವಿಷಯೀಕರಿಸುವುದು ಎಂದು ಹೇಳುವುದು ಉಲ್ಲೇಖ್ಯತ್ವ ಬಿಟ್ಟು ವಿಷಯತ್ವವೇ ಇಲ್ಲದಿರುವುದರಿಂದ ಅನುಭವವಿರುದ್ಧವು. (೪) ಮತ್ತು ಇಂದ್ರಿಯ ಮೊದಲಾದ ಜ್ಞಾನಸಾಧನಗಳು ಯಥಾರ್ಥ ಜ್ಞಾನವನ್ನೇ ಉಂಟುಮಾಡುವ ಸ್ವಭಾವವುಳ್ಳವುಗಳಾದಕಾರಣ ಭ್ರಮಾತ್ಮಕ ಜ್ಞಾನಕ್ಕೆ ಕಾರಣವೇ ಇಲ್ಲದಿರುವುದರಿಂದ ಭ್ರಮಾತ್ಮಕ ಜ್ಞಾನವು ಕೂಡಲಾರದು. (೫) ಮತ್ತು ಒಂದು ಜ್ಞಾನವು ಭ್ರಮರೂಪವಾಗಿ ಅವಿಶ್ವಸನೀಯವಾದರೆ ಎಲ್ಲಾ ಜ್ಞಾನಗಳಲ್ಲಿಯೂ ಈ ಶಂಕೆಯಿಂದ ವಿಶ್ವಾಸವೇ ಹುಟ್ಟಲಾರದು. ಅಂತೂ ಜ್ಞಾನದಿಂದ ಪ್ರವೃತ್ತಿ ನಿವೃತ್ತ್ಯಾದಿ ಯಾವ ವ್ಯವಹಾರವೂ ಇಲ್ಲದೆ ಹೋಗುವುದು 'ಇದಂ ರಜತಂ' ಇತ್ಯಾದಿ ಜ್ಞಾನಗಳು ಗ್ರಹಣ ಸ್ಮರಣಾತ್ಮಕಗಳಾದ ಎರಡು ಜ್ಞಾನಗಳು, ಯಥಾರ್ಥಗಳೇ. ಹೀಗೆ ಪ್ರಾಭಾಕರರ ಪ್ರಕ್ರಿಯೆಯು. **"ಸಾಕಾರವಾದಾದಸತೋ ನ ಭಾನಾತ್ಸಂವಿದ್ವಿರೋಧಾದಥ ಹೇತ್ವಭಾವಾತ್ । ಧಿಯಾಮನಾಶ್ವಾಸಭಯಾಚ್ಚ ನೇಷ್ಟಾ ಯತೋಽನ್ಯಥಾಖ್ಯಾತಿರತೋಽಯಥಾರ್ಥಾ ॥ ಅಹೋ ಬತ ಮಹಾನೇಷಃ ಪ್ರಮಾದೋ ಧೀಮತಾಮಪಿ । ಜ್ಞಾನಸ್ಯ ವ್ಯಭಿಚಾರಿತ್ವೇ ವಿಶ್ವಾಸಃ ಕಿಂ ನಿಬಂಧನಃ"** ॥ (2) ರಾಮಾನುಜೀಯರು ಎಲ್ಲಾ ವಸ್ತುಗಳಲ್ಲಿ ಎಲ್ಲಾ ವಸ್ತುಗಳ ಅಂಶವೂ ಇದೆ, ಎನ್ನುವಲ್ಲಿ ಶ್ರುತಿಪುರಾಣಾದಿಗಳು ಇರುವುದರಿಂದ ಶುಕ್ತಿಯಲ್ಲಿಯೂ ರಜತಾಂಶವು ಇರುವ ಪ್ರಯುಕ್ತ ಅದನ್ನು ವಿಷಯೀಕರಿಸುವ 'ಇದಂ ರಜತಂ' ಇದುಮೊದಲಾದ ಜ್ಞಾನವು ಯಥಾರ್ಥವೇ, ಎಂದು ಹೇಳುವುದರಿಂದ ಭ್ರಮಾತ್ಮಕ ಜ್ಞಾನವನ್ನು ಒಪ್ಪುವುದಿಲ್ಲ. (3) ತಾರ್ಕಿಕೈಕದೇಶಿಗಳು 'ಇದಂ ರಜತಂ' ಎನ್ನುವ ಜ್ಞಾನದಲ್ಲಿ ತೋರುವ ಪದಾರ್ಥಗಳಿಗೆ ಭೇದವನ್ನು ವಿಷಯೀಕರಿಸದಿರುವ ಸವಿಕಲ್ಪಕವಾದ ಒಂದಾದದ್ದೇ ಜ್ಞಾನವು ಭ್ರಮವು. ಅಂತೂ ಅಸದ್ಭೂತವಾದ ವಸ್ತುವನ್ನು ವಿಷಯೀಕರಿಸುವುದಿಲ್ಲ. ಅಸತ್ತಿಗೆ ಪ್ರತೀತಿಯಿಲ್ಲ. ಭೇದಾಗ್ರಹದಿಂದಲೇ ಪ್ರವೃತ್ತ್ಯಾದಿಗಳು ಆಗುವವು. (4) ಪ್ರಾಚೀನ ತಾರ್ಕಿಕರು 'ಇದಂ ರಜತಂ' ಎನ್ನುವಲ್ಲಿ ತೋರುವ ರಜತವು ಬೇರೆಕಡೆ (ಅಂಗಡಿಯಲ್ಲಿ) ಇದೆ. ಅಸತ್ತಲ್ಲ. ರಜತಕ್ಕೂ ಶುಕ್ತಿಗೂ ತೋರುವ ತಾದಾತ್ಮ್ಯ (ಅಭೇದ) ಮಾತ್ರ ಅಸತ್ತೆಂದು ಹೇಳುತ್ತಾರೆ. (5) ಮಾಯಾವಾದಿಗಳು 'ಇದಂ ರಜತಂ' ಇದುಮೊದಲಾದ ಜ್ಞಾನದಲ್ಲಿ ತೋರುವ ರಜತವು ಸತ್ತು ಅಲ್ಲ. ಅಸತ್ತಲ್ಲ. ಸದಸತ್ತೂ ಅಲ್ಲ. ಸದಸದ್ವಿಲಕ್ಷಣವಾದ ಅನಿರ್ವಚನೀಯವೆಂದು ಹೇಳುತ್ತಾರೆ. ಇವರು ಅನಿರ್ವಚನೀಯಖ್ಯಾತಿವಾದಿಗಳು.

**ಸಿದ್ಧಾಂತಸಾರಾಂಶವು:**— ಯಥಾಕ್ರಮವಾಗಿ ಪ್ರಾಭಾಕರರ ಪೂರ್ವಪಕ್ಷನಿರಾಕರಣವು. (1) (೧) ಯಾರು ಜ್ಞಾನದಲ್ಲಿ ತೋರುವ ಆಕಾರವು ಜ್ಞಾನದಲ್ಲಿರತಕ್ಕುದೆಂದು ಹೇಳುತ್ತಾರೋ, ಅವರಿಗೆ ಸಾಕಾರವಿಜ್ಞಾನವಾದ ಪಕ್ಷವನ್ನು ಕುರಿತು ಹೇಳಿದ ದೋಷವು ಬಂದರೂ ನಮಗೆ (ಸಿದ್ಧಾಂತಿಗಳಿಗೆ) ಈ ದೋಷವು ಬರುವುದಿಲ್ಲ. ಜ್ಞಾನದಲ್ಲಿ ತೋರುವ ರಜತಾದ್ಯಾಕಾರವು ಅತ್ಯಂತಾಸತ್ತೆಂದೇ ಒಪ್ಪುವೆವು. ಜ್ಞಾನದಲ್ಲಿರತಕ್ಕುದೆಂದು ಒಪ್ಪುವುದಿಲ್ಲ. (೨) ಅತ್ಯಂತಾಸತ್ತಿಗೂ ದೋಷವಶದಿಂದ ಪ್ರತೀತಿಯು ಕೂಡಬಹುದು. ಮತ್ತು 'ಅಸದೇವ ರಜತಂ ಪ್ರತ್ಯಭಾತ್' ಎನ್ನುವ ಅನುಭವಬಲದಿಂದಲೂ ರಜತವು ಅತ್ಯಂತಾಸತ್ತೆಂದೇ ಸಿದ್ಧವಾಗುತ್ತದೆ. (೩) **"ತಜ್ಜ್ಞಾನಾಸಾಧಾರಣಕಾರಣ ಪ್ರತಿಯೋಗಿಕ ತಜ್ಜ್ಞಾನಾಸಾಧಾರಣಕಾರಣಸನ್ನಿಕರ್ಷಾನುಯೋಗಿತ್ವಂ**

ತಜ್ಞಾನವಿಷಯತ್ವಂ"=ಯಾವ ಜನ್ಯಜ್ಞಾನಕ್ಕೆ ಯಾವುದು ಅಸಾಧಾರಣಕಾರಣವೋ ಅದರಿಂದ ಆ ಜ್ಞಾನಕ್ಕೆ ಅಸಾಧಾರಣವಾದ ಸನ್ನಿಕರ್ಷವುಳ್ಳದ್ದೇ ಆ ಜ್ಞಾನಕ್ಕೆ ವಿಷಯವು, ಎಂದು ಹೇಳುವುದರಿಂದ ಉಲ್ಲೇಖ್ಯತ್ವಾತಿರಿಕ್ತ ವಿಷಯತ್ವವನ್ನೂ ಒಪ್ಪಿರುವುದರಿಂದ ಉಲ್ಲೇಖ್ಯತ್ವವೇ ವಿಷಯತ್ವವೆಂದು ಹೇಳಿದ್ದು ಅಯುಕ್ತವು. ಆದುದರಿಂದ ರಜತವು ಉಲ್ಲೇಖ್ಯವಾದರೂ ಶುಕ್ತಿಗೆ ಹಿಂದೆ ಹೇಳಿದ ವಿಷಯತ್ವವನ್ನು ಒಪ್ಪಿದರೆ ಅನುಭವವಿರೋಧವಿಲ್ಲ. (೪) ಇಂದ್ರಿಯ ಮೊದಲಾದ ಕರಣಗಳಿಗೆ ಯಥಾರ್ಥ ಜ್ಞಾನವನ್ನುಂಟುಮಾಡುವುದರಲ್ಲಿ ಸಹಜ ಶಕ್ತಿಯಿದ್ದರೂ ಅವುಗಳು ದೋಷದಿಂದ ವಿಪರೀತ ಶಕ್ತಿಯನ್ನು ಹೊಂದಿ ಭ್ರಮಾತ್ಮಕ ಜ್ಞಾನವನ್ನು ಹುಟ್ಟಿಸುತ್ತವೆ. ಆದುದರಿಂದ ದೋಷಸಹಕೃತಗಳಾದ ಇಂದ್ರಿಯಾದಿಗಳೇ ಭ್ರಮಾತ್ಮಕ ಜ್ಞಾನಕ್ಕೆ ಕಾರಣಗಳು. (೫) ನಿಯಮವಾಗಿ ಯಥಾರ್ಥವೇ ಆದ ಸಾಕ್ಷಿಯು ಯಾವ ಜ್ಞಾನದಲ್ಲಿ ಪ್ರಾಮಾಣ್ಯವನ್ನು ದೃಢವಾಗಿ ನಿರ್ಣಯಿಸಿಕೊಡುತ್ತದೋ, ಆ ಜ್ಞಾನವು ವಿಶ್ವಸನೀಯವೂ ಪ್ರವರ್ತಕವೂ ಆಗುವುದು. ಅಪ್ರಾಮಾಣ್ಯವನ್ನು ತಿಳಿಸಿಕೊಡತಕ್ಕ ಸಾಮಗ್ರಿಯಿಂದ ಸಾಕ್ಷಿಯು ಒಡಗೂಡಿದ್ದಾಗಿ ಯಾವ ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ನಿಶ್ಚಯಿಸಿಕೊಡುತ್ತದೋ, ಆ ಜ್ಞಾನವು ಅವಿಶ್ವಸನೀಯವು. ಹೀಗೆ ವಿಶ್ವಾಸ ಅವಿಶ್ವಾಸಗಳಲ್ಲಿ ನಿಯಾಮಕವಾದ ಸಾಕ್ಷಿರೂಪ ಉಪಾಯವಿರುವುದರಿಂದ ಎಲ್ಲಾ ಕಡೆಗಳಲ್ಲಿಯೂ ವಿಶ್ವಾಸವಿಲ್ಲದೆ ಹೋಗಬೇಕಾಗುವುದು, ಎನ್ನುವ ಶಂಕೆಗೆ ಅವಕಾಶವಿರುವುದಿಲ್ಲ 'ಇದಂ ರಜತಂ' ಎನ್ನುವುದು ಗ್ರಹಣ ಸ್ಮರಣಾತ್ಮಕಗಳಾದ ಎರಡು ಜ್ಞಾನಗಳಲ್ಲ. ಮತ್ತೆ ಶುಕ್ತಿಯಲ್ಲಿ ರಜತ-ತಾದಾತ್ಮ್ಯವನ್ನು ಸ್ವೀಕರಿಸುವ ಒಂದೇ ವಿಶಿಷ್ಟಜ್ಞಾನವು. ಉತ್ತರಕಾಲದಲ್ಲಿ 'ನೇದಂ ರಜತಂ' ಎಂದು ಬಾಧಕಜ್ಞಾನದಿಂದ ಬಾಧಿತವಾಗಿರುವುದರಿಂದ ಅಯಥಾರ್ಥವು. ಆದಕಾರಣ ಪ್ರಾಭಾಕರರು ಹೇಳುವುದು ಅಯುಕ್ತವು. (2) ಪೃಥಿವೀ ಜಲ ತೇಜಸ್ಸು ಎನ್ನುವ ಕಾರಣಗಳು ಪರಸ್ಪರವಾಗಿ ಮಿಶ್ರಿತಗಳಾಗಿವೆ, ಎಂದು ಶ್ರುತಿಪುರಾಣಾದಿಗಳು ಹೇಳುತ್ತವೆ ಶುಕ್ತ್ಯಾದಿಕಾರ್ಯಗಳಲ್ಲಿ ರಜತಾದಿಗಳ ಸಂಬಂಧವಿದೆ ಎಂದು ತಿಳಿಸುವುದಿಲ್ಲ. ಆದುದರಿಂದ ಶ್ರುತಿಪುರಾಣಾದಿಗಳ ಬಲದಿಂದ ಎಲ್ಲಾ ವಸ್ತುಗಳಲ್ಲಿಯೂ ಎಲ್ಲಾ ಇತರ ವಸ್ತುಗಳೂ ಸೇರಿಕೊಂಡಿವೆ, ಎಂದು ಕಲ್ಪಿಸಿಕೊಂಡು ಭ್ರಮಾತ್ಮಕಜ್ಞಾನವಿಲ್ಲವೆಂದು ರಾಮಾನುಜೀಯರು ಹೇಳುವುದು ಅಯುಕ್ತವು. (3) ಅತ್ಯಂತಾಸತ್ತಿಗೂ ಪ್ರತೀತಿಯು ಕೂಡಬಹುದು. ಭೇದಾಗ್ರಹ ಮಾತ್ರದಿಂದ ಪ್ರವೃತ್ತಿಯು ಕೂಡಲಾರದು. ಆದಕಾರಣ ತಾರ್ಕಿಕೈಕದೇಶಿಗಳು ಹೇಳುವುದು ಅಯುಕ್ತವು. (4) 'ಅಸದೇವ ರಜತಂ ಪ್ರತ್ಯಭಾತ್' ಎನ್ನುವ ಅನುಭವ ಬಲದಿಂದ ರಜತವು ಅತ್ಯಂತಾಸತ್ತೆಂದೇ ನಿಶ್ಚಿತವಾಗುತ್ತದೆ. ಮತ್ತು ಇಲ್ಲಿ ತೋರುವ ರಜತವೇ ಬೇರೆಕಡೆ ಇದೆ ಎನ್ನುವಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. ಆದಕಾರಣ ಪ್ರಾಚೀನ ತಾರ್ಕಿಕರು ಹೇಳುವುದು ಅಯುಕ್ತವು. (5) ಸದಸದ್ವಿಲಕ್ಷಣರೂಪವಾದ ಅನಿರ್ವಚನೀಯ ವಸ್ತುವಿದೆ ಎನ್ನುವಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. ಮತ್ತು ರಜತವು ಅನಿರ್ವಚನೀಯವಾದರೆ 'ಅನಿರ್ವಚನೀಯಂ ರಜತಂ' ಎನ್ನುವ ಭ್ರಮೆಯು, 'ನಾನಿರ್ವಚನೀಯಂ' ಎನ್ನುವ ಬಾಧಜ್ಞಾನವೂ ಬರಬೇಕಾಗುವುದು. 'ಇದಂ ರಜತಂ' ಎನ್ನುವ ಭ್ರಮೆಯು 'ನೇದಂ ರಜತಂ' ಎನ್ನುವ ಬಾಧಜ್ಞಾನವೂ ಬಾರದೆ ಹೋಗಬೇಕಾಗುವುದು. ಆದಕಾರಣ ಮಾಯಾವಾದಿಗಳು ಹೇಳುವುದು ಅಯುಕ್ತವು. ಹೀಗೆ ಪೂರ್ವಪಕ್ಷ ಸಿದ್ಧಾಂತಗಳ ಸಾರಾಂಶವು.

## ಪೂರ್ವಪಕ್ಷ ವಿವರಣವು.

ಅಖ್ಯಾತಿ ಪಕ್ಷವನ್ನು ತಿರಸ್ಕರಿಸುವುದಕ್ಕಾಗಿ ಅನುವಾದಮಾಡಿಕೊಳ್ಳುತ್ತಾರೆ. (1) ಪ್ರಾಭಾಕರರು 'ವಿಜ್ಞಾನವೆಲ್ಲವೂ ಯಥಾರ್ಥವೇ, ಅಯಥಾರ್ಥವಾದುದಿಲ್ಲವೆಂದು' ತಿಳಿಯುತ್ತಾ ಅನ್ಯಥಾಖ್ಯಾತಿಯನ್ನು ಸಹಿಸಲಾರರು. ಏಕೆಂದರೆ— ಅನ್ಯಥಾ ಖ್ಯಾತಿಯೆಂದರೆ—

(೧) ಅನ್ಯಥಾ ಪರಿಣತವಾದ ವಸ್ತುವಿನಲ್ಲಿ ಖ್ಯಾತಿಯೋ,
(೨) ಅನ್ಯ ವಸ್ತುವಿಗೆ ಬೇರೆ ರೂಪವಾಗಿ ಪ್ರತೀತಿಯೋ,
(೩) ಅಸಂಬದ್ಧ ವಿಶೇಷಣದಿಂದ ಕೂಡಿರುವ ಪ್ರತೀತಿಯೋ,
(೪) ಅನ್ಯಥಾಕಾರವಾದ ಜ್ಞಾನವೋ,
(೫) ಅನ್ಯಾಕಾರವನ್ನು ವಿಷಯೀಕರಿಸುವ ಇತರ ವಿಷಯಕವಾದ ಜ್ಞಾನವೋ,

(1) ಈ ಐದರಲ್ಲಿ 'ಅನ್ಯಥಾ ಪರಿಣತೇ ವಸ್ತುನಿ ಖ್ಯಾತಿಃ=ಶುಕ್ತಿ (ಮುತ್ತಿನ ಚಿಪ್ಪು) ಮೊದಲಾದುದು ರಜತ (ಬೆಳ್ಳಿ) ಮೊದಲಾದುವುಗಳ ರೂಪವಾಗಿ ಪರಿಣತವಾದಮೇಲೆ ಅದನ್ನು ಕಂಡು ಬರುವ ಜ್ಞಾನವು ಅನ್ಯಥಾಖ್ಯಾತಿಯೆಂದರೆ ಮಣ್ಣು ಘಟರೂಪವಾಗಿ ಪರಿಣತವಾಗುವುದರಿಂದ, ಘಟಪಟಾದಿ ಪ್ರತ್ಯಯಗಳೆಲ್ಲವೂ ಅನ್ಯಥಾಖ್ಯಾತಿಯಾದುದರಿಂದ ವಿಭ್ರಮಗಳಾಗಬೇಕಾಗುವವು. ಮತ್ತು ಮುತ್ತಿನಚಿಪ್ಪು ರಜತಾಕಾರವಾಗಿ ಪರಿಣಾಮವಾಗುವುದಕ್ಕೆ (೧) ಕಾರಣವಿದೆಯೋ, (೨) ಕಾರಣವಿಲ್ಲವೋ, ಕಾರಣವಿಲ್ಲವೆಂದಾದರೆ ಕೆಲವು ವೇಳೆಯೇ ಇರುತ್ತದೆ ಎನ್ನುವುದು ಕೂಡದ ಹೋಗಬೇಕಾಗುವುದು. ಕಾರಣವಿದೆ ಎನ್ನುವ ಕಲ್ಪದಲ್ಲಿ (೧) ಇಂದ್ರಿಯ ಮೊದಲಾದ ಕರಣಗಳ ದೋಷವಾಗಲೀ, (೨)ದುಷ್ಟೇಂದ್ರಿಯ ಸಂಬಂಧವಾಗಲೀ, (೩)ದುಷ್ಟೇಂದ್ರಿಯಗಳ ಸಂಪರ್ಕದಿಂದುಂಟಾದ ವಿಜ್ಞಾನವಾಗಲೀ ಕಾರಣವೆಂದೆನ್ನಬೇಕು. ಇವುಗಳಲ್ಲಿ(೧)ಕರಣದೋಷವೆಂದು ಹೇಳಕೂಡದು. ಕರಣಗಳಿಗೆ ಸಂಬಂಧಿಯಾದ ದೋಷವು, ಶುಕ್ತಿಯು ರಜತರೂಪವಾಗಿ ಪರಿಣಾಮವಾಗಲಿಕ್ಕೆ ಕಾರಣವಾಗುತ್ತದೆ ಎನ್ನುವುದು ಕೂಡಲಾರದು. ಕೂಡುವುದಾದರೆ ಆವಾಗಲೇ ಎಲ್ಲಾ ವಸ್ತುಗಳೂ ರಜತರೂಪವಾಗಿ ಬದಲಾವಣೆಯಾಗಬೇಕಾಗುವುದು. (೨) ದುಷ್ಟೇಂದ್ರಿಯಗಳ ಸಂಸರ್ಗವು ಕಾರಣವೆಂದು ಹೇಳುವುದಾದರೆ ಲೋಕದಲ್ಲಿ ಹಾಲುಮೊದಲಾದುದು ಅದರಲ್ಲಿರುವ ಕ್ಷೀರತ್ವವನ್ನು ಬಿಟ್ಟು ಮೊಸರುರೂಪವಾಗಿ ಹೇಗೆ ಪರಿಣಮಿಸುವುದೋ ಅದರಂತೆಯೇ ಶುಕ್ತಿಯು ತನ್ನಲ್ಲಿದ್ದ ಶುಕ್ತಿತ್ವವನ್ನು ಬಿಟ್ಟು ರಜತರೂಪವಾಗಿ ಪರಿಣಮಿಸುವುದೋ. ಅಥವಾ ಸುವರ್ಣ (ಚಿನ್ನ)ವು ತನ್ನಲ್ಲಿದ್ದ ಸುವರ್ಣತ್ವವನ್ನು ಬಿಡದೇನೇ ಕಂಕಣಾದ್ಯಾಭರಣರೂಪವಾಗಿ ಹೇಗೆ ಪರಿಣಮಿಸುವುದೋ ಹಾಗೆಯೇ ಶುಕ್ತಿಯು ತನ್ನಲ್ಲಿದ್ದ ಶುಕ್ತಿತ್ವವನ್ನು ಬಿಡದೇನೇ ರಜತ ರೂಪವಾಗಿ ಪರಿಣಮಿಸುವುದೋ, ಶುಕ್ತಿತ್ವವು ಹೋಗಿ ಪರಿಣಾಮವಾಗುವುದಾದರೆ ಬೇರೆ ಪುರುಷರಿಗೂ ಶುಕ್ತಿಯೆಂದು ತೋರದೆ ಹೋಗಬೇಕಾಗುವುದು. ಶುಕ್ತಿತ್ವವು ಹೋಗದೆ ಬದಲಾವಣೆಯಾಗುವುದಾದರೆ ಭ್ರಾಂತನಿಗೂ ಶುಕ್ತಿತ್ವವು ಪ್ರತೀತವಾಗಬೇಕಾಗುವುದು. ಮತ್ತು ಶುಕ್ತಿತ್ವವು ಹೋಗುವುದಾದರೆ ಬಾಧಜ್ಞಾನ (ಇದು ರಜತವಲ್ಲ, ಶುಕ್ತಿಯು ಎನ್ನುವ ಜ್ಞಾನ) ದಲ್ಲಿಯೂ ಶುಕ್ತಿತ್ವವು ತೋರದೆಹೋಗಬೇಕಾಗುವುದು. ಕರಣದೋಷರೂಪವಾದ ಕಾರಣವಿಲ್ಲದಿರುವುದರಿಂದ ಬಾಧಕಾಲದಲ್ಲಿ ಪುನಃ ರಜತವು ಶುಕ್ತ್ಯಾಕಾರವಾಗಿ ಪರಿಣತವಾಗುತ್ತದೆಂದೂ ಹೇಳಕೂಡದು. ಮತ್ತು ಹಾಗೆ ರಜತವು ಶುಕ್ತಿರೂಪವಾಗಿ ಪರಿಣತವಾಗುವುದಾದರೆ ಬಾಧಜ್ಞಾನವೂ (ಇದು ರಜತವಲ್ಲ ಮುತ್ತಿನ ಚಿಪ್ಪೇ) ಭ್ರಾಂತಿಯಾಗಬೇಕಾಗುವುದು. ಮತ್ತು ಮಣ್ಣಿನ ಪರಿಣಾಮರೂಪವಾದ ಘಟವು ಎಲ್ಲರಿಗೂ ಘಟವೆಂದೇ ಹೇಗೆ ತೋರುವುದೋ ಹಾಗೆಯೇ ರಜತವು ಶುಕ್ತಿಯ ಪರಿಣಾಮವಾಗಿದ್ದರೆ ಎಲ್ಲರಿಗೂ ಮುತ್ತಿನ ಚಿಪ್ಪನ್ನು ನೋಡಿ ಬೆಳ್ಳಿಯೆಂದೇ ಜ್ಞಾನವು ಏಕೆ ಬರಲಾರದು? ಯಾರ ಕರಣದಿಂದ ಪರಿಣತವಾಗಿಯದೋ ಅವನಿಂದಲೇ ಗೃಹೀತವಾಗುತ್ತದೆಂದೂ ಹೇಳಕೂಡದು. ಏಕೆಂದರೆ— ಘಟ ಮೊದಲಾದುವುಗಳು ಕುಲಾಲ (ಕುಂಬಾರ) ಮೊದಲಾದವರಿಂದ ಮಾತ್ರ ತಿಳಿಯಲ್ಪಡಬೇಕಾಗುವುದು. ಅವರವರ ಮನಸ್ಸಿ

ನಿಂದ ಪರಿಣತಗಳಾದ ಸುಖಾದಿಗಳು ಸರ್ವರಿಗೆ ತೋರುವುದಿಲ್ಲ. ಮತ್ತೆ ಅವರವರಿಗೇನೇ ತಿಳಿದುಬರುತ್ತದೆ. ಹಾಗೆಯೇ ಅವರವರ ಕರಣದಿಂದುಂಟಾದ ಶುಕ್ತ್ಯಾದಿಗಳ ರಜತರೂಪ ಪರಿಣಾಮವೂ ಕೂಡ ಅವರವರಿಗೇನೇ ತೋರುತ್ತದೆ, ಎಲ್ಲರಿಗೂ ತೋರಲಾರದು, ಎಂದು ಹೇಳಕೂಡದು. ಬಾಹ್ಯ ಅಂತರವೆಂದು ವಿಶೇಷವಿದೆ. ಅಂದರೆ, ಸುಖಾದಿಗಳು ಅಂತರಗಳಾಗಿರುವುದರಿಂದ ಅವುಗಳಿಗೆ ಹಾಗೆ ಇರಬಹುದು. ಶುಕ್ತ್ಯಾದಿ ಪರಿಣಾಮವು ಬಾಹ್ಯವಾಗಿರುವುದರಿಂದ ಅದಕ್ಕೆ ಹಾಗೆ ಹೇಳಕೂಡದು. ಬಾಹ್ಯಪರಿಣಾಮವಿದ್ದದ್ದು ಆಯಾಯ ಜನರಿಂದ ಮಾತ್ರ ತಿಳಿಯಲ್ಪಡುವುದೆಂದರೆ ಘಟಾದಿಗಳೂ ಕುಲಾಲಾದಿಗಳಿಂದ ಮಾತ್ರ ತಿಳಿಯಲ್ಪಡಬೇಕಾಗುವುವು. ಮತ್ತು ಶುಕ್ತಿಯು ದೋಷದಿಂದ ರಜತಾಕಾರವಾಗಿ ಪರಿಣತವಾಗುವುದಾದರೆ ದೋಷವು ಹೋದಮೇಲೆಯೂ ಅದೇ ರೀತಿಯಾಗಿ ಏತಕ್ಕೆ ಇರುವುದಿಲ್ಲ?. ನಿಮಿತ್ತಕಾರಣವು ನಾಶವಾಗುವುದರಿಂದ ಕಾರ್ಯನಾಶವು ತೋರಿಬರುವುದಿಲ್ಲವಷ್ಟೆ. ಕಮಲದ ಮೊಗ್ಗೆಯ ವಿಕಾಸಕ್ಕೆ ಕಾರಣವಾದ ಸೂರ್ಯನ ತೇಜಸ್ಸು ಹೋದರೆ ಅದು ವಿಕಾಸದ ನಿವೃತ್ತಿಗೆ ಕಾರಣವಾಗಿದೆ ಎಂದು ಹೇಳಕೂಡದು. ವಿಕಾಸವೆಂದರೆ ದಲವಿಭಾಗವು. ಅದು ಕ್ಷಣಿಕವಾಗಿರುವುದರಿಂದ ಸೂರ್ಯನ ತೇಜಸ್ಸು ಇರುವಾಗಲೇ ನಿವೃತ್ತವಾಗಿದೆ. ಸಂಯೋಗಪ್ರಧ್ವಂಸಕ್ಕೆ ಯಾವಾಗಲೂ ನಿವೃತ್ತಿಯಿಲ್ಲ ಪುನಃ ಸಂಯೋಗರೂಪವಾದ ಮುಕುಲೀಭಾವವಾದರೂ ಶೀತಾದಿನೋದನ (ಶಬ್ದವನ್ನುಂಟುಮಾಡದಿರುವ ಸಂಯೋಗ) ಗಳಿಂದ ಹುಟ್ಟಿದ್ದು. ವಿಭಾಗವು ಸ್ಥಾಯಿಯಾಗಿದ್ದರೂ ಸಂಯೋಗನಾಶಕ್ಕೆ ಬೇರೆಯೇ ಕಾರಣಹೇಳಬೇಕಾಗಿದ್ದುದರಿಂದ ನಿಮಿತ್ತ ಕಾರಣನಾಶದಿಂದ ಕಾರ್ಯನಾಶದಲ್ಲಿ ಇದು ದೃಷ್ಟಾಂತವಾಗಲಾರದು. ಮತ್ತು ರಜತವು ಹುಟ್ಟಿ ವಿನಾಶವಾಗುವುದಾದರೆ ಆಗ ಹಾಗೆಯೇ (ಅಂದರೆ ಹುಟ್ಟಿತು ನಷ್ಟವಾಯಿತೆಂದೇ) ಪ್ರತೀತಿಯಾಗಬೇಕಾಗುವುದು. ಪುನಃ ಇದು ರಜತವಲ್ಲ ಎನ್ನುವ ಬಾಧ ಬುದ್ಧಿಯು ಬರಬಾರದು. (೩) ದುಷ್ಟವಾದ ಇಂದ್ರಿಯದಿಂದ ಹುಟ್ಟತಕ್ಕ ವಿಜ್ಞಾನದಿಂದ ರಜತವು ಹುಟ್ಟುತ್ತದೆ ಎನ್ನುವುದೂ ಅಸಂಗತವು. ಹಾಗೆ ರಜತವು ಹುಟ್ಟಿತೆಂದು ಪ್ರತೀತಿಯಿಲ್ಲವು. ಲೋಕದಲ್ಲಿ ನಿಮಿತ್ತಕಾರಣಕ್ಕೆ ಅಂದರೆ ಘಟಕ್ಕೆ ನಿಮಿತ್ತಗಳಾದ ದಂಡಚಕ್ರಾದಿಗಳಿಗೆ ದೋಷವೆಂದು ವ್ಯವಹಾರವಿಲ್ಲದಿರುವುದರಿಂದ ಕರಣದೋಷವು ರಜತಾಕಾರ ಪರಿಣಾಮದಲ್ಲಿ ನಿಮಿತ್ತವೆಂದು ಹೇಳುವುದಾದರೆ ಅದಕ್ಕೆ ದೋಷವೆಂದು ವ್ಯವಹಾರವೇ ಕೂಡದೆ ಹೋಗಬೇಕಾಗುವುದು. ಮತ್ತು (೧) ದುಷ್ಟವಾದ ಕರಣದಿಂದುಂಟಾಗುವ ಜ್ಞಾನದಿಂದ ರಜತವು ಹುಟ್ಟುವುದು ಎಂಬುವ ಪಕ್ಷದಲ್ಲಿ ಯಾವ ಪ್ರತೀತಿಗೆ ಆ ರಜತವು ವಿಷಯವೋ, ಆ ಜ್ಞಾನದಿಂದಲೇ ರಜತವು ಹುಟ್ಟುತ್ತದೋ ಅಥವಾ ಬೇರೆ ಪ್ರತೀತಿಯಿಂದಲೋ ಅದರಿಂದಲೇ ಹುಟ್ಟುತ್ತದೆಂದು ಹೇಳಕೂಡದು. ಏಕೆಂದರೆ— ರಜತವು ಹುಟ್ಟಿದರೇನೇ ಅದನ್ನು ವಿಷಯೀಕರಿಸಿರುವ ಪ್ರತೀತಿಯು ಹುಟ್ಟುತ್ತದೆ. ಪ್ರತೀತಿಯು ಹುಟ್ಟಿದರೇನೇ ರಜತವು ಹುಟ್ಟುತ್ತದೆ. ಹೀಗೆ ಅನ್ಯೋನ್ಯಾಶ್ರಯವೆನ್ನುವ ದೋಷವು ಬರುವುದು. ವಿಷಯವಿಲ್ಲದೆ ಪ್ರತ್ಯಕ್ಷಾತ್ಮಕ ಜ್ಞಾನವು ಹುಟ್ಟಲಾರದು. ಎರಡನೇ ಕಲ್ಪದಲ್ಲಿಯೂ (ಬೇರೆ ಪ್ರತೀತಿಯಿಂದ ಹುಟ್ಟುತ್ತದೆ ಎನ್ನುವ ಕಲ್ಪದಲ್ಲಿಯೂ) ಆ ಪ್ರತೀತಿಗೆ ಶುಕ್ತಿಯು ವಿಷಯವೋ, ಬೇರೆ ಶುಕ್ತಿರಜತವು ವಿಷಯವೋ, ಈ ಎರಡೂ ಬಿಟ್ಟು ಬೇರೆ ವಸ್ತುವು ವಿಷಯವೋ, ಈ ಮೂರರಲ್ಲಿ ೧ನೇದ್ದು ಕೂಡಲಾರದು. ಎಲ್ಲೆಡೆಯಲ್ಲಿಯೂ ಶುಕ್ತಿಜ್ಞಾನವು ಬಂದಮೇಲೆ ರಜತವು ಹುಟ್ಟಬೇಕಾಗುವುದು. ಶುಕ್ತಿರಜತಜ್ಞಾನಕ್ಕಿಂತ ಮೊದಲು ಶುಕ್ತಿಯೆನ್ನುವ ಪ್ರತೀತಿಯು ಬರಬೇಕೆನ್ನುವ ನಿಯಮವಿರುವುದಿಲ್ಲ. ದುಷ್ಟೇಂದ್ರಿಯದಿಂದುಂಟಾದ ಶುಕ್ತಿಯ ಸಾಧಾರಣಾಕಾರ ಜ್ಞಾನದಿಂದ ರಜತವು ಹುಟ್ಟುತ್ತದೆಂದು ಹೇಳಕೂಡದು. ಸಾಧಾರಣಾಕಾರವನ್ನು ಮಾತ್ರ ನೋಡಿದಮೇಲೆ

ರಜತಜ್ಞಾನವು ಹುಟ್ಟುತ್ತದೆಂದು ನಿಯಮವಿಲ್ಲ. ಅಂತಹ ಸ್ಥಳದಲ್ಲಿ ಬೇರೆ ಕಾರಣವು ಇಲ್ಲವೆಂದು ಕಲ್ಪಿಸುತ್ತೇವೆಂದರೆ ರಜತವು ಹುಟ್ಟುತ್ತದೆಂದು ಪ್ರಮಿತವಾಗಿದ್ದರೆ ಹೀಗೆ ಹೇಳಬಹುದಿತ್ತು. ರಜತವು ಹುಟ್ಟುತ್ತದೆನ್ನುವುದೇ ಇನ್ನೂ ನಿಶ್ಚಿತವಾಗಲಿಲ್ಲ. ರಜತವು ಹುಟ್ಟದಿದ್ದರೆ 'ಇದಂ ರಜತಂ' ಎನ್ನುವ ಪ್ರತೀತಿಯು ಹೇಗೆ ಕೂಡುತ್ತದೆಂದರೆ ಆ ಜ್ಞಾನವು ಗ್ರಹಣ ಸ್ಮರಣಾತ್ಮಕಗಳಾದ ಎರಡು ಜ್ಞಾನಗಳೆಂದು ಉಪಪಾದಿಸುವೆವು. ೨ ಬೇರೆ ಶುಕ್ತಿರಜತವನ್ನು ವಿಷಯೀಕರಿಸಿಕೊಂಡಿದೆ ಎನ್ನುವ ಎರಡನೇ ಪಕ್ಷವೂ ಯುಕ್ತವಲ್ಲ. ಏಕೆಂದರೆ— ಮೊದಲಿನ ರಜತಕ್ಕೂ ಅದೇ ಕಾರಣವಾಗಿರುವುದರಿಂದ ಹೀಗೆ ರಜತಜ್ಞಾನದ ಪ್ರವಾಹಕ್ಕೇನೇ ವಿಚ್ಛೇದವಿಲ್ಲವೆಂದಾಗಬೇಕಾಗುವುದು. ಅರ್ಥಾಂತರವನ್ನು ವಿಷಯೀಕರಿಸಿಕೊಂಡಿದೆ ಎನ್ನುವ ೩ನೇ ಪಕ್ಷವೂ ಯುಕ್ತವಲ್ಲ. ಏಕೆಂದರೆ, ಅತಿಪ್ರಸಂಗವು ಬರುವುದು. ಅಂದರೆ— ಘಟವನ್ನು ನೋಡಿ ಪಟಜ್ಞಾನವೂ ಬರುವುದು. ಆದ ಪ್ರಯುಕ್ತ ಹೀಗೆ ಭ್ರಾಂತಿಬಾಧಗಳು ಕೂಡದಿರುವುದರಿಂದ ಶುಕ್ತಿಯು ರಜತರೂಪದಿಂದ ಪರಿಣತವಾಗಿದೆ ಎನ್ನುವ ಪರಿಣಾಮ ಪಕ್ಷವು ಯುಕ್ತವಲ್ಲ. (2) 'ವಸ್ತುನಃ ವಸ್ತ್ವಂತರಾತ್ಮನಾವಭಾಸಃ ಅನ್ಯಥಾ ಖ್ಯಾತಿಃ'=ಬೇರೆ ವಸ್ತುವಿಗೆ ಬೇರೆ ವಸ್ತುರೂಪವಾಗಿ ಪ್ರತೀತಿಯು ಅನ್ಯಥಾ ಖ್ಯಾತಿಯು ಎನ್ನುವ ಎರಡನೇ ಪಕ್ಷವೂ ಯುಕ್ತವಲ್ಲ. ಏಕೆಂದರೆ— ಒಂದು ವಸ್ತುವಿಗೆ ಬೇರೆ ವಸ್ತುವಿನ ಸ್ವರೂಪತ್ವವು ಸತ್ಯವೋ ಅಸತ್ಯವೋ? ಸತ್ಯವೆಂದಾದರೆ ಭ್ರಾಂತಿಯಿಲ್ಲ. ಬಾಧಜ್ಞಾನವೂ ಇಲ್ಲದೆ ಹೋಗುವುದು. ಮತ್ತು ಎಲ್ಲರಿಗೂ ಕುರ್ಚಿಯು ಮೇಜಿಯಾಗಿಯೂ ಮೇಜಿಯು ಕುರ್ಚಿಯಾಗಿಯೂ ಹೀಗೆ ಎಲ್ಲವೂ ಎಲ್ಲಾ ರೂಪವಾಗಿ ತೋರಬೇಕಾಗುವುದು. ಅಸತ್ಯವೆಂದೂ ಹೇಳಕೂಡದು. ಅಸತ್ತಿಗೆ ಪ್ರತೀತಿಯೇ ಕೂಡಲಾರದು. (3) ಸಂಬಂಧವಿಲ್ಲದಿರುವ ವಿಶೇಷಣಕ್ಕೆ ಸಂಬಂಧಪ್ರತೀತಿಯು ಅನ್ಯಥಾಖ್ಯಾತಿಯು ಎಂದೂ ಹೇಳಕೂಡದು. ಅಸದ್ಭೂತವಾದ ವಿಶೇಷಣಸಂಬಂಧಕ್ಕೆ ಪ್ರತೀತಿಯು ಕೂಡಲಾರದು. (4)ಅನ್ಯಾಕಾರಂ ಜ್ಞಾನಂ=ವಸ್ತುವಿಗೆ ಯಾವ ಆಕಾರವಿದೆಯೋ ಅದಕ್ಕಿಂತ ಬೇರೆ ಆಕಾರವುಳ್ಳ ಜ್ಞಾನವು ಅನ್ಯಥಾಖ್ಯಾತಿಯು ಎನ್ನುವುದೂ ಅಸಂಗತವು. ಯಥಾರ್ಥ ಜ್ಞಾನಕ್ಕೂ ಆಂತರ ಬಾಹ್ಯತ್ವಾದಿರೂಪವಾದ ಅರ್ಥವಿಲಕ್ಷಣವಾದ ಆಕಾರವಿದ್ದುದರಿಂದ ಅದೂ ಭ್ರಮೆಯಾಗಬೇಕಾಗುವುದು. (5) ಅನ್ಯಾಕಾರೋಲ್ಲೇಖಿಜ್ಞಾನಂ ಅನ್ಯಾಲಂಬನಂ=ಬೇರೆ ಆಕಾರವನ್ನು ಉಲ್ಲೇಖಿ (ವಿಷಯೀಕರಿ) ಸುವುದು ಬೇರೆ ವಸ್ತುವನ್ನು ವಿಷಯೀಕರಿಸುವುದು,ಜ್ಞಾನವು ಅನ್ಯಥಾಖ್ಯಾತಿಯು ಎನ್ನುವುದು ಅನುಭವ ವಿರುದ್ಧವು. ಹೇಗೆಂದರೆ, ಉಲ್ಲೇಖ್ಯತ್ವ ಹೊರತು ಬೇರೊಂದು ವಿಷಯತ್ವವೇ ಇಲ್ಲದಿರುವುದರಿಂದ ಯಾವುದನ್ನು ಉಲ್ಲೇಖಿಸುವುದೋ ಅಂದರೆ, ಯಾವ ಜ್ಞಾನದಲ್ಲಿ ಯಾವುದು ತೋರುತ್ತದೋ ಅದೇ ಅದಕ್ಕೆ ವಿಷಯವು. ಒಂದು ವಸ್ತುವು ತೋರುವುದು, ಬೇರೊಂದು ವಿಷಯವು ಎನ್ನುವುದು ಅನುಭವವಿರುದ್ಧವು. (6) ವಿಷಯತ್ವವೆಂದರೆ- ವಸ್ತುವಿಗೆ ಇರುವಿಕೆಯೋ? ಎದುರಿನಲ್ಲಿರುವಿಕೆಯೋ? ಕಾರಣತ್ವವೆನ್ನುವುದೋ? ವಿಷಯವಾಗಿ ಕಾರಣತ್ವವೆನ್ನುವುದೋ? ಇವುಗಳಲ್ಲಿ (೧) ಒಂದನೇದ್ದು ಕೂಡಲಾರದು. ಇರುವಿಕೆ ಎನ್ನುವುದು ಸರ್ವವಸ್ತುಗಳ ಜ್ಞಾನ ಸಾಧಾರಣವಾಗಿರುವುದರಿಂದ ಎಲ್ಲಾ ಜ್ಞಾನಗಳೂ ಎಲ್ಲಾ ವಸ್ತುಗಳನ್ನೂ ವಿಷಯೀಕರಿಸುವುದು ಎಂದಾಗಬೇಕಾಗುವುದು. ಹೀಗಿದ್ದರೆ ಅಂದರೆ ಇರುವಿಕೆ ಎನ್ನುವುದೇ ವಿಷಯತ್ವವಾದರೆ ಇರುವಿಕೆ ಎನ್ನುವುದು ಎಲ್ಲಾ ವಸ್ತುಗಳಲ್ಲಿದ್ದ ಪ್ರಯುಕ್ತ ಸರ್ವರೂ ಸರ್ವಜ್ಞರಾಗಬೇಕಾಗುವರು. ಅತೀತಭವಿಷ್ಯತ್ಕಾಲದಲ್ಲಿರುವ ವಸ್ತುಗಳನ್ನು ವಿಷಯೀಕರಿಸುವ ಜ್ಞಾನಕ್ಕೆ ಅತೀತಾದಿಗಳಲ್ಲಿ ಈಗ ಇರುವಿಕೆ ಎನ್ನುವ ವಿಷಯತ್ವವೇ ಇಲ್ಲದಿರುವುದರಿಂದ ಆ ಜ್ಞಾನಕ್ಕೆ ವಿಷಯವೇ ಇಲ್ಲವೆಂದಾಗ ಬೇಕಾಗುವುದು. (೨)ಅತೀತಾದಿಗಳನ್ನು ವಿಷಯೀಕರಿಸುವ ಜ್ಞಾನಕ್ಕೆ ವಿಷಯವೇ ಇಲ್ಲವೆಂದಾಗುವುದರಿಂದ 'ಎದುರಿನಲ್ಲಿರುವಿಕೆ ಎನ್ನುವುದೇ ವಿಷಯತ್ವವು

ಎನ್ನುವುದೂ ಅಯುಕ್ತವು. (೩) ಕಾರಣವಾಗಿರುವುದೇ ವಿಷಯತ್ವವು ಎನ್ನುವುದೂ ಅಯುಕ್ತವು. ಏಕೆಂದರೆ, ರೂಪಾದಿಗಳ ಜ್ಞಾನಕ್ಕೆ ಕಣ್ಣು ಮೊದಲಾದುದು ಕಾರಣವಾಗಿರುವು ವರಿಂದ ಆ ಜ್ಞಾನಕ್ಕೆ ಕಣ್ಣುಮೊದಲಾದುದು ವಿಷಯುವಾಗಬೇಕಾಗುವುದು. ಮತ್ತು ಭೂತ ಭವಿಷ್ಯತ್ಕಾಲದಲ್ಲಿರುವ ವಸ್ತುಗಳು ಈಗ ಇಲ್ಲದಿರುವುದರಿಂದ ಅವುಗಳಿಗೆ ಕಾರಣತ್ವವು ಕೂಡ ಬಾರದು. ಆದಕಾರಣ ಭೂತಭವಿಷ್ಯತ್ಕಾಲದಲ್ಲಿರುವ ವಸ್ತುಗಳನ್ನು ವಿಷಯೀಕರಿಸಿ ಜ್ಞಾನಕ್ಕೆ ನಿರ್ವಿಷಯತ್ವವು ಬರಬೇಕಾಗುವುದು. (೪) ವಿಷಯುವಾಗಿ ಕಾರಣವಾದುದೇ ವಿಷಯತ್ವವು ಎನ್ನುವ ಪಕ್ಷದಲ್ಲಿ ವಿಷಯತ್ವದ ಸ್ವರೂಪದಲ್ಲಿ ವಿಷಯತ್ವವು ಸೇರಿರುವ ಪ್ರಯುಕ್ತ ಆತ್ಮಾಶ್ರಯ ತ್ವವು ಬರುವುದರಿಂದ ಆ ಪಕ್ಷವೂ ಅಯುಕ್ತವು. ಮತ್ತೂ ವಿಷಯತ್ವವೆಂದೇ ಸಾಕು. ವಿಷಯು ವಾಗಿ ಕಾರಣತ್ವವು ಎಂದೇಕೆ? (7) ಮತ್ತು ಈ ವಿಷಯತ್ವವೆಂದರೆ— ಎಂತಹುದು? (೧) ಯೇನ ಯಸ್ಯಾತಿಶಯು ಉತ್ಪದ್ಯತೇ ಸ ತಸ್ಯ ವಿಷಯಃ=ಯಾವ ಜ್ಞಾನದಿಂದ ಯಾವ ಅರ್ಥಕ್ಕೆ ಅತಿಶಯುವು ಹುಟ್ಟುತ್ತದೋ ಅದು ಅದಕ್ಕೆ ವಿಷಯುವು. ಎಂದರೆ— ಅತಿಶಯುವೆಂದರೆ— ಜ್ಞಾತತಾ ಎಂದು ಹೇಳಕೂಡದು. ಅದನ್ನು ಒಡಂಬಡಲಿಲ್ಲ. ಒಡಂಬಟ್ಟರೂ ಭೂತಭವಿಷ್ಯತ್‌ಕಾಲದಲ್ಲಿರುವ ವಸ್ತುಗಳನ್ನು ವಿಷಯೀಕರಿಸುವ ಜ್ಞಾನಕ್ಕೆ ನಿರ್ವಿಷಯತ್ವವು ಬರಬೇಕಾಗುವುದು. ಏಕೆಂದರೆ, ಅತೀತ ಅನಾಗತ ವಸ್ತುಗಳೇ ಇಲ್ಲದಿರುವುದರಿಂದ ಆ ಜ್ಞಾನದಿಂದ ಜ್ಞಾತತಾ ಹುಟ್ಟುವುದಿಲ್ಲ. ಅತಿಶಯುವೆಂದರೆ ವ್ಯವಹಾರವೆಂದೂ ಹೇಳಕೂಡದು. ಅದನ್ನಪೇಕ್ಷಿಸದೆ ಇರುವವನಿಗೆ ವ್ಯವ ಹಾರವು ಹುಟ್ಟದಿದ್ದರೆ ಆ ಜ್ಞಾನಕ್ಕೆ ನಿರ್ವಿಷಯತ್ವವು ಬರಬೇಕಾಗುವುದು. ಇದೊಂದು ದೊಡ್ಡ ಹುಲಿಯು, ಇವನು ಕಳ್ಳನು ಇದು ಮೊದಲಾದ ಜ್ಞಾನವು ಬಂದಮೇಲೆ ದಂಡ (ಕೋಲು) ಮೊದಲಾದುದನ್ನು ತೆಗೆದುಕೊಂಡರೆ ಆ ದಂಡಾದಿಗಳಲ್ಲಿ ಉಪಾದಾನರೂಪ ವ್ಯವಹಾರವು ಜ್ಞಾನದಿಂದ ಹುಟ್ಟಿರುವುದರಿಂದ ಆ ದಂಡಾದಿಗಳು ಹುಲಿ ಎಂಬುವ ಜ್ಞಾನಕ್ಕೆ ವಿಷಯುವಾಗಬೇಕಾಗುವವು. (೮) ಯದ್ವಿಜ್ಞಾನಂ ಯದಾಕಾರಂ ತತ್ತದಾಲಂಬನಂ=ಯಾವ ವಿಜ್ಞಾನವು ಯಾವ ಆಕಾರವುಳ್ಳದ್ದೋ, ಅದು ಅದನ್ನು ವಿಷಯೀಕರಿಸಿಕೊಂಡಿರುವುದು ವಿಷಯ ತ್ವವು ಎಂದು ಹೇಳಿದರೆ ಬೌದ್ಧರು ಜ್ಞಾನವು ಅರ್ಥಾಕಾರವುಳ್ಳದ್ದೆಂದು ಹೇಳುವುದರಿಂದ 'ಯದ್ವಿ ಜ್ಞಾನಂ ಯದಾಕಾರಂ' ಎಂದು ಹೇಳಿದರೆ ಬೌದ್ಧಮತ ಪ್ರವೇಶವು ಬರುವುದು. (9) ಯತ್ಸ ನ್ನಿಕೃಷ್ಟಕರಣೇನ ಯಜ್ಜ್ಞಾನಂ ಜಾಯತೇ ತತ್ತದ್ವಿಷಯಂ=ಯಾವುದರಲ್ಲಿ (ಬಿಳೀರೂಪದಲ್ಲಿ) ಸಂಬದ್ಧವಾದ ಕಣ್ಣಿನಿಂದ ಯಾವ ಜ್ಞಾನವು (ಬಿಳೀರೂಪವು ಎನ್ನುವ ಜ್ಞಾನವು) ಹುಟ್ಟುತ್ತದೋ ಅದಕ್ಕೆ ಅದು ವಿಷಯುವು ಎನ್ನುವುದು ಕೂಡುವುದಿಲ್ಲ. ಏಕೆಂದರೆ, ರೂಪಾದಿಗಳ ಜ್ಞಾನವನ್ನು ಹುಟ್ಟಿ ಸತಕ್ಕ ಕಣ್ಣು ಆಕಾಶಾದಿಗಳಿಂದಲೂ ಸಂಬದ್ಧವಾಗಿರುವುದರಿಂದ ರೂಪಾದಿಗಳ ಜ್ಞಾನಕ್ಕೆ ಆಕಾ ಶಾದಿಗಳೂ ವಿಷಯುವಾಗಬೇಕಾಗುವುವು. (10) ಸಂಸ್ಕಾರ ಸಂಪ್ರಯೋಗಾಭ್ಯಾಂ ಜಾಯಮಾನಂ ಜ್ಞಾನಂ=ಸಂಸ್ಕಾರ ಮತ್ತು ಸನ್ನಿಕರ್ಷ ಇವುಗಳಿಂದ ಹುಟ್ಟತಕ್ಕ ಜ್ಞಾನವು ಪ್ರತ್ಯಭಿಜ್ಞೆಯು. ಉದಾ=ಸೋಽಯಂ ದೇವದತ್ತಃ=ನಿನ್ನೆ ಅಲ್ಲಿ ಯಾವನನ್ನು ನೋಡಿರುವೆನೋ ಆ ದೇಶಕಾಲ ದಲ್ಲಿದ್ದವನೇ ಈ ದೇವದತ್ತನು. ಆ ದೇಶಕಾಲಗಳು ಈಗ ಕಣ್ಣಿಗೆ ಸಂಬದ್ಧಗಳಾಗದಿರುವುದ ರಿಂದ, ಸಃ=ಆ ದೇಶಕಾಲಗಳ ಸಂಬಂಧವುಳ್ಳವನು ಎನ್ನುವ ತತ್ತಾಂಶದಿಂದ ಸಂಬದ್ಧವಾಗದಿರುವ ಇಂದ್ರಿಯ (ಕಣ್ಣು) ದಿಂದ ಪ್ರತ್ಯಭಿಜ್ಞೆಯು ಹುಟ್ಟಿರುವಪ್ರಯುಕ್ತ ಆ ಪ್ರತ್ಯಭಿಜ್ಞೆಗೆ 'ಸಃ' ಎನ್ನುವ ಅಂಶವು ವಿಷಯುವಾಗದೆ ಹೋಗಬೇಕಾಗುವುದು. ವಾಕ್ಯವು ವಾಕ್ಯಾರ್ಥದಿಂದ ಸಂಬಂಧವನ್ನು ಹೊಂದುವುದಿಲ್ಲ. ಆದಕಾರಣ ವಾಕ್ಯಾರ್ಥವು ವಾಕ್ಯದಿಂದ ಹುಟ್ಟಿರುವ ಜ್ಞಾನಕ್ಕೆ ವಿಷಯುವಾಗದೆ ಹೋಗಬೇಕಾಗುವುದು. ಮತ್ತು ವಾಕ್ಯಕ್ಕೆ ಆಕಾಶಸಂಬಂಧವಿರುವುದರಿಂದ ಆ ವಾಕ್ಯದಿಂದ

ಹುಟ್ಟತಕ್ಕ ಜ್ಞಾನದಲ್ಲಿ ಆಕಾಶಾದಿಗಳೂ ವಿಷಯವಾಗಬೇಕಾಗುವುವು. ಆತ್ಮನಿಂದ ಸಂಬದ್ಧವಾದ ಲಿಂಗಜ್ಞಾನದಿಂದ ಹುಟ್ಟುವ ಲಿಂಗಿಜ್ಞಾನಕ್ಕೆ ಆತ್ಮನು ವಿಷಯನಾಗಬೇಕಾಗುವನು. ಆದಕಾರಣ 'ಯಜ್ಜ್ಞಾನಂ ಯತ್ಪ್ರತಿಭಾಸಂ ತದೇವ ತಸ್ಯಾಲಂಬನಂ=ಯಾವ ಜ್ಞಾನದಲ್ಲಿ ಯಾವುದು ತೋರುತ್ತದೊ(ಉಲ್ಲೇಖ್ಯವೋ) ಅದೇ ಅದಕ್ಕೆ ವಿಷಯವು, ಎಂದು ಹೇಳಬೇಕು. ಆ ರಜತಜ್ಞಾನದಲ್ಲಿ ಶುಕ್ತಿಯು ತೋರುತ್ತದೋ? ಇಲ್ಲವೋ? ರಜತಜ್ಞಾನದಲ್ಲಿ ಶುಕ್ತಿಯು ತೋರುತ್ತದೆಂದು ಹೇಳುವವನು ಅಪಹಾಸಕ್ಕೆ ಗುರಿಯಾಗುವನು. ರಜತಜ್ಞಾನದಲ್ಲಿ ಬಹುಮಾನವಿಟ್ಟು ಶುಕ್ತಿಯು ತೋರುವುದಿಲ್ಲವೆಂದು ಹೇಳಿದರೆ ಆ ಜ್ಞಾನದಲ್ಲಿ ಶುಕ್ತಿಯು ವಿಷಯವೆಂದು ಹೇಳಿದ್ದು ಹೇಗೆ?. ಮತ್ತು ರಜತವು ತೋರುತ್ತದೆ. ಶುಕ್ತಿಯು ವಿಷಯವು ಎಂದು ಹೇಳಿದರೆ ಅತಿಪ್ರಸಂಗವು. ಅಂದರೆ, ಘಟಜ್ಞಾನದಲ್ಲಿ ಘಟವು ತೋರುತ್ತದೆ, ಪಟವು ವಿಷಯವೆಂದಾಗಬೇಕಾಗುವುದು. (11) ಮುತ್ತಿನ ಚಿಪ್ಪಿನಲ್ಲಿ 'ಇದು ಬೆಳ್ಳಿಯು' ಎನ್ನುವ ಜ್ಞಾನಕ್ಕೆ ಮುತ್ತಿನಚಿಪ್ಪು ವಿಷಯವಾಗದಿದ್ದರೆ ಬೆಳ್ಳಿಯೇ ವಿಷಯವಾಗಬೇಕಾಗುವುದು. ಅಂತೂ ಬೆಳ್ಳಿಯು ಯಥಾರ್ಥವಾಗಬೇಕಾಗುವುದು, ಎಂದಾಶಂಕಿಸಿದರೆ— ಪ್ರಾಭಾಕರರಿಗೆ ಯಥಾರ್ಥವಾಗಬೇಕೆನ್ನುವುದು ಇಷ್ಟವೇ. ಏಕೆಂದರೆ— ರಜತಜ್ಞಾನವು ಸ್ಮೃತಿರೂಪವಾಗಿರುವುದರಿಂದ ಸತ್ಯವಾದ ರಜತವನ್ನೇ ವಿಷಯೀಕರಿಸುತ್ತದೆ. ಪ್ರತೀತಿಗೆ ವಿಷಯವಾದುದು ಸತ್ಯವಾಗಬೇಕು, ಸಮ್ಮತವಾದ ರಜತವನ್ನು ಒಪ್ಪುವುದರಲ್ಲಿಯೂ ರಜತಜ್ಞಾನ ಹೊರತು ಬೇರೆ ಕಾರಣವಿಲ್ಲ. ಇಲ್ಲಿ ರಜತವಿಲ್ಲವೆನ್ನುವ ಪ್ರತೀತಿಯೂ ಇದೆ. ಎಂದರೆ— ಸತ್ಯವೇ. ಪ್ರತೀತಿಯಿದ್ದಪ್ರಯುಕ್ತವೇ ರಜತಾಭಾವವನ್ನು ಅಂಗೀಕರಿಸುತ್ತೇವೆ. ಹಾಗಾದರೆ ರಜತಜ್ಞಾನವೂ, ರಜತಾಭಾವಜ್ಞಾನವೂ ಬರುವುದಾದರೆ ಅವುಗಳಿಗೆ ವಿರೋಧವು ಬರುವುದೆಂದು ಹೇಳಕೂಡದು. ಏಕೆಂದರೆ— 'ಇದಂ ರಜತಂ' ಎದುರಿನಲ್ಲಿ ರಜತವು ಇದೆ ಎಂದು ವಿಷಯೀಕರಿಸತಕ್ಕ ಅನುಭವರೂಪವಾದ ಒಂದೇ ವಿಶಿಷ್ಟವಾದ ಜ್ಞಾನವಲ್ಲ. ಮತ್ತೆ ಇದಂ ಎನ್ನುವುದು ಗ್ರಹಣ (ಅನುಭವ) ರೂಪವಾದುದು. 'ರಜತಂ' ಎನ್ನುವ ಜ್ಞಾನವು ಅಂಗಡಿಯಲ್ಲಿರುವ ರಜತವನ್ನು ವಿಷಯೀಕರಿಸುವ ಸ್ಮರಣರೂಪವು. ಹೀಗೆ ಎರಡು ಜ್ಞಾನಗಳು. 'ನಾಸ್ತ್ಯತ್ರ ರಜತಂ' ಎನ್ನುವ ಬಾಧಜ್ಞಾನವು ಎದುರಿನಲ್ಲಿಯೇ ರಜತಾಭಾವವನ್ನು ವಿಷಯೀಕರಿಸತಕ್ಕ ಅನುಭವವು. (12) ಮತ್ತು ಅನ್ಯಥಾ ಖ್ಯಾತಿಯನ್ನು (ಭ್ರಾಂತಿಜ್ಞಾನವನ್ನು) ಹುಟ್ಟಿಸತಕ್ಕ ಕಾರಣವೇ ಇಲ್ಲವು. ಕಣ್ಣು ಮೊದಲಾದುದು ಕಾರಣವೆಂದರೆ— ಅದು ಯಥಾರ್ಥಜ್ಞಾನಕ್ಕೆ ಕಾರಣವೆಂದು ನಿಶ್ಚಿತವಾಗಿದೆ. ಹೇಗೆ ಮುಪ್ಪು ಸಾಯುವಿಕೆಗಳ ನಾಶಕ್ಕೆ ಕಾರಣವಾದ ಅಮೃತವು ಯಾವಾಗಲೂ ಮುಪ್ಪು ಸಾಯುವಿಕೆಗಳಿಗೆ ಕಾರಣವೂ ಆಗಲಾರದಷ್ಟೆ? ಯಥಾರ್ಥಜ್ಞಾನವನ್ನು ಉಂಟುಮಾಡುವ ಕಣ್ಣು ಮೊದಲಾದ ಕಾರಣಗಳು ಭ್ರಮಾತ್ಮಕ ಜ್ಞಾನವನ್ನುಂಟುಮಾಡಲಾರವು. ದೋಷ ಸಹಕೃತವಾದ ಇಂದ್ರಿಯದಿಂದಲೇ ಭ್ರಮೆಯು ಹುಟ್ಟುತ್ತದೆನ್ನುವುದು ಅಸಂಗತವು. ಏಕೆಂದರೆ— ದೋಷಗಳಾದರೂ ಕಾರಣಗಳಿಗೆ ಇರತಕ್ಕ ಸ್ವಾಭಾವಿಕವಾದ ಕಾರ್ಯವನ್ನು ಹುಟ್ಟಿಸತಕ್ಕ ಸಾಮರ್ಥ್ಯವನ್ನು ನಾಶಮಾಡುತ್ತವೆ. ವಿಪರೀತ ಕಾರ್ಯವು ಹುಟ್ಟುವ ಹಾಗೆ ಸಾಮರ್ಥ್ಯವನ್ನು ತಂದುಕೊಡುವುದಿಲ್ಲ. ಗಿರಿಮಲ್ಲಿಕೆಯ ಬೀಜವು (ಕಾಜವಾರೆಯು) ದುಷ್ಟವಾದರೂ ಗೋಳಿಮರವನ್ನು ಹುಟ್ಟಿಸುವುದಿಲ್ಲವಷ್ಟೆ? ಮತ್ತೆ ಕಾಜವಾರಗಿಡವನ್ನೇ ಹುಟ್ಟಿಸುವುದಿಲ್ಲ. ಹಾಗಾದರೆ ಕಾಡುಕಿಚ್ಚಿಯಿಂದ ಸುಟ್ಟುಹೋದ ಬಿದುರಿನ ಬೀಜಗಳಿಗೆ ಬಾಳೇ ಗಿಡವನ್ನು ಹುಟ್ಟಿಸತಕ್ಕ ಸಾಮರ್ಥ್ಯವು ಕಂಡದೆ. ಹಾಗೆಯೇ ದೋಷರೂಪಸಹಕಾರಿಗಳು ಕಣ್ಣು ಮೊದಲಾದ ಇಂದ್ರಿಯಗಳಿಗೆ ವಿಪರೀತವಾಗಿ ಕಾರ್ಯವನ್ನು ಹುಟ್ಟಿಸತಕ್ಕ ಸಾಮರ್ಥ್ಯವನ್ನು ತಂದುಕೊಡಬಹುದು, ಎಂದು ಹೇಳಕೂಡದು. ಕಾಡುಕಿಚ್ಚಿ ರೂಪವಾದ ತೇಜಸ್ಸಂಯೋಗವೆನ್ನುವ

ಪಾಕದಿಂದ ಬಿದುರಿನ ಬೀಜವು ಪರಮಾಣುಪರ್ಯಂತರ ಸಂಪೂರ್ಣನಾಶವಾಗಿ ಬಾಳೆಗಿಡದ ಬೀಜವೆನ್ನುವ ಬೇರೊಂದು ದ್ರವ್ಯವನ್ನೇ ಹುಟ್ಟಿಸುವುದರಿಂದ ಬಿದುರಿನ ಬೀಜಗಳು ಬಾಳೆಗಿಡಕ್ಕೆ ಬೀಜಗಳಲ್ಲ. (13) ಹೀಗೆ ಅನ್ಯಥಾ ಖ್ಯಾತಿಯು ಕೂಡುವುದಿಲ್ಲ ಎನ್ನುವಲ್ಲಿ " **ಸಾಕಾರವಾದಾದಸತೋ ನ ಭಾನಾತ್ಸಂವಿದ್ವಿರೋಧಾದಥ ಹೇತ್ವಭಾವಾತ್** " ಎನ್ನುವ ಹೇತುಗಳನ್ನು ವಿವರಿಸಿ ಜ್ಞಾನವು ಇಲ್ಲದಿರುವ ಅರ್ಥವನ್ನು ವಿಷಯೀಕರಿಸುವುದಾದರೆ ಎಲ್ಲಾ ಜ್ಞಾನದಲ್ಲಿಯೂ ವ್ಯಬಿಚಾರಶಂಕೆಯು ಬರಬೇಕಾಗುವುದು. ಅಂತೂ ಬಾಹ್ಯಾರ್ಥಾಪಲಾಪವನ್ನು ಹೇಗೆ ನಿರಾಕರಿಸುವೆವು ಅಂದರೆ, ಬೌದ್ಧರು ಆಂತರ ಜ್ಞಾನವೇ ಘಟಪಟಾದಿ ಬಾಹ್ಯಾರ್ಥರೂಪವಾಗಿ ತೋರುತ್ತದೆ ವಸ್ತುತಃ ಬಾಹ್ಯಭೂತವಾದ ಅರ್ಥವೇ ಇಲ್ಲವೆನ್ನುತ್ತಾರೆ. ಜ್ಞಾನದಿಂದಲೇ ಬಾಹ್ಯಾರ್ಥಾಪಲಾಪವನ್ನು ನಿರಾಕರಿಸಬೇಕು ಜ್ಞಾನದಲ್ಲಿ ವ್ಯಭಿಚಾರ ಶಂಕೆಯು ಇರುವುದಾದರೆ ಅದನ್ನು ನಿರಾಕರಿಸಲಿಕ್ಕೆ ಹೇಗೆ ಶಕ್ತವಾಗುವುದು? ಎಲ್ಲಾ ಕಡೆಗಳಲ್ಲಿಯೂ ಜ್ಞಾನವೇ ವಸ್ತುವನ್ನು ವ್ಯವಸ್ಥೆಪಡಿಸುವುದು ಬೇರೆಯಲ್ಲ. ಅದಕ್ಕೆ ಕೆಲವು ಕಡೆ ವ್ಯಭಿಚಾರ ಬರುವುದಾದರೆ ಎಲ್ಲಾ ಕಡೆಗಳಲ್ಲಿಯೂ ವ್ಯಭಿಚಾರಶಂಕೆಯು ಬರಬಹುದು. ವಿಜ್ಞಾನ ಹೊರತು ಈ ಶಂಕೆಯನ್ನು ಹೋಗಲಾಡಿಸುವುದು ಯಾವುದೂ ಇಲ್ಲ. ಅಂತೂ ಬಾಹ್ಯಾರ್ಥವಿದೆ ಎನ್ನುವ ಆಶೆಯೇ ಕೂಡಲಾರದು. (14) ಯಾವ ಜ್ಞಾನದಲ್ಲಿ ಬಾಧಕವಿದೆಯೋ ಅದರಲ್ಲಿ ವಿಶ್ವಾಸವಿಲ್ಲ. ಯಾವ ಜ್ಞಾನದಲ್ಲಿ ಬಾಧಕವಿಲ್ಲವೋ ಅದು ವಿಶ್ವಸನೀಯವು. ಹೀಗೆ ಬಾಧಕವಿರುವುದು, ಇಲ್ಲದಿರುವುದು ಎನ್ನುವ ವಿಶೇಷದಿಂದ ವಿಶ್ವಸನೀಯ, ಅವಿಶ್ವಸನೀಯ ಎನ್ನುವ ವ್ಯವಸ್ಥೆಯು ಕೂಡುತ್ತದೆಂದು ಹೇಳಕೂಡದು. ಬಾಧಕಜ್ಞಾನಕ್ಕೂ ಶಂಕಾಬಾರದಿರಲಿಕ್ಕೆ ಬೇಕಾದ ನಿಯಾಮಕವಿರುವುದಿಲ್ಲ. ಆದಕಾರಣ ಅದೂ ಶಂಕಾಸ್ಪದವೇ. (15) ಬಾಧಕವಿಲ್ಲದಿರುವುದರಿಂದ ಪ್ರಮಾಣವೆಂದು ತಿಳಿಯುವುದಾದರೆ ಯಾವ ಭ್ರಮಾತ್ಮಕ ಜ್ಞಾನಕ್ಕೆ ಬಾಧಜ್ಞಾನವೇ ಉಂಟಾಗಲಿಲ್ಲವೋ, ಅದೂ ಪ್ರಮಾಣವಾಗಬೇಕಾಗುವುದು. (16) ಮತ್ತು ಸಂವಾದವಿದ್ದರೆ ಜ್ಞಾನದಲ್ಲಿ ವಿಶ್ವಾಸವಿದೆ. ಸಂವಾದವಿಲ್ಲದಿದ್ದರೆ ವಿಶ್ವಾಸವಿಲ್ಲ. ಹೀಗೆ ಸಂವಾದವಿರುವುದು, ಇಲ್ಲದಿರುವುದು ಇವುಗಳಿಂದ ಪ್ರಮಾಣ, ಅಪ್ರಮಾಣಗಳೆಂದು ನಿಶ್ಚಯಿಸಿಕೊಳ್ಳುತ್ತೇವೆ, ಎಂದು ಹೇಳಕೂಡದು. ಸಂವಾದವೂ ಜ್ಞಾನರೂಪವೇ ಆಗಿರುವುದರಿಂದ ಅದೂ ಸಂಶಯ ವಿಷಯವೇ ಆಗುವುದು. ಆ ಸಂವಾದಕ್ಕೂ ಮತ್ತೊಂದು ಹೀಗೆ ಅನವಸ್ಥೆಯು. (17) ಮತ್ತು ಸಂವಾದದಿಂದ ಪ್ರಾಮಾಣ್ಯವನ್ನು ನಿರ್ಣಯಿಸಿಕೊಳ್ಳುವುದಾದರೆ ಧಾರಾವಾಹಿಕ (ಮತ್ತೂ ಮತ್ತು ಭ್ರಮೆಯು ಬಂದಿರುವ) ಸ್ಥಳದಲ್ಲಿ ಪರಸ್ಪರ ಸಂವಾದವಿರುವುದರಿಂದ ಅಲ್ಲಿಯೂ ಪ್ರಾಮಾಣ್ಯವನ್ನು ನಿರ್ಣಯಿಸಿಕೊಳ್ಳಬೇಕಾಗುವುದು. (18) ಮತ್ತು ಈ ತೋರತಕ್ಕ ರಜತಾಕಾರವು ಎಲ್ಲಿರತಕ್ಕದು? ಎದುರಿನಲ್ಲಿರುವ ಮುತ್ತಿನ ಚಿಪ್ಪಿನಲ್ಲಿರತಕ್ಕದು ಎಂದು ಅನ್ಯಥಾಖ್ಯಾತಿವಾದಿಗಳಿಗೆ ಇಷ್ಟವಲ್ಲ. ರಜತವು ಎದುರಿನಲ್ಲಿರುವ ಮುತ್ತಿನ ಚಿಪ್ಪಿನಲ್ಲಿಯೇ ಇರುವುದಾದರೆ 'ನಾತ್ರ ರಜತಂ' ಎನ್ನುವ ಬಾಧಜ್ಞಾನದಿಂದ ವಿರೋಧವೂ ಬರುವುದು. ದೇಶಾಂತರದಲ್ಲಿದೆ ಎಂದು ಹೇಳಕೂಡದು. ಆದುದರಿಂದ ಜ್ಞಾನದಲ್ಲಿರತಕ್ಕದೆಂದೇ ಹೇಳಬೇಕಾಗಿರುವಪ್ರಯುಕ್ತ ಸಾಕಾರ ವಿಜ್ಞಾನವಾದಿಗಳಾದ ಬೌದ್ಧರ ಮತವನ್ನು ಪ್ರವೇಶಮಾಡಿದಂತೆಯೇ ಆಗುವುದು. (19) ಹಾಗಾದರೆ 'ಇದಂ ರಜತಂ' ಇದುಮೊದಲಾದ ಜ್ಞಾನಗಳು ಹೇಗೆ ಕೂಡುತ್ತವೆಂದು ಅನ್ಯಥಾಖ್ಯಾತಿವಾದಿಗಳು ಶಂಕಿಸಿದರೆ— ಪ್ರಾಭಾಕರರು ಹೀಗೆ ಸಮಾಧಾನವನ್ನು ಹೇಳುವರು. ೧ ಇದಂ ೨ ರಜತಂ ಎನ್ನುವುದು ಎರಡು ಜ್ಞಾನಗಳು. ಅವುಗಳಲ್ಲಿ 'ಇದಂ' ಎನ್ನುವುದು ಅನುಭವರೂಪವು. 'ರಜತಂ' ಎನ್ನುವುದು ಸ್ಮೃತಿರೂಪವು. ಅದರಲ್ಲಿ 'ಇದಂ' ಎನ್ನುವುದು ಎದುರಿನಲ್ಲಿರುವ ವಸ್ತುವನ್ನುಮಾತ್ರ ಗ್ರಹಿಸುತ್ತದೆ. ದೋಷದಿಂದ

ಶುಕ್ತಿಯಲ್ಲಿರುವ ಶುಕ್ತಿತ್ವವೆನ್ನುವ ಜಾತಿವಿಶೇಷವನ್ನು ಗ್ರಹಿಸುವುದಿಲ್ಲ. ಹಾಗೆ ಶುಕ್ತಿಯು ಗ್ರಹೀತವಾದುದೂ ಮುತ್ತಿನಚಿಪ್ಪಿನ ಸಾದೃಶ್ಯವು ಬೆಳ್ಳಿಯಲ್ಲಿದ್ದುದರಿಂದ ರಜತದ ಸಂಸ್ಕಾರವನ್ನು ಉದ್ಬೋಧಮಾಡಿ ರಜತದ ಸ್ಮೃತಿಯನ್ನು ಹುಟ್ಟಿಸುತ್ತದೆ. ಆ ಸ್ಮೃತಿಯು ಅನುಭೂತವಾದ ವಸ್ತುವನ್ನು ವಿಷಯೀಕರಿಸತಕ್ಕ ಸ್ವಭಾವವುಳ್ಳದ್ದಾದಾಗ್ಯೂ ದೋಷದಿಂದ 'ಸಃ' ಆದೇಶಕಾಲಗಳ ಸಂಬಂಧವುಳ್ಳದ್ದು ಎನ್ನುವ ತತ್ತಾಂಶವನ್ನು ವಿಷಯೀಕರಿಸದೆ ಅನುಭವಸದೃಶವಾಗಿಯೇ ಇರುತ್ತದೆ. ಅಂದರೆ— ಅನುಭವವು ಹೇಗೆ ತತ್ತಾಂಶವನ್ನು ವಿಷಯೀಕರಿಸುವುದಿಲ್ಲವೋ ಹಾಗೆಯೇ ಈ ರಜತಸ್ಮೃತಿಯೂ ಕೂಡ ತತ್ತಾಂಶವನ್ನು ವಿಷಯೀಕರಿಸುವುದಿಲ್ಲ. ತಥಾಚ ರಜತಸ್ಮರಣೆಗೂ ಎದುರಿನಲ್ಲಿರುವ ವಸ್ತುವಿನ ಅನುಭವಕ್ಕೂ, ಜ್ಞಾನಕ್ಕೂ, ವಿಷಯಕ್ಕೂ ಭೇದವನ್ನು ಗ್ರಹಿಸದೆ ಇರುವುದರಿಂದ ಸಮೀಚೀನವಾದ ರಜತಜ್ಞಾನದ ಸಾದೃಶ್ಯದಿಂದ 'ಇದಂ ರಜತಂ' ಎನ್ನುವ ಅನುಭವ ಸ್ಮೃತಿಗಳು ಬೇರೆ ಬೇರೆ ಆಗಿರುವವುಗಳೇ ಅಭೇದವ್ಯವಹಾರವನ್ನೂ 'ಇದಂ ರಜತಂ' ಎಂದು ಒಂದೇ ವಿಭಕ್ತಿಯು ಅಂತ್ಯದಲ್ಲಿರುವ ಪದದಿಂದ ಹೇಳಲ್ಪಡುವ ಸಾಮಾನಾಧಿಕರಣ್ಯವ್ಯಪದೇಶವನ್ನು ಹುಟ್ಟಿಸುತ್ತವೆ. (20) ಪರಿಶೇಷ ಪ್ರಮಾಣದಿಂದಲೂ 'ಇದಂ ರಜತಂ' ಎನ್ನುವುದು ಅನುಭವ ಸ್ಮೃತಿರೂಪಗಳಾದ ಎರಡು ಜ್ಞಾನಗಳೆಂದು ಸಿದ್ಧವಾಗುತ್ತವೆ. ಹೇಗೆಂದರೆ, (೧) 'ಇದಂ' ಎನ್ನುವ ಚಕ್ಷುಸ್ಸನ್ನಿಕರ್ಷದಿಂದ ಹುಟ್ಟಿರುವ ಜ್ಞಾನವು ಅನುಭವವೆನ್ನುವಲ್ಲಿ ವಿವಾದವಿಲ್ಲ. (೨) 'ರಜತಂ' ಎನ್ನುವ ಜ್ಞಾನವು ಕಣ್ಣಿನಿಂದ ಹುಟ್ಟಿದ್ದಲ್ಲ. ಇಂದ್ರಿಯಗಳಿಗೆ ಸಮೀಪದಲ್ಲಿರುವ ವಸ್ತುಗಳ ಜ್ಞಾನವನ್ನು ಹುಟ್ಟಿಸುವುದರಲ್ಲಿಯೇ ಸಾಮರ್ಥ್ಯವಿರುವುದು. ದೂರದಲ್ಲಿರುವುದನ್ನು ಕಣ್ಣಿನಿಂದ ತಿಳಿದುಕೊಳ್ಳುವುದಾದರೆ ಸರ್ವರೂ ಸರ್ವಜ್ಞರಾಗಬೇಕಾಗುವರು. ದೂರದಲ್ಲಿರುವ ರಜತದಿಂದ ಕಣ್ಣಿಗೆ ಸನ್ನಿಕರ್ಷವಿರುವುದಿಲ್ಲ. ಮುತ್ತಿನ ಚಿಪ್ಪಿನಿಂದ ಸನ್ನಿಕೃಷ್ಟವಾದ ಕಣ್ಣೇ ಬೆಳ್ಳಿ ಎನ್ನುವ ಜ್ಞಾನವನ್ನು ಹುಟ್ಟಿಸುತ್ತದೆನ್ನುವುದು ಯುಕ್ತವಲ್ಲ. ಹಾಗಾದರೆ, ಅಂದರೆ— ಒಂದು ವಸ್ತುವಿನಿಂದ ಸನ್ನಿಕೃಷ್ಟವಾದ ಕಣ್ಣು ಇನ್ನೊಂದು ವಸ್ತುವನ್ನು ತಿಳಿಸಿಕೊಡುವುದಾದರೆ ಕುರ್ಚಿಯಿಂದ ಸನ್ನಿಕೃಷ್ಟವಾದ ಕಣ್ಣು ಆನೆಯನ್ನು ತಿಳಿಸಿಕೊಡಬೇಕಾಗುವುದು. ದೋಷವಿದ್ದರೆ ಇಂದ್ರಿಯವು ಬೆಳ್ಳಿ ಎನ್ನುವ ಜ್ಞಾನವನ್ನು ಹುಟ್ಟಿಸುತ್ತದೆ, ದೋಷವಿಲ್ಲದಿದ್ದರೆ ಹುಟ್ಟಿಸುವುದಿಲ್ಲ. ಹೀಗೆ ವ್ಯವಸ್ಥೆ ಮಾಡಿಕೊಳ್ಳುತ್ತೇವೆಂದು ಅಲ್ಲ. ದೋಷಗಳು ವಿಪರೀತಕಾರ್ಯವನ್ನು ಮಾಡಲಾರವು. ಹೊಟ್ಟೆಯಲ್ಲಿದ್ದ ಬೆಂಕಿಯು ಭಸ್ಮಕವೆನ್ನುವ ವ್ಯಾಧಿಯಿಂದ ದೂಷಿಸಲ್ಪಟ್ಟರೆ ಹೆಚ್ಚು ಆಹಾರವನ್ನು ಜೀರ್ಣೀಕರಿಸಲಿಕ್ಕೆ ಕಾರಣವಾಗಿದೆ. ಆದಕಾರಣ ದೋಷಗಳು ವಿಪರೀತಕಾರ್ಯವನ್ನು ಮಾಡುತ್ತವೆಂದು ಹೇಳಕೂಡದು. ಅದು ವಿವಾದಗ್ರಸ್ತವಾಗಿದೆ. ದೋಷವೇ ತಿಂದ ಆಹಾರವನ್ನು ಜೀರ್ಣೀಕರಿಸಲಿಕ್ಕೆ ಕಾರಣವು. ದೋಷವಿಶಿಷ್ಟವಾದ ಹೊಟ್ಟೆಯ ಬೆಂಕಿಯಲ್ಲ. ಹೊಟ್ಟೆಯ ಬೆಂಕಿಯ ಕಾರ್ಯವನ್ನು ದೋಷವು ಹೇಗೆ ಮಾಡುವುದೆಂದು ಹೇಳಕೂಡದು. ಕಾರ್ಯದಲ್ಲಿಯೂ ವೈಲಕ್ಷಣ್ಯವಿದೆ. ಹೊಟ್ಟೆಯ ಬೆಂಕಿಯಿಂದ ಪರಿಣತಗಳಾದ ರಸಗಳು ಶರೀರಕ್ಕೆ ಪುಷ್ಟಿಯನ್ನು ಮಾಡುತ್ತವೆ. ಭಸ್ಮಕದೋಷದಿಂದ ಪರಿಣತಗಳಾದ ರಸಗಳು ಪುಷ್ಟಿಯನ್ನು ಮಾಡುವುದಿಲ್ಲ. ಆದಕಾರಣ ಈ ರಜತಜ್ಞಾನವು ಇಂದ್ರಿಯಗಳಿಂದ ಹುಟ್ಟಿದ್ದಲ್ಲ. (21) ಲಿಂಗಾದಿಗಳನ್ನನುಸಂಧಾನಮಾಡಿಕೊಳ್ಳದಿದ್ದವರಿಗೂ ಹುಟ್ಟುವಂತಾದ್ದು ಅನುಮಾನಾದಿಗಳಿಂದ ಹುಟ್ಟಿದ್ದೆಂದು ಹೇಳಲು ಸಾಧ್ಯವಿಲ್ಲ. ಆದಕಾರಣ ಪೂರ್ವಕ್ಷಣದಲ್ಲಿಯೇ ಹುಟ್ಟುವ ಇಂದ್ರಿಯಾರ್ಥಸನ್ನಿಕರ್ಷಮೊದಲಾದ ಕಾರಣವಿಲ್ಲದಿದ್ದರೂ ಹುಟ್ಟಿರುವ ರಜತಜ್ಞಾನವು ಪರಿಶೇಷಪ್ರಮಾಣದಿಂದ ಸ್ಮರಣರೂಪವೆಂದೇ ಹೇಳಬೇಕು.(22)ರಜತಜ್ಞಾನವು ಸ್ಮರಣರೂಪವು ಎನ್ನುವ ಅಂಶದಲ್ಲಿ ಅನುಮಾನವೂ ಪ್ರಮಾಣವಿದೆ. 'ಇದಂ ಸ್ಮರಣಂ ಅನಾಕಲಿತರಜತಸ್ಯಾನುತ್ಪದ್ಯಮಾನತ್ವಾತ್ ಸಂಪ್ರತಿಪನ್ನಸ್ಮರಣ

ವತ್' = ಈ ರಜತವೆನ್ನುವ ಜ್ಞಾನವು ಸ್ಮರಣರೂಪವು, ರಜತವನ್ನು ತಿಳಿಯದಿದ್ದವನಿಗೆ ಹುಟ್ಟದಿರುವುದರಿಂದ ಸಮ್ಮತವಾದ ಸ್ಮರಣದಂತೆ. ಹಾಗಾದರೆ— "ಇದಂ ಅಸ್ಮರಣಂ ತತ್ತಾಂಶವಿಕಲತ್ವಾತ್ ಸಂಪ್ರತಿಪನ್ನವತ್" = ಈ ರಜತಜ್ಞಾನವು ಸ್ಮರಣರೂಪವಲ್ಲ; ತದ್ದೇಶಕಾಲಸಂಬಂಧರೂಪವಾದ ತತ್ತಾಂಶಕ್ಕೆ 'ತತ್' ಎಂದು ಉಲ್ಲೇಖವಿಲ್ಲದಿರುವುದರಿಂದ, ಇದು ಘಟವು ಎನ್ನುವ ಜ್ಞಾನದಂತೆ, ಎನ್ನುವುದು ಯುಕ್ತವಲ್ಲ. ಏಕೆಂದರೆ—ವ್ಯುತ್ಪನ್ನನಿಗೆ ಘಟಾದಿ ಪದಗಳಿಂದ ಪದಾರ್ಥಸ್ಮೃತಿಯೂ ಮತ್ತು ಹರಿ-ಹರ ಮೊದಲಾದವರ ಸ್ಮೃತಿಯೂ ಬರುವುದು. ಅದರಲ್ಲಿ ಅಸ್ಮರಣತ್ವವೆನ್ನುವದು ಸಾಧ್ಯವಿಲ್ಲ, ಹೇತುವಿದೆ. ಆದಪ್ರಯುಕ್ತ ವ್ಯಭಿಚಾರವು. (23) ಮತ್ತು ಯಾವುದರ ಅನುಭವವು ಬಂದಿರುತ್ತದೋ ಅದೆಲ್ಲವೂ ಸ್ಮೃತವಾಗುವುದಿಲ್ಲ. ತತ್ತಾಂಶವು 'ಸಃ' ಅಂದರೆ ಅತೀತ ದೇಶಕಾಲಗಳ ಸಂಬಂಧವು ಸ್ಮರಿಸಲ್ಪಡತಕ್ಕ ವಸ್ತುವಿನ ಧರ್ಮವು. ಅಂತೂ 'ರಜತಂ' ಎನ್ನುವುದು ಕೇವಲ ಧರ್ಮಿಯನ್ನು ವಿಷಯೀಕರಿಸತಕ್ಕ ಸ್ಮೃತಿಯೇ ಆಗಲಿ. ದೋಷವಿದ್ದಪ್ರಯುಕ್ತ ಅತೀತದೇಶಕಾಲಗಳ ಸಂಬಂಧರೂಪವಾದ ತತ್ತಾಂಶವನ್ನು ವಿಷಯೀಕರಿಸದೆ ಇರತಕ್ಕುದೂ ಆಗಲಿ, ತಥಾಚ ತತ್ತಾಂಶವಿಕಲತ್ವವೆನ್ನುವ ಹೇತುವಿದೆ. ಅಸ್ಮರಣತ್ವವೆನ್ನುವ ಸಾಧ್ಯವಿಲ್ಲವೆಂದಂಗೀಕರಿಸಿದರೂ ಬಾಧಕವಿಲ್ಲದಿರುವುದರಿಂದ ಹೇತುವು ಸಾಧ್ಯಸಾಧಕವಾಗುವುದಿಲ್ಲ. (24) 'ಇಯಂ ಸ್ಮೃತಿರ್ನ ಇಂದ್ರಿಯಜನ್ಯತ್ವಾತ್ = ಈ ರಜತಜ್ಞಾನವು ಸ್ಮೃತಿಯಲ್ಲ, ಚಕ್ಷುರಾದಿ ಇಂದ್ರಿಯಗಳಿಂದ ಹುಟ್ಟುವಪ್ರಯುಕ್ತ, ಈ ರಜತಜ್ಞಾನವು ಚಕ್ಷುರಿಂದ್ರಿಯದಿಂದ ಹುಟ್ಟಿರುವುದು. ಚಕ್ಷುರಿಂದ್ರಿಯವ್ಯಾಪಾರವಿದ್ದರೆ ಹುಟ್ಟುತ್ತದೆ ಇಲ್ಲದಿದ್ದರೆ ಹುಟ್ಟುವುದಿಲ್ಲ. ಹೀಗೂ ಹೇಳಕೂಡದು. ಏಕೆಂದರೆ— ಸ್ಮೃತಿಗೆ ಸಂಸ್ಕಾರೋದ್ಬೋಧವು ಕಾರಣವು. ಅದಕ್ಕೆ ಇದಂತ್ವ ಮೊದಲಾದ ಎದುರಿನಲ್ಲಿರುವ ಸಾಧಾರಣಾಕಾರವನ್ನು ಗ್ರಹಿಸುವಿಕೆಯು ಕಾರಣವು. ಅದರಲ್ಲಿಯೇ ಇಂದ್ರಿಯ ವ್ಯಾಪಾರಾನ್ವಯ ವ್ಯತಿರೇಕವು ಉಪಕ್ಷೀಣವಾಗುವುದು. ಇಂದ್ರಿಯಜನ್ಯತ್ವವೆನ್ನುವ ಹೇತುವಿಗೆ ಸಾಧಕವೇ ಇಲ್ಲದಿರುವುದರಿಂದ ಅಸಿದ್ಧಿಯು. (25) ಹೀಗಾದರೆ ತಿಕ್ತರಸ (ಖಹಿಪದಾರ್ಥ) ವನ್ನೇ ಅನುಭವಿಸದಿರುವ ಬಾಲಕನಿಗೆ ತಿಕ್ತಸ್ಮೃತಿಯೇ ಹುಟ್ಟದಿರುವುದರಿಂದ ಗುಡವು (ಬೆಲ್ಲ) ತಿಕ್ತವು (ಖಹಿ) ಎನ್ನುವ ಜ್ಞಾನವು ಹೇಗೆ ಕೂಡುತ್ತದೆಂದರೆ— ಜನ್ಮಾಂತರದಲ್ಲಿ ಅನುಭೂತವಾಗಿದೆ. ಹೀಗಾದರೆ ಜನ್ಮಾಂತರದಲ್ಲಿ ಅನುಭೂತಗಳಾದ ಎಲ್ಲಾ ಪದಾರ್ಥಗಳದ್ದೂ ಸ್ಮೃತಿಯು ಬರಬೇಕೆಂದರೆ— ಅದೃಷ್ಟವಶದಿಂದ ಕೆಲವು ಪದಾರ್ಥಗಳದ್ದೇ ಸ್ಮರಣೆಯು ಬರುತ್ತದೆ. (26) ಅಥವಾ ಗ್ರಹಣ (ಅನುಭವ) ಸ್ಮರಣೆಗಳೇ ತಿಳಿಯಲ್ಪಡದಿರುವ ಭೇದವುಳ್ಳವುಗಳಾಗಿ ವ್ಯವಹಾರಾದಿಗಳನ್ನು ಮಾಡುತ್ತವೆಂದು ನಿಯಮವಿರುವುದಿಲ್ಲ. ಮತ್ತೆ ಕೆಲವು ಪ್ರದೇಶದಲ್ಲಿ ಅನುಭವಗಳೇ ಪರಸ್ಪರವಾಗಿ ಗ್ರಹಿಸಲ್ಪಡದಿರುವ ಭೇದವುಳ್ಳವುಗಳಾಗಿ ಅಭೇದ ವ್ಯವಹಾರಾದಿಗಳನ್ನು ಮಾಡುತ್ತವೆ. ಉದಾ= ಪೀತಃ ಶಂಖಃ = ಶಂಖವು ಪೀತ (ಅರಸಿನ) ವಾಗಿದೆಂದು. ಇಲ್ಲಿ ಕಣ್ಣಿನ ಪಿತ್ತದ್ರವ್ಯದಲ್ಲಿದ್ದ ಪೀತತ್ವವು ದ್ರವ್ಯವಿಲ್ಲದೇನೇ ಗ್ರಹೀತವಾಗುತ್ತದೆ. ಶಂಖವು ತನ್ನಲ್ಲಿದ್ದ ಶೌಕ್ಲ್ಯ (ಬಿಳಿಪು) ವನ್ನು ಬಿಟ್ಟು ಶಂಖತ್ವರೂಪದಿಂದಲೇ ಗ್ರಹೀತವಾಗುತ್ತದೆ. ಈ ಎರಡು ಅನುಭವಗಳು ಗ್ರಹಿಸಲ್ಪಡದಿರುವ ಅಸಂಸರ್ಗವುಳ್ಳವುಗಳಾಗಿ 'ಪೀತಃ ಶಂಖಃ' ಎನ್ನುವ ಅಭೇದ ವ್ಯವಹಾರಾದಿಗಳನ್ನು ಹುಟ್ಟಿಸುತ್ತವೆ. ಕಣ್ಣಿನಲ್ಲಿರುವ ಪಿತ್ತ ದ್ರವ್ಯದಲ್ಲಿರತಕ್ಕ ಪೀತತ್ವವು ಕಣ್ಣಿನಿಂದ ಗ್ರಾಹ್ಯವಾಗಿ 'ಪೀತಃ ಶಂಖಃ' ಎಂದು ಅನುಭವವು ಬರುವುದಾದರೆ ಕಣ್ಣಿನಲ್ಲಿರುವ ಕಾಡಿಗೆಯ ನೈಲ್ಯವೂ ಗ್ರಾಹ್ಯವಾಗಬೇಕಾಗುವುದು. ಅಂತೂ 'ನೀಲಃ ಶಂಖಃ' ಎಂದೂ ಅನುಭವವು ಬರಬೇಕಾಗುವುದೆಂದರೆ— ಕಜ್ಜಲ (ಕಾಡಿಗೆ) ವು ವಕ್ರವಾಗಿದ್ದುದರಿಂದ ಕಣ್ಣು ಅದರಲ್ಲಿರುವ ನೈಲ್ಯವನ್ನು ಗ್ರಹಿಸುವುದಿಲ್ಲ. ಕಣ್ಣಿನಿಂದ ರಶ್ಮಿಗಳು ಹೊರಡುವಲ್ಲಿಯೇ ಕಾಡಿಗೆಯು ಇರುವುದಿಲ್ಲ. ಕಣ್ಣಿನ ಸಮೀಪ ಪ್ರದೇಶದಲ್ಲಿಯೇ ಇರುತ್ತದೆ.

ಮತ್ತು ಕಾಡಿಗೆಯು ಅಸ್ವಚ್ಛವಾಗಿರುವಪ್ರಯುಕ್ತ ಕಣ್ಣಿನ ರಶ್ಮಿಗೆ ಪ್ರತಿಬಂಧಕವಾಗಿದೆ. ಪಿತ್ತದ್ರವ್ಯವು ಕನ್ನಡಿಯಂತೆ ಸ್ವಚ್ಛವಾಗಿದೆ. ಆದಪ್ರಯುಕ್ತ ಕಣ್ಣಿನ ರಶ್ಮಿಗಳಿಗೆ ಪ್ರತಿಬಂಧಕವಲ್ಲ. ಇದೇಪ್ರಕಾರ 'ತಿಕ್ತೋ ಗುಡಃ' ಎನ್ನುವ ವ್ಯವಹಾರವು ಅಂದರೆ ಇಲ್ಲಿಯೂ ರಸನೇಂದ್ರಿಯವು (ನಾಲಗೆಯು) ತಿಕ್ತ ದ್ರವ್ಯದಲ್ಲಿರತಕ್ಕ ತಿಕ್ತತ್ವವನ್ನು ದೋಷದಿಂದ ದ್ರವ್ಯವಿರಹಿತವನ್ನಾಗಿಯೇ ಗ್ರಹಿಸುತ್ತದೆ. ಮತ್ತು ಬೆಲ್ಲವನ್ನು ದೋಷದಿಂದ ಮಾಧುರ್ಯ ರಸವನ್ನು ಗ್ರಹಿಸದೇನೇ ನಾಲಗೆಯು ಗ್ರಹಿಸುತ್ತದೆ. ಆದಕಾರಣ ಪರಸ್ಪರವಾಗಿ ಅಪೇಕ್ಷಿಸಿಕೊಂಡಿರುವ ಈ ಗುಣ (ತಿಕ್ತ) ಗುಣಿ(ಗುಡ) ಗಳಿಗೆ ಸಂಬಂಧವಿಲ್ಲವೆನ್ನುವುದನ್ನು ತಿಳಿದುಕೊಳ್ಳದೆ 'ತಿಕ್ತಂ ನಿಂಬಫಲಂ' ಎನ್ನುವ ಅನುಭವದ ಸಾದೃಶ್ಯವಿದ್ದಪ್ರಯುಕ್ತ 'ತಿಕ್ತೋ ಗುಡಃ' ಎನ್ನುವ ಅಭೇದವ್ಯವಹಾರ ಮೊದಲಾದುದನ್ನು ಭೇದವನ್ನು ಗ್ರಹಿಸದಿರುವ ಎರಡು ಅನುಭವಗಳೇ ಮಾಡುತ್ತವೆ. (27) ಕೆಲವುಕಡೆ ಗ್ರಹಿಸದಿರುವ ಭೇದವುಳ್ಳ ಎರಡು ಸ್ಮರಣಗಳೇ ವ್ಯವಹಾರವನ್ನುಂಟುಮಾಡುತ್ತವೆ. ಉದಾ='ಸ ಘಟಸ್ತತ್ರಾಸೀತ್' ಎಂದು. ಇಲ್ಲಿಯೂ 'ಸ ಘಟಃ' ಎನ್ನುವುದೊಂದು ಸ್ಮರಣವು. 'ತತ್ರಾಸೀತ್' ಎನ್ನುವುದು ಬೇರೊಂದು ಸ್ಮರಣವು. ತಥಾಚ ಈ ಸ್ಮರಣಗಳೇ ಸ್ವರೂಪಗಳಿಗೂ ಅದರ ವಿಷಯುಗಳಾದ ಘಟ ಮತ್ತು ಬೇರೆ ವಸ್ತುವಿಗೂ ಗ್ರಹಿಸದಿರುವ ಭೇದವುಳ್ಳವುಗಳಾಗಿ'ಸ ಘಟಸ್ತತ್ರಾಸೀತ್' ಇತ್ಯಾದಿ ವ್ಯವಹಾರವನ್ನು ಮಾಡುತ್ತವೆ. ಇದೇರೀತಿಯಾಗಿ ಅಲಾತ (ದೀವಿಗೆ ಅಥವಾ ಪಂಜು) ವನ್ನು ಶೀಘ್ರದಲ್ಲಿ ತಿರುಗಿಸಿದರೆ ಅದರ ಜ್ವಾಲೆಗಳಲ್ಲಿ ಇದು ಚಕ್ರವು ಎನ್ನುವ ವ್ಯವಹಾರವು ಬರುತ್ತದೆ. ಇದುಮೊದಲಾದ ವ್ಯವಹಾರಗಳನ್ನು ಭ್ರಾಂತಿಯನ್ನು ಒಪ್ಪದೆ ಎರಡು ಜ್ಞಾನಮೊದಲಾದ ಪ್ರಕಾರಗಳಿಂದಲೇ ನಿರ್ವಾಹಮಾಡಬೇಕು. (28) ಮತ್ತು ಭ್ರಾಂತಿಯನ್ನು ಅಂಗೀಕರಿಸುವವರೂ ವಿವೇಕಾಗ್ರಹವನ್ನು ಒಪ್ಪಲೇಬೇಕು. 'ಇದಂ ರಜತಂ' ಎನ್ನುವಲ್ಲಿ ಜ್ಞಾನವಿಷಯೀಭೂತವಾದ 'ಇದಂ' ಎನ್ನುವುದಕ್ಕೂ ರಜತಕ್ಕೂ ಭೇದಜ್ಞಾನವಿದ್ದರೆ ಭ್ರಾಂತಿಯೇ ಹುಟ್ಟಲಾರದು. ವಿವೇಕಜ್ಞಾನವಿದ್ದರೂ ಭ್ರಾಂತಿಯನ್ನಂಗೀಕರಿಸಿದರೆ ಭ್ರಾಂತಿಯು ನಿವೃತ್ತಿಯೇ ಆಗದೆ ಹೋಗಬೇಕಾಗುವುದು. ತಥಾಚ ಭ್ರಾಂತಿಯನ್ನು ಒಪ್ಪಿದವರಿಗೂ ಅವಶ್ಯವಾಗಿ ಒಪ್ಪಬೇಕಾಗುವ ಭೇದಾಗ್ರಹದಿಂದಲೇ ಎಲ್ಲವೂ ಕೂಡುವಾಗ ಭ್ರಮೆಯನ್ನು ಕಲ್ಪಿಸುವುದು ಏಕೆ? (29) ಮತ್ತು ಅನ್ಯಥಾಖ್ಯಾತಿ (ಭ್ರಾಂತಿ)ಯಿದೆ, ಎನ್ನುವಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. ಮತ್ತು 'ನೇದಂ ರಜತಂ' ಎಂಬುವ ಬಾಧಕಜ್ಞಾನವಿರುವುದರಿಂದ 'ಇದಂ ರಜತಂ' ಎನ್ನುವ ಬಾಧ್ಯವಾದ ಭ್ರಮೆಯನ್ನು ಒಪ್ಪಲೇಬೇಕೆಂದು ಹೇಳುತ್ತೇವೆಂದರೆ— ಮುತ್ತಿನ ಚಿಪ್ಪುವಿಗೂ ಬೆಳ್ಳಿಗೂ ಭೇದವನ್ನು ತಿಳಿದುಕೊಳ್ಳದೆ ಬಂದಿರುವ 'ಇದಂ ರಜತಂ' ಇದು ಬೆಳ್ಳಿಯು ಎನ್ನುವ ಅಭೇದವ್ಯವಹಾರವನ್ನು ಬಾಧಿಸಿಯೇ 'ನೇದಂ ರಜತಂ' ಇದು ಬೆಳ್ಳಿಯಲ್ಲ ಎನ್ನುವ ವಿವೇಕಜ್ಞಾನಕ್ಕೆ ಬಾಧಕಜ್ಞಾನವೆನ್ನುವ ವ್ಯವಹಾರವೂ ಕೂಡಿಹೋಗುತ್ತದೆ. ಆದುದರಿಂದ 'ನೇದಂ ರಜತಂ' ಎನ್ನುವ ಬಾಧಕಜ್ಞಾನವಿರುವುದರಿಂದ ಅದರಿಂದ ಬಾಧಿಸಲ್ಪಡುವ 'ಇದಂ ರಜತಂ' ಎನ್ನುವ ಭ್ರಮೆಯನ್ನು ಒಪ್ಪಲೇಬೇಕೆನ್ನುವುದೂ ಸರಿಯಲ್ಲ. (30) ತಥಾಚ 'ವಿಗೀತಪ್ರತ್ಯಯಃ ಯಥಾರ್ಥಃ ಪ್ರತ್ಯಯತ್ವಾತ್ ಸಂಪ್ರತಿಪನ್ನವತ್' = ವಿವಾದಾಸ್ಪದವಾದ 'ಇದಂ ರಜತಂ' ಎನ್ನುವ ಜ್ಞಾನವು ಯಥಾರ್ಥವಾಗಿದೆ, ಜ್ಞಾನವಾಗಿರುವುದರಿಂದ ನಿಶ್ಚಿತವಾದ ಇದು ಘಟವು ಎನ್ನುವ ಜ್ಞಾನದಂತೆ. ಅಹುದು. ಆದರೆ ವಿಗೀತಪ್ರತ್ಯಯವೆಂದರೆ (೧) ಎದುರಿನಲ್ಲಿರುವ ವಸ್ತುವನ್ನು ವಿಷಯೀಕರಿಸುವ ನಿರ್ವಿಕಲ್ಪಕಜ್ಞಾನವೋ (ಇದಂ ಎನ್ನುವ ಆಕಾರವುಳ್ಳ ಭ್ರಾಂತಿಯನ್ನು ಹುಟ್ಟಿಸುವ ಧರ್ಮಿಜ್ಞಾನವೋ)?(೨)ಸದೃಶವಾದುದನ್ನು ನೋಡೋಣದರಿಂದ ಹುಟ್ಟತಕ್ಕ ರಜತದ ಸ್ಮರಣವೋ (ಭ್ರಮಕ್ಕೆ ಕಾರಣವಾದ ವಿಶೇಷಣಜ್ಞಾನವೋ)? (೩) ಅಥವಾ ಎರಡೋ ಅಂದರೆ

ನಿರ್ವಿಕಲ್ಪಕಜ್ಞಾನರೂಪವಾದ ವಿಶೇಷ್ಯಜ್ಞಾನ ವಿಶೇಷಣಜ್ಞಾನರೂಪವಾದ ರಜತಸ್ಮರಣ ಎನ್ನುವುದೋ? (೪) ಅಥವಾ ರಜತ ಎದುರಿನಲ್ಲಿರುವ ವಸ್ತು ಇವುಗಳಿಗೆ ಐಕ್ಯಜ್ಞಾನವೋ? (೫) ಅಥವಾ ತಿಳಿಯಲ್ಪಡದಿರುವ ಭೇದವುಳ್ಳ ಎರಡು ಜ್ಞಾನಗಳೋ? ಇವುಗಳಲ್ಲಿ ಮೊದಲಿನ ೩ ಪಕ್ಷಗಳಲ್ಲಿ ಸಿದ್ಧಸಾಧನತಾ ದೋಷವು. ೪ನೇ ಕಲ್ಪದಲ್ಲಿ ವಾದಿಗೆ (ಅನುಮಾನವನ್ನು ಪ್ರಯೋಗಿಸುವವನಿಗೆ) ಆಶ್ರಯವು ಅಸಿದ್ಧವಾಯಿತು. ಅಂದರೆ ಶುಕ್ತಿರಜತಗಳಿಗೆ ತಾದಾತ್ಮ್ಯಜ್ಞಾನರೂಪವಾದ ಅನ್ಯಥಾ ಖ್ಯಾತಿಯಿಲ್ಲವೆಂದು ಹೇಳುವವನು ಅದನ್ನು ಅಂಗೀಕರಿಸದಿರುವುದರಿಂದ ಆಶ್ರಯವು ಅಸಿದ್ಧವಾಯಿತು. ಅಂಗೀಕರಿಸಿದರೆ ಅಪಸಿದ್ಧಾಂತವು. ಮತ್ತು ವಿರೋಧವು. (ಪ್ರಮಾಣ ಬಾಧವು.) ಅಂದರೆ ರಜತ ಎದುರಿನಲ್ಲಿರುವ ವಸ್ತು ಇವುಗಳ ಐಕ್ಯಜ್ಞಾನದಲ್ಲಿ ಯಾಥಾರ್ಥ್ಯವು ಬಾಧಿತವು. ೫ನೇ ಕಲ್ಪದಲ್ಲಿ ಪ್ರತಿವಾದಿಗಳು (ಅಂದರೆ ಅನ್ಯಥಾಖ್ಯಾತಿವಾದಿಗಳು) 'ಇದಂ ರಜತಂ' ಎನ್ನುವುದು ಅಗೃಹೀತಭೇದವುಳ್ಳ ಎರಡು ಜ್ಞಾನಗಳೆಂದು ಒಪ್ಪದಿರುವುದರಿಂದ ಅವರಿಗೆ ಆಶ್ರಯವು ಅಸಿದ್ಧವಾಯಿತು, ಎಂದರೆ— ಹೀಗೆ ಹೇಳಕೂಡದು. ಎದುರಿನಲ್ಲಿರುವ ವಸ್ತುವನ್ನು ವಿಷಯೀಕರಿಸುವ ನಿರ್ವಿಕಲ್ಪಕಜ್ಞಾನವಿದೆ. ರಜತಕ್ಕೆ ಸದೃಶವಾದ ಎದುರಿನಲ್ಲಿರುವ ವಸ್ತುವನ್ನು ನೋಡೋಣದರಿಂದುಂಟಾಗತಕ್ಕ ರಜತದ ಸ್ಮರಣೆಯು ಇರುತ್ತದೆ. ಹಾಗೆಯೇ ಇವುಗಳಿಂದ ಹುಟ್ಟಿರುವ ಸವಿಕಲ್ಪಕವಾದ 'ಇದಂ' ಎನ್ನುವ ಜ್ಞಾನದಿಂದ ಭೇದವೋ ಅಭೇದವೋ ಎಂದು ವಿವಾದವಿಶಿಷ್ಟವಾದ ರಜತಜ್ಞಾನವು ಇದ್ದೇ ಇರುತ್ತದೆ. ಅದರಲ್ಲಿ ವಿಪ್ರತಿಪನ್ನಗಳಾದ ಭೇದಾಭೇದಗಳನ್ನು ಬಿಟ್ಟು 'ಇದಂ ರಜತಂ' ಎನ್ನುವ ಜ್ಞಾನವೇ 'ಇದಂ ರಜತಂ' ಇದುಮೊದಲಾದ ಅಭೇದವ್ಯವಹಾರಕ್ಕೆ ಕಾರಣವಾದದ್ದು ಪಕ್ಷವಾಗಿ ವಿವಕ್ಷಿತವಾಗಿದೆ. ಆದಕಾರಣ ಹಿಂದೆ ಹೇಳಿದ ದೋಷಕ್ಕೂ ಅವಕಾಶವಿಲ್ಲ. ಎಲ್ಲಿಯೂ ವಿವಾದವಿಷಯವಾದ ಧರ್ಮದಿಂದಲೇ ಪಕ್ಷೀಕರಿಸಬೇಕೆಂದು ಇಲ್ಲ. (31) ಮತ್ತು ಸಿದ್ಧವಾದುದನ್ನು ಪಕ್ಷೀಕರಿಸುವುದು. ಭ್ರಾಂತಿರೂಪ ಜ್ಞಾನವು ಉಂಟೋ ಇಲ್ಲವೋ ಎನ್ನುವ ವಿವಾದಸಮಯದಲ್ಲಿ ಭೇದಾಭೇದಗಳು ವಿಮತಗಳಾಗಿವೆ. ಹೇಗೆಂದರೆ— ಹಿಂದೆ ಹೇಳಿದಪ್ರಕಾರ 'ಇದಂ ರಜತಂ' ಎನ್ನುವ ಜ್ಞಾನಗಳು ಗ್ರಹಣ ಸ್ಮರಣರೂಪಗಳಾಗಿ ಅವುಗಳು ಭಿನ್ನಗಳಾದರೆ ಅನ್ಯಥಾಖ್ಯಾತಿಯು ಇರುವುದಿಲ್ಲವಷ್ಟೆ. ಹೇಗೆಂದರೆ— 'ಇದಂ' ಎನ್ನುವ ಜ್ಞಾನವು ಎದುರಿನಲ್ಲಿರುವುದನ್ನು (ಮುತ್ತಿನಚಿಪ್ಪನ್ನು) ಮಾತ್ರ ವಿಷಯೀಕರಿಸುತ್ತದೆ. ರಜತವಾರ್ತೆಯನ್ನೇ ತಿಳಿಯುವುದಿಲ್ಲ. ರಜತಜ್ಞಾನವೂ ಕೂಡ ರಜತವನ್ನು ಮಾತ್ರ ವಿಷಯೀಕರಿಸುವುದಾಗಿ 'ಇದಂ' ಎಂದು ಎದುರಿನಲ್ಲಿರುವುದನ್ನು ಅನುವಾದ ಮಾಡಿ ಅದಕ್ಕೇನೇ ರಜತತ್ವವನ್ನು 'ಇದಂ ರಜತಂ' ಎಂದು ವಿಧಾನಮಾಡುವುದಿಲ್ಲ. ಮತ್ತೆ 'ರಜತಂ' ಎಂದೇ ಯಾವುದೋ ಒಂದಕ್ಕೆ ರಜತತ್ವವನ್ನು ವಿಷಯೀಕರಿಸುತ್ತದೆ. ಅದು ಪ್ರಮಾಣವಿರುದ್ಧವಲ್ಲ. ಆದಕಾರಣ ಎರಡೂ ಜ್ಞಾನಗಳು ಭಿನ್ನಗಳಾದರೆ ಅನ್ಯಥಾಖ್ಯಾತಿಯೇ ಇರುವುದಿಲ್ಲ. ಆದ ಪ್ರಯುಕ್ತ ಅನ್ಯಥಾಖ್ಯಾತಿವಾದಿಗಳು 'ಇದಂ ರಜತಂ' ಎನ್ನುವ ಜ್ಞಾನಗಳಿಗೆ ಅಭೇದವನ್ನು ಹೇಳಬೇಕು. ಅಖ್ಯಾತಿವಾದಿಗಳು ಅದನ್ನು ನಿರಾಕರಿಸಬೇಕು. ಹೀಗೆ ಭೇದಾಭೇದಗಳಲ್ಲಿ ವಿಪ್ರತಿಪತ್ತಿಯುಂಟೇ ಉಂಟು. ಆದಕಾರಣ ವಿಪ್ರತಿಪನ್ನವಾದ ಭೇದ ಅಭೇದರೂಪ ಆಕಾರವನ್ನು ಬಿಟ್ಟು 'ಇದಂ ರಜತಂ' ಎನ್ನುವ ಜ್ಞಾನವನ್ನು ಮಾತ್ರ ಪಕ್ಷೀಕರಿಸಿದರೆ ಯಾವ ದೋಷವೂ ಇಲ್ಲ. ಇಲ್ಲವಾದರೆ ಭ್ರಮೆಯುಂಟೆಂದು ಹೇಳುವವನು 'ಇದಂ ರಜತಂ' ಎನ್ನುವ ಜ್ಞಾನಕ್ಕೆ ಎದುರಿನಲ್ಲಿರುವುದು ವಿಷಯವಾಗಿದೆ ಎಂದು ಸಾಧಿಸುವುದಕ್ಕಾಗಿ ಅನುಮಾನ ಪ್ರಯೋಗವನ್ನು ಉಪನ್ಯಾಸಮಾಡುವವನು ಆಶ್ರಯಾಸಿದ್ಧತ್ವಮೊದಲಾದ ದೋಷಗಳಿಂದ ಹೇಗೆ ಮುಕ್ತನಾದಾನು? (32) ಹಾಗಾದರೆ ರಜತವನ್ನು ಅಪೇಕ್ಷಿಸುವವನಿಗೆ ಶುಕ್ತಿಯಲ್ಲಿ ಪ್ರವೃತ್ತಿಯಾಗ

ಲಿಕ್ಕೆ ಕಾರಣೀಭೂತವಾದ ಜ್ಞಾನವನ್ನೇ ನಾನು (ಅನ್ಯಥಾ ಖ್ಯಾತಿವಾದಿಯು) ಪಕ್ಷೀಕರಿಸುತ್ತೇನೆಂದರೆ ಗಟ್ಟಿಯಾಗಿ ಹಾಗೆ ಹೇಳಬೇಡ. ಬೇರೆಯವರೂ ಹೇಳಿಯಾರು. ಅಂದರೆ, ನಾನೂ ಅಂತಹುದನ್ನೇ ಪಕ್ಷೀಕರಿಸುತ್ತೇನೆ. (33) ಪುನಃ ಇಂತಹ ಜ್ಞಾನವನ್ನು ಪಕ್ಷೀಕರಿಸಿದರೆ ಈಶ್ವರ ಜ್ಞಾನವು ಎಲ್ಲಾದಕ್ಕೂ ನಿಮಿತ್ತವಾಗಿರುವುದರಿಂದ ರಜತವನ್ನು ಅಪೇಕ್ಷಿಸುವವನಿಗೆ ಶುಕ್ತಿಯಲ್ಲಿ ಪ್ರವೃತ್ತಿಗೆ ಕಾರಣಭೂತವಾದ ಜ್ಞಾನವು ಈಶ್ವರನ ಜ್ಞಾನವೂ ಆಗುತ್ತದೆ. ಅದರಲ್ಲಿ ಯಾಥಾರ್ಥ್ಯವು ಸಿದ್ಧವೇ ಆಗಿದೆ. ಆದಕಾರಣ ಈಶ್ವರ ಜ್ಞಾನದಲ್ಲಿ ಸಿದ್ಧಸಾಧನತ್ವವು ಬರಬಹುದೆಂದು ಅನ್ನಥಾಖ್ಯಾತಿವಾದಿಯು ಶಂಕಿಸಿದರೆ— ಅಖ್ಯಾತಿವಾದಿಯು ನಿನಗೆ ಅಂದರೆ ಅನ್ಯಥಾ ಖ್ಯಾತಿವಾದಿಗೆ ಹಿಂದೆ ಹೇಳಿದ ರೀತಿಯಿಂದ ರಜತವನ್ನು ಅಪೇಕ್ಷಿಸುವವನಿಗೆ ಶುಕ್ತಿಯಲ್ಲಿ ಪ್ರವೃತ್ತಿಗೆ ಕಾರಣೀಭೂತವಾದ ಜ್ಞಾನವು ಈಶ್ವರಜ್ಞಾನವೂ ಆಗುತ್ತದೆ. ಅಲ್ಲಿ ಯಾಥಾರ್ಥ್ಯವಿಲ್ಲದಿರುವುದರಿಂದ ಬಾಧಬರುವುದೆಂದು ಹೇಳುವನು. (34) ಪುನಃ ಪ್ರಕೃತಪ್ರವೃತ್ತಿಗೆ ಕಾರಣೀಭೂತವಾದ ಅನೀಶ್ವರಜ್ಞಾನವನ್ನು ಪಕ್ಷವನ್ನಾಗಿಟ್ಟುಕೊಳ್ಳುತ್ತೇನೆಂದು ಅನ್ಯಥಾ ಖ್ಯಾತಿವಾದಿಯು ಶಂಕಿಸಿದರೆ — ಅಖ್ಯಾತಿವಾದಿಯು ನಾನೂ ಅಂತಹ ಜ್ಞಾನವನ್ನೇ ಪಕ್ಷವನ್ನಾಗಿಟ್ಟುಕೊಳ್ಳುತ್ತೇನೆಂದು ಹೇಳುವನು. ನೀನು ಈಶ್ವರನನ್ನು ಅಂಗೀಕರಿಸದಿರುವುದರಿಂದ ಅನೀಶ್ವರ ಎನ್ನುವ ವಿಶೇಷಣವು ವ್ಯರ್ಥವೆಂದರೆ ನಿನಗೂ ನನ್ನನ್ನು ಕುರಿತು ವ್ಯರ್ಥವೇ. (35) ಪ್ರಕೃತ ಪ್ರವೃತ್ತಿಗೆ ಕಾರಣವಾದ ಅನೀಶ್ವರ ಜ್ಞಾನವು ಪಕ್ಷವಾದಾಗ್ಯೂ ಇದು ಇಷ್ಟಸಾಧನವು, ಎನ್ನುವ ಅನುಮಿತಿಯನ್ನುಂಟುಮಾಡಿ ಪ್ರಕೃತ ಪ್ರವೃತ್ತಿಗೆ ಕಾರಣವಾದ ರಜತತ್ವವು ಇಷ್ಟಸಾಧನತ್ವವ್ಯಾಪ್ಯವು ಎಂದು ವ್ಯಾಪ್ತಿಜ್ಞಾನವು ನಮಗೆ ಬರುವುದರಿಂದ ಹೇಳಿದ ವ್ಯಾಪ್ತಿಜ್ಞಾನದಲ್ಲಿ ಸಿದ್ಧ ಸಾಧನತ್ವವು. ಹೀಗೆ ಹೇಳುವುದಾದರೆ ಆ ವ್ಯಾಪ್ತಿಜ್ಞಾನದಲ್ಲಿಯೇ ಅನ್ಯಥಾಖ್ಯಾತಿವಾದಿಗೆ ಬಾಧವು ಬರಬೇಕಾಗುವುದು. (36) ಪುನಃ ಅಖ್ಯಾತಿವಾದಿಯು 'ವಿವಾದಾಧ್ಯಾಸಿತಂ ರಜತಜ್ಞಾನಂ ರಜತವಿಷಯಂ ರಜತಜ್ಞಾನತ್ವಾತ್ ಸಮ್ಮತವತ್ = ವಿವಾದ ವಿಷಯವಾದ ರಜತಜ್ಞಾನವು ರಜತವಿಷಯಕವಾಗಿದೆ, ರಜತವಾಗಿರುವುದರಿಂದ ನಿಶ್ಚಿತವಾದ ರಜತಜ್ಞಾನದಂತೆಯೇ ಎಂದರೆ— ಈ ಅನುಮಾನದಲ್ಲಿ ರಜತಜ್ಞಾನತ್ವವೆಂದರೆ (೧) ರಜತಸ್ಯ ಜ್ಞಾನಂ=ರಜತದ ಜ್ಞಾನವು ರಜತಜ್ಞಾನವು ಎಂದೋ? ೨ ರಜತಂ ಚ ತತ್ ಜ್ಞಾನಂ ಚ=ರಜತಾಕಾರವಾದ ಜ್ಞಾನವೆಂದೋ, ೩ ರಜತಶಬ್ದೋಲ್ಲೇಖಿಜ್ಞಾನಂ=ರಜತ ಶಬ್ದವನ್ನು ವಿಷಯೀಕರಿಸಿರುವ ಜ್ಞಾನವೆಂದೋ ಅಥವಾ ರಜತ ಶಬ್ದದ ಸ್ಮೃತಿಗೆ ಕಾರಣವಾದ ಜ್ಞಾನವೆಂದೋ? ೪ ರಜತಾರ್ಥಿನಃ ಪ್ರವೃತ್ತಿಹೇತುಜ್ಞಾನಂ ವಾ=ರಜತವನ್ನು ಅಪೇಕ್ಷಿಸುವವನ ಪ್ರವೃತ್ತಿಗೆ ಕಾರಣವಾದ ಜ್ಞಾನವೆಂದೋ? ೫ ರಜತಮಿತಿ ಜ್ಞಾನಂ ವಾ=ರಜತವೆಂದು ಜ್ಞಾನವು ಎಂದೋ? ಈ ಐದು ಕಲ್ಪಗಳಲ್ಲಿ ೧ನೇದ್ದು ಕೂಡಲಾರದು. ರಜತದ ಜ್ಞಾನವೆಂದರೆ ರಜತ ವಿಷಯಕವಾದ ಜ್ಞಾನವೆಂದೇ ಹೇಳಬೇಕಾಗಿರುವುದರಿಂದ ಹೇತುವಿಗೂ ಸಾಧ್ಯಕ್ಕೂ ಭೇದವಿಲ್ಲವೆಂದೇ ಆಗಬೇಕಾಗುವುದು. (೨) ರಜತಾಕಾರವಾದ ಜ್ಞಾನವೆನ್ನುವ ಎರಡನೇ ಪಕ್ಷವೂ ಕೂಡಲಾರದು. ಏಕೆಂದರೆ, ಜ್ಞಾನಕ್ಕೆ ರಜತಾಕಾರತ್ವವನ್ನು ಇಬ್ಬರೂ ಒಪ್ಪದಿರುವುದರಿಂದ ರಜತಾಕಾರತ್ವರೂಪವಾದ ಹೇತುವು ಅಸಿದ್ಧವಾಗುವುದು. (೩)ನೇ ಪಕ್ಷವೂ ಕೂಡಲಾರದು. ರಜತಜ್ಞಾನಕ್ಕೆ ರಜತಶಬ್ದ ವಿಷಯಕತ್ವವಿಲ್ಲದಿರುವುದರಿಂದ ಅಸಿದ್ಧಿಯು. ರಜತಶಬ್ದದ ಸ್ಮೃತಿಗೆ ಕಾರಣವಾದ ಜ್ಞಾನವೆಂದು ಇಟ್ಟುಕೊಂಡರೆ ಯಾವುದಾದರೊಂದು ಶ್ಲೋಕದಲ್ಲಿ ರಜತಾದಿಪದಕ್ಕಿಂತ ಮೊದಲು ಸುವರ್ಣಾದಿಪದವಿದ್ದರೆ ಮೊದಲು ಇರುವ ಸುವರ್ಣಾದಿ ಪದದ ಜ್ಞಾನದಿಂದ ಮೇಲೆ ಇರುವ ರಜತಾದಿ ಪದದ ಸ್ಮೃತಿಯು ಅನುಭವ ಸಿದ್ಧವಾಗಿದೆ. ಮೊದಲಿನ ಪದದ ಜ್ಞಾನಕ್ಕೆ ರಜತಪದದ

ಸ್ಮೃತಿಗೆ ಕಾರಣವಾದ ಜ್ಞಾನತ್ವವಿದೆ. ರಜತವಿಷಯಕತ್ವವಿಲ್ಲ. ಹೀಗೆ ವ್ಯಭಿಚಾರವು. (೪) ನೇ ಪಕ್ಷವೂ ಕೂಡಲಾರದು. ಭೇದಾಗ್ರಹದಿಂದ ಪ್ರವೃತ್ತಿಯಾಗುತ್ತದೆಂದು ಹೇಳುವವನು 'ಇದಂ' ಎನ್ನುವ ಜ್ಞಾನಕ್ಕೂ ರಜತಾರ್ಥ ಪ್ರವೃತ್ತಿ ಹೇತುತ್ವವನ್ನು ಒಪ್ಪಿರುವುದರಿಂದ ಅದಕ್ಕೆ ರಜತ ವಿಷಯಕತ್ವವಿಲ್ಲದಿರುವುದರಿಂದ ವ್ಯಭಿಚಾರವು. (೫) ಹಿಂದಿನ ಪಕ್ಷಗಳಲ್ಲಿಯೇ ಸೇರಿಹೋಗುವುದ ರಿಂದ 'ರಜತವೆಂದು ಜ್ಞಾನವು' ಎನ್ನುವ ಐದನೇ ಪಕ್ಷವೂ ಕೂಡಲಾರದು. (37) ಹೀಗೆ ಹೇಳಕೂಡದು. ಏಕೆಂದರೆ— ಅನ್ಯಥಾಖ್ಯಾತಿವಾದಿಯು (೧) ಶುಕ್ತಿಜ್ಞಾನವು ಶುಕ್ತಿವಿಷಯಕ ವಾದುದು ಅನ್ಯಥಾಖ್ಯಾತಿಯೆಂದು ಹೇಳುತ್ತಾನೋ? ಅಥವಾ(೨)ರಜತಜ್ಞಾನವು ಶುಕ್ತಿವಿಷಯಕ ವಾದುದು ಅನ್ಯಥಾಖ್ಯಾತಿಯೆಂದು ಹೇಳುತ್ತಾನೋ? ೧ನೇದ್ದು ಯಥಾರ್ಥಖ್ಯಾತಿಯಾದುದ ರಿಂದ ಅದು ನಮಗೆ ಇಷ್ಟವೇ. ೨ನೇ ಪಕ್ಷದಲ್ಲಿ ರಜತಜ್ಞಾನಶಬ್ದದಿಂದ ಪರರು ಯಾವ ಅರ್ಥ ವನ್ನು ಹೇಳಲು ಇಚ್ಛಿಸುವರೋ, ಅದೇ ನಮಗೆ ಹೇತುವಾಗುವುದು. (38) (೧) ಬಾಧವು ಬರುವುದರಿಂದ ರಜತದ ಜ್ಞಾನವು ಎನ್ನುವ ಒಂದನೇ ಕಲ್ಪವನ್ನು ಪರರಿಗೆ ಅಂಗೀಕರಿಸಲಿಕ್ಕೆ ಬರುವುದಿಲ್ಲ. ಅಂದರೆ ರಜತವಿಷಯಕ ಜ್ಞಾನವು ಶುಕ್ತಿವಿಷಯಕವಾಗಲಾರದು. ಅಲ್ಲದೆ ಶುಕ್ತಿ ರಜತಗಳಿಗೆ ಅಭೇದವೂ ಬರಬೇಕಾಗುವುದು. (೨) ಜ್ಞಾನವು ರಜತಾಕಾರವೆನ್ನುವುದನ್ನು ಅಂಗೀಕರಿಸದಿರುವುದರಿಂದ ಎರಡನೇದ್ದೂ ಕೂಡಲಾರದು. (೩) ನೇದ್ದೂ ಕೂಡಲಾರದು. ಏಕೆಂದರೆ— ರಜತಶಬ್ದೋಲ್ಲೇಖಿಯಾದ ಜ್ಞಾನವು ಅಂದರೆ, ರಜತಶಬ್ದದ ಸ್ಮೃತಿಗೆ ಕಾರಣ ವಾದುದು, ಶುಕ್ತಿಯನ್ನು ವಿಷಯೀಕರಿಸಿಕೊಂಡಿರುವುದು ಅನ್ಯಥಾಖ್ಯಾತಿಯೆಂದರೆ ಎಲ್ಲಿ ರಜತ ಶಬ್ದವು ಶುಕ್ತಿಯಲ್ಲಿಯೇ ಸಂಕೇತಮಾಡಲ್ಪಟ್ಟದೋ, ಅಲ್ಲಿ ಶುಕ್ತಿಜ್ಞಾನವು ರಜತಶಬ್ದದ ಸ್ಮೃತಿಗೆ ಕಾರಣವಾಗಿರುವುದರಿಂದ ಅಂತಹ ಶುಕ್ತಿಜ್ಞಾನವೂ ಶುಕ್ತಿವಿಷಯಕವಾದುದೂ ಅನ್ಯಥಾ ಖ್ಯಾತಿಯಾಗಬೇಕಾಗುವುದು. (೪)ನೇದ್ದೂ ಕೂಡಲಾರದು. ಎಲ್ಲಿ ಶುಕ್ತಿಯುದೆಯೋ ಅದರ ಕೆಳಗೆ ರಜತವಿದೆ ಎನ್ನುವ ವಾಕ್ಯವನ್ನು ಕೇಳಿದವನಿಗೆ ಶುಕ್ತಿಜ್ಞಾನವೂ ಕೂಡ ರಜತವನ್ನು ಅಪೇಕ್ಷಿಸು ವವನ ಪ್ರವೃತ್ತಿಗೆ ಕಾರಣವಾಗುವುದರಿಂದ ಅದೂ ಅನ್ಯಥಾಖ್ಯಾತಿಯಾಗಬೇಕಾಗುವುದು. (೫) ನೇದ್ದೂ ಕೂಡಲಾರದು. ಹಿಂದಿನ ಪಕ್ಷಗಳಲ್ಲಿಯೇ ಸೇರಿಹೋಗುವುದರಿಂದ ಅಲ್ಲಿ ಹೇಳಿದ ದೋಷಗಳೇ ಬರುತ್ತವೆ. ಆದಕಾರಣ ರಜತಜ್ಞಾನವೆಂದರೆ ಹಿಂದಿನ ಪಕ್ಷಗಳಲ್ಲಿ ಯಾವುದಾದ ರೊಂದನ್ನು ಅಂಗೀಕರಿಸಿ ಆ ಪಕ್ಷದಲ್ಲಿ ಹೇಳಿದ ದೋಷವನ್ನಾಗಲೀ ಪರಿಹರಿಸಬೇಕು. ಬೇರೆ ಒಂದು ಪಕ್ಷವನ್ನಾಗಲೀ ಹೇಳಬೇಕು. ಅಂತಹ ರಜತಜ್ಞಾನದಲ್ಲಿರುವ ರಜತಜ್ಞಾನತ್ವವನ್ನೇ ನಾನು ಹೇತುವನ್ನಾಗಿಟ್ಟುಕೊಳ್ಳುತ್ತೇನೆ. ಆದುದರಿಂದ ನನ್ನ ಹೇತುವನ್ನು ಖಂಡಿಸಿದ್ದು ಅತ್ಯಂತ ದೋಷಾಧಾಯಕವಲ್ಲ. (39) ಅಖ್ಯಾತಿವಾದ್ಯೇಕದೇಶಿಗಳು ರಜತವಿಷಯಕಜ್ಞಾನತ್ವ ವೆಂದೇ ಹೇತ್ವರ್ಥವನ್ನು ಅಂಗೀಕರಿಸಿ ರಜತೇತರಾವಿಷಯಕತ್ವಂ=ರಜತಕ್ಕಿಂತ ಬೇರೆ ಯಾವುದೂ ವಿಷಯವಾಗದಿರುವುದೆಂಬುವುದೇ ಸಾಧ್ಯವು ಎಂದಂಗೀಕರಿಸಿ ಹೇತುಸಾಧ್ಯಗಳು ಒಂದೇ ಆಯಿತೆ ನ್ನುವ ದೋಷವನ್ನು ಪರಿಹರಿಸುತ್ತಾರೆ. ಅದು ತಪ್ಪು. ರಜತಘಟಗಳು ಎನ್ನುವ ಸಮೂಹಾ ಲಂಬನ ಜ್ಞಾನದಲ್ಲಿ ವ್ಯಭಿಚಾರವು ಬರುವುದು. ಹೇಗೆಂದರೆ— ಆ ಜ್ಞಾನದಲ್ಲಿ ರಜತವಿಷಯಕತ್ವ ವೆನ್ನುವ ಹೇತುವಿದೆ. ರಜತಕ್ಕಿಂತ ಬೇರೆಯಾದ ಘಟವಿಷಯಕತ್ವವೂ ಇರುವುದರಿಂದ ರಜತೇ ತರಾವಿಷಯಕತ್ವರೂಪವಾದ ಸಾಧ್ಯವಿರುವುದಿಲ್ಲ. (40) ಮತ್ತು 'ಇದಂ ರಜತಂ' ಎನ್ನುವ ಜ್ಞಾನವು ಶುಕ್ತಿಸನ್ನಿಕೃಷ್ಟವಾದ ಚಕ್ಷುಸ್ಸಿನಿಂದ ಹುಟ್ಟಿರುವಪ್ರಯುಕ್ತ ಶುಕ್ತಿವಿಷಯಕವಾಯಿತು. ಆದಕಾರಣ ವಿಷಯತ್ವವು ಶುಕ್ತಿಯಲ್ಲಿಯೇ ಇದ್ದಪ್ರಯುಕ್ತ ರಜತದಲ್ಲಿಲ್ಲ. ಆದಕಾರಣ ಅಸಿದ್ಧಿಯು. ತಥಾಚ ಹಿಂದೆ ಹೇಳಿದ ಪರಿಹಾರವನ್ನೇ ಇಟ್ಟುಕೊಳ್ಳಬೇಕು. (41) ಮತ್ತು

(೧)"ಜ್ಞಾನತ್ವಂ ಯಥಾರ್ಥಮಾತ್ರವೃತ್ತಿ ಜ್ಞಾನಮಾತ್ರವೃತ್ತಿತ್ವಾತ್ ಪ್ರಮಾತ್ವವತ್"=ಜ್ಞಾನತ್ವವು ಯಥಾರ್ಥಜ್ಞಾನದಲ್ಲಿ ಮಾತ್ರ ಇರತಕ್ಕದ್ದು, ಜ್ಞಾನಕ್ಕಿಂತ ಬೇರೆ ಯಾವುದರಲ್ಲಿಯೂ ಇಲ್ಲದಿದ್ದು ಜ್ಞಾನದಲ್ಲಿ ಮಾತ್ರ ಇದ್ದಪ್ರಯುಕ್ತ ಪ್ರಮಾತ್ವದಂತೆ. (೨) "ಶುಕ್ತಿಕಾ ನ ರಜತತ್ವೇನಾವಭಾಸತೇ ತದ್ರೂಪೇಣಾಸತ್ವಾತ್ ಯತ್ ಯದ್ರೂಪೇಣಾಸತ್ ತತ್ ತದ್ರೂಪೇಣ ನಾವಭಾಸತೇ ಯಥಾ ಮೇರುಃ ಸರ್ಪತ್ವೇನ "=ಮುತ್ತಿನಚಿಪ್ಪು ರಜತರೂಪವಾಗಿ ತೋರುವುದಿಲ್ಲ, ರಜತರೂಪವಾಗಿ ಇಲ್ಲದಿರುವುದರಿಂದ, ಯಾವ ಮೇರುಪರ್ವತವು ಸರ್ಪರೂಪವಾಗಿ ಇಲ್ಲದಿರುವುದೋ ಆ ಮೇರು ಪರ್ವತವು ಸರ್ಪರೂಪವಾಗಿ ತೋರುವುದಿಲ್ಲ. (೩) "ಇದಂ ರಜತತಾದಾತ್ಮ್ಯಂ ನ ಪ್ರತ್ಯೇತುಂ ಶಕ್ಯಂ ಅಸತ್ವಾತ್ ಕೂರ್ಮರೋಮವತ್"= ಈ ರಜತದ ತಾದಾತ್ಮ್ಯವು ತಿಳಿಯಲು ಸಾಧ್ಯ ವಾದುದಲ್ಲ, ಸರ್ವಥಾ ಇಲ್ಲದಿರುವುದರಿಂದ ಕೂರ್ಮ (ಆಮೆ) ರೋಮದಂತೆ. ಆದಕಾರಣ ಅಖ್ಯಾತಿಪಕ್ಷವೇ ಶ್ರೇಷ್ಠವೆಂದು ಪ್ರಾಭಾಕರರ ಪಕ್ಷವು.

## ಸಿದ್ಧಾಂತವಿವರಣವು.

(42) ಇಷ್ಟರವರೇಗೆ .ಲೋಕದಲ್ಲಿ ಭ್ರಮೆಯೆನ್ನುವುದೇ ಇಲ್ಲ. ಜ್ಞಾನವೆಲ್ಲವೂ ಯಥಾರ್ಥವೇ. 'ಇದಂ ರಜತಂ' ಇತ್ಯಾದಿಗಳು ಎರಡು ಜ್ಞಾನಗಳು. ಈರೀತಿಯಾಗಿ ಪ್ರಾಭಾಕರರು ಸಿದ್ಧಾಂತಿಗಳು ಒಪ್ಪಿರುವ ಅನ್ಯಥಾಖ್ಯಾತಿಯನ್ನು ದೂಷಿಸಿದರು. ಇನ್ನು ಮುಂದೆ ಸಿದ್ಧಾಂತಿಗಳು ಪ್ರಾಭಾಕರರು ಹೇಳಿದ್ದ ದೋಷವನ್ನು ಅನುವಾದ ಮಾಡಿಕೊಂಡು ಸಂಪೂರ್ಣ ದೂಷಿಸಿ ಅನ್ಯಥಾಖ್ಯಾತಿ(ಭ್ರಮೆ)ಯಿದೆ ಎಂದು ಸಮರ್ಥಿಸುತ್ತಾರೆ. ಅನ್ಯಥಾಖ್ಯಾತಿಲಕ್ಷಣವನ್ನು ಅಂದರೆ ಪ್ರಾಭಾಕರರು "ಅನ್ಯಥಾ ಪರಿಣತೇ ವಸ್ತುನಿ ಖ್ಯಾತಿಃ ಅನ್ಯಥಾಖ್ಯಾತಿಃ" ಎನ್ನುವುದನ್ನಾರಂಭಿಸಿಕೊಂಡು " ಅನ್ಯಾಕಾರೋಲ್ಲೇಖಿ ಅನ್ಯಾಲಂಬನಂ " ಎನುವ ಪರ್ಯಂತ ಅಂದರೆ, ಈ ಕಲ್ಪವನ್ನು ಬಿಟ್ಟು ಇದಕ್ಕಿಂತ ಹಿಂದೆ ಇರುವ ಎಲ್ಲಾ ಅನ್ಯಥಾಖ್ಯಾತಿಲಕ್ಷಣಗಳನ್ನು ಖಂಡಿಸಿದ್ದು ನಮಗೆ ಇಷ್ಟವೇ. ಅಂತಹ ಅನ್ಯಥಾಖ್ಯಾತಿಲಕ್ಷಣವನ್ನು ಹೇಳಿರುವುದಿಲ್ಲ. ಮತ್ತೆ ವಿಷ್ಣುತತ್ವನಿರ್ಣಯದಲ್ಲಿ " ಅಸತಃ ಸತ್ವಪ್ರತೀತಿಃ ಸತಃ ಅಸತ್ವಪ್ರತೀತಿಃ ಇತ್ಯನ್ಯಥಾ ಪ್ರತೀತೇರೇವ ಭ್ರಾಂತಿತ್ವಾತ್ " ಅಯಥಾರ್ಥವನ್ನು ಯಥಾರ್ಥವೆಂದು ತಿಳಿದುಕೊಳ್ಳುವುದೂ, ಯಥಾರ್ಥವನ್ನು ಅಯಥಾರ್ಥವೆಂದು ತಿಳಿದುಕೊಳ್ಳುವುದೂ ಹೀಗೆ ಅನ್ಯಥಾ ಪ್ರತೀತಿಗೇನೇ ಭ್ರಾಂತಿತ್ವವಿರುವುದರಿಂದ ಒಂದು ವಸ್ತುವನ್ನು ಬೇರೆರೀತಿಯಾಗಿ ವಿಷಯೀಕರಿಸುವ ಜ್ಞಾನವು ಅನ್ಯಥಾಖ್ಯಾತಿಯೆಂದಂಗೀಕರಿಸುತ್ತೇವೆ. (೧) ಒಂದು ವಸ್ತುವಿಗೆ ಬೇರೆ ವಸ್ತುವಿನ ಸ್ವರೂಪತ್ವವು ಯಥಾರ್ಥ (ಸತ್ಯ)ವೋ? ಅಯಥಾರ್ಥ (ಅಸತ್ಯ)ವೋ? ಅಯಥಾರ್ಥವೆನ್ನುತ್ತೇವೆ. ಅಸತ್ತಿಗೂ ಪ್ರತೀತಿಯಿದೆ ಎಂದುಪಪಾದಿಸುತ್ತೇವೆ. (೨) ಅತ್ಯಂತಾಸತ್ತಿಗೂ ಪ್ರತೀತಿಯನ್ನು ಒಪ್ಪುವುದಾದರೆ 'ಇದಂ ರಜತಂ' ಎನ್ನುವ ಜ್ಞಾನದಲ್ಲಿ ತೋರುವ ರಜತಕ್ಕೆ ಅನ್ಯತ್ರ (ಅಂಗಡಿ ಮೊದಲಾದವುಗಳಲ್ಲಿ) ಸತ್ವವನ್ನು ಏಕೆ ಒಪ್ಪಿರುವುದು ಎಂದು ಶಂಕಿಸಿದರೆ— ತಾರ್ಕಿಕರು ರಜತವು ಬೇರೆ ಕಡೆ ಇದೆ ಎಂದು ಹೇಳಿದರೂ ನಾವು ಹೇಳುವುದಿಲ್ಲ. ಶುಕ್ತಿಯೇ ಅತ್ಯಂತಾಸತ್ತಾದ ರಜತರೂಪವಾಗಿ ದೋಷದಿಂದ ತೋರುತ್ತದೆಂದು ಅಭಿನವಾನ್ಯಥಾಖ್ಯಾತಿ ಸ್ವರೂಪವನ್ನು ಹೇಳುವೆವು. (42) 'ಇದಂ ರಜತಂ' ಎನ್ನುವ ಜ್ಞಾನವು ಶುಕ್ತಿಯಲ್ಲಿಲ್ಲದಿರುವ ರಜತಾಭೇದವನ್ನು ವಿಷಯೀಕರಿಸುವುದರಿಂದ ಭ್ರಾಂತಿಯು ಎಂದು ಹೇಳಿದ ವಿಷಯದಲ್ಲಿ ಯಾರೋ ಒಬ್ಬನು 'ಖಂಡಃ ಗೌಃ' (ಖಂಡತ್ವ ಜಾತಿಯೂ ಖಂಡರೂಪವಾದ ವ್ಯಕ್ತಿಯೂ ಒಂದೇ, ಗೋತ್ವಜಾತಿಯೂ ಗೋರೂಪವಾದ ವ್ಯಕ್ತಿಯೂ

ಒಂದೇ.) ‘ ಶುಕ್ಲಃ ಪಟಃ’ = ವಸ್ತ್ರವು ಬಿಳಿಪು ಇದು ಮೊದಲಾದ ಎಲ್ಲಾ ಸವಿಕಲ್ಪಕ ಪ್ರತ್ಯಯುಗಳೂ ವಿಭ್ರಮಗಳಾಗಬೇಕಾಗುವವು. ಸಾಮಾನಾಧಿಕರಣ್ಯಪ್ರತ್ಯಯುವು ತಾದಾತ್ಮ್ಯವಿಷಯುಕ ವಾಗಿದೆ. ಅಂತಹ ತಾದಾತ್ಮ್ಯವು ಖಂಡತ್ವ ಖಂಡ, ಗೋತ್ವ ಗೋವು ಇತ್ಯಾದಿಗಳಿಗೆ ಇರುವುದಿಲ್ಲ ಎಂದು ದೂಷಿಸಿದ್ದು ಅತ್ಯಂತ ಅಸಂಗತವೇ. ಹೇಗೆಂದರೆ— ಶುಕ್ಲಃ ಪಟಃ ಚಲತಿ = ವಸ್ತ್ರವು ಬಿಳಿಪು, ಹಂದಾಡುತ್ತದೆ, ಇದು ಮೊದಲಾದ ಸಾಮಾನಾಧಿಕರಣ್ಯಪ್ರತ್ಯಯುವು ಯಾವ ವಸ್ತುಗಳಿಗೆ ಅಭೇದವನ್ನು ವಿಷಯೀಕರಿಸುತ್ತದೆ?. ೧ ಗುಣ ಕ್ರಿಯಾ ಜಾತಿ ಇತ್ಯಾದಿ ಗಳಿಗೆ ದ್ರವ್ಯದಿಂದಲೋ? ೨ ಅಥವಾ ಗುಣಾದಿಗಳಿಗೇನೇ ಪರಸ್ಪರವಾಗಿಯೋ? ೩ ಅಥವಾ ಗುಣಾ ಶ್ರಯುಕ್ಕೆ ಕ್ರಿಯಾಶ್ರಯುದಿಂದಲೋ? ಕ್ರಿಯಾಶ್ರಯುಕ್ಕೆ ಜಾತ್ಯಾಶ್ರಯುದಿಂದಲೋ? ಎಂದರೆ— ೧ ನೇದ್ದು ಕೂಡಲಾರದು. ‘ ಶುಕ್ಲಃ ಪಟಃ’ ಎನ್ನುವುದಕ್ಕೆ ‘ ಶೌಕ್ಲ್ಯಂ ಪಟಃ’ ಎನ್ನುವ ಅರ್ಥವು ಲೌಕಿಕರಿಗೆ ಸಮ್ಮತವಲ್ಲವಷ್ಟೆ. ‘ ಚಲತಿ ಪಟಃ’ ಎನ್ನುವುದಕ್ಕೆ ಚಲನವೇ ಪಟವು ಎನ್ನುವ ಅರ್ಥವೂ ಸಮ್ಮತವಲ್ಲ, ‘ ಖಂಡಃ ಗೌಃ’ ಎನ್ನುವುದು, ಖಂಡತ್ವವು ಪಿಂಡವೇ (ಖಂಡರೂಪವಾದ ವ್ಯಕ್ತಿಯೇ) ಗೋತ್ವವೂ ಪಿಂಡವೇ (ಗೋರೂಪವಾದ ವ್ಯಕ್ತಿಯೇ) ಎನ್ನುವುದೂ ಸಮ್ಮತವಲ್ಲ. ಹಾಗಿದ್ದರೆ ಅಂದರೆ— ‘ ಶುಕ್ಲಃ ಪಟಃ’ ಇವು ಮೊದಲಾದ ಸವಿಕಲ್ಪ ಪ್ರತ್ಯಯುಗಳು ಶೌಕ್ಲ್ಯಾದಿಗಳಿಂದ ಪಟಕ್ಕೆ ತಾದಾತ್ಮ್ಯವನ್ನು ವಿಷಯೀಕರಿಸುವುದಾದರೆ ‘ ದಂಡೀ ದೇವದತ್ತಃ’ ದೇವದತ್ತನು ದಂಡವುಳ್ಳವನು ಎನ್ನುವ ಅನುಭವವೂ ಕೂಡ ದೇವದತ್ತನಿಗೂ ದಂಡಕ್ಕೂ ತಾದಾತ್ಮ್ಯ (ಅಭೇದ)ವನ್ನು ವಿಷಯೀಕರಿಸಬೇಕಾಗುವುದು. ‘ ದಂಡೀ ’ ಎನ್ನುವ ಶಾಬ್ದವ್ಯವಹಾರದಲ್ಲಿ ದಂಡವು ಇವನಿಗೆ ಇದ್ದ ಪ್ರಯುಕ್ತ ದಂಡೀ ಎನ್ನಿಸುತ್ತಾನೆ ಎಂದು ಭೇದರೂಪವಾದ ಅರ್ಥ ವನ್ನು ತಿಳಿಸಿಕೊಡತಕ್ಕ ‘ ಇನಿ ’ ಪ್ರತ್ಯಯುವನ್ನು ಪ್ರಯೋಗಿಸಿರುವ ಪ್ರಯುಕ್ತ ಜ್ಞಾನವನ್ನು ಅಂತಹುದನ್ನೇ ಕಲ್ಪಿಸುತ್ತೇವೆ. ಅಂದರೆ ದಂಡಕ್ಕೂ ದೇವದತ್ತನಿಗೂ ಭೇದವನ್ನು ವಿಷಯೀ ಕರಿಸಿರುವ ಜ್ಞಾನವೇ ಅದಾಗಿದೆ. ದಂಡಕ್ಕೂ ದೇವದತ್ತನಿಗೂ ಅಭೇದವಿಷಯುಕವಾದುದು ಅಲ್ಲ. ಆದಕಾರಣ ಅತಿಪ್ರಸಂಗವಿಲ್ಲ. ‘ ಶುಕ್ಲಃ ಪಟಃ’ ಎನ್ನುವಲ್ಲಿ ಭೇದಾರ್ಥವನ್ನು ತಿಳಿಸಿಕೊಡತಕ್ಕ ಪ್ರತ್ಯಯುವು ಇಲ್ಲದಿರುವುದರಿಂದ ಜ್ಞಾನವು ಅಭೇದ ವಿಷಯುಕವೇ ಆಗಿರುತ್ತದೆ. ಆದಕಾರಣ ಅಲ್ಲಿ ಅತಿವ್ಯಾಪ್ತಿಯೂ ಬರುವುದು, ಎಂದರೆ ಇಲ್ಲಿಯೂ ಸಮಾನವೇ. ಅಂದರೆ, ‘ ಶುಕ್ಲಃ ಅಸ್ಯಾಸ್ತೀತಿ = ಶುಕ್ಲಗುಣವು ಇದಕ್ಕೆ ಇದ್ದ ಪ್ರಯುಕ್ತ ಶುಕ್ಲ ಎನ್ನಿಸುತ್ತದೆ, ಎನ್ನುವ ಅರ್ಥದಲ್ಲಿ **‘ ಅರ್ಶ ಆದಿಭ್ಯೋಽಚ್ ’** ಎನ್ನುವ ಸೂತ್ರದಿಂದ ಭೇದಾರ್ಥಕವಾದ ಅಕಾರ ಪ್ರತ್ಯಯುವನ್ನು ವಿಧಿಸಿರುತ್ತದೆ. ‘ ಪಟಃ ಚಲತಿ ’ ಪಟವು ಹಂದಾಡುತ್ತದೆ ಇದು ಮೊದಲಾದ ಸ್ಥಳಗಳಲ್ಲಿ ಪ್ರಕೃತಿ ಪ್ರತ್ಯಯುಗಳಿಗೆ ಅರ್ಥಭೇದವು ಸ್ಪಷ್ಟವಾಗಿಯೇ ತೋರುತ್ತದೆ. ಹಾಗಾದರೆ ಭೇದಾರ್ಥಕಪ್ರತ್ಯಯುವು ಇಲ್ಲದಿರುವುದರಿಂದ ‘ ಗೌಃ ’ ಎನ್ನುವಲ್ಲಿ ಅರ್ಥಭೇದವು ಹೇಗೆಂದು ಶಂಕಿಸಿದರೆ ‘ ಗೌಃ ’ ಎನ್ನುವುದಕ್ಕೆ ಗೋತ್ವವೆಂದು ಅರ್ಥವಲ್ಲ. ‘ ಗೌಃ ’ ಎನ್ನುವುದಕ್ಕೆ ಗೋತ್ವ ವೆಂದು ಅರ್ಥವಾದರೆ ಗೋತ್ವಎನ್ನುವಲ್ಲಿ ‘ ಗೋರ್ಭಾವಃ ’ ಗೋವಿನ ಧರ್ಮವು ಗೋತ್ವವು ಎನ್ನುವ ಭೇದಾರ್ಥಕವಾದ ‘ ತ್ವ ’ ಪ್ರತ್ಯಯುವು ವ್ಯರ್ಥವಾಗಬೇಕಾಗುವುದು. ‘ ಶುಕಃ ಪಟಃ ’ ಎನ್ನುವಲ್ಲಿ ಭೇದಾರ್ಥಕವಾದ ಮತುಪ್ ಪ್ರತ್ಯಯುದ ಅರ್ಥವುಳ್ಳ ಅಕಾರ ಪ್ರತ್ಯಯುವು ಇದ್ದ ಪ್ರಯುಕ್ತವೇ ಅಭಿಜ್ಞರು ‘ ಶುಕ್ಲಃ ಪಟಃ ’ ಎಂದು ಹೇಳಿ ‘ ಶೌಕ್ಲ್ಯಂ ಪಟಸ್ಯ ’ ಪಟದ ಬಿಳಿಪು ಎಂದು ವ್ಯಾಖ್ಯಾನ ಮಾಡುವರು. ಆದ ಪ್ರಯುಕ್ತವೇ ಗುಣಾದಿಗಳಿಗೇನೇ ಪರಸ್ಪ ರವಾಗಿ ತಾದಾತ್ಮ್ಯವನ್ನು ವಿಷಯೀಕರಿಸುವುದು. ‘ ಶುಕ್ಲಃ ಪಟಃ ’ ಇದು ಮೊದಲಾದ ಸವಿಕಲ್ಪಕ ಪ್ರತ್ಯಯುವು ಎನ್ನುವ ೨ನೇ ಪಕ್ಷವೂ ಯುಕ್ತವಲ್ಲ. ‘ ಶುಕ್ಲಃ ಪಟಃ ಚಲತಿ ’

ಎನ್ನುವುದಕ್ಕೆ ಶೌಕ್ಲ್ಯವು, ಪಟತ್ವವು, ಚಲನವು, ಇವೆಲ್ಲವೂ ಒಂದೇ ಎನ್ನುವ ಅರ್ಥವು ಅಭಿಜ್ಞರ ಮನಸ್ಸಿನಲ್ಲಿ ಹೊಳೆಯುವುದಿಲ್ಲ. ಹಾಗಿದ್ದರೆ 'ದಂಡೀ ಕುಂಡಲೀ ದೇವದತ್ತಃ' ದೇವ ದತ್ತನು ದಂಡವುಳ್ಳವನು, ಕುಂಡಲವುಳ್ಳವನು. ಎನ್ನುವ ಜ್ಞಾನಕ್ಕೂ ದಂಡ, ಕುಂಡಲ, ದೇವ ದತ್ತತ್ವ ಇವುಗಳಿಗೆ ಪರಸ್ಪರ ಅಭೇದವೇ ವಿಷಯವಾಗಬೇಕಾಗುವುದು. ಇನೇ ಪಕ್ಷ ವಾದರೂ ಆಗಬಹುದು. ಗುಣಾದಿಗಳಿಗೆ ಆಶ್ರಯದಿಂದ ಭೇದವೂ ಪರಸ್ಪರವಾಗಿ ಭೇದವೂ, ಆಶ್ರಯಗಳಿಗೆ ಅಭೇದವೂ ಸ್ಪಷ್ಟವೇ? ತನಗೆ ತಾನೇ ಅಧಿಕರಣನಾಗಲಾರ ನಷ್ಟೇ. 'ಸಮಾನಂ ಅಧಿಕರಣಂ ಯೇಷಾಂ' ಎಂದು ಹೇಳಲ್ಪಟ್ಟ ಬಹುತ್ವವು ಭೇದವ್ಯಾಪ್ತ ವಾಗಿರುವುದರಿಂದ ಪರಸ್ಪರವಾಗಿ ಅಭೇದವಿದ್ದರೆ ಕೂಡಲಾರದಷ್ಟೆ. ಆಶ್ರಯಗಳಿಗೆ ಭೇದ ವಿದ್ದರೆ ಆ ಆಶ್ರಯಕ್ಕೆ ಏಕತ್ವವಿರುವುದಿಲ್ಲ ತಥಾಚ ಗುಣಾಶ್ರಯಕ್ಕೆ ಕ್ರಿಯಾಶ್ರಯದಿಂದ ಅಭೇದವು ಇದ್ದೇ ಇರುತ್ತದೆ. ಗುಣಾಶ್ರಯಕ್ಕೆ ಕ್ರಿಯಾಶ್ರಯದಿಂದ ಭೇದವದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದಲೇ ಅವುಗಳಿಗೆ ಅಭೇದವನ್ನು ಅಂಗೀಕರಿಸಬೇಕು ತಥಾಚ ಗುಣಾ ದ್ಯಾಶ್ರಯಗಳಿಗೆ ಭೇದವಿದೆ ಎನ್ನುವಲ್ಲಿ ಪ್ರಮಾಣವಿಲ್ಲ. (44) ಗುಣವಿಶಿಷ್ಟ, ಕ್ರಿಯಾವಿಶಿಷ್ಟ ಗಳಿಗೆ ಭೇದವು ಪ್ರತ್ಯಕ್ಷ ಸಿದ್ಧವಾಗಿದೆ ಎಂದರೆ— ನಾವು ಗುಣಾಶ್ರಯದಿಂದ ಅಭೇದವನ್ನು ಹೇಳುವೆವು. ಗುಣವಿಶಿಷ್ಟ ಕ್ರಿಯಾವಿಶಿಷ್ಟಗಳಿಗೆ ಅಭೇದವನ್ನು ಹೇಳುವುದಿಲ್ಲ. ಅವುಗಳಿಗೆ ಭೇದವೇ. ಹಾಗಾದರೆ ಗುಣವಿಶಿಷ್ಟವಾದುದೇ ಗುಣಗಳಿಗೆ ಆಶ್ರಯವಾಗಿದೆ. ಕ್ರಿಯಾವಿಶಿಷ್ಟ ವಾದುದೇ ಕ್ರಿಯೆಗಳಿಗೆ ಆಶ್ರಯವಾಗಿದೆ. ಗುಣಾಶ್ರಯ, ಕ್ರಿಯಾಶ್ರಯಗಳಿಗೆ ಅಭೇದವಿದ್ದರೆ ವಿಶಿಷ್ಟಗಳಿಗೇನೇ ಅಭೇದವು ಪ್ರಾಪ್ತವಾಯಿತೆಂದು ಹೇಳಕೂಡದು. ಆತ್ಮಾಶ್ರಯತ್ವವು ಬರುವುದ ರಿಂದ ಗುಣವಿಶಿಷ್ಟವಾದುದಕ್ಕೆ ಗುಣಾಶ್ರಯತ್ವವಿರುವುದಿಲ್ಲ. ಕ್ರಿಯಾವಿಶಿಷ್ಟವಾದುದಕ್ಕೆ ಕ್ರಿಯಾ ಶ್ರಯತ್ವವಿರುವುದಿಲ್ಲ. ತಥಾಚ ವಿಶಿಷ್ಟಗಳಿಗೆ ಭೇದವಿದ್ದರೂ ಗುಣವಿಶಿಷ್ಟವಾದುದು ಗುಣಾದಿ ಗಳಿಗೆ ಆಶ್ರಯವಲ್ಲ. ಮತ್ತೆ ಗುಣಾದ್ಯಾಶ್ರಯದಿಂದ ಆಶ್ರಿತವಾದ ಬೇರೊಂದು ವಸ್ತುವು. ಭಿನ್ನಾಭಿನ್ನವಾದ ಬೇರೊಂದು ಪದಾರ್ಥವೇ. ಏವಂಚ ವಿಶಿಷ್ಟಗಳಿಗೆ ಭೇದವಿದ್ದರೂ ಗುಣಾದ್ಯಾ ಶ್ರಯಗಳಿಗೆ ಅಭೇದವೇ. ಏವಂಚ ಎಲ್ಲಿ ಭೇದವಿರುವುದೋ ಅಲ್ಲಿ ಅಭೇದವು ತೋರುವುದಿಲ್ಲ. ಯಾವುದು ಅಭೇದದಿಂದ ತೋರುತ್ತದೋ ಅಲ್ಲಿ ಭೇದವಿಲ್ಲ. ಆದಪ್ರಯುಕ್ತ ನಾನು ಹೇಳಿದ ಅನ್ಯಥಾ ಖ್ಯಾತಿಲಕ್ಷಣಕ್ಕೆ ನೀನು ಹೇಳಿದ ಅತಿವ್ಯಾಪ್ತಿಯು ಕೂಡುವುದಿಲ್ಲ. (45) ಅಹುದು. ಆದರೆ ಯಾವದ್ರವ್ಯಭಾವಿಗಳಾದ ಜ್ಞಾನ ಮೊದಲಾದ ಗುಣಗಳಿಗೆ ಆಶ್ರಯವಾದ ಜೀವ ಚೈತನ್ಯ ದಿಂದಲೂ ಪರಸ್ಪರವಾಗಿಯೂ ಅಭೇದವೆಂದು ಸೂತ್ರವನ್ನು ಮಾಡಿರುವ ವೇದವ್ಯಾಸರದ್ದೂ, ಭಾಷ್ಯ ಕರ್ತೃಗಳಾದ ಶ್ರೀಮದಾಚಾರ್ಯರದ್ದೂ ಸಿದ್ಧಾಂತವು. ಯಾವದ್ದ್ರವ್ಯಭಾವಿಯಲ್ಲದ ಘಟರೂಪಾದಿಗಳಲ್ಲಿ ಭೇದಾಭೇದಗಳೆಂದೂ ಸಿದ್ಧಾಂತವು. ಸಾಮಾನಾಧಿಕರಣ್ಯಪ್ರತೀತಿಯಾ ದರೂ ಭೇದವನ್ನು ವಿಷಯೀಕರಿಸುವುದೆಂದು ಹೇಳಿಯಾಗಿದೆ. ತಥಾಚ ಸಾಮಾನಾಧಿಕರಣ್ಯಪ್ರತೀ ತಿಯು ಅತ್ಯಂತ ಭೇದವನ್ನು ವಿಷಯೀಕರಿಸುತ್ತದೆಂದು ಹೇಳಿರುವುದರಿಂದ ಅತ್ಯಂತಾಭೇದಸ್ಥಳ ದಲ್ಲಿಯೂ, ಭೇದಾಭೇದ ಸ್ಥಳದಲ್ಲಿಯೂ ಸಾಮಾನಾಧಿಕರಣ್ಯಪ್ರತ್ಯಯವು ಭೇದವನ್ನು ವಿಷಯೀ ಕರಿಸುತ್ತದೆಂದು ಪ್ರಾಪ್ತವಾಗುವುದರಿಂದ 'ಶುಕ್ಲಃ ಪಟಃ' ಇದುಮೊದಲಾದ ಜ್ಞಾನಗಳು ಇಲ್ಲ ದಿರುವ ಭೇದವನ್ನು ವಿಷಯೀಕರಿಸುವುದರಿಂದ ಭ್ರಮಗಳು ಆಗಬೇಕಾಗುವುವು, ಎಂದು ಹೇಳ ಕೂಡದು. ಏಕೆಂದರೆ— ಅತ್ಯಂತಾಭೇದಸ್ಥಳದಲ್ಲಿ ಸಾಮಾನಾಧಿಕರಣ್ಯಪ್ರತೀತಿಯು ಅಭೇದ ವಿಷಯಕವೇ. ಭೇದವಿಷಯಕವೆಂದು ವ್ಯಾಖ್ಯಾನವಾದರೂ ವಿಶೇಷವು ಭೇದಕಾರ್ಯವನ್ನು ಮಾಡುತ್ತದೆಂದು ಅಂಗೀಕರಿಸಿರುವುದರಿಂದ ಸವಿಶೇಷಾಭೇದವನ್ನು ಅಂಗೀಕರಿಸಿ ಯುಕ್ತ

ವಾಗುತ್ತದೆ. ಎಲ್ಲಿ ಭೇದಾಭೇದಗಳೋ ಅಲ್ಲಿ ಯಾವ ದೋಷವೂ ಇರುವುದಿಲ್ಲ. ಅಂತೂ ಸಾಮಾನಾಧಿಕರಣ್ಯ ಪ್ರತೀತಿಯು ತಾದಾತ್ಮ್ಯವನ್ನು ವಿಷಯೀಕರಿಸಿಕೊಂಡಿದ್ದರೂ ತಾದಾತ್ಮ್ಯವು ಇದ್ದದ್ದೇ ಆಗಿರುವ ಪ್ರಯುಕ್ತ ಅತಿವ್ಯಾಪ್ತಿಯಿಲ್ಲ. (46) ಪುನಃ 'ಅನ್ಯಾಕಾರೋಲ್ಲೇಖಿ' ಇತ್ಯಾದಿಗಳಿಂದ ನಮಗಿಷ್ಟವಾದ ಅನ್ಯಥಾಖ್ಯಾತಿಗೆ ಅನುಭವ ವಿರೋಧವನ್ನು ಪ್ರತಿಜ್ಞಾ ಮಾಡಿ ಅದನ್ನುಪಪಾದಿಸುವುದಕ್ಕಾಗಿ 'ಯುತ್ಸನ್ನಿಕೃಷ್ಟಕರಣೇನ' ಎನ್ನುವ ತನಕ ಆಲಂಬನ ಲಕ್ಷಣವನ್ನು ಪ್ರತಿಜ್ಞಾಮಾಡಿ ಅದನ್ನುಪಪಾದಿಸುವುದಕ್ಕಾಗಿ 'ಯುತ್ಸನ್ನಿಕೃಷ್ಟಕರಣೇನ' ಎನ್ನುವ ತನಕ ಆಲಂಬನ ಲಕ್ಷಣವನ್ನು ನಿರಾಕರಿಸಿದ್ದು ನಮಗಿಷ್ಟವೇ. "ಯದ್ವಿಜ್ಞಾನಂ ಯುತ್ಸನ್ನಿಕೃಷ್ಟಕರಣೇನ ಜನ್ಯತೇ ಸ ತಸ್ಯ ವಿಷಯಃ" ಯಾವ ವಿಜ್ಞಾನವು ಯಾವ ವಸ್ತುವಿನಲ್ಲಿ ಸಂಬದ್ಧವಾದ ಇಂದ್ರಿಯದಿಂದ ಹುಟ್ಟುತ್ತದೋ ಅದು ಅಸಕ್ಕೆ ವಿಷಯುವು ಎಂದಂಗೀಕರಿಸಿರುತ್ತೇವೆ. (47) ಹಾಗಾದರೆ ಇಲ್ಲಿಯೂ ದೋಷವು ಹೇಳಲ್ಪಟ್ಟದೆ ಎನ್ನಕೂಡದು. ಸನ್ನಿಕರ್ಷವೂ ಕಾರಣವೆಂದು ವಿವಕ್ಷಿತವಾಗಿರುವುದರಿಂದ ಅದಕ್ಕೆ ಕಾರಣೀಭೂತವಾದ ಸಂಬಂಧ ವಿರುವುದಿಲ್ಲ. ಕಣ್ಣು ಮೊದಲಾದುದಕ್ಕೆ ಆಕಾಶಾದಿಗಳಿಂದ ಸಂಬಂಧವು ರೂಪಾದಿಗಳ ಜ್ಞಾನವನ್ನು ಹುಟ್ಟಿಸಲಿಕ್ಕೆ ಕಾರಣವಾಗಲಾರದು. ವಾಕ್ಯಕ್ಕೆ ಆಕಾಶಾದಿಗಳಿಂದ ಸಂಬಂಧವು ವಾಕ್ಯಾರ್ಥಜ್ಞಾನಕ್ಕೆ ಹೇತುವಾಗಲಾರದು. ಲಿಂಗಜ್ಞಾನಕ್ಕೆ ಆತ್ಮನಿಂದ ಸನ್ನಿಕರ್ಷವು ಲಿಂಗಿಜ್ಞಾನಕ್ಕೆ ಕಾರಣವಲ್ಲ. ಮತ್ತೆ ಆ ಸನ್ನಿಕರ್ಷಗಳು ಅವರ್ಜನೀಯ ಸನ್ನಿಧಿಗಳು. (48) ಧೂಮಾದಿ ರೂಪಲಿಂಗಕ್ಕೆ ಪರ್ವತಾದಿಗಳಿಂದ ಸಂಬಂಧವು ವಹ್ನಿಮೊದಲಾದ ಲಿಂಗಿಜ್ಞಾನಕ್ಕೆ ಕಾರಣವು ಎಂದು ಹೇಳಕೂಡದು. ಅತೀತಾದಿ ಸ್ಥಲದಲ್ಲಿಯೂ ಅನುಮಿತಿಯು ದೃಷ್ಟವಾಗಿರುವುದರಿಂದ ಲಿಂಗಜ್ಞಾನವೇ ಕಾರಣವೆಂದು ಅಂಗೀಕರಿಸಿರುತ್ತೇವೆ ಶ್ರೋತ್ರ ಸನ್ನಿಕೃಷ್ಟವಾದ ವಾಕ್ಯದಿಂದ ಹುಟ್ಟಿರುವ ವಾಕ್ಯಾರ್ಥಜ್ಞಾನವನ್ನು ಕುರಿತು ಶ್ರೋತ್ರವು ವಿಷಯವಾಗಬೇಕಾಗುವುದು ಎನ್ನುವ ದೂಷಣವು ವಾಕ್ಯಕ್ಕೆ ಕಾರಣತ್ವವಿಲ್ಲದಿರುವುದರಿಂದ ಪರಿಹರಿಸಬೇಕು. ಅಂದರೆ, ವಾಕ್ಯಜ್ಞಾನಕ್ಕೇನೇ ವಾಕ್ಯಾರ್ಥ ಜ್ಞಾನದಲ್ಲಿ ಕಾರಣತ್ವವನ್ನು ಅಂಗೀಕರಿಸಿರುತ್ತೇವೆ. ಆದಾಗ್ಯೂ ಪ್ರತ್ಯಭಿಜ್ಞೆಯಲ್ಲಿ ಚಕ್ಷುರಾದಿಗಳಿಗೆ 'ಸಃ' ಎನ್ನುವ ತತ್ತಾಂಶದಿಂದಲೂ ಲಿಂಗಜ್ಞಾನಕ್ಕೆ ಲಿಂಗಿಯಿಂದಲೂ ವಾಕ್ಯಜ್ಞಾನಕ್ಕೆ ವಾಕ್ಯಾರ್ಥದಿಂದಲೂ ಸನ್ನಿಕರ್ಷವಿಲ್ಲದಿರುವುದರಿಂದ ಅವುಗಳಿಗೆ ಅವಿಷಯತ್ವವು ಬರಬೇಕಾಗುವುದು. ಅಂದರೆ, ಅವ್ಯಾಪ್ತಿಯು ಎಂದು ಹೇಳಕೂಡದು. ಅಸನ್ನಿಕೃಷ್ಟವಾದುದನ್ನು ತಿಳಿಸಿದರೆ ಅತಿಪ್ರಸಂಗವು ಬರುವುದು. (49) ತತ್ತಾನುಭವ ( = ಅತೀತ ದೇಶಕಾಲಗಳ ಸಂಬಂಧ ಜ್ಞಾನ) ದಿಂದ ಹುಟ್ಟಿರುವ ಸಂಸ್ಕಾರದಿಂದ, ಕೂಡಿರುವ ಇಂದ್ರಿಯದಿಂದ ಪ್ರತ್ಯಭಿಜ್ಞೆಯು ಹುಟ್ಟುತ್ತದೆ. ಲಿಂಗಿಯಿಂದ ವ್ಯಾಪ್ತವಾದ ಲಿಂಗವಿಷಯಕವಾದ ಲಿಂಗಜ್ಞಾನದಿಂದ ಲಿಂಗಿಜ್ಞಾನವು ಹುಟ್ಟುತ್ತದೆ. ಸಂಸರ್ಗವೇ ಧರ್ಮವಾಗಿ ಉಳ್ಳ ಪದಾರ್ಥಗಳನ್ನು ಹೇಳುವ ಪದಸಮುದಾಯರೂಪವಾದ ವಾಕ್ಯವೇ ವಿಷಯವಾಗಿವುಳ್ಳ ಜ್ಞಾನದಿಂದ ವಾಕ್ಯಾರ್ಥಜ್ಞಾನವು ಹುಟ್ಟುತ್ತದೆ. ಆದ ಪ್ರಯುಕ್ತ ಅತಿಪ್ರಸಂಗವಿಲ್ಲವೆಂದುಹೇಳಿದರೆ ಸನ್ನಿಕರ್ಷವು ಅಂಗೀಕೃತವಾದ ಹಾಗೆ ಆಯಿತು. ಸಂಯೋಗಾದಿಗಳೇ ಸನ್ನಿಕರ್ಷವಲ್ಲ. ಮತ್ತೆ ಸಂಬಂಧಮಾತ್ರವು. ಆದಾಗ್ಯೂ ರೂಪಪ್ರತೀತಿಗೆ ಆತ್ಮನು ವಿಷಯನಾಗಬೇಕಾಗುವನು. ಆ ಜ್ಞಾನಕ್ಕೆ ಮನಸ್ಸು ಕಾರಣವಾಗಿರುತ್ತದೆ. ಆತ್ಮ ಮನಸ್ಸನ್ನಿಕರ್ಷವೂ ರೂಪಜ್ಞಾನಕ್ಕೆ ಕಾರಣವಾಗಿದೆ ಎಂದು ಹೇಳಕೂಡದು. ಜ್ಞಾನಾಸಾಧಾರಣಕಾರಣದಿಂದ ಸನ್ನಿಕೃಷ್ಟವಾದುದೇ ಆ ಜ್ಞಾನಕ್ಕೆ ವಿಷಯವೆಂದು ವಿವಕ್ಷಿತವಾಗಿದೆ. ರೂಪಪ್ರತೀತಿಗೆ ಮನಸ್ಸು ಸಾಧಾರಣ ಕಾರಣವಾಗಿದೆ. ಅಸಾಧಾರಣ ಕಾರಣವಲ್ಲ. ಹಾಗಾದರೆ ಮನಸ್ಸನ್ನಿಕೃಷ್ಟವಾದ

ಕಣ್ಣಿನಿಂದ ಹುಟ್ಟತಕ್ಕ ರೂಪಜ್ಞಾನಕ್ಕೆ ಮನಸ್ಸು ವಿಷಯುವೆಂದು ಆಗಬೇಕಾಗುವುದು. ಹೀಗೆ ಹೇಳಕೂಡದು. ಸನ್ನಿಕರ್ಷವೂ ಅಸಾಧಾರಣ ಕಾರಣವೆಂದು ವಿವಕ್ಷಿತವಾಗಿದೆ, ಅಂದರೆ, ಆ ಜ್ಞಾನಾಸಾಧಾರಣಕಾರಣದಿಂದ ಆ ಜ್ಞಾನಾಸಾಧಾರಣಕಾರಣವಾದ ಸನ್ನಿಕರ್ಷವುಳ್ಳದ್ದೇ ಆ ಜ್ಞಾನಕ್ಕೆ ವಿಷಯುವೆಂದು ವಿವಕ್ಷಿತವಾಗಿದೆ, ರೂಪಜ್ಞಾನದಲ್ಲಿ ಮನಸ್ಸು ಅಸಾಧಾರಣ ಕಾರಣವೇ ಅಲ್ಲ. ಆದುದರಿಂದ ಆ ಮನಸ್ಸನ್ನಿಕರ್ಷವು ಆತ್ಮನಲ್ಲಿದ್ದರೂ ಆತ್ಮನು ರೂಪಜ್ಞಾನಕ್ಕೆ ವಿಷಯನಾಗುವುದಿಲ್ಲ ರೂಪಜ್ಞಾನಕ್ಕೆ ಚಕ್ಷುರಿಂದ್ರಿಯುವು ಅಸಾಧಾರಣಕಾರಣವಾದರೂ ಚಕ್ಷುಸ್ಸಿಗೂ ಮನಸ್ಸಿಗೂ ಇರತಕ್ಕ ಸನ್ನಿಕರ್ಷವು ರೂಪಜ್ಞಾನಕ್ಕೆ ಅಸಾಧಾರಣಕಾರಣವಲ್ಲ. ಆದುದರಿಂದ ಆ ಚಕ್ಷುಸ್ಸನ್ನಿಕರ್ಷವು ಮನಸ್ಸಿನಲ್ಲಿದ್ದರೂ ರೂಪಜ್ಞಾನಕ್ಕೆ ಮನಸ್ಸು ವಿಷಯುವಲ್ಲ. ಆ ಚಕ್ಷುರ್ಮನಸ್ಸನ್ನಿಕರ್ಷವು ಪೃಥಿವೀ ಮೊದಲಾದ ಎಲ್ಲಾ ದ್ರವ್ಯಾದಿಗಳ ಜ್ಞಾನಕ್ಕೂ ಸಾಧಾರಣಕಾರಣವೇ. (50) ಇದೇ ಪ್ರಕಾರ ಬೇರೆ ಕ್ಷುದ್ರೋಪದ್ರವಗಳನ್ನೂ ಪರಿಹರಿಸಬೇಕು. ಅಂದರೆ— ಲಿಂಗಜ್ಞಾನ ವಾಕ್ಯಜ್ಞಾನಗಳಿಗೆ ಲಿಂಗವಾಕ್ಯಗಳಿಂದ ಆಗತಕ್ಕ ಸಂಬಂಧವು ವಿಷಯುತ್ವರೂಪವಾಗಿರುವುದರಿಂದ 'ವಿಷಯೀ' ಎಂದು ಹೇಳಿದರೂ ವಿಷಯುತ್ವರೂಪವಾಗಿ ಪ್ರವೇಶವಿಲ್ಲ. ಮತ್ತೆ ವಿಷಯುತ್ವದಿಂದ ವ್ಯಾಪ್ತವಾದ ಲಿಂಗಸಂಬಂಧಿಯಿಂದಲೂ ವಾಕ್ಯಾರ್ಥಪರವಾದ ವಾಕ್ಯಸಂಬಂಧಿಯಿಂದಲೂ ಪ್ರವೇಶವು. ಆದಕಾರಣ ಆತ್ಮಾಶ್ರಯುತ್ವವಿಲ್ಲ. ನಿತ್ಯಜ್ಞಾನವಿಷಯಾದಿಗಳಲ್ಲಿ ಅವ್ಯಾಪ್ತಿಯೂ ಇರುವುದಿಲ್ಲ. ಅನಿತ್ಯ ಜ್ಞಾನವಿಷಯುವೇ ಲಕ್ಷ್ಯವಾಗಿರುವುದರಿಂದ ಬೇರೆ ಯಾವುದೂ ಲಕ್ಷ್ಯವೇ ಅಲ್ಲ. ಯೋಗಿಪ್ರತ್ಯಕ್ಷವಿಷಯುವಲ್ಲಿಯಾದರೂ ಯೋಗಜಧರ್ಮವೇ ಸಂಬಂಧರೂಪವು. ಆದಕಾರಣ ಈ ರೀತಿಯಾಗಿ ಜನ್ಯಜ್ಞಾನಗಳಲ್ಲಿ ವಿಷಯುತ್ವವನ್ನು ಬೇರೆ ಪ್ರಕಾರ ವ್ಯವಸ್ಥೆ ಮಾಡಿರುವುದರಿಂದ ಅಂದರೆ 'ಯತ್ಸನ್ನಿಕೃಷ್ಟಕರಣೇನ ಯಜ್ಜ್ಞಾನಂ ಜಾಯತೇ ಸ ತಸ್ಯ ವಿಷಯಃ' ಎಂದು ವಿಷಯುಲಕ್ಷಣವನ್ನು ನೀನು ಹೇಳಿದ ದೋಷವನ್ನು ಪರಿಹರಿಸಿ ವ್ಯವಸ್ಥೆಮಾಡಿರುವುದರಿಂದ 'ಯತ್ಸನ್ನಿಕೃಷ್ಟಕರಣೇನ' ಎನ್ನುವ ವಿಷಯುಲಕ್ಷಣವನ್ನು ದೂಷಿಸಿ 'ಯಜ್ಜ್ಞಾನಂ ಯತ್ಪ್ರತಿಭಾಸಂ ತದೇವ ತಸ್ಯಾಲಂಬನಂ' ಎಂದು ಬೇರೆ ಪ್ರಕಾರ ವಿಷಯುಲಕ್ಷಣವನ್ನು ಹೇಳಿರುವುದು ಅಯುಕ್ತವು. (51) ರಜತಜ್ಞಾನದಲ್ಲಿ ಶುಕ್ತಿಯು ತೋರುತ್ತದೋ ಇಲ್ಲವೋ ಇದುಮೊದಲಾದವುಗಳಿಂದ ರಜತಜ್ಞಾನದಲ್ಲಿ ಶುಕ್ತಿಯು ವಿಷಯುವೆನ್ನುವುದು ಅನುಭವವಿರುದ್ಧವೆಂದು ಹೇಳಿರುತ್ತದೆ; ಎಂದರೆ— ಹೀಗೆ ಅನುಭವವಿರೋಧವಿಲ್ಲವು. ರಜತಜ್ಞಾನವು ಶುಕ್ತಿಸನ್ನಿಕೃಷ್ಟವಾದ ಕಣ್ಣಿನಿಂದ ಹುಟ್ಟತಕ್ಕುದಾದ ಪ್ರಯುಕ್ತ ರಜತಜ್ಞಾನದಲ್ಲಿ ಶುಕ್ತಿಯು ವಿಷಯುವಾಗಬಹುದು. ರಜತವು ತೋರುತ್ತದೆ, ಶುಕ್ತಿಯು ಆಲಂಬನವು ಎಂದಾದರೆ ಘಟಜ್ಞಾನದಲ್ಲಿ ಘಟವು ತೋರುತ್ತದೆ, ಪಟವು ವಿಷಯುವಾಗಲಿ ಎನ್ನುವ ಅತಿಪ್ರಸಂಗವು ಬರುವುದೆಂದರೆ ಒಂದು ವಸ್ತುವು ತೋರುತ್ತದೆ, ಮತ್ತೊಂದು ವಿಷಯುವು ಎನ್ನುವುದು ದೋಷದಿಂದ ಹುಟ್ಟಿರುವ ಜ್ಞಾನಸ್ಥಳದಲ್ಲಿಯೇ ಎಂದು ವ್ಯವಸ್ಥೆಮಾಡಿರುವುದರಿಂದ ಅತಿಪ್ರಸಂಗ ಬರುವುದಿಲ್ಲ. (52) ರಜತಾವಭಾಸಸ್ಯ=ರಜತಜ್ಞಾನಕ್ಕೆ ರಜತವೇ ವಿಷಯುವಾಗಿದ್ದರೆ ರಜತವು ಇರಬೇಕು ಎಂದಾಶಂಕಿಸಿದ್ದಕ್ಕೆ— "ಆ ರಜತವು ಬೇರೆಕಡೆಯಲ್ಲಿದೆ, ಆ ರಜತಜ್ಞಾನವು ಸ್ಮೃತಿರೂಪವು, 'ಇದಂ' ಎನ್ನುವುದು ಅನುಭವರೂಪವು, 'ಇದಂ ರಜತಂ' ಎನ್ನುವುದು ಅಗೃಹೀತಭೇದವುಳ್ಳ ಎರಡು ಜ್ಞಾನಗಳು" ಎಂದು ಪ್ರಾಭಾಕರರು ಹೇಳಿದ ಸಮಾಧಾನವು 'ಶುಕ್ತಿಯನ್ನೇ ರಜತವನ್ನಾಗಿ ತಿಳಿಯುತ್ತೇನೆಂದು ವಿಶಿಷ್ಟವಾದ ಒಂದೇ ಜ್ಞಾನವೆಂದು ಸರ್ವಾನುಭವಸಿದ್ಧವಾಗಿರುವುದರಿಂದ ಅಯುಕ್ತವು.' (53) 'ಯದ್ಧಿ ಜ್ಞಾನಂ ಯತ್ಪ್ರತಿಭಾಸಂ ತತ್ ತದ್ವಿಷಯಂ'= ಯಾವ ಜ್ಞಾನದಲ್ಲಿ ಯಾವುದು ತೋರುತ್ತದೋ ಅದಕ್ಕೆ ಅದು ವಿಷಯುವು ಎಂದೇ ವ್ಯವಸ್ಥೆ

ಯಾಗಲಿ, ಆದಾಗ್ಯೂ ಅನುಭವವಿರೋಧವಿಲ್ಲ. ರಜತಜ್ಞಾನಕ್ಕೆ ಶುಕ್ತಿತ್ವವು ವಿಷಯವೆಂದು ಹೇಳಿದರೆ ಅನುಭವವಿರೋಧವನ್ನು ಹೇಳುವಿರೋ? ಅಥವಾ ಇದಂತ್ವಾಕಾರಕ್ಕೆ ರಜತಜ್ಞಾನವು ವಿಷಯವೆಂದು ಹೇಳಿದರೆ ಅನುಭವವಿರೋಧವನ್ನು ಹೇಳುತ್ತೀರೋ? ಈ ಎರಡರಲ್ಲಿ ಒಂದನೇದ್ದು ಇಷ್ಟವೇ. ಏಕೆಂದರೆ— 'ಇದಂ ರಜತಂ' ಎನ್ನುವ ಜ್ಞಾನದಲ್ಲಿ ಶುಕ್ತಿತ್ವವು ತೋರುತ್ತದೆಂದು ಹೇಳುವುದಿಲ್ಲ. ಶುಕ್ತಿತ್ವಜ್ಞಾನವು ರಜತಜ್ಞಾನಕ್ಕೆ ವಿರೋಧಿಯಾದುದರಿಂದ ಶುಕ್ತಿತ್ವಜ್ಞಾನ ವಿದ್ದರೆ ರಜತಜ್ಞಾನವೇ ಬರಲಾರದು. ಎರಡನೇ ಕಲ್ಪದಲ್ಲಿ ಯಾವ ವಿರೋಧವೂ ಇಲ್ಲ. ಇದಂತ್ವಾಕಾರಜ್ಞಾನಕ್ಕೂ ರಜತಜ್ಞಾನವನ್ನು ಕುರಿತು ವಿರೋಧವಿದ್ದರೆ ಸತ್ಯರಜತಸ್ಥಳದಲ್ಲಿಯೂ ಇದು ಬೆಳ್ಳಿಯು ಎಂದು ಪ್ರತೀತಿಯು ಬಾರದೆ ಹೋಗಬೇಕಾಗುವುದು. ಇದಂತ್ವಾಕಾರಕ್ಕೆ ರಜತಜ್ಞಾನ ವಿಷಯತ್ವವನ್ನು ಒಪ್ಪದಿದ್ದವರಿಗೇನೇ ಪ್ರತೀತಿವಿರೋಧವು ಬರುವುದು. ಹೀಗಾದರೆ ರಜತಕ್ಕೂ 'ಇದಂ ರಜತಂ' ಎನ್ನುವ ಜ್ಞಾನವಿಷಯತ್ವವು ಬರಬೇಕಾಗುವುದು ಎಂದರೆ ಇಷ್ಟವೇ. 'ಇದಂ ರಜತಂ' ಎನ್ನುವುದನ್ನು ಒಂದೇ ಜ್ಞಾನವೆಂದು ಒಪ್ಪಿರುವುದರಿಂದ ಪ್ರಾಭಾಕರರ ಮತ ವನ್ನು ಪ್ರವೇಶಿಸಿದಂತೆ ಆಗಲಿಲ್ಲ. (54) ಅನ್ಯಥಾಖ್ಯಾತಿ (ಭ್ರಮೆ)ಯು ಹುಟ್ಟಲಿಕ್ಕೆ ಕಾರಣ ವಿಲ್ಲವೆಂದು ಪ್ರಾಭಾಕರರು ಹೇಳಿದ್ದು ಯುಕ್ತವಲ್ಲ. ಇಂದ್ರಿಯಾದಿಗಳೇ ಅದಕ್ಕೆ ಕಾರಣಗಳು. ಇಂದ್ರಿಯ ಮೊದಲಾದವುಗಳು ಒಳ್ಳೇ ಜ್ಞಾನಕ್ಕೆ ಕಾರಣಗಳಾದಾಗ್ಯೂ ದೋಷದಿಂದ ಕೂಡಿದ್ದರೆ ಭ್ರಾಂತಿಗೂ ಕಾರಣವಾಗಬಹುದು. ದೋಷಗಳು ಕರಣಗಳ ಸ್ವಾಭಾವಿಕಶಕ್ತಿಯನ್ನು ಹಾಳು ಮಾತ್ರ ಮಾಡುತ್ತವೆ. ಅವುಗಳಿಗೆ ವಿಪರೀತ ಶಕ್ತಿಯನ್ನು ತಂದುಕೊಡುವುದಿಲ್ಲ ಎಂದು ಹೇಳಕೂಡದು. ಹಾಗಿದ್ದರೆ ಯಥಾರ್ಥವ್ಯವಹಾರಕ್ಕೆ ಕಾರಣವಾದ ವಿಜ್ಞಾನದಿಂದ ಅಯ ಥಾರ್ಥ ವ್ಯವಹಾರವು ಹುಟ್ಟದೆ ಹೋಗಬೇಕಾಗುವುದು. (55) ಮತ್ತು ೧. ಎಲ್ಲಾ ಸಹಕಾರಿ ಕಾರಣಗಳೂ ವಿಪರೀತ ಶಕ್ತಿಯನ್ನುಂಟುಮಾಡುವುದಿಲ್ಲವೋ? ೨. ಅಥವಾ ದೋಷಗಳೇ ವಿಪರೀತ ಶಕ್ತಿಯನ್ನುಂಟುಮಾಡುವುದಿಲ್ಲವೋ? ಈ ಎರಡರಲ್ಲಿ ಒಂದನೇ ಕಲ್ಪದಲ್ಲಿ ಪಶು ಹಿಂಸೆಗೆ ಧರ್ಮವನ್ನುಂಟುಮಾಡುವುದರಲ್ಲಿ ಸ್ವಾಭಾವಿಕ ಶಕ್ತಿಯಿರುವುದೋ? ಅಧರ್ಮ ವನ್ನುಂಟುಮಾಡುವುದರಲ್ಲಿಯೋ? ೧ನೇ ಕಲ್ಪದಲ್ಲಿ ಅಂದರೆ, ಧರ್ಮವನ್ನು ಹುಟ್ಟಿಸುವುದ ರಲ್ಲಿಯೇ ಸ್ವಾಭಾವಿಕಶಕ್ತಿಯಿರುವುದಾದರೆ ಯಾಗಕ್ಕೆ ಅಂಗವಲ್ಲದಿರುವ (ಅಂದರೆ ಕಟುಕರು ತಿನ್ನುವುದಕ್ಕಾಗಿ ಮಾಡುವ) ಪಶುಹಿಂಸೆಯೂ ಧರ್ಮವನ್ನು ಏಕೆ ಹುಟ್ಟಿಸಲಾರದು? ೨ನೇ ಕಲ್ಪದಲ್ಲಿ ಅಂದರೆ, ಅಧರ್ಮವನ್ನು ಹುಟ್ಟಿಸುವುದರಲ್ಲಿ ಸ್ವಾಭಾವಿಕ ಶಕ್ತಿಯಿರುವುದಾದರೆ ಯಾಗಕ್ಕೆ ಅಂಗವಾದ ಪಶುಹಿಂಸೆಯಿಂದಲೂ ಹೇಗೆ ಧರ್ಮವು ಉಂಟಾಗುವುದು? ಅಧರ್ಮವೇ ಉಂಟಾಗಬೇಕಾಗುವುದು. ಮಂತ್ರಮೊದಲಾದ ಸಹಕಾರಿಗಳ ಸಾಮರ್ಥ್ಯದಿಂದ ಪಶುಹಿಂಸೆಯು ಧರ್ಮವನ್ನು ಹುಟ್ಟಿಸುತ್ತದೆ, ಎಂದರೆ— ಹಾಗಾದರೆ ಸಹಕಾರಿಗಳಿಗೆ ಸ್ವಾಭಾವಿಕ ಶಕ್ತಿಯನ್ನು ಪ್ರತಿಬಂಧಿಸಿ ವಿಪರೀತಶಕ್ತಿಯನ್ನುಂಟುಮಾಡುವ ಶಕ್ತಿಯನ್ನು ಒಪ್ಪಿದಹಾಗೆಯೇ ಆಯಿತು. ೨ನೇ ಕಲ್ಪದಲ್ಲಿ ಅಂದರೆ, ದೋಷಗಳೇ ವಿಪರೀತ ಶಕ್ತಿಯನ್ನುಂಟುಮಾಡುವುದಿಲ್ಲವೆನ್ನುವಲ್ಲಿ ನಿಯಾಮಕವಿಲ್ಲ. (56) ಮತ್ತು ಕಾಚಕಾಮಲಾದಿಗಳೂ ಕೂಡ ವಿಪರೀತ ಜ್ಞಾನವನ್ನು ಹುಟ್ಟಿಸುವುದರಲ್ಲಿ ಸಹಕಾರಿಗಳೆಂದೇ ಅಂಗೀಕೃತಗಳಾಗಿವೆ. ಇಷ್ಟವಾದ ಕಾರ್ಯವನ್ನು ಹಾಳು ಮಾಡುತ್ತವೆ ಎನ್ನುವುದರಿಂದಲೇ ದೋಷವೆನ್ನಿಸಿಕೊಳ್ಳುತ್ತವೆ. ವಿರಕ್ತಪುರುಷನಿಗೆ ವಸ್ತುತಃ ದೋಷರೂಪವಾಗಿರುವ ಕಾಮಿನೀವಿಲಾಸಗಳಲ್ಲಿ ಕಾಮುಕನಿಗೆ ಗುಣ (ಸಹಕಾರಿ) ವೆನ್ನುವ ಅಭಿಮಾನವಿದೆ. ಹೀಗಾದರೆ ಹುರಿದ ಗಿರಿಮಲ್ಲಿಕೆಯ ಬೀಜವು ವಟ (ಗೋಳೀಮರ)ದ ಅಂಕುರ ವನ್ನು ಏಕೆ ಹುಟ್ಟಿಸುವುದಿಲ್ಲ ಎಂದು ಹೇಳಕೂಡದು. ಪದಾರ್ಥಗಳಲ್ಲಿ ಶಕ್ತಿಯು ವಿಚಿತ್ರ

ವಾಗಿದೆ. ಭರ್ಜನೆ (ಹುರಿಯುವುದು) ಮೊದಲಾದ ಕೆಲವು ಸಹಕಾರಿಗಳು ಬೇರೆ ವಸ್ತುಗಳ ಶಕ್ತಿಯನ್ನೇ ಪ್ರತಿಬಂಧಿಸುತ್ತವೆ. ಕೆಲವು ಪದಾರ್ಥಗಳು ಸ್ವಾಭಾವಿಕ ಶಕ್ತಿಯನ್ನು ಪ್ರತಿಬಂಧಿಸಿ ವಿಪರೀತ ಶಕ್ತಿಯನ್ನುಂಟುಮಾಡುತ್ತವೆ. ಉದಾ=ಕೆಲವು ಪದಾರ್ಥಗಳು ವತ್ಸನಾಭಿ ಎನ್ನುವ ವಿಷಕ್ಕೆ ಕೊಲ್ಲುವ ಶಕ್ತಿಯನ್ನು ಪ್ರತಿಬಂಧಿಸಿ ರಸೌಷಧಗಳಲ್ಲಿ ಸೇರಿದಾಗ ಆರೋಗ್ಯವನ್ನುಂಟು ಮಾಡುವ ಶಕ್ತಿಯನ್ನೇ ತಂದುಕೊಡುತ್ತವೆ. ಹಾಗಾದರೆ ಅವುಗಳು ಗುಣಗಳೇ, (ಸಹಕಾರಿಗಳೇ) ದೋಷಗಳಲ್ಲ, ಎಂದರೆ— ಕಾಚಾದಿಗಳೂ ಗುಣ (ಸಹಕಾರಿ)ಗಳೇ ದೋಷಗಳಲ್ಲ. (57) ಹಾಗಾದರೆ ಜನಕವೇ (ಹುಟ್ಟಿಸತಕ್ಕುದೇ) ಸಾಕ್ಷಾತ್ಕಾರಕ್ಕೆ ವಿಷಯವಾಗುವುದು. ಅಸತ್ತಾದ ರಜತವಾಗಲೀ ಇದಂ ಪದಾರ್ಥದಲ್ಲಿ ಅಸತ್ತಾದ ರಜತತಾದಾತ್ಮ್ಯವಾಗಲೀ ಜನಕವಾಗಲಾರದು. ಆದಕಾರಣ ರಜತವು ಜ್ಞಾನಕ್ಕೆ ವಿಷಯವು ಹೇಗೆ ಆಗುವುದು? ಹೀಗೆ ಹೇಳಕೂಡದು. ಜ್ಞಾನವನ್ನು ಹುಟ್ಟಿಸುವುದೇ ಜ್ಞಾನಕ್ಕೆ ವಿಷಯವಾಗುವುದಾದರೆ ಹುಟ್ಟದಿರುವ ಈಶ್ವರಜ್ಞಾನಕ್ಕೆ ಘಟಾದಿಗಳು ವಿಷಯವಾಗದೆ ಹೋಗಬೇಕಾಗುವವು. ಪ್ರತ್ಯಭಿಜ್ಞಾನಕ್ಕೆ ತತ್ತಾಂಶವು (ಅತೀತ ದೇಶಕಾಲಗಳ ಸಂಬಂಧವು) ವಿಷಯವಾಗದೆ ಹೋಗಬೇಕಾಗುವುದು. ಅಲ್ಲಿ ಕೇವಲ ನಿರೂಪಕತ್ವ (ವ್ಯಾವರ್ತಕತ್ವ) ದಿಂದ ವಿಷಯತ್ವವನ್ನಂಗೀಕರಿಸಿದರೆ ರಜತಾದಿಗಳೂ ಕೂಡ ಜ್ಞಾನ ನಿರೂಪಕವಾಗಿರುವುದರಿಂದ ವಿಷಯವಾಗಬಹುದು. ಅಸತ್ತಾದುದು ನಿರೂಪಕ (ವ್ಯಾವರ್ತಕ) ವಾಗುವುದು ಹೇಗೆ ಎಂದರೆ— 'ಗುರೂಣಾಂ ಟೀಕಾ'=ಗುರುಗಳ ಟೀಕೆಯು, 'ಕುರೂಣಾಂ ಕ್ಷೇತ್ರಂ'=ಕುರುಗಳ ಕ್ಷೇತ್ರವು, ಎನ್ನುವುದರಂತೆ ತಟಸ್ಥವಾಗಿ ಕೂಡಬಹುದು ಅತೀತಾದಿ ಪ್ರಮೇಯಗಳು ಅತೀತಾದಿ ವಿಷಯಕವಾದ ಅನುಮಿತಿ ಮೊದಲಾದುದನ್ನು ವ್ಯಾವರ್ತಿಸದೆ ಇರಬೇಕಾಗುವುದು. ಅದರಲ್ಲಿ ವ್ಯಾವರ್ತಕವು (ವ್ಯಾವೃತ್ತಿ ಬುದ್ಧಿಕಾರಣವು) ಕೆಲವುವೇಳೆ ಇದೆ, ರಜತಮೊದಲಾದುದು ಯಾವಾಗಲೂ ಇಲ್ಲ, ಹೀಗೆ ವೈಷಮ್ಯವು ಇರುವುದೆಂದರೆ— ಯಾವಾಗಲಾದರೂ ಇದ್ದದ್ದು ಕಾರಣವಾಗುವುದೋ, ಪೂರ್ವಕ್ಷಣದಲ್ಲಿ ಇದ್ದದ್ದು ಕಾರಣವೋ, ಒಂದನೇದ್ದು ಕೂಡಲಾರದು. ನಷ್ಟವಾದ ಕಾರಣದಿಂದಲೂ ಕಾರ್ಯವು ಹುಟ್ಟಬೇಕಾಗುವುದು. ಪೂರ್ವಕ್ಷಣದಲ್ಲಿದ್ದದ್ದು ಕಾರಣವಾಗುವುದಾದರೆ ಕದಾಚಿತ್ ಇರುತ್ತದೆ ಎಂದು ಹೇಳಿರುವುದರಿಂದ ಪ್ರಯೋಜನವೇನು? ತಥಾಚ ಅತೀತಾದಿ ವಿಷಯಕವಾದ ಅನುಮಿತಿಯಿಂದ ಪೂರ್ವಕ್ಷಣದಲ್ಲಿ ಅತೀತವಿಷಯವು ಇಲ್ಲದಿರುವುದರಿಂದ ಆ ಅನುಮಿತಿಗೆ ಅದು ವ್ಯಾವರ್ತಕವಾಗದೆ ಹೋಗಬೇಕಾಗುವುದು. ಅತೀತಾದ್ಯರ್ಥಗಳು ತನ್ನ ಸಾಮರ್ಥ್ಯದಿಂದ ಅಂದರೆ (ವಿಷಯಸನ್ನಿಕೃಷ್ಟವಾದ ಕರಣದಿಂದ ಹುಟ್ಟಿರುವುದರಿಂದ) ಅನುಮಿತಿ ಮೊದಲಾದವುಗಳನ್ನು ವ್ಯಾವರ್ತಿಸುವುದಿಲ್ಲ. ಯಾವುದರಿಂದ ಅದು ಬೇಕೆಂದು ಅಪೇಕ್ಷಿಸುವುದು, ಮತ್ತೆ ಅತೀತಾದಿ ವಿಷಯಕವಾದ ಅನುಮಿತ್ಯಾದಿಗಳಿಗೆ ಕಾರಣವಾದ ಲಿಂಗಾದಿಗಳ ಸಾಮರ್ಥ್ಯದಿಂದಲೇ ಅರ್ಥವ್ಯಾವೃತ್ತ (ಸಂಬದ್ಧ) (ಅರ್ಥನಿರೂಪಿತ)ವಾದ ಜ್ಞಾನವು ಹುಟ್ಟುತ್ತದೆ, ಎಂದರೆ— ಶುಕ್ತಿರೂಪ್ಯಾದಿ ಜ್ಞಾನಸ್ಥಳದಲ್ಲಿಯೂ ಸಮಾನವೇ, ಅಂದರೆ— ಇಲ್ಲಿಯೂ ದುಷ್ಟೇಂದ್ರಿಯರೂಪ ಜ್ಞಾನಕಾರಣ ಸಾಮರ್ಥ್ಯದಿಂದಲೇ ರಜತಾದಿಗಳಿಂದ ವ್ಯಾವೃತ್ತವಾದ ಜ್ಞಾನವು ಹುಟ್ಟುತ್ತದೆ. (58) ಮತ್ತು ಸತ್ಯರೂಪ್ಯಾದಿ ಸ್ಥಳದಲ್ಲಿಯೂ ಅರ್ಥವು ಸಾಕ್ಷಾತ್ಕಾರಕ್ಕೆ ಸಾಕ್ಷಾತ್ ಕಾರಣವಲ್ಲ. ಮತ್ತೆ ಇಂದ್ರಿಯಸನ್ನಿಕರ್ಷವೇ ಕಾರಣವು. ಆ ಸನ್ನಿಕರ್ಷವು ಎಲ್ಲಿ ಅಸತ್ತಿನಿಂದುಂಟಾಗುವುದಿಲ್ಲವೋ, ಅಲ್ಲಿ ಅರ್ಥದ ಸತ್ವವನ್ನು ಅಪೇಕ್ಷಿಸುತ್ತದೆ. ಹೀಗೆ ಪರಂಪರೆಯಾಗಿಯೇ ಅರ್ಥವು ಕಾರಣವು. ಜ್ಞಾನವನ್ನು ಹುಟ್ಟಿಸತಕ್ಕ ಸನ್ನಿಕರ್ಷವನ್ನು ಹುಟ್ಟಿಸುವಪ್ರಯುಕ್ತ ಅನ್ಯಥಾ ಸಿದ್ಧವಾಗುವುದರಿಂದ ಅರ್ಥವು ಜ್ಞಾನಕ್ಕೆ ಕಾರಣವಲ್ಲ. (59)ಹಾಗಾದರೆ ಅಸತ್ತಾದ ರಜತಾದಿಗಳಿಂದ ಸನ್ನಿಕರ್ಷವೇ ಕೂಡ

ದಿರುವುದರಿಂದ ಚಕ್ಷುರಾದಿ ಇಂದ್ರಿಯಗಳಿಂದ ರಜತಜ್ಞಾನವು ಹುಟ್ಟುವುದು ಹೇಗೆ? ಹೀಗೆ ಹೇಳ ಕೂಡದು. ಶುಕ್ತಿಸನ್ನಿಕೃಷ್ಟವಾದ ದುಷ್ಟವಾದ ಇಂದ್ರಿಯವು ಮುತ್ತಿನ ಚಿಪ್ಪನ್ನೇ ಅತ್ಯಂತಾಸತ್ತಾದ ರಜತರೂಪವಾಗಿ ವಿಷಯೀಕರಿಸತಕ್ಕ ಜ್ಞಾನವನ್ನು ಹುಟ್ಟಿಸುತ್ತದೆ. ಹೀಗಾದರೆ ಅಸತ್ ಖ್ಯಾತಿವಾದವು ಬರಬೇಕಾಗುವುದು ಎನ್ನುವುದು ಇಲ್ಲ. ಭ್ರಮಾತ್ಮಕ ಜ್ಞಾನದಲ್ಲಿ ತೋರು ವುದೆಲ್ಲವೂ ಅಸತ್ತೆಂದು ಹೇಳಿದರೆ ಅಸತ್‌ಖ್ಯಾತಿವಾದವು ನಮಗೆ ಬರುತ್ತಿತ್ತು. ಹೀಗೆ ಅಲ್ಲವು ಅಂದರೆ, ನಾವು ಅಧಿಷ್ಠಾನಭೂತವಾದ ಶುಕ್ತಿಕಾಶಕಲವನ್ನು ಸತ್ಯವೆಂದಂಗೀಕರಿಸಿರುವೆವು. ಶೂನ್ಯ ವಾದಿಗಳ ಮತದಲ್ಲಿ ಅಧಿಷ್ಠಾನವೂ ಅಸತ್ತಾಗಿದೆ. (60) ಪ್ರದರ್ಶಿತವಾದ ಆಕಾರಕ್ಕೆ ವ್ಯಭಿಚಾರ ಬರುವುದಾದರೆ ಎಲ್ಲಾ ಕಡೆಗಳಲ್ಲಿಯೂ ಜ್ಞಾನಕ್ಕೆ ವ್ಯಭಿಚಾರ ಶಂಕೆಯು ಬರು ವುದು. ಅಂತೂ ಎಲ್ಲಾ ಕಡೆಗಳಲ್ಲಿಯೂ ಆಶ್ವಾಸವೇ ಇಲ್ಲವೆಂದಾಗುವುದು, ಎಂದು ಹೇಳಿರು ವುದನ್ನು ಜ್ಞಾನಿಗಳಿಗೆ ಪ್ರಾಮಾಣ್ಯವು ಔತ್ಸರ್ಗಿಕವು. (ಸಾಪವಾದ ನಿಯತವು) ಅಪವಾದ ವಿದ್ದರೆ ವ್ಯತ್ಯಾಸವು, ಎಂದು ಆಚಾರ್ಯರೇ ಪರಿಹರಿಸುವರು. "ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ । ಅಸವಸ್ಯಾನ್ಯಥಾ ಹಿ ಸ್ಯಾದಪ್ರಾಮಾಣ್ಯಂ ತಥಾsನ್ಯತಃ" "ತತ್ಪ್ರಾಮಾಣ್ಯಂ ಯಥಾ ಸಾಕ್ಷೀ ಸ್ಥಾಪಯತ್ಯೇವಮೇವ ಹಿ । ಸರ್ವ ಕಾಲೇಷ್ವಪಿ ಸ್ಥಿತ್ಯರ್ಥಾದ್ವ್ಯಭಿಚಾರಮಪೋಹ್ಯ ಚ" ॥ "ಉತ್ಸರ್ಗತೋsಪಿ ಯತ್ಪ್ರಾಪ್ತಮಪ ವಾದ ವಿವರ್ಜಿತಂ ॥ ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥" ಹೀಗೆ ಅಲ್ಲಲ್ಲಿ ಸಮರ್ಥಿಸುವರು. ಹೇಗೆಂದರೆ— ಸಾಕ್ಷಿಯಾದರೂ ಚೈತನ್ಯಸ್ವರೂಪವಾದುದು, ನಿಯಮೇನ ಯಥಾರ್ಥವಾದುದು, ಯಾವಾಗಲೂ ಸಂಶಯಗ್ರಸ್ತವಾಗದಿರುವುದಾಗಿ ಅಂತಃ ಕರಣವೃತ್ತಿಗಳ ಯಾಥಾರ್ಥ್ಯವನ್ನು ತಾನೇ ಗ್ರಹಿಸುತ್ತದೆ. ವಿಸಂವಾದ ರೂಪವಾದ ಪರೀಕ್ಷೆ ಯಿಂದ ಕೂಡಿದರೆ ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಹೀಗೆ ವೇದವ್ಯಾಸರ ಸಿದ್ಧಾಂತವು. (61) ಸಾಕ್ಷಿಯು ಯಾಥಾರ್ಥ್ಯವನ್ನು ಗ್ರಹಿಸುವುದರಿಂದಲೇ ಜ್ಞಾನಗಳಲ್ಲಿ ಅನಾಶ್ವಾಸವನ್ನು ನಿರಸನ ಮಾಡಲಿಕ್ಕೆ ಉಪಾಯಭೂತವಾದ ವಿಶೇಷವು ಯಾವುದೂ ಇಲ್ಲವೆಂದು ನಿರಸ್ತ ವಾಯಿತು. ಹೇಗೆಂದರೆ, ಎಲ್ಲಾ ಕಡೆಗಳಲ್ಲಿ ವ್ಯಭಿಚಾರ ಸಂಶಯದಿಂದ ವಿಶ್ವಾಸವಿಲ್ಲದಿದ್ದರೆ 'ಇದಂ ರಜತಂ' ಎನ್ನುವ ಜ್ಞಾನದಿಂದ ಹುಟ್ಟತಕ್ಕ ಪ್ರವೃತ್ತಿಗೆ ವಿಷಯವ್ಯಭಿಚಾರವಿದ್ದರೆ ಘಟಾದಿ ಗಳ ಜ್ಞಾನದಿಂದುಂಟಾಗತಕ್ಕ ವ್ಯವಹಾರಾಂತರದಲ್ಲಿ ವಿಶ್ವಾಸವು ಹೇಗೆ ಆಗುವುದು? ವ್ಯವ ಹಾರಾಂತರದಲ್ಲಿ ವಿಶ್ವಾಸವಿಲ್ಲದಿದ್ದರೆ 'ಚೈತ್ರ ಜಲಮಾಹರ' ಎಂದು ಪ್ರಯೋಜಕ ವೃದ್ಧನು ಹೇಳಿದ ವಾಕ್ಯವನ್ನು ಕೇಳಿದ ಮೇಲೆ ಪ್ರಯೋಜ್ಯ ವೃದ್ಧನ ಜಲಾಹರಣ ವಿಷಯಕವಾದ ಪ್ರವೃತ್ತಿಯನ್ನು ನೋಡಿ ಸಮೀಪದಲ್ಲಿದ್ದ ಬಾಲಕನಿಗೆ ಅನ್ವಿತಾರ್ಥದಲ್ಲಿ ವ್ಯುತ್ಪತ್ತಿಯು ಹೇಗೆ ಆಗುವುದು.? (62) ಕೆಲವು ಕಡೆ (ಇದಂ ರಜತಂ ಇತ್ಯಾದಿ ಸ್ಥಳದಲ್ಲಿ) ಗ್ರಹಣ ಸ್ಮರಣಾ ತ್ಮಕವಾದದ್ದು ಎರಡು ಜ್ಞಾನಗಳು. ಭ್ರಮರೂಪವಾದ ಒಂದು ವಿಶಿಷ್ಟ ಜ್ಞಾನವಲ್ಲ. ಸ್ವರೂಪ ದಿಂದಲೂ, ವಿಷಯದಿಂದಲೂ ಪರಸ್ಪರವಾಗಿ ವಿವೇಕಜ್ಞಾನವಿಲ್ಲದಿರುವುದರಿಂದಲೇ ಪ್ರವೃತ್ತಿ ಯಾಗುತ್ತದೆಂದು ಅಂಗೀಕರಿಸಿದರೆ 'ಅಯಂ ಘಟಃ' ಇತ್ಯಾದಿ ವಿಶಿಷ್ಟಪ್ರತ್ಯಯದಲ್ಲಿಯೂ ವಿಶಿಷ್ಟಜ್ಞಾನವೆಂಬುವ ವಿಶ್ವಾಸವು ಬಾರದೆ ಹೋಗ ಬೇಕಾಗುವುದು. ಅಲ್ಲಿಯೂ ಎರಡು ಜ್ಞಾನಗಳೆಂದೇ ಅಂಗೀಕರಿಸಿ ವಿವೇಕಾಗ್ರಹದಿಂದಲೇ ಪ್ರವೃತ್ತಿಯಾಗುತ್ತದೆಂದು ಆಗಲಿ ಹೀಗೆ ವಿಶಿಷ್ಟಪ್ರತ್ಯಯದಲ್ಲಿ ವಿಶ್ವಾಸವಿಲ್ಲದಿದ್ದರೆ ಸಂಶಯವಿಲ್ಲದೆ ಪ್ರವೃತ್ತಿಯೂ ಹೇಗೆ ಆಗುವುದು? ಬೇರೆ ಕಡೆ ವಿಶಿಷ್ಟಪ್ರತ್ಯಯದಲ್ಲಿ ಬಾಧಕವಿಲ್ಲದಿರುವುದರಿಂದ ವಿಶಿಷ್ಟಜ್ಞಾನವೆಂದು ವಿಶ್ವಾಸವು. ಇದಂ ರಜತಂ ಎನ್ನುವಲ್ಲಿ ಬಾಧಕವಿದ್ದಪ್ರಯುಕ್ತ ವಿಶ್ವಾಸವಿಲ್ಲ ಎನ್ನುವ ಸಮಾಧಾನವು

ಪರರು ಹೇಳಿದ ಪ್ರಕಾರವೇ ಅಂದರೆ ಬಾಧಕವೂ ಜ್ಞಾನವಾಗಿರುವುದರಿಂದ ಶಂಕಾಕ್ಕೆ ವಿಷಯವಾಗಿರುವ ಪ್ರಯುಕ್ತ ಬಾಧಕಕ್ಕೆ ಯಾವುದೊಂದು ಕೇಡೂ ಇರುವುದಿಲ್ಲ, ಎಂದು ಪರರು ಹೇಳಿದ ಪ್ರಕಾರವೇ ನಿರಸ್ತವಾಯಿತು. (63) ಮತ್ತು ಪ್ರವೃತ್ತಿಯಾದ ಮೇಲೆ ಆಗತಕ್ಕ ಬಾಧಕಾಭಾವವು ನಿಶ್ಶಂಕಪ್ರವೃತ್ತಿಯಲ್ಲಿ ಉಪಯುಕ್ತವಾಗಲಾರದು. ಹೇಗೆಂದರೆ, ಸಂಶಯವಿಲ್ಲದೆ ಪ್ರವೃತ್ತಿಯಾದ ಮೇಲೆ ಬಾಧಕವಿಲ್ಲವೆಂದು ನಿಶ್ಚಯವಾಗುವುದು, ಹಾಗೆ ನಿಶ್ಚಯವಾದ ಮೇಲೆ ನಿಸ್ಸಂಶಯವಾಗಿ ಪ್ರವೃತ್ತಿಯಾಗುವುದು, ಹೀಗೆ ಅನ್ಯೋನ್ಯಾಶ್ರಯವು. ತ್ರಿಪುಟೀ ಪ್ರತ್ಯಕ್ಷವನ್ನು ಹೇಳುವ ಪ್ರಾಭಾಕರರ ಮತದಲ್ಲಿ 'ಇದಮಹಂ ಜಾನಾಮಿ' ನಾನು ಇದನ್ನು ತಿಳಿಯುತ್ತೇನೆಂದು ಜ್ಞಾನಾಕಾರವು. ಅದರಲ್ಲಿ ಆತ್ಮಾಂಶ-ಸ್ವಾತ್ಮಾಂಶ-ವೇದ್ಯಾಂಶಗಳ ಪ್ರತೀತಿಯನ್ನು ಅಂಗೀಕರಿಸಿ ಸ್ವಪ್ರಕಾಶ ವಿಜ್ಞಾನಸ್ವರೂಪದ ನಿಶ್ಚಯವು ಅಂಗೀಕೃತವಾಗಿದೆ. ಬಾಧಕಾಭಾವಾದಿಗಳಿಂದ ವಿಶಿಷ್ಟಜ್ಞಾನಸ್ವರೂಪದ ನಿಶ್ಚಯವನ್ನಂಗೀಕರಿಸಿದರೆ ಸ್ವಪ್ರಕಾಶ ವಿಜ್ಞಾನವಾದವನ್ನು ಬಿಡಬೇಕಾಗುವುದು. ಉತ್ಸರ್ಗತಃ ಪ್ರವೃತ್ತಿಯು ಅಪವಾದದಿಂದ ನಿವೃತ್ತಿಯು. ತಥಾಚ ಬೇರೆಕಡೆಗಳಲ್ಲಿಯೂ ವಿಶಿಷ್ಟಪ್ರತ್ಯಯದಲ್ಲಿ ಆಶ್ವಾಸವಿಲ್ಲದಿರುವುದರಿಂದ ನಿಶ್ಶಂಕವಾಗಿ ಪ್ರವೃತ್ತಿಯಿಲ್ಲವೆಂದಿಲ್ಲ, ಎಂದರೆ ಪ್ರಕೃತದಲ್ಲಿಯೂ ಸಮವೇ, ಅಂದರೆ, ಜ್ಞಾನಗಳಿಗೆ ಪ್ರಾಮಾಣ್ಯವು ಔತ್ಸರ್ಗಿಕವು. ಅಪವಾದವಿದ್ದರೆ ವ್ಯತ್ಯಾಸವು ಹೀಗೆ ಅಂಗೀಕರಿಸಿರುವುದರಿಂದ 'ಇದಂ ರಜತಂ' ಎನ್ನುವ ಜ್ಞಾನಕ್ಕೆ ವಿಷಯ ವ್ಯಭಿಚಾರವಿದ್ದರೆ ಎಲ್ಲಾ ಕಡೆಗಳಲ್ಲಿ ವಿಶ್ವಾಸವಿಲ್ಲವೆಂದು ಪ್ರಸಕ್ತವಾಗುವುದಿಲ್ಲ. (64) ಮತ್ತು ತೋರಿತಕ್ಕ ಈ ರಜತಾಕಾರವು ಎಲ್ಲಿರತಕ್ಕದೆಂದು ಹೇಳಬೇಕು. ಎದುರಿರುವ ವಸ್ತುವಿನಲ್ಲಿರತಕ್ಕದೆಂದು ಅನ್ಯಥಾಖ್ಯಾತಿವಾದಿಗಳಿಗೆ ಇಷ್ಟವಲ್ಲ ಬೇರೆ ಪ್ರದೇಶಗಳಲ್ಲಿರತಕ್ಕದೂ ಅಲ್ಲ. ಜ್ಞಾನದಲ್ಲಿಯೇ ಇರತಕ್ಕದು. ತಥಾಚ ಅನ್ಯಥಾಖ್ಯಾತಿವಾದಿಗಳ ಪಕ್ಷದಲ್ಲಿ ಜ್ಞಾನವೂ ಸಾಕಾರವಾಗಬೇಕಾಗುವುದು, ಎಂದು ಪೂರ್ವಪಕ್ಷಾವಸರದಲ್ಲಿ ಹೇಳಿದ್ದು ಅತ್ಯಂತಾಸತ್ತಾದ ಆಕಾರಕ್ಕೇನೇ ಸ್ಫೂರ್ತಿ (ಪ್ರತೀತಿ) ಯನ್ನು ಅಂಗೀಕರಿಸಿರುವುದರಿಂದ ಅಯುಕ್ತವು. ಜ್ಞಾನವು ಸಾಕಾರವಾದರೆ ವ್ಯವಹರಿಸಲ್ಪಡತಕ್ಕ ಈ ರಜತಾಕಾರವು ಎಲ್ಲಿರತಕ್ಕದೆಂದು ಹೇಳಬೇಕು. ಬಾಹ್ಯಾರ್ಥವಾದ ಎದುರಿನಲ್ಲಿರುವ ಶುಕ್ತಿಯಲ್ಲಿದೆ ಎನ್ನುವುದು ಅಖ್ಯಾತಿವಾದಿಗಳಿಗೆ ಇಷ್ಟವಲ್ಲ. ದೇಶಾಂತರದಲ್ಲಿರತಕ್ಕದೂ ಅಲ್ಲ. ಅಂತಹುದಕ್ಕೆ ವ್ಯವಹಾರವು ಕೂಡಲಾರದು. ತಥಾಚ ವ್ಯವಹಾರದಲ್ಲಿರುವುದೆಂದೇ ಆಗುವುದರಿಂದ ವ್ಯವಹಾರವೂ ಸಾಕಾರವಾಗಿರಬೇಕಾಯಿತು. (65) ಮತ್ತು 'ರಜತಮಿದಂ' ಎನ್ನುವುದು ಎರಡು ಜ್ಞಾನಗಳು ಸ್ಮೃತಿ ಅನುಭವರೂಪಗಳು, ಎಂದು ಭ್ರಮಾತ್ಮಕ ಜ್ಞಾನವನ್ನು ಒಪ್ಪದಿರುವ ಪ್ರಾಭಾಕರರ ಪ್ರಕ್ರಿಯೆಯು, 'ಎರಡು ಜ್ಞಾನಗಳು ಎನ್ನುವಲ್ಲಿಯೂ ರಜತಜ್ಞಾನವು ಸ್ಮೃತಿರೂಪವು ಎನ್ನುವಲ್ಲಿಯೂ ಪ್ರಮಾಣವಿಲ್ಲದಿರುವುದರಿಂದ ಅಯುಕ್ತವು. ಭ್ರಮರೂಪವಾದ ವಿಶಿಷ್ಟವಾದ ಒಂದೇ ಜ್ಞಾನವನ್ನು ಅಂಗೀಕರಿಸಿದರೆ "ಸಾಕಾರವಾದಾದಸತೋ ನಭಾನಾತ್ಸಂವಿದ್ವಿರೋಧಾದಥ ಹೇತ್ವಭಾವಾತ್ । ಧಿಯಾಮನಾಶ್ವಾಸಭಯಾಚ್ಚ" ಎಂದು ಕಾರಿಕೆಯಲ್ಲಿ ಹೇಳಿದ ಬಾಧಕಗಳನ್ನು ಪರಿಹರಿಸಿರುವುದರಿಂದ ವಿಶಿಷ್ಟವಾದ ಭ್ರಮಾತ್ಮಕ ಒಂದೇ ಜ್ಞಾನವನ್ನು ಅಂಗೀಕರಿಸಿದರೆ ಯಾವ ಬಾಧಕವೂ ಇರುವುದಿಲ್ಲ. 'ಇದಂ ಸ್ಮರಣಂ ಅನಾಕಲಿತರಜತಸ್ಯಾನುತ್ಪದ್ಯಮಾನತ್ವಾತ್' ಇದುಮೊದಲಾದ ಅನುಮಾನಗಳೇ ರಜತಜ್ಞಾನವು ಸ್ಮೃತಿರೂಪವು ಎನ್ನುವಲ್ಲಿ ಪ್ರಮಾಣಗಳೆಂದರೆ ಅನುಮಾನಗಳು ದುಷ್ಟಗಳಾಗಿವೆ. (66) ಮತ್ತು 'ಇದಂ ರಜತಂ' ಎನ್ನುವಲ್ಲಿ 'ಇದಂ' ಎನ್ನುವುದು ಚಕ್ಷುಸ್ಸನ್ನಿಕರ್ಷದಿಂದ ಹುಟ್ಟಿರುವ ಜ್ಞಾನವು ಅನುಭವವೆನ್ನುವಲ್ಲಿ ವಿವಾದವಿಲ್ಲ. ರಜತಜ್ಞಾನವು ಇಂದ್ರಿಯದಿಂದ ಹುಟ್ಟತಕ್ಕದಲ್ಲ,

ಲಿಂಗಾದ್ಯನುಸಂಧಾನವಿಲ್ಲದಿರುವವರಿಗೂ ಹುಟ್ಟುವಪ್ರಯುಕ್ತ ಅನುಮಾನಾದಿಗಳಿಂದ ಹುಟ್ಟುತ್ತದೆಂದೂ ಹೇಳಲು ಶಕ್ಯವಾಗುವುದಿಲ್ಲ. ಆದಕಾರಣ ಪ್ರತ್ಯುತ್ಪನ್ನ (ಮೊದಲು ಹುಟ್ಟದಿರುವುದು, ಆವಾಗಲೇ ಹುಟ್ಟಿರುವುದು) ಕಾರಣವಿಲ್ಲದಿದ್ದರೂ ಹುಟ್ಟುವುದರಿಂದ ಪರಿಶೇಷಾತ್ ಸ್ಮರಣವೆಂದೇ ಆಗಬೇಕು. ಹೀಗೆ ರಜತಜ್ಞಾನವು ಸ್ಮೃತಿರೂಪವು ಎನ್ನುವಲ್ಲಿ ಪರಿಶೇಷವೇ ಪ್ರಮಾಣವು ಎಂದು ಹಿಂದೆ ಹೇಳಿರುವುದು ಪ್ರತ್ಯುತ್ಪನ್ನ (ಅವ್ಯವಹಿತ ಪೂರ್ವಕ್ಷಣದಲ್ಲಿರುವ) ಕಾರಣಗಳಾದ ದುಷ್ಟೇಂದ್ರಿಯಾದಿಗಳಿಂದ ಹುಟ್ಟಿದ್ದೆಂದು ಉಪಪಾದಿಸಿರುವುದರಿಂದ ಪರಿಶೇಷಪ್ರಮಾಣವೇ ಕೂಡದಿರುವಪ್ರಯುಕ್ತ ಸರ್ವಥಾ ಅಯುಕ್ತವು. ಮತ್ತು 'ಅನಾಕಲಿತ ರಜತಸ್ಯಾನುತ್ಪದ್ಯಮಾನತ್ವಾತ್' ಎನ್ನುವ ಹೇತುವಿಗೆ ಆಕಾಶಾದಿಗಳು ಸರ್ವಥಾ ಹುಟ್ಟದೇನೇ ಇರುವುದರಿಂದ ಆಕಾಶಾದಿಗಳಲ್ಲಿ ವ್ಯಭಿಚಾರವು. (ಸಾಧ್ಯವಿಲ್ಲದಿರುವಲ್ಲಿ ಹೇತುವಿರುವುದು.) ಈ ಅನುಮಾನಕ್ಕೆ ಸಂಸ್ಕಾರಮಾತ್ರ ಸಹಕೃತವಾದ ಮನೋಜನ್ಯತ್ವರೂಪ ಉಪಾಧಿಯೂ ಇದೆ. (ಸಾಧ್ಯವ್ಯಾಪಕವಾಗಿಯೂ ಸಾಧನಾವ್ಯಾಪಕವಾಗಿಯೂ ಇರುವ ಧರ್ಮವು ಉಪಾಧಿಯು.)

(67) ಸಾಧ್ಯವನ್ನು ವಿಕಲ್ಪಿಸಿಯೂ ಅನುಮಾನವನ್ನು ದೂಷಿಸುವುದಕ್ಕಾಗಿ ಪ್ರಾಭಾಕರರು ಹೇಳಿದ ಸ್ಮರಣತ್ವರೂಪ ಸಾಧ್ಯವನ್ನು ವಿಚಾರಮಾಡುತ್ತಾರೆ) ಸಾಧ್ಯವಾದ ಸ್ಮರಣತ್ವವು ೧. ಜಾತಿಯೋ, ೨. ಅನನುಭವತ್ವವೋ, ೩. ಅನುಭವತ್ವಾನಧಿಕರಣತ್ವವೋ, ೪. ಜ್ಞಾನಜನ್ಯಸಂಸ್ಕಾರಮಾತ್ರದಿಂದ ಹುಟ್ಟತಕ್ಕದರಲ್ಲಿರುವ ಧರ್ಮವೋ? ೫. ಪ್ರತ್ಯುತ್ಪನ್ನವಾಗದಿರುವ ಕಾರಣದಿಂದ ಹುಟ್ಟತಕ್ಕದರಲ್ಲಿರುವ ಧರ್ಮವೋ? ೬ ಅನುಭೂತವನ್ನು ವಿಷಯೀಕರಿಸುವುದರಲ್ಲಿರುವ ಧರ್ಮವೋ? ೭. ತತ್ತಾಂಶವನ್ನು ಉಲ್ಲೇಖಿಸುವುದರಲ್ಲಿರುವ ಧರ್ಮವೋ? ೮ ನನ್ನಿಂದ ಇದು ತಿಳಿಯಲ್ಪಟ್ಟಿತೆಂದು ವಿಶಿಷ್ಟವಾದ ಅರ್ಥವನ್ನು ವಿಷಯೀಕರಿಸತಕ್ಕದರಲ್ಲಿರುವ ಧರ್ಮವೋ? ಈ ಎಂಟು ವಿಕಲ್ಪಗಳಲ್ಲಿ ೧ನೇದ್ದು ಕೂಡಲಾರದು. ಜಾತಿಯು ಆಕೃತಿವ್ಯಂಗ್ಯವಾಗಿದೆ. ಗುಣಗಳು ನಿರಾಕಾರಗಳಾಗಿವೆ. ಆದಪ್ರಯುಕ್ತ ಪ್ರಾಭಾಕರರು ಗುಣಗಳಲ್ಲಿ ಸಾಮಾನ್ಯವನ್ನು ಅಂಗೀಕರಿಸಲಿಲ್ಲ. ೨ನೇದ್ದೂ ಕೂಡಲಾರದು. 'ಇದಂ ರಜತಂ' ಎನ್ನುವ ಜ್ಞಾನವು ಸ್ಮರಣವು ಎನ್ನುವುದಕ್ಕೆ ಅನುಭವಾನ್ಯತ್ವ (ಅನುಭವದಿಂದ ಬೇರೆಯಾಗಿರುವಿಕೆ ರೂಪವಾದ ಅನನುಭವತ್ವವೆಂದಾದರೆ ಆಗ ಪಕ್ಷವಾಗಿರುವ 'ರಜತಂ' ಎನ್ನುವ ಜ್ಞಾನದಲ್ಲಿ ಘಟಾದ್ಯನುಭವಗಳಿಂದ ಬೇರೆಯಾಗಿರುವಿಕೆ ಎನ್ನುವುದು ಸಿದ್ಧವಾಗಿರುವುದರಿಂದ ಸಿದ್ಧಸಾಧ್ಯತಾ ದೋಷವು ಬರುವುದು. ಅನುಭವಾನ್ಯತ್ವವೇ ಸ್ಮರಣತ್ವವೆಂದು ಹೇಳಿದರೆ ಯಜ್ಞದತ್ತನನುಭವದಲ್ಲಿಯೂ ದೇವದತ್ತನನುಭವದಿಂದ ಅನ್ಯತ್ವವು(ಬೇರೆಯೆನ್ನುವುದು) ಇದ್ದಪ್ರಯುಕ್ತ ಘಟಾನುಭವದಲ್ಲಿಯೂ ಪಟಾನುಭವಾನ್ಯತ್ವವು ಇದ್ದ ಪ್ರಯುಕ್ತ ಸ್ಮರಣವಾಗಬೇಕಾಗುವುದು. ೩ನೇದ್ದೂ ಕೂಡಲಾರದು. ಅನುಭವತ್ವಾನಧಿಕರಣತ್ವವೆನ್ನುವಲ್ಲಿ ಅನುಭವತ್ವವೆಂದರೆ ಸ್ಮೃತ್ಯನ್ಯತ್ವವು(ಸ್ಮೃತಿಯಿಂದ ಬೇರೆಯಾಗಿರುವಿಕೆ) ಎಂದು ಹೇಳಿದರೆ ಯಜ್ಞದತ್ತನ ಸ್ಮೃತಿಗೂ ದೇವದತ್ತನ ಸ್ಮೃತಿಗಿಂತ ಅನ್ಯತ್ವವಿದ್ದ ಪ್ರಯುಕ್ತ ಸ್ಮೃತಿಗೆ ಅನುಭವತ್ವವು ಬರಬೇಕಾಗುವುದು. ಮತ್ತು ಅನುಭವತ್ವಜ್ಞಾನವಾದರೆ ಅನುಭವತ್ವಾನಧಿಕರಣತ್ವರೂಪವಾದ ಸ್ಮೃತಿತ್ವ ಜ್ಞಾನವು ಸ್ಮೃತಿತ್ವ ಜ್ಞಾನವಾದರೆ ಸ್ಮೃತ್ಯನ್ಯತ್ವರೂಪವಾದ ಅನುಭವತ್ವಜ್ಞಾನವು ಹೀಗೆ ಅನ್ಯೋನ್ಯಾಶ್ರಯವೂ ಬರುವುದು. ೪ನೇದ್ದೂ ಕೂಡಲಾರದು. (ಜ್ಞಾನದಿಂದ ಹುಟ್ಟತಕ್ಕ ಸಂಸ್ಕಾರಮಾತ್ರದಿಂದ ಹುಟ್ಟತಕ್ಕ ವಸ್ತುವಿನಲ್ಲಿರುವ ಧರ್ಮವು ಸ್ಮೃತಿತ್ವವು ಎಂದೂ ಹೇಳಕೂಡದು.) ನಮ್ಮ ಮತದಲ್ಲಿ ಸ್ಮೃತಿಯು ಮಾನಸಪ್ರತ್ಯಕ್ಷದಿಂದ ಹುಟ್ಟತಕ್ಕದಾದ ಪ್ರಯುಕ್ತ ಕೇವಲ ಸಂಸ್ಕಾರದಿಂದ ಹುಟ್ಟತಕ್ಕದ್ದಲ್ಲ. ಆದುದರಿಂದ ಸಂಸ್ಕಾರ ಮಾತ್ರ ಪ್ರಭವತ್ವರೂಪವಾದ ಸ್ಮೃತಿತ್ವವನ್ನು ಸಾಧಿಸಿದರೆ ನಮಗೆ ಅಪ್ರಸಿದ್ಧ ವಿಶೇಷಣತ್ವವು ಬರುವುದು. ಮತ್ತು ಸಂಪ್ರತಿಪನ್ನ ಸ್ಮರಣರೂಪವಾದ

ದೃಷ್ಟಾಂತದಲ್ಲಿ ಮಾನಸಪ್ರತ್ಯಕ್ಷಜನ್ಯತ್ವವಿದೆ. ಸಂಸ್ಕಾರಮಾತ್ರಪ್ರಭವತ್ವವನ್ನು ಅಂಗೀಕರಿಸ ದಿರುವುದರಿಂದ ಸಾಧ್ಯವೈಕಲ್ಯವು ಬರುವುದು. ಮತ್ತು 'ರಜತಜ್ಞಾನಂ ಇಂದ್ರಿಯಜನ್ಯಂ ತದನ್ವಯವ್ಯತಿರೇಕಾನುವಿಧಾಯಿತ್ವಾತ್' ಚಕ್ಷುಸ್ಸನ್ನಿಕರ್ಷವಿದ್ದರೆ ಜ್ಞಾನವು ಹುಟ್ಟುತ್ತದೆ, ಇಲ್ಲ ವಾದರೆ ಹುಟ್ಟುವುದಿಲ್ಲವಾದಕಾರಣ, ಬೆಳ್ಳಿಯು ಎನ್ನುವ ಜ್ಞಾನವು ಇಂದ್ರಿಯದಿಂದ ಹುಟ್ಟ ತಕ್ಕದ್ದು, ಎನ್ನುವ ಅನುಮಾನದಿಂದ ಇಂದ್ರಿಯಕಾರ್ಯವೆಂದು ನಿಶ್ಚಿತವಾಗುತ್ತದೆ. ತಥಾ ಚ ಬಾಧಿತವಾಯಿತು. (ಪಕ್ಷದಲ್ಲಿ ಸಾಧ್ಯವಿಲ್ಲವು.) ಅನ್ವಯವ್ಯತಿರೇಕಗಳಿಗೆ ಅಧಿಕರಣಭೂತವಾದ ಶುಕ್ತಿ ಯನ್ನು ಗ್ರಹಿಸುವುದರಲ್ಲಿಯೇ ಉಪಯೋಗವಿದ್ದ ಪ್ರಯುಕ್ತ ಹೀಗೆ ಹೇಳಲಿಕ್ಕೆ ಬರುವುದಿಲ್ಲ. ಅಂದರೆ, 'ರಜತಮಿತಿಜ್ಞಾನಂ ಇಂದ್ರಿಯಕಾರ್ಯಂ ತದನ್ವಯ ವ್ಯತಿರೇಕಾನುವಿಧಾಯಿತ್ವಾತ್'= ಎಂದು ಹೇಳಿದರೆ ಹೇತುವಿಗೇನೇ ಅಸಿದ್ಧಿ ಬರುವುದರಿಂದ ಬಾಧವು ಬರುವುದಿಲ್ಲ, ಎಂದು ಹೇಳಿದರೆ, ಇದು ಸ್ಮೃತಿಯು ಎಂದು ಸಿದ್ಧವಾದ ಮೇಲೆ ಅಧಿಕರಣಭೂತವಾದ ಶುಕ್ತಿಯನ್ನು ಗ್ರಹಿಸುವು ದರಲ್ಲಿ ಅನ್ವಯವ್ಯತಿರೇಕವು ಕ್ಷೀಣಶಕ್ತಿಯುಳ್ಳದ್ದಾಗಿದೆ ಎಂದು ಕಲ್ಪಿಸುತ್ತೀರೋ? ನಿಷ್ಕಾರಣ ವಾಗಿಯೇ ಕಲ್ಪಿಸುವುದೋ? ರಜತಜ್ಞಾನಕ್ಕೆ ಸ್ಮೃತಿತ್ವವೇ ಸಿದ್ಧವಾಗದಿರುವುದರಿಂದ ೧ನೇದ್ದು ಕೂಡಲಾರದು. 'ಅನಾಕಲಿತರಜತಸ್ಯಾನುತ್ಪದ್ಯಮಾನತ್ವಾತ್' ಎಂದು ಹೇಳಿದ ಅನುಮಾನ ದಿಂದಲೇ ಸ್ಮೃತಿಯೆಂದು ಸಿದ್ಧವಾಗುತ್ತದೆ ಎಂದು ಹೇಳಿದರೆ ಸ್ಮೃತಿಯೆಂದು ಸಿದ್ಧವಾದರೆ ಇಂದ್ರಿಯಾನ್ವಯವ್ಯತಿರೇಕಗಳಿಗೆ ಅಧಿಕರಣಭೂತವಾದ ಶುಕ್ತಿಯನ್ನು ಗ್ರಹಿಸುವುದರಲ್ಲಿ ಉಪ ಯೋಗವನ್ನು ಕಲ್ಪಿಸುವುದು, ಹಾಗೆ ಉಪಯೋಗವನ್ನು ಕಲ್ಪಿಸಿದರೆ ಬಾಧವು ಬಾರದಿರುವು ದರಿಂದ ನಿರ್ದೋಷವಾದ ಅನುಮಾನದಿಂದ ಸ್ಮೃತಿಯೆಂದು ಸಿದ್ಧವಾಗುವುದು, ಹೀಗೆ ಅನ್ಯೋ ನ್ಯಾಶ್ರಯವು ಬರುವುದು. ೨ನೇದ್ದೂ (ನಿಷ್ಕಾರಣವಾಗಿಯೇ ಎನ್ನುವುದೂ) ಕೂಡಲಾರದು. ರಜತಜ್ಞಾನಕ್ಕೂ ಹಾಗೆ ಬರಬೇಕಾಗುವುದು. ಅಂದರೆ, ಇಂದ್ರಿಯಾನ್ವಯವ್ಯತಿರೇಕಗಳಿಗೆ ಅಧಿ ಕರಣಭೂತವಾದ ಭೂತಲವನ್ನು ಗ್ರಹಿಸುವುದರಲ್ಲಿಯೇ ಉಪಯೋಗವು ಬರಬೇಕಾಗುವು ದರಿಂದ ಅದೂ ಇಂದ್ರಿಯದಿಂದ ಹುಟ್ಟದೆ ಇದ್ದದ್ದೆಂದು ಆಗ ಬೇಕಾಗುವುದು. ಅನ್ವಯವ್ಯತಿರೇಕ ಗಳಿಗೆ ಬೇರೆಕಡೆಗಳಲ್ಲಿ ಉಪಯೋಗವನ್ನು ಶಂಕಾಮಾತ್ರ ಮಾಡಿದ್ದೆಂದು ಹೇಳಕೂಡದು. ಇಂದ್ರಿ ಯಾನ್ವಯವ್ಯತಿರೇಕಗಳಿಗೆ ಅನ್ಯತ್ರ ಉಪಯೋಗವನ್ನು ಶಂಕಿಸಿದುದರಿಂದ ರಜತಜ್ಞಾನವು ಇಂದ್ರಿಯ ಕಾರ್ಯವೋ ಎನ್ನುವ ಸಂಶಯದಿಂದ ಸ್ಮರಣತ್ವರೂಪಸಾಧ್ಯವೂ ಸಂದಿಗ್ಧವಾದುದ ರಿಂದ ಸಂದಿಗ್ಧಬಾಧವೆನ್ನುವ ದೋಷವು ಬಂದೇ ಬರುವುದು. ೫ನೇದ್ದೂ ಅಂದರೆ, ಅಪ್ರತ್ಯುತ್ಪನ್ನ (ಸಂ ಸ್ಕಾರರೂಪಕಾರಣ ಹುಟ್ಟಿದಮೇಲೆ ಸಾವಕಾಶವಾಗಿ ಸ್ಮೃತಿಯು ಹುಟ್ಟುವುದರಿಂದ ಸಾವಕಾಶ ವಾಗಿ ಹುಟ್ಟಿರುವ) ವಾದ ಕಾರಣದಿಂದ ಹುಟ್ಟಿರುವುದರಲ್ಲಿರುವ ಧರ್ಮವು ಸ್ಮೃತಿತ್ವವು ಎನ್ನು ವುದೂ ಹಿಂದೆ ಹೇಳಿದ ಪ್ರಕಾರ ಬಾಧವು ಬರುವುದರಿಂದ ಅಯುಕ್ತವು, ಅಂದರೆ, ಇಂದ್ರಿಯಾನ್ವಯ ವ್ಯತಿರೇಕಾನುವಿಧಾಯಿತ್ವದಿಂದ ಇಂದ್ರಿಯದಿಂದ ಹುಟ್ಟಿದ್ದೆಂದು ನಿರ್ಧರಿಸಲ್ಪಟ್ಟಿರುವ ಪ್ರಯುಕ್ತ ಪ್ರತ್ಯುತ್ಪನ್ನಕಾರಣದಿಂದ ಹುಟ್ಟಿದ್ದೆಂದೇ ಸಿದ್ಧಿಸುವುದರಿಂದ ಬಾಧಿತವಾಯಿತು. ಸಂಸ್ಕಾರ ಹುಟ್ಟಿದ ಮೇಲೆಯೇ ಹುಟ್ಟಿದ ಸ್ಮೃತಿಯಲ್ಲಿ ವ್ಯಭಿಚಾರವೂ ಬರುವುದು. ಅಂದರೆ, ಅಂತಹ ಸ್ಮೃತಿಯಲ್ಲಿ ಅನಾಕಲಿತರಜತಸ್ಯಾನುತ್ಪದ್ಯಮಾನತ್ವವೆನ್ನುವ ಹೇತುವಿದ್ದರೂ ಸಂಸ್ಕಾರರೂಪ ಪ್ರತ್ಯುತ್ಪನ್ನ ಕಾರಣಪ್ರಭವತ್ವವೇ (ಹುಟ್ಟಿದ್ದೆಂದೇ) ಇದ್ದ ಪ್ರಯುಕ್ತ ಹಿಂದೆ ಹೇಳಿದ ಅಪ್ರತ್ಯು ತ್ಪನ್ನ ಕಾರಣಪ್ರಭವತ್ವರೂಪ ಸ್ಮೃತಿತ್ವವು ಇಲ್ಲದಿರುವುದರಿಂದ ವ್ಯಭಿಚಾರವು. ೬ನೇದ್ದೂ (ಅನುಭೂತವಿಷಯತ್ವವು ಸ್ಮೃತಿತ್ವವು ಎನ್ನುವುದೂ) ಕೂಡಲಾರದು. 'ರಜತಂ' ಎನ್ನುವ ಜ್ಞಾನಸಾಮಾನ್ಯವು ಪಕ್ಷವಾಗಿರುವುದರಿಂದ ದ್ವಿತೀಯಾದಿ (೨ನೇದ್ದೂ ೩ನೇದ್ದೂ) ಭ್ರಮಗಳೂ

ಪಕ್ಷವಾಗಿರುವುದರಿಂದ ಅದರಲ್ಲಿ ಅನುಭೂತವಿಷಯತ್ವವೇ ಇದ್ದ ಪ್ರಯುಕ್ತ ಸಿದ್ಧ ಸಾಧನತಾ ದೋಷವು ಬರುವುದು. ಮತ್ತು ಅನುಭೂತವಿಷಯತ್ವಾಖ್ಯ ಸ್ಮೃತಿತ್ವರೂಪ ಸಾಧ್ಯವು ರಜತಜ್ಞಾನ ದಲ್ಲಿ ಸಂದಿಗ್ಧವಾಗಿಯುದೋ ಹಾಗೆಯೇ ಅನಾಕಲಿತರಜತಸ್ಯಾನುತ್ಪದ್ಯಮಾನತ್ವಾತ್ ಎನ್ನುವ ಹೇತುವೂ ಸಂದಿಗ್ಧವಾಯಿತು. ಎನೇದ್ದು (ತತ್ತಾಂಶೋಲ್ಲೇಖಿತ್ವಂ ಸ್ಮೃತಿತ್ವಂ=ಅತೀತದೇಶ ಕಾಲ ಸಂಬಂಧವನ್ನುಲ್ಲೇಖಿಸುವುದರಲ್ಲಿರುವ ಧರ್ಮವು ಸ್ಮೃತಿತ್ವವು) ಕೂಡಲಾರದು. 'ರಜತಂ' ಎನ್ನುವ ಜ್ಞಾನದಲ್ಲಿ ತತ್ತಾಂಶವು ತೋರದಿರುವುದರಿಂದ ತತ್ತಾಂಶೋಲ್ಲೇಖಿತ್ವರೂಪ ಸ್ಮೃತಿ ತ್ವವನ್ನು ಸಾಧಿಸಿದರೆ ಅನುಭವಬಾಧವು. ಲನೇದ್ದೂ (ಜ್ಞಾನಸಂಭಿನ್ನಾರ್ಥಗೋಚರತ್ವಂ ಸ್ಮೃತಿತ್ವಂ=) ಅನುಭವ ಬಾಧಿತವಾಗಿರುವುದರಿಂದ ಅಯುಕ್ತವು. ಇದರಿಂದಲೇ ಪ್ರತಿಪಕ್ಷ ಭೂತಗಳಾದ ಎರಡು ಅನುಮಾನಗಳಿಗೆ ('ಇದಮುಸ್ಮರಣಂ ತತ್ತಾಂಶವಿಕಲತ್ವಾತ್ ಸಂಪ್ರತಿ ಪನ್ನವತ್ ಇಯಂ ಸ್ಮೃತಿರ್ನ ಇಂದ್ರಿಯಜನ್ಯತ್ವಾತ್' ಹೀಗೆ ಯಾವುದು ಎರಡು ಪ್ರತಿಪಕ್ಷಗಳು ಸ್ಮೃತಿತ್ವ ಸಾಧಕವಾದ ಅನುಮಾನಕ್ಕೆ ಆಶಂಕಿಸಲ್ಪಟ್ಟಿವೆಯೋ ಅವುಗಳಿಗೆ) ಸಮಾಧಾನವನ್ನು ಹೇಳಿದಂತೆ ಆಯಿತು. ಹೇಗೆಂದರೆ— 'ಇದಂ ಸ್ಮೃತಿರಿತಿ ನ ವ್ಯವಹರ್ತವ್ಯಂ ತತ್ತೋಲ್ಲೇಖಾದಿ ಸ್ಮೃತಿಚಿಹ್ನವಿಕಲತ್ವಾತ್' ಈ ರಜತಜ್ಞಾನವನ್ನು ಸ್ಮೃತಿಯೆಂದು ಹೇಳಕೂಡದು, ತತ್ತೋಲ್ಲೇಖಾದಿರೂಪವಾದ (ಅತೀತದೇಶಕಾಲಸಂಬಂಧೋಲ್ಲೇಖ ಮೊದಲಾದ) ಸ್ಮೃತಿಯ ಚಿಹ್ನೆಯು ಇಲ್ಲದಿರುವುದರಿಂದ ಎಂದು ಒಂದನೇ ಅನುಮಾನವು ವಿವಕ್ಷಿತವಾಗಿದೆ. ಆದುದರಿಂದಲೇ 'ಗುಡವು, ತಿಕ್ತವು, ಶಂಖವು, ಪೀತವು ಇದು ಮೊದಲಾದ ಪ್ರತ್ಯಯಗಳ ಪ್ರಕ್ರಿಯೆಯು ವಿಶಿಷ್ಟಜ್ಞಾನವನ್ನು ಅಂಗೀಕರಿಸಿದರೆ ಬಾಧಕವಿಲ್ಲದಿರುವುದರಿಂದ ಎರಡು ಜ್ಞಾನಗಳೆನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದಲೇ ತಿರಸ್ಕೃತವಾಯಿತು ತಥಾ ಚ ಜನ್ಮಾಂತರದಲ್ಲಿ ಅನುಭೂತವಾದ ತಿಕ್ತತ್ವವನ್ನು ಸ್ಮರಿಸಿ ಗುಡದಲ್ಲಿ ಆರೋಪವು, ಹೀಗೆ ಸ್ಮರ್ಯಮಾಣಾರೋಪವಾಗಲೀ ನಾಲಗೆಯಲ್ಲಿರತಕ್ಕದ್ದು ಪಿತ್ತದ್ರವ್ಯವು ಅದರಲ್ಲಿರ ತಕ್ಕ ತಿಕ್ತತ್ವವನ್ನು ಗ್ರಹಿಸಿ ಗುಡದಲ್ಲಿ ಆರೋಪವು ಎಂದು ಗೃಹ್ಯಮಾಣಾರೋಪವಾಗಲೀ ಎಂದು ಇಟ್ಟುಕೊಳ್ಳಬೇಕು.

(68) ಭ್ರಮೆಯನ್ನು ಅಂಗೀಕರಿಸುವವರೂ ವಿವೇಕಾಗ್ರಹವನ್ನು ಒಪ್ಪಲೇಬೇಕು. ವಿವೇಕಾಗ್ರಹವಿದ್ದರೆ ಭ್ರಾಂತಿಗೆ ಅವಕಾಶವಿಲ್ಲ. ಆದರಿಂದಲೇ ಪ್ರವೃತ್ತ್ಯಾದಿಗಳಿಲ್ಲವೂ ಕೂಡು ವಾಗ ವಿಪರ್ಯಯವನ್ನು ಕಲ್ಪಿಸುವುದು ಏಕೆ ಎಂದು ಹೇಳಿದ ಕಲ್ಪನಾಗೌರವವು ಅಯುಕ್ತವು. ಏಕೆಂದರೆ, ವಿವೇಕಾಗ್ರಹ ಮಾತ್ರದಿಂದಲೇ ಪ್ರವೃತ್ತ್ಯಾದಿಗಳು ಆಗುವುದಾದರೆ ಹಾಗಾಗಬಹುದು, ವಿವೇಕಾಗ್ರಹ ಮಾತ್ರದಿಂದ ಪ್ರವೃತ್ತ್ಯಾದಿಗಳು ಕೂಡಲಾರವೆಂದು ಹೇಳುವೆವು.

(69) ಅನ್ಯಥಾಖ್ಯಾತಿಯಿದೆ ಎನ್ನುವಲ್ಲಿ ಪ್ರಮಾಣವೇನೆಂದರೆ— ಅನುಭವವೆಂದೇ ಹೇಳುವೆವು. ಹೇಗೆ ಸತ್ಯರಜತಸ್ಥಳದಲ್ಲಿ ಇದು ರಜತವೆಂದು ವಿಶಿಷ್ಟವಿಷಯಕವಾದ ಒಂದೇ ಜ್ಞಾನವೋ ಹಾಗೆಯೇ 'ಇದಂ ರಜತಂ' ಎಂದೂ ವಿಶಿಷ್ಟವಿಷಯಕವಾದುದು ಒಂದೇ ವಿಜ್ಞಾ ನವು, ಸ್ವಪ್ರಕಾಶರೂಪದಿಂದಲಾಗಲೀ ಮಾನಸಪ್ರತ್ಯಕ್ಷದಿಂದಲಾಗಲೀ ಸಾಕ್ಷಿಯಿಂದಲಾಗಲೀ ತೋರುತ್ತದೆ. ಸತ್ಯರಜತಸ್ಥಳದಲ್ಲಿರತಕ್ಕ 'ಇದಂ ರಜತಂ' ಎನ್ನುವ ಜ್ಞಾನದಿಂದ ಭ್ರಮಸ್ಥಳ ದಲ್ಲಿರತಕ್ಕ 'ಇದಂ ರಜತಂ' ಎನ್ನುವ ಜ್ಞಾನಕ್ಕೆ ಲೇಶವೂ ಕೂಡ ವಿಶೇಷವು ತಿಳಿದುಬರುವುದಿಲ್ಲ. ವಿಶೇಷ ತಿಳಿದರೆ ಆ ಜ್ಞಾನದಿಂದ ಪ್ರವೃತ್ತಿಯು ಆಗಲಾರದು. ಸತ್ಯರಜತಸ್ಥಳದಲ್ಲಿರುವ 'ಇದಂ ರಜತಂ' ಎನ್ನುವ ಜ್ಞಾನದಿಂದ ಭ್ರಮಸ್ಥಳದಲ್ಲಿರುವ 'ಇದಂ ರಜತಂ' ಎನ್ನುವ ಜ್ಞಾನಕ್ಕೆ ವಿಶೇಷ

ತೋರದೆ ಹೋದರೆ ಆ ಜ್ಞಾನವು ಯಥಾರ್ಥವು, ಈ ಜ್ಞಾನವು ಅಯಥಾರ್ಥವು ಎನ್ನುವುದಕ್ಕೆ ಕಾರಣವೇನೆಂದರೆ— ಹೇಗೆ ತೋರುತ್ತದೋ ಹಾಗೆಯೇ ವಿಷಯುವಿದ್ದಪ್ರಯುಕ್ತ ಅದು ಯಥಾರ್ಥವು, ಹಾಗಿಲ್ಲದಿರುವುದರಿಂದ ಇದು ಅಯಥಾರ್ಥವು. ಭ್ರಮಸ್ಥಳದಲ್ಲಿರುವ 'ಇದಂ ರಜತಂ' ಎನ್ನುವ ಜ್ಞಾನವು ವಿಶಿಷ್ಟವಿಷಯುಕವಾಗದಿದ್ದರೂ ಅನೇಕವಾದರೂ ಅದನ್ನು ವಿಶಿಷ್ಟ ವಿಷಯುಕವೆಂದು ಒಂದೇ ಎಂದೂ ಅನುಭವವು ವಿಷಯೀಕರಿಸುತ್ತದೆ ಎಂದು ಹೇಳುವುದಾದರೆ ಸತ್ಯರಜತಸ್ಥಳದಲ್ಲಿ 'ಇದಂ ರಜತಂ' ಎನ್ನುವ ಜ್ಞಾನವೂ ವಿಶಿಷ್ಟವಿಷಯುಕವು ಒಂದೇ ಎನ್ನುವಲ್ಲಿ ವಿಶ್ವಾಸವಿಲ್ಲವೆಂದಾಗುವುದು. ಮತ್ತು ಅಂತಹ ಅನುಭವವನ್ನು ಒಪ್ಪಿದರೆ ಭ್ರಮೆಯನ್ನು ಅಂಗೀಕರಿಸಿದಂತೆಯೇ ಆಯಿತು. (70) ಭ್ರಮಸ್ಥಳದಲ್ಲಿ ವಿಶಿಷ್ಟವಿಷಯುಕತ್ವವನ್ನೂ ಏಕತ್ವವನ್ನೂ ಗ್ರಹಿಸತಕ್ಕ ಪ್ರತ್ಯಯವು ಇಲ್ಲವೇ ಇಲ್ಲ. ಅಂತೂ ಭ್ರಮೆಯನ್ನು ಅಂಗೀಕಾರಮಾಡಿದ ಹಾಗೆ ಆಗಲಿಲ್ಲ. ಹೀಗೆ ಹೇಳಕೂಡದು. ಏಕೆಂದರೆ— 'ಇದಂ ರಜತಂ' ಎನ್ನುವುದು ವಿಶಿಷ್ಟವಿಷಯುಕವಾದ ಒಂದು ಜ್ಞಾನವೆಂದು ಸಾಕ್ಷಿಸಿದ್ಧವಾಗಿದೆ. ಅನುಭವಸಿದ್ಧವಾದ ಇಂತಹ ಜ್ಞಾನವನ್ನು ಅಪಲಾಪಮಾಡಿದರೆ ನಿಮಗೆ ಅಭಿಮತವಾದ ಸ್ಮೃತಿ ಅನುಭವ ಎನ್ನುವ ಎರಡು ಜ್ಞಾನಗಳ ಸ್ವರೂಪವನ್ನೂ ಅಪಲಾಪಮಾಡಬೇಕಾಗುವುದು. (71) ಮತ್ತು ರಜತವನ್ನು ಅಪೇಕ್ಷಿಸುವವನಿಗೆ ಶುಕ್ತಿಯಲ್ಲಿ ಪ್ರವೃತ್ತಿಯು ಬೇರೆ ಪ್ರಕಾರ ಕೂಡದಿರುವುದರಿಂದ (ಅಂದರೆ ಭ್ರಮೆಯನ್ನು ಒಪ್ಪದಿದ್ದರೆ ಕೂಡದೆ ಇದ್ದದ್ದಾಗಿ) ಅನ್ಯಥಾಜ್ಞಾನ (ಭ್ರಮೆ)ವನ್ನು ಅಂಗೀಕರಿಸಬೇಕೆಂದು ತಿಳಿಸಿಕೊಡುತ್ತದೆ. (72) ರಜತಾರ್ಥಿಗೆ ಶುಕ್ತಿಯಲ್ಲಿ ಪ್ರವೃತ್ತಿಯು ಸ್ವರೂಪದಿಂದಲೂ ವಿಷಯದಿಂದಲೂ ಗ್ರಹಿಸಲ್ಪಡದಿರುವ ಭೇದವುಳ್ಳ ಎರಡು ಜ್ಞಾನಗಳಿಂದಲೇ ಕೂಡುತ್ತದೆಂದರೆ— ಯಾವ ಭೇದದ ಜ್ಞಾನವಿಲ್ಲದಿರುವುದರಿಂದ ಪ್ರವೃತ್ತಿಯು ಆಗುತ್ತದೆಂದು ಹೇಳಲ್ಪಡುತ್ತದೋ ಅಂತಹ ಭೇದವೆಂದರೆ ಯಾವುದು? ೧. ಜ್ಞಾನಗಳದ್ದೂ ಜ್ಞೇಯಗಳದ್ದೂ ಸ್ವರೂಪವೋ? ೨. ಪೃಥಕ್ತ್ವವೋ? ೩. ಅನ್ಯೋನ್ಯಾಭಾವವೋ? ೪. ವಿರುದ್ಧಧರ್ಮವತ್ವವೋ? ಈ ನಾಲ್ಕರಲ್ಲಿ ೧ನೇದ್ದು ಕೂಡಲಾರದು. ಸ್ವಪ್ರಕಾಶವಾದ ಜ್ಞಾನವೂ ಜ್ಞೇಯವೂ ತೋರುವಾಗ ಸ್ವರೂಪಭೇದವು ತೋರುವುದಿಲ್ಲವೆನ್ನುವುದು ಕೂಡಲಾರದು ೨ನೇದ್ದೂ ಕೂಡಲಾರದು. ಗುಣಗಳಲ್ಲಿ ಗುಣವು ಇರಲಾರದು. ಎಲ್ಲಾ ಕಡೆ ಗುಣಗಳ ವಿಷಯದಲ್ಲಿ ಜ್ಞಾನಗಳಿಗೆ ಸ್ವರೂಪದಿಂದಲೂ ವಿಷಯದಿಂದಲೂ ಇಲ್ಲದಿರುವ ಪೃಥಕ್ತ್ವದ ಜ್ಞಾನವು ಕೂಡದಿರುವುದರಿಂದ ರೂಪಜ್ಞಾನದಿಂದ ರೂಪವನ್ನು ಅರ್ಥಿಸುವವನಿಗೆ ರಸದಲ್ಲಿಯೂ ಪ್ರವೃತ್ತಿಯು ಬರಬೇಕಾಗುವುದು. ೩ನೇ ಕಲ್ಪದಲ್ಲಿ ಜಾತಿ ವ್ಯಕ್ತಿ (ಇದಂ ರಜತತ್ವ)ಗಳಿಗೆ ಅನ್ಯೋನ್ಯಾಭಾವವು ತೋರುವುದಿಲ್ಲವೆಂದು ಹೇಳಲು ಆಗುವುದಿಲ್ಲ. ಅಪರ್ಯಾಯ ಶಬ್ದವನ್ನು ಸ್ಮರಿಸಿಕೊಡತಕ್ಕ ಜಾತಿ ವ್ಯಕ್ತಿಗಳಿಗೆ ಅನ್ಯೋನ್ಯಾಭಾವವು ತೋರುವುದಿಲ್ಲವೆಂದಲ್ಲ, ಅಂದರೆ ಭೇದವನ್ನು ತೋರಿಸಿಕೊಡತಕ್ಕ ಅಸಂಕೀರ್ಣವಾದ ಸ್ವರೂಪಜ್ಞಾನವು ಆಗುವಾಗ ಭೇದವು ತೋರುವುದಿಲ್ಲವೆನ್ನುವುದು ಯುಕ್ತವಲ್ಲ. ಮತ್ತು ಪರರಿಗೆ ಅನ್ಯೋನ್ಯಾಭಾವವೆಂದರೆ ಅನ್ಯೋನ್ಯಸ್ವರೂಪವೇ. ಅದು ತೋರಿಕೊಂಡಿರುವಾಗ ತೋರುವುದಿಲ್ಲವೆನ್ನುವುದು ಹೇಗೆ ಕೂಡುತ್ತದೆ? ಜಾತಿ ವ್ಯಕ್ತಿಗಳಿಗೆ ಅನ್ಯೋನ್ಯಾಭಾವವು ಕೂಡುವುದಿಲ್ಲವೆನ್ನುವುದು ಕೂಡದಿರುವುದರಿಂದಲೂ ಅನ್ಯೋನ್ಯಾಭಾವವು ಅನ್ಯೋನ್ಯಸ್ವರೂಪವಾಗಿರುವುದರಿಂದ ಸ್ವರೂಪವು ತೋರಿಕೊಂಡಿರುವಾಗ ಅನ್ಯೋನ್ಯಾಭಾವವು ತೋರುವುದಿಲ್ಲವೆನ್ನುವುದು ಕೂಡಲಾರದು. ಆದಪ್ರಯುಕ್ತ ಇದಂರಜತಗಳಿಗೆ ಅಂದರೆ ವ್ಯಕ್ತಿಗಳಿಗೇನೇ ಅನ್ಯೋನ್ಯಾಭಾವವು

ತೋರುವುದಿಲ್ಲವೆನ್ನುವುದೂ ಕೂಡಲಾರದು. ಆನೇದ್ದೂ ಕೂಡಲಾರದು. ರಜತದಲ್ಲಿ ಕೂಡ ದಿರುವ ಎದುರಿನಲ್ಲಿರುವ ಶುಕ್ತಿಯಲ್ಲಿರುವ ಇದಂತ್ವವೂ ಎದುರಿನಲ್ಲಿರುವ ವಸ್ತುವಿನಲ್ಲಿ ಇಲ್ಲ ದಿರುವ ರಜತದಲ್ಲಿರುವ ರಜತತ್ವವೂ ಗೃಹೀತವಾಗುತ್ತದೆ. ಆದುದರಿಂದ ಇಂತಹ ವೈಧರ್ಮ್ಯವು ಗೃಹೀತವಾಗಿರುವುದರಿಂದ ವೈಧರ್ಮ್ಯಾಗ್ರಹರೂಪವಾದ ಭೇದಾಗ್ರಹವೂ ಕೂಡಲಾರದು.

(73) ವಿಪರ್ಯಯವನ್ನು ಅಂಗೀಕರಿಸುವವರೂ ಕೂಡ ಭೇದಾಗ್ರಹವನ್ನು ಅಂಗೀಕರಿ ಸಲೇಬೇಕು. ಅಲ್ಲಿ ಭೇದವು ಧರ್ಮಿಸ್ವರೂಪವೆಂದು ವೇದಾಂತಿಗಳು ಒಪ್ಪಿರುವುದರಿಂದ ಧರ್ಮಿಯು ಗೃಹೀತವಾಗಿಕೊಂಡಿರುವಾಗ ಅದರ ಸ್ವರೂಪಭೂತವಾದ ಭೇದದ ಅಗ್ರಹವು ಹೇಗೆ ಕೂಡುತ್ತದೆಂದು ಪ್ರಾಭಾಕರರು ಹೇಳಿದರೆ ಭೇದವು ಕೇವಲ ಧರ್ಮಿಸ್ವರೂಪವೆಂದು ಅಂಗೀಕರಿಸುವುದಿಲ್ಲ. ಅಂದರೆ ನಿರ್ವಿಶೇಷಾಭೇದವನ್ನು ಅಂಗೀಕರಿಸುವುದಿಲ್ಲ. ತಥಾಚ ಭೇದಕ್ಕೆ ಧರ್ಮಿಯಿಂದ ಅತ್ಯಂತಾಭೇದವಿದ್ದರೂ ವಿಶೇಷಬಲದಿಂದ ಇದಂ ಪದಾರ್ಥದ ಜ್ಞಾನ ವಾಗುವಾಗ ರಜತಭೇದದ ಜ್ಞಾನವಾಗದಿರುವುದು ನಮ್ಮ ಮತ ಪ್ರಕಾರ ಯುಕ್ತವೇ ಆಗುತ್ತದೆ. (74) ಎದುರಿರುವ ವಸ್ತುವಿನಲ್ಲಿರುವ ಶುಕ್ತಿತ್ವವೊದಲಾದ ಧರ್ಮವು ರಜತವ್ಯಾವರ್ತಕವು. ಅಂದರೆ ರಜತಕ್ಕಿಂತ ಬೇರೆ ಎನ್ನುವ ಬುದ್ಧಿಯನ್ನು ಹುಟ್ಟಿಸುತ್ತದೆ. ರಜತದಲ್ಲಿರುವ ವ್ಯವಹಿತ ದೇಶತ್ವ (ದೂರದಲ್ಲಿರುವಿಕೆ) ವೊದಲಾದ ಧರ್ಮವು ಎದುರಿರುವ ವಸ್ತುವಿಗಿಂತ ಬೇರೆ ಎನ್ನುವ ಬುದ್ಧಿಯನ್ನು ಹುಟ್ಟಿಸುತ್ತದೆ. ಅವುಗಳ ಜ್ಞಾನವಿಲ್ಲದಿರುವುದೇ ಪ್ರವೃತ್ತಿಯಲ್ಲಿ ಕಾರಣವು, ಎಂದು ಹೇಳುವುದು ಅಸಂಗತವು. ಎದುರಿರುವ ವಸ್ತುವಿನಲ್ಲಿ ಶುಕ್ತಿತ್ವಜ್ಞಾನವಿಲ್ಲದಿದ್ದರೆ ಶುಕ್ತಿ ಯನ್ನು ಅಪೇಕ್ಷಿಸುವವನು ಆ ಶುಕ್ತಿಯಲ್ಲಿ ಪ್ರವೃತ್ತಿಯನ್ನು ಮಾಡದಿರಲಿ. ರಜತದಲ್ಲಿರುವ ಅಸನ್ನಿಹಿತತ್ವ (ದೂರದಲ್ಲಿರುವಿಕೆ) ವೊದಲಾದ ಧರ್ಮವನ್ನು ತಿಳಿಯದಿದ್ದರೆ ರಜತಾರ್ಥಿಯು ವ್ಯವಹಿತರಜತದಲ್ಲಿ ಪ್ರವೃತ್ತಿಯನ್ನು ಮಾಡದಿರಲಿ. ರಜತವನ್ನು ಅಪೇಕ್ಷಿಸುವವನಿಗೆ ಎದು ರಿರುವ ವಸ್ತುವಿನಲ್ಲಿ ಪ್ರವೃತ್ತಿಯಾಗಲಿಕ್ಕೆ ಕಾರಣವೇನು.? (75) ಮತ್ತು ಭೇದಜ್ಞಾನ ವಿಲ್ಲದಿರುವುದರಿಂದ ಒಂದನ್ನು (ರಜತವನ್ನು) ಅಪೇಕ್ಷಿಸುವವನಿಗೆ ಇನ್ನೊಂದರಲ್ಲಿ (ಶುಕ್ತಿಯಲ್ಲಿ) ಪ್ರವೃತ್ತಿಯಾಗುತ್ತದೆಂದು ಹೇಳುವವರನ್ನು ಕುರಿತು ೧. ರಜತವನ್ನು ಅಪೇಕ್ಷಿಸುವವನಿಗೆ ಶುಕ್ತಿಯಲ್ಲಿ ಪ್ರವೃತ್ತಿಯೇ ಭೇದಜ್ಞಾನವಿಲ್ಲದಿರುವುದರಿಂದ, ಬೇರೆ ಪ್ರವೃತ್ತಿಯೆಲ್ಲವೂ ಅಂದರೆ ಸತ್ಯರಜತಸ್ಥಳದಲ್ಲಿ ಇದು ಬೆಳ್ಳಿಯು ಎಂದು ಜ್ಞಾನ ಬಂದ ಮೇಲೆ ರಜತವನ್ನು ಅಪೇಕ್ಷಿಸುವವ ನಿಗೆ ರಜತದಲ್ಲಿ ಪ್ರವೃತ್ತಿರೂಪ ವ್ಯವಹಾರವಾದರೂ ಅಭೇದಜ್ಞಾನದಿಂದ ಎಂದು ಹೇಳುವಿರೋ? ೨ ಅಥವಾ ಎಲ್ಲಾ ಪ್ರವೃತ್ತಿಯೂ ಭೇದಜ್ಞಾನವಿಲ್ಲದಿರುವುದರಿಂದಲೇ ಎಂದು ಹೇಳುತ್ತೀರೋ? ಎಂದು ಕೇಳಬೇಕು. ಇವುಗಳಲ್ಲಿ ೧ನೇದ್ದು ಕೂಡಲಾರದು. ಕೆಲವು ಕಡೆ ಭೇದವನ್ನು ತಿಳಿಯದಿರುವುದರಿಂದ ಪ್ರವೃತ್ತಿಯು, ಕೆಲವು ಕಡೆ ಅಭೇದವನ್ನು ತಿಳಿದು ಪ್ರವೃ ತ್ತಿಯು ಎಂದು ಹೇಳಿದರೆ ಪ್ರವೃತ್ತಿಸಾಮಾನ್ಯಕ್ಕೆ ಒಂದೇ ಕಾರಣವಿಲ್ಲವೆಂದಾಗಬೇಕಾಗುವುದು. (76) ಹಾಗಾದರೆ ಎಲ್ಲಾಕಡೆ ಪ್ರವೃತ್ತಿಯಲ್ಲಿ ಅಭೇದಜ್ಞಾನವೇ ಪ್ರವರ್ತಕವು. ಅಭೇದ ಗ್ರಹದಲ್ಲಿಯೂ ಭೇದಾಗ್ರಹದಲ್ಲಿಯೂ ಭೇದವು ವಿಷಯವಾಗದಿರುವುದರಿಂದ ಅದರ ಸಾದೃಶ್ಯದಿಂದ ಅಂದರೆ ಭೇದವನ್ನು ವಿಷಯೀಕರಿಸದಿರುವುದರಿಂದ ಭೇದಾಗ್ರಹವೂ ಪ್ರವೃತ್ತಿಗೆ ಕಾರಣವಾಗುವುದು. ಹೇಗೆಂದರೆ, 'ಇದಂ ರಜತಂ' ಎನ್ನುವ ಸತ್ಯರಜತಸ್ಥಳದಲ್ಲಿ ಇಷ್ಟ ಸಾಧನವಾದ ರಜತವೂ ಎದುರಿರುವ ವಸ್ತುವೂ ಇವುಗಳನ್ನು ವಿಷಯೀಕರಿಸಿರುವ ಜ್ಞಾನಾಂಶ ಗಳಿಗೆ ಸ್ವರೂಪದಿಂದಲೂ, ವಿಷಯದಿಂದಲೂ ಭೇದವಿಲ್ಲದಿರುವುದರಿಂದಲೇ ಭೇದಾಗ್ರಹವು. ಹಾಗೆಯೇ ಇಲ್ಲಿಯೂ ಅವ್ಯಾವರ್ತಕವಾದ (ಭೇದಬುದ್ಧಿಯನ್ನು ಹುಟ್ಟಿಸದಿರುವ) ಇದಂತ್ವರೂಪ

ಧರ್ಮವು ತೋರುತ್ತದೆ. ವ್ಯಾವರ್ತಕವಾದ ಶುಕ್ತಿತ್ವ ಮೊದಲಾದುದು ಧರ್ಮವು ವೇದ್ಯಗಳಾದ ವಿಷಯಗಳಿಗೂ ಜ್ಞಾನಗಳಿಗೂ ತೋರುವುದಿಲ್ಲ. ಅಂತೂ ಪ್ರವೃತ್ತಿಯನ್ನು ಹುಟ್ಟಿಸುವ ಒಂದಾಗಿರುವ ಸತ್ಯರಜತ ಸ್ಥಳದಲ್ಲಿರುವ 'ಇದಂ ರಜತಂ' ಎನ್ನುವ ಜ್ಞಾನದಿಂದ ಸ್ವರೂಪದಿಂದಲೂ, ವಿಷಯದಿಂದಲೂ ಅಗೃಹೀತ ಭೇದವಿರುವ ತನವೆಂಬುವ ಸಾದೃಶ್ಯವುಳ್ಳ ಗ್ರಹಣ-ಸ್ಮರಣಾತ್ಮಕಗಳಾದ ೧. ಇದಂ, ೨. ರಜತಂ ಎನ್ನುವ ಎರಡು ಜ್ಞಾನಗಳು ಪ್ರವೃತ್ತಿಯನ್ನು ಹುಟ್ಟಿಸುತ್ತವೆ ಎಂದು ಹೇಳಕೂಡದು. ಹೀಗೆ ಹೇಳಿದರೂ ಪ್ರವೃತ್ತಿಗೆ ಒಂದೇ ಕಾರಣವೆಂದು ಹೇಳಿದಂತೆ ಆಗಲಿಲ್ಲ. (77) ಪ್ರವೃತ್ತಿಯನ್ನುಂಟುಮಾಡುವ ಜ್ಞಾನದಿಂದ ಸಾದೃಶ್ಯವಿದ್ದ ಪ್ರಯುಕ್ತ ಪ್ರವೃತ್ತಿಯುಂಟಾಗುತ್ತದೆನ್ನುವುದನ್ನು ಇಲ್ಲಿಯೇ (ಭ್ರಮಸ್ಥಳದಲ್ಲಿ ಹೇಳುವ ಅಗೃಹೀತ ಭೇದವುಳ್ಳ ಎರಡು ಜ್ಞಾನಗಳು ಎನ್ನುವಲ್ಲಿಯೇ) ಕಲ್ಪಿಸುತ್ತೀರೋ? ಅಥವಾ ಯಾವುದು ಯಾವುದರಿಂದ ಸದೃಶವೋ ಅದು ಅದರ ಕಾರ್ಯವನ್ನು ಮಾಡುತ್ತದೆಂದು ಸರ್ವತ್ರ ನಿಯಮವನ್ನು ಹೇಳುತ್ತೀರೋ? ೧ನೇದ್ದು ಕೂಡಲಾರದು. ಎಲ್ಲಿಯೂ ಕಾಣದಿರುವುದನ್ನು ಇಲ್ಲಿಯೇ ಕಲ್ಪಿಸಿದರೆ ಅದೃಷ್ಟವನ್ನು ಕಲ್ಪಿಸಿದಂತೆಯೇ ಆಗುವುದು. ಪ್ರವೃತ್ತಿರೂಪಕಾರ್ಯವು ಆಗುವುದಕ್ಕಾಗಿ ಹೀಗೆ ಹೇಳುತ್ತೇವೆ, ಅಂದರೆ, ಪ್ರವರ್ತಕ ಸಾದೃಶ್ಯದಿಂದ ಪ್ರವೃತ್ತಿಯೆನ್ನುವುದು ಎಲ್ಲಿಯೂ ಕಾಣದಿದ್ದರೂ, ಇಲ್ಲಿ ಆಗುವುದೆಂದು ಕಲ್ಪಿಸುತ್ತೇವೆನ್ನುವುದು ಸರ್ವಾನುಭವಸಿದ್ಧವಾದ ಭ್ರಮೆಯಿಂದಲೇ ಪ್ರವೃತ್ತಿಯು ಕೂಡುವುದರಿಂದ ಯುಕ್ತವಲ್ಲ. ೨ನೇದ್ದೂ ಕೂಡಲಾರದು. ಬೆಂಕಿಗೆ ಸದೃಶವಾದ ಗುಲುಗುಂಜಿ ರಾಶಿಯಿಂದ ಹಿಮವು (ಚಳಿಯು) ಹೋಗಲಾರದಷ್ಟೆ. (78) ಹಾಗಾದರೆ ಇದು ರಜತವೆಂದು 'ರಜತರೂಪವಾದ ಅರ್ಥವು ವಿಷಯವಾಗಿರುವ ಪ್ರಯುಕ್ತ ರಜತಾಪರೋಕ್ಷ ಜ್ಞಾನಕ್ಕೆ ವಿಷಯವು ಕಾರಣವಾಗಿರುವುದರಿಂದ ರಜತಸಾಧ್ಯವಾದ ಬುದ್ಧಿಯು ರಜತಕ್ಕೆ ಸದೃಶವಾದ ಶುಕ್ತಿಯಿಂದ ನಿಮ್ಮ (ವೇದಾಂತಿಗಳ) ಮತದಲ್ಲಿ ಆಗುತ್ತದೋ, ಹಾಗೆಯೇ (ಅಂದರೆ ರಜತ ಸದೃಶವಾದ ಶುಕ್ತಿಯು ನಿಮ್ಮ ಮತದಲ್ಲಿ ರಜತಜ್ಞಾನವನ್ನು ಹುಟ್ಟಿಸುತ್ತದೋ ಹಾಗೆಯೇ) ಸತ್ಯರಜತ ಸ್ಥಳದಲ್ಲಿ ಬರುವ 'ಇದಂ ರಜತಂ' ಎನ್ನುವ ವಿಶಿಷ್ಟವಾದ ಒಂದು ಜ್ಞಾನದಿಂದ ಭೇದಾಗ್ರಹದಿಂದ ಸದೃಶಗಳಾದ, ಗ್ರಹಣ-ಸ್ಮರಣಾತ್ಮಕಗಳಾದ ಇದಂ ರಜತಂ ಎನ್ನುವ ಎರಡು ಜ್ಞಾನಗಳಿಂದ ಪ್ರವೃತ್ತಿಯೂ ಏಕೆ ಆಗಲಾರದು? ಹೀಗೆ ಪ್ರಾಭಾಕರರು ಹೇಳಕೂಡದು. ನಮ್ಮ ಮತದಲ್ಲಿ ರಜತಜ್ಞಾನವು ರಜತಸಾಧ್ಯವೆಂದೂ ಹೇಳಿದ್ದು ಅಯುಕ್ತವು. ಅರ್ಥವು ಸಾಕ್ಷಾತ್ ಜ್ಞಾನಕ್ಕೆ ಕಾರಣವೆಂದು ಒಪ್ಪುವುದಿಲ್ಲ. ಚಕ್ಷುರಿಂದ್ರಿಯದಿಂದ ಭ್ರಾಂತಿಯು ಹುಟ್ಟಬೇಕಾದರೆ ಕಾಚಾದಿಗಳಂತೆಯೇ ಸಾದೃಶ್ಯವು ದೋಷರೂಪವಾಗಿ ಭ್ರಮೆಯನ್ನು ಹುಟ್ಟಿಸತಕ್ಕದ್ದು. ತಥಾ ಚ ಇದಂ ರಜತಂ ಎನ್ನುವ ಬುದ್ಧಿಯು ರಜತಕ್ಕೆ ಸಮಾನವಾದ ಶುಕ್ತಿಯಿಂದ ಬರುತ್ತದೆಂದು ನಮ್ಮ ಮತದಲ್ಲಿ ಹೇಳಿದ್ದು ಅಯುಕ್ತವು. (79) ಮತ್ತು ಈ ಎರಡು ಜ್ಞಾನಗಳು ಪ್ರವರ್ತಕ ಜ್ಞಾನದಿಂದ ಭೇದಾಗ್ರಹರೂಪ ಸಾದೃಶ್ಯಮಾತ್ರವಿರುವುದರಿಂದಲೇ ಪ್ರವೃತ್ತಿಯನ್ನು ಹುಟ್ಟಿಸುವುದಾದರೆ ನಿವೃತ್ತಿಯನ್ನೂ ಏಕೆ ಮಾಡಲಾರವು? ಆ ಎರಡು ಜ್ಞಾನಗಳಲ್ಲಿ ನಿವರ್ತಕವಾದ (ಪ್ರವೃತ್ತಿಯನ್ನು ಮಾಡದಿರುವ) ಇದು ರಜತವಲ್ಲ ಎನ್ನುವ ಭೇದಗ್ರಹದಿಂದ ಅಭೇದಾಗ್ರಹಣ ರೂಪವಾದ ಸಾದೃಶ್ಯವಿದೆ. ತಥಾ ಚ ಭೇದಾಗ್ರಹವೆನ್ನುವ ಪ್ರವರ್ತಕ ಸಾದೃಶ್ಯದಿಂದ ಇದಂ ರಜತಂ ಎನ್ನುವ ಎರಡು ಜ್ಞಾನಗಳು ಪ್ರವೃತ್ತಿಯನ್ನು ಹುಟ್ಟಿಸುವುದಾದರೆ ನಿವರ್ತಕವಾದ ಭೇದಗ್ರಹದ ಅಭೇದಾಗ್ರಹಣ ರೂಪಸಾದೃಶ್ಯದಿಂದ ನಿವೃತ್ತಿಯೂ ಆಗಬೇಕಾಗುವುದು. (80) ಹಾಗಾದರೆ ಶುಕ್ತಿಗೂ ರಜತಕ್ಕೂ ಭೇದಜ್ಞಾನವಿಲ್ಲದಿರುವುದು ನಿಮ್ಮ ಮತದಲ್ಲಿ ಅಭೇದಜ್ಞಾನವನ್ನು (ಭ್ರಮರೂಪ ವಿಶಿಷ್ಟಜ್ಞಾನವನ್ನು) ಹೇಗೆ ಹುಟ್ಟಿಸುತ್ತದೋ, ಹಾಗೆಯೇ

ನಾವು ಹೇಳುವ ರೀತಿಯಿಂದ ಪ್ರವೃತ್ತಿಯನ್ನು ಹುಟ್ಟಿಸಬಹುದು. ಅಂದರೆ, ಭ್ರಮೆಯನ್ನು ಹುಟ್ಟಿಸತಕ್ಕ ಭೇದಾಗ್ರಹದಿಂದಲೇ ಪ್ರವೃತ್ತಿಯು ಕೂಡುವಾಗ ಪ್ರವೃತ್ತಿಜನಕವಾಗಿ ಅಭೇದಗ್ರಹರೂಪವಾದ ಭ್ರಾಂತಿ ಎನ್ನುವ ವಿಶಿಷ್ಟಜ್ಞಾನವನ್ನು ಏಕೆ ಕಲ್ಪಿಸುವುದು? ಹೀಗೆ ಹೇಳಕೂಡದು. ಅಂದರೆ, ಭೇದಾಗ್ರಹವು ಭ್ರಾಂತಿಯನ್ನು ಹುಟ್ಟಿಸುವುದಾದರೂ ಪ್ರವೃತ್ತಿಯನ್ನು ಹುಟ್ಟಿಸಲಾರದು. ಜ್ಞಾನಗಳನ್ನು ಹುಟ್ಟಿಸಲಿಕ್ಕೆ ಕಾರಣಗಳೇ ಸ್ವತಂತ್ರಗಳು. ಪುರುಷನಲ್ಲ. ಆ ಕಾರಣಗಳು ದೋಷಯುಕ್ತಗಳಾದ ಸಾಮಗ್ರಿಗಳಿಂದೊಡಗೂಡಿದ್ದಾದರೆ ಕೆಟ್ಟ ಜ್ಞಾನವನ್ನು ಹುಟ್ಟಿಸುತ್ತವೆ. ಪುರುಷರ ಆಕಾಂಕ್ಷೆಯನ್ನು ಅನುಸರಿಸುವುದಿಲ್ಲ ಪುರುಷನಿಗೆ ಇಷ್ಟವಾಗದಿರುವ ಬಿಡಲರ್ಹವೂ, ಉದಾಸೀನವೂ ಆದ ವಸ್ತುಗಳ ಜ್ಞಾನವನ್ನು ಹುಟ್ಟಿಸುತ್ತವೆ. ಪ್ರವೃತ್ತಿಯಲ್ಲಾದರೂ ಪುರುಷರೇ ಸ್ವತಂತ್ರರು, ಜ್ಞಾನವಲ್ಲ. ಪುರುಷನಾದರೂ ಜ್ಞಾನವಿದ್ದಾಗ್ಯೂ ಇಷ್ಟವಾದ (ಉಪಾದೇಯವಾದ) ವಸ್ತುವಿನಲ್ಲಿಯೇ ಪ್ರವರ್ತಿಸುತ್ತಾನೆ. ಜ್ಞಾನವು ಹುಟ್ಟಿತೆಂದೇ ಉದಾಸೀನ ಮತ್ತು ಹೇಯವಸ್ತುಗಳಲ್ಲಿ ಪ್ರವರ್ತಿಸಲಾರನು. ತಥಾ ಚ ಭೇದಾಗ್ರಹವೆನ್ನುವ ದೋಷದಿಂದ ಕೂಡಿರುವ ಕಣ್ಣು ಮೊದಲಾದವುಗಳು ಭ್ರಮೆಯನ್ನು ಹುಟ್ಟಿಸುತ್ತವೆ. ಯದ್ಯಪಿ ಭೇದಾಗ್ರಹವು ಅಭೇದಜ್ಞಾನವನ್ನು ಹುಟ್ಟಿಸುತ್ತದೆ. ಆದಾಗ್ಯೂ ಅದು ಪ್ರವೃತ್ತಿಯಲ್ಲಿ ಪುರುಷನೇ ಸ್ವತಂತ್ರನಾಗಿರುವುದರಿಂದ ಪ್ರವೃತ್ತಿಯನ್ನು ಹುಟ್ಟಿಸಲಾರದು. (81) ಮತ್ತು ಜ್ಞಾನವು (೧) ಅರ್ಥದಲ್ಲಿ ಪ್ರವೃತ್ತಿಯನ್ನು ಸಾಕ್ಷಾತ್ತಾಗಿ ಅಂದರೆ ಇಚ್ಛಾಪ್ರಯತ್ನಗಳನ್ನು ಹುಟ್ಟಿಸದೆ ಹುಟ್ಟಿಸುತ್ತದೋ, ಅಥವಾ (೨) ಜಾನಾತಿ=ತಿಳಿಯುತ್ತಾನೆ, ಇಚ್ಛತಿ=ಇಚ್ಛಿಸುತ್ತಾನೆ, ಪ್ರಯತತೇ=ಪ್ರಯತ್ನಪಡುತ್ತಾನೆ ಎಂದು ಕ್ರಮವಿದ್ದಪ್ರಯುಕ್ತ ಇಚ್ಛಾಪ್ರಯತ್ನಗಳನ್ನು ಹುಟ್ಟಿಸಿ ಹುಟ್ಟಿಸುತ್ತದೋ, ಒಂದನೇದು ಕೂಡಲಾರದು. ಬಿಡಲರ್ಹಗಳೂ, ಉದಾಸೀನಗಳೂ ಆದ ವಸ್ತುಗಳಲ್ಲಿಯೂ ಪ್ರವೃತ್ತಿಯು ಬರಬೇಕಾಗುವುದು. ಎರಡನೇ ಕಲ್ಪದಲ್ಲಿ ಗ್ರಹಿಸಲ್ಪಡದಿರುವ ಭೇದವುಳ್ಳ ಎರಡು ಜ್ಞಾನಗಳಿಂದ ಪ್ರವೃತ್ತಿಯು ಹೇಗೆ ಆಗುವುದು? ಎದುರಿರುವ ವಸ್ತುವಿನಲ್ಲಿ ಪ್ರವೃತ್ತಿಯಾಗಲಿಕ್ಕೆ ಮುಖ್ಯಕಾರಣವು ಪ್ರಯತ್ನವು. ಅದಕ್ಕೆ ಇಚ್ಛೆಯು ಕಾರಣವು. ಇಚ್ಛೆಗೆ ಇಷ್ಟಸಾಧನತಾನುಮಾನವು ಕಾರಣವು. ಅದು ಕೂಡಲಾರದು. ಏಕೆಂದರೆ, ಇದಂ ಇಷ್ಟಸಾಧನಂ ರಜತತ್ವಾತ್ ಇದು ಇಷ್ಟಕ್ಕೆ ಸಾಧನವು, ರಜತವಾಗಿರುವುದರಿಂದ ಎಂದು ಇಷ್ಟಸಾಧನತ್ವವನ್ನು ಅನುಮೇಯಿಸಬೇಕು. ಅದು ಕೂಡಲಾರದು. ಎರಡು ಜ್ಞಾನಗಳು ಪ್ರವೃತ್ತಿಗೆ ಕಾರಣಗಳು ಎನ್ನುವ ನಿಮ್ಮ ಪಕ್ಷದಲ್ಲಿ ರಜತತ್ವವು ಪಕ್ಷೀಭೂತವಾದ ಎದುರಿರುವ ಇದಂ ಪದಾರ್ಥದಲ್ಲಿ ಇಲ್ಲದಿರುವುದರಿಂದ ಸ್ವರೂಪಾಸಿದ್ಧಿಯು ಬರುವುದು. (82) ಹಾಗಾದರೆ ರಜತದಲ್ಲಿ ತಿಳಿದಿರುವ ರಜತತ್ವದಿಂದ ರಜತದಲ್ಲಿ ಇಷ್ಟಸಾಧನತ್ವಜ್ಞಾನವು ಉಂಟಾಗುವುದು. ಇಷ್ಟಸಾಧನವೆಂದು ತಿಳಿದಿರುವ ರಜತದಿಂದ ಭೇದವು ತಿಳಿಯದಿರುವುದರಿಂದ ಎದುರಿರುವ ವಸ್ತುವಿನಲ್ಲಿ ಇಚ್ಛೆಯು ಉಂಟಾಗುವುದೆಂದು ಹೇಳಕೂಡದು. ಹಾಗಾದರೆ ಭೇದಗ್ರಹ ಸಾದೃಶ್ಯರೂಪವಾದ ಅಭೇದಾಗ್ರಹವು ಎದುರಿರುವ ವಸ್ತುವಿನಲ್ಲಿ ಇರುವುದರಿಂದ ಉಪೇಕ್ಷೆಯು ಸಹಾ ಬರಬೇಕಾಗುವುದು. ಅಂದರೆ, ಇಷ್ಟಸಾಧನವೆಂದು ತಿಳಿದಿರುವ ರಜತದಿಂದ ಭೇದವು ತಿಳಿಯದಿರುವುದರಿಂದ ಶುಕ್ತಿಯಲ್ಲಿ ಇಚ್ಛೆಯುಂಟಾಗುವುದಾದರೆ ಅಂತಹ ರಜತದಿಂದ ಅಭೇದವು ತಿಳಿಯದಿರುವುದರಿಂದ ಉಪೇಕ್ಷೆಯು ಸಹಾ ಉಂಟಾಗಬೇಕಾಗುವುದು.

(83) ಹಾಗಾದರೆ 'ಸರ್ವೋಽಪಿ ಭೇದಾಗ್ರಹಾತ್' ಎಲ್ಲಾ ವ್ಯವಹಾರವೂ, ಭೇದಾಗ್ರಹದಿಂದ ಎನ್ನುವ ಎರಡನೇ ಪಕ್ಷವಾಗಲಿ, ಏಕೆಂದರೆ— ಸತ್ಯರಜತದಲ್ಲಿ ರಜತಜ್ಞಾನವೂ, (ವಿಶೇಷ್ಯಜ್ಞಾನವೂ) ರಜತತ್ವ ಜಾತಿಜ್ಞಾನವೂ (ವಿಶೇಷಣಜ್ಞಾನವೂ) ಇದೆ. ರಜತತ್ವಜಾತಿ ಸಂಸರ್ಗವು ರಜತವ್ಯಕ್ತಿಯಲ್ಲಿ ಇಲ್ಲ ಎನ್ನುವ ಜ್ಞಾನವು ಇಲ್ಲ. ವಿಶೇಷ್ಯಜ್ಞಾನ, ವಿಶೇಷಣಜ್ಞಾನ, ಈ ಎರಡರ

ಅಸಂಸರ್ಗಾಗ್ರಹ ಎನ್ನುವ ಮೂರು ಕಾರಣಗಳಿಂದಲೇ ರಜತವನ್ನು ಇಚ್ಛಿಸುವವರಿಗೆ ರಜತದಲ್ಲಿ ಪ್ರವೃತ್ತಿಯು ಆಗುತ್ತದೆ. ಶುಕ್ತಿ-ರಜತಗಳಿಗೆ ತಾದಾತ್ಮ್ಯವು ತಿಳಿಯುವುದಿಲ್ಲ. ಜಾತಿ ವ್ಯಕ್ತಿಗಳಿಗೆ ಅಭೇದವಿಲ್ಲ. ರಜತದಲ್ಲಿ ರಜತತ್ವಸಂಸರ್ಗಜ್ಞಾನವು ಪ್ರವೃತ್ತಿಗೆ ಕಾರಣವೆಂದು ಹೇಳಕೂಡದು. ಜಾತಿ ವ್ಯಕ್ತಿಗಳಿಗೆ ಸಮವಾಯವು ಸಂಸರ್ಗವು. ಆ ಸಮವಾಯ ಸಂಬಂಧವು ಚಕ್ಷುರಾದಿ ಇಂದ್ರಿಯ ಸನ್ನಿಕರ್ಷವಿಲ್ಲದಿರುವುದರಿಂದ ಪ್ರತ್ಯಕ್ಷವಾಗಲಾರದು. ಲಿಂಗವಿಲ್ಲದಿರುವುದರಿಂದ ಅನುಮಾನದಿಂದಲೂ ಅದನ್ನು ತಿಳಿಯಲು ಸಾಧ್ಯವಿಲ್ಲ. ಪ್ರಾಭಾಕರರ ಮತದಲ್ಲಿ 'ನೀಲೋ ಘಟಃ ಇತ್ಯಾದ್ಯನುಭವಃ ಸಂಬಂಧಿಭಿನ್ನ ವಿಶೇಷಣ ವಿಶೇಷ್ಯ ಸಂಬಂಧ ವಿಷಯಃ ವಿಶಿಷ್ಟ ಜ್ಞಾನತ್ವಾತ್ ದಂಡೀ ಪುರುಷಃ ಇತಿ ವಿಶಿಷ್ಟಜ್ಞಾನವತ್= ದಂಡವುಳ್ಳವನು ಪುರುಷನು ಎನ್ನುವ ವಿಶಿಷ್ಟಜ್ಞಾನದಲ್ಲಿ ವಿಶಿಷ್ಟಜ್ಞಾನತ್ವವೆನ್ನುವ ಹೇತುವಿದ್ದ ಪ್ರಯುಕ್ತ ಸಂಬಂಧಿಯಿಂದ ಬೇರೆಯಾದ ಸಂಯೋಗರೂಪಸಂಬಂಧ ವಿಷಯಕತ್ವವು ಸಿದ್ಧವಾಗಿದೆ; ಹಾಗೆಯೇ ನೀಲರೂಪವುಳ್ಳದ್ದು ಘಟವು ಇದು ಮೊದಲಾದ ಅನುಭವದಲ್ಲಿ ವಿಶಿಷ್ಟಜ್ಞಾನತ್ವವೆನ್ನುವ ಹೇತುವಿದ್ದ ಪ್ರಯುಕ್ತ ಸಂಬಂಧಿಯಿಂದ ಬೇರೆಯಾದ ವಿಶೇಷಣಕ್ಕೂ ವಿಶೇಷ್ಯಕ್ಕೂ ಇರತಕ್ಕ ಸಮವಾಯ ಸಂಬಂಧ ವಿಷಯಕತ್ವವಿದೆ ಎಂದು ಸಮವಾಯವನ್ನು ಸಾಧಿಸತಕ್ಕ ಅನುಮಾನವು. ಅಲ್ಲಿ ಹೇತುಭೂತವಾದ ವಿಶಿಷ್ಟಜ್ಞಾನತ್ವವೆಂದರೆ ಅವಿಸಂವಾದಿಯಾದ ಪ್ರವೃತ್ತಿಯನ್ನು ಹುಟ್ಟಿಸುವ, ಪರಸ್ಪರವಾಗಿ ಅಪೇಕ್ಷಿಸಿಕೊಂಡಿರುವ ಧರ್ಮಧರ್ಮಿಗಳಿಗೆ ಒಂದೇ ಕಾಲದಲ್ಲಿ ತಿಳಿದಿರುವಿಕೆಯು. ಪ್ರವೃತ್ತಿಯನ್ನು ಮಾಡುವುದಕ್ಕಿಂತ ಮೊದಲು ಅವಿಸಂವಾದಿತ್ವವನ್ನು ತಿಳಿಯಲು ಸಾಧ್ಯವಿಲ್ಲ ಅಂತೂ ಈ ಹೇತುವಿನಿಂದ ಸಮವಾಯ ಸಂಬಂಧದ ಜ್ಞಾನವು ಬಂದ ಮೇಲೆ ಸಂಸರ್ಗಜ್ಞಾನವು ಬರುವುದರಿಂದ ಪ್ರವೃತ್ತಿಯು ಪ್ರವೃತ್ತಿಯಾದ ಮೇಲೆ ಆ ಹೇತುವಿನಿಂದ ಸಂಸರ್ಗಜ್ಞಾನವು ಹೀಗೆ ಅನ್ಯೋನ್ಯಾಶ್ರಯವು. ಪ್ರವೃತ್ತಿಗೆ ಕಾರಣಭೂತವಾದುದೆಲ್ಲವೂ ಅಂದರೆ (ಇದಂ ಪದಾರ್ಥರೂಪ ವಿಶೇಷ್ಯಜ್ಞಾನವೂ ರಜತತ್ವಜಾತಿಜ್ಞಾನವೂ ಈ ಎರಡರ ಅಸಂಸರ್ಗಾಗ್ರಹವೂ ಹೀಗೆ ಮೂರು ಸಾಮಗ್ರಿಗಳೂ) ಭ್ರಮೆಯಲ್ಲಿಯೂ (ಪರಸ್ಪರವಾಗಿ ಭೇದಾಗ್ರಹವಿಲ್ಲದಿರುವ ಎರಡು ಜ್ಞಾನಗಳಿರುವ ಸ್ಥಳದಲ್ಲಿಯೂ) ಇದೆ. ಇದರಿಂದಲೇ ಪ್ರವೃತ್ತಿಯು ಕೂಡುವುದರಿಂದ ಭ್ರಮೆಯಿಲ್ಲದಿದ್ದರೆ ಪ್ರವೃತ್ತಿಯು ಕೂಡುವುದಿಲ್ಲವೆನ್ನುವುದು ಹೇಗೆ? ಇದಂ ರಜತಗಳಿಗೆ ಭೇದಜ್ಞಾನವಿಲ್ಲದಿರುವುದಾಗಲೀ ಸತ್ಯರಜತದಲ್ಲಿ ಪ್ರವೃತ್ತಿಗೆ ಕಾರಣವು. ಇಂತಹ ಭೇದಾಗ್ರಹವು ಪ್ರಕೃತದಲ್ಲಿಯೂ ಅಂದರೆ, ಭೇದಾಗ್ರಹವಿಲ್ಲದಿರುವ ಗ್ರಹಣ-ಸ್ಮರಣಾತ್ಮಕಗಳಾದ ಎರಡು ಜ್ಞಾನಗಳೆಂದು ಹೇಳುವ ಸ್ಥಳದಲ್ಲಿಯೂ ಇದೆ. ಎದುರಿರುವ ವಸ್ತುವಿನಲ್ಲಿ ರಜತತ್ವವು ತೋರದೆಹೋದರೆ ಇಚ್ಛೆಯೇ ಕೂಡಲಾರದೆಂದು ಹೇಳಕೂಡದು. 'ಇದಂ ಇಷ್ಟಸಾಧನಂ ರಜತತ್ವೇನ ಸಹ ಅಗೃಹೀತಾಸಂಸರ್ಗವತ್ವಾತ್, ರಜತಾದಗೃಹೀತ ಭೇದವತ್ವಾತ್ = ಇದು ಇಷ್ಟಸಾಧನವು ರಜತತ್ವದಿಂದ ಕೂಡಿಕೊಂಡು ಅಸಂಸರ್ಗವು ಇದರಲ್ಲಿ ತಿಳಿಯದಿರುವುದರಿಂದ, ಅಥವಾ ರಜತದ್ದೆಶೆಯಿಂದ ಭೇದವು ಇದರಲ್ಲಿ ತಿಳಿಯದಿರುವುದರಿಂದ ಹೀಗೆ ಎರಡು ಅನುಮಾನಗಳಿಂದ ಇಷ್ಟಸಾಧನತ್ವವು ತಿಳಿಯುವ ಪ್ರಯುಕ್ತ ಹಿಂದೆ ಹೇಳಿದ ದೋಷವಿಲ್ಲವೆಂದು ಹೇಳಿದ್ದು ಅಯುಕ್ತವು. ಏಕೆಂದರೆ— ಭೇದವೆಂದರೆ ಯಾವುದು ಇತ್ಯಾದಿಗಳಿಂದ ಭೇದಾಗ್ರಹವೂ ಅಸಂಸರ್ಗವೆಂದರೆ ಸಂಸರ್ಗಾಭಾವವು ಇತ್ಯಾದಿಗಳಿಂದ ಅಸಂಸರ್ಗಾಗ್ರಹವೂ ನಿರಾಕರಿಸಲ್ಪಟ್ಟಿದೆ.

(84) ಮತ್ತು ವಿಶಿಷ್ಟಜ್ಞಾನರೂಪವಾದ ಸವಿಕಲ್ಪಕಜ್ಞಾನದಲ್ಲಿ ಸಂಸರ್ಗವು ತೋರುವುದಿಲ್ಲ. ಅಸಂಸರ್ಗಾಗ್ರಹವಿಂದಲೇ ಪ್ರವೃತ್ತಿಯು ಎಂದಂಗೀಕರಿಸಿದರೆ ಕೇವಲ ವಸ್ತುವನ್ನು ಗ್ರಹಿಸುತ್ತದೆ ಎನ್ನುವುದೂ ಅಸಂಸರ್ಗಾಗ್ರಹವೂ ನಿರ್ವಿಕಲ್ಪಕಕ್ಕೆ ಸಮಾನವಾಗಿರುವುದರಿಂದ ಸವಿಕಲ್ಪಕ

ಪ್ರತ್ಯಕ್ಷವೇ ಇಲ್ಲದೆ ಹೋಗಬೇಕಾಗುವುದು. ರೂಪರೂಪಿಭಾವವು (ಧರ್ಮಧರ್ಮಿಭಾವವು) ಸವಿಕಲ್ಪಕದಲ್ಲಿ ತೋರುತ್ತದೆ. ನಿರ್ವಿಕಲ್ಪಕದಲ್ಲಿ ವಸ್ತುಸ್ವರೂಪಮಾತ್ರ ತೋರುತ್ತದೆ. ಹೀಗೆ ನಿರ್ವಿಕಲ್ಪಕಕ್ಕೂ ಸವಿಕಲ್ಪಕಕ್ಕೂ ಭೇದವಿದೆ ಎಂದರೆ ರೂಪರೂಪಿ ಭಾವ ಶಬ್ದಾರ್ಥವನ್ನೇ ನಿರ್ವಿಕಲ್ಪಕದಲ್ಲಿಲ್ಲದಿರುವ ಹಾಗೆ ನಿರ್ವಚನ ಮಾಡಲಿಕ್ಕೆ ಬರುವುದಿಲ್ಲ. ಆ ಧರ್ಮಧರ್ಮಿ ಭಾವವು ಆ ಧರ್ಮಧರ್ಮಿರೂಪ ವಸ್ತುವನ್ನು ನೋಡಿದ ಮೇಲೆ ತಿಳಿಯತಕ್ಕದ್ದು. ನಿರ್ವಿಕಲ್ಪಕ ದಲ್ಲಿ ತೋರದೆ ಇದ್ದರೂ ಸವಿಕಲ್ಪಕದಲ್ಲಿ ತೋರುತ್ತದೆಂದರೆ ಅದು ಸಂಸರ್ಗದಿಂದ ಬೇರೆ ಅಲ್ಲ ದಿರುವ ಪ್ರಯುಕ್ತ ಸಂಸರ್ಗಜ್ಞಾನದಿಂದಲೇ ಸವಿಕಲ್ಪಕವು ಕೂಡುತ್ತದೆ. ನಿರ್ವಿಕಲ್ಪಕವು ಪ್ರವೃತ್ತಿಗೆ ಕಾರಣವಲ್ಲ ಸವಿಕಲ್ಪಕವನ್ನಂಗೀಕರಿಸದಿದ್ದರೆ ಪ್ರವೃತ್ತಿಯೇ ಇಲ್ಲವೆಂದಾಗಬೇಕಾ ಗುವುದು. (86) ಮತ್ತು ಅಸಂಸರ್ಗ ಜ್ಞಾನವಿಲ್ಲದಿರುವುದರಿಂದಲೇ ಎಲ್ಲಾ ಕಡೆಗಳಲ್ಲಿಯೂ ಪ್ರವೃತ್ತಿಯಾಗುತ್ತದೆಂದು ಅಂಗೀಕರಿಸಿದರೆ ಮಧ್ಯಮವೃದ್ಧನ (ಉಪದೇಶ ತೆಗೆದುಕೊಳ್ಳು ವವನ) ಪ್ರವೃತ್ತಿಯೂ ಅಸಂಸರ್ಗಾಗ್ರಹ (ಸಂಸರ್ಗವಿಲ್ಲ ಎನ್ನುವ ಜ್ಞಾನವಿಲ್ಲದಿರುವಿಕೆ)ಪೂರ್ವಕ ವಾಗಿರುವುದರಿಂದ ಸಮೀಪದಲ್ಲಿದ್ದ ಹುಡುಗನಿಗೆ, ಅನೇಯಂ ಪ್ರವೃತ್ತಿಃ ಸಂಸರ್ಗಜ್ಞಾನ ಪೂರ್ವಿಕಾ = ಇವನ ಈ ಪ್ರವೃತ್ತಿಯು ಸಂಬಂಧಜ್ಞಾನಪೂರ್ವಕವಾಗಿದೆ ಎಂದು ಮಧ್ಯಮ ವೃದ್ಧನ ಸಂಸರ್ಗಜ್ಞಾನಾನುಮಾನಕ್ಕೆ ಉಪಾಯವಿಲ್ಲದಿರುವುದರಿಂದ ಪದಗಳಿಗೆ ಅನಯನ ಮೊದಲಾದುವುಗಳಿಂದ ಸಂಬಂಧವುಳ್ಳ ಗವಾದಿರೂಪ ಅರ್ಥದಲ್ಲಿ ವ್ಯುತ್ಪತ್ತಿಯು (ವಾಚ್ಯ-ವಾಚಕ-ಭಾವಸಂಬಂಧಜ್ಞಾನವು) ಕೂಡದಿರುವುದರಿಂದ ಶಬ್ದರೂಪ ಪ್ರಮಾಣಕ್ಕೇನೇ ಹಾನಿಯು ಬರ ಬೇಕಾಗುವುದು. (87) ಹಾಗಾದರೆ ಪ್ರವೃತ್ತಿಮಾಡುವವನಿಗೆ ಸಂಸರ್ಗಜ್ಞಾನವು (ಅನ್ವಯ ಜ್ಞಾನವು) ಉಂಟೇ ಉಂಟು. ಇದ್ದರೂ ಪ್ರವೃತ್ತಿಗೆ ಉಪಯುಕ್ತವಲ್ಲ. ಆದಕಾರಣ ಯಾವ ದೋಷವೂ ಇರುವುದಿಲ್ಲ. ಎಂದರೆ— ಆ ಅನ್ವಯಜ್ಞಾನವು ಪ್ರವೃತ್ತಿಮಾಡುವುದಕ್ಕಿಂತ ನಿಯತ ವಾಗಿ ಮೊದಲು ಇರುವುದಾದರೆ ಅದು ಪ್ರವೃತ್ತಿಜನಕವಾಗಲಿ, ಆಗದೇನೇ ಇರಲಿ, ಹೇಗಾದರೂ ರಜತಾರ್ಥಿಗೆ ಎದುರಿರುವ ವಸ್ತುವಿನಲ್ಲಿ ಪ್ರವೃತ್ತಿಯು ಎದುರಿರುವ ವಸ್ತುವಿಗೆ ರಜತತ್ವದ ಸಂಸರ್ಗವನ್ನು ವಿಷಯೀಕರಿಸುವ ಅನ್ಯಥಾಖ್ಯಾತಿಯಿಲ್ಲದೆ ಅಗುವುದಿಲ್ಲವೆಂದು ಸಿದ್ಧವಾಯಿತು. ಅಂತೂ ಇದ್ದಾಗ್ಯೂ ಪ್ರವೃತ್ತಿಯಲ್ಲಿ ಉಪಯುಕ್ತವಲ್ಲವೆಂದು ಹೇಳಿದ್ದು ಅಯುಕ್ತವು. ಆ ಅನ್ವಯಜ್ಞಾನವು ಪ್ರವೃತ್ತಿಗಿಂತ ಮೊದಲು ನಿಯತವಲ್ಲವೆಂದು ಹೇಳಿದರೆ ಶಬ್ದಪ್ರಮಾಣಕ್ಕೇನೆ ಹಾನಿಯು ಬರಬೇಕಾಗುವುದೆಂದು ಹೇಳಿದ ದೋಷವು ಪರಿಹರಿಸಿದ ಹಾಗೆ ಆಗಲಿಲ್ಲ. (88) ಮತ್ತು ನಿಯತವಾಗಿ ಮೊದಲು ಇರುವುದು, ಕಾರಣವಲ್ಲ, ಎನ್ನುವುದು ವ್ಯಾಹತವಾಗಿರುವುದರಿಂದ ಕೂಡ ಲಾರದು. ತೋರುವ ವಸ್ತುಗಳಿಗೆ ಅಸಂಸರ್ಗಜ್ಞಾನವಿಲ್ಲದಿರಲು ಸಂಸರ್ಗಜ್ಞಾನವು ಅವರ್ಜ ನೀಯ ಸನ್ನಿಧಿಯು. ಹೀಗೆ ಹೇಳಕೂಡದು. ಸಂಸರ್ಗಜ್ಞಾನವಿರಲು ಅಸಂಸರ್ಗಜ್ಞಾನವಿಲ್ಲ ದಿರುವುದು ಅವರ್ಜನೀಯ ಸನ್ನಿಧಿಯು ಎಂದೂ ಹೇಳಲು ಶಕ್ಯವಾಗುತ್ತದೆ. ಸಂಸರ್ಗ ಜ್ಞಾನವೇ ಪ್ರವೃತ್ತಿಗೆ ಕಾರಣವು, ಅಸಂಸರ್ಗಾಗ್ರಹವು (ಸಂಸರ್ಗಜ್ಞಾನವಿಲ್ಲ ಎನ್ನುವ ಜ್ಞಾನ ವಿಲ್ಲದಿರುವಿಕೆಯು) ಅವರ್ಜನೀಯ ಸನ್ನಿಧಿಯು ಎನ್ನುವುದು ಅವಶ್ಯವಾಗಿ ಒಡಂಬಡಬೇಕು. ಪ್ರವೃತ್ತಿಯು ವ್ಯವಹರ್ತವ್ಯ (ರಜತತ್ವಸಂಸರ್ಗ) ಜ್ಞಾನಸಾಧ್ಯವು, ಅಸಂಸರ್ಗಾಗ್ರಹ ಮೂಲಕ ವಲ್ಲ. ಘಟವ್ಯವಹಾರವು ಘಟಜ್ಞಾನಸಾಧ್ಯವು. ಘಟಾಭಾವ ಜ್ಞಾನಾಭಾವ ಸಾಧ್ಯವಲ್ಲ.

(89) (೧) 'ವಿಮತಃ ವ್ಯವಹಾರಃ ವ್ಯವಹರ್ತವ್ಯಜ್ಞಾನಪುರಸ್ಸರಃ ವ್ಯವಹಾರತ್ವಾತ್ ಘಟವ್ಯವಹಾರವತ್' = ವಿವಾದ ವಿಷಯವಾದ 'ಇದಂ ರಜತಂ' ಎನ್ನುವ ವ್ಯವಹಾರವು

ವ್ಯವಹರ್ತವ್ಯಜ್ಞಾನಸಾಧ್ಯವು ವ್ಯವಹಾರವಾಗಿರುವುದರಿಂದ, ಘಟವು ಎನ್ನುವ ವ್ಯವಹಾರದಂತೆ. (೨) 'ವಿವಾದಪದಂ ಜ್ಞಾನಂ ಪುರೋವರ್ತಿವಿಷಯಂ ತದ್ವಿಷಯವ್ಯವಹಾರಜನಕತ್ವಾತ್ ಸಮ್ಯಕ್ರಜತವತ್'= ವಿವಾದವಿಷಯವಾದ ರಜತಜ್ಞಾನವು ಎದುರಿರುವ ಶುಕ್ತಿವಿಷಯಕವಾಗಿದೆ, ಶುಕ್ತಿವಿಷಯಕವಾದ ವ್ಯವಹಾರವನ್ನು ಹುಟ್ಟಿಸುವುದರಿಂದ ಸಮ್ಯಕ್ರಜತವಾದ ಶುಕ್ತಿಜ್ಞಾನದಂತೆ.(೩) 'ಪುರೋವರ್ತೀ ವಾ ರಜತಜ್ಞಾನಗೋಚರಃ ರಜತಾನುಪಾಯತ್ವೇ ಸತಿ ತದರ್ಥಿಪ್ರವೃತ್ತಿವಿಷಯತ್ವಾತ್ ಸಮ್ಯಕ್ ರಜತವತ್'= ಎದುರಿರುವ ವಸ್ತುವು ರಜತಜ್ಞಾನಕ್ಕೆ ವಿಷಯವಾದದ್ದು, ರಜತಕ್ಕೆ ಸಾಧನವಾಗದಿದ್ದು ರಜತವನ್ನು ಇಚ್ಛಿಸುವವನ ಪ್ರವೃತ್ತಿಗೆ ವಿಷಯವಾಗಿರುವುದರಿಂದ ಸತ್ಯರಜತದಂತೆ. (೪) ವಿವಾದಪದಂ ರಜತಜ್ಞಾನಂ ಇದಂ ಜ್ಞಾನಾತ್ ನ ಭಿದ್ಯತೇ ಪ್ರಕಾಶಮಾನಾತ್ತತಃ ಅಪ್ರಕಾಶಮಾನಭೇದತ್ವೇ ಸತಿ ಪ್ರಕಾಶಮಾನತ್ವಾತ್ ಸಂಪ್ರತಿಪನ್ನರಜತಜ್ಞಾನವತ್'= ಸತ್ಯ ರಜತಸ್ಥಳದಲ್ಲಿ ಇದು ಬೆಳ್ಳಿಯು ಎನ್ನುವ ಜ್ಞಾನದಂತೆ ವಿವಾದ ವಿಷಯವಾದ ರಜತಜ್ಞಾನವು 'ಇದಂ' ಎನ್ನುವ ಜ್ಞಾನದಿಂದ ಬೇರೆಯಲ್ಲ, ಪ್ರಕಾಶಮಾನವಾದ ಇದಂ ಜ್ಞಾನದಿಂದ ಭೇದವು ತೋರದೆ ಇದ್ದು ಪ್ರಕಾಶಮಾನವಾಗುವುದರಿಂದ. (೫) 'ವಿವಾದಪದಂ ಇದಂ ಜ್ಞಾನಂ ರಜತಜ್ಞಾನಾತ್ ನ ಭಿದ್ಯತೇ'. (ಹಿಂದೆ ಹೇಳಿದ್ದೇ ಇಲ್ಲಿ ಹೇತುವು) ಇದು ಮೊದಲಾದ ಅನುಮಾನಗಳು ಭ್ರಾಂತಿಯನ್ನು ಸಾಧಿಸುತ್ತವೆ. (೧೦) 'ಅರ್ಥಾಪತ್ತಿಯಿಂದಲೂ ವಿಪರ್ಯಯವು ಸಿದ್ಧಿಸುತ್ತದೆ.) ವಿಪರ್ಯಯವಿಲ್ಲದಿದ್ದರೆ 'ನೇದಂ ರಜತಂ' ಇದು ರಜತವಲ್ಲ ಎನ್ನುವ ಜ್ಞಾನಕ್ಕೆ ಬಾಧಕತ್ವವು ಕೂಡದಿರುವುದಾಗಿ ವಿಪರ್ಯಯವನ್ನು ತಿಳಿಸಿಕೊಡುತ್ತದೆ. ಬಾಧ್ಯವಾದ ವಿಪರ್ಯಯವಿಲ್ಲದಿದ್ದರೆ ಬಾಧಕತ್ವವೇ ಕೂಡುವುದಿಲ್ಲ. ಬಾಧ್ಯವಾದ ಭ್ರಮೆಯನ್ನು ಒಪ್ಪದಿದ್ದರೂ ಶುಕ್ತ್ಯಜ್ಞಾನವನ್ನು ಹೋಗಲಾಡಿಸುವುದರಿಂದ ಬಾಧಕತ್ವವು ಕೂಡುತ್ತದೆಂದು ಹೇಳಕೂಡದು. ಘಟಪಟಾದಿ ಜ್ಞಾನಗಳಿಗೂ ಘಟಾದಿಗಳ ಅಜ್ಞಾನವನ್ನು ಹೋಗಲಾಡಿಸುವುದರಿಂದ ಬಾಧಕತ್ವಗಳು ಎನ್ನುವ ವ್ಯವಹಾರವು ಬರಬೇಕಾಗುವುದು. ಪ್ರವೃತ್ತಿಗೆ ವಿಚ್ಛೇದಕವಾಗಿರುವುದರಿಂದ (ಅಂದರೆ ಪ್ರವೃತ್ತಿಯನ್ನು ನಾಶಮಾಡುವುದರಿಂದ) ಬಾಧಕತ್ವವೆನ್ನುವುದೂ ಇಲ್ಲ. ರಜತವನ್ನು ಅಪೇಕ್ಷಿಸದಿದ್ದವರಿಗೆ ವ್ಯವಹಾರವೇ ಹುಟ್ಟದಿರಲು ಇದು ರಜತವಲ್ಲ ಎನ್ನುವ ಜ್ಞಾನಕ್ಕೆ ಬಾಧಕತ್ವವಿಲ್ಲದೇನೇ ಇರಬೇಕಾಗುವುದು. ಹುಲಿಯಿದೆ, ಕಳ್ಳನಿದ್ದಾನೆ ಇದು ಮೊದಲಾದ ಜ್ಞಾನವೂ ಪ್ರವೃತ್ತಿಯನ್ನು ವಿಚ್ಛೇದಮಾಡತಕ್ಕದ್ದಾದುದರಿಂದ ಅದೂ ಬಾಧಕವಾಗಬೇಕಾಗುವುದು. ಅರ್ಥದಲ್ಲಿರುವ ವ್ಯವಹಾರವಿಷಯತ್ವ ಯೋಗ್ಯತೆಯನ್ನು ನಾಶಮಾಡುವುದರಿಂದ ಬಾಧಕವೆನ್ನುವುದೂ ಕೂಡುವುದಿಲ್ಲ. ಕಾಲಾಂತರದಲ್ಲಿಯೂ ಅಲ್ಲಿ ಭ್ರಾಂತಿಯಿಂದ ಪ್ರವೃತ್ತಿಯಾಗದೆ ಹೊಗಬೇಕಾಗುವುದು. (ಅಂದರೆ— ಪ್ರಥಮತಃ ಇದು ಬೆಳ್ಳಿಯು ಎನ್ನುವ ಭ್ರಮೆಯು ಹುಟ್ಟಿತು, ಆ ಮೇಲೆ 'ಇದು ರಜತವಲ್ಲ' ಎನ್ನುವ ಬಾಧಕಜ್ಞಾನದಿಂದ ಶುಕ್ತಿಯಲ್ಲಿ ಪ್ರವೃತ್ತಿಯೋಗ್ಯತೆಯು ವಿನಷ್ಟವಾಯಿತು. ಮತ್ತು ಕಾಲಾಂತರದಲ್ಲಿ ಆ ಶುಕ್ತಿಯಲ್ಲಿಯೇ ಇದು ಬೆಳ್ಳಿಯು ಎಂದು ಭ್ರಮೆಯು ಬಂದರೆ ಪ್ರವೃತ್ತಿಯಾಗುತ್ತದೆ, ಅದು ಆಗದೆ ಹೋಗಬೇಕಾಗುವುದು. ಬಾಧಕಪ್ರತ್ಯಯದಿಂದ ಶುಕ್ತಿಯಲ್ಲಿ ಪ್ರವೃತ್ತಿವಿಷಯತ್ವಯೋಗ್ಯತೆಯೇ ನಷ್ಟವಾಗಿದೆ) ಪ್ರವೃತ್ತಿಯನ್ನು ಪ್ರತಿಬಂಧಿಸಿ ಬಾಧಕವಾಗುತ್ತದೆ ಎನ್ನುವುದೂ ಕೂಡುವುದಿಲ್ಲ. ಇದು ರಜತವಲ್ಲ ಎನ್ನುವ ಜ್ಞಾನದಿಂದ ಭೇದಾಗ್ರಹವು ನಿವೃತ್ತಿಯಾದ ಮೇಲೆ ಭೇದಾಗ್ರಹ ರೂಪವಾದ ಕಾರಣವಿಲ್ಲದಿರುವುದರಿಂದಲೇ ಪ್ರವೃತ್ತಿಯು ಕೂಡದಿರುವುದರಿಂದ ಪ್ರತಿಬಂಧಕವನ್ನು ಕಲ್ಪಿಸಕೂಡದು. ಅಂದರೆ, ಸಂಪೂರ್ಣ ಕಾರಣವಿರಲು ಯಾವುದು ಇರುವಾಗ ಯಾವುದು ಹುಟ್ಟುವುದಿಲ್ಲವೋ ಅದು ಅದರಲ್ಲಿ ಪ್ರತಿಬಂಧಕವು. ಪ್ರಕೃತ ಕಾರಣವೇ

ಇಲ್ಲದಿರುವುದರಿಂದ ಪ್ರತಿಬಂಧಕತ್ವವನ್ನು ಕಲ್ಪಿಸಕೂಡದು. ವ್ಯಾಘ್ರಚೋರಾದಿ ಜ್ಞಾನವೂ ಪ್ರವೃತ್ತಿಗೆ ಪ್ರತಿಬಂಧಕವಾಗಿರುವುದರಿಂದ ಅದೂ ಬಾಧಕವಾಗಬೇಕಾಗುವುದು. ಆದಕಾರಣ ಹಿಂದೆ ಹೇಳಿದ ಪ್ರಕಾರ ವಿಪರ್ಯಯವಿಲ್ಲದಿದ್ದರೆ ಬಾಧ್ಯವೇ ಇಲ್ಲವೆಂದಾಗುವ ಪ್ರಯುಕ್ತ ಇದು ರಜತವಲ್ಲ ಎನ್ನುವ ಜ್ಞಾನಕ್ಕೆ ಬಾಧಕತ್ವವು ಕೂಡದಿರುವುದರಿಂದ ಬೇರೆ ಪ್ರಕಾರ ಕೂಡದಿರುವುದಾಗಿ ಬಾಧ್ಯವಾದ ವಿಪರ್ಯಯವು ಸಿದ್ಧಿಸುತ್ತದೆ. (91) ವಿಪರ್ಯಯವು ಅನುಮಾನ ಪ್ರಮಾಣಸಿದ್ಧವೂ ಆಗಿರುತ್ತದೆ. (೧) ವಿಮತಂ ಅಯಥಾರ್ಥಂ ಬಾಧ್ಯತ್ವಾತ್ ವ್ಯವಹಾರವತ್= ವಿವಾದಗ್ರಸ್ತವಾದ ಇದು ರಜತವು ಎನ್ನುವ ಜ್ಞಾನವು ಯಥಾರ್ಥವಲ್ಲ, ಬಾಧಿಸಲ್ಪಡುವ ಪ್ರಯುಕ್ತ 'ಇದಂ ರಜತಂ' ಎನ್ನುವ ವ್ಯವಹಾರದಂತೆ. (92) ವಿಶಿಷ್ಟವನ್ನು ವಿಷಯೀಕರಿಸಿರುವ ಭ್ರಮ ರೂಪವಾದ ಒಂದು ಜ್ಞಾನವೆಂದೇ ಲೋಕಪ್ರಸಿದ್ಧಿಯಿದ್ದ ಪ್ರಯುಕ್ತವೂ ಭ್ರಮೆಯು ಸಿದ್ಧಿಸುತ್ತದೆ.

(93) ಭ್ರಾಂತಿರೂಪವಾದ ಜ್ಞಾನವು ಇದೆಯೆಂದು ಸಿದ್ಧಿಸಿದ ಮೇಲೆ— (೧) 'ವಿಗೀತ ಪ್ರತ್ಯಯಃ ಯಥಾರ್ಥಃ ಪ್ರತ್ಯಯತ್ವಾತ್ ಸಂಪ್ರತಿಪನ್ನವತ್'= ಎನ್ನುವ ಅನುಮಾನವು ಬಾಧಿತವಾಯಿತೆಂದು ತಿಳಿಯತಕ್ಕದು. ಆ ಅನುಮಾನದಲ್ಲಿ ದುಷ್ಟಕರಣ ಜನ್ಯತ್ವಾಭಾವ ರೂಪ ಉಪಾಧಿಯೂ ಇದೆ. (೨) ಬಾಧಾಖ್ಯ ದೋಷವನ್ನು ಹೇಳಿರುವುದರಿಂದ 'ವಿವಾದಾಧ್ಯಾಸಿತಂ ರಜತಜ್ಞಾನಂ ರಜತವಿಷಯಂ ರಜತಜ್ಞಾನತ್ವಾತ್' ಎನ್ನುವ ಅನುಮಾನವೂ ನಿರಸ್ತವಾಯಿತು. ಅಂದರೆ, ರಜತಜ್ಞಾನದಲ್ಲಿ ಶುಕ್ತಿಯು ವಿಷಯವಾಗಿರುವುದರಿಂದ ಬಾಧಿತ ವಾಯಿತು. ಇಲ್ಲವಾದರೆ 'ವಿಮತಃ ವ್ಯವಹಾರಃ ಯಥಾರ್ಥಃ ವ್ಯವಹಾರತ್ವಾತ್'='ಇದಂ ರಜತಂ' ಎನ್ನುವ ಜ್ಞಾನದಿಂದ ಉಂಟಾಗತಕ್ಕ ಶಬ್ದಪ್ರಯೋಗವು ಯಥಾರ್ಥವು ವ್ಯವಹಾರ ವಾಗಿರುವುದರಿಂದ ಎಂದೂ ಆಗಬೇಕಾಗುವುದು. ಅಂತೂ ನೀನು ಅಯಥಾರ್ಥವೆಂದು ಅಂಗೀ ಕರಿಸಿರುವ ವ್ಯವಹಾರವೂ ಯಥಾರ್ಥವಾಗಬೇಕಾಗುವುದು. (೩) 'ಜ್ಞಾನತ್ವಂ ಯಥಾರ್ಥ ಮಾತ್ರವೃತ್ತಿ ಜ್ಞಾನಮಾತ್ರವೃತ್ತಿತ್ವಾತ್ ಪ್ರಮಾತ್ವವತ್'= ಎಂದು ಹೇಳಿದ್ದು ಅಯುಕ್ತವು. ಏಕೆಂದರೆ, ಜ್ಞಾನತ್ವವೆಂದರೆ ಜಾತಿರೂಪವು ಎಂದು ಹೇಳಕೂಡದು. ಪ್ರಾಭಾಕರರು ಗುಣಗ ಳಲ್ಲಿ ಗುಣತ್ವಕ್ಕಿಂತ ಅವಾಂತರಜಾತಿ (ಜ್ಞಾನತ್ವಾದಿರೂಪವಾದದ್ದು) ಯನ್ನು ಅಂಗೀಕರಿಸಲಿಲ್ಲ. ನಾವು ಅನುಗತ ಜಾತಿಯನ್ನೇ ಅಂಗೀಕರಿಸಲಿಲ್ಲ. ಆದಪ್ರಯುಕ್ತ ವಾದಿ ಪ್ರತಿವಾದಿಗಳಿಬ್ಬರಿಗೂ ಆಶ್ರಯವು ಅಸಿದ್ಧವಾಯಿತು. ಜ್ಞಾನತ್ವವು ಪ್ರಾತಿಸ್ವಿಕರೂಪವು (ಪ್ರತ್ಯೇಕ ಪ್ರತ್ಯೇಕ ಇರುವುದು) ಇಂತಹುದು ಪಕ್ಷವು ಹೀಗೆ ಇಟ್ಟುಕೊಂಡರೆ ಆಗ ಯಥಾರ್ಥಜ್ಞಾನದಲ್ಲಿರತಕ್ಕ ಜ್ಞಾನತ್ವದಲ್ಲಿ ಸಿದ್ಧಸಾಧನತ್ವವು, ವಿವಾದವಿಷಯವಾದ ಜ್ಞಾನದಲ್ಲಿರತಕ್ಕ ಜ್ಞಾನತ್ವವು ಪಕ್ಷವೆಂದು ಇಟ್ಟು ಕೊಂಡರೆ ಸಾಧ್ಯದಲ್ಲಿದ್ದ ಮಾತ್ರ ಎನ್ನುವ ಪದವು ವ್ಯರ್ಥವಾಗುವುದು ಅದನ್ನು ಬಿಟ್ಟರೆ ಬಾಧವು ಇತ್ಯಾದಿ ದೋಷಗಳು ಬರುವವು. (೪) 'ಶುಕ್ತಿಕಾ ರಜತತ್ವೇನ ನಾವಭಾಸತೇ ತದ್ರೂಪೇಣಾ ಸತ್ವಾತ್ ಯತ್ ಯದ್ರೂಪೇಣ ಅಸತ್ ತತ್ ತದ್ರೂಪೇಣ ನಾವಭಾಸತೇ ಯಥಾ ಮೇರುಃ ಸರ್ಷಪತ್ವೇನ' ಎಂದು ಹೇಳಿದ್ದು ಅಯುಕ್ತವು. ಏಕೆಂದರೆ, 'ಮೇರುಃ ಸರ್ಷಪಃ' ಮೇರುಪರ್ವ ತವು ಸಾಸಿವೆಯು ಇದು ಮೊದಲಾದ ವಾಕ್ಯದಿಂದ ಮೇರುಪರ್ವತವೂ ಸಾಸಿವೆ ಎಂದು ತೋರು ವುದರಿಂದ ದೃಷ್ಟಾಂತದಲ್ಲಿ ಸಾಧ್ಯವಿಲ್ಲ. ಆ ವಾಕ್ಯದಿಂದ ಮೇರುಪರ್ವತವು ಸಾಸಿವೆಯು ಎನ್ನುವ ಜ್ಞಾನವೇ ಬರುವುದಿಲ್ಲವೆಂದು ಇಟ್ಟುಕೊಂಡರೆ ಅಂತಹ ವಾಕ್ಯಾಭಾಸವನ್ನು ಕೇಳಿದಮೇಲೆ ಮೇರು ಪರ್ವತವು ಸಾಸಿವೆಯಾಗುವುದಿಲ್ಲವೆಂದು ಮಾಡಲ್ಪಡತಕ್ಕ ನಿಷೇಧವು ಕೂಡದೆ ಹೋಗಬೇಕಾಗು ವುದು. ಪ್ರಸಕ್ತವಾದುದಕ್ಕೇನೇ ನಿಷೇಧವು. ಅಪ್ರಸಕ್ತವಾದುದಕ್ಕೆ ನಿಷೇಧವು ಕೂಡಲಾರದು. (೫) 'ಇದಂ ರಜತತಾದಾತ್ಮ್ಯಂ ನ ಪ್ರತ್ಯೇತುಂ ಶಕ್ಯಂ ಅಸತ್ವಾತ್ ಕೂರ್ಮರೋಮವತ್'

ಎಂದು ಹೇಳಿದ್ದೂ ಅತ್ಯಯುಕ್ತವು. ಏಕೆಂದರೆ, ಈ ರಜತತಾದಾತ್ಮ್ಯರೂಪಪಕ್ಷವು ಪ್ರತೀತವಾಗದಿದ್ದರೆ ಆಶ್ರಯವೇ ಅಸಿದ್ಧವಾಯಿತು. ಪ್ರತೀತವಾಗಿದ್ದರೆ ತಿಳಿಯಲು ಸಾಧ್ಯವಲ್ಲವೆಂದು ಸಾಧಿಸಿದರೆ ವ್ಯಾಹತಿಯು. ಇದೇ ರೀತಿಯಾಗಿ ದೃಷ್ಟಾಂತೀಕೃತವಾದ ಕೂರ್ಮರೋಮದಲ್ಲಿಯೂ ಅಪ್ರತೀಯಮಾನತ್ವರೂಪವಾದ ಸಾಧ್ಯವು ನಿಶ್ಚಿತವಾಗದಿರುವುದರಿಂದ ಸಾಧ್ಯವೈಕಲ್ಯವು. ಆದಕಾರಣ ಅಯಥಾರ್ಥ ಜ್ಞಾನರೂಪವಾದ ಭ್ರಮೆಯು ಇದೆ ಎನ್ನುವಲ್ಲಿ ಹಿಂದೆ ಹೇಳಿದ ರೀತಿಯಾಗಿ ಅನೇಕ ಸಾಧಕಪ್ರಮಾಣಗಳಿರುವುದರಿಂದಲೂ ಪ್ರಾಭಾಕರರು ಹೇಳಿದ ಎಲ್ಲಾ ಬಾಧಕಗಳನ್ನು ಪರಿಹರಿಸಿರುವುದರಿಂದ ಯಾವ ಬಾಧಕವೂ ಇಲ್ಲದಿರುವ ಪ್ರಯುಕ್ತವೂ ಭ್ರಾಂತಿರೂಪ ಜ್ಞಾನವಿದೆ ಎಂದು ಸಿದ್ಧವಾಗಿರುವುದರಿಂದ ಎಲ್ಲಾ ಜ್ಞಾನಗಳೂ ಯಥಾರ್ಥಗಳೇ ಎನ್ನುವ ಪ್ರಾಭಾಕರರ ಪ್ರಕ್ರಿಯೆಯು ಅತ್ಯಂತಾಯುಕ್ತವು.

### ಅಖ್ಯಾತಿವಾದ್ಯೇಕದೇಶಿಗಳಾದ ರಾಮಾನುಜಾಚಾರ್ಯರ ಮತವನ್ನು ದೂಷಿಸುವುದಕ್ಕಾಗಿ ಅನುವಾದಮಾಡಿಕೊಳ್ಳುತ್ತಾರೆ—

(1) ಈ ರಾಮಾನುಜಾಚಾರ್ಯ ಮೊದಲಾದವರು ಎಲ್ಲಾ ವಸ್ತುಗಳಲ್ಲಿಯೂ ಎಲ್ಲಾ ವಸ್ತುಗಳ ಅಂಶಗಳೂ ಇದ್ದಪ್ರಯುಕ್ತ ಎಲ್ಲಾ ವಿಜ್ಞಾನಗಳೂ ಯಥಾರ್ಥಗಳೇ. ಭ್ರಾಂತಿರೂಪ ಜ್ಞಾನವೇ ಇಲ್ಲವೆನ್ನುತ್ತಾರೆ. ಎಲ್ಲಾ ಕಡೆಗಳಲ್ಲಿಯೂ ಎಲ್ಲಾ ಅಂಶಗಳೂ ಇವೆ ಎನ್ನುವಲ್ಲಿ ಶ್ರುತಿ ಪುರಾಣ ಸೂತ್ರಗಳು ಪ್ರಮಾಣಗಳಿವೆ. ಯಾವುದೆಂದರೆ— (೧) "**ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್ । ಯದಗ್ನೇರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯ**" ಪೃಥಿವ್ಯಾದಿ ಒಂದೊಂದು ದ್ರವ್ಯವನ್ನು ಪೃಥಿವೀ, ಜಲ, ತೇಜಸ್ಸು ಎನ್ನುವ ವಸ್ತುಗಳ ಅಂಶಗಳಿಂದ ಕೂಡಿರುವುದನ್ನಾಗಿ ಸೃಷ್ಟಿಸಿದನು. ಬೆಂಕಿದ್ದು ಯಾವುದು ಕೆಂಪುರೂಪವಿದೆಯೋ ಅದು ತೇಜಸ್ಸಿನದ್ದು ರೂಪವು. ಯಾವುದು ಬಿಳೀರೂಪವೋ ಅದು ನೀರಿನದ್ದು. ಯಾವುದು ಕಪ್ಪುಬಣ್ಣವೋ ಅದು ಭೂಮಿಯದ್ದು, ಎಂದು ಛಾಂದೋಗ್ಯೋಪನಿಷತ್ತು. (ಅಧ್ಯಾ. ೬. ಖಂ. ೩. ೪.) (೨) "**ನಾನಾವೀರ್ಯಾಃ ಪೃಥಕ್ ಭೂತಾಃ ತತಸ್ತೇ ಸಂಹತಿಂ ವಿನಾ । ನಾಶಕ್ನುವನ್ ಪ್ರಜಾಃ ಸ್ರಷ್ಟುಮಸಮಾಗಮ್ಯ ಕೃತ್ಸ್ನಶಃ ॥ ಸಮೇತ್ಯಾನ್ಯೋನ್ಯಸಂಯೋಗಂ ಪರಸ್ಪರಸಮಾಶ್ರಯಾಃ । ಮಹದಾದ್ಯಾಃ ವಿಶೇಷಾಂತಾ ಹ್ಯಂಡಮುತ್ಪಾದಯಂತಿ ತೇ**" ॥ ಮಹತ್ತತ್ವವನ್ನು ಆರಂಭಿಸಿ ವಿಶೇಷಪರ್ಯಂತಗಳಾದವುಗಳು, ಹೆಚ್ಚು ಸಾಮರ್ಥ್ಯವುಳ್ಳವುಗಳು, ಪ್ರತ್ಯೇಕಗಳಾದವುಗಳು, ಪರಸ್ಪರ ಸಂಬಂಧವಿಲ್ಲದೆ ಸೃಷ್ಟಿಮಾಡಲಿಕ್ಕೆ ಸಮರ್ಥಗಳಾಗಲಿಲ್ಲ. ಅವುಗಳು ಪರಸ್ಪರವಾಗಿ ಸಂಬಂಧವನ್ನುಹೊಂದಿ, ಪರಸ್ಪರವಾಗಿ ಆಶ್ರಯಿಸಿಕೊಂಡವುಗಳಾಗಿ, ಬ್ರಹ್ಮಾಂಡವನ್ನುಹುಟ್ಟಿಸುತ್ತವೆ, ಎಂದು ಪುರಾಣವಾಕ್ಯವು. (೩) ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್. (ಬ್ರ. ಸೂ. ಅಧ್ಯಾ. ೩. ಪಾ. ೧. ಅಧಿ. ೨.) ಎಲ್ಲಾ ವಸ್ತುಗಳೂ ಪೃಥಿವೀ ಜಲ ತೇಜೋರೂಪಗಳಾಗಿವೆ, ಎಂದು ಬ್ರಹ್ಮಸೂತ್ರವು. ಈ ಪ್ರಮಾಣಗಳಿಂದ ಸರ್ವ ವಸ್ತುಗಳೂ ಸರ್ವಾತ್ಮಕಗಳಾಗಿವೆ ಎಂದು ತೋರುತ್ತವೆ. (2) ಮತ್ತು '**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ**' ಎಂದು ಸ್ವರ್ಗವನ್ನು ಉದ್ದೇಶಿಸಿ ವಿಹಿತವಾದ ಜ್ಯೋತಿಷ್ಟೋಮ ಯಾಗದಲ್ಲಿ "**ಸೋಮೇನ ಯಜೇತ**" ಎಂದು ಸೋಮಲತಾರೂಪದ್ರವ್ಯವೂ, ದರ್ಶ ಪೂರ್ಣಮಾಸಗಳಲ್ಲಿ "**ವ್ರೀಹಿಭಿರ್ಯಜೇತ**" ಎಂದು ವ್ರೀಹಿ (ಬತ್ತ) ರೂಪದ್ರವ್ಯವೂ ಸಾಧನವಾಗಿ ವಿಧಿಸಲ್ಪಟ್ಟದೆ. ಸೋಮವು (ಲತಾವಿಶೇಷ) ಸಿಗದಿದ್ದರೆ ಸೋಮಪ್ರತಿನಿಧಿಯಾಗಿ ಪೂತಿಕ (ಅಮೃತಬಳ್ಳಿ) ರೂಪದ್ರವ್ಯವೂ ವ್ರೀಹಿ (ಬತ್ತ)

ಇಲ್ಲದಿದ್ದರೆ ನೀವಾರ (ಯವ)ವೂ ಯಜ್ಞಾಂಗವಾಗಿ ವಿಧಿಸಲ್ಪಟ್ಟದೆ. ಅದು ಅನ್ಯಥಾನುಪಪನ್ನವಾದ್ದರಿಂದಾಗಿ (ಅಂದರೆ, ಪೂತಿಕದಲ್ಲಿ ಸೋಮದ ಅವಯವಗಳೂ ನೀವಾರದಲ್ಲಿ ವ್ರೀಹ್ಯವಯವಗಳೂ ಇಲ್ಲದಿದ್ದರೆ ಅವುಗಳ ಕಾರ್ಯವಾಡೋಣವು ಕೂಡದಿರುವುದರಿಂದ) ಪೂತಿಕದಲ್ಲಿ ಸೋಮದ ಅವಯವವೂ, ನೀವಾರದಲ್ಲಿ ವ್ರೀಹ್ಯವಯವವೂ ಇದೆ ಎಂದು ತಿಳಿಸಿಕೊಡುತ್ತದೆ. ತಥಾಚ, ಸಂಪೂರ್ಣ ಸೋಮಾದಿಗಳ ಅವಯವಗಳು ಸಿಗದಿದ್ದರೆ ಕೆಲವು ಅವಯವಗಳಾದರೂ ಸಿಗಬೇಕೆಂದು ಪೂತಿಕಾದಿಗಳನ್ನು ತೆಗೆದುಕೊಂಡದ್ದು. (3) ಮತ್ತು ಒಂದು ವಸ್ತುವಿಗೆ ಮತ್ತೊಂದು ವಸ್ತುವಿನ ಸಾದೃಶ್ಯವು ಪ್ರತ್ಯಕ್ಷ ಸಿದ್ಧವಾಗಿದೆ. ಆ ಸಾದೃಶ್ಯವು ಆ ದ್ರವ್ಯಾವಯವಗಳ ಸಂಯೋಗದಿಂದ ಬೇರೆಯಾದುದು ಅಲ್ಲ. ಆದಕಾರಣ ಶುಕ್ತಿಮೊದಲಾದವುಗಳಲ್ಲಿ ರಜತಾದಿಗಳು ಇದ್ದಪ್ರಯುಕ್ತ ಇದು ಬೆಳ್ಳಿಯು ಎನ್ನುವ ಜ್ಞಾನವು ಯಥಾರ್ಥವೇ. ಹಾಗಾದರೆ ಶುಕ್ತಿ ರಜತ ಎರಡರಲ್ಲಿಯೂ ರಜತದ ಅಂಶವಿದ್ದರೆ 'ಇದಂ' ಎಂದು ಶುಕ್ತಿಯನ್ನೇ ನಿರ್ದೇಶ ಮಾಡಲಿಕ್ಕೆ ಕಾರಣವೇನು? ರಜತವನ್ನೂ ಏಕೆ ನಿರ್ದೇಶವಾಡಬಾರದು, ರಜತದಲ್ಲಿಯೂ ಶುಕ್ತಿಯ ಅಂಶಗಳು ಇದ್ದರೆ ರಜತದಲ್ಲಿಯೇ ರಜತವೆನ್ನುವ ಅಭಿಜ್ಞರ ವ್ಯವಹಾರವೂ ಹೇಗೆ ಕೂಡುತ್ತದೆ? ಮತ್ತು ಶುಕ್ತಿಯಲ್ಲಿಯೂ ರಜತದ ಅವಯವಗಳಿದ್ದರೆ ರಜತದಂತೆಯೇ ಶುಕ್ತಿಯಿಂದಲೂ ಬೆಳ್ಳಿಯಿಂದ ಆಗತಕ್ಕ ಕೆಲಸಗಳು ಆಗಬೇಕಾಗುವವು. ಅಂತಹುದು ಸರ್ವಥಾ ಆಗುವುದಿಲ್ಲ. ಮತ್ತೆ ಶುಕ್ತಿ (ಮುತ್ತಿನಚಿಪ್ಪು)ಯಿಂದ ಶುಕ್ತಿಗೆ ಯೋಗ್ಯವಾದ ಕೆಲಸಗಳೇ ಆಗುತ್ತವೆ. ಆದಪ್ರಯುಕ್ತ ನಿರ್ದೇಶವ್ಯವಸ್ಥೆಯೂ ಅರ್ಥಕ್ರಿಯಾವ್ಯವಸ್ಥೆಯೂ ಕೂಡುವುದಿಲ್ಲವೆಂದಾ ಶಂಕಿಸಿದರೆ— ಶುಕ್ತಿಯ ಅವಯವಗಳು ಶುಕ್ತಿಯಲ್ಲಿಯೇ ಹೆಚ್ಚು ಇದ್ದಪ್ರಯುಕ್ತ ನಿರ್ದೇಶವ್ಯವಸ್ಥೆಯೂ ಅರ್ಥಕ್ರಿಯಾವ್ಯವಸ್ಥೆಯೂ ಯುಕ್ತವಾಗುತ್ತದೆ. ಅಂದರೆ ಶುಕ್ತಿಯಲ್ಲಿ ಶುಕ್ತಿಯ ಅವಯವಗಳೇ ಹೆಚ್ಚು ಇರುತ್ತವೆ. ರಜತಾಂಶವು ಬಹಳ ಕಡಿಮೆ. ಯಾವುದರಲ್ಲಿ ಯಾವುದರ ಅವಯವಗಳು ಹೆಚ್ಚು ಇರುತ್ತವೋ, ಅದಕ್ಕೇನೆ ಆ ವ್ಯವಹಾರವು ಬರುವುದು. ಯಾವುದರ ಅವಯವಗಳು ಹೆಚ್ಚು ಇರುತ್ತವೋ, ಅದರದ್ದೇ ಕಾರ್ಯವಾಗುತ್ತದೆ. ಶುಕ್ತಿಯಲ್ಲಿ ರಜತದ ಅವಯವಗಳು ಕಡಿಮೆ ಇದ್ದಪ್ರಯುಕ್ತ ರಜತದ ಕಾರ್ಯವು ಶುಕ್ತಿಯಿಂದ ಆಗುವುದಿಲ್ಲ. ರಜತವೆನ್ನುವ ವ್ಯವಹಾರವೂ ಅದಕ್ಕೆ ಬರುವುದಿಲ್ಲ. (4) ಚಕ್ಷುರಾದಿ ಇಂದ್ರಿಯಗಳು ಶುಕ್ತ್ಯವಯವವು ಹೆಚ್ಚು ಇದ್ದಾಗ್ಯೂ ಅದನ್ನು ಬಿಟ್ಟು ಅಲ್ಪವಾದ ರಜತಾಂಶವನ್ನು ದೋಷದಿಂದ ಪ್ರಕಾಶಪಡಿಸುವಪ್ರಯುಕ್ತ ರಜತವನ್ನು ಅರ್ಥಿಸುವವನಿಗೆ ಶುಕ್ತಿಯಲ್ಲಿ ಪ್ರವೃತ್ತಿಯು ಕೂಡುತ್ತದೆ. ದೋಷವು ಹೋದಮೇಲೆ ಹೆಚ್ಚು ಅವಯವಗಳೇ ತೋರಿದಾಗ ಇದು ರಜತವು ಎನ್ನುವ ಜ್ಞಾನವು ಹೊರಟುಹೋಗುತ್ತದೆ. ಮತ್ತು ರಜತಾರ್ಥಿಯು ನಿವೃತ್ತನಾಗುತ್ತಾನೆ. ಹೆಚ್ಚು ಅವಯವಗಳ ಜ್ಞಾನದಿಂದ ಅಲ್ಪಾವಯವಗಳ ಜ್ಞಾನವು ಹೊರಟುಹೋಗುವುದರಿಂದಲೂ, ಕಡಿಮೆ ಹೆಚ್ಚು ಅವಯವಗಳನ್ನು ವಿಷಯೀಕರಿಸುವುದರಿಂದಲೂ ಜ್ಞಾನಗಳಲ್ಲಿ ಬಾಧ್ಯಬಾಧಕಭಾವವೂ ಕೂಡುತ್ತದೆ. ಅಂದರೆ, ಇಂದ್ರಿಯವು ದೋಷಾಧಿಕ್ಯದಿಂದ ಅಲ್ಪಾಂಶವನ್ನು ಗ್ರಹಿಸುತ್ತದೆ. ವಿಸಂವಾದ ಪ್ರವೃತ್ತಿಯನ್ನು ಹುಟ್ಟಿಸತಕ್ಕ ಮೊದಲಿನ ಜ್ಞಾನವು ಬಾಧ್ಯವಾಗುತ್ತದೆ. ದೋಷವು ಹೊರಟುಹೋದ ಮೇಲೆ ಹೆಚ್ಚು ಅಂಶಗಳನ್ನು ವಿಷಯೀಕರಿಸುವ ಉತ್ತರ ಜ್ಞಾನವು ಬಾಧಕವಾಗುತ್ತದೆ. (5) 'ಶಂಖವು ಪೀತವು' ಇದುಮೊದಲಾದವುಗಳಲ್ಲಿ ಕಣ್ಣಿನಲ್ಲಿರುವ ಪಿತ್ತದಿಂದ ಸಂಬದ್ಧಗಳಾದ ಕಣ್ಣಿನ ರಶ್ಮಿಗಳು ಶಂಖಮೊದಲಾದವುಗಳಿಂದ ಸಂಬದ್ಧಗಳಾಗುತ್ತವೆ. ಆ ಮೇಲೆ ಪಿತ್ತದಲ್ಲಿರತಕ್ಕ ಪೈತ್ಯದಿಂದ ತಿರಸ್ಕೃತವಾದ ಶಂಖದಲ್ಲಿರುವ ಶೌಕ್ಲ್ಯವು ಗ್ರಹಿಸಲ್ಪಡುವುದಿಲ್ಲ. ಆದುದರಿಂದ ಬಂಗಾರ ಕಟ್ಟಿದ ಶಂಖದಂತೆ ಶಂಖವು ಪೀತವೆಂದು ತೋರುತ್ತದೆ. ತಥಾಚ ಪರಂಪರಾಸಂಬಂಧ

ದಿಂದ ಶಂಖದಲ್ಲಿ ಪೀತರೂಪವನ್ನು ವಿಷಯೀಕರಿಸುವುದರಿಂದ ಆ ಜ್ಞಾನವು ಯಥಾರ್ಥವು. (6) ಸ್ವಾಪ್ನಪದಾರ್ಥಜ್ಞಾನವು ಯಥಾರ್ಥವೇ. ಏಕೆಂದರೆ— ಪ್ರಾಣಿಗಳ ಪುಣ್ಯಪಾಪಗಳಿಗೆ ಅನುಗುಣವಾಗಿ ಭಗವಂತನೇ ಆಯಾಯ ಜನರಿಂದ ಮಾತ್ರ ಅನುಭವಿಸಲ್ಪಡತಕ್ಕವುಗಳೂ, ಆ ದೇಶ ಆ ಕಾಲಗಳಲ್ಲಿ ಅನುಭವಿಸಲ್ಪಡತಕ್ಕವುಗಳೂ, ಆಯಾಯ ಕಾಲದಲ್ಲಿಯೇ ನಾಶವನ್ನು ಹೊಂದತಕ್ಕವುಗಳೂ ಆದ ವಸ್ತುಗಳನ್ನೇ ಸೃಷ್ಟಿಸುತ್ತಾನೆ. ಸ್ವಾಪ್ನಪದಾರ್ಥಗಳು ಸತ್ಯಗಳು ಎನ್ನುವ ವಿಷಯದಲ್ಲಿ ಶ್ರುತಿಯು. "**ನ ತತ್ರ ರಥಾಃ ನ ರಥಯೋಗಾಃ ನ ಪಂಥಾನೋ ಭವಂತಿ ಅಥ ರಥಾನ್ ರಥಯೋಗಾನ್ ಪಥಃ ಸೃಜತೇ**" (ಬೃ. ೬. ೩ ೧೦) ಅಲ್ಲಿ ರಥಗಳೂ ಕುದುರೆಗಳೂ ಮಾರ್ಗಗಳೂ ಇರುವುದಿಲ್ಲ; ಆ ಮೇಲೆ ರಥಗಳನ್ನೂ ಕುದುರೆಗಳನ್ನೂ ಮಾರ್ಗಗಳನ್ನೂ ಶ್ರೀ ಹರಿಯು ಸೃಷ್ಟಿಸುತ್ತಾನೆ. ಸತ್ಯಸಂಕಲ್ಪನಾದ ಅತ್ಯಾಶ್ಚರ್ಯ ಶಕ್ತಿಯು ಇರತಕ್ಕ ಶ್ರೀಹರಿಗೆ ಅಂತಹ ಕರ್ತೃತ್ವವು ಅಸಂಭಾವಿತವಲ್ಲ ಎನ್ನುವ ಅರ್ಥವು ತಿಳಿಯುತ್ತದೆ. ಸೂತ್ರಕಾರರೂ "**ಸಂಧ್ಯೇ ಸೃಷ್ಟಿರಾಹ ಹಿ**" "**ನಿರ್ಮಾತಾರಂ ಚೈಕೇ ಪುತ್ರಾದಯಶ್ಚ**" (ಬ್ರ. ಸೂ. ಅಧ್ಯಾ. ೩. ಪಾ. ೨. ಸೂ. ೧. ೨.) ಎನ್ನುವ ಎರಡು ಸೂತ್ರಗಳಿಂದ ಸ್ವಾಪ್ನಾರ್ಥಗಳನ್ನು ಜೀವನೇ ಸೃಷ್ಟಿಸಿದ್ದು ಎಂದಾಶಂಕಿಸಿ "**ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾಭಿವ್ಯಕ್ತಸ್ವರೂಪತ್ವಾತ್**" (ಬ್ರ. ಸೂ. ಅಧ್ಯಾ. ೩. ಪಾ. ೨. ಸೂ. ೩.) ಎನ್ನುವ ಸೂತ್ರದಿಂದ ಶ್ರೀ ಹರಿಯೇ ಸರ್ವವನ್ನೂ ಸೃಷ್ಟಿಸುವವನು ಎಂದು ಪರಿಹರಿಸಿರುತ್ತಾರೆ. (7) ಸ್ಫಟಿಕ ಲೌಹಿತ್ಯವೂ ಸ್ಫಟಿಕಮಣಿಗೆ ಜಪಾಕುಸುಮದ (ಕೆಂಪು ದಾಸನಹೂವು) ಸಂಬಂಧವಾಗುವುದರಿಂದ ತೋರುತ್ತದೆ. ಕಲ್ಲು ಮೊದಲಾದುದು ಕೆಂಪು ದಾಸನಹೂವಿನಿಂದ ಸಂಬದ್ಧವಾಗಿದ್ದಾಗ್ಯೂ ಅಸ್ವಚ್ಛವಾಗಿರುವುದರಿಂದ ಅಲ್ಲಿ ಲೌಹಿತ್ಯವು (ಕೆಂಪು ಬಣ್ಣವು) ತೋರುವುದಿಲ್ಲ. ಆದಕಾರಣ ಅದು ಯಥಾರ್ಥವೇ. (8) ಮರೀಚಿಕಾಜಲ (ಬಿಸಿಲು ಕುದುರೆ) ಜ್ಞಾನದಲ್ಲಿಯೂ ಪೃಥಿವೀ ತೇಜಸ್ಸುಗಳಲ್ಲಿ ನೀರು ಇದ್ದ ಪ್ರಯುಕ್ತ ಕಣ್ಣಿನ ದೋಷದಿಂದ ತೇಜಸ್ಸು, ಪೃಥಿವೀ, ಇವುಗಳನ್ನು ಗ್ರಹಿಸದೆ ಅದೃಷ್ಟದಿಂದ ನೀರನ್ನೇ ವಿಷಯೀಕರಿಸುವಪ್ರಯುಕ್ತ ಅದು ಯಥಾರ್ಥವೇ. (9) ಅಲಾತಚಕ್ರದಲ್ಲಿಯೂ, ಅಲಾತವು (ದೀವಿಗೆ ಅಥವಾ ಪಂಜು) ಅತಿಶೀಘ್ರವಾಗಿ ಹೋಗಿ ಸರ್ವದೇಶಗಳ ಸಂಯೋಗದಿಂದ ಪೂರ್ವೋತ್ತರಗಳಲ್ಲಿರುವ ಆಯಾಯ ಪ್ರದೇಶವಿಶೇಷಗಳ ಅಲಾತ ಸಂಯೋಗಕ್ರಮವನ್ನು ಗ್ರಹಿಸದಿರುವುದರಿಂದ ಅಂತಹ ಜ್ಞಾನವು ಯುಕ್ತವಾಗುತ್ತದೆ. ಸತ್ಯವಾದ ಚಕ್ರಪ್ರತೀತಿಯಲ್ಲಿಯೂ ಕ್ರಮವನ್ನು ಗ್ರಹಿಸದೆ ಆಯಾಯ ದೇಶಗಳಲ್ಲಿ ಸಂಯುಕ್ತವಾದ ಆಯಾಯ ವಸ್ತುಗಳನ್ನು ಸ್ವೀಕರಿಸುತ್ತದೆ. ಅದೂ ಯಥಾರ್ಥವೇ. (10) ದರ್ಪಣ (ಕನ್ನಡಿ) ಮೊದಲಾದವುಗಳಲ್ಲಿ ತನ್ನ ಮುಖಾದಿಗಳ ಜ್ಞಾನವೂ ಯಥಾರ್ಥವೇ. ಕಣ್ಣಿನ ರಶ್ಮಿಗಳು ದರ್ಪಣಾದಿಗಳಿಂದ ತಡೆಯಲ್ಪಟ್ಟದ್ದಾಗಿ ದರ್ಪಣಾದಿ ದೇಶಗಳನ್ನು ಸ್ವೀಕರಿಸಿ ತನ್ನ ಮುಖಾದಿಗಳನ್ನು ವಿಷಯೀಕರಿಸುತ್ತವೆ. (11) ದಿಕ್ಕಿನ ಭ್ರಮೆಯಲ್ಲಿಯೂ ಎಲ್ಲಾ ಕಡೆಗಳಲ್ಲಿಯೂ ಎಲ್ಲಾ ದಿಕ್ಕು ಇದ್ದ ಪ್ರಯುಕ್ತ ಅಂದರೆ, ಒಂದು ದಿಕ್ಕಿನಲ್ಲಿ ಮತ್ತೊಂದು ದಿಕ್ಕಿನ ಅವಯವವು ಇದ್ದಪ್ರಯುಕ್ತ, ಪ್ರಾಚೀ ಮೊದಲಾದ ವ್ಯವಹಾರವು ಪ್ರತಿಯೋಗಿಯನ್ನು ಅಪೇಕ್ಷಿಸುತ್ತದೆ. ಅದೃಷ್ಟವಶದಿಂದ ಆಯಾಯ ದಿಗಂತರದ ಪ್ರತಿಯೋಗಿಯ ಪ್ರತೀತಿಯು ದಿಗಂತರದ ಪ್ರತೀತಿಯೂ ಆಗುತ್ತದೆ. ಆದುದರಿಂದ ಅದೂ ಯಥಾರ್ಥವೇ. (12) ಇಬ್ಬರು ಚಂದ್ರರು ಇದುಮೊದಲಾದ ಜ್ಞಾನದಲ್ಲಿ ಆದರೂ, ಬೆರಳನ್ನು ಚುಚ್ಚೋಣದರಿಂದ ಕಣ್ಣಿನ ತೇಜಸ್ಸು ಅಭಿಭೂತವಾಗಿ ಸಾಮಗ್ರೀಭೇದದಿಂದ ಎರಡು ಸಾಮಗ್ರಿಗಳು ಅನ್ಯೋನ್ಯ ಅಪೇಕ್ಷೆ ಇಲ್ಲದಿರುವವುಗಳಾಗಿ ಇಬ್ಬರು ಚಂದ್ರರು ಎನ್ನುವುದಕ್ಕೆ ಹೇತುವಾಗುತ್ತದೆ. ಅದರಲ್ಲಿ ಒಂದು ಸಾಮಗ್ರಿಯು ತನ್ನ ದೇಶದಲ್ಲಿರುವ ಚಂದ್ರನನ್ನು

ವಿಷಯೀಕರಿಸುತ್ತದೆ. ಮತ್ತೊಂದು ಸಾಮಗ್ರಿಯು ವಕ್ರಗತಿಯಾಗಿ ಚಂದ್ರನ ಸಮೀಪ ದೇಶವನ್ನು ಗ್ರಹಿಸಿ ಚಂದ್ರನನ್ನು ತನ್ನ ದೇಶದಿಂದ ವಿಯುಕ್ತನನ್ನಾಗಿ ಗ್ರಹಿಸುತ್ತದೆ. ಆದಪ್ರಯುಕ್ತ ಎರಡು ಸಾಮಗ್ರಿಗಳಿಂದ ಏಕಕಾಲದಲ್ಲಿ ಎರಡು ದೇಶಗಳಲ್ಲಿರತಕ್ಕ ಚಂದ್ರನ ಜ್ಞಾನಗಳು ಆಗುತ್ತವೆ. ಇದೂ ಯಥಾರ್ಥವೇ. ಎರಡು ಸಾಮಗ್ರಿಗಳೂ ಪಾರಮಾರ್ಥಿಕವು. ಎರಡು ದೇಶಗಳಿಂದ ಕೂಡಿರುವ ಇಬ್ಬರು ಚಂದ್ರರು ಎನ್ನುವ ಜ್ಞಾನವೂ ಪರಸ್ಪರವಾಗಿ ಭೇದವು ಗೃಹೀತವಾಗದಿರುವುದರಿಂದ ಪಾರಮಾರ್ಥಿಕವು. ಎರಡು ಜ್ಞಾನಗಳಿಂದ ಒಬ್ಬ ಚಂದ್ರನಿಗೇನೇ ಗ್ರಾಹ್ಯಾಕಾರದಿಂದ ದ್ವಿತ್ವವೂ ಪಾರಮಾರ್ಥಿಕವು. ಆದುದರಿಂದ ಈ ಜ್ಞಾನದಲ್ಲಿ ಅಯಥಾರ್ಥವಾದುದು ಯಾವುದೂ ಇಲ್ಲ. ತಥಾಚ ಎಲ್ಲಾ ಜ್ಞಾನಗಳೂ ಯಥಾರ್ಥಗಳೆಂದೇ ತಿಳಿಯಬೇಕು. ಹೀಗೆ ಪೂರ್ವಪಕ್ಷವು.

(13) ರಾಮಾನುಜಾಚಾರ್ಯರು ಹಿಂದೆ ಹೇಳಿದ ಪ್ರಕ್ರಿಯೆಯೆಲ್ಲವೂ ಅಯುಕ್ತವು. ಏಕೆಂದರೆ— ಶುಕ್ತಿಮೊದಲಾದುವುಗಳಲ್ಲಿ ರಜತಮೊದಲಾದುದು ಇದೆ ಎನ್ನುವಲ್ಲಿ ಯಾವುವು ಶ್ರುತಿ ಪುರಾಣ ಸೂತ್ರಗಳು ಪ್ರಮಾಣಗಳಾಗಿ ಹೇಳಲ್ಪಟ್ಟವೆಯೋ ಆ ಪ್ರಮಾಣಗಳು ತೇಜಸ್ಸು, ಜಲ, ಪೃಥಿವೀ, ಇವುಗಳು ಮಿಶ್ರಗಳಾಗಿವೆ ಎಂದು ಹೇಳುತ್ತವೆ. ರಜತಾದಿಗಳು ಶುಕ್ತಿಮೊದಲಾದವುಗಳಲ್ಲಿ ಇರುತ್ತವೆ ಎಂದು ಹೇಳುವುದಿಲ್ಲ. ಕಾರಣವು ಮಿಶ್ರವಾಗಿದ್ದರೆ ಕಾರ್ಯವು ಮಿಶ್ರವಾಗಬೇಕೆನ್ನುವುದು ನಿಯತವಲ್ಲ. ಹಾಗಿದ್ದರೆ ಶುಕ್ತಿಯಲ್ಲಿ ರಜತಜ್ಞಾನವು ಬಂದಹಾಗೆ ಎಲ್ಲಾ ವಸ್ತುವಿನದ್ದೂ ಜ್ಞಾನವು ಬರಬೇಕಾಗುವುದು ಅದೃಷ್ಟಾದಿಗಳಿಂದ ಹೀಗೆ ಪ್ರತೀತಿಯಾಗುವುದಿಲ್ಲ ಎಂದರೆ, ಹೀಗೆ ಹೇಳಕೂಡದು. ಅದೃಷ್ಟ ದೋಷ ಮೊದಲಾದವುಗಳು ಕೇವಲ ಕಾರ್ಯದಿಂದಲೇ ಊಹಿಸಬೇಕಾಗಿರುವುದರಿಂದ ಕಾರ್ಯಸ್ವರೂಪವು ಈಗಲೂ ನಿರ್ಧಾರಿತವಾಗದಿರುವುದರಿಂದ ಅದೃಷ್ಟಾದಿರೂಪ ಕಲ್ಪಕವು ಇಲ್ಲಿ ಇಲ್ಲದಿರುವುದರಿಂದ ಸರ್ವವೂ ತೋರಬೇಕಾಗುವುದೆಂದು ಹಿಂದೆ ಹೇಳಿದ ಅತಿಪ್ರಸಂಗವು ಉಂಟೇ ಉಂಟು. (14) '**ಸೋಮಾಭಾವೇ ಪೂತಿಕಂ ಗೃಹ್ಣೀಯಾತ್**' ಸೋಮವು ಸಿಗದಿದ್ದರೆ ಪೂತಿಕವನ್ನು ತೆಗೆದುಕೊಳ್ಳಬೇಕು ಎಂದು ಶ್ರುತವಾದ ಅರ್ಥಾಪತ್ತಿಯು ಅತ್ಯಂತ ಅಯುಕ್ತವು. ಏಕೆಂದರೆ, (೧) ಪೂತಿಕದಲ್ಲಿ ಸೋಮಾವಯವಗಳು ಹೆಚ್ಚು ಇರುತ್ತವೆ ಎಂದು ಹೇಳುವುದಾದರೆ, ಪೂತಿಕವು ಸೋಮವೇ ಆಯಿತು. ಅನುಕಲ್ಪವು (ಪ್ರತಿನಿಧಿಯು) ಹೇಗೆ ಆಗುವುದು? (ಯಾವುದಾದರೂ ಮುಖ್ಯವಿಲ್ಲದಿದ್ದರೆ ಬೇರೆ ಅಮುಖ್ಯವನ್ನು ತೆಗೆದುಕೊಳ್ಳುವುದು ಅನುಕಲ್ಪವೆನ್ನಿಸುವುದು). ಸೋಮವೂ ಕೂಡ ಸೋಮಾಂಶಗಳು ಹೆಚ್ಚು ಇದ್ದ ಪ್ರಯುಕ್ತವೇ ಸೋಮವೆನ್ನಿಸುತ್ತದೆ. ಬರೀ ಸೋಮವಲ್ಲ. (೨) ಪೂತಿಕದಲ್ಲಿ ಸೋಮಾವಯವಗಳೂ ಪೂತಿಕದ ಅವಯವಗಳೂ ಸಮಗಳಾಗಿವೆ ಎಂದು ಹೇಳುವುದಾದರೆ ಎರಡೂ ಒಂದರಲ್ಲಿ ತೋರಬೇಕಾಗುವುವು. (೩) ಪೂತಿಕದಲ್ಲಿ ಸೋಮಾವಯವಗಳು ಕಡಿಮೆ ಇರುತ್ತವೆಂದು ಹೇಳುವುದಾದರೆ ಪೂತಿಕವು ಸೋಮದ ಕಾರ್ಯವನ್ನು ಹೇಗೆ ಮಾಡುತ್ತದೆ? ಹಾಗೆ ಮಾಡುವುದಾದರೆ ಶುಕ್ತಿಯೂ ಕೂಡ ರಜತದಿಂದ ಆಗುವ ಅರ್ಥಕ್ರಿಯೆಯನ್ನು ಏಕೆ ಮಾಡುವುದಿಲ್ಲ? (ಅಂದರೆ ಸೋಮಾಂಶಗಳು ಅಲ್ಪಗಳಾದಾಗ್ಯೂ ಪೂತಿಕವು ಸೋಮದ ಕಾರ್ಯವನ್ನು ಮಾಡುತ್ತದ ಎಂದು ಹೇಳುವುದಾದರೆ ಶುಕ್ತಿಯಲ್ಲಿ ರಜತಾಂಶಗಳು ಅಲ್ಪಗಳಾಗಿದ್ದಾಗ್ಯೂ ರಜತದ ಕಾರ್ಯವನ್ನು ಮಾಡಬೇಕಾಗುವುದು.) **ಸೋಮಾಭಾವೇ ಪೂತಿಕಂ ಗೃಹ್ಣೀಯಾತ್**' ಎನ್ನುವ ಶ್ರುತಿಯು ಪ್ರಮಾಣವಾಗಿರುವುದರಿಂದ ಪೂತಿಕವು ಸೋಮದಿಂದ ಆಗತಕ್ಕ ಕೆಲಸವನ್ನು ಮಾಡುತ್ತದೆಂದು ತಿಳಿದುಬರುತ್ತದೆ.

ಶುಕ್ತಿಯಾದರೂ ರಜತದಿಂದ ಆಗತಕ್ಕ ಕಾಲುಂಗುರ ಮೊದಲಾದುದನ್ನು ಮಾಡುತ್ತದೆ ಎನ್ನು ವಲ್ಲಿ ಶ್ರುತಿಯಿಲ್ಲದಿರುವುದರಿಂದ ಹಾಗೆ ಹೇಳಲು ಬರುವುದಿಲ್ಲವೆಂದರೆ— ಹಾಗಾದರೆ ಪೂತಿಕ ದಲ್ಲಿ ಸೋಮದ ಅವಯವಗಳನ್ನು ಕಲ್ಪಿಸುವುದು ಏಕೆ? ಶ್ರುತಿಯು ಪ್ರಮಾಣವಾಗಿರುವುದ ರಿಂದ ಪರಸ್ಪರ ಅವಯವ ಸಂಬಂಧವಿಲ್ಲದಿರುವ ಸೋಮ ಪೂತಿಕ ಮೊದಲಾದ ವಸ್ತುಗಳಿಗೇನೆ ಅರ್ಥಕ್ರಿಯೆಯಿಂದ ಸಾಮ್ಯವನ್ನು ಒಪ್ಪಿಕೊಳ್ಳಬಹುದು. (15) ಮತ್ತು ಪರಸ್ಪರವಾಗಿ ಸದೃಶ ಗಳಾದ ಘೃತ (ತುಪ್ಪ) ತೈಲ (ಎಣ್ಣೆ) ಗಳಿಗೆ ಪರಸ್ಪರ ಅವಯವ ಸಂಬಂಧದಿಂದ ಪರಸ್ಪರವಾಗಿ ಅರ್ಥಕ್ರಿಯೆಗಳು ಆಗಬೇಕಾಗುವವು. ಅಂದರೆ, ತುಪ್ಪದಿಂದ ಆಗುವ ದೇಹಪುಷ್ಟಿ ಮೊದಲಾ ದವುಗಳು ಎಣ್ಣೆಯಿಂದಲೂ, ಎಣ್ಣೆಯಿಂದಲೇ ಆಗತಕ್ಕ ದೇಹ ಕಾರ್ಶ್ಯಮೊದಲಾದ ಕಾರ್ಯ ಗಳು ತುಪ್ಪದಿಂದಲೂ ಆಗಬೇಕಾಗುವವು. ವಿಸದೃಶರಾದ ಎತ್ತು, ಮನುಷ್ಯ ಮೊದಲಾದವರಿಗೆ ಭಾರವನ್ನು ಹೊತ್ತುಕೊಳ್ಳುವುದು ಇದು ಮೊದಲಾದ ಕ್ರಿಯೆಗಳು ಆಗದೆ ಹೋಗಬೇಕಾಗು ವುವು. ಅಂದರೆ, ಎತ್ತು ಭಾರವನ್ನು ಹೊತ್ತುಕೊಳ್ಳುತ್ತದೆ. ಈ ಹೊರುವಿಕೆ ಎನ್ನುವ ಕ್ರಿಯೆಯು ಪುರುಷನಿಂದಲೂ ಆಗುತ್ತದೆ. ಅದು ಆಗದೆ ಹೋಗಬೇಕಾಗುವುದು. (16) ಮತ್ತು ತಾಯಿಯ ಸಾದೃಶ್ಯವು ಹೆಂಡತಿಯಲ್ಲಿಯೂ ಚಂಡಾಲನ ಸಾದೃಶ್ಯವು ತಂದೆಯಲ್ಲಿಯೂ ಮದ್ಯದ ಸಾದೃಶ್ಯವು ಕ್ಷೀರದಲ್ಲಿಯೂ ಇದೆ. ಆದಕಾರಣ ಭಾರ್ಯಾಸಂಗಮಾಡಿದರೆ ಮಾತೃಸಂಗಮಾಡಿದ ದೋಷವೂ, ತಂದೆಯನ್ನು ಸ್ಪರ್ಶಮಾಡಿದರೆ ಚಂಡಾಲಸ್ಪರ್ಶಮಾಡಿದ ಪಾಪವೂ, ಹಾಲನ್ನು ಕುಡಿದರೆ ಮದ್ಯಪಾನ ಮಾಡಿದ ಪಾಪವೂ ಬರಬೇಕಾಗುವುದು. ಹಾಗಾದರೆ ಹೆಂಡತಿ ಮೊದ ಲಾದವರಲ್ಲಿ ಮಾತ್ರಾದ್ಯವಯವಗಳು ಅತ್ಯಲ್ಪಗಳೇ ಇರುತ್ತವೆ. ಆದಪ್ರಯುಕ್ತ ಭಾರ್ಯಾದಿ ಗಳನ್ನು ಉಪಭೋಗಿಸಿದರೆ ಹಿಂದೆ ಹೇಳಿದ ಪ್ರತ್ಯವಾಯವು . ಇರುವುದಿಲ್ಲ ಎಂದು ಹೇಳಿದರೆ, ಹಾಗಾದರೆ ನೀವಾರಗಳಲ್ಲಿಯೂ ಸೋಮದ ಅವಯವಗಳು ಅತ್ಯಲ್ಪಗಳೇ ಇದ್ದ ಪ್ರಯುಕ್ತ ಆ ನೀವಾರಗಳು ವ್ರೀಹಿ ಕಾರ್ಯವನ್ನು ಹೇಗೆ ಮಾಡುತ್ತವೆ? (17) ಮತ್ತೊಂದರ ಅವ ಯವ ಸಂಯೋಗವೇ ಸಾದೃಶ್ಯವು, ಪರಸ್ಪರ ಅವಯವ ಸಂಯೋಗವಲ್ಲ, ಎಂದರೆ ಕಕಾರ ಖಕಾರಗಳಿಗೆ ಸಾದೃಶ್ಯವು ಹೇಗೆ? ಅಂದರೆ ಸ್ಪರ್ಶಾಕ್ಷರ (ಕಕಾರವನ್ನ ಆರಂಭಿಸಿ ಮಕಾರ ಪರ್ಯಂತ) ವಾಗಿರುವುದರಿಂದ ಅವುಗಳಿಗೆ ಸಾದೃಶ್ಯವಿದೆ. ಅಕ್ಷರಗಳು ನಿರವಯವಗಳಾದು ದರಿಂದ ಅಪರಾವಯವಸಂಯೋಗವಿಲ್ಲವಷ್ಟೆ. (18) ರಜತವನ್ನು ಇಚ್ಛಿಸುವವನಿಗೆ ಶುಕ್ತಿಯಲ್ಲಿ ಪ್ರವೃತ್ತಿಗೆ ಕಾರಣವು. (೧) ಹೆಚ್ಚು ಶುಕ್ತ್ಯವಯವಗಳು ಕಾಣದಿರುವುದು ಎಂದು ಹೇಳ ಕೂಡದು. ಸುಪ್ತನಿಗೂ ಪ್ರವೃತ್ತಿಯು ಬರಬೇಕಾಗುವುದು. ಅಂದರೆ, ಗಾಢನಿದ್ರೆಯನ್ನು ಗೈದವನಿಗೆ ಯಾವ ವಸ್ತುಗಳ ದರ್ಶನವೂ ಇಲ್ಲದಿರುವುದರಿಂದ ಹೆಚ್ಚು ಶುಕ್ತ್ಯವಯವಗಳು ಕಾಣದಿರುವುದು ಎನ್ನುವುದೂ ಇದೆ. (೨) ಅಲ್ಪ ರಜತಾವಯವಗಳು ಅಲ್ಪವೆನ್ನುವ ಜ್ಞಾನವೇ ಪ್ರವೃತ್ತಿಗೆ ಕಾರಣವೆಂದರೆ (ಅಲ್ಪವೆಂದೇ ಕಂಡರೆ) ಅಲ್ಪ ರಜತಾವಯವವುಳ್ಳದ್ದು ರಜತವಾಗದಿ ರುವುದರಿಂದ ರಜತವಲ್ಲವೆಂದೇ ತಿಳಿದಂತೆ ಆಯಿತು. ಆದುದರಿಂದ ಪ್ರವೃತ್ತಿಯಾಗಲಾರದು. (೩) ಅಲ್ಪ ರಜತಾವಯವಗಳನ್ನು ಬಹಳವೆಂದು ತಿಳಿದುಕೊಳ್ಳುವುದು ಪ್ರವೃತ್ತಿಗೆ ಕಾರಣ ವೆಂದರೆ, ಭ್ರಾಂತಿಯನ್ನು ಒಪ್ಪಿದಂತೆಯೇ ಆಯಿತು. (೪) ಅಲ್ಪ ರಜತಾವಯವಗಳನ್ನು ಅಲ್ಪ ಗಳೆಂದೂ ಬಹಳಗಳೆಂದೂ ವಿಷಯೀಕರಿಸದಿರುವ ರಜತಾವಯವ ಜ್ಞಾನಮಾತ್ರವು ಪ್ರವೃತ್ತಿಗೆ ಕಾರಣವು ಎಂದು ಹೇಳುವುದಾದರೆ ರಜತಕ್ಕೆ ಸದೃಶಗಳಾದ ಸೀಸ ಮೊದಲಾದ ಎಲ್ಲಾ ವಸ್ತು ಗಳಲ್ಲಿಯೇ ಪ್ರವೃತ್ತಿಯು ಬರಬೇಕಾಗುವುದು. ಶುಕ್ತಿಯಲ್ಲಿ ಪ್ರವೃತ್ತಿಯು ಬಾರದೆ ಹೋಗು ವುದು. (೫) ಹೆಚ್ಚು ಶುಕ್ತ್ಯವಯವಗಳನ್ನು ಕಾಣದಿರುವುದೂ ಅಲ್ಪ ರಜತಾವಯವಗಳನ್ನು

ಕಾಣುವುದೂ ಎನ್ನುವುದು ಎರಡೂ ಪ್ರವೃತ್ತಿಗೆ ಕಾರಣವು ಎಂದೂ ಹೇಳಕೂಡದು. ಅಲ್ಲಿ ಯಾವುದೋ ಒಂದು ಇದೆ, ಇದು ಮೊದಲಾದ ನಿರ್ವಿಕಲ್ಪಕಜ್ಞಾನದಿಂದಲೂ ಪ್ರವೃತ್ತಿಯು ಬರಬೇಕಾಗುವುದು. ಅಲ್ಲಿಯೂ ಹೆಚ್ಚು ಅವಯವಗಳಿಗೆ ಅದರ್ಶನವೂ, ಅಲ್ಪಾವಯವ ಗಳಿಗೆ ದರ್ಶನವೂ ಇದೆ. (19) ಮತ್ತು ಇದು ರಜತವು ಎನ್ನುವ ಜ್ಞಾನವು ಭ್ರಾಂತಿಯು (ಬಾಧ್ಯವು) ಹೇಗೆ ಆಗುವುದು? ಅಧಿಷ್ಠಾನಭೂತವಾದ ಶುಕ್ತಿಯು ಅಲ್ಪವಾದ ಅಂಶವನ್ನು ಗ್ರಹಣಮಾಡಿರುವುದರಿಂದ ಎಂದು ಹೇಳಿದರೆ— ಬ್ರಹ್ಮನು ಅಪರಿಚ್ಛಿನ್ನ ಅನಂತಾನಂತಗುಣ ಗಳುಳ್ಳವನಾದುದರಿಂದ ಅವನಲ್ಲಿರುವ ಎಲ್ಲಾ ಧರ್ಮಗಳನ್ನು ತಿಳಿಯಲು ಯಾರಿಗೂ ಸಾಧ್ಯ ವಿಲ್ಲದಿರುವುದರಿಂದ ಅವನಲ್ಲಿರುವ ಕೆಲವು ಧರ್ಮಗಳನ್ನು ವಿಷಯೀಕರಿಸುವ ನಮ್ಮ ಜ್ಞಾನವೂ ಅಲ್ಪವಾದ ಅಂಶವನ್ನು ವಿಷಯೀಕರಿಸಿರುವುದರಿಂದ ಮಹಾಭ್ರಾಂತಿಯಾಗಬೇಕಾಗುವುದು. (20) ಶಂಖವು ಪಿತ್ತದ್ರವ್ಯದಲ್ಲಿರತಕ್ಕ ಪೀತರೂಪದಿಂದ ಸಂಬದ್ಧವಾಗುವುದಾದರೆ ಸಮೀಪದಲ್ಲಿ ದ್ದವನಿಗೂ ಹಾಗೆಯೇ ಬಂಗಾರ ಕಟ್ಟಿದ ಶಂಖದಂತೆ ಪೀತವಾಗಿ ಏಕೆ ಕಾಣುವುದಿಲ್ಲ? ಪೀತ ತ್ವವು ಸೂಕ್ಷ್ಮವಾಗಿರುವುದರಿಂದ ಕಾಣುವುದಿಲ್ಲವೆಂದರೆ— ಸೂಕ್ಷ್ಮತ್ವವೆಂದರೆ ಎಂತಹುದು? ಇಂದ್ರಿಯಗಳಿಂದ ಕಾಣಲಿಕ್ಕೆ ಅಯೋಗ್ಯತ್ವವು ಎಂದು ಹೇಳಿದರೆ ಭ್ರಾಂತನಿಗೂ ಕಾಣದೆ ಹೋಗುವುದು. ಬೇರೆಯಾದರೆ ಅಂದರೆ, ತ್ರ್ಯಣುಕಾದಿಗಳಂತೆಯೇ ಅತೀಂದ್ರಿಯಾವಯವ ಗಳಲ್ಲಿ ಸಮವೇತತ್ವವು (ಸಮವಾಯ ಸಂಬಂಧದಿಂದ ಇರುವಿಕೆಯು) ಅಥವಾ ಅಲ್ಪತರಾವ ಯವತ್ವವು ಸೂಕ್ಷ್ಮತ್ವವು ಹೇಳಲಿಷ್ಟವಾಗಿದ್ದರೆ ತ್ರ್ಯಣುಕಾದಿಗಳಂತೆಯೇ ಸಮೀಪಲ್ಲಿದ್ದವನಿಗೂ ಕಾಣಬೇಕಾಗುವುದು ಎನ್ನುವ ಅತಿಪ್ರಸಂಗವನ್ನು ಪರಿಹಂಸದೆ ಇರುವದರಿಂದ ಸೂಕ್ಷ್ಮತ್ವಾತ್ ಎನ್ನುವ ವಚನದಿಂದ ಏನು ಪ್ರಯೋಜನವು? ಪಿತ್ತದಿಂದ ಸಂಬದ್ಧನಾದವನಿಗೆ ಸಾಮೀಪ್ಯ ವಿದ್ದಪ್ರಯುಕ್ತ ಕಾಣುತ್ತದೆ, ಸಮೀಪದಲ್ಲಿದ್ದವನಿಗಾದರೂ ಕಾಣತಕ್ಕ ಪುರುಷನ ಶರೀರ ಸಾಮೀಪ್ಯದಂತೆ ಸಾಮೀಪ್ಯವಿಲ್ಲ. ಆದಕಾರಣ ಅವನಿಂದ ಪೀತತ್ವವು ಗ್ರಹಿಸಲ್ಪಡುವುದಿಲ್ಲ, ಎಂದರೆ— ಸಾಮೀಪ್ಯವೆಂದರೆ ಎಂತಹುದು? ಇಂದ್ರಿಯ ಸಂಬಂಧವೆಂದು ಇಟ್ಟುಕೊಳ್ಳುವು ದಾದರೆ, ಅದು, ಕಾಣುವವನು ಸಮೀಪದಲ್ಲಿದ್ದವನು ಇವರಿಬ್ಬರಿಗೂ ಸಮಾನವೇ. ಶರೀರ ಸಾಮೀಪ್ಯವೆಂದು ಹೇಳುವುದಾದರೆ ಅದು ಅನುಪಯುಕ್ತವು. ದ್ರಷ್ಟೃಪುರುಷನ ಶರೀರಸಾಮೀ ಪ್ಯವೇ ದರ್ಶನಕ್ಕೆ ಉಪಯುಕ್ತವಾದದ್ದು ಎಂದಂಗೀಕರಿಸಿದರೆ ಮತ್ತೊಬ್ಬನ ಶರೀರದ ಸಮೀಪ ದಲ್ಲಿರತಕ್ಕ ದಂಡ ಕುಂಡಲ ಮೊದಲಾದವುಗಳು ತೋರದೆ ಹೋಗಬೇಕಾಗುವವು. (21) ಮತ್ತು 'ಪೀತಃ ಶಂಖಃ' ಎಂದು ತೋರುತ್ತದೆ ಎನ್ನುವುದಕ್ಕೆ ಪೀತರೂಪವುಳ್ಳದ್ದಾಗಿ ತೋರುತ್ತದೆ, ಎಂದಾದರೆ ಸಾಕ್ಷಾತ್ಸಂಬಂಧದಿಂದ ಪೀತರೂಪವು ಶಂಖದಲ್ಲಿಲ್ಲದಿರುವುದರಿಂದ ಆ ಸಂಬಂಧ ದಿಂದ ಅಲ್ಲಿ ಪೀತರೂಪವದೆ ಎಂದಂಗೀಕರಿಸಿದರೆ ಭ್ರಮರೂಪವಾದ ಅನ್ಯಥಾಖ್ಯಾತಿಯನ್ನು ಒಪ್ಪಬೇಕಾಗುವುದು. ಪೀತರೂಪವುಳ್ಳ ದ್ರವ್ಯದಿಂದ ಸಂಬಂಧವಾದದ್ದು ಎಂದು ಇಟ್ಟು ಕೊಂಡರೆ ಅನುಭವ ವಿರೋಧವು. ಅಂದರೆ, ಈ ಶಂಖವು ಪೀತರೂಪವುಳ್ಳ ದ್ರವ್ಯದಿಂದ ಸಂಬದ್ಧ ವಾಗಿದೆ. (ಸಂಯುಕ್ತ ಸಮವಾಯ ಸಂಬಂಧದಿಂದ ಪೀತರೂಪವುಳ್ಳದ್ದು) ಎಂದು ಯಾರಿಗೂ ಅನುಭವವಿಲ್ಲ. (22) ಹೀಗೆಯೇ ವಿಪ್ರತಿಪನ್ನಗಳಾದ ಸ್ವಪ್ನಾದಿ ಪ್ರತ್ಯಯಗಳನ್ನು ನಿರಾಕರಿಸ ಬೇಕು. ಹಿಂದೆ ಹೇಳಿದವುಗಳಲ್ಲಿ ಕೆಲವು ಸ್ವಪ್ನ, ಸ್ಫಟಿಕಲೌಹಿತ್ಯ, ದರ್ಪಣಮುಖ, ಪ್ರತ್ಯಯ ಗಳು ಯಥಾರ್ಥಗಳೇ. ಹೇಗೆಂದರೆ— ಅನಾದಿಸಂಸ್ಕಾರವನ್ನು ಉಪಾದಾನಕಾರಣವನ್ನಾಗಿಟ್ಟು ಕೊಂಡು ಭಗವಂತನು ನಿರ್ಮಿಸಿದ ಸ್ವಾಪ್ನಪದಾರ್ಥಗಳು ಸತ್ಯಗಳಾಗಿರುವುದರಿಂದ ಆ ಜ್ಞಾನಗಳು ಯಥಾರ್ಥಗಳೆಂದು ನಮಗೂ ಸಮ್ಮತವೇ. (23) ಸ್ಫಟಿಕಲೌಹಿತ್ಯ, ದರ್ಪಣಮುಖ, ಪ್ರತ್ಯಯ

ಗಳು ಸತ್ಯಭೂತವಾದ ಪ್ರತಿಬಿಂಬವನ್ನು ವಿಷಯೀಕರಿಸುವುದರಿಂದ ಯಥಾರ್ಥಗಳೇ. (24) ವಿಪ್ರತಿಪನ್ನಗಳಾದ ಮರೀಚಿಕಾಜಲ, ಅಲಾತಚಕ್ರ ದಿಗಂತರ, ಇಬ್ಬರು ಚಂದ್ರರು ಇದು ಮೊದಲಾದ ಪ್ರತ್ಯಯಗಳಿಗೆ ಯಾವ ದೋಷ ಅದೃಷ್ಟವಿಶೇಷಾಧೀನವಾದ ಗ್ರಹಣಾದಿಗಳಿಂದ ಯಾಥಾರ್ಥ್ಯವನ್ನು ಉಪಪಾದಿಸಿರುವರೋ ಅದನ್ನು 'ಈ ಕಲ್ಪನೆಗಳೆಲ್ಲವೂ ಕಾರ್ಯ ನಿಶ್ಚಯವಾದ ಮೇಲೆ ಆಗತಕ್ಕವುಗಳು ಎನ್ನುವ ದೋಷದಿಂದ ನಿರಾಕರಿಸಬೇಕು.' (25) ಮರೀಚಿಕಾಜಲ ಪ್ರತ್ಯಯದಲ್ಲಿ ತೇಜಸ್ಸು, ಪೃಥಿವಿ, ಇವುಗಳನ್ನು ಗ್ರಹಿಸದೆ ಜಲವನ್ನು ಮಾತ್ರ ಗ್ರಹಿಸುತ್ತದೆ ಎಂದು ಹೇಳಿದ್ದು ಅತಿಮಂದವು. ಅಧಿಷ್ಠಾನರೂಪದಿಂದ ಅಲ್ಲಿಯೂ ತೇಜಸ್ಸು, ಪೃಥಿವಿ, ಇವುಗಳಲ್ಲಿ ಒಂದು ನಿಯಮವಾಗಿ ತೋರುತ್ತದೆ. ಸಾಧಾರಣಾಕಾರ ವಾಗಿ ಅದರ ಜ್ಞಾನವಿದೆ ಎಂದು ಹೇಳಕೂಡದು. ಆ ಜ್ಞಾನಕ್ಕೆ ಜಲಜ್ಞಾನದಿಂದ ಭೇದ ವಿಲ್ಲವೆಂದಾದರೆ ಅನ್ಯಥಾಖ್ಯಾತಿಯು ಬರಬೇಕಾಗುವುದು. ಭೇದವಿದ್ದರೆ ಒಂದು ಜ್ಞಾನ ವೆನ್ನುವ ಅನುಭವ ವಿರೋಧವು. (26) ಅಲಾತಚಕ್ರಪ್ರತೀತಿಯು ಪೂರ್ವೋತ್ತರದಲ್ಲಿರುವ ಆಯಾಯ ದೇಶವಿಶೇಷದಲ್ಲಿ ಅಲಾತಸಂಯೋಗಕ್ರಮವನ್ನು ಗ್ರಹಣಮಾತ್ರಮಾಡದೇನೇ ಆಗು ವುದಾದರೆ ಆಯಾಯ ದೇಶ, ಆಯಾಯ ವಸ್ತುಗಳ ಸಂಬಂಧವನ್ನು ಏಕಕಾಲದಲ್ಲಿ ಗ್ರಹಿಸದೆ ಇರುವುದರಿಂದ ಅದರಲ್ಲಿ ಅಲಾತಚಕ್ರತ್ವಪ್ರತೀತಿಯೂ ಏಕೆ ಆಗಲಾರದು? (27) ಒಂದು ದಿಕ್ಕಿನಲ್ಲಿ ಮತ್ತೊಂದು ದಿಕ್ಕು ಇದೆ ಎನ್ನುವುದು ಪ್ರಮಾಣಸಿದ್ಧವಲ್ಲ. ದಿಕ್ಕುಗಳು ವ್ಯಾಪ್ತ ಗಳಾಗಿದ್ದರೂ ಅದರ ಭಾಗಗಳು ವ್ಯಾಪ್ತಗಳಲ್ಲ ಪಂಚೀಕರಣವಾದರೂ ಭೂತಗಳಲ್ಲಿ ಮಾತ್ರ ಇರತಕ್ಕದ್ದು. (28) ಇಬ್ಬರು ಚಂದ್ರರು ಇತ್ಯಾದಿ ಜ್ಞಾನಗಳಲ್ಲಿಯೂ ಸ್ವದೇಶವಿಯುಕ್ತನಾದ ಚಂದ್ರನಿಗೂ ಸಮೀಪದೇಶಕ್ಕೂ ಅಸಂಸರ್ಗವು ಗೃಹೀತವಾಗದಿರುವುದರಿಂದ ಅಥವಾ ಆ ಜ್ಞಾನ ಗಳಿಗೆ ಭೇದವು ಗೃಹೀತವಾಗದಿರುವುದರಿಂದ ವಿಶಿಷ್ಟವ್ಯವಹಾರವಾದರೆ ಚಂದ್ರ ದೇಶಗಳಿಗೆ ಸಂಸರ್ಗಜ್ಞಾನವಿಲ್ಲದಿರುವುದರಿಂದ ಆ ಜ್ಞಾನಗಳಿಗೂ ಅಭೇದವು ಗೃಹೀತವಾಗಿ ವಿಶಿಷ್ಟವ್ಯವ ಹಾರವೂ ಏಕೆ ಆಗಲಾರದು? ಇದು ಮೊದಲಾದ ಪ್ರಕಾರ ನಿರಾಕರಿಸಬೇಕು.

### ತಾರ್ಕಿಕೈಕದೇಶಿಗಳ ಮತವನ್ನು ನಿರಾಕರಿಸುವುದಕ್ಕಾಗಿ ಅನುವಾದಮಾಡಿಕೊಳ್ಳುತ್ತಾರೆ —

(1) ತಿಳಿಯಲ್ಪಡತಕ್ಕ ಇದಂ (ಶುಕ್ತಿ) ರಜತಗಳಿಗೆ ಭೇದವನ್ನು ಗ್ರಹಿಸದಿರುವ ಸವಿಕ ಲ್ಪಕವಾದ ಒಂದೇ ವಿಜ್ಞಾನವು ವಿಭ್ರಮವು. ಹೇಗೆಂದರೆ, ರಜತಸಂಸ್ಕಾರ ದೋಷ ಇವುಗಳಿಂದ ಕೂಡಿದ ಇಂದ್ರಿಯವು ಶುಕ್ತಿಯಿಂದ ಸನ್ನಿಕೃಷ್ಟವಾಗಿ ರಜತ ಶುಕ್ತಿರೂಪವಾದ ಇದಮಂಶಗಳನ್ನು ವಿಷಯೀಕರಿಸತಕ್ಕ ರಜತಕ್ಕೂ, ಶುಕ್ತಿರೂಪವಾದ ಇದಮಂಶಕ್ಕೂ ತಾದಾತ್ಮ್ಯ ಭೇದಗಳನ್ನು ವಿಷಯೀಕರಿಸದಿರುವ ಒಂದೇ ಸವಿಕಲ್ಪಕಜ್ಞಾನವನ್ನು ಹುಟ್ಟಿಸುತ್ತದೆ. ತಥಾಚ, ಒಂದೇ ವಿಜ್ಞಾನ ದಲ್ಲಿ ತೋರುವ ಶುಕ್ತಿರಜತಗಳಿಗೆ ಭೇದಜ್ಞಾನವಿಲ್ಲದಿರುವುದರಿಂದ'ಇದಂ ರಜತಂ' ಎಂದು ಅಯಥಾ ರ್ಥವ್ಯವಹಾರವು. ಭೇದಾಗ್ರಹವನ್ನು ನಿರಾಕರಿಸುವುದರಿಂದಲೇ ವಿವೇಕಜ್ಞಾನವು ಬಾಧಕವೆನ್ನಿಸು ತ್ತದೆ. ಒಂದು ವಸ್ತುವು ಮತ್ತೊಂದು ವಸ್ತುವಿನಿಂದ ಅಭಿನ್ನವಾಗಿ ತೋರುವುದಿಲ್ಲ. ಅಂತೂ ರಜತ ಶುಕ್ತಿರೂಪವಾದ ಇದಮಂಶಗಳನ್ನು ವಿಷಯೀಕರಿಸುವ, ಅವುಗಳಿಗೆ ಭೇದವನ್ನಾಗಲೀ, ಅಭೇದವ ನ್ನಾಗಲೀ ವಿಷಯೀಕರಿಸದಿರುವ, ಒಂದೇ ಆದ ಸವಿಕಲ್ಪಕವಾದ ಜ್ಞಾನವೇ ಭ್ರಾಂತಿಯೆಂದು ಎನ್ನಿಸಿಕೊಳ್ಳುತ್ತದೆ. ಶುಕ್ತಿಯಲ್ಲಿ ಇಲ್ಲದಿರುವ ರಜತತಾದಾತ್ಮ್ಯವನ್ನು ವಿಷಯೀಕರಿಸುವ ಜ್ಞಾನ ವನ್ನು ಭ್ರಾಂತಿಯೆಂದು ಹೇಳಕೂಡದು. ಪ್ರವೃತ್ತಿಗೆ ಭೇದಾಗ್ರಹವೇ ಕಾರಣವು. (2) ಹಾಗಾದರೆ

ಪ್ರಾಭಾಕರಮತದಿಂದ ಈ ಮತಕ್ಕೆ ವೈಲಕ್ಷಣ್ಯವೇನೆಂದರೆ— ಈ ಮತದಲ್ಲಿ ಎದುರು ತೋರುವ ರಜತವು ಇದಂ ಪದಾರ್ಥ (ಶುಕ್ತಿ) ದಂತೆ ಸತ್ಯವೇ. ಶುಕ್ತಿ ರಜತಗಳನ್ನು ವಿಷಯೀಕರಿಸಿ ಕೊಂಡಿರುವ ಜ್ಞಾನವೂ ಒಂದೇ. ಒಂದೇ ಜ್ಞಾನದಲ್ಲಿ ವಿಷಯಗಳಾದ ಶುಕ್ತಿರಜತಗಳಿಗೆ ಭೇದ ಜ್ಞಾನವಿಲ್ಲದಿರುವುದರಿಂದ ಅಯಥಾರ್ಥವಾದ ವ್ಯವಹಾರವೂ, ಅಯಥಾರ್ಥಪ್ರವೃತ್ತಿಯೂ ಆಗುತ್ತದೆ. ಒಂದು ಜ್ಞಾನದಲ್ಲಿ ವಿಷಯಗಳಾದ ಇದಂ (ಶುಕ್ತಿ) ರಜತಗಳಿಗೆ ಭೇದಜ್ಞಾನವಿಲ್ಲದಿರುವುದರಿಂದ ಬಂದಿರುವ ಅಯಥಾರ್ಥ ವ್ಯವಹಾರವನ್ನು ಹೋಗಲಾಡಿಸುವುದರಿಂದಲೇ 'ನೇದಂ ರಜತಂ' ಇದು ರಜತವಲ್ಲ ಎನ್ನುವ ವಿವೇಕಜ್ಞಾನವು ಬಾಧಕವು ಎಂದು ಹೇಳಲ್ಪಡುತ್ತದೆ. ಬಾಧಕವೆನ್ನುವ ಪ್ರಸಿದ್ಧಿಯಿದ್ದುದರಿಂದ. ಒಂದೇ ಜ್ಞಾನದಲ್ಲಿ ವಿಷಯಗಳಾದ ಶುಕ್ತಿರಜತಗಳಿಗೆ ವಿವೇಕಜ್ಞಾನವಿಲ್ಲದಿರುವುದರಿಂದಲೇ ಆ ಎರಡನ್ನು ವಿಷಯೀಕರಿಸಿಕೊಂಡಿರುವ ಒಂದು ಜ್ಞಾನವು ಭ್ರಾಂತಿಯೆಂದು ಲೋಕಪ್ರವಾದವು ಅಂತೂ ಪ್ರಾಭಾಕರರ ಮತದಲ್ಲಿ 'ಇದಂ ರಜತಂ' ಎನ್ನುವುದು ಗ್ರಹಣ ಸ್ಮರಣಾತ್ಮಕಗಳಾದ ಎರಡು ಜ್ಞಾನಗಳು. ತಾರ್ಕಿಕೈಕದೇಶಿಗಳ ಮತದಲ್ಲಿ 'ಇದಂ ರಜತಂ' ಎನ್ನುವುದು ಒಂದೇ ಜ್ಞಾನವು; ಹೀಗೆ ಭೇದವು. ಅದರಿಂದುಂಟಾಗತಕ್ಕ ವ್ಯವಹಾರವು ಯಥಾರ್ಥವಾಗದಿರುವುದರಿಂದಲೇ ಅದನ್ನು ಹುಟ್ಟಿಸತಕ್ಕ ಈ ಒಂದು ಜ್ಞಾನವು ಭ್ರಮರೂಪವು ಎನ್ನಿಸುತ್ತದೆ. ವಸ್ತುತಸ್ತು ಶುಕ್ತಿಯಲ್ಲಿ ರಜತ ತಾದಾತ್ಮ್ಯವನ್ನು ವಿಷಯೀಕರಿಸತಕ್ಕ ಭ್ರಾಂತಿರೂಪವಾದ ಜ್ಞಾನವಿಲ್ಲ. ಹೀಗೆ ಹಿಂದಿನ ಮತಕ್ಕೂ ಈ ಮತಕ್ಕೂ ಎರಡು ಜ್ಞಾನಗಳೆಂದೂ ಒಂದು ಜ್ಞಾನವೆಂದೂ ವಿಶೇಷವು

(3) ಇವೆಲ್ಲವೂ ಅಯುಕ್ತವು. ಹೇಗೆಂದರೆ (೧) ವಿವೇಕಾಗ್ರಹವು ಎಲ್ಲಾ ಕಡೆಗಳಲ್ಲಿಯೂ ಪ್ರವೃತ್ತಿಗೆ ಕಾರಣವೋ (೨) ಅಥವಾ ಭ್ರಾಂತಿಯೆಂದು ವಿವಾದವಿಷಯವಾದ ಈ ಸ್ಥಳದಲ್ಲಿಯೇ ಕಾರಣವೋ ಎಂದು ಶಂಕಿಸಿಕೊಂಡು ಪ್ರಾಭಾಕರರ ಪಕ್ಷದಲ್ಲಿ ಹೇಳಿದ ಎಲ್ಲಾ ದೋಷಗಳೂ (ಅಂದರೆ ಸವಿಕಲ್ಪಕ ಜ್ಞಾನವೇ ಇಲ್ಲವೆಂದಾಗಬೇಕಾಗುವುದು. ಅದೃಷ್ಟವನ್ನು (ಎಲ್ಲಿಯೂ ಕಾಣದೆ ಇದ್ದದ್ದನ್ನು) ಕಲ್ಪಿಸಬೇಕಾಗುವುದು. ಇದು ಮೊದಲಾದ ದೋಷಗಳು) ಈ ಪಕ್ಷದಲ್ಲಿಯೂ ಬರುತ್ತವೆ. (4) ಮತ್ತೂ ವೇದಪ್ರಾಮಾಣ್ಯದ ಸಿದ್ಧಿಗೆ ಅಂಗವಾಗಿ ಭ್ರಮಾತ್ಮಕ ಜ್ಞಾನವಿಲ್ಲವೆಂದು ಸ್ವೀಕರಿಸಿದರೆ ಪ್ರಯೋಜನವಿದೆ ಎನ್ನುವ ಆಗ್ರಹವಿಶೇಷವು ಪ್ರಾಭಾಕರರಿಗೆ ಇದೆ. (ಅಂದರೆ, " ಅಹೋ ಬತ ಮಹಾನೇಷಃ ಪ್ರಮಾದೋ ಧೀಮತಾಮಪಿ । ಜ್ಞಾನಸ್ಯ ವ್ಯಭಿಚಾರಿತ್ವೇ ವಿಶ್ವಾಸಃ ಕಿಂನಿಬಂಧನಃ ॥ " ಎನ್ನುವ ಪ್ರಾಭಾಕರರ ಮಾತಿನಿಂದ 'ಇದಂ ರಜತಂ' ಎನ್ನುವ ಜ್ಞಾನವು ಅಪ್ರಮಾಣವಾದರೆ ಅದರಂತೆಯೇ ವೇದದಿಂದ ಹುಟ್ಟುವ ಜ್ಞಾನವೂ ಅಪ್ರಮಾಣವಾಗಬೇಕಾಗುವುದು ಎನ್ನುವ ಶಂಕೆಯು ಬರುವುದರಿಂದ ಅದನ್ನು ಪರಿಹರಿಸುವುದಕ್ಕಾಗಿ ಜ್ಞಾನವೆಲ್ಲವೂ ಯಥಾರ್ಥವೆಂದಂಗೀಕರಿಸಿ ಅವರು ಭ್ರಮೆಯನ್ನು ಒಪ್ಪಲಿಲ್ಲ.) ಕಣಾದ ಅಕ್ಷಪಾದರಲ್ಲಿ ಪಕ್ಷಪಾತವುಳ್ಳ ನೀನಾದರೂ "ಅತಸ್ಮಿನ್ ತದಿತಿ ಪ್ರತ್ಯಯೋ ವಿಪರ್ಯಯಃ" ಅದು ಅಲ್ಲದಿರುವಲ್ಲಿ ಅದು ಎನ್ನುವ ಜ್ಞಾನವು ಅಂದರೆ, ಒಂದು ವಸ್ತುವಿನಲ್ಲಿ ಇನ್ನೊಂದು ವಸ್ತುವಿನ ತಾದಾತ್ಮ್ಯವನ್ನು ವಿಷಯೀಕರಿಸುವ ಜ್ಞಾನವು ವಿಪರ್ಯಯವು, ಎನ್ನುವ ನಿಮ್ಮ ಪೂರ್ವಾಚಾರ್ಯರ ವಚನವನ್ನು ಆದರಿಸದೆ ಅಖ್ಯಾತಿಯನ್ನು (ಅಯಥಾರ್ಥಜ್ಞಾನವಿಲ್ಲವೆಂದು) ಸ್ವೀಕರಿಸಿ ಪ್ರಾಭಾಕರರ ಮತವನ್ನು ಕದ್ದುಕೊಂಡದ್ದು ಏಕೆ?. (5) ರಜತವು ಅಸತ್ತೆಂದಂಗೀಕರಿಸಿದರೆ ಅಸತ್ತಿಗೂ ಪ್ರತೀತಿಯನ್ನು ಒಪ್ಪಬೇಕಾಗುವುದು. ಅದಾದರೂ ಕೂಡಲಾರದು. ಯತ್ ಅಸತ್ ತತ್ ನ ಪ್ರತೀಯತೇ= ಯಾವುದು ಅಸತ್ಯವೋ ಅದು ತೋರುವುದಿಲ್ಲ ಎನ್ನುವ ನಿಯಮವಿರುವುದರಿಂದ. ಆದುದರಿಂದ ರಜತವು ಸತ್ಯವೆಂದಂಗೀಕರಿಸಬೇಕು, ಎಂದರೆ— ಹೀಗೆ ಹೇಳಕೂಡದು. ಹಾಗಾದರೆ

(ಅಯಥಾರ್ಥ ಜ್ಞಾನವನ್ನು ಒಪ್ಪದಿದ್ದರೆ) ಅಯಥಾರ್ಥ ವ್ಯವಹಾರವನ್ನೂ ಬಿಡಬೇಕಾಗುವುದು. ಅಸತ್ತನ್ನು ತಿಳಿಯಲು ಸಾಧ್ಯವಿಲ್ಲ. ವ್ಯವಹರಿಸಲಿಕ್ಕೆ ಶಕ್ಯವಾಗಿದೆ ಎನ್ನುವಲ್ಲಿ ಕಾರಣವಿಶೇಷ ವಿಲ್ಲ. ವ್ಯವಹಾರವು ಅನುಭವಸಿದ್ಧವಾಗಿದೆ ಎಂದರೆ— ಹಾಗಾದರೆ, ವಿಶಿಷ್ಟಪ್ರತ್ಯಯವು ಅನುಭವ ಸಿದ್ಧವಲ್ಲವೋ? ಅಂದರೆ, ಇಷ್ಟರವರೇಗೆ ಶುಕ್ತಿಯನ್ನೇ ರಜತರೂಪವನ್ನಾಗಿ ತಿಳಿದುಕೊಂಡಿದ್ದೆನು. ಅತ್ಯಂತಾಸತ್ತಾದ ರಜತವೇ ತೋರಿತು ಎಂದು ಉತ್ತರಕಾಲದಲ್ಲಿ ಬರತಕ್ಕ ಅನುಭವದ ಸಾಮರ್ಥ್ಯದಿಂದ ಅತ್ಯಂತಾಸತ್ತಾದ ರಜತರೂಪವಾಗಿ ಶುಕ್ತಿಯನ್ನು ವಿಷಯೀಕರಿಸುವ ಭ್ರಮ ರೂಪವಾದ ವಿಶಿಷ್ಟಜ್ಞಾನವೂ ಕೂಡ ಅನುಭವಸಿದ್ಧವೇ ಆಗಿದೆ. (6) ಹಾಗಾದರೆ, ಭ್ರಾಂತಿ ಯನ್ನು ಅಂಗೀಕರಿಸಿದರೆ ವೇದಕ್ಕೆ ಪ್ರಾಮಾಣ್ಯವು ಹೇಗೆ ಸಿದ್ಧಿಸುವುದು? ವೇದದಿಂದ ಹುಟ್ಟತಕ್ಕ ಜ್ಞಾನದಲ್ಲಿಯೂ ಭ್ರಾಂತಿಯೆನ್ನುವ ಸಂಶಯವು ಬರಬಹುದು. ಜ್ಞಾನಗಳೆಲ್ಲವೂ ಯಥಾರ್ಥ ಗಳೇ ಎಂದು ಇಟ್ಟುಕೊಂಡರೆ ಈ ಶಂಕಾಕ್ಕೆ ಅವಕಾಶವೇ ಇಲ್ಲ, ಹೀಗೆ ಹೇಳಕೂಡದು. ಹಾಗಾದರೆ, ವಿವೇಕಾಗ್ರಹವನ್ನೂ (ಭೇದಾಗ್ರಹವನ್ನೂ) ಅಂಗೀಕರಿಸದೆ ಇರಬೇಕಾಗುವುದು. ಹೇಗೆಂದರೆ— ವೇದವಾಕ್ಯವು ಪದಾರ್ಥವಿಷಯದಲ್ಲಿ ಪ್ರಮಾಣವೆಂದು ಹೇಳಕೂಡದು. ಪದಾರ್ಥ ಗಳು ಪ್ರತ್ಯಕ್ಷದಿಂದಲೂ ಅನುಮಾನದಿಂದಲೂ ತಿಳಿಯಲ್ಪಟ್ಟಿವೆ. ವೇದವಾಕ್ಯವು ಪದಾರ್ಥಗಳ ಸಂಸರ್ಗ ವಿಷಯದಲ್ಲಿ ಪ್ರಮಾಣವೆಂದೂ ಹೇಳಕೂಡದು. ಸಂಸರ್ಗಜ್ಞಾನವಿಲ್ಲದಿದ್ದರೂ ಅಸಂಸರ್ಗಾಗ್ರಹದಿಂದಲೇ 'ಇದಂ ರಜತಂ' ಇದು ಮೊದಲಾದ ವ್ಯವಹಾರಗಳನ್ನು ತಿಳಿದವನಿಗೆ ವೇದದಿಂದ ಹುಟ್ಟಿರುವ ವಿಜ್ಞಾನದಲ್ಲಿಯೂ ಶಂಕೆಯು ಬರಬಹುದು. ಅಂದರೆ, ವೇದದಿಂದ ಹುಟ್ಟುವ ಜ್ಞಾನದಿಂದ ಪ್ರವೃತ್ತಿಯು ಆಗುತ್ತದೆ. ಆ ಪ್ರವೃತ್ತಿಯು ಭ್ರಮಸ್ಥಳದಲ್ಲಿ ಆಗುವಂತೆ ಅಸಂಸರ್ಗಾಗ್ರಹದಿಂದಲೇ ಆಗಲಿ, ವಿಶಿಷ್ಟಜ್ಞಾನದಿಂದಲ್ಲ. ಅಂತೂ ವೇದದಿಂದ ಹುಟ್ಟುವ ಜ್ಞಾನವು ಸಂಸರ್ಗವಿಷಯಕವಾದ ವಿಶಿಷ್ಟಜ್ಞಾನವಲ್ಲ ಎನ್ನುವ ಶಂಕೆಯು ಬರಬಹುದು. ಆ ಶಂಕೆಯನ್ನು ವೇದವು ಅಪೌರುಷೇಯವಾಗಿದೆ, ಇತ್ಯಾದಿಗಳಿಂದ ನಿರಾಕರಿಸುವೆವೆಂದರೆ— ಹಾಗಾದರೆ, ಸರ್ವರೂ ಅಂಗೀಕರಿಸಿರುವ ಭ್ರಾಂತಿಯನ್ನು ನಿರಾಕರಿಸಿದರಿಂದ ಏನು ಪ್ರಯೋಜ ನವು? ಆ ಶಂಕಾವನ್ನೂ(ಅಂದರೆ ಭ್ರಾಂತಿಯನ್ನು ಅಂಗೀಕರಿಸಿದ ಪಕ್ಷದಲ್ಲಿ ವೇದದಿಂದ ಹುಟ್ಟತಕ್ಕ ವಿಜ್ಞಾನವೂ ಭ್ರಾಂತಿಯು ಆಗಬೇಕಾಗುವುದು ಎನ್ನುವ ಶಂಕೆಯನ್ನೂ) ಅಪೌರುಷೇಯತ್ವಾದಿ ಹೇತುಗಳಿಂದಲೇ ನಿರಾಕರಿಸಲಿಕ್ಕೆ ಶಕ್ಯವಾಗುವುದರಿಂದ ಶುಕ್ತಿಯು ಅತ್ಯಂತಾಸತ್ತಾದ ರಜತ ರೂಪವಾಗಿ ತೋರುತ್ತದೆ ಎನ್ನುವುದು ಸಿದ್ಧವಾಗಿದೆ.

## ಪ್ರಾಚೀನ ತಾರ್ಕಿಕರ ಮತವನ್ನು ನಿರಾಕರಿಸುವುದಕ್ಕಾಗಿ ಅನುವಾದಮಾಡಿಕೊಳ್ಳುತ್ತಾರೆ —

(1) ಶುಕ್ತಿಯಲ್ಲಿ ಆರೋಪಿಸಲ್ಪಡತಕ್ಕ ರಜತವು ಸತ್ಯವೆಂದೇ ಪ್ರಾಚೀನ ತಾರ್ಕಿಕರು ಹೇಳುತ್ತಾರೆ. ಏಕೆಂದರೆ— ಯಾವುದು ಹೇಗೆ ತೋರುತ್ತದೋ ಅದು ಹಾಗೆಯೇ ಇರುವುದು ಎನ್ನುವುದು ಸಾಮಾನ್ಯ ನ್ಯಾಯವು. ಪ್ರಬಲವಾದ ಬಾಧಕವಿದ್ದರೆ ಅದಕ್ಕೆ ಅಪವಾದವಿದೆ. ಅಂದರೆ, ಅಂತಹ ಸ್ಥಳದಲ್ಲಿ ಆ ನ್ಯಾಯವನ್ನು ಬಿಡುವುದು, ತಥಾಚ ಇದಂ (ಶುಕ್ತಿ)ಎನ್ನುವುದು, ರಜತವು, ಅವುಗಳಿಗೆ ಅಭೇದವು, ಹೀಗೆ ಮೂರು 'ಇದಂ ರಜತಂ' ಎನ್ನುವ ಜ್ಞಾನದಲ್ಲಿ ತೋರುತ್ತದೆ. ಅಥವಾ ಇದಂ ಎನ್ನುವುದು, ರಜತತ್ವವು, ಅವುಗಳ ಸಂಬಂಧವು, ತೋರುತ್ತದೆ. ಅವುಗಳಲ್ಲಿ ರಜತ ರಜತತ್ವಗಳಿಗೂ ಇದಂತ್ವಾಸ್ಪದವಾದುದಕ್ಕೂ ಬಾಧಕವಿಲ್ಲದಿರುವುದರಿಂದ ಅಸತ್ವವು ಕೂಡುವುದಿಲ್ಲ. ಇವುಗಳ ವಿಷಯದಲ್ಲಿ ಬೇರೆ ಪ್ರಮಾಣಗಳ ಸಂವಾದವೂ ಇದೆ. ಅವುಗಳ

ತಾದಾತ್ಮ್ಯಕ್ಕಾಗಲೀ ಸಂಸರ್ಗಕ್ಕಾಗಲೀ 'ನೇದಂ ರಜತಂ' 'ನಾಸ್ತ್ಯತ್ರ ರಜತಂ' ಎನ್ನುವ ಬಾಧಕಜ್ಞಾನದಿಂದಲೂ ವಿಸಂವಾದದಿಂದಲೂ ಅಸತ್ವವು ಇರಲಿ. "ಅಸಂಭವಿ ಚ ಯಾವತ್ತು ತಾವತ್ಸಂಪರಿಹೀಯತಾಂ" ಯಾವುದು ಕೂಡುವುದಿಲ್ಲವೋ ಅದನ್ನು ಬಿಟ್ಟು ಬಿಡಿರಿ, ಎಂದು ಹೇಳಿರುವರು. (2) ಇದು ರಜತವಲ್ಲ ಎನ್ನುವ ಬಾಧಜ್ಞಾನವು ರಜತಕ್ಕೂ ಅಸತ್ವವನ್ನು ತಿಳಿಸಿಕೊಡುತ್ತದೆ ಎಂದು ಹೇಳಕೂಡದು. ಅದು ಅಸತ್ತಾದ ತಾದಾತ್ಮ್ಯವನ್ನು ಮಾತ್ರ ವಿಷಯೀಕರಿಸುತ್ತದೆ ಎನ್ನುವುದರಿಂದಲೇ ಕೂಡುವಾಗ ರಜತಕ್ಕೂ ಅಸತ್ವವನ್ನು ವಿಷಯೀಕರಿಸುತ್ತದೆ ಎಂದು ಕಲ್ಪಿಸಿದರೆ ಗೌರವವು ಬರಬೇಕಾಗುವುದು. "ಏಕದೇಶಾಪವಾದೇನ ಕಲ್ಪ್ಯಮಾನೇ ಚ ಬಾಧಕೇ। ನ ಸರ್ವಬಾಧನಂ ಯುಕ್ತಮಿತಿ ನ್ಯಾಯವಿದಃ ಸ್ಥಿತಾಃ" ॥ ತಾದಾತ್ಮ್ಯಕ್ಕೆ ಅಸತ್ವವನ್ನು ವಿಷಯೀಕರಿಸುವುದರಿಂದಲೇ ಬಾಧಕಜ್ಞಾನವು ಕೂಡುತ್ತಿರಲು ಆ ಬಾಧಕ ಬಲದಿಂದ ಸರ್ವಕ್ಕೂ ಅಸತ್ವವನ್ನು ಅಂಗೀಕರಿಸುವುದು ಯುಕ್ತವಲ್ಲ, ಎಂದು ನ್ಯಾಯಜ್ಞರು ಹೇಳುತ್ತಾರೆ. (3) ಮತ್ತು ರ[illegible]ಂತಾಸತ್ತಾದರೆ ತೋರಲಿಕ್ಕಿಲ್ಲ. ಹೀಗೆ ಸತ್ವವು ಸಿದ್ಧವಾದ ಮೇಲೆ ಬಾಧಜ್ಞಾನವು ಬರುವಾಗ ಎದುರಿನಲ್ಲಿ ತೋರದಿರುವುದರಿಂದ ದೇಶಾಂತರದಲ್ಲಿದೆ ಎಂದು ಅನ್ನುತ್ತೇವೆ. ದೋಷವಿಶಿಷ್ಟವಾದ ಕಣ್ಣು ಶುಕ್ತಿಯಿಂದ ಮಾತ್ರ ಸಂಬದ್ಧವಾದಾಗ್ಯೂ ಶುಕ್ತಿಯನ್ನು ದೂರದಲ್ಲಿರುವ ರಜತವನ್ನಾಗಿ ತೋರಿಸುತ್ತದೆ, ಎಂದು ಇಟ್ಟುಕೊಂಡರೆ ದೋಷವೇನು?

(4) ಇದೂ ಅಯುಕ್ತವು. ರಜತವು ಸತ್ತಾದರೆ 'ಅಸದೇವ ರಜತಂ ಪ್ರತ್ಯಭಾತ್' ಅಸತ್ತಾದ ರಜತವನ್ನೇ ತಿಳಿದೆನು, ಎನ್ನುವ ಅನುಭವದಿಂದ ವಿರೋಧವು ಬರುವುದು. ಅಂತೂ ಸತ್ವವನ್ನು ಸಾಧಿಸುವ ಅನುಮಾನ ಅರ್ಥಾಪತ್ತಿಗಳ ವಿಷಯವು ಬಾಧಿತವಾಯಿತು. (5) ಇಲ್ಲಿ ಇಲ್ಲದಿದ್ದರೂ ಬೇರೆ ಕಡೆ ರಜತವು ಇದೆ ಎಂದಂಗೀಕರಿಸುತ್ತೇವೆಂದರೆ, ಹಾಗೆ ಹೇಳಕೂಡದು. ಇಲ್ಲಿ ತೋರಿದ್ದೇ ಬೇರೆಕಡೆ ಇದೆ ಎನ್ನುವಲ್ಲಿ ಪ್ರಮಾಣವಿಲ್ಲ. ಅಂತೂ ಅಸತ್ವಪ್ರತೀತಿಗೆ ಸಂಕೋಚವು ಯುಕ್ತವಲ್ಲ. ಏಕೆ ಪ್ರಮಾಣವಿಲ್ಲವೆಂದರೆ— ಆ ವಿಷಯದಲ್ಲಿ (೧) ಭ್ರಾಂತ್ಯನುಭವವು ಪ್ರಮಾಣವೆಂದಾಗುವುದಿಲ್ಲ. ಅದು ಅಪ್ರಮಾಣವಾಗಿದೆ. ಅಂತೂ ಭ್ರಾಂತ್ಯನುಭವವು ಪ್ರಮಾಣವೆನ್ನುವುದು ವ್ಯಾಹತವು. ಇದು ರಜತವು ಎನ್ನುವ ಭ್ರಾಂತ್ಯನುಭವದಿಂದ ಎದುರಿರುವ ವಸ್ತುವಿನಲ್ಲಿಯೇ ರಜತವು ಸತ್ ಎಂದು ತಿಳಿಸಲ್ಪಡುತ್ತದೆ. ಬೇರೆ ಕಡೆ ಅಲ್ಲ. ಹೀಗೆ ಭ್ರಾಂತ್ಯನುಭವವು, ರಜತವು ಬೇರೆ ಕಡೆ ಇದೆ ಎನ್ನುವಲ್ಲಿ ಪ್ರಮಾಣವಾಗುವುದಿಲ್ಲ. (೨) ಬಾಧಾನುಭವವು ಪ್ರಮಾಣವೆಂದೂ ಹೇಳಕೂಡದು. ಇಲ್ಲಿ ರಜತವಿಲ್ಲ ಎಂದು ನಿಷೇಧಮಾಡತಕ್ಕ ಬಾಧಾನುಭವವು ಬೇರೆ ಕಡೆ ಇದೆ, ಇಲ್ಲ, ಈ ಎರಡರಲ್ಲಿಯೂ ಉದಾಸೀನವಾಗಿದೆ. (೩) ಭ್ರಾಂತ್ಯನುಪಪತ್ತಿಯು ಪ್ರಮಾಣವೆಂದೂ ಹೇಳಕೂಡದು. ಭ್ರಾಂತಿಯು, ಎದುರಿರುವ ವಸ್ತುವು ಇಂದ್ರಿಯ ದೋಷ ಇತ್ಯಾದಿಗಳು ಇಲ್ಲದೆ ಕೂಡದಿರುವುದರಿಂದ ಎದುರಿರುವ ವಸ್ತುವು ಇಂದ್ರಿಯ ದೋಷ ಇತ್ಯಾದಿಗಳನ್ನು ಮಾತ್ರ ತಿಳಿಸುತ್ತದೆ. ಅಂತೂ ರಜತವು ಬೇರೆ ಕಡೆಯಲ್ಲಿ ಸತ್ತಾಗಿದೆ ಎಂದು ತಿಳಿಸುವುದಿಲ್ಲ. ರಜತವು ಅಸತ್ತಾದರೆ ಅದನ್ನು ವಿಷಯೀಕರಿಸುವ ಭ್ರಮರೂಪವಾದ ಪ್ರತೀತಿಯೇ ಕೂಡುವುದಿಲ್ಲ. ಅಸತ್ತಿಗೆ ಪ್ರತೀತಿಯಿರುವುದಿಲ್ಲ. ಆದಕಾರಣ ಅದು ಅನ್ಯಥಾನುಪಪನ್ನವಾಗಿ ಬೇರೆ ಕಡೆ ಇದೆ ಎಂದಂಗೀಕರಿಸಬೇಕೆಂದರೆ, ಬೇರೆ ಕಡೆ ಇದ್ದರೂ ಏನು ಉಪಯೋಗವು? ಬೇರೆ ಕಡೆ ಇದ್ದದ್ದು ಇಲ್ಲಿಯ ಜ್ಞಾನಕ್ಕೆ ಉಪಕಾರಕವಾಗಲಿಕ್ಕಿಲ್ಲ. ಚಕ್ಷುರಾದಿ ಇಂದ್ರಿಯಗಳಿಂದ ಸನ್ನಿಕರ್ಷವಾಗುವುದಕ್ಕಾಗಿ ಬೇರೆ ಕಡೆ ಇರಬೇಕೆನ್ನುವುದು ಕೂಡಲಾರದು. ಚಕ್ಷುರಾದಿ ಇಂದ್ರಿಯಗಳಿಗೆ ದೂರದಲ್ಲಿರುವ ವಸ್ತುವಿನಿಂದ ಸಂಬಂಧವು ಕೂಡಲಾರದು. ಎದುರಿರುವ ವಸ್ತುವಿನ ಸನ್ನಿಕರ್ಷ ಮಾತ್ರದಿಂದಲೇ ಭ್ರಮೆಯು

ಹುಟ್ಟುತ್ತದೆ, ಎಂದಂಗೀಕರಿಸುತ್ತೇವೆ. ರಜತದಿಂದ ಸನ್ನಿಕರ್ಷವು ಇಷ್ಟವಲ್ಲ. ಸಂಸ್ಕಾರ ಸಿದ್ಧಿಗಾಗಿ ಬೇರೆಕಡೆ ಇದೆ ಎಂದೂ ಹೇಳಕೂಡದು. ಸಂಸ್ಕಾರವು ರಜತಾನುಭವವನ್ನು ತಿಳಿಸುತ್ತದೆ. ಅನುಭವವು ಯಥಾರ್ಥವಾಗಿದ್ದರೆ ರಜತವು ಇದೆ ಎಂದು ತಿಳಿಸುತ್ತದೆ. ಇಲ್ಲಿ ತೋರಿದ ರಜತವೇ ಬೇರೆ ಕಡೆ ಇದೆ ಎಂದು ಏಕೆ ಕಲ್ಪಿಸಬೇಕು? ಮತ್ತು ಒಂದು ಘಟವು ವಿನಷ್ಟವಾದ ಅಥವಾ ಹುಟ್ಟುವ ಮತ್ತೊಂದು ಘಟವಾಗಿ ಯಾವಾಗ ತೋರುತ್ತದೋ ಆಗ ಹೇಗೆ? ಅಂದರೆ, ಚೈತ್ರನು ಮನೆಯಲ್ಲಿ ಘಟವನ್ನು ಇಟ್ಟಿದ್ದೆನು, ಅದನ್ನು ನೀನು ತೆಗೆದುಕೊಳ್ಳು ಎಂದು ಮೈತ್ರನ ಹತ್ತಿರ ಹೇಳಿದಾಗ ಮೈತ್ರನು ನಾಳೆ ತೆಗೆದುಕೊಳ್ಳುವೆನು ಎಂದನು- ಆ ಮಧ್ಯದಲ್ಲಿ ಆ ಘಟವು ನಷ್ಟವಾಯಿತು. ಅದೇ ಸ್ಥಾನದಲ್ಲಿ ಯಾರೋ ಒಬ್ಬನು ಬೇರೊಂದು ಘಟವನ್ನು ಇಟ್ಟಿದ್ದನು. ಮೈತ್ರನು ಮರುದಿನ ಅಲ್ಲಿಗೆ ಹೋಗಿ ಅದೇ ಘಟವನ್ನು ಚೈತ್ರನು ಹೇಳಿದ ಘಟವೆಂದು ಭ್ರಾಂತಿಪಟ್ಟರೆ ಆಗ ಹೇಗೆ? ವಿನಷ್ಟವಾದ ಘಟವಾಗಲೀ ಮುಂದೆ ಹುಟ್ಟುವ ಘಟವಾಗಲೀ ಬೇರೆ ಕಡೆಯಲ್ಲಿ ಇಲ್ಲವಷ್ಟೆ! ಬೇರೆ ಕಾಲದಲ್ಲಿ ಇದೆ ಎಂದರೆ, ಅದು ಭ್ರಾಂತಿಯಲ್ಲಿ ಉಪಯುಕ್ತವಾಗಲಾರದು. ಸಂಸ್ಕಾರಾದಿಗಳಿಂದಷ್ಟೆ ಅದರ ಉಪಯೋಗವು. ಅದು ಬೇರೆ ರಜತದ ಅನುಭವದಿಂದಲೇ ಆಗುವುದು. ಆದಕಾರಣ ರಜತವು ಬೇರೆಕಡೆ ಇದೆ ಎಂದು ಕಲ್ಪಿಸುವುದು ವ್ಯರ್ಥವೇ. ಮತ್ತು ಅಸತ್ತು ತೋರದೆ ಇರುವುದಾದರೆ ತಾದಾತ್ಮ್ಯವೂ ತೋರದೆ ಹೋಗುವುದು. ತಾದಾತ್ಮ್ಯವು ಎಲ್ಲಿಯೂ ಇಲ್ಲ. ತಾದಾತ್ಮ್ಯವು ಧರ್ಮವಾಗಿರುವುದರಿಂದ ಅಸತ್ತಾದರೂ ತೋರಬಹುದು. ರಜತವು ಧರ್ಮಿಯಾಗಿರುವುದರಿಂದ ಬೇರೆ ಕಡೆಯಲ್ಲಿ ಇಲ್ಲದಿದ್ದರೆ ತೋರಲಾರದು ಎಂದರೆ, ಈ ಧರ್ಮಧರ್ಮಿಭಾವರೂಪವಾದ ವೈಲಕ್ಷಣ್ಯವು ಅನುಪಯುಕ್ತವು. ಅಂತೂ ಇಲ್ಲಿ ತೋರುವ ರಜತವೇ ಬೇರೆ ಕಡೆ ಇದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ 'ಅಸದೇವ ರಜತಂ ಪ್ರತ್ಯಭಾತ್' ಎನ್ನುವ ಅನುಭವದಿಂದ 'ಇದಂ ರಜತಂ' ಎಂದು ಆರೋಪ್ಯಮಾಣವಾದ ರಜತವು ಅತ್ಯಂತಾಸತ್ತೆಂದೇ ಒಪ್ಪಿಕೊಳ್ಳಬೇಕು. ಅಂದರೆ, ಇಂತಹ ಧರ್ಮತ್ವವೂ ಧರ್ಮಿತ್ವವೂ ಅಪ್ರಯೋಜಕವಾಗಿರುವುದರಿಂದ ಪ್ರತೀತಿಗೆ ಉಪಪಾದಕವಾಗಲಾರದು. (೪) ಇಲ್ಲಿ ತೋರುವ ರಜತವೇ ಬೇರೆಕಡೆಯಲ್ಲಿದೆ ಎನ್ನುವಲ್ಲಿ ಬಾಧಾನುಪಪತ್ತಿಯು ಅಂದರೆ, ಬಾಧ ಕೂಡದಿರುವುದು ಪ್ರಮಾಣವೆಂದೂ ಹೇಳಕೂಡದು. ರಜತಕ್ಕೆ ಬೇರೆ ಕಡೆ ಸತ್ತಾ ಇಲ್ಲದೆ ಬಾಧಕ್ಕೆ ಅನುಪಪತ್ತಿಯು ಇರುವುದಿಲ್ಲ.

(5) ಹಾಗಾದರೆ, ಎಲ್ಲಾ ಕಡೆಗಳಲ್ಲಿಯೂ ಆರೋಪಿಸಲ್ಪಡತಕ್ಕದ್ದು ಅತ್ಯಂತಾಸತ್ತೇ ಆಗಿದೆಯೋ, ಎಂದರೆ— ಎಲ್ಲಿ ಆರೋಪಿಸಲ್ಪಡತಕ್ಕದು ಅಧಿಷ್ಠಾನದ ಸಮೀಪದಲ್ಲಿ ಇದೆಯೋ, **ಉದಾ:**=ಒಂದೇ ಪ್ರದೇಶದಲ್ಲಿರುವ ಚೂತ (ಮಾವಿನ ಮರ)ಪನಸ (ಹಲಸಿನ ಮರ)ಗಳು ದೂರ ದೇಶದಲ್ಲಿದ್ದರೆ ದೂರಸ್ಥತ್ವ ದೋಷದಿಂದ ಪನಸ ವೃಕ್ಷದಲ್ಲಿ ಚೂತದ ಅಭೇದವು ಆರೋಪಿಸಲ್ಪಡುತ್ತದೆ. ಇದೊಂದೇ ಚೂತವೃಕ್ಷವೆಂದು. ಅಂತಹ ಸ್ಥಳದಲ್ಲಿ ಇದು ಒಂದೇ ಚೂತವೃಕ್ಷವಲ್ಲ, ಮತ್ತೆ ಚೂತ–ಪನಸಗಳು ಎನ್ನುವ ಬಾಧಜ್ಞಾನ ಬಂದಮೇಲೆಯೂ ಪನಸ-ಚೂತಗಳೆನ್ನುವ ಎರಡು ಪದಾರ್ಥಗಳ ಸ್ವರೂಪವು ಕಾಣುವುದರಿಂದ ತಾದಾತ್ಮ್ಯ ಮಾತ್ರ ಅಸತ್ತಾಗಿದೆ. ಎಲ್ಲಿ ಸಮೀಪದಲ್ಲಿ ಇಲ್ಲದಿದ್ದದ್ದು ಆರೋಪಿಸಲ್ಪಡುತ್ತದೋ ಅಲ್ಲಿ 'ನೇದಂ ರಜತಂ' ಎಂದು ಬಾಧಜ್ಞಾನವು ಬಂದಮೇಲೆ ಎರಡರ ಸ್ವರೂಪವು ತೋರದಿರುವುದರಿಂದ ರಜತವು ಅಭೇದವೂ ಎರಡೂ ಅಸತ್ತು. ಆದಕಾರಣ ಆರೋಪಿಸಲ್ಪಡತಕ್ಕ ರಜತವು ಬೇರೆ ಕಡೆಯಲ್ಲಿ ಇದೆ. ತಾದಾತ್ಮ್ಯವು ಮಾತ್ರ ಗೃಹ್ಯಮಾಣಾರೋಪದಲ್ಲಿಯೂ ಸ್ಮರ್ಯಮಾಣಾರೋಪದಲ್ಲಿಯೂ ಅಸತ್ತಾಗಿದೆ ಎಂದು ಪ್ರಾಚೀನ ನೈಯಾಯಿಕರು ಹೇಳತಕ್ಕ ಅನ್ಯಥಾಖ್ಯಾತಿವಾದವೂ ಕೂಡುವುದಿಲ್ಲ.

## ಬೌದ್ಧೈಕದೇಶಿಗಳಾದ ವಿಜ್ಞಾನಾತ್ಮತತ್ವವಾದಿಗಳ ಮತವನ್ನು ನಿರಾಕರಿಸುವುದಕ್ಕಾಗಿ ಅನುವಾದಮಾಡಿಕೊಳ್ಳುತ್ತಾರೆ—

(1) ಬೌದ್ಧೈಕದೇಶಿಗಳಾದ ವಿಜ್ಞಾನಾತ್ಮತತ್ವವಾದಿಗಳು ರಜತವು ಸತ್ಯವೇ. ಆದರೆ, ಒಳಗೇನೇ ಇರತಕ್ಕುದೆಂದು ತಿಳಿಯುತ್ತಾರೆ. ಹೇಗೆಂದರೆ- ರಜತವು ಅಸತ್ತೇ ಅಲ್ಲ. ಅಸತ್ತಾಗಿದ್ದರೆ ಪ್ರತೀತಿಯೇ ಕೂಡಲಾರದು. ಎದುರಿನಲ್ಲಿಯೇ ಇರತಕ್ಕದ್ದೂ ಅಲ್ಲ. ಭ್ರಾಂತಿಯು ಕೂಡದೆ ಹೋಗುವುದು. ಬಾಧದಿಂದ ವಿರೋಧವೂ ಬರುವುದು. ದೇಶಾಂತರದಲ್ಲಿ ಸತ್ತಾಗಿದೆ ಎಂದೂ ಅಲ್ಲ ಆ ವಿಷಯದಲ್ಲಿ ಪ್ರಮಾಣವಿಲ್ಲ. ಆದಕಾರಣ ಪರಿಶೇಷಾತ್ ಜ್ಞಾನಾಕಾರವೇ. (2) ಮತ್ತು "ಇದಂ ಜ್ಞಾನರೂಪಂ ಇಂದ್ರಿಯ ಸಂಪ್ರಯೋಗೇ ಅಸತಿ ಅಪರೋಕ್ಷತ್ವಾತ್" (ಪ್ರತೀಯಮಾನ ರಜತಸ್ಯ ಇಂದ್ರಿಯಸನ್ನಿಕರ್ಷಾಜನ್ಯ ಪ್ರತ್ಯಕ್ಷವಿಷಯತ್ವಾತ್) ಜ್ಞಾನವತ್= ಶುಕ್ತಿಯಲ್ಲಿ ತೋರುವ ರಜತವು, ಜ್ಞಾನಸ್ವರೂಪವು, ತೋರುವ ರಜತವು ಇಂದ್ರಿಯ ಸನ್ನಿಕರ್ಷದಿಂದ ಹುಟ್ಟದಿರುವ ಪ್ರತ್ಯಕ್ಷಕ್ಕೆ ವಿಷಯವಾಗಿರುವುದರಿಂದ, ಜ್ಞಾನದಂತೆಯೇ. ಸತ್ಯವಾಗಿದ್ದರೆ ಭ್ರಾಂತಿಯು ಕೂಡಲಾರದೆಂದಲ್ಲ 'ಆಂತರಸ್ಯೈವ ಪದಾರ್ಥಸ್ಯ ಬಾಹ್ಯತಯಾ ಅವಭಾಸಃ ಭ್ರಮಃ= ಅಂದರೆ ಜ್ಞಾನರೂಪವಾಗಿರುವುದರಿಂದ ಒಳಗೆ ಇರುವ ಪದಾರ್ಥವೇ ಹೊರಗೆ ಇದೆ ಎಂದು ತೋರುವುದು ಭ್ರಾಂತಿಯು ಎಂದಂಗೀಕರಿಸಿರುವರು. 'ನೇದಂ ರಜತಂ'=ಇದು ರಜತವಲ್ಲ ಎನ್ನುವ ಬಾಧಕಜ್ಞಾನದಿಂದ ರಜತಕ್ಕೆ ಬಾಹ್ಯತ್ವವೇ ನಿಷೇಧಿಸಲ್ಪಡುತ್ತದೆ, ಎನ್ನುವರು.

(3) ಇದೂ ಅಯುಕ್ತವು. ಜ್ಞಾನಾಕಾರವಾದ ರಜತವು ಒಳಗೆ ಇದೆ ಎಂದಂಗೀಕರಿಸಿದರೆ 'ಅಸದೇವ ರಜತಂ ಪ್ರತ್ಯಭಾತ್' ಎಂದು ಅಸತ್ವವನ್ನು ತಿಳಿಸಿಕೊಡತಕ್ಕ ಪ್ರತ್ಯಯದಿಂದ ವಿರೋಧವು ಬರುತ್ತದೆ. ಅಂತೂ ಅಸತ್ತೆಂದೇ ಕೂಡುವುದರಿಂದ ಪರಿಶೇಷಪ್ರಮಾಣಕ್ಕೆ ಅವಕಾಶವಿಲ್ಲ. (4) ಅಸತ್ತಿಗೆ ಪ್ರತೀತಿಯು ಕೂಡದಿದ್ದರೆ ನೀನು ಆಂತರ ರಜತದಲ್ಲಿ ಆರೋಪಿಸಲ್ಪಡತಕ್ಕ ಅಸತ್ತಾದ ಬಹಿಸ್ಥತ್ವಕ್ಕೂ (ಅಂದರೆ ರಜತವು ಹೊರಗೆ ಇದೆ) ಎನ್ನುವುದಕ್ಕೂ ಪ್ರತೀತಿಯು ಕೂಡದೆ ಹೋಗಬೇಕಾಗುವುದು. ಹೊರಗೆ ಇದೆ ಎನ್ನುವುದು ಸತ್ತಾದರೆ (ಇರುವುದಾದರೆ) ಭ್ರಾಂತಿತ್ವವು ಕೂಡದೆ ಹೋಗಬೇಕಾಗುವುದು. (5) 'ಅಸದೇವ ರಜತಂ ಪ್ರತ್ಯಭಾತ್' ಎನ್ನುವುದರಿಂದ ಹೊರಗೆ ಇದೆ ಎನ್ನುವುದೇ ನಿಷೇಧಿಸಲ್ಪಡುತ್ತದೆ ಎಂದು ಹೇಳಕೂಡದು. ರಜತವು, ಜ್ಞಾನರೂಪವು ಆಂತರವು ಎನ್ನುವಲ್ಲಿ ಪ್ರಮಾಣವಿಲ್ಲ. ಮತ್ತು 'ಇಂದ್ರಿಯ ಸಂಪ್ರಯೋಗೇ ಅಸತಿ ಅಪರೋಕ್ಷತ್ವಾತ್' ಎನ್ನುವ ಹೇತುವಿಗೆ ಬಾಹ್ಯತ್ವದಲ್ಲಿ ವ್ಯಭಿಚಾರವು. (ಅಂದರೆ ಜ್ಞಾನರೂಪತ್ವರೂಪಸಾಧ್ಯವಿಲ್ಲವು. ಹೇತುವಿದೆ.) ಶುಕ್ತಿಸನ್ನಿಕೃಷ್ಟವಾದ ಚಕ್ಷುರಿಂದ್ರಿಯದಿಂದುಂಟಾಗತಕ್ಕ ಅಪರೋಕ್ಷಜ್ಞಾನವಿಷಯತ್ವವೇ ಇದ್ದಪ್ರಯುಕ್ತ ಅಸಿದ್ಧಿಯು. (ಪಕ್ಷದಲ್ಲಿ ಹೇತುವಿಲ್ಲ.) ದೃಷ್ಟಾಂತವಾದ ಜ್ಞಾನದಲ್ಲಿ ಹೇತುವಿಲ್ಲ. ಏಕೆಂದರೆ— ಸ್ವರೂಪೇಂದ್ರಿಯ ಸನ್ನಿಕರ್ಷದಿಂದ ಅಭಿವ್ಯಕ್ತವಾದ ಸಾಕ್ಷಿರೂಪವಾದ ಅಪರೋಕ್ಷಜ್ಞಾನವಿಷಯತ್ವವನ್ನು ಜ್ಞಾನದಲ್ಲಿಯೂ ಸ್ವೀಕರಿಸಿಯದೆ. (6) ಮತ್ತು ಗುಲುಗುಂಜಿರಾಶಿಯಲ್ಲಿ ಆರೋಪಿತವಾದ ಬೆಂಕಿಯು ಜ್ಞಾನರೂಪವಾಗಿ ದೇಹದ ಒಳಗೆ ಇರುವುದಾದರೆ ಶರೀರವು ಸುಟ್ಟುಹೋಗಬೇಕಾಗುವುದು. ಅದನ್ನು ಅಂಗೀಕರಿಸದಿದ್ದರೆ ಒಳಗೂ ಅಸತ್ತಾಗಬೇಕಾಗುವುದು. ಅಂದರೆ, ಎದುರಿನಲ್ಲಿಯೂ ದೇಶಾಂತರಗಳಲ್ಲಿಯೂ ಇಲ್ಲದಿರುವುದರಿಂದ ಅತ್ಯಂತಾಸತ್ತೆಂದೇ ಪ್ರಾಪ್ತವಾಯಿತು. ಹೀಗೆ ಆತ್ಮಖ್ಯಾತಿ ಪಕ್ಷವು (ಜ್ಞಾನ ಸ್ವರೂಪವಾದ ರಜತವೇ ತೋರುತ್ತದೆ ಎನ್ನುವ ಪಕ್ಷವು) ಯುಕ್ತವಲ್ಲ.

## ಬೌದ್ಧೈಕದೇಶಿಗಳಾದ ಅಸತ್ ಖ್ಯಾತಿವಾದಿಗಳ ಮತವನ್ನು ನಿರಾಕರಿಸುವುದಕ್ಕಾಗಿ ಅನುವಾದ ಮಾಡಿಕೊಳ್ಳುತ್ತಾರೆ —

(1) ಬೌದ್ಧೈಕದೇಶಿಗಳಾದ ಅಸತ್ ಖ್ಯಾತಿವಾದಿಗಳು 'ಇದಂ ರಜತಂ' ಎನ್ನುವ ಪ್ರತೀತಿಯು ಅಸದ್ವಿಷಯಕವೇ ಆಗಿದೆ ಎನ್ನುತ್ತಾರೆ. ಹೇಗೆಂದರೆ— 'ಇದಂ ರಜತಂ' ಎಂದು ತೋರತಕ್ಕ ರಜತವು ಸತ್ತೇ ಅಲ್ಲ. ಏಕೆಂದರೆ, ಬಾಧಜ್ಞಾನದಿಂದ ವಿರೋಧವು ಬರುತ್ತದೆ. ಭ್ರಾಂತಿತ್ವವೂ ಕೂಡದೆ ಹೋಗುವುದು. (2) ಸದಸತ್ತೂ ಅಲ್ಲ. ಅಲ್ಲಿಯೇ ಆವಾಗಲೇ ಯಾವ ಧರ್ಮದಿಂದ ಕೂಡಿದ್ದಕ್ಕೆ ಸತ್ಯತ್ವವಿದೆಯೋ, ಅಲ್ಲಿಯೇ ಆವಾಗಲೇ ಆ ಧರ್ಮದಿಂದ ಕೂಡಿಕೊಂಡು ಇದ್ದದ್ದಕ್ಕೇನೇ ಅಸತ್ಯತ್ವವು ಎನ್ನುವುದು ವಿರುದ್ಧವಾಗಿರುತ್ತದೆ. (3) ಯಾವುದಾದರೊಂದು ದೇಶದಲ್ಲಿ ಯಾವುದಾದರೊಂದು ಕಾಲದಲ್ಲಿ ಯಾವುದೋ ಒಂದು ಪ್ರಕಾರದಿಂದ ಸತ್ಯವು. ದೇಶಾಂತರದಲ್ಲಿ ಕಾಲಾಂತರದಲ್ಲಿ ಬೇರೆ ಪ್ರಕಾರ ಅಸತ್ಯವು, ಹೀಗೆ ದೇಶಕಾಲಪ್ರಕಾರ ಭೇದವ್ಯವಸ್ಥೆಯಿಂದ ಸದಸತ್ವವನ್ನು ಅಂಗೀಕರಿಸುವ ಪ್ರಯುಕ್ತ ವಿರೋಧವಿಲ್ಲವೆಂದರೆ— ರಜತವೂ ಘಟಪಟಾದಿಗಳಂತೆಯೇ ಆಗಬೇಕಾಗುವುದು. ಅಂತೂ 'ಇದಂ ರಜತಂ' ಎನ್ನುವುದು ಭ್ರಾಂತಿಯು. 'ಅಯಂ ಘಟಃ' ಎನ್ನುವ ಜ್ಞಾನವು ಯಥಾರ್ಥವು ಎನ್ನುವುದು ಆಗದೆ ಹೋಗುವುದು. (4) ಮತ್ತು ಹೀಗಾದರೆ 'ಸದಿದಂ ರಜತಂ' ಎನ್ನುವ ಜ್ಞಾನವು ಸತ್ವವಿದ್ದ ಪ್ರಯುಕ್ತ ಭ್ರಾಂತಿಯು ಆಗದೇನೇ ಹೋಗುವುದು. ಸದಸದ್ರೂಪವಾದುದನ್ನು ಸತ್ ಎಂದು ವಿಷಯೀಕರಿಸುವುದರಿಂದ ಭ್ರಾಂತಿಯಾಗುತ್ತದೆಂದರೆ ಏಕದೇಶವನ್ನು ನೋಡುವುದೇ ಭ್ರಾಂತಿಯೋ, ಹಾಗಾದರೆ ಏಕದೇಶವನ್ನು ವಿಷಯೀಕರಿಸುವುದು ಭ್ರಾಂತಿಯೆಂದಹಾಗಾಯಿತು. ಅಂತೂ ಬಾಧಕಜ್ಞಾನವೂ ಕೂಡ ಅಸತ್ವವನ್ನು ಮಾತ್ರ ವಿಷಯೀಕರಿಸುವುದರಿಂದ ಭ್ರಾಂತಿಯು ಆಗಬೇಕಾಗುವುದು. ಅಂದರೆ ಸದಸದ್ರೂಪವಾದ ರಜತವನ್ನು ಕೇವಲ ಸತ್ ಎಂದು ವಿಷಯೀಕರಿಸುವುದು ಭ್ರಮವಾದರೆ, 'ಅಸದೇವ ರಜತಂ ಪ್ರತ್ಯಭಾತ್' ಎಂದು ಅಸತ್ವವನ್ನು ಮಾತ್ರ ಗ್ರಹಿಸುವುದೂ ಭ್ರಾಂತಿಯಾಗಬೇಕಾಗುವುದು. ಆದಕಾರಣ ಏಕದೇಶವನ್ನು ವಿಷಯೀಕರಿಸುವುದು ಭ್ರಮವಾಗುವುದಿಲ್ಲ. (5) ಸದಸದ್ರೂಪವಾದ ರಜತವನ್ನು ಸದೇವ= ಸತ್ತೇ ಎಂದು ಅಸತ್ವಾಭಾವವನ್ನು ವಿಷಯೀಕರಿಸುವುದರಿಂದ ಭ್ರಾಂತಿತ್ವವು ಎಂದರೆ- ಹಾಗಾದರೆ, ಸದಸದ್ರೂಪವಾದ ರಜತವನ್ನು ಅಸದೇವ= ಅಸತ್ತೇ ಎಂದು ಸತ್ವಾಭಾವವನ್ನು ವಿಷಯೀಕರಿಸುವುದರಿಂದ ಬಾಧಜ್ಞಾನವೂ ಭ್ರಾಂತಿಯಾಗಬೇಕಾಗುವುದು. ಆದಪ್ರಯುಕ್ತ ಭ್ರಾಂತಿಯ ವಿಷಯವು ಅಸತ್ತೇ ಆಗಿದೆ. ಅಸತ್ತಿಗೆ ಪ್ರತೀತಿಯು ಕೂಡುವುದಿಲ್ಲವೆಂದಲ್ಲ. ವಿವೇಕಾಗ್ರಹವಾದವನ್ನು ನಿರಾಕರಿಸಿಯಾಗಿದೆ. ಅಂತೂ ಅವರ ರೀತಿಯಾಗಿ 'ಇದಂ ರಜತಂ' ಎನ್ನುವ ಜ್ಞಾನವು ಕೇವಲ ಸತ್ತನ್ನು ವಿಷಯೀಕರಿಸದಿರುವುದರಿಂದ ಅಸತ್ತಿಗೂ ಪ್ರತೀತಿಯು ಯುಕ್ತವೇ ಆಗುತ್ತದೆ. ಮತ್ತು ಅನ್ಯಥಾ ಖ್ಯಾತಿವಾದಿಗಳೂ ಅಸತ್ತೇ ಆದ ತಾದಾತ್ಮ್ಯವಾಗಲೀ ಸಂಸರ್ಗವಾಗಲೀ ತೋರುತ್ತದೆಂದು ಅಂಗೀಕರಿಸಿರುವರು. ವಿಜ್ಞಾನ ಖ್ಯಾತಿವಾದಿಗಳೂ ಅಸತ್ಯವೇ ಆದ ಬಹಿಸ್ಥತ್ವವು (ಹೊರಗೆ ಇದೆ ಎನ್ನುವುದು) ತೋರುತ್ತದೆಂದಂಗೀಕರಿಸಿರುವರು. 'ಬೇರೆ ಕಡೆ ಇದ್ದದ್ದೇ ಇಲ್ಲಿ ತೋರುತ್ತದೆ' ಎನ್ನುವ ಪಕ್ಷದಲ್ಲಿ ಭ್ರಾಂತಿಯೂ ಕೂಡುವುದಿಲ್ಲ. ಬಾಧವೂ ಕೂಡುವುದಿಲ್ಲ. ಆದುದರಿಂದ 'ಇದಂ ರಜತಂ' ಎನ್ನುವ ಜ್ಞಾನದಲ್ಲಿ ತೋರತಕ್ಕದ್ದು ಅಸತ್ ಎಂದೇ ಹೇಳಬೇಕು.

(6) ಈ ವಿಷಯದಲ್ಲಿ ಸ್ವಲ್ಪ ವಿಚಾರಮಾಡತಕ್ಕದ್ದಿದೆ. ಈ ಅಸತಖ್ಯಾತಿಯೆಂದರೆ ಯಾವುದು? ಸತ್ತೇ ಆದ ಶುಕ್ತಿಯನ್ನು ಎಲ್ಲಾ ದೇಶಕಾಲಗಳಲ್ಲಿ ಇಲ್ಲದಿರುವ ರಜತವೆಂದು

ವಿಷಯೀಕರಿಸುವ ಜ್ಞಾನವೆಂದರೆ ನಮಗೆ ಇಷ್ಟವೇ. (ಇಂತಹ ಖ್ಯಾತಿಯನ್ನು ಅವರು ಅಂಗೀಕರಿಸಿರುವರು ಎನ್ನುವಲ್ಲಿ ಅವರ ಅನುಮತಿಯನ್ನು ಹೇಳುತ್ತಾರೆ.) **“ತಸ್ಮಾದ್ಯದನ್ಯಥಾ ಸಂತಮನ್ಯಥಾ ಪ್ರತಿಪದ್ಯತೇ। ತನ್ನಿರಾಲಂಬನಂ ಜ್ಞಾನಮಸದಾಲಂಬನಂ ಚ ತತ್** ॥ ಅಂದರೆ, ಯಾವುದು ತೋರುವ ರಜತಕ್ಕಿಂತ ಬೇರೆ ಪ್ರಕಾರ ಶುಕ್ತಿಯಾಗಿ ಇರುವುದನ್ನು ರಜತವೆಂದು ತಿಳಿಯುತ್ತಾನೋ ಆ ಜ್ಞಾನವು ವಿಷಯವಿಲ್ಲದಿರುವುದೂ ಅಸದ್ವಿಷಯಕವೂ ಆಗಿದೆ. (7) ಅಥವಾ ‘ಇದಂ ರಜತಂ’ ಎನ್ನುವ ಜ್ಞಾನದಲ್ಲಿ ತೋರುವುದೆಲ್ಲವೂ (ಅಧಿಷ್ಠಾನವೂ ಕೂಡ) ಅಸತ್ತೇ ಎಂದು ಹೇಳಿದರೆ, ಹೀಗೆ ಹೇಳಕೂಡದು. ರಜತವು ಮಾತ್ರ ಅಸತ್ತಾದರೂ ಇದಂತ್ವಾಸ್ಪದವಾದ ಶುಕ್ತಿಯು ಮೊದಲೂ ಮೇಲಿನ ಕಾಲದಲ್ಲಿಯೂ ಇದೆ ಎಂದು ತಿಳಿಯುತ್ತದೆ. ಆ ಶುಕ್ತಿಶಕಲವು ಇದಂತ್ವಾಸ್ಪದವಾಗದಿದ್ದರೆ ಆಗ ಭ್ರಾಂತಿಬಾಧಗಳ ದಶೆಯಲ್ಲಿ ಬೆರಳಿನ ತುದಿಯಿಂದ ನಿರ್ದೇಶಮಾಡಲಾರನು. ಭ್ರಾಂತಿಕಾಲದಲ್ಲಿ ಸ್ವೀಕರಿಸಲಾರನು ಬಾಧವು ಬಂದಮೇಲೆ ಬಿಡಲಾರನು. (8) ಮತ್ತು ಅಸತ್ತನ್ನು ಮಾತ್ರ ವಿಷಯೀಕರಿಸುವ ಈ ಜ್ಞಾನಕ್ಕೆ ಕಾರಣವನ್ನು ಹೇಳಬೇಕು. ದುಷ್ಟೇಂದ್ರಿಯಾದಿಗಳು ಕಾರಣವು ಎಂದರೆ, ಹಾಗೆ ಹೇಳಕೂಡದು. ಸನ್ನಿಕರ್ಷಾದಿಗಳನ್ನು ಅಪೇಕ್ಷಿಸದೇನೇ ದುಷ್ಟೇಂದ್ರಿಯಾದಿಗಳು ಕಾರಣವೆಂದು ಹೇಳಿದರೆ ಅತಿಪ್ರಸಂಗಬರುವುದು. ಅಸತ್ತಿನಿಂದ ಸನ್ನಿಕರ್ಷವು ಕೂಡಲಾರದು. ಶುಕ್ತ್ಯಾದಿಗಳಿಂದ ಸನ್ನಿಕರ್ಷವಿದೆ. (ಅಂದರೆ, ನಮ್ಮ ಮತದಲ್ಲಿ ‘ಇದಂ’ ಕಾರಕ್ಕೆ ವಿಷಯವಾದುದೇ ಅಧಿಷ್ಠಾನವು. ಅದು ಅಸತ್ತೇ. ಶುಕ್ತಿಶಕಲವಾದರೂ ಅಧಿಷ್ಠಾನಭೂತವಾದ ಇದಂ ಕಾರಾಸ್ಪದದಿಂದ ಬೇರೆಯು. ಮೊದಲೂ ಮೇಲೆಯೂ ಇರತಕ್ಕುದು ಸತ್ಯವೇ. ಅಂತೂ ಅದರಿಂದ ಸನ್ನಿಕರ್ಷವು ಇದೆ) ಎಂದರೆ— ಹೀಗೆ ಹೇಳಕೂಡದು. ಹಾಗಾದರೆ ಶುಕ್ತಿಜ್ಞಾನವನ್ನು ಒಪ್ಪಬೇಕಾಯಿತು. ಏವಂಚ ‘ಇದಂ ರಜತಂ’ ಎನ್ನುವ ಜ್ಞಾನದಲ್ಲಿ ಶುಕ್ತಿಯೂ ವಿಷಯವಾಯಿತು. ಅಸತ್ತು ಮಾತ್ರ ವಿಷಯವಾಗಿದೆ ಎನ್ನುವ ವಚನವು ಅಸಂಗತವಾಯಿತು. ಅಥವಾ ಇದಂಕಾರವಿಷಯದಿಂದ ಬೇರೆಯಾದ ಶುಕ್ತಿಯು ಇಂದ್ರಿಯದಿಂದ ಸಂಬದ್ಧವಾಗಿರುವುದರಿಂದ ‘ಇಯಂ ಶುಕ್ತಿಃ’ ಎನ್ನುವ ಜ್ಞಾನವನ್ನೂ ಬಿಡಲು ಸಾಧ್ಯವಿಲ್ಲದಿರುವುದರಿಂದ ‘ಇದಂ ರಜತಂ’ ಎನ್ನುವ ಭ್ರಾಂತಿಯು ಕೂಡಲಾರದು. (9) ಅವಿದ್ಯೆಯೇ ರಜತಾದಿಗಳು ತೋರಲಿಕ್ಕೆ ಕಾರಣವು. ಶುಕ್ತಿಗೂ ಇಂದ್ರಿಯಕ್ಕೂ ಇರತಕ್ಕ ಸನ್ನಿಕರ್ಷವಲ್ಲ, ಎಂದು ಹೇಳುತ್ತೇವೆ, ಎಂದರೆ— ಹಾಗಾದರೆ, ಕುರುಡನಿಗೂ ಅಸನ್ನಿಹಿತವಾದ ಶುಕ್ತಿಶಕಲದಲ್ಲಿ ರಜತಾದಿಗಳು ಏಕೆ ತೋರಲಾರವು? ಅಂದರೆ, ಇಂದ್ರಿಯ ಸನ್ನಿಕರ್ಷವನ್ನು ಕಾರಣವೆಂದಂಗೀಕರಿಸದಿರುವುದರಿಂದ ಕಾರಣವೆಂದು ಅಂಗೀಕರಿಸಿದ ಅವಿದ್ಯೆಯು ಕುರುಡನಿಗೂ ಕಣ್ಣು ಇದ್ದವನಿಗೂ ಇದ್ದಪ್ರಯುಕ್ತ, ಅವರಿಬ್ಬರಿಗೂ ಅಸನ್ನಿಹಿತವಾದ ಶುಕ್ತಿಯಲ್ಲಿ ರಜತಜ್ಞಾನವು ಬರಬೇಕಾಗುವುದು. ಹಾಗಾದರೆ, ಕಾಚ ಕಾಮಲಾದಿಗಳಂತೆಯೇ ಶುಕ್ತಿಗೂ ಇಂದ್ರಿಯಕ್ಕೂ ಇರತಕ್ಕ ಸನ್ನಿಕರ್ಷವೂ ಅವಿದ್ಯೆಗೆ ಸಹಕಾರಿಕಾರಣವು. (ಕುರುಡನಿಗೆ ಸನ್ನಿಹಿತ ಶುಕ್ತಿಸನ್ನಿಕರ್ಷವು, ಚಕ್ಷುಷ್ಮಂತನಿಗೆ ಅಸನ್ನಿಹಿತ ಶುಕ್ತಿಸನ್ನಿಕರ್ಷವು ಇಲ್ಲ.) ಎಂದರೆ, ಹೀಗೆ ಹೇಳಕೂಡದು. ಹಾಗಾದರೆ, ಸನ್ನಿಕೃಷ್ಟವಾದ ಭೂತಲವು ಭೂತಲವೆಂದೇ ಹೇಗೆ ತೋರುತ್ತದೋ ಹಾಗೆಯೇ ‘ಇದಂ ರಜತಂ’ ಎಂದು ಜ್ಞಾನವು ಬರುವಾಗ ಶುಕ್ತಿಯೂ ಶುಕ್ತಿಯೆಂದೇ ತೋರಬೇಕಾಗುವುದು. (10) ದೋಷದಿಂದ ಶುಕ್ತಿತ್ವವು ತೋರದಿರುವುದೂ ರಜತವು ತೋರಲಿಕ್ಕೆ ಕಾರಣವು ಎಂದರೆ ಹೀಗೆ ಹೇಳಕೂಡದು. ಶುಕ್ತಿಗೆ ಅಧಿಷ್ಠಾನತ್ವವನ್ನು ಅಂಗೀಕರಿಸದಿದ್ದರೆ ಭೂತಲ ಶುಕ್ತಿಗಳಲ್ಲಿ ವಿಶೇಷವಿಲ್ಲದಿರುವುದರಿಂದ ಶುಕ್ತಿತ್ವವು ತೋರದಿರುವುದು ಭ್ರಾಂತಿಕಾರಣವೋ, ಭೂತಲತ್ವವು ತೋರದಿರುವುದು ಭ್ರಾಂತಿಕಾರಣವೋ ಎಂದು ವಿವೇಕ

ಮಾಡಲಿಕ್ಕೆ ಸಾಧ್ಯವಿಲ್ಲ. ಹೀಗೆಯೇ ಮಾಡಬೇಕೆನ್ನುವಲ್ಲಿ ನಿಯಾಮಕವಿರುವುದಿಲ್ಲ. (11) ಮತ್ತು ಅಸತ್ತೇ ಆದ ರಜತವು ತೋರುವಂಥಾದ್ದು ಅಸತ್ತೆಂದೇ ತೋರುವುದಿಲ್ಲ. ಏಕೆಂದರೆ, ಅರ್ಥಕ್ರಿಯೆಗೆ ಉಪಯುಕ್ತವಾಗದಿರುವಲ್ಲಿ ಪ್ರವೃತ್ತಿಯು ಕೂಡಲಾರದು. ಸತ್ತೆಂದು ತೋರುವುದಾದರೆ ಅನ್ಯಥಾಖ್ಯಾತಿಯನ್ನು ಅಂಗೀಕರಿಸಿದಪ್ರಯುಕ್ತ ಶುಕ್ತಿಯೇ ರಜತವೆಂದು ತೋರುತ್ತದೆ ಎಂದು ಏಕೆ ಅಂಗೀಕರಿಸಬಾರದು? ಅಂದರೆ, ಅಸತ್ತು ಸತ್ತೆಂದು ತೋರುತ್ತದೆ ಎಂದಂಗೀಕರಿಸಿದರೆ ಸತ್ತೂ ಅಸತ್ತೆಂದು ತೋರುತ್ತದೆ ಎಂದಂಗೀಕರಿಸಬಹುದಷ್ಟೆ! ಮತ್ತು ಶುಕ್ತಿಯೇ ರಜತವೆಂದು ತೋರುತ್ತದೆ ಎಂದಂಗೀಕರಿಸಿದರೇನೇ ಬೆರಳಿನ ತುದಿಯಿಂದ ನಿರ್ದೇಶಮಾಡುವುದು, ಸ್ವೀಕರಿಸುವುದು, ಬಿಡುವುದು ಇವುಗಳೆಲ್ಲವೂ ಅನುಕೂಲಗಳಾಗುವವು. ಹಾಗಾದರೆ, ಕೇಶೋಂಡ್ರಕಾದಿ ಭ್ರಮದಲ್ಲಿ ಅಧಿಷ್ಠಾನವೇ ಇಲ್ಲದಿರುವುದರಿಂದ ಅದು ಹೇಗೆ ಕೂಡುತ್ತದೆಂದರೆ, ಅದಕ್ಕೂ ಆಲೋಕಮಂಡಲ ಮೊದಲಾದ ದ್ರವ್ಯವೇ ಅಧಿಷ್ಠಾನವು. ಆದ ಕಾರಣ ಸತ್ತಾದ ಅಧಿಷ್ಠಾನವನ್ನು ವಿಷಯೀಕರಿಸದಿರುವ ಅಸತ್‌ಖ್ಯಾತಿಪಕ್ಷವೂ ಸರ್ವಥಾ ಯುಕ್ತವಲ್ಲ.

### ಮಾಯಾವಾದಿಗಳ ಮತವನ್ನು ನಿರಾಕರಿಸುವುದಕ್ಕಾಗಿ ಅನುವಾದ ಮಾಡಿಕೊಳ್ಳುತ್ತಾರೆ —

(1) ಶುಕ್ತಿಮೊದಲಾದವುಗಳಲ್ಲಿ ತೋರುವ ರಜತಮೊದಲಾದುದು ಅನಿರ್ವಚನೀಯವೇ ಎಂದು ಮಾಯಾವಾದಿಗಳು ಹೇಳುತ್ತಾರೆ. ಆ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಅದು ಸರ್ವಥಾ ಅಯುಕ್ತವು. (2) 'ಶುಕ್ತಿರಜತಾದಿಕಂ ಅನಿರ್ವಾಚ್ಯಂ ದೋಷಪ್ರಯುಕ್ತ ಭಾನತ್ವಾತ್ ಭ್ರಾಂತಿಸಿದ್ಧತಾದಾತ್ಮ್ಯವತ್' = ಶುಕ್ತಿ ರಜತ ಮೊದಲಾದುದು ಅನಿರ್ವಚನೀಯವು ದೋಷನಿಮಿತ್ತವಾಗಿ ತೋರುವುದರಿಂದ ಭ್ರಾಂತಿಸಿದ್ಧವಾದ ಅಭೇದದಂತೆ, ಈ ಅನುಮಾನವು ಶುಕ್ತಿ ರಜತವು ಅನಿರ್ವಚನೀಯವು ಎನ್ನುವಲ್ಲಿ ಪ್ರಮಾಣವೆಂದು ಹೇಳಿದರೆ, ಅನಿರ್ವಚನೀಯತ್ವವೆಂದರೆ ಎಂತಹುದು? ಎನ್ನುತ್ತೇವೆ. ಯಾವುದು ಸತ್ತಲ್ಲವೋ, ಅಸತ್ತು ಅಲ್ಲವೋ, ಸದಸತ್ತೂ ಅಲ್ಲವೋ, ಅದು ಅನಿರ್ವಚನೀಯವು. ಅದರ ಧರ್ಮವೇ ಅನಿರ್ವಚನೀಯತ್ವವು. ಎಂದರೆ— ಹೀಗೆ ಹೇಳಕೂಡದು. ಶುಕ್ತಿರಜತಮೊದಲಾದುದು ಸತ್ ಎಂದೂ, ಸದಸತ್ ಎಂದೂ ನಾವು ಅಂಗೀಕರಿಸದಿರುವುದರಿಂದ ಸತ್ತಲ್ಲ, ಸದಸತ್ತಲ್ಲ ಎಂದು ಸಾಧಿಸಿದರೆ ಸಿದ್ಧವಾದ ಅರ್ಥವನ್ನೇ ಸಾಧಿಸಿದರಿಂದ ಸಿದ್ಧಸಾಧನತಾ ದೋಷವು ಬರುವುದು. ಹಾಗಾದರೆ, ಅಸತ್ತಲ್ಲ ಎಂದು ಮಾತ್ರ ಸಾಧಿಸುವುದಾದರೆ ಆದಾಗ್ಯೂ 'ಅಸದೇವ ರಜತಂ ಪ್ರತ್ಯಭಾತ್' ಎನ್ನುವ ಅನುಭವದಿಂದ ವಿರೋಧವು. (3) ಮತ್ತು ಹೇತುಭೂತವಾದ ದೋಷಪ್ರಯುಕ್ತ ಭಾನತ್ವವೆಂದರೆ, (೧) ದೋಷಜನ್ಯಜ್ಞಾನವಿಷಯತ್ವಂ = ದೋಷದಿಂದ ಹುಟ್ಟುವ ಜ್ಞಾನಕ್ಕೆ ಗೋಚರವಾಗಿರುವಿಕೆಯು ಎಂದು ಹೇಳಕೂಡದು. ಅಸತ್ತಿಗೂ ಸತ್ತಾದ ಬ್ರಹ್ಮನಿಗೂ ಜ್ಞಾನವಿಷಯತ್ವವನ್ನು ಒಪ್ಪದಿರುವುದರಿಂದ ಜ್ಞಾನವಿಷಯತ್ವವೆನ್ನುವ ಇಷ್ಟೇ ಅಂಶವನ್ನು ಹೇಳಿದರೂ ದೋಷ(ವ್ಯಭಿಚಾರ)ವು ಬಾರದಿರುವುದರಿಂದ ದೋಷಜನ್ಯ ಎನ್ನುವ ವಿಶೇಷಣವು ವ್ಯರ್ಥವು. ಮತ್ತು ಮಾಯಾವಾದಿಗಳ ಮತದಲ್ಲಿ 'ಇದಂ ರಜತಂ' ಎನ್ನುವ ಜ್ಞಾನವು ಅದಿಷ್ಠಾನವಾದ ಇದಂ ಎನ್ನುವ ಅಂಶದಲ್ಲಿ ಅಂತಃಕರಣ ಪರಿಣಾಮರೂಪವಾಗಿರುವುದರಿಂದ ಯಥಾರ್ಥವಾಗಿರುವ ಪ್ರಯುಕ್ತ (ಅಂದರೆ, ಬ್ರಹ್ಮಜ್ಞಾನ ಹೊರತು ಬೇರೆ ಯಾವುದರಿಂದಲೂ ಬಾಧಿಸಲ್ಪಡದಿರುವುದರಿಂದ) ದೋಷದಿಂದ ಹುಟ್ಟತಕ್ಕದ್ದೇ ಅಲ್ಲ. ರಜತಾಂಶದಲ್ಲಿ ಅವಿದ್ಯಾದಿ ರೂಪದೋಷದಿಂದ ಹುಟ್ಟತಕ್ಕದ್ದಾದರೂ ಅವಿದ್ಯೆಯು ಅಪ್ರಕಾಶ ರೂಪವಾಗಿರುವುದರಿಂದ ಅದರ ಪರಿಣಾಮ ರೂಪವಾದ ಭ್ರಾಂತಿಗೆ ಅರ್ಥಪ್ರಕಾಶರೂಪವಾದ

ಜ್ಞಾನತ್ವವೇ ಕೂಡುವುದಿಲ್ಲ. ಆ ರಜತಜ್ಞಾನವು ಸಾಕ್ಷಿರೂಪ (ಅವಿದ್ಯಾವೃತ್ತ್ಯಭಿವ್ಯಕ್ತವಾದ ಶುಕ್ತ್ಯವಚ್ಛಿನ್ನವಾದ ಅಧಿಷ್ಠಾನಚೈತನ್ಯಜ್ಞಾನರೂಪ) ವೆಂದು ಹೇಳಿದರೆ ಜ್ಞಾನತ್ವವು ಕೂಡಿದರೂ ಜನ್ಯತ್ವವೇ ಕೂಡುವುದಿಲ್ಲ. ದೋಷದಿಂದ ಹುಟ್ಟುತ್ತದೆ ಎನ್ನುವುದು ಸುತರಾಂ ಕೂಡುವುದಿಲ್ಲ. ಆದಕಾರಣ ಹೇತುವಿಗೆ ಸ್ವರೂಪಾಸಿದ್ಧಿಯು. ಇದಮಂಶದಲ್ಲಿ ಅಂತಃಕರಣಪರಿಣಾಮರೂಪವಾಗಿರುವುದರಿಂದ ಜ್ಞಾನರೂಪತ್ವವಿದ್ದರೂ ದೋಷಜನ್ಯತ್ವವಿಲ್ಲ. ರಜತಾಂಶದಲ್ಲಿ ಅವಿದ್ಯಾಪರಿಣಾಮರೂಪವಾದರೆ ಜ್ಞಾನವೇ ಆಗುವುದಿಲ್ಲ. ಸಾಕ್ಷಿರೂಪವೆಂದು ಹೇಳಿದರೆ ಜನ್ಯವೇ ಆಗುವುದಿಲ್ಲ. ಅಂತೂ ದೋಷಜನ್ಯ ಜ್ಞಾನವಿಷಯತ್ವವೆನ್ನುವ ಹೇತುವು ಪಕ್ಷದಲ್ಲಿ ಇಲ್ಲದಿರುವುದರಿಂದ ಸ್ವರೂಪಾಸಿದ್ಧಿಯು. ಮತ್ತು ನಮ್ಮ ಮತದಲ್ಲಿ 'ಇದಂ ರಜತಂ' ಎನ್ನುವ ಜ್ಞಾನವು ಒಂದೇ ಆದುದರಿಂದ ಆ ಜ್ಞಾನಕ್ಕೆ ವಿಷಯವು ಅಧಿಷ್ಠಾನವೂ ಆಗಿದೆ. ಆದುದರಿಂದ ಅಸತ್ತಲ್ಲ, ಸದಸತ್ತು ಅಲ್ಲ ಎನ್ನುವ ಸಾಧ್ಯಾಂಶವು ಇದ್ದಾಗ್ಯೂ 'ಸತ್ತಲ್ಲ' ಎನ್ನುವ ಸಾಧ್ಯಾಂಶವು ಅಧಿಷ್ಠಾನದಲ್ಲಿ ಇಲ್ಲದಿರುವುದರಿಂದ ವ್ಯಭಿಚಾರವು. (೨) ದೋಷಪ್ರಯುಕ್ತ ಭಾನತ್ವವೆಂದರೆ— ದೋಷಜನ್ಯಪ್ರಾಕಟ್ಯಾಶ್ರಯತ್ವಂ=ದೋಷದಿಂದ ಹುಟ್ಟುವ ಜ್ಞಾತತಾಕ್ಕೆ ಆಶ್ರಯವಾಗಿರುವಿಕೆಯು ಎಂದೂ ಹೇಳಕೂಡದು. ಜ್ಞಾನವಿಷಯತ್ವ ವ್ಯತಿರಿಕ್ತವಾದ ಜ್ಞಾತತೆಯು ಇದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ ಅಸಿದ್ಧಿಯು. (ಪಕ್ಷದಲ್ಲಿ ಹೇತುವಿಲ್ಲವು.) ಇದು ಹೊರತು ಬೇರೆ ದೋಷಪ್ರಯುಕ್ತ ಭಾನತ್ವವನ್ನು ಹೇಳಲು ಸಾಧ್ಯವಿಲ್ಲ. ಭ್ರಾಂತಿಸಿದ್ಧತಾದಾತ್ಮ್ಯವನ್ನು ನಾವು ಅಸತ್ತೆಂದಂಗೀಕರಿಸಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವಿಲ್ಲವು. (4) ಹಾಗಾದರೆ, 'ವಿವಾದಪದಂ ಅನಿರ್ವಚನೀಯಂ' 'ಭ್ರಮವಿಷಯತ್ವಾತ್ ಯತ್ ನೈವಂ ತತ್ ನೈವಂ ಯಥಾ ಆತ್ಮಾ'=ವಿವಾದ ವಿಷಯವಾದುದು ಅನಿರ್ವಚನೀಯವು ಭ್ರಾಂತಿಗೆ ವಿಷಯವಾಗಿರುವುದರಿಂದ ಯಾವುದು ಅನಿರ್ವಚನೀಯವಾಗುವುದಿಲ್ಲವೋ, ಅದು ಭ್ರಾಂತಿಗೆ ವಿಷಯವಾಗುವುದಿಲ್ಲ, ಹೇಗೆಂದರೆ ಆತ್ಮನಂತೆ, ಎನ್ನುವ ಅನುಮಾನವು, ಶುಕ್ತಿರಜತವು ಅನಿರ್ವಚನೀಯವು, ಎನ್ನುವಲ್ಲಿ ಪ್ರಮಾಣವಾಗಲಿ ಎಂದರೆ, ಹಾಗೆ ಹೇಳಕೂಡದು ಈ ಅನುಮಾನದಲ್ಲಿಯೂ ಹಿಂದೆ ಹೇಳಿದ ಪ್ರಕಾರವೇ ಸಿದ್ಧಸಾಧನ ಮೊದಲಾದ ದೋಷಗಳು ಬಂದೇ ಬರುತ್ತವೆ. ಹಾಗಾದರೆ ಸದ್ವಿಲಕ್ಷಣತ್ವಾದಿಗಳನ್ನು ಪ್ರತ್ಯೇಕ ಸಾಧಿಸುವುದಿಲ್ಲ. ಸದ್ವಿಲಕ್ಷಣತ್ವ ವಿಶಿಷ್ಟವಾದ ಅಸದ್ವಿಲಕ್ಷಣತ್ವವನ್ನು ಸಾಧಿಸುತ್ತೇನೆ. ವಿಶಿಷ್ಟವು ನಿಮಗೆ (ದ್ವೈತಿಗಳಿಗೆ) ಸಿದ್ಧವಾಗದಿರುವುದರಿಂದ ಸಿದ್ಧಸಾಧ್ಯತ್ವ ದೋಷವು ಬರುವುದಿಲ್ಲವೆಂದರೆ— ಹೀಗೆ ಹೇಳಿದರೂ ಸದಸದ್ವಿಲಕ್ಷಣತ್ವರೂಪವಾದ ವಿಶಿಷ್ಟಸಾಧ್ಯವು ಎಲ್ಲಿಯೂ ಪ್ರಸಿದ್ಧವಾಗದಿರುವುದರಿಂದ ಸಾಧ್ಯಾಪ್ರಸಿದ್ಧಿಯು. ಮತ್ತು ಅಧಿಷ್ಠಾನವು ಸತ್ಯವಾಗಿರುವುದರಿಂದ ಅನಿರ್ವಚನೀಯತ್ವವಿಲ್ಲದಿರುವ ಶುಕ್ತ್ಯಾದಿಗಳಲ್ಲಿಯೂ ಮಾಯಿಗಳ ಮತದ ರೀತಿಯಾಗಿ ಅಧಿಷ್ಠಾನವಾಗಿ ಭ್ರಾಂತಿವಿಷಯತ್ವವಿದ್ದ ಪ್ರಯುಕ್ತ, ಸಿದ್ಧಾಂತದಲ್ಲಿ ಆತ್ಮನಲ್ಲಿ ನಿರ್ಗುಣತ್ವಾದಿ ಭ್ರಾಂತಿವಿಷಯತ್ವವಿದ್ದ ಪ್ರಯುಕ್ತ ಹೇತುವು ವಿರುದ್ಧ (ಸಾಧ್ಯಾಭಾವದಿಂದ ವ್ಯಾಪ್ತ) ವಾಯಿತು. (5) ಹಾಗಾದರೆ 'ವಿಮತಂ ಅನಿರ್ವಚನೀಯಂ ಬಾಧ್ಯತ್ವಾತ್ ವ್ಯತಿರೇಕೇಣ ಆತ್ಮವತ್' = ವಿವಾದವಿಷಯವಾದುದು ಅನಿರ್ವಚನೀಯವು ಬಾಧ್ಯವಾಗಿರುವುದರಿಂದ ಎಲ್ಲಿ ಅನಿರ್ವಚನೀಯತ್ವವಿಲ್ಲವೋ ಅಲ್ಲಿ ಬಾಧ್ಯತ್ವವಿಲ್ಲ ಆತ್ಮನಂತೆ, ಎನ್ನುವ ಅನುಮಾನವು ಪ್ರಮಾಣವಾಗಲಿ ಎಂದರೆ— ಹೀಗೆ ಹೇಳಕೂಡದು. ಸಿದ್ಧಸಾಧನತ್ವ ಬಾಧ ಅಪ್ರಸಿದ್ಧವಿಶೇಷಣತ್ವಗಳು ಬಂದೇ ಬರುತ್ತವೆ. (6) ಅಪ್ರಸಿದ್ಧತ್ವವನ್ನು ಪರಿಹರಿಸುವುದಕ್ಕಾಗಿ ಸಾಮಾನ್ಯತಃ ಪ್ರಸಿದ್ಧಿಯನ್ನು ಸಾಧಿಸುತ್ತೇವೆ. ಹೇಗೆಂದರೆ— 'ಸದಸತ್ತ್ವೇ ಏಕಧರ್ಮಿನಿಷ್ಠಾತ್ಯಂತಾಭಾವ ಪ್ರತಿಯೋಗಿನೀ ಧರ್ಮತ್ವಾತ್ ರೂಪರಸವತ್' = ಸತ್ವಾಸತ್ವಗಳು ಒಂದು ಧರ್ಮಿಯಲ್ಲಿ ಇರತಕ್ಕವುಗಳು ಯಾವ

ಅತ್ಯಂತಾಭಾವಗಳೋ ಅವುಗಳಿಗೆ ಪ್ರತಿಯೋಗಿಗಳು ಅಂದರೆ, ದ್ವಿತ್ವ (ಎರಡು) ದಿಂದ ಕೂಡಿರುವ ಅಭಾವಗಳಿಗೆ ಪ್ರತಿಯೋಗಿಗಳು, ಧರ್ಮತ್ವರೂಪ ಹೇತುವಿದ್ದಪ್ರಯುಕ್ತ, ರೂಪರಸಗಳಂತೆಯೇ, ಎಂದು ಅನಿರ್ಧಾರಿತವಾದ ಯಾವುದೋ ಒಂದು ಧರ್ಮಿಯಲ್ಲಿ ಇರತಕ್ಕದಾಗಿ ಸಾಮಾನ್ಯಾಕಾರವಾಗಿ ಸಿದ್ಧವಾದ ಸದಸದ್ವೈಲಕ್ಷಣ್ಯವನ್ನು 'ವಿಮತಂ ಅನಿರ್ವಚನೀಯಂ ಬಾಧ್ಯತ್ವಾತ್ ವ್ಯತಿರೇಕೇಣ ಆತ್ಮವತ್' ಎನ್ನುವ ಕೇವಲ ವ್ಯತಿರೇಕಿ ಅನುಮಾನದಿಂದ ರಜತರೂಪ ಧರ್ಮಿಯಲ್ಲಿ ಇರುವುದೆಂದು ಉಪಸಂಹಾರ ಮಾಡಿರುವುದರಿಂದ ಅಪ್ರಸಿದ್ಧ ವಿಶೇಷಣತ್ವವಿಲ್ಲ ಎಂದು ಮಾಯಾವಾದಿಗಳು ಹೇಳಿದರೆ— ಹಾಗೆ, ಹೇಳಕೂಡದು. ಸತ್ವಾಸತ್ವಗಳಲ್ಲಿ ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಸಾಧಿಸಿದರೆ ಅತ್ಯಂತಾಭಾವ ಪ್ರತಿಯೋಗಿಗೆ ಅಪ್ರಾಮಾಣಿಕತ್ವ ನಿಯಮವಿರುವುದರಿಂದ ಘಟ, ಶಶಶೃಂಗ ಮೊದಲಾದವುಗಳಲ್ಲಿಯೂ ಸತ್ವಮೊದಲಾದವುಗಳು ಇಲ್ಲವೆಂದಾಗಬೇಕಾಗುವುದು. ಯಾವುದು ಎಲ್ಲಾ ದೇಶಕಾಲಗಳಲ್ಲಿ ಇಲ್ಲದಿರುವುದೋ ಅದು ಅತ್ಯಂತಾಭಾವಕ್ಕೆ ಪ್ರತಿಯೋಗಿಯೆಂದು ಹೇಳಲ್ಪಡುತ್ತದೆ. ಉದಾ— ಶಶಶೃಂಗಮೊದಲಾದುದು, ಘಟಾದಿಗಳಲ್ಲಿ ಸತ್ವವು (ವಿದ್ಯಮಾನತ್ವ= ಇರುವಿಕೆಯು) ಶಶವಿಷಾಣಾದಿಗಳಲ್ಲಿ ಅಭಾವಪ್ರತಿಯೋಗಿತ್ವರೂಪವಾದ ಅಸತ್ವವೂ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವೇ ಆಗಿರುವುದರಿಂದ ಸತ್ವಾಸತ್ವಗಳು ಅಲ್ಲಿ ಇಲ್ಲದೆ ಹೋಗಲಿ ಎನ್ನುವ ಪ್ರಸಂಗವು ಅನಿಷ್ಟವಾಗಿರುವುದರಿಂದ ಸತ್ವಾಸತ್ವಗಳಿಗೆ ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಹೇಳಲಿಕ್ಕೆ ಬರುವುದಿಲ್ಲ. ಅಂತೂ ಸಾಮಾನ್ಯಾನುಮಾನವು ಬಾಧಿತವಾಯಿತು. (7) ಹಾಗಾದರೆ, ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಸಾಧಿಸುವುದಿಲ್ಲ. ಆದಪ್ರಯುಕ್ತ ಸತ್ವಾಸತ್ವಗಳು ಅಪ್ರಾಮಾಣಿಕಗಳಾಗಿ ಅನುಮಾನಕ್ಕೆ ಪ್ರತ್ಯಕ್ಷದಿಂದ ಬಾಧವು ಬರುವುದು ಹೇಗೆ? ಮತ್ತೆ ಅತ್ಯಂತ ಎನ್ನುವ ಪದವನ್ನು ಬಿಟ್ಟು ಅಭಾವ ಪ್ರತಿಯೋಗಿತ್ವವನ್ನೇ ಸಾಧಿಸುತ್ತೇವೆ. ಆದಕಾರಣ ಹಿಂದಿನ ದೋಷವಿಲ್ಲವೆಂದರೆ— ಅಭಾವ ಪ್ರತಿಯೋಗಿತ್ವವನ್ನು ಮಾತ್ರ ಸಾಧಿಸಿದರೂ ಅನ್ಯೋನ್ಯಾಭಾವವನ್ನು ತೆಗೆದುಕೊಂಡು ಅರ್ಥಾಂತರತಾ ದೋಷವು ಬರುವುದು. (8) ಹಾಗಾದರೆ— ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಸಾಧಿಸುವುದಿಲ್ಲ. ಬಾಧವು ಹೇಗೆ? ಅನ್ಯೋನ್ಯಾಭಾವಪ್ರತಿಯೋಗಿತ್ವವನ್ನು ಸಾಧಿಸುವುದಿಲ್ಲ. ಅರ್ಥಾಂತರತಾ ದೋಷವು ಹೇಗೆ? ಮತ್ತೆ ಒಂದು ಧರ್ಮಿಯಲ್ಲಿ ಸತ್ವ-ಅಸತ್ವಗಳು ಇಲ್ಲ ಅಂದರೆ ಒಂದರಲ್ಲಿ ಎರಡರ ಸಂಸರ್ಗಾಭಾವಪ್ರತಿಯೋಗಿತ್ವವನ್ನೇ ಸಾಧಿಸುತ್ತೇವೆ, ಆದಕಾರಣ ಹಿಂದೆ ಹೇಳಿದ ದೋಷವು ಬರುವುದಿಲ್ಲ ಎಂದು ಶಂಕಿಸಿದರೆ— ಸತ್ವವೆಂದರೆ ಎಂತಹುದು? ಸತ್ತಾಸಾಮಾನ್ಯವೆಂದು ಹೇಳಕೂಡದು. ಆಶ್ರಯವೇ ಸಿದ್ಧವಾಗಲಿಲ್ಲ. ನಾವೂ ಕೂಡ ಅನುಗತ ಸತ್ತಾವನ್ನು ಅಂಗೀಕರಿಸುವುದಿಲ್ಲ. ಅನುಗತ ಸತ್ತಾವನ್ನು ಅಂಗೀಕರಿಸುವವರಿಗೂ ಕೂಡ ಸಾಮಾನ್ಯ, ವಿಶೇಷ, ಸಮವಾಯ, ಈ ಮೂರರಲ್ಲಿ ಸತ್ವ-ಅಸತ್ವಗಳು ಇಲ್ಲದಿರುವುದರಿಂದ ಅರ್ಥಾಂತರತಾ ದೋಷವು ಬಂದೇ ಬರುತ್ತದೆ. (9) ಸತ್ವವೆಂದರೆ ಸ್ವರೂಪಭೂತವಾದ ಸತ್ವವೆಂದೂ ಹೇಳಕೂಡದು. ಯಾವುದೋ ಒಂದು ಸ್ವರೂಪಸತ್ವ ಪಕ್ಷವೆಂದು ಇಟ್ಟುಕೊಂಡರೆ ಘಟಮೊದಲಾದವುಗಳಲ್ಲಿ ಪಟಾದಿ ಸ್ವರೂಪಸತ್ವವು, ನಿಃಸ್ವರೂಪತ್ವರೂಪವಾದ ಅಸತ್ವವಿಶೇಷವೂ ಇಲ್ಲದಿರುವುದರಿಂದ ಅರ್ಥಾಂತರತಾ ದೋಷವು ಬಂದೇಬರುತ್ತದೆ. (10) "ಸರ್ವಾಣಿ ಸ್ವರೂಪಸತ್ವಾನಿ ಸರ್ವಾಣಿ ಚ ಅಸತ್ವಾನಿ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗೀನಿ" ಎಂದು ಸಾಧಿಸಿದರೂ ಸ್ವರೂಪಸತ್ವಕ್ಕೆ ಧರ್ಮತ್ವವಿಲ್ಲದಿರುವುದರಿಂದ ಅಸಿದ್ಧಿಯು ಬರುವುದು. (11) ಧರ್ಮತ್ವವೆಂದರೆ ವಿಶೇಷಣತ್ವವು. ಅದಾದರೂ (ವಸ್ತ್ವಂತರವನ್ನು ಅಪೇಕ್ಷಿಸಿ) ಸರ್ವಕ್ಕೂ ಇದೆ ಅಂದರೆ— ಹಾಗಾದರೆ ವಸ್ತುತ್ವಮಾತ್ರವು ಹೇತುವು ಎಂದು ಹೇಳಿದಹಾಗಾಯಿತು. ಅದಾದರೂ

ಅಭಾವಪ್ರತಿಯೋಗಿತ್ವರೂಪ ಸಾಧ್ಯವಿಲ್ಲದಿರುವ ಆತ್ಮನಲ್ಲಿ ಪಾರಮಾರ್ಥಿಕತ್ವವೂ ನಿರ್ಧರ್ಮ ಕತ್ವವೂ ಇದೆ. ಆದಕಾರಣ ವ್ಯಭಿಚಾರವು. ಮತ್ತು ಧರ್ಮತ್ವರೂಪ ಹೇತುವಿಗೆ ಪ್ರಮೇಯು ತ್ವಾದಿಗಳಲ್ಲಿ ವ್ಯಭಿಚಾರವು. (12) ಪ್ರಮೇಯುತ್ವಾದಿಗಳೂ ಕೂಡ ಯಾವ ಧರ್ಮಗಳೂ ಇಲ್ಲದಿರುವ ಬ್ರಹ್ಮನಲ್ಲಿ ಇಲ್ಲದಿರುವುದರಿಂದ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವರೂಪ ಸಾಧ್ಯವು ಆ ಪ್ರಮೇಯುತ್ವಾದಿಗಳಲ್ಲಿ ಇದ್ದಪ್ರಯುಕ್ತ ವ್ಯಭಿಚಾರವಿಲ್ಲ. ಎಂದರೆ — ಹಾಗಾದರೆ, ಆ ಸರ್ವಧರ್ಮ ರಹಿತನಾದ ಬ್ರಹ್ಮನಲ್ಲಿಯೇ ಸತ್ವ ಅಸತ್ವಗಳು ಇಲ್ಲದಿರುವುದರಿಂದ ಏಕಧರ್ಮಿ ನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವರೂಪವಾದ ಪ್ರಕೃತ ಪ್ರತಿಜ್ಞಾತಾರ್ಥವು ಪರ್ಯವಾಸವಾಗು ವುದರಿಂದ ಅರ್ಥಾಂತರತಾ ದೋಷವು ಬರುವುದು. (13) ಏಕಶಬ್ದದಿಂದ ಏಕತ್ವಗುಣವುಳ್ಳ ವನು ವಿವಕ್ಷಿತನು, ಅಂದರೆ, "ಏಕತ್ವಗುಣಯುಕ್ತ ಧರ್ಮಿನಿಷ್ಠಾತ್ಯಂತಾಭಾವ ಪ್ರತಿಯೋಗಿನೀ" ಎಂದು ಸಾಧಿಸುತ್ತೇವೆ. ಬ್ರಹ್ಮನಲ್ಲಿ ಏಕತ್ವಗುಣವೇ ಇಲ್ಲದಿರುವುದರಿಂದ ಏಕಶಬ್ದದಿಂದ ಬ್ರಹ್ಮ ನನ್ನು ತೆಗೆದುಕೊಂಡು ಅರ್ಥಾಂತರತಾ ದೋಷವನ್ನು ಹೇಳಲಿಕ್ಕೆ ಬರುವುದಿಲ್ಲವೆಂದರೆ — ಹಾಗಾದರೆ, ಏಕತ್ವವೆನ್ನುವ ಗುಣದಿಂದ ಕೂಡಿರುವ ಪರಸ್ಪರ ಭಿನ್ನಗಳಾದ ಯಾವ ಅಧಿಕರಣ ಗಳೋ ಅವುಗಳಲ್ಲಿ ಯಾವ ಅತ್ಯಂತಾಭಾವಗಳಿವೆಯೋ (ಒಂದು ಕಡೆಯಲ್ಲಿ ಸತ್ವಸಂಸರ್ಗವಿಲ್ಲ, ಮತ್ತೊಂದು ಕಡೆಯಲ್ಲಿ ಅಸತ್ವಸಂಸರ್ಗವಿಲ್ಲ, ಇಂತಹುಗಳು) ಅವುಗಳಿಗೆ ಪ್ರತಿಯೋಗಿಗಳು. ಹೀಗೆ ಬೇರೆ ಬೇರೆ ಕಡೆ ಸತ್ವಾಭಾವ ಅಸತ್ವಾಭಾವಸಿದ್ಧಿಯಾಗಿಯೂ ಪ್ರತಿಜ್ಞಾತವಾದ ಅರ್ಥವು ಕೂಡುವುದರಿಂದ ಅರ್ಥಾಂತರತಾ ದೋಷವು ಬರುವುದು. ಅಥವಾ ಏಕತ್ವಗುಣವುಳ್ಳ ಸದ್ರೂಪ ವಾದ ಧರ್ಮಿಯಲ್ಲಿರುವ ಸಂಸರ್ಗಾಭಾವಪ್ರತಿಯೋಗಿತ್ವವು ಅಸತ್ವದಲ್ಲಿಯೂ ಏಕತ್ವಗುಣವುಳ್ಳ ಅಸದ್ರೂಪವಾದ ಧರ್ಮಿಯಲ್ಲಿರುವ ಸಂಸರ್ಗಾಭಾವಪ್ರತಿಯೋಗಿತ್ವವು ಸತ್ವದಲ್ಲಿಯೂ ಇದ್ದ ಪ್ರಯುಕ್ತ ಅರ್ಥಾಂತರತಾ ದೋಷವು ಬಂದೇಬರುತ್ತದೆ. (14) 'ಸತ್ವಂ ಅಸತ್ವಾನಧಿಕರಣಾ ನಾತ್ಮನಿಷ್ಠ ಸಂಸರ್ಗಾಭಾವಪ್ರತಿಯೋಗಿ' ಸತ್ವವು, ಅಸತ್ವಕ್ಕೆ ಅನಧಿಕರಣವಾದ ಅನಾತ್ಮದಲ್ಲಿ ರತಕ್ಕ ಸಂಸರ್ಗಾಭಾವಕ್ಕೆ ಪ್ರತಿಯೋಗಿಯು, ಎಂದು ಪ್ರತಿಜ್ಞಾ ಮಾಡಿದರೆ ಹಿಂದೆ ಹೇಳಿದ ರೀತಿಯಿಂದ ಅರ್ಥಾಂತರತಾ ದೋಷವಿಲ್ಲ, ಎಂದರೆ — ಹೀಗೆ ಹೇಳಕೂಡದು. ಪ್ರಮೇಯುತ್ವಾದಿ ಗಳಲ್ಲಿ ವ್ಯಭಿಚಾರವು ಬರುವುದು. ಪ್ರಮೇಯುತ್ವವು ಕೇವಲಾನ್ವಯಿಯಾದುದರಿಂದ ಎಲ್ಲಾ ಕಡೆಗಳಲ್ಲಿಯೂ ಇರುತ್ತದೆ. ಆದುದರಿಂದ ಹಿಂದೆ ಹೇಳಿದ ಸಾಧ್ಯವಿರುವುದಿಲ್ಲ, ಹೇತುವಿದೆ. ಆದುದರಿಂದ ವ್ಯಭಿಚಾರವು. (15) ಹಾಗಾದರೆ 'ಅಸತ್ವಂ ಸತ್ವಾನಧಿಕರಣಾನಾತ್ಮನಿಷ್ಠ ಸಂಸರ್ಗಾ ಭಾವಪ್ರತಿಯೋಗಿ, ಅನಾತ್ಮನಿಷ್ಠ ಸಂಸರ್ಗಾಭಾವ ಪ್ರತಿಯೋಗಿ ಧರ್ಮತ್ವಾತ್, ರೂಪವತ್' ಅಸತ್ವವು ಸತ್ವಕ್ಕೆ ಅನಧಿಕರಣವಾದ ಅನಾತ್ಮದಲ್ಲಿರತಕ್ಕ ಸಂಸರ್ಗಾಭಾವಕ್ಕೆ ಪ್ರತಿಯೋಗಿಯು, ಅನಾತ್ಮಗಳಾದ ಘಟಾದಿಗಳಲ್ಲಿ ಇರತಕ್ಕ ಸಂಸರ್ಗಾಭಾವಕ್ಕೆ ಪ್ರತಿಯೋಗಿಯಾದ ಧರ್ಮವಾಗಿರು ವುದರಿಂದ ರೂಪದಂತೆಯೇ, (ಅನಾತ್ಮಭೂತಗಳಾದ ಗುಣಕರ್ಮ ವಾಯುವೊದಲಾದವುಗಳಲ್ಲಿ ಇಲ್ಲದಿರುವುದರಿಂದ ದೃಷ್ಟಾಂತವಾದ ರೂಪದಲ್ಲಿ ಹೇತುವಿದೆ. ಸತ್ವಕ್ಕೆ ಅನಧಿಕರಣವಾದ ಅನಾತ್ಮಭೂತಗಳಾದ ಶಶವಿಷಾಣಾದಿಗಳಲ್ಲಿ ಇಲ್ಲದಿರುವುದರಿಂದ ರೂಪಾದಿಗಳಲ್ಲಿ ಸಾಧ್ಯವಿದೆ. ಅನಾತ್ಮಗಳಾದ ಘಟಾದಿಗಳಲ್ಲಿ ಇಲ್ಲದಿರುವುದರಿಂದ ಪಕ್ಷದಲ್ಲಿ ಹೇತುವದೆ ಎಂದೂ ತಿಳಿಯ ತಕ್ಕದ್ದು.) ಎಂದು ಅನುಮೇಯಿಸುತ್ತೇವೆ. ಎಂದರೆ — ಅಸತ್ವವೆಂದರೆ ಎಂತಹುದು? (೧) ಅಭಾವ ಪ್ರತಿಯೋಗಿತ್ವಮಾತ್ರ ಎಂದರೆ, ಅದು ಆತ್ಮಹೊರತಾದವುಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ ಉಂಟೆಂದು ಪರರು ಅಂಗೀಕರಿಸಿರುವುದರಿಂದ ಹೇತುವು ಸ್ವರೂಪಸಿದ್ಧವಾಯಿತು. ಪಕ್ಷೀಭೂತ ವಾದ ಅಭಾವಪ್ರತಿಯೋಗಿತ್ವರೂಪವಾದ ಅಸತ್ವದಲ್ಲಿ ಅನಾತ್ಮನಿಷ್ಠವಾದ ಸಂಸರ್ಗಾಭಾವ

ಪ್ರತಿಯೋಗಿತ್ವರೂಪವಾದ ಹೇತುವಿಲ್ಲ. ಅಭಾವಪ್ರತಿಯೋಗಿತ್ವವು ಅನಾತ್ಮಗಳಾದ ಘಟಾದಿಗಳಲ್ಲಿ ಇದೆ. (೨) ಅಸತ್ವವೆಂದರೆ, ಅತ್ಯಂತಾಭಾವಪ್ರತಿಯೋಗಿತ್ವವೆಂದರೆ— ಆವಾಗಲೂ ಪ್ರತಿಜ್ಞಾ ಹೇತುಗಳಲ್ಲಿ ಅನಾತ್ಮಪದದಿಂದ ಆತ್ಮ ವ್ಯತಿರಿಕ್ತವೆಂದೇ ಇಟ್ಟುಕೊಂಡರೆ ಅನಾತ್ಮಗಳಾದ, ನಿರ್ಧರ್ಮಕಗಳಾದ ಶಶವಿಷಾಣಾದಿಗಳಲ್ಲಿ ಸತ್ವ-ಅಸತ್ವ ಎರಡೂ ಇಲ್ಲದಿರುವುದರಿಂದ ಅರ್ಥಾಂತರತಾ ದೋಷವು ಬರುವುದು. ಅಂದರೆ ಪಕ್ಷೀಭೂತವಾದ ಅತ್ಯಂತಾಭಾವ ಪ್ರತಿಯೋಗಿತ್ವರೂಪವಾದ ಅಸತ್ವದಲ್ಲಿ ಸತ್ವಕ್ಕೆ ಅಧಿಕರಣವಾಗದಿರುವ ಆತ್ಮನಿಂದ ಭಿನ್ನವಾದ ಯಾವುದು ಶಶವಿಷಾಣ ಮೊದಲಾದುದು ಇದೆಯೋ ಅದರಲ್ಲಿರತಕ್ಕ ಸಂಸರ್ಗಾಭಾವ ಪ್ರತಿಯೋಗಿತ್ವವು ಇದೆ. ಅತ್ಯಂತಾಭಾವಪ್ರತಿಯೋಗಿತ್ವರೂಪವಾದ ಅಸತ್ವವು ನಿರ್ಧರ್ಮಕಗಳಾದ ಶಶವಿಷಾಣ ಮೊದಲಾದವುಗಳಲ್ಲಿ ಇಲ್ಲ. ಆದಕಾರಣ ಸತ್ವಾಸತ್ವಾನಧಿಕರಣತ್ವವು ಶಶವಿಷಾಣಾದಿಗಳಲ್ಲಿಯೇ ಪ್ರಾಪ್ತವಾಯಿತು, ರಜತದಲ್ಲಿ ಇಲ್ಲ. ಹೀಗೆ ಅರ್ಥಾಂತರತಾ ದೋಷವು. (೩) ಅನಾತ್ಮಪದದಿಂದ ಆತ್ಮವ್ಯತಿರಿಕ್ತವಾದ ವಸ್ತುವನ್ನು ಇಟ್ಟುಕೊಂಡರೆ ದೃಷ್ಟಾಂತವಾದ ರೂಪದಲ್ಲಿ ಸಾಧ್ಯವೈಕಲ್ಯವು. ಅಂದರೆ, ರೂಪದಲ್ಲಿ ಆತ್ಮಭಿನ್ನ ಗುಣಕರ್ಮಾದಿಗಳಲ್ಲಿರತಕ್ಕ ಸಂಸರ್ಗಾಭಾವಪ್ರತಿಯೋಗಿತ್ವವಿದ್ದರೂ ರೂಪಾದಿಗಳೇ ಪ್ರತಿಯೋಗಿಯಾಗಿ ಉಳ್ಳ ಸಂಸರ್ಗಾಭಾವಕ್ಕೆ ಅಧಿಕರಣವಾದ ಆತ್ಮನಿಂದ ಭಿನ್ನವಾದ ಗುಣಕರ್ಮ ಮೊದಲಾದ ವಸ್ತುಗಳು ಇದ್ದ ಪ್ರಯುಕ್ತ ಸತ್ವಾನಧಿಕರಣತ್ವವಿಲ್ಲದಿರುವುದರಿಂದ ಸತ್ವಾನಧಿಕರಣಾನಾತ್ಮನಿಷ್ಠ ಸಂಸರ್ಗಾಭಾವ ಪ್ರತಿಯೋಗಿತ್ವವು ಇಲ್ಲ. ಅಂದರೆ, ಗುಣಕರ್ಮಾದಿಗಳು ಸತ್ಯಗಳಾಗಿರುವುದರಿಂದ ಸತ್ವಾನಧಿಕರಣವಲ್ಲ ಅಂತೂ ರೂಪಾದಿಗಳಿಗೆ ಸತ್ವಾನಧಿಕರಣಾನಾತ್ಮನಿಷ್ಠ ಸಂಸರ್ಗಾಭಾವಪ್ರತಿಯೋಗಿತ್ವರೂಪಸಾಧ್ಯವಿಲ್ಲ.

(16) ಹಾಗಾದರೆ, ಸದ್ವಿಲಕ್ಷಣತ್ವವು ಅಸತ್ತಿನಲ್ಲಿಯೂ ಅಸದ್ವಿಲಕ್ಷಣತ್ವವು ಸತ್ತಿನಲ್ಲಿಯೂ ಪ್ರಸಿದ್ಧವೇ ಆಗಿದೆ. ಆದಪ್ರಯುಕ್ತ 'ವಿಮತಂ ಅನಿರ್ವಚನೀಯಂ ಬಾಧ್ಯತ್ವಾತ್' ಎನ್ನುವ ಅನುಮಾನದಲ್ಲಿ ಅಪ್ರಸಿದ್ಧ ವಿಶೇಷಣತ್ವವಿಲ್ಲ ಎಂದರೆ— ಹೀಗೆ ಹೇಳಕೂಡದು. ಸದ್ವಿಲಕ್ಷಣತ್ವ, ಅಸದ್ವಿಲಕ್ಷಣತ್ವಗಳು ಪ್ರತ್ಯೇಕವಾಗಿ ಪ್ರಸಿದ್ಧವಾಗಿದ್ದರೂ ಸದ್ವಿಲಕ್ಷಣತ್ವ ವಿಶಿಷ್ಟ ಅಸದ್ವಿಲಕ್ಷಣತ್ವವು ಎಲ್ಲಿಯೂ ಪ್ರಸಿದ್ಧವಲ್ಲ. ವಿಶಿಷ್ಟವು ಅಪ್ರಸಿದ್ಧವಾಗಿದ್ದರೂ ಅದರ ಏಕದೇಶಕ್ಕೆ ಪ್ರಸಿದ್ಧಿಯಿದ್ದುದರಿಂದ ಸಾಧ್ಯಾಪ್ರಸಿದ್ಧಿಯು ಬಾರದಿರುವುದಾದರೆ ಭೂಮಿಯು ಶಶಶೃಂಗ (ಮೊಲದ ಕೋಡು) ದಿಂದ ಕೀರಲ್ಪಟ್ಟದೆ ಇದುಮೊದಲಾದ ಅಪ್ರಸಿದ್ಧವಿಶೇಷಣವುಳ್ಳ ಉದಾಹರಣದಲ್ಲಿಯೂ ಒಂದೊಂದು ಅಂಶಕ್ಕೆ (ಮೊಲ, ಕೋಡು, ಕೀರಿದ್ದು, ಎಂಬುವ ಅಂಶಗಳಿಗೆ) ಪ್ರಸಿದ್ಧಿಯನ್ನು ಹೇಳಲು ಬರುವುದರಿಂದ ಅಪ್ರಸಿದ್ಧವಿಶೇಷಣವೆನ್ನುವ ದೋಷವೇ ಇಲ್ಲವೆಂದಾಗಬೇಕಾಗುವುದು. (17) ಸದ್ವಿಲಕ್ಷಣತ್ವವನ್ನೂ ಅಸದ್ವಿಲಕ್ಷಣತ್ವವನ್ನೂ ಪ್ರತ್ಯೇಕ ಪ್ರತ್ಯೇಕ ಸಾಧಿಸುತ್ತೇವೆ ಎಂದರೆ, ಸಿದ್ಧಸಾಧನತಾ ದೋಷವು ಬರುವುದು. (18) ಹಾಗಾದರೆ, ಅಸದ್ವೈಲಕ್ಷಣ್ಯವನ್ನು ಮಾತ್ರ ಸಾಧಿಸುತ್ತೇವೆ ಎಂದು ಹೇಳಕೂಡದು. ಅಸದ್ವಿಲಕ್ಷಣರಾದ ಜಗದ್ಬ್ರಹ್ಮರಲ್ಲಿ ಬ್ರಹ್ಮಜ್ಞಾನೇತರ ನಿವರ್ತ್ಯತ್ವರೂಪವಾದ ಬಾಧ್ಯತ್ವವು ಇಲ್ಲದಿರುವುದರಿಂದ ಸರ್ವಸಪಕ್ಷವ್ಯಾವೃತ್ತತ್ವ ರೂಪವಾದ ಅಸಾಧಾರಣವೆನ್ನುವ ದೋಷವು ಬರುತ್ತದೆ. (19) ಹಾಗಾದರೆ, ಅಸದ್ವೈಲಕ್ಷಣ್ಯವನ್ನು ಬಾಧ್ಯತ್ವಹೇತುವಿನಿಂದ ಸಾಧಿಸುವುದಿಲ್ಲ. ಆದಕಾರಣ ಅಸಾಧಾರಣ್ಯವು ಬರುವುದಿಲ್ಲ. ಮತ್ತೆ ಪ್ರತೀತತ್ವ ಹೇತುವಿನಿಂದಲೇ ಸಾಧಿಸುತ್ತೇವೆ. ಆದಕಾರಣ ಹಿಂದೆ ಹೇಳಿದ ದೋಷವು ಬರುವುದಿಲ್ಲವೆಂದರೆ— ಪ್ರತೀತತ್ವವು ಅಸತ್ತಿನಲ್ಲಿಯೂ ಇದ್ದಪ್ರಯುಕ್ತ (ಅಂದರೆ, ಅಸತ್ತೂ

ತೋರುವಪ್ರಯುಕ್ತ) ವ್ಯಭಿಚಾರವು. (20) ಬಾಧ್ಯತ್ವರೂಪ ಹೇತುವಿಗೂ ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ದೂಷಣಗಳು ಬರುತ್ತವೆ. ಆದಕಾರಣ ಅನುಮಾನದಿಂದ ಶುಕ್ತಿರಜತಾದಿಗಳಿಗೆ ಅನಿರ್ವಾಚ್ಯತ್ವವು ಸಿದ್ಧಿಸುವುದಿಲ್ಲ.

(21) ಅಸತ್ತಾದರೆ ತೋರಲಾರದು. ಸತ್ತಾದರೆ ಬಾಧಿಸಲ್ಪಡಲಾರದು. ಶುಕ್ತಿರೂಪ್ಯವಾದರೂ ತೋರುತ್ತದೆ. ಬಾಧಿಸಲ್ಪಡುತ್ತದೆ. ಆ ಉಭಯಾನ್ಯಥಾನುಪಪತ್ತಿಯು ಅಂದರೆ, ಆ ಎರಡು ಖ್ಯಾತಿಬಾಧಗಳು ಅನ್ಯಥಾ ಅನುಪಪನ್ನವಾದುದಾಗಿ ಶುಕ್ತಿರೂಪ್ಯಾದಿಗಳು ಸದಸದ್ವಿಲಕ್ಷಣವು ಎನ್ನುವಲ್ಲಿ ಪ್ರಮಾಣವು ಎಂದರೆ— ಅದು, ಅಸತ್ತು ತೋರುತ್ತದೆ ಎನ್ನುವುದರಿಂದಲೇ ನಿರಾಕರಿಸಲ್ಪಟ್ಟಿತು. ಮತ್ತು ಸತ್ತಾದ ಬ್ರಹ್ಮನಲ್ಲಿ "ವಿಜ್ಞಾತಸ್ಯಾನ್ಯಥಾ ಸಮ್ಯಗ್ವಿಜ್ಞಾನಂ" ಎಂದು ಹೇಳಿದ ಬಾಧ್ಯತ್ವವಿದ್ದಪ್ರಯುಕ್ತ ವ್ಯಭಿಚಾರವು. 'ಕಶ್ಚಾಯಂ ಬಾಧ ಉದ್ದಿಷ್ಟಃ' ಇದು ಮೊದಲಾದ ಮೇಲೆ ಹೇಳುವಪ್ರಕಾರ ಜ್ಞಾನನಿವರ್ತ್ಯತ್ವರೂಪವಾದ ಬಾಧವು ಶುಕ್ತಿರೂಪ್ಯಾದಿಗಳಲ್ಲಿ ಇಲ್ಲ. ತ್ರೈಕಾಲಿಕ ನಿಷೇಧಪ್ರತಿಯೋಗಿತ್ವವನ್ನು ಇಟ್ಟುಕೊಂಡರೆ ಅಸತ್ವವು ಬರುತ್ತದೆ, ಇದುಮೊದಲಾದಪ್ರಕಾರ ನಿರಸ್ತವಾಯಿತೆಂದು ತಿಳಿದುಕೊಳ್ಳಬೇಕು.

(22) ಮತ್ತು ರಜತವು ಅನಿರ್ವಚನೀಯವಾದರೆ ತೋರುವ ಸಮಯದಲ್ಲಿ 'ಸತ್' ಎಂದೂ, ಮೇಲಿನ ಕಾಲದಲ್ಲಿ 'ಅಸತ್' ಎಂದೂ ತೋರಲಿಕ್ಕೆ ಕಾರಣವೇನು? ಅನಿರ್ವಚನೀಯವೆಂದೇ ಏಕೆ ತೋರುವುದಿಲ್ಲ? ಪ್ರತೀತಿಕಾಲದಲ್ಲಿ ಸತ್ ಎಂದು ತೋರುವುದರಿಂದ ಮಾತ್ರ ರಜತದಲ್ಲಿರತಕ್ಕ ಸತ್ವವು ಸತ್ಯವಲ್ಲ, ಮತ್ತೇನೆಂದರೆ— ಅಧಿಷ್ಠಾನದಲ್ಲಿರತಕ್ಕ ಇದಂತಾಸಂಸರ್ಗವು ಹೇಗೆ ರಜತದಲ್ಲಿ ಆರೋಪಿಸಲ್ಪಟ್ಟದ್ದಾಗಿ 'ಇದಂ ರಜತಂ' ಎಂದು ತೋರುತ್ತದೋ, ಹಾಗೆಯೇ ಅಧಿಷ್ಠಾನದಲ್ಲಿ ಇರತಕ್ಕ ಸತ್ತಾ ಸಂಸರ್ಗವೂ ಆರೋಪಿಸಲ್ಪಟ್ಟದ್ದಾಗಿಯೇ 'ಸದಿದಂ ರಜತಂ' ಎಂದು ತೋರುತ್ತದೆ. ಅಥವಾ ಪ್ರಾತಿಭಾಸಿಕತ್ವವು ರಜತದಲ್ಲಿಯೂ ಇದೆ. ಆದಪ್ರಯುಕ್ತವೂ ಸತ್ ಎಂದು ತೋರಲಿಕ್ಕೆ ವಿರೋಧವಿಲ್ಲ ಎಂದು ಶಂಕಿಸಿದರೆ, "ತಸ್ಯಾನಿರ್ವಚನೀಯತ್ವೇ ಸ್ಯಾದೇವ ಹ್ಯನವಸ್ಥಿತಿಃ" ಎನ್ನುವುದನ್ನು ವ್ಯಾಖ್ಯಾನ ಮಾಡುವಾಗ ನಿರಾಕರಿಸುವೆವು. (23) ಅಸತ್ ಎನ್ನುವ ಪ್ರತೀತಿಯಿಂದ ಅರ್ಥಕ್ರಿಯಾ ಸಾಮರ್ಥ್ಯರೂಪವಾದ ಸತ್ವವೇ ನಿಷೇಧಿಸಲ್ಪಡುತ್ತದೆ. ಅತ್ಯಂತಾಸತ್ವವು ವಿಷಯೀಕರಿಸಲ್ಪಡುವುದಿಲ್ಲ ಎಂದರೆ, ಹಾಗೆ ಹೇಳಕೂಡದು. ಅರ್ಥಕ್ರಿಯಾಸಾಮರ್ಥ್ಯವು ನಿಮಗೆ ಭ್ರಾಂತಿ ಸಮಯದಲ್ಲಿ ಪ್ರಸಕ್ತವೇ ಆಗಲಿಲ್ಲ. ಪ್ರಸಕ್ತವಾಗಿದ್ದರೆ ಅರ್ಥಕ್ರಿಯೆಗೆ ಅರ್ಹವಲ್ಲದಿದ್ದ ಪ್ರಾತಿಭಾಸಿಕ ರಜತದಲ್ಲಿ ವ್ಯಾವಹಾರಿಕವಾದ ರಜತದ ಧರ್ಮಭೂತವಾದ ಅರ್ಥಕ್ರಿಯಾ ಸಾಮರ್ಥ್ಯವು ತೋರಿದರೆ ಅನ್ಯಥಾ ಖ್ಯಾತಿಯು ಬರಬೇಕಾಗುವುದು. (24) ಮತ್ತು ಶುಕ್ತಿಯಲ್ಲಿ ತೋರುವ ಈ ರಜತವು ನಿತ್ಯವಾದರೆ ಎಷ್ಟು ಹೊತ್ತಿಗೂ ತೋರಬೇಕಾಗುವುದು. ಅನಿತ್ಯವಾದರೆ ಕಾರಣವನ್ನು ಹೇಳಬೇಕು. ಅವಿದ್ಯೆಯು ಕಾರಣವೆಂದು ಹೇಳಕೂಡದು. ನಿಮ್ಮ ಮತದಲ್ಲಿ ಅವಿದ್ಯೆಯು ಕೂಡುವುದಿಲ್ಲವೆಂದು "ನಿರ್ವಿಶೇಷೇ ಸ್ವಯಂಭಾತೇ ಕಿಮಜ್ಞಾನಾವೃತಂ ಭವೇತ್" ಇತ್ಯಾದಿ ಸ್ಥಳಗಳಲ್ಲಿ ಹೇಳುವೆವು. (25) ಮತ್ತು ಅವಿದ್ಯೆಯು ಆತ್ಮನಲ್ಲಿರತಕ್ಕುದಾದ ಪ್ರಯುಕ್ತ, ಅವಿದ್ಯೆಯ ಪರಿಣಾಮಭೂತವಾದ ರಜತವೂ ಒಳಗೇನೇ ತೋರಬೇಕು. ಶುಕ್ತಿಸಂಬದ್ಧವಾಗಿ ಹೊರಗೆ ತೋರಬಾರದು. (26) ಹಾಗಾದರೆ ಆತ್ಮನು ಸರ್ವತ್ರ ವ್ಯಾಪ್ತನಾದುದರಿಂದ ಶುಕ್ತ್ಯವಚ್ಛಿನ್ನವಾದ ಚೈತನ್ಯದಲ್ಲಿರತಕ್ಕ ಅವಿದ್ಯೆಯ ಪರಿಣಾಮಭೂತವಾದ ರಜತವು ಶುಕ್ತಿಸಂಬದ್ಧವಾಗಿ ತೋರುತ್ತದೆ ಎಂದರೆ, ಹಾಗೆ ಹೇಳಕೂಡದು. ಹಾಗಾದರೆ, ಶುಕ್ತಿಯಂತೆ ರಜತವೂ ಕೂಡ ಹೊರಗೇನೆ,

ಇರತಕ್ಕುದಾದುದರಿಂದ ಎಲ್ಲಾ ಜನರಿಗೂ ತೋರಬೇಕಾಗುವುದು. (27) ಮತ್ತು (೧) ಈ ರಜತವು ಘಟಪಟಾದಿಗಳಂತೆಯೇ ಕಣ್ಣು ಮೊದಲಾದ ಇಂದ್ರಿಯಗಳ ಸನ್ನಿಕರ್ಷದಿಂದ ತೋರುತ್ತದೆಂದು ಹೇಳಕೂಡದು. ತೋರುವ ಕಾಲದಲ್ಲಿಯೇ ರಜತವು ಹುಟ್ಟುತ್ತದೆ. ಅಂದರೆ, ದುಷ್ಟೇಂದ್ರಿಯ ಸಂಬಂಧದಿಂದ ಶುಕ್ತ್ಯವಚ್ಛಿನ್ನವಾದ (ಶುಕ್ತಿಯಲ್ಲಿರತಕ್ಕ) ಚೈತನ್ಯದಲ್ಲಿರತಕ್ಕ ಅಜ್ಞಾನವು ರಜತರೂಪವಾಗಿಯೂ ರಜತಜ್ಞಾನರೂಪವಾಗಿಯೂ ಪರಿಣಾಮವಾಗುತ್ತದೆ. ಎಂದು ನೀವು ಅಂಗೀಕರಿಸುತ್ತೀರಿ. (೨) ರಜತವು ಅತೀತಘಟಾದಿಗಳಂತೆಯೇ ಸಂಸ್ಕಾರದಿಂದ ತೋರುತ್ತದೆಂದೂ ಹೇಳಕೂಡದು. ಮೊದಲು ಅನುಭೂತವಾಗಲಿಲ್ಲ. (೩) ರಜತವು ಸುಖಾದಿಗಳಂತೆಯೇ ಸಾಕ್ಷಿಗೆ ತೋರುತ್ತದೆಂದೂ ಹೇಳಕೂಡದು. ಚಕ್ಷುಸ್ಸನ್ನಿಕರ್ಷವಾದರೆ ರಜತಜ್ಞಾನವು ಬರುತ್ತದೆ. ಚಕ್ಷುಸ್ಸನ್ನಿಕರ್ಷವಾಗದಿದ್ದರೆ ರಜತಜ್ಞಾನವು ಬರುವುದಿಲ್ಲ. ಈ ಬಾಹ್ಯೇಂದ್ರಿಯಾನ್ವಯ ವ್ಯತಿರೇಕಗಳಿಂದ ವಿರೋಧವು ಬರುತ್ತದೆ. ಹಾಗಾದರೆ, ಅಧಿಕರಣ ಭೂತವಾದ ಶುಕ್ತಿಯನ್ನು ಗ್ರಹಿಸುವುದರಲ್ಲಿಯೇ ಇಂದ್ರಿಯವ್ಯಾಪಾರಾನ್ವಯವ್ಯತಿರೇಕಗಳಿಗೆ ಶಕ್ತಿಯು ಕುಂಠಿತವಾಗುವುದರಿಂದ ಅವುಗಳು ರಜತಜ್ಞಾನದಲ್ಲಿ ಉಪಯುಕ್ತವಾಗುವುದಿಲ್ಲ, ಎಂದರೆ ಹಾಗೆ ಹೇಳಕೂಡದು. ರಜತಜ್ಞಾನಬರಲಿಕ್ಕೆ ಅಧಿಕರಣಜ್ಞಾನವು ಉಪಯುಕ್ತವಾಗುವುದಿಲ್ಲ. ಅಂತೂ ಅಧಿಕರಣಭೂತವಾದ ಶುಕ್ತಿಯನ್ನು ತಿಳಿಸಿಕೊಡುವುದರಿಂದ ಇಂದ್ರಿಯ ವ್ಯಾಪಾರದ ಶಕ್ತಿಯು ಕ್ಷೀಣವಾಗುವುದಿಲ್ಲ. (28) ಹಾಗಾದರೆ, ಸಾಕ್ಷಿಯು ರಜತವನ್ನು ವಿಷಯೀಕರಿಸುವಾಗ ಶುಕ್ತಿಯಿಂದ ಸಂಬದ್ಧವಾಗಿಯೇ ಗ್ರಹಿಸುತ್ತದೆ. ವ್ಯಾವಹಾರಿಕವಾಗಿರುವುದರಿಂದ ಶುಕ್ತಿಯು ಸಾಕ್ಷಾತ್ ಸಾಕ್ಷಿಯಿಂದ ತಿಳಿಯಲು ಯೋಗ್ಯವಲ್ಲ. ಮತ್ತೆ ಇಂದ್ರಿಯ ವ್ಯವಧಾನದಿಂದ ಅಂದರೆ, ಹೇಗೆ ಸರೋವರದ ನೀರು ರಂಧ್ರ (ತೂತು) ದಿಂದ ಹೊರಗೆ ಹೋಗಿ, ಕುಲ್ಯ (ತೋಡು) ರೂಪದಿಂದ ಗದ್ದೆಗೆ ಹೋಗಿ ಅದರಂತೆ ಚತುಷ್ಕೋಣಾಕಾರವುಳ್ಳದ್ದು ಆಗುತ್ತದೋ, ಹಾಗೆಯೇ ಅವಯವಗಳಿಂದ ಕೂಡಿರುವ ತೈಜಸವಾದ ಅಂತಃಕರಣವು ಚಕ್ಷುರಾದಿಗಳ ದ್ವಾರದಿಂದ ಹೊರಟುಹೋಗಿ, ಶುಕ್ತಿಮೊದಲಾದ ವಿಷಯಪರ್ಯಂತ ದೀರ್ಘವಾದ ಪ್ರಭೆಯ ಆಕಾರವಾಗಿ ಪರಿಣಮಿಸಿ, ಶುಕ್ತಿಮೊದಲಾದ ವಿಷಯಗಳನ್ನು ವ್ಯಾಪಿಸಿ ವಿಷಯಾಕಾರವುಳ್ಳದ್ದಾಗುತ್ತದೆ. ಇದಕ್ಕೆ ವೃತ್ತಿಯೆಂದು ಹೆಸರು. ಅಂತೂ ಶುಕ್ತಿಗ್ರಹಣರೂಪವಾದ ವೃತ್ತ್ಯವಚ್ಛಿನ್ನವಾದ ಶುಕ್ತ್ಯಧಿಷ್ಠಾನ ಚೈತನ್ಯವು ಅಂತಃಕರಣಾವಚ್ಛಿನ್ನವಾದ ಜೀವಚೈತನ್ಯದಿಂದ ಒಂದೇ ಉಪಾಧಿಯಿಂದ ಕೂಡಿದ್ದಾಗಿ ಐಕ್ಯವನ್ನು ಹೊಂದುತ್ತದೆ. ಅಂತಹ ಅಧಿಷ್ಠಾನ ಚೈತನ್ಯದಿಂದಲೂ ಜೀವಚೈತನ್ಯದಿಂದಲೂ ಐಕ್ಯವನ್ನು ಹೊಂದಿದ ಸಾಕ್ಷಿಯಿಂದ ಶುಕ್ತಿಸಂಬದ್ಧವಾಗಿ ರೂಪ್ಯವು (ಬೆಳ್ಳಿಯು)ತೋರುತ್ತದೆ. ರಜತವಾದರೂ ಪ್ರಾತಿಭಾಸಿಕವಾಗಿರುವುದರಿಂದ ಇಂದ್ರಿಯ ವ್ಯವಧಾನವನ್ನು ಅಪೇಕ್ಷಿಸುವುದಿಲ್ಲ. ಆದಕಾರಣ ಶುಕ್ತಿಸಂಬದ್ಧವಾಗಿ ರಜತದ ಜ್ಞಾನವು ಬರಲಿಕ್ಕೆ ಅಧಿಕರಣಭೂತವಾದ ಶುಕ್ತಿಗ್ರಹಣದಲ್ಲಿ ಇಂದ್ರಿಯವು ಉಪಯುಕ್ತವಾಗುತ್ತದೆ, ಎಂದು ನಾವು (ಮಾಯಾವಾದಿಗಳು) ಹೇಳುತ್ತೇವೆ ಎಂದರೆ— ಹೀಗೆ ಹೇಳಕೂಡದು. ನಿಮ್ಮ ಮತದಲ್ಲಿ ಅವಿದ್ಯೆಯೇ ಉಪಾದಾನಕಾರಣವಾಗಿ ಉಳ್ಳ ಪ್ರಾತಿಭಾಸಿಕವಾದ ರಜತವು ಆಂತರ (ಒಳಗೆ ಇರತಕ್ಕ) ಪದಾರ್ಥವಾಗಿರುವುದರಿಂದ ಅದು ಶುಕ್ತಿ ಸಂಬದ್ಧವಾಗಿ ತೋರುತ್ತದೆನ್ನುವ ನಿಯಮದಲ್ಲಿ ನಿಯಾಮಕವಿಲ್ಲದಿರುವುದರಿಂದ ಅಧಿಕರಣ ಜ್ಞಾನದ ಅಪೇಕ್ಷೆಯೇ ಇಲ್ಲದಿರುವ ಪ್ರಯುಕ್ತ ರಜತಜ್ಞಾನಬರಲಿಕ್ಕೆ ಇಂದ್ರಿಯ ವ್ಯಾಪಾರವು ಉಪಯುಕ್ತವಾಗುವುದಿಲ್ಲ.

(29) ಹಾಗಾದರೆ ಆತ್ಮನು ಸರ್ವತ್ರ ವ್ಯಾಪ್ತನಾದಪ್ರಯುಕ್ತ ಶುಕ್ತ್ಯವಚ್ಛಿನ್ನ ಚೈತನ್ಯದಲ್ಲಿರತಕ್ಕ ಅವಿದ್ಯೆಯನ್ನು ಹೋಗಲಾಡಿಸುವುದರಿಂದ ಶುಕ್ತಿಸಂಬದ್ಧವಾಗಿ ತೋರುತ್ತದೆಂದು ಹೇಳ

ಕೂಡದು. ಹಾಗಿದ್ದರೆ ಶುಕ್ತಿಯಂತೆ ರಜತವು ಬಹಿಷ್ಠವಾಗಿರುವುದರಿಂದ ಎಲ್ಲಾ ಜನರಿಗೂ ತೋರಬೇಕಾಗುವುದು. ಅಥವಾ ಶುಕ್ತ್ಯಾಕಾರವಾದ ಅಂತಃಕರಣ ವೃತ್ತಿಯಿಂದ ಅಭಿವ್ಯಕ್ತವಾದ ಅಥವಾ ಅದರಲ್ಲಿ ಪ್ರತಿಫಲಿತವಾದ ಶುಕ್ತ್ಯಧಿಷ್ಠಾನ ಚೈತನ್ಯದಿಂದ ಶುಕ್ತಿಯು ತೋರುತ್ತದೆ. ಶುಕ್ತ್ಯಧಿಷ್ಠಾನ ಚೈತನ್ಯದಲ್ಲಿರತಕ್ಕ ಅವಿದ್ಯೆಯು ಪರಿಣಾಮರೂಪವಾದ ರಜತಾಕಾರವೃತ್ತಿಯಿಂದ ಅಭಿವ್ಯಕ್ತವಾದ ಅಥವಾ ಅದರಿಂದ ಪ್ರತಿಫಲಿತವಾದ ಚೈತನ್ಯದಿಂದ ರಜತವು ತೋರುತ್ತದೆ, ಎಂದು ನಿಮ್ಮ (ಅದ್ವೈತಿಗಳ) ಪ್ರಕ್ರಿಯೆಯು. ಆ ಪಕ್ಷದಲ್ಲಿ ಶುಕ್ತಿಸಂಬದ್ಧವಾಗಿ ತೋರುತ್ತದೆ ಎನ್ನುವ ನಿಯಮದಲ್ಲಿ ನಿಯಾಮಕವಿಲ್ಲ.

(30) ಮತ್ತು ಇಂದ್ರಿಯದಿಂದ ಹುಟ್ಟತಕ್ಕ ಇದಮಂಶವೃತ್ತಿಯಿಂದ ಅಭಿವ್ಯಕ್ತವಾದ ಅಧಿಷ್ಠಾನ ಚೈತನ್ಯದಿಂದ ಅಧಿಕರಣದ (ಶುಕ್ತಿಯ)ಜ್ಞಾನವು, ಅವಿದ್ಯಾವೃತ್ತ್ಯುಪಹಿತವಾದ ಅಧಿಷ್ಠಾನ ಚೈತನ್ಯರೂಪವಾದ ಸಾಕ್ಷಿಯಿಂದ ರಜತಜ್ಞಾನವು ಬರುತ್ತದೆ ಎಂದಂಗೀಕರಿಸಿದರೆ, ಎರಡು ಜ್ಞಾನಗಳೆಂದು ಅಂಗೀಕರಿಸಬೇಕಾಗುವುದೆಂದು ಪ್ರಾಪ್ತವಾಗುವುದರಿಂದ ರಜತತ್ವ ವಿಶಿಷ್ಟವಾದ ಎದುರಿರುವ ವಸ್ತುವಿನ ಒಂದೇ ಜ್ಞಾನವು ಪ್ರವೃತ್ತ್ಯಾದಿಗಳನ್ನು ಹುಟ್ಟಿಸುತ್ತದೆ, ಎರಡು ಜ್ಞಾನವಲ್ಲ ಎಂದು ಸಮರ್ಥಿಸಿರುವ ಪ್ರಯುಕ್ತ ಪ್ರವೃತ್ತ್ಯಾದಿಗಳೇ ಕೂಡಲಾರವು. (31) ರಜತಕ್ಕೆ ಶುಕ್ತಿಯ ಅಭೇದವನ್ನೂ ಕೂಡ ಸಾಕ್ಷಿಯು ಗ್ರಹಿಸುತ್ತದೆ. ಆದಕಾರಣ ಪ್ರವೃತ್ತ್ಯಾದಿಗಳು ಕೂಡುವುದಿಲ್ಲವೆಂದಿಲ್ಲ. ಎಂದರೆ— ಹಾಗೆ ಹೇಳಕೂಡದು. ಆದಾಗ್ಯೂ ಎರಡು ಜ್ಞಾನಗಳೆಂದಂಗೀಕರಿಸಿದುದರಿಂದ ವಿಶಿಷ್ಟಜ್ಞಾನವು ಒಂದೇ ಎಂದು ವಿಷಯೀಕರಿಸುವ ಅನುಭವ ವಿರೋಧವು ಪರಿಹೃತವಾಗುವುದಿಲ್ಲ. (32) ಸಾದೃಶ್ಯವೊದಲಾದ ದೋಷಗಳಿಂದ ಕೂಡಿರುವ ಇಂದ್ರಿಯಜನ್ಯವಾದ ಇದಮಂಶಾಕಾರವೃತ್ತಿಯಿಂದ ಅಧಿಷ್ಠಾನ ಚೈತನ್ಯದಲ್ಲಿರತಕ್ಕ ಅವಿದ್ಯೆಯು ಪರಿಣತವಾಗಿ ಅವಿದ್ಯಾವೃತ್ತಿಯಲ್ಲಿ ಪ್ರತಿಫಲಿತವಾದ ಸಾಕ್ಷಿಚೈತನ್ಯವೇ ಫಲವು. ಅದು ಒಂದೇ ಆದುದರಿಂದ ಐಕ್ಯಾನುಭವವಿರೋಧವಿಲ್ಲ. ಅಂದರೆ, ರಜತಾಕಾರವಾದ ಅವಿದ್ಯಾವೃತ್ತಿಯಲ್ಲಿ ಪ್ರತಿಫಲಿತವಾದ ಸಾಕ್ಷಿಚೈತನ್ಯವೇ ಇದಮಾಕಾರವಾದ ಇಂದ್ರಿಯಜನ್ಯವೃತ್ತಿಯಲ್ಲಿಯೂ ಪ್ರತಿಫಲಿಸುತ್ತದೆ. ಅದೇ ಫಲವು. ಅದೇ ಜ್ಞಪ್ತಿರೂಪವಾದ ಜ್ಞಾನವು. ಅಂತೂ ಅವಿದ್ಯಾವೃತ್ತಿಗೂ ಅಂತಃಕರಣವೃತ್ತಿಗೂ ಭೇದವಿದ್ದರೂ ಅದರಲ್ಲಿ ಪ್ರತಿಬಿಂಬಿತಗಳಾದ ಚೈತನ್ಯಗಳು ಒಂದೇ ಆದುದರಿಂದ, ಫಲವು ಒಂದೇ ಆದಪ್ರಯುಕ್ತ ಒಂದೇ ಜ್ಞಾನವೆಂದು ವಿಷಯೀಕರಿಸತಕ್ಕ ಅನುಭವ ವಿರೋಧವಿಲ್ಲ ಎಂದರೆ ಹಾಗೆ ಹೇಳಕೂಡದು. ಈ ಪ್ರಕ್ರಿಯೆಯನ್ನು "ಯತ್ಕ್ವಚಿದ್ವ್ಯಭಿಚಾರಿ ಸ್ಯಾದ್ದರ್ಶನಂ ಮಾನಸಂ ಹಿ ತತ್" ಎನ್ನುವಲ್ಲಿ ಶುಕ್ತಿರಜತಾದಿ ಜ್ಞಾನವು ಸಾಕ್ಷಿರೂಪವಲ್ಲ. ಮತ್ತೆ ಆ ಜ್ಞಾನವು ಚಕ್ಷುರಾದೀಂದ್ರಿಯಗಳೇ ಕರಣಗಳಾಗಿ ಉಳ್ಳವುಗಳು. ಮನಸ್ಸಿನ ಪರಿಣಾಮರೂಪವು, ಇದು ಮೊದಲಾದ ರೀತಿಯಿಂದ ನಿರಾಕರಿಸುವೆವು. ಅನಿರ್ವಚನೀಯವನ್ನೂ ಕೂಡ ಅಲ್ಲಲ್ಲಿ ಶ್ರೀಮದಾಚಾರ್ಯರೇ ನಿರಾಕರಿಸುವರು.

ಈ ಪ್ರಕಾರ ಸಿದ್ಧಾಂತಿಗಳು ಒಪ್ಪುವ ಭ್ರಮಾತ್ಮಕ ಜ್ಞಾನವನ್ನು ಒಪ್ಪದಿರುವುದರಿಂದ ಅಖ್ಯಾತಿವಾದಿಗಳಾದ ೧ ಪ್ರಾಭಾಕರರು, ೨ ರಾಮಾನುಜಾಚಾರ್ಯರು, ೩ ತಾರ್ಕಿಕೈಕದೇಶಿಗಳು, ೪ ಪ್ರಾಚೀನ ತಾರ್ಕಿಕರು, ೫ ಬೌದ್ಧೈಕದೇಶಿಗಳಾದ ವಿಜ್ಞಾನಾತ್ಮತತ್ವವಾದಿಗಳು, ೬ ಬೌದ್ಧೈಕದೇಶಿಗಳಾದ ಅಸತ್ಖ್ಯಾತಿವಾದಿಗಳು, ೭ ಮಾಯಾವಾದಿಗಳು. ಈ ಏಳು ವಾದಿಗಳ ಪಕ್ಷಗಳು, ಅಂದರೆ ಸಿದ್ಧಾಂತಿಗಳು ಹೇಳುವ ಅಭಿನವಾನ್ಯಥಾಖ್ಯಾತಿಪಕ್ಷ ವಿರುದ್ಧಪಕ್ಷಗಳು ನಿರಾಕರಿಸಲ್ಪಟ್ಟವು.

ಈ ಏಳು ವಾದಿಗಳ ಮಧ್ಯದಲ್ಲಿ ತಾರ್ಕಿಕರಲ್ಲಿಯೂ ಬೌದ್ಧರಲ್ಲಿಯೂ ಅವಾಂತರಭೇದ ವಿವಕ್ಷಾಮಾಡಿಕೊಳ್ಳದಿದ್ದರೆ ಐದು ವಾದಿಗಳಾಗುತ್ತಾರೆ.

ತಾರ್ಕಿಕರಲ್ಲಿ ತಾರ್ಕಿಕೈಕದೇಶಿಗಳೆಂದೂ ಪ್ರಾಚೀನ ತಾರ್ಕಿಕರೆಂದೂ, ಬೌದ್ಧರಲ್ಲಿ ವಿಜ್ಞಾನಾತ್ಮತತ್ವವಾದಿಗಳೆಂದೂ ಅಸತ್‌ಖ್ಯಾತಿವಾದಿಗಳೆಂದೂ ಅವಾಂತರಭೇದ ವಿವಕ್ಷಾಮಾಡಿಕೊಂಡರೆ ಏಳು ವಾದಿಗಳಾಗುತ್ತಾರೆ. ಈ ವಾದಿಗಳಲ್ಲಿ ಅವಾಂತರಭೇದವಿವಕ್ಷೆಯನ್ನು ಮಾಡಿಕೊಂಡು ಬೌದ್ಧರದ್ದು ಹೊರತು ಐದು ವಾದಿಗಳದ್ದು ಮಾತ್ರ ಪೂರ್ವಪಕ್ಷಸಿದ್ಧಾಂತಗಳ ಸಾರಾಂಶವು ಹಿಂದೆ 62-63-64ನೆಯ ಪುಟಗಳಲ್ಲಿ ವಿವರಿಸಲ್ಪಟ್ಟಿದೆ.

**ಬೌದ್ಧರಲ್ಲಿ ವಿಜ್ಞಾನಾತ್ಮತತ್ವವಾದಿಗಳ ಪೂರ್ವಪಕ್ಷ ಸಾರಾಂಶವು:—** ಭ್ರಮೆಯಲ್ಲಿ ತೋರುವ ರಜತ ಮೊದಲಾದುದು ಸತ್ತೇ. (ಇದ್ದದ್ದೇ.) ಅದು ಅಸತ್ತೆಂದರೆ, ಪ್ರತೀತಿಯು ಕೂಡುವುದಿಲ್ಲ. ಎದುರಿನಲ್ಲಿಯೇ ಇದ್ದದ್ದೆಂದರೆ ಭ್ರಾಂತಿಯು ಕೂಡಲಾರದು. ದೇಶಾಂತರದಲ್ಲಿ ಇರತಕ್ಕುದು ಎನ್ನುವಲ್ಲಿ ಪ್ರಮಾಣವಿರುವುದಿಲ್ಲ. ಆದಕಾರಣ ಪರಿಶೇಷಾತ್ ಜ್ಞಾನರೂಪವಾದುದು. ಒಳಗೇನೇ ಇರತಕ್ಕದ್ದು. ಸತ್ತೇ (ಇದ್ದದ್ದೇ) ಆದರೆ ಆ ಜ್ಞಾನಕ್ಕೆ ಭ್ರಮತ್ವವು ಹೇಗೆಂದರೆ— ಆಂತರಪದಾರ್ಥವನ್ನು ಹೊರಗೆ ಇರುವುದೆಂದು ವಿಷಯೀಕರಿಸುವುದರಿಂದ ಆ ಜ್ಞಾನವು ಭ್ರಾಂತಿಯೆಂದು ಅನ್ನಿಸಿಕೊಳ್ಳುತ್ತದೆ ಎನ್ನುವರು.

**ಸಿದ್ಧಾಂತಸಾರಾಂಶವು:—** ಸತ್ತಾದರೆ 'ಅಸದೇವ ರಜತಂ ಪ್ರತ್ಯಭಾತ್' ಎನ್ನುವ ಅನುಭವದಿಂದ ವಿರೋಧವು. ಅಸತ್ತಿಗೆ ಪ್ರತೀತಿಯು ಕೂಡದಿದ್ದರೆ ಆಂತರವಾದ ರಜತದಲ್ಲಿ ಅಸತ್ತಾದ ಬಹಿಸ್ಥತ್ವಕ್ಕೂ ಪ್ರತೀತಿಯು ಕೂಡದೆ ಹೋಗುವುದು. ಬಹಿಸ್ಥತ್ವವು ಸತ್ತಾದರೆ ಆ ಜ್ಞಾನಕ್ಕೆ ಭ್ರಾಂತಿತ್ವವೇ ಕೂಡಲಾರದು. ಮತ್ತು ರಜತವು ಒಳಗೆ ಇದೆ, ಮತ್ತು ಜ್ಞಾನರೂಪವು ಎನ್ನುವಲ್ಲಿ ಪ್ರಮಾಣವೇ ಇರುವುದಿಲ್ಲ.

**ಅಸತ್‌ಖ್ಯಾತಿವಾದಿಗಳ ಪೂರ್ವಪಕ್ಷಸಾರಾಂಶವು:—** ಭ್ರಮೆಯಲ್ಲಿ ತೋರುವುದು ಸತ್ ಎಂದು ಹೇಳಿದರೆ ಬಾಧಾನುಭವದಿಂದ ವಿರೋಧವು. ಸದಸತ್ ಎನ್ನುವುದು ವಿರುದ್ಧವು. ಆದಕಾರಣ ಭ್ರಮೆಯಲ್ಲಿ ತೋರುವುದೆಲ್ಲವೂ ಅತ್ಯಂತಾಸತ್ತೆಂದೇ ಹೇಳಬೇಕು.

**ಸಿದ್ಧಾಂತಸಾರಾಂಶವು:—** ಭ್ರಮೆಯಲ್ಲಿ ತೋರುವ ಇದಂಪದಾರ್ಥರೂಪ ಅಧಿಷ್ಠಾನವು (ಶುಕ್ತಿಯು) ಭ್ರಮೆಯಿಂದ ಮೊದಲೂ ಮೇಲೆಯೂ ಉಂಟೆಂದೇ ತಿಳಿದುಬರುವುದರಿಂದ ಭ್ರಾಂತಿಯಲ್ಲಿ ತೋರುವ ಅಧಿಷ್ಠಾನವೂ ಅಸತ್ತೆಂದು ಹೇಳಿದ್ದು ಅತ್ಯಂತಾಯುಕ್ತವು. ಭ್ರಾಂತಿಯಲ್ಲಿ ತೋರುವುದು ಅಧಿಷ್ಠಾನವೂ ಅಸತ್ತಾದರೆ ಇಂದ್ರಿಯಸನ್ನಿಕರ್ಷವೇ ಕೂಡದಿರುವುದರಿಂದ ಭ್ರಾಂತಿಗೆ ಕಾರಣವೇ ಇಲ್ಲವೆಂದಾಗಬೇಕಾಗುವುದು. ಆದಪ್ರಯುಕ್ತ ಇಂತಹ ಅಸತ್‌ಖ್ಯಾತಿಪಕ್ಷವನ್ನು ಸರ್ವಥಾ ಅಂಗೀಕರಿಸಕೂಡದು.

ಇಷ್ಟರವರೆಗೆ (೧) ಅಯಥಾರ್ಥ ಜ್ಞಾನವೇ ಇಲ್ಲ. ಎರಡು ಜ್ಞಾನಗಳಿಗೆ ಭೇದಾಗ್ರಹದಿಂದಲೇ ಅಯಥಾರ್ಥವ್ಯವಹಾರ ಪ್ರವೃತ್ತ್ಯಾದಿಗಳು ಕೂಡುತ್ತವೆ. ಪ್ರವೃತ್ತಿಗಾಗಿ ಅಸತ್ತಾದ ತಾದಾತ್ಮ್ಯಾದಿಗಳನ್ನು ವಿಷಯೀಕರಿಸುವ ವಿಶಿಷ್ಟವಾದ ಒಂದೇ ಆದ ಭ್ರಮರೂಪವಾದ ಜ್ಞಾನವನ್ನೇ ಒಪ್ಪಬೇಕಾಗಿಲ್ಲ ಎನ್ನುವ ಪ್ರಾಭಾಕರರ ಮತವನ್ನೂ, (೨) ಎಲ್ಲಾ ವಸ್ತುಗಳಲ್ಲಿಯೂ ಎಲ್ಲಾ ವಸ್ತುಗಳ ಅಂಶವೂ ಇದ್ದಪ್ರಯುಕ್ತ 'ಇದಂ ರಜತಂ' ಇದುಮೊದಲಾದ ಎಲ್ಲಾ ವಿಶಿಷ್ಟ ಜ್ಞಾನವೂ ಯಥಾರ್ಥವೇ ಎನ್ನುವ ರಾಮಾನುಜಾಚಾರ್ಯರ ಮತವನ್ನೂ, (೩) ಸವಿಕಲ್ಪಕವಾದ

ಒಂದೇ ಜ್ಞಾನವನ್ನು ಅಂಗೀಕರಿಸಿ ಭೇದಾಗ್ರಹಾದಿಗಳಿಂದಲೇ ಅಯಥಾರ್ಥವ್ಯವಹಾರಾದಿಗಳು ಕೂಡುತ್ತವೆ ಎಂದು ಹೇಳುವ ತಾರ್ಕಿಕೈಕದೇಶಿಗಳ ಮತವನ್ನೂ, (೪) ಭ್ರಮಾತ್ಮಕವಾದ ಜ್ಞಾನವನ್ನು ಅಂಗೀಕಾರಮಾಡಿ ಆರೋಪ್ಯವಾದ ರಜತವು ಬೇರೆ ಕಡೆಯಲ್ಲಿ ಸದೇವ=ಸತ್ತೇ ಆಗಿದೆ ಎಂದು ಹೇಳುವ ಪ್ರಾಚೀನ ನೈಯಾಯಿಕರ ಮತವನ್ನೂ, (೫) ಭ್ರಮೆಯಲ್ಲಿ ತೋರುವು ದೆಲ್ಲವೂ ಅಸತ್ತೆಂದು ಆರೋಪ್ಯಕ್ಕೆ ಅಸತ್ವವನ್ನು ಹೇಳುವ ಬೌದ್ಧೈಕದೇಶಿಗಳಾದ ಅಸತ್ ಖ್ಯಾತಿವಾದಿಗಳ ಮತವನ್ನೂ, (೬) ಆರೋಪ್ಯಮಾಣ ರಜತಾದಿಗಳು ಸತ್ತೇ ವಿಜ್ಞಾನರೂಪವು ಒಳಗೇನೇ ಇರುವುದು ಅಲ್ಲಿ ತೋರತಕ್ಕ ಬಾಹ್ಯತ್ವವು ಅಸತ್ ಎಂದು ಆರೋಪ್ಯವು. ಸದಸತ್ ಎಂದು ಹೇಳುವ ಬೌದ್ಧೈಕದೇಶಿಗಳಾದ ವಿಜ್ಞಾನಾತ್ಮ ತತ್ವವಾದಿಗಳ ಮತವನ್ನೂ (೭) ಆರೋಪ್ಯವು ಸತ್ತಲ್ಲ, ಅಸತ್ತಲ್ಲ, ಸದಸತ್ತಲ್ಲ, ಮತ್ತೆ ಸದಸದ್ವಿಲಕ್ಷಣವು ಎಂದು ಹೇಳುವ ಮಾಯಾವಾದಿಗಳ ಮತವನ್ನೂ ನಿರಾಕರಿಸಿದರು.

ಆದಕಾರಣ ಅನ್ಯಥಾಜ್ಞಾನವೇ ಭ್ರಾಂತಿಯು. ಭ್ರಾಂತಿಪ್ರಸಂಜಿತವಾದ ಅನ್ಯಥಾಕಾರ ವನ್ನು ವಿಷಯೀಕರಿಸುವ ಜ್ಞಾನವು ಬಾಧವು, ಎಂದು ಸಿದ್ಧಾಂತಪಡಿಸಿರುವ ಶ್ರೀಮದಾ ಚಾರ್ಯರು ಬೇರೆ ಎಲ್ಲಾ ಮತಗಳನ್ನೂ ನಿರಾಕರಿಸಿರುವಪ್ರಯುಕ್ತ ' ವಿಜ್ಞಾತಸ್ಯಾನ್ಯಥಾ ಸಮ್ಯಗ್ವಿಜ್ಞಾನಂ ಹ್ಯೇವ ತನ್ಮತಂ ' ಎಂದು ಹೇಳಿದ್ದು ಅತಿಪ್ರಶಸ್ತವು.

|| ಪಂಚಾಖ್ಯಾತಿವಾದಃ ಸಮಾಪ್ತಃ ||

**ಅನ್ಯಥಾಖ್ಯಾತಿಪ್ರಕರಣವು ಸಮಾಪ್ತವಾಯಿತು.**



ಶುಕ್ತಿರಜತಾದಿಗಳಲ್ಲಿ ಅಸತ್ವವಿದ್ದಪ್ರಯುಕ್ತ ಸದಸದ್ವಿಲಕ್ಷಣತ್ವವೂ ಜ್ಞಾನನಿವರ್ತ್ಯತ್ವವೂ ಇರುವುದಿಲ್ಲ ಎಂದುಕ್ತವಾಗಿದೆ. ಅದು ಅಯುಕ್ತವು. ಏಕೆಂದರೆ, ಅಸತ್ತಿಗೆ ಪ್ರತೀತಿಯಿಲ್ಲವು. ಇದಾದರೂ ಪ್ರತೀತವಾಗುವುದು. ಎಂದರೆ —

**ಮೂ || ಅಸದ್ವಿಲಕ್ಷಣಜ್ಞಪ್ತ್ಯೈ ಜ್ಞಾತವ್ಯಮಸದೇವ ಹಿ |**
**ತಸ್ಮಾದಸತ್ಪ್ರತೀತಿಶ್ಚ ಕಥಂ ತೇನ ನಿವಾರ್ಯತೇ || ೨೭ ||**

ಅ || ಹಿ=ಯಾವ ಕಾರಣದಿಂದ, ಅಸದ್ವಿಲಕ್ಷಣಜ್ಞಪ್ತ್ಯೈ=ಅಸದ್ವಿಲಕ್ಷಣತ್ವದ ಜ್ಞಾನ ಕ್ಕಾಗಿ, ಅಸತ್=ಅಸತ್ತು, ಜ್ಞಾತವ್ಯಮೇವ=ತಿಳಿಯಲ್ಪಡಬೇಕೋ, ತಸ್ಮಾತ್=ಆದಕಾರಣ, ಅಸತ್ಪ್ರತೀತಿಶ್ಚ=ಅಸತ್ತಿನ ಜ್ಞಾನವಾದರೂ, ಕಥಂ=ಹೇಗೆ, ತೇನ=ಶುಕ್ತಿರಜತಾದಿಗಳು ಅಸದ್ವಿ ಲಕ್ಷಣವೆಂದು ತಿಳಿಯುವವನಿಂದ, ನಿವಾರ್ಯತೇ=ನಿರಾಕರಿಸಲ್ಪಡುತ್ತದೆ. ಚ=ಆ ಪ್ರತೀತಿ ಯಿಂದ ರಜತಾದಿಗಳಿಗೆ ಅಸತ್ವವು ಹೇಗೆ ತಾನೇ ನಿವಾರಿಸಲ್ಪಡುತ್ತದೆ?

ತಾ || (1) ' ಯಾವುದು ಅಸತ್ತೋ ಅದು ಪ್ರತೀತವಾಗುವುದಿಲ್ಲ, ಎಂದು ವ್ಯಾಪ್ತಿ ಯಿದ್ದರೆ ಪ್ರತೀತವಾಗಿದೆ ಎನ್ನುವ ಹೇತುವಿನಿಂದ ಶುಕ್ತಿರಜತಾದಿಗಳಿಗೆ ಅಸತ್ವವಿಲ್ಲವೆಂದು ಅನು ಮೇಯಿಸಬಹುದಿತ್ತು. ಹೀಗೆ ಇಲ್ಲ. ಪರಂಗೇನೇ ಅಸತ್ತಿನ ಪ್ರತೀತಿಯಿದ್ದುದರಿಂದ ವ್ಯಾಪ್ತಿಯು ಭಗ್ನವಾಗುವುದು. ' ವಿಪ್ರತಿಪನ್ನಃ ಅಸತ್ಪ್ರತೀತಿಮಾನ್ ಅಸದ್ವಿಲಕ್ಷಣಮಿತಿ ಪ್ರತೀತಿಮತ್ವಾತ್ ಯೋ ಯದ್ವಿಲಕ್ಷಣಂ ಪ್ರತ್ಯೇತಿ ಸಃ ತತ್ಪ್ರತೀತಿಮಾನ್ ಯಥಾ ಘಟವಿಲಕ್ಷಣಃ ಪಟಃ ಇತಿ ಪ್ರತೀತಿಮಾನ್ ದೇವದತ್ತಃ ಘಟಪ್ರತೀತಿಮಾನ್ ' ವಿವಾದಗ್ರಸ್ತನು ಅಸತ್ತಿನ ಜ್ಞಾನವಿರುವವನು,

ಅಸತ್ತಿನಿಂದ ಭಿನ್ನವೆಂದು ಪ್ರತೀತಿಯುಳ್ಳವನಾದುದರಿಂದ ಯಾವನು ಯಾವುದರಿಂದ ವಿಲಕ್ಷಣವೆಂದು ತಿಳಿಯುತ್ತಾನೋ ಆತನು ಅದರ ಜ್ಞಾನವಿರುವವನು, ಪಟವು ಘಟಕ್ಕಿಂತ ವಿಲಕ್ಷಣವೆಂದು ಪ್ರತೀತಿಯುಳ್ಳ ದೇವದತ್ತನು ಘಟದ ಜ್ಞಾನವಿರುವವನು, ಎಂದನುಮಾನವು. (2) ಹಾಗಾದರೆ, ರಜತವು ಅಸದ್ವಿಲಕ್ಷಣವೆಂದು ಜ್ಞಾನವು ಆಗಲಿ, ಅಸತ್ ಜ್ಞಾನವು ಇಲ್ಲದೆ ಹೋಗಲಿ, ಬಾಧಕವು ಯಾವುದೂ ಇಲ್ಲ. ಎಂದರೆ, ಹಾಗೆ ಹೇಳಕೂಡದು. ವೈಲಕ್ಷಣ್ಯ ಜ್ಞಾನಕ್ಕೆ ಪ್ರತಿಯೋಗಿ ಜ್ಞಾನವು ಕಾರಣವು. ಕಾರಣವಿಲ್ಲದೇನೇ ಕಾರ್ಯವು ಹುಟ್ಟುವುದಾದರೆ ನಿಯಾಮಕವಿಲ್ಲದಿರುವುದರಿಂದ ಕಾರ್ಯವು ಕದಾಚಿತೇ (ಕೆಲವುವೇಳೆಯೇ) ಹುಟ್ಟುತ್ತದೆ ಎನ್ನುವುದು ಕೂಡದೆ ಹೋಗಬೇಕಾಗುವುದು. ವೈಲಕ್ಷಣ್ಯ ಜ್ಞಾನಕ್ಕೆ ಪ್ರತಿಯೋಗಿಜ್ಞಾನವು ಕಾರಣವೆನ್ನುವುದು ಅನ್ವಯವ್ಯತಿರೇಕಗಳಿಂದ ತಿಳಿಯುತ್ತದೆ. ಈ ಅಭಿಪ್ರಾಯದಿಂದಲೇ 'ಅಸದ್ವಿಲಕ್ಷಣಜ್ಞಪ್ತ್ಯೈ' ಎಂದು ಹೇಳಿರುವರು. ಚತುರ್ಥೀ ಪ್ರಯೋಗದಿಂದ ಅಸದ್ರೂಪಪ್ರತಿಯೋಗಿಜ್ಞಾನವು ಅಸದ್ವೈಲಕ್ಷಣ್ಯ ಜ್ಞಾನಕ್ಕೆ ಕಾರಣವೆಂದು ಉಕ್ತವಾಯಿತು. ಈವಿವಕ್ಷಾ ಇಲ್ಲದಿದ್ದರೆ 'ಅಸದ್ವಿಲಕ್ಷಣಜ್ಞೇನ' ಎಂದು ಹೇಳುತ್ತಿದ್ದರು. (3) ಅಲ್ಲದೆ ಅಸತ್ತೇ ಪ್ರತೀತವಾಗದಿದ್ದರೆ ಮಾಯಾವಾದಿಗಳು ಅಸತ್ತಿನ ಜ್ಞಾನವನ್ನು ಹೇಗೆ ನಿವಾರಿಸುವುದು? ಯಾವನು ಯಾವುದನ್ನು ತಿಳಿಯುವುದಿಲ್ಲವೋ ಆತನು ಅದರ ಸಂಬಂಧವಾಗಿ ಯಾವುದನ್ನೂ ನಿಷೇಧಿಸುವುದಿಲ್ಲ. 'ವಿಮತಃ ಅಸತ್ಪ್ರತೀತಿಮಾನ್ ತತ್ಸಂಬಂಧಿ ಧರ್ಮನಿಷೇಧಕತ್ವಾತ್ ಯೋ ಯತ್ಸಂಬಂಧಿತಯಾ ಕಿಂಚಿನ್ನಿಷೇಧತಿ ಸಃ ತತ್ಪ್ರತೀತಿಮಾನ್ ಯಥಾ ಘಟಸ್ಯ ನಾಸ್ತಿ ಶೌಕ್ಲ್ಯಮಿತಿ ನಿಷೇಧಕೋ ಘಟಪ್ರತೀತಿಮಾನ್' ವಿವಾದವಿಷಯನಾದವನು, ಅಸತ್ತಿನ ಪ್ರತೀತಿಯಿರುವವನು ಅದಕ್ಕೆ ಸಂಬಂಧಪಟ್ಟ ಧರ್ಮವನ್ನು ನಿಷೇಧಿಸುವುದರಿಂದ (ಅಂದರೆ, ಅಸತ್ತಿನ ಸಂಬಂಧಿಯಾದ ಪ್ರತೀತಿವಿಷಯತ್ವರೂಪಧರ್ಮವನ್ನು ನಿಷೇಧಿಸುವುದರಿಂದ) ಯಾವನು ಯಾವುದರ ಸಂಬಂಧಿಯಾಗಿ ಯಾವುದನ್ನಾದರೂ ನಿಷೇಧಿಸುತ್ತಾನೋ ಆತನು ಅದರ ಪ್ರತೀತಿಯಿರುವವನು. ಹೇಗೆಂದರೆ, ಘಟಕ್ಕೆ ಶೌಕ್ಲ್ಯವಿಲ್ಲವೆಂದು ನಿಷೇಧಿಸುವವನು ಘಟದ ಜ್ಞಾನವಿರುವವನು. (4) ಅನ್ವಯವ್ಯಾಪ್ತಿಯನ್ನು ನಿರ್ಧರಿಸುವುದಕ್ಕಾಗಿ 'ಅಸತ್ಪ್ರತೀತಿಶ್ಚ ಕಥಂ ತೇನ ನಿವಾರ್ಯತೇ' ಎಂದು ವ್ಯತಿರೇಕವ್ಯಾಪ್ತಿಯನ್ನು ತೋರಿಸಿದ್ದು. (5) ತಥಾಚ ಅಸತ್ತಿಗೆ ಪ್ರತೀತಿಯು ಕೂಡುವುದರಿಂದ ಪ್ರತೀತವಾಗುವುದರಿಂದ ಶುಕ್ತಿರಜತಾದಿಗಳು ಅಸತ್ತಲ್ಲವೆನ್ನುವುದು ಅಯುಕ್ತವು. (6) ಹಾಗಾದರೆ ಅಸತ್ಪ್ರತೀತಿಯನ್ನು ನಿಷೇಧಿಸಿರುವಪ್ರಯುಕ್ತ ಅಸತ್ತಿಗೆ ಪ್ರತೀತಿಯು ಇಲ್ಲವೆಂದೇ ನಿಶ್ಚಿತವಾಗುವುದರಿಂದ ಬಾಧಿತವಾಯಿತೆಂದರೆ — ಹಾಗಾದರೆ, ಮೂಕೋಽಹಂ=ನಾನು ಮೂಕನು ಎಂದು ವಚನವನ್ನು ನಿಷೇಧಮಾಡಿದ ಸಾಮರ್ಥ್ಯದಿಂದ ಆತನಿಗೆ ವಚನವಿಲ್ಲವೆಂದೇ ನಿರ್ಧಾರಣವಾಗುವಪ್ರಯುಕ್ತ ವಚನಪ್ರತೀತಿಯೂ ಬಾಧಿತವಾಗಬೇಕಾಗುವುದು. ತನ್ನ ಕ್ರಿಯೆಯಿಂದಲೇ ವಿರೋಧವು ಬರುವುದರಿಂದ ಪ್ರತಿಷೇಧವೇ ಕೂಡಲಾರದೆಂದರೆ, ಇಲ್ಲಿಯೂ ತನ್ನ ಕ್ರಿಯೆಯಿಂದ ವಿರೋಧವು ಬರುವುದರಿಂದ ಅಸತ್ತಿನ ಪ್ರತೀತಿಯನ್ನು ನಿಷೇಧಿಸುವುದೇ ಕೂಡಲಾರದು. (7) ಮತ್ತು 'ನರಶಿರಸಿ ವಿಷಾಣಮಸ್ತಿ'= ಮನುಷ್ಯನ ತಲೆಯಲ್ಲಿ ಕೋಡು ಇದೆ ಎನ್ನುವ ವಾಕ್ಯವು (೧) ಜ್ಞಾನವನ್ನು ಹುಟ್ಟಿಸುತ್ತದೆ ಎಂದರೆ — ಆ ಜ್ಞಾನವು ಸದ್ವಿಷಯಕವು ಎಂದು ಹೇಳಕೂಡದು. ಬಾಧಜ್ಞಾನವೇ ಇಲ್ಲವೆಂದಾಗಬೇಕಾಗುವುದು. ಆದಪ್ರಯುಕ್ತ ಅಸದ್ವಿಷಯಕವೇ ಎಂದು ಹೇಳಬೇಕಾಯಿತು. ಹಾಗಾದರೆ, ಅಸತ್ತಿಗೆ ಪ್ರತೀತಿಯು ಇಲ್ಲವೆನ್ನುವುದು ಹೇಗೆ ಕೂಡುತ್ತದೆ? 'ನರಶಿರಸಿ ವಿಷಾಣಮಸ್ತಿ' ಎನ್ನುವ ವಾಕ್ಯದಿಂದ ಹುಟ್ಟುವ ಪ್ರತೀತಿಯು ಅನಿರ್ವಚನೀಯಾರ್ಥವಿಷಯಕವು. ಎಂದರೆ, ಅನಿರ್ವಚನೀಯ ವಸ್ತುವೇ ಅಪ್ರಾಮಾಣಿಕವಾಗಿರುವುದರಿಂದ ಅದು ನಿರಾಕೃತವಾಗಿದೆ,

(8) ಮತ್ತು ಶಶವಿಷಾಣಾದಿಗಳೂ ಕೂಡ ಅನಿರ್ವಚನೀಯವೇ. ಅಸತ್ತು ಅಲ್ಲವೆಂದರೆ — ಹಾಗಾದರೆ, ಶುಕ್ತಿರಜತಾದಿಗಳಿಗೆ ಯಾವುದರಿಂದ ವೈಲಕ್ಷಣ್ಯವನ್ನು ಹೇಳುವಿರಿ? ನಿರುಪಾಖ್ಯದ್ದೆಶೆಯಿಂದ (ಅಂದರೆ, ಪ್ರತೀತಿಗೆ ಯಾವುದು ವಿಷಯವಾಗುವುದಿಲ್ಲವೋ ಅದರಿಂದ) ವೈಲಕ್ಷಣ್ಯವನ್ನು ಹೇಳುತ್ತೇವೆ ಎಂದರೆ — ಸೋಪಾಖ್ಯತ್ವ (ಪ್ರತೀತಿವಿಷಯತ್ವ) ವೇ ಪ್ರಾಪ್ತವಾಯಿತು. ಶುಕ್ತಿರಜತಾದಿಗಳು ಪ್ರತೀತಿವಿಷಯವು ಎನ್ನುವಲ್ಲಿ ಯಾರೊಬ್ಬನಿಗೂ ವಿವಾದವೇ ಇಲ್ಲದಿರುವುದರಿಂದ ಇಂತಹ ನಿರುಪಾಖ್ಯ ವೈಲಕ್ಷಣ್ಯವನ್ನು ಹೇಳುವ ಪರರ ಪ್ರಯಾಸವು ನಿರರ್ಥಕವೇ ಆಯಿತು. (9) ಈ ವಿಷಯದಲ್ಲಿ ಒಬ್ಬರು ಹೀಗೆ ಹೇಳುವರು. 'ನರಶಿರಸಿ ವಿಷಾಣಮಸ್ತಿ' ಎನ್ನುವ ವಾಕ್ಯದ್ದೆಶೆಯಿಂದ ಮನುಷ್ಯನ ತಲೆಯಲ್ಲಿ ವಿಷಾಣ (ಕೋಡು) ಇದೆ ಎನ್ನುವ ಜ್ಞಾನವು ಹುಟ್ಟುವುದಿಲ್ಲ. ಮತ್ತೆ ವಿಕಲ್ಪವು ಮಾತ್ರ ಹುಟ್ಟುತ್ತದೆ. "ಶಬ್ದಜ್ಞಾನಾನುಪಾತೀ ವಸ್ತುಶೂನ್ಯೋ ವಿಕಲ್ಪಃ" ಶಬ್ದದಿಂದುಂಟಾಗತಕ್ಕ ಜ್ಞಾನಕ್ಕೆ ಸದೃಶವಾದುದು ವಸ್ತುವು ಇಲ್ಲದಿರುವುದು ವಿಕಲ್ಪವು. ಎಂದರೆ — ಈ ವಿಕಲ್ಪವು ಜ್ಞಾನವೇ ಆದರೆ 'ವಸ್ತುಶೂನ್ಯಃ' ಎನ್ನುವುದಕ್ಕೆ ಏನು ಅರ್ಥವು? (೧) ಯಾವುದನ್ನೂ ವಿಷಯೀಕರಿಸದಿರುವುದು ಎಂದರೆ, ಅನುಭವವಿರೋಧವು. 'ನರಶಿರಸಿ ವಿಷಾಣಮಸ್ತಿ' ಎನ್ನುವ ವಾಕ್ಯದಿಂದ ಹುಟ್ಟುವ ವಿಕಲ್ಪವು ಘಟಪಟಾದಿಗಳಂತೆಯೇ ವಿಷಯದಿಂದ ಅಸಂಬದ್ಧವಾಗಿ ಅನುಭೂತವಾಗುವುದಿಲ್ಲವಷ್ಟೆ. ಅಲ್ಲದೆ ಯಾವನು ಮೊಲಕ್ಕೆ ಕೋಡು ಇಲ್ಲ ಎಂದು ತಿಳಿದಿರಲಿಲ್ಲವೋ, ಆತನಿಗೆ 'ಶಶವಿಷಾಣಮಸ್ತಿ' ಎನ್ನುವ ವಾಕ್ಯದಿಂದ ಜ್ಞಾನವು ಬಂದೇಬರುತ್ತದೆ. ಆತನು ಆ ಜ್ಞಾನದಲ್ಲಿ 'ಗೋವಿಷಾಣಮಸ್ತಿ' ಎನ್ನುವ ವಾಕ್ಯದಿಂದ ಹುಟ್ಟುವ ಜ್ಞಾನದಿಂದ ಏನೂ ವಿಶೇಷವನ್ನು ತಿಳಿಯುವುದಿಲ್ಲ. (೨) ವಸ್ತುಶೂನ್ಯಃ ಎನ್ನುವುದಕ್ಕೆ ಅಸತ್ತನ್ನೇ ವಿಷಯೀಕರಿಸುವುದು ಎಂದರ್ಥವಾದರೆ ಅಸತ್ತಿನ ಜ್ಞಾನವದೆ ಎಂದು ಹೇಳುವ ನಮ್ಮ ಇಷ್ಟವು ಸಿದ್ಧವಾಯಿತು. (10) 'ನರಶಿರಸಿ ವಿಷಾಣಮಸ್ತಿ' ಎನ್ನುವ ವಾಕ್ಯವು ಬೋಧಕವೇ ಆಗುವುದಿಲ್ಲ ಎಂದರೆ — ಅನುಭವದಿಂದ ವಿರೋಧವು. ಮತ್ತು 'ವಿಮತಾನಿ ಪದಾನಿ ಸ್ವಾರ್ಥಾನ್ವಯಪ್ರತಿಪತ್ತಿ ಜನಕಾನಿ ಆಕಾಂಕ್ಷಾಸನ್ನಿಧಿಮತ್ಪದತ್ವಾತ್ ಗಾಮಾನಯ ಇತ್ಯಾದಿಪದವತ್' 'ನರಶಿರಸಿ ವಿಷಾಣಮಸ್ತಿ' ಇದು ಮೊದಲಾದ ಪದಗಳು ಸ್ವಬೋಧ್ಯವಾದ ಅರ್ಥಾನ್ವಯ ಜ್ಞಾನವನ್ನು ಹುಟ್ಟಿಸುತ್ತವೆ. ಆಕಾಂಕ್ಷಾಸನ್ನಿಧಿಯುಳ್ಳ ಪದಗಳಾಗಿರುವುದರಿಂದ ಗಾಮಾನಯ = ಗೋವನ್ನು ತಾ ಇದು ಮೊದಲಾದ ಪದಗಳಂತೆಯೇ, ಎನ್ನುವ ಅನುಮಾನವಿರೋಧವೂ ಬರುತ್ತದೆ. (11) 'ನರಶಿರಸಿ ವಿಷಾಣಮಸ್ತಿ' ಎನ್ನುವ ವಾಕ್ಯದಿಂದ ವಿಕಲ್ಪವು ಮಾತ್ರ ಹುಟ್ಟುತ್ತದೆ. ಆ ವಿಕಲ್ಪವನ್ನು ಜ್ಞಾನವೆಂದು ಹೇಳುವುದಿಲ್ಲ. ಬೇರೆಯಾದದ್ದು ಎಂದರೆ ವಾಕ್ಯವು ಬೋಧಕವಾಗುವುದಿಲ್ಲವೆಂದು ಹೇಳಿದಂತೆ ಆಯಿತು. ಆಗ ಅನುಭವವಿರೋಧವೂ ಅನುಮಾನವಿರೋಧವೂ ತಪ್ಪಲಾರದು. (12) ಹಾಗಾದರೆ, ಸರ್ವಸಾಮರ್ಥ್ಯದಿಂದಲೂ ವಿರಹಿತವಾಗಿರುವುದರಿಂದ ಅಸತ್ತಿಗೆ ಕರ್ತೃತ್ವವಾಗಲೀ ಕರ್ಮತ್ವವಾಗಲೀ ಕೂಡುವುದಿಲ್ಲವೆಂದು ಹೇಳಿದರೆ ಹೇಗೆ ಭಾವಧರ್ಮಗಳು ಸತ್ಪದಾರ್ಥಗಳೇ ಧರ್ಮಿಯಾಗಿ ಉಳ್ಳವುಗಳೋ, ಹಾಗೆಯೇ ಅಭಾವರೂಪಧರ್ಮವೂ ಸತ್ಪದಾರ್ಥವೇ ಧರ್ಮಿಯಾಗಿ ಉಳ್ಳದ್ದಾದುದರಿಂದ ಅಸತ್ತಿನಲ್ಲಿ ಸರ್ವಸಾಮರ್ಥ್ಯರಾಹಿತ್ಯರೂಪವಾದ ಅಭಾವಧರ್ಮವೂ ಹೇಗೆ ಕೂಡುತ್ತದೆ? (13) ಹಾಗಾದರೆ, ಅಸತ್ತಿಗೆ ಸಕಲಸಾಮರ್ಥ್ಯರಾಹಿತ್ಯರೂಪವಾದ ಅಭಾವಾಶ್ರಯತ್ವವು ಇದೆ ಎಂದು ಬುದ್ಧಿಯಿಂದಲೇ ವಿಷಯೀಕರಿಸಲ್ಪಡುತ್ತದೆ. ವಾಸ್ತವವಲ್ಲ. ಭಾವಧರ್ಮವಾದಾಗ್ಯೂ ಸದ್ಧರ್ಮಿಕವಾಗಿರುವುದರಿಂದ ಅಸತ್ತಿನಲ್ಲಿ ವಾಸ್ತವವಾದ ಅಭಾವಾಶ್ರಯತ್ವವು ಕೂಡಲಾರದು. ಆದಕಾರಣ ವಿರೋಧವಿಲ್ಲವೆಂದರೆ, ಕರ್ತೃತ್ವಾದಿಗಳೂ ಅಸತ್ತಿನಲ್ಲಿ ಇವೆ ಎಂದು ಬುದ್ಧಿಯಿಂದಲೇ ವಿಷಯೀಕರಿಸ

ಲ್ಪಡುತ್ತವೆ. ವಾಸ್ತವಗಳಲ್ಲ. ಅಲ್ಲವಾದರೆ, ಹುಟ್ಟುವ ಮುಂಚೆ ಘಟವು ಇಲ್ಲದಿರುವುದರಿಂದ 'ಜಾಯತೇ' ಎಂದು ಜನಿಕರ್ತೃತ್ವ ವ್ಯವಹಾರವು ಸರ್ವಜನರಿಗೆ ಸಿದ್ಧವಾದುದು ಬಾರದೆ ಹೋಗ ಬೇಕಾಗುವುದು. ಅಲ್ಲಿಯಾದರೂ ಅದು ಬುದ್ಧಿಯಿಂದ ವಿಷಯೀಕೃತವಾಗಿದೆಎಂದು ಸಮಾಧಾನ ವನ್ನು ಹೇಳಬೇಕು. ಅದು ಅಸತ್ತಿನಲ್ಲಿಯೂ ಸಮವೇ. ಕಾಲಾಂತರದಲ್ಲಿ ಇರತಕ್ಕದ್ದು ಈಗ ಪ್ರತೀತಿಗೆ ಉಪಕಾರಿಯಾಗಲಾರದು. ಆಗ ಇಲ್ಲವೆನ್ನುವುದು ಎರಡುಕಡೆಗಳಲ್ಲಿಯೂ ಸಮವೇ. ಆದಕಾರಣ ಅಸತ್ತಿಗೂ ಪ್ರತೀತಿಯು ಯುಕ್ತವೇ ಆಗುತ್ತದೆ. ಪ್ರತೀತವಾಗುವುದರಿಂದ ಶುಕ್ತಿ ರಜತ ಮೊದಲಾದುದು ಅಸತ್ತಲ್ಲ ಎಂದು ಹೇಳಿದ್ದು ಅಯುಕ್ತವು. ॥ ೨೭ ॥

ಹಾಗಾದರೆ ನಾವು ಅಸತ್ತಿಗೆ ಪ್ರತೀತಿಯೇ ಇಲ್ಲವೆಂದು ಹೇಳುವುದಿಲ್ಲ. ಮತ್ತೆ ಅಪರೋಕ್ಷ (ಪ್ರತ್ಯಕ್ಷ) ವಾಗಿ ಸತ್ತೆಂದು ತೋರುವುದಿಲ್ಲವೆನ್ನುತ್ತೇವೆ. 'ನ ಹಿ ನರಿ ಶೃಂಗಂ ಭಾತಿ ಗವೀವ' ಗೋವಿನಲ್ಲಿ ಕೋಡು ತೋರುವಂತೆಯೇ ಮನುಷ್ಯನಲ್ಲಿ ತೋರುವುದಿಲ್ಲವಷ್ಟೆ. ಎಂದು ಪ್ರಾಚೀ ನರು ಹೇಳುವರು. ಶುಕ್ತಿರಜತಮೊದಲಾದುದಾದರೂ ಅಪರೋಕ್ಷವಾಗಿ ಸತ್ತೆಂದು ತೋರು ತ್ತದೆ. ಆದಕಾರಣ ಹೇಗೆ ಅಸತ್ತಾಗುವುದು ಎಂದರೆ—

**ಮೂ ॥ ಅನ್ಯಥಾತ್ವಮಸತ್ತಸ್ಮಾದ್ಭ್ರಾಂತಾವೇವ ಪ್ರತೀಯತೇ ।**
**ಸತ್ವಸ್ಯಾಸತ ಏವಂ ಹಿ ಸ್ವೀಕಾರ್ಯೈವ ಪ್ರತೀತತಾ ॥ ೨೮ ॥**

ಅ ॥ ಅನ್ಯಥಾತ್ವಂ=ಶುಕ್ತಿರೂಪವಾದ 'ಇದಂ' ಎನ್ನುವ ಅಂಶಕ್ಕೆ ರಜತತ್ವ ಸಂಸರ್ಗ ವಾಗಲೀ ರಜತಕ್ಕೆ ಇದಂತಾ ಸಂಸರ್ಗವಾಗಲೀ ಅದು, ಅಸತ್=ಅಸತ್ತೇ ಆಗಿದೆ. (ಅಪರೋ ಕ್ಷವಾಗಿ ಸತ್ತೆಂದು ಪ್ರತೀತವಾಗುತ್ತದೆ. ಅಪರೋಕ್ಷಾವಭಾಸವು ಅನುಭವ ಸಿದ್ಧವಾಗಿದೆ. ಸತ್ತೆಂದು ತೋರದೆ ಹೋದರೆ ಪ್ರವೃತ್ತಿಯೇ ಕೂಡಲಾರದು. ತಥಾಚ, ಅಸತ್ತಾದುದು ಅಪ ರೋಕ್ಷವಾಗಿ ಸತ್ತೆಂದು ತೋರುವುದಿಲ್ಲ ಎನ್ನುವ ವ್ಯಾಪ್ತಿಯು ಹಿಂದೆ ಹೇಳಿದ ಅನ್ಯಥಾತ್ವ ದಲ್ಲಿಯೇ ಭಗ್ನವಾಗಿರುವುದರಿಂದ ಈ ಹೇತುವಿನಿಂದ ಅಸತ್ವಾಭಾವವನ್ನು ಅನುಮೇಯಿಸಲಿಕ್ಕೆ ಶಕ್ಯವಾಗುವುದಿಲ್ಲ.) (ಅನ್ಯಥಾತ್ವವು ಅಸತ್ತೆಂದಾದರೆ ಹೀಗೆ ಆಗಬಹುದು. ಅದೇ ಹೇಗೆಂದರೆ— ಶುಕ್ತಿರಜತಾದಿ ಸಂಸರ್ಗರೂಪವಾದ ಅನ್ಯಥಾತ್ವಕ್ಕೆ ಅಸತ್ವವನ್ನು ಅಂಗೀಕರಿಸದೆ ಇದ್ದವನ ಅಭಿಪ್ರಾಯವು ಯಾವುದು? ಅನ್ಯಥಾತ್ವವು ೧ ಸತ್ ಎಂದೋ? ೨ ಅನಿರ್ವಚನೀಯವೆಂದೋ? ಒಂದನೇದ್ದನ್ನು ದೂಷಿಸುತ್ತಾರೆ.) ತಸ್ಮಾತ್=ಅಸತ್ವವಿದ್ದ ಪ್ರಯುಕ್ತವೇ, (ಅದು) ಭ್ರಾಂತಾ ನೇವ=ಭ್ರಮೆಯಲ್ಲಿಯೇ, ಪ್ರತೀಯತೇ=ತೋರುತ್ತದೆ. (ಸತ್ತೆಂದಾದರೆ ಶುಕ್ತಿಕಾದಿಗಳಂತೆಯೇ ಭ್ರಾಂತಿಯಿಲ್ಲದಿರುವಾಗಲೂ ಪ್ರತೀತವಾಗುವುದು. ಹೀಗೆ ಇಲ್ಲ. ಆದಪ್ರಯುಕ್ತ ಸತ್ತಲ್ಲ. ಸಮಗ್ರಕಾರಣಗಳಿರುವಾಗ ಕಾರ್ಯವು ಹುಟ್ಟುವುದಿಲ್ಲವೆನ್ನುವುದು ಯುಕ್ತವಲ್ಲ.)

("ಅಸತ್ತು ಅಪರೋಕ್ಷವಾಗಿ ಸತ್ತೆಂದು ಪ್ರತೀತವಾಗುವುದಿಲ್ಲ" ಎನ್ನುವ ವ್ಯಾಪ್ತಿಗೆ ಜ್ಞಾನಾಂತರದಲ್ಲಿಯೂ ವ್ಯಭಿಚಾರವನ್ನು ತೋರಿಸುತ್ತಾರೆ.)

ಏವಂ=ಹೇಗೆ, ಅಸತಃ=ಅನ್ಯಥಾತ್ವಕ್ಕೆ, ಪ್ರತೀತತಾ=(ಅಪರೋಕ್ಷವಾಗಿ ಸತ್ತೆಂದು)ಪ್ರತೀ ತಿಯು, ಸ್ವೀಕಾರ್ಯಾ=ಸ್ವೀಕರಿಸತಕ್ಕದ್ದೋ, ಏವಂ=ಹೀಗೆಯೇ, ಅಸತಃ=ಅಸತ್ತಾದ, ಸತ್ವ ಸ್ಯಾಪಿ=ಸತ್ತಿಗೂ ಕೂಡ, ಪ್ರತೀತತಾ=ವಿಶಿಷ್ಟ ಪ್ರತೀತಿಯು, ಸ್ವೀಕಾರ್ಯೈವ=ಸ್ವೀಕರಿಸ ತಕ್ಕದ್ದೇ. (ತಥಾಚ, ಯಾವುದು ಅಸತ್ತೋ ಅದು ಅಪರೋಕ್ಷವಾಗಿ ಸತ್ತೆಂದು ತೋರು ವುದಿಲ್ಲ ಎನ್ನುವ ವ್ಯಾಪ್ತಿಗೆ ಸತ್ವದಲ್ಲಿ ವ್ಯಭಿಚಾರವು ಪ್ರಾಪ್ತವಾಯಿತು.)

**ತಾ ||** (1) ರಜತಮೊದಲಾದುದನ್ನು ಅನಿರ್ವಚನೀಯವೆಂದು ತಿಳಿಯುವವರೂ ಇದಂ ರಜತಗಳಿಗೆ ತಾದಾತ್ಮ್ಯವು ತೋರುತ್ತದೆಂದು ಅಂಗೀಕರಿಸಲೇಬೇಕು. **"ಅಧ್ಯಾಸೋ ನಾಮಾತಸ್ಮಿನ್ ತದಿತಿ ಪ್ರತ್ಯಯಃ"** ಅದಲ್ಲದಿರುವಲ್ಲಿ ಅದು ಎನ್ನುವ ಜ್ಞಾನವು ಅಧ್ಯಾಸವು ಎಂದು ಹೇಳಿರುವರು. ಹೀಗಾದರೆ ಅನ್ಯಥಾ ಖ್ಯಾತಿಯನ್ನು ಒಪ್ಪಿದಂತೆ ಆಯಿತೆಂದಲ್ಲ. ಅಧಿಷ್ಠಾನವು (ಶುಕ್ತಿಯು) ಸಂಸೃಷ್ಟರೂಪದಿಂದ ಮಿಥ್ಯೆಯಾದಾಗ್ಯೂ ಸ್ವರೂಪತಃ ಸತ್ಯವೇ ಆಗಿದೆ. ಅಧ್ಯಸ್ತವು (ರಜತವು) ಸಂಸೃಷ್ಟರೂಪದಿಂದಲೂ ಸ್ವರೂಪದಿಂದಲೂ ಮಿಥ್ಯೆಯಾಗಿದೆ ಎಂದು ಮಾಯಾವಾದಿಗಳು ಅಂಗೀಕರಿಸಿರುವರು. **'ಸತ್ಯಾನೃತೇ ಮಿಥುನೀಕೃತ್ಯ ಲೋಕವ್ಯವಹಾರಃ'** ಸತ್ಯ ಮಿಥ್ಯೆಗಳನ್ನು ಪರಸ್ಪರ ಅಧ್ಯಸ್ತಗಳನ್ನಾಗಿ ಮಾಡಿ ಲೋಕವ್ಯವಹಾರವು ಎಂದು ಹೇಳಿರುವರು. ಅನ್ಯಥಾ ಖ್ಯಾತಿವಾದಿಗಳು ಅಧಿಷ್ಠಾನ, ಆರೋಪ್ಯ ಎರಡಕ್ಕೂ (ಅಧಿಷ್ಠಾನವು ಸ್ವರೂಪದಿಂದ ಎಲ್ಲಾ ವಾದಿಗಳ ಮತದಲ್ಲಿಯೂ ಸತ್ಯವೇ. ಬೇರೆಕಡೆ ಇದ್ದದ್ದಕ್ಕೇನೇ ಬೇರೆಕಡೆ ಆರೋಪವೆಂದಂಗೀಕರಿಸಿರುವುದರಿಂದ ಆರೋಪ್ಯವೂ ಕೂಡ ಸ್ವರೂಪತಃ ಸತ್ಯವೇ.) ಸಂಸೃಷ್ಟರೂಪದಿಂದಲೇ ಅಸತ್ಯತ್ವವು ಸ್ವರೂಪದಿಂದಲಾದರೂ ಸತ್ವವೇ ಎಂದಂಗೀಕರಿಸಿರುವರು. ಇದಂ (ಶುಕ್ತಿ) ರಜತಗಳಿಗೆ ತಾದಾತ್ಮ್ಯ (ಅಭೇದ)ವೇ ತೋರದಿದ್ದರೆ ಪ್ರವೃತ್ತ್ಯಾದಿಗಳೇ ಕೂಡದೆ ಹೋಗುವವು. ಪ್ರತೀಯಮಾನ ಪದಾರ್ಥಗಳ ಮಧ್ಯದಲ್ಲಿ ಅನ್ಯಥಾತ್ವವಾದರೂ ಅಸತ್ತೇ ಸರಿ. (2) ರಜತವು ಅನಿರ್ವಚನೀಯವೆಂದು ತಿಳಿಯುವವರ ಮತದಲ್ಲಿಯೂ ಅದು (೧) ಅನಿರ್ವಚನೀಯವೆಂದು ತೋರುತ್ತದೋ? (೨) ಅಸತ್ತೆಂದು ತೋರುತ್ತದೋ? (೩) ಸತ್ತೆಂದು ತೋರುತ್ತದೋ? ೧ ಅನಿರ್ವಚನೀಯವೆಂದಾಗಲೀ, ೨ ಅಸತ್ತೆಂದಾಗಲೀ ತೋರುತ್ತದೆಂದೆನ್ನಕೂಡದು. ಹಾಗೆ ಪ್ರತೀತಿಯಿಲ್ಲವು. ಹಾಗೆ ಪ್ರತೀತಿಯಿದ್ದರೆ ಪ್ರವೃತ್ತಿಯಿಲ್ಲವೆಂದಾಗಬೇಕಾಗುವುದು. ಯಾವಾಗಲಾದರೂ ಅಸತ್ತಾಗಲೀ, ಪ್ರಾತಿಭಾಸಿಕವಾಗಲೀ, ಅರ್ಥಕ್ರಿಯೆಗಳನ್ನು ಮಾಡುವುದಾಗಿ ತೋರಲಿಲ್ಲ. ಅದು ಅರ್ಥಕ್ರಿಯೆಯನ್ನು ಮಾಡುವುದಾಗಿ ಕಂಡಿದ್ದರೆ ಅಸತ್ವಾದಿಗಳನ್ನು ತಿಳಿದೂ ಪ್ರವರ್ತಿಸಬಹುದಿತ್ತು. ಆದಪ್ರಯುಕ್ತ ಸತ್ತೆಂದೇ ಪ್ರತೀತವಾಗುತ್ತದೆ ಎಂದೇ ಸ್ವೀಕರಿಸಬೇಕು. ಈ ರಜತವು ಸತ್ತೆಂದೇ ಅನುಭವವು. ಹೀಗಾದರೆ ಪ್ರವೃತ್ತಿಯೂ ಕೂಡುತ್ತದೆ. (3) ರಜತಜ್ಞಾನಮಾತ್ರದಿಂದ ಪ್ರವೃತ್ತಿಯೆಂದು ಹೇಳಕೂಡದು. 'ಸದಿದಂ ರಜತಂ' ಎಂದು ಹೇಳಿದ ಅನುಭವ ವಿರೋಧವು ಬರುತ್ತದೆ. ವಿಧಿನಿಷೇಧಗಳನ್ನು ತಿರಸ್ಕರಿಸಿ ಜ್ಞಾನವೂ ಕೂಡಲಾರದು. ತಥಾಚ, ಆ ಸತ್ವವು ಸತ್ತೋ, ಅಸತ್ತೋ, ಅನಿರ್ವಚನೀಯವೋ? ಅನಿರ್ವಚನೀಯತ್ವದಿಂದ ವಿರೋಧವಿದ್ದುದರಿಂದ ಆ ಸತ್ವವು ಸತ್ತೆಂದೆನ್ನ ಕೂಡದು. ಯಾವುದರ ಸತ್ವವು ಸತ್ತೋ ಅದು ಅನಿರ್ವಾಚ್ಯವು, ಎಂದು ಕೂಡಲಾರದು. ಸತ್ವವು ಅಸತ್ತೆಂದೆನ್ನ ಬಹುದು. ಹೇಗೆ ಅಸತ್ತಾದ ಅನ್ಯಥಾತ್ವಕ್ಕೆ ಅಪರೋಕ್ಷವಾಗಿ ಸತ್ತೆಂದು ಪ್ರತೀತಿಯನ್ನು ಸ್ವೀಕರಿಸಬೇಕೋ ಹಾಗೆಯೇ ಅಸತ್ತಾದ ಸತ್ವಕ್ಕೂ ವಿಶಿಷ್ಟಪ್ರತೀತಿಯನ್ನು ಸ್ವೀಕರಿಸಬೇಕು. ಅಂತೂ 'ಅಸತ್ತಾದುದು ಸತ್ತೆಂದು ಅಪರೋಕ್ಷವಾಗಿ ತೋರುವುದಿಲ್ಲ' ಎನ್ನುವ ವ್ಯಾಪ್ತಿಗೆ ಸತ್ವದಲ್ಲಿ ವ್ಯಭಿಚಾರವು ಬರುವುದರಿಂದ ರಜತವು ಸತ್ತೆಂದು ಅಪರೋಕ್ಷವಾಗಿ ತೋರುವುದರಿಂದ ಅಸತ್ತಲ್ಲವೆಂದು ಸಾಧಿಸಲಿಕ್ಕೆ ಬರುವುದಿಲ್ಲ. || ೨೮ ||

(1) ಮಾಯಾವಾದಿಗಳು ಶಂಕಿಸುವರು? ಅಪರೋಕ್ಷವಾಗಿಯೂ ಸತ್ತಾಗಿಯೂ ಪ್ರತೀತತ್ವವು (ತೋರುತ್ತದೆ ಎನ್ನುವುದು) ಅಸತ್ತಾದ ಶುಕ್ತಿರೂಪವಾದ ಇದಮಂಶಕ್ಕೆ ಯಾವ ರಜತತ್ವಸಂಸರ್ಗವೋ, ರಜತದಲ್ಲಿ ಇದಂತಾಸಂಸರ್ಗವೋ ಆ ಉಭಯರೂಪವಾದ, ಅನ್ಯಥಾತ್ವದಲ್ಲಿ ಇದ್ದಪ್ರಯುಕ್ತ ವ್ಯಭಿಚಾರವೆಂದು ಯಾವುದು ಹೇಳಿಯದೋ ಅದು ಅಯುಕ್ತವು. ಆ ಅನ್ಯಥಾ

ತ್ವಕ್ಕೆ ಅಸತ್ವವಿಲ್ಲ. ಶುಕ್ತಿಯಲ್ಲಿರುವ ಇದಂತ್ವವು ಸತ್ಯವೇ. ಶುಕ್ತಿಯಲ್ಲಿ ರಜತವು ಹೇಗೆ ಅನಿರ್ವಚನೀಯವೇ ಆರೋಪಿಸಲ್ಪಟ್ಟದೋ ಹಾಗೆಯೇ ಶುಕ್ತಿಯಲ್ಲಿರುವ ಇದಂತಾಸಂಸರ್ಗವೂ ರಜತದಲ್ಲಿ ಅನಿರ್ವಚನೀಯವೇ ಆರೋಪಿತವು. ಹೀಗೆಯೇ ರಜತದಲ್ಲಿ ರಜತತ್ವವೂ ಅನಿರ್ವಚನೀಯವು. ಇಂದಪದಾರ್ಥದಲ್ಲಿ ರಜತತ್ವಸಂಸರ್ಗವೂ ಅನಿರ್ವಚನೀಯವೇ ಆರೋಪಿತವಾಗಿದೆ. (2) ಮತ್ತು ರಜತದಲ್ಲಿರತಕ್ಕ ಸತ್ವವು ಅಸತ್ತೇ ಅಪರೋಕ್ಷವಾಗಿ ಸತ್ತೆಂದು ತೋರುತ್ತದೆ ಎಂದು ಹೇಳಲ್ಪಟ್ಟದೆ. ಅದು ಅಯುಕ್ತವು. ಶುಕ್ತಿಯಲ್ಲಿರುವ ಸತ್ವವೇ ರಜತದಲ್ಲಿ ತೋರುತ್ತದೆ. ಅದು ಹೊರತು ಬೇರೊಂದು ಸತ್ವವು ರಜತದಲ್ಲಿಲ್ಲ. (3) ಮತ್ತು ಶುಕ್ತಿರಜತದಲ್ಲಿ ತೋರುವ ಸತ್ವವು ಸತ್ತೂ ಅಲ್ಲ. ಅಸತ್ತೂ ಅಲ್ಲ. ಮತ್ತು ಶುಕ್ತಿಯಲ್ಲಿರುವ ಇದಂತಾಸಂಸರ್ಗವು ರಜತದಲ್ಲಿ ಹೇಗೆ ಅನಿರ್ವಚನೀಯವೇ ತೋರುತ್ತದೋ, ಹಾಗೆಯೇ ಅವುಗಳ ಸತ್ತಾಸಂಸರ್ಗವು ಅನಿರ್ವಚನೀಯವಾದುದೇ ತೋರುವುದು, ಎಂಬುವ ಮಾಯಾವಾದಿಗಳ ಪಕ್ಷವನ್ನು ಆಶಂಕಿಸಿ ಪರಿಹರಿಸುತ್ತಾರೆ —

**ಮೂ ॥ ತಸ್ಯಾನಿರ್ವಚನೀಯತ್ವೇ ಸ್ಯಾದೇವ ಹ್ಯನವಸ್ಥಿತಿಃ ॥ ೨೯ ॥**

ಅ ॥ ತಸ್ಯ=ಇದಂತಾ ರಜತತ್ವಗಳ ಇತರೇತರ ಸಂಸರ್ಗಕ್ಕೆ (ಅಂದರೆ ಇದಂತಾಸಂಸರ್ಗವು ರಜತದಲ್ಲಿಯೂ, ರಜತತ್ವಸಂಸರ್ಗವು ಇದಮಾಸ್ಪದದಲ್ಲಿಯೂ ಹೀಗೆ ಪರಸ್ಪರ ಸಂಸರ್ಗವು.) ಹಾಗೆಯೇ ರಜತದಲ್ಲಿ ಶುಕ್ತಿಕಾಸತ್ವ ಸಂಸರ್ಗಕ್ಕೆ, ಅನಿರ್ವಚನೀಯತ್ವೇ=ಅನಿರ್ವಚನೀಯತ್ವವು ಅಂಗೀಕರಿಸಲ್ಪಡುತ್ತಿರಲು, ಹಿ=ಯಾವಕಾರಣದಿಂದ, ಅನವಸ್ಥಿತಿಃ=ಅನವಸ್ಥೆಯು, ಅಂದರೆ, ಅನಿರ್ವಚನೀಯವಾದ ಸತ್ವವು ಅನಿರ್ವಚನೀಯವೆಂದೇ ತೋರಿದರೆ ಪ್ರವೃತ್ತಿಯು ಕೂಡದಿರುವಪ್ರಯುಕ್ತ ವ್ಯಾವಹಾರಿಕವೆಂದು ತೋರುತ್ತದೆ ಎಂದು ಹೇಳಬೇಕು. ಆ ವ್ಯಾವಹಾರಿಕತ್ವವು ಸತ್ ಅಸತ್ ಎಂದು ಹೇಳಿದರೆ ಹಿಂದಿನ ದೋಷಗಳು ಬರುವುದರಿಂದ ಅನಿರ್ವಚನೀಯವೆಂದು ಹೇಳಬೇಕು. ಅದೂ ಅನಿರ್ವಚನೀಯವೆಂದು ತೋರಿದರೆ ಪ್ರವೃತ್ತಿಯಾಗದಿರುವುದರಿಂದ ವ್ಯಾವಹಾರಿಕವೆಂದೇ ತೋರುತ್ತದೆ. ಹೀಗೆ ಅನಿರ್ವಚನೀಯ ವ್ಯಕ್ತಿಪರಂಪರೆಯು ಪರ್ಯವಸಿತವಾಗದಿರುವುದರಿಂದ ಅಪ್ರಾಮಾಣಿಕ ಅನಂತ ಸಜಾತೀಯ ಪದಾರ್ಥಕಲ್ಪನಾ ವಿಶ್ರಾಂತ್ಯಭಾವರೂಪವಾದ ಅನವಸ್ಥೆಯು, ಸ್ಯಾತ್= ಬರುವುದೋ, (ಆದಕಾರಣ ಎರಡನ್ನೂ) ಅಸದೇವ= ಅಸತ್ತೆಂದೇ, (ಅಂಗೀಕರಿಸಬೇಕು.) (ಬೇರೆ ದೂಷಣವನ್ನೂ ಹೇಳುತ್ತಾರೆ,) ತಸ್ಯ= ಆ ಸತ್ವಕ್ಕೆ, ಅನಿರ್ವಚನೀಯತ್ವೇ= ಪ್ರಾತೀತಿಕತ್ವವು ಅಂಗೀಕೃತವಾಗುತ್ತಿರಲು ಹಾಗೆಯೇ ಪ್ರತೀತಿಯಾಗುವುದಾದರೂ ಪ್ರಾತಿಭಾಸಿಕತ್ವ,ವ್ಯಾವಹಾರಿಕತ್ವಗಳು ತೋರದೆ ರಜತ ಸ್ವರೂಪಮಾತ್ರ ತೋರುವುದಾದರೂ, ಅನವಸ್ಥಿತಿಃ=ಪ್ರವೃತ್ತಿಗೆ ಅವ್ಯವಸ್ಥೆಯು, ಸ್ಯಾದೇವ= ಆಗಲೇ ಬಹುದು. ವ್ಯಾವಹಾರಿಕತ್ವಾದ್ಯಾಕಾರದಿಂದ ಪ್ರತೀತವಾದರೆ ಪೂರ್ವದಂತೆ ಅನವಸ್ಥೆಯು ಬರಲೇ ಬಹುದು. ಆದಪ್ರಯುಕ್ತ ಆಕಾಶಾದಿ ಪ್ರಪಂಚಕ್ಕೆ ಅನಿರ್ವಚನೀಯತ್ವವು ಸಿದ್ಧವಾಗಲಿಲ್ಲ.

ತಾ ॥ ಶುಕ್ತಿರಜತಾದಿಗಳಲ್ಲಿ ಸತ್ತೆಂದು ತೋರುವುದೇ ಸತ್ವವು. ಅರ್ಥದಲ್ಲಿರತಕ್ಕ ಸತ್ವವಲ್ಲವೆಂದು ಕೆಲವರು ಅನ್ನುವರು. ಶುಕ್ತಿರಜತಾದಿಗಳಲ್ಲಿ ಅವಿದ್ಯೋಪಾಧಿಕವಾದ ಪ್ರಾತಿಭಾಸಿಕ ಸತ್ವವಿದೆ ಎಂದು ಕೆಲವರು ಅನ್ನುವರು. ಅವುಗಳಲ್ಲಿ ಎರಡನೇ ಮತವನ್ನು ಅನುಸರಿಸಿ ಮಾಯಾವಾದಿಗಳಲ್ಲಿ ಏಕದೇಶಿಗಳು ಶಂಕಿಸುವರು. 'ಸದಿದಂ ರಜತಂ' ಎಂದು ತೋರತಕ್ಕ ಸತ್ವವು ಅಸತ್ತಲ್ಲ. ಆದಪ್ರಯುಕ್ತ 'ಅಸಚ್ಚೇನ್ನ ಪ್ರತೀಯೇತ' ಎನ್ನುವ ವ್ಯಾಪ್ತಿಗೆ ಭಂಗವಿಲ್ಲ.

ಮತ್ತೆ ಬ್ರಹ್ಮನಲ್ಲಿ ಪಾರಮಾರ್ಥಿಕ ಸತ್ವವಿದ್ದಂತೆಯೂ ಆಕಾಶಾದಿಗಳಲ್ಲಿ ಮಾಯೋಪಾಧಿಕವಾದ ವ್ಯಾವಹಾರಿಕ ಸತ್ವವಿದ್ದಂತೆಯೂ ಶುಕ್ತಿರಜತಾದಿಗಳಲ್ಲಿಯೂ ಅವಿದ್ಯೋಪಾಧಿಕವಾದ ಪ್ರಾತಿಭಾಸಿಕ ಸತ್ವವಿದ್ದೇ ಇದೆ, ಎಂದರೆ, ಅದು ಅಯುಕ್ತವು. ಸತ್ ಮೂರು ಪ್ರಕಾರವಿರುವುದಿಲ್ಲ ಎಂದು ಮೊದಲೇ ಸಮರ್ಥಿಸಿರುತ್ತೇವೆ. ॥ ೨೯ ॥

**ಸ. ರ. ವಿ**— ಹೀಗೆ ಬಂಧವು ಆರೋಪಿತವೆನ್ನುವುದನ್ನು ದೂಷಿಸಿ ಈಗ ವಿಷಯ ಪ್ರಯೋಜನಾದಿಗಳು ಕೂಡುವುದಿಲ್ಲವೆಂದು ಹೇಳುವುದಕ್ಕಾಗಿ ಅಜ್ಞಾನವು ಕೂಡುವುದಿಲ್ಲ ವೆನ್ನುತ್ತಾರೆ.

**ನ್ಯಾಯಸುಧಾ**— ಈ ಪ್ರಕಾರ ಬಂಧವು ಆರೋಪಿತವೆಂದು ಹೇಳಿದ್ದು ಪ್ರಕೃತಾನುಪಯುಕ್ತವು ಅಯುಕ್ತವೂ ಆಗಿದೆ ಎಂದು ಹೇಳಿಯಾಯಿತು. ಈಗಲಾದರೂ ಪರರು ಬಂಧಕ್ಕೆ ಮಿಥ್ಯಾಭೂತವಾದ ಅಜ್ಞಾನವು ಉಪಾದಾನಕಾರಣವೆಂದು ಹೇಳಿದ್ದೂ ಅಯುಕ್ತವು ಎಂದಭಿಪ್ರಾಯವುಳ್ಳವರಾಗಿ ಪರರ ಮತದಲ್ಲಿ ಅಜ್ಞಾನವು ಕೂಡುವುದಿಲ್ಲವೆನ್ನುತ್ತಾರೆ—

**ಮೂ ॥ ನಿರ್ವಿಶೇಷೇ ಸ್ವಯಂಭಾತೇ ಕಿಮಜ್ಞಾನಾವೃತಂ ಭವೇತ್ ।**
**ಮಿಥ್ಯಾವಿಶೇಷೋಽಪ್ಯಜ್ಞಾನಸಿದ್ಧಿಮೇವ ಹ್ಯಪೇಕ್ಷತೇ ॥ ೩೦ ॥**

ಅ ॥ ನಿರ್ವಿಶೇಷೇ ಸ್ವಯಂ ಭಾತೇ=ಬ್ರಹ್ಮನು ನಿರ್ವಿಶೇಷನೂ ಸ್ವಪ್ರಕಾಶರೂಪನೂ ಆಗಿರುವುದರಿಂದ, ಅಜ್ಞಾನಾವೃತಂ=ಬ್ರಹ್ಮನಲ್ಲಿ ಆವರಣವಾಗಿ ಅಂಗೀಕೃತವಾದ ಅಜ್ಞಾನದಿಂದ ಆವೃತವಾದುದು, ಕಿಂ = ಯಾವುದು, ಭವೇತ್=ಆಗುವುದು. ಹಿ=ಯಾವ ಕಾರಣದಿಂದ, ಮಿಥ್ಯಾವಿಶೇಷೋಽಪಿ=ಮಿಥ್ಯಾಭೂತವಾದ ವಿಶೇಷವೂ ಕೂಡ, ಅಜ್ಞಾನಸಿದ್ಧಿಮೇವ=ಅಜ್ಞಾನದ ಸಿದ್ಧಿಯನ್ನೇ, ಅಪೇಕ್ಷತೇ=ಅಪೇಕ್ಷಿಸುತ್ತದೆ.

**ತಾ ॥ ಸ. ರ. ವಿ**— (1) ಆತ್ಮನು ಸ್ವಯಂಪ್ರಕಾಶರೂಪನಾದುದರಿಂದ ಅವನಿಗೆ ಅಜ್ಞಾನವು ಆವರಕವಾಗಲಾರದು. ನಿರ್ವಿಶೇಷತ್ವವನ್ನಂಗೀಕರಿಸಿರುವುದರಿಂದ, ಆತ್ಮವಿಶೇಷವಾದ ಬ್ರಹ್ಮೈಕ್ಯಾದಿಗಳಿಗೂ ಅಜ್ಞಾನವು ಆವರಕವಾಗಲಾರದು. ಆರೋಪಿತವಾದ ವಿಶೇಷಕ್ಕೂ ಕೂಡಲಾರದು. ಅಜ್ಞಾನವು ಸಿದ್ಧಿಸುವುದಕ್ಕಿಂತ ಮೊದಲು ಆರೋಪಿತವಿಶೇಷವೇ ಕೂಡಲಾರದು. ಇಂತಹ ಆವರಕವಾದ ಅಜ್ಞಾನವು ಜಡಕ್ಕೂ ಕೂಡಲಾರದು. ಅದು ಅಪ್ರಕಾಶಸ್ವರೂಪವಾಗಿರುವುದರಿಂದ ಆವರಣವು ವ್ಯರ್ಥವು. ಆದಪ್ರಯುಕ್ತ ಹೇಗೂ ಬ್ರಹ್ಮನಿಗೆ ಅಜ್ಞಾನವು ಕೂಡದಿರುವುದರಿಂದ ಮಾಯಾವಾದಿಗಳಿಗೆ ಜಿಜ್ಞಾಸಾರಂಭವು ವ್ಯರ್ಥವು.

**ನ್ಯಾಯಸುಧಾ**— (1) ಪರರು ಯಾವುದೊಂದು ಭಾವರೂಪ ಅಜ್ಞಾನವನ್ನು ಅಂಗೀಕರಿಸಿರುವರೋ, ಆ ಅಜ್ಞಾನವು ಜೀವನನ್ನಾಶ್ರಯಿಸಿಕೊಂಡಿದೆ ಎಂದು ಹೇಳಕೂಡದು. ಅದನ್ನು ನಿರಾಕರಿಸುವೆವು. ಜಡವು ಅಜ್ಞಾನದಿಂದ ಕಲ್ಪಿಸಲ್ಪಟ್ಟಪ್ರಯುಕ್ತ ಅನ್ಯೋನ್ಯಾಶ್ರಯ ದೋಷವು ಬರುವುದರಿಂದ ಜಡಕ್ಕೆ ಎಂದೂ ಹೇಳಕೂಡದು. (2) ಬ್ರಹ್ಮನನ್ನಾಶ್ರಯಿಸಿಕೊಂಡಿದೆ ಎಂದರೆ- ಬ್ರಹ್ಮಾಶ್ರಿತವಾದ ಅಜ್ಞಾನವು ಬ್ರಹ್ಮಜ್ಞಾನಕ್ಕೆ ಪ್ರತಿಬಂಧಕವಾಗಿದೆ ಎಂದರೆ ಬ್ರಹ್ಮಾಶ್ರಿತವಾದ ಬ್ರಹ್ಮನನ್ನಾವರಿಸಿಕೊಂಡಿರುವ ಅಜ್ಞಾನಕ್ಕೆ ವಿಷಯುವನ್ನು ಹೇಳಬೇಕು. ಆವರಣವಾದ ಪಟಲ (ಪರೆ) ಮೊದಲಾದವುಗಳಾದರೂ ಎಲ್ಲಿಯಾದರೂ ಆಶ್ರಿತವಾಗಿ ಯಾವುದಾದರೂ ವಿಷಯದಲ್ಲಿ ಯಾವುದನ್ನಾದರೂ ಪ್ರತಿಬಂಧಿಸುತ್ತದೆಂದು ಉಪಲಬ್ಧವಾಗಿದೆ. ಅದರಲ್ಲಿ ಬ್ರಹ್ಮನಿಗೆ ಆವರಣಭೂತವಾದ ಅಜ್ಞಾನದಿಂದ ಬ್ರಹ್ಮನಲ್ಲಿರುವ (೧) ಯಾವುದಾದರೂ ಧರ್ಮವಾಗಲೀ,

(೨) ಸ್ವರೂಪವೇ ಆಗಲೀ, (೩) ಬೇರೆ ಯಾವುದೇ ಆಗಲೀ ಆವರಿಸಲ್ಪಡುತ್ತದೆ ಎಂದೆನ್ನಬೇಕು. ಪ್ರಾಥಮಿಕ ಎರಡು ಪಕ್ಷಗಳನ್ನು 'ನಿರ್ವಿಶೇಷೇ' ಇತ್ಯಾದಿಗಳಿಂದ ನಿರಾಕರಿಸಿದರು. ಹೇಗೆಂದರೆ-ಬ್ರಹ್ಮನಲ್ಲಿ ಆವರಕವಾಗಿ ಅಂಗೀಕೃತವಾದ ಅಜ್ಞಾನದಿಂದ ಯಾವುದೂ ಆವೃತವಾಗಲಾರದು. (೧) ಪರರು ಬ್ರಹ್ಮನು ನಿರ್ವಿಶೇಷನೆಂದಂಗೀಕರಿಸಿರುವುದರಿಂದ ಧರ್ಮವು ಆವೃತವಾಗಲಾರದು. (೨) ಸ್ವಯಂಪ್ರಕಾಶರೂಪವೆಂದು ನಿತ್ಯಸಿದ್ಧವಾಗಿರುವುದರಿಂದ ಸ್ವರೂಪವೂ ಆವೃತವಾಗಲಾರದು. ಪ್ರಕಾಶಿಸುವುದೂ ಆವೃತವೂ ಆಗಿದೆ ಎನ್ನುವುದು ಕೂಡಲಾರದು. (3) ಬ್ರಹ್ಮಾವರಕವಾದ ಅಜ್ಞಾನದಿಂದ ಸ್ವರೂಪವು ಆವೃತವಾಗದಿದ್ದರೂ ಬ್ರಹ್ಮಧರ್ಮಗಳಾದ ಅದ್ವಿತೀಯತ್ವಾದಿಗಳು ಆವೃತವಾಗುವವು. ಪಾರಮಾರ್ಥಿಕವಾಗಿ ಬ್ರಹ್ಮನಿಗೆ ವಿಶೇಷಗಳಿಲ್ಲದಿದ್ದರೂ ಮಿಥ್ಯಾಭೂತವಾದ ಧರ್ಮವನ್ನಂಗೀಕರಿಸಿರುವೆವು. ಎಂದರೆ — 'ಮಿಥ್ಯಾವಿಶೇಷೋಽಪಿ' ಅಂದರೆ — ಅದ್ವಿತೀಯತ್ವಾದಿ ಧರ್ಮಗಳು ಅಜ್ಞಾನಾವೃತವಾಗುವುವು. ಸ್ವರೂಪತಃ ಅಲ್ಲ. ಸ್ವರೂಪವು ಆವರಣಕ್ಕೆ ವಿಷಯವಾಗುವುದಿಲ್ಲ. ಮಿಥ್ಯಾಭೂತವಾದ ಧರ್ಮತ್ವದಿಂದ ಅಜ್ಞಾನಾವರಣವಿಷಯತ್ವವನ್ನಂಗೀಕರಿಸಿದರೆ ಅನ್ಯೋನ್ಯಾಶ್ರಯವು ಬರುವುದು. ಅಜ್ಞಾನ ಹೊರತು ಮಿಥ್ಯೆಯಾದುದೆಲ್ಲವೂ ಅಜ್ಞಾನಕಾರ್ಯವೆಂದಂಗೀಕರಿಸಿರುವುದರಿಂದ ಮಿಥ್ಯಾಧರ್ಮವು ಅಜ್ಞಾನಸಿದ್ಧಿಯನ್ನಪೇಕ್ಷಿಸುತ್ತದೆ. ಅಜ್ಞಾನವಾದರೂ ಮಿಥ್ಯಾಭೂತವಾದ ವಿಶೇಷವನ್ನವೇಕ್ಷಿಸುತ್ತದೆ. ನಿರ್ವಿಷಯವಾದ ಆವರಣವೇ ಕೂಡಲಾರದು. (4) ಬ್ರಹ್ಮವ್ಯತಿರಿಕ್ತವಾದುದು ಬ್ರಹ್ಮಾವರಕವಾದ ಅಜ್ಞಾನದಿಂದ ಆವೃತವೆನ್ನುವುದೂ ಅಯುಕ್ತವು. ಅದೂ ಮಿಥ್ಯೆಯಾದುದರಿಂದ ಅಜ್ಞಾನದ ಅಪೇಕ್ಷೆಯಿದ್ದುದರಿಂದ ಅನ್ಯೋನ್ಯಾಶ್ರಯವು. (5) ಜೀವನೂ ಅಜ್ಞಾನಕಲ್ಪಿತನಾದಪ್ರಯುಕ್ತ ಅನ್ಯೋನ್ಯಾಶ್ರಯ ದೋಷವು ಬರುವುದರಿಂದಲೇ ಅವಿದ್ಯೆಯು ಜೀವನನ್ನು ಪ್ರತಿಬಂಧಿಸುತ್ತದೆ ಎನ್ನುವುದೂ ಅಯುಕ್ತವು. || ೩೦ ||

**ನ್ಯಾಯಸುಧಾ** — ಹಾಗಾದರೆ, ಬ್ರಹ್ಮನಿಗಾಗಲೀ ಜೀವನಿಗೆ ಆಗಲೀ ಅಜ್ಞಾನವು ಆವರಣವಾಗುವುದು ಬೇಡ. ಜಡಕ್ಕೆ ಆವರಣವಾಗುವುದು ಎನ್ನುವುದನ್ನು ನಿರಾಕರಿಸುತ್ತಾರೆ.

**ಮೂ ||** **ನ ಚಾವರಣಮಜ್ಞಾನಮಸತ್ಯೇ ತೇನ ಚೇಷ್ಯತೇ |**
**ಅಪ್ರಕಾಶಸ್ವರೂಪತ್ವಾಜ್ಜಡೇಽಜ್ಞಾನಂ ನ ಮನ್ಯತೇ ||**
**ಅಜ್ಞಾನಾಭಾವತಶ್ಶಾಸ್ತ್ರಂ ಸರ್ವಂ ವ್ಯರ್ಥೀಭವಿಷ್ಯತಿ || ೩೧ ||**

**ಅ ||** ಜಡೇ=ಜಡವು, ಅಸತ್ಯೇ=ಅಯಥಾರ್ಥವಾಗಿರುವುದರಿಂದಲೇ ಅದಕ್ಕೆ, ಅಜ್ಞಾನಂ=ಅಜ್ಞಾನವು, ಆವರಣಂ=ಆವರಣರೂಪವಾಗಿ, ತೇನ ಚ=ಅದ್ವೈತಿಯಿಂದಲೂ ಕೂಡ, ನ ಚೇಷ್ಯತೇ = ಇಚ್ಛಿಸಲ್ಪಡುವುದಿಲ್ಲ. ಅಪ್ರಕಾಶಸ್ವರೂಪತ್ವಾತ್ = ಅಪ್ರಕಾಶಸ್ವರೂಪತ್ವವಿದ್ದುದರಿಂದಲೇ, ಜಡೇ=ಜಡದಲ್ಲಿ, ಅಜ್ಞಾನಂ=ಅಜ್ಞಾನವನ್ನು, ನ ಮನ್ಯತೇ=(ಮಾಯಾವಾದಿಯು) ತಿಳಿಯುವುದಿಲ್ಲ. ಅಜ್ಞಾನಾಭಾವತಃ = ಅಜ್ಞಾನವಿಲ್ಲದಿರುವುದರಿಂದ, ಸರ್ವಂ ಶಾಸ್ತ್ರಂ=ವೇದವೇದವಿಚಾರಾತ್ಮಕವಾದ ಶಾಸ್ತ್ರವೆಲ್ಲವೂ, ವ್ಯರ್ಥೀಭವಿಷ್ಯತಿ = ವಿಷಯಪ್ರಯೋಜನಗಳಿಲ್ಲದಿರುವುದು ಆಗುವುದು.

**ತಾ ||** (1) ಜಡಕ್ಕೂ ಕೂಡ ಆವರಣರೂಪವಾದುದು ಅಜ್ಞಾನವು ಕೂಡುವುದಿಲ್ಲ. ಅದು ಮಿಥ್ಯೆಯಾದುದರಿಂದ ಅದಕ್ಕೆ ಅಜ್ಞಾನದ ಅಪೇಕ್ಷೆಯಿದ್ದುದರಿಂದ ಅನ್ಯೋನ್ಯಾಶ್ರಯವು ಬರುವುದು. ಮಾಯಾವಾದಿಯೂ ಜಡಕ್ಕೆ ಆವರಣರೂಪವಾದ ಅಜ್ಞಾನವನ್ನು ಅಂಗೀಕರಿಸಲಿಲ್ಲ.

(2) ಮಾಯಾವಾದಿಗಳು ಜಡಕ್ಕೆ ಅಜ್ಞಾನವನ್ನು ಏಕೆ ಅಂಗೀಕರಿಸುವುದಿಲ್ಲವೆಂದರೆ — ಕಾರಣಗಳೆಲ್ಲವೂ ಇರುವಾಗ ಕಾರ್ಯವು ಹುಟ್ಟದಿದ್ದರೆ ಪ್ರತಿಬಂಧಕವಾದ ಆವರಣವನ್ನು ಕಲ್ಪಿಸಬೇಕು. ಜಡವು ಅಪ್ರಕಾಶಸ್ವರೂಪವಾಗಿರುವುದರಿಂದಲೇ ಅಂದರೆ. ಪ್ರಮಾಣವಿಲ್ಲದಿರುವುದರಿಂದ, ಪ್ರಕಾಶಸ್ವರೂಪತ್ವವಿಲ್ಲದಿರುವುದರಿಂದ ತನ್ನನ್ನೂ ಇನ್ನೊಂದನ್ನೂ ಗ್ರಹಿಸದಿರಲು ಆವರಣವನ್ನು ಕಲ್ಪಿಸಿ ಪ್ರಯೋಜನವಿಲ್ಲವೆಂದು ಪರರು (ಅದ್ವೈತಿಗಳು) ತಿಳಿಯುತ್ತಾರೆ. "**ಪ್ರಮಾಣವೈಕಲ್ಯಾದೇವ ತದಗ್ರಹಣಸಿದ್ಧೇಃ**" ಪ್ರಕಾಶಸ್ವರೂಪತ್ವವಿಲ್ಲದಿರುವುದರಿಂದಲೇ ತನ್ನನ್ನು ಇನ್ನೊಂದನ್ನು ಗ್ರಹಿಸುವುದಿಲ್ಲವೆಂದು ಸಿದ್ಧವಾಗುತ್ತದೆ ಎನ್ನುವರು. (3) ಅಥವಾ ಅಪ್ರಕಾಶಸ್ವರೂಪತ್ವಾತ್ ಎನ್ನುವುದರಿಂದ ಅವಿದ್ಯೆಯು ಜಡವನ್ನು ಆಶ್ರಯಿಸಿಕೊಂಡಿದೆ ಎಂದು ಹೇಳಿದರೆ ಅವಿದ್ಯೆಗೆ ಪ್ರತೀತಿಯೇ ಇಲ್ಲವೆಂದಾಗಬೇಕಾಗುವುದು. ಪ್ರತೀತಿಯಾದರೂ ೧ ಅವಿದ್ಯೆಯು ಸ್ವಪ್ರಕಾಶರೂಪವಾಗಿರುವುದರಿಂದ ಕೂಡುತ್ತದೆ ಎಂದು ಹೇಳಕೂಡದು. ಅವಿದ್ಯೆಯು ಅಪ್ರಕಾಶಸ್ವರೂಪವಾಗಿದೆ. ೨ ಅವಿದ್ಯೆಗೆ ಪ್ರತೀತಿಯು ಪ್ರಕಾಶವನ್ನ ಆಶ್ರಯಿಸಿಕೊಂಡು ಇದ್ದ ಪ್ರಯುಕ್ತ ಕೂಡುತ್ತದೆ ಎಂದೂ ಹೇಳಕೂಡದು. ಅಜ್ಞಾನವನ್ನು ಆಶ್ರಯಿಸಿಕೊಂಡಿರತಕ್ಕ ಜಡಪದಾರ್ಥವೂ ಅಪ್ರಕಾಶಸ್ವರೂಪವೇ ಆಗಿದೆ ಎನ್ನುವರು. (4) ಜಡಕ್ಕೆ ಅಜ್ಞಾನವನ್ನು ಒಪ್ಪದಿದ್ದರೆ ಅದರಿಂದ ಏನಾಯಿತೆಂದರೆ — ಆವರಣಕ್ಕೆ ಆಶ್ರಯಾದಿಗಳು ಆವಶ್ಯಕಗಳು. ಅಜ್ಞಾನಾವರಣಕ್ಕೂ ಆಶ್ರಯ ಮೊದಲಾದ ವಿಕಲ್ಪಗಳು ಆವಶ್ಯಕಗಳೇ. ವ್ಯಾಪಕವಿಲ್ಲದಿದ್ದ ಮೇಲೆ ವ್ಯಾಪ್ಯವಿಲ್ಲವೆನ್ನುವುದು ಸಿದ್ಧವೇ. ತಥಾಚ ಹಿಂದಿನ ವಿಕಲ್ಪಗಳು ಕೂಡದಿರಲು ಆಶ್ರಯಾದಿಗಳು ಇಲ್ಲದಮೇಲೆ ಅಜ್ಞಾನಾವರಣವೂ ಇಲ್ಲವೆಂದು ಪರರ ಮತದಲ್ಲಿ ಪ್ರಸಕ್ತವಾಯಿತು. ಅಜ್ಞಾನವೇ ಇಲ್ಲದಿದ್ದಮೇಲೆ ಬಂಧವು ಅಜ್ಞಾನಕಾರ್ಯವಾಗಲಾರದು. ಅಂತೂ ವೇದಾದಿ ಶಾಸ್ತ್ರಗಳೆಲ್ಲವೂ ವ್ಯರ್ಥವಾಗುವುವು. ಅಂದರೆ, ವಿಷಯಪ್ರಯೋಜನಗಳಿಲ್ಲವೆಂದೇ ಆಗುವುವು. ಅಂದರೆ, ಮಾಯಾವಾದಿಗಳು ಶಾಸ್ತ್ರಕ್ಕೆ ವಿಷಯಪ್ರಯೋಜನಾದಿಗಳು ಸಿದ್ಧಿಸುವುದಕ್ಕಾಗಿ ಆತ್ಮನಲ್ಲಿ ಮಿಥ್ಯಾಭೂತವಾದ ಅಜ್ಞಾನವೇ ಉಪಾದಾನಕಾರಣವಾಗಿವುಳ್ಳ ಬಂಧಾರೋಪವನ್ನು ಹೇಳಿರುತ್ತಾರೆ. ಅಜ್ಞಾನವು ಕೂಡದಿದ್ದಮೇಲೆ ಅಜ್ಞಾನೋಪಾದಾನಕವಾದ ಬಂಧಾರೋಪವೂ ಆತ್ಮನಲ್ಲಿ ಕೂಡದಿರುವುದರಿಂದ ಅದರ ಅಧೀನವಾದ ವಿಷಯ ಪ್ರಯೋಜನಾದಿಗಳೂ ಶಾಸ್ತ್ರಕ್ಕೆ ಸಿದ್ಧವಾಗಲಾರವು. (5) ಬಂಧಕ್ಕೆ ಅಜ್ಞಾನವೇ ಉಪಾದಾನಕಾರಣವಾಗಿರಲಿ, ಆದಾಗ್ಯೂ ಅಜ್ಞಾನವು ಸತ್ಯವಾದರೆ ಬಂಧವೂ ಸತ್ಯವಾಗಿರುವುದರಿಂದ ಸತ್ಯವಾದುದು ಜ್ಞಾನದಿಂದ ನಿವರ್ತ್ಯವಾಗುವುದಿಲ್ಲವೆಂದು ಅಂಗೀಕರಿಸಿರುವುದರಿಂದ ಶಾಸ್ತ್ರಕ್ಕೆ ವೈಯರ್ಥ್ಯವುಂಟೇ ಉಂಟು. ॥ ೩೧ ॥

**ನ್ಯಾಯಸುಧಾ** — ಹಾಗಾದರೆ ಅದರಿಂದಲೇ ಅಜ್ಞಾನಕ್ಕೂ ಮಿಥ್ಯಾತ್ವವನ್ನು ಹೇಳಿದ್ದೆಂದರೆ — ಅಜ್ಞಾನವು ಮಿಥ್ಯೆಯಾದರೆ ಅದೂ ಆತ್ಮನಲ್ಲಿ ಆರೋಪಿತವೆಂದು ಹೇಳತಕ್ಕದ್ದು. ಮಿಥ್ಯೆಯಾದುದೆಲ್ಲವೂ ಆರೋಪಿತವೆಂದಂಗೀಕರಿಸುತ್ತೇವೆ. ಅಜ್ಞಾನಾರೋಪವು ಸ್ವಾಭಾವಿಕವೋ? ಕಾರಣಸಹಿತವಾಗಿಯದೋ? (೧) ಸ್ವಾಭಾವಿಕವೆಂದರೆ, ಅದಕ್ಕೆ ಸರ್ವಥಾ ನಿವೃತ್ತಿಯು ಕೂಡದಿರುವುದರಿಂದ ಮೋಕ್ಷವೇ ಇಲ್ಲವೆಂದಾಗಬೇಕಾಗುವುದು. ಸ್ವಾಭಾವಿಕಕ್ಕೂ ನಿವೃತ್ತಿಯು ಕೂಡುವುದಾದರೆ ಆತ್ಮಸ್ವರೂಪಕ್ಕೂ ನಿವೃತ್ತಿಯು ಬರಬೇಕಾಗುವುದು. (೨) ಸಕಾರಣಕವೆನ್ನುವ ಕಲ್ಪದಲ್ಲಿಯೂ ಅಜ್ಞಾನಾರೋಪಕ್ಕೆ ಆತ್ಮಸ್ವರೂಪವೇ ನಿಮಿತ್ತವೋ? ಅಜ್ಞಾನವೋ? ಆತ್ಮಸ್ವರೂಪವು ಕಾರಣವೆಂದೆನ್ನಕೂಡದು. ಅದ್ವಿತೀಯ ಉದಾಸೀನವಾದ ಚೈತನ್ಯವು ಕಾರಣವಾಗಲಾರದು. ಅಜ್ಞಾನಾರೋಪಕ್ಕೆ ಅಜ್ಞಾನವು ನಿಮಿತ್ತವೆಂದರೆ —

ಮೂ || ಅಜ್ಞಾನಸ್ಯ ಚ ಮಿಥ್ಯಾತ್ವಮಜ್ಞಾನಾದಿತಿ ಕಲ್ಪನೇ |
ಅನವಸ್ಥಿತಿಸ್ತಥಾ ಚ ಸ್ಯಾದನ್ಯೋಽನ್ಯಾಶ್ರಯತಾಽಥವಾ || ೩೨ ||

ಅ || ಅಜ್ಞಾನಸ್ಯ ಚ= ಅಜ್ಞಾನಕ್ಕಾದರೂ, ಮಿಥ್ಯಾತ್ವಂ= ಮಿಥ್ಯಾತ್ವವು, ಆರೋಪಿತತ್ವವೂ ಕೂಡ, ಅಜ್ಞಾನಾತ್= ಅಜ್ಞಾನದಿಂದ, ಇತಿ= ಹೀಗೆ, ಕಲ್ಪನೇ= ಕಲ್ಪಿಸಿದರೆ, ಅನವಸ್ಥಿತಿಃ= ಅನವಸ್ಥೆಯು. (ಅಜ್ಞಾನಕ್ಕೆ ಉಪಾದಾನಕಾರಣವಾದ ಅಜ್ಞಾನವು ಅಜ್ಞಾನಾಂತರವೇ ಉಪಾದಾನಕಾರಣವಾಗಿವುಳ್ಳದ್ದು. ಹೀಗೆ ಅಜ್ಞಾನ ಪರಂಪರೆಯನ್ನು ಅಂಗೀಕರಿಸಿದರೆ ಅನವಸ್ಥೆಯು ಬರಬಹುದಿತ್ತು. ಹೀಗೆ ಇಲ್ಲವು. ಪ್ರಾಥಮಿಕ ಅಜ್ಞಾನವೇ ಅದಕ್ಕೆ ಉಪಾದಾನ ಕಾರಣವು ಎಂದರೆ) ತಥಾಚ= ಅಂತೂ, ಅನ್ಯೋಽನ್ಯಾಶ್ರಯತಾ = ಅನ್ಯೋಽನ್ಯಾಶ್ರಯತ್ವವು, ಸ್ಯಾತ್ = ಬರುತ್ತದೆ. ಹೇಗೆ ಅಜ್ಞಾನವು ಅಜ್ಞಾನಕ್ಕೆ ಉಪಾದಾನಕಾರಣವೆಂದರೆ ಹಿಂದೆ ಹೇಳಿದ ರೀತಿಯಿಂದ ಅನವಸ್ಥೆಯು ಬರುವುದೋ, ಹಾಗೆಯೇ ಎರಡೇ ಅಜ್ಞಾನಗಳಿಗೆ ಪರಸ್ಪರ ಕಾರ್ಯ ಕಾರಣಭಾವವನ್ನು ಒಪ್ಪಿದರೂ ಅನ್ಯೋಽನ್ಯಾಶ್ರಯತ್ವವೂ ಬರುವುದು. (ಹಾಗಾದರೆ ಅಜ್ಞಾನಕ್ಕೆ ಅಜ್ಞಾನವೇ ಉಪಾದಾನಕಾರಣವೆಂದರೂ ಅನವಸ್ಥಾದಿ ದೋಷಗಳು ಬರುವುದಿಲ್ಲ. ಒಂದೇ ಅಜ್ಞಾನವು ತನಗೆ ಉಪಾದಾನ ಕಾರಣವೆಂದು ಅಂಗೀಕರಿಸುತ್ತೇವೆ ಎಂದರೆ) ಅಥವಾ= ಅಲ್ಲವಾದರೆ, ಆತ್ಮಾಶ್ರಯತಾ = ಆತ್ಮಾಶ್ರಯತ್ವವು. (ತನ್ನ ಉತ್ಪತ್ತಿಯು ತನ್ನಿಂದಲೇ ಆಗಬೇಕಾದೀತು.)

ತಾ || ನ್ಯಾಯಸುಧಾ — ಅಜ್ಞಾನವು ಕೂಡುವುದಿಲ್ಲವೆನ್ನುವ ವಿಷಯದಲ್ಲಿ ಮಾಯಾವಾದಿಗಳು ಆಶಂಕಿಸುವರು. (1) 'ಅನಾದಿತ್ವೇ ಸತಿ ಭಾವರೂಪತ್ವೇ ಸತಿ ವಿಜ್ಞಾನವಿಲಾಪ್ಯತ್ವಂ ಅಜ್ಞಾನಸ್ಯ ಲಕ್ಷಣಂ' ಅಂದರೆ — ಅನಾದಿಯಾದುದೂ ಭಾವರೂಪವಾದುದೂ ವಿಜ್ಞಾನದಿಂದ ವಿನಾಶ್ಯವಾಗಿಯೂ ಇರುವುದು ಅಜ್ಞಾನವು. (ಪ್ರಪಂಚದಲ್ಲಿ ಅತಿವ್ಯಾಪ್ತಿವಾರಣಕ್ಕಾಗಿ ಅನಾದಿ ಎಂದೂ, ಪ್ರಾಗಭಾವದಲ್ಲಿ ಅತಿವ್ಯಾಪ್ತಿವಾರಣಕ್ಕಾಗಿ ಭಾವರೂಪವೆಂದೂ, ಬ್ರಹ್ಮನಲ್ಲಿ ಅತಿವ್ಯಾಪ್ತಿವಾರಣಕ್ಕಾಗಿ ವಿಜ್ಞಾನವಿಲಾಪ್ಯವೆಂದೂ ವಿಶೇಷಣಗಳು.) ಅವಶ್ಯವಾಗಿ ಇಂತಹ ಭಾವರೂಪಾಜ್ಞಾನವನ್ನು ಒಪ್ಪಬೇಕು. (2) ಈ ವಿಷಯದಲ್ಲಿ ಪ್ರತ್ಯಕ್ಷ ಅನುಮಾನ-ಆಗಮ-ಅರ್ಥಾಪತ್ತಿರೂಪ-ಇವು ನಾಲ್ಕು ಪ್ರಮಾಣಗಳಿವೆ. ಹೇಗೆಂದರೆ- ಸರ್ವವಸ್ತುಗಳೂ ಜ್ಞಾತಗಳಾಗಿ ಆಗಲೀ ಅಜ್ಞಾತಗಳಾಗಿ ಆಗಲೀ ಸಾಕ್ಷಿಚೈತನ್ಯಕ್ಕೆ ವಿಷಯಗಳೇ ಸರಿ. ಅಂತೂ ವೃತ್ತಿರೂಪಜ್ಞಾನವು ಸಾಕ್ಷಿಗೆ ವಿಷಯವಾಗಿರುವುದರಿಂದ ಅದಕ್ಕೆ ಅವಚ್ಛೇದಕವಾದ ವಿಷಯವೂ ಸಾಕ್ಷಿಗೆ ತೋರುತ್ತದೆ. ಅಜ್ಞಾನಾವಚ್ಛೇದಕವಾದ ವಿಷಯವು ಸಾಮಾನ್ಯಾಕಾರವಾಗಿ, ವಿಶೇಷಾಕಾರವಾಗಿ ಆಗಲೀ ಅಂದರೆ — ಶಾಸ್ತ್ರಾರ್ಥವನ್ನು ತಿಳಿಯುವುದಿಲ್ಲವೆಂದು ಸಾಮಾನ್ಯಾಕಾರವಾಗಿಯೂ, ಧರ್ಮ ಮೊದಲಾದುದನ್ನು ತಿಳಿಯುವುದಿಲ್ಲವೆಂದು ವಿಶೇಷಾಕಾರವಾಗಿಯೂ ಅಜ್ಞಾನಕ್ಕೆ ವ್ಯಾವರ್ತಕವಾಗಿ ಪ್ರಮಾಣಪ್ರವೃತ್ತಿಯಾಗದಿರುವಾಗ ಯಾವಾಗಲೂ ಸಾಕ್ಷಾತ್ತಾಗಿ ಸಾಕ್ಷಿಗೆ ತೋರುತ್ತದೆ. ಹೀಗೆ ಉಪಪತ್ತಿಸಹಿತವಾದ 'ಅಹಮಜ್ಞಃ' 'ಮಾಮನ್ಯಂ ಚ ನ ಜಾನಾಮಿ' ನಾನು ಅಜ್ಞಾನಿಯು, ನನ್ನನ್ನೂ ಮತ್ತೊಬ್ಬನನ್ನೂ ತಿಳಿಯಲಾರೆ, ಇದುಮೊದಲಾದ ಅಜ್ಞಾನಪ್ರತ್ಯಕ್ಷವು ಭಾವರೂಪವಾದ ಅಜ್ಞಾನವನ್ನೇ ಆತ್ಮನಲ್ಲಿ ತಿಳಿಸಿಕೊಡುತ್ತದೆಂದು ಸಿದ್ಧವಾಗುತ್ತದೆ. (3) 'ನ ಕಿಂಚಿದವೇದಿಷಂ' ಯಾವುದನ್ನೂ ತಿಳಿಯಲಿಲ್ಲ ಎಂಬುವ ಪರಾಮರ್ಶ (ಸ್ಮೃತಿ) ಸಿದ್ಧವಾದ ಸುಷುಪ್ತಿಕಾಲೀನವಾದ ಅನುಭವವೂ ಭಾವರೂಪವಾದ ಅಜ್ಞಾನವಿದೆ ಎನ್ನುವಲ್ಲಿ ಪ್ರಮಾಣವು. ಈ ಅನುಭವವು ಜ್ಞಾನಾಭಾವವಿಷಯಕವೆಂದು ಹೇಳಕೂಡದು. ಅಭಾವಪ್ರತೀತಿಯು ಧರ್ಮಿ

ಪ್ರತಿಯೋಗಿಗಳ ಜ್ಞಾನಾಧೀನವಾಗಿರುವುದರಿಂದ ಅವುಗಳ ಜ್ಞಾನವಿಲ್ಲದಿದ್ದರೆ ಜ್ಞಾನಾಭಾವವನ್ನೂ ತಿಳಿಯಲಿಕ್ಕೆ ಸಾಧ್ಯವಿಲ್ಲ. ಧರ್ಮಿಪ್ರತಿಯೋಗಿಗಳ ಜ್ಞಾನವಿದ್ದರೆ ಯಾವ ಜ್ಞಾನವೂ ಇಲ್ಲವೆನ್ನುವ ಜ್ಞಾನಾಭಾವ ಜ್ಞಾನವೇ ಬರಲಾರದು. 'ನ ಕಿಂಚಿದವೇದಿಷಂ' ಎನ್ನುವ ಅನುಭವವು ಸುಷುಪ್ತಿಕಾಲದಲ್ಲಿರುವ ಭಾವರೂಪವಾದ ಅಜ್ಞಾನಾನುಭವದಿಂದುಂಟಾಗತಕ್ಕ ಸ್ಮರಣವಲ್ಲ. ಆದಕಾರಣ ಅನುಭೂತವಾಗದಿರುವುದರ ಸ್ಮರಣವೇ ಕೂಡದಿರುವುದರಿಂದ ಅದು ಅನ್ಯಥಾನುಪಪನ್ನವಾಗಿ ಸುಷುಪ್ತಿಕಾಲದಲ್ಲಿ ಭಾವರೂಪಾಜ್ಞಾನಾನುಭವವನ್ನು ಕಲ್ಪಿಸಬೇಕಾಗಿಲ್ಲ. ಮತ್ತೆ ಸುಷುಪ್ತಿಯಿಂದ ಎಚ್ಚತ್ತನಿಗೆ ಜಾಗ್ರದವಸ್ಥೆಯಲ್ಲಿಯೇ ಸುಷುಪ್ತಿಕಾಲೀನವಾದ ಜ್ಞಾನಾಭಾವಾನುಮಾನವೆಂದು ಹೇಳಕೂಡದು. ಅಂತೂ ಸುಷುಪ್ತಿಕಾಲದಲ್ಲಿ ಭಾವರೂಪಾಜ್ಞಾನಾನುಭವವಿಲ್ಲ. ಏಕೆಂದರೆ— ಜ್ಞಾನಾಭಾವವನ್ನು ಅನುಮೇಯಿಸಿಕೊಡತಕ್ಕ ಲಿಂಗವೇ ಸಿದ್ಧವಾಗಲಿಲ್ಲ. (4) ಹಾಗಾದರೆ — 'ಸುಷುಪ್ತಿಕಾಲೀನಃ ಅಹಂ ಜ್ಞಾನಾಭಾವವಾನ್ ಜ್ಞಾನಸಾಮಗ್ರೀಶೂನ್ಯತ್ವಾತ್' ಸುಷುಪ್ತಿಕಾಲದಲ್ಲಿರತಕ್ಕ ನಾನು ಜ್ಞಾನವಿಲ್ಲದಿರುವವನು, ಜ್ಞಾನಸಾಮಗ್ರಿಯು ಇಲ್ಲದಿರುವುದರಿಂದ, ಹೀಗೆ ಸಾಮಗ್ರ್ಯಭಾವವು ಲಿಂಗವೆನ್ನಕೂಡದು. ಅದೂ ಅಸಿದ್ಧವಾಗಿದೆ. ಹಾಗಾದರೆ— ಜ್ಞಾನರೂಪವಾದ ಕಾರ್ಯವು ಇಲ್ಲದಿರುವುದರಿಂದ ಜ್ಞಾನಸಾಮಗ್ರ್ಯಭಾವವನ್ನು ಅನುಮೇಯಿಸುತ್ತೇವೆ. ಅಂತೂ ಜ್ಞಾನಸಾಮಗ್ರ್ಯಭಾವರೂಪಲಿಂಗಕ್ಕೆ ಅಸಿದ್ಧಿಯಿಲ್ಲ ಎಂದೆನ್ನಕೂಡದು. ಏಕೆಂದರೆ, ಜ್ಞಾನಾಭಾವದಿಂದಲೇ ಜ್ಞಾನಸಾಮಗ್ರ್ಯಭಾವವನ್ನು ಅನುಮೇಯಿಸುವುದು. ಅದರಿಂದಲೇ ಜ್ಞಾನಾಭಾವವನ್ನು ಅನುಮೇಯಿಸುವುದು. ಹೀಗೆ ಹೇಳಿದರೆ ಅನ್ಯೋನ್ಯಾಶ್ರಯವು ಬರುವುದು. (5) ಹಾಗಾದರೆ— ಜ್ಞಾನಾಭಾವದಿಂದ ಜ್ಞಾನಸಾಮಗ್ರ್ಯಭಾವವನ್ನು ಅನುಮೇಯಿಸಿದರೂ ಜ್ಞಾನಾಭಾವವನ್ನು ಜ್ಞಾನಸಾಮಗ್ರ್ಯಭಾವದಿಂದ ಅನುಮೇಯಿಸುವುದಿಲ್ಲ. (ಆದಕಾರಣ ಅನ್ಯೋನ್ಯಾಶ್ರಯವಿಲ್ಲ.) ಮತ್ತೆ ಸ್ಮರಣಾಭಾವರೂಪ ಲಿಂಗದಿಂದಲೇ ಜ್ಞಾನಾಭಾವವನ್ನು ಅನುಮೇಯಿಸುತ್ತೇವೆ. ಹೇಗೆಂದರೆ— 'ಪದಾರ್ಥಃ ಸುಷುಪ್ತೌ ನಾನುಭೂತಃ ಇದಾನೀಮಸ್ಮರ್ಯಮಾಣತ್ವಾತ್ ಯತ್ ನ ಸ್ಮರ್ಯತೇ ತತ್ ನಾನುಭೂತಂ' ಪದಾರ್ಥವು ಸುಷುಪ್ತಿಕಾಲದಲ್ಲಿ ಅನುಭೂತವಾಗಲಿಲ್ಲ, ಈಗ ಸ್ಮರಿಸಲ್ಪಡದಿರುವುದರಿಂದ ಯಾವುದು ಸ್ಮರಿಸಲ್ಪಡುವುದಿಲ್ಲವೋ ಅದು ಅನುಭೂತವಾಗಲಿಲ್ಲ, ಎನ್ನುವುದು ಸುಷುಪ್ತಿಕಾಲದಲ್ಲಿ ಪದಾರ್ಥಜ್ಞಾನವಿಲ್ಲವೆನ್ನುವಲ್ಲಿ ಲಿಂಗವೆ. ಆದಕಾರಣ ಹಿಂದೆ ಹೇಳಿದ ಅನ್ಯೋನ್ಯಾಶ್ರಯ ದೋಷವು ಬರುವುದಿಲ್ಲ ಎಂದರೆ, ಹೀಗೆ ಹೇಳಕೂಡದು. ನಿನ್ನೆ ಅನುಭೂತಗಳಾದ ವಸ್ತುಗಳ ಮಧ್ಯದಲ್ಲಿ ಉಪೇಕ್ಷಣೀಯಗಳಾದ ಕೆಲವು ವಸ್ತುಗಳ ಸ್ಮರಣವು ಈಗ ಇಲ್ಲದಿದ್ದರೂ ಆ ವಸ್ತುಗಳು ಅನುಭೂತಗಳೇ ಆಗಿವೆ. ಅಂತೂ ಅಸ್ಮರ್ಯಮಾಣತ್ವರೂಪ ಹೇತುವಿಗೆ ಸಾಧ್ಯವಿಲ್ಲದಿದ್ದಲ್ಲಿ ಹೇತುವಿದ್ದಪ್ರಯುಕ್ತ ವ್ಯಭಿಚಾರವು. ಈ ಪ್ರಕಾರ ಅಜ್ಞಾನವು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವೆಂದು ನಿಶ್ಚಿತವಾಯಿತು.

ಈಗ ಅನುಮಾನಸಿದ್ಧವೂ ಆಗಿದೆ ಎನ್ನುತ್ತಾರೆ. (6) 'ವಿವಾದಗೋಚರಾಪನ್ನಂ ಪ್ರಮಾಣಜ್ಞಾನಂ ಸ್ವಪ್ರಾಗಭಾವವ್ಯತಿರಿಕ್ತ ಸ್ವವಿಷಯಾವರಣ ಸ್ವನಿವರ್ತ್ಯ ಸ್ವದೇಶಗತ ವಸ್ತ್ವಂತರಪೂರ್ವಕಂ ಅಪ್ರಕಾಶಿತಾರ್ಥಪ್ರಕಾಶಕತ್ವಾತ್ ಅಂಧಕಾರೇ ಪ್ರಥಮೋತ್ಪನ್ನಪ್ರದೀಪಪ್ರಭಾವತ್' ದೀಪಪ್ರಭೆಯು ಮೊದಲು ಪ್ರಕಾಶಿಸಲ್ಪಡದೆ ಇದ್ದ ಅರ್ಥವನ್ನು ಪ್ರಕಾಶಿಸುವುದರಿಂದ ಹೇಗೆ ಅಂಧಕಾರವೆಂಬುವ ವಸ್ತ್ವಂತರಪೂರ್ವಕವಾಗಿಯದೋ, ಹಾಗೆಯೇ ವಿವಾದಕ್ಕೆ ವಿಷಯವಾದ ಪ್ರಮಾಣದಿಂದ ಹುಟ್ಟತಕ್ಕ ವೃತ್ತಿರೂಪಜ್ಞಾನವೂ ಅಪ್ರಕಾಶಿತವಾದ ಅರ್ಥಕ್ಕೆ ಪ್ರಕಾಶಕವಾಗಿರು

ವುದರಿಂದ ತನ್ನ ಪ್ರಾಗಭಾವದಿಂದ ಬೇರೆಯಾದ ತನ್ನ ವಿಷಯಕ್ಕೆ ಆವರಕವಾದ ಅಂದರೆ, ತಾನು ಇರುವಾಗ ಕಾರ್ಯವನ್ನು ಹುಟ್ಟಿಸದೇನೇ ಇರುವ, ತನ್ನಿಂದ ನಾಶವನ್ನು ಹೊಂದುವ ತನಗೆ ವಿರೋಧಿಯಾದ, ತಾನು ಇದ್ದಲ್ಲಿಯೇ ಇರುವ ಅಜ್ಞಾನವೆಂಬುವ ವಸ್ತ್ವಂತರಪೂರ್ವಕವಾಗಿದೆ. ಅಂತೂ ಜ್ಞಾನದಿಂದ ಸಮಾನ (ಒಂದೇ ಆದ) ಆಶ್ರಯವೂ ವಿಷಯವೂ ಉಳ್ಳ ಭಾವರೂಪವಾದ ಅಜ್ಞಾನವು ಸಿದ್ಧವಾಗುತ್ತದೆ. (7) 'ನತಾವತ್ ಅಜ್ಞಾನಂ ಜ್ಞಾನಾಭಾವಃ ಅಭಾವಮಾನಾಗಮ್ಯತ್ವಾತ್ ಸಂಪ್ರತಿಪನ್ನವತ್' ಹೇಗೆ ಸಮ್ಮತವಾದ ಘಟವೊದಲಾದುದು ಅಭಾವಪ್ರಮಾಣದಿಂದ (ಅನುಪಲಬ್ಧಿರೂಪವಾದ ಆರನೇ ಪ್ರಮಾಣದಿಂದ) ತಿಳಿಯಲ್ಪಡದಿರುವುದರಿಂದ ಜ್ಞಾನಾಭಾವವಲ್ಲವೋ? ಹಾಗೆಯೇ ಅಜ್ಞಾನವೂ ಅಭಾವಪ್ರಮಾಣದಿಂದ ತಿಳಿಯಲ್ಪಡದಿರುವುದರಿಂದ ಅಥವಾ ಉಪಲಬ್ಧ್ಯಭಾವದಿಂದ ತಿಳಿಯಲ್ಪಡದಿರುವುದರಿಂದ ಮತ್ತು ಪ್ರಮಾಣದಿಂದ ತಿಳಿಯಲ್ಪಡದಿರುವುದರಿಂದ ಜ್ಞಾನಾಭಾವರೂಪವಲ್ಲ. ಅಭಾವವಾದರೂ ಅನುಪಲಬ್ಧಿರೂಪಪ್ರಮಾಣಕ್ಕಾಗಲೀ ಪ್ರತ್ಯಕ್ಷಕ್ಕಾಗಲೀ ವಿಷಯವಾಗುತ್ತದೆಂದು ಪರರು ಹೇಳಿರುವರು. (8) 'ಅಜ್ಞಾನಂ ಚ ನ ಮಾನಗಮ್ಯಂ ಮಾನನಿವರ್ತ್ಯತ್ವಾತ್ ಸಂಪ್ರತಿಪನ್ನವತ್ ಯತ್ ಯೇನ ನಿವರ್ತ್ಯಂ ನ ತತ್ ತೇನ ಗಮ್ಯಂ ಯಥಾ ಪ್ರಭಾನಿವರ್ತ್ಯಾಂಧಕಾರೋ ನ ಪ್ರಭಾಗಮ್ಯಃ' ಅಜ್ಞಾನವು ವೃತ್ತಿಜ್ಞಾನದಿಂದ ತಿಳಿಯಲರ್ಹವಲ್ಲ. (ಮತ್ತೆ ಸಾಕ್ಷಿಯಿಂದಲೇ ತಿಳಿಯಲರ್ಹವು.) ಪ್ರಮಾಣದಿಂದ ನಾಶ್ಯವಾಗುವುದರಿಂದ, ಯಾವುದು ಯಾವುದರಿಂದ ನಾಶ್ಯವಾಗುತ್ತದೋ ಅದು ಅದರಿಂದ ತಿಳಿಯಲರ್ಹವಲ್ಲ. ಪ್ರಭೆಯಿಂದ ನಾಶ್ಯವಾದ ಅಂಧಕಾರವು ಪ್ರಭೆಯಿಂದ ತಿಳಿಯಲರ್ಹವಲ್ಲ. "**ಅವಿದ್ಯಾಯಾ ಅವಿದ್ಯಾತ್ವಮಿದಮೇವ ಹಿ ಲಕ್ಷಣಂ । ಮಾನಾಘಾತಾಸಹಿಷ್ಣುತ್ವಮಸಾಧಾರಣಮಿಷ್ಯತೇ**" ॥ ಎಂದು ಸುರೇಶ್ವರನು ಹೇಳಿದಪ್ರಕಾರ ಮಾನಗಮ್ಯವಲ್ಲ. (9) 'ವಿಗೀತಂ ದೇವದತ್ತನಿಷ್ಠಪ್ರಮಾಣಜ್ಞಾನಂ ದೇವದತ್ತನಿಷ್ಠಪ್ರಮಾಪ್ರಾಗಭಾವಾತಿರಿಕ್ತಾನಾದೇರ್ನಿವರ್ತಕಂ ಪ್ರಮಾಣಜ್ಞಾನತ್ವಾತ್ ಯಜ್ಞದತ್ತಗತಪ್ರಮಾಣಜ್ಞಾನವತ್' ವಿವಾದವಿಷಯವಾದ ದೇವದತ್ತನಲ್ಲಿರುವ ಪ್ರಮಾಣಜ್ಞಾನವು, ದೇವದತ್ತನಲ್ಲಿರುವುದು ಪ್ರಮಾಪ್ರಾಗಭಾವವು ಅದರಿಂದ ಬೇರೆಯಾದ ಅನಾದಿಯಾದುದನ್ನು (ಅಜ್ಞಾನವನ್ನು) ಹೋಗಲಾಡಿಸುವುದು ಪ್ರಮಾಣಜ್ಞಾನವಾಗಿರುವುದರಿಂದ, ಯಜ್ಞದತ್ತನಲ್ಲಿರುವ ಪ್ರಮಾಣಜ್ಞಾನದಂತೆ. ಪಕ್ಷದಲ್ಲಿ ಅನಾದಿಯಾದ ಅಜ್ಞಾನವನ್ನು ಇಟ್ಟುಕೊಂಡು ಸಾಧ್ಯಪರ್ಯವಸಾನವು. ದೃಷ್ಟಾಂತದಲ್ಲಿ ಆದರೂ ಯಜ್ಞದತ್ತನಲ್ಲಿರುವ ಪ್ರಮಾಪ್ರಾಗಭಾವವನ್ನು ಇಟ್ಟುಕೊಂಡು ಸಾಧ್ಯಪರ್ಯವಸಾನಮಾಡಿಕೊಳ್ಳಬೇಕು. ಈ ಅನುಮಾನಗಳಿಂದ ಅನಾದಿಭಾವರೂಪವಾದುದು ಜ್ಞಾನನಿವರ್ತ್ಯವಾದುದು, ಅಜ್ಞಾನವು ಸಿದ್ಧಿಸುತ್ತದೆ. ಇದುಮೊದಲಾದ ಅನುಮಾನಗಳೂ ಭಾವರೂಪಾಜ್ಞಾನವಿದೆ ಎನ್ನುವಲ್ಲಿ ಪ್ರಮಾಣಗಳಾಗಿವೆ. (10) 'ತಮಃ ಆಸೀತ್' ಅಜ್ಞಾನವು ಇತ್ತು. 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಅಜ್ಞಾನವನ್ನು ಪ್ರಕೃತಿಯೆಂದು ತಿಳಿಯತಕ್ಕದ್ದು, ಇದುಮೊದಲಾದ ಆಗಮವೂ ಭಾವರೂಪವಾದ ಅಜ್ಞಾನವಿದೆ ಎನ್ನುವಲ್ಲಿ ಪ್ರಮಾಣವು. (11) 'ತ್ವದುಕ್ತಮರ್ಥಂ ನ ಜಾನಾಮಿ' ನೀನು ಹೇಳಿದ ಅರ್ಥವನ್ನು ನಾನು ತಿಳಿಯುವುದಿಲ್ಲ, ಎನ್ನುವ ವ್ಯವಹಾರಾನ್ಯಥಾನುಪಪತ್ತಿಯೂ ಭಾವರೂಪವಾದ ಅಜ್ಞಾನವಿದೆ ಎನ್ನುವಲ್ಲಿ ಪ್ರಮಾಣವು. (12) ಮತ್ತು ಜ್ಞಾನದಿಂದ ಬಂಧನಿವೃತ್ತ್ಯನ್ಯಥಾನುಪಪತ್ತಿಯೂ ಬಂಧಕ್ಕೆ ಉಪಾದಾನಕಾರಣವಾದ ಅಜ್ಞಾನವಿದೆ ಎನ್ನುವಲ್ಲಿ ಪ್ರಮಾಣವು. ಆದಕಾರಣ ಹೀಗೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದ ಅಜ್ಞಾನವು ಜಡದಲ್ಲಿ ಕೂಡಲಾರದು. ಆ ವಿಷಯದಲ್ಲಿ ಪ್ರಮಾಣವೂ ಇಲ್ಲ. ಪ್ರಯೋಜನವೂ ಇಲ್ಲ. ಆದಪ್ರಯುಕ್ತ

ಪರಿಶೇಷತಃ ಆತ್ಮನಲ್ಲಿಯೇ ಅಜ್ಞಾನವನ್ನಂಗೀಕರಿಸಬೇಕು. ಆದಕಾರಣ 'ಅಜ್ಞಾನಾಭಾವತಃ' ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದು ಅದ್ವೈತಿಗಳು ಶಂಕಿಸಿದರೆ —

(13) ಭಾವರೂಪವಾದ ಅಜ್ಞಾನಸಿದ್ಧಿಯಲ್ಲಿ ಉಪನ್ಯಸ್ತವಾದ ಪ್ರತ್ಯಕ್ಷವು ಜ್ಞಾನಾಭಾವ ವಿಷಯಕವು ಎಂದು ಇಟ್ಟುಕೊಂಡರೆ ದೋಷವೇನು? ಅಭಾವವು ಅನುಪಲಬ್ಧಿರೂಪವಾದ ಆರನೇ ಪ್ರಮಾಣಕ್ಕೆ ವಿಷಯವಾಗಿರುವುದರಿಂದ ಪ್ರತ್ಯಕ್ಷಕ್ಕೆ ವಿಷಯವಾಗಲಾರದು. ಎಂದರೆ— ಹೀಗೆ ಹೇಳಕೂಡದು. ಕಣ್ಣನ್ನು ತೆರದವನಿಗೆ ಶೀಘ್ರದಲ್ಲಿ ಅಭಾವ ಬುದ್ಧಿಯು ಹುಟ್ಟುವುದರಿಂದ ಅಭಾವಕ್ಕೆ ಪ್ರತ್ಯಕ್ಷತ್ವವನ್ನು ಅಂಗೀಕರಿಸಿದರೆ ಬಾಧಕವೇನು? ಹಾಗಾದರೆ— ಧರ್ಮಿ ಪ್ರತಿಯೋಗಿಗಳ ಜ್ಞಾನವಿದ್ದರೆ ಜ್ಞಾನವೇ ಇದ್ದುದರಿಂದಲೂ, ಅವುಗಳ ಜ್ಞಾನವೇ ಇಲ್ಲದಿದ್ದರೆ ಕಾರಣವೇ ಇಲ್ಲದಿರುವುದರಿಂದಲೂ, ಜ್ಞಾನಸಾಮಾನ್ಯಾಭಾವ ಜ್ಞಾನವು ಕೂಡುವುದಿಲ್ಲವೆಂದರೆ- ಹಾಗೆ ಹೇಳಕೂಡದು. ಏಕೆಂದರೆ— ಹಾಗಿದ್ದರೆ ನಿಮಗೆ ಜ್ಞಾನಾಭಾವವು ಸರ್ವಥಾ ತೋರದೆ ಇರಬೇಕಾಗುವುದು. ಅಂತೂ ಜ್ಞಾನಾಭಾವವು ಸರ್ವಥಾ ಪ್ರತೀತವಾಗುವುದಿಲ್ಲವೆಂದಂಗೀಕರಿಸಿದರೆ 'ತ್ವದುಕ್ತಮರ್ಥಂ ನ ಜಾನಾಮಿ' ನೀನು ಹೇಳಿದ ಅರ್ಥವನ್ನು ತಿಳಿಯುವುದಿಲ್ಲ ಎನ್ನುವ ವ್ಯವಹಾರವು ಜ್ಞಾನಾಭಾವ ವಿಷಯಕವಾಗುವುದಿಲ್ಲವೆಂದು ಜ್ಞಾನಾಭಾವ ವಿಷಯಕತ್ವವನ್ನು ನಿರಾಕರಿಸತಕ್ಕ ಪ್ರಯಾಸವೇ ಜ್ಞಾನಾಭಾವರೂಪಪ್ರತಿಯೋಗಿ ಜ್ಞಾನವಿಲ್ಲದಿರುವುದರಿಂದ ಕೂಡದೆ ಹೋಗಬೇಕಾಗುವುದು. (14) ಹಾಗಾದರೆ— ನನಗೆ ಸಾಕ್ಷಿಯಿಂದ ಜ್ಞಾನಾಭಾವವು ಪ್ರತೀತವಾಗುತ್ತದೆ, ಎಂದರೆ, ಹಾಗಾದರೆ ಸಾಕ್ಷಿಯಿಂದ ಯಾವ ಜ್ಞಾನಾಭಾವ ಪ್ರತೀತಿಯು ಅಂಗೀಕರಿಸಲ್ಪಡುತ್ತದೋ, ಇದೇವೆ, ಅದಾಗಲಿ, ಅಂದರೆ— ಯಾವ ಭಾವರೂಪಾಜ್ಞಾನಪ್ರತೀತಿಯು ಮೊದಲು ನಿನ್ನಿಂದ ಉಪಪಾದಿಸಲ್ಪಟ್ಟದೋ ಅದೇವೇ ಸಾಕ್ಷಿಯಿಂದ ಆಗಲಿ, (ಅಂತೂ 'ನ ಜಾನಾಮಿ' ಇದು ಮೊದಲಾದ ಬುದ್ಧಿಯೇ ಸಾಕ್ಷಿರೂಪವಾದ ಜ್ಞಾನಾಭಾವವಿಷಯಕಬುದ್ಧಿಯಾಗಲಿ,) (15) ಸೌಷುಪ್ತಿಕ ಜ್ಞಾನಾಭಾವವನ್ನು ಅನುಮೇಯಿಸಿದರೂ ಅನುಪಪತ್ತಿಯು ಯಾವುದಿದೆ? ಸುಪ್ತಿಕಾಲವನ್ನು ಪಕ್ಷವನ್ನಾಗಿ ಇಟ್ಟುಕೊಂಡು ಜ್ಞಾನಾಭಾವವನ್ನು ಅನುಮೇಯಿಸಬೇಕು. ಸುಪ್ತಿಕಾಲವು ತಿಳಿಯದಿರುವುದರಿಂದ ಅನುಮಾನಕ್ಕೆ ಅವಕಾಶವಿಲ್ಲ. ಎಂದರೆ— ಹಾಗೆ ಹೇಳಕೂಡದು. ಸುಷುಪ್ತಿಯಿಂದ ಮೊದಲಿನ ಕಾಲವು ಉದಯಕಾಲವೆಂದು ವಿವಕ್ಷಿತವಾಗಿದೆ. ಆ ಮೇಲಿನ ಕಾಲವು ಅಸ್ತಮಯಕಾಲವೆಂದು ವಿವಕ್ಷಿತವಾಗಿದೆ. ತಥಾಚ, ಉದಯಾಸ್ತಮಯಕಾಲೌ ಆಂತರಾಲಿಕಕಾಲೋಪೇತೌ ಉದಯಾಸ್ತಮಯಕಾಲತ್ವಾತ್ ಸಂಪ್ರತಿಪನ್ನ ಸೂರ್ಯೋದಯಾಸ್ತಮಯ ಕಾಲವತ್=ಉದಯಾಸ್ತಮಯ ಕಾಲಗಳು ಆಂತರಾಲಿಕ ಕಾಲದಿಂದೊಡಗೂಡಿದವುಗಳು, ಉದಯಾಸ್ತಮಯ ಕಾಲವಾಗಿರುವುದರಿಂದ ಸಂಪ್ರತಿಪನ್ನವಾದ ಸೂರ್ಯೋದಯಾಸ್ತಮಯ ಕಾಲದಂತೆ. ಈ ಪ್ರಕಾರವಾಗಿಯೇ ಆಂತರಾಲಿಕಕಾಲವನ್ನು ಸುಷುಪ್ತಿಕಾಲವನ್ನಾಗಿ ಅನುಮೇಯಿಸಿ 'ಸ ಕಾಲಃ ಆತ್ಮವಾನ್ ಭವಿತುಮರ್ಹತಿ ಕಾಲತ್ವಾತ್ ಇತರ ಕಾಲವತ್=ಆ ಕಾಲವು ಆತ್ಮನುಳ್ಳದ್ದು ಆಗಲಿಕ್ಕೆ ಅರ್ಹವಾಗಿದೆ, ಕಾಲವಾಗಿರುವುದರಿಂದ ಬೇರೆ ಕಾಲದಂತೆ ಎನ್ನುವ ಅನುಮಾನದಿಂದ ಸುಷುಪ್ತಿಕಾಲವನ್ನು ಸುಷುಪ್ತಿಕಾಲೀನನಾದ ಆತ್ಮನನ್ನು ತಿಳಿಯಬಹುದು. ಹಾಗಾದರೆ ಈ ಅನುಮಾನದಿಂದ ಸುಷುಪ್ತಿಕಾಲೀನ ಆತ್ಮರೂಪವಾದ ಪಕ್ಷಜ್ಞಾನಬಂದರೂ ಜ್ಞಾನಾಭಾವವನ್ನು ಅನುಮೇಯಿಸುವ ವಿಷಯದಲ್ಲಿ ಲಿಂಗವಿಲ್ಲವೆಂದು ಹೇಳಕೂಡದು. ಏಕೆಂದರೆ— ಅವಸ್ಥಾವಿಶೇಷವತ್ತ್ವವೇ ಲಿಂಗವು. ಅಂದರೆ— 'ತತ್ಕಾಲೀನಃ ಅಹಂ ಜ್ಞಾನಾಭಾವವಾನ್ ಅವಸ್ಥಾ ವಿಶೇಷವತ್ತ್ವಾತ್ ವ್ಯತಿರೇಕೇಣ ಜಾಗ್ರದಹಂ' ಆ ಕಾಲದಲ್ಲಿರತಕ್ಕ ನಾನು ಜ್ಞಾನಾಭಾವವುಳ್ಳವನು,

ಅವಸ್ಥಾ ವಿಶೇಷವಿದ್ದ ಪ್ರಯುಕ್ತ, ವ್ಯತಿರೇಕದಿಂದ (ಸಾಧ್ಯಾಭಾವಹೇತ್ವಭಾವದಿಂದ ಯುಕ್ತನಾದ) ಜಾಗ್ರತ್ಕಾಲದಲ್ಲಿರುವ ನಾನು ಜ್ಞಾನಾಭಾವಹೊರತು ಬೇರೆ ಅವಸ್ಥಾವಿಶೇಷವನ್ನು ಹೇಳಲಿಕ್ಕೆ ಶಕ್ಯವಾಗುವುದಿಲ್ಲ, ಎಂದು ಹೇಳಕೂಡದು. ಶ್ರುತಿಸಿದ್ಧವಾದ ಪ್ರಾಜ್ಞರೂಪಿ ಪರಮಾತ್ಮನ ಆಲಿಂಗನವಾಗಲೀ, ಈಗ ಇರತಕ್ಕ ಇಂದ್ರಿಯ ಪ್ರಸಾದದಿಂದ ಅನುಮಿತವಾದ ಇಂದ್ರಿಯೋಪರಮರೂಪವಾಗಲೀ ಹೇಳಲು ಶಕ್ಯವಾಗುತ್ತದೆ (16) ಅಪ್ರಕಾಶಿತಾರ್ಥ ಪ್ರಕಾಶಕತ್ವಾತ್ ಎನ್ನುವ ಅನುಮಾನವಾದರೂ ಕೂಡುವುದೇ ಇಲ್ಲವು. ಪ್ರಕಾಶಕತ್ವವು ಜ್ಞಾನದಲ್ಲಿಯೂ ಪ್ರದೀಪ ಪ್ರಭೆಯಲ್ಲಿಯೂ ಒಂದೇ ವಿಧವಾದದ್ದು ಇಲ್ಲದಿರುವುದರಿಂದ ಅಸಿದ್ಧ್ಯಾದಿಗಳು ಬರುತ್ತವೆ. ಅಂದರೆ— ಪಕ್ಷೀಭೂತವಾದ ಜ್ಞಾನದಲ್ಲಿ ಅರ್ಥಪ್ರಕಾಶಕತ್ವವೆಂದರೆ— ಅರ್ಥಪ್ರಕಾಶರೂಪವಾದ ಬುದ್ಧಿತ್ವವೇ, ಬೇರೆಯಲ್ಲ. ಪ್ರದೀಪ ಪ್ರಭೆಯಲ್ಲಿ ಅರ್ಥಪ್ರಕಾಶಕತ್ವವೆಂದರೆ— ಅರ್ಥಪ್ರಕಾಶವನ್ನು ಹುಟ್ಟಿಸುವುದೇ. ಇಂತಹುದನ್ನು ವಿವಕ್ಷಾ ಮಾಡಿದರೆ ಅಸಿದ್ಧಿಯು. ಅರ್ಥಪ್ರಕಾಶರೂಪವಾದ ಬುದ್ಧಿತ್ವವನ್ನು ವಿವಕ್ಷಾಮಾಡಿದರೆ ದೃಷ್ಟಾಂತದಲ್ಲಿ ಸಾಧನವೈಕಲ್ಯವು. ಪ್ರಯೋಜಕತ್ವವನ್ನು ಇಟ್ಟುಕೊಂಡರೆ— ಚಕ್ಷುರಾದಿಗಳಲ್ಲಿ ವ್ಯಭಿಚಾರವು. ಕೇವಲಶಬ್ದಸಾಮರ್ಥ್ಯದಿಂದ ಅನುಮಾನ ಹೇಳಿದರೆ— 'ವಾಕ್ ಶೃಂಗವತೀ ಗೋತ್ವಾತ್' ಗೋತ್ವರೂಪ ಹೇತುವಿನಿಂದ ವಚನಾದಿಗಳಿಗೂ ಶೃಂಗವೊದಲಾದುದು ಇರಬೇಕೆನ್ನುವ ಅನಿಷ್ಟವು ಬರಬೇಕಾಗುವುದು. ತಮೋ ವಿರೋಧಿತ್ವವೆನ್ನುವುದೊಂದೇ ಪಕ್ಷ ದೃಷ್ಟಾಂತ ಎರಡರಲ್ಲಿಯೂ ಇದೆ ಎಂದರೆ—ಹಾಗೂ ಹೇಳಕೂಡದು. ತಮಸ್ಸು ಎಂದರೆ, ಅವಿದ್ಯೆಯೆಂದು ಹೇಳಿದರೆ ದೃಷ್ಟಾಂತದಲ್ಲಿ ಸಾಧನವಿಲ್ಲವು. ಅಂಧಕಾರವೆಂದು ಹೇಳಿದರೆ— ಅಸಿದ್ಧಿಯು. (17) ಅಭಾವಮಾನಾಗಮ್ಯತ್ವಾತ್ ಎನ್ನುವ (3ನೇ) ಅನುಮಾನವೂ ಅಸಿದ್ಧವೇ ಆಗಿದೆ. (18) 'ಅಜ್ಞಾನಂ ನ ಮಾನಗಮ್ಯಂ ಮಾನನಿವರ್ತ್ಯತ್ವಾತ್' ಅಜ್ಞಾನವು ಪ್ರಮಾಣದಿಂದ ಗಮ್ಯವಲ್ಲ, ಪ್ರಮಾಣದಿಂದ ನಿವರ್ತ್ಯವಾಗಿರುವುದರಿಂದ ಎಂದೂ ಹೇಳಕೂಡದು. ಹಾಗಿದ್ದರೆ, ಆ ಅಜ್ಞಾನದಲ್ಲಿ ಪ್ರಮಾಣೋಪನ್ಯಾಸವೇ ವ್ಯರ್ಥವಾಗಬೇಕಾಗುವುದು. ಹಿಂದೆ ಹೇಳಿದ ಪ್ರಮಾಣಗಳಿಂದ ಪ್ರಮಾಣವಿಲ್ಲವೆನ್ನುವುದು ನಿರಾಕರಿಸಲ್ಪಡುತ್ತದೆ ಎಂದು ಹೇಳಕೂಡದು. ಅಭಾವವ್ಯಾವರ್ತನಂ ಭಾವಸಾಧನಂ ಎನ್ನುವುದು ಎರಡೂ ಒಂದೇ ಆಗಿದೆ. (19) ಪ್ರಮಾಣಜ್ಞಾನತ್ವಾತ್ ಎನ್ನುವ ನಾಲ್ಕನೇ ಅನುಮಾನವಾದರೂ 'ದೇವದತ್ತಘಟಃ ದೇವದತ್ತ ಘಟಾಭಾವಾತಿರಿಕ್ತನಾದೇರ್ನಿವರ್ತಕಃ ಘಟತ್ವಾತ್ ಯಜ್ಞದತ್ತಘಟವತ್' ದೇವದತ್ತ ಘಟವು ದೇವದತ್ತನ ಘಟಾಭಾವದಿಂದ ಬೇರೆಯಾದ ಅನಾದಿಯನ್ನು ಹೋಗಲಾಡಿಸುತ್ತದೆ, ಘಟವಾಗಿರುವುದರಿಂದ ಯಜ್ಞದತ್ತನ ಘಟದಂತೆ ಎನ್ನುವ ಅನುಮಾನದಿಂದ ಘಟಾಭಾವದಿಂದ ಬೇರೆಯಾದ ಯಾವುದೋ ಒಂದು ಅನಾದಿಭಾವರೂಪವಾದುದೂ, ಘಟದಿಂದ ನಿವರ್ತ್ಯವಾದುದೂ ಸಿದ್ಧಿಸಬೇಕಾಗುವುದು ಎನ್ನುವ ಅತಿಪ್ರಸಂಗದಿಂದ ಬಾಧಿತವಾಗಿದೆ.

(20) 'ತಮಃ ಆಸೀತ್' ಇದುವೊದಲಾದ ಶ್ರುತಿಯು ನಿಮಗೆ ಅಭಿಮತವಾದ ಅನಿರ್ವಚನೀಯಾಜ್ಞಾನವನ್ನು ಪ್ರತಿಪಾದಿಸುವುದೇ ಇಲ್ಲವು. (21) 'ತ್ವದುಕ್ತಮರ್ಥಂ ನ ಜಾನಾಮಿ' ಎನ್ನುವ ವ್ಯವಹಾರವಾದರೂ ಜ್ಞಾನಾಭಾವವಿಷಯಕವೂ ಆಗುತ್ತದೆ. ಅಲ್ಲಿ ಹೇಳಿದ ಅನುಪಪತ್ತಿಗೆ ನೀನೂ ಸಮಾಧಾನವನ್ನು ಹೇಳಬೇಕು. ಇಲ್ಲವಾದರೆ- ನಿಮ್ಮ ಮತದಲ್ಲಿಯೂ ಜ್ಞಾನಾಭಾವವ್ಯವಹಾರವೇ ಕೂಡದೆ ಹೋಗಬೇಕಾಗುವುದು. (22) ಅಧ್ಯಾಸರೂಪಕಾರ್ಯವು ಕೂಡುವುದಿಲ್ಲವೆನ್ನುವುದು ಇಲ್ಲವೇ ಇಲ್ಲ. ರಜತಾಧ್ಯಾಸಕ್ಕೆ ಅಂತಃಕರಣವೇ ಉಪಾದಾನಕಾರಣವೆಂದು ಕೂಡುತ್ತದೆ. ತಥಾಚ, ಮಿಥ್ಯಾಭೂತವೇ ಆದ ಯಾವುದಾದರೊಂದು ಉಪಾದಾನ ಕಾರಣವನ್ನು ಹುಡುಕಬೇಕೆಂದು

ಹೇಳಿದ್ದು ಸರಿಯಲ್ಲ. ಸತ್ಯಭೂತವಾದುದೇ ಉಪಾದಾನ ಕಾರಣವೆಂದು ಇಟ್ಟುಕೊಂಡರೆ ಅಧ್ಯಾಸ ರೂಪ ಕಾರ್ಯಕ್ಕೆ ಸತ್ಯತ್ವವು ಬರಬೇಕಾಗುವುದೆನ್ನುವುದು ಇಷ್ಟವೇ. ರಜತದಂತೆ ಜ್ಞಾನಕ್ಕೂ ಬಾಧವಿಲ್ಲ. ಅಂದರೆ ಇಷ್ಟರವರೇಗೆ ರಜತಜ್ಞಾನವಿತ್ತು. ಭ್ರಾಂತಿಯು ಇತ್ತು ಎನ್ನುವ ಅನುಭವ ದಿಂದ ಜ್ಞಾನಸ್ವರೂಪಕ್ಕೆ ಸತ್ಯತ್ವವೇ ಇತ್ತು. ಜ್ಞಾನಸ್ವರೂಪವು ಆರೋಪಿತವಾಗದಿರುವುದ ರಿಂದ ಸತ್ಯವೆಂದು ಹೇಳಿದರೆ— ಯಾಥಾರ್ಥ್ಯವೂ ಬರಬೇಕಾಗುವುದು:, ಎಂದು ಹೇಳಕೂಡದು. ಸ್ವರೂಪಸತ್ತಿಗೂ ವಿಷಯವು ಅಸತ್ತಾಗಿರುವುದರಿಂದ ಅಯಾಥಾರ್ಥ್ಯವು ಕೂಡುತ್ತದೆ. ಸ್ವರೂಪ ಸತ್ಯವಾದುದಕ್ಕೆ ವಿಷಯವು ಸತ್ಯವಾಗಬೇಕೆಂದು ನಿಯಾಮಕವಿಲ್ಲ ಸಾಕ್ಷಿ ಚೈತನ್ಯವು ಸತ್ಯ ವಾಗಿದ್ದಾಗ್ಯೂ ಸಾಕ್ಷಿವಿಷಯಗಳಾದ ದುಃಖಾದಿಗಳು ನಿಮ್ಮ ಮತದಲ್ಲಿ ಮಿಥ್ಯೆಯಾಗಿವೆ. ರಜತಾದಿರೂಪವಾದ ಅರ್ಥವಾದರೂ ಅಸತ್ತಾಗಿರುವುದರಿಂದ ಕಾರಣವನ್ನೇ ಅಪೇಕ್ಷಿಸುವುದಿಲ್ಲ. ಜ್ಞಾನದಿಂದ ಬಂಧನಿವೃತ್ತಿಯಾಗುತ್ತದೆ ಎನ್ನುವುದು ಅಸಿದ್ಧವೇ. ಅಂದರೆ, ಜ್ಞಾನದಿಂದುಂಟಾ ಗತಕ್ಕ ಪ್ರಸಾದದಿಂದಲೇ ಮುಕ್ತನಾಗುತ್ತಾನೆಂದು ಹೇಳಿಯಾಗಿದೆ. ಆದಕಾರಣ ಹಿಂದೆ ಹೇಳಿದ ಪ್ರಮಾಣಗಳಿಂದ ಭಾವರೂಪಾಜ್ಞಾನವು ಸಿದ್ಧಿಸುವುದಿಲ್ಲ. ಆದಪ್ರಯುಕ್ತ 'ಅಜ್ಞಾನಾಭಾವತಃ' ಎಂದು ಹೇಳಿದ್ದು ಯುಕ್ತವೇ. (23) ಮತ್ತು ನಾವು (ದ್ವೈತಿಗಳು) ಅಜ್ಞಾನವು ಸಾಕ್ಷಿವೇದ್ಯ ವೆಂದಂಗೀಕರಿಸಿರುವುದರಿಂದ ಭಾವರೂಪಾಜ್ಞಾನಕ್ಕೆ ವಿರೋಧಿಗಳಲ್ಲ. ಮತ್ತೆ ಪರರ ಪಕ್ಷದಲ್ಲಿ ಅದು ಕೂಡುವುದಿಲ್ಲವೆಂದು ಮಾತ್ರ ಹೇಳುತ್ತೇವೆ ॥ ೩೨ ॥

ಹಾಗಾದರೆ ನೀವೂ ಅಜ್ಞಾನವನ್ನಂಗೀಕರಿಸಿದರ ನಿಮಗೂ (ದ್ವೈತಿಗಳಿಗೂ) ಹಿಂದೆ ಹೇಳಿದ ಅನ್ಯೋನ್ಯಾಶ್ರಯಾದಿ ದೋಷಗಳು ಬರುವುದರಿಂದ ನಿಮ್ಮ ಮತದಲ್ಲಿಯೂ ಶಾಸ್ತ್ರಕ್ಕೆ ವೈಯರ್ಥ್ಯವು ಬರುವುದೆಂದರೆ —

**ಮೂ ॥ ಸ್ವಭಾವಾಜ್ಞಾನವಾದಸ್ಯ ನಿರ್ದೋಷತ್ವಾನ್ನ ತದ್ಭವೇತ್ ॥ ೩೩ ॥**

ಅ ॥ ಸ್ವಭಾವಾಜ್ಞಾನವಾದಸ್ಯ= (ಸ್ವಶ್ಚಾಸೌ ಭಾವಶ್ಚ ಸ್ವಭಾವಃ=ಜ್ಞಾನರೂಪನಾದ ಜೀವನು) ಅಜ್ಞಾನವು ಜೀವಾಶ್ರಿತವೂ ಜೀವನಿಗೆ ಆವರಣವೂ ಆಗಿದೆ ಎನ್ನುವ ವಾದಕ್ಕೆ, ನಿರ್ದೋಷತ್ವಾತ್ = ಅಜ್ಞಾನವು-ಜಡಾಶ್ರಿತವು-ಬ್ರಹ್ಮಾಶ್ರಿತವು ಎನ್ನುವ ವಾದದಲ್ಲಿ ಹೇಳಿದ ದೋಷವಿಲ್ಲದಿರುವುದರಿಂದ, ತತ್=ಶಾಸ್ತ್ರಕ್ಕೆ ವೈಯರ್ಥ್ಯವು, ನ ಭವೇತ್=(ನಮ್ಮ ಮತದಲ್ಲಿ) ಬರಲಾರದು. ಹಾಗೆಯೇ, (ಸ್ವಯಮೇವ ಭವತೀತಿ ಸ್ವಭಾವಃ) ಅಜ್ಞಾನವು ಅಜ್ಞಾನಪರಿಕಲ್ಪಿತ ವಲ್ಲ ಎನ್ನುವ ವಾದಕ್ಕೆ, ಅನ್ಯೋನ್ಯಾಶ್ರಯದೋಷವಿಲ್ಲದಿರುವುದರಿಂದ ಶಾಸ್ತ್ರವೈಯರ್ಥ್ಯವಿಲ್ಲವು. ಅಥವಾ (ಸ್ವಶ್ಚಾಸೌ ಭಾವಶ್ಚ=ಸ್ವಭಾವಃ) ಸ್ವತಂತ್ರನಾದ ಪರಮಾತ್ಮನಾಗಲೀ (ಸ್ವಸ್ಯ ಭಾವಃ= ಸ್ವಭಾವಃ) ಜೀವನ ಧರ್ಮವಾದ ಪಾರತಂತ್ರ್ಯಾದಿಗಳಾಗಲೀ ಸ್ವಭಾವವು, ತದ್ವಿಷಯಕವಾದ ಅಜ್ಞಾನವು ಜೀವನಿಗೆ ಎನ್ನುವ ವಾದಕ್ಕೆ ಸ್ವಪ್ರಕಾಶನಲ್ಲಿ ಸ್ವವಿಷಯವಾದ ಅಜ್ಞಾನವು ಕೂಡುವು ದಿಲ್ಲ ಎನ್ನುವ ದೋಷವಿಲ್ಲದಿರುವುದರಿಂದ ಶಾಸ್ತ್ರಕ್ಕೆ ವೈಯರ್ಥ್ಯವಿಲ್ಲವು. ಅಥವಾ ಅಜ್ಞಾನವು ಸ್ವಭಾವಭೂತವೇ ಮಿಥ್ಯೆಯಲ್ಲ ಎನ್ನುವ ವಾದಕ್ಕೆ ಅನವಸ್ಥಾದಿ ದೋಷಗಳಿಲ್ಲದಿರುವುದರಿಂದ ವೈಯರ್ಥ್ಯವಿಲ್ಲ. ಅಥವಾ ಸ್ವತಂತ್ರನಾದ ಪರಮೇಶ್ವರನಿಂದ ಅಜ್ಞಾನವು ಜೀವನಿಗೆ ಎನ್ನುವ ವಾದಕ್ಕೆ ಸ್ವಪ್ರಕಾಶಸ್ವರೂಪದಿಂದ ಅಭಿನ್ನವಾದ ಧರ್ಮವಿಷಯಕವಾದದ್ದು ಅಜ್ಞಾನವು ಜೀವ ನಲ್ಲಿ ಯುಕ್ತವಲ್ಲ ಎನ್ನುವ ದೋಷವಿಲ್ಲದಿರುವುದರಿಂದ ವೈಯರ್ಥ್ಯವಿಲ್ಲ.

**ತಾ ॥ ನ್ಯಾಯಸುಧಾ** — (1) ನಮ್ಮ ಮತದಲ್ಲಿ ಅಜ್ಞಾನವನ್ನಂಗೀಕರಿಸಿದರೆ ದೋಷ ವಿಲ್ಲ, ಆದಕಾರಣ ಶಾಸ್ತ್ರಕ್ಕೆ ವಿಷಯಪ್ರಯೋಜನಗಳಿಲ್ಲವೆಂದಿಲ್ಲ. ಅಜ್ಞಾನವು ಜೀವಾಶ್ರಿತವೂ

ಜೀವನಿಗೆ ಆವರಣವೂ ಎಂದಂಗೀಕರಿಸುತ್ತೇವೆ. ಜೀವನು ಸ್ವಾಭಾವಿಕವಾಗಿಯೇ ಬ್ರಹ್ಮನಿಂದ ಭಿನ್ನನು, ಜ್ಞಾನಸ್ವರೂಪನೂ ಆಗಿರುತ್ತಾನೆ. ಜೀವನು ಸ್ವಪ್ರಕಾಶನಾದಾಗ್ಯೂ ಪರಮೇಶ್ವರನ ಇಚ್ಛೆಯಿಂದ ಪರಮೇಶ್ವರನ ವಿಷಯದಲ್ಲಿಯೂ ತನ್ನ ಪಾರತಂತ್ರ್ಯಾದಿ ಧರ್ಮಗಳಲ್ಲಿಯೂ ಅಜ್ಞಾನವು ಯುಕ್ತವೇ ಆಗುತ್ತದೆ. (2) ಯದ್ಯಪಿ ಪಾರತಂತ್ರ್ಯ ಮೊದಲಾದ ಜೀವಧರ್ಮಗಳು ಸ್ವಪ್ರಕಾಶಜೀವಚೈತನ್ಯದಿಂದ ಭಿನ್ನಗಳಾಗುವುದಿಲ್ಲ. ಆದಾಗ್ಯೂ ಸವಿಶೇಷಾಭಿನ್ನಗಳೆಂದಂಗೀಕರಿಸಿರುವುದರಿಂದ ಅಜ್ಞಾನವಿಷಯತ್ವವು ಯುಕ್ತವಾಗುತ್ತದೆ. (3) ಅಜ್ಞಾನವೂ ಸತ್ಯವೇ. ಅಜ್ಞಾನ ಪರಿಕಲ್ಪಿತವಲ್ಲ. ಅಂಥಾದ್ದಕ್ಕೂ ನಿವೃತ್ತಿಯು ಕೂಡಬಹುದು. (4) ಯದ್ಯಪಿ ಜೀವಚೈತನ್ಯವು ಬ್ರಹ್ಮ-ಸ್ವಧರ್ಮ ಇವುಗಳ ಪ್ರಕಾಶಸ್ವರೂಪವು. ಆದಾಗ್ಯೂ ಪರಬ್ರಹ್ಮನ ಅಚಿಂತ್ಯವಾದ ಅದ್ಭುತ ಶಕ್ತಿಯಿಂದ ಸಾಮರ್ಥ್ಯವನ್ನು ಹೊಂದಿದ ಅವಿದ್ಯೆಯು ವಶದಿಂದ ಸಂಸಾರದಶೆಯಲ್ಲಿ ಬ್ರಹ್ಮನನ್ನೂ ಸ್ವಧರ್ಮಗಳನ್ನೂ ತಿಳಿಸುವುದಿಲ್ಲ ॥ ೩೩ ॥

ಅವಿದ್ಯೆಯು ನಮ್ಮ ಮತದಲ್ಲಿದ್ದೇ ಇದೆ. ಅದು ದುರ್ಘಟಸ್ವಭಾವವುಳ್ಳದ್ದು. "**ದುರ್ಘಟತ್ವಮವಿದ್ಯಾಯಾ ಭೂಷಣಂ ನ ತು ದೂಷಣಂ । ಕಥಂಚಿದ್ಘಟಮಾನತ್ವೇಽವಿದ್ಯಾತ್ವಂ ದುರ್ಘಟಂ ಭವೇತ್**" ॥ ಅವಿದ್ಯೆಗೆ ದುರ್ಘಟತ್ವವು (ವಿಚಾರಾಸಹಿಷ್ಣುತ್ವವು) ಭೂಷಣವು. (ಅದರ ಸ್ವರೂಪಕ್ಕೆ ಅವಿರೋಧಿಯು.) ದೂಷಣವು (ಅದರ ಸ್ವರೂಪಕ್ಕೆ ಉಪಮರ್ದಕವು) ಅಲ್ಲ. ಹೇಗಾದರೂ ಕೂಡುವುದಾದರೆ ಅವಿದ್ಯಾತ್ವವೇ ದುರ್ಘಟವಾಗಬೇಕಾಗುವುದು. (ಅಂದರೆ "ಅವಿದ್ಯಾಯಾ ಅವಿದ್ಯಾತ್ವಮಿದಮೇವ ಹಿ ಲಕ್ಷಣಂ । ಯದ್ವಿಚಾರಾಸಹಿಷ್ಣುತ್ವಂ" ಎಂದು ಉಕ್ತವಾಗಿದೆ.) ಎಂದು ಪ್ರಾಚೀನರು ಹೇಳಿರುವುದರಿಂದ ಅವಿದ್ಯೆಗೆ ದುರ್ಘಟತ್ವವು ಭೂಷಣವೇ. ದೂಷಣವಲ್ಲ. ಆದಕಾರಣ ಹಿಂದೆ ಹೇಳಿದ ಆಶ್ರಯ ವಿಷಯಾದಿಗಳು ಇಲ್ಲವೆಂಬುವ ಅನುಪಪತ್ತಿಯು, ಅವಿದ್ಯೆಯು ಸಿದ್ಧಿಸುವುದರಲ್ಲಿ ಬಾಧಕವಾಗಲಾರದು, ಎಂದು ಅದ್ವೈತಿಗಳು ಹೇಳಿದರೆ ಹೀಗೆ ಕೇಳಬೇಕು. ಅವಿದ್ಯೆಯು ದುರ್ಘಟ-ಸುಘಟ ಸ್ವಭಾವವುಳ್ಳದ್ದೋ? ಅಥವಾ ದುರ್ಘಟವೇ ಸ್ವಭಾವವಾಗಿ ಉಳ್ಳದ್ದೋ? ೧ನೇದ್ದು ಕೂಡಲಾರದು. ಸುಘಟವಾದ ಅಂಶದಲ್ಲಿ ಅವಿದ್ಯಾತ್ವವೇ ಇಲ್ಲವೆಂದಾಗಬೇಕಾಗುವುದು. ೨ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ—

**ಮೂ ॥ ಅವಿದ್ಯಾದುರ್ಘಟತ್ವಂ ಚೇತ್ಸ್ಯಾದಾತ್ಮಾಽಪಿ ಹಿ ತಾದೃಶಃ ।**
**ಅತೋಽಧಿಕಾರಿವಿಷಯಫಲಯೋಗಾದಿವರ್ಜಿತಂ ॥**
**ಅನಂತದೋಷದುಷ್ಟಂ ಚ ಹೇಯಂ ಮಾಯಾಮತಂ ಶುಭೈಃ ॥ ೩೪ ॥**

ಅ ॥ ಅವಿದ್ಯಾದುರ್ಘಟತ್ವಂ ಚೇತ್=ಅವಿದ್ಯೆಗೆ ದುರ್ಘಟತ್ವವು ಸ್ವಭಾವವೆಂದಾದರೆ ಹಿ=ಆದುದರಿಂದ, ಆತ್ಮಾಽಪಿ = ಆತ್ಮನೂಕೂಡ, ತಾದೃಶಃ = ಅವಿದ್ಯಾಸದೃಶನು, ಅಂದರೆ ಮಿಥ್ಯಾಭೂತನು, ಸ್ಯಾತ್=ಆಗುವನು, ಅತಃ=ಪರರ ಮತದಲ್ಲಿ ಅವಿದ್ಯೆಯು ಕೂಡದಿರುವುದರಿಂದ, 'ಅಧಿಕಾರಿಫಲಯೋಗಾದಿವರ್ಜಿತಂ' ಅಧಿಕಾರಿ=ಅಧಿಕಾರಿಯು, ವಿಷಯ=ಸಂದಿಗ್ಧವಾದದ್ದು ವಿಪರ್ಯಸ್ತವಾದುದು, ಫಲ=ಫಲವು, ಯೋಗ=ವಿಷಯಪ್ರಯೋಜನಗಳಿಗೆ ಪರಸ್ಪರವಾಗಿಯೂ ಶಾಸ್ತ್ರದಿಂದಲೂ ಸಂಬಂಧವೂ, ಇವುಗಳೇ, ಆದಿ= ಮೊದಲಾದ ಸ್ವಪಕ್ಷಸಾಧಕ ಪ್ರಮಾಣಾದಿಗಳಿಂದ, ವರ್ಜಿತಂ=ರಹಿತವಾದ, ಅನಂತದೋಷದುಷ್ಟಂ ಚ=ಅನಂತಾನಂತ ದೋಷಗಳಿಂದ ದುಷ್ಟವಾದ, ಮಾಯಾಮತಂ=ಮಾಯಾವಾದಿಗಳ ಮತವು, ಶುಭೈಃ= ಸಜ್ಜನರಿಂದ, ಹೇಯಂ=ಬಿಡಲರ್ಹವು.

**ತಾ ‖ ನ್ಯಾಯಸುಧಾ—** (1) ಅವಿದ್ಯೆಯು ಕೇವಲ ದುರ್ಘಟತ್ವ-ಭಾವವೇ?, ಆದರೆ ಅದಕ್ಕೆ ಅಧಿಷ್ಠಾನವನ್ನೂ ಸಾಕ್ಷಿಯನ್ನೂ ಒಡಂಬಡಬೇಕಾಗಿಲ್ಲ. ಹಾಗಿದ್ದರೆ, ಸುಘಟವೇ ಆಗ ಬೇಕಾಗಿರುವುದರಿಂದ ಅವಿದ್ಯಾತ್ವ-ವೇ ಇಲ್ಲವೆಂದಾಗಬೇಕಾಗುವುದು. ಅಂತೂ ಅವಿದ್ಯಾಧಿಷ್ಠಾನ ವಾಗಿಯೂ ಅವಿದ್ಯಾಸಾಕ್ಷಿಯಾಗಿಯೂ ಆತ್ಮಚೈತನ್ಯವನ್ನು ಒಡಂಬಡಬೇಕಾಗಿಲ್ಲದಿರುವುದರಿಂದ ಶೂನ್ಯವಾದವು ಬರಬೇಕಾಗುವುದು. (2) 'ಅತೋಽಧಿಕಾರಿ' ಎನ್ನುವುದರಿಂದ, 'ನಿರ್ವಿಶೇಷೇ' ಇತ್ಯಾದಿಗಳಿಂದ ಹೇಳಿದ್ದನ್ನುಪಸಂಹಾರ ಮಾಡಿದರು. (3) ಅಜ್ಞಾನವಿದ್ದರೆ ಅಜ್ಞಾನಿಯು, ವಿಪ್ರತಿಪನ್ನನು, ಸಂಶಯಗ್ರಸ್ತನಾಗಲೀ ಶಾಸ್ತ್ರದಲ್ಲಿ ಅಧಿಕಾರಿಯಾಗುವನು. ಅಜ್ಞಾತವಾದುದು ವಿಷಯವಾಗುವುದು. ಅಜ್ಞಾನನಿವೃತ್ತಿಯು ಪ್ರಯೋಜನವು. ವಿಷಯಾದಿಗಳು ಇಲ್ಲವಾದರೆ ಸಂಬಂಧವು ಕೂಡಲಾರದು. ಅಧಿಕಾರ್ಯಾದಿಗಳಿಲ್ಲದಿರುವುದರಿಂದ ಮಾಯಾವಾದಿಗಳ ಮತವು ಸರ್ವಥಾ ಅನಾದರಣೀಯವೂ ಅತ್ಯಂತ ಹೇಯವೂ ಆಗಿರುತ್ತದೆ. (4) ಆದಿಯಲ್ಲಿ "ಅಜ್ಞಾನಂ" ಎಂದು ಹೇಳಿ "ಮಾಯಾ" ಎನ್ನುವ ಉಪಸಂಹಾರವು ಅಜ್ಞಾನಕ್ಕೇನೇ ಅವಸ್ಥಾಭೇದದಿಂದ (ಅಂದರೆ ಪ್ರಧಾನವಾಗಿ ವಿಕ್ಷೇಪ ಆಚ್ಛಾದನಾದಿಗಳಿಗೆ ಭೇದದಿಂದಲಾಗಲೀ ಇಚ್ಛಾಧೀನತ್ವ ಇಚ್ಛಾನಧೀನತ್ವಗಳಿಗೆ ಭೇದದಿಂದಲಾಗಲೀ) ಮಾಯಾ ಅವಿದ್ಯಾ ಎಂದು ಎರಡು ಹೆಸರು. (**"ಏಕಸ್ಮಿನ್ನಪಿ ವಸ್ತುನಿ ವಿಕ್ಷೇಪಪ್ರಾಧಾನ್ಯೇನ ಮಾಯಾ ಆಚ್ಛಾದನಪ್ರಾಧಾನ್ಯೇ ನಾವಿದ್ಯೇತಿ ವ್ಯವಹಾರಭೇದಃ ಇಚ್ಛಾಧೀನತ್ವ ತದ್ವೈಪರೀತ್ಯೇನ ವ್ಯವಹಾರಭೇದಃ"**) ಒಂದೇ ವಸ್ತುವಿನಲ್ಲಿ ವಿಕ್ಷೇಪಪ್ರಾಧಾನ್ಯದಿಂದ ಮಾಯಾ ಎಂದೂ ಆಚ್ಛಾದನಪ್ರಾಧಾನ್ಯದಿಂದ ಅವಿದ್ಯಾ ಎಂದೂ ವ್ಯವಹಾರಭೇದವು, ಎಂದು ವಿವರಣಕಾರರು ಹೇಳಿರುವರು.) ವಸ್ತುಗಳು ಬೇರೆಯಲ್ಲ ಎಂದು ಪರರ ಮತವನ್ನು ಪ್ರಕಟೀಕರಿಸುವುದಕ್ಕಾಗಿ 'ಹೇಯಂ ಮಾಯಾ ಮತಂ ಶುಭೈಃ' ಎಂದು ಉಪಸಂಹಾರ ಮಾಡಿರುವರು ‖ ೩೪ ‖

**ನ್ಯಾಯಸುಧಾ—** ಮಂತ್ರ ಬ್ರಾಹ್ಮಣ ಉಪನಿಷದ್ರೂಪಗಳಾದ ವೇದಭಾಗಗಳಲ್ಲಿ ಮಂತ್ರ ಬ್ರಾಹ್ಮಣಗಳು ಅಯಥಾರ್ಥ ಪ್ರತಿಪಾದಕಗಳೂ ಅಜ್ಞಾನಿಯೇ ಅಧಿಕಾರಿಯಾಗಿವುಳ್ಳವು ಗಳೂ ಆಗಿರುವುದರಿಂದ ಭೇದವನ್ನು ಪ್ರತಿಪಾದಿಸುವವುಗಳಾದಾಗ್ಯೂ ಉಪನಿಷತ್ತುಗಳು ಅದ್ವೈತ ವನ್ನೇ ಪ್ರತಿಪಾದಿಸುತ್ತವೆ. ಅವುಗಳಲ್ಲಿಯೂ 'ತತ್ತ್ವಮಸಿ' ಇತ್ಯಾದಿ ಮಹಾವಾಕ್ಯಗಳು ಸಾಕ್ಷಾ ತ್ತಾಗಿ ಜೀವನಿಗೆ ಬ್ರಹ್ಮನಿಂದ ಐಕ್ಯವನ್ನು ಪ್ರತಿಪಾದಿಸುತ್ತವೆ. 'ಸದೇವ ಸೌಮ್ಯ' ಇತ್ಯಾದಿ ವಾಕ್ಯಗಳು ತತ್ಪದಾರ್ಥಭೂತವಾದ ಬ್ರಹ್ಮಸ್ವರೂಪವನ್ನು ತಿಳಿಸುತ್ತಾ ಐಕ್ಯದಲ್ಲಿ ತಾತ್ಪರ್ಯ ವುಳ್ಳವುಗಳು. 'ಅಥ ಯೋ ವೇದಂ ಜಿಘ್ರಾಣಿ' ಇತ್ಯಾದಿ ವಾಕ್ಯಗಳೂ 'ತ್ವಂ' ಪದಾರ್ಥಭೂತ ವಾದ ಜೀವಸ್ವರೂಪವನ್ನು ತಿಳಿಸುತ್ತಾ ಐಕ್ಯದಲ್ಲಿಯೇ ತಾತ್ಪರ್ಯವನ್ನು ಹೊಂದುತ್ತವೆ. ಸೃಷ್ಟ್ಯಾದಿ ಪ್ರತಿಪಾದಕ ವಾಕ್ಯಗಳೂ ಬ್ರಹ್ಮನಿಗೆ ನಿಷ್ಪ್ರಪಂಚತ್ವವನ್ನು ಹೇಳುವುದಕ್ಕಾಗಿ ಅನುವಾದರೂಪಗಳಾಗಿವೆ. ಪ್ರಾಣಾದ್ಯುಪಾಸನಾ ವಾಕ್ಯಗಳೂ ಅಂತಃಕರಣಕ್ಕೆ ಬಾಹ್ಯವೃತ್ತಿ ಯನ್ನು ನಿರೋಧಿಸುತ್ತಾ ಅದ್ವೈತಜ್ಞಾನವನ್ನು ಹುಟ್ಟಿಸುವುದರಲ್ಲಿಯೇ ಉಪಯುಕ್ತಗಳು. ಹೀಗೆಯೇ ಎಲ್ಲಾ ವೇದಾಂತ ವಾಕ್ಯಗಳಿಗೂ ಜೀವಬ್ರಹ್ಮೈಕ್ಯವೇ ವಿಷಯವಾಗಿರುವುದರಿಂದ ಅವು ಗಳಿಗೆ ಉಪಕರಣಭೂತವಾದ ಮೀಮಾಂಸಾ ಶಾಸ್ತ್ರಕ್ಕೂ ಐಕ್ಯವೇ ವಿಷಯವೆಂದು ಹೇಳುವುದೇ ಯುಕ್ತವು, ಎಂದು ಅದ್ವೈತಿಗಳು ಹೇಳಿದರೆ—

'ತತ್ತ್ವಮಸಿ' ಎನ್ನುವ ವಾಕ್ಯವು ಐಕ್ಯಪರವಾಗಿದ್ದರೆ ಬೇರೆ ಎಲ್ಲಾ ವಾಕ್ಯಗಳಿಗೂ ಅಲ್ಲಿಯೇ ತಾತ್ಪರ್ಯವೆಂದು ಹಿಂದೆ ಹೇಳಿದ ಸಮನ್ವಯ ಪ್ರಕ್ರಿಯೆಯು ಕೂಡಬಹುದಿತ್ತು. ಆ 'ತತ್ತ್ವಮಸಿ' ಇತ್ಯಾದಿ ವೇದಗಳಿಗೇನೇ ಐಕ್ಯವು ವಿಷಯವಾಗುವುದಿಲ್ಲ. ಏಕೆಂದರೆ—

'ತತ್ತ್ವಮಸಿ' ಎನ್ನುವಲ್ಲಿ 'ತ್ವಂ' ಪದಾರ್ಥನಾದ ಜೀವನಿಗೆ 'ತತ್' ಪದಾರ್ಥವಾದ ಬ್ರಹ್ಮತ್ವವನ್ನು ಮುಖ್ಯವೃತ್ತಿಯಿಂದ ಆಗಲೀ ಸರ್ವಜ್ಞತ್ವ ಅಲ್ಪಜ್ಞತ್ವರೂಪ ವಿರೋಧಿ ಅಂಶಗಳನ್ನು ಬಿಟ್ಟು ಚೈತನ್ಯಸ್ವರೂಪದಲ್ಲಿ ಮಾತ್ರ ಲಕ್ಷಣೆಯಿಂದಾಗಲೀ ಪ್ರತಿಪಾದಿಸತಕ್ಕುದು. ಎರಡು ಪ್ರಕಾರವೂ ಕೂಡುವುದಿಲ್ಲವೆನ್ನುತ್ತಾರೆ.

**ಮೂ || ಸತ್ಯತ್ವಾತ್ತೇನ ದುಃಖಾದೇಃ ಪ್ರತ್ಯಕ್ಷೇಣ ವಿರೋಧತಃ |**
**ನ ಬ್ರಹ್ಮತಾಂ ವದೇದ್ವೇದೋ ಜೀವಸ್ಯ ಹಿ ಕಥಂಚನ || ೩೫ ||**

ಅ || ವೇದಃ= 'ತತ್ತ್ವಮಸಿ' ಇತ್ಯಾದಿ ವೇದವು, ಕಥಂಚನ=ಹೇಳಿದ ಎರಡು ಪ್ರಕಾರಗಳಿಂದಲೂ, ಅಂದರೆ ಮುಖ್ಯವೃತ್ತಿಯಿಂದಲೂ ಲಕ್ಷಣಾವೃತ್ತಿಯಿಂದಲೂ, ಹಿ= ಯಾವ ಕಾರಣದಿಂದ, ಜೀವಸ್ಯ= ತ್ವಂ ಪದಾರ್ಥನಾದ ಜೀವನಿಗೆ, ಬ್ರಹ್ಮತಾಂ= ತತ್ಪದಾರ್ಥ ಬ್ರಹ್ಮತ್ವವನ್ನು, ನ ವದೇತ್= ಹೇಳುವುದಿಲ್ಲವೋ, (ಆದಕಾರಣ ಮೀಮಾಂಸಾ ಶಾಸ್ತ್ರಕ್ಕೂ ಆ ಐಕ್ಯವು ವಿಷಯವಾಗುವುದಿಲ್ಲ. ಏಕೆಂದರೆ) ಪ್ರತ್ಯಕ್ಷೇಣ= ಪ್ರತ್ಯಕ್ಷಪ್ರಮಾಣದಿಂದ, ವಿರೋಧತಃ= ವಿರೋಧವಿದ್ದುದರಿಂದ, (ಹೇಗೆಂದರೆ) ತೇನ= ಆ ಪ್ರತ್ಯಕ್ಷದಿಂದ, ದುಃಖಾದೇಃ= ದುಃಖಮೊದಲಾದುದಕ್ಕೆ, ಸತ್ಯತ್ವಾತ್= ಸತ್ಯತ್ವವು ನಿಶ್ಚಿತವಾಗುವುದರಿಂದ.

ತಾ || (1) 'ತತ್ತ್ವಮಸಿ' ಇತ್ಯಾದಿ ವಾಕ್ಯವು 'ತ್ವಂ' ಪದವಾಚ್ಯನಾದ ಜೀವನಿಗೆ ತತ್ಪದಮುಖ್ಯಾರ್ಥನಾದ ಬ್ರಹ್ಮನಿಂದ ಐಕ್ಯವನ್ನು ಪ್ರತಿಪಾದಿಸುತ್ತದೆ, ಎನ್ನುವುದು ಯುಕ್ತವಲ್ಲ. ಪ್ರತ್ಯಕ್ಷವಿರೋಧವು ಬರುವುದು. (2) ದುಃಖಾದಿಗಳಿಂದೊಡಗೂಡಿದ ಜೀವನು ತ್ವಂ ಪದವಾಚ್ಯನು. ಅಂತಹ ಜೀವನಿಗೆ ದುಃಖಾದಿಗಳ ಸಂಪರ್ಕವೇ ಇಲ್ಲದಿರುವ ತತ್ಪದವಾಚ್ಯನಾದ ಬ್ರಹ್ಮನಿಂದ ಐಕ್ಯವನ್ನು ಪ್ರತಿಪಾದಿಸಿದರೆ ಪ್ರತ್ಯಕ್ಷವಿರೋಧವೂ ಸ್ವವಚನವಿರೋಧವೂ ತಪ್ಪಲಾರದು ಮತ್ತು ಸರ್ವಜ್ಞತ್ವ ಅಲ್ಪಜ್ಞತ್ವರೂಪ ವಿರೋಧಿ ಆಕಾರಗಳನ್ನು ಬಿಟ್ಟು ಲಕ್ಷಣಯೂ ಐಕ್ಯವನ್ನು ಪ್ರತಿಪಾದಿಸುತ್ತದೆ, ಎಂದು ಹೇಳಕೂಡದು. ಆ ವಿರೋಧಿ ಆಕಾರಗಳು ಪತ್ರಕ್ಷಾದಿ ಪ್ರಮಾಣಸಿದ್ಧಗಳಾಗಿರುವುದರಿಂದ ಸತ್ಯಗಳೇ ಆಗಿವೆ || ೩೫ ||

ಪ್ರತ್ಯಕ್ಷವಿರೋಧವಿದ್ದುದರಿಂದ ಶ್ರುತಿಗೆ ಪ್ರತೀತವಾದ ಅರ್ಥವನ್ನು ಬಿಡುವುದು ಹೇಗೆ? ಎಲ್ಲಿಯೂ ಹೀಗೆ ದೃಷ್ಟವಾಗಲಿಲ್ಲ. ಪರವಾಗಿರುವುದರಿಂದಲೂ ದೋಷಲೇಶರಹಿತವಾಗಿರುವುದರಿಂದಲೂ ಪ್ರಬಲವಾದ ಶ್ರುತಿಯಿಂದ ವಿರುದ್ಧವಾದ 'ನಾನು ದುಃಖಿಯು' ಇದುಮೊದಲಾದ ಪ್ರತ್ಯಕ್ಷವೇ ಅಪ್ರಮಾಣವಾಗಲಿಕ್ಕೆ ಯೋಗ್ಯವು. ಎಂದರೆ—

**ಮೂ || ಯಜಮಾನಪ್ರಸ್ತರತ್ವಂ ಯಥಾ ನಾರ್ಥಃ ಶ್ರುತೇರ್ಭವೇತ್ |**
**ಬ್ರಹ್ಮತ್ವಮಪಿ ಜೀವಸ್ಯ ಪ್ರತ್ಯಕ್ಷಸ್ಯಾವಿಶೇಷತಃ || ೩೬ ||**

ಅ || ಯಜಮಾನಪ್ರಸ್ತರತ್ವಂ=ಯಜಮಾನನಿಗೆ ದರ್ಭಮುಷ್ಟಿವಿಶೇಷತ್ವವು, ಯಥಾ= ಹೇಗೆ, ಶ್ರುತೇಃ='ಯಜಮಾನಃ ಪ್ರಸ್ತರಃ' ಎನ್ನುವ ಶ್ರುತಿಗೆ, ಅರ್ಥಃ=ಅರ್ಥವು, ನ ಭವೇತ್= ಆಗಲಾರದೋ, (ಹಾಗೆಯೇ) ಜೀವಸ್ಯ ಬ್ರಹ್ಮತ್ವಮಪಿ=ಜೀವನಿಗೆ ಬ್ರಹ್ಮಭಾವವೂ, ಶ್ರುತೇಃ= 'ತತ್ತ್ವಮಸಿ' ಇತ್ಯಾದಿ ಶ್ರುತಿಗಳಿಗೆ, ಅರ್ಥಃ=ಪ್ರತಿಪಾದ್ಯವು, ನ ಭವೇತ್=ಆಗಲಾರದು. ಪ್ರತ್ಯಕ್ಷಸ್ಯ=ನಾವು ಹೇಳಿದ ಪ್ರತ್ಯಕ್ಷಕ್ಕೆ, ಅವಿಶೇಷತಃ=ಯಜಮಾನಗ್ರಾಹಿಯಾದ ಪ್ರತ್ಯಕ್ಷಕ್ಕಿಂತ ವಿಶೇಷವಿಲ್ಲದಿರುವುದರಿಂದ.

ತಾ || ನ್ಯಾಯಸುಧಾ— (1) ಇಲ್ಲಿ ಈ ಅನುಮಾನಗಳು ಹೇಳಲ್ಪಟ್ಟವು. (೧) 'ಜೀವಬ್ರಹ್ಮಣೋರೇಕತ್ವಂ ನ ಮೀಮಾಂಸಾ ಶಾಸ್ತ್ರಸ್ಯ ವಿಷಯಃ ತದುಪಕರ್ತವ್ಯ ವೇದಾವಿಷಯತ್ವಾತ್ ಯದ್ಯದುಪಕರ್ತವ್ಯಪ್ರಮಾಣಸ್ಯಾವಿಷಯಃ ನ ತತ್ತದಿತಿಕರ್ತವ್ಯತಾವಿಷಯಃ ಯಥಾ ಸಂಪ್ರತಿಪನ್ನಂ' ಜೀವಬ್ರಹ್ಮರಿಗೆ ಐಕ್ಯವು, ಮೀಮಾಂಸಾ ಶಾಸ್ತ್ರಕ್ಕೆ ವಿಷಯವಲ್ಲ; ಮೀಮಾಂಸಾಶಾಸ್ತ್ರದಿಂದುಪಕಾರವನ್ನು ಹೊಂದತಕ್ಕ (ನಿರ್ಣೇಯವಾದ) ವೇದಕ್ಕೆ ವಿಷಯವಾಗದಿರುವುದರಿಂದ, ಯಾವುದು ಯಾವುದರಿಂದುಪಕಾರವನ್ನು ಹೊಂದತಕ್ಕ ಪ್ರಮಾಣಕ್ಕೆ ವಿಷಯವಲ್ಲವೋ ಅದು ಅದರ ಇತಿಕರ್ತವ್ಯತಾಕ್ಕೆ ವಿಷಯವಲ್ಲ, ಸಂಮತದೃಷ್ಟಾಂತದಂತೆ. (2) 'ತತ್ತ್ವಮಸ್ಯಾದಿ ವಾಕ್ಯಂ ನ ಪ್ರತೀತಾರ್ಥಂ ಪ್ರತ್ಯಕ್ಷವಿರುದ್ಧತ್ವಾತ್ ಯಜಮಾನಃ ಪ್ರಸ್ತರಃ ಇತಿ ವಾಕ್ಯವತ್' 'ತತ್ತ್ವಮಸಿ' ಇದುಮೊದಲಾದ ವಾಕ್ಯವು 'ಆಪಾತತಃ' ಪ್ರತೀತವಾದ ಅರ್ಥವನ್ನು ಪ್ರತಿಪಾದಿಸತಕ್ಕದ್ದಲ್ಲ, ಪ್ರತ್ಯಕ್ಷವಿರುದ್ಧವಾಗಿರುವುದರಿಂದ 'ಯಜಮಾನಃ ಪ್ರಸ್ತರಃ' ಎನ್ನುವ ವಾಕ್ಯದಂತೆ. ಇದರಿಂದ 'ಪರತ್ವಾತ್ ನಿರ್ದೋಷತ್ವಾತ್' ಎನ್ನುವ ಹಿಂದೆ ಹೇಳಿದ ಎರಡು ಹೇತುಗಳಿಗೆ 'ಯಜಮಾನಃ ಪ್ರಸ್ತರಃ' ಎನ್ನುವ ವಾಕ್ಯದಲ್ಲಿ ವ್ಯಭಿಚಾರವು ಸೂಚಿತವಾಯಿತು. (3) 'ಯಜಮಾನಃ ಪ್ರಸ್ತರಃ' ಎನ್ನುವ ವಾಕ್ಯಕ್ಕೆ ಪ್ರತ್ಯಕ್ಷವಿರೋಧಮಾತ್ರದಿಂದ ಪ್ರತೀತಾರ್ಥವನ್ನು ಪರಿತ್ಯಾಗ ಮಾಡಿದ್ದಲ್ಲ. ಮತ್ತೆ ಯಜಮಾನಸ್ವರೂಪವನ್ನು ತಿಳಿಸುವುದರಿಂದ ಉಪಜೀವ್ಯವಾದ ಪ್ರತ್ಯಕ್ಷವಿರೋಧದಿಂದಲೇ, ಉಪಜೀವ್ಯ-ಉಪಜೀವಕಗಳಲ್ಲಿ ಉಪಜೀವ್ಯವು ಪ್ರಬಲವೆಂದು ನಿಯಮವು, ಎಂದು ಹೇಳಿದರೆ ಪ್ರಕೃತದಲ್ಲಿಯೂ 'ತತ್ತ್ವಮಸಿ' ಎನ್ನುವ ವಾಕ್ಯಕ್ಕೆ ಜೀವಸ್ವರೂಪವನ್ನು ತಿಳಿಸುವ ಉಪಜೀವ್ಯ ಪ್ರತ್ಯಕ್ಷವಿರೋಧದಿಂದಲೇ, ಆಪಾತತಃ ಪ್ರತೀತವಾದ ಐಕ್ಯರೂಪವಾದ ಅರ್ಥವನ್ನು ಪರಿತ್ಯಾಗಮಾಡಬೇಕೆಂದು 'ಪ್ರತ್ಯಕ್ಷಸ್ಯಾವಿಶೇಷತಃ' ಎನ್ನುವುದರಿಂದ ಹೇಳಿದರು. ಅಂದರೆ 'ಯಜಮಾನಃ ಪ್ರಸ್ತರಃ' ಎನ್ನುವ ಶ್ರುತಿಯು ಉಪಜೀವ್ಯವಾದ ಪ್ರತ್ಯಕ್ಷದಿಂದ ವಿರುದ್ಧವಾಗಿರುವುದರಿಂದ ಪ್ರತೀತಾರ್ಥದಲ್ಲಿ ಪ್ರಮಾಣವಾಗುವುದಿಲ್ಲವೆನ್ನುವುದು ಸತ್ಯವೇ. ಆದಾಗ್ಯೂ ಹಿಂದಿನ ದೋಷವಿಲ್ಲ. ಅದ್ವೈತಿ ಶ್ರುತಿಗಳಿಗೆ ಬಾಧಕವಾಗಿ ನಾವು ಉಪನ್ಯಾಸ ಮಾಡಿದ ಪ್ರತ್ಯಕ್ಷಕ್ಕೆ ಯಜಮಾನಗ್ರಾಹಿಯಾದ ಪ್ರತ್ಯಕ್ಷಕ್ಕಿಂತ ವಿಶೇಷವಿಲ್ಲ. ಇದೂ ಉಪಜೀವ್ಯವೇ ಆಗಿರುತ್ತದೆ. ಹೇಗೆಂದರೆ— ಪ್ರತ್ಯಕ್ಷವಾಗಿ ತಿಳಿದ ಜೀವನನ್ನು 'ತ್ವಂ' ಎಂದು ಅನುವಾದ ಮಾಡಿ 'ತದಸಿ' ಎಂದು ಬ್ರಹ್ಮತ್ವವನ್ನು ವಿಧಾನಮಾಡತಕ್ಕದ್ದು || ೩೬ ||

ಹೀಗೆ ಜೀವನನ್ನನುವಾದಮಾಡಿ ಜೀವನಿಗೆ ಬ್ರಹ್ಮತ್ವವನ್ನು ಪ್ರತಿಪಾದಿಸತಕ್ಕ 'ತತ್ತ್ವಮಸಿ' ಇತ್ಯಾದಿ ಶ್ರುತಿಗಳಿಗೆ ಉಪಜೀವ್ಯವಾದ ಪ್ರತ್ಯಕ್ಷದಿಂದ ವಿರೋಧವಿದ್ದುದರಿಂದ ಅವುಗಳು ಐಕ್ಯಪರಗಳಾಗುವುದಿಲ್ಲವೆಂದುಕ್ತವಾಗಿದೆ. ಈಗ ಬ್ರಹ್ಮನನ್ನು ಅನುವಾದಮಾಡಿಕೊಂಡು ಬ್ರಹ್ಮನಿಗೆ ಜೀವೈಕ್ಯವನ್ನು ವಿಧಾನಮಾಡತಕ್ಕ 'ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ' ಇತ್ಯಾದಿಗಳು ಉಪಜೀವ್ಯವಾದ ಶ್ರುತಿಯಿಂದ ವಿರುದ್ಧಗಳಾಗಿರುವುದರಿಂದ ಐಕ್ಯಪರಗಳಾಗುವುದಿಲ್ಲವೆನ್ನುತ್ತಾರೆ.

**ಮೂ || ಸಾರ್ವಜ್ಞಾ(ಜ್ಞ್ಯಾ)ದಿಗುಣಂ ಜೀವಾದ್ಭಿನ್ನಂ ಜ್ಞಾಪಯತಿ ಶ್ರುತಿಃ |**
**ಈಶಂ ತಾಮುಪಜೀವ್ಯೈವ ವರ್ತತೇ ಹ್ಯೈಕ್ಯವಾದಿನೀ ||**
**ಉಪಜೀವ್ಯ ವಿರೋಧೇನ ನಾಸ್ಯಾಸ್ತನ್ಮಾನತಾ ಭವೇತ್ || ೩೭ ||**

ಅ || (ಯಾ) ಶ್ರುತಿಃ=(ಯಾವ) ಶ್ರುತಿಯು, ಈಶಂ=ಶ್ರೀಹರಿಯನ್ನು, ಸಾರ್ವಜ್ಞಾ(ಜ್ಞ್ಯಾ)ದಿ ಗುಣಂ=ಸರ್ವಜ್ಞತ್ವ ಮೊದಲಾದ ಗುಣಗಳುಳ್ಳವನನ್ನಾಗಿಯೂ, ಜೀವಾತ್ ಭಿನ್ನಂ=

ಜೀವನಿಂದ ಭಿನ್ನನನ್ನಾಗಿಯೂ, ಜ್ಞಾಪಯತಿ=ತಿಳಿಸಿಕೊಡುತ್ತದೋ, ತಾಂ=ಆ ಶ್ರುತಿಯನ್ನು, ಉಪಜೀವ್ಯೈವ=ಉಪಜೀವಿಸಿಕೊಂಡೇ, ಹಿ=ಯಾವ ಕಾರಣದಿಂದ, ಐಕ್ಯವಾದಿನೀ=ಐಕ್ಯಪ್ರತಿಪಾದಕವಾದ ಶ್ರುತಿಯು, ವರ್ತತೇ=ಇದೆಯೋ, ತತ್=ಆ ಕಾರಣ, ಅಸ್ಯಾಃ='ತದ್ಯೋಽಹಂ' ಇದು ಮೊದಲಾದ ಶ್ರುತಿಗಳಿಗೆ, ಉಪಜೀವ್ಯವಿರೋಧೇನ=ಉಪಜೀವ್ಯ ಪ್ರಮಾಣದಿಂ ವಿರೋಧವಿದ್ದುದರಿಂದ, ತನ್ಮಾನತಾ=ಬ್ರಹ್ಮನಿಗೆ ಜೀವನಿಂದ ಐಕ್ಯರೂಪಾರ್ಥದಲ್ಲಿ ಪ್ರಾಮಾಣ್ಯವು, ನ ಭವೇತ್=ಕೂಡಲಾರದು.

ತಾ || (1) ಈಶ್ವರನನ್ನನುವಾದ ಮಾಡಿಕೊಂಡು ಈಶ್ವರನಿಗೆ ಜೀವಾಭೇದವನ್ನು ಪ್ರತಿಪಾದಿಸತಕ್ಕ ಶ್ರುತಿಯು ಸರ್ವಥಾ ಈಶ್ವರನ ಸಿದ್ಧಿಯನ್ನು ಅಪೇಕ್ಷಿಸುತ್ತದೆ. ಪ್ರತೀತವಾಗದಿದ್ದಕ್ಕೆ ಅನುವಾದವು ಕೂಡಲಾರದು. ಶ್ರುತಿಯಿಲ್ಲದೆ ಈಶ್ವರನು ಸಿದ್ಧಿಸಲಾರನು. ಆದಕಾರಣ 'ಯಃ ಸರ್ವಜ್ಞಃ' ಇದು ಮೊದಲಾದ ಶ್ರುತಿಗಳೇ ಇದಕ್ಕೆ ಉಪಜೀವ್ಯಗಳೆಂದು ಹೇಳತಕ್ಕದು. ಆ ಶ್ರುತಿಯು ಅಲ್ಪಜ್ಞನಾದ ಜೀವನಿಂದ ಈಶ್ವರನಿಗೆ ಭೇದವನ್ನೇ ಪ್ರತಿಪಾದಿಸುವುದರಿಂದ ಅದರಿಂದ ವಿರುದ್ಧವಾದ 'ತದ್ಯೋಽಹಂ' ಇದು ಮೊದಲಾದ ಶ್ರುತಿಗಳೂ ಐಕ್ಯವನ್ನು ಪ್ರತಿಪಾದಿಸತಕ್ಕದಲ್ಲ. (2) ಇದರಿಂದ ಜೀವಬ್ರಹ್ಮ ಸ್ವರೂಪವನ್ನನುವಾದ ಮಾಡಿ ಕೇವಲ ಐಕ್ಯವನ್ನು ಪ್ರತಿಪಾದಿಸುವ 'ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯಾದಿವಾಕ್ಯಗಳಿಗೆ ಉಪಜೀವ್ಯಗಳಾದ ಪ್ರತ್ಯಕ್ಷ ಆಗಮಗಳಿಂದ ವಿರೋಧವೂ ಉಕ್ತವಾಯಿತೆಂದು ತಿಳಿಯತಕ್ಕದ್ದು. (3) ಮತ್ತು ಎಲ್ಲಾ ಅದ್ವೈತ ಶ್ರುತಿಗಳೂ 'ದ್ವಾ ಸುಪರ್ಣಾ' ಇತ್ಯಾದಿ ಭೇದಶ್ರುತಿಗಳಿಂದ ವಿರುದ್ಧಗಳಾಗಿರುವುದರಿಂದ ಪ್ರತೀತಾರ್ಥದಲ್ಲಿ ಪ್ರಾಮಾಣ್ಯವನ್ನು ಹೊಂದಲಾರವು. || ೩೭ ||

ನ್ಯಾಯಸುಧಾ— ಹಾಗಾದರೆ, ಪ್ರಬಲದ ವಿರೋಧದಿಂದ ದುರ್ಬಲವು ಅಪ್ರಮಾಣವು ಆಗುವುದು. ಭೇದಶ್ರುತಿಗಳು ಅದ್ವೈತಶ್ರುತಿಗಳಿಂದ ಪ್ರಬಲಗಳಾಗುವುದು ಹೇಗೆ? ಪ್ರಬಲಗಳಾಗಿದ್ದರೆ ಅದ್ವೈತಶ್ರುತಿಗಳಿಗೆ ಭೇದಶ್ರುತಿಗಳು ಬಾಧಕಗಳೆಂದು ಹೇಳಿದ್ದೂ ಯುಕ್ತವಾಗಬಹುದಿತ್ತು, ಎಂದಾಶಂಕಿಸಿದರೆ—

ಮೂ || ಸ್ವಾತಂತ್ರ್ಯೇ ಚ ವಿಶಿಷ್ಟತ್ವೇ ಸ್ಥಾನಮತ್ಯೈಕ್ಯಯೋರಪಿ ||
ಸಾದೃಶ್ಯೇ ಚೈಕ್ಯವಾಕ್ಸಮ್ಯಕ್ಸಾವಕಾಶಾ ಯಥೇಷ್ಟತಃ || ೩೮ ||
ಅವಕಾಶೋಜ್ಝಿತಾ ಭೇದಶ್ರುತಿರ್ನಾತಿಬಲಾ ಕಥಂ ||
ಅಜ್ಞಾನಾಸಂಭವಾದೇವ ಮಿಥ್ಯಾಭೇದೋ ನಿರಾಕೃತಃ || ೩೯ ||

ಅ || ಐಕ್ಯವಾಕ್=ಅದ್ವೈತವಾಕ್ಯವು, ಸ್ವಾತಂತ್ರ್ಯೇ ಚ=ಸ್ವತಂತ್ರತ್ವ ನಿಮಿತ್ತವಾಗಿಯೂ, ವಿಶಿಷ್ಟತ್ವೇ=ವೈಶಿಷ್ಟ್ಯ (ಉತ್ತಮತ್ವ) ನಿಮಿತ್ತವಾಗಿಯೂ, ಸ್ಥಾನಮತ್ಯೈಕ್ಯಯೋರಪಿ= ಸ್ಥಾನೈಕ್ಯ ಮತ್ಯೈಕ್ಯನಿಮಿತ್ತವಾಗಿಯೂ,ಸಾದೃಶ್ಯೇಚ=ಸಾದೃಶ್ಯನಿಮಿತ್ತವಾಗಿಯೂ, ಸಮ್ಯಕ್= ಚೆನ್ನಾಗಿ, ಯಥೇಷ್ಟತಃ=ಸಂಭವಾನುಸಾರವಾಗಿ, (ಹೇಗೆ ಕೂಡುತ್ತದೋ ಹಾಗೆಯೇ) ಸಾವಕಾಶಾ=ಅವಕಾಶಸಹಿತವಾಗಿದೆ. ('ಸಮ್ಯಕ್' ಎನ್ನುವುದರಿಂದ ಸ್ವಾತಂತ್ರ್ಯಾದಿ ನಿಮಿತ್ತವಾದ ಐಕ್ಯವ್ಯವಹಾರವದೆ ಎಂದು ಸಿದ್ಧವಾಯಿತು.) (ಯಾವ ಅದ್ವೈತಶ್ರುತಿಯು ಸ್ವಾತಂತ್ರ್ಯಾದಿಗಳಲ್ಲಿ ಯಾವ ನಿಮಿತ್ತವನ್ನು ಸ್ವೀಕರಿಸಿ ಪ್ರವೃತ್ತವಾದುದು ಎಂದರೆ) 'ಯಥೇಷ್ಟತಃ' ಸಂಭವಾನುಸಾರವಾಗಿ ಎಂದು. ಅವಕಾಶೋಜ್ಝಿತಾ=ನಿರವಕಾಶವಾದ, ಭೇದಶ್ರುತಿಃ=ಭೇದಪ್ರತಿಪಾದಕವಾದ ಶ್ರುತಿಯು, ಕಥಂ= ಹೇಗೆ, ಅತಿಬಲಾ ನ= ಅತ್ಯಂತ ಪ್ರಬಲವಾದದ್ದು ಆಗಲಾರದು.

ಅಜ್ಞಾನಾಸಂಭವಾದೇವ = ಅಜ್ಞಾನವು ಕೂಡದಿರುವುದರಿಂದಲೇ, ಮಿಥ್ಯಾಭೇದಃ = ಮಿಥ್ಯಾಭೇದವು, ನಿರಾಕೃತಃ = ನಿರಾಕರಿಸಲ್ಪಟ್ಟದೆ.

ತಾ || (1) ಸಾವಕಾಶ-ನಿರವಕಾಶಗಳಲ್ಲಿ ನಿರವಕಾಶವು ಪ್ರಬಲವು ಅದ್ವೈತಶ್ರುತಿಯು ಸಾವಕಾಶವಾಗಿದೆ. ಸ್ವರೂಪೈಕ್ಯವಿಲ್ಲದಿದ್ದರೂ ಸ್ವಾತಂತ್ರ್ಯಾದಿ ನಿಮಿತ್ತದಿಂದ ಅಮುಖ್ಯಾರ್ಥವಾಗಿಯೇ ಕೂಡಿಸಬಹುದು. (2) ಭೇದಶ್ರುತಿಯಾದರೂ ನಿರವಕಾಶವಾಗಿದೆ. ಜೀವೇಶ ಭೇದ ಹೊರತು ಬೇರೆ ಅರ್ಥವು ತೋರಲಾರದು. ಆದಪ್ರಯುಕ್ತ ನಿರವಕಾಶವಾದುದರಿಂದ, ಪ್ರಬಲವಾದ ಭೇದಶ್ರುತಿಯಿಂದ ಸಾವಕಾಶವಾಗಿರುವುದರಿಂದ ದುರ್ಬಲವಾದ ಅದ್ವೈತ ಶ್ರುತಿಗೆ ಬಾಧವು ಯುಕ್ತವು. (3) ಹಾಗಾದರೆ— ಭೇದಶ್ರುತಿಯೂ ಮಿಥ್ಯಾಭೇದವನ್ನು ಪ್ರತಿಪಾದಿಸುವುದರಿಂದ ಸಾವಕಾಶವಾಗಿದೆ ಎಂದರೆ ಮಿಥ್ಯಾಭೇದವೆಂದರೆ ಅಸತ್ತೆಂದನ್ನಕೂಡದು. ಅಂಗೀಕರಿಸಲಿಲ್ಲ. (4) ಅನಿರ್ವಚನೀಯವೆನ್ನುತ್ತೇವೆ ಎಂದರೆ— ಅಜ್ಞಾನಾತಿರಿಕ್ತವಾದ ಅನಿರ್ವಚನೀಯವು ಅಜ್ಞಾನಕಾರ್ಯವೆಂದು ಪರರಿಗೆ ಸಮ್ಮತವು. ಪರರ ಮತದಲ್ಲಿ ಅಜ್ಞಾನವು ಕೂಡುವುದಿಲ್ಲವಷ್ಟೆ! ಆದಕಾರಣ ಮಿಥ್ಯಾಭೇದವೇ ಕೂಡದಿರುವುದರಿಂದ ಭೇದಶ್ರುತಿಯು ಮಿಥ್ಯಾಭೇದವನ್ನು ಪ್ರತಿಪಾದಿಸುತ್ತದೆಂದು ಹೇಳಕೂಡದು ॥ ೩೯ ॥

(1) ಇಷ್ಟರವರೆಗೆ ಒಂದನೇ ಸೂತ್ರದಲ್ಲಿ ಹೇಳಿದ ವಿಷಯಾದಿಗಳಿಂದ ಬಂಧ ಮಿಥ್ಯಾತ್ವವು ಅರ್ಥತಃ ಸಿದ್ಧವಾಗಿದೆ. ಹೀಗೆ ಬಂಧಮಿಥ್ಯಾತ್ವವೂ ಜಿಜ್ಞಾಸಾಸೂತ್ರಾಕ್ಷಿಪ್ತ (ಜ್ಞಾಪಿತ)ವಾಗಿದೆ ಎಂದು ಪರರು ವ್ಯಾಖ್ಯಾನ ಮಾಡಿರುವರು. ಅಂತಹ ಅಪವ್ಯಾಖ್ಯಾನವನ್ನು 'ಇತ್ಯುಕ್ತೇರ್ಬಂಧ ಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ' ಇತ್ಯಾದಿಗಳಿಂದ ಆಚಾರ್ಯರು ನಿರಾಕರಿಸಿರುವರು. ಅದನ್ನು ಈಗ ಉಪಸಂಹಾರಮಾಡುತ್ತಾ ಸೂತ್ರಾರ್ಥವನ್ನು ಅನುವಾದಮಾಡುತ್ತಾರೆ. (2) ಆದರೆ, ಅಧ್ಯಾಸಭಾಷ್ಯವನ್ನು ಮಾಡಿರುವ ಶಂಕರಾಚಾರ್ಯರು ಸೂತ್ರಾರ್ಥಕ್ಕೆ ಉಪಯುಕ್ತವಾಗದಿರುವುದರಿಂದ ಅಧ್ಯಾಸಭಾಷ್ಯವನ್ನು ಮಾಡಿದ್ದು ಅಸಂಗತವೆಂದು 'ಬಂಧಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ' ಇತ್ಯಾದಿಗಳಿಂದ ಹೇಳಿರುವರು. ಅಂತಹ ದೋಷವು ಆಚಾರ್ಯರಿಗೂ ಬರಬಹುದು. ಸೂತ್ರಾರ್ಥಕ್ಕೆ ಉಪಯುಕ್ತವಾಗದೇನೇ ಇರುವ ಪರಮತ ನಿರಾಸವನ್ನು ಮಾಡಿರುತ್ತಾರಷ್ಟೆ! ಅಂತೂ 'ಪರದೋಷಂ ಪಶ್ಯಸಿ ತ್ವಮಾತ್ಮದೋಷಂ ನ ಪಶ್ಯಸಿ' ನೀನು ಪರರ ದೋಷವನ್ನೇ ನೋಡುತ್ತಿ ನಿನ್ನ ದೋಷವನ್ನು ನೋಡುವುದಿಲ್ಲ, ಎನ್ನುವ ಗಾಥಾ ವಿಷಯತ್ವವು ಆಚಾರ್ಯರಿಗೂ ಪ್ರಾಪ್ತವಾಯಿತು. ಏಕೆಂದರೆ- ಸೂತ್ರವ್ಯಾಖ್ಯಾನವನ್ನುಪಕ್ರಮಿಸಿ ಪರರ ಅಪವ್ಯಾಖ್ಯಾನವನ್ನು ನಿರಾಕರಿಸಿದರೆ ಅಸಂಗತಿಯನ್ನು ಆಲೋಚಿಸಲಿಲ್ಲ ಎಂಬುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರಾರ್ಥವನ್ನು ಅನುವಾದಮಾಡುತ್ತಾರೆ —

**ಮೂ ॥ ಅತೋ ಯಥಾರ್ಥಬಂಧಸ್ಯ ವಿನಾ ವಿಷ್ಣುಪ್ರಸಾದತಃ ।**
**ಅನಿವೃತ್ತೇಸ್ತದರ್ಥಂ ಹಿ ಜಿಜ್ಞಾಸಾತ್ರ ವಿಧೀಯತೇ ॥ ೪೦ ॥**
**ಯಥಾ ದೃಷ್ಟ್ವಾ ಪ್ರಸನ್ನಃ ಸನ್ರಾಜಾ ಬಂಧಾಪನೋದಕೃತ್ ।**
**ಏವಂ ದೃಷ್ಟಃ ಸ ಭಗವಾನ್ಕುರ್ಯಾದ್ಬಂಧವಿಭೇದನಂ ॥ ೪೧ ॥**

ಅ ॥ ಅತಃ = ಆದಕಾರಣ, ಯಥಾರ್ಥಬಂಧಸ್ಯ = ಪಾರಮಾರ್ಥಿಕವಾದ ಬಂಧಕ್ಕೆ, ವಿಷ್ಣುಪ್ರಸಾದತಃ ವಿನಾ = ಭಗವಂತನ ಪ್ರಸಾದವಿಲ್ಲದೆ, ಅನಿವೃತ್ತೇಃ = ನಿವೃತ್ತಿಯಾಗದಿರುವುದರಿಂದ, ತದರ್ಥಂ = ವಿಷ್ಣುವಿನ ಪರಮಾನುಗ್ರಹಕ್ಕಾಗಿ, ಅತ್ರ ಈ ಸೂತ್ರದಲ್ಲಿ, ಜಿಜ್ಞಾಸಾ =

ವಿಚಾರವು, ವಿಧೀಯತೇ= ವಿಧಿಸಲ್ಪಡುತ್ತದೆ. ಹಿ= ಪ್ರಸಿದ್ಧವು. ಯಥಾ= ಹೇಗೆ, ಸನ್= ಉತ್ತಮನಾದ ಕೃಪಾಲುತ್ವಾದಿ ಗುಣಗಳುಳ್ಳ, ರಾಜಾ=ಅರಸನು, ದೃಷ್ಟ್ಯಾ=ಪ್ರೇಮಾತಿಶಯ ಯುಕ್ತವಾದ ದೃಷ್ಟಿಯಿಂದ, ಪ್ರಸನ್ನಃ ಸನ್= ಸಂತುಷ್ಟನಾಗಿ, ಬಂಧಾಪನೋದಕೃತ್= ನಿಗಡ ಬಂಧಕ್ಕೆ ನಾಶವನ್ನು ಮಾಡುವವನೋ, ಏವಂ= ಈಪ್ರಕಾರವಾಗಿ, ದೃಷ್ಟಃ= ಕಾಣಲ್ಪಟ್ಟ, ಸಃ= ಅಂತಹ ಗುಣಗಳುಳ್ಳ, ಭಗವಾನ್= ಅಘಟಿತಘಟಕ ಅನಂತಾನಂತ ಐಶ್ವರ್ಯಾದಿ ಗುಣ ಗಳುಳ್ಳ ಶ್ರೀಹರಿಯು, ಬಂಧವಿಭೇದನಂ=ಸಂಸಾರ ಬಂಧದ ವಿನಾಶವನ್ನು, ಕುರ್ಯಾತ್= ಮಾಡುವನು.

ತಾ || (1) ಪರರು ಮಾಡಿದ್ದು ಅಪವ್ಯಾಖ್ಯಾನವೆಂದು ನಿಶ್ಚಯವಾಗುವತನಕ ನಾವು ಹೇಳಿದ ಸೂತ್ರಾರ್ಥವು ಶಿಷ್ಯರ ಮನಸ್ಸಿನಲ್ಲಿ ಸ್ಥಿರವಾಗಲಾರದು. ಆದಕಾರಣ ಪರರ ವ್ಯಾಖ್ಯಾನ ನಿರಾಕರಣವೂ ನಾವು ಹೇಳಿದ ಸೂತ್ರಾರ್ಥವು ಸ್ಥಿರವಾಗುವುದಕ್ಕಾಗಿ ಸಂಗತವೇ ಆಗುವುದು. (2) ಅಥವಾ 'ಅಜ್ಞಾನಾಂ ಜ್ಞಾನದೋ ವಿಷ್ಣುಃ' ಇತ್ಯಾದಿಗಳಿಂದ ಬಂಧಕ್ಕೆ ಮಿಥ್ಯಾತ್ವವನ್ನು ನಿರಾಕರಿಸಿದ್ದೂ ಬಂಧವು ಸತ್ಯವೆಂದು ಸಮರ್ಥಿಸಿದ್ದೂ ಸೂತ್ರದಲ್ಲಿರುವ 'ಅತಃ' ಶಬ್ದಕ್ಕೇನೇ ಅರ್ಥಾಂತರವು. ಆದಕಾರಣ ಅಸಂಗತವಲ್ಲ. ಹೀಗೆ ತೋರಿಸುತ್ತಾ ಸೂತ್ರ ದಲ್ಲಿಯೂ ಈ ಅರ್ಥಕ್ಕೆ ಉಪಯೋಗವನ್ನು ತೋರಿಸುತ್ತಾರೆ. 'ಅತೋ ಯಥಾ' ಎಂದು. (3) 'ಮುಕ್ತಿಯು ಕೇವಲ ಭಗವತ್ಪ್ರಸಾದದಿಂದ ಲಭಿಸುವುದರಿಂದ ಅದಕ್ಕಾಗಿ ಮುಮುಕ್ಷುವು ಬ್ರಹ್ಮವಿಚಾರವನ್ನು ಮಾಡಬೇಕೆಂದು' 'ಅತೋ ಬ್ರಹ್ಮಜಿಜ್ಞಾಸಾ' ಎಂಬುವ ಸೂತ್ರಖಂಡದಿಂದ ಹೇಳಿದ್ದು ಅಯುಕ್ತವು. ಮೋಕ್ಷವೆಂದರೆ ಕೇವಲ ಬಂಧನಿವೃತ್ತಿಯು. ಅಭ್ಯುದಯಪ್ರಾಪ್ತಿ ಯಲ್ಲ. ಬಂಧವೂ ಮಿಥ್ಯಾಭೂತವೇ. 'ತರತಿ ಶೋಕಮಾತ್ಮವಿತ್' ಎಂದು ಹೇಳಿದ ಜ್ಞಾನ ನಿವರ್ತ್ಯತ್ವವೂ ಮಿಥ್ಯಾತ್ವವಿಲ್ಲದೆ ಕೂಡಲಾರದು. ಸತ್ಯವಾದುದು ಜ್ಞಾನದಿಂದ ನಿವೃತ್ತವಾಗು ವುದಿಲ್ಲ ಮಿಥ್ಯೆಯಾದುದಕ್ಕೆ ನಿವೃತ್ತಿಯಾಗಬೇಕಾದರೆ ಯಾರ ಪ್ರಸಾದವೂ ಬೇಕಾಗಿಲ್ಲ. ಆದಪ್ರಯುಕ್ತ ಭಗವಂತನ ಪ್ರಸಾದಕ್ಕಾಗಿ ಜಿಜ್ಞಾಸಾ ಮಾಡಬೇಕಾಗಿಲ್ಲ. ಇಂತಹ ಆಶಂಕೆಯನ್ನು ಮೋಕ್ಷಕ್ಕೆ ಪ್ರಸಾದಸಾಧ್ಯತ್ವವನ್ನುಪಪಾದಿಸುವ ಬಂಧಸತ್ಯತ್ವಪ್ರತಿಪಾದಕವಾದ 'ಅತಃ' ಎನ್ನುವ ಶಬ್ದದಿಂದ ನಿರಾಕರಿಸಿದರು ॥ ೪೦ ॥ ೪೧ ॥

## ಕಾರ್ಯತಾ ಪ್ರಕರಣವು.

**ನ್ಯಾಯಸುಧಾ—** (1) ಹೀಗೆ ಮೀಮಾಂಸಾ ಪ್ರಯೋಜನವನ್ನು ಸಮರ್ಥಿಸುವುದ ಕ್ಕಾಗಿ 'ಅತಃ' ಎನ್ನುವ ಶಬ್ದವನ್ನು (೧) ಜಿಜ್ಞಾಸಾಜನ್ಯಜ್ಞಾನಸಾಧ್ಯ ಪ್ರಸಾದಸಾಧ್ಯ ಮೋಕ್ಷಾಖ್ಯ ಫಲವಿದ್ದುದರಿಂದಲೂ,(ವಿಚಾರದಿಂದಲೇ ಜ್ಞಾನವು ಜ್ಞಾನದಿಂದಲೇ ಪ್ರಸಾದವು, ಪ್ರಸಾದದಿಂದಲೇ ಮುಕ್ತಿಯು ಎಂದೂ,)(೨)ಬಂಧಕ್ಕೆ ಸತ್ಯತ್ವವಿದ್ದಪ್ರಯುಕ್ತವೂ, ಹೀಗೆ ಎರಡುಪ್ರಕಾರ ವ್ಯಾಖ್ಯಾನ ಮಾಡಿ ಈಗ ವಿಷಯಸಮರ್ಥನೆಗೆ ಹೇತುಭೂತವಾದ ಯುಕ್ತಿ (ಶಬ್ದಕ್ಕೆ ಸಿದ್ಧಾರ್ಥಪ್ರತಿಪಾದ ಕತ್ವರೂಪವಾದುದು) ಯನ್ನು ಪ್ರತಿಪಾದಿಸುವುದೆಂದು 'ಕಾರ್ಯತಾ ಚ' ಇತ್ಯಾದಿಗಳಿಂದ ವ್ಯಾಖ್ಯಾನಮಾಡುತ್ತಾರೆ.

(2) ಈ ವಿಷಯದಲ್ಲಿ ಮೀಮಾಂಸಕರು ಹೀಗೆ ಹೇಳುತ್ತಾರೆ.— ವಿಧಿ ಅರ್ಥವಾದ ಮಂತ್ರ ರೂಪಗಳಾದ ಎಲ್ಲಾ ವೇದಗಳೂ ಕಾರ್ಯವನ್ನೇ ಪ್ರತಿಪಾದಿಸುತ್ತವೆ. ಸಿದ್ಧಾರ್ಥವನ್ನು ಪ್ರತಿಪಾದಿ ಸುವುದಿಲ್ಲ. 'ಅಥಾತೋ ಧರ್ಮಜಿಜ್ಞಾಸಾ' ಎನ್ನುವುದನ್ನಾರಂಭಿಸಿ 'ಅನ್ಯಹಾರ್ಯೇ ಚ ದರ್ಶನಾತ್'

ಎಂಬುವ ಪರ್ಯಂತ ೧೨ ಅಧ್ಯಾಯಾತ್ಮಕವಾದ ಪೂರ್ವಮೀಮಾಂಸಾ ಶಾಸ್ತ್ರದಿಂದ ಸರ್ವವೇದವೂ ವಿಚಾರಿತವಾಗಿದೆ. ಆದಕಾರಣ ಇದರಿಂದ ನಿರ್ಣೇಯವಾದ ವೇದಭಾಗವಿಲ್ಲದಿರುವುದರಿಂದ ಬ್ರಹ್ಮಮೀಮಾಂಸಾ ಶಾಸ್ತ್ರಾರಂಭವು ಹೇಗೆ ಕೂಡುತ್ತದೆ? (3) ಅನೇಕಪದರೂಪವಾದ ವಾಕ್ಯಪ್ರಯೋಗವಿರುವಾಗ ಅನೇಕ ಪದಾರ್ಥಗಳೇ ಪರಸ್ಪರ ಸಂಬದ್ಧಗಳಾಗಿ ತೋರುವುದರಿಂದ ಪ್ರಧಾನವಾಗಿ ಕಾರ್ಯಪ್ರತೀತಿಯು ಇಲ್ಲದಿರುವಪ್ರಯುಕ್ತ ಎಂದರೆ— ಶಕ್ಯಾರ್ಥಗಳು ಅನೇಕವಿದ್ದರೂ ತಾತ್ಪರ್ಯ ವಿಷಯೀಭೂತವಾದುದು ಕಾರ್ಯರೂಪಾರ್ಥವೇ. ಅಂದರೆ— ಅನೇಕಪದಾತ್ಮಕವಾಕ್ಯವನ್ನು ಕೇಳಿ ಅನೇಕಾರ್ಥಗಳು ತೋರಿದರೂ ವಾಕ್ಯಕ್ಕೆ ಎಲ್ಲಿಯಾದರೊಂದು ಕಡೆಯಲ್ಲಿ ತಾತ್ಪರ್ಯವನ್ನು ಕಲ್ಪಿಸಬೇಕು. ಇಲ್ಲವಾದರೆ ಏಕವಾಕ್ಯತ್ವವೇ ಕೂಡಲಾರದು. 'ಯತ್ಪರಃ ಶಬ್ದಃ ಸ ಶಬ್ದಾರ್ಥಃ' ಶಬ್ದವು ಯಾವ ಅರ್ಥದಲ್ಲಿ ತಾತ್ಪರ್ಯಯುಕ್ತವಾಗಿಯದೋ ಅದೇ ಶಬ್ದಾರ್ಥವು, ಎಂದು ಶಬ್ದಮರ್ಯಾದಾಭಿಜ್ಞರು ಹೇಳುವರು. ಯಾವುದನ್ನು ಪ್ರತಿಪಾದಿಸಿದರಿಂದ ವಾಕ್ಯಪರ್ಯವಸಾನವಾಗುತ್ತದೋ, ಯಾವುದನ್ನು ಪ್ರತಿಪಾದಿಸುವುದಕ್ಕಾಗಿ ಬೇರೆ ಪದಾರ್ಥವನ್ನು ತೆಗೆದುಕೊಂಡದ್ದೋ, ವಾಕ್ಯತಾತ್ಪರ್ಯಕ್ಕೆ ವಿಷಯೀಭೂತವಾದುದೂ ಅದೇ ಸರಿ. ಅಂತಹುದು ಕಾರ್ಯ (ಕೃತಿಸಾಧ್ಯವಸ್ತು) ರೂಪವೇ. 'ಗೌರಶ್ವಃ ಪುರುಷೋ ಹಸ್ತೀ' ಗೋವು, ಕುದುರೆಯು, ಪುರುಷನು, ಆನೆಯು ಎನ್ನುವ ವಾಕ್ಯವು ಕ್ರಿಯಾವಾಚಕವಾದ ಪದವಿಲ್ಲದಿರುವುದರಿಂದ ಹೇಗೆ ಪರ್ಯವಸಿತವಾಗುವುದಿಲ್ಲವೋ, ಹಾಗೆಯೇ 'ದೇವದತ್ತಃ ಪಚತಿ' ದೇವದತ್ತನು ಅಡಿಗೆಮಾಡುತ್ತಾನೆ, ಎನ್ನುವ ವಾಕ್ಯವೂ ಕ್ರಿಯಾವಾಚಕಪದವಿದ್ದರೂ ಕಾರ್ಯತಾವಾಚಕಪದವಿಲ್ಲದಿರುವುದರಿಂದ ಪರ್ಯವಸಿತವಾಗುವುದಿಲ್ಲ. ಮತ್ತೆ 'ದೇವದತ್ತ ಗಾಮಾನಯ' ಎಲೋ ದೇವದತ್ತನೇ ಗೋವನ್ನು ತಾ, ಇದುಮೊದಲಾದುದು ಕಾರ್ಯನಿಷ್ಠವಾದ ವಾಕ್ಯವೇ ಪರ್ಯವಸಿತವಾಗಿ ಅನುಭೂತವಾಗುತ್ತದೆ. ಆದಕಾರಣ ಕಾರ್ಯವೇ ಲೋಕದಲ್ಲಿಯೂ ವೇದದಲ್ಲಿಯೂ ವಾಕ್ಯತಾತ್ಪರ್ಯವಿಷಯೀಭೂತಾರ್ಥವು ಅಂದರೆ ಲೋಕದಲ್ಲಿ ಧಾತ್ವರ್ಥವೇ ಕಾರ್ಯವು. ವೇದದಲ್ಲಿಯಾದರೂ ಯಾಗ ಮೊದಲಾದ ಧಾತ್ವರ್ಥಗಳಿಂದುಂಟಾದ ಅಪೂರ್ವವೇ ಕಾರ್ಯವು. ಅದರಲ್ಲಿ ಲಿಙ್, ಲೋಟ್, ತವ್ಯ, ಲೇಟ್, ಪ್ರತ್ಯಯಗಳು ಮುಖ್ಯವಾಗಿ ಕಾರ್ಯತ್ವವನ್ನು ಪ್ರತಿಪಾದಿಸುತ್ತವೆ. ಬೇರೆ ಪದಗಳಾದರೂ ಅವುಗಳ ಜ್ಞಾನಕ್ಕಾಗಿ ಗೋವನ್ನು ತರಬೇಕು ಎಂಬುವ ರೀತಿಯಾಗಿ ಅವುಗಳಿಂದ ಯುಕ್ತಗಳಾದ ಸ್ವಾರ್ಥಗಳನ್ನು ಹೇಳುವವುಗಳಾಗಿ ಅದರಲ್ಲಿಯೇ ತಾತ್ಪರ್ಯವುಳ್ಳವುಗಳಾಗಿರುತ್ತವೆ. ಅಂತೂ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಇದುಮೊದಲಾದ ವೇದವಾಕ್ಯಗಳಲ್ಲಿ ಲಿಙಾದಿ(ಈತ ಮೊದಲಾದ)ಪ್ರತ್ಯಯಗಳು ಪ್ರಯತ್ನರೂಪವಾದ ಶಾಬ್ದೀಭಾವನೆಯನ್ನು (ಅಂದರೆ ಕಾರ್ಯಸ್ವರೂಪವನ್ನೂ) ಪ್ರಕೃತಿಯು (ಯಜ್ ಎನ್ನುವ ಧಾತುವು) ಲಿಙ್ ವಾಚ್ಯವಾದ ಪ್ರಯತ್ನವಿಷಯವಾದ ಯಾಗವನ್ನೂ 'ಭ್ಯಾಂ' ಎಂಬುವ ತೃತೀಯಾ ವಿಭಕ್ತಿಯು ಯಾಗಕ್ಕೆ ಕರಣತ್ವವನ್ನೂ ದರ್ಶಪೂರ್ಣಮಾಸ ಎನ್ನುವುದು ಪ್ರಕೃತ್ಯರ್ಥವಾದ ಯಾಗದಲ್ಲಿ ವಿಶೇಷಣೀಭೂತವಾದ ನಾಮಧೇಯವನ್ನೂ 'ಸ್ವರ್ಗಕಾಮಃ' ಎನ್ನುವುದು ನಿಯೋಜ್ಯನಾದ ಅಧಿಕಾರಿಯನ್ನೂ ಹೇಳುವವುಗಳಾಗಿ ಕಾರ್ಯಜ್ಞಾನವನ್ನೇ ಹುಟ್ಟಿಸುತ್ತವೆ. ಅಂತೂ ಪ್ರಧಾನವಾಕ್ಯಗಳು ಕಾರ್ಯಪರಗಳೆಂದು ಸಿದ್ಧಗಳಾದುವು. (4) ಹೀಗೆಯೇ ಪ್ರಧಾನದ ಸನ್ನಿಧಾನದಿಂದ ಕಾರ್ಯಾಂತರವಿಲ್ಲದಿರುವ ಬೇರೆ ವಾಕ್ಯಗಳೂ ಅಂದರೆ, 'ವ್ರೀಹೀನವಹಂತಿ' ಇದುಮೊದಲಾದ ಸನ್ನಿಪತ್ಯೋಪಕಾರಕಾಂಗವಾಕ್ಯಗಳೂ, 'ಇಡೋ ಯಜತಿ' ಇದುಮೊದಲಾದ ಫಲೋಪಕಾರಕಾಂಗವಾಕ್ಯಗಳೂ, (ಆರಾದುಪಕಾರಕಗಳು) ಅವುಗಳಿಂದಲೇ ಏಕವಾಕ್ಯತ

ವನ್ನು ಹೊಂದಿ ಪ್ರಧಾನಕಾರ್ಯಪರಗಳು. ಅಂದರೆ, ಬತ್ತಗಳನ್ನು ಕುಟ್ಟುವುದರಿಂದ ಹೊಟ್ಟು ಹೋಗಿ ಯಾಗಸ್ವರೂಪಕ್ಕೆ ಅವಹನನಾದಿಗಳು ಉಪಕಾರಕಗಳಾಗುವುದರಿಂದ ಸನ್ನಿಪತ್ಯೋಪ ಕಾರಕಗಳು ದೃಷ್ಟಪ್ರಯೋಜನದ್ವಾರಾ ಸಾಕ್ಷಾದುಪಕಾರಕಗಳು. 'ಇಡೋ ಯಜತಿ' ಇದು ಮೊದಲಾದ ೫ ಪ್ರಯಾಜವಾಕ್ಯಗಳು. (ಆರಾದುಪಕಾರಕಗಳು) ಅದೃಷ್ಟವನ್ನು ಹುಟ್ಟಿಸಿ, ಯಾಗಫಲದಲ್ಲಿ ಉಪಕಾರಕಗಳಾಗುವುದರಿಂದ ಅದೃಷ್ಟದ್ವಾರಾ ಉಪಕಾರಕಗಳು. ಇದೇ ನ್ಯಾಯದಿಂದ ಎಲ್ಲಾ ವೇದಗಳೂ (ಅರ್ಥವಾದ ಮಂತ್ರ, ಉಪನಿಷತ್ತುಗಳು) ಕಾರ್ಯತ್ವವನ್ನು ತಿಳಿಸುವುದರಲ್ಲಿಯೇ ತಾತ್ಪರ್ಯವುಳ್ಳವುಗಳಾಗುತ್ತವೆ. ಅಂತೂ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದ್ಯರ್ಥವಾದಗಳೂ ವಿಧಿಬೋಧ್ಯವಾದ ಕಾರ್ಯದಲ್ಲಿಯೇ ಪ್ರಾಶಸ್ತ್ಯವನ್ನು ಬೋಧಿಸುವುದರಿಂದ ನಿಯೋಗಿಸಲ್ಪಡತಕ್ಕ ಪುರುಷನಿಗೆ ಪ್ರೋತ್ಸಾಹಕ್ಕೆ ಕಾರಣವಾಗಿಯೂ 'ಸ್ಯೋನಂ ತೇ ಸದನಂ ಕೃಣೋಮಿ ಘೃತಸ್ಯ ಧಾರಯಾ ಸುಶೇವಂ ಕಲ್ಪಯಾಮಿ' ಇದುಮೊದಲಾದ ಮಂತ್ರಗಳು ಅನುಷ್ಠೇಯವಾದ ಅರ್ಥಕ್ಕೆ ಸ್ಮಾರಕಗಳಾಗಿಯೂ 'ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಸ್ಸಮುತ್ಥಾಯ' ಇದುಮೊದಲಾದ ಉಪನಿಷತ್ತುಗಳು ಕರ್ತೃಭೂತವಾದ ಆತ್ಮಸ್ವರೂಪವನ್ನು ಪ್ರತಿಪಾದಿಸತಕ್ಕವುಗಳಾಗಿಯೂ ಕಾರ್ಯತಾಬೋಧದಲ್ಲಿ ಪರ್ಯವಸಿತಗಳಾಗುತ್ತವೆ. (5) ಮತ್ತು ವಾಚ್ಯ (ಅರ್ಥ) ವಾಚಕ (ಶಬ್ದ) ಭಾವರೂಪವಾದ ಸಂಬಂಧ ಜ್ಞಾನರೂಪವಾದ ವ್ಯುತ್ಪತ್ತಿಯನ್ನು ಅಪೇಕ್ಷಿಸಿಕೊಂಡೇ ಶಬ್ದವು ಅರ್ಥಜ್ಞಾನವನ್ನು ಹುಟ್ಟಿಸುತ್ತದೆ. ಬೇರೆ ರೀತಿಯಾಗಿ ಅಲ್ಲ. ವ್ಯುತ್ಪತ್ತಿಯಿದ್ದರೇನೇ ಶಬ್ದದಿಂದ ಅರ್ಥಜ್ಞಾನವಾಗುವುದು. ವ್ಯುತ್ಪತ್ತಿಯಿಲ್ಲದಿದ್ದರೆ ಶಬ್ದದಿಂದ ಅರ್ಥಜ್ಞಾನವಾಗುವುದಿಲ್ಲ, ಎಂಬುವ ಈ ನಿಯಮವು ಎಲ್ಲರಿಗೂ ತಿಳಿದುದೇ. ವ್ಯುತ್ಪತ್ತಿಯಾದರೂ ವೃದ್ಧರ ವ್ಯವಹಾರವನ್ನು ನೋಡಿಯೇ ಹುಟ್ಟುತ್ತದೆ. ವೃದ್ಧರ ವ್ಯವಹಾರಕ್ಕೆ ಕಾರ್ಯಜ್ಞಾನವು ಕಾರಣವು. ಅಂದರೆ, ವೃದ್ಧರ ವ್ಯವಹಾರವನ್ನು ನೋಡಿ ಬಾಲಕನು ವ್ಯುತ್ಪತ್ತಿಯನ್ನು ಹೊಂದುವಪ್ರಯುಕ್ತ ವೃದ್ಧರ ವ್ಯವಹಾರವು ಕಾರ್ಯಜ್ಞಾನದ್ವಾರಾ ವ್ಯುತ್ಪತ್ತಿಗೆ ಕಾರಣವಾಗುತ್ತದೆ. ಆದಕಾರಣ ಶಬ್ದವು ಕಾರ್ಯವನ್ನು ಪ್ರತಿಪಾದಿಸುತ್ತದೆ ಎನ್ನುವುದೇ ಯುಕ್ತವು. ಹೇಗೆಂದರೆ— ಚೈತ್ರನೇ ನೀರನ್ನು ತೆಗೆದುಕೊಂಡು ಬಾ, ಎಂದು ಹೇಳುವ ಪ್ರಯೋಜಕವೃದ್ಧನ ವಾಕ್ಯವನ್ನು ಕೇಳಿ ಪ್ರಯೋಜ್ಯವೃದ್ಧನು ಇತರ ವಿಲಕ್ಷಣವಾದ ಜಲಾಹರಣರೂಪವಾದ ಅರ್ಥವನ್ನು ವಿಷಯೀಕರಿಸಿಕೊಂಡಿರುವ ಪ್ರವೃತ್ತಿಯನ್ನು ಮಾಡುತ್ತಾನೆ. ಅಂದರೆ, ನೀರನ್ನು ತರಲಿಕ್ಕೆ ಪ್ರವೃತ್ತಿಮಾಡುತ್ತಾನೆ. ಅದನ್ನು ನೋಡಿ ಪದಶಕ್ತಿಯನ್ನು ತಿಳಿಯಬೇಕೆಂದು ಇಚ್ಛಿಸಿಕೊಂಡಿದ್ದ ಸಮೀಪದಲ್ಲಿದ್ದ ಬಾಲಕನು ಹೀಗೆ ಆಲೋಚಿಸುತ್ತಾನೆ. 'ಸ್ವೇಚ್ಛಾಧೀನವಾದ ಇವನ ಆ ಪ್ರವೃತ್ತಿಯು ನನ್ನಂತೆಯೇ ಬುದ್ಧಿಪೂರ್ವಕವಾಗಿಯದೆ.' ಎಂದು. (6) ಪುನಃ ಆತನಿಗೆ ಈ ವಿಚಾರವು ಹುಟ್ಟುತ್ತದೆ. ಯಾವುದು ಪ್ರಯೋಜ್ಯವೃದ್ಧನ ಪ್ರವೃತ್ತಿಗೆ ಕಾರಣವಾದ ಬುದ್ಧಿಯೋ, ಆ ಬುದ್ಧಿಯು ನನ್ನ ಪ್ರವೃತ್ತಿಗೆ ಕಾರಣವಾದ ಬುದ್ಧಿಗೆ ಯಾವುದು ವಿಷಯವೋ ಅದೇ ವಿಷಯವಾಗಿ ಉಳ್ಳದ್ದು. ಅಂತೂ ಎರಡು ಅನುಮಾನಗಳು. (೧) 'ವೃದ್ಧಸ್ಯ ಸ್ವತಂತ್ರಾ ಪ್ರವೃತ್ತಿಃ ಬುದ್ಧಿಪೂರ್ವಿಕಾ ಸ್ವತಂತ್ರಪ್ರವೃತ್ತಿತ್ವಾತ್ ಮದೀಯಸ್ವತಂತ್ರಪ್ರವೃತ್ತಿವತ್' ನೀರನ್ನು ತರುವ ಈ ಪ್ರಯೋಜ್ಯವೃದ್ಧನ ಸ್ವತಂತ್ರವಾದ ಪ್ರವೃತ್ತಿಯು ಬುದ್ಧಿಪೂರ್ವಕವಾಗಿಯದೆ, ಸ್ವತಂತ್ರ ಪ್ರವೃತ್ತಿಯಾದುದರಿಂದ ನನ್ನ ಈ ಸ್ತನಪಾನಾದಿಗಳ ಸ್ವತಂತ್ರಪ್ರವೃತ್ತಿಯಂತೆ, (೨) 'ವೃದ್ಧಸ್ಯ ಪ್ರವೃತ್ತಿಹೇತುಭೂತಾ ಬುದ್ಧಿಃ, ಯದ್ವಿಷಯೈವ ಬುದ್ಧಿಃ ಮಮ ಪ್ರವೃತ್ತಿಹೇತುಭೂತಾ ತದ್ವಿಷಯೈವ, ಪ್ರವೃತ್ತಿಹೇತುಭೂತಬುದ್ಧಿತ್ವಾತ್, ಮದೀಯಪ್ರವೃತ್ತಿಹೇತುಭೂತ ಬುದ್ಧಿವತ್' ವ್ಯುತ್ಪನ್ನನ (ಪ್ರಯೋಜ್ಯವೃದ್ಧನ) ಪ್ರವೃತ್ತಿಗೆ ಕಾರಣೀಭೂತವಾದ ಬುದ್ಧಿಯು ಯಾವುದನ್ನು

ವಿಷಯೀಕರಿಸಿಕೊಂಡೇ ಬುದ್ಧಿಯು ನನ್ನ ಪ್ರವೃತ್ತಿಗೆ ಕಾರಣವಾಗಿಯದೋ, ಅದೇ ವಿಷಯವಾಗಿ ಉಳ್ಳದ್ದು, ಪ್ರವೃತ್ತಿಗೆ ಕಾರಣವಾದ ಬುದ್ಧಿಯಾದುದರಿಂದ, ನನ್ನ ಪ್ರವೃತ್ತಿಗೆ ಕಾರಣವಾದ ಬುದ್ಧಿಯಂತೆ. (7) ಪುನಃ ಆತನಿಗೆ ಈ ವಿಚಾರವು ಬರುತ್ತದೆ. 'ಯದ್ವಿಷಯಾ ಸಾ ಬುದ್ಧಿಃ ಪ್ರವೃತ್ತಿಹೇತುಭೂತಾ ತದ್ವಸ್ತು ಅಸ್ಯ ಅನೇನ ಶಬ್ದೇನ ಬೋಧ್ಯತೇ ತದ್ಭಾವೇ ಭಾವಾತ್' 'ಯಾವ ವಸ್ತುವನ್ನು ವಿಷಯೀಕರಿಸಿಕೊಂಡು ಆ ಬುದ್ಧಿಯು ಪ್ರವೃತ್ತಿಗೆ ಕಾರಣವಾಗುತ್ತದೋ, ಅಂತಹ ವಸ್ತುವಿನ ಜ್ಞಾನವು ಪ್ರಯೋಜ್ಯವೃದ್ಧನಿಗೆ 'ಚೈತ್ರ ಜಲ ಮಾಹರಸ್ವ' ಚೈತ್ರನೇ ನೀರನ್ನು ತಾ' ಎನ್ನುವ ಶಬ್ದದಿಂದ ತಿಳಿಸಲ್ಪಡುತ್ತದೆ ಶಬ್ದವನ್ನು ಪ್ರಯೋಗ ಮಾಡಿದಮೇಲೆ ವಸ್ತು ಜ್ಞಾನವು ಹುಟ್ಟುವುದರಿಂದ, ಅಂತೂ ಪ್ರಯೋಜ್ಯವೃದ್ಧನ ಪ್ರವೃತ್ತಿಕಾರಣವಾದ ಜ್ಞಾನವು ಶಬ್ದ ರೂಪಪ್ರಮಾಣದಿಂದ ಹುಟ್ಟಿರುವುದು. ಆದರೆ, ನನಗಾದರೂ ಸ್ತನಪಾನವೊದಲಾದವುಗಳ ಪ್ರವೃತ್ತಿಗೆ ಕಾರಣವಾದ ವಸ್ತುಜ್ಞಾನವು ಬೇರೆ ಪ್ರಮಾಣದಿಂದ (ಅಂದರೆ ಜನ್ಮಾಂತರದಲ್ಲಿ ಹುಟ್ಟಿರುವ ಅನುಭವದಿಂದ ಹುಟ್ಟಿರುವ ಸಂಸ್ಕಾರಾದಿಗಳಿಂದ) ಹುಟ್ಟಿದ್ದಾಗಿರುತ್ತದೆ. ಸ್ತನ ಪಾನಾದಿಗಳ ಪ್ರವೃತ್ತಿಯಲ್ಲಿ ಶಬ್ದಪ್ರಯೋಗವಿಲ್ಲವಷ್ಟೆ. ಇಷ್ಟೇ ಪ್ರಯೋಜ್ಯವೃದ್ಧನ ಪ್ರವೃತ್ತಿಗೂ ನನ್ನ ಪ್ರವೃತ್ತಿಗೂ ವಿಶೇಷವು. ಆದುದರಿಂದ ಯಾವುದನ್ನು ತಿಳಿದು ನನಗೆ ಕಾರ್ಯದಲ್ಲಿ ಪ್ರವೃತ್ತಿಯೋ ಅಂತಹ ವಸ್ತುವು ಪ್ರಯೋಜ್ಯವೃದ್ಧನಿಗೆ ಈ ಶಬ್ದದಿಂದ ತಿಳಿಸಲ್ಪಡುತ್ತದೆ, ಹೀಗೆ ಶಬ್ದವು ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ತಿಳಿಸುತ್ತದೆ ಎಂದು ನಿಶ್ಚಯಿಸುತ್ತಾನೆ. (೮) ಮತ್ತು ಪ್ರಯೋಜ್ಯವೃದ್ಧನ ಪ್ರವೃತ್ತಿಗೆ ಕಾರಣವಾದ ಶಬ್ದದಿಂದ ತಿಳಿಯಲ್ಪಡುವ ಅರ್ಥವು ಯಾವುದು? ಎಂದು ನಿಶ್ಚಯಿಸಲಿಕ್ಕೆ ತನ್ನಲ್ಲಿಯೇ ತಿಳಿಯಲ್ಪಡುವ ಸ್ತನಪಾನವೊದಲಾದವುಗಳ ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ಅನುಸಂಧಾನಮಾಡಿಕೊಳ್ಳುತ್ತಾನೆ. ಅವುಗಳಲ್ಲಿ ಕೇವಲ ಭೋಜನಾದಿರೂಪವಾದ ಕ್ರಿಯೆಯನ್ನಾಗಲೀ ಕೇವಲ ತೃಪ್ತಿರೂಪವಾದ ಫಲವನ್ನಾಗಲೀ ಕೇವಲ ಕ್ರಿಯಾ ಫಲ ಸಂಬಂಧವನ್ನಾಗಲೀ ಅಂದರೆ ಕೇವಲ ಜನ್ಯ ಜನಕಭಾವರೂಪವಾದ ಸಂಬಂಧ ವನ್ನಾಗಲೀ ತಿಳಿದು ನಾನು ಪ್ರವೃತ್ತಿಮಾಡಿದ್ದಲ್ಲ. ಮತ್ತೆ ಕಾರ್ಯತ್ವವನ್ನೇ, ಅಂದರೆ ಇದು ನನ್ನಿಂದ ಮಾಡತಕ್ಕದೇ, ಎಂದು ಭೋಜನಾದಿಗಳಿಗೆ ಕಾರ್ಯತ್ವವನ್ನು ತಿಳಿದೇ ನಾನು ಎಲ್ಲಾ ಕಡೆಗಳಲ್ಲಿಯೂ (ಸ್ತನಪಾನವೊದಲಾದವುಗಳಲ್ಲಿ) ಪ್ರವೃತ್ತನಾಗಿರುತ್ತೇನೆ. (9) ಭೋಜ ನಾದಿ ರೂಪಗಳಾದ ಕ್ರಿಯೆಗಳೆಲ್ಲಾ ಇರಲಿ ಸ್ತನಪಾನವೊದಲಾದುದೂ ಕೂಡ ನನ್ನಿಂದ ಇದು ಕಾರ್ಯವು ಎಂದು ನಿರ್ಧರಿಸಲ್ಪಡದಿರುವತನಕ ನಾನು ಅದರಲ್ಲಿ ಪ್ರವೃತ್ತನಾಗಲಿಲ್ಲ. ಹೀಗೆ ತನ್ನಪ್ರವೃತ್ತಿಗೆ ಕಾರ್ಯತಾಜ್ಞಾನಪೂರ್ವಕತ್ವವನ್ನು ನಿಶ್ಚಯಿಸಿ ಪ್ರವೃತ್ತಿಮಾಡಿದ ಚೈತ್ರನನ್ನು ನೋಡಿ 'ಚೈತ್ರನೂಕೂಡ ಕಾರ್ಯಜ್ಞಾನದಿಂದಲೇ ಪ್ರವೃತ್ತನಾಗಿದ್ದಾನೆಂದು' ಅನುಮೇಯಿಸು ತ್ತಾನೆ. (೧) ಚೈತ್ರಸ್ಯ ಪ್ರವೃತ್ತಿಃ ಕಾರ್ಯಬೋಧಪೂರ್ವಿಕಾ, ಬುದ್ಧಿಪೂರ್ವಪ್ರವೃತ್ತಿತ್ವಾತ್, ಮದೀಯ ಪ್ರವೃತ್ತಿವತ್=ಚೈತ್ರನ ಪ್ರವೃತ್ತಿಯು ಕಾರ್ಯಜ್ಞಾನದಿಂದ ಹುಟ್ಟಿದ್ದು, ಬುದ್ಧಿ ಪೂರ್ವಕವಾದ ಪ್ರವೃತ್ತಿಯಾದುದರಿಂದ, ನಾನು ಮಾಡತಕ್ಕ ಸ್ತನಪಾನವೊದಲಾದವುಗಳ ಪ್ರವೃತ್ತಿಯಂತೆ ಎಂದು ಅನುಮೇಯಿಸಿ ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ತಿಳಿಸಿಕೊಡತಕ್ಕ ಎಲ್ಲಾ ವಾಕ್ಯಗಳೂ ಕಾರ್ಯಪರಗಳೆಂದು ನಿಶ್ಚಯಿಸಿರುತ್ತಾನೆ. (10) ಹೀಗೆಯೇ ಲಿಙ್ ಲೋಟ್ ಲೇಟ್ ತವ್ಯಪ್ರತ್ಯಯಗಳೂ ಪ್ರವೃತ್ತಿಗೆ ಕಾರಣೀಭೂತವಾದ ಅರ್ಥವನ್ನು ಹೇಳುವವು ಗಳಾಗಿ ಕಾರ್ಯವನ್ನೇ ಹೇಳುತ್ತವೆ, ಹೀಗೆ ವಾಕ್ಯಗಳೆಲ್ಲವೂ ಸಾಮಾನ್ಯವಾಗಿ ಕಾರ್ಯಪರ ಗಳೆಂದು ನಿಶ್ಚಯಿಸಿ ಲಿಙಾದಿ ಪ್ರತ್ಯಯಗಳ ಸಂಬಂಧವಿದ್ದರೆ 'ನಾನು ಇದನ್ನು ಮಾಡ ಬೇಕು' ಎಂದು ಕಾರ್ಯಜ್ಞಾನವು ಬರುವುದರಿಂದಲೂ ಲಿಙಾದಿಗಳನ್ನು ತೆಗೆದುಬಿಟ್ಟರೆ

ಕಾರ್ಯಜ್ಞಾನವು ಬಾರದಿರುವುದರಿಂದಲೂ ಲಿಙಾದಿ ಪ್ರತ್ಯಯಗಳೇ ಕಾರ್ಯತಾಜ್ಞಾನವನ್ನು ಮಾಡುತ್ತವೆ. ಬೇರೆ ಪದಗಳಾದರೂ ಕಾರ್ಯದಿಂದ ಅನ್ವಯಿಸಿದ ಕರ್ತೃ ಕರ್ಮ ಮೊದಲಾದ ಪದಾರ್ಥಗಳನ್ನು ತಿಳಿಸಿಕೊಡುತ್ತವೆ. ಹೀಗೆ ಶಬ್ದಪ್ರಕ್ಷೇಪ ನಿಷ್ಕಾಸನಗಳಿಂದ ತಿಳಿಯುತ್ತಾನೆ. (11) ಲಿಙಾದಿ ಶಬ್ದಗಳಾಗಲೀ ಭಾವನೆಯಾಗಲೀ ಪ್ರವೃತ್ತಿಗೆ ಕಾರಣವು. ಅಥವಾ * ಶಬ್ದವಾಗಲೀ † ಶಬ್ದವ್ಯಾಪಾರವಾಗಲೀ ಪ್ರವೃತ್ತಿಗೆ ಕಾರಣವು ಎಂದು ಹೇಳುವ ಭಟ್ಟರ ಮತವು ಇದರಿಂದಲೇ ನಿರಸ್ತವಾಯಿತು. ಹೇಗೆಂದರೆ— ಬಾಲಕನು ತನ್ನ ಪ್ರವೃತ್ತಿಯಲ್ಲಿ ಶಬ್ದ ಶಬ್ದವ್ಯಾಪಾರಗಳನ್ನು ಕಾರಣಗಳೆಂದು ನಿಶ್ಚಯಿಸಲಿಲ್ಲ ತನ್ನ ಪ್ರವೃತ್ತಿಯಲ್ಲಿ ಕಾರಣವೆಂದು ನಿಶ್ಚಿತವಾದುದನ್ನೇ ಬೇರೆಯವರ ಪ್ರವೃತ್ತಿಯಲ್ಲಿ ಕಾರಣವೆಂದು ಬಾಲಕನು ನಿಶ್ಚಯಿಸುತ್ತಾನೆ.

(12) ಮತ್ತು ಶಬ್ದವೇ ಪ್ರವೃತ್ತಿಗೆ ಕಾರಣವೆಂದಾದರೆ ಅದನ್ನು ಕೇಳಿದೊಡನೆಯೇ ಎಲ್ಲರೂ ಪ್ರವರ್ತಿಸಬೇಕಾಗುವುದು. ಮತ್ತು ಹಾಗಾದರೆ ಶಂಖಮೊದಲಾದವುಗಳ ಶಬ್ದವನ್ನು ಕೇಳಿದೊಡನೆಯೇ ಯುದ್ಧದಲ್ಲಿ ಪ್ರವೃತ್ತಿಯು ತೋರುವುದರಿಂದ ಶಬ್ದವೇ ಪ್ರವೃತ್ತಿಗೆ ಕಾರಣವಾಗುತ್ತದೆಂದರೆ— ಅಲ್ಲಿಯೂ ಸಾಕ್ಷಾತ್ ಶಬ್ದವೇ ಪ್ರವೃತ್ತಿಗೆ ಕಾರಣವಲ್ಲ. ಮತ್ತೆ 'ಅಯಂ ಯುದ್ಧಕರ್ತವ್ಯತ್ವಾಭಿಪ್ರಾಯವಾನ್ ತತ್ಸೂಚಕ ಶಬ್ದಕರ್ತೃತ್ವಾತ್' ಇವನು ಯುದ್ಧವನ್ನು ಮಾಡಬೇಕೆಂದು ಅಭಿಪ್ರಾಯವುಳ್ಳವನು, ಅದನ್ನು ತಿಳಿಸತಕ್ಕ ಶಬ್ದವನ್ನು ಮಾಡುವುದರಿಂದ, ಎನ್ನುವ ಅನುಮಾನದಿಂದಲೇ ಪ್ರವೃತ್ತಿಯು. (13) ಯದ್ಯಪಿ ರಾಗದ್ವೇಷಗಳು ಪ್ರವರ್ತಕಗಳಾಗುತ್ತವೆ. "ಪ್ರವರ್ತನಾಲಕ್ಷಣಾಃ ದೋಷಾಃ" ರಾಗ ದ್ವೇಷ ಮೋಹಗಳು ಪ್ರವರ್ತಕತ್ವವೇ ಲಕ್ಷಣವಾಗಿ ಉಳ್ಳವುಗಳು ಎಂದು ನೈಯಾಯಿಕರು ಹೇಳುವರು. ಆದಾಗ್ಯೂ ಅವುಗಳು ಇದ್ದವುಗಳಾಗಿಯೇ ಪ್ರವರ್ತಕಗಳು. ಜ್ಞಾತಗಳಾಗಿ ಅಲ್ಲ. ಆದಕಾರಣ ವಾಕ್ಯದಲ್ಲಿ ರಾಗದ್ವೇಷಗಳನ್ನು ಬೋಧ್ಯಗಳನ್ನಾಗಿ ಕಲ್ಪಿಸುವುದಿಲ್ಲ. ಮತ್ತೆ ಕಾರ್ಯವನ್ನೇ ಕಲ್ಪಿಸುತ್ತೇವೆ. ಅದೇವೇ ವೇದಾರ್ಥವು. (14) ಪ್ರವೃತ್ತಿನಿವೃತ್ತಿಗಳಿಗೆ ಉಪಯುಕ್ತವಾದ ಅರ್ಥಜ್ಞಾನವನ್ನು ಹುಟ್ಟಿಸುವುದರಿಂದಲೇ ಪ್ರಮಾಣಗಳಿಗೆ ಪ್ರಾಮಾಣ್ಯವೆಂದಾದರೆ ಉದಾಸೀನವಾದ ತೃಣಾದಿಗಳ ಜ್ಞಾನವನ್ನು ಹುಟ್ಟಿಸುವ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವಿಲ್ಲವೆಂದಾಗಬೇಕಾಗುವುದು ಎಂದರೆ, ಅಹುದು. ಯದ್ಯಪಿ ಯಥಾವಸ್ಥಿತವಾದ ಅರ್ಥಜ್ಞಾನವನ್ನು ಹುಟ್ಟಿಸುವುದರಿಂದಲೇ ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವು. ಪ್ರವೃತ್ತ್ಯಾದಿಗಳಿಗೆ ಉಪಯುಕ್ತವಾದ ಅರ್ಥಜ್ಞಾನವನ್ನು ಹುಟ್ಟಿಸುವುದರಿಂದ ಪ್ರಾಮಾಣ್ಯವಲ್ಲ. ಆದಾಗ್ಯೂ ವಾಕ್ಯಪ್ರಯೋಗವು ಪರೋದ್ದೇಶ್ಯಕವಾಗಿರುವುದರಿಂದ ಪರರ ಪ್ರವೃತ್ತಿನಿವೃತ್ತಿಗಳಿಗೆ ಉಪಯುಕ್ತವಾದುದೇ ಅರ್ಥವು ವಾಕ್ಯಬೋಧ್ಯವೆಂದು ಅಂಗೀಕರಿಸಬೇಕು. ಕಾರ್ಯವೇ (ಪ್ರಯತ್ನದಿಂದ ಸಾಧಿಸಲಿಕ್ಕೆ ಯೋಗ್ಯವಾಗಿದ್ದು ಪ್ರಯತ್ನಕ್ಕೆ ಉದ್ದೇಶ್ಯವಾದುದೇ) ಪ್ರವೃತ್ತಿ ನಿವೃತ್ತಿಗಳಿಗೆ ಉಪಯುಕ್ತವಾದ ಅರ್ಥವು. ತಥಾಚ, ಎಲ್ಲಾ ಶಬ್ದಗಳಿಗೆ ವೃದ್ಧರ ವ್ಯವಹಾರಾದಿ

---

* ವಿಧಿನಿಷೇಧಾತ್ಮಕವಾದ ಶಬ್ದವೇ ಪುರುಷನಿಗೆ ಪ್ರವೃತ್ತಿಯನ್ನಾಗಲೀ ನಿವೃತ್ತಿಯನ್ನಾಗಲೀ ಮಾಡುವುದಾಗಿ ಶಾಬ್ದೀಭಾವನಾ ಎನ್ನಿಸುತ್ತದೆ. ಅದೇ ಲಿಙಾದಿಗಳಿಂದಲೂ ನಞಸಮಭಿವ್ಯಾಹೃತ ಲಙಾದಿಗಳಿಂದಲೂ ತಿಳಿಸಲ್ಪಡುತ್ತದೆ ಎನ್ನುವ ಪಕ್ಷವನ್ನು ಅನುಸರಿಸಿ ಶಬ್ದವು ಪ್ರವೃತ್ತಿಗೆ ಕಾರಣವೆಂದು ಉಕ್ತವಾಗಿದೆ.

† ಪ್ರವರ್ತನಾನಿವರ್ತನಾತ್ಮಕವಾದ ಶಬ್ದವ್ಯಾಪಾರವೇ ಶಾಬ್ದೀಬಾವನಾ ಎನ್ನಿಸುತ್ತದೆ. ಲೋಕದಲ್ಲಿ ಪ್ರೇಷಣಾದಿಗಳಿಂದ ಪ್ರವರ್ತಕನಾದ ಪುರುಷನ ವ್ಯಾಪಾರವು 'ಗಾಮಾನಯ' ಇತ್ಯಾದಿ ವಾಕ್ಯಗಳಲ್ಲಿ ಪ್ರವೃತ್ತಿನಿವೃತ್ತಿಗಳಿಗೆ ಕಾರಣವೆಂದು ತಿಳಿಯಲ್ಪಟ್ಟಿದೆ. ಅಪೌರುಷೇಯ ವೇದದಲ್ಲಿಯಾದರೂ ವಕ್ತೃ ಪುರುಷನ ವ್ಯಾಪಾರವೇ ಕೂಡದಿರುವುದರಿಂದ ಶಬ್ದದ್ದೇ ಆ ವ್ಯಾಪಾರವು ಎಂಬುವ ಪಕ್ಷವನ್ನು ಅನುಸರಿಸಿ, ಶಬ್ದವ್ಯಾಪಾರವು ಎಂದು ಹೇಳಿದ್ದಾಗಿರುತ್ತದೆ.

ಗಳಿಂದ ಕಾರ್ಯ (ಕೃತಿಸಾಧ್ಯವಾಗಿಯೂ ಕೃತ್ಯುದ್ದೇಶ್ಯವಾಗಿಯೂ ಇರುವುದು) ದಲ್ಲಿಯೇ ಶಕ್ತಿಯು ಗೃಹೀತವಾಗಿರುವುದರಿಂದ ಕಾರ್ಯವನ್ನು ಪ್ರತಿಪಾದಿಸುವುದರಲ್ಲಿಯೇ ಸರ್ವವೇದ ಗಳಿಗೂ ಪರ್ಯವಸಾನವಿರುವಪ್ರಯುಕ್ತ ಸಿದ್ಧರೂಪನಾದ ಬ್ರಹ್ಮನಲ್ಲಿ ವೇದಗಳಿಗೆ ಪ್ರಾಮಾಣ್ಯವೇ ಕೂಡದಿರುವುದರಿಂದ ಅನುಗ್ರಾಹ್ಯವಾದ ಪ್ರಮಾಣವೇ ಇಲ್ಲವು. ಆದುದರಿಂದ ಬ್ರಹ್ಮವಿಚಾರಾ ರಂಭವು ಕೂಡುವುದಿಲ್ಲವೆಂದು ಮೀಮಾಂಸಕರು ಹೇಳಿದರೆ—

(15) ಸಿದ್ಧಾಂತಿಗಳು ಹೀಗೆ ಸಮಾಧಾನವನ್ನು ಹೇಳುವರು. ವೇದವು ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲವೆಂದಾದರೆ ಅನುಗ್ರಾಹ್ಯ ಪ್ರಮಾಣವೇ ಇಲ್ಲದಿರುವಪ್ರಯುಕ್ತ ಬ್ರಹ್ಮ ಮೀಮಾಂಸಾರಂಭವು ಕೂಡುವುದಿಲ್ಲವೆಂದು ಶಂಕಿಸಿದ್ದು ಕೂಡಬಹುದಿತ್ತು. ಸರ್ವಥಾ ಹಾಗಲ್ಲ. ವೇದವೆಲ್ಲವೂ ಬ್ರಹ್ಮನನ್ನೇ ಪ್ರತಿಪಾದಿಸುತ್ತದೆ ಎನ್ನುವಲ್ಲಿ 'ಓತತ್ವವಾಚೀ' ಇತ್ಯಾದಿಗಳಿಂದ ಪ್ರಮಾಣವೂ ಉಕ್ತವಾಗಿದೆ. ಬ್ರಹ್ಮನು ಸರ್ವವೇದಾರ್ಥನೆನ್ನುವಲ್ಲಿ ಬಾಧಕವೂ ಇಲ್ಲ. (16) ಹಾಗಾದರೆ ಸಿದ್ಧರೂಪನಾದ ಬ್ರಹ್ಮನನ್ನು ಪ್ರತಿಪಾದಿಸಿದರೆ ವಾಕ್ಯಕ್ಕೆ ಆಕಾಂಕ್ಷಾನಿವೃತ್ತಿರೂಪ ಪರ್ಯವಸಾನವೇ ಇಲ್ಲದಿರುವುದರಿಂದ ಕಾರ್ಯಪರತ್ವವನ್ನೇ ವೇದಗಳಿಗೆ ಹೇಳಬೇಕೆಂದು ಹೇಳಕೂಡದು. ಆ ವಾಕ್ಯಪರ್ಯವಸಾನೋಪಯುಕ್ತವಾದ ಕಾರ್ಯತೆಯು ಸಿದ್ಧವಿಶೇಷಕ್ಕೇನೇ ಕೂಡುವುದರಿಂದ ಸಿದ್ಧಬ್ರಹ್ಮಪರತ್ವವನ್ನು ಹೇಳಿದರೆ ಯಾವ ದೋಷವೂ ಬರುವುದಿಲ್ಲವೆಂಬುವ ಅಭಿಪ್ರಾಯದಿಂದ ಪರೋಕ್ತವಾದ ಕಾರ್ಯತಾಸ್ವರೂಪವನ್ನು ನಿರಾಕರಿಸಿ ಸಿದ್ಧಾಂತಿಗಳಿಗೆ ಅಭಿಮತವಾದ ಕಾರ್ಯತಾವನ್ನು ನಿರ್ಧರಿಸುತ್ತಾರೆ—

ಮೂ || ಕಾರ್ಯತಾ ಚ ನ ಕಾಚಿತ್ಸ್ಯಾದಿಷ್ಟಸಾಧನತಾಂ ವಿನಾ || ೪೨ ||
ಕಾರ್ಯಂ ನ ಹಿ ಕ್ರಿಯಾವ್ಯಾಪ್ಯಂ ನಿಷಿದ್ಧಸ್ಯ ಸಮತ್ವತಃ |
ನ ಭವಿಷ್ಯತ್ಕ್ರಿಯಾ ಕಾರ್ಯಂ ಸ್ರಕ್ಷ್ಯತೀಶ ಇತಿ ಹ್ಯಪಿ || ೪೩ ||
ಕಾರ್ಯಂ ಸ್ಯಾನ್ನೈವ ಚಾಕರ್ತುಮಶಕ್ಯಂ ಕಾರ್ಯಮಿಷ್ಯತೇ |
ಸಾಮ್ಯಾದೇವ ನಿಷಿದ್ಧಸ್ಯ ತದಿಷ್ಟಂ ಸಾಧನಂ ತಥಾ || ೪೪ ||
ಕಾರ್ಯಂ [ಸಾಧನಮಿಷ್ಟಸ್ಯ ಭಗವಾನಿಷ್ಟದೇವತಾ] |

ಅ || ಇಷ್ಟಸಾಧನತಾಂ ವಿನಾ=ಇಷ್ಟಸಾಧನತ್ವವನ್ನು ಹೊರತು, ಕಾಚಿತ್ ಕಾರ್ಯತಾ ಚ=ಯಾವುದೊಂದು ಕಾರ್ಯತೆಯೂ, ನ ಸ್ಯಾತ್=ಆಗಲಾರದು. ಕ್ರಿಯಾವ್ಯಾಪ್ಯಂ=ಕ್ರಿಯೆ ಯಿಂದ ವಿಶೇಷವಾಗಿ ಹೊಂದಲರ್ಹವಾದುದು, ಕಾರ್ಯಂ=ಕಾರ್ಯವು, ನ ಹಿ=ಕೂಡ ಲಾರದು. ನಿಷಿದ್ಧಸ್ಯ ಸಮತ್ವತಃ=ಶಾಸ್ತ್ರನಿಷಿದ್ಧವಾದ ಬ್ರಾಹ್ಮಣಹನನಾದಿಗಳಿಗೂ ಕ್ರಿಯೆಯಿಂದ ಹೊಂದಲಿಕ್ಕೆ ಅತಿಶಯವಾಗಿ ಇಷ್ಟತ್ವವು ಸಮಾನವಾಗಿರುವುದರಿಂದ. ಭವಿಷ್ಯತ್ಕ್ರಿಯಾ=ಮೇಲೆ ಆಗತಕ್ಕ ಕ್ರಿಯೆಯು, ಕಾರ್ಯಂ=ಕಾರ್ಯವು, ನ=ಆಗುವುದಿಲ್ಲ. (ತಥಾ ಸತಿ=ಭವಿಷ್ಯ ತ್ಕ್ರಿಯೆಯು ಕಾರ್ಯವೆಂದಂಗೀಕರಿಸಿದರೆ) ಹಿ=ಯಾವ ಕಾರಣದಿಂದ, ಈಶಃ=ಶ್ರೀಹರಿಯು, ವಿಶ್ವಂ=ಸರ್ವಜಗತ್ತನ್ನು, ಸ್ರಕ್ಷ್ಯತಿ=ಸೃಷ್ಟಿಮಾಡುವನು, ಎಂಬ ವಾಕ್ಯದಿಂದ ಜ್ಞಾತವಾದ ಭವಿಷ್ಯತ್ಸರ್ಜನಾದಿಗಳೂ, ಕಾರ್ಯಂ ಸ್ಯಾತ್=ಕಾರ್ಯವಾಗಬೇಕಾಗುವುವು. ಆದಕಾರಣ ಅದು ಆಗುವುದಿಲ್ಲ. ಅಕರ್ತುಂ ಅಶಕ್ಯಂ ಕಾರ್ಯಂ=ಮಾಡದಿರಲಿಕ್ಕೆ ಅಶಕ್ಯವಾದುದು ಕಾರ್ಯವು ಎಂದು, ನೈವ ಚ ಇಷ್ಯತೇ=ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುವುದೇ ಇಲ್ಲವು. ನಿಷಿದ್ಧಸ್ಯ ಸಾಮ್ಯಾದೇವ=ನಿಷಿದ್ಧವಾದ ಪರನಾರೀಗಮನಾದಿಗಳಿಗೂ ಮಾಡದಿರಲಿಕ್ಕೆ ಅಶಕ್ಯತ್ವವು

ಸಮಾನವಾಗಿರುವುದರಿಂದಲೇ, ತತ್=ಆದಪ್ರಯುಕ್ತ, ಇಷ್ಟಂ=ಇಷ್ಟವಾದುದು, ತಥಾ=ಹಾಗೆ, ಸಾಧನಂ=ಇಷ್ಟಸಾಧನವಾದುದು, ಕಾರ್ಯಂ=ಕಾರ್ಯವೆನಿಸುತ್ತದೆ.

ತಾ ॥ ನ್ಯಾಯಸುಧಾ— (1) ಗವಾನಯನಾದಿಗಳಲ್ಲಿ ಯಾವ ಕಾರ್ಯತೆಯು ವಾಕ್ಯ ಪರ್ಯವಸಾನಕ್ಕೆ ಕಾರಣವೋ ಅದು ಇಷ್ಟಸಾಧನತ್ವಕ್ಕಿಂತ ಬೇರೆಯಾದುದು ಇಲ್ಲವು. ಏಕೆಂದರೆ, ಇಷ್ಟಸಾಧನತ್ವಕ್ಕಿಂತ ಬೇರೆಯಾದ ಕಾರ್ಯತೆಯು ಕೂಡುವುದಿಲ್ಲ. (2) ಬೇರೆ ಏತಕ್ಕೆ ಕೂಡುವುದಿಲ್ಲವೆಂದರೆ ಕ್ರಿಯೆಯಿಂದ ವಿಶೇಷವಾಗಿ ಹೊಂದಲರ್ಹವಾದದ್ದು ಕಾರ್ಯವು. ಅಂದರೆ, ಮಾಡಲಿಕ್ಕೆ ಬರುವುದು ಅದರ ಧರ್ಮವು ಕಾರ್ಯತೆಯು ಇಂತಹ ಕಾರ್ಯತೆಯು ಕೂಡುವುದಿಲ್ಲ. ನಿಷಿದ್ಧಗಳಾದ ಬ್ರಾಹ್ಮಣಹನನಾದಿಗಳನ್ನೂ ಮಾಡಲಿಕ್ಕೆ ಬರುವುದರಿಂದ ಅವುಗಳೂ ಕಾರ್ಯಗಳಾಗಬೇಕಾಗುವುವು. ಇಂತಹ ಕಾರ್ಯತಾಜ್ಞಾನವೇ ಪ್ರವರ್ತಕವೆಂದು ಹೇಳಿದರೆ ಬ್ರಾಹ್ಮಣಹನನಾದಿಗಳಲ್ಲಿಯೂ ಇಂತಹ ಕಾರ್ಯತಾಬುದ್ಧಿಯು ಬಂದು ಅದರಲ್ಲಿ ಪ್ರವೃತ್ತಿ ಮಾಡಬೇಕಾದೀತು. (3) ದೇವದತ್ತನೇ ನೀನು ಚಾಪೆಯನ್ನು ಮಾಡಿದ್ದಿಯೋ, ಮಾಡುತ್ತಿಯೋ, ಎಂದು ಪ್ರಶ್ನಿಸಿಕೊಂಡವನು ಹೀಗೆ ಉತ್ತರಕೊಡುತ್ತಾನೆ. "ನಾನು ಚಾಪೆಯನ್ನು ಮಾಡಲಿಲ್ಲ, ಈಗ ಮಾಡುವುದೂ ಇಲ್ಲ, ಮತ್ತೆ ಇನ್ನುಮುಂದೆ ಮಾಡಬೇಕು." ಅದರಿಂದ ಮೇಲೆ ಆಗತಕ್ಕ ಕ್ರಿಯೆಯು ಕಾರ್ಯವು. ಅದರಲ್ಲಿದ್ದ ಧರ್ಮವೇ ಕಾರ್ಯತೆಯು, ಎಂದು ಹೇಳಿದಂತೆ ಆಯಿತು. ಅದೂ ಕೂಡುವುದಿಲ್ಲ. ಏಕೆಂದರೆ- ಭವಿಷ್ಯತ್‌ಕ್ರಿಯೆಯು ಕಾರ್ಯವೆಂದಂಗೀಕರಿಸಿದರೆ ಶ್ರೀಹರಿಯು ಪ್ರಪಂಚವನ್ನು ಇನ್ನುಮುಂದೆ ಸೃಷ್ಟಿಸುವನು, ದೇವದತ್ತನು ಗೋವನ್ನು ಇನ್ನು ಮುಂದಕ್ಕೆ ತರುವನು ಎನ್ನುವ ವಾಕ್ಯದಿಂದ ತಿಳಿಯತಕ್ಕ ಮೇಲೆ ಮಾಡತಕ್ಕ ಸೃಷ್ಟ್ಯಾದಿಗಳೂ ಕಾರ್ಯವಾಗಬೇಕಾಗುವುವು. ಆದಪ್ರಯುಕ್ತ ಅದೂ ಆಗುವುದಿಲ್ಲ. ಏಕೆಂದರೆ- ಲಿಙ್ ಲೋಟ್ ತವ್ಯ ಪ್ರತ್ಯಯಗಳಿಂದ ಬೋಧ್ಯವಾದದ್ದೇ ಕಾರ್ಯವೆಂದು ಪರರು ಒಪ್ಪಿರುವರು. (4) ಮಾಡದಿರಲಿಕ್ಕೆ ಅಶಕ್ಯವಾದದ್ದೇ ಕಾರ್ಯವು. ಅದರ ಧರ್ಮವು ಕಾರ್ಯತೆಯು. ಇಂತಾದ್ದು ಕಾರ್ಯತೆಯೆಂದು ಹೇಳಕೂಡದು. ಏಕೆಂದರೆ- ಪರನಾರೀಗಮನಾದಿಗಳೂ ಅತಿ ಕಾಮಿಯಾದ ಮನುಷ್ಯನಿಗೆ ಮಾಡದಿರಲಿಕ್ಕೆ ಅಶಕ್ಯವೇ ಆಗಿದೆ. ಆಸ್ತಿಕ ಕಾಮುಕನೂ ಕೂಡ ಇದು ಅಕಾರ್ಯವೇ ಆದರೂ ಇದನ್ನು ಮಾಡದಿರಲಿಕ್ಕೆ ಸಮರ್ಥನಾಗುವುದಿಲ್ಲವೆಂದು ತಿಳಿಯುತ್ತಾನೆ. ಈ ರೀತಿಯಾಗಿ ಬೇರೆ ಯಾವ ವಿಧವಾದ ಕಾರ್ಯತೆಯೂ ಕೂಡದಿರುವುದರಿಂದ ಇಷ್ಟತ್ವವಾಗಲೀ ಇಷ್ಟಸಾಧನತ್ವವಾಗಲೀ ಕಾರ್ಯತೆಯು ಎಂದು ಒಪ್ಪಬೇಕು.

(5) ಹಾಗಾದರೆ "ಕೃತಿಸಾಧ್ಯಂ ಪ್ರಧಾನಂ ಯತ್ತತ್ಕಾರ್ಯಮಭಿಧೀಯತೇ" ಕೃತಿಸಾಧ್ಯವಾದುದು ಕೃತಿಪ್ರಧಾನವಾದುದು ಯಾವುದೋ ಅದು ಕಾರ್ಯವೆನ್ನಿಸುತ್ತದೆ, ಎಂದು ಪರರು ಹೇಳಿದ ಕಾರ್ಯಲಕ್ಷಣವನ್ನು ಏಕೆ ಶಂಕಿಸಿಕೊಳ್ಳಲಿಲ್ಲ ಎಂದರೆ—ಹಿಂದೆ ಹೇಳಿದ ವಿಕಲ್ಪಗಳಿಂದಲೇ ಚರಿತಾರ್ಥವಾಗಿದೆ. ಹೇಗೆಂದರೆ— ಕೃತಿಸಾಧ್ಯವಾದುದು (ಸ್ವವಿಷಯಕ ಚಿಕೀರ್ಷಾಧೀನ ಕೃತಿಸಾಧ್ಯತ್ವರೂಪವಾದುದು ಕಾರ್ಯತ್ವವು) ಕಾರ್ಯವು, ಕೃತಿಪ್ರಧಾನವಾದುದು ಕಾರ್ಯವು ಎಂದು ಪ್ರತ್ಯೇಕಲಕ್ಷಣವೆಂದು ಇಟ್ಟುಕೊಂಡರೆ ಕಲಂಜಭಕ್ಷಣಾದಿಗಳಲ್ಲಿಯೂ ಕೃತಿಸಾಧ್ಯತ್ವವು (ಸ್ವವಿಷಯಕವಾದ, ಚಿಕೀರ್ಷಾ (ಮಾಡಲಿಚ್ಛೆ) ಧೀನ ಕೃತಿಸಾಧ್ಯತ್ವವು) ಇದ್ದಪ್ರಯುಕ್ತ ಅವುಗಳೂ ಕಾರ್ಯವಾಗಬೇಕಾಗುವುವು. ಅಂತೂ 'ನಿಸಿದ್ಧಸ್ಯ ಸಮುತ್ಪತ್ತೇಃ' ಎನ್ನುವ ವಿಕಲ್ಪದಿಂದಲೇ ನಿರಸ್ತವಾಗಿದೆ. (6) ಕೃತಿಪ್ರಾಧಾನ್ಯವು ಕಾರ್ಯತ್ವವು ಎಂದು ಇಟ್ಟುಕೊಂಡರೆ ಕೃತಿಪ್ರಾಧಾನ್ಯ ಎನ್ನುವುದಕ್ಕೆ (೧) 'ಮುಖ್ಯಪ್ರಯತ್ನೋದ್ದೇಶ್ಯತ್ವಂ' ಎಂದು

ಅರ್ಥವಾದರೆ ಯಾವುದರ ಇಚ್ಛೆಯಿಂದ ಪ್ರಯತ್ನವೋ ಅದೇ ಉದ್ದೇಶ್ಯವಾಗಿವುಳ್ಳದ್ದು ಮುಖ್ಯ (ಅನನ್ಯಾರ್ಥವಾಗಿ ಇಚ್ಛಿಸಲ್ಪಡತಕ್ಕದ್ದು) ವಾದುದು ಸುಖಾದಿರೂಪವಾದ ಇಷ್ಟವೇ ಆಯಿತು. (೨) ಅಮುಖ್ಯ ಪ್ರಯತ್ನೋದ್ದೇಶ್ಯತ್ವಂ ಎಂದು ಅರ್ಥವಾದರೆ-ಅನಾ ರ್ಥವಾಗಿ (ಬೇರೆ ಪ್ರಯೋಜನಕ್ಕಾಗಿ) ಇಚ್ಛಿಸಲ್ಪಡತಕ್ಕದ್ದು ಅಮುಖ್ಯವು, ಅದು ಇಷ್ಟಸಾಧನವೇ ಆಯಿತು. (7) ಕೃತಿಸಾಧ್ಯವಾದುದೂ ಕೃತಿಪ್ರಧಾನವಾದುದೂ ಯಾವುದೋ ಅದು ಕಾರ್ಯವು ಎಂದು ವಿಶಿಷ್ಟಲಕ್ಷಣವೆಂದು ಇಟ್ಟುಕೊಂಡರೆ ಕೃತಿಸಾಧ್ಯತ್ವ ಎನ್ನುವ ವಿಶೇಷಣವು ವ್ಯರ್ಥವಾಗುವುದು. (8) **ಫಲಸಾಧನತಾ ನಾಮ ಯಾ ಸಾ ನೈವ ಹಿ ಕಾರ್ಯತಾ । ಕಾರ್ಯತಾ ಕೃತಿಸಾಧ್ಯತ್ವಂ ಫಲಸಾಧನತಾ ಪುನಃ । ಕಾರಣತ್ವಂ ಫಲೋತ್ಪಾದೇ ತೇ ಭಿದ್ಯೇತೇ ಪರಸ್ಪರಂ ॥** ಯಾವುದು ಫಲಸಾಧನತ್ವವೋ ಅದು ಕಾಯತ್ವವಲ್ಲವೇಅಲ್ಲ. ಕಾರ್ಯತ್ವವೆಂದರೆ ಕೃತಿಸಾಧ್ಯತ್ವವು, ಫಲಸಾಧನತ್ವವೆಂದರೆ ಫಲವನ್ನು ಹುಟ್ಟಿಸುವ ವಿಷಯದಲ್ಲಿ ಕಾರಣತ್ವವು. ಇವುಗಳು ಪರಸ್ಪರ ಭಿನ್ನಗಳು. ಅಂದರೆ— ಯದ್ಯಪಿ ಯಾಗಾದಿರೂಪವಾದ ಒಂದೇ ವಸ್ತುವು ಕೃತಿಸಾಧ್ಯವೂ ಫಲಸಾಧನವೂ ಆಗುತ್ತದೆ. ಆದಾಗ್ಯೂ ಅದರಲ್ಲಿರತಕ್ಕ ಕೃತಿಜನ್ಯತ್ವ-ಫಲಸಾಧನತ್ವರೂಪಗಳಾದ ಕೃತಿಸಾಧ್ಯತ್ವ, ಫಲಸಾಧನತ್ವ ಧರ್ಮಗಳಿಗೆ ಭೇದವೇ ಎಂದು ಶ್ಲೋಕಾರ್ಥವು ಹೀಗೆ ಹೇಳಿರುವರು. ಇದೂ ಕೂಡ ಕೃತಿಸಾಧ್ಯತ್ವಕ್ಕೆ ಕಾರ್ಯತಾರೂಪತ್ವವನ್ನು ನಿರಾಕರಿಸಿದುದರಿಂದಲೇ ನಿರಸ್ತವಾಯಿತು. ಅಂತೂ ಕೃತಿಸಾಧ್ಯತ್ವಕ್ಕೆ ಹಿಂದೆ ಹೇಳಿದ ರೀತಿಯಾಗಿ ಕಾರ್ಯತಾರೂಪತ್ವವಿಲ್ಲದಿರುವುದರಿಂದ ಅದಕ್ಕೆ ಇಲ್ಲಿ ಫಲಸಾಧನತ್ವಕ್ಕಿಂತ ಭೇದವನ್ನು ಹೇಳಿದ್ದು ಪ್ರಕೃತಾನುಪಯುಕ್ತವು. (9) ಇಷ್ಟಸಾಧನತ್ವವು ಕಾರ್ಯತ್ವವು ಎಂದು ಹೇಳಕೂಡದು. ಚಂದ್ರಮಂಡಲಾದಿಗಳಲ್ಲಿ ಇಷ್ಟಸಾಧನತ್ವವಿದ್ದಾಗ್ಯೂ ಕಾರ್ಯತಾಬುದ್ಧಿಯಿಲ್ಲ ಎಂದರೆ — ಕಾರ್ಯತಾಬುದ್ಧಿಯೆಂದರೆ ಯಾವುದು? (೧) ಇಷ್ಟಸಾಧನತಾಬುದ್ಧಿಯೆಂದರೆ— ಚಂದ್ರಮಂಡಲಾದಿಗಳಲ್ಲಿ ಕಾರ್ಯತಾಬುದ್ಧಿಯು ಏಕೆ ಇಲ್ಲ? (೨) ಇಷ್ಟಸಾಧನತಾಬುದ್ಧಿಯಿಂದ ಅತಿರಿಕ್ತವಾದುದು ಕಾರ್ಯತಾಬುದ್ಧಿಯು ಎನ್ನಕೂಡದು. ಇಂತಹುದೆಂದು ಎಲ್ಲಿಯೂ ನಿರೂಪಿಸಲಿಲ್ಲ. (10) ಹಾಗಾದರೆ ಕಾರ್ಯಜ್ಞಾನವು ಪ್ರವರ್ತಕವು, ಇಷ್ಟಸಾಧನಜ್ಞಾನವು ಪ್ರವರ್ತಕವಲ್ಲ. ಅಂತೂ ಇಷ್ಟಸಾಧನತ್ವವು ಕಾರ್ಯತ್ವವಲ್ಲ, ಎಂದರೆ—ಹಾಗೆ ಹೇಳಕೂಡದು. ಏಕೆಂದರೆ— ಇಷ್ಟಸಾಧನ ಜ್ಞಾನಕ್ಕೂ ಪ್ರವರ್ತಕತ್ವವಿದ್ದುದರಿಂದ ಕಾರ್ಯತಾಜ್ಞಾನಕ್ಕೇನೇ ಪ್ರವರ್ತಕತ್ವವು ಸಿದ್ಧವಾಗಲಿಲ್ಲ. (11) ಹಾಗಾದರೆ ಇಷ್ಟಸಾಧನತಾಜ್ಞಾನಕ್ಕೆ ಪ್ರವರ್ತಕತ್ವವಿದ್ದರೆ ಅತೀತಭೋಜನಾದಿಗಳಲ್ಲಿಯೂ ಪ್ರವೃತ್ತಿಯು ಬರಬೇಕಾಗುವುದು. ಎಂದರೆ— ಹಾಗೆ ಹೇಳಕೂಡದು. ಅತೀತಭೋಜನಾದಿಗಳಿಗೆ ಈಗ ಇಷ್ಟಸಾಧನತ್ವವಿಲ್ಲ. ಹೀಗೆ ಹೇಳದಿದ್ದರೆ ಕಾರ್ಯಜ್ಞಾನದಿಂದಲೇ ಪ್ರವೃತ್ತಿಯು ಎಂದು ಹೇಳುವವರಿಗೂ ಅತೀತಭೋಜನಾದಿರೂಪ ಕಾರ್ಯದಲ್ಲಿಯೂ ಪ್ರವೃತ್ತಿಯು ಬರಬೇಕಾಗುವುದು ಎನ್ನುವ ಪ್ರಸಂಗವು ಸಮಾನವಾಗಿದೆ. ಅಂತೂ ಈಗ ಕಾರ್ಯವಲ್ಲ (ಕೃತಿಸಾಧ್ಯತ್ವವಿಲ್ಲ) ವೆಂದು ಪ್ರವೃತ್ತಿಪ್ರಸಂಗವನ್ನು ಪರಿಹರಿಸಬೇಕು. ಅದು ನಮಗೂ ಸಮಾನವೇ. (12) ಮತ್ತು ಕೃತಿಸಾಧ್ಯತ್ವವು, ಕೃತ್ಯುದ್ದೇಶ್ಯತ್ವವು, ಇಷ್ಟಸಾಧನತ್ವವು ಇವು ಒಂದೇ ವಸ್ತುವಿನಲ್ಲಿ ಇರುವ ಮೂರು ಧರ್ಮಗಳು. ಅವುಗಳಲ್ಲಿ ಕೃತಿಸಾಧ್ಯತ್ವದಿಂದ ಕೂಡಿರುವ ಕೃತ್ಯುದ್ದೇಶ್ಯತ್ವವು ಕಾರ್ಯತ್ವವು. ಅದರ ಜ್ಞಾನವು ಇಷ್ಟಸಾಧನತಾಜ್ಞಾನದಿಂದ ಬರುತ್ತದೆ ಎಂದು ಪ್ರಾಭಾಕರರ ಮತವು. "**ಕಿಂತು ಸ್ವಯಂ ಕ್ಲೇಶರೂಪಂ ಕರ್ಮ ಯತ್ಕಾರ್ಯತಾಂ ವ್ರಜೇತ್ । ಫಲಸಾಧನತಾ ತತ್ರ ಕಾರಣಂ ತೇನ ಕಾರ್ಯತಾ ॥**" ಆದರೆ ಸ್ವಾಭಾವಿಕವಾಗಿ ಕ್ಲೇಶರೂಪವಾದ ಕರ್ಮವೇ ಕಾರ್ಯತ್ವವನ್ನು ಹೊಂದುತ್ತದೆ. ಆ ಕೃತಿಸಾಧ್ಯತಾಜ್ಞಾನದಲ್ಲಿ ಫಲಸಾಧನತ್ವವು

ಕಾರಣವು. (ಜ್ಞಾಪಕವು.) ಅದರಿಂದ ಕಾರ್ಯತೆಯು ಅನುಮೇಯಿಸತಕ್ಕದ್ದು, ಎಂದು ಪ್ರಾಭಾಕರರು ಹೇಳಿರುವರು. ಅಂತೂ ಇಷ್ಟಸಾಧನತಾಜ್ಞಾನವು ಪ್ರವರ್ತಕವೆಂದಂಗೀಕರಿಸಿದರೆ ಅತೀತ ಭೋಜನಾದಿಗಳಲ್ಲಿ ಪ್ರವೃತ್ತಿಯು ಬರಬೇಕಾಗುವುದೆನ್ನುವ ಅತಿಪ್ರಸಂಗವು ಹೇಗೆ ಬರುತ್ತದೋ, ಹೀಗೆಯೇ ಇಷ್ಟಸಾಧನತ್ವದಿಂದ ಕಾರ್ಯತ್ವವನ್ನು ಅನುಮೇಯಿಸಬೇಕು ಎನ್ನುವ ಪಕ್ಷದಲ್ಲಿಯೂ ಅತೀತಭೋಜನಾದಿಗಳಲ್ಲಿಯೂ ಇಷ್ಟಸಾಧನತ್ವವಿದ್ದಪ್ರಯುಕ್ತ ಕಾರ್ಯತ್ವವನ್ನು ಅನುಮೇಯಿಸಬೇಕಾಗುವುದು. (13) ಹಾಗಾದರೆ ಕೇವಲ ಇಷ್ಟಸಾಧನತ್ವವು ಕಾರ್ಯತ್ವವನ್ನು ಅನುಮೇಯಿಸಿಕೊಡತಕ್ಕದು ಅಲ್ಲ. ಮತ್ತೆ ಕೃತಿಸಾಧ್ಯತ್ವದಿಂದ ಕೂಡಿಕೊಂಡು ಇದ್ದ ಇಷ್ಟಸಾಧನತ್ವವು ಕಾರ್ಯತ್ವವನ್ನು ಅನುಮೇಯಿಸಿಕೊಡತಕ್ಕದ್ದು. ಅದರಿಂದ ಅನುಮೇಯುವಾದ ಕಾರ್ಯತ್ವವು ಕೃತ್ಯುದ್ದೇಶ್ಯತ್ವಮಾತ್ರವೇ, ಎಂದರೆ-ಆದಾಗ್ಯೂ ಅತೀತಭೋಜನಾದಿಗಳಲ್ಲಿ ಹಿಂದೆ ಹೇಳಿದ ಅತಿಪ್ರಸಂಗವಿದ್ದೇ ಇದೆ. ಅತೀತಭೋಜನಾದಿಗಳಲ್ಲಿಯೂ ಕೃತಿಸಾಧ್ಯತ್ವವು ಇದ್ದೇ ಇದೆ. ಅಲ್ಲವಾದರೆ ಅತೀತಭೋಜನಾದಿಗಳು ಕೃತಿಯಿಂದ ಹೇಗೆ ಹುಟ್ಟಿತು? (14) ಆದಾಗ್ಯೂ ಈಗ ಅತೀತ ಭೋಜನಾದಿಗಳು ಕೃತಿಸಾಧ್ಯವಲ್ಲವೆಂದರೆ — ಈಗ ಇಷ್ಟಸಾಧನವೂ ಅಲ್ಲ. ಆದಕಾರಣ ಆವಶ್ಯಕವಾದ 'ಇದಾನೀಂ' (ಈಗ) ಎನ್ನುವ ವಿಶೇಷಣದಿಂದಲೇ ಅತೀತಭೋಜನಾದಿಗಳಲ್ಲಿ ಅತಿಪ್ರಸಂಗ ಪರಿಹಾರವಾಗುವುದರಿಂದ ಆ ಅತಿಪ್ರಸಂಗಪರಿಹಾರಕ್ಕಾಗಿ ಕೃತಿಸಾಧ್ಯತ್ವವಿಶೇಷಣವು ವ್ಯರ್ಥವೇ. ನಮ್ಮ ಮತದಲ್ಲಿಯಾದರೂ ಇಷ್ಟಸಾಧನತ್ವವೇ ಕಾರ್ಯತ್ವವೆಂದು ಹೇಳಿದರೆ ಚಂದ ಮಂಡಲಾದಿಗಳಲ್ಲಿಯೂ ಪ್ರವೃತ್ತಿಯು ಬರಬೇಕಾಗುವುದು ಎಂದು ಹೇಳಕೂಡದು. ಏಕೆಂದರೆ ಪ್ರವರ್ತಕವೇ ಇಲ್ಲ. ಕೃತಿಸಾಧ್ಯತ್ವದಿಂದ ಕೂಡಿರುವ ಕೃತ್ಯುದ್ದೇಶ್ಯತ್ವರೂಪ ಕಾರ್ಯತ್ವವು ಪ್ರವರ್ತಕವೆಂದಂಗೀಕರಿಸಿರುತ್ತೇವೆ ಅದು ಅಲ್ಲಿ ಇಲ್ಲ. ಅಂತೂ ಲಿಙ್‌ವಾಚ್ಯವಾದ ಇಷ್ಟಸಾಧನತ್ವರೂಪವಾದ ಕಾರ್ಯತ್ವವು ಪ್ರವರ್ತಕ ಕಾರ್ಯದ್ದೆಶೆಯಿಂದ ಬೇರೆ. ಪ್ರವರ್ತಕ ಕಾರ್ಯತ್ವವು ಆ ಕಾರ್ಯತ್ವದಿಂದ ಬೇರೆ. ಹೀಗೆ ಎರಡು ಕಾರ್ಯಗಳೆಂದಂಗೀಕರಿಸಿರುವುದರಿಂದ ಯಾವ ದೋಷವೂ ಇಲ್ಲ. (15) ಹಾಗಾದರೆ ಗಮ್ಯ (ಕಾರ್ಯತ್ವವು) ಗಮಕ (ಇಷ್ಟಸಾಧನತ್ವ)ಗಳಿಗೆ ಐಕ್ಯವು ಹೇಗೆ ಕೂಡುತ್ತದೆ ಎಂದು ಹೇಳಕೂಡದು. ಗಮ್ಯ-ಗಮಕಭಾವವನ್ನೇ ಅಂಗೀಕರಿಸುವುದಿಲ್ಲ. (16) ಹಾಗಾದರೆ ಲೋಕವಿರೋಧವು ಬರಬೇಕಾಗುವುದು. ಹೇಗೆಂದರೆ, ಜನರು 'ಇದನ್ನು ನನಗೆ ಮಾಡಬೇಕಾಗಿದೆ' ಎಂದು ಹೇಳುವಾಗ, ಏಕೆ ಎಂದು ಮತ್ತೊಬ್ಬನು ಕೇಳಿದರೆ ಇಷ್ಟ ಸಾಧನವಾಗಿರುವುದರಿಂದ ಎಂದು ಇಷ್ಟಸಾಧನತ್ವವನ್ನು ಹೇತುವನ್ನಾಗಿ ಹೇಳುವರು. ಎಂದರೆ-ಹಾಗೆ ಹೇಳಕೂಡದು. ಕಾರ್ಯವು ಇಷ್ಟವು, ಇಷ್ಟಸಾಧನವು, ಎಂದು ಎರಡು ವಿಧವು. ಅದರಲ್ಲಿ ಇಷ್ಟಸಾಧನತ್ವಾತ್ ಎನ್ನುವುದು ವಿವಕ್ಷಿತವಾದ ಕಾರ್ಯದ ವ್ಯಾಖ್ಯಾನವು. ಅಂದರೆ, ಕಾರ್ಯತ್ವವು ಹಿಂದೆ ಹೇಳಿದಪ್ರಕಾರ ಎರಡುವಿಧವಾಗಿರುವುದರಿಂದ, ಕುತಃ=ಎಂತಹ ಕಾರ್ಯತ್ವವು ಎನ್ನುವ ಪ್ರಶ್ನೆಗೆ ಇಷ್ಟಸಾಧನತ್ವರೂಪವಾದ ಕಾರ್ಯತ್ವವೆಂದು ಉತ್ತರವು. (17) ಮತ್ತು ಮೊದಲು ಇಷ್ಟಸಾಧನತಾಜ್ಞಾನವು, ಆ ಮೇಲೆ ಇಚ್ಛೆಯು, ಆಮೇಲೆ ಪ್ರಯತ್ನವು, ಆಮೇಲೆ ಕ್ರಿಯಾವಿಶೇಷವು, ಹೀಗೆ ಆತ್ಮನಲ್ಲಿಯೇ ಏಕಾರ್ಥವಿಷಯಕಗಳಾದ ಧರ್ಮಗಳು ಹುಟ್ಟುತ್ತವೆ. ಇಷ್ಟಸಾಧನತ್ವರೂಪ ಹೇತುವಿನಿಂದ ಅನುಮೇಯಿಸಲ್ಪಡಬಹುದಾದ ಕಾರ್ಯತಾರೂಪವಾದ ಅತಿಶಯವು ಅರ್ಥದಲ್ಲಿ ಅನುಭವಿಸಲ್ಪಡುವುದಿಲ್ಲ. ಆದಕಾರಣ ಲಿಙಾದಿಪ್ರತ್ಯಯಗಳಿಂದ ಯಾಗಾದಿಗಳು ಇಷ್ಟಸಾಧನಗಳೆಂದು ತಿಳಿಯಲ್ಪಡುತ್ತಿರಲು 'ಯಾಗಾದಿಃ ಮತ್ಕೃತಿಸಾಧ್ಯಃ ಮತ್ಕೃತಿಂ ವಿನಾ ಅಸತ್ವಾತ್' ಯಾಗಮೊದಲಾದುದು ನನ್ನ ಕೃತಿಯಿಂದ ಸಾಧ್ಯವು, ನನ್ನ ಕೃತಿಯಿಲ್ಲದೆ ಕೂಡದಿರುವುದರಿಂದ, ಎಂದು ಪ್ರಮಾಣಾಂತರದಿಂದ ಕೃತಿಸಾಧ್ಯವೆಂಬು ಜ್ಞಾನ

ಬಂದಮೇಲೆ, ಕೃತಿಯಿಂದ ಸ್ವರ್ಗಾದಿಫಲವನ್ನು ಸಾಧಿಸುವೆನೆಂದು ಲೇಚ್ಛೆಯೂ ಇರುವಾಗ ಯಾಗಮೊದಲಾದವುಗಳಲ್ಲಿ ಪ್ರವೃತ್ತಿಯಾಗುತ್ತದೆ. ಈ ಅನುಭವದಿಂದ ಬೇರೆ ಯಾವುದರಿಂದಲೂ ಸಿಗದಿರುವ ಇಷ್ಟಸಾಧನತ್ವವೇ ವಿಧಿಪ್ರತ್ಯಯದಿಂದ ತಿಳಿಯಲ್ಪಟ್ಟದ್ದಾಗಿ ಸಾಕ್ಷಾತ್ತಾಗಿಯೇ ಪ್ರವರ್ತಕವಾಗುತ್ತದೆ. ಕೃತಿಸಾಧ್ಯತ್ವವಾದರೂ ಪ್ರಮಾಣಾಂತರದಿಂದ ಗಮ್ಯವಾಗಿರುವುದರಿಂದ ಸಾಕ್ಷಾತ್ಪ್ರವರ್ತಕವಲ್ಲ. ಮತ್ತೆ ಫಲೇಚ್ಛೆಯನ್ನು ಹುಟ್ಟಿಸುವುದರಿಂದ ಅನ್ಯಥಾಸಿದ್ಧವಾಗುತ್ತದೆ. ಆದಕಾರಣ ಕೃತಿಸಾಧ್ಯತ್ವವಿಶೇಷಣವು ವ್ಯರ್ಥವೆಂದು ಹೇಳಿದ್ದು ಪ್ರಶಸ್ತವೇ. ॥ ೪೨ ॥ ೪೩ ॥ ೪೪ ॥

ಆಗಲಿ. ವಾಕ್ಯಪರ್ಯವಸಾನಕ್ಕೆ ಕಾರಣವಾದ ಕಾರ್ಯವು ಇಷ್ಟವಾದುದ್ದಾಗಲೀ ಇಷ್ಟಸಾಧನವಾದದ್ದಾಗಲೀ ಆಗಲಿ. ಅದರಿಂದ ಪ್ರಕೃತ ಏನಾಯಿತೆಂದರೆ—

**ಮೂ ॥ [ಕಾರ್ಯಂ] ಸಾಧನಮಿಷ್ಟಸ್ಯ ಭಗವಾನಿಷ್ಟದೇವತಾ ।**
**ಮುಖ್ಯೇಷ್ಟಂ ವಾ ಸುಮನಸಾಂ ಪ್ರೇಯಸ್ತದಿತಿ ಚ ಶ್ರುತಿಃ ॥ ೪೫ ॥**

ಅ ॥ ಇಷ್ಟಸ್ಯ ಸಾಧನಂ=ಇಷ್ಟವಾದುದಕ್ಕೆ ಸಾಧನೀಭೂತನು, ಇಷ್ಟದೇವತಾ=ವಿಚಾರವಿಷಯನಾದುದರಿಂದ ಇಷ್ಟದೇವತೆಯಾದ, ಭಗವಾನ್=ಪರಬ್ರಹ್ಮನೇ. ಸುಮನಸಾಂ=ಬೇರೆ ಪುರುಷಾರ್ಥಗಳಲ್ಲಿಚ್ಛೆಯಿಂದ ಕದಡಿಹೋಗದಿದ್ದ ಮನಸ್ಸುಳ್ಳ ಉತ್ತಮಾಧಿಕಾರಿಗಳಿಗೆ, ಮುಖ್ಯೇಷ್ಟಂ ವಾ=ನಿರುಪಾಧಿಕ ಇಷ್ಟನೂ, ಭಗವಾನ್=ಪರಬ್ರಹ್ಮನೇ. ತತ್=ಆ ಪರಬ್ರಹ್ಮನು, ಪ್ರೇಯಃ=ಅತಿಶಯವಾಗಿ, (ನಿರುಪಾಧಿಕವಾಗಿ) ಪ್ರಿಯನು. ಇತಿ ಚ=ಹೀಗೆ, ಶ್ರುತಿಃ='ತದೇತತ್ಪ್ರೇಯಃ ಪುತ್ರಾತ್ಪ್ರೇಯೋ ವಿತ್ತಾತ್ಪ್ರೇಯೋಽನ್ಯಸ್ಮಾಚ್ಚ ಸರ್ವಸ್ಮಾದಂತರತರಂ ಯದಯಮಾತ್ಮಾ' ಎನ್ನುವ ಶ್ರುತಿಯು (ಬೃ. ಉಪ. ೩. ೫ ೨.) ಪರಬ್ರಹ್ಮನು ಮಕ್ಕಳಿಂದಲೂ ದ್ರವ್ಯಕ್ಕಿಂತಲೂ ಇತರ ಎಲ್ಲಾ ವಸ್ತುಗಳಿಗಿಂತಲೂ ಪರಮಪ್ರಿಯನೆಂದು ಹೇಳಿರುತ್ತದೆ ॥ ೪೫ ॥

ಇನ್ನೂ ವಿಸ್ಪಷ್ಟಗಳಾದ ಪುರಾಣಾದಿವಾಕ್ಯಗಳಿಂದ ಭಗವಂತನೇ ಮುಖ್ಯೇಷ್ಟನೆಂದು ತಿಳಿಯತಕ್ಕದ್ದೆನ್ನುತ್ತಾರೆ —

**ಮೂ ॥ ಪ್ರಾಣಬುದ್ಧಿಮನಃಖಾತ್ಮ ದೇಹಾಪತ್ಯಧನಾದಯಃ ।**
**ಯತ್ಸಂಪರ್ಕಾತ್ಪ್ರಿಯಾ ಆಸಂಸ್ತತಃ ಕೋನ್ವಪರಃ ಪ್ರಿಯಃ ॥ ೪೬ ॥**
**ಇತ್ಯಾದಿ ವಾಕ್ಯೈರಾಕಾಂಕ್ಷಾ ಸನ್ನಿಧಿಯೋಗ್ಯತಾ ಯತಃ ।**
**ತಸ್ಮಿನ್ನೇವ ಸಮಸ್ತಸ್ಯೇತೀಷ್ಟೇ ವ್ಯುತ್ಪತ್ತಿರಿಷ್ಯತೇ ॥ ೪೭ ॥**
**ಅತ್ಯಪೂಪಾಂಸ್ತವ ಭ್ರಾತೇತ್ಯಾದಾವಾವಾಪತೋಽಪಿ ಚ ।**
**ಉದ್ವಾಪಾದ್ವರ್ತಮಾನತ್ವಾದಾಕಾಂಕ್ಷಾದಿ ಬಲಾದಪಿ ॥ ೪೮ ॥**
**ಬಾಲೋ ವ್ಯುತ್ಪತ್ತಿಮಪ್ಯೇತಿ ॥ [ನಾನಯೇತ್ಯಾದಿ ವಾಕ್ಯತಃ] ॥**

ಅ ॥ ಪ್ರಾಣಬುದ್ಧಿಮನಃಖಾತ್ಮದೇಹಾಪತ್ಯಧನಾದಯಃ ಪ್ರಾಣ=ಶಾರೀರವಾಯುವು, ಬುದ್ಧಿ=ಜ್ಞಾನವು, ಮನಃ=ಅಂತಃಕರಣವು, ಖ = ಬೇರೆ ಇಂದ್ರಿಯಗಳು, ಆತ್ಮ=ಜೀವನು, ದೇಹ=ಶರೀರವು, ಅಪತ್ಯ=ಮಕ್ಕಳು, ಧನ=ದ್ರವ್ಯವೂ ಇವುಗಳೇ, ಆದಯಃ=ಮೊದಲಾದವುಗಳು, ಯತ್ಸಂಪರ್ಕಾತ್=ಯಾವ ಶ್ರೀ ಪರಮಾತ್ಮನ, ಸಂಪರ್ಕದಿಂದ, ಪ್ರಿಯಾಃ=ಪ್ರೀತಿವಿಷಯಗಳಾಗಿ, ಆಸನ್=ಆದವೋ, ತತಃ=ಅವನಕ್ಕಿಂತ, ಅಪರಃ=ಮತ್ತೊಬ್ಬ, ಪ್ರಿಯಃ=ಪ್ರಿಯನು, ಕೋ ನು=ಯಾವನಿದ್ದಾನೆ. ಇತ್ಯಾದಿವಾಕ್ಯೈಃ=ಇವುಮೊದಲಾದ ಭಾಗವತವಾಕ್ಯ

ಗಳಿಂದಲೂ, (ಶ್ರೀ ಹರಿಗೆ ಪರಮೇಷ್ಟತ್ವವು ಸಿದ್ಧವಾಯಿತು.) (ಪರಮೇಶ್ವರನು ಇಷ್ಟನೂ ಇಷ್ಟ ಸಾಧನನೂ ಆಗಿರುವುದರಿಂದ, ಸಮಸ್ತಸ್ಯ=ವೇದಾಧಿಕಾರಿಗಳಿಗೆಲ್ಲರಿಗೂ, ತಸ್ಮಿನ್ನೇವ=ಆ ಶ್ರೀ ಹರಿಯಲ್ಲಿಯೇ, ಆಕಾಂಕ್ಷಾ=ಜಿಜ್ಞಾಸೆಯು, ಸನ್ನಿಧಿಃ=(ಸರ್ವಗತತ್ವವಿದ್ದುದರಿಂದ) ಸಾಮೀಪ್ಯವು, ಯೋಗ್ಯತಾ=(ಬಾಧಕಪ್ರಮಾಣವಿಲ್ಲದಿರುವುದರಿಂದ) ಯೋಗ್ಯತೆಯು (ಅರ್ಥದಿಂದ ಬಾಧವಿಲ್ಲದಿರುವುದು) ಅಸ್ತಿ=ಇದೆಯೋ, ಇತಿ=ಆದಪ್ರಯುಕ್ತ, (ಶ್ರೀ ಹರಿಯೇ ಸರ್ವವೇದಾರ್ಥನು ಆಗಲಿಕ್ಕೆ ಯೋಗ್ಯನು.) (ಕಾರ್ಯದಲ್ಲಿ ಜಿಜ್ಞಾಸಾದಿಗಳು ಇಲ್ಲವೆಂದು ತೋರಿಸುವುದಕ್ಕಾಗಿ 'ಏವ' ಶಬ್ದವು.)

ಸ. ರ. ವಿ— (1) ವ್ಯುತ್ಪತ್ತಿವಶದಿಂದಲೇ ವಾಕ್ಯಾರ್ಥಜ್ಞಾನವು. ವ್ಯುತ್ಪತ್ತಿಯಾದರೂ ವೃದ್ಧವ್ಯವಹಾರದಿಂದ ಕಾರ್ಯದಲ್ಲಿಯೇ ಕೂಡುತ್ತದೆ. ಗೋವನ್ನು ತಾ, ಗೋವನ್ನು ಕಟ್ಟು ಇತ್ಯಾದಿಗಳಲ್ಲಿ ಬಾಲಕನಿಗೆ ಕಾರ್ಯದಲ್ಲಿಯೇ ವ್ಯುತ್ಪತ್ತಿಯು ದೃಷ್ಟವಾಗಿರುವುದರಿಂದ ವಾಕ್ಯವು ಸಿದ್ಧಾರ್ಥವನ್ನು ಬೋಧಿಸುತ್ತದೆ ಎನ್ನುವುದು ಹೇಗೆ ಕೂಡುತ್ತದೆ? ಎಂದರೆ) ಇಷ್ಟೇ=(ಕೇವಲ ಸಿದ್ಧಮಾತ್ರದಲ್ಲಿ ವ್ಯುತ್ಪತ್ತಿಯಿಲ್ಲದಿದ್ದರೂ) ಸಿದ್ಧವಿಶೇಷದಲ್ಲಿ, ವ್ಯುತ್ಪತ್ತಿಃ=ವ್ಯುತ್ಪತ್ತಿಯು, ಇಷ್ಯತ ಏವ=(ಪ್ರಾಮಾಣಿಕರಿಂದ) ಅಂಗೀಕರಿಸಲ್ಪಡುತ್ತದೆಯೇ ಸರಿ. ಅಥವಾ ಇಷ್ಟದಲ್ಲಿಯೇ ವ್ಯುತ್ಪತ್ತಿಯನ್ನು ಒಡಂಬಡಬೇಕು. ಅದು ಹೇಗೆಂದರೆ- ತವ=ನಿನ್ನ, ಭ್ರಾತಾ=ಅಣ್ಣನು, ಅಪೂಪಾನ್=ಅಪ್ಪಗಳನ್ನು, ಅತ್ತಿ=ತಿನ್ನುತ್ತಾನೆ. ಇತ್ಯಾದೌ=ಇದುಮೊದಲಾದ ವಾಕ್ಯವು ಪ್ರಯುಕ್ತವಾಗುತ್ತಿರಲು, ಆವಾಪತೋಽಪಿ=ಶಬ್ದಪ್ರಕ್ಷೇಪದಿಂದಲೂ, ಉದ್ವಾಪಾಚ್ಚ=ಶಬ್ದಪರಿತ್ಯಾಗದಿಂದಲೂ, ವರ್ತಮಾನತ್ವಾತ್=ಪದಾರ್ಥಗಳು ಆವಾಗ ಇರೋಣದರಿಂದಲೂ, ಆಕಾಂಕ್ಷಾದಿ ಬಲಾದಪಿ=ಆಕಾಂಕ್ಷಾ ಯೋಗ್ಯತಾ ಸನ್ನಿಧಿಗಳ ಸಾಮರ್ಥ್ಯದಿಂದಲೂ, ಅಂಗುಲ್ಯಾದಿಗಳ ನಿರ್ದೇಶದಿಂದಲೂ, ಬಾಲೋಽಪಿ=ಬಾಲಕನೂ ಕೂಡ, ವ್ಯುತ್ಪತ್ತಿಂ=ವ್ಯುತ್ಪತ್ತಿಯನ್ನು, ಏತಿ=ಹೊಂದುತ್ತಾನೆ.

ತಾ || ನ್ಯಾಯಸುಧಾ— (1) ಯಾವುದು ಯಾರಿಂದ ಜಿಜ್ಞಾಸಿತವಾಗುತ್ತದೋ, ಯಾವುದು ಸನ್ನಿಹಿತವಾಗಿಯದೋ, ಯಾವುದು ಪ್ರತೀತವಾದ ಅನ್ವಯಕ್ಕೆ ಯೋಗ್ಯವೋ ಅದು ಅವನನ್ನು ಕುರಿತು ಶಬ್ದದಿಂದ ಪ್ರತಿಪಾದಿಸತಕ್ಕದು ಜಿಜ್ಞಾಸಿತನಾಗದಿರುವುದರಿಂದಲೇ ಪಾನೇಚ್ಛೆಯಿಲ್ಲದಿರುವವನಿಗೆ ಜಲಾಶಯವು (ಕೆರೆಮೊದಲಾದುದು) ಉಪದೇಶಿಸಲ್ಪಡುವುದಿಲ್ಲ. ಜಿಜ್ಞಾಸಾ ಇದ್ದರೂ ತೃಷಿತನಾದ ದಾಕ್ಷಿಣಾತ್ಯನಿಗೆ ಸನ್ನಿಹಿತವಾಗದಿರುವುದರಿಂದ ಭಾಗೀರಥಿಯಲ್ಲಿ ತಣ್ಣಗಾದ ನೀರು ಇದೆ ಎಂದು ಉಪದೇಶಿಸಲ್ಪಡುವುದಿಲ್ಲ. ಜಿಜ್ಞಾಸಾ ಸನ್ನಿಧಿಗಳು ಇದ್ದರೂ ಪಾನಕ್ಕೆ ಅಯೋಗ್ಯವಾಗಿರುವುದರಿಂದ ಆಕಾಶಪಾನವು ವಿಧಿಸಲ್ಪಡುವುದಿಲ್ಲ. ಅಂತೂ ಪರಮೇಶ್ವರನು ಇಷ್ಟನೂ, ಇಷ್ಟಸಾಧನನೂ ಆಗಿರುವುದರಿಂದ ವೇದಾಧಿಕಾರಿಗಳೆಲ್ಲರಿಗೂ ಆ ಹರಿಯಲ್ಲಿ ಆಕಾಂಕ್ಷೆಯು ಇದೆ. ಸರ್ವಗತನಾಗಿರುವುದರಿಂದಲೇ ಸನ್ನಿಧಿಯು ಇದೆ. ಬಾಧಕ ಪ್ರಮಾಣವಿಲ್ಲದಿರುವುದರಿಂದಲೇ ಯೋಗ್ಯತೆಯೂ ಇದೆ. ಆದಕಾರಣ ಶ್ರೀ ಹರಿಯೇ ಸರ್ವ ವೇದಾರ್ಥನು ಆಗಲರ್ಹನು. (2) ಆದಾಗ್ಯೂ ಈಶ್ವರನಲ್ಲಿ ವೇದಕ್ಕೆ ಪ್ರಾಮಾಣ್ಯವು ಕೂಡುವುದಿಲ್ಲ. ಕೇವಲ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯಿಲ್ಲವು. ಲೌಕಿಕ ಪ್ರಯೋಗದಲ್ಲಿ ಕಾರ್ಯದಲ್ಲಿಯೇ ವ್ಯುತ್ಪತ್ತಿಯು ದೃಷ್ಟವಾಗಿದೆ. "ಲೋಕಾವಗತಸಾಮರ್ಥ್ಯಃ ಶಬ್ದೋ ವೇದೇಽಪಿ ಬೋಧಕಃ" ಲೋಕದಲ್ಲಿ ತಿಳಿಯಲ್ಪಟ್ಟ ಸಾಮರ್ಥ್ಯವುಳ್ಳ ಶಬ್ದವೇ ವೇದದಲ್ಲಿಯೂ ಬೋಧಕವಾಗುತ್ತದೆ. ಅಂದರೆ, 'ಯ ಏವ ಲೌಕಿಕಾಃ ಪದಪದಾರ್ಥಾಃ ತ ಏವ ವೈದಿಕಾಃ' ಯಾವುವು ಲೋಕದಲ್ಲಿರುವ ಪದಪದಾರ್ಥಗಳೋ ಅವುಗಳೇ ವೇದದಲ್ಲಿ ಇರತಕ್ಕವುಗಳು. ಹೇಗೆಂದರೆ—

ವರ್ಣಗಳು ನಿತ್ಯಗಳೇ. ಹೇಳುವ ಪುರುಷರು ಬೇರೆ ಬೇರೆಯಾದಾಗ್ಯೂ ಒಬ್ಬೊಬ್ಬರೇ ಅನೇಕಾವರ್ತಿ ಉಚ್ಚರಿಸಿದರೂ 'ತ ಏವಾಮೀ ವರ್ಣಾಃ' ಈ ಕಕಾರ ಮೊದಲಾದ ವರ್ಣಗಳು ಹಿಂದೆ ಉಚ್ಚರಿಸಿದ ಕಕಾರಾದಿ ವರ್ಣಗಳೇ ಎನ್ನುವ ಪ್ರತ್ಯಭಿಜ್ಞೆಯಿಂದ ಹೇಗೆ ವರ್ಣಗಳಿಗೆ ಐಕ್ಯವೋ, ಹಾಗೆಯೇ ಲೋಕದಲ್ಲಿ ಗೌಃ ಅಗ್ನಿಃ ಮೊದಲಾದ ಯಾವ ಪದಗಳೋ ಅವುಗಳೇ ವೇದದಲ್ಲಿ ಅಧ್ಯಯನ ಮಾಡಲ್ಪಡತಕ್ಕವುಗಳು ಎನ್ನುವ ಅಬಾಧಿತವಾದ ಪ್ರತ್ಯಭಿಜ್ಞೆಯಿಂದ ಲೌಕಿಕ ಪದಗಳಿಗೂ ವೈದಿಕ ಪದಗಳಿಗೂ ಐಕ್ಯವನ್ನು ಅಂಗೀಕರಿಸತಕ್ಕದು (3) ಕಾರ್ಯಾನ್ವಿತದಲ್ಲಿ ವ್ಯುತ್ಪತ್ತಿಯೆಂದಂಗೀಕರಿಸಿದರೆ ಕಾರ್ಯಕ್ಕೇನೇ ಪ್ರಾಧಾನ್ಯವು ಪ್ರಾಪ್ತವಾಯಿತು ಈಶ್ವರನಿಗೆ ಅಪ್ರಾಧಾನ್ಯವು ಪ್ರಾಪ್ತವಾಗಬೇಕಾಗುವುದರಿಂದ 'ಸ ಏವ ಸರ್ವವೇದಾರ್ಥಃ' ಎನ್ನುವಲ್ಲಿದ್ದ ಅವಧಾರಣವು ಕೂಡಲಾರದು. (4) ಯದ್ಯಪಿ ಇಷ್ಟತ್ವವೂ, ಇಷ್ಟಸಾಧನತ್ವವೂ, ಕಾರ್ಯತ್ವವು. ಅದಾದರೂ ಈಶ್ವರನಿಗೆ ಇದೆ ಎಂದು ಉಪಪಾದಿಸಿರುವೆವು. ಆದಾಗ್ಯೂ ಇಷ್ಟದಲ್ಲಿಯೇ ವ್ಯುತ್ಪತ್ತಿಯು ಕೂಡಲಾರದು. ವ್ಯುತ್ಪತ್ತಿಯು ಕೇವಲ ವೃದ್ಧಚೇಷ್ಟಾರೂಪವಾದ ಲಿಂಗದಿಂದಲೇ ಆಗುವುದು. ವೃದ್ಧಚೇಷ್ಟೆಯು ಕೃತಿಸಾಧ್ಯವಾದ ಅರ್ಥದಲ್ಲಿಯೇ ನಿಯತವಾಗಿದೆ. ಇಷ್ಟಸಾಧನವಾದಾಗ್ಯೂ ಕೃತಿಸಾಧ್ಯವಲ್ಲದಿರುವ ಚಂದ್ರಮಂಡಲಾಹರಣಾದಿಗಳಲ್ಲಿ ಪ್ರವೃತ್ತಿಯಿಲ್ಲವಷ್ಟೆ. ಹಾಗೆಯೇ ಈಶ್ವರನಿಗೂ ಕೃತಿಸಾಧ್ಯತ್ವವಿಲ್ಲ. ಆದಕಾರಣ ಈಶ್ವರನಲ್ಲಿ ಪ್ರವೃತ್ತಿಯನ್ನು ನೋಡಿಕೊಂಡು ಹೇಗೆ ವ್ಯುತ್ಪತ್ತಿಯನ್ನು ಹೊಂದಿಯಾರು, ಎಂದು ಶಂಕಿಸಿದರೆ— ಕೇವಲ ಸಿದ್ಧಮಾತ್ರದಲ್ಲಿ ವ್ಯುತ್ಪತ್ತಿಯಾಗದಿದ್ದರೂ ಸಿದ್ಧವಿಶೇಷದಲ್ಲಿ ವ್ಯುತ್ಪತ್ತಿಯು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆಯೇ ಸರಿ. (5) ಅದು ಹೇಗೆಂದರೆ—ಅವ್ಯುತ್ಪನ್ನನನ್ನು ಘೋಟಿಕಾವಾದನ (ಚಟುಕ ಹಾಕುವುದು) ಮೊದಲಾದುವುಗಳಿಂದ ಅಭಿಮುಖೀಕರಿಸಿ ಅಪ್ಪವನ್ನು ತಿನ್ನುತ್ತಿರುವ ಅವನ ಅಣ್ಣನನ್ನು ಬೆರಳಿನಿಂದ ತೋರಿಸಿ ದೇವದತ್ತನೇ 'ತವ ಭ್ರಾತಾಽಯಂ ಅಪೂಪಾನ್ ಅತ್ತಿ' ಇವನು ನಿನ್ನ ಅಣ್ಣನು, ಅಪ್ಪಗಳನ್ನು ತಿನ್ನುತ್ತಾನೆ ಎಂದು ವಾಕ್ಯವನ್ನು ಪ್ರಯೋಗಿಸುವಾಗ ಅಪೂಪಮೊದಲಾದ ಪದಾರ್ಥಗಳು ಆವಾಗ ಇರುವುದರಿಂದ ಪ್ರತ್ಯಕ್ಷಗಳಾಗಿವೆ. ಇಷ್ಟವಾದುದರಿಂದ ಜಿಜ್ಞಾಸಾ ಕೂಡುತ್ತದೆ. ಪದಸಮುದಾಯಕ್ಕೆ ಅರ್ಥಸಮುದಾಯದಲ್ಲಿ ಸಾಮಾನ್ಯತಃ ಶಕ್ತಿಯನ್ನು ನಿಶ್ಚಯಿಸಿಕೊಂಡು ಪುನಃ 'ತವ ಭ್ರಾತಾ ಪಯಃ ಪಿಬತಿ' ಎನ್ನುವ ಪ್ರಯೋಗಾಂತರದಲ್ಲಿ 'ಅಪೂಪಾನ್ ಅತ್ತಿ' ಎನ್ನುವ ಶಬ್ದವನ್ನು ಬಿಟ್ಟು 'ಪಯಃ ಪಿಬತಿ' ಎನ್ನುವ ಶಬ್ದವನ್ನು ಪ್ರಯೋಗಿಸಿರುವುದರಿಂದ ಹೀಗೆ ಆವಾಪೋದ್ವಾಪಗಳಿಂದ 'ಅಪೂಪ' ಎಂಬುವ ಶಬ್ದವು ಅಪ್ಪವನ್ನೂ 'ಪಯಃ' ಎನ್ನುವ ಶಬ್ದವು ಹಾಲನ್ನೂ ಹೇಳುತ್ತದೆ, ಎಂದು ವಿಶೇಷವಾಗಿಯೂ ತಿಳಿಯುತ್ತಾನೆ. ಇದೇ ರೀತಿಯಿಂದ 'ಅಯಂ ತವ ಪಿತಾ' 'ಇಯಂ ತವ ಮಾತಾ' ಇತ್ಯಾದಿ ವಾಕ್ಯಪ್ರಯೋಗಾದಿಗಳಿಂದಲೂ ಬಾಲಕನಿಗೆ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯಾಗುವುದು. (6) ಮತ್ತು 'ದೇವದತ್ತ ಪುತ್ರಸ್ತೇ ಜಾತಃ' ದೇವದತ್ತನೇ ನಿನಗೆ ಮಗನು ಹುಟ್ಟಿದನು ಎನ್ನುವ ವಾಕ್ಯವನ್ನು ಕೇಳಿದಮೇಲೆ ಮುಗುಳುನಗೆಯಿಂದ ಕೂಡಿದ ಮುಖವುಳ್ಳ ದೇವದತ್ತನನ್ನು ನೋಡಿ, ಸಮೀಪದಲ್ಲಿದ್ದ ಬಾಲಕನು ಆ ಲಿಂಗದಿಂದ ದೇವದತ್ತನಿಗೆ ಸಂತೋಷವುಂಟಾಯಿತೆಂದು ಅನುಮೇಯಿಸಿ, ಆ ಸಂತೋಷಕ್ಕೆ ತನಗೆ ಹೇಗೆ ಪ್ರಿಯವಾದ ವಸ್ತುವಿನ ಜ್ಞಾನವು ಹೇತುವೋ, ಹಾಗೆಯೇ, ಪ್ರಿಯವಾದ ವಸ್ತುವಿನ ಜ್ಞಾನವೇ ಹೇತುವೆಂದು ತಿಳಿದು, ಆ ಪ್ರಿಯವಾದ ವಸ್ತುವಿನ ಜ್ಞಾನವು ಶಬ್ದಶ್ರವಣವಾದಾಗಲೇ ಆಗುವುದರಿಂದ ಶಬ್ದಗಳಿಗೆ ಸಾಮಾನ್ಯಾಕಾರವಾಗಿ ಅದರಲ್ಲಿ ಶಕ್ತಿಯನ್ನು ತಿಳಿದು, ಪ್ರಿಯವಾದ ವಸ್ತುವನ್ನು ತಾನು ಕಂಡ ಪುತ್ರೋತ್ಪತ್ತಿಯನ್ನು ಬಿಟ್ಟು, ಬೇರೆ ಕಲ್ಪಿಸಲಿಕ್ಕೆ ಬಾರದಿರುವುದರಿಂದ ಅದೇ ಕಾರಣವೆಂದು ತಿಳಿಯುತ್ತಾನೆ. ಮತ್ತು ಶಬ್ದಪ್ರಕ್ಷೇಪ ನಿಷ್ಕಾಸನಗಳಿಂದ ವಿಶೇಷಾಕಾರವಾಗಿಯೂ ತಿಳಿಯುತ್ತಾನೆ. (7) ಅತೀತ

ಭವಿಷ್ಯತ್ ವರ್ತಮಾನ ಕಾಲಗಳಲ್ಲಿರುವ ಅನೇಕ ಪ್ರಿಯವಸ್ತುಗಳು ಕೂಡುವುದರಿಂದ ಪುತ್ರೋತ್ಪತ್ತಿರೂಪ ವಿಶೇಷಾವಧಾರಣವು ಕೂಡುವುದಿಲ್ಲವೆಂದು ಯಾವುದು ಹೇಳಲ್ಪಟ್ಟದೋ, ಅದು ಅಯುಕ್ತವು. ಸನ್ನಿಹಿತವಾದ ತಾನು ಕಂಡ ಪುತ್ರೋತ್ಪತ್ತಿರೂಪ ಪ್ರಿಯವಸ್ತುವನ್ನು ಬಿಟ್ಟು ಬೇರೆ ಕಲ್ಪಿಸಲಿಕ್ಕೆ ಬರುವುದಿಲ್ಲವೆಂದು ಹೇಳಿಯಾಗಿದೆ. (8) ಯದ್ಯಪಿ ಹರ್ಷಕ್ಕೆ ಕಾರಣಗಳು ಹೆಚ್ಚು ಇದ್ದಪ್ರಯುಕ್ತ ಹೆಂಡತಿಯು ಸುಖದಿಂದ ಹಡದಳು ಇತ್ಯಾದಿಗಳಿಗೂ ಹೇತುತ್ವವು ಕೂಡುವುದರಿಂದ ಪುತ್ರೋತ್ಪತ್ತಿಯೇ ನಿಮಿತ್ತವೆಂದು ಕಲ್ಪಿಸಕೂಡದು. ಆದಾಗ್ಯೂ ಯಾವಾಗ 'ತವ ಪ್ರಿಯಾ ಸುಖೇನ ಪ್ರಸೂತಾ' ನಿನ್ನ ಹೆಂಡತಿಯು ಸುಖದಿಂದ ಹಡದಳು ಎನ್ನುವ ಪ್ರಯೋಗಾಂತರದಲ್ಲಿ ಪ್ರಿಯಾದಿಪದಗಳಿಗೆ ಪ್ರಕ್ಷೇಪವೋ, ಪುತ್ರಾದಿಪದಗಳಿಗೆ ಪರಿತ್ಯಾಗವೋ ಆವಾಗಲೇ ಪ್ರಿಯಾಸುಖಪ್ರಸವಾದಿಗಳಿಗೆ ಹೇತುತ್ವವನ್ನು ತಿಳಿಯುತ್ತಾನೆ. ಆದಕಾರಣ 'ಪುತ್ರಸ್ತೇ ಜಾತಃ' ನಿನಗೆ ಮಗನು ಹುಟ್ಟಿದನು ಎನ್ನುವ ವಾಕ್ಯವನ್ನು ಕೇಳಿದಮೇಲೆ ಉಂಟಾಗತಕ್ಕ ಹರ್ಷಕ್ಕೆ ಪುತ್ರೋತ್ಪತ್ತಿಯೇ ನಿಮಿತ್ತವು ಎಂದು ವಿಶೇಷಾವಧಾರಣವು ಯುಕ್ತವೇ. ಇಲ್ಲವಾದರೆ 'ಗಾಮಾನಯ' ಗೋವನ್ನು ತಾ ಎಂದು ಪ್ರಯೋಜಕವೃದ್ಧನಿಂದ ಹೇಳಲ್ಪಟ್ಟವನು ದಂಡಮೊದಲಾದುದನ್ನೂ ಕೂಡ ತರತಕ್ಕವನು ಕಾಣಲ್ಪಡುವುದರಿಂದ ನಿನಗೂ ಆನಯನಾದಿರೂಪ ಕಾರ್ಯದಲ್ಲಿಯೇ ಶಕ್ತಿಯೆಂದು ಅವಧಾರಣವು ಹೇಗೆ ಕೂಡುತ್ತದೆ? ಅಂತೂ ಸನ್ನಿಹಿತವಾದ ಗವಾನಯನವನ್ನು ಹೊರತು ಬೇರೆ ಕಲ್ಪಿಸಲಿಕ್ಕೆ ಕೂಡದಿರುವುದರಿಂದ ವಿಶೇಷಾವಧಾರಣವು ಯುಕ್ತವೆಂದು ಹೇಳಬೇಕು. ಅದು ನನಗೂ ಸಮ್ಮತ. (9) ಸಿದ್ಧಾರ್ಥಪರವಾದ ವಾಕ್ಯದಿಂದ ಎಷ್ಟು ವ್ಯುತ್ಪತ್ತಿಯೋ ಅವೆಲ್ಲವೂ ಪ್ರಥಮಭಾವಿಯಾದ ಕಾರ್ಯವ್ಯುತ್ಪತ್ತಿಯಾದಮೇಲೆ ಆಗತಕ್ಕದ್ದಾದುದರಿಂದ ಕಾರ್ಯವ್ಯುತ್ಪತ್ತಿಯೇ ಎಂದು ಯಾವುದು ಹೇಳಲ್ಪಟ್ಟದೋ ಅದನ್ನು ನಿರಾಕರಿಸುವುದಕ್ಕಾಗಿ, ಬಾಲೋಽಪಿ=ಬಾಲಕನೂಕೂಡ ಎಂದು ಉಕ್ತವಾಗಿದೆ. ಅಂದರೆ— ಸಿದ್ಧಾರ್ಥಪರವಾದ ವಾಕ್ಯದ್ದೆಶೆಯಿಂದ ವ್ಯುತ್ಪತ್ತಿಯೇ ಬಾಲಕನಿಗೆ ಪ್ರಾಥಮಿಕವು. (10) 'ಪ್ರಭಿನ್ನಕಮಲೋದರೇ ಮಧೂನಿ ಮಧುಕರಃ ಪಿಬತಿ' ಅರಳಿದ ಕಮಲದಲ್ಲಿ ಭ್ರಮರವು ಮಕರಂದವನ್ನು ಕುಡಿಯುತ್ತದೆ, ಇತ್ಯಾದಿ ವಾಕ್ಯದಲ್ಲಿ ಮಧುಕರಶಬ್ದ ಹೊರತು ಬೇರೆ ಪದಾರ್ಥಗಳಲ್ಲಿ ವ್ಯುತ್ಪತ್ತಿಯನ್ನು ಹೊಂದಿದವನೂ, ವಿಭಕ್ತ್ಯರ್ಥವನ್ನು ತಿಳಿದವನೂ, ಮಧುಕರ ಎನ್ನುವ ಪ್ರಾತಿಪದಿಕಾರ್ಥವನ್ನು ತಿಳಿಯದೆ ಇದ್ದವನೂ ಅಂದರೆ, ಬೇರೆ ಎಲ್ಲಾ ಪದಾರ್ಥಗಳನ್ನು ತಿಳಿದು ಮಧುಕರಶಬ್ದಾರ್ಥವನ್ನು ಮಾತ್ರ ತಿಳಿಯದೆ ಇದ್ದವನು ಯಾವುದನ್ನು ಮಕರಂದವನ್ನು ಕುಡಿಯುವುದನ್ನಾಗಿ ನೋಡುತ್ತಾನೋ ಅದನ್ನು ಮಧುಕರ ಎನ್ನುವ ಶಬ್ದದಿಂದ ವಾಚ್ಯವನ್ನಾಗಿ ತಿಳಿಯುತ್ತಾನೆ. (11) ಹಾಗೆಯೇ ಕೋಕಿಲ ಎನ್ನುವುದಕ್ಕೆ ಪಿಕ ಎನ್ನುವುದು ಅರ್ಥವು ಎನ್ನುವುದನ್ನು 'ಕೋಕಿಲಃ ಪಿಕಃ' ಎನ್ನುವ ಉಪದೇಶದಿಂದ ತಿಳಿಯುತ್ತಾನೆ. ಹಾಗೆಯೇ 'ಸಾಸ್ನಾದಿಮಾನ್ ಗೌಃ' ಸಾಸ್ನಾ ಶೃಂಗಗಳುಳ್ಳದ್ದು ಗೋವು ಎನ್ನುವ ವಾಕ್ಯದಿಂದ ಯಾವುದು ಯಾವುದು ಸಾಸ್ನಾ ಶೃಂಗಗಳುಳ್ಳದ್ದೋ ಅದು ಅದು ಗೋವು ಎನ್ನುವ ವ್ಯಾಪ್ತಿಯನ್ನು ನಿಶ್ಚಯಿಸಿಕೊಂಡು ಸಾಸ್ನಾ ಶೃಂಗಗಳುಳ್ಳ ಪಿಂಡವು ಗೋಶಬ್ದದಿಂದ ವಾಚ್ಯವಾಗುತ್ತದೆಂದು ಅನುಮೇಯಿಸುತ್ತಾನೆ. ಇದುಮೊದಲಾದುದು ಕಾರ್ಯವ್ಯುತ್ಪತ್ತಿಯಾದಮೇಲೆ ಆಗುವುದು. ಆದಾಗ್ಯೂ 'ಅತ್ರ್ಯಪೂಪಾಂಸ್ತವ ಭ್ರಾತಾ' ಇತ್ಯಾದಿಗಳಿಂದ ಹೇಳಲ್ಪಟ್ಟದ್ದು, ಬಾಲಕನಿಗೂ ಪ್ರಥಮದಲ್ಲಿ ಹಿಂದೆ ಹೇಳಿದ ಪ್ರಕಾರ (ಚುಟುಕೆಹಾಕುವುದು ಇತ್ಯಾದಿರೀತಿಯಾಗಿಯೂ) ಕೂಡುತ್ತದೆ. (12) ಮತ್ತು ಈ ವ್ಯುತ್ಪತ್ತಿಯು ಅನಂತರದಲ್ಲಿ ಆಗತಕ್ಕದ್ದಾದರೂ ಕಾರ್ಯವ್ಯುತ್ಪತ್ತ್ಯಧೀನವೆಂದು ಯಾವುದ

ರಿಂದ ಸಿದ್ಧವಾಗುತ್ತದೆ? ಕಮಲಾದಿ ಪದಗಳಿಗೆ ಹಿಂದೆಹೇಳಿದ ಪ್ರಕಾರ ಯೋಗ್ಯಾನ್ವಿತ ಸ್ವಾರ್ಥ ದಲ್ಲಿಯೇ ವ್ಯುತ್ಪತ್ತಿಯು ಕೂಡುತ್ತದೆ ॥ ೪೬ ॥ ೪೭ ॥ ೪೮ ॥

ಹೀಗೆ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಕೂಡುತ್ತದೆಂದು ಹೇಳಿ ಈಗ ಪರರು ವ್ಯುತ್ಪಾದಿಸಿದ ವ್ಯುತ್ಪತ್ತಿಪ್ರಕಾರವನ್ನು ನಿರಾಕರಿಸುತ್ತಾರೆ—

**ಮೂ ॥ [ಬಾಲೋ ವ್ಯುತ್ಪತ್ತಿಮಪ್ಯೇತಿ] ನಾನಯೇತ್ಯಾದಿ ವಾಕ್ಯತಃ ।**
**ಆನೀಯಮಾನದೃಷ್ಟ್ಯೈವ ವ್ಯುತ್ಪತ್ತೇಃ ಸಂಭವೇ ಸತಿ ॥**
**ಏಷ್ಯದಾನಯನಾಯಾಯಂ ಕುತ ಏವ ಪ್ರತೀಕ್ಷತೇ ॥ ೪೯ ॥**

ಅ ॥ ಆನಯೇತ್ಯಾದಿವಾಕ್ಯತಃ='ದೇವದತ್ತ ಗಾಮಾನಯ' ಇದುಮೊದಲಾದ ವಾಕ ಗಳಿಂದ, ಬಾಲಃ=ಬಾಲಕನು, ವ್ಯುತ್ಪತ್ತಿಂ = ವಾಚ್ಯವಾಚಕ ಭಾವಸಂಬಂಧವನ್ನು, ಏತಿ= ಹೊಂದುತ್ತಾನೆಂದು ಹೇಳಿದ್ದು, ನಾಪಿ=ಯುಕ್ತವೇ ಅಲ್ಲ. ಆನೀಯಮಾನದೃಷ್ಟ್ಯೈವ=ತರುವು ದನ್ನು ನೋಡಿಯೇ, ವ್ಯುತ್ಪತ್ತೇಃ ಸಂಭವೇ ಸತಿ=ವ್ಯುತ್ಪತ್ತಿಯು ಕೂಡುತ್ತಿರುವಾಗ, ಅಯಂ= ಈ ಬಾಲಕನು, ಏಷ್ಯದಾನಯನಾಯ=ಮೇಲೆ ತರುವುದಕ್ಕಾಗಿ, ಕುತ ಏವ=ಯಾವ ಕಾರಣ ದಿಂದಲೇ, ಪ್ರತೀಕ್ಷತೇ=ನಿರೀಕ್ಷಿಸುತ್ತಾನೆ.

ತಾ ॥ ನ್ಯಾಯಸುಧಾ— (1) ದೇವದತ್ತನೇ ದನವನ್ನು ತಾ, ಇದುಮೊದಲಾದ ಉತ್ತಮವೃದ್ಧನ ವಾಕ್ಯವನ್ನು ಕೇಳಿ ಪ್ರವೃತ್ತನಾದ ಮಧ್ಯಮವೃದ್ಧನನ್ನು ಕಂಡು ಬಾಲಕನು ಅವನ ಪ್ರವೃತ್ತಿಯಿಂದ ಅವನಿಗೆ ಪ್ರವರ್ತಕವಾದ ಜ್ಞಾನವನ್ನು ಅನುಮೇಯಿಸಿ, ಆ ಜ್ಞಾನಕ್ಕೆ ಕಾರ್ಯತಾವಿಷಯತ್ವವನ್ನು ನಿರ್ಧರಿಸಿ, ಆ ಮೇಲೆ ಆ ಜ್ಞಾನವು ಶಬ್ದಾನಂತರ ಭಾವಿಯಾದುದ ರಿಂದ ಶಬ್ದಜನ್ಯವೆಂದು ತಿಳಿದು, ಪುನಃ ಆವಾಪೋದ್ವಾಪಗಳಿಂದ ಲಿಙಾದಿಗಳು ಸಾಕ್ಷಾತ್ ಕಾರ್ಯವನ್ನು ಪ್ರತಿಪಾದಿಸುತ್ತವೆ. ಬೇರೆ ಶಬ್ದಗಳು ಅದರಿಂದ ಅನ್ವಯವುಳ್ಳ ಸ್ವಾರ್ಥವನ್ನು ಪ್ರತಿಪಾದಿಸುತ್ತವೆ ಎಂದು ತಿಳಿಯುತ್ತಾನೆಂದು ಯಾವುದುಕ್ತವಾಯಿತೋ, ಅದು ಕೂಡುವುದಿಲ್ಲ ಏಕೆಂದರೆ— ಕಲ್ಪಕವಾದುದಿಲ್ಲವು. ಹೇಗೆಂದರೆ, ಪ್ರೌಢಬುದ್ಧಿಯುಳ್ಳವರಿಗೂ ತಿಳಿಯಲಶಕ್ಯ ವಾದ ಈ ಪ್ರಕ್ರಿಯೆಯಿಂದ ಬಾಲನು ವ್ಯುತ್ಪನ್ನನಾಗುತ್ತಾನೆಂದು (೧) ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ಕೂಡದಿರುವುದರಿಂದ ಹೀಗೆ ಕಲ್ಪಿಸುವುದೋ? (೨) ಅಥವಾ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು. ಕೂಡಿದರೂ ಅದನ್ನು ಆದರಿಸದೆ ಶಬ್ದಶಕ್ತಿಯನ್ನು ತಿಳಿಯಲಿಚ್ಛಿಸುವ ಬಾಲಕನೇ ಈ ಗುರು ಭೂತವಾದ ಪ್ರಕ್ರಿಯೆಯನ್ನು ಆಶ್ರಯಿಸುತ್ತಾನೋ? ೧ನೇದ್ದೂ ಕೂಡಲಾರದು. ಸಿದ್ಧಾರ್ಥ ದಲ್ಲಿ ಪ್ರಥಮತಃ ವ್ಯುತ್ಪತ್ತಿಯು ಕೂಡುತ್ತದೆಂದು ಉಕ್ತವಾಗಿದೆ. ಎರಡನೇದ್ದನ್ನು 'ಆನೀಯ ಮಾನದೃಷ್ಟ್ಯೈವ' ಇತ್ಯಾದಿಗಳಿಂದ ದೂಷಿಸುತ್ತಾರೆ. ಅಂದರೆ, ತರುವುದನ್ನು ನೋಡಿಯೇ ವ್ಯುತ್ಪತ್ತಿಯಾಗುವಾಗ ಇನ್ನುಮುಂದೆ ತರುವ ಪರ್ಯಂತ ನಿರೀಕ್ಷಿಸಿಕೊಂಡಿರುವುದಿಲ್ಲವಷ್ಟೆ. (2) ಮತ್ತು ಪ್ರಯೋಜನವನ್ನು ಅಪೇಕ್ಷಿಸುವವನಿಗೆ, ಪ್ರಯೋಜನದಲ್ಲಿಯೇ ನಿರ್ಬಂಧವು. ಉಪಾಯವಿಶೇಷದಲ್ಲಿ ನಿರ್ಬಂಧವಿಲ್ಲ. ಅದರಲ್ಲಿ ಅನೇಕ ಉಪಾಯಗಳಿದ್ದರೆ ಗುರು (ಪ್ರಯಾಸ ಸಾಧ್ಯ) ವಾದುದನ್ನು ಬಿಟ್ಟು ಲಘುವನ್ನಾಶ್ರಯಿಸುತ್ತಾನೆ. ಲಘು (ಸುಲಭಸಾಧ್ಯವಾದುದು) ವಾದುದನ್ನು ಬಿಟ್ಟು ಗುರುವಾದುದನ್ನು ಅಶ್ರಯಿಸುವುದಿಲ್ಲವೆಂದು ತನ್ನಲ್ಲಿಯೇ ಅನುಭವಸಿದ್ಧ ವಾಗಿದೆ. ಹೀಗೆಯೇ ಶಬ್ದಶಕ್ತಿಯನ್ನು ತಿಳಿಯಲಿಚ್ಛಿಸತಕ್ಕ ಬಾಲಕನಲ್ಲಿಯೂ ಕಲ್ಪಿಸುವುದು ಯುಕ್ತವು. ಅದರಲ್ಲಿ 'ದೇವದತ್ತೋ ಗಾಮಾನಯತಿ' 'ತವ ಭ್ರಾತಾಽಪೂಪಾನತ್ತಿ' ಇತ್ಯಾದಿ

ಪದಗಳಿಗೆ ತರಲ್ಪಡತಕ್ಕ ಗೋವು ಮೊದಲಾದವುಗಳನ್ನ ನೋಡೋಣದರಿಂದಲೇ ಹಿಂದೆ ಹೇಳಿದ ಪ್ರಕಾರ ವ್ಯುತ್ಪತ್ತಿಯು ಅತಿಲಘುವಾದುದು. ಆನಯನಾದಿಗಳು ಪ್ರತ್ಯಕ್ಷವಾಗಿದ್ದುದರಿಂದ ಕಾಲಾಂತರದಲ್ಲಿ ಆಗತಕ್ಕ ಅರ್ಥವನ್ನು ನಿರೀಕ್ಷಿಸಬೇಕಾಗಿಲ್ಲ. ಅಷ್ಟರತನಕ ಶಬ್ದವನ್ನನುಸಂಧಾನ ಮಾಡತಕ್ಕ ಪ್ರಯಾಸವೂ ಇಲ್ಲ. 'ದೇವದತ್ತ ಗಾಮಾನಯ' ಇತ್ಯಾದಿ ಪದಗಳಿಗೆ ಮೇಲಿನ ತರುವಿಕೆ ಮೊದಲಾದವುಗಳಲ್ಲಿ ವ್ಯುತ್ಪತ್ತಿಯಾಗುತ್ತದೆನ್ನುವುದು ಅತಿಗುರುವು. ವಾಕ್ಯವನ್ನು ಕೇಳಿದಮೇಲೆ ಅಷ್ಟರವರೆಗೆ ಅದನ್ನನುಸಂಧಾನಮಾಡಿಕೊಳ್ಳುವುದೂ ಮೇಲಿನ ಕಾರ್ಯವನ್ನು ನಿರೀಕ್ಷಿಸಿಕೊಳ್ಳುವುದೂ ಬಹುಪ್ರಯಾಸ ಸಾಧ್ಯವು. ಅದರಲ್ಲಿ ಗೋವು ಮೊದಲಾದ ಶಬ್ದಗಳ ವ್ಯುತ್ಪತ್ತಿಗಾಗಿ ಅತಿಲಘುವಾದ ಉಪಾಯವನ್ನ ಆದರಮಾಡದೆ ಇನ್ನುಮುಂದೆ ಆಗುವ ಆನಯನವನ್ನು ನಿರೀಕ್ಷಿಸುವುದು ಇದುಮೊದಲಾದ ಅತಿಗುರುವಾದ ಉಪಾಯವನ್ನು ಶಬ್ದಶಕ್ತಿಯನ್ನು ತಿಳಿಯಲಿಚ್ಛಿಸುವವನು ಇಟ್ಟುಕೊಳ್ಳುತ್ತಾನೆಂದು ಕಲ್ಪಿಸುವುದು ನಿರ್ಮೂಲವೇಸರಿ ॥ ೪೯ ॥

ಹಾಗಾದರೆ ಹಿಂದೆ ಹೇಳಿದಪ್ರಕಾರ ಪ್ರಯಾಸಾಧಿಕ್ಯವಿರುವುದರಿಂದ ಭವಿಷ್ಯತ್ಕ್ರಿಯೆಯಲ್ಲಿಯೂ ಆ ಕ್ರಿಯಾನ್ವಿತಗಳಲ್ಲಿಯೂ ವ್ಯುತ್ಪತ್ತಿಯಿಲ್ಲವೆಂಬಾದರೆ, ಆ ಶಬ್ದವ್ಯವಹಾರವೂ ಕೂಡಲಾರದೆಂದರೆ —

ಮೂ ॥ ವ್ಯುತ್ಪನ್ನೋ ವರ್ತಮಾನೇಷು ಕ್ರಿಯಾಶಬ್ದೇ ಭವಿಷ್ಯತಿ ।
ಪುನರ್ದೃಷ್ಟ್ವೈವ ಶಬ್ದಶ್ರುತ್ಪಶ್ಚಾದ್ವ್ಯುತ್ಪತ್ತಿಮೇಷ್ಯತಿ ॥ ೫೦ ॥

ಅ ॥ ವರ್ತಮಾನೇಷು ಕ್ರಿಯಾಶಬ್ದೇ=ವರ್ತಮಾನಾರ್ಥಕವಾದ 'ಆನಯತಿ=ತರುತ್ತಾನೆ,' ಇವುಮೊದಲಾದ ಕ್ರಿಯಾಶಬ್ದಗಳಲ್ಲಿ, ವ್ಯುತ್ಪನ್ನಃ = ಅರ್ಥಸಂಬಂಧಜ್ಞಾನವುಳ್ಳವನು, ಭವಿಷ್ಯತಿ=ಭವಿಷ್ಯದರ್ಥಕವಾದ ಕ್ರಿಯಾಶಬ್ದದಲ್ಲಿ, ಶಬ್ದಶ್ರುತ್=ದೇವದತ್ತನೇ ಗೋವನ್ನು ತಾ ಇದುಮೊದಲಾದ ಶಬ್ದಗಳನ್ನು ಕೇಳಿದವನು, ಪುನಃ=ಮತ್ತು, ದೃಷ್ಟ್ವೈವ=ಗವಾನಯನವನ್ನು ನೋಡೋಣದರಿಂದಲೇ, ಪಶ್ಚಾತ್=ಆ ಮೇಲೆ, ವ್ಯುತ್ಪತ್ತಿಂ=ವ್ಯುತ್ಪತ್ತಿಯನ್ನು, ಏಷ್ಯತಿ= ಹೊಂದುವನು.

ತಾ ॥ ನ್ಯಾಯಸುಧಾ— (1) ವರ್ತಮಾನಕ್ರಿಯೆಯಲ್ಲಿಯೂ ಆ ಕ್ರಿಯಾನ್ವಿತಗಳಾದ ಅರ್ಥಗಳಲ್ಲಿಯೂ 'ಗಾಮಾನಯತಿ' ಗೋವನ್ನು ತರುತ್ತಾನೆ, ಇತ್ಯಾದಿ ಪದಗಳಿಗೆ ಶಕ್ತಿಯನ್ನು ಪ್ರಥಮತಃ ತಿಳಿಯುತ್ತಾನೆ. ಭವಿಷ್ಯತ್ಕ್ರಿಯೆಯಲ್ಲಿ ಆದರೂ ಆ ಮೇಲೆ 'ಆನಯ' ಇತ್ಯಾದಿ ಪದಗಳಿಗೆ ಶಕ್ತಿಯನ್ನು ತಿಳಿಯುತ್ತಾನೆ, ನಿನ್ನ ರೀತಿಯಿಂದಲೇ ಎಂದೇ ಹೇಳುತ್ತೇವೆ. ಸರ್ವಥಾ ಅಲ್ಲಿ ವ್ಯುತ್ಪತ್ತಿಯೇ ಇಲ್ಲವೆಂದು ಹೇಳುವುದಿಲ್ಲ. ಆದಕಾರಣ ಯಾವ ಅನುಪಪತ್ತಿಯೂ ಇರುವುದಿಲ್ಲ ॥ ೫೦ ॥

ಹೀಗೆ ಲಿಙಾದಿಗಳಿಗೆ ಸ್ವಾರ್ಥದಲ್ಲಿ ವ್ಯುತ್ಪತ್ತಿಯು ವರ್ತಮಾನಾರ್ಥಕ ಕ್ರಿಯಾಪದಗಳಲ್ಲಿ ಶಕ್ತಿಗ್ರಹಣವಾದಮೇಲೆ ಎಂದುಕ್ತವಾಯಿತು. ಪರರು ಅಂಗೀಕರಿಸಿದ ಕಾರ್ಯದಲ್ಲಿ ಯಾವಾಗಲೂ ಇಲ್ಲವೆನ್ನುತ್ತಾರೆ —

ಮೂ ॥ ವರ್ತಮಾನಮತೀತಂ ಚ ಭವಿಷ್ಯದಿತಿ ಚ ಕ್ರಮಾತ್ ।
ಆಕಾಂಕ್ಷಾದಿಯುತಂ ಯಸ್ಮಾದ್ವಿಧೇರ್ವ್ಯುತ್ಪಾದನಂ ಕುತಃ ॥ ೫೧ ॥

ಅ ॥ ಯಸ್ಮಾತ್=ಯಾವ ಕಾರಣದಿಂದ, ಕ್ರಮಾತ್=ವರ್ತಮಾನಾದಿಗಳ ಕ್ರಮ ದಿಂದ, ವರ್ತಮಾನಂ ಅತೀತಂ ಚ ಭವಿಷ್ಯದಿತಿ ಚ=ಕಾಲತ್ರಯಸಂಬಂಧಿಯೇ ಆದ ವಸ್ತುವು, ಆಕಾಂಕ್ಷಾದಿಯುತಂ=ಆಕಾಂಕ್ಷಾ ಸನ್ನಿಧಿ ಯೋಗ್ಯತೆ ಗಳಿಂದೊಡಗೂಡಿದ್ದು ಆಗುತ್ತದೋ, (ಅಂದರೆ ಆಕಾಂಕ್ಷಾದಿಗಳಿಂದ ಯುಕ್ತವಾದುದರಲ್ಲಿಯೇ ವ್ಯುತ್ಪತ್ತಿಯು. ಅಜಿಜ್ಞಾಸಿತವಾದ ಅರ್ಥದಲ್ಲಿ ಸಾವಿರಾರು ಪ್ರವೃತ್ತಿಗಳನ್ನು ಕಂಡರೂ ವ್ಯುತ್ಪನ್ನರಾಗುವುದಿಲ್ಲ. ಕಾರ್ಯವಾದರೂ ಕಾಲತ್ರಯಕ್ಕೆ ಸಂಬಂಧಪಟ್ಟದ್ದಲ್ಲವೆಂದು ಪರರಿಂದ ಅಂಗೀಕರಿಸಲ್ಪಡುತ್ತದೆ.) [ಅಂದರೆ, ಅಭೂತ್=ಆಯಿತು, ಭವತಿ=ಆಗುತ್ತದೆ, ಭವಿಷ್ಯತಿ = ಆಗುವುದು, ಇತ್ಯಾದಿಗಳಂತೆಯೇ ಕಾರ್ಯಪರಗಳಾದ ಲಿಙಾದಿಗಳು ವರ್ತಮಾನ ಮೊದಲಾದ ಕಾಲವಿಶೇಷವನ್ನು ಬೋಧಿಸುತ್ತವೆ ಎಂದು ಅಂಗೀಕರಿಸುವುದಿಲ್ಲ.] ತಸ್ಮಾತ್=ಆದಕಾರಣ, ಅಂದರೆ, ಆಕಾಂಕ್ಷಾದಿಗಳು ಇಲ್ಲದಿರು ವುದರಿಂದ, ವಿಧೇಃ=ಕಾರ್ಯಕ್ಕೆ, ವ್ಯುತ್ಪಾದನಂ=ವ್ಯುತ್ಪತ್ತಿಯು, ಅಂದರೆ ಲಿಙಾದಿಗಳಿಂದ ವಾಚ್ಯವಾಗಿದೆ ಎನ್ನುವ ಜ್ಞಾನವು, ಕುತಃ=ಯಾವುದರಿಂದ ಆಗುತ್ತದೆ. ಅಥವಾ ವಿಧೇಃ= ಲಿಙಾದಿ ಶಬ್ದಗಳಿಗೆ, ವ್ಯುತ್ಪಾದನಂ=ಕಾರ್ಯದಲ್ಲಿ ವ್ಯುತ್ಪತ್ತಿಯು, ಕುತಃ=ಯಾವುದರಿಂದ.

ತಾ ॥ ನ್ಯಾಯಸುಧಾ — (1) 'ಕಾಲತ್ರಯಾನವಚ್ಛಿನ್ನೋ ವಿಧಿಃ' ಎನ್ನುವ ವಾಕ್ಯಕ್ಕೆ ಲಿಙಾದಿ ಪ್ರತ್ಯಯಗಳ ಅರ್ಥಭೂತವಾದ ಯಾವುದು ಕಾರ್ಯನಾಮಕವಿಧಿಯೋ ಅದು ಕಾಲತ್ರಯಗಳಿಂದ ಅಸಂಬದ್ಧವಾಗಿದೆ ಎಂದರ್ಥವನ್ನು ಇಟ್ಟುಕೊಂಡರೆ ಶಶವಿಷಾಣಾದಿ ಗಳಂತೆಯೇ ಅದು ಇರುತ್ತವೆ ಎನ್ನುವುದೇ ಅಸಂಭಾವಿತವಾಗಿದೆ. ಆ ವಿಷಯದಲ್ಲಿ ಲಿಙಾದಿ ಗಳಿಗೆ ವ್ಯುತ್ಪತ್ತಿಯು ಸುತರಾಂ ಕೂಡಲಾರದು. (2) ಲಿಙಾದಿ ಪ್ರತ್ಯಯಗಳೇ ವಿಧಿಯು. ಅದು 'ಪಚತಿ' ಇತ್ಯಾದಿಗಳಂತೆಯೇ ವರ್ತಮಾನ ಮೊದಲಾದ ಕಾಲಗಳ ಮಧ್ಯದಲ್ಲಿ ಅನ್ಯತಮ ಕಾಲದಿಂದ ಯುಕ್ತವಾದ ವಸ್ತುವನ್ನು ಹೇಳುವುದಿಲ್ಲ, ಎಂದರ್ಥವನ್ನು ಇಟ್ಟುಕೊಂಡರೆ 'ಪಚತಿ' ಇತ್ಯಾದಿಗಳಂತೆಯೇ 'ಘಟಃ' ಎನ್ನುವಲ್ಲಿ ಕಾಲವನ್ನು ತೋರಿಸಿಕೊಡತಕ್ಕ ಪದವಿಲ್ಲದಿರುವುದ ರಿಂದ ಘಟಶಬ್ದವು ವರ್ತಮಾನ ಕಾಲಾದಿಗಳಿಂದ ಯುಕ್ತವಾದ ವಸ್ತುವನ್ನು ಹೇಳುವುದಿಲ್ಲ. ಹಾಗೆಯೇ ಲಿಙಾದಿಶಬ್ದಗಳು. ಹೀಗೆ ಲಿಙಾದಿ ಶಬ್ದಗಳಿಗೆ ಘಟಾದಿಶಬ್ದಗಳ ಸಾಮ್ಯವು ಪ್ರಾಪ್ತ ವಾಗುವುದರಿಂದ ಘಟಾದಿ ಶಬ್ದಗಳಂತೆಯೇ ಪ್ರವರ್ತಕತ್ವವು ಇಲ್ಲದೆಹೋಗುವುದು. ಆದ ಕಾರಣ 'ಕಾಲತ್ರಯಾನವಚ್ಛಿನ್ನೋ ವಿಧಿಃ' ಎಂದು ವಿಶೇಷವಾಗಿ ಹೇಳಿದ್ದು ವ್ಯರ್ಥವು. (3) ದೇವದತ್ತನೇ ನಿನ್ನಿಂದ ಘಟವು ಮಾಡಲ್ಪಟ್ಟದೋ, ಈಗ ಮಾಡಲ್ಪಡುತ್ತದೋ ಎಂದು ಪ್ರಶ್ನಿಸಿ ಕೊಂಡವನು ನನ್ನಿಂದ ಮಾಡಲ್ಪಡಲಿಲ್ಲ. ಮಾಡಲ್ಪಡುವುದೂ ಇಲ್ಲ. ಮತ್ತೆ ಇನ್ನುಮುಂದೆ ಮಾಡತಕ್ಕದು, ಎನ್ನುವ ಶಬ್ದದಿಂದ ಭವಿಷ್ಯತ್ಕಾಲದಲ್ಲಿ ಆಗತಕ್ಕದು ಎನ್ನುವ ಪ್ರತೀತಿಯು ಬರುತ್ತದೆಂದು ಹೇಳುವುದರಿಂದ ಇದು ಅನುಭವವಿರುದ್ಧವೂ ಆಗಿರುತ್ತದೆ ॥ ೫೧ ॥

ವರ್ತಮಾನಾರ್ಥಕವಾದ ಕ್ರಿಯಾದಿಶಬ್ದಗಳ ವ್ಯುತ್ಪತ್ತಿಯಾದ ಮೇಲೆ ಭವಿಷ್ಯದರ್ಥಕ ವಾದ ಕ್ರಿಯಾಶಬ್ದದ ವ್ಯುತ್ಪತ್ತಿಯೆಂದು ಹೇಳಿದ್ದು ಅಯುಕ್ತವು. ವ್ಯುತ್ಪತ್ತಿಯು ಕೂಡುವು ದಾದರೆ ಪ್ರಥಮದಲ್ಲಿಯೇ ಕೂಡುವಾಗ ಮೇಲೆ ಆಗತಕ್ಕದ್ದೆಂದು ಕಲ್ಪಿಸುವ ವಿಷಯದಲ್ಲಿ ನಿಯಾಮಕವಿಲ್ಲ. ಎಂದರೆ —

**ಮೂ ॥ ದೃಷ್ಟ್ವಾ ಜ್ಞಾತಪದಾರ್ಥಸ್ಯ ಸ್ಯಾದಾಕಾಂಕ್ಷಾ ಭವಿಷ್ಯತಿ ।**
**ವ್ಯುತ್ಪತ್ತಿಃ ಪ್ರಥಮಾ ತಸ್ಮಾದ್ವರ್ತಮಾನೇ ಗತೇ ತತಃ ॥ ೫೨ ॥**

ಅ ॥ (ಪ್ರಥಮದಲ್ಲಿಯೇ ಭವಿಷ್ಯದರ್ಥದಲ್ಲಿ ಜಿಜ್ಞಾಸಾಪ್ರತೀಕ್ಷೆಗಳು ಕೂಡದಿರುವುದರಿಂದ ವ್ಯುತ್ಪತ್ತಿಯಿಲ್ಲವೆಂದು ಹೇಳಲ್ಪಟ್ಟದೆ.) ವರ್ತಮಾನೇ ದೃಷ್ಟ್ಯಾ=ವರ್ತಮಾನಾರ್ಥಕ್ಕಾದರೂ ಪ್ರತ್ಯಕ್ಷವು ಕೂಡುವುದರಿಂದ, ಆಕಾಂಕ್ಷಾ=ಜಿಜ್ಞಾಸೆಯು, (ಕೂಡುತ್ತದೆ, ಮತ್ತೆ ಆಗತಕ್ಕದ್ದನ್ನು ನಿರೀಕ್ಷಣೆಮಾಡತಕ್ಕ ಆಯಾಸವು ಇಲ್ಲದಿರುವುದರಿಂದ), ವರ್ತಮಾನೇ=ವರ್ತಮಾನಾರ್ಥಕ 'ಆನಯತಿ' ಇತ್ಯಾದಿ ಕ್ರಿಯಾಶಬ್ದಗಳಲ್ಲಿ, ಪ್ರಥಮಾ ವ್ಯುತ್ಪತ್ತಿಃ=ಪ್ರಥಮದಲ್ಲಿ ವ್ಯುತ್ಪತ್ತಿಯು, ತತಃ=ಆಮೇಲೆ, ಜ್ಞಾತಪದಾರ್ಥಸ್ಯ=ಯಾರಿಂದ ಪದದ ಅರ್ಥವು ತಿಳಿಯಲ್ಪಟ್ಟದೋ, ಅಂತಹನಿಗೆ ಅಂದರೆ ವರ್ತಮಾನಕ್ರಿಯೆಯಲ್ಲಿಯೂ, ಅದರಿಂದ ಅನ್ವಿತಗಳಾದ ಅರ್ಥಗಳಲ್ಲಿಯೂ ವ್ಯುತ್ಪನ್ನನಿಗೆ. ತತಃ=ಆಮೇಲೆ, ಅಗತೇ = ಭವಿಷ್ಯದರ್ಥದಲ್ಲಿಯೂ, ಗತೇ = ಅತೀತಾರ್ಥದಲ್ಲಿಯೂ, ಆಕಾಂಕ್ಷಾ=ಆಕಾಂಕ್ಷೆಯು, ಸ್ಯಾತ್=ಆಗುವುದು.

ತಾ ॥ ನ್ಯಾಯಸುಧಾ— ದೇವದತ್ತನು ಗೋವನ್ನು ತರುತ್ತಾನೆ ಇತ್ಯಾದಿ ಪದಗಳಿಗೆ ವರ್ತಮಾನಕ್ರಿಯೆಯಲ್ಲಿಯೂ, ಅದರಿಂದ ಅನ್ವಿತಗಳಾದ ಅರ್ಥಗಳಲ್ಲಿಯೂ ವ್ಯುತ್ಪತ್ತಿಯು ಹುಟ್ಟಿದಮೇಲೆ ದೇವದತ್ತನೇ ಗೋವನ್ನು ತಾ, ಎಂದು ಹೇಳುವಾಗ ಗವಾದಿ ಪದಗಳದ್ದೂ, 'ಆನಯತಿ' ಎನ್ನುವ ಕ್ರಿಯಾಪದದ್ದೂ ಅರ್ಥವು ತಿಳಿದಿರುವುದರಿಂದ ಅವಶಿಷ್ಟವಾದ ಪ್ರತ್ಯಯಾರ್ಥದಲ್ಲಿ ಮಾತ್ರ ಜಿಜ್ಞಾಸೆಯೂ ಪ್ರತೀಕ್ಷೆಯೂ ಬರುವುದು. ಆದಪ್ರಯುಕ್ತ ವರ್ತಮಾನಾರ್ಥದಲ್ಲಿರತಕ್ಕ ವ್ಯುತ್ಪತ್ತಿಯು ಆಕಾಂಕ್ಷಾದಿಗಳನ್ನು ಹುಟ್ಟಿಸಿ ಕಾರಣವಾಗಿರುವುದರಿಂದ ಭವಿಷ್ಯತ್ ಮೊದಲಾದ ಅರ್ಥಗಳಲ್ಲಿ ವ್ಯುತ್ಪತ್ತಿಯು ಕಾರ್ಯವಾಗಿರುವುದರಿಂದ ಪೌರ್ವಾಪರ್ಯವು ಕೂಡುತ್ತದೆ ॥ ೫೨ ॥

ಪ್ರವೃತ್ತಿ-ನಿವೃತ್ತಿಗಳಿಗೆ ಉಪಯುಕ್ತವಾದ ಅರ್ಥವನ್ನು ಶಾಸನೆಮಾಡುವುದು ಶಾಸ್ತ್ರವೆನ್ನಿಸುತ್ತದೆ. ಸಿದ್ಧಾರ್ಥಜ್ಞಾನವು ಪ್ರವೃತ್ತಿನಿವೃತ್ತಿಗಳಿಗೆ ಉಪಯುಕ್ತವಲ್ಲ. ಆದಪ್ರಯುಕ್ತ ಕಾರ್ಯಜ್ಞಾನವೇ ಪ್ರವೃತ್ತಿ-ನಿವೃತ್ತಿಗಳಿಗೆ ಉಪಯುಕ್ತವಾಗಿರುವುದರಿಂದ ವೇದಕ್ಕೆ ಕಾರ್ಯಪರತ್ವವೇ ಯುಕ್ತವು, ಎಂದರೆ— ೧ ಪ್ರವೃತ್ತ್ಯಾದಿಗಳೇ ವೇದಕ್ಕೆ ಮುಖ್ಯಪ್ರಯೋಜನವೋ? ೨ ಅಥವಾ ಅವಾಂತರಪ್ರಯೋಜನವೋ? ೧ನೇದ್ದು ಅಲ್ಲವೆನ್ನುತ್ತಾರೆ —

ಮೂ ॥ ಇಷ್ಟಮಾಕಾಂಕ್ಷತೇ ಸರ್ವೋ ನ ಪ್ರವೃತ್ತಿಮಪೇಕ್ಷತೇ ।
ಅಪರೋಕ್ಷಂ ಪರೋಕ್ಷಂ ವಾ ಜ್ಞಾನಮಿಷ್ಟಸ್ಯ ಸಾಧನಂ ॥ ೫೩ ॥
ಕ್ವಾಪಿ ಚೇಷ್ಟಾ ತದರ್ಥಾ ಸ್ಯಾದತ್ತಿರ್ಹಿ ರಸವಿತ್ತಯೇ ।
ವಾಕ್ಯಾರ್ಥಜ್ಞಾನಮಾತ್ರೇಣ ಕ್ವಚಿದಿಷ್ಟಂ ಭವೇದಪಿ ॥ ೫೪ ॥

ಅ ॥ ಸರ್ವಃ=ಎಲ್ಲರೂ, ಇಷ್ಟಂ=ಅಭಿಲಷಿತವಾದುದನ್ನೇ, ಆಕಾಂಕ್ಷತೇ=ಅಪೇಕ್ಷಿಸುತ್ತಾರೆ. ಪ್ರವೃತ್ತಿಂ = ಪ್ರವೃತ್ತಿಯನ್ನು, ನ ಅಪೇಕ್ಷತೇ=ಇಚ್ಛಿಸುವುದಿಲ್ಲ. ಅಪರೋಕ್ಷಂ ಪರೋಕ್ಷಂ ವಾ ಜ್ಞಾನಂ=ಅಪರೋಕ್ಷವಾಗಲೀ ಪರೋಕ್ಷವಾಗಲೀ ಜ್ಞಾನವು, ಇಷ್ಟಸ್ಯ=ಇಷ್ಟವಾದುದಕ್ಕೆ, ಸಾಧನಂ=ಸಾಧನವಾದದ್ದು, ಕ್ವಾಪಿ=ಕೆಲವು ಕಡೆ, ಚೇಷ್ಟಾ = ಚೇಷ್ಟೆಯು, ತದರ್ಥಾ ಸ್ಯಾತ್=ಇಷ್ಟಾರ್ಥಜ್ಞಾನವೇ ಪ್ರಯೋಜನವಾಗಿ ಉಳ್ಳದ್ದು ಆಗುವುದು. ಅತ್ತಿರ್ಹಿ= ಭಕ್ಷಣಾದಿರೂಪವಾದ ಕ್ರಿಯೆಯು, ರಸವಿತ್ತಯೇ = ರಸಸಾಕ್ಷಾತ್ಕಾರಕ್ಕಾಗಿ ಆಗುತ್ತದೆ. ಕ್ವಚಿತ್='ನಿನಗೆ ಪುತ್ರೋತ್ಸವವಾಯಿತು,' 'ನಿನ್ನ ತಂದೆಯು ರಾಜನಾಗಿದ್ದಾನೆ,' ಇತ್ಯಾದಿ

ಗಳಲ್ಲಿ, ವಾಕ್ಯಾರ್ಥಜ್ಞಾನಮಾತ್ರೇಣ=ಕೇವಲ ವಾಕ್ಯಾರ್ಥಜ್ಞಾನದಿಂದ, ಇಷ್ಟಮಪಿ=ಇಷ್ಟವೂ ಕೂಡ, ಭವೇತ್=ಆಗುತ್ತದೆ.

ತಾ || ನ್ಯಾಯಸುಧಾ— (1) ಬೇರೆ ಯಾವುದನ್ನೂ ನಿರೂಪಿಸದೆ ಇದ್ದುದರಿಂದ ಪುರುಷ ರಿಂದ ಅಪೇಕ್ಷಿತವಾದುದು ಪ್ರಯೋಜನವಾಗುವುದು. ಪುರುಷನಾದರೂ ಇಷ್ಟಪ್ರಾಪ್ತಿಯನ್ನೂ, ಅನಿಷ್ಟನಿವೃತ್ತಿಯನ್ನೂ ಇಚ್ಛಿಸುತ್ತಾನೆ. ಕ್ಲೇಶರೂಪವಾಗಿರುವುದರಿಂದ ಪ್ರವೃತ್ತಿ-ನಿವೃತ್ತಿಗಳನ್ನು ಅಪೇಕ್ಷಿಸುವುದಿಲ್ಲ. ಆದಕಾರಣ ಅವುಗಳು ಮುಖ್ಯ ಪ್ರಯೋಜನಗಳಲ್ಲ. (2) ಇಷ್ಟಪ್ರಾಪ್ತಿ, ಅನಿಷ್ಟ ಪರಿಹಾರಗಳು ಪ್ರಯೋಜನಗಳಾಗಲಿ, ಪ್ರವೃತ್ತಿ-ನಿವೃತ್ತಿಗಳು ಅವುಗಳಿಗೆ ಸಾಧನಗಳಾ ಗಿರುವುದು ಅವಾಂತರಪ್ರಯೋಜನಗಳಾಗಲಿ ಎಂದರೆ— ಜ್ಞಾನವೇ ಇಷ್ಟಪ್ರಾಪ್ತಿಗೆ ಸಾಧನವು. ಪ್ರವೃತ್ತ್ಯಾದಿಗಳಲ್ಲ. (3) ಅಭಿಮತವಾದ ರಸಾದಿ ಸಾಕ್ಷಾತ್ಕಾರವೇ ಇಷ್ಟಸಾಧನವು. ಆದಕಾರಣ ಪರೋಕ್ಷಜ್ಞಾನವು ಇಷ್ಟಸಾಧನವೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ— ಕೇವಲ ವಾಕ್ಯಾ ರ್ಥಜ್ಞಾನದಿಂದಲೂ ಅಂದರೆ, ನಿನಗೆ ಪುತ್ರೋತ್ಸವವಾಯಿತು, ನಿನ್ನ ತಂದೆಯು ರಾಜನಾಗಿರು ತ್ತಾನೆ, ಎಂಬುವ ವಾಕ್ಯಾರ್ಥವಿಷಯಕ ಪರೋಕ್ಷಜ್ಞಾನದಿಂದಲೂ ಇಷ್ಟವಾಗುವುದು. (4) ಹಿಂದೆ ಹೇಳಿದ ರೀತಿಯಿಂದ ವೇದಗಳಿಗೆ ಕಾರ್ಯಪರತ್ವವಿಲ್ಲದಿದ್ದರೆ ಎಲ್ಲಾ ವೇದಗಳೂ ಸಿದ್ಧಸ್ವರೂಪವಾದ ಪರಬ್ರಹ್ಮಸ್ವರೂಪವನ್ನು ಪ್ರತಿಪಾದಿಸುತ್ತವೆ ಎನ್ನುವುದು ಹೇಗೆಂದರೆ—ಸಾತ್ವಿಕ ಯಾವ ಉತ್ತಮಾ ಧಿಕಾರಿಯಾದ ಪುರುಷನು ಲೋಕಪ್ರವಾದದಿಂದ ಅಥವಾ ಕಾರ್ಯತ್ವಮೊದಲಾದ ಲಿಂಗಗಳನ್ನನು ಸಂಧಾನಮಾಡಿಕೊಂಡು ತನ್ನ ಶರೀರ, ಮನೆ ಮೊದಲಾದವುಗಳಿಗೆ ಕರ್ತನನ್ನು ಸಾಮಾನ್ಯತಃ ತಿಳಿಯುತ್ತಾ, ಸ್ನೇಹಮಾಹಾತ್ಮ್ಯಜ್ಞಾನಗಳಿಂದ ವಿಶೇಷಜ್ಞಾನಕ್ಕಾಗಿ ಆತುರಪಟ್ಟವನಾಗಿ, ಅದರ ಸಂಸ್ಕಾರದಿಂದ ಬೇರೆ ಯಾವುದನ್ನೂ ಗಣನೆಮಾಡದೇನೇ ಇರುತ್ತಾನೋ, ಆತನನ್ನು ಆಪ್ತನಾದ ಬಂಧುವಿನಂತೆ ಸಮಸ್ತವೇದವೂ ಪ್ರಧಾನವೇ ಆದ ಭಗವತ್ಸ್ವರೂಪವನ್ನು ಪ್ರತಿಪಾದಿಸುತ್ತದೆ. ಆ ಮೇಲೆ ವಾಕ್ಯಾರ್ಥಜ್ಞಾನದಿಂದ ಪರಮಾನಂದಭರಿತನಾಗಿ ಭಗವಂತನ ಸಾಕ್ಷಾತ್ಕಾರವನ್ನು ಇಚ್ಛಿಸುತ್ತಾನೆ. ಆತನಿಗಾಗಿ ಉಪಾಸನೆಯು ವಿಹಿತವಾಗುತ್ತದೆ. ಆ ಉಪಾಸನೆಯು ಅಂತಃಕರಣ ಮಲವನ್ನು ನಾಶಪಡಿಸಿಕೊಂಡವನಿಗೇನೇ ಕೂಡುವುದರಿಂದ ಅದಕ್ಕಾಗಿ ಕರ್ಮಗಳು ವಿಧಿಸ ಲ್ಪಟ್ಟಿವೆ. ಅಥವಾ ಸಾಂಸಾರಿಕ ಯಾವ ಮಧ್ಯಮಾಧಿಕಾರಿಯು ಅನೇಕ ದುಃಖಗಳನ್ನು ಬಿಡಲಿಚ್ಛಿ ಸುತ್ತಾ, ಅತ್ಯಾನಂದವನ್ನು ಹೊಂದಲಿಚ್ಛಿಸುತ್ತಾ ಅದರ ಸಾಧನವನ್ನು ತಿಳಿಯಲಿಚ್ಛಿಸುತ್ತಾನೋ, ಆತನನ್ನು ಕುರಿತು ವೇದವು ಪರಮೇಶ್ವರನೇ ಪ್ರಸನ್ನನಾದವನು ಪರಮೇಷ್ಟಸಾಧನನೆಂದು ತಿಳಿಸು ತ್ತದೆ. ಆ ಮೇಲೆ ಆ ಪರಮೇಶ್ವರನು ಹೇಗೆ ಪ್ರಸನ್ನನಾಗುತ್ತಾನೆಂದು ಅಪೇಕ್ಷಿಸಿದರೆ, ಅವನ ಸಾಕ್ಷಾತ್ಕಾರವು. ಸಾಕ್ಷಾತ್ಕಾರಕ್ಕೆ ಅಂಗವಾಗಿ ಕರ್ಮಗಳು ವೇದಗಳಲ್ಲಿ ಹೇಳಲ್ಪಟ್ಟಿವೆ. ಹೀಗೆ ಎರಡು ಪ್ರಕಾರವಾಗಿಯೂ ಪ್ರಧಾನನೇ ಆದ ಪರಮೇಶ್ವರನು ವೇದಾರ್ಥನು || ೫೩ || ೫೪ ||

ಹೀಗೆ ಕಾರ್ಯಶೇಷನಾಗದೆ ಸ್ವಪ್ರಧಾನನಾದ ಬ್ರಹ್ಮನಲ್ಲಿಯೇ ವೇದಕ್ಕೆ ಪ್ರಾಮಾಣ್ಯವು ಕೂಡುವುದರಿಂದ, ಬ್ರಹ್ಮವಿಚಾರವು ಯುಕ್ತವೆಂದು ಹೇಳಲ್ಪಟ್ಟಿತು. ಈಗ ವೇದವು ಕಾರ್ಯ ಪರವಾಗಲಿ, ಆದಾಗ್ಯೂ 'ಆತ್ಮಾನಮುಪಾಸೀತ' ಎಂಬ ಉಪಾಸನಾರೂಪ ಕಾರ್ಯದಲ್ಲಿ ಕರ್ಮಕಾರಕನಾಗಿ ಪ್ರತೀತನಾದ ಬ್ರಹ್ಮನ ಸ್ವರೂಪವನ್ನು ಪ್ರತಿಪಾದಿಸತಕ್ಕ 'ಸತ್ಯಂ ಜ್ಞಾನಂ' ಇತ್ಯಾದಿ ವಾಕ್ಯಗಳಿಗೆ ಬ್ರಹ್ಮನಲ್ಲಿ ಪ್ರಾಮಾಣ್ಯವು ಕೂಡುವುದರಿಂದ ಬ್ರಹ್ಮವಿಚಾರವು ಯುಕ್ತವು ಎಂಬುವ ಪಕ್ಷಾಂತರವನ್ನು ಸಮರ್ಥಿಸುತ್ತಾ ವಿಧಿಪರ ವಾಕ್ಯಗಳಿಂದಲೂ ವಸ್ತುತತ್ವವು ಸಿದ್ಧಿಸು ತ್ತದೆ ಎನ್ನುವಲ್ಲಿ ಪರರಿಗೆ ಸಂಪ್ರತಿಪನ್ನವಾದ ದೃಷ್ಟಾಂತವನ್ನು ಹೇಳುತ್ತಾರೆ.

ಮೂ ॥ ನಚ ಸ್ರುಕ್ಸ್ರುವ ವಹ್ನ್ಯಾದಾವತಾತ್ಪರ್ಯಂ ಶ್ರುತೇರ್ಭವೇತ್॥ ೫೫ ॥
ಯತ್ಕಿಂಚಿತ್ಕರಣಸ್ಯಾಪಿ ಯಜ್ಞತೈವಾನ್ಯಥಾ ಭವೇತ್ ।
ತಸ್ಮಾದುಪಾಸನಾರ್ಥಂ ಚ ಸ್ವಾರ್ಥೇ ತಾತ್ಪರ್ಯವದ್ಭವೇತ್ ॥೫೬॥

ಅ ॥ ಸ್ರುಕ್‌ಸ್ರುವ ವಹ್ನ್ಯಾದೌ=(ಸಮಸ್ತ ವೇದವೂ ಕಾರ್ಯಪರವು ಎಂದು ತಿಳಿಯುವವರ ಮತದಲ್ಲಿಯೂ) ಸ್ರುಕ್‌ಸ್ರುವ ವಹ್ನ್ಯಾದಿಗಳ ಸ್ವರೂಪದಲ್ಲಿ, ಶ್ರುತೇಃ=ಶ್ರುತಿಗೆ, ಅತಾತ್ಪರ್ಯಂ=ಅಪ್ರಾಮಾಣ್ಯವು, ನ ಚ ಭವೇತ್=ಆಗಲಾರದು. (ಏಕೆಂದರೆ) ಯತಃ=ಯಾವ ಕಾರಣದಿಂದ, ಅನ್ಯಥಾ=ಯೂಪಆಹವನೀಯ ಮೊದಲಾದ ವಾಕ್ಯಗಳಿಗೆ ಯೂಪಾದಿಗಳ ಸ್ವರೂಪದಲ್ಲಿ ತಾತ್ಪರ್ಯವಿಲ್ಲದಿದ್ದರೆ, ಯತ್ಕಿಂಚಿತ್ಕರಣಸ್ಯಾಪಿ=ಭಸ್ಮಹೋಮಾದಿರೂಪವಾದ, ಆಹವನೀಯಾದಿ ವರ್ಜಿತವಾದ ಯತ್ಕಿಂಚಿತ್ಕರ್ಮಕ್ಕೂ, ಯಜ್ಞತೈವ=ಯಾಗತನವೇ, ಭವೇತ್=ಆಗುವುದು (ಹೀಗಾದರೆ ಇದರಿಂದ ಏನಾಯಿತೆಂದರೆ ಸ್ರುಕ್‌ಸ್ರುವ ವಹ್ನ್ಯಾದಿಗಳ ಸ್ವರೂಪದಲ್ಲಿಯೂ ಶ್ರುತಿಗೆ ತಾತ್ಪರ್ಯವಿದೆ ಎಂದರೆ— ಯಾವ ಕಾರಣದಿಂದ ಕಾರ್ಯಾನ್ವಿತವಾಗಿರುವುದರಿಂದ ಯೂಪಾದಿರೂಪ ಸ್ವಾರ್ಥದಲ್ಲಿ ಯೂಪಆಹವನೀಯಾದಿ ಶಬ್ದಗಳಿಗೆ ತಾತ್ಪರ್ಯವಿದೆಯೋ,) ತಸ್ಮಾತ್=ಅದಪ್ರಯುಕ್ತ, ಸಮಾನ ನ್ಯಾಯದಿಂದ, ಉಪಾಸನಾರ್ಥಂ ಚ= ಉಪಾಸನಾಕಾರ್ಯಾರ್ಥವಾಗಿ 'ಸತ್ಯಂ ಜ್ಞಾನಂ' ಇತ್ಯಾದಿ ವೇದವಾಕ್ಯವು, ಸ್ವಾರ್ಥೇ=ಸಕಲ ಗುಣ ಕ್ರಿಯಾದಿಗಳಿಂದೊಡಗೂಡಿದ ಬ್ರಹ್ಮನಲ್ಲಿ, ತಾತ್ಪರ್ಯವತ್=ತಾತ್ಪರ್ಯ ಯುಕ್ತವಾದುದು, ಭವೇತ್=ಆಗುವುದು.

ತಾ ॥ ನ್ಯಾಯಸುಧಾ— (1) 'ಸ್ರುಕ್ ಸ್ರುವ ವಹ್ನ್ಯಾದೌ' ಎನ್ನುವಲ್ಲಿ ಆದಿಪದವನ್ನು ಗ್ರಹಣಮಾಡಿದುದರಿಂದ ಯೂಪಾದಿಗಳನ್ನು ಇಟ್ಟುಕೊಳ್ಳಬೇಕು. ಸರ್ವವೇದಗಳೂ ಕಾರ್ಯಪರಗಳೆಂದು ತಿಳಿಯುವವರ ಮತದಲ್ಲಿಯೂ ಯೂಪ ಆಹವನೀಯ ಮೊದಲಾದುವುಗಳ ಸ್ವರೂಪದಲ್ಲಿ ಶ್ರುತಿಗೆ ಅಪ್ರಾಮಾಣ್ಯವಾದರೂ ಬರಲಾರದು. ಮತ್ತೆ 'ಯೂಪೇ ಪಶುಂ ಬಧ್ನಾತಿ' ಯೂಪ (ಯಜ್ಞಸ್ತಂಭ) ದಲ್ಲಿ ಪಶುವನ್ನು ಕಟ್ಟುತ್ತಾನೆ, ಎಂದು ಬಂಧನಕ್ಕಾಗಿ ಯೂಪವು ವಿನಿಯುಕ್ತವಾಗುತ್ತಿರಲು ಅದು ಅಲೌಕಿಕವಾಗಿರುವುದರಿಂದ ಈ ಯೂಪವೆಂದರೆ ಯಾವುದು? ಎಂದು ಅಪೇಕ್ಷಿಸುವಾಗ 'ಖಾದಿರೋ ಯೂಪೋ ಭವತಿ' ಖದಿರ ವೃಕ್ಷದ್ದು ಯಜ್ಞಸ್ತಂಭವಾಗುತ್ತದೆ, ಯೂಪಂ ತಕ್ಷತಿ=ಯಜ್ಞಸ್ತಂಭವನ್ನು ಕೆತ್ತುತ್ತಾನೆ, ಯೂಪಮಷ್ಟಾಶ್ರೀಕರೋತಿ=ಯೂಪವನ್ನು ಎಂಟು ಧಾರೆಗಳಿಂದ ಕೂಡಿದ್ದನ್ನಾಗಿ ಮಾಡುತ್ತಾನೆ, ಎಂದು ತಕ್ಷಣಾದಿಗಳನ್ನು ವಿಧಿಸುವ ವಾಕ್ಯಗಳಿಂದಲೂ, ಸಂಸ್ಕಾರದಿಂದ ಕೂಡಿರುವ ವಿಶಿಷ್ಟ ಸಂಸ್ಥಾನವುಳ್ಳ ದಾರುವೇ ಯೂಪವು ಎಂದು ತಿಳಿಯುತ್ತದೆ. (2) ಇದೇ ರೀತಿಯಾಗಿ 'ಚತುರ್ಜುಹ್ವಾಂ ಗೃಹ್ಣಾತಿ' 'ಸ್ರುವೇಣಾಭಿಘಾರಯತಿ' 'ಯದಾಹವನೀಯೇ ಜುಹೋತಿ' ಇವು ಮೊದಲಾದ ವಾಕ್ಯಗಳಿಂದ ನಾಲ್ಕು ಆವರ್ತಿ ಗ್ರಹಣಾದಿಗಳಿಗಾಗಿ ಜುಹೂ ಮೊದಲಾದುದು ವಿನಿಯುಕ್ತವಾಗುತ್ತಿರಲು, ಆ ಜುಹ್ವಾದಿಗಳು ಎಂತಹುದು ಎಂದಾಕಾಂಕ್ಷೆಯು ಬರುತ್ತಿರಲು 'ಪರ್ಣಮಯೀ ಜುಹೂರ್ಭವತಿ' 'ಖಾದಿರಃ ಸ್ರುವೋ ಭವತಿ' 'ಅಥೋದಿತೇ ಪ್ರಾತರಾದಧಾತಿ' ಪರ್ಣಮಯೀ ಇತ್ಯಾದಿಗಳನ್ನು ವಿಧಿಸುವ ವಾಕ್ಯಗಳಿಂದಲೂ, ಸ್ರುಕ್‌ಸ್ರುವಾದಿಗಳ ಸ್ವರೂಪವು ತಿಳಿಯಲ್ಪಡುತ್ತದೆ. (3) ಯೂಪಆಹವನೀಯ ಮೊದಲಾದ ಶಬ್ದಗಳಿಗೆ ಕಾರ್ಯಾನ್ವಿತವಾಗಿ ತನ್ನ ಅರ್ಥದಲ್ಲಿ ತಾತ್ಪರ್ಯವಿದ್ದ ಪ್ರಯುಕ್ತ ಅದರ ಸಮಾನ ನ್ಯಾಯದಿಂದ ಉಪಾಸನಾ ಕಾರ್ಯಕ್ಕಾಗಿ 'ಸತ್ಯಂ ಜ್ಞಾನಂ' ಇದು ಮೊದಲಾದ ವೇದವಾಕ್ಯಗಳಿಗೂ

ಸ್ವಾರ್ಥದಲ್ಲಿ ಎಲ್ಲಾ ಗುಣಕ್ರಿಯಾದಿಗಳಿಂದ ಯುಕ್ತನಾದ ಬ್ರಹ್ಮನಲ್ಲಿ ತಾತ್ಪರ್ಯವನ್ನು ಅವಶ್ಯ ವಾಗಿ ಹೇಳಬೇಕು ॥ ೫೫ ॥ ೫೬ ॥

**ನ್ಯಾಯಸುಧಾ**— ಶ್ರುತಿಯೇ ಆತ್ಮಾದಿ ಸ್ವರೂಪದಲ್ಲಿ ತಾತ್ಪರ್ಯವಿಲ್ಲವೆಂದು ತಿಳಿಸಿ ಕೊಡುತ್ತದೆ. 'ಆತ್ಮೇತ್ಯೇವೋಪಾಸೀತ' ಇತ್ಯಾದಿಗಳಲ್ಲಿ ಇತಿಶಬ್ದದ ಸಂಬಂಧವಿದೆ. ಇತಿ ಶಬ್ದವು ವೈಪರೀತ್ಯ ಅರ್ಥದಲ್ಲಿದೆ. ಶಬ್ದಪ್ರಕರಣದಲ್ಲಿ ಶ್ರುತವಾದ ಇತಿ ಶಬ್ದವು ಅರ್ಥವ್ಯವ ಸ್ಥಾಪಕವು. ಅರ್ಥ ಪ್ರಕರಣದಲ್ಲಿ ಶ್ರುತವಾದ ಇತಿ ಶಬ್ದವು ವೈಪರೀತ್ಯವಾಚಕವಾಗಿರುವು ದರಿಂದ ಆತ್ಮನಿಗೆ ಸ್ವರೂಪದಿಂದ ಉಪಾಸನಾ ಸಂಬಂಧವನ್ನು ನಿವಾರಿಸಿ ಸ್ಮೃತಿಮಾತ್ರದಿಂದ ಸಂಬಂಧವನ್ನು ತಿಳಿಸುತ್ತದೆ. ಅವಪ್ರಯುಕ್ತ ವೇದದಿಂದ ಆತ್ಮಸಿದ್ಧಿಯು ಹೇಗೆಂದರೆ— 'ಆತ್ಮೇತ್ಯೇವೋಪಾಸೀತ' ಎನ್ನುವಲ್ಲಿ ಇತಿ ಶಬ್ದವು ಪ್ರಕಾರವಾಚಕವು. ಹೀಗೆ ಅಂಗೀಕರಿಸ ದಿದ್ದರೆ ಬಾಧಕಹೇಳುತ್ತಾರೆ.

**ಮೂ ॥ ಇತಿಶಬ್ದೋಽನ್ವಯೇಽಗ್ನಾವಿತ್ಯಪ್ಯನ್ನೀತೇ ಸ್ಮೃತಿರ್ಭವೇತ್ ।**
**ಇತಿಶಬ್ದವ್ಯಪೇತಾನಿ ಹ್ಯಪಿ ಸಂತಿ ವಚಾಂಸ್ಯಲಂ ।**
**ಆತ್ಮಾನಮೇವೇತ್ಯಾದೀನಿ ಯೋಗೇಽಗ್ನಾವಪಿ ತತ್ಸಮಂ ॥ ೫೭ ॥**

ಅ ॥ ಇತಿಶಬ್ದೋಽನ್ವಯೇ=ಆತ್ಮಾದಿ ಶಬ್ದಗಳಿಂದ ವೈಪರೀತ್ಯವಾಚಕವಾದ ಇತಿ ಶಬ್ದಕ್ಕೆ ಸಂಬಂಧವು ವ್ಯಾಖ್ಯಾನ ಮಾಡಲ್ಪಡುತ್ತಿರಲು, ಅಗ್ನಾ ಇತ್ಯಪ್ಯನ್ನೀತೇ='ಅಗ್ನಾ ಜುಹೋತಿ' ಇತ್ಯಾದಿಗಳಲ್ಲಿಯೂ, ವೈಪರೀತ್ಯಾರ್ಥಕವಾದ ಇತಿ ಶಬ್ದವು ಕೂಡಿಸಲ್ಪಡುತ್ತಿರಲು, (ಅಗ್ನಿಗೂ ಕೂಡ ಸ್ವರೂಪದಿಂದ ಹೋಮಸಂಬಂಧವು ಕೂಡಲಾರದು. ಮತ್ತೆ ಕೇವಲ) ಸ್ಮೃತಿಃ= ಸ್ಮೃತಿಯು, ಭವೇತ್=ಆಗುವುದು. ಅಂದರೆ ಸ್ಮೃತಿಮಾತ್ರದಿಂದ ಸಂಬಂಧವಾಗುವುದು. ('ಅಗ್ನಾ ಜುಹೋತಿ' ಎನ್ನುವಲ್ಲಿ ಇತಿ ಶಬ್ದವೇ ಇಲ್ಲ. ಅದು ವಿಪರೀತಾರ್ಥಕವೆನ್ನುವುದು ಹೇಗೆ ಕೂಡುತ್ತದೆ ಎಂದು ಹೇಳಕೂಡದು. ಹಾಗಾದರೆ ಇತಿಶಬ್ದವಿಲ್ಲದಿರುವ ಉಪಾಸನಾ ವಾಕ್ಯಗಳೂ ಹೆಚ್ಚು ಇದ್ದುದರಿಂದ ಆ ವಾಕ್ಯಗಳಿಗೆ ಸ್ವಾರ್ಥದಲ್ಲಿ ತಾತ್ಪರ್ಯವು ಕೂಡುತ್ತದೆ ಎನ್ನುತ್ತಾರೆ.) ಇತಿಶಬ್ದವ್ಯಪೇತಾನ್ಯಪಿ=ಇತಿಶಬ್ದವಿಲ್ಲದಿರುವ, ಆತ್ಮಾನಮೇವೇತ್ಯಾದೀನಿ= ಆತ್ಮನನ್ನೇ ಉಪಾಸನೆ ಮಾಡತಕ್ಕದ್ದು, ಇದುಮೊದಲಾದ ಅಲಂ ವಚಾಂಸಿ=ಅನೇಕ ವಚನ ಗಳು, ಸಂತಿ ಹಿ=ಇವೆ ಅಷ್ಟೆ. ಯೋಗೇ=ಇತಿಶಬ್ದವನ್ನು ಅಧ್ಯಾಹಾರ ಮಾಡಿ ಕೂಡಿಸುವು ದಾದರೆ, ಅಗ್ನಾವಪಿ='ಅಗ್ನಾ ಜುಹೋತಿ' ಎನ್ನುವಲ್ಲಿಯೂ, ತತ್=ಆ ಅಧ್ಯಾಹೃತ ಇತಿಶಬ್ದ ಯೋಜನವು, ಸಮಂ=ಸಮಾನವು. (ಅಂದರೆ ಆತ್ಮಾದಿ ಶಬ್ದಗಳಿಂದ ಪರದಲ್ಲಿ ಅಶ್ರುತವಾದ ಇತಿಶಬ್ದವನ್ನು ಅಧ್ಯಾಹಾರಮಾಡುವುದಾದರೆ ಅಗ್ನ್ಯಾದಿಶಬ್ದಗಳಿಂದ ಪರದಲ್ಲಿಯೂ ಏಕೆ ಅಧ್ಯಾ ಹಾರಮಾಡಬಾರದು.) ॥ ೫೭ ॥

**ನ್ಯಾಯಸುಧಾ**— ಎಲ್ಲಾ ವೇದಗಳೂ ಕಾರ್ಯಪರಗಳಾಗಿರುವುದರಿಂದ ಸಿದ್ಧರೂಪನಾದ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ಆದಕಾರಣ ಮೀಮಾಂಸಾರಂಭವು ಕೂಡುವುದಿಲ್ಲ ಎಂಬುವ ಆಕ್ಷೇಪಕ್ಕೆ ಏಕದೇಶಿಗಳು ಹೀಗೆ ಪರಿಹಾರ ಹೇಳುತ್ತಾರೆ. ವೇದವು ಕಾರ್ಯಪ್ರತಿಪಾದಕವೇ. ಆದಾಗ್ಯೂ ಸಮಸ್ತ ವೇದಗಳು ಕಾರ್ಯ ಪ್ರತಿಪಾದಕಗಳಲ್ಲ. ವೇದಾಂತಗಳಾದರೂ ಸಿದ್ಧರೂಪ ನಾದ ಬ್ರಹ್ಮನಲ್ಲಿ ಪ್ರಮಾಣವು. 'ಅಥಾತೋ ಧರ್ಮಜಿಜ್ಞಾಸಾ' ಇತ್ಯಾದಿ ಪೂರ್ವಮೀಮಾಂಸಾ ಶಾಸ್ತ್ರದಿಂದ ಕಾರ್ಯಪ್ರತಿಪಾದಕವಾದ ವೇದಭಾಗವನ್ನು ವಿಚಾರ ಮಾಡಿದರೂ ಸಿದ್ಧಪರ ವೇದಾಂತವನ್ನು ವಿಚಾರಮಾಡುವುದಕ್ಕಾಗಿ ಶಾರೀರಕ ಬ್ರಹ್ಮಮೀಮಾಂಸಾರಂಭವು ಕೂಡುತ್ತದೆ,

ಈ ಪರಿಹಾರವು ಅಯುಕ್ತವು. ಏಕೆಂದರೆ, ವೇದಾಂತಗಳು ಬ್ರಹ್ಮಪ್ರತಿಪಾದಕಗಳು. ಬೇರೆ ವೇದಭಾಗವು ಕಾರ್ಯಪ್ರತಿಪಾದಕವು ಎನ್ನುವ ವಾಕ್ಯಭೇದವನ್ನು (೧) ಏಕವಾಕ್ಯತ್ವವು ಕೂಡದಿರುವುದರಿಂದ ಕಲ್ಪಿಸುತ್ತೀರೋ, ಅಥವಾ (೨) ಏಕವಾಕ್ಯತ್ವವು ಕೂಡಿದರೂ ಕಲ್ಪಿಸುತ್ತೀರೋ? ಕಲ್ಪನಾಗೌರವವು ಪ್ರಸಕ್ತವಾಗುವುದರಿಂದ ಎರಡನೇದ್ದು ಕೂಡಲಾರದು ಎನ್ನುತ್ತಾರೆ.

ಮೂ || ಏಕವಾಕ್ಯತ್ವಯೋಗೇ ತು ವೇದಸ್ಯಾಪಿ ಹ್ಯಶೇಷತಃ |
ವಾಕ್ಯಭೇದೋ ನ ಯುಕ್ತಃ ಸ್ಯಾದ್ಯೋಗಶ್ಚ ಸ್ಯಾನ್ಮಹಾಫಲೇ || ೫೮ ||

ಅ || ಅಶೇಷತೋಽಪಿ ವೇದಸ್ಯ=ಎಲ್ಲಾ ವೇದಗಳಿಗೂ, ಏಕವಾಕ್ಯತ್ವಯೋಗೇ ತು= ಏಕವಾಕ್ಯತ್ವವು ಕೂಡಿದರೆ, ವಾಕ್ಯಭೇದಃ=ವಾಕ್ಯಭೇದವು, ಯುಕ್ತಃ ನ ಸ್ಯಾತ್=ಯುಕ್ತವಾಗಲಾರದು. (ಒಂದನೇದ್ದನ್ನು ದೂಷಿಸುತ್ತಾರೆ—) ಮಹಾಫಲೇ=ಶ್ರೇಷ್ಠಫಲವಾದ ಮುಕ್ತಿಗೆ ಸಾಧನನಾದ ವಿಷ್ಣುವಿನಲ್ಲಿ, ಯೋಗಶ್ಚ ಸ್ಯಾತ್= (ಸರ್ವವೇದಗಳಿಗೂ ಕೂಡ ಏಕವಾಕ್ಯತ್ವದ) ಘಟನೆಯೂ ಆಗಬಹುದು. ಅಥವಾ, ಮಹಾಫಲೇ=ಶ್ರೇಷ್ಠವಾದ ಮುಕ್ತಿರೂಪ ಫಲವನ್ನು ಕೊಡುವ ಪರಬ್ರಹ್ಮನಲ್ಲಿಯೇ, ಎಲ್ಲಾ ವೇದಗಳಿಗೂ ಸಂಬಂಧವು ಕೂಡುತ್ತದೆಯೇ? ಪುನಃ ಅಲ್ಪ ಫಲವಾದ ಕರ್ಮದಲ್ಲಿ ಸಂಬಂಧವಿಲ್ಲ. (ಅಥವಾ 'ಯೋಗೇ ಅಗ್ನಾವಪಿ ತತ್ಸಮಂ' ಎಂದು ಯುಕ್ತವಲ್ಲ. ಉಪಾಸನಾ ವಾಕ್ಯದಲ್ಲಿ 'ಆತ್ಮೇತ್ಯೇವೋಪಾಸೀತ' ಇತ್ಯಾದಿ ಕೆಲವು ಕಡೆಗಳಲ್ಲಿ ಇತಿ ಶಬ್ದವು ಶ್ರುತವಾದುದರಿಂದ ಇತಿ ಶಬ್ದವಿಲ್ಲದಿರುವ ಉಪಾಸನಾವಾಕ್ಯಗಳಲ್ಲಿಯೂ ಇತಿ ಶಬ್ದದ ಅಧ್ಯಾಹಾರವು ಕೂಡುತ್ತದೆ. ಕರ್ಮಪ್ರಕರಣದಲ್ಲಿ ಎಲ್ಲಿಯೂ ಇತಿ ಶಬ್ದವು ಇಲ್ಲ. ಅದಿಲ್ಲದಿರುವ ಸ್ಥಳದಲ್ಲಿ ಅಧ್ಯಾಹಾರವು ಹೇಗೆ ಕೂಡುತ್ತದೆ? ಉಪಾಸನಾ ವಾಕ್ಯದಲ್ಲಿ ಶ್ರುತವಾದುದರಿಂದ ಕರ್ಮ ಕಾಂಡದಲ್ಲಿಯೂ ಇತಿ ಶಬ್ದವನ್ನಧ್ಯಾಹಾರ ಏತಕ್ಕೆ ಮಾಡಕೂಡದೆಂದರೆ, ವೇದಾಂತಗಳೂ ಕರ್ಮಕಾಂಡವೂ ಭಿನ್ನ ಭಿನ್ನ ವಾಕ್ಯಗಳಾಗಿವೆ ಎಂದರೆ ಸರ್ವ ವೇದಗಳಿಗೂ ಏಕವಾಕ್ಯತ್ವವು ಕೂಡುವುದರಿಂದ ವಾಕ್ಯಭೇದವು ಕೂಡಲಾರದು.) || ೫೮ ||

ಕರ್ಮಕಾಂಡ-ಬ್ರಹ್ಮಕಾಂಡಗಳಿಗೆ ವಾಕ್ಯಭೇದವಿರಲಿ. ಆದಾಗ್ಯೂ ಅಗ್ನ್ಯಾದಿಶಬ್ದಗಳಿಂದ ಮೇಲೆ ಇತಿ ಶಬ್ದದ ಅಧ್ಯಾಹಾರವು ಕೂಡುತ್ತದೆ. ಕರ್ಮ ಪ್ರಕರಣದಲ್ಲಿಯೂ ಕೆಲವುಕಡೆ ಇತಿ ಶಬ್ದವು ಶ್ರುತವಾಗಿದೆ ಎನ್ನುತ್ತಾರೆ.

ಮೂ || ಇತಿ ಬ್ರೂಯಾದಿತಿ ವಚೋ ಗತಮಗ್ನೌ ಸಮೀಪಗಂ || ೫೯ ||
ಕಲ್ಪನಾಗೌರವಂ ಚೇತ್ಸ್ಯಾತ್ಪೃಥಕ್ತಾತ್ಪರ್ಯಕಲ್ಪನೇ (ಸಂಭವೇ) |
ಕಲ್ಪನಾಗೌರವಾದೇವ ಪದಾರ್ಥಾ ನ ಸ್ಯುರೇವ ಹಿ || ೬೦ ||

ಅ || ಇತಿ ಬ್ರೂಯಾದಿತಿ ವಚಃ=ನ ಗಿರಾ ಗಿರೇತಿ ಬ್ರೂಯಾತ್ ಎನ್ನುವ ವಚನವು, ಅಗ್ನೌ=ಅಗ್ನಿ ಎನ್ನುವುದರ, ಸಮೀಪಗಂ=ಸಮೀಪದಲ್ಲಿರತಕ್ಕುದಾಗಿ, ಗತಂ=ಅವಗತವಾಗಿದೆ. (ಆದಾಗ್ಯೂ ಉಪಾಸನಾಕರ್ಮನಾಗಿ ಬ್ರಹ್ಮನು ಸಿದ್ಧಿಸುವುದಿಲ್ಲ. ಬ್ರಹ್ಮಪ್ರತಿಪಾದಕ ವಾಕ್ಯಗಳಿಗೆ ಉಪಾಸನಾ ಕಾರ್ಯತ್ವದಲ್ಲಿ ತಾತ್ಪರ್ಯವನ್ನವಶ್ಯವಾಗಿ ಒಡಂಬಡಬೇಕು. ಬ್ರಹ್ಮಸ್ವರೂಪದಲ್ಲಿಯೂ ತಾತ್ಪರ್ಯವೆಂದಂಗೀಕರಿಸಿದರೆ, ಕಲ್ಪನಾಗೌರವವು ಪ್ರಸಕ್ತವಾಗುತ್ತದೆಂದರೆ) ಚೇತ್ ಪೃಥಕ್ ತಾತ್ಪರ್ಯಕಲ್ಪನೇ (ಸಂಭವೇ) =ಹೀಗಾದರೆ ಯೂಪಾಹವನೀಯಾದಿ ವಾಕ್ಯಗಳಿಗೂ ಪಶುಬಂಧಾದಿ ಕಾರ್ಯದಲ್ಲಿ ಅವಶ್ಯವಾಗಿ ತಾತ್ಪರ್ಯವನ್ನು ಒಡಂಬಡಬೇಕು.

ಯೂಪಾದಿ ಸ್ವರೂಪದಲ್ಲಿಯೂ ಪೃಥಕ್ ತಾತ್ಪರ್ಯವನ್ನು ಕಲ್ಪಿಸಿದರೆ, ಕಲ್ಪನಾಗೌರವಂ ಸ್ಯಾತ್=ಕಲ್ಪನಾಗೌರವವು ಬರುವುದು. ಕಲ್ಪನಾಗೌರವಾದೇವ = ಕಲ್ಪನಾಗೌರವವಿದ್ದುದ ರಿಂದಲೇ, ಪದಾರ್ಥಾಃ=ಪದಾರ್ಥಗಳು, ನ ಸ್ಯುರೇವ ಹಿ=ಸಿದ್ಧಿಸಲಿಕ್ಕೇನೇ ಇಲ್ಲವು. (ಅಂತೂ ವೇದಗಳಿಂದ ಅವುಗಳು ಸಿದ್ಧಿಸದಿರಲು ಬೇರೆ ಪ್ರಮಾಣಗಳು ಇಲ್ಲದಿರುವುದರಿಂದ ಯೂಪಮೊದ ಲಾದ ಪದಾರ್ಥಗಳೇ ಇಲ್ಲವೆಂದು ಪ್ರಸಕ್ತವಾಗುವುವು ॥ ೫೯ ॥ ೬೦ ॥

ಹಾಗಾದರೆ, ಆ ವಾಕ್ಯಗಳಿಗೆ ಯೂಪಾದಿಗಳಲ್ಲಿ ತಾತ್ಪರ್ಯಗಳು ಪ್ರಮಾಣಸಿದ್ಧಗಳೇ ಆಗಿವೆ. ಕಲ್ಪಿಸಲ್ಪಡುವುದಲ್ಲ. ಯಾವ ವಾಕ್ಯದಿಂದ ಯಾವ ಅರ್ಥದ ಜ್ಞಾನವು ಹುಟ್ಟುತ್ತದೋ, ಅದು ಅದರಲ್ಲಿ ತಾತ್ಪರ್ಯವುಳ್ಳದ್ದು. ಯೂಪಾದಿವಾಕ್ಯದಿಂದ ಯೂಪಾದಿಜ್ಞಾನವು ಹುಟ್ಟುತ್ತದೆ. ಇದು ಸಂಶಯವಲ್ಲ. ಒಂದೇ ಆಕಾರವಿರುವುದು. ಬಾಧಕವಿಲ್ಲದಿರುವುದರಿಂದ ವಿಪರ್ಯಯವಲ್ಲ. ಅಪ್ರಾಪ್ತವಾಗಿರುವುದರಿಂದ ಅನುವಾದವೂ ಅಲ್ಲ. ಆದಪ್ರಯುಕ್ತ ಕಲ್ಪನಾಗೌರವವು ಹೇಗೆ? ಮತ್ತು ಯೂಪಮೊದಲಾದ ಪದಾರ್ಥಗಳು ಇಲ್ಲವೆನ್ನುವುದೂ ಹೇಗೆ? ಎಂದಾಶಂಕಿಸಿದರೆ—

**ಮೂ ॥ ಪ್ರಮಾಣಾವಗತತ್ವಂ ಚೇತ್ತಾತ್ಪರ್ಯಾಣಾಂ ತಥೈವ ಹಿ ।**
**ತಸ್ಮಾತ್ಪದಾರ್ಥೇ ವಾಕ್ಯಾರ್ಥೇ ತಾತ್ಪರ್ಯಮುಭಯತ್ರ ಚ ॥ ೬೧ ॥**

ಅ ॥ ತಾತ್ಪರ್ಯಾಣಾಂ=ತಾತ್ಪರ್ಯಗಳಿಗೆ, ಪ್ರಮಾಣಾವಗತತ್ವಂ ಚೇತ್=ಪ್ರಮಾಣ ಗಳಿಂದ ತಿಳಿಯಲ್ಪಡುವಿಕೆಯು ಇದ್ದರೆ, ತಥೈವ ಹಿ=(ಹಾಗಾದರೆ) ಹಾಗೆಯೇ (ಬ್ರಹ್ಮವಾಕ್ಯಗಳಿಗೆ ಬ್ರಹ್ಮನಲ್ಲಿ ತಾತ್ಪರ್ಯವೂ ಪ್ರಮಾಣಗಳಿಂದ ತಿಳಿಯಲ್ಪಟ್ಟಿರುವುದರಿಂದ ಕಲ್ಪನಾಗೌರವವಿಲ್ಲ.) ತಸ್ಮಾತ್=ಆದಪ್ರಯುಕ್ತ, (ಸತ್ಯಜ್ಞಾನಾದಿ ಪದಗಳಿಗೆ,) ಪದಾರ್ಥೇ=ಪದಾರ್ಥನಾದ ಬ್ರಹ್ಮ ನಲ್ಲಿಯೂ, ವಾಕ್ಯಾರ್ಥೇ=ಉಪಾಸನಾಮೊದಲಾದ ಕಾರ್ಯದಲ್ಲಿಯೂ, ಉಭಯತ್ರ ಚ=ಎರಡು ಕಡೆಗಳಲ್ಲಿಯೂ, ತಾತ್ಪರ್ಯಂ=ತಾತ್ಪರ್ಯವನ್ನು ಅಂಗೀಕರಿಸತಕ್ಕದ್ದು ॥ ೬೧ ॥

ಹಾಗಾದರೆ ಸತ್ಯಜ್ಞಾನಾದಿ ವಾಕ್ಯಗಳಿಗೆ ಸ್ವಾರ್ಥದಲ್ಲಿ ತಾತ್ಪರ್ಯವು ಹೇಗೆ? ಸತ್ಯತ್ವವನ್ನು ವಿಧಾನಮಾಡಿದರೆ ಜ್ಞಾನತ್ವಾದಿಗಳಿಗೆ ಅನುವಾದವೆಂದು ಹೇಳಬೇಕು. ಜ್ಞಾನತ್ವವನ್ನು ವಿಧಾನ ಮಾಡಿದರೆ ಸತ್ಯತ್ವಾದಿಗಳಿಗೆ ಅನುವಾದವೆಂದು ಹೇಳಬೇಕು. ಆದಕಾರಣ ಅನುವಾದ್ಯತ್ವ ವಿಧೇಯತ್ವಾದಿಗಳು ಏಕಕಾಲದಲ್ಲಿ ಒಂದಕ್ಕೆ ವಿರುದ್ಧಗಳಾಗಿರುವುದರಿಂದ ಕೂಡಲಾರದೆಂದರೆ—

**ಮೂ ॥ ಪೃಥಗೇವ ಚ ವಾಕ್ಯತ್ವಂ ಪೃಥಗನ್ವಯತೋ ಭವೇತ್ ।**
**ಅವಾಂತರತ್ವಾದ್ವಾಕ್ಯಾನಾಂ ವಾಕ್ಯಭೇದೋ ನ ದೂಷಣಂ ॥ ೬೨ ॥**
**ಅಂಗೀಕೃತತ್ವಾದಪಿ ತೈಃ ಪದಾನಾಂ ತು ಪೃಥಕ್ ಪೃಥಕ್ ।**
**ಕ್ರಿಯಾಪದೇನಾನ್ವಯಸ್ಯ ವಾಕ್ಯಭೇದೋ ಹಿ ದೂಷಣಂ ॥ ೬೩ ॥**

ಅ ॥ ಪೃಥಕ್ ಅನ್ವಯತಃ=ಸತ್ಯಸ್ವರೂಪನು, ಬ್ರಹ್ಮನು, ಜ್ಞಾನಸ್ವರೂಪನು ಬ್ರಹ್ಮನು, ಹೀಗೆ ಪ್ರತ್ಯೇಕ ಅನ್ವಯವಿದ್ದುದರಿಂದ, ಪೃಥಗೇವ ಚ ವಾಕ್ಯತ್ವಂ=ಪ್ರತ್ಯೇಕ ವಾಕ್ಯತ್ವವೇ, ಭವೇತ್=ಆಗುವುದು. ವಾಕ್ಯಾನಾಂ=ವಾಕ್ಯಗಳಿಗೆ, ಅವಾಂತರತ್ವಾತ್=ಅವಾಂತರತ್ವವಿದ್ದುದ ರಿಂದ, ವಾಕ್ಯಭೇದಃ=ವಾಕ್ಯಭೇದವು, ನ ದೂಷಣಂ=ದೂಷಣವಲ್ಲ. (ಏಕವಾಕ್ಯತ್ವವು ಕೂಡು ವಾಗ ಸ್ವತಂತ್ರವಾಕ್ಯಭೇದವನ್ನು ಕಲ್ಪಿಸುವುದೇ ದೋಷವು. ಅವಾಂತರ ವಾಕ್ಯಭೇದವು ದೋಷವಲ್ಲ. ಹಾಗಿದ್ದರೆ ಎಲ್ಲಿಯೂ ಮಹಾವಾಕ್ಯವೇ ಇಲ್ಲದೆಹೋಗಬೇಕಾಗುವುದು. ಮತ್ತು

ಪರರೂ ಹೀಗೆಯೇ ಅಂಗೀಕರಿಸಿರುತ್ತಾರೆ ಎನ್ನುತ್ತಾರೆ.) ತೈರಪಿ=ಮೀಮಾಂಸಕರಿಂದಲೂ ('ಅರುಣಯಾ ಪಿಂಗಾಕ್ಷ್ಯಾ ಏಕಹಾಯನ್ಯಾ ಗವಾ ಸೋಮಂ ಕ್ರೀಣಾತಿ' ಇತ್ಯಾದಿ ಸ್ಥಳಗಳಲ್ಲಿ) ಪದಾನಾಂತು=ಅರುಣಯಾ ಇತ್ಯಾದಿ ಪದಗಳಿಗಾದರೂ, ಪೃಥಕ್ ಪೃಥಕ್=ಪ್ರತ್ಯೇಕಪ್ರತ್ಯೇಕ, ಕ್ರಿಯಾಪದೇನ=ಕ್ರೀಣಾತಿ ಇತ್ಯಾದಿ ಕ್ರಿಯಾಪದಗಳಿಂದ, ಅನ್ವಯಸ್ಯ=ಅನ್ವಯಕ್ಕೆ, ಅಂಗೀಕೃತತ್ವಾದಪಿ = ಅಂಗೀಕರಿಸಲ್ಪಟ್ಟಿರುವುದರಿಂದಲೂ (ಅವುಗಳಿಗೂ) ವಾಕ್ಯಭೇದಃ = ವಾಕ್ಯಭೇದವು, ದೂಷಣಂ ಹಿ=ದೂಷಣವಾಗಬೇಕಾಗುವುದು. (ಅನುವಾದವಿಧಾನಗಳಿಗೆ ಏಕಕಾಲದಲ್ಲಿ ವಿರೋಧದ ಭೀತಿಯಿಂದ ಅರುಣಾದಿಗಳಿಗೆ ಗವಾದಿಗಳಿಂದ ಆಕಾಂಕ್ಷಾದಿಗಳನ್ನನುಸರಿಸಿ ಹಿಂದುಹಿಂದುಕಡೆ ಅನ್ವಯವನ್ನಂಗೀಕರಿಸತಕ್ಕದ್ದು. ಅಂತೂ ಅವರಿಗೂ ವಾಕ್ಯಭೇದವು ದೂಷಣವಾಗಬೇಕಾಗುವುದು. ಆದುದರಿಂದ ಮಹಾವಾಕ್ಯಭೇದವೇ ದೋಷವು. ಅವಾಂತರ ವಾಕ್ಯಭೇದವು ದೋಷವಲ್ಲವೆಂದೇ ಸಮಾಧಾನ ಹೇಳಬೇಕು.) ॥ ೬೨ ॥ ೬೩ ॥

ಆದಾಗ್ಯೂ ಪ್ರತ್ಯಕ್ಷಾದಿಗಳಿಂದ ವಿರೋಧವಿದ್ದುದರಿಂದ ವೇದಾಂತ ಪದಗಳಿಗೆ ಸ್ವಾರ್ಥಗಳಲ್ಲಿ ತಾತ್ಪರ್ಯವು ಕೂಡಲಾರದು. ಏಕೆಂದರೆ— 'ವಿಜ್ಞಾನಮಾನಂದಂ ಬ್ರಹ್ಮ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ತತ್ತ್ವಮಸಿ' ಇತ್ಯಾದಿ ಸ್ಥಳಗಳಲ್ಲಿ ಬ್ರಹ್ಮನನ್ನನುವಾದಮಾಡಿ ಆನಂದಾದಿತ್ವವನ್ನು, ಅದ್ವಿತೀಯತ್ವವನ್ನು ವಿಧಿಸುತ್ತದೆಂದು ವ್ಯಾಖ್ಯಾನಮಾಡಬೇಕು. ಪ್ರತ್ಯಕ್ಷಾದಿ ಸಿದ್ಧನಾದ ಜೀವನೇ ಬ್ರಹ್ಮನು. ಜೀವನಿಗೆ ಹಿಂದೆ ಹೇಳಿದ ಅದ್ವಿತೀಯತ್ವ ಆನಂದತ್ವಾದಿಗಳನ್ನು ಪ್ರತ್ಯಕ್ಷಾದಿಗಳು ಸಹಿಸಲಾರವು ಪ್ರತ್ಯಕ್ಷವು ಇದಕ್ಕಿಂತ ವಿಪರೀತ ಧರ್ಮವನ್ನೇ ವಿಷಯೀಕರಿಸುತ್ತದೆ ಎಂದರೆ—

**ಮೂ ॥ ಪ್ರತ್ಯಕ್ಷಾದಿವಿರೋಧೇ ತು ಗೌಣಾರ್ಥಸ್ಯಾಪಿ ಸಂಭವಾತ್ ।**
**ಅತಾತ್ಪರ್ಯಂ ಪದಾರ್ಥೇಽಪಿ ನ ಕಲ್ಪ್ಯಮವಿರೋಧತಃ ॥ ೬೪ ॥**

ಅ ॥ ಪ್ರತ್ಯಕ್ಷಾದಿವಿರೋಧೇ ತು=ಪ್ರತ್ಯಕ್ಷಾದಿಗಳಿಂದ ವಿರೋಧವಿದ್ದರೆ, ಗೌಣಾರ್ಥಸ್ಯಾಪಿ=ಅಮುಖ್ಯವಾದ ಅರ್ಥಕ್ಕೂ, ಸಂಭವಾತ್=ಕೂಡುವುದರಿಂದ, ಅವಿರೋಧತಃ=ವಿರೋಧವಿಲ್ಲದಿರುವುದರಿಂದ, ಪದಾರ್ಥೇಽಪಿ=ಪದಾರ್ಥದಲ್ಲಿಯೂ, ಅತಾತ್ಪರ್ಯಂ=ತಾತ್ಪರ್ಯಾಭಾವವು, ನ ಕಲ್ಪ್ಯಂ=ಕಲ್ಪಿಸಲ್ಪಡಕೂಡದು.

ತಾ ॥ ನ್ಯಾಯಸುಧಾ—ಎಲ್ಲಾ ಕಡೆಗಳಲ್ಲಿಯೂ ಪ್ರತ್ಯಕ್ಷಾದಿಗಳಿಂದ ವಿರೋಧವಿಲ್ಲ. 'ಸತ್ಯಂ ಜ್ಞಾನಂ' ಇತ್ಯಾದಿ ವಾಕ್ಯಗಳಿಗೆ ಜೀವಭಿನ್ನನಾದ ಈಶ್ವರವಿಷಯತ್ವವನ್ನು ಅಂಗೀಕರಿಸಿರುತ್ತೇವೆ. 'ತತ್ತ್ವಮಸಿ' ಇತ್ಯಾದಿ ವಾಕ್ಯಗಳಿಗೆ ಪ್ರತ್ಯಕ್ಷಾದಿಗಳಿಂದ ವಿರೋಧವಿದ್ದರೂ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಕಲ್ಪಿಸಲ್ಪಡಕೂಡದು. ಪ್ರತೀತವಾದ ಅರ್ಥಕ್ಕೆ ಪ್ರತ್ಯಕ್ಷಾದಿಗಳಿಂದ ವಿರೋಧವಿದ್ದುದರಿಂದಲೇ 'ಅಗ್ನಿರ್ಮಾಣವಕಃ' ಇತ್ಯಾದಿಗಳಂತೆಯೇ ಅಮುಖ್ಯವಾದ ಅರ್ಥವನ್ನು ಕಲ್ಪಿಸುವುದು ಎನ್ನುವುದು ಕೂಡುತ್ತದೆ. ಮುಖ್ಯವೃತ್ತಿಯಿಂದ ತಿಳಿಯಲ್ಪಡತಕ್ಕದೇ ವಾಕ್ಯಾರ್ಥವು ಅಮುಖ್ಯವೃತ್ತಿಯಿಂದ ತಿಳಿಯಲ್ಪಡತಕ್ಕದ್ದು ವಾಕ್ಯಾರ್ಥವಲ್ಲವೆಂದು ಯಾರೂ ಒಡಂಬಡಲಿಲ್ಲ. ಗೌಣಾರ್ಥದಲ್ಲಿ ತಾತ್ಪರ್ಯವನ್ನಂಗೀಕರಿಸಿದರೆ ಯಾವ ವಿರೋಧವೂ ಇಲ್ಲ. ॥ ೬೪ ॥

'ಯೋಗಶ್ಚ ಸ್ಯಾನ್ಮಹಾಫಲೇ' ಎಂದು ಹೇಳಿದ್ದನ್ನು ವಿಸ್ತರಿಸುತ್ತಾ ಹಿಂದೆ ಹೇಳಿದ ಅರ್ಥವು ಸೂತ್ರದಲ್ಲಿ ಹೇಳದೆ ಇದ್ದದ್ದು ಎನ್ನುವ ಭ್ರಮೆಯನ್ನು ನಿರಾಕರಿಸುವುದಕ್ಕಾಗಿ 'ಅತಃ' ಶಬ್ದಸಿದ್ಧವಾಗಿದೆ ಎಂದು ಹೇಳುತ್ತಾ ಉಪಸಂಹಾರ ಮಾಡುತ್ತಾರೆ.

ಮೂ ॥ ಅತೋ ಜ್ಞಾನಫಲಾನ್ಯೇವ ಕರ್ಮಾಣಿ ಜ್ಞಾನಮೇವ ಹಿ ।
ಮುಖ್ಯಪ್ರಸಾದದಂ ವಿಷ್ಣೋರ್ಜಿಜ್ಞಾಸಾಯಾಶ್ಚ ತದ್ಭವೇತ್ ।
ಕರ್ತವ್ಯಾ ತೇನ ಜಿಜ್ಞಾಸಾ ಶ್ರುತಿಪ್ರಾಮಾಣ್ಯಯೋಗತಃ ॥ ೬೫ ॥

ಅ ॥ ಹಿ=ಯಾವಕಾರಣದಿಂದ, (ಜ್ಞಾನಕ್ಕೇನೇ ಇಷ್ಟಸಾಧನತ್ವವು ದೃಷ್ಟವಾಗಿಯದೋ, ಜ್ಞಾನಸಾಧನತ್ವವು ಕರ್ಮಕ್ಕೆ ದೃಷ್ಟವಾಗಿಯದೋ?) ಅತಃ=ಆದಪ್ರಯುಕ್ತ, ಕರ್ಮಾಣಿ=ಯಾಗಾದಿ ಕರ್ಮಗಳು, ಜ್ಞಾನಫಲಾನ್ಯೇವ=ಭಗವಂತನ ಜ್ಞಾನಕ್ಕೇನೇ ಉಪಯುಕ್ತಗಳು. ('ವಿವಿದಿಷಂತಿ ಯಜ್ಞೇನ ದಾನೇನ ತಪಸಾನಾಶಕೇನ' ಎನ್ನುವ ಶ್ರುತಿಯಿಂದ) ಜ್ಞಾನಮೇವ=ಜ್ಞಾನವೇ, ವಿಷ್ಣೋಃ=ಶ್ರೀಹರಿಯ, ಮುಖ್ಯಪ್ರಸಾದದಂ=ಮುಕ್ತಿಕಾರಣವಾದ ಪ್ರಸಾದವನ್ನು ಹುಟ್ಟಿಸುವುದು. ತಚ್ಚ=ಆ ಜ್ಞಾನವಾದರೂ, ಜಿಜ್ಞಾಸಾಯಾಶ್ಚ=ವಿಚಾರದಿಂದಲೇ, ಭವೇತ್=ಆಗುವುದು. (ವಿಷಯಾದಿಗಳ ಸಿದ್ಧಿಮಾತ್ರದಿಂದ ಆಗಲಾರದು.) ತೇನ=ಆದಪ್ರಯುಕ್ತ, ಶ್ರುತಿಪ್ರಾಮಾಣ್ಯಯೋಗತಃ = ಬ್ರಹ್ಮನಲ್ಲಿ ಶ್ರುತಿಗಳಿಗೆ ಪ್ರಾಮಾಣ್ಯವು ಕೂಡುವುದರಿಂದ, ಜಿಜ್ಞಾಸಾ=ವಿಚಾರವು, ಕರ್ತವ್ಯಾ=ಮಾಡತಕ್ಕದ್ದು. (ಅಂದರೆ, ಕರಣಭೂತವಾದ ವೇದಕ್ಕೆ ಜಿಜ್ಞಾಸಾರೂಪವಾದ ಇತಿ ಕರ್ತವ್ಯತಾ ಇಲ್ಲದಿದ್ದರೆ ಜ್ಞಾನಜನಕತ್ವವೇ ಕೂಡಲಾರದು. ಆದ ಪ್ರಯುಕ್ತ ಬ್ರಹ್ಮವಿಚಾರವನ್ನು ಮಾಡಬೇಕೆನ್ನುವುದು 'ತದ್ವಿಜಿಜ್ಞಾಸಸ್ವ' ಎನ್ನುವ ಪ್ರಮಾಣಭೂತವಾದ ಶ್ರುತಿಯಿಂದ ವಿಹಿತವಾಗಿದೆ.)

### ಕಾರ್ಯತಾವಾದದ ಸಾರಾಂಶವು:—

(1) ವಿಧಿ ಅರ್ಥವಾದ ಮಂತ್ರರೂಪವಾದ ವೇದಕ್ಕೆ ಕಾರ್ಯರೂಪವಾದುದೇ ಅರ್ಥವು. ಸಿದ್ಧರೂಪವಾದುದು ಅಲ್ಲ. ಆದಕಾರಣ ಬ್ರಹ್ಮಮೀಮಾಂಸಾರಂಭವು ಹೇಗೆ ಕೂಡುತ್ತದೆ? ಎಂದು ಆಕ್ಷೇಪಿಸತಕ್ಕ ಮೀಮಾಂಸಕರನ್ನು ಕುರಿತು ಸಿದ್ಧಾಂತಿಗಳು ಹೀಗೆ ಸಮಾಧಾನವನ್ನು ಹೇಳುವರು.

(2) ಇಷ್ಟ ಇಷ್ಟಸಾಧನವನ್ನು ಹೊರತು ಬೇರೆ ಯಾವುದೊಂದು ಕಾರ್ಯವೇ ಇಲ್ಲ. (3) ಕೃತಿವಿಷಯೀಭೂತವಾದುದು ಕಾರ್ಯವು ಎಂದು ಹೇಳಕೂಡದು. ನಿಷಿದ್ಧಗಳಾದ ಬ್ರಾಹ್ಮಣಹನನಾದಿಗಳಿಗೂ ಕಾರ್ಯತ್ವವು ಬರಬೇಕಾಗುವುದು. (4) ಮುಂದೆ ಆಗತಕ್ಕ ಕರ್ಮವು ಕಾರ್ಯವು ಎಂದು ಹೇಳಕೂಡದು. ಶ್ರೀಹರಿಯು ಮುಂದೆ ಸೃಷ್ಟಿಸುವನು ಇತ್ಯಾದಿಗಳಿಂದ ಪ್ರತೀತವಾದ ಭವಿಷ್ಯತ್ಸರ್ಜನಾದಿಗಳಿಗೂ ಕಾರ್ಯತ್ವವು ಬರಬೇಕಾಗುವುದು. ಅಲ್ಲದೆ ಮೀಮಾಂಸಕರು ಇದನ್ನು ಅಂಗೀಕರಿಸಲೂ ಇಲ್ಲ. ಅವರು ಲಿಙಾದಿಪದಗಳಿಂದ ವಾಚ್ಯವಾದುದನ್ನೇ ಕಾರ್ಯವೆಂದಂಗೀಕರಿಸಿರುವರು. ಅದನ್ನು ನಿರ್ವಚನಮಾಡಲಿಕ್ಕೂ ಸಾಧ್ಯವಿಲ್ಲ. (5) ಮಾಡದಿರಲಿಕ್ಕೆ ಅಶಕ್ಯವಾದುದು ಕಾರ್ಯವು ಎಂದೂ ಹೇಳಕೂಡದು. ಏಕಾದಶೀ ಭೋಜನಾದಿಗಳಿಗೂ ಕಾರ್ಯತ್ವವು ಬರಬೇಕಾಗುವುದು. (6) ಕೃತಿಸಾಧ್ಯವಾದುದು ಕಾರ್ಯವು ಎಂದೂ ಹೇಳಕೂಡದು. ಶ್ರಮಾದಿಗಳಿಗೂ ಕಾರ್ಯತ್ವವು ಬರಬೇಕಾಗುವುದು. (7) ಯಾವುದನ್ನು ಉದ್ದೇಶಿಸಿಕೊಂಡು ಕೃತಿಯು (ಪ್ರಯತ್ನವು) ಪ್ರವೃತ್ತವಾಗುತ್ತದೋ ಅದು ಕಾರ್ಯವೆಂದು ಹೇಳಕೂಡದು. ಸ್ವರ್ಗ ಮೊದಲಾದ ಫಲಕ್ಕೂ ಕಾರ್ಯತ್ವವು ಬರಬೇಕಾಗುವುದು. (8) ಮತ್ತು ವಿಧ್ಯುಪದೇಶವು ೧. ಇಷ್ಟಸಾಧನವನ್ನು ಬೋಧಿಸುತ್ತಾ ಕರ್ತವ್ಯತ್ವವನ್ನು ಬೋಧಿಸುತ್ತದೆ ಎಂದು ಹೇಳಕೂಡದು. ಇಷ್ಟಸಾಧನ ಜ್ಞಾನದಿಂದಲೇ ಪ್ರವೃತ್ತಿಯು ಕೂಡಬಹುದು. ಕರ್ತವ್ಯತ್ವವನ್ನು ತಿಳಿಸುತ್ತದೆ ಎನ್ನುವುದು ವ್ಯರ್ಥವಾಗಬೇಕಾಗುವುದು. ೨. ಇಷ್ಟಸಾಧನತ್ವವನ್ನು

ತಿಳಿಸದೇನೇ ಕರ್ತವ್ಯತ್ವವನ್ನು ತಿಳಿಸುತ್ತದೆ ಎಂದೂ ಹೇಳಕೂಡದು. 'ವಿಷಂ ಭುಂಕ್ಷ್ವ' ಎನ್ನುವ ವಾಕ್ಯದಿಂದ ವಿಷಭೋಜನಕ್ಕೂ ಕರ್ತವ್ಯತ್ವಜ್ಞಾನವು ಬರಬೇಕಾಗುವುದು. (9) ಇಷ್ಟ ಸಾಧನದಲ್ಲಿ ಪ್ರವೃತ್ತಿಯಾಗುವುದಾದರೆ ಅತೀತವಾದ ಇಷ್ಟಸಾಧನದಲ್ಲಿಯೂ ಪ್ರವೃತ್ತಿಯು ಬರಬೇಕಾಗುವುದೆಂದು ಹೇಳಕೂಡದು. ಕಾರ್ಯದಲ್ಲಿ ಪ್ರವೃತ್ತಿಯಾಗುವುದಾದರೆ ಅತೀತ ಕಾರ್ಯದಲ್ಲಿಯೂ ಪ್ರವೃತ್ತಿಯು ಬರಬೇಕಾಗುವುದು ಎಂದೂ ಹೇಳಲು ಶಕ್ಯವಾಗಬಹುದು. (10) ಅತೀತಕಾರ್ಯವು ಈಗ ಕೂಡುವುದಿಲ್ಲ ಎಂದು ಹೇಳಕೂಡದು. ಹಾಗೆಯೇ ಇಷ್ಟ ಸಾಧನವೂ ಹೇಳಲು ಶಕ್ಯವಾಗುತ್ತದೆ. ಇಷ್ಟಸಾಧನತ್ವಜ್ಞಾನದಿಂದ ಕಾರ್ಯತ್ವಜ್ಞಾನವು ಎಂದಂಗೀಕರಿಸುವವರಿಗೂ ಅತೀತ ಇಷ್ಟಸಾಧನಾದಿಗಳಲ್ಲಿ ವ್ಯಭಿಚಾರವು ಉಂಟೇ ಉಂಟು. (11) ಅನಿಷ್ಟಪರಿಹಾರ ವಿಷಯದಲ್ಲಿಯೂ ಪ್ರವೃತ್ತಿಯು ಕಂಡಪ್ರಯುಕ್ತ ಇಷ್ಟಸಾಧನದಲ್ಲಿಯೇ ಪ್ರವೃತ್ತಿಯು ಸರಿಯಲ್ಲ ಎಂದು ಹೇಳಕೂಡದು. ಅನಿಷ್ಟವು ಇಷ್ಟಕ್ಕೆ ಪ್ರತಿಬಂಧಕವಾಗಿರುವುದ ರಿಂದ ಅನಿಷ್ಟಪರಿಹಾರವೂ ಇಷ್ಟಸಾಧನವೇ ಆಗಿದೆ. (12) ಮದ್ಯಪಾನಾದಿಗಳೂ ತಾತ್ಕಾಲಿಕ ಇಷ್ಟಸಾಧನಗಳಾದಾಗ್ಯೂ ಮಹತ್ತಾದ ಅನಿಷ್ಟಕ್ಕೆ ಸಾಧನಗಳಾಗಿರುವುದರಿಂದ ಅವುಗಳು ಕಾರ್ಯ ಗಳಲ್ಲ. ಆದಕಾರಣ ಇಷ್ಟವೂ ಇಷ್ಟಸಾಧನವೂ ಕಾರ್ಯವೆನ್ನಿಸುತ್ತದೆ. ಹೀಗಾದರೆ ಇಷ್ಟದೇವತೆ ಯಾದ ಶ್ರೀ ಹರಿಯೇ ಮುಖ್ಯೇಷ್ಟಸಾಧನನು. (13) ಶುದ್ಧಾಂತಃಕರಣವುಳ್ಳವಂಗೆ ಸರ್ವವೇದ ಪ್ರತಿಪಾದ್ಯನಾದ ಶ್ರೀ ಹರಿಯೇ ಮುಖ್ಯೇಷ್ಟನಾಗಲಿಕ್ಕೆ ಅರ್ಹನಾಗಿರುತ್ತಾನೆ. (14) 'ತದೇತ ತ್ಪ್ರೇಯಃ ಪುತ್ರಾತ್ಪ್ರೇಯೋ ವಿತ್ತಾತ್ಪ್ರೇಯೋಽನ್ಯಸ್ಮಾಚ್ಚ ಸರ್ವಸ್ಮಾದಂತರತರಂ ಯದಯಮಾತ್ಮಾ' (ಬೃಹ. ೩. ೨. ೫.) ಇದುಮೊದಲಾದ ಶ್ರುತಿಗಳಿಂದಲೂ "**ನನ್ವದ್ಧಾ ಮಯಿ ಕುರ್ವಂತಿ ಕುಶಲಾಃ ಸ್ವಾತ್ಮದರ್ಶನಾಃ । ಅಹೈತುಕ್ಯವ್ಯವಹಿತಾಂ ಭಕ್ತಿಮಾತ್ಮಪ್ರಿಯೇ ಯಥಾ ॥ ಪ್ರಾಣಬುದ್ಧಿಮನಃಖಾತ್ಮ ದೇಹಾಪತ್ಯಧನಾದಯಃ । ಯತ್ಸಂಪರ್ಕಾತ್ಪ್ರಿಯಾ ಆಸನ್ ತತಃ ಕೋ ನ್ವಪರಃ ಪ್ರಿಯಃ**" ॥ ಇತ್ಯಾದಿ ಭಾಗವತವಾಕ್ಯಗಳಿಂದಲೂ ಶ್ರೀ ಹರಿಯೇ ಇಷ್ಟನೆಂದು ಸಿದ್ಧನಾಗಿದ್ದಾನೆ. ಆದಕಾರಣ ಆಕಾಂಕ್ಷಾ ಯೋಗ್ಯತಾ ಸನ್ನಿಧಿ ಇವುಗಳ ಸಾಮರ್ಥ್ಯ ದಿಂದ ಶ್ರೀ ಪರಮಾತ್ಮನೇ ಇಷ್ಟನು, ವೇದಾರ್ಥನು. (15) ಹಾಗಾದರೆ ವ್ಯುತ್ಪತ್ತಿವಶದಿಂದಲೇ ವಾಕ್ಯಾರ್ಥಜ್ಞಾನವು. ವ್ಯುತ್ಪತ್ತಿಯಾದರೂ ವೃದ್ಧರ ವ್ಯವಹಾರದಿಂದ ಕಾರ್ಯದಲ್ಲಿಯೇ ಕೂಡು ತ್ತದೆ. ಆದಕಾರಣ ವಾಕ್ಯವು ಸಿದ್ಧಾರ್ಥವನ್ನು ತಿಳಿಸಿಕೂಡುತ್ತದೆ ಎನ್ನುವುದು ಹೇಗೆ ಕೂಡು ತ್ತದೆ ಎಂದರೆ— ಶಬ್ದಗಳಿಗೆ ಇಷ್ಟದಲ್ಲಿಯೇ ವ್ಯುತ್ಪತ್ತಿಯನ್ನು ಅಂಗೀಕರಿಸಬೇಕು. (16) 'ಅತ್ರಪೂಪಾನ್ ತವ ಭ್ರಾತಾ' ಇತ್ಯಾದಿ ವಾಕ್ಯಗಳನ್ನು ಪ್ರಯೋಗಿಸುವಾಗ ಆಪಾಪೋದ್ವಾಪ ಗಳಿಂದ ಪದಾರ್ಥಗಳು ವರ್ತಮಾನಗಳಾಗಿರುವುದರಿಂದಲೂ, ಅಂಗುಲ್ಯಾದಿಗಳ ನಿರ್ದೇಶ ದಿಂದಲೂ ಆಕಾಂಕ್ಷಾದಿಗಳ ಸಾಮರ್ಥ್ಯದಿಂದಲೂ ಬಾಲಕನಿಗೆ ವ್ಯುತ್ಪತ್ತಿಯು ದೃಷ್ಟವಾಗಿದೆ. 'ಗಾಮಾನಯ' ಇತ್ಯಾದಿ ಲಿಙಾದಿಯುಕ್ತವಾಕ್ಯಗಳಲ್ಲಿ ವ್ಯುತ್ಪತ್ತಿಯು ಕೂಡುವುದಿಲ್ಲ. 'ಗಾಮಾ ನಯತಿ' ಇತ್ಯಾದಿಗಳಲ್ಲಿಯೇ ಹಿಂದೆ ಹೇಳಿದಪ್ರಕಾರ ವ್ಯುತ್ಪತ್ತಿಯು ಕೂಡುತ್ತದೆ. ಇದಕ್ಕಾಗಿ ಮುಂದೆ ಗೋವನ್ನು ತರುವಪರ್ಯಂತ ನಿರೀಕ್ಷಣಮಾಡಬೇಕಾದ ಆಯಾಸವು ಬೇಕಾಗಿಲ್ಲ. ವರ್ತಮಾನಾರ್ಥಕ ಆಖ್ಯಾತಪದದಲ್ಲಿ ವ್ಯುತ್ಪನ್ನನಾಗಿ ತಿಳಿಯಲ್ಪಟ್ಟ ಶಕ್ತಿಯುಳ್ಳ ಗೌಃ ಇತ್ಯಾದಿ ಪದಗಳ ಸಮಭಿವ್ಯಾಹಾರದಿಂದ 'ಆನಯ' ಇದುಮೊದಲಾದ ಭವಿಷ್ಯದರ್ಥವುಳ್ಳ ಆಖ್ಯಾತಪದ ಗಳಲ್ಲಿ ವೃದ್ಧರ ವ್ಯವಹಾರದಿಂದ '**ಗಾಮಾನಯ**' ಇದುಮೊದಲಾದ **ವಾಕ್ಯವನ್ನು ಕೇಳಿದವನಾಗಿ, ಉತ್ತಮವೃದ್ಧನ ಹೇಳಿಕೆಪ್ರಕಾರ ಮಧ್ಯಮವೃದ್ಧನು ತರತಕ್ಕ ಗವಾದಿಗಳನ್ನು ನೋಡಿ ಆ ಮೇಲೆ ವ್ಯುತ್ಪತ್ತಿಯನ್ನು ಹೊಂದುವನು. ಹೀಗಯೇ 'ಗಾಮಾನಯ' ಗೋವನ್ನು ತಾ, ಇತ್ಯಾದಿಗಳಲ್ಲಿ**

ಪ್ರವೃತ್ತಿಜ್ಞಾನವೂ, ಪುತ್ರಸ್ತೇ ಜಾತಃ=ನಿನಗೆ ಮಗನು ಹುಟ್ಟಿದನು ಇತ್ಯಾದಿಗಳಲ್ಲಿ ಹರ್ಷ ಜ್ಞಾನವೂ, ಪುತ್ರಸ್ತೆ ಮೃತಃ=ನಿನ್ನ ಮಗನು ಸ್ವರ್ಗಸ್ಥನಾದನು ಇತ್ಯಾದಿಗಳಲ್ಲಿ ಶೋಕವೂ, ಸರ್ಪೋಽಸ್ತಿ=ಹಾವು ಇದೆ ಇತ್ಯಾದಿಗಳಲ್ಲಿ ಭಯಜ್ಞಾನವೂ, ತೃಣಮಸ್ತಿ=ಹುಲ್ಲು ಇದೆ ಇತ್ಯಾದಿ ಗಳಲ್ಲಿ ಉದಾಸೀನ ಬುದ್ಧಿಯೂ ಇಟ್ಟುಕೊಳ್ಳಬೇಕು. ಅಂತೂ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯಾದ ಮೇಲೆ ಆಗತಕ್ಕದಾದಪ್ರಯುಕ್ತ ಕಾರ್ಯಕ್ಕೆ ಅಮುಖ್ಯಾರ್ಥತ್ವವನ್ನು ಅಂಗೀಕರಿಸಬೇಕು. (17) ಮತ್ತು ಎಲ್ಲಾ ವಸ್ತುಗಳೂ ಆಕಾಂಕ್ಷಾದಿಗಳ ವಶದಿಂದ ಸುಬಂತ ತಿಙಂತ ಪದಗಳ ಸಮೂಹದಿಂದ ವರ್ತಮಾನಕಾಲ ಸಂಬದ್ಧಗಳಾಗಿ, ಅತೀತಕಾಲ ಸಂಬದ್ಧಗಳಾಗಿ, ಭವಿಷ್ಯತ್ಕಾಲ ಸಂಬದ್ಧಗಳಾಗಿ ತಿಳಿಯುತ್ತವೆ. ಯಾವ ಕಾರಣದಿಂದ ತರತಕ್ಕ ಗವಾದಿಗಳನ್ನು ನೋಡಿಕೊಂಡು ಅದರಿಂದ ಯುಕ್ತಗಳಾದ 'ಆನಯ' ಇತ್ಯಾದಿಗಳಲ್ಲಿ ವ್ಯುತ್ಪನ್ನನಿಗೆ ಆ ಮೇಲೆ ಆಕಾಂಕ್ಷಾವಶ ದಿಂದ 'ಆನಯಿಷ್ಯತಿ'ತರುವನು ಇದುಮೊದಲಾದ ಭವಿಷ್ಯದರ್ಥಗಳಲ್ಲಿ ವ್ಯುತ್ಪತ್ತಿಯಾಗುತ್ತದೋ, ಆದಪ್ರಯುಕ್ತ ವರ್ತಮಾನಾರ್ಥಗಳಲ್ಲಿ ಪ್ರಥಮತಃ ವ್ಯುತ್ಪತ್ತಿಯು. ಆ ಮೇಲೆ ಅತೀತಪದಾರ್ಥ ಗಳಲ್ಲಿ, ಆ ಮೇಲೆ ಭವಿಷ್ಯದರ್ಥವುಳ್ಳ ಪದಗಳಲ್ಲಿ ವ್ಯುತ್ಪತ್ತಿಯು. ಆದುದರಿಂದ ಕಾಲತ್ರಯಾವ ಚ್ಛಿನ್ನವೇ ಶಬ್ದದಿಂದ ತಿಳಿಯಲ್ಪಡುವುದು. (18) ಮತ್ತು ಎಲ್ಲಾ ಪ್ರಾಣಿಗಳೂ ಇಷ್ಟವನ್ನೂ ಆದಕ್ಕಾಗಿ ಅದರ ಸಾಧನವನ್ನೂ ಇಚ್ಛಿಸುವರು. ಕೇವಲ ವ್ಯಾಪಾರವನ್ನು ಇಚ್ಛಿಸುವುದಿಲ್ಲ. ಆದುದರಿಂದ ಕಾರ್ಯವನ್ನು ವಿಧಾನಮಾಡದರೆ ಅನಾಕಾಂಕ್ಷಿತವನ್ನು ಹೇಳಿದಂತೆಯೇ ಆಗು ವುದು. (19) ಇಷ್ಟಸಾಧನವು ಅಪರೋಕ್ಷವಾಗಲೀ ಪರೋಕ್ಷವಾಗಲೀ ಜ್ಞಾನವೇ. ಕರ್ಮವು ಸಾಕ್ಷಾತ್ ಅಲ್ಲ. ವ್ಯಾಪಾರವು ಜ್ಞಾನಕ್ಕೆ ಉಪಯುಕ್ತವಾಗುವುದು. ಉದಾ– ಚರ್ವಣ ನಿಗರಣ ಮೊದಲಾದ ವ್ಯಾಪಾರವು ರಸಜ್ಞಾನಕ್ಕೆ ಉಪಯುಕ್ತವಾಗುವುದು. ರಸಜ್ಞಾನವಾದರೂ ಸುಖಾನು ಭವಕ್ಕೆ ಕಾರಣವಾಗುವುದು. ಹೇಗೆಂದರೆ— 'ಪುತ್ರಸ್ತೇ ಜಾತಃ' ನಿನಗೆ ಮಗನು ಹುಟ್ಟಿದನು ಎನ್ನುವ ವಾಕ್ಯದಿಂದ ಉಂಟಾಗತಕ್ಕ ಪರೋಕ್ಷಜ್ಞಾನದಿಂದಲೂ ಸುಖವು ದೃಷ್ಟವಾಗಿದೆ. ಇಂತಹ ವಾಕ್ಯಗಳಲ್ಲಿಯೂ ವ್ಯುತ್ಪತ್ತಿಯು ಕೂಡುತ್ತದೆ. 'ನಿನಗೆ ಮಗನು ಹುಟ್ಟಿದನು' ಎಂದು ಯಾರೋ ಒಬ್ಬನು ಹೇಳಿದ ಮಾತನ್ನು ಕೇಳಿ ಸಂತೋಷಗೊಂಡ ತಂದೆಯ ಮುಖವಿಕಾಸಾದಿ ಗಳಿಂದ ಹರ್ಷವನ್ನು ಅನುಮೇಯಿಸಿ, ಅದಕ್ಕೆ ನಿಮಿತ್ತವು ಪುತ್ರೋತ್ಪತ್ತಿ ಹೊರತು ಬೇರೆ ಯಾವುದೂ ಅಲ್ಲವೆಂದು ತಿಳಿಯುತ್ತಾ ಪುತ್ರೋತ್ಪತ್ತಿಯೆಂದೇ ನಿಶ್ಚಯಿಸುತ್ತಾನೆ. (20) ಹೀಗೆಯೇ ಆವಾಪೋದ್ವಾಪಗಳಿಂದ ಈ ವಾಕ್ಯದಲ್ಲಿರತಕ್ಕ ಪುತ್ರಾದಿ ಪದಗಳ ಅರ್ಥ ವನ್ನು ತಿಳಿಯುತ್ತಾನೆ. 'ಪಿಕಃ ಕೋಕಿಲಃ' ಎನ್ನುವಲ್ಲಿ ಪ್ರಸಿದ್ಧಪದದ ಸಮಭಿವ್ಯಾಹಾರ ದಿಂದ ಅಪ್ರಸಿದ್ಧವಾದ ಪಿಕ ಶಬ್ದದ ಅರ್ಥವು ತಿಳಿದಿರುವುದರಿಂದ ಕಾರ್ಯಕ್ಕೆ ಪ್ರವೇಶ ವಿಲ್ಲದೇನೇ ಪ್ರಸಿದ್ಧಪದದ ಸಮಭಿವ್ಯಾಹಾರದಿಂದ ಅಪ್ರಸಿದ್ಧ ಪದದ ಅರ್ಥವು ತಿಳಿಯುತ್ತದೆ. ಆದಕಾರಣ, ಸರ್ವವಾಕ್ಯಗಳಿಗೂ ವ್ಯುತ್ಪತ್ತಿಬಲದಿಂದಲೇ ಸಿದ್ಧಪರತ್ವವು ಸಿದ್ಧವಾಯಿತು. (21) ಮತ್ತು ಎಲ್ಲಾ ವೇದಗಳಿಗೂ ಕೇವಲ ಕಾರ್ಯಪರತ್ವವನ್ನೇ ಹೇಳಿದರೆ ಸ್ರುಕ್‌ಸ್ರುವ ವಹ್ನ್ಯಾದಿ ಕಾರಕಗಳಲ್ಲಿ ತಾತ್ಪರ್ಯವಿಲ್ಲವೆಂದಾಗಬೇಕಾಗುವುದು. ತಾತ್ಪರ್ಯವಿಲ್ಲದಿದ್ದರೆ ಭಸ್ಮಹೋಮಾದಿರೂಪವಾದ ಯಾವುದಾದರೊಂದು ಕರ್ಮವೂ ಯಜ್ಞವಾಗಬೇಕಾಗುವುದು. ಯಾಗ ಮೊದಲಾದ ಕಾರ್ಯಾರ್ಥವಾಗಿ ಸ್ರುಕ್‌ಸ್ರುವಾದಿಗಳಲ್ಲಿ ತಾತ್ಪರ್ಯವದೆ ಎಂದು ಹೇಳುವುದಾದರೆ ಉಪಾಸನಾವಾಕ್ಯಗಳಲ್ಲಿಯೂ, ಉಪಾಸನಾರ್ಥವಾಗಿ ಬ್ರಹ್ಮನಲ್ಲಿಯೂ, ಸತ್ಯ ಕಾಮತ್ವ ಮೊದಲಾದ ಆತನ ಗುಣಗಳಲ್ಲಿಯೂ ತಾತ್ಪರ್ಯವನ್ನು ಒಡಂಬಡಲೇಬೇಕು. (22) ಮತ್ತು ವಿಧಿಗೆ ಉಪಯುಕ್ತವಾದ ಸಿದ್ಧಾರ್ಥದಲ್ಲಿ ತಾತ್ಪರ್ಯವನ್ನು ಅವಶ್ಯವಾಗಿಯೂ ಅಂಗೀ

ಕರಿಸಬೇಕು. ವೇದಾಂತ ವಾಕ್ಯಗಳು ಉಪಾಸನಾಖ್ಯ ಕಾರ್ಯದಲ್ಲಿ ಅಧಿಕೃತವಾದ ವಿಶೇಷಣಭೂತಫಲವಾಗಿರುವುದರಿಂದ ಕಾರ್ಯೋಪಯುಕ್ತವಾಗಿಯೇ ಎಲ್ಲವನ್ನೂ ತಿಳಿಸುತ್ತವೆ. ಹೇಗೆಂದರೆ— 'ಬ್ರಹ್ಮವಿದಾಪ್ನೋತಿ ಪರಂ' ಎನ್ನುವಲ್ಲಿ ಬ್ರಹ್ಮೋಪಾಸನಾಖ್ಯ ಕಾರ್ಯಕ್ಕೆ ಫಲವಾಗಿ ಬ್ರಹ್ಮನ ಪ್ರಾಪ್ತಿಯು ಪರಬ್ರಹ್ಮನನ್ನು ಹೊಂದಲಿಚ್ಛಿಸುವವನು ಬ್ರಹ್ಮನನ್ನು ತಿಳಿಯಬೇಕೆಂದು ಶ್ರುತವಾಗಿದೆ. ಇಲ್ಲಿ ಪ್ರಾಪ್ಯವಾಗಿ ತೋರುವ ಬ್ರಹ್ಮಸ್ವರೂಪವು ಅವನಲ್ಲಿ ವಿಶೇಷಣವಾದುದೆಲ್ಲವೂ ಕಾರ್ಯೋಪಯುಕ್ತವಾಗಿಯೇ ಸಿದ್ಧವಾಗುತ್ತದೆ. ಜಗಸ್ಸೃಷ್ಟಿ, ಸಂಹರ್ತೃತ್ವ ಮೊದಲಾದುದೆಲ್ಲವೂ ಅದರಲ್ಲಿ ಅಂತರ್ಗತವಾದುದೇ. (23) ಹೀಗಾದರೆ ಮಂತ್ರ ಅರ್ಥವಾದಗಳಲ್ಲಿರತಕ್ಕವುಗಳೂ ವಿಧಿಶೇಷಗಳೆಂದೇ ಸಿದ್ಧಗಳಾಗುತ್ತವೆ ಹೇಗೆಂದರೆ, ಎಲ್ಲಾ ಅರ್ಥವಾದಭಾಗವು ಆರಾಧ್ಯದೇವತೆಗೆ ಶ್ರೇಷ್ಠಗಳಾದ ಸಾವಿರಾರು ಗುಣಗಳನ್ನು ಹೇಳುತ್ತಾ ಯಾಗಾದಿರೂಪ ಕರ್ಮದಲ್ಲಿ ಪ್ರಾಶಸ್ತ್ಯ ಬುದ್ಧಿಯನ್ನು ಹುಟ್ಟಿಸುತ್ತದೆ. ಗುಣಗಳಿಲ್ಲದಿದ್ದರೆ ಪ್ರಾಶಸ್ತ್ಯಬುದ್ಧಿಯೇ ಹುಟ್ಟಲಾರದು. ಹೀಗೆ ಕರ್ಮದಲ್ಲಿ ಪ್ರಾಶಸ್ತ್ಯಬುದ್ಧಿಗಾಗಿ ಗುಣಗಳು ಇವೆ ಎಂದೇ ತಿಳಿಸುತ್ತವೆ. ಇದೇ ಕ್ರಮದಿಂದ ಎಲ್ಲಾ ಮಂತ್ರ ಅರ್ಥವಾದಗಳಲ್ಲಿರುವ ಅರ್ಥಗಳು ಸಿದ್ಧಗಳಾಗುತ್ತವೆ. (24) ಮತ್ತು ಸಿದ್ಧಾರ್ಥದಲ್ಲಿ ಶಬ್ದಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸದಿದ್ದರೆ 'ಬ್ರಾಹ್ಮಣೋ ನ ಹಂತವ್ಯಃ' ಇದುಮೊದಲಾದ ನಿಷೇಧವಾಕ್ಯಗಳಿಗೆ ಅಪ್ರಾಮಾಣ್ಯವು ಬರಬೇಕಾಗುವುದು. ನಿಷೇಧವು ಅಕಾರ್ಯವಾಗಿದೆ. ಅಲ್ಲಿಯೂ ಯಾವುದಾದರೊಂದು ಕಾರ್ಯವನ್ನು ಅಂಗೀಕರಿಸಿದರೆ 'ನ ಹಂತವ್ಯಃ' ಎನ್ನುವಲ್ಲಿದ್ದ ನಞಿಗೆ * ಪರ್ಯುದಾಸವೇ ಅರ್ಥವಾಗಬೇಕಾಗುವುದು. ಪ್ರತಿಷೇಧಾರ್ಥವು ಬಾರದೆ ಹೋಗುವುದು. ಅಂತೂ ನಿಷೇಧಶಾಸ್ತ್ರವೇ ಇಲ್ಲವೆಂದಾಗಬೇಕಾಗುವುದು. (25) ಮತ್ತು ಶಬ್ದಗಳಿಗೆ ಕಾರ್ಯದಲ್ಲಿ ಶಕ್ತಿಹೇಳಿದರೆ ಕಾರಕ ಪದಗಳಿಗೆ ವೈಯರ್ಥ್ಯವು. ಕಾರ್ಯಾನ್ವಿತದಲ್ಲಿ ಶಕ್ತಿ ಹೇಳಿದರೆ ಕಾರ್ಯಕ್ಕೆ ಕಾರ್ಯದಿಂದ ಅನ್ವಯವು ಕೂಡದಿರುವುದರಿಂದ ಕಾರ್ಯಪದಕ್ಕೆ ವೈಯರ್ಥ್ಯವು ಬರಬೇಕಾಗುವುದು. ಸಿದ್ಧಾರ್ಥದಲ್ಲಿ ಶಕ್ತಿಯನ್ನು ಒಡಂಬಟ್ಟರೆ ಸಿದ್ಧಪದಾರ್ಥಗಳಿಗೇನೇ ಪರಸ್ಪರವಾಗಿ ಅನ್ವಯವು ಕೂಡುವುದರಿಂದ ಯಾವುದೂ ಬಾಧಕವಿಲ್ಲ. ಆದಕಾರಣ ಕಾರ್ಯಾನುಪ್ರವೇಶವಿಲ್ಲದಿದ್ದರೂ ಸಿದ್ಧಾರ್ಥವನ್ನು ತಿಳಿಸಿಕೊಡುತ್ತದೆನ್ನುವುದು ಕೂಡುವುದರಿಂದ ಸರ್ವ ವೇದಗಳ ಪದವೂ ಮುಖ್ಯ ತಾತ್ಪರ್ಯದಿಂದ ಬ್ರಹ್ಮನನ್ನು ತಿಳಿಸಿಕೊಡುತ್ತದೆನ್ನುವುದು ಯುಕ್ತವು. ಕರ್ಮಕಾಂಡವು ಪರಮಾತ್ಮನ ಜ್ಞಾನಕ್ಕೆ ಅಂಗಭೂತವಾದ ಕರ್ಮವನ್ನು ಪ್ರತಿಪಾದಿಸುತ್ತಾ ಶ್ರೀ ಹರಿಯಲ್ಲಿಯೇ ತಾತ್ಪರ್ಯವುಳ್ಳದ್ದು. ಕರ್ಮದಲ್ಲಿಯೇ ತಾತ್ಪರ್ಯವನ್ನು ಒಡಂಬಟ್ಟರೆ ವಾಕ್ಯಭೇದವು ಬರಬೇಕಾಗುವುದು, (26) ಮತ್ತು ಸರ್ವ ವೇದಗಳಿಂದ ಅನಂತಗುಣಗಳುಳ್ಳವನೆಂದು ತಿಳಿಯಲ್ಪಟ್ಟ ಶ್ರೀ ಹರಿಯೇ ಮೋಕ್ಷರೂಪ ಮಹಾಫಲವನ್ನು ಕೊಡತಕ್ಕವನಾದ

---

* ಪರ್ಯುದಾಸಃ ಸ ವಿಜ್ಞೇಯೋ ಯತ್ರೋತ್ತರಪದೇನ ನಞ್ । ಪ್ರತಿಷೇಧಸ್ಸ ವಿಜ್ಞೇಯಃ ಕ್ರಿಯಯಾ ಸಹ ಯತ್ರ ನಞ್ ॥ (೧) ಯಾವ ಸ್ಥಳದಲ್ಲಿ ನಞ್ ಕ್ರಿಯೆ (ಆಖ್ಯಾತಾರ್ಥ)ಯಿಂದ ಬೇರೆಯಾದುದನ್ನು ಹೇಳುವ ಪದದಿಂದ ಸಂಬಂಧಿಸಲ್ಪಡುತ್ತದೋ ಅಲ್ಲಿ ಪರ್ಯುದಾಸವು. (೨) ಎಲ್ಲಿ ಕ್ರಿಯೆಯಿಂದ ಕೂಡಿಕೊಂಡು ನಞ್ ಸಂಬಂಧಿಸಲ್ಪಡುತ್ತದೋ ಅಲ್ಲಿ ಪ್ರತಿಷೇಧವು. ಉದಾ=(೧) 'ನೇಕ್ಷೇತೋದ್ಯಂತಮಾದಿತ್ಯಂ' ಉದಯಿಸಿಕೊಂಡು ಬರತಕ್ಕ ಸೂರ್ಯನನ್ನು ನೋಡಲಾರೆನೆಂದು ಅನೀಕ್ಷಣ ಸಂಕಲ್ಪದಿಂದ ಪಾಪಕ್ಷಯವನ್ನು ಮಾಡತಕ್ಕದು. ಅಂತೂ ಪಾಪಕ್ಷಯಕ್ಕಾಗಿ ಸಂಕಲ್ಪವನ್ನು ಮಾಡತಕ್ಕದು. (೨) ನ ಸುರಾಂ ಪಿಬೇತ್=ಮದ್ಯವನ್ನು ಕುಡಿಯಬಾರದು. ಇತ್ಯಾದಿ.

ಪ್ರಯುಕ್ತ ಆ ಹರಿಯಲ್ಲಿಯೇ ಕರ್ಮಕಾಂಡಕ್ಕೆ ಪರಮ ತಾತ್ಪರ್ಯವೆನ್ನುವುದು ಯುಕ್ತವು. ಅಲ್ಪಫಲಸಾಧನರೂಪವಾದ ಕರ್ಮದಲ್ಲಿ ಬ್ರಹ್ಮಕಾಂಡಕ್ಕೆ ತಾತ್ಪರ್ಯವು ಯುಕ್ತವಲ್ಲ. ಆದ ಕಾರಣ ಪದಾರ್ಥಗಳಲ್ಲಿಯೂ, ವಾಕ್ಯಾರ್ಥಗಳಲ್ಲಿಯೂ ತಾತ್ಪರ್ಯವನ್ನು ಅಂಗೀಕರಿಸತಕ್ಕದು. (27) ಮತ್ತು ಶಬ್ದಗಳಿಗೆ ವಾಕ್ಯೈಕವಾಕ್ಯತ್ವವನ್ನು ಅಂಗೀಕರಿಸತಕ್ಕದು. 'ವ್ರೀಹಿಭಿರ್ಯಜೇತ' ಇದುಮೊದಲಾದ ವಾಕ್ಯಗಳಲ್ಲಿ ಪ್ರತಿಪಾದಿತಗಳಾದ ಯಜ್ಞಾದಿಗಳು 'ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾ ನಾಶಕೇನ' ಇತ್ಯಾದಿಗಳಿಂದ ಪರಮಾತ್ಮನ ಜ್ಞಾನಕ್ಕೆ ಅಂಗಗಳೆಂದು ಹೇಳಲ್ಪಟ್ಟವೆ. (28) 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವಲ್ಲಿ ಬ್ರಹ್ಮಪದದಿಂದ ಸತ್ಯಾದಿ ಪದಗಳಿಗೆ ಸಮಸ್ತಾನ್ವಯವೂ, ವ್ಯಸ್ತಾನ್ವಯವೂ ಸಿದ್ಧಿಸುತ್ತದೆ. ಅವಾಂತರ ವಾಕ್ಯಗಳು ಹೆಚ್ಚು ಇದ್ದರೂ ಮಹಾವಾಕ್ಯವು ಒಂದೇ ಆದುದರಿಂದ ವಾಕ್ಯಭೇದದೋಷಕ್ಕೆ ಅವಕಾಶವು ಬರಲಾರದು. ಆದಪ್ರಯುಕ್ತ ಸಿದ್ಧಾರ್ಥದಲ್ಲಿಯೂ ತಾತ್ಪರ್ಯವನ್ನು ಅಂಗೀಕರಿಸಿದರೆ ಯಾವದೋಷಕ್ಕೂ ಅವಕಾಶವಿರುವುದಿಲ್ಲ. (29) ಯಾವ ಕಾರಣದಿಂದ ಜ್ಞಾನವೇ ಇಷ್ಟಕ್ಕೆ ಸಾಧನವೋ, ಕರ್ಮವು ಜ್ಞಾನಕ್ಕೆ ಸಾಧನವೋ ಆದಕಾರಣ 'ವಿವಿದಿಷಂತಿ ಯಜ್ಞೇನ ದಾನೇನ' ಎನ್ನುವ ಶ್ರುತಿಯಿಂದ ಯಾಗಾದಿ ಕರ್ಮಗಳು ಶ್ರೀ ಹರಿಯ ಜ್ಞಾನೋಪಯುಕ್ತಗಳೇ. ಜ್ಞಾನವೇ ಆತನ ಪ್ರಸಾದವನ್ನು ಹುಟ್ಟಿಸುತ್ತದೆ. ಆ ಪ್ರಸಾದವು ಜಿಜ್ಞಾಸಾ (ವಿಚಾರ)ದಿಂದಲೇ ಆಗುತ್ತದೆ. ಕರಣಭೂತವಾದ ವೇದಕ್ಕೆ ಜಿಜ್ಞಾಸಾರೂಪವಾದ ಇತಿಕರ್ತವ್ಯತ್ವ (ಸಹಕಾರಿ) ವಿಲ್ಲದಿದ್ದರೆ ಜ್ಞಾನಜನಕತ್ವವು (ಹುಟ್ಟಿಸುವಿಕೆಯು) ಕೂಡಲಾರದು. ಆದಪ್ರಯುಕ್ತ 'ತದ್ವಿಜಿಜ್ಞಾಸಸ್ವ' ಎಂದು ಪ್ರಮಾಣಭೂತವಾದ ಶ್ರುತಿಯಿಂದ ವಿಹಿತವಾಗಿರುವುದರಿಂದ ಬ್ರಹ್ಮಜಿಜ್ಞಾಸಾವನ್ನು ಮಾಡತಕ್ಕದೇ. ಹೀಗೆ ಅತಃ ಶಬ್ದಕ್ಕೆ ಸಿದ್ಧಾರ್ಥಪರತ್ವರೂಪವಾದ ೩ ನೇ ಅರ್ಥವು ಸಮರ್ಥಿತವಾಯಿತು.

ಕಾರ್ಯತಾವಾದವು ಸಮಾಪ್ತವಾಯಿತು.



## ಪ್ರಾಮಾಣ್ಯವಾದವು.

ಶಬ್ದಗಳಿಗೆ ಅಪ್ರಾಮಾಣ್ಯವನ್ನು ಹೇಳುವ ಬೌದ್ಧರ ಮತವನ್ನು ಅನುವಾದಮಾಡುತ್ತಾರೆ-

**ನ್ಯಾಯಸುಧಾ**—(1) ಹಾಗಾದರೆ ಪ್ರಮಾಕರಣವೇ ಪ್ರಮಾಣವು. ಶಬ್ದವಿದ್ದರೂ ವ್ಯುತ್ಪತ್ತಿಯಿಲ್ಲದವರಿಗೆ ಯಥಾರ್ಥಜ್ಞಾನವುಂಟಾಗದೆ ಇದ್ದುದರಿಂದ ಶಬ್ದವು ಪ್ರಮಾಣವಲ್ಲ. (ಅಂತೂ ಶಬ್ದಃ ನ ಪ್ರಮಾಣಮಿತಿ ವ್ಯವಹರ್ತವ್ಯಃ ಪ್ರಮಿತ್ಯಜನಕತ್ವಾತ್=ಶಬ್ದವು ಪ್ರಮಾಣವೆಂದು ವ್ಯವಹರಿಸಕೂಡದು, ಯಥಾರ್ಥಜ್ಞಾನವನ್ನು ಹುಟ್ಟಿಸದೆಯಿದ್ದುದರಿಂದ, ಎನ್ನುವ ಅನುಮಾನವು ಸೂಚಿತವಾಯಿತು.) ವಿಷಯವಿರತಕ್ಕದೇ ಪ್ರಮಾಣವಾಗುವುದು. ವಿಷಯವು ೧ ಪರೋಕ್ಷ, ೨ ಅಪರೋಕ್ಷ ಎಂತ ಎರಡು ವಿಧವು. ಅವುಗಳಲ್ಲಿ ೨ ಅಪರೋಕ್ಷವು ಪ್ರತ್ಯಕ್ಷಕ್ಕೆ ವಿಷಯವು. ೧ ಪರೋಕ್ಷವು ಅನುಮಾನಕ್ಕೆ ವಿಷಯವು. ಆದಪ್ರಯುಕ್ತ ಯುಕ್ತವಾದ ವಿಷಯವೇ ಇಲ್ಲದಿರುವುದರಿಂದ ಶಬ್ದವು ಪ್ರಮಾಣವಲ್ಲ. (2) ಮತ್ತು ಯಾವುದು ವಿಜ್ಞಾನಾತ್ಮಕವೋ ಅದು ಪ್ರಮಾಣವು ಧೂಮಜ್ಞಾನದಂತೆ. ಶಬ್ದವು ವಿಜ್ಞಾನರೂಪವಾಗದಿರುವುದರಿಂದ ಪ್ರಮಾಣವಲ್ಲ. (3) 'ಯತ ಪ್ರಮಾಣಂ ತತ್ ಬಾಹ್ಯಕರಣಪ್ರತ್ಯಕ್ಷಂ ನ ಭವತಿ ಯಥಾ ವಿಜ್ಞಾನಂ' ಯಾವುದು ಪ್ರಮಾಣವೋ

ಅದು ಬಹಿರಿಂದ್ರಿಯಕ್ಕೆ ಗೋಚರವಾಗುವುದಿಲ್ಲ, ವಿಜ್ಞಾನದಂತೆ. ಶಬ್ದವಾದರೂ ಶ್ರೋತ್ರ ರೂಪವಾದ ಬಹಿರಿಂದ್ರಿಯಕ್ಕೆ ಗೋಚರವಾಗಿರುವುದರಿಂದ ಬಹಿರಿಂದ್ರಿಯಕ್ಕೆ ಗೋಚರವಾದ ಘಟದಂತೆಯೇ ಪ್ರಮಾಣವಲ್ಲ. (ಅಪ್ರಮಾಣವು.) (4) ಮತ್ತು ಶಬ್ದವು ಆಕಾಶವನ್ನು ಆಶ್ರಯಿಸಿ ಕೊಂಡು ಇರತಕ್ಕದಾದಪ್ರಯುಕ್ತ ಆತ್ಮನನ್ನು ಆಶ್ರಯಿಸಿಕೊಂಡು ಇಲ್ಲದಿರುವುದರಿಂದ, ಆತ್ಮ ನನ್ನು ಆಶ್ರಯಿಸದಿರುವ ಘಟದಂತೆಯೇ ಅಪ್ರಮಾಣವು. ಮತ್ತು ಶಬ್ದವು ಆಕಾಶಗುಣವಾಗಿರು ವುದರಿಂದ, ಆಕಾಶಗುಣವಾದ ಆಕಾಶಪರಿಮಾಣದಂತೆಯೇ ಪ್ರಮಾಣವಲ್ಲ. (ಅಪ್ರಮಾಣವು.) (5) ಮತ್ತು ಶಬ್ದವು ಅರ್ಥದಿಂದ ಸಂಬದ್ಧವಾಗಿ ಅರ್ಥವನ್ನು ಬೋಧಿಸುವುದೋ, ಅಸಂಬದ್ಧ ವಾಗಿಯೋ? ಒಂದನೇ ಕಲ್ಪದಲ್ಲಿ ಅರ್ಥದಿಂದ ಸಂಬಂಧವು ೧ ತಾದಾತ್ಮ್ಯ (ಅಭೇದ) ವೋ, ೨ ಸಂಯೋಗವೋ, ೩ ಸಮವಾಯವೋ, (೧) ತಾದಾತ್ಮ್ಯ ಹೇಳಿದರೆ ಬೆಂಕಿಯೆಂಬ ಶಬ್ದವನ್ನು ಹೇಳಿದರೆ ಮುಖವು ಸುಟ್ಟುಹೋಗಬೇಕಾಗುವುದು. ವರ್ತಮಾನ (ಈ ಕಾಲದಲ್ಲಿರತಕ್ಕ) ಶಬ್ದಕ್ಕೆ ಅತೀತವಾದ (ಈ ಕಾಲದಲ್ಲಿ ಇಲ್ಲದಿರುವ) ಅರ್ಥದಿಂದ ತಾದಾತ್ಮ್ಯ ಸಂಬಂಧವನ್ನು ಹೇಳಿದರೆ ಅರ್ಥವೂ ವರ್ತಮಾನವಾಗಬೇಕಾದೀತು. ಅಥವಾ ಶಬ್ದವು ಅತೀತಕಾಲದಲ್ಲಿ ಇದದ್ದು ಆಗಬೇಕಾಗುವುದು. (೨) ಸಂಯೋಗವೆಂದೂ ಹೇಳಕೂಡದು. ಶಬ್ದವು ಗುಣವಾಗಿರುವು ದರಿಂದ ದ್ರವ್ಯವಲ್ಲ. ದ್ರವ್ಯ-ದ್ರವ್ಯಗಳಿಗೇನೇ ಸಂಯೋಗವು ಇರತಕ್ಕದು. ಅಥವಾ ದ್ರವ್ಯ ವೆಂದು ಹೇಳಿದರೂ ಅದು ಮೂರ್ತ (ಪೃಥಿವೀ-ಜಲ-ತೇಜಸ್ಸು-ವಾಯು-ಮನಸ್ಸು) ವೆಂದು ಇಟ್ಟುಕೊಂಡು ಕ್ರಿಯೆಯಿಂದ ಅರ್ಥದ ಸಂಯೋಗ ಹೇಳಿದರೆ ಮಧ್ಯದಲ್ಲಿರುವ ಅರ್ಥಗಳನ್ನೂ ವಿಷಯೀಕರಿಸಬೇಕಾಗುವುದು. ಸರ್ವಗತವೆಂದರೆ ಎಲ್ಲಾ ಅರ್ಥಗಳಿಂದ ಸಂಯೋಗವಿದ್ದುದ ರಿಂದ ಎಲ್ಲಾ ಅರ್ಥಗಳನ್ನೂ ಪ್ರತಿಪಾದಿಸಬೇಕಾಗುವುದು. ಮತ್ತು ಸರ್ವಥಾ ಅತೀತ ಮೇಲೆ ಆಗುವ ವಸ್ತು ಇವುಗಳಿಂದ ಸಂಯೋಗವು ಕೂಡದಿರುವಪ್ರಯುಕ್ತ ಅದನ್ನೂ ಪ್ರತಿಪಾದಿಸದೆ ಇರಬೇಕಾಯಿತು. (೩) ಸಮವಾಯವೆಂದೂ ಹೇಳಕೂಡದು. ಆಕಾಶದ ಗುಣವಾದ ಶಬ್ದಕ್ಕೆ ಘಟವೊದಲಾದ ಬೇರೆ ಅರ್ಥಗಳಿಂದ ಸಮವಾಯವು ಕೂಡಲಾರದು. ಮತ್ತು ಎಲ್ಲಾ ಶಬ್ದಗಳಿಗೆ ಆಕಾಶದಿಂದ ಸಮವಾಯಸಂಬಂಧವಿದ್ದುದರಿಂದ ಆಕಾಶವೇ ಅರ್ಥವಾಗಬೇಕಾಗು ವುದು. ಅಂದರೆ, ಎಲ್ಲಾ ಶಬ್ದಗಳೂ ಆಕಾಶಜ್ಞಾನವನ್ನು ಹುಟ್ಟಿಸಬೇಕಾಗುವವು. ಶಬ್ದವು ದ್ರವ್ಯವೆಂದು ಇಟ್ಟುಕೊಂಡು ಅದು ಮೂರ್ತದ್ರವ್ಯವೆಂದು ಇಟ್ಟುಕೊಂಡರೂ, ಅಮೂರ್ತದ್ರವ್ಯ ವೆಂದು ಇಟ್ಟುಕೊಂಡರೂ ಶಬ್ದಕ್ಕೆ ಘಟಾದಿಗಳಿಂದ ಸಮವಾಯವು ಕೂಡಲಾರದು. (6) ಮತ್ತು ಶಬ್ದವು ಅರ್ಥದಿಂದ ಅಸಂಬದ್ಧವಾಗಿ ಅಂದರೆ, ಸಂಬಂಧವಿಲ್ಲದೆ ಬೋಧಿಸುವುದಾದರೆ ಈ ಶಬ್ದವು ಈ ಅರ್ಥವನ್ನೇ ಬೋಧಿಸಬೇಕೆನ್ನುವಲ್ಲಿ ನಿಯಾಮಕವೇ ಇಲ್ಲದಿರುವುದರಿಂದ ಎಲ್ಲಾ ಶಬ್ದಗಳೂ ಎಲ್ಲಾ ಅರ್ಥಗಳನ್ನು ಬೋಧಿಸಬೇಕಾಗುವುವು. (7) ಮತ್ತು ನದಿಯ ತೀರದಲ್ಲಿ ಐದು ಫಲ ಗಳಿವೆ ಎನ್ನುವ ವಾಕ್ಯವನ್ನು ಆಪ್ತನೂ ಅನಾಪ್ತನೂ ಪ್ರಯೋಗಿಸುವರು. ಅವರು ಪ್ರಯೋಗಿಸಿ ರುವ ಆ ವಾಕ್ಯಗಳಲ್ಲಿ ಏನಾದರೂ 'ವಿಶೇಷವುಂಟೋ' ಇಲ್ಲವೋ, (೧) ವಿಶೇಷವುಂಟೆಂದು ಹೇಳಕೂಡದು. ವಿಶೇಷವು ತೋರಿಬರುವುದಿಲ್ಲ. ಪುರುಷನಲ್ಲಿ ವಿಶೇಷವದೆ ಎಂದರೆ—ಆತನಿಗೆ ವಾಕ್ಯೋಚ್ಚಾರಣದಲ್ಲಿಯೇ ಶಕ್ತಿಯಿರುವುದರಿಂದ ಆತನ ವಾಕ್ಯದಿಂದುಂಟಾಗತಕ್ಕ ಜ್ಞಾನದಲ್ಲಿ ಆ ಪುರುಷನಲ್ಲಿದ್ದ ವಿಶೇಷಕ್ಕೆ ಉಪಯೋಗವಿಲ್ಲ. (೨) ವಿಶೇಷವೇ ಇಲ್ಲದಿದ್ದರೆ ಒಬ್ಬನು ಹೇಳಿದ ವಾಕ್ಯಕ್ಕೆ ಅರ್ಥ ವಿಸಂವಾದವೂ, (ಅಂದರೆ ಅನಾಪ್ತನ ಮಾತನ್ನನುಸರಿಸಿ ಹೋಗುವಾಗ ಅಲ್ಲಿ ಫಲ ವಿಲ್ಲದಿರುವುದು) ಒಬ್ಬನ ಮಾತಿಗೆ ಸಂವಾದವೂ (ಅಂದರೆ ಆಪ್ತನ ಮಾತನ್ನನುಸರಿಸಿ ಹೋಗು ವಾಗ ಅಲ್ಲಿ ಐದು ಫಲಗಳಿರುವುದು) ಹೇಗೆ ಕೂಡುವುದು? ಆದಪ್ರಯುಕ್ತ (ಅನಿಯತಸಂವಾದ

ವಿರುವಪ್ರಯುಕ್ತ) ಶಬ್ದದಿಂದ ಸಂಭಾವನಾ (ಉತ್ಕಟೈಕತರಕೋಟಿಕಸಂಶಯ) ಮಾತ್ರದಿಂದ ಕೃಷ್ಯಾದಿಗಳಲ್ಲಿ ಪ್ರವೃತ್ತಿಯಂತೆಯೇ ಪ್ರವೃತ್ತಿಯು. ಅಂತೂ ಶಬ್ದದಿಂದ ಸಂಭಾವನೆಯೇ ಹುಟ್ಟುತ್ತದೆ. ಕೇವಲ ಅದರಿಂದಲೇ ಪ್ರವರ್ತಿಸುತ್ತಾನೆ. ಈ ಪ್ರಕಾರ ಶಬ್ದವು ಸಂಶಯವನ್ನು ಹುಟ್ಟಿಸತಕ್ಕದಾದಪ್ರಯುಕ್ತ ಯಥಾರ್ಥಜ್ಞಾನವನ್ನು ಹುಟ್ಟಿಸದಿರುವುದರಿಂದ ಶಬ್ದವು ಪ್ರಮಾಣ ವಲ್ಲ. (ಅಪ್ರಮಾಣವೇ) ಆದಕಾರಣ ಹಿಂದೆ ಹೇಳಿದರೀತಿಯಿಂದ ಶಬ್ದವೇ ಅಪ್ರಮಾಣವಾಗಿರು ವುದರಿಂದ ಶಬ್ದವಿಶೇಷವಾದ ವೇದಕ್ಕೆ ಪ್ರಾಮಾಣ್ಯವು ಹೇಗೆ ಕೂಡಬಹುದು? ಸಿದ್ಧರೂಪನಾದ ಬ್ರಹ್ಮನಲ್ಲಿಯೂ ಪುನಃ ಹೇಗೆತಾನೆ ಕೂಡಬಹುದು? ಆದಪ್ರಯುಕ್ತವೇ ಅನುಗ್ರಾಹ್ಯಪ್ರಮಾಣ ವಿಲ್ಲದಿರುವುದರಿಂದ ಬ್ರಹ್ಮವಿಚಾರಾರಂಭವು ಸರ್ವಥಾ ಕೂಡಲಾರದೆಂದು ಬೌದ್ಧರು ಶಂಕಿಸಿದರೆ-

**ಮೂ || ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ || ೭೬ ||**

ಅ || ಪ್ರತ್ಯಕ್ಷವಚ್ಚ=ಪ್ರತ್ಯಕ್ಷದಂತೆಯೇ, ಆಗಮಸ್ಯ = ಶ್ರುತಿಗೆ, ಪ್ರಾಮಾಣ್ಯಂ= ಯಾಥಾರ್ಥ್ಯವು, ಸ್ವತ ಏವ=ಸ್ವಾಭಾವಿಕ ಸಂಬಂಧದಿಂದಲೇ ಇರುವುದು. ಪರಾಪೇಕ್ಷಾರಹಿತ ವಾದುದೇ. ಸಂವಾದಾಧೀನವಾದುದಲ್ಲ.

ತಾ || **ನ್ಯಾಯಸುಧಾ—** (1) ಯಾವ ನೈಯಾಯಿಕರು ಪ್ರತ್ಯಕ್ಷ ವಿಶೇಷಕ್ಕೂ ಅನು ಮಾನಕ್ಕೂ ಪ್ರಾಮಾಣ್ಯವನ್ನು ಸ್ವತ ಏವ ಎಂದಂಗೀಕರಿಸಿ ಆಗಮಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸುವುದಿಲ್ಲವೋ ಅವರನ್ನು ಕುರಿತು 'ಪ್ರತ್ಯಕ್ಷವಚ್ಚ' ಎಂದು, ದೃಷ್ಟಾಂತವನ್ನುಪ ಪಾದಿಸಿದ್ದು. ಯಾರು ಪ್ರಮಾಣಮಾತ್ರದಲ್ಲಿಯೂ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಒಪ್ಪುವು ದಿಲ್ಲವೋ, ಆಗಮಪ್ರಾಮಾಣ್ಯ ಸ್ವತಸ್ತ್ವದಲ್ಲಿ ವಿವಾದಮಾಡುತ್ತಾರೋ, ಅವರನ್ನು ಕುರಿತು 'ಪ್ರತ್ಯಕ್ಷವಚ್ಚ' ಪ್ರತ್ಯಕ್ಷ ಅನುಮಾನಗಳಂತೆಯೇ, ಪ್ರಸಂಗಾತ್ ಆಗಮಪ್ರಾಮಾಣ್ಯಕ್ಕೂ ಸ್ವತಸ್ತ್ವವನ್ನು ತಿಳಿಸುವುದಕ್ಕಾಗಿ ಎಂದು. (2) ಶಬ್ದವನ್ನು ಕೇಳಿದಮೇಲೆ ಎಲ್ಲಿಯಾದರೂ ಜ್ಞಾನವು (೧) ಹುಟ್ಟುತ್ತದೋ, (೨) ಇಲ್ಲವೋ, (೨) ಇಲ್ಲವೆಂದರೆ ತನ್ನ ಅನುಭವವನ್ನು ಅಪಲಾಪ ಮಾಡಿದಂತೆ ಆಗುವುದು. ತನ್ನ ಕ್ರಿಯೆಯಿಂದಲೂ ವಿರೋಧವು ಬರುವುದು. ಹೇಗೆಂದರೆ, ಶಬ್ದವು ಅರ್ಥಜ್ಞಾನವನ್ನು ಹುಟ್ಟಿಸುವುದಿಲ್ಲವೆಂದು ತಾನು ಹೇಳಿಕೊಂಡು ಮತ್ತೊಬ್ಬನಿಗೆ ತಿಳಿಸುವುದ ಕ್ಕಾಗಿ ಶಬ್ದವನ್ನೇ ಪ್ರಯೋಗಿಸುತ್ತಾನೆ. (೧) ಜ್ಞಾನವು ಹುಟ್ಟುವುದಾದರೆ ಆ ಜ್ಞಾನವು ಸಂಶಯವೋ, ವಿಪರ್ಯಯವೋ (ಭ್ರಾಂತಿಯೋ,) ಒಂದು ಧರ್ಮವೇ ಪ್ರಕಾರವಾಗಿ ಇರು ವುದರಿಂದ ಸಂಶಯವೆಂದು ಹೇಳಕೂಡದು. ಬಾಧಜ್ಞಾನವಿಲ್ಲದಿರುವುದರಿಂದ ವಿಪರ್ಯಯ ವೆಂದೂ ಹೇಳಕೂಡದು. ಎಲ್ಲಾ ಕಡೆಗಳಲ್ಲಿಯೂ ಬಾಧವನ್ನು ಒಡಂಬಟ್ಟರೆ ತಾನು ಪ್ರಯೋಗಿ ಸಿರುವ ವಾಕ್ಯಕ್ಕೆ ಬಾಧವಿದ್ದರೂ, ಇಲ್ಲದಿದ್ದರೂ ವ್ಯಾಹತಿಯು ತಪ್ಪಲಾರದು. ಹೀಗೆ ವ್ಯವಸ್ಥೆ ಯಾದ ಮೇಲೆ ಈ ಅನುಮಾನವು ಪ್ರಯೋಗಿಸಲ್ಪಡುತ್ತದೆ. 'ಶಬ್ದಃ ಪ್ರಮಾಣಂ ಸಂಶಯ ವಿಪರ್ಯಯಾಜನಕತ್ವೇ ಸತಿ ಜ್ಞಾನಜನಕತ್ವಾತ್ ಪ್ರತ್ಯಕ್ಷಾದಿವತ್' ಶಬ್ದವು ಪ್ರಮಾಣವು ಸಂಶಯ ವಿಪರ್ಯಯಗಳನ್ನು ಹುಟ್ಟಿಸದೆ ಇದ್ದು ಜ್ಞಾನವನ್ನು ಹುಟ್ಟಿಸುವುದರಿಂದ ಪ್ರತ್ಯಕ್ಷಾದಿ ಗಳಂತೆಯೇ. ಪ್ರತ್ಯಕ್ಷವು ಪ್ರಮಾಣವೆಂದು ಹೇಳಲಿಕ್ಕೆ ಇದರಿಂದ ಬೇರೆ ನಿಯಾಮಕವು ಇಲ್ಲ ವಷ್ಟೆ? (3) ಶಬ್ದವಿದ್ದರೂ ಯಥಾರ್ಥಜ್ಞಾನವು ಹುಟ್ಟದಿರುವುದರಿಂದ ಶಬ್ದವು ಪ್ರಮಾಣವಲ್ಲ, ಎಂದು ಹೇಳುವುದು ಅಯುಕ್ತವು. ಏಕೆಂದರೆ— ಕಣ್ಣು ಇದ್ದರೂ ರೂಪಜ್ಞಾನವು ಹುಟ್ಟುವು ದಿಲ್ಲ. ಹೊಗೆ ಇದ್ದರೂ ಬೆಂಕಿಯ ಜ್ಞಾನವು ಹುಟ್ಟುವುದಿಲ್ಲ. ಆದಕಾರಣ ಪ್ರತ್ಯಕ್ಷವೂ,

ಅನುಮಾನವೂ ಅಪ್ರಮಾಣವಾಗಬೇಕಾಗುವುದು, ಎಂದು ಹೇಳಿದರೆ— ಆಗ ಕಣ್ಣುಮಾತ್ರ ಪ್ರತ್ಯಕ್ಷವಾಗುವುದಿಲ್ಲ. ಮತ್ತೆ ಅಂತಃಕರಣ ಸಂಬಂಧದಿಂದೊಡಗೂಡಿದ್ದು ವಿಷಯಸಂಬದ್ಧವಾದರೇನೇ, ಪ್ರತ್ಯಕ್ಷವೆನಿಸುವುದು. ಹಾಗೆಯೇ ಹೊಗೆಯು ಮಾತ್ರ ಅನುಮಾನವಾಗುವುದಿಲ್ಲ. ಮತ್ತೆ ವ್ಯಾಪ್ತಿಪಕ್ಷಧರ್ಮತೆಗಳು ಇರುತ್ತವೆಂದು ತಿಳಿದದ್ದೇ ಅನುಮಾನವೆನ್ನಿಸುವುದು. ಇಂತಹ ಪ್ರತ್ಯಕ್ಷ ಅನುಮಾನಗಳು ಇರುವಾಗ ಯಥಾರ್ಥಜ್ಞಾನವು ಹುಟ್ಟುವುದಿಲ್ಲವೆಂದಲ್ಲ. ಮತ್ತೆ ಹುಟ್ಟುತ್ತದೆಯೇಸರಿ ಎಂದು ಹೇಳುವಿರಿ. ಆಗ ನಾವೂ ಹೇಳುವೆವು. ಕೇವಲ ಶಬ್ದವು ಪ್ರಮಾಣವಲ್ಲ. ಮತ್ತೆ ಶ್ರುತವಾಗಿಯೂ ಶಕ್ತಿ, ಸ್ಮರಣೆಯಿಂದೊಡಗೂಡಿದ್ದಾಗಿಯೂ ಇದ್ದದ್ದೇ ಪ್ರಮಾಣವಾಗುವುದು. ಇಂತಹ ಶಬ್ದವಿರುವಾಗ ಯಥಾರ್ಥಜ್ಞಾನವು ಹುಟ್ಟುವುದಿಲ್ಲವೆಂದಲ್ಲ. ಅಂತೂ ಕೇವಲ ಶಬ್ದವನ್ನು ಪಕ್ಷವನ್ನಾಗಿ ಇಟ್ಟುಕೊಂಡರೆ ಸಿದ್ಧವಾದ ಅರ್ಥವನ್ನೇ ಸಾಧಿಸಿರುವುದರಿಂದ ಸಿದ್ಧಸಾಧನತಾದೋಷವು. ವಿಶಿಷ್ಟಶಬ್ದವು (ಶ್ರುತವಾದದ್ದು ಶಕ್ತಿಸ್ಮರಣದಿಂದೊಡಗೂಡಿದ್ದು) ಪಕ್ಷವೆಂದು ಹೇಳಿದರೆ ಅಸಿದ್ಧಿಯು. (ಅಂದರೆ 'ಜ್ಞಾನಾಜನಕತ್ವಾತ್' ಎನ್ನುವ ಹೇತುವಿಗೆ ಅಸಿದ್ಧಿಯು.) ಈ ಅಭಿಪ್ರಾಯದಿಂದ 'ಪ್ರತ್ಯಕ್ಷವಚ್ಚ' ಪ್ರತ್ಯಕ್ಷಕ್ಕೆ ಹೇಗೆ ಪ್ರಾಮಾಣ್ಯವಿದೆಯೋ ಹಾಗೆಯೇ ಶಬ್ದಕ್ಕೂ ಒಡಂಬಡಬೇಕು. (4) ವಿಷಯವಿಲ್ಲದಿರುವುದರಿಂದ ಶಬ್ದವು ಪ್ರಮಾಣವಲ್ಲ ಎಂದು ಹೇಳಿದ್ದು ಅಯುಕ್ತವು. ಏಕೆಂದರೆ— ಹಾಗಿದ್ದರೆ ಕಣ್ಣಿನಿಂದ ಆಗತಕ್ಕ ಪ್ರತ್ಯಕ್ಷವೂ ಅಪ್ರಮಾಣವಾಗಬೇಕಾಗುವುದು. ಹೇಗೆಂದರೆ— ಅದಕ್ಕೂ ಪರೋಕ್ಷವು ವಿಷಯವೆಂದು ಹೇಳಕೂಡದು. ಅದು ಅನುಮಾನಕ್ಕೆ ವಿಷಯವಾಗಿದೆ. ಅಪರೋಕ್ಷವು ವಿಷಯವೆಂದೂ ಹೇಳಕೂಡದು. ಅದು ಕಿವಿಗೆ ವಿಷಯವಾಗಿದೆ, ಎಂದು ಹೇಳಲು ಶಕ್ಯವಾಗಬಹುದು. ಆಗ ನೀವು ಕಣ್ಣಿನಿಂದ ಇದು ಬಿಳಿಬಟ್ಟೆ ಎನ್ನುವ ಜ್ಞಾನವು ಹುಟ್ಟುತ್ತದೆಂದು ಹೇಳಬೇಕು. ಅಂತೂ ಬಿಳಿಪು ಎನ್ನುವ ವಿಷಯವು ಅಪರೋಕ್ಷವಾಗಿದ್ದರೂ ಶ್ರೋತ್ರಾದಿ ಇಂದ್ರಿಯಗಳಿಗೆ ವಿಷಯವಾಗದಿರುವುದರಿಂದ ಆ ವಿಷಯದಲ್ಲಿ ಕಣ್ಣು ಪ್ರಮಾಣವೆನ್ನುವುದು ಯುಕ್ತವು. (5) ಮತ್ತು ಪ್ರಯೋಜನವಿಲ್ಲದಿರುವುದರಿಂದ ಸ್ಪಷ್ಟವಾಗಿ ಕಂಡ ವಸ್ತುವನ್ನು ನಿರಾಕರಿಸಲು ಶಕ್ಯವಾಗುವುದಿಲ್ಲ. ಹಾಗೆ ನಿರಾಕರಿಸುವುದಾದರೆ ಕಂಡ ಎಲ್ಲಾ ವಸ್ತುಗಳನ್ನು ಅಪಲಾಪಮಾಡಬೇಕಾಗುವುದು. ಮತ್ತೆ ವಸ್ತುಗಳನ್ನು ನೋಡಿದರಿಂದ ಏನಾದರೂ ಪ್ರಯೋಜನವನ್ನು ಕಲ್ಪಿಸಬೇಕು. ಇದು ಶಬ್ದದಲ್ಲಿಯೂ ಸಮಾನವೇ. ಶಬ್ದಕ್ಕೆ ಪರೋಕ್ಷವೇ ವಿಷಯವೆಂದು ಹೇಳಿದರೂ ಅನುಮಾನಕ್ಕೆ ವಿಷಯವಾಗದಿರುವ ಕೆಲವು ವಿಷಯವು ಶಬ್ದಕ್ಕೆ ಇದೆ. ಈ ಅಭಿಪ್ರಾಯದಿಂದಲೂ 'ಪ್ರತ್ಯಕ್ಷವಚ್ಚ' ಎಂದು ಹೇಳಿರುವರು. (6) ಆದಾಗ್ಯೂ ಕಣ್ಣುಮೊದಲಾದ ಇಂದ್ರಿಯಗಳಿಗೆ ಅಪರೋಕ್ಷವಿಷಯತ್ವವಿದ್ದುದರಿಂದ ಪ್ರತ್ಯಕ್ಷತ್ವರೂಪ ಒಂದೇ ಧರ್ಮವಿದ್ದಂತೆಯೇ ಶಬ್ದ ಅನುಮಾನಗಳಿಗೂ ಪರೋಕ್ಷವಿಷಯತ್ವ ಹೇಳಿದರೆ ಒಂದೇ ವಿಧವಾದ ಧರ್ಮವು ಇರಬೇಕಾಗುವುದು, ಎಂದರೆ— ಅದು ೧ ಸರ್ವಪ್ರಕಾರದಿಂದಲೂ ಒಂದೇ ವಿಧವೋ ಅಥವಾ ೨ ಯಾವುದಾದರೊಂದು ಪ್ರಕಾರದಿಂದಲೋ ಅಥವಾ ೩ ಅನುಮಾನತ್ವರೂಪಪ್ರಕಾರದಿಂದಲೋ. (೧) ಸರ್ವಪ್ರಕಾರದಿಂದಲೂ ಎಂದು ಹೇಳಕೂಡದು. ಕಣ್ಣು ಮೊದಲಾದ ಇಂದ್ರಿಯಗಳಿಗೆ ಶ್ರೋತ್ರಾದಿ ಇಂದ್ರಿಯಗಳಿಂದ ಸರ್ವಪ್ರಕಾರದಿಂದ ಸಾಮ್ಯವಿರುವುದಿಲ್ಲ. (೨) ಯಾವುದಾದರೊಂದು ಧರ್ಮದಿಂದ ಸಾಮ್ಯವು ನಮಗೆ ಇಷ್ಟವೇ. (೩) ಅನುಮಾನತ್ವರೂಪ ಪ್ರಕಾರದಿಂದ ಎಂದೂ ಹೇಳಕೂಡದು. ಶಬ್ದಕ್ಕೆ ಅನುಮಾನದಿಂದ ವೈಲಕ್ಷಣ್ಯವನ್ನೂ ಹೇಳುವೆವು. (7) ಮತ್ತು ಹೀಗೆ ವಿಷಯಗಳನ್ನು ವಿಕಲ್ಪಿಸಿಕೊಂಡು ಶಬ್ದವನ್ನು ನಿರಾಕರಿಸಿದರೆ ಶಬ್ದವೇ ಪ್ರಮಾಣವೆಂದು ಇಟ್ಟುಕೊಂಡು ಅನುಮಾನವು ಪ್ರಮಾಣವಾಗುವುದಿಲ್ಲವೆಂದು ಹೇಳಿದರೆ ಏನು ಉತ್ತರಕೊಡುವಿರಿ?

ಅನುಮಾನವು ಪ್ರಮಾಣವಾಗದಿದ್ದರೆ ಎಲ್ಲಾ ಜನರ ವ್ಯವಹಾರವೇ ಕೂಡದೆ ಹೋಗಬೇಕಾಗುವುದು. ಅನುಮಾನಕ್ಕೂ ಶಬ್ದಕ್ಕೂ ಪರೋಕ್ಷವಿಷಯತ್ವವಿದ್ದರೂ ಪರಾಭಿಪ್ರಾಯಾದಿರೂಪವಾದ ಅಸಂಕೀರ್ಣವಿಷಯವು ಕಾಣುವುದರಿಂದ ಅನುಮಾನವನ್ನು ಶಬ್ದಕ್ಕಿಂತ ಬೇರೆ ಪ್ರಮಾಣವೆಂದೇ ಅಂಗೀಕರಿಸಬೇಕು, ಎಂದು ಹೇಳಬೇಕು. ಹೀಗೆ ಹೇಳಿದರೆ ಈ ಉತ್ತರವು ಶಬ್ದವು ಪ್ರಮಾಣವು ಎನ್ನುವಲ್ಲಿಯೂ ಸಮಾನವೇ. ಈ ಅಭಿಪ್ರಾಯವನ್ನು 'ಪ್ರತ್ಯಕ್ಷವಚ್ಚ' ಎನ್ನುವಲ್ಲಿದ್ದ 'ಚ' ಶಬ್ದದಿಂದ ಹೇಳಿದರು. ಅನುಮಾನದಂತೆಯೇ ಶಬ್ದವೂ ಪ್ರಮಾಣವೇ. (8) ಜ್ಞಾನಸ್ವರೂಪವಾಗದಿರುವುದರಿಂದ ಶಬ್ದವು ಪ್ರಮಾಣವಲ್ಲ, ಎಂದು ಹೇಳಿದ್ದೂ ಅಯುಕ್ತವು. ಹೇಗೆಂದರೆ, ಇಂದ್ರಿಯವಾಗಲೀ ಇಂದ್ರಿಯಸನ್ನಿಕರ್ಷವಾಗಲೀ ಜ್ಞಾನಸ್ವರೂಪವಾಗದಿದ್ದರೂ ವಿಜ್ಞಾನಕ್ಕೆ ಮುಖ್ಯಕಾರಣವಾಗಿರುವುದರಿಂದ ಹೇಗೆ ಪ್ರಮಾಣವೋ ಹಾಗೆಯೇ ಶಬ್ದವೂ ಜ್ಞಾನಸ್ವರೂಪವಾಗದಿದ್ದರೂ ಜ್ಞಾನಕ್ಕೆ ಮುಖ್ಯಕಾರಣವಾಗಿರುವುದರಿಂದ ಪ್ರಮಾಣವೇ. (9) ಮತ್ತು 'ಪರ್ವತೋ ವಹ್ನಿಮಾನ್ ಧೂಮಾತ್' ಎನ್ನುವ ಅನುಮಾನವು ಜ್ಞಾನಸ್ವರೂಪವಾಗದಿದ್ದರೂ ಪ್ರಮಾಣವಾಗಿರುವುದರಿಂದ ಶಬ್ದಕ್ಕೂ ಹಾಗೆಯೇ ಏತಕ್ಕೆ ಹೇಳಲಾಗುವುದಿಲ್ಲ? ಹಾಗಾದರೆ, ಧೂಮಾದಿಗಳೇ ಅನುಮಾನವಲ್ಲ. ಮತ್ತೆ ಅವುಗಳ ಜ್ಞಾನವೇ, ಎಂದು ಹೇಳುವುದಾದರೆ ಕೇವಲ ಶಬ್ದವು ಪ್ರಮಾಣವಲ್ಲ, ಅದರ ಜ್ಞಾನವೇ, ಎಂದು ಹೇಳುವೆವು. ಅಂತೂ ಅನುಮಾನಕ್ಕೆ ಅಸಿದ್ಧಿಯು. ಈ ಅಭಿಪ್ರಾಯದಿಂದಲೂ 'ಪ್ರತ್ಯಕ್ಷವಚ್ಚ' ಎಂದು. (10) ಬಾಹ್ಯವಾದ ಕರಣಕ್ಕೆ ಪ್ರತ್ಯಕ್ಷವಾಗಿರುವುದರಿಂದ ಶಬ್ದವು ಪ್ರಮಾಣವಲ್ಲ, ಎನ್ನುವುದೂ ಅಯುಕ್ತವು. ಬಾಹ್ಯಕರಣಕ್ಕೆ ಪ್ರತ್ಯಕ್ಷವಾದ ಶಬ್ದಕ್ಕೂ ಬಾಹ್ಯಕರಣಕ್ಕೆ ಪ್ರತ್ಯಕ್ಷವಾದ ಧೂಮದಂತೆಯೇ ಪ್ರಾಮಾಣ್ಯವು ಕೂಡಬಹುದು. (11)ಆತ್ಮನನ್ನು ಆಶ್ರಯಿಸಿಕೊಂಡು ಇಲ್ಲದಿರುವುದರಿಂದ ಶಬ್ದವು ಪ್ರಮಾಣವಲ್ಲ ಎನ್ನುವುದೂ ಅಯುಕ್ತವು. ಅಂತಹದಕ್ಕೂ ಪ್ರತ್ಯಕ್ಷದಂತಯೂ, ಅನುಮಾನದಂತೆಯೂ ಪ್ರಾಮಾಣ್ಯವು ಕೂಡಬಹುದು. ಹಾಗಾದರೆ ಧೂಮವು ಪ್ರಮಾಣವಲ್ಲ. ಧೂಮಜ್ಞಾನವೇ ಪ್ರಮಾಣವು. ಅದು ಆತ್ಮನನ್ನು ಆಶ್ರಯಿಸಿಕೊಂಡಿದೆ, ಎಂದು ಹೇಳುವುದಾದರೆ ಬರೀ ಶಬ್ದವೂ ಪ್ರಮಾಣವಲ್ಲ. ಶಬ್ದಜ್ಞಾನವೇ ಪ್ರಮಾಣವು, ಎನ್ನುತ್ತೇವೆ. ಅದು ಆತ್ಮನನ್ನು ಆಶ್ರಯಿಸಿಕೊಂಡು ಇದ್ದುದರಿಂದ 'ಆತ್ಮನ್ಯನಾಶ್ರಿತತ್ವಾತ್' ಎನ್ನುವ ಹೇತುವಿಗೆ ಅಸಿದ್ಧಿಯೇ. (12) ಶಬ್ದವು ಆಕಾಶಗುಣವಾಗಿರುವುದರಿಂದ ಪ್ರಮಾಣವಲ್ಲ ಎಂದು ಹೇಳಿದ್ದೂ ಅಯುಕ್ತವು. ಏಕಂದರೆ— ಆಕಾಶಗುಣವೆನ್ನುವುದೇ ಸಿದ್ಧವಾಗಲಿಲ್ಲ. ವರ್ಣರೂಪವಾದ ಶಬ್ದವು ಪ್ರಮಾಣವು. ವರ್ಣವು ತತ್ವಜ್ಞರ ಮತದಲ್ಲಿ ಆಕಾಶಗುಣವಲ್ಲ. ಮತ್ತೆ ದ್ರವ್ಯವು. ಈ ಅಭಿಪ್ರಾಯದಿಂದಲೂ 'ಪ್ರತ್ಯಕ್ಷವಚ್ಚ' ಎಂದು ಈ ಅರ್ಥದಲ್ಲಿ ವ್ಯತಿರೇಕ ದೃಷ್ಟಾಂತವು. ಹೇಗೆ ಪ್ರತ್ಯಕ್ಷವು ಆಕಾಶದ ಗುಣವಲ್ಲವೋ, ಹಾಗೆಯೇ ಶಬ್ದವೂ ಆಕಾಶದ ಗುಣವಲ್ಲ. ಆದರೂ ಪ್ರತ್ಯಕ್ಷದಂತೆಯೇ ಪ್ರಮಾಣವೇ. ಮತ್ತು ಈ ಹೇತುಗಳು ಇರಲಿ. ಸಾಧ್ಯವು ಬೇಡವೆಂದು ಹೇಳಿದರೆ ಬಾಧಕವಿಲ್ಲದಿರುವುದರಿಂದ ಸಾಧ್ಯವನ್ನು ಸಾಧಿಸಲಿಕ್ಕೆ ಉಪಯುಕ್ತಗಳಾಗದಿರುವಪ್ರಯುಕ್ತ ಅಪ್ರಯೋಜಕಗಳೆಂದೂ ತಿಳಿಯಬೇಕು. (13) ಮತ್ತು ಶಬ್ದಕ್ಕೆ ಅರ್ಥದಿಂದ ಸಂಬಂಧವು ಉಂಟೋ ಇಲ್ಲವೋ? ಎಂದು ಯಾವುದು ಶಂಕಿತವಾಗಿಯದೋ, ಆ ವಿಷಯದಲ್ಲಿ ಉಂಟೆಂದೇ ಹೇಳುವೆವು. ಅದು ತಾದಾತ್ಮ್ಯಮೊದಲಾದ ಸಂಬಂಧವು ಕೂಡದಿದ್ದರೂ ಬೇರೆ ಸಂಬಂಧವು ಆಗುವುದು. ಹೇಗೆಂದರೆ— ಚಕ್ಷುರಾದಿ ಇಂದ್ರಿಯಗಳಿಗೆ ಘಟ ಮೊದಲಾದುವುಗಳಿಂದ ತಾದಾತ್ಮ್ಯಾದಿ ಸಂಬಂಧವು ಕೂಡದಿದ್ದರೂ ಸಂಯೋಗವೆಂದು ಹೇಗೆ ಕಲ್ಪಿಸುವಿರೋ, ಶ್ರೋತ್ರಕ್ಕೆ ಶಬ್ದದಿಂದ ಸಂಯೋಗಾದಿಗಳು ಕೂಡದಿರುವುದರಿಂದ ಸಮವಾಯವೆಂದು ಹೇಳು

ವಿರೋ, ಧೂಮಾದಿರೂಪ ಅನುಮಾನಕ್ಕೆ ಅಗ್ನ್ಯಾದಿಗಳಿಂದ ಸಂಯೋಗಾದಿ ಸಂಬಂಧವು ಕೂಡದಿರುವುದರಿಂದ ವ್ಯಾಪ್ಯವ್ಯಾಪಕಭಾವ ಸಂಬಂಧವನ್ನು ಹೇಗೆ ಕಲ್ಪಿಸುತ್ತೀರೋ, ಇದೇ ರೀತಿಯಾಗಿ ಶಬ್ದವೂ ಅಸಂಬದ್ಧವಾಗಿಯೇ ತಿಳಿಸಿಕೊಡುವುದಾದರೆ, ಅತಿಪ್ರಸಂಗವು ಬರುವುದರಿಂದ ತಾದಾತ್ಮ್ಯಾದಿ ಸಂಬಂಧವು ಕೂಡದಿರುವಪ್ರಯುಕ್ತ ಬೇರೆ ಸಂಬಂಧವನ್ನೇ ಕಲ್ಪಿಸಬೇಕು. ಕಾರ್ಯವು ಸ್ಪಷ್ಟವಾಗಿ ಕಾಣುವಾಗ ಅದನ್ನು ಅಪಲಾಪಮಾಡುವುದು ಯುಕ್ತವಲ್ಲ. ಈ ಅಭಿಪ್ರಾಯದಿಂದಲೂ 'ಪ್ರತ್ಯಕ್ಷವಚ್ಚ' ಎಂದು.

(14) ಅಂತಹ ಸಂಬಂಧವು (೧) ಪರಮೇಶ್ವರನ ಸಂಕೇತವೆಂದು ಕೆಲವರು ಹೇಳುವರು. (೨) ಸ್ವಾಭಾವಿಕವಾದ ವಾಚ್ಯವಾಚಕ ಭಾವರೂಪ ಸಂಬಂಧವೆಂದು ಇತರರು ಹೇಳುವರು. ಅವುಗಳಲ್ಲಿ ಯಾವ ಸಂಬಂಧವನ್ನು ಇಟ್ಟುಕೊಳ್ಳಬೇಕೆಂದರೆ 'ಸ್ವತಏವ' ಸ್ವಾಭಾವಿಕಸಂಬಂಧದಿಂದಲೇ. ಇದೇ ಅಭಿಪ್ರಾಯವನ್ನು ಜೈಮಿನ್ಯಾಚಾರ್ಯರೂ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಸ್ತಸ್ಯಜ್ಞಾನಮುಪದೇಶೋಽವ್ಯತಿರೇಕಶ್ಚಾರ್ಥೇಽನುಪಲಬ್ಧೇತತ್ಪ್ರಮಾಣಂ ಬಾದರಾಯಣಸ್ಯಾನಪೇಕ್ಷತ್ವಾತ್'—(ಜೈ. ಸೂ. ಅಧ್ಯಾ. ೧. ಪಾ ೧. ಅಧಿ. ೫.) ಶಬ್ದಕ್ಕೆ ಅರ್ಥದಿಂದ ಇರತಕ್ಕ ಸಂಬಂಧವು (ವಾಚ್ಯವಾಚಕಭಾವ ಸಂಬಂಧವು) ಸ್ವಾಭಾವಿಕವೇ. ವೇದವು ಅದಕ್ಕೆ ಜ್ಞಾಪಕವು. ವಿಪರ್ಯಯವನ್ನೂ ಸಂಶಯವನ್ನೂ ಹುಟ್ಟಿಸಲಾರದು. (ಅಂದರೆ, ಜ್ಞಾನವನ್ನು ಹುಟ್ಟಿಸತಕ್ಕದ್ದೂ ಸಂಶಯವಿಪರ್ಯಯಗಳನ್ನು ಹುಟ್ಟಿಸದಿರುವುದೂ ಆಗಿದೆ.) ಆದಕಾರಣ ಪ್ರಮಾಣಾಂತರದಿಂದ ತಿಳಿಯಲ್ಪಡದಿರುವ ಅರ್ಥದಲ್ಲಿ ಇತರಾಪೇಕ್ಷೆಯಿಲ್ಲದಿರುವುದರಿಂದ ಪ್ರಮಾಣವೇ. ಅಂತೂ ಸ್ವತಃ ಪ್ರಮಾಣವೇ, ಎಂದು ಹೇಳಿರುತ್ತಾರೆ. ಇದೇ ಅಭಿಪ್ರಾಯವನ್ನು ಆಚಾರ್ಯರೂ ಮುಂದಕ್ಕೆ ಹೇಳುವರು. '**ನಿತ್ಯಯೋಗೇಽಪಿ ಶಬ್ದಾನಾಮರ್ಥೈರನ್ಯೈರ್ನ ನಿಷಿಧ್ಯತೇ**' ಎಂದು. ಅಂತೂ ಶಬ್ದಕ್ಕೆ ಅರ್ಥದಿಂದ ತಾದಾತ್ಮ್ಯವಾಗಲೀ, ಸಂಯೋಗವಾಗಲೀ ಸಮವಾಯವಾಗಲೀ ಸಂಬಂಧವೆಂದು ಹೇಳುವುದಿಲ್ಲ. ಮತ್ತೆ ಸ್ವಾಭಾವಿಕವಾದ ವಾಚ್ಯವಾಚಕಭಾವರೂಪವಾದ ಸಂಬಂಧವನ್ನೇ ಹೇಳುತ್ತೇವೆ. (15) ಹಾಗಾದರೆ ಶಬ್ದಕ್ಕೆ ಸ್ವಾಭಾವಿಕವಾದ ವಾಚ್ಯವಾದ ಅರ್ಥದ ವಿಷಯದಲ್ಲಿ ಶಕ್ತಿಯಿರುವುದಾದರೆ, ವ್ಯುತ್ಪನ್ನನಂತೆ ಅವ್ಯುತ್ಪನ್ನನಿಗೂ ಶಬ್ದದಿಂದ ಅರ್ಥಜ್ಞಾನವು ಬರಲಿ ಎಂದಾಶಂಕಿಸಿದರೆ, ಹೇಗೆ ಚಕ್ಷುರಾದಿ ಪ್ರತ್ಯಕ್ಷಗಳಿಗೆ ರೂಪಜ್ಞಾನವನ್ನು ಹುಟ್ಟಿಸುವ ಶಕ್ತಿಯು ಸ್ವಾಭಾವಿಕವಾಗಿದ್ದರೂ ಆಗಂತುಕವಾದ ಸನ್ನಿಕರ್ಷಸಂಬಂಧವನ್ನು ಅಪೇಕ್ಷಿಸಿಯೇ ರೂಪಜ್ಞಾನವನ್ನು ಹುಟ್ಟಿಸುವುದೋ, ಮತ್ತು ಹೇಗೆ ಲಿಂಗಕ್ಕೆ ಸಾಧ್ಯಸಂಬಂಧವು ಸ್ವಾಭಾವಿಕವಾಗಿದ್ದರೂ ಲಿಂಗವನ್ನನುಸಂಧಾನ ಮಾಡಿಕೊಂಡವನಿಗೇನೇ ಅದು ಸಾಧ್ಯಜ್ಞಾನವನ್ನು ಹುಟ್ಟಿಸುವುದೋ, ಹೀಗೆಯೇ ಶಬ್ದಗಳಿಗೂ ಅರ್ಥದಿಂದ ಸ್ವಾಭಾವಿಕಸಂಬಂಧವಿದ್ದರೂ ಆ ಸಂಬಂಧಜ್ಞಾನವಿದ್ದವನಿಗೇನೇ ಬೋಧಕವಾಗುವುದು. ಬೇರೆ ವಿಧವಾಗಿ ಅಲ್ಲ. ಹೀಗೆ ನಿಯಮವಿದೆ. ಈ ಅಭಿಪ್ರಾಯದಿಂದಲೂ 'ಪ್ರತ್ಯಕ್ಷವಚ್ಚ' ಎಂದು. (16) ಆದಾಗ್ಯೂ ಆ ಸ್ವಾಭಾವಿಕ ಸಂಬಂಧವೂ (೧) ಎಲ್ಲಾ ಶಬ್ದಗಳಿಗೆ ಎಲ್ಲಾ ಅರ್ಥಗಳಿಂದಲೋ, ಅಥವಾ (೨) ಯಾವುದಾದರೊಂದು ಶಬ್ದಕ್ಕೆ ಯಾವುದಾದರೊಂದು ಅರ್ಥದಿಂದಲೋ. ೧ ನೇದ್ದು ಕೂಡಲಾರದು. ಇಂತಹ ಶಬ್ದಕ್ಕೆ ಇಂತಹ ಅರ್ಥವು ಎನ್ನುವ ವ್ಯವಸ್ಥೆಯೇ ಕೂಡದೆಹೋಗಬೇಕಾಗುವುದು. ೨ ನೇದ್ದೂ ಕೂಡಲಾರದು. ಋಷಿ-ಆರ್ಯ-ಮ್ಲೇಂಛರಿಗೆ ಆ ನಿಯಮವು ಆಗದೆ ಹೋಗುವುದು. ಹೇಗೆಂದರೆ-ಆರ್ಯರು ಯವವೆಂದರೆ ದೀರ್ಘಶೂಕ(ಉದ್ದಚೊಂಗು ಇದ್ದದ್ದು ಗೋಧಿಗೆ ಸದೃಶವಾದ ಧಾನ್ಯವಿಶೇಷವು) ವೆನ್ನುತ್ತಾರೆ. ಮ್ಲೇಂಛರು ಪ್ರಿಯಂಗು (ಸೂಕ್ಷ್ಮಧಾನ್ಯವಿಶೇಷವು. ನವಣೆ) ವೆನ್ನುತ್ತಾರೆ. ಆರ್ಯರು ತ್ರಿವೃತ್ ಎನ್ನುವುದಕ್ಕೆ ಲತಾವಿಶೇಷವೆಂದರ್ಥವೆನ್ನು

ತ್ತಾರೆ. ಋಷಿಗಳು 'ತ್ರಿವೃದಗ್ನಿಸು' ಇದು ಮೊದಲಾದ ಸ್ತೋತ್ರಸಾಧನೀಭೂತಗಳಾದ ಒಂಭತ್ತು ಋಕ್ಕುಗಳೆನ್ನುತ್ತಾರೆ. ಇದುಮೊದಲಾಗಿ ಅನಿಯಮವು ಇದೆ. ಅವರವರ ಇಚ್ಛೆಯಂತೆ ಪ್ರಯೋಗಿಸುತ್ತಾರೆ. ಶಬ್ದಶಕ್ತಿಯು ಸ್ವಾಭಾವಿಕವಾಗಿದ್ದರೆ ಅದು ಕೂಡದೆ ಹೋಗುವುದು. ದೀಪಕ್ಕೆ ರೂಪವನ್ನು ಪ್ರಕಾಶಿಸುವದರಲ್ಲಿಯೇ ಸ್ವಾಭಾವಿಕ ಶಕ್ತಿಯಿರುವುದರಿಂದ ಯಾವಾಗಲಾದರೂ ರಸವನ್ನು ಪ್ರಕಾಶಿಸಲಾರದಷ್ಟೆ. ಸಾಂಕೇತಿಕವೆಂದು ಇಟ್ಟುಕೊಂಡರೆ ಅನಿಯಮವು ಕೂಡುತ್ತದೆ. ಪುರುಷರ ಇಚ್ಛೆಯು ಕಾರಣವು, ಇಚ್ಛೆಯೂ ನಿಯತವಲ್ಲ. ಅಂದರೆ, ಲೋಕದಲ್ಲಿ ನಯನಾದಿಗಳಿಂದಲೇ ಭಾಷಣ ಮಾಡುವುದರಲ್ಲಿ ಚತುರರಾದವರು ಭ್ರೂಚೇಷ್ಟೆ (ಹುಬ್ಬನ್ನು ಹಂದಾಡಿಸುವುದು) ಕಣ್ಣನ್ನು ಹಾರಿಸುವುದು, ಹಸ್ತಸಂಜ್ಞೆ ಇತ್ಯಾದಿಗಳಿಗೆ ಅರ್ಥವಿಶೇಷದಲ್ಲಿ ಸಂಕೇತವನ್ನು ಮಾಡಿ ಮಾತನಾಡುತ್ತಾರೋ, ಅಲ್ಲಿ ಹೇಗೆ ಪುರುಷರು ಬೇರೆಬೇರೆಯಾದುದುದರಿಂದ ಆ ಸಂಕೇತವೂ ನಾನಾರ್ಥಗಳನ್ನು ತಿಳಿಸಿಕೊಡುವುದರಿಂದ ನಿಯತವಲ್ಲವೋ ಹಾಗೆಯೇ ಇದೂಕೂಡ 'ಈ ಶಬ್ದದಿಂದ ಈ ಅರ್ಥವು ತಿಳಿಯಲ್ಪಡತಕ್ಕದು' ಎನ್ನುವ ಇಚ್ಛಾರೂಪ ಸಂಕೇತವೇ ಅನಿಯತವು, ಎಂದು ಹೇಳಿದರೆ— ನಾವು ಹೀಗೆ ಹೇಳುವೆವು. ಶಬ್ದವು ಎಲ್ಲಿಯೂ ಸಂಕೇತದಿಂದ ಬೋಧಕವೇ ಆಗುವುದಿಲ್ಲವೆಂದು ಹೇಳುವುದಿಲ್ಲ. ಮತ್ತೆ ಅರ್ಥವಿಶೇಷದಲ್ಲಿ ಸ್ವಾಭಾವಿಕವಾದ ಶಕ್ತಿಯೂ ಆದೆ. ಅಂತೂ ಕೆಲವುಕಡೆ ಸ್ವಾಭಾವಿಕವಾದ ಶಕ್ತಿಯಿಂದಲೂ ಕೆಲವುಕಡೆ ಸಂಕೇತದಿಂದಲೂ ತಿಳಿಸಿಕೊಡುವ ಪ್ರಯುಕ್ತ ಅನಿಯಮವು ಯುಕ್ತವಾಗುತ್ತದೆ. (17) ಹಾಗಾದರೆ ಕೆಲವುಕಡೆ ಸಂಕೇತದಿಂದ ಪ್ರಯೋಗವನ್ನೂ ಜ್ಞಾನವನ್ನೂ ಅಂಗೀಕರಿಸುವುದಾದರೆ ಅದರಿಂದಲೇ ಎಲ್ಲಾ ಕಡೆಗಳಲ್ಲಿಯೂ ಅವುಗಳು ಕೂಡುವಾಗ ಅಪೂರ್ವವಾದ ಶಕ್ತಿಯನ್ನು ಕಲ್ಪಿಸಿದುದರಿಂದ ಏನು ಪ್ರಯೋಜನವು ಎಂದರೆ—ಹಾಗಾದರೆ, ಎಲ್ಲಾ ಕಡೆಗಳಲ್ಲಿಯೂ ಶಬ್ದವು ಸ್ವಾಭಾವಿಕವಾದ ಶಕ್ತಿಯಿಂದಲೇ ಅರ್ಥವನ್ನು ತಿಳಿಸಿಕೊಡುತ್ತದೆ ಎನ್ನುವೆವು. ಅವರವರ (ಆರ್ಯ-ಮ್ಲೇಂಛಾದಿಗಳ) ವ್ಯುತ್ಪತ್ತಿಯನ್ನು ಅನುಸರಿಸಿ ವ್ಯವಹಾರವು ಕೂಡುತ್ತದೆ. ಹೇಗೆಂದರೆ, ಕಣ್ಣು ಮುತ್ತಿನಚಿಪ್ಪಿನಿಂದ ಸಂಬದ್ಧವಾದರೆ ಕೆಲವರು ಚಿಪ್ಪೆಂದೇ ತಿಳಿಯುತ್ತಾರೆ. ಕೆಲವರು ಬೆಳ್ಳಿಯೆಂದು ತಿಳಿಯುತ್ತಾರೆ. ಇಷ್ಟರಿಂದ ಕಣ್ಣು ಅರ್ಥವನ್ನು ತಿಳಿಸಿಕೊಡುತ್ತದೆ ಎನ್ನುವುದು ಅಸ್ವಾಭಾವಿಕವಲ್ಲವಷ್ಟೇ. ದೋಷರೂಪ ಸಹಕಾರಿಯಿದ್ದರೆ ಚಿಪ್ಪನ್ನು ಬೆಳ್ಳಿಯೆಂದು ತಿಳಿಯುತ್ತಾರೆ. ದೋಷವಿಲ್ಲದಿದ್ದರೆ ಚಿಪ್ಪುವೆಂದೇ ತಿಳಿಯುತ್ತಾನೆ. ಹೇಗೆ ಕೃತಕತ್ವರೂಪ ಹೇತುವಿನಿಂದ ಕೆಲವರು ಶಬ್ದವನ್ನು ಅನಿತ್ಯವೆಂದೂ ಕೆಲವರು ನಿತ್ಯವೆಂದೂ ತಿಳಿಯುತ್ತಾರೋ, ಕೃತಕತ್ವವೆನ್ನುವ ಹೇತುವು 'ಶಬ್ದವು ನಿತ್ಯವು' ಎನ್ನುವ ಜ್ಞಾನವನ್ನು ಹುಟ್ಟಿಸದೆ ಇರುವುದಾದರೆ 'ವಿರುದ್ಧ' ಎನ್ನುವ ಹೇತ್ವಾಭಾಸವೇ ಇಲ್ಲದೆ ಹೋಗಬೇಕಾಗುವುದು. ಕೃತಕತ್ವವೆನ್ನುವ ಹೇತುವು ಅಶಕ್ಯವಾದ ನಿತ್ಯತ್ವವನ್ನು ತಿಳಿಸಿಕೊಡುತ್ತದೆ. ಎಂದಿಷ್ಟರಿಂದ ಅದು ತಿಳಿಸಿಕೊಡುತ್ತದೆನ್ನುವುದು ಅಸ್ವಾಭಾವಿಕವಲ್ಲ. ಶಕ್ಯ, ಅಶಕ್ಯ ಉಭಯಾರ್ಥಪ್ರತ್ಯಾಯಕತ್ವರೂಪವಾದ (ಶಕ್ಯ ಅಶಕ್ಯ ಎನ್ನುವ ಎರಡು ಅರ್ಥಗಳನ್ನು ತಿಳಿಸಿಕೊಡುವಿಕೆ ಎನ್ನುವ) ಅನಿಯಮವು ವ್ಯಾಪ್ತಿಗ್ರಹಣದಲ್ಲಿ ದೋಷವಿರುವುದು, ಇಲ್ಲದಿರುವುದು ಇವುಗಳಿಂದ ಯುಕ್ತವಾಗುವುದೋ, ಹಾಗೆಯೇ ಶಬ್ದಕ್ಕೂ ಶಕ್ತಿಯನ್ನು ಅನುಸರಿಸಿರುವುದು, ಅನುಸರಿಸದಿರುವುದು ಎನ್ನುವ ವ್ಯುತ್ಪತ್ತಿರೂಪವಾದ ಸಹಕಾರಿ ವಶದಿಂದ ನಿಯಮವಿಲ್ಲದಿದ್ದರೂ ಸ್ವಾಭಾವಿಕ ಶಕ್ತಿಯಿದೆ ಎನ್ನುವುದು ಕೂಡುತ್ತದೆ. ಈ ಅಭಿಪ್ರಾಯದಿಂದಲೂ 'ಪ್ರತ್ಯಕ್ಷವಚ್ಚ' ಎಂದು. ಆದರೆ ಶಬ್ದಕ್ಕೂ ಇಂದ್ರಿಯಕ್ಕೂ ಇಷ್ಟು ವಿಶೇಷವದೆ. ಶಬ್ದವು ಸಂಕೇತದಿಂದಲೂ ಯಥಾರ್ಥಜ್ಞಾನವನ್ನು ಹುಟ್ಟಿಸುತ್ತದೆ. ಕಣ್ಣುಮೊದಲಾದ ಇಂದ್ರಿಯಗಳು ದೋಷವಿದ್ದರೆ ಯಥಾರ್ಥ

ಜ್ಞಾನವನ್ನು ಹುಟ್ಟಿಸಲಾರವು. ಆದಕಾರಣ ಶಬ್ದಕ್ಕೆ ಸಂವಾದವೂ ಪ್ರತ್ಯಕ್ಷ (ಇಂದ್ರಿಯ) ಕ್ಕೆ ವಿಸಂವಾದವೂ ಕೂಡುತ್ತದೆ.

(18) (ಸಂಕೇತವಾದಿಯು ಪ್ರಶ್ನಿಸುವನು.) ಹಾಗಾದರೆ ಶಬ್ದಕ್ಕೂ ಅರ್ಥಕ್ಕೂ ಸ್ವಾಭಾವಿಕ ಸಂಬಂಧವಿದೆ ಎಂದು ಯಾರು ಹೇಳುವರೋ ಅವರಿಗೂ ತಿಳಿಯಲ್ಪಡದೇನೇ ಸ್ವಾಭಾವಿಕ ಸಂಬಂಧವಿರೋಣಮಾತ್ರದಿಂದ ಜ್ಞಾನವು ಹುಟ್ಟಲಾರದು. ಮತ್ತೆ ಸಂಬಂಧವು ತಿಳಿಯಲ್ಪಟ್ಟದ್ದಾಗಿಯೇ ಜ್ಞಾನವನ್ನು ಹುಟ್ಟಿಸುವುದು. ಅಂದರೆ, ಸಂಬಂಧಜ್ಞಾನವು ಆವಶ್ಯಕವು. ಹಾಗೆ ತಿಳಿದುಕೊಳ್ಳುವುದಕ್ಕೆ 'ಈ ಶಬ್ದವು ಈ ಅರ್ಥವನ್ನು ಹೇಳುತ್ತದೆ' ಎನ್ನುವುದಾಗಲೀ, 'ಈ ಶಬ್ದದಿಂದ ಈ ಅರ್ಥವನ್ನು ತಿಳಿಯಬೇಕು' ಎನ್ನುವುದಾಗಲೀ ಸಂಕೇತವೇ ಉಪಾಯವು. ಅಂದರೆ, ಪರಮೇಶ್ವರನ ಇಚ್ಛಾಧೀನವಾದುದು ಯಾವುದು ಸಂಕೇತವೋ ಅದರ ಜ್ಞಾನವೇ ಉಪಾಯವು. ದೇವದತ್ತ ಚೈತ್ರ ಮೊದಲಾದ ಶಬ್ದಗಳು ಹೇಗೆ ಒಬ್ಬೊಬ್ಬರಿಗೆ ಸಾಂಕೇತಿಕಗಳೋ ಹಾಗೆಯೇ ವೃದ್ಧರು ಮಾಡತಕ್ಕ 'ಗೌಃ ಪುಷ್ಪಂ' ಇದುಮೊದಲಾದ ಶಬ್ದಗಳ ವ್ಯವಹಾರವೂ ಸಾಂಕೇತಿಕವೇ. ಆದಕಾರಣ ಹೀಗೆ ಆಯಾಸಪಟ್ಟು ಸ್ವಾಭಾವಿಕ ಸಂಬಂಧವನ್ನು ಒಪ್ಪಿದರೂ ಅದನ್ನು ತಿಳಿಸಲಿಕ್ಕೆ ಸಂಕೇತವು ಆವಶ್ಯಕವಾಗಿರುವುದರಿಂದ ಸಂಕೇತವೆಂದು ಹೇಳುವುದೇ ಪ್ರಶಸ್ತವು. ಅದರಿಂದಲೇ ಪ ಯೋಗವೂ, ಜ್ಞಾನವೂ, ವ್ಯವಹಾರವೂ ಕೂಡುತ್ತದೆ. (19) (ಶಬ್ದಾರ್ಥಗಳಿಗೆ ಸ್ವಾಭಾವಿಕ ಸಂಬಂಧವನ್ನು ಯಾರು ಹೇಳುವರೋ ಅವರಿಗೂ ಸಂಬಂಧಜ್ಞಾನವಾಗಲಿಕ್ಕೆ ಹಿಂದೆ ಹೇಳಿದ ಸಂಕೇತವೇ ಉಪಾಯವು, ಎಂದು ಹೇಳಿದ್ದನ್ನು ದೂಷಿಸುವುದಕ್ಕಾಗಿ ಶಕ್ತಿವಾದಿಯು (ಸಿದ್ಧಾಂತಿಯು) ಹೇಳುತ್ತಾನೆ.) ಹಾಗಾದರೆ ಸ್ವಾಭಾವಿಕವಾದ ಅರ್ಥಸಂಬಂಧವಿಲ್ಲದಿದ್ದರೆ ಕೆಲವು ಶಬ್ದಗಳಿಗೆ ಈ ಸಂಕೇತವೇ ಮಾಡಲು ಸಾಧ್ಯವಿಲ್ಲ. ಏಕೆಂದರೆ, ಶಬ್ದವನ್ನು ನಿರ್ದೇಶಮಾಡಿಯಷ್ಟೆ ಈ ಶಬ್ದದಿಂದ ಈ ಅರ್ಥವನ್ನು ತಿಳಿಯಬೇಕೆಂದು ಅರ್ಥವನ್ನು ಹೇಳಬೇಕು. ಸ್ವಾಭಾವಿಕ ಸಂಬಂಧವಿಲ್ಲದಿದ್ದರೆ ಕೆಲವು ಶಬ್ದಗಳಿಗೆ ನಿರ್ದೇಶವೇ ಸಿದ್ಧಿಸಲಾರದು. ಸಂಕೇತನಿಮಿತ್ತವಾಗಿ ಎಲ್ಲಾ ಶಬ್ದಗಳೂ ಆಯಾಯ ಅರ್ಥವನ್ನು ಹೇಳುತ್ತವೆಂದಾದರೆ, ಸಂಕೇತವನ್ನೇ ಮಾಡದಿರುವುದರಿಂದ ಯಾವ ಶಬ್ದದಿಂದ ಯಾವ ಅರ್ಥವನ್ನು ನಿರ್ದೇಶಮಾಡಿಯಾರು? ಆದಕಾರಣ ಸಂಕೇತಮಾಡೋಣವೇ ಶಬ್ದಗಳಿಗೆ ಸ್ವಾಭಾವಿಕ ಸಂಬಂಧವನ್ನು ಪ್ರತಿಪಾದಿಸುತ್ತದೆಂದು ಸಿದ್ಧಾಂತಿಯು ಹೇಳಕೂಡದು. ಏಕೆಂದರೆ, ಸೃಷ್ಟಿಯ ಆದಿಯಲ್ಲಿ ಹುಟ್ಟಿರುವರು. ಪರಮೇಶ್ವರನ ಅನುಗ್ರಹದಿಂದ ಧರ್ಮ ಜ್ಞಾನ-ವೈರಾಗ್ಯ-ಐಶ್ವರ್ಯ-ಸಂಪನ್ನರೂ ಆದ ಮಹರ್ಷಿಗಳನ್ನು ಕುರಿತು ಪರಮೇಶ್ವರನಿಗೆ ಪ್ರತ್ಯಕ್ಷವಾಗಿ ಕಂಡ ಅರ್ಥದಲ್ಲಿ ಸಂಕೇತವನ್ನು ಮಾಡಲಿಕ್ಕೆ ಸುಕರವೇ ಆಗಿದೆ. ಆ ಮಹಾಮಹರ್ಷ್ಯಾದಿಗಳು ಪ್ರಯೋಜ್ಯವೃದ್ಧನನ್ನು ಕುರಿತು ಮಾಡತಕ್ಕ ವ್ಯವಹಾರದಿಂದ ನಮಗೂ ಸಂಕೇತವನ್ನು ಸುಲಭದಿಂದ ತಿಳಿಯಬಹುದು. ಹೇಗೆಂದರೆ, ಉತ್ತಮ ವೃದ್ಧನ (ಗುರುವಿನ) ಮಾತನ್ನು ಕೇಳಿರುವ ಮಧ್ಯಮವೃದ್ಧ(ಶಿಷ್ಯ)ನಿಗೆ ಯಾವುದಾದರೊಂದು ಕಾರ್ಯದಲ್ಲಿ ಪ್ರವೃತ್ತಿಯಾಗಲೀ, ಹರ್ಷ ಶೋಕ ಭಯಾದಿಗಳಾಗಲೀ ಹುಟ್ಟುವುದರಿಂದ ಸಮೀಪದಲ್ಲಿದ್ದ ಬಾಲಕನು 'ಬೇರೆ ಅನೇಕಗಳು ಇರುತ್ತಿದ್ದರೂ ಉಂಟಾಗದೆ ಇದ್ದು ವಾಕ್ಯವನ್ನು ಕೇಳಿದ ಮೇಲೆಯೇ ಹುಟ್ಟಿರುವುದರಿಂದ ವಾಕ್ಯಶ್ರವಣವೇ ಜ್ಞಾನಕ್ಕೆ ಕಾರಣವೆಂದು ತಿಳಿಯುತ್ತಾನೆ. ಹೀಗೆಯೇ ಒಂದು ಶಬ್ದದ ಬದಲಿಗೆ ಮತ್ತೊಂದು ಶಬ್ದವನ್ನು ಹಾಕಿರುವುದರಿಂದ ಬೇರೆ ವಿಧಗಳಾದ ಪ್ರವೃತ್ತ್ಯಾದಿಗಳು ಹುಟ್ಟುವ ಪ್ರಯುಕ್ತ ಆ ವಾಕ್ಯವು ಅದಕ್ಕೆ ಕಾರಣವೆಂದು ತಿಳಿಯುತ್ತಾನೆ. ಮತ್ತು ಆಯಾಯ ಪದಗಳು ಆಯಾಯ ಅರ್ಥಗಳನ್ನು

ಹೇಳುವುದರಿಂದ ಆಯಾಯು ಪದಗಳಿಗೆ ಆಯಾಯು ಅರ್ಥಗಳಲ್ಲಿ ವಾಚಕತ್ವವನ್ನು ತಿಳಿಯುತ್ತಾನೆ. ಸ್ವಾಭಾವಿಕ ಶಕ್ತಿಯನ್ನು ಅಂಗೀಕರಿಸುವವರೂ ಕೂಡ ಇಂತಹ ಪ್ರಕ್ರಿಯೆಯನ್ನು ಅನುಸರಿಸಬೇಕು. ಸ್ವಾಭಾವಿಕ ಶಕ್ತಿಯೂ ಕೂಡ ಇರೋಣ ಮಾತ್ರದಿಂದ ಶಾಬ್ದಬೋಧಕ್ಕೆ ಕಾರಣವಾಗಲಾರದು. ಹೀಗೆ ಸಂಕೇತವಾದಿಗಳು ಶಕ್ತಿವಾದಿಯು ಶಂಕಿಸಿದ್ದನ್ನು ನಿರಾಕರಿಸಿದರು. (೭೦) ( ಪುನಃ ಸಿದ್ಧಾಂತಿಯು ಶಂಕಿಸುವನು.) ಇದಾಗ ಬಹುದಿತ್ತು. ಶಬ್ದಗಳಿಗೆ ಸಾಂಕೇತಿಕ ಸಂಬಂಧವು ಸ್ವಾಭಾವಿಕವಲ್ಲವಾದರೆ ಈ ಶಬ್ದವು ಸಾಧುವು, ಈ ಶಬ್ದವು ಅಸಾಧುವು ಎಂದು ವಿಭಾಗಮಾಡತಕ್ಕ ವ್ಯಾಕರಣವು ವ್ಯರ್ಥವು. ಯಾವ ಶಬ್ದಕ್ಕೆ ವಾಚಕತ್ವವು ಸ್ವಾಭಾವಿಕವಾಗಿದೆಯೋ, ಆ ಶಬ್ದವು ಸಾಧುವು, ಬೇರೆಯಾದುದು ಅಸಾಧುವು. ಸಾಂಕೇತಿಕವೆಂದು ಇಟ್ಟುಕೊಂಡರೆ ಎಲ್ಲಾ ಶಬ್ದಗಳೂ ಸಾಧುಗಳೆಂದಾಗಲೀ, ಅಸಾಧುಗಳೆಂದಾಗಲೀ ಆಗಬೇಕಾಗುವುವು. ಅಂತೂ ಈ ಶಬ್ದವು ಸಾಧುವು. ಇದು ಅಸಾಧುವು ಎಂದು ವಿಭಾಗಮಾಡತಕ್ಕ ವ್ಯಾಕರಣ ಶಾಸ್ತ್ರವು ವ್ಯರ್ಥವೇ ಆಗಬೇಕಾಗುವುದು. ಎಂದರೆ— ಹೀಗೆ ಹೇಳಕೂಡದು. ಪರಮೇಶ್ವರನು ಮಾಡಿದ ಸಂಕೇತವನ್ನು ರಕ್ಷಿಸುವುದಕ್ಕಾಗಿ ವ್ಯಾಕರಣವು. ಅಂತೂ ಈ ಪದಗಳಿಗೆ ಈ ಅರ್ಥದಲ್ಲಿ ಪರಮೇಶ್ವರನು ಸಂಕೇತ ಮಾಡಿದ್ದಾನೆ. ಆ ಪದಗಳು ಆ ಅರ್ಥಗಳಲ್ಲಿ ಸಾಧುಗಳು. ಬೇರೆ ಅರ್ಥಗಳಲ್ಲಿ ಸಾಧುಗಳಲ್ಲ. ಹೀಗೆ ವಿಭಾಗಕ್ಕಾಗಿ ವ್ಯಾಕರಣವು ಸಾರ್ಥಕವೇ ಆಗಿದೆ. ಎಂದು ಸಂಕೇತವಾದಿಗಳು ಪೂರ್ವಪಕ್ಷಮಾಡಿದರೆ —

(21) ಈ ವಿಷಯದಲ್ಲಿ ನಾವು (ಸಿದ್ಧಾಂತಿಗಳು) ಹೀಗೆ ಸಮಾಧಾನವನ್ನು ಹೇಳುವೆವು. ಪರರ ಮತದಲ್ಲಿಯೂ (೧) ಈಶ್ವರ ಸಂಕೇತವೇ ಅರ್ಥಜ್ಞಾನಕ್ಕೆ ಕಾರಣವೋ, (೨) ಈಶ್ವರಾತಿರಿಕ್ತರಾದ ಮಹರ್ಷ್ಯಾದಿಗಳ ಸಂಕೇತವೂ ಜ್ಞಾನಕ್ಕೆ ಕಾರಣವೋ,? ೧ನೇ ಕಲ್ಪದಲ್ಲಿ ಈಶ್ವರ ಸಂಕೇತಕ್ಕೆ ಸರ್ವರನ್ನು ಕುರಿತು ವಿಶೇಷವಿಲ್ಲದಿರುವುದರಿಂದ ಋಷಿ, ಆರ್ಯ, ಮ್ಲೇಂಛ ಇವರ ಪ್ರಯೋಗ ಜ್ಞಾನ ವ್ಯವಹಾರಗಳು ಅವರವರ ಇಚ್ಛಾನುಸಾರವಾಗಲು ಕಾರಣವೇನು? ಮತ್ತು ಈಶ್ವರನ ಸಂಕೇತವೂ ನಮ್ಮಿಂದ ಗೃಹೀತವಾದರೇನೇ ಶಾಬ್ದಬೋಧಕ್ಕೆ ಕಾರಣವಾಗುವುದು. ಸ್ವರೂಪತಃ ಇದ್ದದ್ದು (ಗೃಹೀತವಾಗದೇನೇ ಇದ್ದದ್ದು) ಅರ್ಥ ಜ್ಞಾನಕ್ಕೆ ಪ್ರಯೋಜಕವಾಗಲಾರದು. ಅಗೃಹೀತವಾಗಿಯೇ ಈಶ್ವರನ ಸಂಕೇತವು ಅರ್ಥಜ್ಞಾನಕ್ಕೆ ಪ್ರಯೋಜಕವಾಗುವುದಾದರೆ ಈಶ್ವರಸಂಕೇತವು ಸ್ವರೂಪಸತ್ತಾಗಿ ಇದ್ದ ಪ್ರಯುಕ್ತ ವ್ಯುತ್ಪನ್ನನಂತೆಯೇ ಅವ್ಯುತ್ಪನ್ನನಿಗೂ, ಅರ್ಥಜ್ಞಾನವು ಬರಬೇಕಾಗುವುದು. ಅದರ ಜ್ಞಾನವಾದರೂ, ನೀನು ಹೇಳಿದ ಪ್ರಕಾರ ಸೃಷ್ಟ್ಯಾದಿಯಲ್ಲಿ ಹುಟ್ಟಿರುವ ಋಷಿಮೊದಲಾದವರ ಉಪದೇಶಾದಿಗಳಿಂದಲೇ. ಅಂತೂ ಈಶ್ವರಾತಿರಿಕ್ತರಾದ ಋಷ್ಯಾದಿಗಳ ಉಪದೇಶವೇ ಸ್ವಾಭಾವಿಕ ಸಂಬಂಧರೂಪವಾದ ಶಬ್ದಶಕ್ತಿಗೆ ಜ್ಞಾಪಕವಾಗಲಿ. ಅದೃಷ್ಟವಾದ ಈಶ್ವರಸಂಕೇತವನ್ನು ಕಲ್ಪಿಸಿದರಿಂದ ಏನು ಪ್ರಯೋಜನವು? ಹೀಗೆ ಸ್ವಾಭಾವಿಕ ಸಂಬಂಧವಿದೆ ಎನ್ನುವ ಕಲ್ಪದಲ್ಲಿ ಯಾವ ದೋಷವು ಉಕ್ತವಾಗಿಯದೋ ಆ ದೂಷಣವು ಪರಮೇಶ್ವರ ಕೃತ ಸಂಕೇತವೆನ್ನುವ ಪಕ್ಷದಲ್ಲಿಯೂ ಸಮಾನವೇ. (22) ಹಾಗಾದರೆ ಈಶ್ವರಾತಿರಿಕ್ತ ಮಹರ್ಷ್ಯಾದಿಗಳೂ ಕೂಡ ಈಶ್ವರಕೃತವಾದ ಸಂಕೇತವನ್ನು ತಿಳಿಸುವುದಲ್ಲದೆ, ಮಾಡುವುದಲ್ಲ. ಎಂದು ಸಂಕೇತವಾದಿಗಳು ಹೇಳಿದರೆ— ಹಾಗಾದರೆ, ನಮ್ಮ ಮತದಲ್ಲಿಯೂ ವೃದ್ಧನು ಅಂದರೆ ಪ್ರಥಮದಲ್ಲಿ ಉಪದೇಶಾದಿಗಳಿಂದ ಶಕ್ತಿಯನ್ನು ತಿಳಿಸಿಕೊಡತಕ್ಕ ಶ್ರೀಹರಿಯು ಸ್ವಾಭಾವಿಕ ಶಕ್ತಿಯನ್ನು ತಿಳಿಸುತ್ತಾನಲ್ಲದೆ ಅಪೂರ್ವವಾದ ಸಂಕೇತವನ್ನು ಮಾಡುವುದಿಲ್ಲ. ಹೀಗೆ ಸಮಾನವೇ. (23) ೨ನೇ ಕಲ್ಪದಲ್ಲಿ (ಈಶ್ವರ ಸಂಕೇತಮಾತ್ರವೇ ಅರ್ಥಜ್ಞಾನಕ್ಕೆ ಅಂಗವಲ್ಲ. ಮತ್ತೆ ಈಶ್ವರಾತಿರಿಕ್ತರಾದ ಋಷ್ಯಾದಿಗಳ ಸಂಕೇತವೂ,

ಅರ್ಥಜ್ಞಾನಕ್ಕೆ ಅಂಗವು. ಎನ್ನುವ ಎರಡನೇ ಪಕ್ಷದಲ್ಲಿ ಆದರೂ) ವ್ಯಾಕರಣಾದಿಗಳಿಗೆ ವೈಯರ್ಥ್ಯವು. 'ಸಾಧುಭಿರ್ಭಾಷಿತವ್ಯಂ' ಎನ್ನುವ ವಚನದಿಂದ ಸಾಧುಶಬ್ದ ವ್ಯವಹಾರಮಾತ್ರವು ಶಬ್ದಕ್ಕೆ ಪ್ರಯೋಜನವು. ವ್ಯಾಕರಣಶಾಸ್ತ್ರಕ್ಕೆ ಪ್ರಯೋಜನಭೂತವಾದ ವ್ಯವಹಾರಮಾತ್ರವಾದರೂ ಈಶ್ವರ ಸಂಕೇತಪಕ್ಷದಲ್ಲಿಯೂ, ಈಶ್ವರೇತರರಾದ ಋಷ್ಯಾದಿಗಳ ಸಂಕೇತಪಕ್ಷದಲ್ಲಿಯೂ ಸಮಾನವೇ. (ಅಂದರೆ ಈಶ್ವರಕೃತಸಂಕೇತ ಈಶ್ವರಾತಿರಿಕ್ತಕೃತಸಂಕೇತ ಈ ಎರಡರಲ್ಲಿಯೂ ವ್ಯವಹಾರಮಾತ್ರವೇ ಪ್ರಯೋಜನವಾಗಿರುವುದರಿಂದ ವ್ಯಾಕರಣಶಾಸ್ತ್ರಕ್ಕೆ ಈಶ್ವರಾತಿರಿಕ್ತರಾದ ಋಷ್ಯಾದಿಗಳು ಮಾಡಿದ ಸಂಕೇತ ಪರಿಪಾಲನಾರ್ಥತ್ವವೂ ಪ್ರಾಪ್ತವಾಗುವುದರಿಂದ, ಯಾವ ಪದಗಳಿಗೆ ಯಾವ ಅರ್ಥಗಳಲ್ಲಿ ಪರಮೇಶ್ವರನಿಂದ ಸಂಕೇತವು ಮಾಡಲ್ಪಟ್ಟಿದೋ ಅದರಲ್ಲಿ ಅವುಗಳು ಸಾಧುಗಳು, ಬೇರೆ ಕಡೆಗಳಲ್ಲಿ ಅಸಾಧುಗಳು ಎಂದು ವಿಭಾಗಕ್ಕಾಗಿ ವ್ಯಾಕರಣವು ಸಾರ್ಥಕವಾಗಿದೆ. ಆದಕಾರಣ ಪರಮೇಶ್ವರನು ಮಾತ್ರ ಮಾಡಿದ ಸಂಕೇತವನ್ನು ಪರಿಪಾಲನ ಮಾಡುವುದಕ್ಕಾಗಿ ವ್ಯಾಕರಣಶಾಸ್ತ್ರವು ಆವಶ್ಯಕವು ಎಂದು ಯಾವುದು ಉಕ್ತವಾಗಿಯದೋ ಅದು ಅಯುಕ್ತವು.) (24) ಪರಮೇಶ್ವರ ಸಂಕೇತಕರಣವು ಅದೃಷ್ಟಾರ್ಥಕವಾಗಿರುವುದರಿಂದ ವ್ಯಾಕರಣ-ನಿಗಮ-ನಿಘಂಟು ಮೊದಲಾದುದು ಸ್ವಾಭಾವಿಕಶಕ್ತಿಗೆ ಜ್ಞಾಪಕವಾಗಲಾರದು, ಎಂದರೆ— ಹಾಗೆ ಹೇಳಕೂಡದು ಆ ವಿಷಯದಲ್ಲಿ ಪ್ರಮಾಣವಿಲ್ಲ. (25) **'ಏಕಃ ಶಬ್ದಃ ಸಮ್ಯಕ್ ಜ್ಞಾತಃ ಸುಷ್ಠುಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಗ್ಭವತಿ'** ಎನ್ನುವ ಬ್ರಾಹ್ಮಣವೂ, **'ನ ಮ್ಲೇಂಛಿತವೈ ನಾಪಭಾಷಿತವೈ ಮ್ಲೇಂಛೋ ಹ ವಾ ಏಷ ಯದಪಶಬ್ದಃ'** ಇತ್ಯಾದಿ ಶ್ರುತಿಯೂ, **'ಯಸ್ತು ಪ್ರಯುಂಕ್ತೇ ಕುಶಲೋ ವಿಶೇಷೈಃ ಶಬ್ದಾನ್ಯಥಾವದ್ವ್ಯವಹಾರಕಾಲೇ । ಸೋಽನಂತಮಾಪ್ನೋತಿ ಜಯಂ ಪರತ್ರ ವಾಗ್ಯೋಗವಿದ್ದುಷ್ಯತಿ ಚಾಪಶಬ್ದೈಃ'** ॥ ಇದು ಮೊದಲಾದ ಸ್ಮೃತಿಗಳು ಸಂಕೇತ ಪಕ್ಷವನ್ನು ಸಮರ್ಥಿಸುತ್ತವೆ ಎಂದರೆ ಹಾಗೆ ಹೇಳಕೂಡದು. ಅವುಗಳೂ ಸಂಕೇತ, ಸ್ವಾಭಾವಿಕಶಕ್ತಿ- ಈ ಎರಡು ಪಕ್ಷಗಳಲ್ಲಿ ಉದಾಸೀನಗಳಾಗಿವೆ. ಅಂದರೆ, ಈ ಎರಡರಲ್ಲಿ ಯಾವುದೊಂದನ್ನೂ ನಿರ್ಧರಿಸಿ ಹೇಳುವುದಿಲ್ಲ. ಮತ್ತೆ ಸಾಧುಶಬ್ದಗಳ ಜ್ಞಾನ ಪ್ರಯೋಗಗಳು ಪುರುಷಾರ್ಥವನ್ನೂ, ಅಸಾಧುಶಬ್ದಗಳ ಜ್ಞಾನ ಪ್ರಯೋಗಗಳು ಮಹಾನರ್ಥವನ್ನು ಮಾಡುತ್ತವೆ ಎಂದೇ ಹೇಳಿರುತ್ತವೆ. (26) ವೃದ್ಧರ ವ್ಯವಹಾರವೂ ಚೈತ್ರಾದಿ ಶಬ್ದಗಳಂತೆಯೇ ಸಂಕೇತಪೂರ್ವಕವೇ. ಆದಕಾರಣ ಸಂಕೇತವೇ ಸಾಕು ಸ್ವಾಭಾವಿಕ ಸಂಬಂಧವು ಬೇಡ ಎಂದು ಯಾವುದು ಹೇಳಲ್ಪಟ್ಟಿದೋ, ಅದು ಅಯುಕ್ತವು. ಏಕೆಂದರೆ, ಅಂತ್ಯವಾದ ಉಪದೇಶಾದಿರೂಪವಾದ ಸಹಕಾರಿಯನ್ನು ಇಟ್ಟುಕೊಂಡು ಸ್ವಾಭಾವಿಕ ಶಕ್ತಿಯನ್ನು ತಿರಸ್ಕರಿಸಿದರೆ ಅತಿಪ್ರಸಂಗವು. ಅಂದರೆ, ಅಂತ್ಯತಂತುಸಂಯೋಗಾದಿಗಳೇ ಪಟಾದಿಗಳನ್ನು ಹುಟ್ಟಿಸುತ್ತವೆಂದು ಉಪಪನ್ನಗಳಾಗುವಾಗ ತಂತುಮೊದಲಾದವುಗಳು ಪಟಾದಿಗಳನ್ನು ಹುಟ್ಟಿಸುತ್ತವೆ ಎಂದೂ ಕಲ್ಪಿಸದೆ ಹೋಗಬೇಕಾಗುವವು. ಮಣ್ಣು ನೀರು ಮೊದಲಾದ ಸಹಕಾರಿಸಂಪತ್ತನ್ನು ಇಟ್ಟುಕೊಂಡು ಬೀಜಕ್ಕೆ ಅಂಕುರವನ್ನು ಹುಟ್ಟಿಸುವ ಸಾಮರ್ಥ್ಯವೂ ಇಲ್ಲವೆಂದಾಗಬೇಕಾಗುವುದು. ಅಥವಾ, ಶಕ್ತಿಯನ್ನು ಇಟ್ಟುಕೊಂಡು ಉಪದೇಶಾದಿಗಳನ್ನೂ ತಿರಸ್ಕರಿಸಬಹುದು. (27) ಹಾಗಾದರೆ ಸ್ವಾಭಾವಿಕ ಶಕ್ತಿಯಿದೆ ಎನ್ನುವಲ್ಲಿ ಏನು ಪ್ರಮಾಣವು? ಅರ್ಥಜ್ಞಾನವು, ಶಬ್ದಸ್ವರೂಪ ಸಹಕಾರಿಭೂತಗಳಾದ ಸಂಕೇತಗಳಿಂದಲೇ ಕೂಡಬಹುದು ಎಂದು ಸಂಕೇತವಾದಿಗಳು ಶಂಕಿಸಿದರೆ— ಸಮಾಧಾನವನ್ನು ಹೇಳುವೆವು. ಸ್ವರೂಪಸಹಕಾರಿಗಳಿಂದ ಬೇರೆಯಾದ ಅತೀಂದ್ರಿಯವಾದ ಶಕ್ತಿಯು (೧) ಎಲ್ಲಿಯೂ ಅಂಗೀಕರಿಸಲ್ಪಡುವುದಿಲ್ಲ, (ಅಂದರೆ, ವಹ್ನ್ಯಾದಿಸ್ವರೂಪ, ಕರತಲಾನಲ

ಸಂಯೋಗರೂಪ ಸಹಕಾರಿ ಇವುಗಳಿಂದಲೇ ಕಾರ್ಯವು ಹುಟ್ಟುವಾಗ ವಹ್ನ್ಯಾದಿಗಳಲ್ಲಿಯೂ ದಾಹಾನುಕೂಲವಾದ ಅತೀಂದ್ರಿಯವಾದ ವಿಶಿಷ್ಟಧರ್ಮರೂಪವಾದ ಶಕ್ತಿಯು ಅಂಗೀಕರಿಸಲ್ಪಡುವುದಿಲ್ಲ.) ಎಂದರೆ ಹಾಗೆ ಹೇಳಕೂಡದು. ಸ್ವಾಭಾವಿಕಶಕ್ತಿಯನ್ನು ಒಪ್ಪಲೇಬೇಕೆಂದು ಲಿಂಗಪಾದದಲ್ಲಿ 'ಇತಿ ಪೈಂಗಿಶ್ರುತಿಃಪ್ರಾಹ ಶಕ್ತಿಸದ್ಭಾವ ಏವ ತು' ಎನ್ನುವುದನ್ನು ವ್ಯಾಖ್ಯಾನಮಾಡುವಾಗ ಸಮರ್ಥಿಸುತ್ತೇವೆ. (೨) ಅತೀಂದ್ರಿಯವಾದ ಶಕ್ತಿಯು ಶಬ್ದದಲ್ಲಿಯೇ ಅಂಗೀಕರಿಸಲ್ಪಡುವುದಿಲ್ಲ ಎಂದರೆ— ಆ ಕಲ್ಪದಲ್ಲಿ ಈಗಿನವರು ಸಂಕೇತಮಾಡತಕ್ಕವರಲ್ಲವೆಂದು ನಿಮಗೂ ಸಮ್ಮತವೇ. ಲೋಕವಿಲಕ್ಷಣನು ಸಂಕೇತಮಾಡತಕ್ಕವನೊಬ್ಬನಿದ್ದಾನೆನ್ನುವಲ್ಲಿ ಪ್ರಮಾಣವೇ ಇಲ್ಲ. ಅಂತೂ ಶಬ್ದಗಳಿಗೆ ಅರ್ಥದಿಂದ ಸಂಬಂಧವು ಸ್ವಾಭಾವಿಕವೆಂದೇ ತಿಳಿಯುತ್ತದೆ. (28) ಹಾಗಾದರೆ 'ಗವಾದಿಶಬ್ದಾಃ ಸಾಂಕೇತಿಕಾಃ ಶಬ್ದತ್ವಾತ್ ದೇವದತ್ತಾದಿಶಬ್ದವತ್' ಗೋ ಮೊದಲಾದ ಶಬ್ದಗಳು ಸಂಕೇತಸಿದ್ಧಗಳು, ಶಬ್ದವಾಗಿರುವುದರಿಂದ ದೇವದತ್ತಮೊದಲಾದ ಶಬ್ದಗಳಂತೆಯೇ ಎಂದರೆ— ಇಲ್ಲಿ (೧) ಸಾಂಕೇತಿಕತ್ವವನ್ನು ಮಾತ್ರ ಸಾಧಿಸಿದರೆ ಸಿದ್ಧಸಾಧನವು. ಗುಪ್ತಭಾಷಣಾದಿಗಳಲ್ಲಿ ನಾನು ಗೋ ಶಬ್ದವನ್ನು ಘಟದಲ್ಲಿಯೂ ಸಂಕೇತಮಾಡಿರುವೆನು. (೨) ಸಾಸ್ನಾದಿಮತ್ತ್ವದ ಅರ್ಥದಲ್ಲಿ ಸಾಂಕೇತಿಕತ್ವವನ್ನು ಸಾಧಿಸುವುದಾದರೆ ಘಟಾದಿ ಶಬ್ದಗಳಲ್ಲಿ ವ್ಯಭಿಚಾರವು. ಎಲ್ಲಾ ಶಬ್ದಗಳೂ ಸಾಸ್ನಾದಿಮತ್ತ್ವದ ಪಿಂಡದಲ್ಲಿ ಸಂಕೇತಮಾಡಲ್ಪಟ್ಟಿವೆ ಎನ್ನುವಲ್ಲಿ ಪ್ರಮಾಣವಿಲ್ಲವಷ್ಟೆ. (29) ಗೋಶಬ್ದಃ ಸಾಸ್ನಾದಿಮತಿ ಅರ್ಥೇ ಸಂಕೇತಿತಃ ತತ್ರ ಪ್ರಯುಜ್ಯಮಾನಶಬ್ದತ್ವಾತ್ ಗಾವ್ಯಾದಿ ಶಬ್ದವತ್=ಗೋಶಬ್ದವು ಸಾಸ್ನಾದಿಮತ್ತ್ವದ ಅರ್ಥದಲ್ಲಿ ಸಂಕೇತಮಾಡಲ್ಪಟ್ಟಿದೆ, ಅದರಲ್ಲಿ ಪ್ರಯೋಗಿಸಲ್ಪಡತಕ್ಕ ಶಬ್ದವಾಗಿರುವುದರಿಂದ ಗಾವ್ಯಾದಿ ಶಬ್ದಗಳಂತೆಯೇ, ಎಂದು ಹೇಳಕೂಡದು. ಅಸಾಧುಶಬ್ದತ್ವವು ಉಪಾಧಿಯು. (ಸಾಧ್ಯವ್ಯಾಪಕವಾದುದು ಸಾಧನಾವ್ಯಾಪಕವಾದುದು.) ಆದಕಾರಣ ಶಬ್ದಗಳಿಗೆ ಅರ್ಥಸಂಬಂಧವು ಕೂಡುವಪ್ರಯುಕ್ತ ಅಪ್ರಾಮಾಣ್ಯವಿಲ್ಲವು. (30) ಆಪ್ತನೂ ಅನಾಪ್ತನೂ ಪ್ರಯೋಗಿಸಿರುವ ವಾಕ್ಯಗಳಲ್ಲಿ ಏನಾದರೂ ವಿಶೇಷವು ಉಂಟೋ ಇಲ್ಲವೋ ಇತ್ಯಾದಿಗಳಿಂದ ಯಾವುದು ದೋಷವು ಉಕ್ತವಾಗಿಯದೋ, ಅದೂ ಅಯುಕ್ತವು. ಪ್ರತ್ಯಕ್ಷದಂತೆಯೇ ಕೂಡುತ್ತದೆ. ಹೇಗೆಂದರೆ, ಚಕ್ಷುರಾದಿ ಪ್ರತ್ಯಕ್ಷವು ಕೆಲವುಕಡೆ ಯಥಾರ್ಥಜ್ಞಾನವನ್ನೂ, ಕೆಲವುಕಡೆ ಅಯಥಾರ್ಥಜ್ಞಾನವನ್ನೂ ಹುಟ್ಟಿಸುವುದಾದರೂ ಪ್ರಮಾಣವೆಂದು ಅಂಗೀಕೃತವೇ ಆಗಿದೆ. ದೋಷವಿರುವುದು, ಇಲ್ಲದಿರುವುದು ಇವುಗಳಿಂದ ಅಲ್ಲಿ ಭೇದವೆಂದರೆ— ಹಾಗಾದರೆ, ಇಲ್ಲಿಯೂ ಅನಾಪ್ತನಾದ ವಕ್ತೃಪುರುಷನು ಇರುವುದು, ಇಲ್ಲದಿರುವುದು ಇವುಗಳಿಂದ ಭೇದವಿರುವುದು. ವಕ್ತೃಪುರುಷನು ವಾಕ್ಯೋಚ್ಚಾರಣದಲ್ಲಿಯೇ ಉಪಯುಕ್ತನಾಗಿದ್ದಾನೆಂದು ಹೇಳಕೂಡದು. ಏಕೆಂದರೆ, ಹೇಳುವವನು ಅದೇ ವಾಕ್ಯವನ್ನು ಅಯೋಗ್ಯವಿಷಯದಲ್ಲಿ ಪ್ರಯೋಗಿಸಿದರೆ, ಹರಿತವಾದ ಕತ್ತಿಯನ್ನು ಆಕಾಶದಲ್ಲಿ ಪ್ರಯೋಗಿಸುವವನಂತೆಯೇ ದುಷ್ಟವನ್ನಾಗಿ ಮಾಡುತ್ತಾನೆ. ಇಲ್ಲವಾದರೆ ಅನುಮಾನವೂ ಅಪ್ರಮಾಣವಾಗಬೇಕಾಗುವುದು. ಕೃತಕತ್ವವೆನ್ನುವ ಹೇತುವು ಶಬ್ದಕ್ಕೆ ಅನಿತ್ಯತ್ವವನ್ನು ಸಾಧಿಸುವ ವಿಷಯದಲ್ಲಿ ಸಾಧುವು. ಬೆಂಕಿಯು ಬಿಸಿಯಲ್ಲ ಎಂದು ಸಾಧಿಸಲಿಕ್ಕೆ ಅಸಾಧುವು. ಇದಕ್ಕೆ ಕಾರಣವೇನು? ವ್ಯಾಪ್ತಿಪಕ್ಷಧರ್ಮತೆಗಳು ಇದ್ದಪ್ರಯುಕ್ತ ಅನಿತ್ಯತ್ವವಿಷಯದಲ್ಲಿ ಸಾಧುವು. ಅವುಗಳು ಇಲ್ಲದಿರುವುದರಿಂದ ಬೆಂಕಿಯು ತಣ್ಣಗಿದೆ ಎನ್ನುವ ವಿಷಯದಲ್ಲಿ ಅಸಾಧುವು ಎಂದು ಹೇಳಕೂಡದು. ಅಂತಹ ಸ್ಥಳದಲ್ಲಿ ಅನುಮಾನವನ್ನು ದೂಷಿಸುವುದು ಬಾಧವೆನ್ನುವುದು ಪ್ರತ್ಯೇಕವೇ ದೋಷವದೆ ಎಂದೇ ಹೇಳುವೆವು. ಆದಪ್ರಯುಕ್ತ ಅಯೋಗ್ಯವಿಷಯವೃತ್ತಿತ್ವ ತದಭಾವರೂಪವಾದ ವಿಶೇಷವನ್ನೇ ಹೇಳಬೇಕು. ಅದು ಶಬ್ದದಲ್ಲಿಯೂ ಸಮಾನವೇ.

ಈ ಅಭಿಪ್ರಾಯದಿಂದಲೂ 'ಪ್ರತ್ಯಕ್ಷವಚ್ಚ' ಎಂದು ಹೇಳಿದ್ದು. (31) ಆಪ್ತ-ಅನಾಪ್ತಪ್ರಣೀತ ವಾಕ್ಯಗಳಲ್ಲಿ ಏನಾದರೂ ವಿಶೇಷವು ಉಂಟೋ ಇಲ್ಲವೋ ಎಂದು ಹೇಳಿದ ದೋಷಭಯದಿಂದ ಕೆಲವರು ಶಬ್ದಗಳಿಗೆ ಅನುಮಾನದಲ್ಲಿ ಅಂತರ್ಭಾವವೆನ್ನುವರು. ಅಂದರೆ, 'ಏತಾನಿ ಪದಾನಿ ಸ್ವಸ್ಮಾರಿತಾರ್ಥ ಸಂಸರ್ಗಜ್ಞಾನಪೂರ್ವಕಾಣಿ ಆಕಾಂಕ್ಷಾದಿಮತ್ಪದಕದಂಬಕತ್ವಾತ್ ಗಾಮಾನಯ ದಂಡೇನ ಇತ್ಯಾದಿ ಪದಕದಂಬಕವತ್' ಈ ಪದಗಳು ತನ್ನಿಂದ ಸ್ಮರಿಸಲ್ಪಟ್ಟ ಅರ್ಥಗಳ ಸಂಬಂಧಜ್ಞಾನಪೂರ್ವಕಗಳು ಆಕಾಂಕ್ಷಾದಿಗಳುಳ್ಳ ಪದಗಳ ಸಮೂಹವುಳ್ಳದ್ದಾದಪ್ರಯುಕ್ತ ಕೋಲನ್ನು ಹಿಡಿದು ಗೋವನ್ನು ತಾ ಇದುಮೊದಲಾದ ಪದಗಳ ಸಮೂಹದಂತೆ ಎನ್ನುವ ಅನುಮಾನದಿಂದ ವಕ್ತೃಪುರುಷನ ಜ್ಞಾನದಲ್ಲಿ ವಿಷಯವಾಗಿ ಸಂಸರ್ಗವು ಸಿದ್ಧಿಸುವುದರಿಂದ ಅನುಮಾನದ ರೀತಿಯಿಂದಲೇ ಪ್ರಾಮಾಣ್ಯವು. ಶಬ್ದದ ರೀತಿಯಿಂದ ಅಲ್ಲ. ಹೀಗೆ ಅನುಮಾನದಲ್ಲಿ ಅಂತರ್ಭಾವವನ್ನು ಇಚ್ಛಿಸುತ್ತಾರೆ. (32) ಇನ್ನು ಕೆಲವರು ವೇದವು ಅಪೌರುಷೇಯವಾಗಿರುವ ಪ್ರಯುಕ್ತ, ಹೇಳುವವನೇ ಇಲ್ಲದಿರುವುದರಿಂದ, ಹಿಂದಿನ ಅನುಮಾನದಿಂದ ವಕ್ತೃಜ್ಞಾನದಲ್ಲಿ ವಿಷಯವಾಗಿ ಸಂಸರ್ಗವು ಸಿದ್ಧಿಸುತ್ತದೆಂದು ಹೇಳಲಿಕ್ಕೆ ಬಾರದಿರುವುದರಿಂದ ಶಬ್ದತ್ವರೂಪದಿಂದಲೇ ಪ್ರಾಮಾಣ್ಯವೆನ್ನುತ್ತಾರೆ. ಪೌರುಷೇಯಗಳಿಗಾದರೂ ಅನುಮಾನರೂಪದಿಂದ ಎನ್ನುತ್ತಾರೆ. ಅವೆರಡೂ ಇದರಿಂದಲೇ ಅಯುಕ್ತವು. ಮತ್ತೆ ಪ್ರತ್ಯಕ್ಷದಂತೆಯೂ,ಅನುಮಾನದಂತೆಯೂ ವೈದಿಕ-ಲೌಕಿಕ ಎಲ್ಲಾ ಶಬ್ದಗಳಿಗೂ ಶಬ್ದತ್ವರೂಪದಿಂದಲೇ ಪ್ರಾಮಾಣ್ಯವು. ಅನುಮಾನತ್ವರೂಪದಿಂದ ಪ್ರಾಮಾಣ್ಯವಲ್ಲ. ಆದುದರಿಂದಲೇ 'ಶ್ರುತಿಪ್ರಾಮಾಣ್ಯಯೋಗತಃ' ಎನ್ನುವಲ್ಲಿ ಶ್ರುತಿಯು ಪ್ರಕೃತವಾಗಿದ್ದರೂ ಎಲ್ಲಾ ಶಬ್ದಗಳನ್ನು ತೆಗೆದುಕೊಳ್ಳುವುದಕ್ಕಾಗಿ 'ಸ್ವತ ಏವಾಗಮಸ್ಯ ಹಿ' ಎನ್ನುವಲ್ಲಿ 'ಆಗಮಸ್ಯ' ಎಂದುಕ್ತವಾಗಿದೆ. ಹಿ ಶಬ್ದವು ಪ್ರಮಾಣಸಿದ್ಧವಾಗಿದೆ ಎಂದು ತೋರಿಸುವುದಕ್ಕಾಗಿ—

(33) ಆದಾಗ್ಯೂ ವೇದಗಳಿಗೆ ಪ್ರಾಮಾಣ್ಯವು ಕೂಡುವುದಿಲ್ಲ ಅನೃತ ವ್ಯಾಹತಿ ಪುನರುಕ್ತಿದೋಷಗಳು ಇದ್ದಪ್ರಯುಕ್ತ ವಂಚಕನ ಮಾತಿನಂತೆ ಅನೃತವು ಅಪ್ರಮಾಣವು. ವೇದವೂ ಅನೃತವೇ. ಅಂದರೆ, ಇಲ್ಲದೆಇದ್ದದ್ದನ್ನೇ ಹೇಳುತ್ತದೆ. ಹೇಗೆಂದರೆ— ಪುತ್ರೇಷ್ಟ್ಯಾ ಯಜೇತ ಪುತ್ರಕಾಮಃ= ಮಕ್ಕಳನ್ನು ಹೊಂದಲಿಚ್ಛಿಸುವವನು ಪುತ್ರಕಾಮೇಷ್ಟಿಯನ್ನು ಮಾಡಬೇಕು. ಕಾರೀರ್ಯಾ ಯಜೇತ ವೃಷ್ಟಿಕಾಮಃ=ಮಳೆಯನ್ನು ಇಚ್ಛಿಸುವವನು ಕಾರೀರೀ ಯಾಗ ಮಾಡಬೇಕು, ಎಂದು ಶ್ರುತಿಯಿದ್ದರೂ ಪುತ್ರಕಾಮೇಷ್ಟಿಯನ್ನು ಮಾಡಿದರೂ ಪುತ್ರೋತ್ಪತ್ತಿಯಾಗುವುದಿಲ್ಲ. ಕಾರೀರೀ ಯಾಗ ಮಾಡಿದರೂ ಮಳೆಯು ಬರುವುದಿಲ್ಲ. (೨) ಉನ್ಮತ್ತನ ವಾಕ್ಯದಂತೆಯೇ ವ್ಯಾಹತವೂ ಅಪ್ರಮಾಣವೇ. ವೇದವೂ ವ್ಯಾಹತವೇ ಆಗಿದೆ. ಅಂದರೆ, ಪರಸ್ಪರ ವಿರುದ್ಧಾರ್ಥವನ್ನು ಹೇಳುತ್ತದೆ. ಹೇಗೆಂದರೆ— 'ಅತಿರಾತ್ರೇ ಷೋಳಶಿನಂ ಗೃಹ್ಣಾತಿ' 'ನಾತಿರಾತ್ರೇ ಷೋಳಶಿನಂ ಗೃಹ್ಣಾತಿ' 'ಉದಿತೇ ಜುಹೋತಿ' 'ಅನುದಿತೇ ಜುಹೋತಿ' ಜ್ಯೋತಿಷ್ಟೋಮ ಯಾಗದಲ್ಲಿ ಅಗ್ನಿಷ್ಟೋಮ ಅತ್ಯಗ್ನಿಷ್ಟೋಮ ಉಕ್ಥ್ಯ ಷೋಡಶೀ ಅತಿರಾತ್ರ ಅಪ್ತೋರ್ಯಾಮ ವಾಜಪೇಯ ಎನ್ನುವ ಭೇದದಿಂದ ೭ ಸಂಸ್ಥೆಗಳು. ಅವುಗಳಲ್ಲಿ ಅತಿರಾತ್ರ ಎನ್ನುವ ಜ್ಯೋತಿಷ್ಟೋಮ ಯಾಗದಲ್ಲಿ ಷೋಡಶಿನಾಮಕವಾದ ಸೋಮಪಾತ್ರವನ್ನು ತೆಗೆದುಕೊಳ್ಳುತ್ತಾನೆಂದು ಹೇಳುವುದು ಒಂದು ವಾಕ್ಯವು. ತೆಗೆದುಕೊಳ್ಳುವುದಿಲ್ಲವೆನ್ನುವುದು ಮತ್ತೊಂದು ವಾಕ್ಯವು. ಹಾಗೆಯೇ ಅಹೋರಾತ್ರಪ್ರಕರಣದಲ್ಲಿ ಒಂದು ಶಾಖೆಯವರು ಸೂರ್ಯೋದಯವಾಗುವಾಗ ಹೋಮಿಸುತ್ತಾರೆ. ಬೇರೆಯವರು ಸೂರ್ಯೋದಯವಾಗದಿರುವಾಗ ಹೋಮಿ

ಸುತ್ತಾರೆ ಎಂದು ಎರಡು ವಾಕ್ಯಗಳು. ಇವುಗಳು ಪರಸ್ಪರ ವಿರುದ್ಧಾರ್ಥಗಳು. (೩) ಪುನರುಕ್ತವೂ ಅಪ್ರಾಮಾಣವೇ. ವೇದದಲ್ಲಿಯೂ ಪುನರುಕ್ತಿ (ಹೇಳಿದ್ದನ್ನೇ ಮತ್ತೂ ಹೇಳೋಣ) ಇದೆ. ತ್ರಿಃಪ್ರಥಮಾಮನ್ವಾಹ ತ್ರಿರುತ್ತಮಾಂ ತಾಃ ಪಂಚದಶ ಸಂಪದ್ಯಂತೇ=ದರ್ಶಪೂರ್ಣಮಾಸಪ್ರಕರಣದಲ್ಲಿ ೧೫ ಸಾಮಿಧೇನಿಗಳನ್ನು (ಅಗ್ನಿದೀಪ್ತಿಯನ್ನು ಪ್ರಕಾಶಪಡಿಸತಕ್ಕ ಋಕ್ಕುಗಳನ್ನು) ವಿಧಿಸಿ, ೧೧ ಋಕ್ಕುಗಳನ್ನು ಪಠನಮಾಡಿ, ಪ್ರಥಮಪಠಿತ ಋಕ್ಕನ್ನೂ ಅಂತ್ಯಋಕ್ಕನ್ನೂ ಮೂರುಮೂರಾವರ್ತಿ ಅನುವಾದಮಾಡಬೇಕು. ಅವುಗಳು ೧೫ ಆಗುತ್ತವೆ ಇಲ್ಲಿ ಪ್ರಥಮ ಅಂತ್ಯಋಕ್ಕುಗಳಿಗೆ ಆವೃತ್ತಿಯನ್ನು ವೇದವು ತಾನೇ ವಿಧಿಸಿಯದೆ. ಆದಪ್ರಯುಕ್ತ ಪುನರುಕ್ತ್ಯವು ಎಂದು ಶಂಕಿಸಿದರೆ—

(34) (೧)ಇವೆಲ್ಲವೂ ಅಯುಕ್ತವು. ಹೇಗೆಂದರೆ, ಎಲ್ಲಾ ವೇದಗಳನ್ನು ಪಕ್ಷೀಕರಿಸಿ ಈ ಹೇತುಗಳಿಂದ ಅಪ್ರಾಮಾಣ್ಯವನ್ನು ಸಾಧಿಸಕೂಡದು. ಏಕೆಂದರೆ, ಯಾವುದಾದರೊಂದು ಪ್ರತ್ಯಕ್ಷಕ್ಕಾಗಲೀ ಅನುಮಾನಕ್ಕಾಗಲೀ ಅನೃತತ್ವಾದಿಗಳು ಇದ್ದರೂ ಬೇರೆ ಪ್ರತ್ಯಕ್ಷಕ್ಕೂ ಅನುಮಾನಕ್ಕೂ ಹೇಗೆ ಪ್ರಾಮಾಣ್ಯವೋ ಹಾಗೆಯೇ ವೇದಕ್ಕೂ ಅನೃತಾದಿಭಾಗವನ್ನು ಬಿಟ್ಟು ಪ್ರಾಮಾಣ್ಯವು ಕೂಡಬಹುದು. (೨) ವೇದಗಳ ಏಕದೇಶವನ್ನು ಪಕ್ಷೀಕರಿಸಿ ಅಪ್ರಾಮಾಣ್ಯವನ್ನು ಸಾಧಿಸುವುದಾದರೆ ಅಂತಹ ವಿಪ್ರತಿಪನ್ನವಾದ ವೇದಭಾಗವು ಇರಲಿ. ಸಂಪ್ರತಿಪನ್ನವಾದ ವೇದಭಾಗದ ವಿಚಾರವು ಹೇಗೆ ಅಯುಕ್ತವು? (35) ವೇದವಾಗಿರುವುದರಿಂದ ಆ ವೇದಭಾಗಕ್ಕೂ ಅಪ್ರಾಮಾಣ್ಯವನ್ನು ಸಾಧಿಸುವುದಾದರೆ ಎಲ್ಲಾ ಪ್ರತ್ಯಕ್ಷ ಅನುಮಾನಗಳಿಗೂ ಅಪ್ರಾಮಾಣ್ಯವು ಬರಬೇಕಾಗುವುದು. (36) ಮತ್ತು ಯೋಗ್ಯರಾದ ಅಧಿಕಾರಿಗಳು ಪುತ್ರಕಾಮೇಷ್ಟ್ಯಾದಿಗಳನ್ನು ಮಾಡಿದರೆ ಪುತ್ರೋತ್ಪತ್ತ್ಯಾದಿರೂಪಫಲವು ತೋರುವುದರಿಂದ, ಎಲ್ಲಿ ಆ ಯಾಗಮಾಡಿದರೂ ಮಕ್ಕಳು ಹುಟ್ಟುವುದಿಲ್ಲವೋ, ಮಳೆ ಬರುವುದಿಲ್ಲವೋ ಅಲ್ಲಿ ಕರ್ತೃಕರಣಾದಿಗಳಿಗೆ ವೈಗುಣ್ಯವನ್ನು ಕಲ್ಪಿಸಬೇಕು. ಅಪ್ರಮಾಣವೆಂದು ಹೇಳಕೂಡದು. ಆದುದರಿಂದ ಅನೃತತ್ವವೇ ಇಲ್ಲ. (37) 'ನ ವಿಲಕ್ಷಣತ್ವಾತ್' ಎನ್ನುವಲ್ಲಿ ಹೇಳಿದ ನ್ಯಾಯದಿಂದ ವೇದಕ್ಕೆ ಪ್ರಾಮಾಣ್ಯವು ಸಿದ್ಧಿಸಿದಮೇಲೆ ಷೋಡಶಿಗ್ರಹಣ-ಅಗ್ರಹಣಗಳಲ್ಲಿ ಬೇರೆ ಗತಿಯಿಲ್ಲದಿರುವುದರಿಂದ ವಿಕಲ್ಪವನ್ನು ಇಟ್ಟುಕೊಳ್ಳುತ್ತೇವೆ. ಉದಿತ ಅನುದಿತ ಹೋಮಗಳು ಅಧಿಕಾರಿಭೇದದಿಂದ ಕೂಡುತ್ತವೆ. ಸರ್ವಥಾ ವ್ಯಾಹತಿಯಿಲ್ಲದಿರುವುದರಿಂದ ಹೇತುವಿಗೆ ಅಸಿದ್ಧಿಯು (38) ಪುನರುಕ್ತಿ ಬಂದರೂ ಪ್ರತ್ಯಕ್ಷಾದಿಗಳಂತೆಯೇ ವೇದಕ್ಕೆ ಪ್ರಾಮಾಣ್ಯವು ಕೂಡುತ್ತದೆ. ಒಂದೇ ವಸ್ತುವಿನಲ್ಲಿ ಪ್ರತ್ಯಕ್ಷವೂ ಅನುಮಾನವೂ ಪ್ರವೃತ್ತವಾದರೆ ಅಪ್ರಮಾಣವಾಗಲಾರದು. ಅರ್ಥವನ್ನು ವಿಪರೀತವಾಗಿ ಗ್ರಹಿಸಿದರೆ ಅಪ್ರಮಾಣವಾಗುವುದು. ಪ್ರತ್ಯಕ್ಷದಿಂದ ಒಂದಾವರ್ತಿ ಘಟವನ್ನು ಗ್ರಹಿಸಿ ಪುನಃ ಗ್ರಹಿಸಿದರೆ ಪಟವಾಗಲಾರದಷ್ಟೆ. ಮತ್ತು ಕೃತಕತ್ವರೂಪ ಹೇತುವಿನಿಂದ ಶಬ್ದವು ಅನಿತ್ಯವೆಂದು ಅನುಮಿತವಾಗಿ ಪುನಃ ತೀವ್ರತ್ವ-ಮಂದ್ರತ್ವ ಮೊದಲಾದ ಧರ್ಮಗಳಿಂದ ಯುಕ್ತವಾಗಿರುವುದರಿಂದ ಅನಿತ್ಯವಾಗಿ ಅನುಮೇಯಿಸಲ್ಪಟ್ಟರೆ ನಿತ್ಯವಾಗಲಾರದು. ಹಾಗೆಯೇ ಶಬ್ದದಲ್ಲಿಯೂ ಇಟ್ಟುಕೊಳ್ಳಬೇಕು. ವೈಯರ್ಥ್ಯವನ್ನಾದರೂ ಕಥಂಚಿತ್ ಶಂಕಿಸಬಹುದು. ಅದಾದರೂ ಅಭ್ಯಾಸ (ಪುನಃ ಪುನಃ ಆವೃತ್ತಿಯು) ಅನುವಾದ (ಅನುಸರಿಸಿ ಹೇಳುವಿಕೆ) ಮೊದಲಾದ ರೂಪವೆಂದು ವ್ಯಾಖ್ಯಾನಮಾಡತಕ್ಕ ವೃದ್ಧರಿಂದಲೇ (ವೇದಪ್ರಾಮಾಣ್ಯವನ್ನು ಹೇಳುವ ಜೈಮಿನ್ಯಾದಿಗಳಿಂದಲೂ 'ಪ್ರಮಾಣಸಂಪ್ಲವಶ್ಚ ದಾರ್ಢ್ಯಹೇತುರೇವ' ಇತ್ಯಾದಿಗಳನ್ನು ಹೇಳುವ ಆಚಾರ್ಯರಿಂದಲೂ) ಪರಿಹೃತವಾಗಿದೆ. ಅಂದರೆ— ಅಭ್ಯಾಸವು ತಾತ್ಪರ್ಯನಿರ್ಣಾಯಕವಾದುದು. ಅನುವಾದವು ಅಧಿಕವನ್ನು ವಿಧಿಸತಕ್ಕುದು. ಅಂತೂ 'ತ್ರಿಃ ಪ್ರಥಮಾಮನ್ವಾಹ' ಎನ್ನುವ ವಾಕ್ಯವೂ ಮಧ್ಯವು

ಉತ್ತಮ ಋಕ್ಕುಗಳಿಗೆ ಆವೃತ್ತಿಯನ್ನೂ ಪ್ರಯೋಜನವಿಶೇಷವನ್ನೂ ಅಪೇಕ್ಷಿಸಿಯೇ ವಿಧಿಸುತ್ತದೆ. (39) ತಥಾಚ ಶಬ್ದವು ಕೆಲವುಕಡೆ ಸ್ವಾಭಾವಿಕ ಶಕ್ತಿಯಿಂದಲೂ ಕೆಲವುಕಡೆ ಸಂಕೇತದಿಂದಲೂ ಬೋಧಕವಾಗುವುದು. ಅಂತೂ ಶಬ್ದಕ್ಕೆ ಪ್ರಾಮಾಣ್ಯವು ಕೂಡುವುದರಿಂದ ಶಬ್ದವಿಶೇಷವಾದ ವೇದಕ್ಕೂ ಸರ್ವಥಾ ಅಪ್ರಾಮಾಣ್ಯವಿಲ್ಲ.

(40) ಹಾಗಾದರೆ ಹೀಗೆ ಹಿಂದೆ ಹೇಳಿದ ಪ್ರಕಾರ ವೇದಕ್ಕೆ ಅಪ್ರಾಮಾಣ್ಯವು ಪರಿಹೃತವಾದರೂ ಪ್ರಾಮಾಣ್ಯವು ಯಾವುದರಿಂದ? ಅಪ್ರಾಮಾಣ್ಯ ತಿರಸ್ಕಾರವೇ (ಅಂದರೆ ಅಪ್ರಾಮಾಣ್ಯಾಭಾವವೇ) ಪ್ರಾಮಾಣ್ಯವಲ್ಲವಷ್ಟೆ. ಏಕೆಂದರೆ— ಘಟಾದಿಗಳಲ್ಲಿ ಅಪ್ರಾಮಾಣ್ಯಾಭಾವ ಇದ್ದರೂ ಪ್ರಾಮಾಣ್ಯವಿಲ್ಲ. ಜ್ಞಾನಕ್ಕೆ ಕಾರಣವಾಗಿ ನಿಶ್ಚಿತವಾದದ್ದಕ್ಕೆ ಅಪ್ರಾಮಾಣ್ಯವು ನಿರಾಕರಿಸಲ್ಪಡುತ್ತಿರಲು ಸ್ವತ ಏವ ಪ್ರಾಮಾಣ್ಯವೆನ್ನುತ್ತೇವೆ. ಈ ಅಭಿಪ್ರಾಯದಿಂದ 'ಆಗಮಸ್ಯ' ಎಂದುಕ್ತವಾಗಿದೆ. (ಆಗಮ್ಯತೇ = ಅವಗಮ್ಯತೇ ಅನೇನ = ಇದರಿಂದ ತಿಳಿಯಲ್ಪಡುತ್ತದೆ ಎಂದು ಆಗಮವು.) (41) ಯಾವ ನ್ಯಾಯಾಭಿಜ್ಞರು ಧರ್ಮ್ಯಂಶಪ್ರತ್ಯಕ್ಷಕ್ಕೂ ಅನುಮಿತಿಗೂ ಪ್ರಾಮಾಣ್ಯವನ್ನು ಸ್ವತ ಏವ ಎಂದಂಗೀಕರಿಸಿ ಆಗಮ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸುವುದಿಲ್ಲವೋ ಅವರನ್ನು ಕುರಿತು 'ಪ್ರತ್ಯಕ್ಷವಚ್ಚ' ಎಂದು ದೃಷ್ಟಾಂತವನ್ನು ಹೇಳಿದ್ದು ಹಿ ಶಬ್ದವು ಪ್ರಮಾಣತ್ವರೂಪ ಹೇತುವನ್ನು ಸೂಚಿಸುತ್ತದೆ. (43) ಯಾರು ಪ್ರಮಾಣಮಾತ್ರಕ್ಕೆ ಪ್ರಾಮಾಣ್ಯವು ಸ್ವತಃ ಅಲ್ಲವೆಂದು ತಿಳಿಯುತ್ತಾರೋ ಆಗಮಪ್ರಾಮಾಣ್ಯಕ್ಕೆ ಸ್ವತಸ್ತ್ವದಲ್ಲಿ ವಿಪ್ರತಿಪನ್ನರಾಗಿರುವರೋ ಅವರನ್ನು ಕುರಿತು ಆಗಮಪ್ರಾಮಾಣ್ಯಕ್ಕೆ ಸ್ವತಸ್ತ್ವಸಾಧನದ ಪ್ರಸಂಗದಿಂದ ಪ್ರತ್ಯಕ್ಷಾನುಮಾನಪ್ರಾಮಾಣ್ಯಗಳಿಗೂ ಸ್ವತಸ್ತ್ವವನ್ನು ಸಾಧಿಸುವುದಕ್ಕಾಗಿಯೇ 'ಪ್ರತ್ಯಕ್ಷವಚ್ಚ' ಎನ್ನುವುದರಿಂದ ಪ್ರತ್ಯಕ್ಷ ಅನುಮಾನಗಳನ್ನು ಗ್ರಹಣಮಾಡಿರುವರು. ಈ ಅರ್ಥದಲ್ಲಿ ಮೊದಲಿನಂತೆಯೇ ದೃಷ್ಟಾಂತವಾಗಿ ಹೇಳಿದ್ದಲ್ಲ. ಎಂದು ತಿಳಿಯತಕ್ಕದ್ದು.

(43) ಹಾಗಾದರೆ, ಪ್ರಮಾಣಗಳ ಪ್ರಾಮಾಣ್ಯಕ್ಕೆ ಸ್ವತಸ್ತ್ವವೆಂದರೆ ಎಂತಹುದು, ಎಂದರೆ— ಪ್ರತ್ಯಕ್ಷ ಅನುಮಾನ ಆಗಮಗಳೂ ಅವುಗಳಿಂದುಂಟಾದ ಜ್ಞಾನವೂ ಪ್ರಮಾಣವು. (೧) ಜ್ಞಾನಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವೆಂದರೆ— ಜ್ಞಾನಜನಕ ಮಾತ್ರಾಧೀನ ಜನ್ಮತ್ವಂ = ಜ್ಞಾನವು ಯಾವುದರಿಂದ ಹುಟ್ಟುತ್ತದೋ ಅದರಿಂದಲೇ ಅದರಲ್ಲಿರತಕ್ಕ ಪ್ರಾಮಾಣ್ಯವೂ ಹುಟ್ಟುತ್ತದೆ. ಅಂದರೆ, ಸ್ವಾಶ್ರಯಜ್ಞಾನಸಾಮಾನ್ಯಸಾಮಗ್ರೀಮಾತ್ರಪ್ರಯೋಜ್ಯತ್ವಂ = ಪ್ರಾಮಾಣ್ಯಕ್ಕೆ ಆಶ್ರಯವಾದದ್ದು ಜ್ಞಾನವು, ಅಂತಹ ಜ್ಞಾನಸಾಮಾನ್ಯಸಾಮಗ್ರಿಯಿಂದಲೇ ಆ ಜ್ಞಾನದಲ್ಲಿರುವ ಪ್ರಾಮಾಣ್ಯವು ಹುಟ್ಟುತ್ತದೆ. (೨) ಕರಣಪ್ರಾಮಾಣ್ಯಕ್ಕ ಉತ್ಪತ್ತಿಯಲ್ಲಿ ಸ್ವತಸ್ತ್ವವೆಂದರೆ— ಜ್ಞಾನಜನನಶಕ್ತ್ಯೈವ ತದ್ಯಾಥಾರ್ಥ್ಯಜನಕತ್ವಂ = ಜ್ಞಾನವನ್ನುಹುಟ್ಟಿಸುವ ಶಕ್ತಿಯಿಂದಲೇ ಅದರ ಯಾಥಾರ್ಥ್ಯವನ್ನು ಹುಟ್ಟಿಸುವುದು. ಅಂದರೆ, ಸ್ವಾಶ್ರಯನಿಷ್ಠಜ್ಞಾನಜನನಶಕ್ತ್ಯಭಿನ್ನತ್ವಂ = ಯಥಾರ್ಥ ಜ್ಞಾನವನ್ನು ಹುಟ್ಟಿಸುವ, ಕರಣದಲ್ಲಿರುವ ಶಕ್ತಿಗೆ ಜ್ಞಾನವನ್ನು ಹುಟ್ಟಿಸುವ ಕರಣದಲ್ಲಿರುವ ಶಕ್ತಿಯಿಂದ ಅಭೇದವು ಅಥವಾ ಜ್ಞಾನವನ್ನು ಹುಟ್ಟಿಸುವ ಶಕ್ತಿಯಂತೆ ಸ್ವಾಭಾವಿಕತ್ವವು. (೩) ಜ್ಞಾನಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವೆಂದರೆ— ಜ್ಞಾನಗ್ರಾಹಕಮಾತ್ರಗ್ರಾಹ್ಯತ್ವಂ = ಜ್ಞಾನವು ಯಾವುದರಿಂದ ಗೃಹೀತವಾಗುತ್ತದೋ ಅದರಿಂದಲೇ ಅದರಲ್ಲಿರತಕ್ಕ ಯಾಥಾರ್ಥ್ಯವೂ ಗೃಹೀತವಾಗುತ್ತದೆ. ಅಂದರೆ, ಗ್ರಾಹ್ಯಪ್ರಾಮಾಣ್ಯವಿರೋಧ್ಯುಪಸ್ಥಾಪಕಸಾಮಗ್ರ್ಯಸಮವಹಿತ ಗ್ರಾಹ್ಯಪ್ರಾಮಾಣ್ಯಾಶ್ರಯತತ್ತಜ್ಜ್ಞಾನವಿಷಯಕಸಾಕ್ಷಿಜ್ಞಾನವಿಷಯತ್ವನೈಯತ್ಯಂ = ಗ್ರಾಹ್ಯಪ್ರಾಮಾಣ್ಯಕ್ಕೆ ವಿರೋಧಿಗಳಾದ ಅಪ್ರಾಮಾಣ್ಯ, ಅಪ್ರಾಮಾಣ್ಯವ್ಯಾಪ್ಯ, ಪ್ರಾಮಾಣ್ಯಾಭಾವ, ಪ್ರಾಮಾಣ್ಯಾ

ಭಾವವ್ಯಾಪ್ಯ ಈ ನಾಲ್ಕನ್ನು ತಿಳಿಸುವ ಸಾಮಗ್ರೀರೂಪವಾದ ದೋಷಶಂಕಾದಿರೂಪ ಪ್ರತಿಬಂಧಕ ದಿಂದ ಕೂಡದಿರುವ ಸಾಕ್ಷಿಯು ಗ್ರಹಿಸುವ ಪ್ರಾಮಾಣ್ಯಕ್ಕೆ ಆಶ್ರಯವಾದ, ಘಟಾದಿ ಜ್ಞಾನವನ್ನು ವಿಷಯೀಕರಿಸುವ ಸಾಕ್ಷಿಜ್ಞಾನಕ್ಕೆ ನಿಯಮದಿಂದ ವಿಷಯವಾಗುವಿಕೆ. ಅಥವಾ ಗ್ರಾಹ್ಯಪ್ರಾಮಾಣ್ಯಾ ಶ್ರಯತತ್ತ ಜ್ಞಾನವಿಷಯಕ ಸಾಕ್ಷಿಜ್ಞಾನವಿಷಯತ್ವಯೋಗ್ಯತ್ವಂ= ಯಾವ ಪ್ರಾಮಾಣ್ಯವು ಸಾಕ್ಷಿ ಯಿಂದ ಗ್ರಹಿಸಲಿಕ್ಕೆ ಯೋಗ್ಯವಾಗುತ್ತದೋ ಅಂತಹ ಗ್ರಾಹ್ಯಪ್ರಾಮಾಣ್ಯಕ್ಕೆ ಆಶ್ರಯವಾದ ಆಯಾ ಯ ಜ್ಞಾನವನ್ನುವಿಷಯೀಕರಿಸುವ ಸಾಕ್ಷಿಜ್ಞಾನವಿಷಯತ್ವಯೋಗ್ಯತ್ವವು. ಇಂತಹಸಾಕ್ಷಿವಿಷಯತ್ವ ಯೋಗ್ಯತಾರೂಪವಾದ ಸ್ವತಸ್ತ್ವವು ಪ್ರಾಮಾಣ್ಯಕ್ಕೆ ವಿರೋಧಿಗಳಾದ ಅಪ್ರಾಮಾಣ, ಮೊದ ಲಾದವುಗಳನ್ನೂ ತಿಳಿಸುವ ಸಾಮಗ್ರೀರೂಪಗಳಾದ ಪ್ರತಿಬಂಧಕಗಳು ಇರುವಾಗಲೂ ಪ್ರಾಮಾ ಣ್ಯದಲ್ಲಿ ಗ್ರಹಣಯೋಗ್ಯತ್ವವು ಇದೆ. ಅಂತೂ ಜ್ಞಾನಗ್ರಾಹಕವಾದ ಸಾಕ್ಷಿಯು ಪ್ರಮಾಣವೆಂದೇ ಗ್ರಹಿಸುತ್ತದೆ ಎನ್ನುವುದು ಉತ್ಸರ್ಗವೇ. (ಸಾಪವಾದ ನಿಯತವು) ಆದುದರಿಂದಲೇ ಟೀಕಾ ಕಾರರು ಹೇಳಿರುವರು. **"ಸಾಕ್ಷ್ಯೇವ ಜ್ಞಾನಂ ತತ್ಪ್ರಾಮಾಣ್ಯಂ ಚ ವಿಷಯೀಕರ್ತುಂ ಕ್ಷಮಃ । ಕಿಂತು ಪ್ರತಿಬದ್ಧೋ ಜ್ಞಾನಮಾತ್ರಂ ಗೃಹೀತ್ವಾ ತತ್ಪ್ರಾಮಾಣ್ಯಗ್ರಹಣಸ್ಯ ನೇಷ್ಟೇ."** ॥ ಸಾಕ್ಷೀಂದ್ರಿಯವೇ ಜ್ಞಾನವನ್ನೂ ಜ್ಞಾನಪ್ರಾಮಾಣ್ಯವನ್ನೂ ವಿಷಯೀಕರಿಸಲಿಕ್ಕೆ ಶಕ್ತವಾಗಿದೆ. ಆದರೆ, ಕಾರಣಾಂತರದಿಂದ ಪ್ರಾಪ್ತವಾದ ಮಾನಸಾಪರಾಧದಿಂದ ತಡೆಯಲ್ಪಟ್ಟ ದ್ದಾಗಿ ಜ್ಞಾನವನ್ನು ಮಾತ್ರ ಗ್ರಹಿಸಿ ಜ್ಞಾನಪ್ರಾಮಾಣ್ಯವನ್ನು ಗ್ರಹಿಸಲಿಕ್ಕೆ ಸಮರ್ಥವಾಗುವುದಿಲ್ಲ (೪) ಕರಣಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಅಂಗೀಕರಿಸುವುದಿಲ್ಲ. ಕರಣಗಳ ಸ್ವರೂಪವು ಅವುಗಳ ಯೋಗ್ಯತಾನುಸಾರವಾಗಿ ಪ್ರತ್ಯಕ್ಷಾದಿಗಳಿಂದ ತಿಳಿಯಲ್ಪಡುವುದು. ಅಂದರೆ, ಇಂದ್ರಿಯಗಳು ಅತೀಂದ್ರಿಯಗಳಾಗಿರುವುದರಿಂದ ಅನುಮಾನದಿಂದ ತಿಳಿಯಲ್ಪಡ ತಕ್ಕವುಗಳು. ಲಿಂಗ ಶಬ್ದಗಳು ಚಕ್ಷುರಾದಿ ಪ್ರತ್ಯಕ್ಷಪ್ರಮಾಣದಿಂದಲೂ ಅವುಗಳ ಜ್ಞಾನಗಳು ಸಾಕ್ಷಿರೂಪಪ್ರತ್ಯಕ್ಷಪ್ರಮಾಣದಿಂದಲೂ ತಿಳಿಯಲ್ಪಡತಕ್ಕವುಗಳು. ಅದರಲ್ಲಿರತಕ್ಕ ಯಥಾರ್ಥ ಜ್ಞಾನಜನಕತ್ವರೂಪವಾದ ಪ್ರಾಮಾಣ್ಯವು ಅನುಮಾನದಿಂದ (ಅನ್ವಯವ್ಯತಿರೇಕಗಳಿಂದ) ತಿಳಿಯ ಲ್ಪಡುವುದು. (44) ಹಾಗಾದರೆ, ಜ್ಞಾನಕರಣವೆಂದು ನಿಶ್ಚಿತವಾದುದಕ್ಕೆ ಅಪ್ರಾಮಾಣ್ಯವು ನಿರಸ್ತವಾದ ಮೇಲೆ ಸ್ವತ ಏವ ಎಂದು ಕರಣಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಹಿಂದೆ ಹೇಳಿದಪ್ರಯುಕ್ತ ಹಿಂದಿನ ಸಿದ್ಧಾಂತವಿರೋಧವೆಂದರೆ— ಅಥವಾ ತೇಷಾಮಪಿ ಜ್ಞಾನಜನಕತ್ವಂ ಯೇನ ಗೃಹ್ಯತೇ ತತ ಏವ ಯಥಾರ್ಥಜ್ಞಾನಜನಕತ್ವಸ್ಯ ತದೀಯಸ್ಯ ಗ್ರಾಹ್ಯತ್ವಂ ಸ್ವತಸ್ತ್ವಂ= ಕರಣಗಳಿಗೂ ಯಾವುದರಿಂದ ಜ್ಞಾನಜನಕತ್ವವು ಗೃಹೀತವಾಗುತ್ತದೋ ಅದರಿಂದಲೇ ಕರಣ ಗಳಲ್ಲಿರತಕ್ಕ ಯಥಾರ್ಥಜ್ಞಾನಜನಕತ್ವವು ಗೃಹೀತವಾಗುತ್ತದೆ. ಇಂತಹುದೇ ಸ್ವತಸ್ತ್ವವು ತಥಾಚ, ಜ್ಞಾನಪ್ರಾಮಾಣ್ಯದಂತೆ ಕರಣಪ್ರಾಮಾಣ್ಯಕ್ಕೆ ಸ್ವಾಶ್ರಯ ಗ್ರಾಹಕಗ್ರಾಹ್ಯತ್ವರೂಪವಾದ ಸ್ವತಸ್ತ್ವವು ಇಲ್ಲವೆಂದೇ ಮೊದಲು ಹೇಳಿದ್ದು. ಸರ್ವಥಾ ಕರಣಪ್ರಾಮಾಣ್ಯಕ್ಕೆ ಸ್ವತಸ್ತ್ವವಿಲ್ಲ ವೆಂದು ಹಿಂದೆ ಹೇಳಲಿಲ್ಲ. ಸ್ವಾಶ್ರಯನಿಷ್ಠ ಜ್ಞಾನಜನಕತ್ವಗ್ರಾಹಕಮಾತ್ರಗ್ರಾಹ್ಯತ್ವರೂಪ ವಾದುದು ಜ್ಞಪ್ತಿಯಲ್ಲಿ ಸ್ವತಸ್ತ್ವವೆಂದಂಗೀಕರಿಸಿರುತ್ತೇವೆ. ಆದಪ್ರಯುಕ್ತ ಹಿಂದಿನ ಗ್ರಂಥ ವಿರೋಧವೂ ಪ್ರಮಾಣಪದ್ಧತಿವಿರೋಧವೂ ಇಲ್ಲ. ಅಲ್ಲಿಯೂ ಕರಣಪ್ರಾಮಾಣ್ಯಕ್ಕೆ ಸ್ವಾಶ್ರಯಗ್ರಾಹಕ ಗ್ರಾಹ್ಯತ್ವರೂಪವಾದ ಸ್ವತಸ್ತ್ವವಿಲ್ಲವೆಂದೇ ತಾತ್ಪರ್ಯವು. (45) ಜ್ಞಾನಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಎಂದರೆ— ಪ್ರಾಮಾಣ್ಯಂ ಜ್ಞಾನಕಾರಣಾತಿರಿಕ್ತ ಕಾರಣಾನಪೇಕ್ಷಂ ಅಪ್ರಾಮಾಣ್ಯೇತರ ಜ್ಞಾನ ಧರ್ಮತ್ವಾತ್ ಜ್ಞಾನತ್ವವತ್=ಜನ್ಯಜ್ಞಾನದಲ್ಲಿರತಕ್ಕ ಸಾಕ್ಷಾತ್ ಯಥಾವಸ್ಥಿತಜ್ಞೇಯ ವಿಷಯೀ

ಕಾರಿತ್ವರೂಪವಾದ ಪ್ರಾಮಾಣ್ಯವು, ಜ್ಞಾನಸಾಮಾನ್ಯ ಸಾಮಗ್ರಿಯಿಂದ ಭಿನ್ನವಾದ ಕಾರಣದಿಂದ ಹುಟ್ಟತಕ್ಕದ್ದಲ್ಲ. ಪ್ರಾಮಾಣ್ಯಕ್ಕೆ ವಿರೋಧಿಯಾದುದು ಯಾವುದೋ ಅದರಿಂದ ಬೇರೆಯಾಗಿದ್ದು ಜ್ಞಾನಧರ್ಮವಾಗಿರುವುದರಿಂದ ಜ್ಞಾನತ್ವದಂತೆ, ಎನ್ನುವ ಅನುಮಾನದಿಂದ. ಹಾಗಾದರೆ, ಈ ಅನುಮಾನವು 'ಪ್ರಮಾ ಜ್ಞಾನಹೇತ್ವತಿರಿಕ್ತ ಹೇತ್ವಧೀನಾ ಕಾರ್ಯತ್ವೇಸತಿ ತದ್ವಿಶೇಷತ್ವಾತ್' ಅಪ್ರಮಾವತ್=ಯಥಾರ್ಥಜ್ಞಾನವು ಜ್ಞಾನಕ್ಕೆ ಯಾವುದು ಕಾರಣವೋ ಅದರಿಂದ ಬೇರೆಯಾದ ಕಾರಣದಿಂದ ಹುಟ್ಟಿದ್ದು, ಕಾರ್ಯವಾಗಿದ್ದು ಜ್ಞಾನವಿಶೇಷವಾಗಿರುವುದರಿಂದ, ಅಯಥಾರ್ಥ ಜ್ಞಾನದಂತೆ ಎನ್ನುವ ಅನುಮಾನದಿಂದ ಸತ್ಪ್ರತಿಪಕ್ಷಿತವಾಯಿತೆಂದು ಹೇಳಕೂಡದು. ಏಕೆಂದರೆ, ಈಶ್ವರನ ಪ್ರಮೆಯಲ್ಲಿ ಬಾಧವು (ಪಕ್ಷದಲ್ಲಿ ಸಾಧ್ಯವಿಲ್ಲವು.) ಮತ್ತು ಈಶ್ವರ ಪ್ರಮೆಯಲ್ಲಿ ಕಾರ್ಯತ್ವರೂಪವಿಶೇಷಣವಿಲ್ಲದಿರುವುದರಿಂದ ವಿಶಿಷ್ಟಹೇತುವು ಇಲ್ಲದಿರುವಪ್ರಯುಕ್ತ ಈಶ್ವರ ಜ್ಞಾನಸ್ವರೂಪವಾದ ಅಂಶದಲ್ಲಿ ಅಸಿದ್ಧಿಯು. (ಹೇತುವಿಲ್ಲ) ಈ ದೋಷಪರಿಹಾರಕ್ಕಾಗಿ ಈಶ್ವರ ಪ್ರಮಾತಿರಿಕ್ತಪ್ರಮಾ=ಈಶ್ವರನ ಪ್ರಮೆಯಿಂದ ಬೇರೆಯಾದ ಪ್ರಮೆಯನ್ನು ಪಕ್ಷವನ್ನಾಗಿ ಇಟ್ಟುಕೊಂಡರೂ ಪ್ರಮೆಯೆಂದರೆ — ಪ್ರಮಾತ್ವರೂಪಧರ್ಮದ ಸಂಬಂಧವುಳ್ಳ ಜ್ಞಾನವು. ಇದರಲ್ಲಿ ೧ ಜ್ಞಾನರೂಪ ವಿಶೇಷ್ಯದಲ್ಲಿ ಸಾಧ್ಯಪರ್ಯವಸಾನವೋ? ೨ ಪ್ರಮಾತ್ವರೂಪ ವಿಶೇಷಣದಲ್ಲಿಯೋ? ೩ ಅಥವಾ ವಿಶೇಷ್ಯ, ವಿಶೇಷಣಗಳ ಸಂಬಂಧದಲ್ಲಿಯೋ? ಈ ಮೂರರಲ್ಲಿ ೧ನೇದ್ದು ಕೂಡಲಾರದು. ಏಕೆಂದರೆ, ಯಥಾರ್ಥಜ್ಞಾನವೂಕೂಡ ಜ್ಞಾನವಾಗಿರುವುದರಿಂದ ಜ್ಞಾನಹೇತುಜನ್ಯತ್ವವೇ ಇದ್ದಪ್ರಯುಕ್ತ ಜ್ಞಾನಹೇತ್ವ್ಯತಿರಿಕ್ತಹೇತು ಜನ್ಯತ್ವವು ಇಲ್ಲದಿರುವುದರಿಂದ ವ್ಯಾಹತಿಯು. ೨ನೇ ಕಲ್ಪದಲ್ಲಿ ಪ್ರಮಾತ್ವವೆಂದರೆ — ಜಾತಿಯೆಂದು ಇಟ್ಟುಕೊಂಡರೆ ಜಾತಿಯು ನಿತ್ಯವಾಗಿರುವುದರಿಂದ ಜನ್ಯತ್ವವಿಲ್ಲದಿರುವಪ್ರಯುಕ್ತ ಬಾಧವು. ಪ್ರಮಾತ್ವವೆಂದರೆ, ಜಾತಿಯಿಂದ ಬೇರೆಯಾದ ಭಾವಪದಾರ್ಥವೆಂದೂ ಹೇಳಕೂಡದು. ಜ್ಞಾನದಲ್ಲಿ * ಜಾತ್ಯತಿರಿಕ್ತವಾದ ಭಾವಧರ್ಮವನ್ನೇ ಅಂಗೀಕರಿಸಲಿಲ್ಲ. ಪ್ರಮಾತ್ವವೆಂದರೆ, ಜಾತಿಯಿಂದ ಬೇರೆಯಾದ ಅಭಾವಪದಾರ್ಥವೆಂದೂ ಹೇಳಕೂಡದು. ಪ್ರಧ್ವಂಸದಿಂದ ಬೇರೆಯಾದ ಅಭಾವವು ಜನ್ಯವಲ್ಲ. ಪ್ರಧ್ವಂಸರೂಪವಾದ ಅಭಾವವು ಇಲ್ಲಿ ಕೂಡಲಾರದು. ೩ನೇದ್ದು (ಅವುಗಳ ಸಂಬಂಧವು) ಕೂಡಲಾರದು. ಸಂಯೋಗವು ಗುಣದಲ್ಲಿ ಕೂಡಲಾರದು. ಸಮವಾಯವು ಕಾರ್ಯವೇ ಅಲ್ಲ. (46) 'ಪ್ರಮಾತ್ವಂ ಜ್ಞಾನಹೇತ್ವತಿರಿಕ್ತಹೇತ್ವಧೀನಂ ಜ್ಞಾನತ್ವವ್ಯಾಪ್ಯಧರ್ಮತ್ವಾತ್ ಅಪ್ರಮಾತ್ವವತ್' ಎನ್ನುವ ಅನುಮಾನವೂ ಪ್ರಮಾತ್ವವು ಜಾತಿಯೋ ಬೇರೆಯೋ ಎನ್ನುವ ವಿಕಲ್ಪದೂಷಣದಿಂದಲೇ ನಿರಾಕೃತವಾಯಿತು. (47) ಹಾಗಾದರೆ ಹೇತ್ವಧೀನತ್ವವೆಂದರೆ— ಹೇತುವಿನಿಂದ ಹುಟ್ಟುವಿಕೆ ಎಂದರ್ಥವಲ್ಲ. ಮತ್ತೆ ಹೇತುಜನ್ಯ ವ್ಯಕ್ತಿವೃತ್ತಿತ್ವಂ=ಹೇತುವಿನಿಂದ ಹುಟ್ಟಿರುವ ವ್ಯಕ್ತಿಯಲ್ಲಿ ಇರುವಿಕೆಯೇ. ಆದಪ್ರಯುಕ್ತ ಪ್ರಮಾತ್ವವು ಜಾತಿಯಾದರೂ ಹಿಂದಿನ ದೋಷವಿಲ್ಲವೆಂದರೆ— ಆದಾಗ್ಯೂ ಜ್ಞಾನಕಾರಣದಿಂದ ಬೇರೆಯಾದ ಕಾರಣದಿಂದ ಜನ್ಯವೇ ಆದ ವ್ಯಕ್ತಿಯು ಪ್ರಮಾತ್ವಕ್ಕೆ ಆಧಾರವು ಎಂದು ತಾತ್ಪರ್ಯವು. ಈಶ್ವರಜ್ಞಾನವಾದರೂ ಗುಣದೋಷಗಳಿಂದ ಹುಟ್ಟದಿರುವ ಪ್ರಯುಕ್ತ ಪ್ರಮೆಯೂ ಅಲ್ಲ. ಭ್ರಮವೂ ಅಲ್ಲ. ಆದುದರಿಂದ ಬಾಧವಿಲ್ಲ.

---

* ಗುಣತ್ವಾದಿ ಜಾತಿಸಮುದಾಯವು ಜ್ಞಾನದಲ್ಲಿ ಇದ್ದಾಗ್ಯೂ ಸಮವಾಯಸಂಬಂಧರೂಪವಾಗಿರುವುದರಿಂದ ಅದಕ್ಕೆ ಧರ್ಮತ್ವವಿಲ್ಲ. ಪ್ರಮಾತ್ವವು ಧರ್ಮವಾಗಿರುವುದರಿಂದ ಸಮವಾಯದಿಂದ ಬೇರೆಯಾಗಿದೆ. ಸಮವಾಯತ್ವವಿದ್ದರೂ ಅದೂ ಜಾತಿಯಂತೆ ಅಕಾರ್ಯವಾಗಿದೆ. ಕೇವಲ ದ್ರವ್ಯದ ಧರ್ಮಗಳಾದ ದ್ರವ್ಯ ಗುಣ ಕರ್ಮವಿಶೇಷಗಳು ಜ್ಞಾನದಲ್ಲಿ ಕೂಡಲಾರವು. ಪ್ರಮೇಯತ್ವಾದಿಗಳು ಗುಣದಲ್ಲಿ ಕೂಡಿದರೂ ಪರಂಪರಾ ಸಂಬದ್ಧಪ್ರಮಾತ್ವರೂಪ ಜಾತಿರೂಪವಾಗಿರುವುದರಿಂದ ಅತಿರಿಕ್ತವಲ್ಲ.

ಎಂದರೆ— ಹೀಗೆ ಹೇಳಕೂಡದು. ಆ ವ್ಯಕ್ತಿಯೂ (೧) ಕೇವಲ ಜ್ಞಾನವೋ, (೨) ಅಥವಾ ಸಾತಿಶಯವಾದುದೋ (ಕೇವಲ ಜ್ಞಾನವೇ ಅಲ್ಲ. ಮತ್ತೆ ಪ್ರಮಾತ್ವವಿಶಿಷ್ಟವಾದ ಪ್ರಮಾರೂಪ ಜ್ಞಾನವೋ)೧ನೇದ್ದು ಕೂಡಲಾರದು. ಜ್ಞಾನವು ಜ್ಞಾನಕಾರಣದಿಂದ ಅತಿರಿಕ್ತವಾದ ಕಾರಣದಿಂದ ಜನ್ಯವಾಗಲಿಕ್ಕಿಲ್ಲ. ೨ನೇದ್ದೂ ಅಯುಕ್ತವು. ಈ ಅತಿಶಯವೂ ಜಾತಿರೂಪವಲ್ಲ. ಜಾತಿಯೇ ಪಕ್ಷವಾಗಿರುವುದರಿಂದ ಜಾತ್ಯಾಶ್ರಯದಲ್ಲಿಯೂ ಜಾತಿಗೆ ಪ್ರವೇಶಪಿದ್ದರೆ ಆತ್ಮಾಶ್ರಯತ್ವದೋಷವು ಬರುವುದು. ಮತ್ತು ಅತಿಶಯವೂ ಭಾವವೋ ಅಭಾವವೋ ಎಂದು ವಿಕಲ್ಪಿಸಿ ಹೇಳಿದ ದೋಷಗಳು ಬರುತ್ತವೆ. (48) ಮತ್ತು ಅತಿರಿಕ್ತ ಕಾರಣವೂ ಗುಣವೆಂದೇ ಹೇಳಬೇಕು. ಶಬ್ದದಲ್ಲಿರತಕ್ಕ ಗುಣವು ಆಪ್ತೋಕ್ತತ್ವವೇ. ಅಂದರೆ, ಶಾಬ್ದಪ್ರಮೆಯಲ್ಲಿ ಆಪ್ತಿಯೇ ಗುಣವು. ಆ ಶಬ್ದದ ಪ್ರಾಮಾಣ್ಯಕ್ಕೂ, ಆಪ್ತೋಕ್ತತ್ವಗುಣಕ್ಕೂ ಅನ್ವಯವ್ಯತಿರೇಕಗಳು ಇರುವುದಿಲ್ಲ. ವೇದವು ಅಪೌರುಷೇಯವೆಂದು 'ಅಪಿ ವೇದಾನಾಮಂಗೀಕಾರ್ಯಾ ಹಿ ನಿತ್ಯತಾ' ಎನ್ನುವಲ್ಲಿ ಹೇಳುವೆವು. ಅಲ್ಲಿ ವೇದದಲ್ಲಿ ಪ್ರಾಮಾಣ್ಯವಿದ್ದರೂ ಆಪ್ತೋಕ್ತತ್ವವಿರುವುದಿಲ್ಲ (49) ಪ್ರಾಮಾಣ್ಯಜ್ಞಪ್ತಿಯಲ್ಲಿ ಸ್ವತಸ್ತ್ವವಿಷಯದಲ್ಲಿಯೇ 'ಪ್ರಾಮಾಣ್ಯಂ ಜ್ಞಾನಗ್ರಾಹಕಮಾತ್ರಗ್ರಾಹ್ಯಂ ಅಪ್ರಾಮಾಣ್ಯೇತರ ಜ್ಞಾನಸಮವೇತಧರ್ಮತ್ವಾತ್ ಜ್ಞಾನತ್ವವತ್' = ಪ್ರಮಾತ್ವವು ಜ್ಞಾನಗ್ರಾಹಕಮಾತ್ರಗ್ರಾಹ್ಯವು ಅಂದರೆ, ಗ್ರಾಹ್ಯಪ್ರಾಮಾಣ್ಯಾಶ್ರಯತತ್ರಜ್ಞಾನವಿಷಯಕ ಸಾಕ್ಷಿಜ್ಞಾನವಿಷಯತ್ವಯೋಗ್ಯವು, ಅಪ್ರಾಮಾಣ್ಯದಿಂದ ಬೇರೆಯಾದ ಜ್ಞಾನದಲ್ಲಿ ಸಮವೇತಧರ್ಮವಾಗಿರುವುದರಿಂದ ಜ್ಞಾನತ್ವದಂತೆ (50) ಹಾಗಾದರೆ 'ಪ್ರಾಮಾಣ್ಯಂ ಪರತೋ ಜ್ಞಾಯತೇ ಅನಾಭ್ಯಾಸದಶಾಯಾಂ ಸಾಂಶಯಿಕತ್ವಾತ್ ಅಪ್ರಾಮಾಣ್ಯವತ್'=ಪ್ರಾಮಾಣ್ಯವು ಜ್ಞಾನಗ್ರಾಹಕಾತಿರಿಕ್ತದಿಂದ ತಿಳಿಯಲ್ಪಡುತ್ತದೆ, ಅನಭ್ಯಾಸದಶೆಯಲ್ಲಿ ಸಂಶಯಗ್ರಸ್ತವಾಗಿರುವುದರಿಂದ ಅಪ್ರಾಮಾಣ್ಯದಂತೆ. ಎನ್ನುವ ಅನುಮಾನದಿಂದ ಜ್ಞಾನಪ್ರಾಮಾಣ್ಯಕ್ಕೆ ಪರತಸ್ತ್ವವೆಂದು ಹೇಳಕೂಡದು. ಅನಭ್ಯಾಸದಶಾಯಾಂ ಎನ್ನುವ ವಿಶೇಷಣವು ವ್ಯರ್ಥವಾಗುವುದು. ಅಸಿದ್ಧಿಪರಿಹಾರಕ್ಕಾಗಿ ವಿಶೇಷಣವು ಎಂದು ಹೇಳಕೂಡದು. ಅಸಿದ್ಧಿವಾರಕವಾದ ವಿಶೇಷಣವು ವ್ಯಾಪ್ತಿಜ್ಞಾನಕ್ಕೆ ಉಪಯುಕ್ತವಾಗದಿರುವುದರಿಂದ ಅದಕ್ಕೆ ಸಾರ್ಥಕತ್ವವನ್ನು ಅಂಗೀಕರಿಸಲಿಲ್ಲ. 'ಏಕಾಮಸಿದ್ಧಿಂ ಪರಿಹರತೋ ದ್ವಿತೀಯಾಪನ್ನಾ' ಸ್ವರೂಪಾಸಿದ್ಧಿಯನ್ನು ಪರಿಹರಿಸುವವನಿಗೆ ವ್ಯಾವೃತ್ತ್ಯಸಿದ್ಧಿಯು ಪ್ರಾಪ್ತವಾಯಿತೆಂದು ಉದಯನಾಚಾರ್ಯರು ಹೇಳಿರುವರು. ಇಲ್ಲವಾದರೆ 'ವಿಮತಂ ಸಕರ್ತೃಕಂ ಶರೀರಾಜನ್ಯತ್ವಾತ್'= ವಿವಾದವಿಷಯವಾದ ಕ್ಷಿತಿಮೊದಲಾದುದು ಕರ್ತೃವಿಲ್ಲದಿರುವುದು ಶರೀರದಿಂದ ಹುಟ್ಟದಿರುವುದರಿಂದ ಎನ್ನುವ ಅನುಮಾನದಲ್ಲಿ ಶರೀರ ಎನ್ನುವ ವಿಶೇಷಣವು ಅಸಿದ್ಧಿವಾರಕವಾಗಿರುವುದರಿಂದ ವ್ಯರ್ಥವೆಂದು ತಾರ್ಕಿಕರು ಹೇಳುವರು, ಅದು ಕೂಡದೆ ಹೋಗುವುದು. ಹಾಗಾದರೆ, 'ಅನಭ್ಯಾಸದಶಾಯಾಂ' ಎನ್ನುವುದು ಪ್ರತಿಜ್ಞಾದಲ್ಲಿ ವಿಶೇಷಣವು. ಆದಾಗ್ಯೂ ಸ್ವತಃ ಪ್ರಮಾಣಗಳೆಂಬು ಉದಯನಾಚಾರ್ಯರಿಂದ ಅಂಗೀಕರಿಸಲ್ಪಟ್ಟ, ಇದಂತ್ವವೇ ಪ್ರಕಾರವಾಗಿವುಳ್ಳ ಇದಂ ವಿಶೇಷ್ಯಕ ಇದಂತ್ವವೈಶಿಷ್ಟ್ಯವಿಷಯಕವಾದ ಧರ್ಮಿಪ್ರತ್ಯಕ್ಷ ಮತ್ತು ಅನುಮಾನ ಉಪಮಾನ ಪ್ರಾಮಾಣ್ಯಗಳಲ್ಲಿ ಅವುಗಳನ್ನು ಗ್ರಹಿಸುವುದರಲ್ಲಿ ಅಪ್ರಾಮಾಣ್ಯಸಂಶಯದಿಂದುಂಟಾಗತಕ್ಕ ಸಂಶಯಾದಿಗಳು ತೋರುವುದರಿಂದ ವ್ಯಭಿಚಾರವು. ತಥಾಚ ಜ್ಞಾನಪ್ರಾಮಾಣ್ಯಕ್ಕೂ ಕರಣಪ್ರಾಮಾಣ್ಯಕ್ಕೂ ಉತ್ಪತ್ತಿಯಲ್ಲಿ ಸ್ವತಸ್ತ್ವವನ್ನೂ, ಜ್ಞಾನಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನೂ ಅಂಗೀಕರಿಸತಕ್ಕದು. ಕರಣಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಜ್ಞಾನಪ್ರಾಮಾಣ್ಯದಂತೆ ಮುಖ್ಯ ಸ್ವತಸ್ತ್ವವನ್ನು ಅಂಗೀಕರಿಸದಿರುವುದರಿಂದ ಪರತಸ್ತ್ವವೆಂದು ಹಿಂದೆ ಹೇಳಿದ್ದು. ಎಂದೂ ಸಿದ್ಧವಾಯಿತು ॥ ೬೬ ॥

ಜ್ಞಾನ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಒಡಂಬಡದಿದ್ದರೆ ಬಾಧಕವನ್ನು ಹೇಳುತ್ತಾರೆ—

ಮೂ || ಅನವಸ್ಥಾಽನ್ಯಥಾ ಹಿ ಸ್ಯಾದಪ್ರಾಮಾಣ್ಯಂ ತಥಾಽನ್ಯತಃ |
ಮಿಥ್ಯಾಜ್ಞಪ್ತಿಪ್ರಲಂಭಾದೇಸ್ತೇನ ವೇದವಿರೋಧಿ ಯತ್ ||
ನ ಮಾನಮಪಿ ವೇದಾನಾಮಂಗೀಕಾರ್ಯಾ ಹಿ ನಿತ್ಯತಾ || ೬೭ ||

ಅ || ಅನ್ಯಥಾ=ಸ್ವತಸ್ತ್ವವನ್ನು ಅಂಗೀಕರಿಸದಿದ್ದರೆ, ಅನವಸ್ಥಾ=ಅನವಸ್ಥಿತಿಯು, ಸ್ಯಾತ್=ಬರುವುದು. ತಥಾ = ಹಾಗೆಯೇ, ಅಪ್ರಾಮಾಣ್ಯಂ = ಅಪ್ರಾಮಾಣ್ಯವು, ಅನ್ಯತಃ= ಇತರದಿಂದಲೇ, ಅಂದರೆ ದೋಷಾದಿರೂಪವಾದ ಅಪವಾದದಿಂದಲೇ ಬರುವುದು. ತೇನ= (ಯಾವ ಕಾರಣದಿಂದ ಹೀಗೆ ಅಪ್ರಾಮಾಣ್ಯಕ್ಕೆ ಪರತಸ್ತ್ವವಿರುವುದೋ) ಆ ಕಾರಣದಿಂದ, ಮಿಥ್ಯಾಜ್ಞಪ್ತಿಪ್ರಲಂಭಾದೇಃ=ಮಿಥ್ಯಾಜ್ಞಾನ ವಿಪ್ರಲಂಭ ಅವಟುಕರಣತ್ವರೂಪವಾದ ಅಪವಾದ ದಿಂದ, ವೇದವಿರೋಧಿ=ವೇದಕ್ಕೆ ವಿರೋಧಿಯಾದ. ಯತ್=ಯಾವ ಜ್ಞಾನವ್ರೋ, (ಅದು ಅಪ್ರಾಮಾಣವಾಗಿಯೇ ಹುಟ್ಟುತ್ತದೆ.) ನ ಮಾನಂ=ಪ್ರಮಾಣವಲ್ಲ. (ಬಾಧಕಜ್ಞಾನರೂಪ ವಾದ ಅಪವಾದದಿಂದ ಅಪ್ರಮಾಣವಾಗಿಯೇ ಗ್ರಹಿಸಲ್ಪಡುತ್ತದೆ.) ವೇದಾನಾಂ=ವೇದಗಳಿಗೆ, ನಿತ್ಯತಾಪಿ=ನಿತ್ಯತ್ವ (ಅಪೌರುಷೇಯತ್ವ)ವೂ, ಪ್ರಾಮಾಣ್ಯವೂ ಕೂಡ, ಅಂಗೀಕಾರ್ಯಾ= ಅಂಗೀಕರಿಸತಕ್ಕುದೇ. 'ಹಿ ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿಪ್ರಸಿದ್ಧವು ಅಥವಾ ಯಾವಕಾರಣದಿಂದ ನಿತ್ಯತ್ವವು ಅಂಗೀಕರಿಸತಕ್ಕುದೋ, ಆದಕಾರಣ ಹಿಂದೆ ಹೇಳಿದ ದೋಷವಿಲ್ಲ.

ತಾ || ಸ. ರ. ವಿ— ಪ್ರತ್ಯಕ್ಷದ ಪ್ರಾಮಾಣ್ಯವು ಸಂವಾದಾಧೀನವೆನ್ನುವುದಾದರೆ ಆದರ ಸಂವಾದಕ ಪ್ರಾಮಾಣ್ಯವೂ, ಬೇರೆ ಸಂವಾದಾಧೀನವು. ಅಲ್ಲಿಯೂ ಹೀಗೆ, ಹೀಗೆ ಮೂಲಕ್ಕೇನೇ ನಾಶವನ್ನುಂಟುಮಾಡುವ ಅನವಸ್ಥೆಯು ಬರುವುದು. ಹೀಗೆ ಜ್ಞಾನದ ಅಪ್ರಾ ಮಾಣ್ಯವು ಸ್ವತಃ ಬರುವುದಲ್ಲ. ಹಾಗಿದ್ದರೆ ಜ್ಞಾನದಲ್ಲಿ ವಿಶ್ವಾಸಮಾಡಿಕೊಂಡು ಯಾವ ದೃಷ್ಟಾರ್ಥಗಳಲ್ಲಿಯೂ ಪ್ರವರ್ತಿಸಲಾರನು. ಆದಕಾರಣ ಕರಣದೋಷ ಬಾಧಕಪ್ರತ್ಯಯ ಇವುಗಳ ಆಧೀನತ್ವವಿದ್ದುದರಿಂದ ಜ್ಞಾನದ ಅಪ್ರಾಮಾಣ್ಯವು ಪರತಃ ಎಂದೇ ಹೇಳಬೇಕು. ಹೀಗೆ ಅಪ್ರಾಮಾಣ್ಯಕ್ಕೆ ಪರತಸ್ತ್ವವು.

ನ್ಯಾಯಸುಧಾ— (1) ಪ್ರಾಮಾಣ್ಯಕ್ಕೆ ಅವಶ್ಯವೇದ್ಯತ್ವವನ್ನು ಅಂಗೀಕರಿಸದಿರುವು ದರಿಂದ ಅನವಸ್ಥೆಯಿಲ್ಲವೆಂದರೆ— ಬಹುವಿತ್ತವ್ಯಯ ಬಹ್ವಾಯಾಸ ಸಾಧ್ಯವಾದ ಯಾಗಾದಿ ಕರ್ಮದಲ್ಲಿ ನಿಶ್ಶಂಕಪ್ರವೃತ್ತಿಯಾಗಬೇಕಾದರೆ ಪ್ರಾಮಾಣ್ಯಕ್ಕೆ ಅವಶ್ಯವೇದ್ಯತ್ವವಿರಲೇ ಬೇಕು. ಹಾಗಾದರೆ— ಅಲ್ಲಿಯೂ ಅರ್ಥನಿಶ್ಚಯವೇ ಕಾರಣವು, ಪ್ರಾಮಾಣ್ಯನಿಶ್ಚಯವಲ್ಲ ಎಂದು ಹೇಳಕೂಡದು. 'ಪೀತಃ ಶಂಖಃ' ಎಂದು ನಿಶ್ಚಯವಿದ್ದರೂ, ಪೀತಾರ್ಥಿಗೆ ಪ್ರವೃತ್ತಿಯಿಲ್ಲವು. ಆದಕಾರಣ ಪ್ರಾಮಾಣ್ಯನಿಶ್ಚಯವೇ ಕಾರಣವು (2) ಆದಾಗ್ಯೂ ಜ್ಞಾನವು ಬುಭುತ್ಸಿತ ಗ್ರಾಹ್ಯವಾಗಿರುವುದರಿಂದ ಬುಭುತ್ಸಾ (ತಿಳಿಯಬೇಕೆಂಬ ಇಚ್ಛೆಯು) ಎಲ್ಲರಲ್ಲಿಯೂ, ಇರ ಬೇಕೆನ್ನುವ ನಿಯಮವು ಇಲ್ಲದಿರುವುದರಿಂದ ಧರ್ಮಿ ಜ್ಞಾನವಿಲ್ಲದಿರುವುದರಿಂದಲೇ ಸಂಶಯ ವಿಲ್ಲದಿರುವಾಗ ಪ್ರಾಮಾಣ್ಯವು ಅವಶ್ಯವೇದ್ಯವಲ್ಲ ಎಂದರೆ— ಜ್ಞಾನವಾದರೂ ಅಬುಭುತ್ಸಿತ ಗ್ರಾಹ್ಯವಾಗಿರುವುದರಿಂದ ಶೀಘ್ರವಾಗಿ ತಿಳಿಯಲ್ಪಡತಕ್ಕುದು. ಅಂದರೆ, ಜ್ಞಾನವು ಬುಭುತ್ಸಿತ ಗ್ರಾಹ್ಯವಾಗಿದ್ದರೆ ಪ್ರಾಮಾಣ್ಯವು ಅವಶ್ಯವೇದ್ಯವಲ್ಲವೆಂದಾಗುತ್ತಿತ್ತು. ಹೀಗಲ್ಲ. ಮತ್ತೆ

ಜ್ಞಾನವು ಸುಖಾದಿಗಳಂತೆಯೇ ಯೋಗ್ಯ ಆತ್ಮ ವಿಶೇಷಗುಣವಾಗಿರುವುದರಿಂದ ಅಬುಭುತ್ಸಿತ ಗ್ರಾಹ್ಯವೇ. (3) ಜ್ಞಾನವು ತಿಳಿಯಲ್ಪಡೋಣ, ಪ್ರಾಮಾಣ್ಯ ಅಪ್ರಾಮಾಣ್ಯ ಎರಡೂ ತೋರದಿರುವಾಗ ಸಂಶಯವು ಹೇಗೆ ಬಾರದಿರುವುದು? ಕೋಟಿಸ್ಮರಣವಿಲ್ಲದಿರುವುದರಿಂದ ಸಂಶಯವಿಲ್ಲವೆಂದು ಹೇಳಕೂಡದು. ಜ್ಞಾನತ್ವರೂಪವಾದ ಸಾಧಾರಣ ಧರ್ಮವನ್ನು ನೋಡಿದಾಗ ಬಹುವಿತ್ತವ್ಯಯ ಆತ್ಯಾಯಾಸ ಸಾಧ್ಯವಾದ ಯಾಗಾದಿ ಕರ್ಮದಲ್ಲಿ ನಿಷ್ಕಂಪಪ್ರವೃತ್ತಿಗಾಗಿ ಪ್ರಾಮಾಣ್ಯಾದಿ ರೂಪವಾದ ಕೋಟಿಯನ್ನು ತಿಳಿಯಬೇಕೆಂದು ಇಚ್ಛೆಯಿರುವಾಗ ಸ್ಮರಣವಿಲ್ಲವೆನ್ನುವುದು ಕೂಡಲಾರದು. ಆದಕಾರಣ ಸಂಶಯವು ಬಂದೇ ಬರುತ್ತದೆ. ಪ್ರಾಮಾಣ್ಯಸಂಶಯವು ಇರುವಾಗ ಅರ್ಥಸಂಶಯವೂ ಬಾರದೆ ಹೋಗುವುದು ಹೇಗೆ? ಅಂತೂ ನಿಶ್ಶಂಕವಾಗಿ ಪ್ರವೃತ್ತಿಯೂ ಹೇಗೆ ಆಗುವುದು? ಆದಾಗ್ಯೂ ಅನುಮಾನದಿಂದ ಪ್ರಾಮಾಣ್ಯವು ಗೃಹೀತವಾಗುತ್ತದೆ. ಅನುಮಿತಿಯು ಸ್ವತಃ ಪ್ರಮಾಣವು. ಆದಪ್ರಯುಕ್ತ ಅನವಸ್ಥೆಯಿಲ್ಲವೆಂದರೆ ಹಾಗೆ ಹೇಳಕೂಡದು. ಧರ್ಮಿಲಿಂಗ ದೃಷ್ಟಾಂತಾದಿ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವಿಲ್ಲದಿದ್ದರೆ ಅಸಿದ್ಧ್ಯಾದಿಗಳು ಬರುವುದರಿಂದ ಅವುಗಳ ನಿಶ್ಚಯಕ್ಕಾಗಿ ಪುನಃ ಮತ್ತೊಂದು ಅನುಮಾನವನ್ನು ಅಂಗೀಕರಿಸತಕ್ಕದು. ಧರ್ಮ್ಯಾದಿಗಳ ನಿಶ್ಚಯವಾದ ಮೇಲೆ ಅವುಗಳ ಜ್ಞಾನಪ್ರಾಮಾಣ್ಯ ನಿಶ್ಚಯವನ್ನು ಸ್ವೀಕರಿಸತಕ್ಕದು. ಹೀಗೆ ಅಲ್ಲಿಯೂ, ಅಲ್ಲಿಯೂ ಅಂತೂ ಫಲಮುಖಾನವಸ್ಥೆ ಯಿಲ್ಲದಿದ್ದರೂ, ಕಾರಣಮುಖಾನವಸ್ಥೆಯು ಬಂದೇ ಬರುತ್ತದೆ. (4) ಮತ್ತೂ ಅನುಮಿತಿ ಪ್ರಾಮಾಣ್ಯವು ಯಾವ ಜ್ಞಾನದಿಂದ ವಿಷಯೀಕರಿಸಲ್ಪಡುತ್ತದೋ ಅದರ ಪ್ರಾಮಾಣ್ಯವು ಮತ್ತೊಂದರಿಂದ, ಅಂದರೆ ಜ್ಞಾನಪ್ರಾಮಾಣ್ಯವನ್ನು ಅನುಮಿತಿಯು ಗೃಹಿಸುತ್ತದೆ. ಅನುಮಿತಿ ಪ್ರಾಮಾಣ್ಯವನ್ನು ಮತ್ತೊಂದು ಅನುಮಿತಿಯು ಗ್ರಹಿಸುತ್ತದೆ. ಅದರ ಪ್ರಾಮಾಣ್ಯವನ್ನು ಮತ್ತೊಂದು ವಿಷಯೀಕರಿಸುತ್ತದೆ. ಹೀಗೆ ಅನವಸ್ಥೆಯು ತಪ್ಪಿದ್ದಲ್ಲ. (5) ಹಾಗಾದರೆ, ಸ್ವತಃ ಪ್ರಾಮಾಣ್ಯವೆಂಬುವ ನಿಮ್ಮ ಪಕ್ಷದಲ್ಲಿಯೂ, ಅನವಸ್ಥೆಯಿಲ್ಲದಿರುವುದು ಹೇಗೆ ಎಂದರೆ— ಸಾಕ್ಷಿಯು ವೃತ್ತಿಜ್ಞಾನವನ್ನು ಗ್ರಹಿಸುತ್ತದೆ. ಆ ಸಾಕ್ಷಿಯೇ ಅದರ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ; ಹೀಗೆ ಅವುಗಳಿಗೆ ಸ್ವತಃ ಪ್ರಾಮಾಣ್ಯವು. ಸಾಕ್ಷಿಯು ಸ್ವಪ್ರಕಾಶರೂಪವಾಗಿರುವುದರಿಂದ ತನ್ನ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಹೀಗೆ ಸಾಕ್ಷಿಗೆ ಸ್ವತಃ ಪ್ರಾಮಾಣ್ಯವು. (6) ಪ್ರಾಮಾಣ್ಯವು ಉತ್ಪತ್ತಿಯಲ್ಲಿಯೂ, ಜ್ಞಪ್ತಿಯಲ್ಲಿಯೂ ಸ್ವತಃ ಇರುವುದಾದರೆ ಬಾಧ್ಧಾದಿಗಳ ವಾಕ್ಯದಿಂದುಂಟಾದ ಜ್ಞಾನವೂ, ಪ್ರಮಾಣವಾಗಬೇಕಾಗುವುದು. ಅಲ್ಲಿಯೂ ಜ್ಞಾನ ಕಾರಣವಿದೆ. ಮತ್ತು ಆಜ್ಞಾನವೂ ಪ್ರಮಾಣವೆಂದೇ ತಿಳಿಯಬೇಕಾಗುವುದು. ಅಲ್ಲಿಯೂ ಜ್ಞಾನಗ್ರಾಹಕವಿದೆ. (7) ಹಾಗಾದರೆ— ಅದೂ ಪ್ರಮಾಣವಾಗಲಿ ಎಂದರೆ— ಅದು ವೇದವಿರೋಧಿಯಾಗಿದೆ. ವೇದವಿರೋಧಿಯಾದುದೂ ಪ್ರಮಾಣವಾಗುವುದಾದರೆ, ವೇದವು ಪ್ರಮಾಣವಾಗದೇನೇ ಹೋಗಬೇಕಾಗುವುದು. ವೇದಗಳಿಗೂ, ವೇದವಿರೋಧಿಗಳಿಗೂ, ಎರಡಕ್ಕೂ ಪ್ರಾಮಾಣ್ಯವಿರಲಿ ಎಂದರೆ— ಈಶ್ವರ ಧರ್ಮ ಮೊದಲಾದ ವಸ್ತುಗಳಿಗೆ ಸತ್ವ-ಅಸತ್ವಾದಿರೂಪವಾದ, ವಿರುದ್ಧಧರ್ಮದ್ವಯಾಲಿಂಗತ್ವರೂಪವಾದ ಎರಡು ರೂಪವು ಬರಬೇಕಾಗುವುದು. ಅಂತೂ ಸರ್ವಥಾ ವೇದಾರ್ಥವಿಚಾರವೇ ಕೂಡಲಾರದು. ಅಂದರೆ, ವೇದವಿರುದ್ಧವಾದುದಕ್ಕೆ ಪ್ರಾಮಾಣ್ಯವಿದ್ದರೆ ವೇದಕ್ಕೆ ಅಪ್ರಾಮಾಣ್ಯವು ಬರುವ ಪ್ರಯುಕ್ತ ಅನುಗ್ರಾಹ್ಯಪ್ರಮಾಣವೇ ಇಲ್ಲದಿರುವುದರಿಂದ ಮೀಮಾಂಸಾರಂಭವೇ ಕೂಡಲಾರದು. ಎಂದಾಶಂಕಿಸಿದರೆ— 'ಅಪ್ರಾಮಾಣ್ಯಂ ತಥಾನ್ಯತಃ' ಎಂದು. ಅಂದರೆ, ಜ್ಞಾನಕರಣವಾದ ಇಂದ್ರಿಯವಾಗಲೀ ಲಿಂಗವಾಗಲೀ, ಶಬ್ದವಾಗಲೀ ಪ್ರಾಮಾಣ್ಯವನ್ನೇ ಹುಟ್ಟಿಸುತ್ತದೆನ್ನುವ ನಿಯಮವಿಲ್ಲ. ಮತ್ತೆ ಇಂದ್ರಿಯಾದಿಗಳಿಗೆ ಪ್ರಾಮಾಣ್ಯವನ್ನು ಹುಟ್ಟಿಸುವುದರಲ್ಲಿ ಸ್ವಾಭಾವಿಕವಾಗಿ ಶಕ್ತಿಯು. ದೋಷರೂಪವಾದ

ಅಪವಾದದಿಂದ ಅಪ್ರಾಮಾಣ್ಯವನ್ನೂ ಹುಟ್ಟಿಸುತ್ತದೆ. ದೋಷಗಳು ಸ್ವಾಭಾವಿಕ ಶಕ್ತಿಯನ್ನು ಪ್ರತಿಬಂಧಿಸಿ ವಿಪರೀತಕಾರ್ಯವನ್ನು ಹುಟ್ಟಿಸುತ್ತವೆ. (8) ಹಾಗೆಯೇ ಜ್ಞಾನವನ್ನು ಗ್ರಹಿಸ ತಕ್ಕ ಸಾಕ್ಷಿಯೂ ಪ್ರಮಾಣವೆಂದೇ ಗ್ರಹಿಸುತ್ತದೆನ್ನುವ ನಿಯಮವಿಲ್ಲ. ಮತ್ತೆ ವಿಸಂವಾದ ರೂಪವಾದ ಅಪವಾದವಿದ್ದರೆ ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಪ್ರಾಮಾಣ್ಯಕ್ಕೆ ಸ್ವತಸ್ತ್ವವು ಅಪವಾದವಿಲ್ಲದಿದ್ದರೆ ನಿಯತವು. (9) ಇದರಿಂದ ಪ್ರಕೃತಕ್ಕೆ ಏನಾಯಿತೆಂದರೆ— ಅಪ್ರಾಮಾಣ್ಯಕ್ಕೆ ಪರತಸ್ತ್ವವಿದ್ದ ಪ್ರಯುಕ್ತ ಮಿಥ್ಯಾಜ್ಞಾನ ವಂಚನೆ, ಇಂದ್ರಿಯಗಳಲ್ಲಿ ಅಪಟುತ್ವ ಇದು ಮೊದಲಾದ ಅಪವಾದದಿಂದ ವೇದಗಳಿಗೆ ವಿರೋಧಿಯಾದುದೆಲ್ಲಾ ಜ್ಞಾನವೂ ಅಪ್ರಮಾಣವಾಗಿಯೇ ಹುಟ್ಟುತ್ತದೆ. ಪ್ರಮಾಣವಲ್ಲ. ಬಾಧಕಪ್ರತ್ಯಯರೂಪವಾದ ಅಪವಾದದಿಂದ ಅಪ್ರಮಾಣವೆಂದೇ ಗೃಹೀತವಾಗುತ್ತದೆ. ಆದಕಾರಣ ಹಿಂದೆ ಹೇಳಿದ ದೋಷಗಳಿಲ್ಲವು. (10) ಹಾಗಾದರೆ, ಬೌದ್ಧಾದಿಗಳ ವಾಕ್ಯಗಳು ಮಿಥ್ಯಾಜ್ಞಾನಾದಿ ಮೂಲಕಗಳೆಂದು ಏಕೆ ಕಲ್ಪಿಸಬೇಕೆಂದರೆ, ಅವುಗಳು ವೇದ ವಿರುದ್ಧಗಳಾಗಿವೆ. ವಸ್ತುಗಳಿಗೆ ದ್ವೈರೂಪ್ಯವು ಕೂಡಲಾರದು. ಪೌರುಷೇಯಗ್ರಂಥಗಳಲ್ಲಿ ಮಿಥ್ಯಾಜ್ಞಾನಾದಿ ಮೂಲಕತ್ವರೂಪ ದೋಷಗಳು ಸಂಭವಿಸಬಹುದು. ಹಾಗಾದರೆ ವೇದಕ್ಕೂ ಮಿಥ್ಯಾಜ್ಞಾನಾದಿ ಮೂಲಕತ್ವವನ್ನು ಏಕೆ ಕಲ್ಪಿಸಕೂಡದೆಂದರೆ, ವೇದವು ಅಪೌರುಷೇಯವಾಗಿರುವುದರಿಂದ ಅದಕ್ಕೆ ಪುರುಷದೋಷಮೂಲಕತ್ವವು ಸಂಭವಿಸಲಾರದೆನ್ನುತ್ತಾರೆ. 'ಅಪಿ ವೇದಾನಾಂ' ಎನ್ನುವುದರಿಂದ ಅಂದರೆ, ವೇದಗಳಿಗೆ ಪ್ರಾಮಾಣ್ಯವನ್ನೂ ನಿತ್ಯತ್ವ (ಅಪೌರುಷೇಯತ್ವ) ವನ್ನೂ ಕೂಡ ಅಂಗೀಕರಿಸತಕ್ಕುದೇ. (11) '**ಅನಾದಿ ಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ । ನ ಚೋಚ್ಛೇದಸ್ತು ಕಸ್ಯಾಪಿ ಸಮಯಸ್ಯ**' ಎಂದು ಹೇಳಿರುವುದರಿಂದ ನಿತ್ಯತ್ವವು ಬೌದ್ಧಾಗಮಗಳಲ್ಲಿಯೂ ಇದ್ದ ಪ್ರಯುಕ್ತ ಇಲ್ಲಿ ನಿತ್ಯತ್ವವೆಂದರೆ, ಅಪೌರುಷೇಯತ್ವವನ್ನೇ ಇಟ್ಟುಕೊಳ್ಳಬೇಕು. ಆ ಅಪೌರುಷೇಯತ್ವವು 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿಪ್ರಸಿದ್ಧವು. (12) ಅಥವಾ ಯಾವ ಕಾರಣದಿಂದ ನಿತ್ಯತ್ವವು ಅಂಗೀಕರಿಸತಕ್ಕುದೋ ಆ ಕಾರಣ ಹೇಳಿದದೋಷವಿಲ್ಲ. ಆದಕಾರಣ ಸರ್ವಥಾ ವೇದವು ಅಪ್ರಮಾಣವಲ್ಲ. ವೇದವು ಪ್ರಮಾಣವೆಂದೇ ಸಿದ್ಧವಾಯಿತು.

## ಪ್ರಾಮಾಣ್ಯವಾದದ ಸಾರಾಂಶವು.

(1) ಪ್ರತ್ಯಕ್ಷದಂತೆಯೇ ಶ್ರುತಿಗಳಿಗೂ ಪ್ರಾಮಾಣ್ಯವು ಸ್ವತಏವ. ಸಂವಾದಾಧೀನವಲ್ಲ. ಪ್ರಾಮಾಣ್ಯವು ಸಂವಾದಾಧೀನವೆಂದಾದರೆ ಆ ಸಂವಾದಕೆ ಪ್ರಾಮಾಣ್ಯವೂ ಇತರ ಸಂವಾದಾಧೀನವಾದುದು. ಅಲ್ಲಿಯೂ ಹೀಗೆಯೇ, ಅಲ್ಲಿಯೂ ಹೀಗೆಯೇ, ಹೀಗೆ ಮೂಲಕ್ಷಯವನ್ನು ಮಾಡುವ ಅನವಸ್ಥಾದೋಷವು ಪ್ರಸಕ್ತವಾಗುವುದು. ಹೀಗೆ ಜ್ಞಾನದ ಅಪ್ರಾಮಾಣ್ಯವು ಸ್ವತಃ ಅಲ್ಲವು. ಹಾಗಿದ್ದರೆ ಜ್ಞಾನದಲ್ಲಿ ವಿಶ್ವಾಸದಿಂದ ಯಾವ ದೃಷ್ಟಾರ್ಥಗಳಲ್ಲಿಯೂ ಪ್ರವರ್ತಿಸದೆ ಹೋಗುವುದು. ಆದಕಾರಣ ಜ್ಞಾನವು ಕರಣದೋಷ ಬಾಧಕಜ್ಞಾನಾಧೀನವಾಗಿರುವುದರಿಂದ ಅಪ್ರಾಮಾಣ್ಯಕ್ಕೆ ಪರತಸ್ತ್ವವನ್ನೇ ಇಟ್ಟುಕೊಳ್ಳಬೇಕು. ಆದಪ್ರಯುಕ್ತವೇ ಮಿಥ್ಯಾಜ್ಞಾನ ವಿಪ್ರಲಂಭ ಮೊದಲಾದ ದೋಷಗಳು ಇದ್ದಪ್ರಯುಕ್ತ ವೇದವಿರುದ್ಧವಾದ ಬೌದ್ಧಪಾಶುಪತಾದ್ಯಾಗಮವು ಅಪ್ರಮಾಣವೆಂದು ಸಿದ್ಧವಾಯಿತು. ॥ ೬೭ ॥

## ವೇದಪ್ರಾಮಾಣ್ಯಸಮರ್ಥನವು ಸಮಾಪ್ತವಾಯಿತು.



## ॥ ಶ್ರೀಃ ॥

## ವೇದಾಪೌರುಷೇಯತ್ವವಾದವು.

(1) ಹಾಗಾದರೆ ವೇದವೆಂದರೆ ಯಾವುದು? ಮತ್ತು ವೇದಕ್ಕೆ ಅಪೌರುಷೇಯತ್ವವೆಂದರೆ ಎಂತಹುದು? ಎಂದರೆ—'ಕ್ರಮವಿಶೇಷವಿಶಿಷ್ಟಾಃ ವರ್ಣಾಃ ವೇದಃ ! ತಸ್ಯನಿಯತೈಕಪ್ರಕಾರತ್ವಂ ಅಪೌರುಷೇಯತ್ವಂ'=ಅಂದರೆ, ಕ್ರಮವಿಶೇಷದಿಂದ ಕೂಡಿರುವ ವರ್ಣಗಳು ವೇದವು. ಆ ವೇದಕ್ಕೆ ನಿಯಮವಾಗಿ ಒಂದೇಪ್ರಕಾರವಿರುವಿಕೆಯು ಅಪೌರುಷೇಯತ್ವವು. ಅಂದರೆ ಸ್ವತಂತ್ರ ಪುರುಷಪೂರ್ವಕತ್ವಾಭಾವಃ=ಅಂದರೆ, ಸ್ವತಂತ್ರಪುರುಷಪೂರ್ವಕತ್ವವಿಲ್ಲದಿರುವುದು. ಅಂದರೆ, 'ಸಜಾತೀಯೋಚ್ಚಾರಣಮನಪೇಕ್ಷ್ಯೋಚ್ಚಾರಯಿತಾ ಪುರುಷಃ ಸ್ವತಂತ್ರಃ'=ಸಜಾತೀಯವಾದ ಉಚ್ಚಾರಣವನ್ನು ಅಪೇಕ್ಷಿಸದೆ ಉಚ್ಚರಿಸುವ ಪುರುಷನು ಸ್ವತಂತ್ರನು. ತತ್ಪೂರ್ವಕತ್ವವಿಲ್ಲದಿರುವುದು. ಈಶ್ವರನೂ ಪೂರ್ವಕಲ್ಪದಲ್ಲಿ ಉಚ್ಚರಿಸಲ್ಪಟ್ಟ ವೇದವನ್ನು ಅಪೇಕ್ಷಿಸಿ ಅದರ ಸಾರೂಪ್ಯದಿಂದಲೇ ಈ ಕಲ್ಪದಲ್ಲಿಯೂ ಉಚ್ಚರಿಸುತ್ತಾನೆ ಆ ಶ್ರೀಹರಿಯು ನಮ್ಮ ಮತದಲ್ಲಿ ಮಹಾಮಹೋಪಾಧ್ಯಾಯನು. ಅಪೌರುಷೇಯವಾಕ್ಯವನ್ನು ಒಪ್ಪಲೇಬೇಕೆನ್ನುವ ವಿಷಯದಲ್ಲಿ ಉಪಪತ್ತಿಯನ್ನು ಹೇಳುತ್ತಾರೆ—

**ಮೂ ॥ ನ ಹಿ ಧರ್ಮಾದಿಸಿದ್ಧಿಸ್ಸ್ಯಾನ್ನಿತ್ಯವಾಕ್ಯಂ ವಿನಾ ಕ್ವಚಿತ್ ॥ ೬೮ ॥**

ಅ ॥ ನಿತ್ಯವಾಕ್ಯಂ ವಿನಾ=ನಿತ್ಯವಾದ (ಅಪೌರುಷೇಯವಾದ) ವಾಕ್ಯವನ್ನು ಹೊರತು, ಕ್ವಚಿತ್=ಯಾವ ಪ್ರಮಾಣದಿಂದಲೂ, ಧರ್ಮಾದಿಸಿದ್ಧಿಃ=ಧರ್ಮಾದಿಗಳ ಸಿದ್ಧಿಯು (ನಿರ್ಣಯವು) ನ ಸ್ಯಾತ್=ಆಗಲಾರದು, ಹಿ=ಪ್ರಮಾಣಪ್ರಸಿದ್ಧವು.

ತಾ ॥ **ನ್ಯಾಯಸುಧಾ**— (1) ಧರ್ಮ, ಅಧರ್ಮ, ಸ್ವರ್ಗ, ನರಕ ಮೊದಲಾದುವು ಎಲ್ಲಾ ವಾದಿಗಳಿಗೂ ಸಮ್ಮತವೇ ಆಗಿವೆ. ಯಾವ ಚಾರ್ವಾಕನು ಧರ್ಮಾದಿಗಳನ್ನು ಅಂಗೀಕರಿಸುವುದಿಲ್ಲವೋ ಅವನೂ ಧರ್ಮಾದಿಗಳನ್ನು ಅಂಗೀಕರಿಸಲೇ ಬೇಕೆಂದು ಉಪಪಾದಿಸುವೆವು. (2) 'ಧರ್ಮಾದಿಕಂ ಪ್ರಮಾಣೋಪೇತಂ ವಸ್ತುತ್ವಾತ್ ಘಟವತ್'=ಧರ್ಮವೊದಲಾದುದು ಪ್ರಮಾಣಯುಕ್ತವಾಗಿದೆ, ವಸ್ತುವಾಗಿರುವುದರಿಂದ ಘಟದಂತೆಯೇ. ಪ್ರಮಾಣವಿಲ್ಲದೆ ಎಲ್ಲಾ ವಾದಿಗಳಿಗೆ ಧರ್ಮಾದಿಗಳ ನಿಶ್ಚಯವು ಆಗಲಾರದು. ಹೀಗೆ ಸಾಮಾನ್ಯವಾಗಿ ಸಿದ್ಧವಾದ ಪ್ರಮಾಣವು ೧ ಪ್ರತ್ಯಕ್ಷವೆಂದಾಗಲೀ, ೨ ಅನುಮಾನವೆಂದಾಗಲೀ, ೩ ಪೌರುಷೇಯಾಗಮವೆಂದಾಗಲೀ ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ— ೧ ಪ್ರತ್ಯಕ್ಷವೆಂದು ಹೇಳುವುದಾದರೆ, ಅದು ಬಾಹ್ಯವೋ ಮಾನಸವೋ ಬಾಹ್ಯಪ್ರತ್ಯಕ್ಷವೆಂದು ಹೇಳಕೂಡದು. ಬಾಹ್ಯಪ್ರತ್ಯಕ್ಷವು ರೂಪಾದಿಗಳುಳ್ಳ ದ್ರವ್ಯವನ್ನೂ ದ್ರವ್ಯದಲ್ಲಿ ಸಮವೇತಗಳಾದ ಗುಣ ಕರ್ಮ ಸಾಮಾನ್ಯಗಳನ್ನೂ ತಿಳಿಸುತ್ತದೆ. ಅಲ್ಲದೆ ಧರ್ಮಾದಿಗಳನ್ನೂ ತಿಳಿಸಲಾರದು. ಮಾನಸಪ್ರತ್ಯಕ್ಷವೆಂದೂ ಹೇಳಕೂಡದು. ಸುಖಾದಿಗಳಂತೆ ಧರ್ಮಾದಿಗಳಲ್ಲಿ ಅನುಭವಾನುವ್ಯವಸಾಯವಿಲ್ಲ. ಇಲ್ಲವಾದರೆ ಸುಖವನ್ನು ಅನುಭವಿಸುತ್ತೇನೆ ಎನ್ನುವಂತೆ ಧರ್ಮವನ್ನು ಅನುಭವಿಸುತ್ತೇನೆ ಎಂದು ಅನುಭವವಿರಬೇಕಾಗುವುದು. (3) ಸ್ವರ್ಗಾದಿಗಳಾದರೂ ಅತಿದೂರಸ್ಥಗಳಾದುದರಿಂದ ನಮ್ಮ ಪ್ರತ್ಯಕ್ಷಕ್ಕೆ ಅವುಗಳು ವಿಷಯವಾಗಲಾರವು. ಯೋಗಿಗಳ ಪ್ರತ್ಯಕ್ಷವು ನಮ್ಮ ಇಂದ್ರಿಯಕ್ಕೆ ಗೋಚರವಾಗದಿರುವ ಅರ್ಥವನ್ನು ವಿಷಯೀಕರಿಸುವ ಪ್ರಯುಕ್ತ ಅದರಿಂದ ಧರ್ಮಾದಿಗಳ ನಿರ್ಣಯವನ್ನು ವಾದಿ

ಕೊಳ್ಳುತ್ತೇವೆಂದು ಹೇಳಕೂಡದು. ಅದರಿಂದ ಯೋಗಿಗಳಿಗೆ ಕಥಂಚಿತ್ ಧರ್ಮಾದಿಗಳು ಸಿದ್ಧಗಳಾದಾಗ್ಯೂ ನಮಗೆ ಧರ್ಮಾದಿಗಳ ನಿಶ್ಚಯವಾಗಲಾರದು. ಒಬ್ಬನ ಪ್ರತ್ಯಕ್ಷದಿಂದ ಇನ್ನೊಬ್ಬನಿಗೆ ನಿಶ್ಚಯವಾಗಲೀ ಅನುಷ್ಠಾನವಾಗಲೀ ಕೂಡಲಾರದು. (4) ೨ ಧರ್ಮಾದಿಗಳ ವಿಷಯದಲ್ಲಿ ಅನುಮಾನವೂ ಪ್ರಮಾಣವೆಂದು ಹೇಳಕೂಡದು. ಅದರಿಂದ ವ್ಯಾಪ್ತವಾದ ಲಿಂಗ ವಿರುವುದಿಲ್ಲ 'ಜ್ಯೋತಿಷ್ಟೋಮಾದಿಕಂ ಧರ್ಮಾದಿಸಾಧನಂ ತದುದ್ದೇಶೇನ ಪ್ರೇಕ್ಷಾವದ್ಭಿಃ ಕ್ರಿಯಮಾಣತ್ವಾತ್ ಯತ್ ಯದುದ್ದೇಶೇನ ಪ್ರೇಕ್ಷಾವದ್ಭಿಃ ಕ್ರಿಯತೇ ತತ್ ತತ್ಸಾಧನಂ ಯಥಾ ಕೃಷ್ಯಾದಿಕಂ ಧಾನ್ಯಾದಿಸಾಧನಂ'=ಜ್ಯೋತಿಷ್ಟೋಮ ಮೊದಲಾದುದು ಧರ್ಮಾದಿಗಳಿಗೆ ಸಾಧನವು, ಅದನ್ನುದ್ದೇಶಿಸಿ ಪ್ರೇಕ್ಷಾವಂತರಿಂದ ಮಾಡಲ್ಪಡುವುದರಿಂದ ಯಾವುದು ಯಾವುದನ್ನು ಉದ್ದೇಶಿಸಿ ಪ್ರೇಕ್ಷಾವಂತರಿಂದ ಮಾಡಲ್ಪಡುತ್ತದೋ ಅದು ಅದಕ್ಕೆ ಸಾಧನವು. ಹೇಗೆಂದರೆ— ಕೃಷಿಮೊದಲಾದುದು ಧಾನ್ಯಾದಿಗಳಿಗೆ ಸಾಧನವು, ಎನ್ನುವ ಸಾಮಾನ್ಯತೋ ದೃಷ್ಟಾನುಮಾನ ದಿಂದ ಧರ್ಮಾದಿಗಳು ಸಿದ್ಧಸುವವು ಎಂದರೆ—ಅದರಿಂದ ಧರ್ಮಾದಿಗಳ ಸ್ವರೂಪಮಾತ್ರ ಸಿದ್ಧಿ ಯಾದರೂ ಸಾಧನ ಫಲ ಸಂಬಂಧರೂಪವಾದ ಅನುಷ್ಠಾನಕ್ಕೆ ಯೋಗ್ಯವಾದ ಆದರ ವಿಶೇಷ ವನ್ನು ಅನುಮಾನದಿಂದ ತಿಳಿಯಲಿಕ್ಕೆ ಬರಲಾರದು. ಏಕೆಂದರೆ, ಇಂತಹ ಯಜ್ಞದಾನಾದಿ ಗಳಿಂದುಂಟಾದ ಧರ್ಮವು ಇಂತಹ ಫಲವನ್ನು ಹುಟ್ಟಿಸುತ್ತದೆ, ಇದುಮೊದಲಾದ ಅತಿ ಸೂಕ್ಷ್ಮ ಗಳಾದ ವಿಶೇಷಗಳನ್ನು ಎಲ್ಲಾ ವಾದಿಗಳೂ ಅನುಷ್ಠಾನಮಾಡತಕ್ಕವುಗಳನ್ನು ಅನುಮಾನದಿಂದ ತಿಳಿಯಲು ಸಾಧ್ಯವಿಲ್ಲ (5) ಧರ್ಮಾದಿಗಳ ವಿಷಯದಲ್ಲಿ ಪೌರುಷೇಯ ವಾಕ್ಯವೂ ಪ್ರಮಾಣ ವಾಗಲಾರದು. ಏಕೆಂದರೆ, ಪುರುಷರಲ್ಲಿ ಬಹಳವಾಗಿ ಅಜ್ಞಾನ ಸಂಶಯಮೊದಲಾದ ದೋಷ ಗಳೇ ತೋರುವುದರಿಂದ ಧರ್ಮಾದಿಗಳನ್ನುಪದೇಶಮಾಡುವವನಲ್ಲಿ ವಿಶ್ವಾಸವು ಹುಟ್ಟಲಾರದು. ಆದಪ್ರಯುಕ್ತ ಅಪೌರುಷೇಯ ವಾಕ್ಯವನ್ನು ಒಡಂಬಡದೆ ಧರ್ಮಾದಿಗಳ ನಿಶ್ಚಯವು ಆಗದಿರು ವುದರಿಂದ 'ಧರ್ಮಾಧರ್ಮಾದಿಕಂ ಪ್ರಮಾಣೋಪೇತಂ ವಸ್ತುತ್ವಾತ್ ಘಟವತ್' ಎನ್ನುವ ಸಾಮಾನ್ಯಸಿದ್ಧಿಯಿಂದಲೂ, 'ಪ್ರತ್ಯಕ್ಷಾದಿಗಳು ಕೂಡಲಾರವು' ಇತ್ಯಾದಿಗಳಿಂದ ಹೇಳಲ್ಪಟ್ಟ ಪರಿಶೇಷ ಪ್ರಮಾಣದಿಂದಲೂ, ಧರ್ಮಾದಿಗಳನ್ನು ಪ್ರತಿಪಾದಿಸತಕ್ಕ ಅಪೌರುಷೇಯವಾದ ಯಾವುದಾದರೊಂದು ವಾಕ್ಯವಿದೆ ಎಂದು ಎಲ್ಲಾ ವಾದಿಗಳೂ ಅಂಗೀಕರಿಸಲೇ ಬೇಕು. ॥ ೬೮ ॥

ಧರ್ಮಾದಿಗಳನ್ನು ಪುರುಷರ ಮಾತಿನಿಂದ ನಿಶ್ಚಯಿಸಲಿಕ್ಕೆ ಸಾಧ್ಯವಿಲ್ಲವೆಂದಾಗಿದ್ದರೆ ಹಿಂದೆ ಹೇಳಿದಪ್ರಕಾರ ಪರಿಶೇಷ ಪ್ರಮಾಣದಿಂದ ಅಪೌರುಷೇಯವಾಕ್ಯವನ್ನು ಒಪ್ಪಬೇಕಾಗಬಹುದಿತ್ತು. ಬುದ್ಧ ಋಷಭ ಜಿನ ಕಪಿಲ ಪಶುಪತಿಮೊದಲಾದವರು ಮಾಡಿದ ಪೌರುಷೇಯಾಗಮದಿಂದ ಧರ್ಮಾದಿಗಳನ್ನು ನಿಶ್ಚಯಿಸಲಿಕ್ಕೆ ಶಕ್ಯವಾಗುತ್ತದೆ. ಅವರಲ್ಲಿ ಅವಿಶ್ವಾಸಕ್ಕೆ ಕಾರಣವಿಲ್ಲ. ಅವರು ಪರಮಾಪ್ತರಾಗಿರುವುದರಿಂದ ವಿಪ್ರಲಂಭಮೊದಲಾದ ಸಂಶಯಕ್ಕೆ ವಿಷಯರಾಗಲಾರ ರೆಂದರೆ—

**ಮೂ ॥ ಅವಿಪ್ರಲಂಭಸ್ತಜ್ಜ್ಞಾನಂ ತತ್ಕೃತತ್ವಾದಯೋಽಪಿ ಚ ।**
**ಕಲ್ಪ್ಯಾ ಗೌರವದೋಷೇಣ ಪುಂವಾಕ್ಯಂ ಜ್ಞಾಪಕಂ ನ ತತ್ ॥ ೬೯ ॥**

ಅ ॥ ಅವಿಪ್ರಲಂಭಃ=ವಿಪ್ರಲಂಭಾಭಾವವು, ತಜ್ಜ್ಞಾನಂ=ಧರ್ಮಾದಿಗಳ ಪ್ರಮಿತಿಯು, ತತ್ಕೃತತ್ವಾದಯೋಽಪಿ=ಯಾವುದಾದರೊಂದು ಧರ್ಮೋಪದೇಶವಾಕ್ಯವು ಬುದ್ಧಾದಿಗಳಿಂದ ಮಾಡಲ್ಪಟ್ಟದ್ದೆನ್ನುವುದು, ಇಂದ್ರಿಯಗಳಲ್ಲಿ ಪಾಟವವು, ಕೃಪಾಲುತ್ವವು, ಐಶ್ವರ್ಯವು,

ಧರ್ಮ, ವೈರಾಗ್ಯ, ಇದುಮೊದಲಾದವುಗಳು, ಚ=ಯಾವಕಾರಣದಿಂದ, ಕಲ್ಪ್ಯೈಃ=ಕಲ್ಪಿಸಲ್ಪಡಬೇಕೋ, ತತ್=ಆ ಕಾರಣದಿಂದ, ಗೌರವದೋಷೇಣ=ಕಲ್ಪನಾಗೌರವದೋಷದಿಂದ, ಪುಂವಾಕ್ಯಂ=ಪುರುಷರ ವಾಕ್ಯವು, ಜ್ಞಾಪಕಂ=ಧರ್ಮಾದಿನಿಶ್ಚಾಯಕವು, ನ=ಆಗಲಾರದು.

ತಾ ॥ ನ್ಯಾಯಸುಧಾ— (1) ಬುದ್ಧಾದಿಗಳು ಆಪ್ತರೆಂದು ನಿಶ್ಚಯವಿರುತ್ತಿದ್ದರೆ ಅವರ ವಾಕ್ಯದಿಂದ ಧರ್ಮಾದಿನಿಶ್ಚಯವಾಗಬಹುದಿತ್ತು. ನಿಶ್ಚಯವಿಲ್ಲ. ಏಕೆಂದರೆ ಪ್ರಮಾಣವಿಲ್ಲ. (2) ಆಪ್ತತ್ವವೆಂದರೆ— ಹೇಳಲರ್ಹವಾದ ಅರ್ಥದ ತತ್ವಜ್ಞಾನವು. ವಂಚಿಸಬೇಕೆಂಬ ಇಚ್ಛೆಯಿಲ್ಲದಿರುವುದು, ಹೇಳಬೇಕೆಂಬ ಇಚ್ಛೆಯು, ಇಂದ್ರಿಯಪಾಟವವು, ಈ ನಾಲ್ಕು ಆಪ್ತತ್ವವೆನ್ನಿಸುತ್ತದೆ. ಇನ್ನೊಬ್ಬರಲ್ಲಿ ಇರುವ ಇವುಗಳು ನಮಗೆ ಪ್ರತ್ಯಕ್ಷವಾಗಲಾರವು. ಅವುಗಳನ್ನು ಅನುಮಾನದಿಂದ ತಿಳಿಯಲಿಕ್ಕೂ ಸಾಧ್ಯವಾಗಲಾರದು. ಅವುಗಳನ್ನು ಪೌರುಷೇಯ ವಾಕ್ಯದಿಂದ ತಿಳಿಯಬಹುದೆಂದರೆ— ಪುರುಷರಲ್ಲಿ ಅಜ್ಞಾನಾದಿ ಶಂಕೆಗಳು ಇರುವುದರಿಂದ ಅವುಗಳಿಂದ ತಿಳಿಯಲಿಕ್ಕೂ ಸಾಧ್ಯವಿಲ್ಲ. ಅಪೌರುಷೇಯ ವಾಕ್ಯವನ್ನಾದರೂ ಅಂಗೀಕರಿಸುವುದಿಲ್ಲವಷ್ಟೆ. ಆದಪ್ರಯುಕ್ತ ಅವಿಪ್ರಲಂಭಾದಿಗಳನ್ನು ಯಾವನಾದರೊಬ್ಬನಲ್ಲಿ ಏನೂ ಪ್ರಮಾಣವಿಲ್ಲದೆ ಕಲ್ಪಿಸಲೇ ಬೇಕು. ಆಪ್ತತ್ವವನ್ನು ಮಾತ್ರ ಕಲ್ಪಿಸೋಣದರಿಂದ ಈ ವಾಕ್ಯವನ್ನು ಅವನು ಮಾಡಿದ್ದೆಂದು ಸಿದ್ಧಿಸಲಾರದು. ಆದಪ್ರಯುಕ್ತ ಯಾವುದಾದರೊಂದು ವಾಕ್ಯವನ್ನು ಅವನು ಮಾಡಿದ್ದೆಂದೂ ಕಲ್ಪಿಸಲೇಬೇಕು. ಆದಕಾರಣ ಹೀಗೆ ಕಲ್ಪನಾಗೌರವವು ಬರುವುದರಿಂದ ಪುರುಷರ ವಾಕ್ಯದಿಂದ ಧರ್ಮಾದಿ ನಿಶ್ಚಯವಾಗಲಾರದು. (2) ಲೋಕದಲ್ಲಿ ಪ್ರಮಾಣವಿಲ್ಲದೆ ಯಾವನಾದರೊಬ್ಬ ಪುರುಷನು ಆಪ್ತನೆಂದು ಪರಿಕಲ್ಪಿಸಿ ಯಾವುದಾದರೊಂದು ವಾಕ್ಯವನ್ನು ಅವನು ಮಾಡಿದ್ದೆಂದು ಕಲ್ಪಿಸಿ ಅದರಿಂದ ಅರ್ಥನಿಶ್ಚಯವನ್ನು ಮಾಡುವ ಪ್ರೇಕ್ಷಾವಂತರು ತೋರಿಬರುವುದಿಲ್ಲವಷ್ಟೆ. ಮತ್ತೆ ಪ್ರಮಾಣದಿಂದ ಪ್ರಾಮಾಣ್ಯವನ್ನು ನಿಶ್ಚಯಿಸಿಯೇ ಅರ್ಥನಿಶ್ಚಯವನ್ನು ಮಾಡುವವರು ಕಾಣುತ್ತಾರೆ. (3) ಯದ್ಯಪಿ ಕೆಲವುಕಡೆ ಅಲ್ಪಾಯಾಸಸಾಧ್ಯವಾದ ಕರ್ಮದಲ್ಲಿ ವಾಕ್ಯಪ್ರಾಮಾಣ್ಯವನ್ನು ನಿಶ್ಚಯಿಸದಿದ್ದರೂ ಪ್ರಾಜ್ಞರಿಗೆ ಪ್ರವೃತ್ತಿಯಾಗುತ್ತದೆ. ಆದಾಗ್ಯೂ ಮಹಾಯಾಸ ಸಮಸ್ತದ್ರವ್ಯವ್ಯಯಾದಿಗಳಿಂದ ಸಾಧ್ಯವಾದ ಯಾಗಾದಿ ಕರ್ಮದಲ್ಲಿ ಅದನ್ನು ಬೋಧಿಸುವ ವಾಕ್ಯದಲ್ಲಿ ಪ್ರಾಮಾಣ್ಯನಿಶ್ಚಯವಿಲ್ಲದೇನೇ ಆಗಲಿ, ಕೇವಲ ಕಲ್ಪನಾಮಾತ್ರದಿಂದಲಾಗಲಿ ಪ್ರವೃತ್ತಿಯಾಗಲಾರದು ॥ ೭೯ ॥

(1) 'ಧರ್ಮಾದಿಕಂ ಕಸ್ಯಚಿತ್ಪ್ರತ್ಯಕ್ಷಂ ವಸ್ತುತ್ವಾತ್ ಘಟವತ್''=ಘಟದಂತೆ ವಸ್ತುವಾಗಿರುವುದರಿಂದ ಧರ್ಮವೊದಲಾದುದು ಯಾರಿಗೋ ಒಬ್ಬನಿಗೆ ಪ್ರತ್ಯಕ್ಷವು. ಈ ಅನುಮಾನದಿಂದ ಸಿದ್ಧರಾದ ಧರ್ಮಾದಿದರ್ಶಿಗಳು (ಧರ್ಮಾದಿಗಳನ್ನು ಪ್ರತ್ಯಕ್ಷೀಕರಿಸಿದವರು) ನಾವೇ ಮೊದಲಾದವರೆಂದು ಹೇಳಕೂಡದು. ಏಕೆಂದರೆ— ನಮ್ಮಲ್ಲಿ ಧರ್ಮಾದಿ ದ್ರಷ್ಟೃತ್ವವು ಬಾಧಿತವಾಗಿದೆ. (2) ಜಿನಾದಿಗಳು ಧರ್ಮಾದಿದರ್ಶಿಗಳೆಂದೂ ಹೇಳಕೂಡದು. ಏಕೆಂದರೆ— ಜಿನಾದಿಗಳ ವಚನಗಳು ಅಲ್ಲಲ್ಲಿ ವ್ಯತ್ಯಸ್ತಗಳಾಗುವುದರಿಂದ ಅವರು ಧರ್ಮಾದಿಗಳನ್ನು ನೋಡುತ್ತಾರೆನ್ನುವುದು ಕೂಡಲಾರದು. ಮತ್ತೆ ಪರಿಶೇಷಾತ್ ಬುದ್ಧನೇ ಧರ್ಮಾದಿಗಳನ್ನು ಸಾಕ್ಷಾತ್ಕರಿಸುವವನೆಂದು ನಿಶ್ಚಯಿಸಬೇಕು. (3) ರಾಗ ದ್ವೇಷ ಮೊದಲಾದ ದೋಷಗಳು ಅಜ್ಞಾನಮೂಲಕಗಳಾಗಿರುವುದರಿಂದ ಧರ್ಮಾದಿಗಳನ್ನು ಸಾಕ್ಷಾತ್ಕರಿಸಿಕೊಂಡ ಬುದ್ಧನಿಗೆ ಅವುಗಳು ಕೂಡಲಾರವು. ವಿಪ್ರಲಂಬವು (ವಂಚನೆಯು) ರಾಗಾದಿಗಳಿಂದಲೇ ಹುಟ್ಟತಕ್ಕದ್ದಾದಪ್ರಯುಕ್ತ ರಾಗಾದಿದೋಷವಿಲ್ಲದಿರುವ ಬುದ್ಧನಿಗೆ ವಿಪ್ರಲಂಭವೂ ಕೂಡಲಾರದು. ನಿಷ್ಕಾರಣವಾಗಿಯೇ ಯಾರೊಬ್ಬನೂ,

ಯಾರನ್ನಾದರೂ ವಂಚಿಸಲಾರನು. ಇಂತಹ ಪುರುಷನು ತಮ್ಮ ಹಿತಪ್ರಾಪ್ತಿಗೂ ಅಹಿತಪರಿಹಾರಕ್ಕೂ ಸಾಧನವನ್ನು ತಿಳಿಯದಿರುವ ಅನೇಕವಿಧ ವ್ಯಸನ ಸಮುದ್ರದಲ್ಲಿ ಮುಳುಗಿರುವ ಪ್ರಾಣಿಗಳನ್ನು ನೋಡುತ್ತಾ ಉಪದೇಶಿಸದೆ ಇರಲಾರನು. ಇಂತಹ ಮಹಾನುಭಾವನಿಗೆ ಇಂದ್ರಿಯಗಳಲ್ಲಿ ಪಟುತ್ವವಿಲ್ಲವೆಂದು ಸಂಭಾವನೆಮಾಡಲಿಕ್ಕೂ ಸಾಧ್ಯವಿಲ್ಲವು. ಆದಕಾರಣ ಸಾಮಾನ್ಯಾಕಾರವಾಗಿ ಬುದ್ಧನು ಧರ್ಮಾದಿಗಳನ್ನು ಉಪದೇಶಿಸಿದ್ದಾನೆಂದು ಸಿದ್ಧವಾಗಲು ಪ್ರಸಿದ್ಧವಾದುದನ್ನು ಬಿಟ್ಟು ಅಪ್ರಸಿದ್ಧವಾದುದನ್ನು ಕಲ್ಪಿಸಲಿಕ್ಕೆ ಸಾಧ್ಯವಿಲ್ಲದಿರುವುದರಿಂದ ಅಂತಹ ಧರ್ಮಾದ್ಯುಪದೇಶಕವಾಕ್ಯವು ಬೌದ್ಧಾಗಮವೆಂದೇ ಸಿದ್ಧವಾಗುತ್ತದೆ. ಅಂತೂ ಬೌದ್ಧಾಗಮದಲ್ಲಿ ಹೇಳಿದಪ್ರಕಾರವೇ ಧರ್ಮಾದಿಗಳನ್ನು ತಿಳಿಯಲು ಸಾಧ್ಯವಾಗುವಾಗ ಕಲ್ಪನಾಗೌರವವಿಲ್ಲ. ವಿವಕ್ಷಿತಾರ್ಥ ತತ್ವಜ್ಞಾನವೊದಲಾದುದೆಲ್ಲವೂ ಬೌದ್ಧನಲ್ಲಿ ಪ್ರಮಿತವಾಗಿದೆ ಎಂದು ಬೌದ್ಧರು ಹೇಳುವರು. ಇದೇ ರೀತಿಯಾಗಿ ಆರ್ಹತಾದಿಗಳೂ (ಜೈನಾದಿಗಳೂ) ತಂತಮ್ಮ ಆಗಮಗಳಿಗೆ ಪ್ರಾಮಾಣ್ಯವನ್ನು ಸಾಧಿಸಿಕೊಳ್ಳುವರು. ಆದಕಾರಣ ಹಿಂದೆ ಹೇಳಿದಪ್ರಕಾರ ಪೌರುಷೇಯ ವಚನದಿಂದಲೇ ಧರ್ಮಾದಿಗಳು ಸಿದ್ಧಿಸುವಾಗ 'ನ ಹಿ ಧರ್ಮಾದಿಸಿದ್ಧಿಃಸ್ಯಾತ್ ನಿತ್ಯವಾಕ್ಯಂ ವಿನಾ ಕ್ವಚಿತ್' ಎಂದು ಹೇಳಿದ ಪರಿಶೇಷವು ಕೂಡದಿರುವುದರಿಂದ ಅಪೌರುಷೇಯವಾಕ್ಯವು ಸಿದ್ಧಿಸುವುದಿಲ್ಲವೆಂದಾಶಂಕಿಸಿದರೆ —

**ಮೂ ॥ ಪ್ರತ್ಯಕ್ಷಃ ಕಸ್ಯಚಿದ್ಧರ್ಮೋ ವಸ್ತುತ್ವಾದಿತಿ ಚೋದಿತೇ ।**
**ನ ಬುದ್ಧೋ ಧರ್ಮದರ್ಶೀಸ್ಯಾತ್ಪುಂಸ್ತ್ವಾದಿತ್ಯನುಮಾಹತಿಃ ॥ ೭೦ ॥**

ಅ ॥ ಧರ್ಮಃ=ಧರ್ಮವು, ಕಸ್ಯಚಿತ್=ಯಾರೋ ಒಬ್ಬನಿಗೆ, ಪ್ರತ್ಯಕ್ಷಃ=ಪ್ರತ್ಯಕ್ಷವಾಗಿದೆ. ವಸ್ತುತ್ವಾತ್=ಪದಾರ್ಥವಾಗಿರುವುದರಿಂದ, (ಘಟವತ್=ಮಡಿಕೆಯಂತೆ) ಇತಿ ಚ=ಹೀಗೆ, ಉದಿತೇ ಸತಿ=ಪೂರ್ವಪಕ್ಷಿಯಿಂದ ಹೇಳಲ್ಪಡುತ್ತಿರಲು, (ಯಾರು ಧರ್ಮಾದಿಗಳ ಪ್ರತ್ಯಕ್ಷವುಳ್ಳವನೋ ಆತನು ಈಶ್ವರನೆಂದು ಕೆಲವರು, ಬುದ್ಧಾದಿಗಳೆಂದು ಕೆಲವರು, ಹೀಗೆ ಆಯಾಯ ವಾದಿಗಳು ಹೇಳುತ್ತಿರಲು) ಬುದ್ಧಃ=ಬುದ್ಧನು, ಧರ್ಮದರ್ಶೀ ನ ಸ್ಯಾತ್=ಧರ್ಮವನ್ನು ಪ್ರತ್ಯಕ್ಷೀಕರಿಸಿದವನು ಆಗಲಾರನು, ಪುಂಸ್ತ್ವಾತ್=ಪುರುಷತ್ವವಿದ್ದಪ್ರಯುಕ್ತ, (ದೇವದತ್ತವತ್=ದೇವದತ್ತನಂತೆ,) ಇತಿ ಹೀಗೆ, (ಸಿದ್ಧಾಂತಿಯಿಂದ ಹೇಳಲು ಶಕ್ಯವಾಗುವುದರಿಂದ) ಅನುಮಾಹತಿಃ=ಧರ್ಮಾದಿ ದ್ರಷ್ಟೃತ್ವಂ ಬುದ್ಧನಿಷ್ಠಂ ಅನ್ಯತ್ರಪ್ರಾಪ್ತಾ ಬಾಧಕೋಪಪನ್ನತ್ವೇ ಸತಿ ಕ್ವಚಿತ್ ವೃತ್ತಿಮತ್ವಾತ್ = ಧರ್ಮಾದಿದ್ರಷ್ಟೃತ್ವವು ಬುದ್ಧನಲ್ಲಿರತಕ್ಕದ್ದು. ಬೇರೆಕಡೆಯಲ್ಲಿ ಇರಲಿಕ್ಕೆ ಬಾಧಕವಿದ್ದು ಎಲ್ಲಿಯಾದರೊಂದುಕಡೆಯಲ್ಲಿ ಇರಬೇಕಾಗಿರುವುದರಿಂದ ಎನ್ನುವ ಪರಿಶೇಷಾನುಮಾನಕ್ಕೆ ಈ ಪುಂಸ್ತ್ವಾನುಮಾನದಿಂದ ಬಾಧವು.

ತಾ ॥ **ಸ. ರ. ವಿ.**— ಅತ್ಯಂತ ಅತೀಂದ್ರಿಯಾರ್ಥಗಳಲ್ಲಿ ಪುರುಷವಾಕ್ಯವು ಪ್ರಮಾಣವಲ್ಲ ಅನ್ವಯವ್ಯತಿರೇಕಗಳಿಂದ ತಿಳಿಯತಕ್ಕ ಆಪ್ತತ್ವವನ್ನು ಆ ಪುರುಷನಲ್ಲಿ ತಿಳಿಯಲು ಸಾಧ್ಯವಿಲ್ಲ. ಆದಪ್ರಯುಕ್ತ ಧರ್ಮಾದಿಗಳು ಬೇರೆ ರೀತಿಯಾಗಿ ಸಿದ್ಧಿಸದಿರುವುದರಿಂದಲೂ ವೇದವನ್ನು ಅಪೌರುಷೇಯವೆಂದಂಗೀಕರಿಸಲೇಬೇಕು.

**ನ್ಯಾಯಸುಧಾ**— (1) 'ಧರ್ಮಾದಿಃ ಕಸ್ಯಚಿತ್ಪ್ರತ್ಯಕ್ಷಃ ವಸ್ತುತ್ವಾತ್'= ಧರ್ಮವೊದಲಾದುದು ಯಾರೋ ಒಬ್ಬನಿಗೆ ಪ್ರತ್ಯಕ್ಷವಾಗಿದೆ, ವಸ್ತುವಾಗಿರುವುದರಿಂದ ಎನ್ನುವ ಸಾಮಾನ್ಯಾನುಮಾನದಿಂದಲೇ ಬುದ್ಧನು ಧರ್ಮಾದಿಗಳನ್ನು ಪ್ರತ್ಯಕ್ಷೀಕರಿಸಿದವನೆಂದು ಸಿದ್ಧಿಸುವುದಿಲ್ಲ.

ಮತ್ತೆ ಪರಿಶೇಷದಿಂದ. ಪರಿಶೇಷವು ಅನುಮಾನದಿಂದ ಬೇರೆಯಲ್ಲ. ಆದಾದರೂ ಹಿಂದೆ ಹೇಳಿದ ಅನುಮಾನದಿಂದ ಬಾಧಿತವಾಗಿರುವುದರಿಂದ ಅದಕ್ಕೆ ಪ್ರಾಮಾಣ್ಯವೇ ಕೊಡಲಾರದು. ಆ ಅನುಮಾನಕ್ಕೆ ಪ್ರಾಮಾಣ್ಯವೇ ಕೊಡದಿದ್ದಮೇಲೆ ಧರ್ಮಾದಿ ಸಾಕ್ಷಾತ್ಕಾರವನ್ನೇ ಉಪಜೀವಿಸಿ ಕೊಂಡಿರುವ ಅವಿಲಂಭವೊದಲಾದ ಸಾಧನವೂ ಇಲ್ಲದಿರುವುದರಿಂದ, ಹಿಂದೆ ಹೇಳಿದ ಕಲ್ಪನಾ ಗೌರವವು ಉಂಟೇ ಉಂಟು. ಹಿಂದೆ ಹೇಳಿದಪ್ರಕಾರ ಪರಿಶೇಷಾನುಮಾನವು ದುಷ್ಟವಾದರೂ 'ಧರ್ಮಾದಿಃ ಕಸ್ಯಚಿತ್ಪ್ರತ್ಯಕ್ಷಃ ವಸ್ತುತ್ವಾತ್' ಎನ್ನುವ ಸಾಮಾನ್ಯಾನುಮಾನವು ನಿರ್ದುಷ್ಟವೇ. ಆ ಸಾಮಾನ್ಯಾನುಮಾನವು ಬುದ್ಧನಲ್ಲಿ ಪರ್ಯವಸಾನವನ್ನು ಹೊಂದದಿದ್ದರೆ ಆಗ (೧) ಮತ್ತೊಬ್ಬ ಪುರುಷನಲ್ಲಿ ಪರ್ಯವಸಿತವಾಗುತ್ತದೆಂದು ಹೇಳುವಿರೋ, ಅಥವಾ ಎಲ್ಲಿಯೂ ಪರ್ಯವಸಿತ ವಾಗುವುದೇ ಇಲ್ಲವೆನ್ನುತ್ತೀರೋ, ಒಂದನೇದ್ದು ಕೂಡಲಾರದು 'ಬುದ್ಧಃ ಧರ್ಮದರ್ಶೀ ನ ಭವತಿ ಪುಂಸ್ತ್ವಾತ್' ಎನ್ನುವ ಅನುಮಾನಕ್ಕೆ ವ್ಯಭಿಚಾರವು. ಅಂದರೆ, ಪುಂಸ್ತ್ವಹೇತುವು ಧರ್ಮದ್ರಷ್ಟೃತ್ವವಿದ್ದ ಮತ್ತೊಬ್ಬ ಪುರುಷನಲ್ಲಿಯೂ ಇದೆ. (೨) ಎಲ್ಲಿಯೂ ಪರ್ಯವಸಿತ ವಾಗುವುದಿಲ್ಲವೆಂದೂ ಹೇಳಕೂಡದು. ಸಾಮಾನ್ಯಸಿದ್ಧಿಗೆ ವಿರೋಧವು ಬರುವುದು ಎಂದು ಹೇಳಕೂಡದು. ಏಕೆಂದರೆ— ಸಾಮಾನ್ಯಾನುಮಾನಕ್ಕೆ ಎಲ್ಲಿಯಾದರೊಂದು ಸ್ಥಳದಲ್ಲಿ ಪರ್ಯವಸಾನವೇ ಇರಬೇಕೆಂದು ಹೇಳುವುದಾದರೆ ನಮ್ಮಲ್ಲಿಯೂ ಏಕೆ ಪರ್ಯವಸಾನ ಮಾಡಬಾರದು? ಅಂದರೆ, ಸಾಮಾನ್ಯಾನುಮಾನದಿಂದ ನಾವೇ ಧರ್ಮದ್ರಷ್ಟೃಗಳೆಂದು ಏಕೆ ಆಗಬಾರದು? ನಮ್ಮಲ್ಲಿ ಧರ್ಮಾದಿದ್ರಷ್ಟೃತ್ವವು ಬಾಧಿತವಾಗಿದೆ ಎಂದು ಹೇಳುವುದಾದರೆ ಬುದ್ಧನಲ್ಲಿಯೂ ಹೇಗೆ ಪರ್ಯವಸಿತವಾಗುತ್ತದೆ? ಅಂದರೆ, ಬುದ್ಧನಿಗೂ ಧರ್ಮಾದಿದ್ರಷ್ಟೃತ್ವವು ಹಿಂದೆ ಹೇಳಿದಪ್ರಕಾರ ಬಾಧಿತವೇ ಆಗಿದೆ. ಧರ್ಮಾದಿದ್ರಷ್ಟೃತ್ವವಾದರೂ ಬುದ್ಧ ಅಥವಾ ಬುದ್ಧನಿಂದ ಬೇರೆಯವರು, ಇವರಲ್ಲಿ ಯಾವನಾದರೊಬ್ಬನಲ್ಲಿ ಇರಬೇಕಾದದ್ದು. ಬುದ್ಧನಲ್ಲಿಯೂ ಬೇರೆಯವರಲ್ಲಿಯೂ ಕೂಡದಿದ್ದಮೇಲೆ ಸಾಮಾನ್ಯಸಿದ್ಧಿಯೇ ಕೂಡುವುದಿಲ್ಲವೆಂದಾಯಿತು. (3) ಇದರಿಂದಲೇ 'ಧರ್ಮಾದಿ ದ್ರಷ್ಟೃತ್ವಂ ಬುದ್ಧನಿಷ್ಠಂ ಅನ್ಯತ್ರವೃತ್ತೌ ಬಾಧಕೋಪಪನ್ನತ್ವೇ ಸತಿ ಕ್ವಚಿತ್ ವೃತ್ತಿಮತ್ವಾತ್' ಎನ್ನುವ ಪರಿಶೇಷಾನುಮಾನಕ್ಕೆ ಆಶ್ರಯಾಸಿದ್ಧಿ, ವಿಶೇಷ್ಯಾಸಿದ್ಧಿಗಳು ಸೂಚಿತಗಳಾದುವು. ಅಂದರೆ, ಬುದ್ಧ ಬುದ್ಧನಿಂದ ಇತರರು ಇವರಲ್ಲಿ ಇರುವಿಕೆ ಎನ್ನುವ ವ್ಯಾಪಕವೇ ಇಲ್ಲವೆಂದು ಹೇಳಿದುದರಿಂದ ಎಲ್ಲಿಯಾದರೊಂದುಕಡೆ ಇದೆ ಎನ್ನುವ ವಿಶೇಷ್ಯಾಸಿದ್ಧಿಯು, ತಾನೂ ಇಲ್ಲವೆಂದು ಧರ್ಮಾದಿದ್ರಷ್ಟೃತ್ವರೂಪವಾದ ವ್ಯಾಪ್ಯವೇ ಇಲ್ಲವೆಂದು ಹೇಳಿದುದರಿಂದ ಆಶ್ರಯಾಸಿದ್ಧಿಯೂ ಸೂಚಿತವಾಯಿತು. (4) ಹಾಗಾದರೆ, 'ಧರ್ಮಾದಿಕಂ ಕಸ್ಯಚಿತ್ಪ್ರತ್ಯಕ್ಷಂ ವಸ್ತುತ್ವಾತ್' ಎನ್ನುವ ಸಾಮಾನ್ಯಸಿದ್ಧಿಯ ಬಲದಿಂದ ಪುಂಸ್ತ್ವ ಹೇತುವೇ ಆಭಾಸವೋ ಅಥವಾ ಪುಂಸ್ತ್ವ ಹೇತುವಿನ ಬಲದಿಂದ ಸಾಮಾನ್ಯಸಿದ್ಧಿಯೇ ಬಾಧಿತವೋ ಎಂದು ಸಂದೇಹಬರುವುದು. ಎಂದರೆ-ಸಂದೇಹವಿರಲಿ, ಆದಾಗ್ಯೂ ಸಾಮಾನ್ಯಾನುಮಾನಾದಿಗಳು ನಿಶ್ಚಾಯಕಗಳಲ್ಲವೆಂದೇ ಸಿದ್ಧಿಸುತ್ತವೆ. (5) 'ಧರ್ಮಾದಿಃ ಕಸ್ಯಚಿತ್ಪ್ರತ್ಯಕ್ಷಃ' ಎಂದು ಪ್ರತ್ಯಕ್ಷತ್ವಸಾಧಕವಾದ ಅನುಮಾನವನ್ನು ದೂಷಿಸುವ, ಬುದ್ಧನಿಗೆ ಧರ್ಮಾದಿ ದ್ರಷ್ಟೃತ್ವಾಭಾವವನ್ನು ಸಾಧಿಸಿಕೊಡುವ ಪುಂಸ್ತ್ವ ಹೇತುವು ಆಗಮದಿಂದ ಬಾಧಿತವಾಗುತ್ತದೆ ಎಂದರೆ— ಹಾಗೆ ಹೇಳಕೂಡದು. ಬುದ್ಧಾದಿಗಳಿಗೆ ಧರ್ಮಾದಿದ್ರಷ್ಟೃತ್ವವನ್ನು ಸಾಧಿಸಿಕೊಡುವ ಆಗಮವು ಪೌರುಷೇಯವೆಂದಾದರೆ ಅದಕ್ಕೆ ಹಿಂದೆ ಹೇಳಿದಪ್ರಕಾರ ಪ್ರಾಮಾಣ್ಯವೇ ನಿಶ್ಚಿತವಾಗಲಿಲ್ಲ. ಅಪೌರುಷೇಯವಾದ ಆಗಮವನ್ನು ಅಂಗೀಕರಿಸಲೇ ಇಲ್ಲ. (6) ಬುದ್ಧರನ್ನು ಪಕ್ಷೀಕರಿಸಿ ಪುಂಸ್ತ್ವಹೇತುವಿನಿಂದ ಸರ್ವಜ್ಞತ್ವಾದಿಗಳ ಅಭಾವವನ್ನು ಸಾಧಿಸಿದರೆ ಆಶ್ರಯಾಸಿದ್ಧ್ಯಾದಿಗಳು ಇಲ್ಲದಿದ್ದರೂ ತಾರ್ಕಿಕರನ್ನು ಕುರಿತು

'ಈಶ್ವರಃ ನ ಸರ್ವಜ್ಞಃ ಪುಂಸ್ತ್ವಾತ್' ಎಂದು ಸಾಧಿಸಿದರೆ ಆಶ್ರಯಾಸಿದ್ಧಿ ಧರ್ಮಿಗ್ರಾಹಕಪ್ರಮಾಣ ಬಾಧಗಳು ಬಂದೇಬರುತ್ತವೆ ಹೇಗೆಂದರೆ— ಈಶ್ವರನಾದರೂ ಶರೀರ, ಮನೆ ಮೊದಲಾದವುಗಳೆಲ್ಲವೂ ಕಾರ್ಯಗಳಾಗಿರುವುದರಿಂದ ಅವುಗಳನ್ನು ಮಾಡುವವನಾಗಿ ಕಾರ್ಯತ್ವಾನುಮಾನದಿಂದ ಸಿದ್ಧಿಸತಕ್ಕವನು ಸರ್ವಜ್ಞನಾಗಿಯೇ ಸಿದ್ಧಿಸುವನು. ಆದುದರಿಂದ 'ಈಶ್ವರಃ ನ ಧರ್ಮದರ್ಶೀ ಪುಂಸ್ತ್ವಾತ್' ಎನ್ನುವ ಅನುಮಾನವು ಧರ್ಮಿಗ್ರಾಹಕ ಪ್ರಮಾಣದಿಂದ ಬಾಧಿತವಾಗುತ್ತದೆ. ಈ ಅನುಮಾನದಿಂದ ಈಶ್ವರನು ಸಿದ್ಧಿಸದೇನೇ ಇದ್ದರೆ ಆಶ್ರಯಾಸಿದ್ಧಿಯು ಬರುವುದು. ಎಂದರೆ- ಈಶ್ವರನನ್ನು ಪಕ್ಷೀಕರಿಸಿ ಅಸರ್ವಜ್ಞತ್ವವನ್ನು ಸಾಧಿಸಿದರೂ ಆಶ್ರಯಾಸಿದ್ಧಿ ಧರ್ಮಿಗ್ರಾಹಕಪ್ರಮಾಣವಿರೋಧಗಳು ಬರುವುದಿಲ್ಲವೆಂದು ಆಚಾರ್ಯರೇ 'ಶಾಸ್ತ್ರಯೋನಿತ್ವಾತ್' (ಅಧಿ.೩) ಎನ್ನುವಲ್ಲಿ **"ವನಕೃತ್ವಾದಿರೂಪೇಣ ಪಕ್ಷಭೂತಸ್ಯ ಚೇಶಿತುಃ । ಕಿಂಚಿಜ್ಜ್ಞತ್ವಂ ಹಿ ಪುಂಸ್ತ್ವೇನ ಶಕ್ಯಂ ಸಾಧಯಿತುಂ ಸುಖಂ" ॥** ಎನ್ನುವಲ್ಲಿ ಆಶ್ರಯಾಸಿದ್ಧಿಯೂ ಧರ್ಮಿಗ್ರಾಹಕಪ್ರಮಾಣವಿರೋಧವೂ ಇಲ್ಲವೆಂದು ಹೇಳುವರು. (7) ಆದಕಾರಣ ಹಿಂದೆ ಹೇಳಿದ ಪ್ರಕಾರ ಧರ್ಮಾದಿಸಿದ್ಧಿಯು ಪ್ರತ್ಯಕ್ಷದಿಂದಾಗಲೀ, ಅನುಮಾನದಿಂದಾಗಲೀ, ಪೌರುಷೇಯವಾಕ್ಯದಿಂದಾಗಲೀ ಕೂಡದೇನೇ ಇರುವುದರಿಂದ ಧರ್ಮಾದಿಗಳ ಸಿದ್ಧಿಗಾಗಿ ಯಾವುದಾದರೊಂದು ಅಪೌರುಷೇಯವಾಕ್ಯವನ್ನು ಎಲ್ಲಾ ವಾದಿಗಳೂ ಅಂಗೀಕರಿಸಲೇಬೇಕೆಂದು ಸಿದ್ಧವಾಯಿತು. ಅಂತಹ ಅಪೌರುಷೇಯವಾಕ್ಯವು ಬೇರೆ ಯಾವುದೂ ಕೂಡದಿರುವುದರಿಂದ ವೇದವೇ ಆಗಬೇಕು. ವೇದದಿಂದ ಬೇರೆಯಾದ ಗ್ರಂಥಗಳಲ್ಲಿ ಕರ್ತನು ಪ್ರಸಿದ್ಧನೇ ಆಗಿರುವನು. ಅವುಗಳು ಧರ್ಮಾಧರ್ಮಾದಿಗಳನ್ನು ವ್ಯವಸ್ಥೆಮಾಡತಕ್ಕವುಗಳಲ್ಲ. ವೇದವಾದರೂ ಕರ್ತೃಪ್ರಸಿದ್ಧಿಯಿಲ್ಲದಿರುವುದು. ಧರ್ಮಾದಿಗಳನ್ನು ವ್ಯವಸ್ಥೆಮಾಡತಕ್ಕುದೂ ಆಗಿದೆ. (8) ಹಾಗಾದರೆ, ವೇದದಿಂದಲೇ ಸರ್ವರಿಗೂ ಧರ್ಮಾದಿಗಳ ಜ್ಞಾನವು ಬರುವುದಾದರೆ ಧರ್ಮಾದಿಗಳ ಸ್ವರೂಪದಲ್ಲಿ ವಿವಾದವೂ ಕೂಡಲಾರದೆಂದರೆ— ಅಹುದು. ಆದರೆ, ವೇದದಿಂದಲೇ ಸಾಮಾನ್ಯವಾಗಿ ಧರ್ಮಾದಿಗಳ ಸ್ವರೂಪವು ತಿಳಿಯಲ್ಪಡುತ್ತಿರಲು 'ಕೇಶೋಲ್ಲುಂಠನ' ೭ ಗಳಿಗೆಯಿಂದ ಮೊದಲು ಭೋಜನಮಾಡುವುದು— ಇದುಮೊದಲಾದ ಧರ್ಮವಿಶೇಷಗಳಲ್ಲಿ ವೇದವನ್ನು ಅತಿಕ್ರಮಿಸಿ ತಂತಮ್ಮ ಬುದ್ಧಿದೋಷದಿಂದ ವಾದಿಗಳ ವಿವಾದಗಳು ಕೂಡಬಹುದು. (9) ಹಾಗಾದರೆ ವೇದವೂ ಸಕರ್ತೃಕವಾಗಿದೆ ಎಂದು ಅನುಮಾನಗಳಿಂದಲೂ ಆಗಮಗಳಿಂದಲೂ ಸಿದ್ಧವಾಗುತ್ತದೆ. ಹೇಗೆಂದರೆ— (೧) 'ವೇದವಾಕ್ಯಾನಿ ಪೌರುಷೇಯಾಣಿ ವಾಕ್ಯತ್ವಾತ್ ಕಾಲಿದಾಸವಾಕ್ಯವತ್'= ವೇದವಾಕ್ಯಗಳು ಪುರುಷರಿಂದ ಮಾಡಲ್ಪಟ್ಟವುಗಳು, ವಾಕ್ಯವಾಗಿರುವುದರಿಂದ ಕಾಲಿದಾಸನ ವಾಕ್ಯದಂತೆ. (೨) 'ಅಯಂ ಕಾಲಃ ವೇದವ್ಯತಿರಿಕ್ತೇದಾನೀಂತನತ್ವರಹಿತ ಪೌರುಷೇಯವಾನ್ ಕಾಲತ್ವಾತ್ ಅನ್ಯಕಾಲವತ್'=ದೃಷ್ಟಾಂತವಾದ ಅನ್ಯಕಾಲದಲ್ಲಿ ಇದಾನೀಂತನತ್ವರೂಪವಿಶೇಷ್ಯವಿಲ್ಲದಿರುವುದರಿಂದ ವೇದವ್ಯತಿರಿಕ್ತವಾದ, ಇದಾನೀಂತನತ್ವರಹಿತವಾದ ಪೌರುಷೇಯವೆಂದರೆ— ಘಟವು. ಅದು ದೃಷ್ಟಾಂತದಲ್ಲಿ ಇದ್ದಪ್ರಯುಕ್ತ ಸಾಧ್ಯವು ಬರುತ್ತದೆ. ಪಕ್ಷಭೂತವಾದ ವರ್ತಮಾನಕಾಲದಲ್ಲಿ ಇದಾನೀಂತನತ್ವರೂಪವಾದ ವಿಶೇಷ್ಯವಿದ್ದರೂ ವೇದವ್ಯತಿರಿಕ್ತತ್ವರೂಪವಾದ ವಿಶೇಷಣವಿಲ್ಲದಿರುವುದರಿಂದ ವೇದರೂಪವಾದ ಪೌರುಷೇಯವನ್ನೇ ಇಟ್ಟುಕೊಂಡು ಸಾಧ್ಯಪರ್ಯವಸಾನ ಮಾಡಬೇಕಾಗಿರುವುದರಿಂದ ವೇದವು ಪೌರುಷೇಯವೆಂದೇ ಸಿದ್ಧವಾಗುತ್ತದೆ. (೩)'ಆಕಾಶಃ ವೇದವ್ಯತಿರಿಕ್ತಾಕಾಶನಿಷ್ಠತ್ವರಹಿತಪೌರುಷೇಯವಾನ್ ದ್ರವ್ಯತ್ವಾತ್ ತಂತುವತ್'= ಆಕಾಶವು ವೇದವ್ಯತಿರಿಕ್ತವಾದುದು ಯಾವುದು ಆಕಾಶದಲ್ಲಿರುವುದೋ ಅದರ ಧರ್ಮದಿಂದ ವಿರಹಿತವಾದ ಪೌರುಷೇಯವುಳ್ಳದ್ದು, ದ್ರವ್ಯವಾಗಿರುವುದರಿಂದ, ತಂತುವಿನಂತೆ, ಅಂತೂ

ಆಕಾಶದಲ್ಲಿರತಕ್ಕ ವೇದರೂಪವಾದ ಪೌರುಷೇಯ ಶಬ್ದದಲ್ಲಿ ಆಕಾಶನಿಷ್ಠತ್ವರೂಪವಾದ ವಿಶೇಷ್ಯ ವಿದ್ದರೂ ವೇದವ್ಯತಿರಿಕ್ತತ್ವರೂಪವಾದ ವಿಶೇಷಣವಿಲ್ಲದಿರುವುದರಿಂದ ವಿಶಿಷ್ಟವೂ ಇಲ್ಲ. ದೃಷ್ಟಾಂತ ದಲ್ಲಿ ತಂತುವಿನಲ್ಲಿರತಕ್ಕ ಪಟರೂಪವಾದ ಪೌರುಷೇಯದಲ್ಲಿ ವಿಶೇಷ್ಯವಿಲ್ಲದಿರುವುದರಿಂದ ವಿಶಿಷ್ಟಾ ಭಾವಗರ್ಭಿತವಾದ ಸಾಧ್ಯವಿದೆ. (೪) 'ಶ್ರೋತ್ರಂ ವೇದನ್ಯತಿರಿಕ್ತ ಶ್ರೋತ್ರಗ್ರಾಹ್ಯತ್ವರಹಿತ ಪೌರುಷೇಯಗ್ರಾಹಕಂ ಇಂದ್ರಿಯತ್ವಾತ್ ಚಕ್ಷುರ್ವತ್'=ಶ್ರೋತ್ರೇಂದ್ರಿಯವು ವೇದಹೊರತಾದ ಯಾವುದು ಶ್ರೋತ್ರಗ್ರಾಹ್ಯವೋ ಅದರ ಧರ್ಮದಿಂದ ವಿರಹಿತವಾದ ಪೌರುಷೇಯವನ್ನು ಗ್ರಹಿಸ ತಕ್ಕುದು, ಇಂದ್ರಿಯವಾಗಿರುವುದರಿಂದ ಚಕ್ಷುರಿಂದ್ರಿಯದಂತೆ. ಅಂತೂ ಶ್ರೋತ್ರಗ್ರಾಹ್ಯವಾದ ವೇದರೂಪವಾದ ಪೌರುಷೇಯದಲ್ಲಿ ಶ್ರೋತ್ರಗ್ರಾಹ್ಯತ್ವರೂಪ ವಿಶೇಷ್ಯವಿದ್ದರೂ ವೇದವ್ಯತಿರಿಕ್ತತ್ವ ರೂಪವಾದ ವಿಶೇಷಣವಿಲ್ಲದಿರುವುದರಿಂದ ವಿಶಿಷ್ಟರಾಹಿತ್ಯವಿದೆ. ದೃಷ್ಟಾಂತದಲ್ಲಿ ಆದರೂ ಚಕ್ಷು ಗ್ರಾಹ್ಯವಾದ ರೂಪಾದಿರೂಪವಾದ ಪೌರುಷೇಯದಲ್ಲಿ ವಿಶೇಷ್ಯವಿಲ್ಲದಿರುವುದರಿಂದ ವಿಶಿಷ್ಟಾಭಾವ ಗರ್ಭಿತವಾದ ಸಾಧ್ಯವಿದೆ. ಅಂತೂ ಈ ಅನುಮಾನಗಳಿಂದ ವೇದಗಳು ಪೌರುಷೇಯಗಳೆಂದು ಸಿದ್ಧಗಳಾದುವು. (10) (೧) **"ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸೀತ್ ನಾಹರಾಸೀತ್ ನ ರಾತ್ರಿರಾಸೀತ್ ಸ ತಪೋಽತಪ್ಯತ ತಸ್ಮಾತ್ತಪಸ್ತೇಪಾನಾತ್ ಚತ್ವಾರೋ ವೇದಾ ಅಜಾಯಂತ"** ಪರಬ್ರಹ್ಮನೊಬ್ಬನೇ ಪ್ರಳಯಕಾಲದಲ್ಲಿದ್ದನು. ಹಗಲು ರಾತ್ರಿಗಳೂ ಇರಲಿಲ್ಲ. ಆ ಪರಬ್ರಹ್ಮನು ಆಲೋಚಿಸಿದನು. ಆಲೋಚಿಸತಕ್ಕ ಆ ಬ್ರಹ್ಮನಿಂದ ನಾಲ್ಕು ವೇದಗಳು ಹುಟ್ಟ ದವು. (೨) **"ಋಚಃ ಸಾಮಾನಿ ಜಜ್ಞಿರೆ, ಯಜುಸ್ತಸ್ಮಾದಜಾಯತ"** ಆ ಪುರುಷನಿಂದ ಋಗ್ವೇದವೂ, ಸಾಮವೇದವೂ, ಯಜುರ್ವೇದವೂ ಹುಟ್ಟಿದವು. ಇದುಮೊದಲಾದ ಶ್ರುತಿಗಳೂ ವೇದಕ್ಕೆ ಪೌರುಷೇಯತ್ವವನ್ನೇ ಸಾಧಿಸುವುದರಿಂದ ಪರಿಶೇಷಪ್ರಮಾಣದಿಂದ ಅಪೌರುಷೇಯತ್ವವು ಹೇಗೆ ಸಿದ್ಧಿಸುವುದು? ಎಂದು ತಾರ್ಕಿಕರು ಶಂಕಿಸಿದರೆ—

(11) ಹಾಗೆ ಹೇಳಕೂಡದು. ಹೇತುಗಳಿರಲಿ, ಸಾಧ್ಯವು ಬೇಡ ಎಂದು ಹೇಳಿದರೆ ಬಾಧಕ ವಿಲ್ಲದಿರುವುದರಿಂದ (ಅನುಕೂಲತರ್ಕವಿಲ್ಲದಿರುವುದರಿಂದ) ಹಿಂದೆ ಹೇಳಿದ ಅನುಮಾನಗಳೆಲ್ಲವೂ ಅಪ್ರಯೋಜಕಗಳು. (12) ಮತ್ತು ವೇದವು ಪೌರುಷೇಯವೆಂದಾದರೆ ಕರ್ತನಲ್ಲಿ ಆಪ್ತಿನಿಶ್ಚಯ ವಿಲ್ಲದಿರುವುದರಿಂದ ಅಂತಹ ಪೌರುಷೇಯಗ್ರಂಥಗಳಿಂದ ಧರ್ಮಾದಿಗಳ ನಿಶ್ಚಯವಾಗದೇನೇ ಹೋಗಬೇಕಾಗುವುದು. (13) ಮತ್ತೂ 'ಈಶ್ವರಃ ಪ್ರಮಾವಾನ್ ಪುರುಷತ್ವಾತ್ ಅಹಮಿವ'= ಈಶ್ವರನು ಯಥಾರ್ಥಜ್ಞಾನವುಳ್ಳವನು ಪುರುಷನಾದಪ್ರಯುಕ್ತ ನನ್ನಂತೆಯೇ, ಇದರಿಂದ ವಿವಕ್ಷಿ ತಾರ್ಥತತ್ವಜ್ಞಾನವಿದೆ ಎಂದು ಸಿದ್ಧಿಸುತ್ತದೆ. (14) 'ಈಶ್ವರಃ ನ ವಿಪ್ರಲಿಪ್ಸಾವಾನ್ ಈಶ್ವರ ತ್ವಾತ್ ನ ಯದೇವಂ ನ ತದೇವಂ ಯಥಾಽಹಂ'=ಈಶ್ವರನು ವಂಚನೇಚ್ಛೆಯಿಲ್ಲದಿರುವವನು ಈಶ್ವರನಾಗಿರುವುದರಿಂದ ಎಲ್ಲಿ ವಂಚನೇಚ್ಛೆಯಿದೆಯೋ ಅಲ್ಲಿ ಈಶ್ವರತ್ವವಿಲ್ಲ, ನನ್ನಂತೆಯೇ, (15) ಈ ಅನುಮಾನಗಳಿಂದ ಈಶ್ವರನಿಗೆ ಆಪ್ತತ್ವವು ಸಿದ್ಧಿಸುತ್ತದೆಂದು ಹೇಳಕೂಡದು. ಪುರುಷತ್ವರೂಪ ಹೇತುವಿನಿಂದ ಭ್ರಾಂತಿವಂಚನೇಚ್ಛೆಗಳನ್ನೂ ಕೂಡ ಸಾಧಿಸಲಿಕ್ಕೆ ಸುಲಭ ವಾಗುವುದು. (16) ಹಾಗಾದರೆ ಈಶ್ವರನು ಸಿದ್ಧನಾಗದಿದ್ದರೆ ಆಶ್ರಯಾಸಿದ್ಧಿಯು. ಸಿದ್ಧನಾಗಿದ್ದರೆ ಧರ್ಮಿಗ್ರಾಹಕಪ್ರಮಾಣದಿಂದ ಬಾಧವು, ಎಂದರೆ ಆಶ್ರಯಾಸಿದ್ಧ್ಯಾದಿಗಳನ್ನು 'ಪನಕೃತ್ವಾ ದಿರೂಪೇಣ' ಎನ್ನುವಲ್ಲಿ ಪರಿಹರಿಸುವೆವು. (17) ಮತ್ತು ಪ್ರಮಾವತ್ವವನ್ನು ಮಾತ್ರ ಸಾಧಿಸಿದರೆ ಸಿದ್ಧಸಾಧನವು. ಅಷ್ಟರಿಂದಲೇ ಆಪ್ತತ್ವವು ಸಿದ್ಧಿಸುವುದಿಲ್ಲ. ಅನಾಪ್ತನು ಯಾವಾಗಲಾದರೂ ಯಥಾರ್ಥಜ್ಞಾನವುಳ್ಳವನು ಆಗುವುದಿಲ್ಲವೆಂದಿಲ್ಲವಷ್ಟೆ. ಅಪ್ರಮಾತ್ವವಿಲ್ಲದಿರುವಿಕೆಯನ್ನು ಸಾಧಿಸಿ ದರೆ ದೃಷ್ಟಾಂತದಲ್ಲಿ (ಅಂದರೆ, ದೃಷ್ಟಾಂತವಾಗಿ ಮಾಡಿಕೊಂಡ ತನ್ನಲ್ಲಿ ಭ್ರಾಂತಿಯಿದ್ದಪ್ರಯುಕ್ತ

ಭ್ರಾಂತಿರಾಹಿತ್ಯವಿಲ್ಲದಿರುವುದರಿಂದ) ಸಾಧ್ಯವೈಕಲ್ಯವು. ಹೇತುವಿಗೆ ತನ್ನಲ್ಲಿಯೂ ವಿಪ್ರಲಂಬಕನಲ್ಲಿಯೂ ವ್ಯಭಿಚಾರವು. (18) ವಿಪ್ರಲಿಪ್ಸಾಭಾವಸಾಧಕವಾದ ಈಶ್ವರತ್ವಾತ್ ಎನ್ನುವ ಹೇತುವಾದರೂ ಸಪಕ್ಷಗಳಾದ ಘಟಾದಿಗಳಲ್ಲಿಯೂ ಇಲ್ಲದಿರುವುದರಿಂದ ಅಸಾಧಾರಣವು. (ಎಲ್ಲಾ ಸಪಕ್ಷಗಳಲ್ಲಿಯೂ ವಿಪಕ್ಷಗಳಲ್ಲಿಯೂ ಇಲ್ಲದಿದ್ದು ಪಕ್ಷದಲ್ಲಿಮಾತ್ರ ಇರುವ ಹೇತುವು ಅಸಾಧಾರಣಾನೈಕಾಂತಿಕವು) ಸಿದ್ಧಸಾಧನದೋಷವೂ ಬರುತ್ತದೆ. ಅಂದರೆ, ವಿಪ್ರಲಿಪ್ಸಾಭಾವವನ್ನು ಸಾಧಿಸಿದರೆ ಸಿದ್ಧಸಾಧನವು. ಅಷ್ಟರಿಂದಲೇ ಆಪ್ತತ್ವವು ಸಿದ್ಧಿಸುವುದಿಲ್ಲ. ಅನಾಪ್ತನು ಯಾವಾಗಲೂ ಅವಿಪ್ರಲಿಪ್ಸಾವುಳ್ಳವನು ಆಗುವುದಿಲ್ಲವೆಂದಲ್ಲ. ಕದಾಚಿತ್ ಅವಿಪ್ರಲಿಪ್ಸಾವುಳ್ಳವನೂ ಆಗಬಹುದು. ಹೀಗೆ ಪೂರ್ವದಂತೆ ಈಶ್ವರನು ಯಥಾರ್ಥಜ್ಞಾನವುಳ್ಳವನು ಎನ್ನುವಲ್ಲಿ ಪ್ರಮಾವತ್ವವನ್ನು ಮಾತ್ರ ಸಾಧಿಸಿದರೆ ಹೇಗೆ ಸಿದ್ಧಸಾಧನವೋ? ಹಾಗೆ ಇಲ್ಲಿಯೂ ವಿಪ್ರಲಿಪ್ಸಾಭಾವವನ್ನು ಮಾತ್ರ ಸಾಧಿಸಿದರೆ, ಹೇತುವು ಸಿದ್ಧಸಾಧಕವೇ ಆಗುತ್ತದೆ. ಯಥಾರ್ಥವನ್ನೇ ನಿಯಮವಾಗಿ ಹೇಳಬೇಕೆಂಬುವ ಇಚ್ಛೆಯುಳ್ಳವನೆಂದು ಸಾಧಿಸಿದರೆ, ಬುದ್ಧ-ಋಷಭ ಮೊದಲಾದ ಈಶ್ವರಾವತಾರಗಳಲ್ಲಿಯೂ ವಂಚನೇಚ್ಛೆಯು ತೋರುವುದರಿಂದ ಬಾಧವು. (19) ಮತ್ತು ಅಶರೀರತ್ವಾತ್ ಎನ್ನುವ ಹೇತುವಿನಿಂದ ಪ್ರಮಾಸಾಧಕವಾದ ಅನುಮಾನಕ್ಕೆ ಸತ್ಪ್ರತಿಪಕ್ಷತ್ವವನ್ನು ಸೂತ್ರಕಾರರೇ 'ಅಂತವತ್ವಮಸರ್ವಜ್ಞತಾ ವಾ' (ಅಧ್ಯಾ. ೨. ಪಾ. ೨. ಅಧಿ ೧೧) ಎನ್ನುವಲ್ಲಿ ಈಶ್ವರನಿಗೆ ಶರೀರವಿದ್ದರೆ ನಾಶವು ಬರಬೇಕಾಗುವುದು. ಶರೀರವಿಲ್ಲದಿದ್ದರೆ ಅಸರ್ವಜ್ಞತ್ವವು ಬರಬೇಕಾಗುವುದು. ಎಂದು ಹೇಳುವರು. (20) ಮತ್ತು ಈಶ್ವರನಿಗೆ ಆಪ್ತತ್ವವು ಸಿದ್ಧವಾದಾಗ್ಯೂ ವೇದಗಳು ಈಶ್ವರಪ್ರಣೀತಗಳು ಎನ್ನುವಲ್ಲಿ ಪ್ರಮಾಣವಿಲ್ಲ. ಹಾಗಾದರೆ 'ವೇದಃ ಈಶ್ವರಪ್ರಣೀತಃ ವೇದತ್ವಾತ್ ವ್ಯತಿರೇಕೇಣ ಗಗನವತ್'=ವೇದವು ಈಶ್ವರನಿಂದ ನಿರ್ಮಿಸಲ್ಪಟ್ಟದ್ದು ವೇದವಾಗಿರುವುದರಿಂದ ವ್ಯತಿರೇಕದಿಂದ (ಸಾಧ್ಯಾಭಾವಹೇತ್ವಭಾವಗಳಿಂದ ಯುಕ್ತವಾದ) ಆಕಾಶದಂತೆಯೇ, ಎಂದರೆ— ಹೀಗೆ ಹೇಳಕೂಡದು. ಇದೇ ಹೇತುವಿನಿಂದ ಅನೀಶ್ವರಪ್ರಣೀತತ್ವವನ್ನು ಸಾಧಿಸಲಿಕ್ಕೂ ಶಕ್ಯವಾಗುವುದು. (21) ಮತ್ತು ವೇದತ್ವರೂಪವಾದ ಹೇತುವು ಸಪಕ್ಷಗಳಾದ (ಈಶ್ವರಪ್ರಣೀತಗಳೆಂದು ನಿಶ್ಚಿತಗಳಾದ) ಸ್ಮೃತಿ-ಇತಿಹಾಸ-ಪುರಾಣಗಳಲ್ಲಿ ಇಲ್ಲದಿರುವುದರಿಂದ ಅಸಾಧಾರಣವಾಗಿದೆ. ಆ ಸ್ಮೃತ್ಯಾದಿಗಳನ್ನೂ ಪಕ್ಷವನ್ನಾಗಿ ಇಟ್ಟುಕೊಂಡರೆ ಅಲ್ಲಿ ವೇದತ್ವರೂಪವಾದ ಹೇತುವಿಲ್ಲದಿರುವುದರಿಂದ ಭಾಗಾಸಿದ್ಧಿಯು. (22) 'ವೇದಾದಿತ್ವಾತ್' ಎಂದು ಹೇತುವನ್ನಾಗಿ ಇಟ್ಟುಕೊಂಡರೆ ವೇದ ಸ್ಮೃತಿ ಮೊದಲಾದವುಗಳಲ್ಲಿ ಒಂದೇ ವಿಧವಾದ ವೇದಾದಿತ್ವವು ಇಲ್ಲದಿರುವಪ್ರಯುಕ್ತ ಹೇತುವನ್ನಾಗಿ ಮಾಡಲಿಕ್ಕೂ ಸಾಧ್ಯವಿಲ್ಲ. (23) ವೇದದಲ್ಲಿಯೂ ಪುರಾಣಾದಿಗಳಲ್ಲಿಯೂ ಇರುವ ಅತೀಂದ್ರಿಯ ವಿಷಯವಾಕ್ಯತ್ವವು ಹೇತುವಾಗಲಿ ಎಂದರೆ— ಹಾಗೆ ಹೇಳಕೂಡದು. ಜಿನಾದಿವಾಕ್ಯಗಳಲ್ಲಿ ಈ ಹೇತುವಿದೆ. ಈಶ್ವರಪ್ರಣೀತತ್ವರೂಪವಾದ ಸಾಧ್ಯವಿಲ್ಲ. ಆದಪ್ರಯುಕ್ತ ವ್ಯಭಿಚಾರವು. (24) ಹಾಗಾದರೆ ಈಶ್ವರನು, ಹುಟ್ಟತಕ್ಕ ಎಲ್ಲಾ ವಸ್ತುಗಳಿಗೂ ಕರ್ತನಾಗಿರುವುದರಿಂದ ಜಿನಾದಿವಾಕ್ಯಗಳಲ್ಲಿಯೂ ಈಶ್ವರಪ್ರಣೀತತ್ವವು ಇದ್ದಪ್ರಯುಕ್ತ ಅವುಗಳೂ ಪಕ್ಷತುಲ್ಯಗಳಾದುದರಿಂದ ವ್ಯಭಿಚಾರವಿಲ್ಲವೆಂದರೆ— ಹಾಗಾದರೆ, ಅತೀಂದ್ರಿಯ ವಿಷಯವೆನ್ನುವ ವಿಶೇಷಣವು ವ್ಯರ್ಥವು. (25) ವಾಕ್ಯತ್ವಮಾತ್ರವೇ ಹೇತುವಾಗಲಿ ಎಂದರೆ, ಹಾಗೆ ಹೇಳಕೂಡದು. 'ಈಶ್ವರಪ್ರಣೀತಃ' ಎನ್ನುವ ಶಬ್ದದಿಂದ ಈಶ್ವರನ ಆಪ್ತಿಪೂರ್ವಕತ್ವವನ್ನು ಸಾಧಿಸಿದರೆ, ಬೌದ್ಧಾದಿವಾಕ್ಯದಲ್ಲಿ ವ್ಯಭಿಚಾರವು. (ಹೇತುವಿದೆ. ಸಾಧ್ಯವಿಲ್ಲ) ವೇದವು ಈಶ್ವರನೇ ನಿಮಿತ್ತಕಾರಣನಾಗಿ ಉಳ್ಳದ್ದು ಎಂದು ಮಾತ್ರ ಸಾಧಿಸಿದರೆ, ವಿಪ್ರಲಂಭಕವಾಕ್ಯದಲ್ಲಿಯೂ ಈಶ್ವರನಿಗೆ ನಿಮಿತ್ತಕಾರಣತ್ವವಿದ್ದಪ್ರಯುಕ್ತ ಇಂತಹ ಈಶ್ವರನಿಮಿತ್ತಕತ್ವಮಾತ್ರದಿಂದ ವೇದಕ್ಕೆ ಪ್ರಾಮಾಣ್ಯವೇ ಸಿದ್ಧಿಸಲಾರದು.

(26) ಮತ್ತು ಈಶ್ವರನು ಸೃಷ್ಟಿಯ ಆದಿಯಲ್ಲಿ ಯಾವ ವೇದವನ್ನು ನಿರ್ಮಾಣಮಾಡಿ ಒಬ್ಬ ಶಿಷ್ಯನಿಗೆ ಉಪದೇಶಿಸಿದನೋ, (೧) ಅದೇ ವೇದವನ್ನು ಮತ್ತೊಬ್ಬನಿಗೆ ಉಪದೇಶಕೊಡುತ್ತಾನೋ ಅಥವಾ (೨) ಬೇರೆ ವೇದವನ್ನು ನಿರ್ಮಾಣಮಾಡಿ ಉಪದೇಶಕೊಡುತ್ತಾನೋ, (೧) ಅದೇ ವೇದವನ್ನು ಎಂದರೆ, ನಿಮಗೆ ಇದು ಯಾವ ಪ್ರಮಾಣದಿಂದ ನಿರ್ಣಯವಾಯಿತು? ಪ್ರಥಮದಲ್ಲಿ ಮಾಡಿದ್ದನ್ನು ಮರೆತುಬಿಡದಿರುವುದರಿಂದಲೂ, ವ್ಯರ್ಥವಾಗಿ ಬೇರೆ ವೇದವನ್ನು ನಿರ್ಮಿಸಿದ್ದಾನೆ ಎಂದು ಕಲ್ಪಿಸಲಿಕ್ಕೆ ಪ್ರಮಾಣವಿಲ್ಲದಿರುವುದರಿಂದಲೂ ನಿಶ್ಚಯವಾಗುತ್ತದೆ ಎಂದರೆ— ಹಾಗಾದರೆ ಪೂರ್ವಕಲ್ಪದಲ್ಲಿ ನಿರ್ಮಿಸಿದ ವೇದವನ್ನು ಈಶ್ವರನು ಮರೆತಿರುವನೋ ಏನು? ಈ ಕಲ್ಪದಲ್ಲಿ ಪುನಃ ರಚಿಸುತ್ತಾನೆಂದು ಏಕೆ ಕಲ್ಪಿಸುವುದು? ಹೀಗೆ ಪೂರ್ವಕಲ್ಪದಲ್ಲಿಯೂ ಅದಕ್ಕಿಂತ ಮೊದಲಿನ ಕಲ್ಪದಲ್ಲಿಯೂ, ಪೂರ್ವತಮಕಲ್ಪದಲ್ಲಿಯೂ, ಹೀಗೆ ಎಲ್ಲಾ ಕಲ್ಪಗಳಲ್ಲಿಯೂ ಇದ್ದದ್ದನ್ನೇ ಉಪದೇಶಿಸಿದರಿಂದ ವೇದಕ್ಕೆ ಅನಾದಿತ್ವವೇ ಸಿದ್ಧವಾಗುತ್ತದೆ. (27) ಹೀಗಾದರೆ ಪುರಾಣಾದಿಗಳಿಗೂ ಅಪೌರುಷೇಯತ್ವವು ಬರಬಹುದಷ್ಟೆ! ಎಂದರೆ— ಅವುಗಳೂ ಸಕರ್ತೃಕಗಳು ಎನ್ನುವಲ್ಲಿ ಪ್ರಮಾಣವಿಲ್ಲದಿದ್ದರೆ ಅಪೌರುಷೇಯಗಳೇ ಆಗಬಹುದಿತ್ತು. ಅಂದರೆ, "**ಪುರಾಣಾನಿ ತದರ್ಥಾನಿ ಸರ್ಗೇ ಸರ್ಗೇಽನ್ಯಥೈವ ತು । ಕ್ರಿಯಂತೇಽತಸ್ತ್ವನಿತ್ಯಾನಿ ತದರ್ಥಾಃ ಪೂರ್ವಸರ್ಗವತ್**" ॥ ಇದುಮೊದಲಾದ ಪ್ರಮಾಣಗಳು ಇಲ್ಲವಾದರೆ ಆಗ ನೀವು ಹೇಳಿದ್ದು ಆಗಬಹುದಿತ್ತು. ಸಕರ್ತೃಕತ್ವಸಾಧಕಗಳಾದ ಪ್ರಮಾಣಗಳು ಇರುವಾಗ ಪುರಾಣಗಳಿಗೆ ಅಪೌರುಷೇಯತ್ವವು ಹೇಗೆ ಬರಬಹುದು? (28) ಹಾಗಾದರೆ, ಹಿಂದಿನ ಕಲ್ಪದ ಪುರಾಣಾದಿಗಳನ್ನು ಈಶ್ವರನು ಮರೆತುಬಿಡದಿರುವುದರಿಂದ ಪುನಃ ಈ ಕಲ್ಪದಲ್ಲಿ ನಿರ್ಮಿಸಲಿಕ್ಕೆ ಪ್ರಯೋಜನವೇನೆಂದರೆ, (೧) ತನಗೆ ಪ್ರಯೋಜನವು ಯಾವುದೆಂದು ಪ್ರಶ್ನೆಮಾಡುತ್ತೀರೋ, (೨) ಪರರ ಪ್ರಯೋಜನವನ್ನೋ, ೧ನೇ ಪ್ರಶ್ನೆಯೇ ಕೂಡಲಾರದು. ಈಶ್ವರನ ಪ್ರವೃತ್ತಿಗೆ ತನಗೆ ಪ್ರಯೋಜನವಿಲ್ಲವೆಂದು 'ನ ಪ್ರಯೋಜನವತ್ತ್ವಾತ್' (ಅಧ್ಯಾ. ೨ ಪಾ. ೧. ಅಧಿ. ೯) ಎನ್ನುವಲ್ಲಿ ಹೇಳುವರು. ಅಂದರೆ, ಈಶ್ವರನು ಎಲ್ಲಾ ಕಡೆಗಳಲ್ಲಿಯೂ ತನ್ನ ಪ್ರಯೋಜನವನ್ನುದ್ದೇಶಿಸಿಕೊಂಡು ಪ್ರವೃತ್ತಿಯನ್ನು ಮಾಡುವುದೇ ಇಲ್ಲ. 'ಆಪ್ತಕಾಮಸ್ಯ ಕಾ ಸ್ಪೃಹಾ' ಎಂದು ಹೇಳಿರುವುದರಿಂದ ಅವನಿಗೆ ಬೇಕಾದದ್ದೆಲ್ಲವೂ ಇದೆ. ತನಗೇನಾದರೂ ಫಲಸಿಗಬೇಕೆಂದು ಪ್ರವೃತ್ತಿಮಾಡಬೇಕಾಗಿಲ್ಲ. ಸೂಕ್ಷ್ಮಗಳಾದ ಪರಪ್ರಯೋಜನಗಳನ್ನಾದರೂ ಉತ್ಪ್ರೇಕ್ಷಿಸಲಿಕ್ಕೆ ಸ್ಥೂಲಬುದ್ಧಿಗಳಾದ ನಮಗೆ ಸಾಮರ್ಥ್ಯವಿಲ್ಲ. ಏಕೆಂದರೆ- ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ಉದ್ದೇಶವಿರಬಹುದು. ಆದರೆ ಆದನ್ನೆಲ್ಲಾ ತಿಳಿಯುವುದೆಂದರೆ ನಮಗೆ ಅಸಾಧ್ಯವೇ ಸರಿ. ಮತ್ತೆ ಪ್ರಮಿತವಾದ ಕಾರ್ಯವನ್ನು ಅನುಸರಿಸಿ ಪ್ರಯೋಜನವಿದೆಯೆಂದು ಮಾತ್ರ ಊಹಿಸುತ್ತೇವೆ. ಪ್ರಯೋಜನವಿಲ್ಲದಿರುವುದರಿಂದ ಪ್ರಮಾಣಸಿದ್ಧವಾದದ್ದನ್ನೂ ನಿರಾಕರಿಸಿದರೆ ಕಂಟಕದ (ಜಾಲಿಗಿಡದ ಮುಳ್ಳಿನ) ಶೌಕ್ಲ್ಯಾದಿಗಳನ್ನೂ ಅಪಲಾಪಮಾಡಬೇಕಾಗುವುದು. (29) 'ಅಯಂ ಕಾಲಃ ವೇದವ್ಯತಿರಿಕ್ತೇದಾನೀಂತನತ್ವರಹಿತ ಪೌರುಷೇಯವಾನ್ ಕಾಲತ್ವಾತ್ ಅನ್ಯಕಾಲವತ್' ಇದುಮೊದಲಾದ ಮೂರು ಅನುಮಾನಗಳಲ್ಲಿ ಪೌರುಷೇಯ ಎನ್ನುವ ಪದದ ಸ್ಥಾನದಲ್ಲಿ ಅಪೌರುಷೇಯ ಎನ್ನುವ ಪದವನ್ನು ಹಾಕಿದರೆ (ಅಂದರೆ— 'ಅಯಂ ಕಾಲಃ ವೇದವ್ಯತಿರಿಕ್ತೇದಾನೀಂತನತ್ವರಹಿತಾಪೌರುಷೇಯವಾನ್'' ಇತ್ಯಾದಿ ರೀತಿಯಿಂದ ಇಟ್ಟುಕೊಂಡರೆ) ಸತ್ಪ್ರತಿಪಕ್ಷಗಳಾಗುವವು. (30)'ಅಯಂ ಕಾಲಃ' ಎನ್ನುವ ೨ನೇ ಅನುಮಾನದಲ್ಲಿ ಕಾಲಪದದಿಂದ ೧ ಅಖಂಡಕಾಲವನ್ನೇ ಇಟ್ಟುಕೊಂಡರೆ 'ಅಯಂ' ಎಂದೂ 'ಅನ್ಯಕಾಲವತ್'' ಎಂದೂ ಅಯುಕ್ತವಾಗಬೇಕಾಗುವುದು. ಅಂದರೆ, ಅಖಂಡಕಾಲದಲ್ಲಿ 'ಅಯಂ' ವರ್ತಮಾನಕಾಲವೆಂದೂ 'ಅನ್ಯ' ಅತೀತಕಾಲವೆಂದೂ ವಿಭಾಗವು ಕೂಡಲಾರದು.

೨ ಕಾಲಪದದಿಂದ ತರಣಿಪರಿಸ್ಪಂದರೂಪಗಳಾದ ಉಪಾಧಿಗಳೆಂದು ಇಟ್ಟುಕೊಂಡರೆ ಕಾಲೋಪಾಧಿಯಿಂದ ವೇದಗಳಿಗೆ ಸಂಬಂಧವನ್ನೇ ಹೇಳದಿರುವುದರಿಂದ ಸಾಧ್ಯವು ಬಾಧಿತವಾಯಿತು. (31) 'ಆಕಾಶಃ' ಎನ್ನುವ ೩ನೇ ಅನುಮಾನದಲ್ಲಿ ಆಕಾಶನಿಷ್ಠತ್ವವೆಂದರೆ (೧) ಆಕಾಶಸಮವೇತತ್ವವು ಎಂದು ಇಟ್ಟುಕೊಂಡರೆ, ವೇದದಿಂದ ಬೇರೆಯಾದ ಆಕಾಶದಲ್ಲಿ ಸಮವೇತಗಳಾಗದಿರುವ ತಂತು ಮೊದಲಾದ ಪೌರುಷೇಯ ಪದಾರ್ಥಗಳ ಸಂಯೋಗಸಂಬಂಧದಿಂದ ಆಕಾಶದಲ್ಲಿವೆ ಎಂದು ಇಟ್ಟುಕೊಂಡು, ವಿವಕ್ಷಿತವಾದ ವೇದಪೌರುಷೇಯತ್ವಸಿದ್ಧಿಯಿಲ್ಲದೇನೇ ಸಾಧ್ಯಪರ್ಯವಸಾನಮಾಡಲಿಕ್ಕೆ ಬರುವುದರಿಂದ ಅರ್ಥಾಂತರತ್ವವು. (೨) ಆಕಾಶನಿಷ್ಠತ್ವವೆಂದರೆ, ಆಕಾಶಸಂಯುಕ್ತತ್ವವೆಂದು ಅರ್ಥವು, ಎಂದು ಇಟ್ಟುಕೊಂಡರೆ ಆಕಾಶಸಮವೇತಗಳಾದ ವೇದವ್ಯತಿರಿಕ್ತವಾದ ಆಕಾಶಸಂಯುಕ್ತತ್ವದಿಂದ ರಹಿತವಾದ ಸಂಯೋಗ-ವಿಭಾಗ ದ್ವಿತ್ವಾದಿ ಪೌರುಷೇಯ ಪದಾರ್ಥಗಳನ್ನು ಇಟ್ಟುಕೊಂಡು ಸಾಧ್ಯಪರ್ಯವಸಾನಮಾಡಲಿಕ್ಕೆ ಬರುವುದರಿಂದ ಅರ್ಥಾಂತರತ್ವವು. (32) ಆಕಾಶನಿಷ್ಠತ್ವವೂ ಆಕಾಶವತ್ವವೂ ಸಮವಾಯವೇ. ಅಂತೂ ಆಕಾಶಸಮವೇತವಾದ ಸಂಯೋಗಾದಿ ರೂಪದಲ್ಲಿ ಅಪೌರುಷೇಯವೇದವ್ಯತಿರಿಕ್ತತ್ವ, ಆಕಾಶಸಮವೇತತ್ವ,ವೆನ್ನುವ ವಿಶೇಷಣ ವಿಶೇಷ್ಯ ಎರಡೂ ಇದ್ದಪ್ರಯುಕ್ತ ವಿಶಿಷ್ಟಾಭಾವವೇ ಕೂಡದಿರುವುದರಿಂದ ಸಂಯೋಗಾದಿಗಳನ್ನು ಇಟ್ಟುಕೊಂಡು ಅರ್ಥಾಂತರತ್ವವನ್ನು ಹೇಳಲಿಕ್ಕೆ ಬರುವುದಿಲ್ಲ. ಎಂದರೆ— ಹಾಗೆ ಹೇಳಕೂಡದು. ಪಕ್ಷದಲ್ಲಿ ವಿಶೇಷಣವು ಅಪ್ರಸಿದ್ಧವಾಗಿದೆ. ಅಲ್ಲದೆ ನಾವು ಸಮವಾಯವನ್ನೇ ಅಂಗೀಕರಿಸಲಿಲ್ಲ. ತಂತುಪಟಗಳಿಗೆ ಅಭೇದವಿದ್ದಪ್ರಯುಕ್ತ, ದೃಷ್ಟಾಂತೀಕೃತವಾದ ತಂತುವಿನಲ್ಲಿ ಸಮವಾಯಸಂಬಂಧದಿಂದ ಪಟರೂಪವಾದ ಪೌರುಷೇಯತ್ವವೇ ಇಲ್ಲವು ಆದಕಾರಣ ಸಾಧ್ಯವೈಕಲ್ಯವು. (33) ಮತ್ತೂ ವೇದಶಬ್ದದಿಂದ ವರ್ಣಗಳು ವಿವಕ್ಷಿತಗಳೆಂದು ಹೇಳಕೂಡದು. ಏಕೆಂದರೆ, ಅವುಗಳು ನಿತ್ಯದ್ರವ್ಯಗಳಾಗಿರುವುದರಿಂದ ಎಲ್ಲಿಯೂ ಸಮವೇತಗಳಲ್ಲ. ವರ್ಣಗಳಲ್ಲಿರುವ ಆನುಪೂರ್ವೀರೂಪವಾದ ಕ್ರಮವಿಶೇಷವು ವೇದಶಬ್ದದಿಂದ ವಿವಕ್ಷಿತವೆಂದೂ ಹೇಳಕೂಡದು. ಏಕೆಂದರೆ— ಕ್ರಮವಾದರೂ ವರ್ಣಗಳ ಧರ್ಮವು. ಆಕಾಶದಲ್ಲಿ ವೇದಶಬ್ದದಿಂದ ಅಭಿಪ್ರೇತವಾದ ಕ್ರಮಸಮವಾಯವಿದೆ ಎನ್ನುವುದು ಬಾಧಿತವಾಯಿತು. (34) 'ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸೀತ್' ಎನ್ನುವ ಶ್ರುತಿಯಾದರೂ 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿಗಳಿಂದ ವಿರುದ್ಧವಾಗಿರುವುದರಿಂದ ನಿಶ್ಚಾಯಕವಾಗಲಾರದು. (35) ಮತ್ತು 'ಋಗ್ವೇದ ಏವಾಗ್ನೇರಜಾಯತ' ಎಂದು ಈಶ್ವರ ಭಿನ್ನಪುರುಷರಚಿತತ್ವವನ್ನು ತೋರಿಸಿಕೊಡುವ ಶ್ರುತಿಯಿಂದ 'ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸೀತ್' ಎಂದು ವೇದಕ್ಕೂ ಕೇವಲ ಈಶ್ವರ (ಶ್ರೀ ನಾರಾಯಣ) ಪ್ರಣೀತತ್ವವನ್ನು ಪ್ರತಿಪಾದಿಸುವ ಈ ಶ್ರುತಿಗೆ ವಿರೋಧವು ಬಾರದಿರುವುದು ಹೇಗೆ? (36) ಹಾಗಾದರೆ, ಈ ಶ್ರುತಿಗೆ ಅಗ್ನ್ಯಾದಿಗಳು ಸಂಪ್ರದಾಯಪ್ರವರ್ತಕರು ಮಾಡಿದವರಲ್ಲ ಎಂದರ್ಥವೆಂದು ಇಟ್ಟುಕೊಳ್ಳುತ್ತೇವೆಂದರೆ— ಹಾಗಾದರೆ, ಈಶ್ವರನು ನಿರ್ಮಿಸಿದ್ದು, ಅನೀಶ್ವರರಾದ ಅಗ್ನ್ಯಾದಿಗಳು ನಿರ್ಮಿಸಿದ್ದು ಎಂದು ಪ್ರತಿಪಾದಕಗಳೆಂದು ಅಭಿಪ್ರೇತಗಳಾದ 'ಪ್ರಜಾಪತಿರ್ವಾ' 'ಋಗ್ವೇದ ಏವ' ಎನ್ನುವ ಎರಡು ಶ್ರುತಿಗಳೂ 'ನ ಹಿ ಧರ್ಮಾದಿಸಿದ್ಧಿಸ್ಸ್ಯಾನ್ನಿತ್ಯವಾಕ್ಯಂ ವಿನಾ ಕ್ವಚಿತ್' ಎಂದುಕ್ತವಾದ ನ್ಯಾಯದಿಂದ ಕೂಡಿರುವ 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ನಿತ್ಯತ್ವ ಪ್ರತಿಪಾದಕವಾದ ಶ್ರುತ್ಯನುಸಾರವಾಗಿ ಸಂಪ್ರದಾಯಪ್ರವರ್ತಕಪರಗಳಾಗಿ ಇರತಕ್ಕವುಗಳೆಂದೇ ಏಕೆ ಅರ್ಥಮಾಡಬಾರದು? (37) ಹಾಗಾದರೆ ವರ್ಣಗಳೇ ಅನಿತ್ಯಗಳು, ವರ್ಣಾತ್ಮಕವಾದ ವೇದಕ್ಕೆ ನಿತ್ಯತ್ವವು ಹೇಗೆ ಕೂಡಬಹುದು? (ಅಂದರೆ ವರ್ಣಗಳಿಗೆ ವಿಕಾರವಿರುವುದರಿಂದ ವಿಕಾರದಿಂದ ಹುಟ್ಟುವಪ್ರಯುಕ್ತ ವಿಕಾರನಾಶ

ದಿಂದ ವರ್ಣಗಳಿಗೂ ನಾಶವಿದ್ದಪ್ರಯುಕ್ತ ಕ್ರಮವಿಶಿಷ್ಟವಾದ ವೇದಕ್ಕೆ ಕೂಟಸ್ಥನಿತ್ಯತ್ವವು ಇಲ್ಲ.) ಎಂದರೆ— ಹೀಗೆ ಹೇಳಕೂಡದು. ನಾವು ವೇದವನ್ನು ಕೂಟಸ್ಥನಿತ್ಯವೆಂದು ಹೇಳುವುದಿಲ್ಲ. ಮತ್ತೆ ನಿಯತೈಕಪ್ರಕಾರವುಳ್ಳದ್ದು ಅಂದರೆ, ನಿಯತವಾದ ಆನುಪೂರ್ವೀವಿಶೇಷದಿಂದ ಕೂಡಿರುವುದು ಎನ್ನುತ್ತೇವೆ. (38) ಹಾಗಾದರೆ, ವರ್ಣಗಳು ಅನಿತ್ಯಗಳಾದರೂ ವರ್ಣಾತ್ಮಕವು ನಿಯತವಾದ ಒಂದೇಪ್ರಕಾರವುಳ್ಳದ್ದು ಎನ್ನುವುದಕ್ಕೆ ಬಾಧಕವಿಲ್ಲದಿರುವುದರಿಂದ ವರ್ಣಗಳು ನಿತ್ಯಗಳು ಎಂದು ಹೇಳಿದ್ದಕ್ಕೆ ಉಪಯೋಗವೇನು? (39) ವರ್ಣನಿತ್ಯತ್ವಕ್ಕೆ ವೇದಾಪೌರುಷೇಯತ್ವದಲ್ಲಿ ಉಪಯೋಗವಿಲ್ಲದಿದ್ದರೆ ತತ್ವನಿರ್ಣಯದಲ್ಲಿ ವರ್ಣಗಳಿಗೆ ಕೂಟಸ್ಥನಿತ್ಯತ್ವವನ್ನು ಉಪಪಾದಿಸಿದ್ದು ವ್ಯರ್ಥವೆಂದು ಹೇಳಕೂಡದು. ಏಕೆಂದರೆ, ವಸ್ತುತಃ ವರ್ಣಗಳು ನಿತ್ಯಗಳೋ, ಅನಿತ್ಯಗಳೋ ಎಂದು ವಸ್ತುತತ್ವವನ್ನು ವಿಚಾರಮಾಡತಕ್ಕವನಿಗೆ ವರ್ಣಗಳು ಕೂಟಸ್ಥನಿತ್ಯಗಳೆಂದು ಶ್ರೀಮದಾಚಾರ್ಯರೇ ತತ್ವನಿರ್ಣಯಾದಿಗಳಲ್ಲಿ ಉಪಪಾದಿಸಿರುವರು.

(40) ಈ ವಿಷಯದಲ್ಲಿ ಒಬ್ಬನು ಹೇಳಿರುವನು. ಸಂಸ್ಕೃತವಾದ (ಸಲಕ್ಷಣವಾಗಿ ಉಚ್ಚರಿಸಲ್ಪಟ್ಟ. ಅಥವಾ ಸಂಪ್ರದಾಯಪ್ರಕಾರ ವ್ಯಾಖ್ಯಾನಮಾಡಲ್ಪಟ್ಟ) ವೇದವು ಬೋಧಕವಾಗುವುದಾದರೆ— ಸಲಕ್ಷಣವಾಗಿ ಉಚ್ಚರಿಸುವವರಲ್ಲಿಯೂ, ವ್ಯಾಖ್ಯಾನ ಮಾಡುವವರಲ್ಲಿಯೂ ವಿಶ್ವಾಸಕಾರಣವಿಲ್ಲದಿರುವುದರಿಂದ ವೇದಪ್ರಾಮಾಣ್ಯಾದಿಸಮರ್ಥನವು ಗಜಸ್ನಾನದಂತೆ ವ್ಯರ್ಥವಾಗುವುದು. ಅಂದರೆ, ವೇದಪ್ರಾಮಾಣ್ಯಾದಿಗಳನ್ನು ಸಮರ್ಥನ ಮಾಡಿದರೂ ಸಂಸ್ಕೃತವೋ, ಅಸಂಸ್ಕೃತವೋ ಎನ್ನುವ ವಿಕಲ್ಪದಿಂದ ಅರ್ಥಬೋಧಕತ್ವವು (ಅಂದರೆ ಅರ್ಥವನ್ನು ಬೋಧಿಸುತ್ತದೆ ಎನ್ನುವುದೇ) ಕೂಡದಿರುವಪ್ರಯುಕ್ತ ಅದನ್ನು ಸಮರ್ಥಿಸುವುದು ವ್ಯರ್ಥವೇ. (೨) ಅಸಂಸ್ಕೃತವಾಗಿ ಬೋಧಕವಾಗುವುದಾದರೆ ಯಾವಾಗಲೂ ಬೋಧಕವಾಗಬೇಕಾಗುವುದು. ಎಂದು ಹೇಳಿದ್ದೂ ಅಯುಕ್ತವು. ಏಕೆಂದರೆ— ಸಂಸ್ಕಾರಕರೆಂದರೆ ವೇದವನ್ನು ಸಲಕ್ಷಣವಾಗಿ ಉಚ್ಚರಿಸುವವರೂ, ಸಂಪ್ರದಾಯಪ್ರಕಾರ ವ್ಯಾಖ್ಯಾನಮಾಡುವವರೂ, ಆಗುವರು. ಅದರಲ್ಲಿ ಸಲಕ್ಷಣವಾಗಿ ಉಚ್ಚರಿಸುವವರಲ್ಲಿ ಅವಿಗೀತಸಂವಾದವು ತೋರುವುದರಿಂದ ವಿಶ್ವಾಸವು ಯುಕ್ತವಾಗುತ್ತದೆ. ಸಂಪ್ರದಾಯಪ್ರಕಾರ ವ್ಯಾಖ್ಯಾನಮಾಡುವವರಲ್ಲಿ ಲೋಕದಲ್ಲಿ ತಿಳಿಯಲ್ಪಟ್ಟ ಯೋಗರೂಢಿರೂಪವಾದ ಶಬ್ದಶಕ್ತಿಯನ್ನು ಲೌಕಿಕಗಳಾದ ತಾತ್ಪರ್ಯವನ್ನು ತಿಳಿಯಲಿಕ್ಕೆ ಉಪಾಯಭೂತಗಳಾದ ಉಪಕ್ರಮಾದಿಗಳನ್ನು ಅನುಸರಿಸುವವರಲ್ಲಿ ವಿಶ್ವಾಸವಿಲ್ಲವೆಂದು ಹೇಗೆ ತಾನೆ ಆಗುವುದು? ಆದಕಾರಣ ಸರ್ವಥಾ ಅಯುಕ್ತವು ॥ ೭೦ ॥

ಧರ್ಮಾದಿಗಳನ್ನು ಯಾರು ಅಂಗೀಕರಿಸುವರೋ ಅವರನ್ನು ಕುರಿತು ಧರ್ಮಾದಿಗಳ ಸಿದ್ಧಿಗಾಗಿ ಹಿಂದೆಹೇಳಿದಪ್ರಕಾರ ಅಪೌರುಷೇಯ ವಾಕ್ಯವನ್ನು ಸಮರ್ಥಿಸಿದ್ದು ಆಗಬಹುದು. ಯಾವ ಚಾರ್ವಾಕನು ಧರ್ಮಾದಿಗಳನ್ನೆ ಅಂಗೀಕರಿಸುವುದಿಲ್ಲವೋ ಅಂತಹ ಚಾರ್ವಾಕನನ್ನು ಕುರಿತು ಅಪೌರುಷೇಯವಾಕ್ಯವನ್ನು ಸಮರ್ಥಿಸುವುದು ಹೇಗೆ? ಅಂದರೆ, ಅವನು ಧರ್ಮಾದಿಗಳನ್ನೇ ಒಪ್ಪದಿರುವುದರಿಂದ ಆಶ್ರಯವೇ ಸಿದ್ಧವಾಗದಿರುವಪ್ರಯುಕ್ತ 'ಧರ್ಮಾದಿಕಂ ಪ್ರಮಾಣೋಪೇತಂ ವಸ್ತುತ್ವಾತ್' ಇತ್ಯಾದಿ ರೀತಿಯಾಗಿ ಸಾಮಾನ್ಯಸಿದ್ಧಿ ಪರಿಶೇಷಾನುಮಾನಗಳಿಂದ ಅಪೌರುಷೇಯ ವಾಕ್ಯವನ್ನು ಸಮರ್ಥಿಸಲಿಕ್ಕೆ ಬರುವುದಿಲ್ಲ, ಎಂದರೆ ಹಾಗೆ ಹೇಳಕೂಡದು. ಏಕೆಂದರೆ, ಆ ಚಾರ್ವಾಕನಿಂದಲೂ ಧರ್ಮಾದಿಗಳನ್ನು ಅಂಗೀಕಾರಮಾಡಿಸಿ ಅಪೌರುಷೇಯ ವಾಕ್ಯವನ್ನು ಒಪ್ಪಿಸುತ್ತೇವೆ ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.

ಮೂ ॥ ಅಧರ್ಮವಾದಿನೋ ವಾಕ್ಯಮಪ್ರಯೋಜನಮೇವ ಹಿ ।
ಧರ್ಮಾಭಾವೋಽಪಿ ನೋ ತೇನ ಪ್ರತ್ಯಕ್ಷಾವಗತೋ ಭವೇತ್ ॥
ಅತಃ ಸಂಶಯಸಂಪತ್ತೌ ವಾಕ್ಯಂ ಪ್ರತ್ಯಕ್ಷವತ್ಪ್ರಮಾ ॥ ೭೧ ॥

ಅ ॥ ಅಧರ್ಮವಾದಿನಃ=ಧರ್ಮ ಮೊದಲಾದ ಅತೀಂದ್ರಿಯಾರ್ಥಗಳನ್ನಂಗೀಕರಿಸದೆ ಇರತಕ್ಕ ಚಾರ್ವಾಕನ, ವಾಕ್ಯಂ=ಶಾಸ್ತ್ರವು, ಹಿ=ಯಾವಕಾರಣದಿಂದ, ಅಪ್ರಯೋಜನಂ= ಪ್ರಯೋಜನವಿಲ್ಲದಿರುವುದೋ, ನಿರ್ವಿಷಯವೂ ಆಗಿರುತ್ತದೋ (ಆದಕಾರಣ ಅವನೂ ತನ್ನ ಶಾಸ್ತ್ರಕ್ಕೆ ವಿಷಯ ಪ್ರಯೋಜನಗಳ ಸಿದ್ಧಿಗಾಗಿ ಧರ್ಮಾದಿಗಳನ್ನು ಒಪ್ಪಲೇಬೇಕು. ಧರ್ಮಾದಿ ಗಳನ್ನು ಒಪ್ಪದಿದ್ದರೆ ಅವನ ಶಾಸ್ತ್ರಕ್ಕೆ ಪ್ರಯೋಜನವಿಲ್ಲ; ಮತ್ತು ವಿಷಯವಿಲ್ಲವೆನ್ನುವ ಈ ವಿಷಯವನ್ನು ಸಮಯಪಾದದಲ್ಲಿ ಚಾರ್ವಾಕಮತ ನಿರಾಕರಿಸುವಾಗ ಸ್ಪಷ್ಟವಾಗಿ ನಿರೂಪಿಸು ತ್ತೇವೆ.) (ಮತ್ತು ಚಾರ್ವಾಕನು ಧರ್ಮಾದ್ಯಭಾವವನ್ನು ಒಪ್ಪಿರುತ್ತಾನೆ. ಆ ಧರ್ಮಾದ್ಯಭಾವ ಸಿದ್ಧಿಗಾಗಿಯೂ ಆತನು ಅಪೌರುಷೇಯವಾಕ್ಯವನ್ನು ಒಪ್ಪಲೇಬೇಕೆನ್ನುತ್ತಾರೆ.) ತೇನ=ಆ ಚಾರ್ವಾಕನಿಂದ, ಧರ್ಮಾಭಾವೋಽಪಿ=ಧರ್ಮಾದಿಗಳ ಅಭಾವವೂ ಕೂಡ, ಪ್ರತ್ಯಕ್ಷಾವಗತಃ= ಇಂದ್ರಿಯಗಳಿಂದ ತಿಳಿಯಲ್ಪಟ್ಟದ್ದು, ನೋ ಭವೇತ್=ಆಗಲಾರದು. ಅತಃ=ಆದಪ್ರಯುಕ್ತ, ಸಂಶಯಸಂಪತ್ತೌ=ಸಂಶಯಬರುವಾಗ, (ಧರ್ಮಾದಿಗಳು ಇಲ್ಲವೆಂದು ತಿಳಿದುಕೊಳ್ಳುವುದ ಕ್ಕಾಗಿ) ವಾಕ್ಯಂ=ಅಪೌರುಷೇಯ ವಾಕ್ಯವೂ, ಪ್ರತ್ಯಕ್ಷವತ್ = ಪ್ರತ್ಯಕ್ಷಪ್ರಮಾಣದಂತೆ, ಪ್ರಮಾ=ಪ್ರಮಾಣವೆಂದೇ, (ಅಂಗೀಕರಿಸತಕ್ಕದ್ದು.)

ತಾ ॥ ನ್ಯಾಯಸುಧಾ— (1) ಅನುಮಾನವನ್ನು ಪ್ರಮಾಣವೆಂದು ಚಾರ್ವಾಕನು ಅಂಗೀಕರಿಸಲೇ ಇಲ್ಲ. ಪ್ರಮಾಣವೆಂದಂಗೀಕರಿಸಿದರೂ ಅದರಿಂದ ಧರ್ಮಾದ್ಯಭಾವವು ಸಿದ್ಧಿಸ ಲಿಕ್ಕಿಲ್ಲ. ಅಂದರೆ, ಧರ್ಮಾದಿಗಳನ್ನು ಕೇವಲಾನುಮಾನದಿಂದ ಸಾಧಿಸಲಿಕ್ಕೆ ಹೇಗೆ ಶಕ್ಯವಾಗುವು ದಿಲ್ಲವೋ, ಹಾಗೆಯೇ ಧರ್ಮಾದ್ಯಭಾವವನ್ನು ಅನುಮಾನದಿಂದ ಸಾಧಿಸಲಿಕ್ಕೆ ಶಕ್ಯವಾಗುವು ದಿಲ್ಲ. ಆದಪ್ರಯುಕ್ತ ಪ್ರತ್ಯಕ್ಷರೂಪ ಪ್ರಮಾಣವನ್ನು ಒಪ್ಪಿದಂತೆಯೇ ಧರ್ಮಾದ್ಯಭಾವವನ್ನು ತಿಳಿಯುವುದಕ್ಕಾಗಿ ವಾಕ್ಯರೂಪಪ್ರಮಾಣವನ್ನು ಅಂಗೀಕರಿಸಲೇಬೇಕು. ಅದಾದರೂ ಹಿಂದೆ ಹೇಳಿದಪ್ರಕಾರ ಪೌರುಷೇಯವೆಂದರೆ ಪುರುಷರಲ್ಲಿ ವಿಶ್ವಾಸವಿಲ್ಲದಿರುವುದರಿಂದ ಅಪೌರುಷೇಯ ವಾಕ್ಯವೆಂದೇ ಹೇಳಬೇಕು. (2) ಹಾಗಾದರೆ ಘಟಪಟಾದಿಗಳ ಅಭಾವವನ್ನೆಂಬಂತೆ ಧರ್ಮಾದಿಗಳ ಅಭಾವವನ್ನೂ ಪ್ರತ್ಯಕ್ಷವೇ (ಇಂದ್ರಿಯವೇ) ಏಕೆ ತಿಳಿಸಲಾರದೆಂದರೆ— ಹೀಗೆ ಹೇಳಕೂಡದು. ರಸವು ಕಣ್ಣಿಗೆ ಅಯೋಗ್ಯವಾಗಿರುವುದರಿಂದ ಕಣ್ಣು ಹೇಗೆ ರಸವಿದ್ದರೂ ರಸವನ್ನು ತಿಳಿಸುವು ದಿಲ್ಲವೋ, ಹಾಗೆಯೇ ಧರ್ಮಾದಿಗಳು ಇದ್ದಾಗ್ಯೂ ಇಂದ್ರಿಯಕ್ಕೆ ಅಯೋಗ್ಯವಾಗಿರುವುದರಿಂದ ಪ್ರತ್ಯಕ್ಷಪ್ರಮಾಣದಿಂದ ತಿಳಿಯದೇನೇ ಇರಬಹುದು. ಆದುದರಿಂದ ಧರ್ಮವು ಇದ್ದರೂ ಅಯೋಗ್ಯವಾಗಿರುವುದರಿಂದ ಪ್ರತ್ಯಕ್ಷದಿಂದ ತಿಳಿಯದೆ ಇದ್ದರೂ ಘಟಾಭಾವದಂತೆ ಧರ್ಮಾ ಭಾವದ ನಿರ್ಣಯವು ಪ್ರತ್ಯಕ್ಷ (ಇಂದ್ರಿಯ) ದಿಂದ ಆಗಲಾರದು. (3) ಯೋಗ್ಯತಾವಿಶೇಷಣ ದಿಂದ ಪ್ರಯೋಜನವೇನು? ಯಾವುದು ಪ್ರತ್ಯಕ್ಷಪ್ರಮಾಣದಿಂದ ಸರ್ವಥಾ ತಿಳಿಯುವುದಿಲ್ಲವೋ ಅದು ಶಶವಿಷಾಣಾದಿಗಳಂತೆ ಇಲ್ಲವೆಂದೇ ನಿಶ್ಚಿತವಾಗುತ್ತದೆ, ಎಂದರೆ— ಈ ವಿಷಯದಲ್ಲಿ ವಾದಿಗಳು ವಿವಾದಗ್ರಸ್ತರಾಗದಿದ್ದರೆ ಚಕ್ಷುರಾದೀಂದ್ರಿಯಗಳಿಂದ ರಸಮೊದಲಾದುದು ಅಯೋ ಗ್ಯವಾಗಿರುವುದರಿಂದ ಗೃಹೀತವಾಗುವುದಿಲ್ಲವೆಂದು, ಇಲ್ಲದೆ ಇದ್ದರೆ ಚಕ್ಷುರಾದೀಂದ್ರಿಯಗಳಿಗೆ ಗೋಚರವಾಗದಿರುವುದರಿಂದ ಧರ್ಮಾದಿಗಳು ಇಲ್ಲವೆಂದು ನಿಶ್ಚಯಮಾಡಬಹುದಿತ್ತು. ವಾದಿ

ವಿಪ್ರತಿಪತ್ತಿಗಳಿರುವಾಗ ಇದ್ದದ್ದೂ ಅಯೋಗ್ಯವಾಗಿರುವುದರಿಂದ ಕೆಲವುಕಡೆ ತೋರದೇನೇ ಇರುತ್ತದೆ ಎನ್ನುವುದು ಇರುವಾಗ ಪ್ರತ್ಯಕ್ಷಪ್ರಮಾಣದಿಂದ ಧರ್ಮಾದಿಗಳು ಕಾಣದೆ ಇರುತ್ತದೆ. ಹೇಗೆಂದರೆ, ಧರ್ಮಾದಿಗಳು ತೋರದಿರುವುದರಿಂದ ಇಲ್ಲವೋ? ಅಥವಾ ಇತರ ವಾದಿಗಳು ಹೇಳುವಪ್ರಕಾರ ಕಣ್ಣಿನಿಂದ ರಸವು ತಿಳಿಯದೆ ಹೋದರೂ ರಸನೇಂದ್ರಿಯದಿಂದ ಹೇಗೆ ತಿಳಿಯಲ್ಪಡುತ್ತದೋ ಹಾಗೆಯೇ ಪ್ರತ್ಯಕ್ಷಕ್ಕೆ ಅಯೋಗ್ಯವಾಗಿರುವುದರಿಂದ ಪ್ರತ್ಯಕ್ಷಪ್ರಮಾಣದಿಂದ ಧರ್ಮಾದಿಗಳು ತಿಳಿಯಲ್ಪಡದೆ ಹೋದರೂ ಪ್ರಮಾಣಾಂತರದಿಂದ ಉಂಟೆಂದು ಸಿದ್ಧವಾಗುತ್ತದೋ? ಎಂದು. (4) ಕಣ್ಣಿನಿಂದ ರಸವು ಹೇಗೆ ತಿಳಿಯಲ್ಪಡುವುದಿಲ್ಲವೋ ಹಾಗೆಯೇ ಪ್ರತ್ಯಕ್ಷಕ್ಕೆ ಅಯೋಗ್ಯವಾಗಿರುವುದರಿಂದ ಧರ್ಮಾದಿಗಳು ಇದ್ದರೂ ತಿಳಿಯಲ್ಪಡುವುದಿಲ್ಲವೆಂಬುವ ನ್ಯಾಯವನ್ನು ಅತಿಕ್ರಮಿಸಿ ಪ್ರತ್ಯಕ್ಷದಿಂದ ಕಾಣದೆ ಇರುವುದರಿಂದ ಧರ್ಮಾದಿಗಳು ಇಲ್ಲವೇ ಇಲ್ಲ ಎನ್ನುವ ತನ್ನ (ಚಾರ್ವಾಕನ) ಸಿದ್ಧಾಂತಮಾತ್ರದಿಂದ ಹಿಂದೆ ಹೇಳಿದ ಸಂಶಯವು ನಿವೃತ್ತವಾಗುತ್ತದೆನ್ನುವುದು ಕೂಡಲಾರದು. ಅಂತೂ ಸಂಶಯಕೋಟಿಪ್ರಾಪಕಗಳಾದ ನ್ಯಾಯಗಳು ಪ್ರಬಲಗಳಾಗಿರುವುದರಿಂದ ತನ್ಮೂಲಕವಾದ ಸಂಶಯವು ತನ್ನ ಹಿಂದೆ ಹೇಳಿದ ಸಿದ್ಧಾಂತಮಾತ್ರದಿಂದ ನಿವೃತ್ತವಾಗಲಾರದು. (5) ಹೇಗೆ ಪ್ರತ್ಯಕ್ಷಯೋಗ್ಯವಾದ ಅರ್ಥದಲ್ಲಿ 'ಸ್ಥಾಣುರ್ವಾ ಪುರುಷೋ ವಾ' = ಸ್ಥಾಣುವೋ ಪುರುಷನೋ ಎನ್ನುವ ಸಂಶಯನಿವೃತ್ತಿಗಾಗಿ ಪುರುಷತ್ವವ್ಯಾಪ್ಯಕರಾದಿದರ್ಶನರೂಪವಾದ ವಿಶೇಷಪ್ರತ್ಯಕ್ಷವು ಆವಶ್ಯಕವೋ, ಹಾಗೆಯೇ ಇಂತಹ ಸಂಶಯದ ನಿವೃತ್ತಿಗಾಗಿ ವಾಕ್ಯವು ಪ್ರಮಾಣವೆಂದೇ ಅಂಗೀಕರಿಸತಕ್ಕದು. ಈ ಅಭಿಪ್ರಾಯದಿಂದ 'ಸಂಶಯಸಂಪತ್ತೌ ಸತ್ಯಾಂ' ಎಂದು ಹೇಳಿರುವರು. (6) ಆದಕಾರಣ ಹಿಂದೆ ಹೇಳಿದ ಪ್ರಕಾರ ವೇದವು ಅಪೌರುಷೇಯವಾಗಿರುವುದರಿಂದ ಕರ್ತೃದೋಷಮೂಲಕವಾಗದಿರುವುದರಿಂದ ಸ್ವತಏವ ಪ್ರಮಾಣವೆಂದು ಸಿದ್ಧವಾಯಿತು

## ವೇದಾಪೌರುಷೇಯತ್ವವಾದದ ಸಾರಾಂಶವು:—

(1) ಶಬ್ದಗಳಿಗೆ ಸ್ವತಃ ದೋಷವಿಲ್ಲದಿದ್ದರೂ ವಕ್ತೃಪುರುಷನಲ್ಲಿ ದೋಷವಿದ್ದಪ್ರಯುಕ್ತ ಶಬ್ದದಲ್ಲಿಯೂ ದೋಷಗಳು ಇವೆ ಎಂದು ನಿಶ್ಚಿತವಾಗುತ್ತವೆ. ಇಂತಹ ದೋಷಗಳು ಇದ್ದಪ್ರಯುಕ್ತ ಶಬ್ದಸಮುದಾಯಾತ್ಮಕವಾದ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ವೇದವನ್ನು ಯಾವನೊಬ್ಬನೂ ಮಾಡಿದ್ದಲ್ಲ. ಕಾವ್ಯಾದಿಗಳಂತೆಯೇ ವೇದವನ್ನು ಇಂತಹನು ಮಾಡಿದ್ದೆಂದು ಕರ್ತನು ಪ್ರಸಿದ್ಧನಾಗದಿರುವುದರಿಂದ ವೇದವು ಪೌರುಷೇಯವಲ್ಲ. ಅಪೌರುಷೇಯವೇ. (2) ಮತ್ತು ವೇದವನ್ನು ಈಶ್ವರನು ಮಾಡಿದ್ದೆಂದಾದರೆ ಅಂತಹ ವೇದದಿಂದ ಧರ್ಮಾದಿಗಳ ಸಿದ್ಧಿಯೇ ಆಗದೆ ಹೋಗಬೇಕಾಗುವುದು. ವಿಪ್ರಲಂಭ ಮೊದಲಾದ ವಕ್ತೃದೋಷಗಳೂ ಸಂಭವಿಸಬೇಕಾಗುವವು. (3) ವೇದಕ್ಕೆ ಪ್ರಾಮಾಣ್ಯವು ಸಿದ್ಧಿಸುವುದಕ್ಕಾಗಿ ವಿಪ್ರಲಂಭ (ವಂಚನೇಚ್ಛೆ)ವಿಲ್ಲದಿರುವವನು, ಸರ್ವಜ್ಞನೂ ರಾಗರಹಿತನೂ ಆದ ಈಶ್ವರನು ವೇದವನ್ನು ಮಾಡಿದ್ದೆಂದು ಕಲ್ಪಿಸುವುದಾದರೆ ಕಲ್ಪನಾಗೌರವವು ಬರುವುದು. (4) ಹಾಗಾದರೆ ಈಶ್ವರನಿಗೆ ಸರ್ವಜ್ಞತ್ವಾದಿಗಳು ಇವೆ ಎಂದು ಕಲ್ಪಿಸುವುದು ಅಲ್ಲ. ಮತ್ತೆ ಅವನ ವಾಕ್ಯದಿಂದಲೇ ಸರ್ವಜ್ಞತ್ವಾದಿಗಳು ಸಿದ್ಧಿಸುತ್ತವೆಂದು ಹೇಳಿದರೆ ಅನ್ಯೋನ್ಯಾಶ್ರಯವು ಬರುವುದು. (5) ಈಶ್ವರನ ಸಾರ್ವಜ್ಞಾದಿ ವಿಷಯದಲ್ಲಿ ಅನುಮಾನವೂ ಪ್ರಮಾಣವಾಗಲಾರದು. ಪ್ರತ್ಯನುಮಾನದಿಂದ ವಿರುದ್ಧವಾಗಿದೆ. ಹೇಗೆಂದರೆ— 'ಧರ್ಮಾದಿಃ ಕಸ್ಯಚಿತ್ಪ್ರತ್ಯಕ್ಷಃ ವಸ್ತುತ್ವಾತ್ ಘಟವತ್'=ಧರ್ಮಮೊದಲಾದುದು ಯಾರೋ ಒಬ್ಬನಿಗೆ ಪ್ರತ್ಯಕ್ಷವಾಗಿದೆ, ವಸ್ತುವಾಗಿರುವುದರಿಂದ ಘಟದಂತೆಯೇ. ಎಂದರೆ— ಆ ಧರ್ಮಾದಿ

ಗಳು ಯಾರಿಗೆ ಪ್ರತ್ಯಕ್ಷವೋ ಅವನು ಈಶ್ವರನೆಂದಾಗಲೀ ಬುದ್ಧನೆಂದಾಗಲೀ ಆಯಾಯ ವಾದಿಗಳು ಹೇಳಿದರೆ 'ವಿಮತಃ ನ ಧರ್ಮದರ್ಶೀ ಪುರುಷತ್ವಾತ್ ದೇವದತ್ತವತ್'=ವಿವಾದಗ್ರಸ್ತನು ಧರ್ಮವನ್ನು ಪ್ರತ್ಯಕ್ಷೀಕರಿಸಿದವನಲ್ಲ, ಪುರುಷನಾಗಿರುವುದರಿಂದ ದೇವದತ್ತನಂತೆ ಎಂದು ಹೇಳಲು ಶಕ್ಯವಾಗುವುದು. ಆದುದರಿಂದ ಅತ್ಯಂತಾತೀಂದ್ರಿಯಾರ್ಥಗಳಲ್ಲಿ ಪುರುಷರ ವಾಕ್ಯವು ಪ್ರಮಾಣವಲ್ಲ. ಅನ್ವಯವ್ಯತಿರೇಕಗಳಿಂದ ತಿಳಿಯಲು ಯೋಗ್ಯವಾದ ಆಪ್ತತ್ವವನ್ನು ಪುರುಷನಲ್ಲಿ ತಿಳಿಯಲು ಸಾಧ್ಯವಿಲ್ಲ. ಆದಪ್ರಯುಕ್ತ ಧರ್ಮಾದಿ ಸಿದ್ಧಿಯು ಪ್ರತ್ಯಕ್ಷ-ಅನುಮಾನ-ಪೌರುಷೇಯವಾಕ್ಯಗಳಿಂದ ಆಗದೆ ಇರುವುದರಿಂದಲೂ ವೇದವು ಅಪೌರುಷೇಯವೆಂದೇ ಒಪ್ಪಬೇಕು. (6) ಪ್ರತ್ಯಕ್ಷವೊಂದೇ ಪ್ರಮಾಣವು ಬೇರೆ ಯಾವುದೂ ಪ್ರಮಾಣವೇ ಇಲ್ಲ ಎಂದು ಹೇಳುವ ಯಾವ ಚಾರ್ವಾಕನು ಶ್ರೇಯಸ್ಸಿಗೆ ಸಾಧನವಾದ ಧರ್ಮಮೊದಲಾದುದು ಇಲ್ಲವೆಂದೇ ಹೇಳುತ್ತಾನೋ, ಅವನ ವಾಕ್ಯವು ನಿಷ್ಫಲವಾಗಿರುವುದರಿಂದ ಹೇಯವೇ. ಅದರಿಂದ ಲೋಕೋಪಕಾರವು ಪ್ರಯೋಜನವೆಂದು ಹೇಳಕೂಡದು. ಧರ್ಮ-ಅಧರ್ಮಗಳು ಇಲ್ಲವೆಂದು ಜ್ಞಾನಬಂದರೆ, ಪರಸ್ಪರವಾಗಿ ಹಿಂಸಾದಿಗಳಿಂದ ಅಪಕಾರವೇ ಪ್ರಾಪ್ತವಾಗುವುದು. ಅಲ್ಲದೆ, ಅದೃಷ್ಟವನ್ನೇ ಒಪ್ಪದಿರುವಪ್ರಯುಕ್ತ ಲೋಕೋಪಕಾರದಿಂದ ಚಾರ್ವಾಕನಿಗೂ ಪ್ರಯೋಜನವಿರಲಾರದು. (7) ಮತ್ತು ಧರ್ಮಾಭಾವವೂ ಪ್ರತ್ಯಕ್ಷದಿಂದ ನಿಶ್ಚಿತವಾಗಲಾರದು. ಅನುಮಾನದಿಂದ ನಿಶ್ಚಿತವಾಗುವುದೆಂದರೆ ಅಪಸಿದ್ಧಾಂತವು. (ಪೂರ್ವಾಚಾರ್ಯರು ಯಾವುದನ್ನು ಪ್ರಮಾಣವೆಂದಂಗೀಕರಿಸಿರುವರೋ ಅದಕ್ಕೆ ವಿರುದ್ಧವನ್ನು ಅಂಗೀಕರಿಸುವುದು) (8) ಮತ್ತು ಪ್ರತ್ಯಕ್ಷಹೊರತು ಪ್ರಮಾಣವೇ ಇಲ್ಲವೆಂದಾದರೆ ಧೂಮವನ್ನು ನೋಡಿ ಅಗ್ನಿಯನ್ನು ಅಪೇಕ್ಷಿಸುವವನಿಗೆ ಪರ್ವತದಲ್ಲಿ ಪ್ರವೃತ್ತಿಯು ಬಾರದೆ ಹೋಗಬೇಕಾಗುವುದು (9) ಆದಕಾರಣ ಹೇಗೆ ಸಾಧಾರಣ ಧರ್ಮವನ್ನು ನೋಡಿದರಿಂದ ಸಂದಿಗ್ಧವಾದ ಯಾವುದಾದರೊಂದು ವಸ್ತುವಿಗೆ ದರ್ಶನವು ನಿಶ್ಚಾಯಕವಾಗುವುದೋ, ಹಾಗೆಯೇ ಧರ್ಮ-ಬ್ರಹ್ಮ-ಮೊದಲಾದುದು ಇದೆ ಎಂದು ಕೆಲವರು, ಇಲ್ಲವೆಂದು ಇತರರು, ಹೀಗೆ ವಾದಿಗಳ ವಿವಾದದಿಂದ ಜನರಿಗೆ ಸಂಶಯವು ಹುಟ್ಟಿದರೆ ಅತೀಂದ್ರಿಯವಾದ ಧರ್ಮ-ಬ್ರಹ್ಮ-ಮೊದಲಾದುದು ಇದೆ, ಎಂದು ನಿಶ್ಚಾಯಕವಾದುದು, ನಿತ್ಯವಾಗಿಯೂ ಅಪೌರುಷೇಯವೂ ಆಗಿರುವ ವೇದವಾಕ್ಯವನ್ನೇ ಅಂಗೀಕರಿಸಬೇಕು ॥ ೭೧ ॥

**ವೇದಾಪೌರುಷೇಯತ್ವ ಸಮರ್ಥನವು ಸಮಾಪ್ತವಾಯಿತು. ॥ ಶ್ರೀಃ ॥**



## ಶಕ್ತಿವಾದವು.

(1) ವೇದವು ಅಪೌರುಷೇಯವಾಗಿದ್ದಾಗ್ಯೂ ಪ್ರಮಾಣವಲ್ಲ. ಆ ವೇದವಾದರೂ ಪ್ರಮಾಣವಾಗುವುದಾದರೆ, (೧) ಪದಾರ್ಥವಿಷಯದಲ್ಲಿ ಪ್ರಮಾಣವೋ (ಯಥಾರ್ಥಜ್ಞಾನವನ್ನುಹುಟ್ಟಿಸುವುದೋ) (೨) ವಾಕ್ಯಾರ್ಥ ವಿಷಯದಲ್ಲಿ ಪ್ರಮಾಣವೋ? ಅವುಗಳಲ್ಲಿ ವೇದವು- ೧. ಪದಾರ್ಥ ವಿಷಯಕ ಯಥಾರ್ಥಜ್ಞಾನವನ್ನು ಹುಟ್ಟಿಸುತ್ತದೆಂದು ಹೇಳಕೂಡದು. ಏಕೆಂದರೆ, ಪದಾರ್ಥಗಳು ಶಬ್ದಪ್ರವೃತ್ತಿಯಿಂದ ಮೊದಲೇ ಪ್ರತ್ಯಕ್ಷಾದಿಗಳಿಂದ ತಿಳಿಯಲ್ಪಟ್ಟಿವೆ. ಅಂತೂ ಅನಧಿಗತಾರ್ಥಗಂತೃತ್ವರೂಪವಾದ ಪ್ರಮಾಣಲಕ್ಷಣವಿಲ್ಲದಿರುವುದರಿಂದ ಆ ವಿಷಯದಲ್ಲಿ ಪ್ರಾಮಾಣ್ಯವು ಕೂಡಲಾರದು. ಪದಾರ್ಥಗಳು ಶಬ್ದಪ್ರವೃತ್ತಿಯಿಂದ ಮೊದಲೂ ತಿಳಿಯಲ್ಪಡಲಿಲ್ಲವೆಂದು ಹೇಳುವುದಾದರೆ ಶಕ್ತಿಜ್ಞಾನರೂಪವಾದ ವ್ಯುತ್ಪತ್ತಿಯೇ ಕೂಡಲಾರದು. ಏಕೆಂದರೆ— ವ್ಯುತ್ಪತ್ತಿಯು

ವಾಚ್ಯವಾಚಕಸಂಬಂಧಜ್ಞಾನರೂಪವಾಗಿದೆ. ಸಂಬಂಧಜ್ಞಾನಕ್ಕಿಂತ ಮೊದಲು ಸಂಬಂಧಿ ಜ್ಞಾನವು ಆವಶ್ಯಕವು. ವ್ಯುತ್ಪತ್ತಿಯು ಅಪೇಕ್ಷೆಯಿಲ್ಲದಿದ್ದರೆ ವ್ಯುತ್ಪನ್ನನಂತೆ ಅವ್ಯುತ್ಪನ್ನನಿಗೂ ಶಬ್ದದಿಂದ ಜ್ಞಾನವು ಹುಟ್ಟಬೇಕಾಗುವುದು. (2) ಯದ್ಯಪಿ ಯಾಥಾರ್ಥ್ಯವೇ ಪ್ರಾಮಾಣ್ಯವು. ಅಗ್ರಹೀತಗ್ರಾಹಕತ್ವವಲ್ಲ. ಅಂದರೆ, ಪದಾರ್ಥಗಳು ಮೊದಲು ತಿಳಿಯಲ್ಪಟ್ಟಿದ್ದರೂ ಯಥಾವ ಸ್ಥಿತಾರ್ಥ ಬೋಧಕತ್ವರೂಪವಾದ ಪ್ರಾಮಾಣ್ಯವು ವೇದಕ್ಕೆ ಉಂಟೇ ಉಂಟು. ಆದಾಗ್ಯೂ ಪರಾರ್ಥಾನುಮಾನದಂತೆ ಶಬ್ದವೂ ಇತರರಿಗೆ ತಿಳಿಸುವುದಕ್ಕಾಗಿಯೇ ಪ್ರವೃತ್ತವಾಗಿರುವುದರಿಂದ ಆ ಶಬ್ದಕ್ಕೆ ಜ್ಞಾತಜ್ಞಾಪಕತ್ವವು ನ್ಯಾಯುವಲ್ಲ. ಆದುದರಿಂದ ಶಕ್ತಿಜ್ಞಾನದಿಂದ ಮೊದಲು ಜ್ಞಾತ ವಾಗಿರುವ ಪದಾರ್ಥವನ್ನು ವೇದವು ತಿಳಿಸುತ್ತದೆಂದು ಹೇಳುವುದಾದರೆ, ಜ್ಞಾತಾರ್ಥವನ್ನು ತಿಳಿಸುವುದರಿಂದ ವೇದವು ಯಾಂಗೂ ಉಪಾದೇಯವಾಗಲಿಕ್ಕಿಲ್ಲ. (3) ಹಾಗಾದರೆ ತಿಳಿದಿದ್ದನ್ನೇ ತಿಳಿಸುವುದಕ್ಕಾಗಿ ಶಬ್ದವನ್ನು ಉಚ್ಚರಿಸುವಿಕೆ ಎನ್ನುವುದು ಪುರುಷರ ದೋಷವು. ವೇದವಾದರೂ ಅಪೌರುಷೇಯವಾಗಿರುವುದರಿಂದ ತಿಳಿದಿದ್ದನ್ನೇ ತಿಳಿಸುವುದರಿಂದಲೂ ಅದಕ್ಕೆ ದೋಷವೇನಿದೆ? ಯಾವುದೂ ಇಲ್ಲ. ಆದರೂ ಅನುಪಾದೇಯುವು (ಸ್ವೀಕರಿಸಲಿಕ್ಕೆ ಅಯೋಗ್ಯವಾದದ್ದು) ಆಗ ಬೇಕಾಗುವುದು. ವೇದವು ಅನುಪಾದೇಯುವಾದರೆ ವೇದಗಳ ವಿಚಾರವೇ ಕೂಡದೆ ಹೋಗುವುದು. (4) ವೇದವು ವಾಕ್ಯಾರ್ಥವಿಷಯಕ ಯಥಾರ್ಥಜ್ಞಾನವನ್ನೂ ಹುಟ್ಟಿಸುವುದರಿಂದ ವಾಕ್ಯಾರ್ಥ ದಲ್ಲಿ ಪ್ರಮಾಣವೆಂದು ಹೇಳಕೂಡದು. ಏಕೆಂದರೆ— ವಾಕ್ಯಾರ್ಥಜ್ಞಾನವನ್ನು ಹುಟ್ಟಿಸಲಿಕ್ಕೆ ಉಪಾಯುವಿರುವುದಿಲ್ಲ. ವರ್ಣಪದವಿಷಯಕಗಳಾದ ಅನುಭವಗಳೂ ಪದಾರ್ಥವಿಷಯಕ ಸ್ಮೃತಿಗಳೂ ಪ್ರತ್ಯೇಕ (ಒಂದೊಂದು) ಹೇತುವೆಂದು ಇಟ್ಟುಕೊಂಡರೆ ಬೇರೆ ಇದ್ದವುಗಳು ವ್ಯರ್ಥಗಳಾಗುವವು. ಕ್ರಮಿಕ (ಕ್ರಮದಿಂದ ಹುಟ್ಟತಕ್ಕ ಮತ್ತು ಅತಿಶೀಘ್ರದಲ್ಲಿ ವಿನಾಶವನ್ನು ಹೊಂದತಕ್ಕ) ವರ್ಣಪದವಿಷಯಕ ಅನುಭವಗಳಿಗೂ, ಪದಾರ್ಥವಿಷಯಕ ಸ್ಮೃತಿಗಳಿಗೂ ಸಮುದಾಯುವು ಕೂಡಲಾರದು.) (5) ಹಾಗಾದರೆ, ಕ್ರಿಯಾಪದದಿಂದಾಗಲೀ, ಕಾರಕಪದದಿಂ ದಾಗಲೀ ಸಾಕಾಂಕ್ಷಿತವಾದ ಸ್ವಾರ್ಥವು ಹೇಳಲ್ಪಡುತ್ತಿರಲು, ಯಾವುದೋ ಬೇರೆ ಪದಗಳಿಂದ ಅನ್ವಯುವನ್ನು ಹೊಂದಲಿಕ್ಕೆ ಯೋಗ್ಯವಾಗಿರುವ ಪ್ರತಿಯೋಗಿಯಾದ ಬೇರೆ ಪದಾರ್ಥವು ಉಪ ಸ್ಥಿತವಾಗುತ್ತದೋ, ಅದೇವೇ ಅದಕ್ಕೆ ಸಂಬಂಧಿಯಾಗಿ ತಿಳಿಯಲ್ಪಡುತ್ತದೆ. ಅಂದರೆ, ಪೂರ್ವ ಪದಗಳಿಂದ ಸಮಭಿವ್ಯಾಹೃತವಾದ ಸಾಕಾಂಕ್ಷವಾದ ಪದಾಂತರವೇ ವಾಕ್ಯಾರ್ಥಜ್ಞಾನವನ್ನು ಹುಟ್ಟಿಸುತ್ತದೆ ಎಂದು ಹೇಳುತ್ತೇವೆ. ಎಂದರೆ— ಸಾಕಾಂಕ್ಷವಾದ ಪದಾಂತರದಿಂದ ಅನ್ವಯುವು ತಿಳಿಯಲ್ಪಡುತ್ತದೆನ್ನುವುದು ಸತ್ಯವೇ. ಆದಾಗ್ಯೂ ಆ ಪದಕ್ಕೆ ಅನ್ವಯುದಲ್ಲಿ ಶಕ್ತಿಯಿಲ್ಲದಿರುವುದ ರಿಂದ ಅನ್ವಯುವನ್ನು ಹೇಗೆ ತಿಳಿಸಿಕೊಡುತ್ತದೆ? ಕರಣವು ಅಸನ್ನಿಕೃಷ್ಟವಾಗಿ ಕ್ರಿಯೆಯನ್ನು ಹುಟ್ಟಿಸುವುದಾದರೆ ಅತಿಪ್ರಸಂಗವು. (ಎಲ್ಲಾ ಜ್ಞಾನವನ್ನೂ ಹುಟ್ಟಿಸಬೇಕಾಗುವುದು.) ಅಂದರೆ, ಪದಗಳು ಕ್ರಿಯಾತ್ವದಿಂದಾಗಲೀ ಕಾರಕತ್ವದಿಂದಾಗಲೀ ಯುಕ್ತವಾದ (ಸ್ವಶಕ್ಯವಾದ) ಸ್ವಾರ್ಥ ವನ್ನು ಪ್ರತಿಪಾದಿಸಲಿ. ಪದಕ್ಕೆ ಸ್ವಾರ್ಥದಲ್ಲಿ ಶಕ್ತಿಯಿದ್ದಂತೆ ಕ್ರಿಯಾಕಾರಕ ಸಂಸರ್ಗದಲ್ಲಿ ಶಕ್ತಿಯಿಲ್ಲದಿರುವುದರಿಂದ ಪರಸ್ಪರವಾಗಿ ಕ್ರಿಯಾಕಾರಕ ಸಂಸರ್ಗಜ್ಞಾನದಲ್ಲಿ ಕಾರಣವೇ ಇರುವು ದಿಲ್ಲ. 'ಆನಯ' ಎನ್ನುವ ಕ್ರಿಯಾಪದವಾಗಲೀ 'ಗಾಂ' ಎನ್ನುವ ಕಾರಕಪದವಾಗಲೀ ಸಾಕಾಂ ಕ್ಷಿತವಾದ ಸ್ವಾರ್ಥವನ್ನು ಹೇಳುತ್ತದೆ ಎನ್ನುವುದು ಯಾವುದು ನಿನ್ನಿಂದ ಹೇಳಲ್ಪಟ್ಟಿತೋ, ಅದನ್ನು ಅಂಗೀಕರಿಸಿಕೊಂಡು 'ಸತ್ಯವೇ' ಇತ್ಯಾದಿಗಳಿಂದ ಸಮಾಧಾನವನ್ನು ಹೇಳಿದ್ದು. ವಸ್ತುತಸ್ತು ಪದವು ಪ್ರಕೃತಿಪ್ರತ್ಯಯಗಳ ಸ್ವರೂಪವಾಗಿರುವುದರಿಂದ ಪದಾರ್ಥವು ಪ್ರಕೃತಿ-ಪ್ರತ್ಯಯ ಈ ಎರಡರ ಅರ್ಥಸಂಸರ್ಗರೂಪವಾಗಿರುವುದರಿಂದ, ಪ್ರಕೃತಿ-ಪ್ರತ್ಯಯಗಳ ಅರ್ಥಸಂಸರ್ಗವನ್ನು

ತಿಳಿಸುತ್ತದೆ ಎನ್ನುವುದಕ್ಕೆ ಕಾರಣವಿಲ್ಲದಿರುವುದರಿಂದ ಸ್ವಾರ್ಥವನ್ನು ಪ್ರತಿಪಾದಿಸುವುದಿಲ್ಲ. (6) ಆಕಾಂಕ್ಷಾ ಸನ್ನಿಧಿ ಯೋಗ್ಯತಾ—ಇವುಗಳುಳ್ಳ ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳೇ ವಾಕ್ಯಾರ್ಥಗಳಾಗುತ್ತವೆ ಅಂದರೆ, ವಾಕ್ಯಾರ್ಥಜ್ಞಾನವು ಆಕಾಂಕ್ಷಾದಿಗಳುಳ್ಳ ಸಮಭಿವ್ಯಾಹೃತ ಶಬ್ದಗಳಿಂದಲೇ ಆಗುತ್ತದೆ ಎನ್ನುವುದೂ ಇದರಿಂದಲೇ ನಿರಸ್ತವಾಯಿತು. ವಾಕ್ಯಾರ್ಥಜ್ಞಾನಕ್ಕೆ ಕಾರಣವನ್ನು ನಿರೂಪಿಸಲಿಲ್ಲ. ಅಂದರೆ, ಪದಗಳಿಗೆ ಸ್ವಾರ್ಥಗಳಲ್ಲಿ ಶಕ್ತಿಯಿದ್ದಂತೆ ವಾಕ್ಯಾರ್ಥೀ ಭೂತಗಳಾದ ಆಕಾಂಕ್ಷಾದಿಗಳುಳ್ಳ ಸ್ವಾರ್ಥಸಂಸರ್ಗಗಳಲ್ಲಿ ಶಕ್ತಿಯಿರುವುದಿಲ್ಲ. ಆದಕಾರಣ ಶಕ್ತಿರೂಪವಾದ ನಿಯತಕಾರಣವಿಲ್ಲದಿರುವುದರಿಂದ ವಾಕ್ಯಾರ್ಥಜ್ಞಾನವು ಸಂಶಯರೂಪವೇ ಆಗಬೇಕು. ಅಂದರೆ, ಮೇಘಸಂದೇಶಾದಿ ಕಾವ್ಯಗಳಂತೆಯೇ ವಾಕ್ಯಾರ್ಥಜ್ಞಾನವು ಉತ್ಪ್ರೇಕ್ಷಾ ಮೂಲಕವೇ ಆಗಬೇಕಾಗುವುದು. ಆದಕಾರಣ ವೇದವಾಕ್ಯಾರ್ಥವಿಷಯಕ ಯಥಾರ್ಥಜ್ಞಾನ ಜನಕತ್ವವೂ ಕೂಡದಿರುವುದರಿಂದ ವೇದವು ಅಪ್ರಮಾಣವೇ. ಆದಕಾರಣ ವೇದವಿಚಾರವು ಕೂಡಲಾರದೆಂದಾಶಂಕಿಸಿದರೆ—

**ಮೂ ॥ ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ ಶಬ್ದಾನಾಮನುಭೂಯತೇ ।**
**ಅತೋಽನ್ವಿತಾಭಿಧಾಯಿತ್ವಂ [ಗೌರವಂ ಕಲ್ಪನೇಽನ್ಯಥಾ] ॥ ೭೨ ॥**

ಅ ॥ 'ಚ' ಶಬ್ದವು 'ಅತಃ ಎನ್ನುವ ಶಬ್ದಕ್ಕೆ ಅನ್ವಿತಾರ್ಥಬೋಧಕತ್ವವಿದ್ದುದರಿಂದ' ಎನ್ನುವ ವ್ಯಾಖ್ಯಾನಾಂತರಕ್ಕೆ ಸಮುಚ್ಚಾಯಕವು. ಅಥವಾ ಚ=ಯಾವ ಕಾರಣದಿಂದ, ಅನ್ವಿತೇ ಏವ ಸ್ವಾರ್ಥೇ=ಅರ್ಥಾಂತರದಿಂದ ಅನ್ವಯವಿರುವ, ಅಂದರೆ, ಯೋಗ್ಯವಾದ ಇತರದಿಂದ ಅನ್ವಿತವಾದ ಸ್ವಾರ್ಥದಲ್ಲಿ, ಶಬ್ದಾನಾಂ=ಶಬ್ದಗಳಿಗೆ, ಶಕ್ತಿಃ=ಶಕ್ತಿಯು, ಅನುಭೂಯತೇ= ಅನುಭವಿಸಲ್ಪಡುತ್ತದೋ, ಅತಃ=ಆದಕಾರಣ, ಅನ್ವಿತಾಭಿಧಾಯಿತ್ವಂ=ಶಬ್ದಗಳಿಗೆ ಯೋಗ್ಯೇತ ರಾನ್ವಿತ ಸ್ವಾರ್ಥಾಭಿಧಾಯಿತ್ವವನ್ನು ಅಂಗೀಕರಿಸಬೇಕು.

ತಾ ॥ ನ್ಯಾಯಸುಧಾ— (1) ವೃದ್ಧರ ವ್ಯವಹಾರಾದಿಗಳಿಂದ ಶಬ್ದಗಳಿಗೆ ಶಕ್ತಿಯನ್ನು ನಿಶ್ಚಯಿಸಿಕೊಳ್ಳಬೇಕು. ಪದಾರ್ಥಗಳ ಸ್ವರೂಪ ಮಾತ್ರದಲ್ಲಿ ವ್ಯವಹಾರಾದಿಗಳು ಕೂಡಲಾರವು. ಮತ್ತೆ ಪದಾರ್ಥಾಂತರದಿಂದ ಅನ್ವಿತವಾದುದರಲ್ಲಿಯೇ ವ್ಯವಹಾರಾದಿಗಳು ಕೂಡುತ್ತವೆ. ಆದಕಾರಣ, ವ್ಯವಹಾರಾದಿಗಳಿಂದ ಶಬ್ದಶಕ್ತಿಯನ್ನು ನಿಶ್ಚಯಿಸಿಕೊಳ್ಳುವವನು ಯೋಗ್ಯವಾದ ಇತರದಿಂದ ಅನ್ವಿತವಾದ ಸ್ವಾರ್ಥದಲ್ಲಿಯೇ ಶಬ್ದಗಳಿಗೆ ಶಕ್ತಿಯನ್ನು ತಿಳಿದುಕೊಳ್ಳುತ್ತಾನೆಂದು ಅಂಗೀಕರಿಸಬೇಕು. (2) ಯದ್ಯಪಿ ಒಂದು ಪ್ರಯೋಗದಲ್ಲಿ ಗೋವನ್ನು ತರಬೇಕೆಂದು ಗೋವಿಗೆ ಆನಯನಾನ್ವಯವೂ, ಮತ್ತೊಂದರಲ್ಲಿ ಕಟ್ಟಬೇಕೆಂದು ಬಂಧನಾನ್ವಯವೂ, ಇನ್ನೊಂದು ಪ್ರಯೋಗದಲ್ಲಿ ಗೋವನ್ನು ನೋಡಬೇಕೆಂದು ದರ್ಶನಾನ್ವಯವೂ ತೋರುತ್ತದೆ. ಆದ ಪ್ರಯುಕ್ತ ಗೋವಿಗೆ ಪದಾರ್ಥಾಂತರದಿಂದಲೂ ಪದಾರ್ಥಾಂತರಾನ್ವಯದಿಂದಲೂ ವ್ಯಭಿಚಾರವು. ಆದಾಗ್ಯೂ ವ್ಯಭಿಚಾರವಿದ್ದುದರಿಂದ ವಿಶೇಷಾನ್ವಯವನ್ನು ಬಿಟ್ಟು ವ್ಯಭಿಚಾರವಿಲ್ಲದಿರುವ ಸಾಮಾನ್ಯ ವಾಗಿ ಯೋಗ್ಯವಾದ ಇತರದಿಂದ ಅನ್ವಯವುಳ್ಳ ತನ್ನ ಅರ್ಥದಲ್ಲಿ ಶಕ್ತಿಗ್ರಹಣವು ಯುಕ್ತವೇ ಆಗುತ್ತದೆ. ಗೋವನ್ನು ತರಬೇಕು, ಅಥವಾ ಗೋವನ್ನು ಕಟ್ಟಬೇಕು ಎಂದು ವಿಶೇಷವಾಗಿ ಇಟ್ಟುಕೊಂಡರೆ ದೋಷಬರುವುದರಿಂದ ಅದನ್ನು ಬಿಟ್ಟರೂ, ಆನಯನ (ತರುವಿಕೆ) ಮೊದಲಾದವು ಗಳಲ್ಲಿಯಾವುದಾದರೊಂದುಎಂದು ಸಾಮಾನ್ಯವಾಗಿ ಇಟ್ಟುಕೊಂಡರೆ, ದೋಷವಿಲ್ಲದಿರುವುದರಿಂದ ನಿಷ್ಕಾರಣವಾಗಿ ಅದನ್ನು ಬಿಡುವುದು ಯುಕ್ತವಲ್ಲ. ಹೀಗೆ ವ್ಯುತ್ಪತ್ತಿಯಾಗುವ ಕಾಲದಲ್ಲಿಯೇ ಇತರದಿಂದ ಕೂಡಿರುವ ಸ್ವಾರ್ಥದಲ್ಲಿಯೇ ಶಬ್ದಗಳ ಶಕ್ತಿಯು ಅನುಭೂತವಾಗುವುದರಿಂದ

ಶಬ್ದಗಳು ಅನ್ವಿತಸ್ವಾರ್ಥಗಳನ್ನು ಹೇಳುತ್ತವೆಂದು ಅಂಗೀಕರಿಸಲೇ ಬೇಕು. ಅಭಿಧಾನವು ಶಕ್ತಿಗ್ರಹಣವನ್ನು ಅನುಸರಿಸಿರುವುದು. ಯಾವಾಗ ಪದಗಳೇ ಅನ್ವಿತಸ್ವಾರ್ಥವನ್ನು ಪ್ರತಿಪಾದಿಸುತ್ತವೋ, ಆಗ ವಾಕ್ಯಾರ್ಥವೇ ತಿಳಿಯಲ್ಪಟ್ಟದ್ದು ಆಗಿರುವುದರಿಂದ ವಾಕ್ಯಾರ್ಥ ಜ್ಞಾನಕ್ಕೆ ಕಾರಣವೇ ಇಲ್ಲವೆಂದು ಹೇಳಿದ್ದು ಅಯುಕ್ತವು. ಏಕೆಂದರೆ—ಗುಣ (ಅಪ್ರಧಾನ) ಪ್ರಧಾನ ಭಾವದಿಂದ ಪರಸ್ಪರವಾಗಿ ಅನ್ವಿತಗಳಾದ ಪದಾರ್ಥಗಳಾಗಲೀ, ಅವುಗಳ ಅನ್ವಯುವಾಗಲೀ ವಾಕ್ಯಾರ್ಥವು ಎಂದು ಪ್ರಾಮಾಣಿಕರು ಅಂಗೀಕರಿಸಿರುವರು. (3) ಈ ಪದ್ಯದಲ್ಲಿ 'ಪದಾನಾಂ' ಎಂದು ಹೇಳದೆ 'ಶಬ್ದಾನಾಂ' ಎಂದು ಹೇಳಿರುವುದರಿಂದ ಪ್ರಕೃತಿಪ್ರತ್ಯಯುಗಳಿಗೂ, ಅನ್ವಿತಾಭಿಧಾನ ಸಾಮರ್ಥ್ಯವಿದೆ ಎಂದು ಸೂಚಿತವಾಯಿತು. (4) ಕೆಲವರು ಅನೇಕ ಪದಗಳಲ್ಲಿ ಒಂದೇ ಪದವು ಅನ್ವಿತ ಸ್ವಾರ್ಥವನ್ನು ಹೇಳುತ್ತದೆ. ಬೇರೆ ಪದಗಳು ಅದರ ಸಂಬಂಧಿಗಳನ್ನು ಮಾತ್ರ ಹೇಳುತ್ತವೆ. ಅನ್ವಿತ ಸ್ವಾರ್ಥವನ್ನು ಹೇಳುವಂಥಾದ್ದು ಒಂದನೇ ಪದವು. ಅಥವಾ ಪ್ರಧಾನವಾದ ಪದವೆಂದು ಹೇಳುವರು. ಈ ಮತವನ್ನು ನಿರಾಕರಿಸುವುದಕ್ಕಾಗಿ 'ಶಬ್ದಾನಾಂ' ಎಂದು ಬಹು ವಚನವು. ಹೇಗೆಂದರೆ— ಯಾವುದು ಒಂದು ಪ್ರಯೋಗದಲ್ಲಿ ಪ್ರಾಥಮಿಕವೋ, ಅಂದರೆ ಗಾಮಾನಯ ಎನ್ನುವಲ್ಲಿ ಗೋಪದವು. ಅದೇವೇ ಬೇರೆ ಪ್ರಯೋಗದಲ್ಲಿ 'ಆನಯ ಗಾಂ' ಎನ್ನುವಲ್ಲಿ ಪ್ರಾಥಮಿಕವಾಗುವುದಿಲ್ಲ. ಇನ್ನೊಂದು ಪ್ರಯೋಗದಲ್ಲಿ ಪ್ರಾಥಮಿಕವಾಗಬಹುದು. ಹೀಗೆ ಪದಗಳಲ್ಲಿ ಪ್ರಾಥಮ್ಯನಿಯಮವು ಇರುವುದಿಲ್ಲ ಅಂತೂ 'ಪ್ರಥಮಂ ಪದಂ' ಎಂದು ಹೇಳುವವರು ಎಲ್ಲಾ ಪದಗಳೂ ಯೋಗ್ಯೇತರಾನ್ವಿತ ಸ್ವಾರ್ಥವನ್ನು ಹೇಳುವವುಗಳೆಂದು ಅಂಗೀಕರಿಸಿದಂತೆಯೇ ಆಯಿತು (5) ಪದದಲ್ಲಿ ಪ್ರಧಾನತ್ವವೆಂದರೆ ಎಂತಹದು? (೧) ಬೇರೆ ಪದಗಳು ಯಾವ ಅರ್ಥವನ್ನು ಪ್ರತಿಪಾದಿಸಲಿಕ್ಕೆ ಉಪಯುಕ್ತಗಳೋ ಅದು ಪ್ರಧಾನವೆಂದರೆ- ಹಾಗಾದರೆ, ವಾಕ್ಯ ಭೇದದಿಂದ ಪ್ರಾಧಾನ್ಯಕ್ಕೆ ವ್ಯವಸ್ಥೆಯೇ ಇಲ್ಲದಿರುವುದರಿಂದ ಎಲ್ಲಾ ಪದಗಳಿಗೂ ಯೋಗ್ಯೇತರಾನ್ವಿತ ಸ್ವಾರ್ಥವನ್ನು ಹೇಳುವ ಸಾಮರ್ಥ್ಯವೇ ಪ್ರಾಪ್ತವಾಗಬೇಕಾಗುವುದು. (೨) ಆಖ್ಯಾತ ಪದವು (ಕ್ರಿಯಾಪದವು) ಪ್ರಧಾನವೆಂದರೆ— ಹಾಗೆ ಹೇಳಕೂಡದು. ಏಕೆಂದರೆ, 'ಅಗ್ನಿಹೋತ್ರಂ ಜುಹೋತಿ' ಎನ್ನುವುದರಿಂದ ಪ್ರಾಪ್ತವಾದ ಹೋಮವನ್ನು ಅನುವಾದ ಮಾಡಿ 'ದಧ್ನಾ ಜುಹೋತಿ' ಎನ್ನುವುದರಿಂದ ದಧಿರೂಪವಾದ ಗುಣವನ್ನು ವಿಧಾನಮಾಡುವುದರಿಂದ ಕ್ರಿಯಾಪದವು ದಧಿರೂಪವಾದ ಕಾರಕವಿಧಾನಕ್ಕಾಗಿ ಅನುವಾದವಾಗಿರುವುದರಿಂದ ಆಖ್ಯಾತ ಪದವು 'ದಧ್ನಾ ಜುಹೋತಿ' ಎನ್ನುವಲ್ಲಿ ಪ್ರಧಾನವಲ್ಲ. ಇದೇಪ್ರಕಾರ 'ಊರ್ಧ್ವಮಾಘಾರಯತಿ' ಇತ್ಯಾದಿ ಸ್ಥಳದಲ್ಲಿಯೂ ಊರ್ಧ್ವತ್ವಾದಿ ಗುಣವು ವಿಹಿತವಾಗುವುದರಿಂದ 'ಆಘಾರಯತಿ' ಎನ್ನುವ ಕ್ರಿಯಾಪದವು ಅನುವಾದವಾಗಿರುವುದರಿಂದ ಅಪ್ರಧಾನವೆಂದೇ ತಿಳಿಯತಕ್ಕದ್ದು. (6) ಮತ್ತು ಆಖ್ಯಾತಪದವಿಲ್ಲದಿರುವ ಸ್ಥಳದಲ್ಲಿಯೂ, ಅನ್ವಯಜ್ಞಾನವು ಬರುತ್ತದೆ. 'ಪರಿಣತಿ ಸುರಸಂ ಪನಸಫಲಂ' ಹಲಸಿನ ಫಲವು ಒಳ್ಳೇ ಪಕ್ವವಾದರೆ ರಸಭರಿತವು ಇತ್ಯಾದಿ ಆಖ್ಯಾತಪದವಿಲ್ಲದಿರುವ ವಾಕ್ಯಗಳಲ್ಲಿ ಅನ್ವಯವು ತೋರುವುದಿಲ್ಲವೆಂದು ಯುಕ್ತವಲ್ಲ. ಅನುಭವ ವಿರೋಧವು. (7) 'ಪರಿಣತಿ ಸುರಸಂ ಪನಸಫಲಂ' ಎನ್ನುವಲ್ಲಿ ಅಸ್ತಿ ಎಂದು ಆಖ್ಯಾತ ಪದಾಧ್ಯಾಹಾರವೆನ್ನಕೂಡದು. ಏಕೆಂದರೆ— ೧. ಲೋಕಪ್ರತೀತ್ಯನುಸಾರವಾಗಿ ಅಧ್ಯಾಹಾರವೆಂದು ಹೇಳುವುದೋ? ಅಥವಾ ಆಖ್ಯಾತಪದವೇ ಅನ್ವಯಬೋಧಕವೆನ್ನುವ ನಿನ್ನ ಸಿದ್ಧಾಂತಾನುಸಾರವಾಗಿ ಅಧ್ಯಾಹಾರವೆಂದು ಹೇಳುವುದೋ? ೧ನೇದ್ದು ಕೂಡಲಾರದು. ಲೋಕಪ್ರತೀತಿಯು ಆಖ್ಯಾತಪದಾಧ್ಯಾಹಾರವಿಲ್ಲದೇನೇ ಪರ್ಯವಸಿತವಾಗಿದೆ. ೨ನೇದ್ದೂ ಕೂಡಲಾರದು. ನಿನ್ನ ಸಿದ್ಧಾಂತವೇ ನಿರ್ಮೂಲವಾಗಿದೆ. ಇತರರ ಸಿದ್ಧಾಂತಾನುಸಾರವಾಗಿ ಅಧ್ಯಾಹೃತ ಶಬ್ದವನ್ನು

ಬಿಡಲಿಕ್ಕೂ ಬರಬಹುದು. (8) ಪದಗಳಿಗೆ ವಿಶೇಷಾನ್ವಯದಲ್ಲಿಯೇ ಶಕ್ತಿಯೆಂದು ಯಾರು ಹೇಳುತ್ತಾರೋ ಅವರ ಮತವನ್ನು ನಿರಾಕರಿಸುವುದಕ್ಕಾಗಿ 'ಅನ್ವಿತೇ' ಎಂದು ಸಾಮಾನ್ಯವಾಗಿ ಹೇಳಿರುವರು. ಈ ವಿಷಯದಲ್ಲಿ ಯುಕ್ತಿಯನ್ನು 'ಉಭಯವ್ಯಪದೇಶಾತ್ತ್ವಹಿಕುಂಡಲವತ್' (ಬ್ರ. ಸೂ. ಅಧ್ಯಾ. ೩ ಪಾ. ೨. ಅಧಿ. ೧೫) ಎನ್ನುವಲ್ಲಿ "ಕರ್ತೃಕ ಶಬ್ದೇ ಹ್ಯಭಿಹಿತೇ ಧರ್ಮ ಸಾಮಾನ್ಯವೇದನಾತ್ । ವಿಶೇಷಧರ್ಮಸಂನ್ವಿಚ್ಛನ್ ಕಿಮಿತ್ಯೇವ ಹಿ ಪೃಚ್ಛತಿ ॥ ಗುಣಕ್ರಿಯಾದಿ ಧರ್ಮಾಣಾಂ ವಿಶೇಷೇ ಕಥಿತೇ ಪುನಃ । ನಿರಾಕಾಂಕ್ಷೋ ಭವೇದ್ಯಸ್ಮಾಚ್ಛಬ್ದಾ ಅನ್ವಿತವಾಚಕಾಃ ॥" ಎನ್ನುವಲ್ಲಿ ಹೇಳುವರು.

(9) ಹಾಗಾದರೆ 'ಗಾಮಾನಯ' ಇದುಮೊದಲಾದ ವಾಕ್ಯಗಳಲ್ಲಿ 'ಗಾಂ' ಎನ್ನುವ ಪದ ದಿಂದಲೇ ಆನಯನ (ತರುವಿಕೆ) ದಿಂದ ಅನ್ವಿತವಾದ ಸ್ವಾರ್ಥವು ಹೇಳಲ್ಪಡುವುದಾದರೆ 'ಆನಯ' ಎನ್ನುವುದರ ಅರ್ಥವು ಗೋಪದದಿಂದಲೇ ಹೇಳಲ್ಪಟ್ಟಿರುವುದರಿಂದ ಆನಯ ಎನ್ನುವ ಪದವು ನಿರರ್ಥಕವಾಗುವುದು. 'ಆನಯ' ಎನ್ನುವ ಪದದಿಂದ ತರಬೇಕು ಎನ್ನುವ ಅರ್ಥವು ಹೇಳಲ್ಪಟ್ಟರೇನೇ, ತರೋಣ ಎನ್ನುವ ಅರ್ಥದಿಂದ ಅನ್ವಿತವಾದ ಸ್ವಾರ್ಥವು ಗೋ ಪದದಿಂದ ಹೇಳಲ್ಪಡುತ್ತದೆ. ಅದರಿಂದ ಆನಯ ಎನ್ನುವ ಪದವು ವ್ಯರ್ಥವಾಗುವುದಿಲ್ಲವೆಂದರೆ—ಹಾಗಾದರೆ, 'ಆನಯ' ಎನ್ನುವ ಪದವು ಪದಾರ್ಥಾಂತರದಿಂದ ಅನ್ವಿತವಾಗದೇನೇ ಇರುವ ಸ್ವಾರ್ಥವನ್ನು ಮಾತ್ರ ಹೇಳತಕ್ಕದಾದದ್ದರಿಂದ ಅನ್ವಿತಾಭಿಧಾಯಿಯಲ್ಲವೆಂದೇ ಪ್ರಾಪ್ತವಾಯಿತು ಹೇಗೆ ಈ ಪದವು ಅನ್ವಿತಾಭಿಧಾಯಿಯಲ್ಲವೋ ಹಾಗೆಯೇ ಬೇರೆ ಪದವೂ ಆಗುವುದು. ಹೀಗೆ ಅನ್ವಿತಾಭಿಧಾನವಾದವನ್ನೇ ಸಂಪೂರ್ಣ ಬಿಟ್ಟಂತೆ ಆಗುವುದು. (10) ಹಾಗಾದರೆ, 'ಆನಯ' ಎನ್ನುವ ಪದದಿಂದಲೂ ಗೋ ಪದದಿಂದ ಹೇಳಲ್ಪಟ್ಟ ಅರ್ಥದಿಂದ ಯುಕ್ತವಾದ ಸ್ವಾರ್ಥವೇ ಹೇಳಲ್ಪಡುತ್ತದೆ. ಎಂದರೆ, ಹೀಗೆ ಹೇಳಿದರೆ ಪೂರ್ವಪದವು (ಗೋ ಪದವು) 'ಆನಯನದಿಂದ ಅನ್ವಿತವಾದ ಸ್ವಾರ್ಥವನ್ನು ಹೇಳದಿರುವತನಕ ಉತ್ತರಪದವು (ಆನಯ ಎನ್ನುವ ಪದವು) ಪೂರ್ವಪದಾರ್ಥದಿಂದ ಅನ್ವಿತವಾದ ಗೋವಿನಿಂದ ಅನ್ವಿತವಾದ ಸ್ವಾರ್ಥವನ್ನು ಹೇಳು ವುದಿಲ್ಲ. ಉತ್ತರಪದವು ಸ್ವಾರ್ಥವನ್ನು ಹೇಳದಿರುವತನಕ ಪೂರ್ವಪದವು ಉತ್ತರಪದಾರ್ಥ ದಿಂದ ಅನ್ವಿತವಾದ ಸ್ವಾರ್ಥವನ್ನು ಹೇಳುವುದಿಲ್ಲ. ಅಂತೂ ಗೋ ಪದವು ಆನಯನದಿಂದ ಅನ್ವಿತವಾದ ಸ್ವಾರ್ಥವನ್ನು ಹೇಳುತ್ತದೆಂದು ಸಿದ್ಧವಾದರೆ ಆನಯ ಎನ್ನುವ ಪದವು ಗೋವಿ ನಿಂದ ಅನ್ವಿತವಾದ ಸ್ವಾರ್ಥವನ್ನು ಹೇಳುತ್ತದೆಂದು ಸಿದ್ಧಿಸುತ್ತದೆ. ಆನಯ ಎನ್ನುವ ಪದವು ಗೋವಿನಿಂದ ಅನ್ವಿತವಾದ ಸ್ವಾರ್ಥವನ್ನು ಹೇಳುತ್ತದೆಂದು ಸಿದ್ಧವಾದರೆ ಗೋಪದವು ಆನಯನ ದಿಂದ ಅನ್ವಿತವಾದ ಸ್ವಾರ್ಥವನ್ನು ಹೇಳುತ್ತದೆಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯವು. (11) ಹಾಗಾದರೆ ಪರಸ್ಪರ ನಿರಪೇಕ್ಷಗಳಾದ ಪದಗಳು ಪ್ರಥಮದಲ್ಲಿ ಇತರಾನ್ವಿತ ಗಳಾಗದೇನೇ ಇರುವ ಪದಾರ್ಥಗಳನ್ನು ಹೇಳಿ ಆಮೇಲೆ ಪರಸ್ಪರವಾಗಿ ಅನ್ವಿತಗಳೇ ಆದ ಪದಾರ್ಥಗಳನ್ನು ಹೇಳುತ್ತವೆ. ಆದಕಾರಣ ಅನ್ಯೋನ್ಯಾಶ್ರಯತ್ವವಿಲ್ಲವೆಂದು ಹೇಳಕೂಡದು. ಒಂದು ಪದವು ಎರಡಾವರ್ತಿ ಅರ್ಥವನ್ನು ಹೇಳುತ್ತದೆಂದು ಕಲ್ಪಿಸುವುದು ಅಪ್ರಾಮಾಣಿಕ ವಾಗಿದೆ. ಅಲ್ಲದೆ ವಿರಮ್ಯವ್ಯಾಪಾರವು (ನಿಂತು-ನಿಂತು ಪ್ರತಿಪಾದಿಸುವುದು) ಚೇತನಧರ್ಮ ವಾಗಿರುವುದರಿಂದ ಅಚೇತನಗಳಲ್ಲಿ ಸರ್ವಥಾ ಕೂಡಲಾರದು. (12) ಮತ್ತು ಪದಗಳಿಗೆ ಅನ್ವಿತ ಗಳಾದ ಅರ್ಥಗಳಲ್ಲಿ ಶಕ್ತಿಯು ಅನುಭೂತವಾಗುವುದಾದರೆ, ಪ್ರಥಮದಲ್ಲಿಯೇ ಅನ್ವಿತಾರ್ಥ ಗಳನ್ನೇ ಪದಗಳು ಹೇಳಿಯಾವು ಪ್ರಥಮದಲ್ಲಿ ಅನ್ವಿತಾರ್ಥಗಳನ್ನು ಹೇಳದಿದ್ದರೆ ಮೇಲೆಯೂ

ಕೂಡ ಹೇಗೆ ಹೇಳಿಯಾವು? ಎಂದು ಪೂರ್ವಪಕ್ಷಿಸಿದರೆ— (13) ವಿಶೇಷಾನ್ವಿತಾಭಿಧಾನ ವಾದಿಗಳು ಹಿಂದಿನ ವಿಷಯದಲ್ಲಿ ಹೀಗೆ ಪರಿಹಾರವನ್ನು ಹೇಳುವರು. ಪದಗಳು ಪ್ರಥಮದಲ್ಲಿ ಸ್ವವಾಚ್ಯ ಏಕದೇಶತ್ವರೂಪವಾದ ಸಂಬಂಧಮಾತ್ರದಿಂದ ಅನನ್ವಿತಗಳಾದ ಸ್ವಾರ್ಥಗಳನ್ನೇ ಸ್ಮರಿಸಿ ಕೊಡುತ್ತವೆ. (ಅಂದರೆ ಸ್ವವಾಚ್ಯೈಕದೇಶತ್ವರೂಪವಾದ ಸಂಬಂಧದಿಂದಲೇ ಪದಗಳಿಗೆ ಸ್ವಾರ್ಥ ಸ್ಮಾರಕತ್ವವು. ಶಕ್ತಿಯಿದ್ದಪ್ರಯುಕ್ತವಲ್ಲ. ಆದಪ್ರಯುಕ್ತ ಎರಡಾವರ್ತಿ ಹೇಳಿದಂತೆಯಾಗ ಲಿಲ್ಲ) ಮತ್ತೆ ಪರಸ್ಪರವಾಗಿ ಸ್ಮಾರಿತವಾದ ಅರ್ಥದಿಂದ ಯುಕ್ತಗಳಾದ ಸ್ವಾರ್ಥಗಳನ್ನು ಹೇಳುತ್ತವೆ. ಆದಕಾರಣ ಬೇರೆ ಪದಗಳಿಗೆ ವೈಯರ್ಥ್ಯವಿಲ್ಲವು. (14) ಬೇರೆ ಪದಗಳನ್ನು ಅಪೇಕ್ಷಿಸಿಕೊಳ್ಳದೇನೇ ಹೇಳುವುದರಿಂದ ಅನ್ಯೋನ್ಯಾಶ್ರಯವೂ ಇಲ್ಲವೆನ್ನುವರು. ಇದೂ ಅಯುಕ್ತವು. ಏಕೆಂದರೆ, ಯಾವಾಗಲೂ ಪದಗಳು ಇತರದಿಂದ ಅನ್ವಿತವೇ ಆಗಿರುವ ಸ್ವಾರ್ಥ ದಿಂದ ಸಾಹಚರ್ಯವುಳ್ಳವುಗಳು. ಕೇವಲ (ಪದಾರ್ಥಾಂತರದಿಂದ ಅನ್ವಿತವಾಗದಿರುವ) ಸ್ವಾರ್ಥದಿಂದ ಸಂಬಂಧವುಳ್ಳವುಗಳಲ್ಲ. ಆದಕಾರಣ ಆ ಪದಗಳು ಇತರಾನ್ವಿತವಾಗದೇನೇ ಇರುವ ಪದಾರ್ಥವನ್ನುಮಾತ್ರ ಸ್ಮರಿಸಿಕೊಡಲಿಕ್ಕೆ ಹೇಗೆ ಸಮರ್ಥಗಳಾಗುತ್ತವೆ? ಅನ್ವಿತವೇ ಆಗಿರುವ ಸ್ವಾರ್ಥದಿಂದ ಸ್ವಸ್ವವಾಚ್ಯ ಪದಾರ್ಥಸಂಬಂಧವು ಗೃಹೀತವಾಗಿರುವುದರಿಂದ ಅದನ್ನು ಅನುಸರಿಸಿಯೇ ಸ್ಮರಣೆಯು ಹುಟ್ಟಬೇಕು. ಬೇರೆ ಪದಗಳಿಗೆ ವೈಯರ್ಥ್ಯಪರಿಹಾರಾನ್ಯೋನ್ಯಾ ಶ್ರಯ ಪರಿಹಾರರೂಪವಾದ ಪ್ರಯೋಜನವನ್ನು ಅನುಸರಿಸಿ ಸ್ಮರಣೆಯು ಹುಟ್ಟುವುದಲ್ಲ. ಕೇವಲ ಪದಾರ್ಥಜ್ಞಾನಕ್ಕಾಗಿ ಪದವನ್ನು ಪ್ರಯೋಗಿಸುವುದಿಲ್ಲ. ಮತ್ತೆ ವ್ಯವಹಾರಕ್ಕಾಗಿಯೇ ಪ್ರಯೋಗಿಸುವರು. ಆ ವ್ಯವಹಾರವು ಅನ್ವಿತಾರ್ಥದಲ್ಲಿಯೇ ಕೂಡುತ್ತದೆ. ಆದಕಾರಣ ಅನ್ವಿತಗಳೆಂದೇ ಅನುಭೂತಗಳಾದ ಪದಾರ್ಥಗಳದ್ದು ಸ್ಮರಣವು ಪದಾರ್ಥಗಳಿಂದ ಆಗುವುದು. ತಥಾಚ 'ಗಾಂ ಪಶ್ಯ' ಗೋವನ್ನು ನೋಡು ಎನ್ನುವ ಪ್ರಯೋಗದಲ್ಲಿ ಗೋ ಪದದಿಂದ ಪೂರ್ವದಲ್ಲಿ ಅನುಭೂತವಾದ ಆನಯನದಿಂದ ಯುಕ್ತವಾದ ಅರ್ಥವು ಸ್ಮರಿಸಲ್ಪಟ್ಟಪ್ರಯುಕ್ತ 'ಪಶ್ಯ' ಎನ್ನುವ ಪದವು ಅನಾಕಾಂಕ್ಷಿತವಾದ ಅರ್ಥವುಳ್ಳದ್ದೂ, ಅಸಂಗತವೂ ಆಗಬೇಕಾಗುವುದು. ಹೀಗೆಯೇ 'ಪ್ರಾಸಾದಂ ಪಶ್ಯ' ಉಪ್ಪರಿಗೆಯನ್ನು ನೋಡು ಎನ್ನುವಲ್ಲಿ 'ಪಶ್ಯ' ಎನ್ನುವ ಪದವು ಪ್ರಾಸಾದದಿಂದ ಅನ್ವಿತವಾದ ಸ್ವಾರ್ಥವನ್ನು ಹೇಳತಕ್ಕುದಾದಪ್ರಯುಕ್ತ ಪಶ್ಯ ಎನ್ನುವ ಪದದಿಂದ ಗೋ ಪದವು ಸಂಬಂಧಿಸಲ್ಪಡುವುದಿಲ್ಲ. ಅಂತೂ ವಾಕ್ಯಾರ್ಥವು ಎಲ್ಲಿಯೂ (ಮೊದಲು ಗ್ರಹಿಸಲ್ಪಟ್ಟ ಸಂಗತಿ ಯುಳ್ಳ ಪದದಿಂದ ಅನ್ವಿತಗಳಾದ ಮೊದಲುಗ್ರಹಿಸಲ್ಪಟ್ಟ ಅರ್ಥವುಳ್ಳ ಬೇರೆ ವಾಕ್ಯಗಳಲ್ಲಿಯೂ) ಒಂದೇ ರೀತಿಯಾಗಿ ಇರತಕ್ಕುದಾಗಿ ಸಿದ್ಧವಾಗಲಾರದು. (15) ಹಾಗಾದರೆ, ಗೋ ಪದವು ಪದಾರ್ಥಾಂತರದಿಂದ ಅನನ್ವಿತವಾದ ಸ್ವಾರ್ಥವನ್ನು ಮಾತ್ರ ಸ್ಮರಿಸಿಕೊಡುತ್ತದೆ. ಆನಯನ ಬಂಧನಾದಿರೂಪಗಳಾದ ಅರ್ಥಾಂತರಗಳನ್ನು ಸ್ಮರಿಸಿಕೊಡುವುದಿಲ್ಲ. ಅವುಗಳು ವ್ಯಭಿಚಾರಿ ಗಳಾಗಿವೆ. ಹೀಗೆ ಹೇಳಕೂಡದು. ಏಕೆಂದರೆ— ಪಟುಪ್ರತ್ಯಯವು (ಒಂದಾವರ್ತಿಯೇ ಹುಟ್ಟಿ ರುವ ಮಿಂಚುಮೊದಲಾದ ಪ್ರತ್ಯಯವು) ಅಭ್ಯಾಸಪ್ರತ್ಯಯವು (ಕಂಡಿಕಾದಿಪ್ರತ್ಯಯವು) ಆದರ ಪ್ರತ್ಯಯವು (ಅದ್ಭುತಪ್ರತ್ಯಯವು) ಇವುಗಳಿಂದ ಹುಟ್ಟಿರುವ, ಉದ್ಬುದ್ಧವಾದ ಸಂಸ್ಕಾರವು ಸ್ಮರಣೆಗೆ ಕಾರಣವಾಗಿದೆ. ಆ ಪ್ರಬೋಧವು ವ್ಯಭಿಚಾರಿಯಾದ ಅರ್ಥಾಂತರದಲ್ಲಿಯೂ ಮನಸ್ಸನ್ನು ಸ್ಥಿರವಾಗಿ ಇಡುವಿಕೆ, ಸಾಹಚರ್ಯ ಇತ್ಯಾದಿಗಳಿಂದ ಹುಟ್ಟತಕ್ಕದ್ದೂ ವಿಶೇಷ ವುಳ್ಳದ್ದಲ್ಲ. ಅವ್ಯಭಿಚಾರಿಯಾದ ಸ್ವಾರ್ಥದಲ್ಲಿಯೂ, ವ್ಯಭಿಚಾರಿಯಾದ ಅರ್ಥಾಂತರದಲ್ಲಿಯೂ ಸಮಾನವೇ. ಅಂತೂ ವ್ಯಭಿಚರಿತಾರ್ಥ ಸ್ಮರಣವೂ ಆಗುವುದು. ಸ್ಮರಣವು ಅನುಮಾನದಂತೆ ನಿಯತ ಸಾಹಚರ್ಯವನ್ನು ಅಪೇಕ್ಷಿಸಿ ಹುಟ್ಟುವುದಿಲ್ಲವಷ್ಟೇ. ಧೂಮ ನೋಡಿದರೆ ನಿಯತ

ಸಾಹಚರ್ಯವುಳ್ಳ ಅಗ್ನಿಜ್ಞಾನ ಸ್ಮರಣದಂತೆ ನಿಯತ ಸಾಹಚರ್ಯವಿಲ್ಲದಿರುವ ಮಹಾನಸ ಮೊದಲಾದ ಪ್ರದೇಶದ್ದೂ ಸ್ಮರಣವು ಬರಬಹುದು. (16) ಹೇಗೆ ಪದಗಳಿಗೆ ಸ್ವಾರ್ಥಗಳಲ್ಲಿ ಅಭ್ಯಾಸಾತಿಶಯವಿದೆಯೋ ಹಾಗೆ ಬೇರೆ ಅರ್ಥಗಳಲ್ಲಿ ಇಲ್ಲ. ಅವುಗಳು ವ್ಯಭಿಚಾರಿಗಳಾಗಿವೆ. ಅಂತೂ ಕೇವಲ ಸ್ವರೂಪದಿಂದಲೇ ಪದಗಳಿಂದ ಸ್ಮರಿಸಲ್ಪಟ್ಟ ಪದಾರ್ಥಗಳು ಆಕಾಂಕ್ಷಾದಿಗಳುಳ್ಳವುಗಳಾಗಿ ಪದಗಳಿಂದ ಅನ್ವಿತಗಳಾಗಿಯೇ ಹೇಳಲ್ಪಡುತ್ತವೆ. ಆದಪ್ರಯುಕ್ತ ಅನ್ಯೋನ್ಯಾಶ್ರಯತ್ವವಿಲ್ಲ. ಬೇರೆ ಪದಗಳದ್ದು ಆಕಾಂಕ್ಷೆಯಿಲ್ಲವೆನ್ನುವುದೂ ಇಲ್ಲ. ಎನ್ನುವುದೂ ಇದರಿಂದ ನಿರಾಕೃತವಾಯಿತು. ಹೇಗೆಂದರೆ — ಸ್ಮರಣವು ಅನುಭವಾವೃತ್ತಿ ನಿಯಮವನ್ನು ಅಪೇಕ್ಷಿಸುವುದಿಲ್ಲ. ಇಲ್ಲವಾದರೆ ಧೂಮವನ್ನು ನೋಡಿ ಮಹಾನಸಾದಿಗಳ ಸ್ಮರಣೆಯು ಕೂಡದೆ ಹೋಗುವುದು. ಧೂಮಕ್ಕೆ ಅಗ್ನಿಯಲ್ಲಿ ಅಭ್ಯಾಸಾತಿಶಯವಿದ್ದ ಹಾಗೆ ಮಹಾನಸದಲ್ಲಿ ಇಲ್ಲ. ಆದಕಾರಣ 'ಗೌಃ' ಇತ್ಯಾದಿ ಪದಗಳಿಗೆ ಸಾಹಚರ್ಯದಿಂದಲೂ, ಅಭ್ಯಾಸದಿಂದಲೂ, ಕೇವಲ ಅರ್ಥಸ್ಮಾರಕತ್ವವು ಕೂಡದಿರುವುದರಿಂದ ಆಸಯನದಿಂದ ಅನ್ವಿತವಾದ ಸ್ವಾರ್ಥಸ್ಮಾರಕತ್ವವನ್ನೇ ಹೇಳಬೇಕಾಗಿರುವುದರಿಂದ 'ಗಾಂ ಪಶ್ಯ' ಎನ್ನುವ ವಾಕ್ಯಾರ್ಥ ನಿಶ್ಚಯವು ಕೂಡದಿರುವುದರಿಂದ ಪದಗಳು ಅನ್ವಿತಸ್ವಾರ್ಥವನ್ನೇ ಹೇಳುತ್ತವೆಂದು ಹೇಳಬೇಕು. ಆದಕಾರಣ ಹಿಂದೆ ಹೇಳಿದ ಪ್ರಕಾರ ಅನ್ಯೋನ್ಯಾಶ್ರಯತ್ವವೂ, ಪದಾಂತರಗಳಿಗೆ ವೈಯ್ಯರ್ಥ್ಯವೂ ವಿಶೇಷಾನ್ವಿತಾಭಿಧಾನ ವಾದಿಗಳಿಗೆ ತಪ್ಪಿದಲ್ಲ.

(17) ಈ ವಿಷಯದಲ್ಲಿ ನಾವು ಹೀಗೆ ಹೇಳುವೆವು. ಅನ್ಯೋನ್ಯಾಶ್ರಯತ್ವವು, ಪದಾಂತರ ವೈಯರ್ಥ್ಯವು ಈ ಎರಡು ದೂಷಣಗಳು ವಿಶೇಷಾನ್ವಿತತ್ವಾಭಿಧಾನವಾದಿಗಳಿಗೇನೇ ಆಗುವುದು. ನಾವು ಹೇಳತಕ್ಕ ಯೋಗ್ಯೇತರಾನ್ವಿತಸ್ವಾರ್ಥರೂಪವಾದ ಸಾಮಾನ್ಯಾನ್ವಿತಾಭಿಧಾನದಲ್ಲಿಯಾದರೂ, ಈ ದೋಷವೇ ಬರುವುದಿಲ್ಲ ಹೇಗೆಂದರೆ— ಪ್ರತಿಯೊಂದು ಪದಗಳೂ, ಆಕಾಂಕ್ಷಿತವಾದ, ಸನ್ನಿಹಿತವಾದ, ಯೋಗ್ಯವಾದ ಇತರದಿಂದ ಅನ್ವಿತವಾದ ಸ್ವಾರ್ಥವನ್ನು ಹೇಳುವುದರಲ್ಲಿ ಸಾಮರ್ಥ್ಯವುಳ್ಳವುಗಳಾಗಿರುವುದರಿಂದ ಬೇರೆ ಪದವನ್ನು ಅಪೇಕ್ಷಿಸುವುದೇ ಇಲ್ಲವು. ಆದ ಕಾರಣ ಅನ್ಯೋನ್ಯಾಶ್ರಯತ್ವವಿಲ್ಲ. ವಿಶೇಷಾಕಾರವಾಗಿ ಅನ್ವಯಜ್ಞಾನ ಬರುವುದಕ್ಕಾಗಿ ಪದಾಂತರವು ಉಪಯುಕ್ತವಾಗುತ್ತದೆ. (18) ಸಾಮಾನ್ಯಾನ್ವಿತಾಭಿಧಾನ ಪಕ್ಷದಲ್ಲಿ ವಾಕ್ಯಾರ್ಥವಿಶೇಷಜ್ಞಾನವು ಬರಲಿಕ್ಕಿಲ್ಲವೆನ್ನುವುದು ಇದರಿಂದಲೇ ನಿರಸ್ತವಾಯಿತು. ಪದಾಂತರ ಸಮಭಿವ್ಯಾಹಾರ ರೂಪವಾದ ಸಾಮಗ್ರೀ ವಿಶೇಷದಿಂದ ವಿಶೇಷಾನ್ವಯಜ್ಞಾನವು ಬರುವುದು. (19) ಯಾರು ವಿಶೇಷಾನ್ವಿತಾಭಿಧಾನವನ್ನು ಹೇಳುತ್ತಾರೋ ಅವರೂ ಕೂಡ ಪ್ರತಿಯೋಗಿಗಳೂ, ಅವುಗಳ ಅನ್ವಯಗಳೂ ಅನಂತಗಳಾಗಿರುವುದರಿಂದ ಅವುಗಳಲ್ಲಿ ಸಂಬಂಧವನ್ನು ಗ್ರಹಿಸುವುದರಲ್ಲಿಯೇ ಪುರುಷರ ಆಯುಸ್ಸು ಪರ್ಯವಸಾನವಾಗುತ್ತದೆನ್ನುವ ಭಯದಿಂದ ಸಾಮಾನ್ಯತಃ ಯೋಗ್ಯೇತರಾನ್ವಿತ ಸ್ವಾರ್ಥದಲ್ಲಿಯೇ ಶಕ್ತಿಯೆಂದು ಅಂಗೀಕರಿಸಲೇ ಬೇಕು. (20) ಹಾಗಾದರೆ, ಸಾಮಾನ್ಯಾನ್ವಿತವನ್ನು ಹೇಳುವುದರಲ್ಲಿ ಶಕ್ತಿಯಿದೆ ಎಂದು ಏಕೆ ಅಂಗೀಕರಿಸಬೇಕು? ಮತ್ತೆ ಪದಗಳು ಕೇವಲ ಸ್ವಾರ್ಥದಲ್ಲಿ ಶಕ್ತಿಯುಳ್ಳವುಗಳು. ಬೇರೆ ಪದಗಳ ಸಂಬಂಧದಿಂದ ವಿಶೇಷವಾಗಿ ಅನ್ವಿತವೇಆದ ಅರ್ಥವನ್ನು ತಿಳಿಸುತ್ತವೆಂದಂಗೀಕರಿಸಬಹುದಷ್ಟೆ. ಎಂದರೆ ಹಾಗೆ ಹೇಳಕೂಡದು. ಶಕ್ತಿಗ್ರಹಣ ಸಮಯದಲ್ಲಿಯೇ ಸಾಮಾನ್ಯಾನ್ವಿತಾಭಿಧಾನ ಶಕ್ತಿಯೂ ಗೃಹೀತವಾಗುತ್ತದೆ. ಪದಾಂತರ ಸಮಭಿವ್ಯಾಹಾರ (ಸಂಬಂಧ)ವು ಸಾಮಾನ್ಯಶಕ್ತಿಗೆ ವಿಶೇಷಪರ್ಯವಸಾನದಲ್ಲಿಯೇ ಕಾರಣವಾಗುತ್ತದೆ. ಇಲ್ಲದಿರುವ ಶಕ್ತಿಯನ್ನು ತಂದುಕೊಡುವ

ವಿಷಯದಲ್ಲಿ ಕಾರಣವಾಗಲಾರದು. (21) ಹಾಗಾದರೂ ಅನ್ವಿತಾಭಿಧಾನಪಕ್ಷದಲ್ಲಿ ಒಟ್ಟಿಗೆ ಉಚ್ಚರಿಸಲ್ಪಟ್ಟ ಪದಗಳಲ್ಲಿ ಒಂದು ಪದದಿಂದ ಮತ್ತೊಂದು ಪದಕ್ಕೆ ಪುನರುಕ್ತಿದೋಷವು ಬರುವುದು, ಎಂದರೆ ಹಾಗೆ ಹೇಳಕೂಡದು. ಅನ್ವಯವು ಬೇರೆಬೇರೆಯಾಗಿದೆ. ಹೇಗಂದರೆ— ಆನಯ ಎನ್ನುವ ಪದದಿಂದ ಯುಕ್ತವಾದ ಗೋಪದವು ಆನಯನಾನ್ವಿತ ಗೋವನ್ನು ಹೇಳುತ್ತದೆ. ಗೋ ಪದದಿಂದ ಯುಕ್ತವಾದ ಆನಯ ಎನ್ನುವ ಪದವು ಗವಾನ್ವಿತ ಆನಯನವನ್ನು ಹೇಳುತ್ತದೆ. ಎಂದು ಈ ಅನ್ವಯಗಳಿಗೆ ಸ್ಪಷ್ಟವಾಗಿಯೇ ಭೇದವು ತೋರುತ್ತದೆ. ಆರ್ಥಿಕವಾದ ಪುನರುಕ್ತಿಯು ದೂಷಣವಲ್ಲ. 'ಯಶ್ಚಾರ್ಥಾದರ್ಥೋ ನ ಸ ಚೋದನಾರ್ಥಃ'= ಯಾವುದು ಆರ್ಥಿಕಾರ್ಥವೋ ಅದು ವಿಧಿವಾಕ್ಯದ ಅರ್ಥವಲ್ಲ ಎಂದು ನ್ಯಾಯವು ಬೇರೆ ಪದವು ವಿಶೇಷಾನ್ವಯಪ್ರತಿಪತ್ತಿಗೆ ಕಾರಣವಾಗಿರುವುದರಿಂದ ವ್ಯರ್ಥವಲ್ಲ.

### ಶಕ್ತಿವಾದದ ಸಾರಾಂಶವು.

(1) ವೇದವಾದರೂ ಗುಣಕ್ರಿಯಾದಿಗಳಿಂದ ವಿಶಿಷ್ಟವಾದ ಅರ್ಥವನ್ನೇ ತಿಳಿಸಿಕೊಡುತ್ತದೆ. ಆದಕಾರಣ ಶಬ್ದಗಳಿಗೆ ಆಕಾಂಕ್ಷಿತವಾಗಿಯೂ, ಸನ್ನಿಹಿತವಾಗಿಯೂ, ಯೋಗ್ಯವಾಗಿಯೂ ಇರುವ ಅರ್ಥಾಂತರದಿಂದ ಕೂಡಿರುವ ಅನ್ವಿತ ಸ್ವಾರ್ಥದಲ್ಲಿಯೇ ವಾಚಕತ್ವಶಕ್ತಿಯು ಲೋಕ ವ್ಯವಹಾರದಿಂದ ನಿಶ್ಚಿತವಾಗುತ್ತದೆ. ಆದಕಾರಣ ಶಬ್ದಗಳು ಅನ್ವಿತಾರ್ಥವನ್ನೇ ಹೇಳುವವುಗಳು. (2) ಅಭಿಹಿತಾನ್ವಯ ಪಕ್ಷದಲ್ಲಿ ಕಲ್ಪನಾ ಗೌರವವು ತಪ್ಪಿದ್ದಲ್ಲ; ಹೇಗೆಂದರೆ, ಪದಗಳಾದರೂ ಮೊದಲು ಅನನ್ವಿತಗಳಾಗಿ ಅರ್ಥಗಳನ್ನು ಹೇಳುತ್ತವೆಂದು ಕಲ್ಪಿಸಬೇಕು. ಆ ಮೇಲೆ ಅಭಿಹಿತಗಳಾದ ಅರ್ಥಗಳಿಗೆ ಆಕಾಂಕ್ಷಾದಿಗಳ ವಶದಿಂದ ಪರಸ್ಪರವಾಗಿ ಅನ್ವಯಜ್ಞಾನವನ್ನು ಹುಟ್ಟಿಸುತ್ತವೆಂದು ಅದೃಷ್ಟವಾದುದನ್ನೇ ಕಲ್ಪಿಸಬೇಕು. ಹಾಗೆ ಕಲ್ಪಿಸುವುದರಿಂದ ಪದಗಳೇ ಆಕಾಂಕ್ಷಾದ್ಯನುಸಾರವಾಗಿ ಅನ್ವಿತಾರ್ಥವನ್ನು ತಿಳಿಸಿಕೊಡುತ್ತವೆಂದು ಹೇಳುವುದು ಪ್ರಶಸ್ತವು. ಪದಗಳಿಗೆ ವಾಚಕತ್ವಶಕ್ತಿಯಿಲ್ಲದೆ ವಾಕ್ಯಾರ್ಥಜ್ಞಾನ ಜನಕತ್ವವು ಕೂಡಲಾರದು. ಏಕೆಂದರೆ— ಶಕ್ತಿಯಿಲ್ಲದೆ ಬೋಧಿಸುವುದಾದರೆ 'ಘಟೋಽಸ್ತಿ' ಎನ್ನುವ ವಾಕ್ಯವು ಪಟವಿದೆ ಎಂದು ತಿಳಿಸಿಕೊಡಬೇಕಾಗುವುದು. (3) ಪದಗಳೇ ಸ್ವಾರ್ಥವನ್ನು ಮುಖ್ಯವೃತ್ತಿಯಿಂದ ತಿಳಿಸುತ್ತಾ ಅಮುಖ್ಯವೃತ್ತಿಯಿಂದ ವಾಕ್ಯಾರ್ಥವನ್ನು ತಿಳಿಸುತ್ತದೆಂದು ಕಲ್ಪಿಸುವುದಾದರೆ ಪದಗಳಿಗೇನೇ ಎರಡು ವೃತ್ತಿಯನ್ನು ಕಲ್ಪಿಸಬೇಕಾಗುವುದು. ಅಚೇತನವಾದ ಶಬ್ದಕ್ಕೆ ವಿರಮ್ಯ ವ್ಯಾಪಾರವು ಕೂಡಲಾರದು. ಆದಕಾರಣ ಶಬ್ದಗಳು ಸಾಮಾನ್ಯವಾಗಿ ಯೋಗ್ಯವಾದ ಅರ್ಥಾಂತರದಿಂದ ಅನ್ವಿತವಾದ ಸ್ವಾರ್ಥವನ್ನು ಹೇಳುವ ಶಕ್ತಿಯುಳ್ಳವುಗಳಾದಾಗ್ಯೂ ಪದಾಂತರ ಸಮಭಿವ್ಯಾಹಾರದಿಂದ ವಿಶೇಷಾನ್ವಿತಸ್ವಾರ್ಥವನ್ನು ಹೇಳುತ್ತವೆಂದು ಅಂಗೀಕರಿಸಲೇಬೇಕು. ॥ ೭೨ ॥

### ಶಕ್ತಿವಾದವು ಸಮಾಪ್ತವಾಯಿತು:—



ಹೀಗೆ ತಮ್ಮ ಮತಪ್ರಕಾರ ಪರಿಹಾರಹೇಳಿ ಈಗ * ವರ್ಣಪದಗಳೆಂಬ ವಿಭಾಗವಿಲ್ಲದಿರುವ (ಅಂದರೆ ಅಖಂಡವಾದ) ಪದಸಮೂಹರೂಪವಾಕ್ಯದಿಂದ ಅಭಿವ್ಯಂಗ್ಯವಾದ ಸ್ಫೋಟವೆನ್ನುವ ವಾಕ್ಯವೇ ವಾಕ್ಯಾರ್ಥವನ್ನು ಪ್ರತಿಪಾದಿಸುತ್ತದೆ ಎಂದು ಹೇಳುವ ವೈಯಾಕರಣರ ಮತವನ್ನು ನಿರಾಕರಿಸುತ್ತಾರೆ —

* ವರ್ಣಪದಗಳೆಂಬ ವಿಭಾಗವು ಅವಿದ್ಯೆಯಿಂದ ಕಲ್ಪಿತವಾಗಿಯೇ ತೋರುತ್ತದೆ. ವಾಕ್ಯದಲ್ಲಿರುವ ಸ್ಫೋಟಾಖ್ಯವಾದ ವಿಭುದ್ರವ್ಯವು ಪದಗಳಿಂದ ಅಭಿವ್ಯಕ್ತವಾದದ್ದು.

ಮೂ ॥ [ಅತೋಽನ್ವಿತಾಭಿಧಾಯಿತ್ವಂ] ಗೌರವಂ ಕಲ್ಪನೇಽನ್ಯಥಾ ।
ನ ಚಾಶಕ್ಯಾ(ಕ್ತ್ಯಾ)ಭಿಧಾಯಿತ್ವಂ ಪ್ರವೃತ್ತಿಶ್ಚ ದ್ವಿಧಾಽನ್ಯಥಾ ॥ ೭೩ ॥

ಅ॥ ಅನ್ಯಥಾ ಕಲ್ಪನೇ=ನಿರವಯುವವಾದ ವಾಕ್ಯವು ವಾಕ್ಯಾರ್ಥವನ್ನು ತಿಳಿಸಿಕೊಡುತ್ತದೆ ಎಂದು ಕಲ್ಪಿಸಿದರೆ, ಗೌರವಂ=ಗೌರವದೋಷವು ಅಶಕ್ಯಾ(ಕ್ತ್ಯಾ)ಭಿಧಾಯಿತ್ವಂ= ಶಕ್ತಿಗೆ ಅವಿಷಯುವಾದ ವಸ್ತುವನ್ನು ಹೇಳುತ್ತದೆನ್ನುವುದು, ನ ಚ=ಕೂಡಲಾರದು, ಅನ್ಯಥಾ= ಮೊದಲು ಪದಾರ್ಥಗಳನ್ನು ಆಮೇಲೆ ಅನ್ವಯುವನ್ನು ಪ್ರತಿಪಾದಿಸುತ್ತದೆ ಎಂದು ಹೇಳಿದರೆ ದ್ವಿಧಾ ಪ್ರವೃತ್ತಿಶ್ಚ, ಎರಡು ವ್ಯಾಪಾರವು (ಪ್ರಸಕ್ತವಾಗುತ್ತದೆ.)

ತಾ ॥ ನ್ಯಾಯಸುಧಾ— (1) ಯಾವ ವೈಯಾಕರಣರು ಅಖಂಡವಾದ ವಾಕ್ಯಸ್ಫೋಟವೇ ವಾಕ್ಯಾರ್ಥಬೋಧಕವೆಂದು ಹೇಳುತ್ತಾರೋ ಅವರ ಮತದಲ್ಲಿ ನಿರವಯುವವಾದ ಸ್ಫೋಟಾಖ್ಯವಾದ ವಾಕ್ಯವನ್ನು ಪ್ರಮಾಣವಿಲ್ಲದೇನೇ ಕಲ್ಪಿಸಬೇಕಾಗುವುದು. ಅಂತಹ ವಾಕ್ಯಕ್ಕೆ ವಾಕ್ಯಾರ್ಥವನ್ನು ತಿಳಿಸಿ ಕೊಡತಕ್ಕ ಶಕ್ತಿಯುನ್ನು ಕಲ್ಪಿಸಬೇಕಾಗುವುದು. ಆದಕಾರಣ ಗೌರವಾಖ್ಯ ದೋಷವು ತಪ್ಪಿದ್ದಲ್ಲ.

(2) ವೈಯಾಕರಣರು ಶಂಕಿಸುವರು. ಸ್ಫೋಟವೆಂದರೆ 'ಸ್ಫುಟ್ಯತೇ ಅರ್ಥಃ ಅನೇನ' ಎನ್ನುವ ವ್ಯುತ್ಪತ್ತಿಯಿಂದ ಅರ್ಥವನ್ನು ತಿಳಿಸಿಕೊಡತಕ್ಕ ಶಬ್ದವಿಶೇಷವು. ಅಂತಹ ಸ್ಫೋಟವು ೧ ಜಾತಿವರ್ಣಸ್ಫೋಟ, ೨ ವ್ಯಕ್ತಿವರ್ಣಸ್ಫೋಟ, ೩ ಜಾತಿಪದಸ್ಫೋಟ, ೪ ವ್ಯಕ್ತಿಪದಸ್ಫೋಟ, ೫ ಜಾತಿವಾಕ್ಯಸ್ಫೋಟ, 6 ವ್ಯಕ್ತಿವಾಕ್ಯಸ್ಫೋಟ, ೭ ಅಖಂಡಪದಸ್ಫೋಟ, ೮ ಅಖಂಡವಾಕ್ಯಸ್ಫೋಟ, ಹೀಗೆ ಎಂಟು ವಿಧವು. ಶಾಸ್ತ್ರಪ್ರಕ್ರಿಯೆಯುನ್ನು ನಿರ್ವಾಹ ಮಾಡತಕ್ಕದ್ದು ವರ್ಣಸ್ಫೋಟವೆನ್ನಿಸುತ್ತದೆ. ಆ ಸ್ಫೋಟಗಳಲ್ಲಿ ಅಖಂಡಪದಸ್ಫೋಟವೂ ಅಖಂಡ ವಾಕ್ಯಸ್ಫೋಟವೂ ಮುಖ್ಯವು. ಅದೇ ಲೋಕದಲ್ಲಿ ಅರ್ಥವನ್ನು ತಿಳಿಸಿಕೊಡತಕ್ಕುದು; ಅದರಿಂದಲೇ ಅರ್ಥಭೇದವು ಆಗುತ್ತದೆ. ಆದಕಾರಣ ಪದಾರ್ಥಜ್ಞಾನ, ವಾಕ್ಯಾರ್ಥಜ್ಞಾನಗಳು ಸ್ಫೋಟವನ್ನು ಒಡಂಬಡದಿದ್ದರೆ ಕೂಡದಿರುವ ಪ್ರಯುಕ್ತ ಪದಾರ್ಥ ವಾಕ್ಯಾರ್ಥಜ್ಞಾನಾನ್ಯಥಾನುಪಪತ್ತಿರೂಪ ಪ್ರಮಾಣದಿಂದ ಪ್ರಮಿತವಾಗದಿರುವ ಪ್ರಯುಕ್ತ ಸ್ಫೋಟವು ಅಪ್ರಾಮಾಣಿಕವಲ್ಲ. ಹೇಗೆಂದರೆ- ಪದಹೊರತು ವಾಕ್ಯವಿಲ್ಲವೆಂದಾದರೆ, ವರ್ಣಹೊರತು ಪದವಿಲ್ಲವೆಂದಾದರೆ ಆಗ ಅರ್ಥಜ್ಞಾನವೇ ಬಾರದೆ ಹೋಗುವುದು. ಅನುಭವವಿಲ್ಲದಿರುವುದರಿಂದ ಒಂದೊಂದು ವರ್ಣವು ಅರ್ಥಜ್ಞಾನವನ್ನು ಹುಟ್ಟಿಸುವುದಿಲ್ಲ. ಉಳಿದ ವರ್ಣಗಳು ವ್ಯರ್ಥಗಳೂ ಆಗಬೇಕಾಗುವವು. ಆ ವರ್ಣಗಳಿಗೆ ಸಮುದಾಯವೇ ಕೂಡುವುದಿಲ್ಲ. ವರ್ಣಗಳು ಅನಿತ್ಯಗಳಾಗಿರುವುದರಿಂದ ಒಂದುವರ್ಣವಿರುವಾಗ ಮತ್ತೊಂದು ವರ್ಣವಿರುವುದಿಲ್ಲ. (3) ವರ್ಣಗಳು ನಿತ್ಯಗಳೆಂದು ಇಟ್ಟುಕೊಂಡರೂ ಅವುಗಳ ಪ್ರತೀತಿಗಳು ಕ್ಷಣಿಕಗಳಾದುದರಿಂದ ಉತ್ತರೋತ್ತರ ವರ್ಣಗಳನ್ನು ಉಚ್ಚರಿಸುವ ಕಾಲದಲ್ಲಿಯೇ ಪೂರ್ವಪೂರ್ವವರ್ಣಗಳ ಪ್ರತೀತಿಯು ನಷ್ಟವಾಗಿರುವುದರಿಂದ ಅವುಗಳ ಪ್ರತೀತಿಗೆ ಮೇಲನವು ಕೂಡುವುದಿಲ್ಲ. ವರ್ಣಗಳು ಪ್ರತೀತಿಗೆ ವಿಷಯಗಳಾಗದೇನೇ ತಿಳಿಸಿಕೊಡುವುದಾದರೆ ಎಲ್ಲಾ ಪದಾರ್ಥಗಳದ್ದೂ ಪ್ರತೀತಿಯು ಬರಬೇಕಾಗುವುದು. (4) ಹಾಗಾದರೆ ಪ್ರತೀತಿಗೆ ವಿಷಯಗಳಾಗದೇನೇ ತಿಳಿಸಿಕೊಡುವುದಾದರೆ ಎಲ್ಲಾ ಪದಾರ್ಥಗಳನ್ನೂ ತಿಳಿಸಿಕೊಡಬೇಕಾದೀತು ಎನ್ನುವ ಅತಿಪ್ರಸಂಗ ಬರುವುದರಿಂದ, ಕದಾಚಿತ್ ಪ್ರತೀತಿಯುನ್ನು ಅಂಗೀಕರಿಸಬೇಕಾಯಿತು. ಅವುಗಳ ಪ್ರತೀತ್ಯನುವೃತ್ತಿಯು ಶಾಬ್ದಬೋಧಸಮಯದಲ್ಲಿಯೂ ಇದೆಎಂದು

ಏಕೆ ಅಂಗೀಕರಿಸಬೇಕೆಂದರೆ,-ಮೊದಲು ಪ್ರತೀತಿಗೆ ವಿಷಯವಾಗಿ, ಆಮೇಲೆ ಪ್ರತೀತಿಗೆ ವಿಷಯುಗಳಾಗದಿದ್ದವುಗಳಿಗೂ, ಸರ್ವಥಾ ಪ್ರತೀತಿಗೆ ವಿಷಯಗಳಾಗದಿದ್ದವುಗಳಿಗೂ ಯಾವ ವಿಶೇಷವೂ ಇಲ್ಲವಷ್ಟೆ. ಅಂತೂ ಅತಿಪ್ರಸಂಗವು ಉಂಟೇವುಂಟು. (5) ಮೊದಲು ಅನುಭೂತಗಳಾದ ವರ್ಣಗಳು ಸ್ಮೃತಗಳಾಗಿ ಅರ್ಥಜ್ಞಾನವನ್ನು ಹುಟ್ಟಿಸುತ್ತವೆಂದು ಹೇಳಕೂಡದು. ಸ್ಮೃತಿಗಳೂ ಅನುಭವಾನುಸಾರವಾಗಿ ಕ್ರಮದಿಂದಲೇ ಹುಟತಕ್ಕವುಗಳು. ಮತ್ತು ಜ್ಞಾನಗಳು ಏಕಕಾಲದಲ್ಲಿ ಹುಟ್ಟುತ್ತವೆನ್ನುವುದು ಅಯುಕ್ತವು. ಅಂದರೆ. ಜ್ಞಾನಗಳೂ ಆತ್ಮವಿಶೇಷಗುಣಗಳಾಗಿರುವುದರಿಂದ ಪೂರ್ವಪೂರ್ವಜ್ಞಾನಗಳೂ ಉತ್ತರೋತ್ತರ ಆತ್ಮವಿಶೇಷಗುಣಗಳಿಂದ ನಾಶವನ್ನು ಹೊಂದತಕ್ಕವುಗಳಾದಪ್ರಯುಕ್ತ ಕ್ಷಣಿಕಗಳಾಗಿವೆ. ಆದಕಾರಣ ಯೌಗಪದ್ಯವು ಕೂಡಲಾರದು. (6) ಪೂರ್ವಪೂರ್ವ ವರ್ಣಗಳ ಸಂಸ್ಕಾರದಿಂದ ಕೂಡಿರುವ, ಉತ್ತರೋತ್ತರ ವರ್ಣಗಳ ಅನುಭವಗಳಿಂದ ಹುಟ್ಟಿರುವ ಅತ್ಯಂತ ಸಮರ್ಥವಾದ ಸಂಸ್ಕಾರವು ಸಮಸ್ತ ವರ್ಣವಿಷಯಕವಾದ ಒಂದೇ ಸ್ಮೃತಿಯನ್ನು ಹುಟ್ಟಿಸುತ್ತದೆಂದು ಅಭಿಪ್ರೇತವಾದರೆ ಆಗ ಕ್ರಮವು ಇಲ್ಲವೆಂದಾಗಬೇಕಾಗುವುದು. ಪೌರ್ವಾಪರ್ಯರೂಪವಾದ ಕ್ರಮವು ಪ್ರತೀತಿಗೆ ಅಂಗವಾಗಿದೆ. ನಿತ್ಯಗಳಾದ ವರ್ಣಗಳಲ್ಲಿ ಕಾಲಿಕ ಕ್ರಮವನ್ನೂ ಸರ್ವಗತಗಳಾದ ವರ್ಣಗಳಲ್ಲಿ ದೈಶಿಕಕ್ರಮವನ್ನೂ ಹೇಳಲಿಕ್ಕೆ ಬರುವುದಿಲ್ಲ. ಆದಪ್ರಯುಕ್ತ, ಬುದ್ಧಿಕ್ರಮವೆಂದೇ ಹೇಳತಕ್ಕದ್ದು. ಆ ಬುದ್ಧಿಕ್ರಮವಾದರೂ ಒಂದು ಸ್ಮೃತಿಯಲ್ಲಿ ವಿಷಯಗಳಾದ ವರ್ಣಗಳಲ್ಲಿ ಕೂಡಲಾರದು. ಹೀಗೆ ಅರ್ಥಜ್ಞಾನವೇ ಕೂಡುವುದಿಲ್ಲ. (7) ಪೌರ್ವಾಪರ್ಯರೂಪ ಕ್ರಮವು ಅಂಗವಲ್ಲವೆಂದು ಇಟ್ಟುಕೊಂಡರೆ 'ಸರಃ=ಸರೋವರವು, ರಸಃ=ರಸವು' 'ನವಂ=ನೂತನವು, ವನಂ=ಅರಣ್ಯವು' 'ರಾಜಾ=ಅರಸನು, ಜಾರಾ=ವ್ಯಭಿಚಾರಿಣಿಯು', 'ನದೀ=ನದಿಯು, ದೀನಾ=ನಿರ್ಧನಳು', ಇದು ಮೊದಲಾದ ಸ್ಥಳಗಳಲ್ಲಿ ಅಕ್ಷರಸಾಮ್ಯವಿರುವುದರಿಂದ ಬೇರೆ ಬೇರೆ ಅರ್ಥಜ್ಞಾನವು ಬಾರದೆ ಹೋಗಬೇಕಾಗುವುದು. ಆದಪ್ರಯುಕ್ತ ವರ್ಣಗಳ ದೆಸೆಯಿಂದ ಬಾರದಿರುವ ಅರ್ಥಜ್ಞಾನವು ವರ್ಣಾದಿಗಳಿಂದ ಬೇರೆಯಾದ ಸ್ಫೋಟವನ್ನು ತಿಳಿಸಿಕೊಡುತ್ತದೆ. ಆ ಸ್ಫೋಟವಾದರೂ ಸ್ವರೂಪಗ್ರಾಹಕವಾದ ಪ್ರಮಾಣದಿಂದ (ಅಂದರೆ, ಸ್ಫೋಟಹೊರತು ಅರ್ಥವನ್ನು ತಿಳಿಸಿಕೊಡುವಿಕೆಯು ಕೂಡದಿರುವುದರಿಂದಲೇ ಸ್ಫೋಟವನ್ನು ಕಲ್ಪಿಸಬೇಕಾಗಿರುವುದರಿಂದ) ಅರ್ಥವನ್ನು ತಿಳಿಸಿಕೊಡತಕ್ಕ ಶಕ್ತಿಯುಳ್ಳದ್ದಾಗಿ ಅಖಂಡವಾಗಿಯೇ (ವರ್ಣ ಪದವೆನ್ನುವ ವಿಭಾಗವಿಲ್ಲದೆ ಇದ್ದದ್ದಾಗಿಯೇ) ತಿಳಿಯಲ್ಪಡುತ್ತದೆ. ಆದಪ್ರಯುಕ್ತ ನಮ್ಮ ಮತದಲ್ಲಿ ಕಲ್ಪನಾಗೌರವಾಖ್ಯ ದೋಷವಿಲ್ಲ ಎಂದಾಶಂಕಿಸಿದರೆ —

(8) ಇದು ಅಯುಕ್ತವು. ಏಕೆಂದರೆ— ಈ ಸ್ಫೋಟವು (೧) ತಾನು ಪ್ರತೀತವಾಗಿ ವಾಕ್ಯಾರ್ಥವನ್ನೂ ಪದಾರ್ಥವನ್ನೂ ತಿಳಿಸಿಕೊಡುತ್ತದೋ, (೨) ಅಥವಾ ಸ್ಫೋಟವು ಸ್ವರೂಪದಿಂದ ಅಂದರೆ ಅಪ್ರತೀತವಾಗಿ ವಾಕ್ಯಾರ್ಥ ಪದಾರ್ಥಗಳನ್ನು ತಿಳಿಸಿಕೊಡುತ್ತದೋ? (೧) ತಾನು ಪ್ರತೀತವಾಗಿ ತಿಳಿಸಿಕೊಡುತ್ತದೆ ಎನ್ನುವ ಒಂದನೇ ಕಲ್ಪದಲ್ಲಿ ಈ ಅರ್ಥಾಪತ್ತಿಯಿಂದಲೇ ಸ್ಫೋಟಜ್ಞಾನವೋ, ಅಥವಾ ಬೇರೆ ಪ್ರಮಾಣದಿಂದ ಸ್ಫೋಟಜ್ಞಾನವೋ? ಅರ್ಥಾಪತ್ತಿಯಿಂದಲೇ ಸ್ಫೋಟಜ್ಞಾನವೆಂದು ಹೇಳಕೂಡದು. ಏಕೆಂದರೆ, ಸ್ಫೋಟಜ್ಞಾನ ಬಂದರೆ ಅರ್ಥಜ್ಞಾನವು. ಅರ್ಥಜ್ಞಾನ ಬಂದರೆ ಅನ್ಯಥಾನುಪಪತ್ತಿಯಿಂದ (ಸ್ಫೋಟ ಹೊರತು ಮತ್ತೆ ಯಾವುದರಿಂದಲೂ ಕೂಡದಿರುವುದರಿಂದ) ಸ್ಫೋಟಜ್ಞಾನವು ಹೀಗೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಪ್ರಮಾಣಾಂತರದಿಂದ ಸ್ಫೋಟಜ್ಞಾನವೆಂದೂ ಹೇಳಕೂಡದು. ಅಂತಹ ಪ್ರಮಾಣವೇ ಇರುವುದಿಲ್ಲ. (9) ಹಾಗಾದರೆ— ಅನೇಕವರ್ಣಗಳಲ್ಲಿ ಇದೊಂದು ಪದವೆಂದೂ, ಅನೇಕ ಪದಗಳಲ್ಲಿ

ಇದೊಂದು ವಾಕ್ಯವೆಂದೂ, ಶಬ್ದದಿಂದ ಅರ್ಥವನ್ನು ತಿಳಿಯುತ್ತೇನೆಂದೂ, ಪ್ರತೀತವರ್ಣಾತಿರಿಕ್ತವಾದ ಅಥವಾ ಪದಾತಿರಿಕ್ತವಾದ ಒಂದು ಅರ್ಥವನ್ನು ವಿಷಯೀಕರಿಸುವ ಪ್ರತ್ಯಕ್ಷಪ್ರತೀತಿಯು ಇದೆ ಎಂದರೆ—ಈ ಪ್ರತೀತಿಯು ೧ವರ್ಣಪದವೆನ್ನುವ ವಿಭಾಗವಿಲ್ಲದಿರುವ ಒಂದಾದ ಸ್ಫೋಟಾಖ್ಯ ಶಬ್ದತತ್ವವನ್ನು ಮಾತ್ರ ವಿಷಯೀಕರಿಸುತ್ತದೋ, ಅಥವಾ ೨ ವರ್ಣಾದಿಗಳ ಭೇದವನ್ನು ವಿಷಯೀಕರಿಸುತ್ತದೋ? ೧ ನೇ ಕಲ್ಪವನ್ನು ಇಷ್ಟು ವರ್ಣಸಮೂಹರೂಪವಾದದ್ದು ಇದೊಂದು ಪದವು, ಇಷ್ಟು ಪದಗಳ ಸಮೂಹರೂಪವಾದದ್ದು ಇದೊಂದು ವಾಕ್ಯವು ಹೀಗೆ ವರ್ಣ ಪದ ಮೊದಲಾದ ವಿಭಾಗವು ಅನುಭವಸಿದ್ಧವಾಗಿರುವುದರಿಂದ ಪ್ರತೀತಿಗೇನೇ ಪ್ರಾಧಾನ್ಯವನ್ನು ಇಟ್ಟುಕೊಳ್ಳುವವನು ಸ್ಫೋಟವು ತೋರದಿರುವುದರಿಂದ ಅಂಗೀಕರಿಸಕೂಡದು. ಈ ಪ್ರತೀತಿಯು ವರ್ಣಾದಿಗಳ ಭೇದವನ್ನು ವಿಷಯೀಕರಿಸುತ್ತದೆ ಎನ್ನುವ ೨ನೇ ಕಲ್ಪದಲ್ಲಿ ವರ್ಣಾದಿಗಳು ಸ್ಫೋಟವನ್ನು ಹುಟ್ಟಿಸತಕ್ಕವುಗಳೋ, ಸ್ಫೋಟಕ್ಕೆ ವ್ಯಂಜಕಗಳೋ? ಹುಟ್ಟಿಸತಕ್ಕವುಗಳೆಂದು ಹೇಳಕೂಡದು. ಸ್ಫೋಟವು ನಿತ್ಯವೆಂದು ಅಂಗೀಕೃತವಾಗಿದೆ. ವರ್ಣಾದಿಗಳು ಸ್ಫೋಟಕ್ಕೆ ವ್ಯಂಜಕಗಳೆನ್ನುವ ಎರಡನೇ ಪಕ್ಷದಲ್ಲಿಯೂ ಅವುಗಳು ಒಂದೊಂದಾಗಿ ಸ್ಫೋಟಕ್ಕೆ ವ್ಯಂಜಕಗಳೋ, ಮಿಲಿತಗಳಾಗಿ ವ್ಯಂಜಕಗಳೋ? ಈ ಎರಡು ಕಲ್ಪದಲ್ಲಿಯೂ ಹಿಂದಿನ ದೋಷವೇ ಬರುತ್ತದೆ. (10) ಪೂರ್ವಪೂರ್ವ ವರ್ಣಾದಿಗಳ ಅನುಭವದಿಂದ ಹುಟ್ಟಿರುವ ಸಂಸ್ಕಾರದಿಂದ ಸಹಕೃತವಾದ ಅಂತ್ಯವರ್ಣವು ಅನುಭೂತವಾಗುವಾಗ ಅದರಿಂದ ಸ್ಫೋಟವು ಅಭಿವ್ಯಕ್ತವಾಗುತ್ತದೆಂದು ನೀವು ಹೇಳಿದ ದೋಷಕ್ಕೆ ಅಂತ್ಯವರ್ಣರೂಪವಾದ ಯಾವ ಪ್ರತೀಕಾರವೋ ಅದು ಅರ್ಥಜ್ಞಾನಕ್ಕೇನೇ ಕಾರಣವಾಗಲಿ. (11) ಪೂರ್ವಪೂರ್ವ ವರ್ಣಗಳಿಂದ ಅಭಿವ್ಯಕ್ತವಾದ ಸ್ಫೋಟಾಖ್ಯ ಶಬ್ದತತ್ವವು ಉತ್ತರೋತ್ತರ ವರ್ಣಗಳಿಂದ ವಿಶದವಾಗಿ ವ್ಯಕ್ತವಾಗುತ್ತದೆ. ಹೀಗೆ ಅರ್ಥದಲ್ಲಿ ಕಲ್ಪಿಸುವುದು ಯುಕ್ತವಲ್ಲ ಎಂದರೆ ಹೀಗೆ ಹೇಳಕೂಡದು. ಅಖಂಡವಾದ ಸ್ಫೋಟರೂಪವಾದ ಅರ್ಥದಲ್ಲಿ ವೈಶದ್ಯಾವೈಶದ್ಯಗಳು ಕೂಡಲಾರವು. ಸ್ಫೋಟಜ್ಞಾನದಲ್ಲಿರತಕ್ಕ ವೈಶದ್ಯಾವೈಶದ್ಯಗಳು ಅನುಭೂತಗಳಾಗುವುದಿಲ್ಲ. (12) ಹಾಗಾದರೆ ವರ್ಣಾದಿಗಳು ಅವಿದ್ಯಮಾನಗಳಾಗಿಯೇ ಸ್ಫೋಟಾಖ್ಯ ಶಬ್ದದಲ್ಲಿ ಆರೋಪಿತಗಳಾಗಿಯೇ ತೋರುತ್ತವೆ ಎಂದು ಅಭಿಪ್ರಾಯವೆಂದು ಹೇಳುವುದಾದರೆ ಅಪ್ರತೀತವಾದ ಶಶವಿಷಾಣವು ತತ್ವವು, ಗೋವು ಮೊದಲಾದವುಗಳ ಕೋಡುಗಳು ಶಶವಿಷಾಣದಲ್ಲಿ ಕಲ್ಪಿತಗಳಾಗಿಯೇ ತೋರುತ್ತವೆಂದೂ ಆಗಬೇಕಾಗುವುವು. (13) ಇದೊಂದು ಪದವು, ಇದೊಂದು ವಾಕ್ಯವು ಎಂದು ಪದಾದಿಗಳಲ್ಲಿ ಐಕ್ಯಪ್ರತೀತಿಯ ಬಲದಿಂದ ಅಂದರೆ ಪದದಲ್ಲಿ ವರ್ಣಗಳು ಅನೇಕಗಳಿವೆ, ವಾಕ್ಯದಲ್ಲಿ ಪದಗಳು ಅನೇಕವಿರುತ್ತವೆ, ಆದಪ್ರಯುಕ್ತ ಐಕ್ಯಪ್ರತ್ಯಯವು ಸ್ಫೋಟಕ್ಕೆ ಐಕ್ಯವನ್ನು ಇಟ್ಟುಕೊಳ್ಳದೆ ಕೂಡದಿರುವುದರಿಂದ ಸ್ಫೋಟರೂಪವಾದ ಒಂದು ತತ್ವವಿದೆ ಎಂದು ನಿರ್ಧರಿಸಿಕೊಳ್ಳುತ್ತೇವೆ ಎಂದರೆ ಹಾಗೆ ಹೇಳಕೂಡದು. ವರ್ಣಗಳಲ್ಲಿಯೂ ಪದಗಳಲ್ಲಿಯೂ ಬಹುತ್ವವು ಅನುಭವಸಿದ್ಧವಾಗಿರುವುದರಿಂದ ಅದರ ಸಾಮರ್ಥ್ಯವಿಂದ ಅನೇಕ ವೃಕ್ಷಗಳಲ್ಲಿ ಇದೊಂದು ವನವು ಎನ್ನುವ ಪ್ರತ್ಯಯವು ಹೇಗೆ ಏಕಸ್ಥಾನಸ್ಥಿತತ್ವರೂಪವಾದ ಉಪಾಧಿನಿಮಿತ್ತಕವೋ, ಹಾಗೆಯೇ ಐಕ್ಯಪ್ರತ್ಯಯಕ್ಕೇನೇ ಏಕಾರ್ಥಪ್ರತ್ಯಾಯಕತ್ವರೂಪವಾದ ಔಪಾಧಿಕತ್ವವು ಕೂಡುತ್ತದೆ. (14) ಹಾಗಾದರೆ ಒಂದು ಅರ್ಥವನ್ನು ತಿಳಿಸಿಕೊಡೋಣದರಿಂದ ಏಕತ್ವಪ್ರತ್ಯಯವು. ಏಕತ್ವಪ್ರತ್ಯಯದಿಂದ ಏಕಾರ್ಥಪ್ರತ್ಯಯವು ಹೀಗೆ ಅನ್ಯೋನ್ಯಾಶ್ರಯತ್ವವೆಂದು ಹೇಳಕೂಡದು. ಏಕೆಂದರೆ, ಏಕಾರ್ಥಪ್ರತ್ಯಾಯನವು ಅಂದರೆ ಒಂದು ಅರ್ಥವನ್ನು ತಿಳಿಸಿಕೊಡುವಿಕೆಯು ಪದಕ್ಕೆ ಪದಾರ್ಥದಲ್ಲಿ ಶಕ್ತಿಯನ್ನು ಗ್ರಹಿಸಿಕೊಡತಕ್ಕ ವೃದ್ಧವ್ಯವಹಾರಾದಿರೂಪ ಪ್ರಮಾಣದಿಂದಲೇ ಸಿದ್ಧವಾಗಿದೆ. (15) ಶಬ್ದಾದರ್ಥಂ ಪತ್ಯೇಮಿ=ಶಬ್ದದಿಂದ ಅರ್ಥವನ್ನು

ತಿಳಿಯುತ್ತೇನೆ ಎನ್ನುವಲ್ಲಿ ಅನ್ಯಥಾನುಪಪತ್ತಿಯಿಂದ ಸ್ಫೋಟವು ಸಿದ್ಧವಾಗಿದೆ, ಸ್ಫೋಟವಿಲ್ಲದಿದ್ದರೆ ಏಕಾರ್ಥವನ್ನು ತಿಳಿಸಿಕೊಡುತ್ತದೆನ್ನುವುದೇ ಕೂಡಲಾರದೆಂದರೆ— ಪದವು ಸ್ಫೋಟವನ್ನು ಒಡಂಬಡದೇನೇ ನಮ್ಮ ಮತದಲ್ಲಿ ಏಕಾರ್ಥವನ್ನು ತಿಳಿಸಿಕೊಡುತ್ತದೆನ್ನುವುದು ಯುಕ್ತವೇ ಆಗುತ್ತದೆ. ಹೇಗೆಂದರೆ- ಒಂದೇ ಸ್ಮೃತಿಯಲ್ಲಿ ವಿಷಯಗಳಾದವುಗಳಿಗೆ ಏಕಾರ್ಥಪ್ರತ್ಯಾಯಕತ್ವವು ಯುಕ್ತವಾಗುತ್ತದೆ (16) ಅನುಭವಗಳು ಕ್ರಮದಿಂದ ಬರತಕ್ಕವುಗಳಾದುದರಿಂದ ಅನುಭವನಿಮಿತ್ತಕವಾದ ಕ್ರಮವು ವರ್ಣಗಳಲ್ಲಿ ತೋರುವುದರಿಂದ ಅರ್ಥಭೇದಪ್ರತೀತಿಯು ಕೂಡಬಹುದು. (17) ಯದ್ಯಪಿ ವರ್ಣಗಳಲ್ಲಿ ದೈಶಿಕವಾದ ಕ್ರಮವಾಗಲೀ ಕಾಲಿಕವಾದ ಕ್ರಮವಾಗಲೀ ಕೂಡುವುದಿಲ್ಲ. ಆದಾಗ್ಯೂ ವರ್ಣಗಳಲ್ಲಿ ಬುದ್ಧಿಯ ಕ್ರಮಾನುಸಾರವಾಗಿ ಹುಟ್ಟುವ ಔಪಾಧಿಕವಾದ ಯಾವುದೋ ಒಂದು ಕ್ರಮವು ಇದೆ. ಕ್ರಮವಾದರೂ ವರ್ಣಧರ್ಮವು. ಕಾಲನಿಮಿತ್ತಕವಾದ ಕ್ರಮವನ್ನು ಅಪೇಕ್ಷಿಸಿ ದೇಶನಿಮಿತ್ತಕವಾದ ಆಯಾಯ ವಸ್ತುವಿನಲ್ಲಿರುವ ಕ್ರಮವು ವಿಲಕ್ಷಣವಾಗಿ ಅನುಭವಿಸಲ್ಪಡತಕ್ಕುದು ಪ್ರತ್ಯೇಕವಾಗಿ ಹೇಳಲಿಕ್ಕೆ ಬಾರದೆ ಇದ್ದರೂ ಕೆಲವರಿಂದ ಹೇಗೆ ಅಂಗೀಕರಿಸಲ್ಪಡುತ್ತದೋ, ಹಾಗೆಯೇ ಬುದ್ಧಿಕ್ರಮನಿಮಿತ್ತಕವಾದ ವರ್ಣಪದಾದಿಗಳಲ್ಲಿ ಇರುವ ಆನುಪೂರ್ವೀರೂಪವಾದ ಕ್ರಮವು ಶ್ರೋತ್ರದಿಂದ ಅನುಭವಿಸಲ್ಪಡತಕ್ಕುದು ವಿಶೇಷಾಕಾರವಾಗಿ ಹೇಳಲಿಕ್ಕೆ ಬಾರದಿದ್ದರೂ ಅಂಗೀಕಾರಾರ್ಹವು. ಕೆಲವರು ಆಯಾಯ ವರ್ಣಾದಿವಿಷಯಕವಾದ ಬುದ್ಧಿಕ್ರಮವೇ, ವರ್ಣಪದಾದಿಗಳ ಕ್ರಮವು ಬೇರೆಯಿಲ್ಲವೆನ್ನುತ್ತಾರೆ. (18) ಐಕ್ಯಪ್ರತೀತ್ಯನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯೂ ಕೂಡ ಅನುಭವಕ್ರಮದಿಂದುಂಟಾಗತಕ್ಕ ಕ್ರಮವುಳ್ಳ ಒಂದೇ ಸ್ಮೃತಿಯಲ್ಲಿ ವಿಷಯಗಳಾದ ವರ್ಣಾದಿಗಳಿಂದ ಅರ್ಥಜ್ಞಾನವು ಕೂಡುತ್ತದೆಂದು ಹೇಳಿದರಿಂದ ನಿರಸ್ತವಾಯಿತು (19) (೨) ಸ್ಫೋಟವು ಸ್ವರೂಪದಿಂದಲೇ ಅಂದರೆ ಅಪ್ರತೀತವಾಗಿಯೇ ಪದಾರ್ಥವಾಕ್ಯಾರ್ಥಗಳನ್ನು ತಿಳಿಸಿಕೊಡುವುದಾದರೆ ಎಲ್ಲರಿಗೂ ಶಾಬ್ದಜ್ಞಾನವು ಬರಬೇಕಾಗುವುದು. ಆದಪ್ರಯುಕ್ತ ವೈಯಾಕರಣಮತರೀತಿಯಾಗಿ ಸ್ಫೋಟವನ್ನು ಅಂಗೀಕರಿಸಿದರೆ ಗೌರವವು ಬರುತ್ತದೆಂದು ಹೇಳಿದ್ದು ಅತಿಯುಕ್ತವೇ.

ಮೀಮಾಂಸಕೈಕದೇಶಿಗಳ ಮತವನ್ನು ಅನುವಾದಮಾಡಿ ದೂಷಿಸುತ್ತಾರೆ.—

(20) ಸ್ಮರ್ಯಮಾಣವಾದ ವರ್ಣಗಳ ಪಙ್ಕ್ತಿಯೇ ವಾಕ್ಯಾರ್ಥಜ್ಞಾನವನ್ನು ಹುಟ್ಟಿಸುತ್ತದೆನ್ನುತ್ತಾರೆ. ಇದೂ ಅಯುಕ್ತವು. ಆ ವರ್ಣಗಳ ಪಙ್ಕ್ತಿಯು (೧) ವ್ಯುತ್ಪತ್ತಿಯ ಸಹಾಯದಿಂದ ವಾಕ್ಯಾರ್ಥಜ್ಞಾನವನ್ನು ಹುಟ್ಟಿಸುತ್ತದೋ? (೨) ವ್ಯುತ್ಪತ್ತಿಸಹಾಯವಿಲ್ಲದೇನೇ ವಾಕ್ಯಾರ್ಥಜ್ಞಾನವನ್ನು ಹುಟ್ಟಿಸುತ್ತದೋ? (೨) ವ್ಯುತ್ಪತ್ತಿಸಹಾಯವಿಲ್ಲದೇನೇ ಹುಟ್ಟಿಸುವುದಾದರೆ ಅವ್ಯುತ್ಪನ್ನನಿಗೂ ಅರ್ಥಜ್ಞಾನವು ಬರಬೇಕಾಗುವುದು. ೧ನೇ ಕಲ್ಪದಲ್ಲಿ ಪದಗಳನ್ನೂ, ಪದಾರ್ಥಗಳನ್ನೂ ತಿಳಿಯದಿದ್ದರೆ ವರ್ಣಮಾಲೆಗೆ ಸಹಾಯಭೂತವಾದ ವ್ಯುತ್ಪತ್ತಿಯೇ (ವಾಚ್ಯವಾಚಕಭಾವಸಂಬಂಧರೂಪವೇ) ಕೂಡದಿರುವುದರಿಂದ, ಕೇವಲವಾಗಿ ಸ್ಮರ್ಯಮಾಣವಾದ ವರ್ಣಮಾಲೆಯು ವಾಕ್ಯಾರ್ಥಜ್ಞಾನವನ್ನು ಹುಟ್ಟಿಸುತ್ತದೆನ್ನುವುದು ಕೂಡದಿರುವುದರಿಂದ, ಅದಕ್ಕಾಗಿ ವ್ಯುತ್ಪತ್ತಿರೂಪವಾದ ಸಹಾಯವನ್ನು ಒಡಂಬಟ್ಟರೆ ಪದ ಪದಾರ್ಥಗಳ ಜ್ಞಾನವನ್ನು ಆಶ್ರಯಿಸಿರುವಪ್ರಯುಕ್ತ ಅನ್ವಿತವೇ ಪದಾರ್ಥವಾಗಿರುವುದರಿಂದ, ವ್ಯುತ್ಪತ್ತಿಸಹಾಯವುಳ್ಳ ಪದದಿಂದಲೇ ವಾಕ್ಯಾರ್ಥಜ್ಞಾನವೂ ಆದಪ್ರಯುಕ್ತ ಸ್ಮರ್ಯಮಾಣವಾದ ವರ್ಣಮಾಲೆಯಿಂದ ಏನು ಪ್ರಯೋಜನವು? ಹೀಗೆ ಗೌರವವೇ? (21) ಮತ್ತು ಕ್ರಮಯುಕ್ತಗಳಾದ ಎರಡು ಮೂರು ವರ್ಣಗಳ ಅಥವಾ ಐದಾರು ವರ್ಣಗಳ ಸ್ಮರಣವು ಹುಟ್ಟುತ್ತದೆ. ಮಹಾ ವಾಕ್ಯದಲ್ಲಿರುವ ನೂರಾರು ವರ್ಣಗಳ ಅಥವಾ ಸಾವಿರಾರು

ವರ್ಣಗಳ ಸ್ಮರಣವು ಬರಲು ಸಾಧ್ಯವೇ ಇಲ್ಲ. (22) ಅಭ್ಯಾಸಕ್ಕೆ ಅಸಾಧ್ಯವಾದದ್ದು ಯಾವುದಿದೆ ಎಂದು ಹೇಳಕೂಡದು. ಬೇರೆ ಗತಿಯಿಲ್ಲದಿದ್ದರೆ ಹೀಗೆ ಆಗುತ್ತಿತ್ತು. ವಾಕ್ಯಾರ್ಥಬೋಧಕ್ಕೆ ಅನ್ವಿತದಲ್ಲಿ ಶಕ್ತಿಯಿಂದ ಯುಕ್ತವಾದ ಪದರೂಪವಾದ ಸುಖೋಪಾಯುವಿರುವಾಗ (ಅಂದರೆ, ಪದದಿಂದಲೇ ಅನ್ವಯಜ್ಞಾನರೂಪವಾದ ಉಪಾಯುವಿರುವಾಗ) ಪ್ರಯಾಸಭೂತವಾದ, ಗುರು ಭೂತವಾದದ್ದನ್ನು ಕಲ್ಪಿಸುವುದು ಯುಕ್ತವಲ್ಲ. ಈ ಅಭಿಪ್ರಾಯದಿಂದಲೂ 'ಗೌರವಂ ಕಲ್ಪ ನೇsನ್ಯಥಾ' ಎಂದು ಹೇಳಿರುವರು.

ಜರನ್ನೈಯಾಯಿಕರ ಮತವನ್ನು ಅನುವಾದಮಾಡಿ ನಿರಾಕರಿಸುತ್ತಾರೆ.—

(23) ಜರನ್ನೈಯಾಯಿಕರು ವಾಕ್ಯದ ಕೊನೆಯಲ್ಲಿರುವ ವರ್ಣವೇ ವಾಕ್ಯಾರ್ಥವನ್ನು ಪ್ರತಿಪಾದಿಸುತ್ತದೆ ಎನ್ನುತ್ತಾರೆ. ಇದೂ ಅಯುಕ್ತವು. ಹೇಗೆಂದರೆ— ೧ ಕೇವಲ ವಾಕ್ಯಾಂತ್ಯ ವರ್ಣವೇ ವಾಕ್ಯಾರ್ಥವನ್ನು ಪ್ರತಿಪಾದಿಸುವುದೋ, ೨ ಪೂರ್ವವರ್ಣದ ಶಕ್ತಿ ಸ್ಮರಣ ಇವು ಗಳಿಂದ ಯುಕ್ತವಾಗಿ ವಾಕ್ಯಾರ್ಥವನ್ನು ಪ್ರತಿಪಾದಿಸುವುದೋ? ೧ನೇ ಕಲ್ಪದಲ್ಲಿ ಪೂರ್ವಪೂರ್ವ ವರ್ಣಗಳ ಉಚ್ಚಾರಣವು ವ್ಯರ್ಥವಾಗುವುದು. ಅಲ್ಲದೆ ಅಂತ್ಯವರ್ಣವನ್ನು ಕೇಳಿದವರಿಗೆಲ್ಲರಿಗೂ ವಾಕ್ಯಾರ್ಥಜ್ಞಾನವು ಬರಬೇಕಾಗುವುದು. ೨ನೇ ಕಲ್ಪದಲ್ಲಿ ವಾಕ್ಯದ ಕೊನೆಯ ವರ್ಣವು ಅನುಭವಿಸ ಲ್ಪಟ್ಟದ್ದಾಗಿ ವಾಕ್ಯಾರ್ಥಪ್ರತಿಪಾದಕವಾಗುತ್ತದೋ, ಅಥವಾ ಸ್ಮೃತವಾಗಿ ವಾಕ್ಯಾರ್ಥಪ್ರತಿಪಾದ ಕವೋ? ಇವುಗಳಲ್ಲಿ ಒಂದನೇದ್ದು ಕೂಡಲಾರದು. ವರ್ಣಸ್ಮರಣ, ಪದವೆನ್ನುವ ಅನುಸಂಧಾನ, ಅವುಗಳ ಶಕ್ತಿಸ್ಮರಣ- ಇವುಗಳಿಂದ ಕೊನೆವರ್ಣದ ಅನುಭವವು ನಷ್ಟವಾಗಿರುವುದರಿಂದ ವಾಕ್ಯಾರ್ಥ ಜ್ಞಾನವು ಬರುವಕಾಲದಲ್ಲಿ ಅಂತ್ಯವರ್ಣದ ಅನುಭವವು ಇಲ್ಲದಿರುವುದರಿಂದ ಅನುಭೂಯಮಾನ ವಾದ ಅಂತ್ಯವರ್ಣವು ವಾಕ್ಯಾರ್ಥಪ್ರತಿಪಾದಕವಲ್ಲ. ೨ನೇ ಕಲ್ಪದಲ್ಲಿ ಪೂರ್ವವರ್ಣಗಳ ಸಂಬಂಧ ಸ್ಮರಣದಿಂದ ಯುಕ್ತವಾದ ಅಂತ್ಯವರ್ಣದ ಸ್ಮರಣವು ವಾಕ್ಯಾರ್ಥವನ್ನು ತಿಳಿಸಿಕೊಡುತ್ತದೆಂದು ಅಂಗೀಕರಿಸಿದರೆ ಗೌರವವು. ಆದಪ್ರಯುಕ್ತ ಸ್ಮೃತಿಗೆ ವಿಷಯಗಳಾದ ಅನುಭವ ಕ್ರಮದಿಂದ ಯುಕ್ತವಾದ ಕ್ರಮವುಳ್ಳ ವರ್ಣಗಳು ಪದಗಳೆಂದು ತಿಳಿಯಲ್ಪಟ್ಟರೇನೇ ವಾಕ್ಯಾರ್ಥವನ್ನು ತಿಳಿಸಿ ಕೊಡುತ್ತವೆಂದೇ ಹೇಳಬೇಕು. ಈ ಅಭಿಪ್ರಾಯದಿಂದಲೂ 'ಗೌರವಂ ಕಲ್ಪನೇsನ್ಯಥಾ' ಎಂದು ಹೇಳಿರುವರು. ಪೂರ್ವವರ್ಣಗಳ ಸಂಸ್ಕಾರವೇ ಉಪಯುಕ್ತವಾದುದು. ಸ್ಮೃತಿಯಲ್ಲ ಎಂದರೆ, ಹಾಗೆ ಹೇಳಕೂಡದು. ಹಾಗಾದರೆ ಪದಾನುಸಂಧಾನವು ಕೂಡದಿರುವುದರಿಂದ ಶಕ್ತಿಸ್ಮರಣವು ಇಲ್ಲವೆಂದಾಗಬೇಕಾಗುವುದು.

ವೈಶೇಷಿಕಾದಿಗಳ ಮತವನ್ನು ನಿರಾಕರಿಸುವುದಕ್ಕಾಗಿ ಅನುವಾದಮಾಡಿಕೊಳ್ಳುತ್ತಾರೆ.

(24) ಯಾವನು ಯಾವ ಪದಗಳನ್ನು ಪ್ರಯೋಗಿಸುತ್ತಾನೋ ಅವನು ಆ ಪದಾರ್ಥಗಳ ಸಂಬಂಧವನ್ನು ಪ್ರತಿಪಾದಿಸುವ ವಿಷಯದಲ್ಲಿ ಅಭಿಪ್ರಾಯವುಳ್ಳವನು. ಹೀಗೆ ಸಾಮಾನ್ಯವಾಗಿ ತನ್ನಲ್ಲಿ ನಿಯಮವು ಪ್ರತೀತವಾಗಲು ಆ ಮೇಲೆ ಪದ ಸಮೂಹಗಳ ಪ್ರಯೋಗದಿಂದ ಹೇಳು ವವನಿಗೆ ಆ ಪದಾರ್ಥಗಳ ಸಂಸರ್ಗವನ್ನು ಪ್ರತಿಪಾದಿಸಬೇಕೆಂಬುವ ಅಭಿಪ್ರಾಯವು ತಿಳಿಯ ಲ್ಪಟ್ಟದ್ದಾಗಿ ಪದಗಳ ಪ್ರಯೋಗಗಳಿಂದ ವಾಕ್ಯಾರ್ಥವನ್ನು ಅನುಮೇಯಿಸಬೇಕು. 'ಏತಾನಿ ವೈದಿ ಕಾನಿ ಪದಾನಿ ಸ್ವಸ್ಮಾರಿತಾರ್ಥಸಂಸರ್ಗಜ್ಞಾನಪೂರ್ವಕಾಣಿ ಆಕಾಂಕ್ಷಾದಿಮತ್ಪದಕದಂಬಕತ್ವಾತ್ ಗಾಮಾನಯ ಶುಕ್ಲಾಂ ದಂಡೇನ' ಇತ್ಯಾದಿ ಪದವತ್. ಈ ಅನುಮಾನದಿಂದ ವಕ್ತೃಪುರುಷನ ಜ್ಞಾನದಲ್ಲಿ ಸಂಸರ್ಗವು ಸಿದ್ಧವಾಗುತ್ತದೆ. ಪದಗಳು ಅನುಮಾನದ ರೀತಿಯಿಂದಲೇ ಸಂಸರ್ಗವನ್ನು ಬೋಧಿಸುತ್ತವೆ. ಅಂದರೆ, ವಾಕ್ಯಾರ್ಥವು ಶಾಬ್ದವಲ್ಲ ಎಂದು ವೈಶೇಷಿಕಾದಿಗಳು ಹೇಳುವರು. ಇದೂ ಅಯುಕ್ತವು. ಹೇಗೆಂದರೆ— ೧ ಪದಸಮುದಾಯವನ್ನು ಮಾತ್ರ ಪ್ರಯೋಗಿಸಿದರಿಂದ

ಸಂಸರ್ಗ ಜ್ಞಾನವನ್ನು ಅನುಮೇಯಿಸುವುದೋ, ೨ ಅಥವಾ ಆಕಾಂಕ್ಷಾದಿಗಳುಳ್ಳ ಪದಸಮೂಹಗಳನ್ನು ಪ್ರಯೋಗಿಸಿದರಿಂದ ಸಂಸರ್ಗ ಜ್ಞಾನವನ್ನು ಅನುಮೇಯಿಸುವುದೋ? ೧ನೇದ್ದು ಕೂಡಲಾರದು. ಆಕಾಂಕ್ಷಾದಿಗಳು ಇಲ್ಲದಿರುವ ಪದಸಮುದಾಯವನ್ನು ಪ್ರಯೋಗಿಸತಕ್ಕ ಪುರುಷನಲ್ಲಿ 'ಯಾವನು ಯಾವಪದಗಳನ್ನು ಪ್ರಯೋಗಿಸುತ್ತಾನೋ' ಎಂದು ಹೇಳಿದ ಸಾಮಾನ್ಯ ನಿಯಮಕ್ಕೆ ವ್ಯಭಿಚಾರವು. ೨ನೇ ಕಲ್ಪದಲ್ಲಿ ಆಕಾಂಕ್ಷಾದಿಗಳುಳ್ಳ ಪದಗಳಿಂದಲೇ ವಾಕ್ಯಾರ್ಥವೂ ಅವಗತವಾಗುವುದರಿಂದ, ಹೇತುವಿನ ಜ್ಞಾನಬರುವಾಗಲೇ ವಾಕ್ಯಾರ್ಥವು ತಿಳಿಯಲ್ಪಟ್ಟ ಪ್ರಯುಕ್ತ ಅದರಿಂದ ವಾಕ್ಯಾರ್ಥವನ್ನು ಅನುಮೇಯಿಸಿ, ವಾಕ್ಯಾರ್ಥಾವಚ್ಛೇದಕವಾಗಿ ಪುನಃ ಅನುಮಾನದಿಂದ ಸಂಸರ್ಗ ಜ್ಞಾನವನ್ನು ಅಂಗೀಕರಿಸಿದರೆ * ಬಕಬಂಧರೀತಿ ಪ್ರಯಾಸಕ್ಕೆ ಸಮಾನವಾದ ಪ್ರಯಾಸವು ಪ್ರಾಪ್ತವಾಯಿತು. ಈ ಅಭಿಪ್ರಾಯದಿಂದಲೂ 'ಗೌರವಂ ಕಲ್ಪನೇಽನ್ಯಥಾ' ಎಂದು ಹೇಳಿರುವರು.

ಭಟ್ಟ ಮತವನ್ನು ಅನುವಾದಮಾಡಿ ನಿರಾಕರಿಸುತ್ತಾರೆ—

(25) ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳೇ ಆಕಾಂಕ್ಷಾದಿಗಳನ್ನು ಅನುಸರಿಸಿ ಪರಸ್ಪರವಾಗಿ ಅನ್ವಯವನ್ನು ತಿಳಿಸಿಕೊಡುತ್ತವೆ ಎಂದು ಅಭಿಹಿತಾನ್ವಯವಾದಿಗಳಾದ ಭಾಟ್ಟರು ಹೇಳುತ್ತಾರೆ. ಇದೂ ಅಯುಕ್ತವು. ಅವರೂ ಪದಾರ್ಥಗಳು ಅನ್ವಯವನ್ನು ತಿಳಿಸಿಕೊಡುತ್ತವೆನ್ನುವದನ್ನು ಎಲ್ಲಿಯೂ ಕಾಣದಿದ್ದದ್ದನ್ನು ಕಲ್ಪಿಸಬೇಕು. (26) ಹಾಗಾದರೆ-'ಪಶ್ಯತಃ ಶ್ವೇತಮಾರೂಪಂ ಹೇಷಾಶಬ್ದಂ ಚ ಶೃಣ್ವತಃ। ಖುರನಿಕ್ಷೇಪಶಬ್ದಂ ಚ ಶ್ವೇತೋಽಶ್ವೋ ಧಾವತೀತಿ ಧೀಃ॥ ಕತ್ತಲೆಯಿರುವ ಪ್ರದೇಶದಲ್ಲಿ ಸ್ವಲ್ಪ ಶ್ವೇತರೂಪವನ್ನು ನೋಡುತ್ತಿರುವವನಿಗೆ ಮತ್ತು ಕುದುರೆಯ ಧ್ವನಿಯನ್ನೂ ಖುರನಿಕ್ಷೇಪಧ್ವನಿಯನ್ನೂ ಕೇಳತಕ್ಕವನಿಗೆ ಬಿಳೀಕುದುರೆಯು ಓಡುತ್ತದೆನ್ನುವ ಬುದ್ಧಿಯು ಹುಟ್ಟುತ್ತದೆ. ಇಲ್ಲಿ ಈ ಅನ್ವಯಜ್ಞಾನವು ಶ್ವೇತಾದಿ ಪದಾರ್ಥಜ್ಞಾನದಿಂದಲೇ ಉಂಟಾಗಿರುವುದರಿಂದ ಹೇಗೆ ವಾಕ್ಯವಿಲ್ಲದಿದ್ದರೂ ಪ್ರಮಾಣಾಂತರದಿಂದ ಸಿದ್ಧಗಳಾದ ಶ್ವೇತಮೊದಲಾದ ಪದಾರ್ಥಗಳಿಗೆ ಅನ್ವಯಜ್ಞಾನದಲ್ಲಿ ಕಾರಣತ್ವವು ತೋರಿಯದೋ, ಹಾಗೆಯೇ ಪದದಿಂದ ಸಿದ್ಧಗಳಾದ ಪದಾರ್ಥಗಳಿಗೆ ಅನ್ವಯಜ್ಞಾನದಲ್ಲಿ ಕಾರಣತ್ವವಿರಲಿ, ಪದಗಳಿಗ ಬೇಡವೆಂದು ಹೇಳುತ್ತೇವೆ, ಎಂದರೆ— ಹಾಗೆ ಹೇಳಕೂಡದು. ಏಕೆಂದರೆ, ಅನುಮಾನದಿಂದಾಗಲೀ ಅರ್ಥಾಪತ್ತಿಯಿಂದಾಗಲೀ ಅಲ್ಲಿ ಅನ್ವಯಜ್ಞಾನವು ಬರುತ್ತದೆ. ಕೇವಲ ಪದಾರ್ಥಜ್ಞಾನದಿಂದ ಅಲ್ಲ. ಹೇಗೆಂದರೆ— ೧ ಶ್ವೇತರೂಪ ಹೇಷಾಶಬ್ದ ಖುರನಿಕ್ಷೇಪಶಬ್ದರೂಪಗಳಾದ ಅರ್ಥಗಳು ಒಂದೇ ಅಧಿಕರಣದಲ್ಲಿದ್ದವುಗಳಾಗಿ ತಿಳಿಯಲ್ಪಟ್ಟವುಗಳು ಅನ್ವಯ ಜ್ಞಾನವನ್ನು ಹುಟ್ಟಿಸುತ್ತವೆಂದು ಹೇಳುತ್ತೀರೋ, ೨ ಅಥವಾ ಈ ಪದಾರ್ಥಗಳು ಒಂದು ಅಧಿಕರಣದಲ್ಲಿರತಕ್ಕದೆಂದು ತಿಳಿಯದೆ ಇದ್ದವುಗಳಾಗಿ ಅನ್ವಯವನ್ನು ತಿಳಿಸಿಕೊಡುತ್ತವೆಂದು ಹೇಳುತ್ತೀರೋ, ೧ನೇ ಕಲ್ಪದಲ್ಲಿ 'ಅಯಂ ಶ್ವೇತಃ ಧಾವಮಾನಾಶ್ವೋ ಭವಿತುಮರ್ಹತಿ ಹೇಷಾ ಖುರನಿಕ್ಷೇಪಶಬ್ದವತ್ವಾತ್ ಸಂಪ್ರತಿಪನ್ನ ಧಾವದಶ್ವವತ್=ಈ ಬಿಳೀ ಪ್ರಾಣಿಯು ಓಡತಕ್ಕ ಕುದುರೆಯು ಆಗಲು ಯೋಗ್ಯ

* ಬಕ ಪಕ್ಷಿಯನ್ನು ನಾನು ಹೇಗೆ ಹಿಡಿಯುವುದೆಂದು ಒಬ್ಬನು ಕೇಳಿದಾಗ ಮತ್ತೊಬ್ಬನು ಹೇಳುತ್ತಾನೆ- ಬಕವು ಬಿಸಿಲಿನಲ್ಲಿ ಕುಳಿತುಕೊಂಡು ಇರುವಾಗ ಅದರ ತಲೆಯಲ್ಲಿ ಬೆಣ್ಣೆಯನ್ನು ಇಡಬೇಕು. ಅದು ಸೂರ್ಯನ ಕಿರಣದಿಂದ ದ್ರವೀಭೂತವಾಗಿ ಹಕ್ಕಿಯ ಕಣ್ಣಿಗೆ ಪ್ರವೇಶವಾದ ಕೂಡಲೆ ಕಣ್ಣು ಮುಚ್ಚಿಹೋಗುತ್ತದೆ. ಆಗ ಈ ಬಕವನ್ನು ಬಂಧಿಸಬಹುದು. ಇದೇ ಬಕಬಂಧರೀತಿಯು. ಬೆಣ್ಣೆಯನ್ನು ತಲೆಯಲ್ಲಿ ಇಡುವಾಗಲೇ ಕೊಕ್ಕರೆಯನ್ನು ಹಿಡಿಯಲಿಕ್ಕೆ ಆಗುವುದರಿಂದ ಅವನು ಹೇಳಿದ ರೀತಿಯು ಹೇಗೆ ಪ್ರಯಾಸವೋ ಹಾಗೆಯೇ ಪ್ರಕೃತದಲ್ಲಿಯೂ ಪ್ರಯಾಸಗೌರವವು.

ಾಗಿದೆ. ಹೇಷಾಶಬ್ದವೂ ಖುರನಿಷ್ಪೇಷಶಬ್ದವೂ ಇರುವುದರಿಂದ ಸಮ್ಮತವಾದ ಓಡತಕ್ಕ ಕುದುರೆ ಯಂತೆ ಎನ್ನುವ ಅನುಮಾನದಿಂದಲೇ ಇಲ್ಲಿ ಅನ್ವಯ ಜ್ಞಾನವು ಹುಟ್ಟುತ್ತದೆ. ಕೇವಲ ಪದಾರ್ಥ ಜ್ಞಾನದಿಂದ ಅಲ್ಲ. ೨ನೇ ಕಲ್ಪದಲ್ಲಿ ಅಲ್ಲಿ ಬೇರೆ ಅರ್ಥವಿಲ್ಲವೆನ್ನುವುದು ನಿಶ್ಚಿತವಾಗಿಯದೋ ಇಲ್ಲವೋ. ಶ್ಚಿತವೆನ್ನುವ ಕಲ್ಪದಲ್ಲಿ ಕತ್ತೆಮೊದಲಾದ ಬೇರೆ ಅರ್ಥವಿಲ್ಲದಿದ್ದು ಕೇಳಲ್ಪಡತಕ್ಕ ಹೇಷಾಶಬ್ದ ಖುರ ಷ್ಪೇಷಶಬ್ದಾನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯಿಂದ ಅಲ್ಲಿಗತಕ್ಕ ಬಿಳೀ ಪ್ರಾಣಿಯು ಓಡ ಕ್ಕ ಕುದುರೆಯು ಎನ್ನುವ ಜ್ಞಾನವು ಭಾಟ್ಟರಿಗೆ ಬರುವುದು. ನಮಗಾದರೂ ಅನುಮಾನದಿಂದಲೇ ರುವುದು.' ಏತೇ ಶ್ವೇತಾದಯಃ ಪದಾರ್ಥಾಃ ಧಾವದಶ್ವಧರ್ಮಿಕಾಃ ನಿಶ್ಚಿತತದ್ಭಿನ್ನಾಶ್ರಯಾಭಾವ ತ್ವೇ ಸತ್ಯಾಶ್ರಿತತ್ವಾತ್ ಯದ್ಯತಾ ಭಿನ್ನಾಶ್ರಯಾಭಾವಕತ್ವೇನ ನಿಶ್ಚಿತಮಾಶ್ರಿತಂ ಚ ತತ್ತದಾಶ್ರಿತಂ' ಯಥಾ ಘಟತ್ವಂ = ಈ ಶ್ವೇತ ಮೊದಲಾದ ಪದಾರ್ಥಗಳು ಓಡತಕ್ಕ ಕುದುರೆಯು ಧರ್ಮಿಯಾಗಿ ಳ್ಳವುಗಳು, ನಿಶ್ಚಿತವಾದ ಅದಕ್ಕಿಂತ ಬೇರೆ ಆಶ್ರಯವಿಲ್ಲದಿದ್ದು ಆಶ್ರಿತವಾಗಿರುವುದರಿಂದ, ಯಾವುದುಯಾವುದಕ್ಕಿಂತ ಬೇರೆ ಆಶ್ರಯವಿಲ್ಲದಿದ್ದು ನಿಶ್ಚಿತವೂ ಆಶ್ರಿತವೂ ಆಗಿದೆಯೋ ಅದು ಅದನ್ನು ಶ್ರಯಿಸಿಕೊಂಡಿದೆ. ಘಟತ್ವದಂತೆ, ಎನ್ನುವ ಅನುಮಾನವು ವಿವಕ್ಷಿತವಾಗಿದೆ. ಅರ್ಥಾಂತರಾ ಾವವು ನಿಶ್ಚಿತವಾಗದಿದ್ದರೆ 'ಶ್ವೇತೋಶ್ವೋ ಧಾವತಿ' ಎನ್ನುವ ನಿಶ್ಚಯವೇ ಬರಲಾರದು. 27) ಬೇರೆ ಪ್ರಮಾಣಗಳಿಂದ ತಿಳಿಯಲ್ಪಟ್ಟ ಪದಾರ್ಥಗಳಿಗೆ ಅನ್ವಯಬೋಧಕತ್ವವು ಕಾಣ ದ್ದರೂ ಪದಗಳಿಂದ ಹೇಳಲ್ಪಟ್ಟವುಗಳಿಗೆ ಅನ್ವಯಬೋಧಕತ್ವವು ಏತಕ್ಕೆ ಬರಲಾರದೆಂದರೆ, ಾಗಾದರೆ ಪದಾರ್ಥಗಳಿಗೆ (೧) ಅನ್ವಯಬೋಧಕತ್ವ ಶಕ್ತಿಯನ್ನು ಮಾತ್ರ ಕಲ್ಪಿಸಿದ್ದಲ್ಲ. ುತ್ತೆ (೨) ಪದಗಳಿಗೆ ಪದಾರ್ಥಗಳನ್ನು ಹೇಳತಕ್ಕ ಶಕ್ತಿಯು, (೩) ಪದಾರ್ಥಗಳಲ್ಲಿ ಅನ್ವಯ ಬೋಧಕತ್ವವನ್ನು ತಂದು ಕೊಡತಕ್ಕ ಶಕ್ತಿಯು ಹೀಗೆ ೩ ಶಕ್ತಿಯನ್ನು ಕಲ್ಪಿಸಬೇಕಾಗುತ್ತದೆ. 28) ಪದಗಳಿಗೆ ಪದಾರ್ಥಗಳಲ್ಲಿ ಸಾಹಚರ್ಯಮಾತ್ರದಿಂದ ಸ್ಮಾರಕತ್ವವನ್ನು ಅಂಗೀಕರಿಸಿ ದರೂ ಪದಗಳಿಗೆ ಪದಾರ್ಥಗಳಲ್ಲಿ ಅನ್ವಯಬೋಧಕತ್ವಾಧಾನ ಶಕ್ತಿಯೂ ಪದಾರ್ಥಗಳಿಗೆ ಅನ್ವಯಬೋಧಕತ್ವಶಕ್ತಿಯೂ ಹೀಗೆ ಎರಡು ಶಕ್ತಿಯನ್ನು ಕಲ್ಪಿಸಲೇ ಬೇಕು. ಈ ಅಭಿಪ್ರಾಯ ಂದಲೂ, 'ಗೌರವಂ ಕಲ್ಪನೇಽನ್ಯಥಾ' ಎಂದು ಹೇಳಿರುವರು.

(29) ಹಾಗಾದರೆ ಅನ್ವಿತಾಭಿಧಾನವಾದಿಗಳೂ ಕೂಡ ೧ ಪದಾರ್ಥದಲ್ಲಿಯೂ, ೨ ಅನ್ವಯ ದಲ್ಲಿಯೂ ಶಕ್ತಿಯನ್ನು ಕಲ್ಪಿಸಿದರಿಂದ ಎರಡು ಶಕ್ತಿಯನ್ನು ಕಲ್ಪಿಸಬೇಕೆಂಬುವ ಗೌರವವು ಿದ್ಧಾಂತಿಗಳಿಗೂ ಸಮಾನವೇ ಎಂದರೆ— ಹಾಗೆ ಹೇಳಕೂಡದು. ಒಂದೇ ಶಕ್ತಿಯಿಂದ ಅನ್ವಿತ ಸ್ವಾರ್ಥವನ್ನೇ ಹೇಳುತ್ತದೆಂದು ಅಂಗೀಕರಿಸುತ್ತೇವೆ. (30) ಆದಾಗ್ಯೂ ಸಾಮಾನ್ಯಾನ್ವಿತಾಭಿಧಾನ ವಾದದಲ್ಲಿ, ೧ ಪದಗಳಿಗೆ ಸಾಮಾನ್ಯಾನ್ವಯದಲ್ಲಿ ಔತ್ಸರ್ಗಿಕವಾದ ಶಕ್ತಿಯೂ, ೨ ಪದಾಂತರ ಸನ್ನಿಧಾನದಿಂದ ಆಗಂತುಕವಾದ ವಿಶೇಷವಿಷಯಕವಾದ ಶಕ್ತಿಯೂ, ೩ ಪದಾಂತರದಲ್ಲಿ ವಿಶೇಷ ವಿಷಯಶಕ್ತ್ಯಾಧಾನಶಕ್ತಿಯು ಹೀಗೆ ಮೂರು ಶಕ್ತಿಗಳನ್ನು ಕಲ್ಪಿಸಬೇಕು ಎಂದರೆ— ಹಾಗೆ ಹೇಳಕೂಡದು. ಆಕಾಂಕ್ಷಿತವಾಗಿಯೂ ಸನ್ನಿಹಿತವಾಗಿಯೂ ಯೋಗ್ಯವಾಗಿಯೂ ಇರುವ ಇತರಾರ್ಥದಿಂದ ಅನ್ವಿತವಾದ ಅರ್ಥವನ್ನು ಹೇಳುವ ಒಂದು ಶಕ್ತಿಗೇನೇ ಪದಾಂತರದ ಸಮಭಿ ವ್ಯಾಹಾರಬಲದಿಂದ ವಿಶೇಷದಲ್ಲಿ ಪರ್ಯವಸಾನವಾಗುತ್ತದೆಂದು ಹೇಳಿರುವುದರಿಂದ ಮೂರು ಶಕ್ತಿಯನ್ನು ಕಲ್ಪಿಸುವುದು ಅಗತ್ಯವಿಲ್ಲ. (31) ಹಾಗಾದರೆ ಪದಸಮೂಹವನ್ನು ಕೇಳಿದಮೇಲೆ ಯಾವುದೋ ಒಂದು ವಿಷಯಾಂತರ ಸಂಚಾರರೂಪವಾದ ಮಾನಸಾಪರಾಧದಿಂದ ಪದಾರ್ಥ ಸ್ಮೃತಿಯು ಹುಟ್ಟದಿದ್ದವನಿಗೆ ವಾಕ್ಯಾರ್ಥಜ್ಞಾನವು ಬಾರದಿರುವುದರಿಂದ, ಪದಾರ್ಥಸ್ಮೃತಿಯಿದ್ದ ವನಿಗೆ ವಾಕ್ಯಾರ್ಥಜ್ಞಾನವು ಬರುವುದರಿಂದಲೂ ಅನ್ವಯವ್ಯತಿರೇಕಗಳಿಂದ, ಪದಗಳಿಂದ ಸ್ಮೃತ

ಗಳಾದ ಪದಾರ್ಥಗಳು ವಾಕ್ಯಾರ್ಥವನ್ನು ತಿಳಿಸಿಕೊಡುತ್ತವೆಂದು ನಿಶ್ಚಿತವಾಗುತ್ತವೆಂದು ಹೇಳುತ್ತೇವೆಂದರೆ— ಹಾಗೆ ಹೇಳಕೂಡದು. ಪದಸಮೂಹವನ್ನು ಕೇಳಿದ ಮೇಲೆ ಶಕ್ತಿಸ್ಮರಣವಾಗೋಣ, ಪದಾರ್ಥಸ್ಮೃತಿಯನ್ನು ಹೊರತೇ ವಾಕ್ಯಾರ್ಥಜ್ಞಾನವು ಹುಟ್ಟುವುದರಿಂದ ಅದಕ್ಕಾಗಿ ಪದಾರ್ಥಸ್ಮೃತಿಯನ್ನು ಕಲ್ಪಿಸಬೇಕಾಗಿಲ್ಲ. ಅಂತೂ ಶಕ್ತಿಸ್ಮರಣೆಯಿರುವ ಕಾಲದಲ್ಲಿ ಪದಸಮೂಹಶ್ರವಣ, ವಾಕ್ಯಾರ್ಥಜ್ಞಾನ ಇವುಗಳ ಮಧ್ಯದಲ್ಲಿ ಪದಾರ್ಥಸ್ಮೃತಿಯನ್ನೇ ಅಂಗೀಕರಿಸುವುದಿಲ್ಲ. (32) ಒಂದೊಂದು ಪದವನ್ನು ಕೇಳಿದರೆ ಪದಾರ್ಥಸ್ಮೃತಿಯೇ ಆಗುತ್ತದೆಂದರೆ, ಅಷ್ಟರಿಂದ ಪ್ರಕೃತವೇನಾಯಿತು? ಸಹಕಾರಿಯಿಲ್ಲದಿರುವಾಗ ಯಾವುದು ಕಾರ್ಯವೋ ಅದೇ ಸಹಕಾರಿಯು ಸಿಕ್ಕಿದಾಗ ಕಾರ್ಯವಲ್ಲ. ಅಂದರೆ, ಒಂದೊಂದು ಪದ ಕೇಳಿದಲ್ಲಿ ಪದಾಂತರಸಮಭಿವ್ಯಾಹಾರರೂಪ ಸಹಕಾರಿಯಿಲ್ಲದಿರುವುದರಿಂದ ಪದಾರ್ಥಸ್ಮೃತಿರೂಪ ಕಾರ್ಯವುಂಟಾದರೂ ಪದಾಂತರಸಮಭಿವ್ಯಾಹಾರರೂಪವಾದ ಸಹಕಾರಿಯಿಂದೊಡಗೂಡಿದ ವಾಕ್ಯಘಟಕಪದಗಳಿಂದಲೂ ಪದಾರ್ಥಸ್ಮೃತಿರೂಪ ಕಾರ್ಯವೇ ಆಗಬೇಕೆಂದು ಇಲ್ಲ. ಸಹಕಾರಿಯಿಲ್ಲದಿದ್ದಲ್ಲಿ ಯಾವ ಕಾರ್ಯವಾಗುತ್ತದೋ, ಸಹಕಾರಿಯಿದ್ದರೂ ಅದೇ ಕಾರ್ಯವಾಗುವುದಾದರೆ ಇಂದ್ರಿಯಸನ್ನಿಕರ್ಷಾದಿರೂಪವಾದ ಸಹಕಾರಿಯಿಲ್ಲದಿರುವಾಗ ಸಂಸ್ಕಾರವು ಕೇವಲ ಸ್ಮೃತಿಯನ್ನು ಹುಟ್ಟಿಸುವುದಾದರೂ ಇಂದ್ರಿಯಸನ್ನಿಕರ್ಷಾದಿರೂಪವಾದ ಸಹಕಾರಿಯು ಹೊಂದಿದಾಗ ಪ್ರತ್ಯಭಿಜ್ಞೆಯನ್ನು ಹುಟ್ಟಿಸದೆ ಇರಬೇಕಾಗುವುದು ಸ್ಮೃತಿಯನ್ನೇ ಹುಟ್ಟಿಸಬೇಕಾಗುವುದು. ಹಾಗಾಗುವುದಿಲ್ಲ. ಆದಕಾರಣ ಪ್ರಕೃತದಲ್ಲಿಯೂ ಪದಾಂತರಸಮಭಿವ್ಯಾಹಾರರೂಪವಾದ ಸಹಕಾರಿಯಿಲ್ಲದಿರುವಾಗ ವಾಕ್ಯವಲ್ಲದಿರುವಲ್ಲಿದ್ದ ಒಂದೊಂದು ಪದಶ್ರವಣವು ಪದಾರ್ಥಸ್ಮೃತಿಯನ್ನುಮಾತ್ರ ಹುಟ್ಟಿಸುವುದರಿಂದ ವಾಕ್ಯಾರ್ಥಜ್ಞಾನವನ್ನು ಹುಟ್ಟಿಸದೆ ಇದ್ದರೂ ಪದಾಂತರಸಮಭಿವ್ಯಾಹಾರ ರೂಪವಾದ ಸಹಕಾರಿ ಸಂಪತ್ತಾಗುವಾಗ ವಾಕ್ಯಾರ್ಥಜ್ಞಾನವನ್ನು ಹುಟ್ಟಿಸುತ್ತದೆ. ಪದಾರ್ಥಸ್ಮೃತಿಯನ್ನು ಹುಟ್ಟಿಸುವುದಿಲ್ಲ. (33) ಮತ್ತು ವಾಕ್ಯಾರ್ಥವು ಪದಾರ್ಥದಿಂದ ತಿಳಿಯಲ್ಪಡುವುದಾದರೆ ಅನುಮೇಯವಾದ ವಸ್ತುವಿನಂತೆ ಅಶಾಬ್ದವಾಗಬೇಕಾಗುವುದು. ಅಂತೂ ವಾಕ್ಯಾರ್ಥಜ್ಞಾನವು ಶಾಬ್ದಬೋಧರೂಪವಾಗದೆ ಹೋಗಬೇಕಾಗುವುದು. (34) ೧ ಪ್ರತ್ಯಕ್ಷ, ೨ ಅನುಮಾನ, ೩ ಉಪಮಾನ, ೪ ಆಗಮ, ೫ ಅರ್ಥಾಪತ್ತಿ, ೬ ಅಭಾವ— ಈ ಆರು ಪ್ರಮಾಣಗಳಿಂದಲೂ ಬೇರೆಯಾದ ಪದಾರ್ಥವೆನ್ನುವ ಒನೇ ಪ್ರಮಾಣವನ್ನು ಅಂಗೀಕರಿಸಿದರೆ ಗೌರವವೂ ಬರಬೇಕಾಗುವುದು. ಈ ಅಭಿಪ್ರಾಯದಿಂದಲೂ 'ಗೌರವಂ ಕಲ್ಪನೇಽನ್ಯಥಾ' ಎಂದು ಹೇಳಿರುವರು.

(35) ಹಾಗಾದರೆ ಎರಡು ಶಕ್ತಿಗಳನ್ನು ಕಲ್ಪಿಸಬೇಕೆನ್ನುವ ದೋಷವೂ, ಅಶಾಬ್ದತ್ವರೂಪ ದೋಷವೂ, ಪದಾರ್ಥವೆನ್ನುವ ಬೇರೆ ಒನೇ ಪ್ರಮಾಣವಾಗಬೇಕಾಗುವುದೆನ್ನುವ ದೋಷವೂ ಬರುವುದಿಲ್ಲ. ಪದಾರ್ಥಗಳನ್ನು ಪ್ರತಿಪಾದಿಸುವಿಕೆ ಎನ್ನುವ ಅವಾಂತರ ವ್ಯಾಪಾರವುಳ್ಳ ಪದಗಳೇ ಅನ್ವಯವನ್ನು ಪ್ರತಿಪಾದಿಸುತ್ತವೆಂದಂಗೀಕರಿಸಿರುತ್ತೇವೆಂದರೆ— ಪದಗಳಿಗೆ ಅರ್ಥದಲ್ಲಿ ಶಕ್ತಿಯಿದ್ದಂತೆಯೇ ಅನ್ವಯದಲ್ಲಿಯೂ ಶಕ್ತಿ ಉಂಟೋ ಇಲ್ಲವೋ? ಶಕ್ತಿಯಿಲ್ಲವೆಂದರೆ 'ನ ಚಾಶಕ್ಯಾಭಿಧಾಯಿತ್ವಂ' ಎಂದು. ಅಲ್ಲಿ ಶಕ್ತವಲ್ಲದೆ ಅದನ್ನು ಹೇಳುತ್ತದೆ ಎನ್ನುವುದು ಕೂಡಲಾರದು. ಹೇಳುತ್ತದೆ ಎನ್ನುವ ಉಕ್ತಿಯಿಂದ ಶಕ್ತಿಯೇ ಪ್ರಾಪ್ತವಾಗಿರುವುದರಿಂದ ವ್ಯಾಹತಿಯೂ, ಘಟಪದದಿಂದ ಪಟಜ್ಞಾನವೂ ಬರಬೇಕಾಗುವುದು ಎನ್ನುವ ಅತಿಪ್ರಸಂಗವೂ ಬರುವುದು. ಅಂತೂ ಅನ್ವಯದಲ್ಲಿ ಶಕ್ತಿಯಿಲ್ಲದಿದ್ದರೆ ವಾಕ್ಯಾರ್ಥವು ಶಬ್ದಬೋಧ್ಯವಲ್ಲವೆಂದೇ ಆಯಿತು. ಮತ್ತು ವಾಕ್ಯಾರ್ಥವನ್ನು ತಿಳಿಸಿಕೊಡತಕ್ಕ ಒನೇ ಪ್ರಮಾಣವನ್ನೂ ಒಪ್ಪಬೇಕಾಯಿತು. (36)

ಹಾಗಾದರೆ, ಪದಾರ್ಥಗಳಲ್ಲಿಯೂ ಅನ್ವಯದಲ್ಲಿಯೂ ಪದಗಳಿಗೆ ಶಕ್ತಿಯಿದೆ. ಹಾಗಾದರೆ ೧ ಪದಾರ್ಥಗಳನ್ನೂ, ಅನ್ವಯವನ್ನೂ ಏಕಕಾಲದಲ್ಲಿಯೇ ಪ್ರತಿಪಾದಿಸುತ್ತವೋ, ೨ ಕ್ರಮವಾಗಿಯೋ? ೧ ಏಕಕಾಲದಲ್ಲಿ ಪ್ರತಿಪಾದಿಸುತ್ತವೆ ಎಂದು ಕೂಡಲಾರದು. ಅನ್ವಿತಾಭಿಧಾನವು ಪ್ರಸಕ್ತವಾಗುವುದು. ಪದಾರ್ಥಪ್ರತಿಪಾದನಕ್ಕೆ ಅವಾಂತರವ್ಯಾಪಾರತ್ವವೂ ಕೂಡದೆ ಹೋಗಬೇಕಾಗುವುದು. ೨ನೇ (ಕ್ರಮವಾಗಿ ಎನ್ನುವ) ಕಲ್ಪದಲ್ಲಿ ದ್ವಿಧಾಪ್ರವೃತ್ತಿಯು (ವಿರಮ್ಯವ್ಯಾಪಾರವು) ಪ್ರಸಕ್ತವಾಗುವುದು. (37) ಆನೆಗೂ ಆನೆಯ ಮಾವತನಿಗೂ ಸಾಹಚರ್ಯವಿದ್ದಪ್ರಯುಕ್ತ ಒಂದನ್ನು ನೋಡಿದ ಕೂಡಲೆ ಮತ್ತೊಂದರ ಸ್ಮೃತಿಯಾಗುತ್ತದೆ. ಹೀಗೆ, ಅನ್ವಯದಲ್ಲಿ ಶಕ್ತಿವೃತ್ತಿಯಿಂದ ತಾತ್ಪರ್ಯವುಳ್ಳ ಪದಗಳು ಪದಾರ್ಥದಲ್ಲಿ ಶಕ್ತಿಯಿಲ್ಲದೆ ಇದ್ದವುಗಳಾದಾಗ್ಯೂ ಸಾಹಚರ್ಯದಿಂದ ಸ್ಮರಿಸಿಕೊಡತಕ್ಕವುಗಳಾಗಿ ಅನ್ವಯವನ್ನು ಬೋಧಿಸುತ್ತವೆ. ಆದಪ್ರಯುಕ್ತ ಎರಡಾವರ್ತಿ ಅಭಿಧಾನವಿಲ್ಲದಿರುವುದರಿಂದ ವಿರಮ್ಯವ್ಯಾಪಾರರೂಪವಾದ ದೋಷವಿಲ್ಲ ಎಂದರೆ, ಹಾಗೆ ಹೇಳಕೂಡದು. ಪದಾರ್ಥಗಳಲ್ಲಿ ಶಕ್ತಿಯಿಲ್ಲದ ಪದಗಳಿಗೆ ಕೇವಲ ಅನ್ವಯಪರತ್ವವು ಕೂಡಲಾರದು. (38) ಹಾಗಾದರೆ— ಪದಾರ್ಥಗಳನ್ನು ಹೇಳದಿರುವ ಪದಗಳಿಗೆ ಕೇವಲಾನ್ವಯಾಭಿಧಾಯಕತ್ವವಿಲ್ಲದಿರುವುದಾದರೂ ಅನ್ವಯಲಕ್ಷಕತ್ವವು ಕೂಡುತ್ತದೆ ಎಂದರೆ— ಪದಾರ್ಥಗಳಲ್ಲಿ ಸಾಹಚರ್ಯದಿಂದ ಕೇವಲ ಸ್ಮಾರಕತ್ವವು. ಅನ್ವಯದಲ್ಲಿಯಾದರೂ ಲಕ್ಷಣಾವೃತ್ತಿಯೇ. ಹೀಗೆ ಪದಗಳಿಗೆ ಎಲ್ಲಿಯೂ ಶಕ್ತಿವೃತ್ತಿಯು ಇಲ್ಲವೆಂದೇ ಆಗುವುದು. ಶಕ್ತಿಯಿಲ್ಲದಿದ್ದರೆ ಶಕ್ಯಸಂಬಂಧರೂಪವಾದ ಲಕ್ಷಣಾವೃತ್ತಿಯು ಕೂಡಲಾರದು. ಈ ಅಭಿಪ್ರಾಯದಿಂದಲೂ 'ನ ಚಾಶಕ್ತ್ಯಾಭಿಧಾಯಿತ್ವಂ' ಎಂದು ಹೇಳಿರುವರು. (39) ಸ್ಮಾರಕತ್ವವೇ ಅಭಿಧಾಯಕತ್ವವೆಂದರೆ— ಹಾಗೆ ಹೇಳಕೂಡದು. ಧೂಮಾದಿ ಪದಗಳು ಸ್ವಾರ್ಥಸಾಹಚರ್ಯದಿಂದ ವಹ್ನ್ಯಾದಿಗಳಿಗೆ ಸ್ಮಾರಕಗಳಾಗಿರುವುದರಿಂದ ವಹ್ನ್ಯಾದಿಗಳಿಗೂ ಅಭಿಧಾಯಕಗಳೆಂದಾಗಬೇಕಾಗುವುದು. ಆದಕಾರಣ ಅನ್ವಿತಸ್ವಾರ್ಥದಲ್ಲಿ ಶಕ್ತಿಯುಳ್ಳ ಪದಗಳಿಂದಲೇ ವಾಕ್ಯಾರ್ಥಜ್ಞಾನವು ಕೂಡುವುದರಿಂದ ವೇದಪ್ರಾಮಾಣ್ಯವು ಯುಕ್ತವೇ. ಹೀಗೆ ಅಭಿಹಿತಾನ್ವಯಾದಿಗಳ ಪಕ್ಷವನ್ನು ಖಂಡಿಸಿದರು. ಆದಪ್ರಯುಕ್ತ ವೇದರೂಪವಾದ ಅನುಗ್ರಾಹ್ಯಪ್ರಮಾಣವಿರುವುದರಿಂದ ಬ್ರಹ್ಮವಿಚಾರವು ಅವಶ್ಯಕರ್ತವ್ಯವೆಂದು ಸಿದ್ಧವಾಯಿತು ॥ ೭೩ ॥

**ಅತಃ ಶಬ್ದದ (ಐದುಪ್ರಕಾರ) ವ್ಯಾಖ್ಯಾನವು ಸಮಾಪ್ತವಾಯಿತು. ॥ ಶ್ರೀಃ ॥**

---

(1) ಹೀಗೆ ಬ್ರಹ್ಮಜಿಜ್ಞಾಸಾ ಕರ್ತವ್ಯತ್ವಕ್ಕೆ ಉಪಯುಕ್ತಗಳಾದ ಯುಕ್ತಿ (೧ ಮೋಕ್ಷಜನಕಪ್ರಸಾದಕಾರಣವಾದ ಜ್ಞಾನೋತ್ಪಾದಕತ್ವ, ೨ ಬಂಧಸತ್ಯತ್ವ, ೩ ವೇದಕ್ಕೆ ಸಿದ್ಧಾರ್ಥಪರತ್ವ, ೪ ವೇದಕ್ಕೆ ಪ್ರಾಮಾಣ್ಯ, ೫ ಶಬ್ದಗಳಿಗೆ ಅನ್ವಿತಾಭಿಧಾಯಿತ್ವ) ಗಳನ್ನು ಅತಃ ಶಬ್ದದ ಅರ್ಥಗಳೆಂದು ವ್ಯಾಖ್ಯಾನ ಮಾಡಿರುವರು. ಹಾಗೆ ವ್ಯಾಖ್ಯಾನ ಮಾಡಿರುವುದರಿಂದ ಅಧಿಕಾರ ಪ್ರಾಪ್ತಿಯಾದಮೇಲೆ ಎಂಬುವ 'ಅಥ' ಶಬ್ದಾರ್ಥವನ್ನೇ, ಅಧಿಕಾರ್ಯಾದಿ ಸಂಪತ್ತು ಇದ್ದಪ್ರಯುಕ್ತ ಎಂದು ಅತಃ ಎನ್ನುವ ಶಬ್ದದಿಂದ ಹೇತುವಾಗಿ ವ್ಯಾಖ್ಯಾನ ಮಾಡಿದ ವೃತ್ತಿಕಾರಾದಿಗಳಂತೆಯೇ ನಮಗೆ ಪುನರುಕ್ತಿದೋಷವಿರುವುದಿಲ್ಲವೆಂದು ಉಕ್ತವಾಯಿತು. ಹೇಗೆಂದರೆ, ಅಥಶಬ್ದವು ಅಧಿಕಾರಾನಂತರ್ಯರೂಪವಾದ ಅರ್ಥವನ್ನು ಹೇಳತಕ್ಕದು. ಶಮದಮಾದಿರೂಪವಾದ ಅಧಿಕಾರವನ್ನು ಹೇತುವೆಂದೇ ತಿಳಿಸುತ್ತದೆ. ಕಾರಣವಾಗದಿರುವುದರ ಆನಂತರ್ಯವು ನಿಷ್ಫಲವು. ಆದಕಾರಣ ಕಾರಣಾನಂತರ್ಯವನ್ನೇ ಹೇಳಬೇಕಾಗಿರುವುದರಿಂದ ಅಥಶಬ್ದದಿಂದಲೇ ಪ್ರಕೃತವಾದ

ಅಧಿಕಾರಕ್ಕೆ ಹೇತುತ್ವವು ಸಿದ್ಧಿಸುವ ಪ್ರಯುಕ್ತ ಆ ಪ್ರಕೃತವಾದ ಅಧಿಕಾರಕ್ಕೇನೇ ಹೇತುತ್ವವನ್ನು ಹೇಳುವುದಕ್ಕಾಗಿ ಅತಃ ಶಬ್ದವು ಬೇಕಾಗಿಲ್ಲ. (2) ಹಾಗಾದರೆ ಅಥಶಬ್ದಕ್ಕೆ ಹೇತುತ್ವವು ಆರ್ಥಿಕಾರ್ಥವು. ವಾಚ್ಯಾರ್ಥವಲ್ಲ ಎಂದರೆ— ಸತ್ಯವೇ. ಆದಾಗ್ಯೂ ಆರ್ಥಿಕಾರ್ಥದಲ್ಲಿ ತಾತ್ಪರ್ಯವಿರುವುದು. ತಾತ್ಪರ್ಯವಿಷಯೀಭೂತವಾದ ಅರ್ಥವೇ ವಾಕ್ಯಾರ್ಥದಲ್ಲಿ ಅನ್ವಯವನ್ನು ಹೊಂದುತ್ತದೆ. (3) ಪೂರ್ವಮೀಮಾಂಸಾ ವ್ಯಾಖ್ಯಾತೃಗಳೂ ಕೂಡ ಹೀಗೆಯೇ 'ಅಥಾತೋ ಧರ್ಮಜಿಜ್ಞಾಸಾ=ಅಥ=ಗುರುಕುಲದಲ್ಲಿ ಆವಾಸವಮಾಡುತ್ತಾ ವೇದಾಧ್ಯಯನವನ್ನು ಮಾಡಿದಮೇಲೆ,ಅತಃ=ಅಧ್ಯಯನವು ನಿವೃತ್ತವಾಗಿರುವುದರಿಂದ ವೃತ್ತವಾದ ಅಧ್ಯಯನಕ್ಕೆ ದೃಷ್ಟವಾದ ಫಲವಿದ್ದಪ್ರಯುಕ್ತ, ಧರ್ಮಜಿಜ್ಞಾಸಾ=ಧರ್ಮವಿಷಯಕವಿಚಾರವು ಮಾಡತಕ್ಕದು ಎನ್ನುವಲ್ಲಿ ಅಥಶಬ್ದದಿಂದ ಹೇಳಿದ ಅರ್ಥವನ್ನೇ ಅತಃ ಶಬ್ದವು ಹೇತುವನ್ನಾಗಿ ಹೇಳುತ್ತದೆ ಎಂದೇ ವ್ಯಾಖ್ಯಾನಮಾಡಿರುವರು; ಎಂದರೆ— ಅದರಿಂದ ಪ್ರಕೃತಕ್ಕೆ ಏನಾಯಿತು? ಮತ್ತೊಬ್ಬನ ಅಂಗವು ಸುಟ್ಟದೆ ಎಂಬುವುದರಿಂದ ತನ್ನ ಅಂಗವು ಸುಟ್ಟುದರಿಂದ ಆಗುವ ದುಃಖವು ಹೇಗೆ ಹೊರಟುಹೋಗಲಾರದೋ, ಹಾಗೆಯೇ ಪೂರ್ವಮೀಮಾಂಸಾವ್ಯಾಖ್ಯಾನವಮಾಡಿದವರು ಅಪದ್ಧ ವ್ಯಾಖ್ಯಾನ ಮಾಡಿದ್ದಾರೆ ಎಂಬುವುದರಿಂದ ನಿಮ್ಮ ಅಪದ್ಧವ್ಯಾಖ್ಯಾನವು ಸರಿಯಾಗಲಾರದಷ್ಟೆ. (4) ನಮ್ಮ ಮತದಲ್ಲಿ ಆದರೂ ಈ ಪುನರುಕ್ತಿ ದೋಷವಿರುವುದಿಲ್ಲ. ಹೇಗೆಂದರೆ— ಅಥ ಶಬ್ದವು ಜಿಜ್ಞಾಸಾಕ್ಕೆ ಕಾರಣವಾದ ಅಧಿಕಾರಿಯುಲ್ಲಿರತಕ್ಕ ಧರ್ಮವನ್ನು ಅನಧಿಕಾರಿತ್ವಶಂಕೆಯನ್ನು ನಿರಾಕರಿಸುವುದಕ್ಕಾಗಿ ಅನುವಾದಮಾಡುತ್ತದೆ. ಅತಃ ಶಬ್ದದಿಂದಲಾದರೂ ವಿಷಯ ಪ್ರಯೋಜನಗಳ ಸಿದ್ಧಿಗೆ ಅಂಗಭೂತವಾದ ಐದು ನ್ಯಾಯಗಳನ್ನು ಸೂತ್ರಕಾರರು ತಾನೇ ಹೇಳಿರುತ್ತಾರೆ. ಆದಪ್ರಯುಕ್ತ ಪುನರುಕ್ತಿಯಿಲ್ಲ. ಅಂದರೆ, ಅತಃ ಪದಕ್ಕೆ ೧ ಮುಕ್ತಿಗೆ ಕಾರಣವಾದಪ್ರಸಾದವನ್ನು ಹುಟ್ಟಿಸುವ ಜ್ಞಾನಕಾರಣತ್ವವಿದ್ದಪ್ರಯುಕ್ತ, ೨ ಬಂಧಕ್ಕೆ ಸತ್ಯತ್ವವಿದ್ದಪ್ರಯುಕ್ತ, ೩ ವೇದಕ್ಕೆ ಸಿದ್ಧಾರ್ಥಪರತ್ವವಿದ್ದಪ್ರಯುಕ್ತ, ೪ ವೇದಕ್ಕೆ ಪ್ರಾಮಾಣ್ಯವಿದ್ದಪ್ರಯುಕ್ತ, ೫ ಅನ್ವಿತಾರ್ಥಾಭಿಧಾಯಕತ್ವವಿದ್ದಪ್ರಯುಕ್ತ— ಹೀಗೆ ಐದು ಯುಕ್ತಿಪರವಾಗಿ ಅತಃ ಶಬ್ದವು ವ್ಯಾಖ್ಯಾತವಾಗಿದೆ. ಅವುಗಳಲ್ಲಿ ಪ್ರಾಥಮಿಕ ಎರಡು ಪ್ರಯೋಜನಸಿದ್ಧಿಗೆ ಅಂಗವಾದುದು ಅಂತಿಮ ಮೂರು ವಿಷಯಸಿದ್ಧಿಗೆ ಅಂಗವಾದುದು. ಹೀಗೆ ವಿಷಯಪ್ರಯೋಜನಗಳ ಸಿದ್ಧಿಗೆ ಅಂಗಭೂತವಾದ ಅಥ ಶಬ್ದದಿಂದ ಹೇಳಿರುವ ನ್ಯಾಯಗಳ ಸಮೂಹವನ್ನು ಸೂತ್ರಕಾರರು ತಾನೇ ಹೇಳಿರುವರು. ಆದುದರಿಂದ ಪೌನರುಕ್ತ್ಯವಿಲ್ಲ. (5) ಪುನರುಕ್ತಿಭಯದಿಂದಲೇ 'ಅಥಾತಃ' ಎನ್ನುವುದೊಂದೇ ಪದವೆಂದು ಯಾರು ಅಂಗೀಕರಿಸಿರುವರೋ ಅವರೂ ಕೂಡ ನಾವು ಹೇಳಿದ ರೀತಿಯಾಗಿ ಭಿನ್ನಪದವೆಂದು ಇಟ್ಟುಕೊಂಡರೂ ಪುನರುಕ್ತಿಯಿಲ್ಲದಿರುವುದರಿಂದ ನಿರಸ್ತರಾದರು.

(6) (ರಾಮಾನುಜಪ್ರಕ್ರಿಯೆಯನ್ನು ಅನುಸರಿಸಿ ಶಂಕಿಸುತ್ತಾರೆ) ಹಾಗಾದರೆ, ವೇದ ಪ್ರಾಮಾಣ್ಯಾದಿಗಳನ್ನು ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಉಪಪಾದಿಸಿರುವರು. ಆದಪ್ರಯುಕ್ತ ಪುನಃ ಇಲ್ಲಿ ಸೂತ್ರಕಾರರು ಅತಃ ಶಬ್ದದಿಂದ ಹೇಳಲಿಕ್ಕೆ ಕಾರಣವೇನು? ಎಂದರೆ— ಹಾಗೆ ಹೇಳಕೂಡದು. ರಾಮಾನುಜಾಚಾರ್ಯರು ಪೂರ್ವಮೀಮಾಂಸಾ ಶಾಸ್ತ್ರ (ಅಧ್ಯಾ. ೧೨) ದೇವಮೀಮಾಂಸಾ(ಅಧ್ಯಾ. ೪) ಬ್ರಹ್ಮಮೀಮಾಂಸಾ(ಅಧ್ಯಾ. ೪) ಕೂಡಿ ೨೦ ಅಧ್ಯಾಯಾತ್ಮಕವಾದುದು ಒಂದೇ ಶಾಸ್ತ್ರವೆಂದು ಒಪ್ಪಿಕೊಂಡು ಪೂರ್ವಮೀಮಾಂಸಾ ಶಾಸ್ತ್ರಕ್ಕೂ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೂ ಉಪಜೀವ್ಯ ಉಪಜೀವಕ ಭಾವವನ್ನು ಒಪ್ಪಿದಂತೆ ನಾವು ಈ ಬ್ರಹ್ಮಮೀಮಾಂಸಾ ಶಾಸ್ತ್ರವು ಪೂರ್ವಮೀಮಾಂಸಾ ಶಾಸ್ತ್ರವನ್ನು ಉಪಜೀವಿಸಿಕೊಂಡು ಹೊರಟದೆ ಎಂದು

ಹೇಳುವುದಿಲ್ಲ. ಮತ್ತೆ ಈ ಬ್ರಹ್ಮಮೀಮಾಂಸಾ ಶಾಸ್ತ್ರವನ್ನೇಉಪಜೀವಿಸಿಕೊಂಡು ಪೂರ್ವಮೀಮಾಂಸಾಶಾಸ್ತ್ರವು ಹೊರಟಿದೆ ಎಂದು ಒಪ್ಪಿರುತ್ತೇವೆ. ಮತ್ತು ಈ ವಿಷಯವು "ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ" ಎಲ್ಲಾ ಶಬ್ದಸಮೂಹಗಳಿಂದ ಮಾಡಲ್ಪಡತಕ್ಕ ನಿರ್ಣಯವು ಬ್ರಹ್ಮಸೂತ್ರಮೂಲಕವು ಎಂದು ಸ್ಕಾಂದ ಪುರಾಣದಲ್ಲಿ ಶಬ್ದಸಮೂಹವು ಬ್ರಹ್ಮಸೂತ್ರವನ್ನು ಉಪಜೀವಿಸಿಕೊಂಡು ಹೊರಟಿದೆ ಎಂದು ಹೇಳಿಯದೆ. (7) ಹಾಗಾದರೆ—'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' (ಅಧ್ಯಾ.೨. ಪಾ.೧. ಅಧಿ.೨.) ಅಸ್ಯ=ಶ್ರುತಿ ಪಂಚರಾತ್ರಸ್ಮೃತಿರೂಪ ಶಾಸ್ತ್ರಕ್ಕೆ, ತಥಾತ್ವಂ=ಪಾಶುಪತಾದಿಗಳಂತೆಯೇ ಅಪ್ರಾಮಾಣ್ಯವು, ನ=ಇರುವುದಿಲ್ಲ. ವಿಲಕ್ಷಣತ್ವಾತ್=ಶ್ರುತಿಯು ಅಪೌರುಷೇಯವಾಗಿರುವುದರಿಂದಲೂ ಸ್ಮೃತಿಯು ಶ್ರುತ್ಯನುಸಾರಿಯಾಗಿರುವುದರಿಂದಲೂ ಪಾಶುಪತಾದಿಗಳಿಂದ ವೈಲಕ್ಷಣ್ಯವಿದೆ. ತಥಾತ್ವಂ ಚ=ಶ್ರುತಿಗೆ ಅಪೌರುಷೇಯತ್ವವೂ, ಸ್ಮೃತಿಗೆ ಶ್ರುತ್ಯನುಸಾರಿತ್ವವೂ, ಶಬ್ದಾತ್=ವಾಚಾ ವಿರೂಪ ನಿತ್ಯಯಾ, ಇತ್ಯಾದಿ ಶ್ರುತಿಯಿಂದಲೂ, 'ಭಾರತಂ ಪಂಚರಾತ್ರಂ ಚ' ಇತ್ಯಾದಿ ಸ್ಮೃತಿಯಿಂದಲೂ ಸಿದ್ಧವಾಗಿದೆ. ಇತ್ಯಾದಿಗಳಿಂದ ವೇದಪ್ರಾಮಾಣ್ಯಾದಿಗಳನ್ನು ಈ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಸಮರ್ಥಿಸುವ ಪ್ರಯುಕ್ತ ಅವುಗಳನ್ನೇ ಅತಃ ಶಬ್ದದಿಂದ ಹೇಳಿದ್ದು ಸರಿಯಲ್ಲ, ಎಂದರೆ— ಹಾಗೆ ಹೇಳಕೂಡದು. ಇಲ್ಲಿ ಸಂಕ್ಷೇಪದಿಂದ ಹೇಳಿದ್ದನ್ನೇ ಅಲ್ಲಿ ವಿಸ್ತಾರವಾಗಿ ಹೇಳುವರು. (8) ಕೆಲವು ಕಡೆ ವೇದವಚನಗಳಿಗೆ ಪರಸ್ಪರ ವಿರೋಧವನ್ನು ಪರಿಹರಿಸಿ ಪ್ರಾಮಾಣ್ಯವನ್ನು ಸಮರ್ಥಿಸುವರು. ಅದು ಅರ್ಥನಿರ್ಧಾರಣದಲ್ಲಿ ತಾತ್ಪರ್ಯವುಳ್ಳದ್ದು. ಇದೇ ಅಭಿಪ್ರಾಯವನ್ನು ಮುಂದೆ ಹೇಳುವರು. "ಅಥಾಶೇಷಸಮಾಮ್ನಾಯ ವಿರೋಧಾಪಾಕೃತಿಂ ಪ್ರಭುಃ। ಕರಿಷ್ಯನ್ನಧಿಸ್ಮೈವಾಧಿಭೂತಜೀವ ಪರಾತ್ಮನಾಂ ॥ ಸ್ವರೂಪನಿರ್ಣಯಾಯೈವ ವಚನಾನಾಂ ಪರಸ್ಪರಂ। ಪಾದೇನಾನೇನಾವಿರೋಧಂ ದರ್ಶಯತ್ಯಮಿತದ್ಯುತಿಃ ॥ (ಅಧ್ಯಾ.೨. ಪಾ.೩. ಶ್ಲೋ.೧.೨.) ಶ್ರುತ್ಯರ್ಥಃ ಶ್ರುತಿಯುಕ್ತಿಭ್ಯಾಂ ವಿರುದ್ಧ ಇವ ದೃಶ್ಯತೇ। ಯತ್ರತನ್ನಿರ್ಣಯಂ ದೇವಃ ಸುವಿಶಿಷ್ಟೋಪಪತ್ತಿಭಿಃ ॥ ಕರೋತಿ" ॥ (ಅಧ್ಯಾ.೨. ಪಾ.೪. ಶ್ಲೋ.೧) ಎಂದು. (9) ಆದಾಗ್ಯೂ ಕಾರ್ಯಪರತ್ವನಿರಾಕರಣವು ಅತಃ ಶಬ್ದಾರ್ಥವಲ್ಲ. ಅದನ್ನು ತತ್ತು ಸಮನ್ವಯಾತ್ (ಅಧಿ. ೪) ಎನ್ನುವಲ್ಲಿ ನಿರಾಕರಿಸುವರು. ಎಂದರೆ ಹಾಗೆ ಹೇಳಕೂಡದು. ಅಲ್ಲಿ ಜಗಜ್ಜನ್ಮಾದಿಗಳಿಗೆ ಕಾರಣವಾಗಿ ಸರ್ವಶಾಸ್ತ್ರಪ್ರತಿಪಾದ್ಯನು ಪರಬ್ರಹ್ಮನೇ. ರುದ್ರಾದಿಗಳಲ್ಲವೆಂದು ಸಮರ್ಥಿಸುವರು. ಕಾರ್ಯವಾದಿಗಳು ಕಾರ್ಯವು ಜಗಜ್ಜನ್ಮಾದಿಕಾರಣವಾಗಿ ಶಾಸ್ತ್ರಪ್ರತಿಪಾದ್ಯವೆಂದು ಅಂಗೀಕರಿಸುವುದಿಲ್ಲವಷ್ಟೆ. ಆದಕಾರಣ 'ತತ್ತು ಸಮನ್ವಯಾತ್' ಎನ್ನುವಲ್ಲಿ ವೇದಕ್ಕೆ ಕಾರ್ಯಪರತ್ವವನ್ನು ನಿರಾಕರಿಸುತ್ತಾರೆಂದು ನಾವು ಹೇಳುವುದಿಲ್ಲ. (10) ಆದಾಗ್ಯೂ ವೇದಪ್ರಾಮಾಣ್ಯಾದಿಗಳು ಅತಃ ಶಬ್ದಾರ್ಥವೆಂದು ಹೇಳಿದ್ದು ಕೂಡುವುದಿಲ್ಲ. ಏಕೆಂದರೆ—ಅತಃ ಶಬ್ದವು ಪ್ರಕೃತಕ್ಕೆ ಹೇತುತ್ವವನ್ನು ಹೇಳುತ್ತದೆ. ವೇದಪ್ರಾಮಾಣ್ಯಾದಿಗಳನ್ನೇ ಸಾಕ್ಷಾತ್ ಹೇಳುವುದಿಲ್ಲ. ವೇದಪ್ರಾಮಾಣ್ಯಾದಿಗಳು ಪ್ರಕೃತವೇ ಆಗಲಿಲ್ಲ. ಇದೇ ಮೊದಲಿನ ವಾಕ್ಯವು. ಪೂರ್ವಮೀಮಾಂಸಾದಲ್ಲಿ ಪ್ರಕೃತವಾದುದನ್ನು ಉಪಜೀವಿಸಿಕೊಂಡು ಈ ಶಾಸ್ತ್ರವು ಹೊರಟಿದೆ ಎಂದು ನಾವು ಒಪ್ಪುವುದಿಲ್ಲ. ಮತ್ತು ಕಾರ್ಯನಿರಾಕರಣವು ಪೂರ್ವಮೀಮಾಂಸಾದಲ್ಲಿ ಪ್ರಕೃತವಾಗಲಿಲ್ಲ. ಆದಕಾರಣ ಇವುಗಳು ಅತಃ ಶಬ್ದದ ಅರ್ಥಗಳೆಂದು ವ್ಯಾಖ್ಯಾನವು ಹೇಗೆ ಕೂಡುತ್ತದೆ? ಸೂತ್ರದಲ್ಲಿ ಹೇಳದೆ ಇದ್ದುದನ್ನು ಹೇಳಿದರೆ ಭಾಷ್ಯವೇ ಆಗದೆ ಹೋಗುವುದು. (11) ಮತ್ತು ಈ ಅರ್ಥಗಳು ಬ್ರಹ್ಮಜಿಜ್ಞಾಸಾವನ್ನು ಮಾಡಬೇಕೆನ್ನುವಲ್ಲಿ ಅತ್ಯಂತ ಉಪಯುಕ್ತಗಳು. ಇವುಗಳನ್ನು ಪೂರ್ವಮೀಮಾಂಸಾಕಾರರು ಹೇಳಿದಂತೆಯೇ ವಿಸ್ತಾರ

ವಾಗಿಯೇ ಸೂತ್ರಕಾರರೇ ಹೇಳಬೇಕಾದದ್ದು. ಅತಃ ಎಂದೇ ಸಂಕ್ಷೇಪದಿಂದಲೇ ಏತಕ್ಕೆ ಹೇಳಿದರು? ಎಂಬುವ ಎರಡು (೧ ವೇದಪ್ರಾಮಾಣ್ಯಾದಿಗಳು ಪ್ರಕೃತವಲ್ಲ. ೨ ಇವುಗಳನ್ನು ವಿಸ್ತಾರವಾಗಿ ಹೇಳಬೇಕಿದ್ದಿತು. ಅತಃ ಎಂದು ಸಂಕ್ಷೇಪದಿಂದ ಹೇಳಿದ್ದು ಸರಿಯಲ್ಲ. ಈ ಎರಡು) ಆಶಂಕೆಗಳನ್ನು ಪರಿಹರಿಸುತ್ತಾರೆ—

**ಮೂ || ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ |**
**ಉಕ್ತಂ ವಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಂ || ೭೪ ||**

ಅ || ಹಿ=ಯಾವ ಕಾರಣದಿಂದ, ಏತತ್ ಸರ್ವಂ=ಈ ಎಲ್ಲಾ ವಿಷಯವು, ಬ್ರಹ್ಮತರ್ಕೇ=ಬ್ರಹ್ಮತರ್ಕವೆಂದು ಹೆಸರುಳ್ಳ, ತರ್ಕಶಾಸ್ತ್ರೇ=ತರ್ಕಶಾಸ್ತ್ರದಲ್ಲಿ, ವಿಸ್ತರಾತ್=ವಿಸ್ತರವಾಗಿ, ಉಕ್ತಂ=ಹೇಳಲ್ಪಟ್ಟದೋ, (ಆದಕಾರಣ) ಅತ್ರ ತು=ಈ ಪ್ರಮೇಯ ಮೀಮಾಂಸೋಪಕ್ರಮದಲ್ಲಿ ಆದರೂ, ವಿದ್ಯಾ ಪೃಥಕ್ತ್ವಾತ್ತು=ತರ್ಕ ಶಾಸ್ತ್ರಕ್ಕೂ ಈ ಮೀಮಾಂಸಾ ಶಾಸ್ತ್ರಕ್ಕೂ, ವಿದ್ಯಾಂತರತ್ವವಿದ್ದುದರಿಂದ, ಸಂಕ್ಷೇಪೇಣ = 'ಅತಃ' ಎನ್ನುವುದರಿಂದ ಸಂಕ್ಷೇಪವಾಗಿ, ಸೂಚಿತಂ=ಸೂಚಿಸಲ್ಪಟ್ಟಿದೆ.

ತಾ || ನ್ಯಾಯಸುಧಾ— (1) ಬ್ರಹ್ಮತರ್ಕದಲ್ಲಿ ವಿಸ್ತರವಾಗಿ ಹೇಳಿರುತ್ತದೆ. ಇಲ್ಲಿ 'ಅತಃ' ಎಂದು ಸಂಕ್ಷೇಪದಿಂದ ಸೂಚಿತವಾಯಿತು ಎನ್ನುವುದರಿಂದ ಎರಡು ಶಂಕೆಗಳೂ ಪರಿಹೃತಗಳಾದುವು. ಈ ಶಾಸ್ತ್ರಕ್ಕೆ ಉಪಜೀವ್ಯವಾದ ಬ್ರಹ್ಮತರ್ಕದಲ್ಲಿ ಹೇಳಿರುವುದರಿಂದ ಪ್ರಕೃತವಾಗಿರುವ ಪ್ರಯುಕ್ತ 'ಅತಃ' ಎನ್ನುವ ಶಬ್ದದಿಂದ ಪರಾಮರ್ಶವು ಯುಕ್ತವಾಗುತ್ತದೆ. ಅಲ್ಲಿಯೇ ವಿಸ್ತರವಾಗಿ ಹೇಳಿರುವುದರಿಂದ ಇಲ್ಲಿ ಸಂಕ್ಷೇಪಮಾಡಿದ್ದೂ ಕೂಡುತ್ತದೆ. (2) ಗ್ರಂಥಾಂತರದಲ್ಲಿ ಹೇಳಿದ್ದರಿಂದ ಇಲ್ಲಿಗೆ ಪ್ರಕೃತತ್ವವು ಹೇಗೆ? ಹಾಗಿದ್ದರೆ ಪೂರ್ವ ಮೀಮಾಂಸಾ ಶಾಸ್ತ್ರದಲ್ಲಿ ಹೇಳಿದ್ದಕ್ಕೆ ಇಲ್ಲಿ ಪರಾಮರ್ಶವೆಂದು ಏಕೆ ಒಪ್ಪಬಾರದು ಎಂದರೆ 'ತರ್ಕಶಾಸ್ತ್ರೇ' ಎಂದು ಹೇಳಿರುವರು. ತರ್ಕಶಾಸ್ತ್ರವು ಮೀಮಾಂಸಾಶಾಸ್ತ್ರಕ್ಕೆ ಅಂಗವೆಂದು ಹೇಳುವರು. (3) ಬ್ರಹ್ಮತರ್ಕದಲ್ಲಿ ವಿಸ್ತರವಾಗಿ ಹೇಳಿದ್ದು ಇಲ್ಲಿ ಸಂಕ್ಷೇಪಮಾಡಲಿಕ್ಕೆ ಉಪಪಾದಕವು ನಿಯಾಮಕವಲ್ಲ. ಬ್ರಹ್ಮತರ್ಕದಲ್ಲಿ ವಿಸ್ತರವಾಗಿ ಹೇಳಿದ್ದನ್ನು ಇಲ್ಲಿಯೂ ವಿಸ್ತರವಾಗಿ ಹೇಳಿದರೆ ಬಾಧಕವಿಲ್ಲವು. ಪ್ರಸ್ಥಾನಗಳು ಬೇರೆಯಾಗಿರುವುದರಿಂದ ಪೌನರುಕ್ತ್ಯವು ಬರುವುದಿಲ್ಲವೆಂದರೆ— 'ವಿದ್ಯಾ ಪೃಥಕ್ತ್ವಾತ್' ಎಂದು, ಅಂದರೆ— ಬ್ರಹ್ಮತರ್ಕ (ತರ್ಕಶಾಸ್ತ್ರ) ಕ್ಕೂ ಈ ಮೀಮಾಂಸಾ ಶಾಸ್ತ್ರಕ್ಕೂ ಭೇದವಿದೆ. 'ವೇದಾಃ ಸರ್ವಾಂಗಾನಿ ಸತ್ಯಮಾಯತನಂ' (ತವ. ಉಪ. ಖಂ. ೪. ಪು. ೧೪೪) ನಾಲ್ಕು ವೇದಗಳು, ಪುರಾಣ, ಸ್ಮೃತಿ, ತರ್ಕಶಾಸ್ತ್ರ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಎನ್ನುವ ೬ ಅಂಗಗಳು. ಮೀಮಾಂಸಾ ಶಾಸ್ತ್ರವು, ಇವು ೧೪ ವಿದ್ಯಾಸ್ಥಾನಗಳು, ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯ ವಿಸ್ತರಃ | ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶ' ಎಂದು ಸ್ಮೃತಿಯು. ಹೀಗೆ ಪ್ರತ್ಯೇಕವೆಂದೇ ಶ್ರುತಗಳಾಗಿವೆ. ಅದಕ್ಕಾಗಿ ವ್ಯುತ್ಪಾದ್ಯಗಳಿಗೆ ಭೇದವು ಆವಶ್ಯಕವು. ಅಂತೂ ಪ್ರಮೇಯವನ್ನೇ ವ್ಯುತ್ಪಾದಿಸತಕ್ಕ ಈ ಮೀಮಾಂಸಾ ಶಾಸ್ತ್ರದಲ್ಲಿ, ತರ್ಕ ಶಾಸ್ತ್ರದಲ್ಲಿ ಹೇಳಬೇಕಾದ ವೇದಪ್ರಾಮಾಣ್ಯಾದಿಗಳನ್ನು ವಿಸ್ತರವಾಗಿ ಹೇಳಿದರೆ ಇದು ಬೇರೆವಿದ್ಯೆಯೆನ್ನುವುದು ಆಗದೆ ಹೋಗುವುದು. ಸಂಕ್ಷೇಪವಾಗಿ ಸೂಚಿಸಿದರೆ ಈ ದೋಷವಿಲ್ಲ. ಮತ್ತು ತರ್ಕ ಶಾಸ್ತ್ರವು ಮೀಮಾಂಸಾ ಶಾಸ್ತ್ರಕ್ಕೆ ಅಂಗವು. ಅಲ್ಲಿ ಹೇಳಿದ್ದನ್ನು ಇಲ್ಲಿ ಸಂಕ್ಷೇಪದಿಂದ ಹೇಳದೆ

ಇದ್ದರೆ ಅಂಗಾಂಗಿಭಾವವೇ ಕೂಡಲಾರದು. ಆದಕಾರಣ ಈ ಗ್ರಂಥದಲ್ಲಿ ಇವೆಲ್ಲವನ್ನು ಸಂಕ್ಷೇಪದಿಂದ ಹೇಳಿದ್ದೇ ಯೋಗ್ಯವು ॥ ೭೪ ॥

(1) ಈ ಪ್ರಮೇಯವನ್ನೇ ವಿಸ್ತರಿಸಿ ಹೇಳುತ್ತಾರೆ.- (2) ಅಥವಾ ತರ್ಕಮೀಮಾಂಸಾ ಶಾಸ್ತ್ರಗಳು ಬೇರೆ ಬೇರೆ ವಿದ್ಯೆಗಳೇ ಆಗಲಿ, ಆದಾಗ್ಯೂ ಇಲ್ಲಿಯೂ ವಿಸ್ತರವಾಗಿ ವೇದಪ್ರಾಮಾಣ್ಯವನ್ನು ಸಮರ್ಥಿಸಿದರೆ ದೋಷವೇನೆಂದರೆ ಹೇಳತಕ್ಕ ಪ್ರಮೇಯಗಳು ಬೇರೆಯಾಗಿರುವುದರಿಂದಲೇ ಅವುಗಳನ್ನು ಹೇಳುವ ವಿದ್ಯೆಗಳಿಗೆ ಭೇದವು ಹೇಳಬೇಕು. ಆ ವಿದ್ಯಾ ಭೇದಕ್ಕೆ ಕಾರಣಗಳಾದ ಪ್ರತಿಪಾದ್ಯಪ್ರಮೇಯಗಳನ್ನು ಹೇಳುತ್ತಾರೆ.—

**ಸೂ॥ ಪ್ರಮಾಣನ್ಯಾಯಸಙ್ಕ್ಲೃಪ್ತಿಃ ಕ್ರಿಯತೇ ತರ್ಕಶಾಸ್ತ್ರತಃ ।**
**ಮಾನನ್ಯಾಯೈಸ್ತು ತತ್ಸಿದ್ಧೈರ್ಮೀಮಾಂಸಾ ಮೇಯಶೋಧನಂ॥೭೫॥**

ಅ ॥ ಪ್ರಮಾಣ ನ್ಯಾಯ ಸಙ್ಕ್ಲೃಪ್ತಿಃ, ಪ್ರಮಾಣ=ಪ್ರತ್ಯಕ್ಷಾದಿ ಮೂರು ಪ್ರಮಾಣಗಳು. ನ್ಯಾಯ=ಅನುಮಾನಕ್ಕೆ ಅಂಗಭೂತವಾದ ವ್ಯಾಪ್ತಿಯು, ಅಥವಾ ವ್ಯಾಪ್ಯ (ವಹ್ನ್ಯಭಾವ) ವನ್ನು ಅಂಗೀಕರಿಸಿದರೆ ಅನಿಷ್ಟವಾದ ವ್ಯಾಪಕವನ್ನು (ಧೂಮಾಭಾವವನ್ನೂ) ಅಂಗೀಕರಿಸಬೇಕಾಗುವುದು ಎಂಬುವ ವ್ಯಾಪಕ ಪ್ರಸಂಜನಾತ್ಮಕವಾದ ತರ್ಕವು, ಅಥವಾ ಪ್ರಮಾಣ=ಪ್ರತ್ಯಕ್ಷ ಆಗಮಗಳು, ನ್ಯಾಯ=ಅನುಮಾನವು, ಅಥವಾ, ಪ್ರಮಾಣ=ಪ್ರತ್ಯಕ್ಷಾದಿಗಳ, ನ್ಯಾಯ=ಪ್ರಕಾರವಾದ, ಸ್ವರೂಪ ಸಂಖ್ಯಾ ವಿಷಯ ವ್ಯವಸ್ಥೆಯು, ಸಙ್ಕ್ಲೃಪ್ತಿ=ಉದ್ದೇಶ, ಲಕ್ಷಣ, ವಿಭಾಗ ಪರೀಕ್ಷೆಗಳಿಂದ ನಿರೂಪಣವು, ತರ್ಕಶಾಸ್ತ್ರತಃ=ಬ್ರಹ್ಮತರ್ಕದಿಂದ, ಕ್ರಿಯತೇ=ಮಾಡಲ್ಪಡುತ್ತದೆ. ಮೀಮಾಂಸಾ ತು=ಮೀಮಾಂಸಾ ಶಾಸ್ತ್ರವಾದರೂ, ತತ್ಸಿದ್ಧೈಃ=ಬ್ರಹ್ಮತರ್ಕದಲ್ಲಿ ಪ್ರತಿಪಾದಿತಗಳಾದ, ಮಾನನ್ಯಾಯೈಃ=ಪ್ರಮಾಣನ್ಯಾಯಗಳಿಂದ, ಮೇಯ ಶೋಧನಂ=ಆರೋಪಿತವಾದ ಆಕಾರವನ್ನು ನಿರಾಕರಿಸಿ ಪ್ರಮೇಯದ ಸ್ವರೂಪನಿರೂಪಣವು (ಮೀಮಾಂಸಾ ಶಾಸ್ತ್ರದಿಂದ ಮಾಡಲ್ಪಡುತ್ತದೆ.)

ತಾ ॥ ಸ. ರ. ವಿ— (1) ತರ್ಕಶಾಸ್ತ್ರದಲ್ಲಿ ಉದ್ದೇಶ ವಿಭಾಗ-ಲಕ್ಷಣ-ಪರೀಕ್ಷಾರೂಪದಿಂದ ಪ್ರತ್ಯಕ್ಷಾದಿ ಪ್ರಮಾಣಗಳು ಮತ್ತು ಅನ್ವಯವ್ಯತಿರೇಕರೂಪವಾದ ನ್ಯಾಯವೂ ಚೆನ್ನಾಗಿ ನಿರೂಪಿಸಲ್ಪಡುತ್ತದೆ. ಅದರಿಂದ ಪ್ರತಿಪಾದಿಸಲ್ಪಡತಕ್ಕ ಆಗಮಮೊದಲಾದ ಪ್ರಮಾಣನ್ಯಾಯಗಳಿಂದ ಬ್ರಹ್ಮ-ಧರ್ಮ ಮೊದಲಾದ ಪ್ರಮೇಯವಿಚಾರವೇ ಮೀಮಾಂಸೆಯು.

ನ್ಯಾಯಸುಧಾ— (1) ಮೀಮಾಂಸಾ ಶಾಸ್ತ್ರದಲ್ಲಿಯೂ ವಿಸ್ತರವಾಗಿ ವೇದಪ್ರಾಮಾಣ್ಯಾದಿಗಳನ್ನು ಹೇಳಿದರೆ ಪ್ರತಿಪಾದಿಸತಕ್ಕ ಪ್ರಮೇಯಗಳಿಗೆ ಭೇದವಿಲ್ಲವೆಂದಾಗುವುದು. ಪ್ರಮೇಯಗಳಿಗೆ ಭೇದವಿಲ್ಲದಿದ್ದರೆ ವಿದ್ಯೆಗಳಿಗೂ ಭೇದವು ಕೂಡಲಾರದು. ಆದಕಾರಣ ಸಂಕ್ಷೇಪವಾಗಿಯೇ ಇಲ್ಲಿ ಈ ಅರ್ಥವನ್ನು ಸೂಚಿಸಿರುವರು. (2)'ತತ್ಸಿದ್ಧೈಃ' ಎಂದು ಹೇಳಿರುವುದರಿಂದ ತರ್ಕಶಾಸ್ತ್ರವು ಮೀಮಾಂಸಾಂಗವೆಂದು ಹೇಳಲ್ಪಟ್ಟಿತು ॥ ೭೫ ॥

ಸ. ರ. ವಿ— ಅಕ್ಷಪಾದಾದಿಗಳು ಮಾಡಿದ ತರ್ಕಶಾಸ್ತ್ರವಲ್ಲ. ಮತ್ತೆ ಭಗವಂತನು ನಿರ್ಮಿಸಿದ್ದ ಬ್ರಹ್ಮತರ್ಕವೇ ತರ್ಕಶಾಸ್ತ್ರವು ಎಂದಭಿಪ್ರಾಯವುಳ್ಳವರಾಗಿ ನಿರೂಪಿಸುತ್ತಾರೆ—

ನ್ಯಾಯಸುಧಾ— ಹಾಗಾದರೆ, 'ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ' (ಅಧ್ಯಾ. ೨. ಪಾ. ೨. ಅಧಿ. ೬.) ಇತ್ಯಾದಿಗಳಿಂದ ಸೂತ್ರಕಾರರೇ ತರ್ಕಶಾಸ್ತ್ರವನ್ನು ನಿರಾಕರಿಸುವುದರಿಂದ

ತರ್ಕಶಾಸ್ತ್ರವು ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅಂಗವು ಹೇಗೆ ಆಗುವುದು? ವಿರುದ್ಧಗಳಿಗೆ ಅಂಗಾಂಗಿಭಾವವು ಕೂಡಲಾರದಷ್ಟೆ! ಎಂದಾಶಂಕಿಸಿದರೆ—

**ಮೂ ॥ ಬ್ರಹ್ಮತರ್ಕಂ ಚ ಭಗವಾನ್ ಸ ಏವ ಕೃತವಾನ್ ಪ್ರಭುಃ ।**
**ಪಂಚಾಶತ್ಕೋಟಿವಿಸ್ತಾರಾನ್ನಾರಾಯಣತನೌ ಕೃತಾತ್ ॥**
**ಉದ್ಧೃತ್ಯ ಪಂಚಸಾಹಸ್ರಂ ಕೃತವಾನ್ ಬಾದರಾಯಣಃ ॥ ೭೬ ॥**

ಅ ॥ ಭಗವಾನ್=ಷಡ್ಗುಣಪರಿಪೂರ್ಣನಾದ, ಪ್ರಭುಃ=ಸರ್ವಸಮರ್ಥನಾದ, ಸ ಏವ= ಯಾರು ಬ್ರಹ್ಮಮೀಮಾಂಸಾ ಸೂತ್ರವನ್ನು ಮಾಡಿರುವರೋ ಅವರೇ, ಬ್ರಹ್ಮತರ್ಕಂ ಚ=ಬ್ರಹ್ಮ ತರ್ಕವನ್ನೂ, ಕೃತವಾನ್=ಮಾಡಿರುವರು. ನಾರಾಯಣತನೌ=ನಾರಾಯಣಾವತಾರದಲ್ಲಿ, ಕೃತಾತ್=ವಿಷ್ಣುವಿನಿಂದ ಮಾಡಲ್ಪಟ್ಟ, ಪಂಚಾಶತ್ಕೋಟಿವಿಸ್ತಾರಾತ್=ಐವತ್ತು ಕೋಟಿ ಶ್ಲೋಕ ಗಳಿಂದ ಯಾವ ಅರ್ಥಕ್ಕೆ ವಿಸ್ತಾರವಪೆಯೋ ಅಂತಹ ಅರ್ಥದಿಂದ, ಅಥವಾ ಐವತ್ತು ಕೋಟ ವಿಸ್ತಾರವುಳ್ಳ ಬ್ರಹ್ಮತರ್ಕಾಖ್ಯಗ್ರಂಥದಿಂದ, ಉದ್ಧೃತ್ಯ=ಕೆಲವು ಅರ್ಥವನ್ನುದ್ಧರಿಸಿ ಅಂದರೆ, ಪ್ರತ್ಯೇಕಿಸಿ, ಅವುಗಳನ್ನು ಪ್ರತಿಪಾದಿಸತಕ್ಕ, ಪಂಚಸಾಹಸ್ರಂ=ಐದು ಸಾವಿರ ಪರಿಮಾಣವುಳ್ಳ ಬ್ರಹ್ಮತರ್ಕಾಖ್ಯಗ್ರಂಥವನ್ನು, ಬಾದರಾಯಣಃ=ವೇದವ್ಯಾಸರು, ಕೃತವಾನ್=ಮಾಡಿದರು

ಟಾ ॥ ನ್ಯಾಯಸುಧಾ— (1) ಕಣಾದ, ಅಕ್ಷಪಾದ ಮೊದಲಾದವರು ಮಾಡಿದ್ದ ತರ್ಕ ಶಾಸ್ತ್ರವು ಅಂಗವಲ್ಲವೆಂದು 'ಏವ' ಶಬ್ದದಿಂದ ತಿಳಿಯುತ್ತದೆ. (2) 'ಬ್ರಹ್ಮತರ್ಕಸ್ತರ್ಕ ಶಾಸ್ತ್ರಂ ವಿಷ್ಣುನಾ ಯತ್ಸಮೀರಿತಂ' ಎಂದು ಬ್ರಹ್ಮತರ್ಕವು ವಿಷ್ಣುವಿನಿಂದ ಮಾಡಲ್ಪಟ್ಟ ದ್ದೆಂದು ಹೇಳಿರುವಪ್ರಯುಕ್ತ ಬ್ರಹ್ಮತರ್ಕವನ್ನು ಸೂತ್ರಕಾರರು ಮಾಡಿದ್ದೆಂದು ಹೇಳಿದ್ದು ಹೇಗೆ ಕೂಡುತ್ತದೆ? ಹಾಗಾದರೆ, ವಿಷ್ಣುವು ಮಾಡಿದ್ದು ಪ್ರತ್ಯೇಕವು ವ್ಯಾಸರು ಮಾಡಿದ್ದು ಪ್ರತ್ಯೇಕ ವೆಂದರೆ ಶ್ರೀ ವಿಷ್ಣುವು ಮಾಡಿದ್ದು ಅಪ್ರಾಮಾಣವಾದರೆ ಇದೂ ಅಪ್ರಾಮಾಣವಾಗುವುದು ಪ್ರಮಾಣವಾಗಿದ್ದರೆ ಒಂದೇ ವಿಷಯದಲ್ಲಿ ಬೇರೆ ಗ್ರಂಥಗಳ ನಿರ್ಮಾಣವು ವ್ಯರ್ಥವೆಂದರೆ— 'ಪಂಚಾಶತ್ ಕೋಟಿವಿಸ್ತಾರಾತ್' ಎಂದು. (3) ಯದ್ಯಪಿ ವಿಷ್ಣುವ್ಯಾಸರಿಗೆ ಭೇದವಿಲ್ಲವೆಂದು ಇಲ್ಲಿ ಪರಿಹಾರ ಹೇಳಬಹುದಿತ್ತು. ಆದಾಗ್ಯೂ ವಸ್ತುಸ್ಥಿತಿಯನ್ನು ತಿಳಿಸುವುದಕ್ಕಾಗಿ ಹೀಗೆ ಹೇಳಿದ್ದು ॥ ೭೬ ॥

ಹಿಂದೆ ಹೇಳಿದ ೨ ಶಂಕೆಗಳ ಪರಿಹಾರವನ್ನುಪಸಂಹಾರ ಮಾಡುತ್ತಾರೆ—

**ಮೂ ॥ ಅತಸ್ತದರ್ಥಂ ಸಂಕ್ಷೇಪಾದತ ಇತ್ಯಭ್ಯಸೂಚಯತ್ ॥ ೭೭ ॥**

ಅ ॥ (೧) ಅತಃ=(ಯಾವ ಕಾರಣದಿಂದ ಈ ಅರ್ಥವು ಬ್ರಹ್ಮತರ್ಕದಲ್ಲಿ ಪ್ರತಿಪಾದಿತ ವಾಗಿಯದೋ, ಬ್ರಹ್ಮತರ್ಕವು ಮೀಮಾಂಸಾಂಗವೋ,) ಆದಪ್ರಯುಕ್ತ, ತದರ್ಥಂ=ಬ್ರಹ್ಮ ತರ್ಕದ ಅರ್ಥವನ್ನು, (ಪ್ರಕೃತವಾಗಿರುವುದರಿಂದ) ಅತ ಇತಿ='ಅತಃ' ಎನ್ನುವುದರಿಂದ, ಅಭ್ಯಸೂಚಯತ್=ಸೂಚಿಸಿದರು. (ಎಂದುಪಪನ್ನವಾಗುತ್ತದೆ. ಹೀಗೆ ಆದ್ಯಶಂಕೆಯ ಪರಿಹಾರದ ಉಪಸಂಹಾರವು.) (೨) ಅತಃ=(ಯಾವ ಕಾರಣದಿಂದ ತರ್ಕಮೀಮಾಂಸಾ ಶಾಸ್ತ್ರಗಳಿಗೆ ಭೇದ ವಿದೆಯೋ, ಅದಾದರೂ ವ್ಯುತ್ಪಾದ್ಯವಾದ ಭೇದದ ಅಧೀನವೋ,) ಆದಕಾರಣ, ತದರ್ಥಂ= ತರ್ಕಶಾಸ್ತ್ರದಲ್ಲಿ ವ್ಯುತ್ಪಾದ್ಯವಾದ ಈ ಅರ್ಥವನ್ನು, ಅತಃ ಇತಿ=ಅತಃ ಎನ್ನುವುದರಿಂದ, ಅಭ್ಯ-ಸೂಚಯತ್=ಸಂಕ್ಷೇಪವಾಗಿಯೇ ತಿಳಿಸಿದರು. (ವಿಸ್ತರವಾಗಿ ಅಲ್ಲ. ಹೀಗೆ ೨ನೇ ಶಂಕೆಯ ಪರಿಹಾರಕ್ಕೆ ಉಪಸಂಹಾರವು.) ॥ ೭೭ ॥

ಬೇರೆ ರೀತಿಯಾಗಿಯೂ ೨ ಶಂಕೆಗಳನ್ನು ಪರಿಹರಿಸುತ್ತಾರೆ.)

**ಮೂ ॥ ಯತೋಽನುಭವತಃ ಸರ್ವಂ ಸಿದ್ಧಮೇತದತೋಽಪಿ ಚ ॥ ೭೮ ॥**

ಅ ॥ (ವಕ್ತೃ (ಹೇಳುವ ಪುರುಷರು), ಶ್ರೋತೃ (ಕೇಳುವ ಪುರುಷರು) ಇವರ (ಬುದ್ಧಿಯಲ್ಲಿರತಕ್ಕದೇ ಮುಖ್ಯವಾಗಿ ಪ್ರಕೃತವು. ಗ್ರಂಥದಲ್ಲಿ ಹೇಳಿದ್ದು ಅದಕ್ಕೆ ಜ್ಞಾಪಕವಾಗಿ ಪ್ರಕೃತವಾಗುವುದು.) ಏತಚ್ಚ ಸರ್ವಂ=ಈ ಪ್ರಪಂಚಸತ್ಯತ್ವಾದಿಗಳೆಲ್ಲವೂ, ಯತಃ=ಯಾವ ಕಾರಣದಿಂದ, ಅನುಭವತಃ=ಅನುಭವದಿಂದಲೇ, ಸಿದ್ಧಂ = ಸಿದ್ಧವಾಗಿಯದೋ, ಅತೋಽಪಿ=ಆದ ಪ್ರಯುಕ್ತವೂ, (ಪ್ರಕೃತವಾಗಿರುವುದರಿಂದ 'ಅತಃ' ಎಂದು ಪರಾಮರ್ಶಮಾಡಿಕೊಂಡು ಹೇತುವಾಗಿ ಹೇಳಿದ್ದು ಯುಕ್ತವಾಗುತ್ತದೆ.) ಮತ್ತು ಯಾವ ಕಾರಣದಿಂದ ಈ ಬಂಧಸತ್ಯತ್ವಾದಿಗಳೆಲ್ಲವೂ ಸರ್ವರಿಗೂ ಅನುಭವಸಿದ್ಧವೋ, ಆದಪ್ರಯುಕ್ತ ಅತಿಸ್ಫುಟವಾಗಿರುವುದರಿಂದಲೂ 'ಅತಃ' ಎಂದು ಸಂಕ್ಷೇಪವಾಗಿಯೇ ಸೂಚಿಸಿದರು. ವಿಸ್ತರವಾಗಿ ಅಲ್ಲ ॥ ೭೮

ಹೀಗೆ ೨ ಶಂಕೆಗಳನ್ನು ಎರಡು ರೀತಿಯಾಗಿ ಪರಿಹರಿಸಿ ೨ನೇ ಶಂಕೆಯನ್ನು ರೀತ್ಯಂತರದಿಂದಲೂ ಪರಿಹರಿಸುತ್ತಾರೆ—

**ಮೂ ॥ ದೇವೈಶ್ಚ ದುರ್ಗಮಾರ್ಥೇಷು ವ್ಯಾಪೃತೋ ನಾತಿವಿಸ್ತೃತಿಂ ।**
**ಚಕಾರೈತಾ ಹ್ಯವಜ್ಞೇಯಾ ಯುಕ್ತಯಃ ಪ್ರತಿಪಕ್ಷಗಾಃ ॥ ೭೯ ॥**

ಅ ॥ (ಸುಗಮ ಜ್ಞಾನವಾದಮೇಲೆ ದುರ್ಗಮಜ್ಞಾನವು ಪ್ರಾಣಿಗಳಿಗೆ ಸುಕರವಾಗಿರುವುದರಿಂದ ಸುಗಮವಾದ ಪ್ರಮಾಣಾದಿ ಸ್ವರೂಪವನ್ನು ಬ್ರಹ್ಮತರ್ಕಾದಿಗಳಲ್ಲಿ ವ್ಯುತ್ಪಾದಿಸಿ ಈಗ) ದೇವೈಶ್ಚ=ದೇವತೆಗಳ ನಿಮಿತ್ತವಾಗಿ, (ಅಂದರೆ, ಅವರ ಪ್ರಾರ್ಥನೆಯಿಂದ), ಅಥವಾ ದೇವತೆಗಳಿಂದ (ಪ್ರಾರ್ಥಿಸಲ್ಪಟ್ಟವರಾಗಿ) ದುರ್ಗಮಾರ್ಥೇಷು=ಸುಖದಿಂದ ತಿಳಿಯಲಶಕ್ಯವಾದ ಅರ್ಥವುಳ್ಳ ವೇದ, ಉಪನಿಷತ್ತುಗಳಲ್ಲಿ (ಅವುಗಳ ಅರ್ಥವಿಚಾರದಲ್ಲಿ) ವ್ಯಾಪೃತಃ=ಪ್ರವೃತ್ತರಾದ ವೇದವ್ಯಾಸರು, (ಬೇರೆ ಕಡೆಯಲ್ಲಿ ಹೇಳಿದ ಪ್ರಮಾಣವಿಚಾರಕ್ಕೆ ಇಲ್ಲಿ ವಿಶೇಷ ಅವಕಾಶವಿಲ್ಲದಿರುವುದರಿಂದ) ಅತಿವಿಸ್ತೃತಿಂ=ಅತಿ ವಿಸ್ತಾರವನ್ನು, ನ ಚಕಾರ=ಮಾಡಲಿಲ್ಲ. (ಶಾಸ್ತ್ರಗಳಿಗೆ ಭೇದವು ಸಿದ್ಧಿಸುವುದಕ್ಕಾಗಿ ವಿಸ್ತರಿಸಲಿಲ್ಲವೆಂದು ಮೊದಲು ಹೇಳಿದ್ದು. ಪ್ರಮೇಯ ವಿಚಾರದಲ್ಲಿ ಪ್ರವೃತ್ತರಾದವರಿಗೆ ಪ್ರಮಾಣವಿಚಾರವು ಅವಸರ ಪ್ರಾಪ್ತವಾಗದಿರುವುದರಿಂದ ವಿಸ್ತರಿಸಲಿಲ್ಲವೆಂದು ಈಗ ಹೇಳಿರುವುದರಿಂದ ಪುನರುಕ್ತವಾಗಲಿಲ್ಲ.) (ವಿಸ್ತರಿಸದಿರಲಿಕ್ಕೆ ಬೇರೆ ಕಾರಣಗಳನ್ನೂ ಹೇಳುತ್ತಾರೆ.) ಹಿ=ಯಾವಕಾರಣದಿಂದ, ಏತಾಃ ಪ್ರತಿಪಕ್ಷಗಾಃ ಯುಕ್ತಯಃ=ಬಂಧಮಿಥ್ಯಾತ್ವಾದಿಗಳಲ್ಲಿ ಪ್ರತಿವಾದಿಯಿಂದುಪನ್ಯಾಸಮಾಡಲ್ಪಟ್ಟ ಯುಕ್ತಿಗಳು, ಅವಜ್ಞೇಯಾಃ=ದುಷ್ಟಗಳಾದುದರಿಂದಲೂ ನಿರ್ಬಲ(ವ್ಯಾಪ್ತಿಪಕ್ಷಧರ್ಮತಾದಿರೂಪ ಬಲ ಇಲ್ಲದೆ ಇದ್ದವು) ಗಳಾದುದರಿಂದಲೂ ತಿರಸ್ಕರಿಸಲಿಕ್ಕೆ ಯೋಗ್ಯಗಳೋ, (ಆದಪ್ರಯುಕ್ತವೂ ಸೂತ್ರಕಾರರು ಅವನ್ನು ನಿರಾಕರಿಸುವವಿಷಯದಲ್ಲಿ ಅತಿ ವಿಸ್ತಾರಮಾಡಲಿಲ್ಲ. ಅತಿ ಹೇಯತ್ವವನ್ನು ತಿಳಿಸುವುದಕ್ಕಾಗಿ ಸಂಕ್ಷೇಪಿಸಿರುವರು. ನಾವಾದರೂ ಆ ನಿರ್ಬಲತ್ವವನ್ನು ತೋರಿಸುವುದಕ್ಕಾಗಿಯೇ ಸ್ವಲ್ಪ ವಿಸ್ತರಿಸಿದೆವು.) ॥೭೯॥

ಹಾಗಾದರೆ ಅವೈದಿಕರಾದ ಬೌದ್ಧಾದಿಗಳು ಹೇಳಿದ ಯುಕ್ತಿಗಳನ್ನು ತಿರಸ್ಕರಿಸಬಹುದು. ವೈದಿಕರು ಹೇಳಿದ ಯುಕ್ತಿಗಳನ್ನು ತಿರಸ್ಕರಿಸುವುದು ಹೇಗೆಂದರೆ—

**ಮೂ ॥ ಪ್ರತ್ಯಕ್ಷೇಕ್ಷಾಕ್ಷಮಃ ಪಕ್ಷಂ ಕಮೇವಾತ್ರಾಭಿವೀಕ್ಷತೇ ।**
**ತಸ್ಮಾದಕ್ಷಮಪಕ್ಷತ್ವಾನ್ನೋಕ್ಷಶಾಸ್ತ್ರೇಽಭ್ಯುಪೇಕ್ಷಿತಃ ॥ ೮೦ ॥**

**ಅ ॥** ಪ್ರತ್ಯಕ್ಷೇಕ್ಷ್ಯಾಕ್ಷಮಃ=ಸ್ಪಷ್ಟಪ್ರತೀತಿಯಲ್ಲಿಯೂ ಅಸಮರ್ಥನಾದವನು, (ಅಂದರೆ, ದುಃಖಾದಿಗಳಿಗೆ ಸತ್ಯತ್ವಾದಿಗಳು ಸ್ಪಷ್ಟವಾಗಿ ತೋರುವುವು. ಅವುಗಳನ್ನು ಯಾರು ನೋಡ ಲಿಕ್ಕೆ ಸಮರ್ಥನಾಗುವುದಿಲ್ಲವೋ, ಅಂತಹನು, ಅಥವಾ ಸರ್ವಲೋಕ ಪ್ರಸಿದ್ಧವಾಗಿ ಪ್ರತ್ಯಕ್ಷ ದಿಂದ ಪ್ರವೃತ್ತವಾದುದನ್ನೂ ಸರ್ವವೂ ಅಯಥಾರ್ಥವೆಂದಂಗೀಕರಿಸಿರುವುದರಿಂದ ತಿಳಿಯಲು ಶಕ್ತನಾಗುವುದಿಲ್ಲವೋ ಅಂತಹನು) ಅತ್ರ=ದುರ್ಗಮಾರ್ಗವಾದ ವೇದದ ವಿಚಾರವಿಷಯದಲ್ಲಿ, ಕಮೇವ ಪಕ್ಷಂ=ಯಾವ ಪಕ್ಷವನ್ನು, ಅಭಿವೀಕ್ಷತೇ=ಪ್ರತಿಕೂಲವನ್ನಾಗಿ ಉತ್ಪ್ರೇಕ್ಷಿಸುತ್ತಾನೆ (ಯಾವುದನ್ನೂ ಇಲ್ಲ.) ತಸ್ಮಾತ್=ಆದಕಾರಣ, ಅಕ್ಷಮಪಕ್ಷತ್ವಾತ್=ಅಸಮರ್ಥವಾದ ಪಕ್ಷ ವುಳ್ಳವನಾದುದರಿಂದ, ಅಂದರೆ, ಅಯುಕ್ತಮತವುಳ್ಳವನಾದುದರಿಂದ, ಮೋಕ್ಷಶಾಸ್ತ್ರೇ=ಮೋಕ್ಷ ಶಾಸ್ತ್ರವಾದ ವೇದದಲ್ಲಿ, ಆಗ್ರಹದಿಂದ (ಪ್ರವೃತ್ತನಾದಾಗ್ಯೂ) ಅಭ್ಯುಪೇಕ್ಷಿತಃ=(ಸೂತ್ರಕಾರ ರಿಂದ ಉಪೇಕ್ಷಿತನೇ ಆಗಿರುತ್ತಾನೆ. ವಿಸ್ತರವಾಗಿ ನಿರಾಕರಿಸಲ್ಪಡಲಿಲ್ಲ.)

**ತಾ ॥ ಸ. ರ. ವಿ.** ಮೋಕ್ಷಶಾಸ್ತ್ರದಲ್ಲಿ ಪ್ರವೃತ್ತನಾದಾಗ್ಯೂ ಪ್ರತಿಪಕ್ಷಿಯು ಉಪೇ ಕ್ಷಿಸಲಿಕ್ಕೇನೇ ಯೋಗ್ಯನು, ಅವನು ಹೇಳಿದಪ್ರಕಾರ ಈ ಶಾಸ್ತ್ರಾರ್ಥವನ್ನು ಸ್ವೀಕರಿಸಕೂಡದು. ಆದಪ್ರಯುಕ್ತ ಸಂಶಯವಿಲ್ಲದಿರುವುದರಿಂದ ಮೋಕ್ಷವನ್ನು ಇಚ್ಛಿಸುವವರು ಜಿಜ್ಞಾಸಾವನ್ನ ಮಾಡತಕ್ಕದ್ದು.

**ನ್ಯಾಯಸುಧಾ—** (1) ಲೌಕಿಕರಿಂದಲೂ ತಿಳಿಯಲರ್ಹವಾದ ಅರ್ಥವನ್ನೂ ಯಾರು ತಿಳಿಯುವುದಿಲ್ಲವೋ ಅವರಿಗೆ ಅಲೌಕಿಕಾರ್ಥವಾದ ವೇದದಲ್ಲಿ ಅಧಿಕಾರವೇ ಇಲ್ಲ. ಆದಾಗ್ಯೂ ಔದ್ಧತ್ಯದಿಂದ ಪ್ರವೃತ್ತನಾದವನು ತಿರಸ್ಕಾರವನ್ನೇ ಹೊಂದುತ್ತಾನೆ. ಪ್ರತಿಭಟ ಭಾವವನ್ನು ಹೊಂದುವುದಿಲ್ಲ (2) 'ಮೋಕ್ಷ ಶಾಸ್ತ್ರೇ' ಎಂದು ಹೇಳಿರುವುದರಿಂದ ಅವರಿಗೆ ವೇದವಿಚಾ ರದಲ್ಲಿ ಅಧಿಕಾರವೇ ಇಲ್ಲವೆಂದು ಸೂಚಿಸಿದರು. ವೇದವು ಮೋಕ್ಷಶಾಸ್ತ್ರವೆಂದು ಪ್ರಸಿದ್ಧವಷ್ಟೆ. **'ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವ ಏವ'** ಸರ್ವರೂ ಶ್ರೀ ಹರಿಯನ್ನು ಸಂತೋಷಪಡಿಸಿದುದರಿಂದಲೇ ಮುಕ್ತಿಯನ್ನು ಹೊಂದುತ್ತಾರೆ. ಆದಪ್ರಯುಕ್ತ ಎಲ್ಲಾ ವೇದಗಳೂ ಶ್ರೀಹರಿಯನ್ನೇ ಪ್ರತಿಪಾದಿಸತಕ್ಕವುಗಳು ಎಂದು ಶ್ರುತಿಯು. ಅದು ಸ್ವರ್ಗರೂಪವಾದ ಅರ್ಥದಲ್ಲಿ ಪರ್ಯವಸಿತವಾಗುತ್ತದೆಂದು ಹೇಳುವವನು ಹೇಗೆ ಅಧಿ ಕಾರಿಯಾದಾನು? ಇದರಿಂದ 'ಅತಃ ಶಬ್ದೋ ಹೇತ್ವರ್ಥಃ' ಎನ್ನುವ ಭಾಷ್ಯವು ಸ್ಪಷ್ಟೀಕೃತ ವಾಯಿತು'. ॥ ೮೦ ॥

**ನ್ಯಾಯಸುಧಾ—** (1) ಹೀಗೆ 'ಅತಃ' ಶಬ್ದವ್ಯಾಖ್ಯಾನವನ್ನುಪಪಾದಿಸಿ 'ಸ್ವಯಂ ಭಗ ವತಾ' ಇತ್ಯಾದಿಗಳಿಂದ ಕ್ರಮಪ್ರಾಪ್ತವಾದ ಬ್ರಹ್ಮಶಬ್ದಾರ್ಥವನ್ನು ಸಮರ್ಥಿಸುತ್ತಾರೆ. (2) 'ಜಿಜ್ಞಾಸ್ಯೋಽಯಂ ವಿಧೀಯತೇ' ಎಂದು ಬ್ರಹ್ಮಶಬ್ದವು ವಿಷ್ಣುವಿಷಯಕವೆಂದು ವ್ಯಾಖ್ಯಾತ ವಾಯಿತು. ಅದಯುಕ್ತವು. ಏಕೆಂದರೆ, ಬ್ರಹ್ಮಶಬ್ದವು-ಜಾತಿ-ಜೀವ-ಕಮಲಾಸನ-ಶಬ್ದರಾಶಿ- ಇಷ್ಟು ಅರ್ಥಗಳಲ್ಲಿದೆ ಎಂದು ವೃದ್ಧರ ಪ್ರಯೋಗಾದಿಗಳಿಂದ ಸಿದ್ಧವಾಗಿರುತ್ತದೆ. (3)ಹಾಗಾದರೆ ಶ್ರೀ ಹರಿಯಲ್ಲಿಯೂ ಬ್ರಹ್ಮಶಬ್ದವು ವೃದ್ಧರ ಪ್ರಯೋಗಾದಿಗಳಿಂದ ಸಿದ್ಧವೇ ಆಗಿದೆ. ಆದರೂ ಅನೇಕಾರ್ಥಗಳಲ್ಲಿ ಶಕ್ತಿಯಿದ್ದದ್ದಕ್ಕೆ ಈ ಅರ್ಥವೇ ವಿವಕ್ಷಿತವು ಎಂದು ತಿಳಿಸತಕ್ಕ ಪ್ರಮಾಣವಿಲ್ಲ ದಿರುವುದರಿಂದ ಭಗವತ್ಪರವೆನ್ನುವ ನಿರ್ಧಾರಣವು ಕೂಡುವುದಿಲ್ಲ ಎಂದಾಶಂಕಿಸಿ ಗೋ ಶಬ್ದಕ್ಕೆ ಅನೇಕಾರ್ಥಗಳು ಇದ್ದರೂ ಪ್ರಕರಣವಿಶೇಷದಿಂದ ಅರ್ಥವಿಶೇಷಪರವೆಂದು ನಿಶ್ಚಿತವಾಗುತ್ತದೋ, ಹಾಗೆಯೇ ಬ್ರಹ್ಮಶಬ್ದಕ್ಕೂ ಅನೇಕಾರ್ಥಗಳಿದ್ದರೂ ಸೂತ್ರಕಾರರು ವಿಷ್ಣುವಿಷಯದಲ್ಲಿಯೇ

ಪ್ರಯೋಗಿಸಿರುವರೆಂದು ಪ್ರಕರಣದಿಂದ ತಿಳಿಯುತ್ತದೆ ಎಂದು ಪರಿಹಾರವನ್ನು ಹೇಳಲಿಚ್ಛಿಸುತ್ತಾ ಬ್ರಹ್ಮಶಬ್ದವು ವಿಷ್ಣುವಿನಲ್ಲಿ ಪ್ರಕೃತವಾಗಿದೆ ಎನ್ನುತ್ತಾರೆ—

ಮೂ || ಸ್ವಯಂ ಭಗವತಾ ವಿಷ್ಣುರ್ಬ್ರಹ್ಮೇತ್ಯೇತತ್ಪುರೋದಿತಂ ।
ಸ ವಿಷ್ಣುರಾಹ ಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ ॥
ಆದ್ಯಂತಂ ದೇವಶಾಸ್ತ್ರಸ್ಯ ಸ್ವಯಂ ಭಗವತಾ ಕೃತಂ || ೮೧ ||
ಮಧ್ಯಂ ತದಾಜ್ಞಯಾ ಶೇಷಪೈಲಾಭ್ಯಾಂ-
(ಪೈಲಶೇಷಾಭ್ಯಾಂ) ಕೃತಮಂಜಸಾ ।
ಅತಸ್ತತ್ರೈವ ವಿಷ್ಣುತ್ವಸಿದ್ಧೇರ್ಬ್ರಹ್ಮೇತ್ಯಸೂಚಯತ್ || ೮೨ ||

ಅ || ದೇವಶಾಸ್ತ್ರಸ್ಯ ಅಂತೇ=ದೇವಮೀಮಾಂಸಾ ಶಾಸ್ತ್ರದ ಅಂತ್ಯದಲ್ಲಿ, 'ಸ ವಿಷ್ಣುರಾಹ ಹಿ' ಇತಿ='ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಎಂದು, ವಿಷ್ಣುಃ=ಶ್ರೀಹರಿಯು, ಬ್ರಹ್ಮ ಇತ್ಯೇತತ್=ಬ್ರಹ್ಮಶಬ್ದವಾಚ್ಯನು ಎನ್ನುವುದು, ಪುರಾ=ಈ ಸೂತ್ರಕ್ಕಿಂತ ಮೊದಲು, ಸ್ವಯಂ ಭಗವತಾ=ಸಾಕ್ಷಾತ್ ಭಗವಂತನಿಂದ, ತೇನ=ಯಾರಿಂದ ಈ ಶಾಸ್ತ್ರವು ಮಾಡಲ್ಪಟ್ಟದೋ ಅವರಿಂದಲೇ, ಉದಿತಂ=ಹೇಳಲ್ಪಟ್ಟದೆ. ಹಿ=ಪುರಾಣಾದಿ ಪ್ರಸಿದ್ಧವು. ದೇವಶಾಸ್ತ್ರಸ್ಯ=ದೇವಮೀಮಾಂಸಾ ಶಾಸ್ತ್ರದ, ಆದ್ಯಂತಂ='ಅಥಾತೋ ದೈವೀ ಮೀಮಾಂಸಾ' ಎಂಬುವ ಆದಿಸೂತ್ರವು 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಎನ್ನುವ ಅಂತಿಮ ಎರಡು ಸೂತ್ರಗಳೂ ಸ್ವಯಂ ಭಗವತಾ=ಸಾಕ್ಷಾತ್ ಭಗವಂತರಾದ ವೇದವ್ಯಾಸರಿಂದ, ಕೃತಂ=ಮಾಡಲ್ಪಟ್ಟವೆ. ಮಧ್ಯಂ=ಮಧ್ಯಭಾಗವು, ತದಾಜ್ಞಯಾ=ಆ ವೇದವ್ಯಾಸರ ಆಜ್ಞಾನುಸಾರವಾಗಿ, ಶೇಷಪೈಲಾಭ್ಯಾಂ=ಶೇಷಪೈಲರಿಂದ (ಪೈಲಶೇಷಾಭ್ಯಾಂ = ಪೈಲ ಶೇಷರಿಂದ) ಅಂಜಸಾ = ಚೆನ್ನಾಗಿ, ಕೃತಂ=ಮಾಡಲ್ಪಟ್ಟದೆ. ಅತಃ=(ಯಾವ ಕಾರಣದಿಂದ ದೇವಮೀಮಾಂಸಾ ಶಾಸ್ತ್ರದ ಅಂತಿಮ ಎರಡು ಸೂತ್ರಗಳು ಭಗವಂತನಿಂದ ಮಾಡಲ್ಪಟ್ಟವೋ) ಆದಪ್ರಯುಕ್ತ, ತತ್ರೈವ = ಆ ಎರಡು ಸೂತ್ರಗಳಲ್ಲಿಯೇ, ವಿಷ್ಣುತ್ವಸಿದ್ಧೇಃ=ಬ್ರಹ್ಮಶಬ್ದಾರ್ಥನು ವಿಷ್ಣುವೆಂದು ಪ್ರಕೃತನಾದುದರಿಂದ ('ಅಥಾತೋ ಬ್ರಹ್ಮಜಿಜ್ಞಾಸಾ' ಎನ್ನುವಲ್ಲಿಯೂ) ಬ್ರಹ್ಮೇತಿ=ನಾರಾಯಣನೇ ಬ್ರಹ್ಮಶಬ್ದಾರ್ಥನೆಂದು, ಅಸೂಚಯತ್=(ಸೂತ್ರಕಾರರು) ಸೂಚಿಸಿದರೆಂದು, ತಿಳಿಯಲ್ಪಡುತ್ತದೆ.

ತಾ || ಸ. ರ ವಿ — ಯದ್ಯಪಿ ದೇವಮೀಮಾಂಸಾ ಶಾಸ್ತ್ರದ ಮಧ್ಯಭಾಗವನ್ನು ಶೇಷಪೈಲರು ಮಾಡಿದ್ದು. ಆದರೂ ಆದ್ಯಂತಭಾಗಗಳನ್ನು ವೇದವ್ಯಾಸರೇ ಮಾಡಿರುವುದರಿಂದ ಅವರೇ ಅಂತ್ಯದಲ್ಲಿ ಬ್ರಹ್ಮಶಬ್ದವನ್ನು ವಿಷ್ಣುವಿನಲ್ಲಿಯೇ ಪ್ರಯೋಗಿಸಿರುವುದರಿಂದಲೂ ವಿಷ್ಣುವೇ ಪ್ರಸ್ತುತನಾಗಿರುವುದರಿಂದ ಬ್ರಹ್ಮಜಿಜ್ಞಾಸಾ ಪದದಿಂದ ಶ್ರೀವಿಷ್ಣು ಜಿಜ್ಞಾಸಾವನ್ನೇ ಸೂತ್ರಕಾರರು ಸೂಚಿಸಿದರು.

ನ್ಯಾಯಸುಧಾ— (1) 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದೇ ಬ್ರಹ್ಮಮೀಮಾಂಸಾ ಶಾಸ್ತ್ರದ ಆದಿಸೂತ್ರವು. ಈ ಸೂತ್ರಕ್ಕಿಂತ ಮೊದಲು ಬೇರೆ ಸೂತ್ರವಿಲ್ಲ. ಆದರೆ ದೇವಮೀಮಾಂಸಾ ಶಾಸ್ತ್ರದ ಅಂತ್ಯದಲ್ಲಿ 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಎಂಬುವ ಅಂತಿಮ ಎರಡು ಸೂತ್ರಗಳಿಂದ ಶ್ರೀ ವಿಷ್ಣುವೇ ಬ್ರಹ್ಮನೆಂದು ಹೇಳಲ್ಪಟ್ಟಿದ್ದಾನೆ. ಆಮೇಲೆಯೇ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಸೂತ್ರಮಾಡಿರುವುದರಿಂದ 'ಪುರೋದಿತಂ=ಮೊದಲುಹೇಳಲ್ಪಟ್ಟದೆ' ಎಂದು ಹೇಳಿದ್ದು ಯುಕ್ತವಾಗುತ್ತದೆ. (2) ಯಾರು ದೇವಮೀಮಾಂಸಾ ಶಾಸ್ತ್ರದ ಸ್ವರೂಪದಲ್ಲಿಯೂ

ಆ ಮೇಲೆ ಈ ಸೂತ್ರಮಾಡಿದ್ದೆನ್ನುವಲ್ಲಿಯೂ ವಿವಾದಮಾಡುತ್ತಾರೋ ಅವರಿಗೆ "ದೇವ ಮೀಮಾಂಸಕಾದ್ಯಂತಂ ಕೃತ್ವಾ ಪೈಲಮುಖಾದಿಶತ್ । ಶೇಷಂ ಚ ಮಧ್ಯಕರಣೆ" ಇದು ಮೊದಲಾದ ಪುರಾಣಾದಿ ವಿರೋಧವನ್ನು 'ಹಿ' ಶಬ್ದದಿಂದ ತೋರಿಸುತ್ತಾರೆ. (3) ಆದಕಾರಣ 'ಜಿಜ್ಞಾಸ್ಯೋಽಯಂ ವಿಧೀಯತೇ' ಎನ್ನುವ ವ್ಯಾಖ್ಯಾನವು ಯೋಗ್ಯವೇ ಆಗಿರುತ್ತದೆ ॥೮೧॥೮೨॥

ಸ. ರ. ವಿ— ಬ್ರಹ್ಮಶಬ್ದವು ಮುಖ್ಯವಾಗಿ ನಾರಾಯಣ ಶಬ್ದಾರ್ಥವನ್ನು ಪ್ರತಿಪಾದಿಸುವುದರಿಂದ ವಿಷ್ಣುಪರವೇ ಆಗಿದೆ ಎಂದು ನಿರೂಪಿಸುತ್ತಾರೆ.

ನ್ಯಾಯಸುಧಾ— ಹೀಗೆ ಮೀಮಾಂಸಾಶಾಸ್ತ್ರದ ಸಂಪ್ರದಾಯಾಭಿಜ್ಞರನ್ನು ಕುರಿತು ಸೂತ್ರದಲ್ಲಿರುವ ಬ್ರಹ್ಮಶಬ್ದವು ವಿಷ್ಣುಪರವೆನ್ನುವಲ್ಲಿ ಯುಕ್ತಿಯನ್ನು ಹೇಳಿ ಈಗ ಅಲ್ಪಜ್ಞರನ್ನು ಕುರಿತು ಈ ವಿಷಯದಲ್ಲಿ ಬ್ರಹ್ಮಶಬ್ದವು ನಾರಾಯಣ ಶಬ್ದದ ಸಮಾನಾರ್ಥಕವಾಗಿದೆ ಎನ್ನುವ ಪ್ರತೀತಿರೂಪವಾದ ಯುಕ್ತಿಯನ್ನು ಹೇಳಲಿಚ್ಛಿಸುತ್ತಾ ನಾರಾಯಣಶಬ್ದವನ್ನು ನಿರ್ವಚನ ಮಾಡುತ್ತಾರೆ—

ಮೂ ॥ ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ ।
ಗುಣಾ ನಾರಾ ಇತಿ ಜ್ಞೇಯಾಸ್ತದ್ವಾನ್ನಾರಾಯಣಃ ಸ್ಮೃತಃ ॥ ೮೩ ॥
ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಂ ।
ಅತೋ ನಾರಾಯಣಸ್ಯೈವ ಜಿಜ್ಞಾಸಾಽತ್ರ ವಿಧೀಯತೇ ॥ ೮೪ ॥

ಅ ॥ ಯತಃ=ಯಾವ ಕಾರಣದಿಂದ, ದೋಷಾರಚ್ಛಿದ್ರಶಬ್ದಾನಾಂ=ದೋಷ ಅರ ಛಿದ್ರ ಶಬ್ದಗಳಿಗೆ, ಪರ್ಯಾಯತ್ವಂ=ಏಕಾರ್ಥತ್ವವಿದೆಯೋ, "ಪರ್ಯಾಯೇಣೈವ ತೇ ಯಸ್ಮಾದ್ವದಂತ್ಯರ್ಥಾನ್ನ ಸಂಹತಾಃ । ಪರ್ಯಾಯತ್ವಂ ತತಸ್ಸರ್ವಪರ್ಯಾಯಾಣಾಂ ಪ್ರತಿಷ್ಠಿತಂ" ॥ ಎಂದುಕ್ತವಾಗಿದೆ. (ಯಾವ ಕಾರಣದಿಂದ ನಞ ವಿರುದ್ಧವೆನ್ನುವ ಅರ್ಥವನ್ನು ಹೇಳುತ್ತದೋ,) ತತಃ=ಆ ಕಾರಣ, ನಾರಾ ಇತಿ=ನಾರ ಎನ್ನುವ ಪದದಿಂದ ದೋಷವಿರುದ್ಧಗಳಾದ, ಗುಣಾಃ=ಗುಣಗಳು, ಜ್ಞೇಯಾಃ = ಹೇಳಲ್ಪಡುತ್ತವೆ ಎಂದು ತಿಳಿಯಲ್ಪಡಬೇಕು. ತದ್ವಾನ್=ದೋಷವಿರುದ್ಧ ಅಸಂಖ್ಯೇಯ ಕಲ್ಯಾಣಗುಣಗಳುಳ್ಳವನು, ನಾರಾಯಣಃ=ನಾರಾಯಣ ಶಬ್ದಕ್ಕೆ ಅರ್ಥಭೂತನು (ಹೀಗೆ) ಸ್ಮೃತಃ=ಸ್ಮೃತಿಯಲ್ಲಿ ಪ್ರಸಿದ್ಧನಾಗಿದ್ದಾನೆ. ಅಯಂ ಬ್ರಹ್ಮಶಬ್ದೋಽಪಿ=ಈ ಸೂತ್ರದಲ್ಲಿದ್ದ ಬ್ರಹ್ಮ ಶಬ್ದವೂ ಕೂಡ, ಗುಣಪೂರ್ತಿಮೇವ=ಸರ್ವ ಗುಣಪೂರ್ಣತ್ವವನ್ನೇ, ವದತಿ=ಹೇಳುತ್ತದೆ ಹಿ=ಶಬ್ದದಿಂದ ಬ್ರಹ್ಮ ಶಬ್ದಕ್ಕೆ ಗುಣಪೂರ್ಣತ್ವರೂಪಾರ್ಥ ಪರತ್ವವಿಷಯದಲ್ಲಿ 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' ಇತ್ಯಾದಿ ಶ್ರುತಿಪ್ರಸಿದ್ಧಿಯನ್ನು ತೋರಿಸುತ್ತಾರೆ. ಬ್ರಹ್ಮಶಬ್ದಕ್ಕೆ ಜೀವಾಭೇದವೇ ಅರ್ಥವೆಂದು ಪರರು ಮಾಡಿದ ಅಪವ್ಯಾಖ್ಯಾನವನ್ನು ಏವ ಶಬ್ದದಿಂದ ತಿರಸ್ಕರಿಸಿದರು. (ಯಾವ ಕಾರಣದಿಂದ ಬ್ರಹ್ಮಶಬ್ದವು ನಾರಾಯಣ ಶಬ್ದದ ಸಮಾನ ಅರ್ಥವುಳ್ಳದ್ದೋ,) ಅತಃ=ಆದ ಪ್ರಯುಕ್ತ, ಅತ್ರ=ಇಲ್ಲಿ, ('ಬ್ರಹ್ಮಜಿಜ್ಞಾಸಾ ಕರ್ತವ್ಯಾ' ಎನ್ನುವ ವಾಕ್ಯದಿಂದ) ನಾರಾಯಣಸ್ಯೈವ=ನಾರಾಯಣನಿಗೇನೇ, (ನಾರಾಯಣನದ್ದೇ) ಜಿಜ್ಞಾಸಾ=ವಿಚಾರವು (ಮಾಡಬೇಕೆಂದು), ವಿಧೀಯತೇ=ವಿಧಿಸಲ್ಪಡುತ್ತದೆ. (ಹೀಗೆ ತಿಳಿಯಲ್ಪಡುತ್ತದೆ.) ॥ ೮೩ ॥ ೮೪ ॥

ಸ. ರ. ವಿ— ಶ್ರುತಿಸಿದ್ಧವಾಗಿರುವುದರಿಂದಲೂ ಬ್ರಹ್ಮಶಬ್ದವು ವಿಷ್ಣುಪರವೆನ್ನುತ್ತಾರೆ.

ನ್ಯಾಯಸುಧಾ— ನಾರಾಯಣ ಶಬ್ದಕ್ಕೆ ಬೇರೆ ರೀತಿಯಿಂದಲೂ ನಿರ್ವಚನಮಾಡಲಿಕ್ಕೆ ಬರುವುದರಿಂದ ಹಿಂದೆ ನಿರ್ವಚನೆಮಾಡಿದ ಅರ್ಥವನ್ನು ಯಾರು ಒಡಂಬಡುವುದಿಲ್ಲವೋ ಆತನಿಗೆ ಬ್ರಹ್ಮಶಬ್ದಕ್ಕೆ ವಿಷ್ಣುಪರತ್ವವಿಷಯದಲ್ಲಿ ಬೇರೆ ಯುಕ್ತಿಯನ್ನು ಹೇಳುತ್ತಾರೆ—

**ಮೂ ॥ ಸಿದ್ಧತ್ವಾದ್ಬ್ರಹ್ಮಶಬ್ದಸ್ಯ ವಿಷ್ಣೌ ಸ್ಪಷ್ಟತಯಾ ಶ್ರುತೌ ।**
**ಅಂಭಸ್ಯಪಾರ ಇತ್ಯುಕ್ತೋ ನಾರಾಯಣಪದೋದಿತಃ (ಪದೇರಿತಃ) ।**
**ಆಪೋ ನಾರಾ ಇತಿ ಹ್ಯಾಹ ಸ ಏವಾಪ್ಸ್ವಂತರೀರಿತಃ ॥ ೮೫ ॥**

ಅ ॥ (1) ಶ್ರುತೌ='ತದೇವ ಬ್ರಹ್ಮ ಪರಮಂ ಕವೀನಾಂ' ಎಂಬುವ ಶ್ರುತಿಯಲ್ಲಿ, ಬ್ರಹ್ಮ ಶಬ್ದಸ್ಯ=ಬ್ರಹ್ಮಶಬ್ದಕ್ಕೆ, ವಿಷ್ಣೌ=ಶ್ರೀ ಹರಿಯಲ್ಲಿ, ಸ್ಪಷ್ಟತಯಾ=ಮುಖ್ಯವಾಗಿ, ಸಿದ್ಧತ್ವಾತ್=ಸಿದ್ಧಿ ಇರೋಣದರಿಂದ, (ಸೂತ್ರದಲ್ಲಿರುವ ಬ್ರಹ್ಮಶಬ್ದವು ವಿಷ್ಣುಪರವೆಂದು ತಿಳಿಯಲ್ಪಡುತ್ತದೆ.) (2) ('ತದೇವ ಬ್ರಹ್ಮ ಪರಮಂ' ಎನ್ನುವ ಶ್ರುತಿಯಲ್ಲಿ ತತ್ ಶಬ್ದದಿಂದ ವಿಷ್ಣುವಿಗೆ ಪರಾಮರ್ಶವಿದ್ದರೆ ಆಗಬಹುದಿತ್ತು. ಅದೇವೇ ಹೇಗೆ ಕೂಡುತ್ತದೆಂದರೆ) ಅಂಭಸ್ಯಪಾರೇ ಇತಿ= 'ತದೇವ ಬ್ರಹ್ಮ' ಎನ್ನುವುದಕ್ಕೆ ಉಪಕ್ರಮಭೂತವಾದ 'ಅಂಭಸ್ಯಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್' ಎನ್ನುವ ವಾಕ್ಯದಲ್ಲಿ, ನಾರಾಯಣಪದೋದಿತಃ= ನಾರಾಯಣ ಎನ್ನುವ ಪದದಿಂದ ಹೇಳಲ್ಪಟ್ಟವನೇ, ಉಕ್ತಃ=ಹೇಳಲ್ಪಟ್ಟಿದ್ದಾನೆ. (3) ('ಅಂಭಸ್ಯ ಪಾರೇ' ಎನ್ನುವ ವಾಕ್ಯವು ನಾರಾಯಣ ಪದದ ಸಮಾನಾರ್ಥಕವಾಗುವುದು ಹೇಗೆಂದರೆ—) ಹಿ=ಯಾವ ಕಾರಣದಿಂದ, ಆಪೋನಾರಾ ಇತಿ='ಆಪೋನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ' ॥ ಎನ್ನುವ ಸ್ಮೃತಿಯು, (ನೀರಿನಲ್ಲಿರುವಿಕೆಯನ್ನು ನಾರಾಯಣಶಬ್ದದ ಅರ್ಥವನ್ನಾಗಿ,) ಆಹ= ಹೇಳುತ್ತದೋ, (ಆದಕಾರಣ 'ಅಂಭಸ್ಯ ಪಾರೇ' ಅಪಾರವಾದ ನೀರಿನಲ್ಲಿರುವವನು ಎನ್ನುವ ವಾಕ್ಯವು ನಾರಾಯಣ ಶಬ್ದದ ಸಮಾನಾರ್ಥವುಳ್ಳದ್ದಾಗುತ್ತದೆ.) (4) ಮತ್ತು (ಬೇರೆ ಶಾಖೆಯಲ್ಲಿ 'ಮಮಯೋನಿರಪ್ಸ್ವಂತಃ' ಎನ್ನುವುದರಿಂದ,) ಸ ಏವ=ಆ ವಿಷ್ಣುವೇ, ಅಪ್ಸ್ವಂತಃ=ನೀರಿನಲ್ಲಿದ್ದಾನೆಂದು, ಈರಿತಃ=ಹೇಳಲ್ಪಟ್ಟಿದ್ದಾನೆ. (ಆ ಸಮಾಖ್ಯೆಯಿಂದಲೂ 'ಅಂಭಸ್ಯಪಾರೇ' ಎನ್ನುವ ಉಪಕ್ರಮವಾಕ್ಯವು ವಿಷ್ಣುಪರವೇ ಸರಿ.)

ತಾ ॥ **ನ್ಯಾಯಸುಧಾ**— (1) ಮುಖ್ಯ ಅಮುಖ್ಯಾರ್ಥಗಳಲ್ಲಿ ಮುಖ್ಯಾರ್ಥವನ್ನೇ ಸ್ವೀಕರಿಸಬೇಕು. ಮುಖ್ಯಾರ್ಥವು ಸರ್ವಥಾ ಕೂಡದಿದ್ದರೆ ಅಮುಖ್ಯಾರ್ಥವನ್ನೂ ಸ್ವೀಕರಿಸಬೇಕು. 'ತದೇವ ಬ್ರಹ್ಮ' ಎನ್ನುವ ಶ್ರುತಿಯು ವಿಷ್ಣುವ್ಯತಿರಿಕ್ತರಿಗೆ ಬ್ರಹ್ಮತ್ವವನ್ನು ನಿಷೇಧಿಸಿ ವಿಷ್ಣುವಿನಲ್ಲಿಯೇ ಮುಖ್ಯವೃತ್ತಿಯಿಂದ ಬ್ರಹ್ಮಶಬ್ದವಾಚ್ಯತ್ವವಿರುವುದೆಂದು ಸಾಧಿಸಿರುವಪ್ರಯುಕ್ತ ಈ ಸೂತ್ರದಲ್ಲಿ ಬ್ರಹ್ಮಶಬ್ದದಿಂದ ಮುಖ್ಯಾರ್ಥನಾದ ವಿಷ್ಣುವನ್ನು ಸ್ವೀಕರಿಸಿದರೆ ಬಾಧಕವಿಲ್ಲದಿರುವುದರಿಂದ ಈ ಬ್ರಹ್ಮಶಬ್ದವು ವಿಷ್ಣುಪರವೇ ಎಂದು ನಿಶ್ಚಿತವಾಗುತ್ತದೆ. (2) 'ಅಂಭಸ್ಯ ಪಾರೇ' ಎಂಬ ಉಪಕ್ರಮವಾಕ್ಯವು ನಾರಾಯಣ ಶಬ್ದದ ಸಮಾನಾರ್ಥಕವಾಗಿರುವುದರಿಂದ ನಾರಾಯಣ ಪರವೇ. ಅಂತೂ ಪ್ರಕೃತ ಪರಾಮರ್ಶವನ್ನು ಬಿಟ್ಟು ಅಪ್ರಕೃತಪರಾಮರ್ಶವನ್ನು ಅಂಗೀಕರಿಸುವುದು ಅಯುಕ್ತವಾಗಿರುವುದರಿಂದ 'ತದೇವ' ಎನ್ನುವಲ್ಲಿದ್ದ ತತ್ ಪದದಿಂದ 'ಅಂಬಸ್ಯ ಪಾರೇ' ಎನ್ನುವ ಉಪಕ್ರಮವಾಕ್ಯದಿಂದ ಪ್ರಕೃತನಾದ ನಾರಾಯಣನಿಗೇನೇ ಪರಾಮರ್ಶವೆಂದು ಸಿದ್ಧವಾಗುತ್ತದೆ ॥ ೮೫ ॥

'ಮಮ ಯೋನಿರಪ್ಸ್ವಂತಸ್ಸಮುದ್ರೆ' ಎಂದು ಶಾಖಾಂತರದಲ್ಲಿದ್ದ ವಾಕ್ಯವೂ ವಿಷ್ಣು ಪರವಾಗಿದ್ದರೆ ಅದರ ಸಮಾಖ್ಯೆಯಿಂದ 'ಅಂಭಸ್ಯಪಾರೇ' ಎನ್ನುವ ವಾಕ್ಯವೂ ನಾರಾಯಣಪರವಾಗಬಹುದಿತ್ತು. ಅದೇವೇ ವಿಷ್ಣುಪರವಾಗುವುದು ಹೇಗೆ ಎಂದರೆ—

**ಮೂ ॥ ಕಾಮತೋ ವಿಧಿರುದ್ರಾದಿ ಪದದಾತ್ರ್ಯಾ ಸ್ವಯಂ ಶ್ರಿಯಾ ॥ ೮೬ ॥**
**ಯೋನಿತ್ವೇನಾತ್ಮನೋ ವಿಷ್ಣೋಸ್ತಿಷ್ಠಂತೀತ್ಯುದಿತಸ್ಯ ಚ ।**
**ಯಸ್ಮಿನ್ ದೇವಾ ಅಧೀತ್ಯುಕ್ತ್ವಾ ಸಮುದ್ರಂ ಸ್ಥಾನಮೇವ ಚ ॥ ೮೭ ॥**
**ನಾಮ ಚಾಕ್ಷರಮಿತ್ಯೇವ ಋಚ ಇತ್ಯುದಿತಂ ತು ಯತ್ ।**
**ಯತಃ ಪ್ರಸೂತೇತ್ಯುಕ್ತ್ವಾ ಚ ತದೇವ ಬ್ರಹ್ಮ ಚಾಬ್ರವೀತ್ ॥ ೮೮ ॥**

ಅ ॥ (1)ಕಾಮತಃ(**'ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ'** ಎಂದು) ಸ್ವೇಚ್ಛಾಮಾತ್ರದಿಂದಲೇ, ವಿಧಿರುದ್ರಾದಿಪದದಾತ್ರ್ಯಾ=ಬ್ರಹ್ಮರುದ್ರಾದಿಗಳಿಗೆ ಆಯಾಯ ಪದವಿಯನ್ನು ಕೊಡತಕ್ಕ, ಸ್ವಯಂ ಶ್ರಿಯಾ=ಸಾಕ್ಷಾತ್ ಲಕ್ಷ್ಮಿಯಿಂದ (ರುದ್ರಾದಿ ದೇವತೆಗಳಿಗೆ ಪದಪ್ರದಾಯಕಳೆಂದು ಹೇಳಲ್ಪಟ್ಟ ಮಹಾಲಕ್ಷ್ಮಿಯಿಂದ) ಆತ್ಮನಃ ಯೋನಿತ್ವೇನ='ಮಮ ಯೋನಿಃ' ತನಗೂ ಕಾರಣಭೂತನೆಂದು ಹೇಳಿರುವುದರಿಂದ, **'ಮಮಯೋನಿರಪ್ಸ್ವಂತಃ ಸಮುದ್ರೇ'** ನನಗ ಕಾರಣೀಭೂತನಾದವನು ಸಮುದ್ರದಲ್ಲಿ ನೀರಿನಲ್ಲಿದ್ದಾನೆಂದು ಹೇಳಲ್ಪಟ್ಟವನು ವಿಷ್ಣುವೇ ಸರಿ. (2) (ಹೀಗೆ ನಾರಾಯಣ ಶಬ್ದ ಸಮಾಖ್ಯೆಯಿಂದಲೂ ಆಂಭ್ರಣೀ ಸೂಕ್ತ ಸಮಾಖ್ಯೆಯಿಂದಲೂ 'ಅಂಭಸ್ಯಪಾರೆ' ಎಂಬುವ ಉಪಕ್ರಮವಾಕ್ಯವು ವಿಷ್ಣುವಿಷಯಕವೆಂದು ಸಮರ್ಥಿಸಿ 'ತದೇವ ಬ್ರಹ್ಮ' ಎಂಬುವ ಪರಾಮರ್ಶವು ವಿಷ್ಣುವಿಷಯಕವೇ ಎಂದು ಸಮರ್ಥಿಸಲ್ಪಟ್ಟಿತು. ಬೇರೆ ಹೇತುಗಳಿಂದಲೂ ಅದನ್ನೇ ಸಮರ್ಥಿಸುತ್ತಾರೆ) 'ವಿಷ್ಣೋಽಸ್ತಿಷ್ಠಂತೀತಿ'=**'ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ'** ಎಂಬುವ ಐತರೇಯ ಶ್ರುತಿಯಲ್ಲಿ, ಉದಿತಸ್ಯ ಚ='ಮಹದಾದಿ ತತ್ವಾಭಿಮಾನಿ ದೇವತೆಗಳ ಸಮುದಾಯವು ತನ್ನ ಆಜ್ಞಾಮಾತ್ರದಿಂದಲೇ ಆಯಾಯ ಕಾರ್ಯವನ್ನು ಮಾಡುತ್ತದೆ' ಎಂದು ಹೇಳಲ್ಪಟ್ಟ ಶ್ರೀವಿಷ್ಣುವಿಗೇನೇ, ಈ ತೈತ್ತಿರೀಯ ಶ್ರುತಿಯಲ್ಲಿಯೂ ಯಸ್ಮಿನ್ ದೇವಾ ಅಧೀತಿ=**'ಯಸ್ಮಿನ್ನಿದಂ ಸಂಚವಿಚೈತಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ'** ಯಾರಲ್ಲಿ ಸರ್ವ ದೇವತೆಗಳೂ ಆಶ್ರಯಿಸುತ್ತಾ ಇರುವರೋ ಎಂದು ಸರ್ವದೇವಾಶ್ರಯತ್ವವನ್ನು, ಉಕ್ತ್ವಾ=ಹೇಳಿ, ('ತದೇವ ಬ್ರಹ್ಮ' ಎಂದು ಹೇಳಿರುವರು.) (3) (ಮತ್ತು ಜ್ಞಾಪಕಾಂತರವನ್ನೂ ಹೇಳುತ್ತಾರೆ)ಸಮುದ್ರಂ ಸ್ಥಾನಮೇವ ಚ=(**'ಸಮುದ್ರೇಽಂತಃ ಕವಯೋ ವಿಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ'** ಎಂದು ಕ್ಷೀರಾಬ್ಧಿಶಾಯಿಯೆಂದು ಹೇಳಲ್ಪಟ್ಟ ಶ್ರೀ ವಿಷ್ಣುವಿಗೇನೇ, ಇಲ್ಲಿಯೂ 'ಯಮಂತಃ ಸಮುದ್ರೇ **ಕವಯೋಽವಯಂತಿ'** ಎಂದು) ಸಮುದ್ರಾಖ್ಯ ಸ್ಥಾನವನ್ನೂ (ಹೇಳಿ), 'ತದೇವ ಬ್ರಹ್ಮ' ಇತ್ಯಬ್ರವೀತ್=ಅವನೇ ಬ್ರಹ್ಮನೆಂದು ಹೇಳಿರುವರು. (ಸಮುದ್ರಸ್ಥಾನತ್ವರೂಪ ಲಿಂಗದಿಂದಲೂ ಶ್ರೀ ವಿಷ್ಣುವೇ ತತ್ ಎನ್ನುವ ಪರಾಮರ್ಶವಿಷಯನೆಂದು ತಿಳಿಯುತ್ತದೆ.) (4) (ಬೇರೆ ಯುಕ್ತಿಯನ್ನು ಹೇಳುತ್ತಾರೆ.) ನಾಮ ಚ ಅಕ್ಷರಮಿತ್ಯೇವ=(**'ಋಚೋಽಕ್ಷರೇ ಪರಮೇ ವ್ಯೋಮನ್'** ಎನ್ನುವಲ್ಲಿ ಅಕ್ಷರನಾಮಕನೆಂದು ಪ್ರಸಿದ್ಧನಾದ ಶ್ರೀ ವಿಷ್ಣುವಿಗೇನೇ ಇಲ್ಲಿಯೂ 'ಯದಕ್ಷರೇ ಪರಮೇ ಪ್ರಜಾಃ' ಎಂದು) ಅಕ್ಷರ ಎನ್ನುವ ನಾಮವನ್ನೂ ಹೇಳಿ 'ತದೇವಬ್ರಹ್ಮ'

ಎಂದು ಹೇಳಿರುವರು. ಆದುದರಿಂದಲೂ ತತ್ ಪದದಿಂದ ವಿಷ್ಣುವನ್ನೇ ಪರಾಮರ್ಶಿಸಿಕೊಳ್ಳಬೇಕು.) (5) ('ಅಕ್ಷರ' ಎಂಬುವ ಹೆಸರು ವಿಷ್ಣುವು ಹೊರತು ಬೇರೆ ಯಾರಿಗೂ ಏತಕ್ಕೆ ಕೂಡಲಾರ ದೆಂದರೆ—) 'ಋಚ ಇತಿ ಯತ್ ಉದಿತಂ=ಯ ವ ಕಾರಣದಿಂದ 'ಋಚೋಽಕ್ಷರೇ ಪರಮೇ ವ್ಯೋಮನ್' ಎಂದು ಅಕ್ಷರ ಎಂಬ ನಾಮವು ವಾಮನಸೂಕ್ತದಲ್ಲಿ ವಿಷ್ಣುವಿನಲ್ಲಿಯೇ ಪ್ರಯುಕ್ತ ವಾಗಿಯದೋ. (ಆದಕಾರಣ ಬೇರೆ ಯಾರಿಗೂ ಆ ನಾಮವಿಲ್ಲ. 'ತು'=ಶಬ್ದದಿಂದ ಅಕ್ಷರ ನಿಗೆ "ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ । ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಸ್ಸದಾ" ಎಂದು ಹೇಳಿದ ಚತುರ್ವಿಧ ವಿನಾಶಾಭಾವರೂಪವಾದ ಅಕ್ಷರಶಬ್ದಪ್ರವೃತ್ತಿನಿಮಿತ್ತವಾದ ವಿಶೇಷವು ತೋರಿಸಲ್ಪಟ್ಟಿತು. ವಿಷ್ಣುವ್ಯತಿರಿಕ್ತರಿಗೆ ಈ ನಾಲ್ಕು ವಿಧ ವಿನಾಶವಿಲ್ಲವೆನ್ನುವುದು ಕೂಡುವುದಿಲ್ಲವಷ್ಟೆ.) (6) (ಜ್ಞಾಪಕಾಂತರವನ್ನು ಹೇಳುತ್ತಾರೆ.) 'ಯತಃ ಪ್ರಸೂತೇತಿ ಉಕ್ತ್ವಾ'='ಮಮ ಯೋನಿರಪ್ಸ್ವಂತಃಸಮುದ್ರೇ' ಎಂದು ಪ್ರಕೃತಿಗೆ ಕಾರಣನೆಂದು ಹೇಳಲ್ಪಟ್ಟವನಿಗೇನೇ ಇಲ್ಲಿಯೂ 'ಯತಃ ಪ್ರಸೂತಾ ಜಗತಃ ಪ್ರಸೂತಿಃ' ಎಂದು ಜಗದುತ್ಪಾದಕಳಾದ ಲಕ್ಷ್ಮೀಕಾರಣತ್ವವನ್ನು ಹೇಳಿ; ತದೇವ ಬ್ರಹ್ಮ=ಆ ವಿಷ್ಣುವೇ ಬ್ರಹ್ಮ ಶಬ್ದವಾಚ್ಯನು, ಚ=ಈಪ್ರಕಾರ, ಅಬ್ರವೀತ್=ಹೇಳಿರುವರು.

ತಾ || ಸ. ರ. ವಿ. (1) '**ಅಂಬಸ್ಯಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್**' ಎಂದು ನಾರಾಯಣಾನುವಾಕ್ಯದ ಉಪಕ್ರಮವಾಕ್ಯದಲ್ಲಿ ಪ್ರತೀಯಮಾನನಾದವನು ಜಲಶಾಯಿತ್ವರೂಪಲಿಂಗದಿಂದ ನಾರಾಯಣನೇ ಆಗಬೇಕು. '**ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ**' ಎಂದು ವ್ಯಾಸಸ್ಮೃತಿಯಲ್ಲಿ ಉಕ್ತವಾಗಿದೆ. (2) '**ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ**' ಎಂದು ಇಚ್ಛಾನುಸಾರವಾಗಿ ಬ್ರಹ್ಮರುದ್ರಾದಿ ದೇವತೆಗಳಿಗೆ ಆಯಾಯ ಪದವಿಯನ್ನು ದಯಪಾಲಿಸುತ್ತಿರುವ ಸಾಕ್ಷಾಲ್ಲಕ್ಷ್ಮೀದೇವಿಯು ತನಗೆ ಕಾರಣೀಭೂತನಾದ ನಾರಾಯಣನೇ '**ಮಮ ಯೋನಿರಪ್ಸ್ವಂತಃ ಸಮುದ್ರೇ**' ಎಂದು ನೀರಿನಲ್ಲಿ ಇದ್ದಾನೆಂದು ಪ್ರತಿಪಾದಿಸಿರುವಳು. (3) ಮತ್ತು ಐತರೇಯಶ್ರುತಿಯಲ್ಲಿ '**ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ**' ಎಂದು ತನ್ನ ಆಜ್ಞಾಮಾತ್ರದಿಂದಲೇ ಎಲ್ಲಾ ಕಾರ್ಯಗಳನ್ನು ಮಾಡತಕ್ಕ ಎಲ್ಲಾ ದೇವತೆಗಳಿಗೆ ಮುಖ್ಯಾಶ್ರಯನಾದ ಶ್ರೀ ವಿಷ್ಣುವೇ ತೈತ್ತಿರೀಯ ಶ್ರುತಿಯಲ್ಲಿ '**ಯಸ್ಮಿನ್ನಿದಂ ಸಂಚವಿಚೈತಿ ಸರ್ವಂ ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ**' ಎಂದು ಸಮಸ್ತದೇವತೆಗಳಿಗೂ ಆಶ್ರಯನೆಂದು ಹೇಳಲ್ಪಟ್ಟಿದ್ದಾನೆ. (4) '**ಸಮುದ್ರೇಽಂತಃ ಕವಯೋ ವಿಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ**' ಎಂದು ತೈತ್ತಿರೀಯದಲ್ಲಿ ಕ್ಷೀರಾಬ್ಧಿಶಾಯಿಯೆಂದು ಹೇಳಲ್ಪಟ್ಟ ಶ್ರೀಹರಿಯೇ ಇಲ್ಲಿ '**ಯಮಂತಸ್ಸಮುದ್ರೇ ಕವಯೋಽವಯಂತಿ**' ಎಂದು ಸಮುದ್ರದಲ್ಲಿರುವವನೆಂದು ಹೇಳಲ್ಪಟ್ಟಿದ್ದಾನೆ. (5) '**ಋಚೋ ಅಕ್ಷರೇ ಪರಮೇ ವ್ಯೋಮನ್**' ಎಂದು ಅಕ್ಷರನಾಮಕನೆಂದು ಪ್ರಸಿದ್ಧನಾದ ಶ್ರೀವಿಷ್ಣುವಿಗೇನೇ ಇಲ್ಲಿಯೂ '**ಯದಕ್ಷರೇ ಪರಮೇ ಪ್ರಜಾಃ**' ಎಂದು ಅಕ್ಷರ ಎನ್ನುವ ನಾಮವನ್ನು ಹೇಳಿರುತ್ತಾರೆ. (6) '**ಮಮ ಯೋನಿ ರಪ್ಸ್ವಂತಃ ಸಮುದ್ರೇ**' ಎಂದು ಪ್ರಕೃತಿಗೆ ಕಾರಣನೆಂದು ಹೇಳಲ್ಪಟ್ಟವನೇ ಇಲ್ಲಿಯೂ '**ಯತಃ ಪ್ರಸೂತಾ ಜಗತಃ ಪ್ರಸೂತೀ**' ಎಂದು ಜಗತ್ಕಾರಣನೆಂದು ಹೇಳಲ್ಪಟ್ಟಿದ್ದಾನೆ. (7) ಮತ್ತು '**ಯದೋಷಧೀಭಿಃ ಪುರುಷಾನ್ ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ**' ಎಂದು ವಿಷ್ಣುಶಬ್ದ ಪ್ರವೃತ್ತಿನಿಮಿತ್ತವನ್ನು ಹೇಳಿ '**ತದೇವರ್ತಂ ತದು ಸತ್ಯಮಾಹುಃ ತದೇವ**

ಬ್ರಹ್ಮ ಪರಮಂ ಕವೀನಾಂ" ಎನ್ನುವುದರಿಂದ 'ಅಂಭಸ್ಯಪಾರೇ' ಎಂದು ಉಪಕ್ರಮದಲ್ಲಿ ಹೇಳಲ್ಪಟ್ಟ ಸಮುದ್ರಶಾಯಿಯನ್ನೇ 'ಅಸ್ಯ ವಾಮಸ್ಯ' ಇತ್ಯಾದಿ ಸೂಕ್ತಾಂತರಗಳಲ್ಲಿ ವಿಷ್ಣುವಿನಲ್ಲಿಯೇ ಪ್ರಸಿದ್ಧಗಳಾದ ನಾಮ ಮತ್ತು ಲಿಂಗಗಳಿಂದ ನಿರ್ದೇಶಿಸಲ್ಪಟ್ಟವನನ್ನೇ 'ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ ಪರಮಂ ಕವೀನಾಂ' ಎನ್ನುವಲ್ಲಿ ತತ್ ಶಬ್ದದಿಂದ ಪರಾಮರ್ಶಿಸಿಕೊಂಡು 'ತದೇವ ಬ್ರಹ್ಮ' ಎನ್ನುವ ತೈತ್ತಿರೀಯಶ್ರುತಿಯು ಬ್ರಹ್ಮಶಬ್ದದಿಂದ ಬ್ರಹ್ಮತ್ವವನ್ನು ವಿಧಾನಮಾಡಿರುತ್ತದೆ. ಆದಕಾರಣ ಅಥಾತೋ ಬ್ರಹ್ಮಜಿಜ್ಞಾಸಾ ಎನ್ನುವಲ್ಲಿದ್ದ ಬ್ರಹ್ಮಶಬ್ದದಿಂದ ಹೇಳಲ್ಪಟ್ಟವನು ಶ್ರೀ ನಾರಾಯಣನೇ.

ನ್ಯಾಯಸುಧಾ— (1) 'ತಾರ್ಕ್ಷ್ಯೇಂದ್ರ ಧರ್ಮನಾಸತ್ಯಸಂಕ್ರಂದನಾಚ್ಛ್ರಿಯ ಈರಿತಾಃ' ಎಂದು ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಹೇಳಿದ ಪ್ರಕಾರ ಇಂದ್ರಾಗ್ನ್ಯಾದಿಗಳಲ್ಲಿಯೂ ಅಮುಖ್ಯವಾಗಿ ಶ್ರೀ ಶಬ್ದವಾಚ್ಯತ್ವವಿದ್ದುದರಿಂದ ಅವರನ್ನು ಪ್ರಕೃತ ಪರಿಗ್ರಹಿಸ ಕೂಡದೆಂಬ ಅಭಿಪ್ರಾಯದಿಂದ 'ಸ್ವಯಂ ಶ್ರಿಯಾ' ಎಂದು ಹೇಳಿರುವರು. (2) ಮಮ ಯೋನಿರಪ್ಸ್ವಂತಸ್ಸಮುದ್ರೇ' ಎನ್ನುವುದು ಅಂಭೃಣೀ ವಾಕ್ಯವು. ಏಕೆಂದರೆ— ಅಂಭೃಣೀ ವಾ ವಾಕ್ ಆತ್ಮಾನಂ ತುಷ್ಟಾವ' ಎಂದು ಉಪಕ್ರಮದಲ್ಲಿ ಹೇಳಿರುತ್ತದೆ. ಆದಕಾರಣ ಅಂಭೃಣಿಯನ್ನು ಕುರಿತು ಕಾರಣತ್ವ ತೋರಿದರೂ ಲಕ್ಷ್ಮಿಯನ್ನು ಕುರಿತು ತೋರದಿರುವುದರಿಂದ ಲಕ್ಷ್ಮೀ ಕಾರಣತ್ವದಿಂದ ಸಮುದ್ರಸ್ಥನು ಶ್ರೀವಿಷ್ಣುವೆಂದು ನಿಶ್ಚಯಿಸುವುದು ಹೇಗೆಂದರೆ— 'ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ' ಇತ್ಯಾದಿಗಳಿಂದ ವಾಗಭಿಮಾನಿನಿಯಾದ ಈ ಅಂಭೃಣೀದೇವಿಗೆ ಸ್ವೇಚ್ಛಾಮಾತ್ರದಿಂದಲೇ ಬ್ರಹ್ಮರುದ್ರಾದಿ ಪದದಾತೃತ್ವವು ತೋರುತ್ತದೆ. ಈ ಪದದಾತೃತ್ವರೂಪ ಮಹಾಮಹಿಮೆಯಾದರೂ ಲಕ್ಷ್ಮೀಹೊರತು ಬೇರೆಯವರಿಗೆ ಕೂಡಲಾರದು ಏಕೆಂದರೆ, ಬೇರೆಯವರೆಲ್ಲರೂ ಚತುರ್ಮುಖಬ್ರಹ್ಮನಿಂದಲೇ ಹುಟ್ಟಿದವರು. ಆದಪ್ರಯುಕ್ತ ಈ ವಚನವು ಅಂಭೃಣೀಶಬ್ದವಾಚ್ಯಳಾದ ಮಹಾಲಕ್ಷ್ಮಿದ್ದೇ ಎಂದು ನಿಶ್ಚಿತವಾಗುತ್ತದೆ. ಅಥವಾ ಲಕ್ಷ್ಮೀದೇವಿಯು ತನಗೂ ಕಾರಣನೆಂದು ಹೇಳಿರುವುದರಿಂದ 'ಅಪ್ಸ್ವಂತಃ' ಎನ್ನುವಲ್ಲಿ ವಿಷ್ಣುವೇ ಹೇಳಲ್ಪಡುತ್ತಾನೆಂದು ಹೇಳಿದ್ದು ಕೂಡುವುದಿಲ್ಲ. ಶ್ರೀ ಲಕ್ಷ್ಮೀ ಕಾರಣತ್ವವು ಬ್ರಹ್ಮರುದ್ರಾದಿಗಳಲ್ಲಿ ಯಾರಾದರೂ ಒಬ್ಬನಲ್ಲಿ ಕೂಡಬಹುದು ಎಂಬುವ ಪೂರ್ವಪಕ್ಷವನ್ನು ತಿರಸ್ಕರಿಸುವುದಕ್ಕಾಗಿ 'ಕಾಮತೋ ವಿಧಿರುದ್ರಾದಿ ಪದದಾತ್ರ್ಯ' ಎಂದು ಹೇಳಿರುತ್ತಾರೆ. (3) 'ತದೇವ ಬ್ರಹ್ಮ' ಎನ್ನುವಲ್ಲಿ ಯಾರು ಪರಾಮರ್ಶವಿಷಯನೋ ಆತನೇ 'ಯಸ್ಮಿನ್ ದೇವಾಃ' ಎನ್ನುವಲ್ಲಿ ಎಲ್ಲಾ ದೇವತೆಗಳಿಗೂ ಆಶ್ರಯನೆಂದು ತೋರುತ್ತಾನೆ. ಆ ಸರ್ವದೇವಾಶ್ರಯತ್ವವು 'ಸಪ್ತಾರ್ಧಗರ್ಭಾ' ಎಂದು ಶಾಖಾಂತರದಲ್ಲಿದ್ದ ವಾಕ್ಯದಿಂದ ಶ್ರೀ ವಿಷ್ಣುವಿನ ಧರ್ಮವೆಂದು ತಿಳಿಯಲ್ಪಟ್ಟದೆ. ಆದಪ್ರಯುಕ್ತವೂ ತತ್ ಎನ್ನುವಲ್ಲಿ ಪರಾಮರ್ಶಕ್ಕೆ ವಿಷಯನು ಶ್ರೀವಿಷ್ಣುವೇ. (4) ಸರ್ವಜಗತ್ಕಾರಣೀಭೂತಳಾದ ಪ್ರಕೃತಿಶಬ್ದವಾಚ್ಯಳಾದ ಮಹಾಲಕ್ಷ್ಮಿಗೂ ಕಾರಣೀಭೂತನಾದವನು 'ಮಮ ಯೋನಿರಪ್ಸ್ವಂತಃ ಸಮುದ್ರೇ' 'ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ' ಇದು ಮೊದಲಾದ ಶ್ರುತಿಸ್ಮೃತಿಗಳಲ್ಲಿ ಶ್ರೀವಿಷ್ಣುವೆಂದೇ ಪ್ರಸಿದ್ಧನು. ಆದಕಾರಣ ಆ ಶ್ರೀ ವಿಷ್ಣುವೇ 'ತತ್' ಎನ್ನುವ ಪರಾಮರ್ಶಕ್ಕೆ ವಿಷಯನು.

(5) ಈ ಪ್ರಕಾರ 'ತದೇವ ಬ್ರಹ್ಮ' ಎಂಬುವ ವಾಕ್ಯವು ವಿಷ್ಣುವಿಷಯಕವಾಗಿರುವುದರಿಂದ ಬ್ರಹ್ಮ ಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವೆಂದು ಸಿದ್ಧವಾದ ಮೇಲೆ ಸೂತ್ರದಲ್ಲಿರುವ ಬ್ರಹ್ಮ

ಶಬ್ದವೂ ನಾರಾಯಣಪರವೆಂದೇ ಸಿದ್ಧವಾಯಿತು. (6) ಅಥ ಶಬ್ದೇನಾಧಿಕಾರವ ತ ಇತ್ಯ ಮುನಾ ಫಲಂ। ಬ್ರಹ್ಮ ಶಬ್ದೇನ ವಿಷಯಂ ಸೂಚಯಾನ ಸೂತ್ರಕೃತ್' ಎಂದು ಹೇಳಿದ ರೀತಿಯಾಗಿ ಅಧಿಕಾರಿ ವಿಷಯ ಪ್ರಯೋಜನ ಸಂಬಂಧ ಹೀಗೆ ನಾಲ್ಕು ಅನುಬಂಧಗಳಿದ್ದುದರಿಂದ "ತಸ್ಮಾಚ್ಛಾಸ್ತ್ರೇಣ ಜಿಜ್ಞಾಸ್ಯಮಸ್ಮದೀಯಂ ಗುಣಾರ್ಣವಂ । ವಾಸುದೇವಾಖ್ಯಮದ್ವಂದ್ವಂ ಪರಂ ಬ್ರಹ್ಮಾಖಿಲೋತ್ತಮಂ ॥" ಎಂದು ಹೇಳಿದ ಪ್ರಕಾರ ಶಾಸ್ತ್ರದಿಂದ ಬ್ರಹ್ಮಜಿಜ್ಞಾಸಾ (ಸಕಲ ಜಗಜ್ಜನ್ಮಾದಿಕಾರಣನೂ, ಗುಣಪರಿಪೂರ್ಣನೂ, ಸರ್ವೋತ್ತಮನೂ ಆದ ನಾರಾಯಣನ ವಿಚಾರ) ವನ್ನು ಅವಶ್ಯವಾಗಿ ಮಾಡಬೇಕು. ಆದುದರಿಂದ ಶ್ರುತ್ಯರ್ಥ ನಿರ್ಣಾಯಕ ನ್ಯಾಯವನ್ನು ಪ್ರತಿಪಾದಿಸುವ ಈ ಬ್ರಹ್ಮ ಮೀಮಾಂಸಾ ಶಾಸ್ತ್ರವು ಆರಂಭಣೀಯವೆಂದು ಸಿದ್ಧವಾಯಿತು. ॥ ೮೬ ॥ ೮೭ ॥ ೮೮ ॥

ನಮೋ ಭಗವತೇ ತಸ್ಮೈ ವ್ಯಾಸರೂಪಾಯ ವಿಷ್ಣವೇ ।
ಯತ್ಪ್ರಸಾದಾತ್ಪರಂ ಜ್ಞಾನಂ ಪ್ರಾಪ್ಯತೇ ವಿಬುಧಾದಿಭಿಃ ॥
ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ವಿದ್ಯಾ ದಿವಾಕರಾನ್ ।
ವಂದೇ ಕುದೃಷ್ಟಿ ದುರ್ಬೋಧ ವ್ಯಾಸಸಿದ್ಧಾಂತದೀಪಕಾನ್ ॥
ತಂತ್ರಿನಾರಾಯಣಾಖ್ಯೇನ ಭಾಷಯಾ ಸುಧಿಯಾಂ ಮುದೇ ।
ಅನುವ್ಯಾಖ್ಯಾ ಸುಧಾ ಸಾರಃ ಕೀರ್ತಿತಃ ಕೃಪಯಾ ಗುರೋಃ ॥
ಅನುವ್ಯಾಖ್ಯಾನ ಟೀಕಾ ಸನ್ನ್ಯಾಯರತ್ನಾವಳೀ ಶುಭಾ ।
ಪುರಾತನೀ ಪರಾ ಸಾಽಪಿ ಶ್ಲಾಘಿತಾ ನಯಚಂದ್ರಿಕಾ ॥
ತಯೋರ್ವಿಶೇಷೋಽಪ್ಯತ್ರೈವ ಸಂಗೃಹೀತಃ ಪ್ರಯತ್ನತಃ ।
ಗ್ರಂಥೋಽಯಂ ಭಾತು ಮಣಿವಲ್ಲೋಕೇ ಕೃಷ್ಣೇ ನಿವೇದಿತಃ ॥

॥ ಜಿಜ್ಞಾಸಾಧಿಕರಣಂ ಸಂಪೂರ್ಣಂ ॥

॥ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು. ॥



॥ ಶ್ರೀಃ ॥

# ಶ್ರೀಮದನುವ್ಯಾಖ್ಯಾನವು.



## ಜನ್ಮಾಧಿಕರಣವು.

ಓಂ ॥ ನಾರಾಯಣಮಸಂಖ್ಯೇಯ ಕಲ್ಯಾಣಗುಣವಿಗ್ರಹಂ ।
ವಂದೇ ಭಕ್ತ್ಯಾ ಸದಾ ಧ್ವಸ್ತದೂಷಣಂ ಪರಮಪ್ರಿಯಂ ॥
ನಮೋ ವೇದಾಂತರಾದ್ಧಾಂತ ಸೂಕ್ತಿರತ್ನಾಕರಾತ್ಮನೇ ।
ಶ್ರೀಮದಾನಂದತೀರ್ಥಾಖ್ಯ ಭಗವದ್ದುಗ್ಧಸಿಂಧವೇ ॥
ಜಿಜ್ಞಾಸಾಕಾರಣೀಭೂತ ಗುಣಪೂರ್ತಿಪ್ರಸಿದ್ಧಯೇ ।
ಜೀವಾದಿಭೇದಕಂ ವಿಷ್ಣೋರ್ವಿಶ್ವಕರ್ತೃತ್ವಮುಚ್ಯತೇ ॥

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಮೂ ॥ ಅಂತಸ್ಸಮುದ್ರಗಂ ವಿಶ್ವಪ್ರಸೂತೇಃ ಕಾರಣಂ ತು ಯತ್ ।
ಸೂಕ್ತೋಪನಿಷದಾದ್ಯುಕ್ತಂ ಜನ್ಮಾದ್ಯಸ್ಯೇತಿ ಲಕ್ಷ್ಯತೇ ॥ ೮೯ ॥

ಅ ॥ ಅಂತಃ ಸಮುದ್ರಗಂ = ಸಮುದ್ರದ ಮಧ್ಯದಲ್ಲಿರುವವನು, ವಿಶ್ವಪ್ರಸೂತೇಃ= ಮೂಲಪ್ರಕೃತಿಗೆ, ಕಾರಣಂ ತು=ಕಾರಣನೂ ಆದ, ಯತ್=ಯಾವ ಬ್ರಹ್ಮನು, ಸೂಕ್ತೋಪನಿಷದಾದ್ಯುಕ್ತಂ, ಸೂಕ್ತ=ಅಂಭೃಣೀಸೂಕ್ತ-ವಾಮನಸೂಕ್ತಗಳು, ಉಪನಿಷತ್='ಅಂಭಸ್ಯಪಾರೇ' ಇದುಮೊದಲಾದುದು ಉಪನಿಷತ್ತು, ಆದಿ=ಮೊದಲಾದ 'ಆಪೋ ನಾರಾಃ' ಇತ್ಯಾದಿ ಸ್ಮೃತಿಗಳಿಂದ, ಉಕ್ತಂ=ಹೇಳಲ್ಪಟ್ಟಿದ್ದಾನೋ, ತತ್=ಆ ಬ್ರಹ್ಮನು, ಜನ್ಮಾದ್ಯಸ್ಯೇತಿ= 'ಜನ್ಮಾದ್ಯಸ್ಯಯತಃ' ಎಂಬುವ ಸೂತ್ರದಿಂದ, ಲಕ್ಷ್ಯತೇ=ಸ್ವೇತರ ಸರ್ವ ವಸ್ತುಗಳಿಂದಲೂ ವ್ಯಾವರ್ತಕ (ಭಿನ್ನನೆಂಬುವ ಬುದ್ಧಿಯನ್ನು ಹುಟ್ಟಿಸತಕ್ಕ) ಧರ್ಮವುಳ್ಳವನೆಂದು ಪ್ರತಿಪಾದಿಸಲ್ಪಡುತ್ತಾನೆ.

ತಾ ॥ **ಸನ್ಯಾಯರತ್ನಾವಳೀ ವಿಶೇಷಾಂಶ—** (1) ಪ್ರಥಮ ಸೂತ್ರದಲ್ಲಿ ಬ್ರಹ್ಮಜಿಜ್ಞಾಸೆಯು ಮಾಡಬೇಕೆಂದು ಹೇಳಲ್ಪಟ್ಟಿದೆ. ಎರಡನೇ ಸೂತ್ರ ಮೊದಲುಗೊಂಡು ಆ ಜಿಜ್ಞಾಸೆಯೇ ಮಾಡಲ್ಪಡುತ್ತದೆ. ಬ್ರಹ್ಮಜಿಜ್ಞಾಸಾಪದದಿಂದ ಲಕ್ಷಣ, ಪ್ರಮಾಣ, ಸಾಧನ, ಫಲ-ಇವುಗಳ ವಿಚಾರದಿಂದ ಯುಕ್ತವಾದ ಬ್ರಹ್ಮಜಿಜ್ಞಾಸೆಯೇ ಅಭಿಪ್ರೇತವಾಗಿದೆ. ಬ್ರಹ್ಮಜಿಜ್ಞಾಸೆಯನ್ನು ಅಧಿಕಾರಿಯು ಮಾಡಬೇಕೆಂದು ವಿಧಿಸುವಾಗ ಬ್ರಹ್ಮನಿಗೆ ಲಕ್ಷಣವು ಯಾವುದು? ಬ್ರಹ್ಮನಲ್ಲಿ ಪ್ರಮಾಣವು ಯಾವುದು? ಯಾವ ಸಾಧನದಿಂದ ಪ್ರಸನ್ನನಾಗುತ್ತಾನೆ? ಪ್ರಸನ್ನನಾದ ಬ್ರಹ್ಮನು ಯಾವ ಫಲವನ್ನು ಕೊಡುತ್ತಾನೆ? ಎಂಬುವುಗಳನ್ನು ತಿಳಿಯಬೇಕೆಂಬ ಇಚ್ಛೆಯು ಹುಟ್ಟುತ್ತದೆ. (2) ನಿಗಮ, ನಿರುಕ್ತಾದಿಗಳಿಂದ ವ್ಯುತ್ಪನ್ನನಾದವನಿಗೇನೇ ಮೀಮಾಂಸಾ (ವಿಚಾರ) ದಲ್ಲಿ ಅಧಿಕಾರವಿರುವುದರಿಂದ ಕೇವಲ ಬ್ರಹ್ಮಸ್ವರೂಪವು ಬ್ರಹ್ಮಪದದಿಂದಲೇ ತಿಳಿಯಲ್ಪಟ್ಟಿರುವುದರಿಂದ ಅಲ್ಲಿ ಆಕಾಂಕ್ಷೆಯು ಇರುವುದಿಲ್ಲ. (3) ಲಕ್ಷಣಾದಿಗಳ ಮಧ್ಯದಲ್ಲಿ ಬ್ರಹ್ಮನಿಗೆ ಲಕ್ಷಣವು

ಯಾವುದು ಎನ್ನುವ ಆಕಾಂಕ್ಷೆಯನ್ನು ಪೂರ್ತಿಗೊಳಿಸುವುದಕ್ಕಾಗಿ ೨ನೇ ಸೂತ್ರಕ್ಕೆ ಅವತಾರಿಕೆಯನ್ನು 'ಅಂತಸ್ಸಮುದ್ರಗಂ' ಇತ್ಯಾದಿ ಮೂಲದಿಂದ ಪ್ರತಿಪಾದಿಸಿದರು. (4) 'ಅಸ್ಯ ಮಾಮುಸ್ಯ' ಇತ್ಯಾದಿಸೂಕ್ತಗಳಿಂದಲೂ 'ಅಂಭಸ್ಯಪಾರೇ' ಇತ್ಯಾದ್ಯುಪನಿಷತ್ತುಗಳಿಂದಲೂ ಬೇರೆ ಆಗಮಗಳಿಂದಲೂ ಪ್ರತಿಪಾದಿಸಲ್ಪಟ್ಟವನೂ, ಸರ್ವಜಗನ್ಮಾತೆಯಾದ ಲಕ್ಷ್ಮೀದೇವಿಯ ಪ್ರಾದುರ್ಭಾವಕ್ಕೆ ಕಾರಣನೂ ಸಮುದ್ರಶಾಯಿಯೂ ಆದ ಬ್ರಹ್ಮನು ಜಿಜ್ಞಾಸ್ಯನೆಂದು ಹೇಳಲ್ಪಟ್ಟಿದ್ದಾನೆ. ಆ ಬ್ರಹ್ಮನು 'ಜನ್ಮಾದ್ಯಸ್ಯಯತಃ' ಎಂಬುವ ಸೂತ್ರದಲ್ಲಿ ಜಗಜ್ಜನ್ಮಾದಿಕಾರಣನೆಂದು ಹೇಳಲ್ಪಟ್ಟಿರುವುದರಿಂದ ಸ್ವೇತರ ಸಮಸ್ತ ವಸ್ತುಗಳಿಂದಲೂ ಭಿನ್ನನು.

## "ಓಂ ಜನ್ಮಾದ್ಯಸ್ಯ ಯತಃ ಓಂ"

ಅಸ್ಯ=ಪ್ರತ್ಯಕ್ಷಾದಿಗಳಿಂದ ಕಾಣಲ್ಪಡತಕ್ಕ ಚೇತನಾಚೇತನಾತ್ಮಕ ಸಮಸ್ತ ಜಗತ್ತಿಗೆ. ಯತಃ=ಯಾರಿಂದ, ಜನ್ಮಾದಿ=ಉತ್ಪತ್ತ್ಯಾದಿಗಳು (ಅಂದರೆ ಯಥಾಯೋಗ್ಯವಾಗಿ ಸೃಷ್ಟಿ ಸ್ಥಿತಿ ಸಂಹಾರ ನಿಯಮನ ಜ್ಞಾನ ಅಜ್ಞಾನ ಬಂಧ ಮೋಕ್ಷಗಳು ಆಗುತ್ತವೋ) ತತ್ = ಅವನು, ಬ್ರಹ್ಮ=ಬ್ರಹ್ಮನು

**ನಯಚಂದ್ರಿಕಾವಿಶೇಷಾಂಶ.** (1) 'ಉಪನಿಷದಾದ್ಯುಕ್ತಂ' ಎನ್ನುವಲ್ಲಿದ್ದ ಆದಿಶಬ್ದದಿಂದ 'ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್' ಇತ್ಯಾದಿ (ಭಾ. ಸ್ಕಂ.೧. ಅಧ್ಯಾ ೧. ಶ್ಲೋ ೧) ಗಳನ್ನು ಪರಿಗ್ರಹಿಸಿಕೊಳ್ಳಬೇಕು. (2) 'ಕಾರಣಂ ತು' ಎನ್ನುವಲ್ಲಿದ್ದ ತು ಶಬ್ದದಿಂದ ಯಾವುದು ಜಗತ್ಕಾರಣತ್ವಮೊದಲಾದ ಲಕ್ಷಣವು ಪರಬ್ರಹ್ಮನಿಗೆ ಹೇಳಲ್ಪಟ್ಟದೋ ಅದೇ ಈಸೂತ್ರದಲ್ಲಿ ಲಕ್ಷಣವಾಗಿ ತೋರಿಸಲ್ಪಡುತ್ತದೆ.

**ನ್ಯಾಯಸುಧಾ**— (1) ಪ್ರಥಮಸೂತ್ರದಲ್ಲಿ ವಿಹಿತವಾದ ಬ್ರಹ್ಮಜಿಜ್ಞಾಸೆಯು ಜನ್ಮಾದಿ ಸೂತ್ರಗಳಿಂದ ಮಾಡಲ್ಪಡುತ್ತದೆ. ಸ್ವರೂಪ, ಸಾಧನ, ಫಲ– ಇವುಗಳ ವಿಚಾರವು ಬ್ರಹ್ಮ ಜಿಜ್ಞಾಸಾ ಎನ್ನಿಸುತ್ತದೆ. ಬ್ರಹ್ಮನ ಸ್ವರೂಪವನ್ನು ನಿರೂಪಿಸಿದ ಮೇಲೆಯೇ ಆ ಬ್ರಹ್ಮಜ್ಞಾನಕ್ಕೆ ಸಾಧನವು ಯಾವುದು? ಫಲವು ಯಾವುದು? ಎಂದಾಕಾಂಕ್ಷೆಯು ಬರುವುದರಿಂದ ಆತನ ಸ್ವರೂಪ ಜಿಜ್ಞಾಸೆಯೇ ಪ್ರಥಮತಃ ಪ್ರಾಪ್ತವಾಯಿತು. ಆ ವಿಚಾರವೇ ಮೊದಲಿನ ಎರಡು ಅಧ್ಯಾಯಗಳಲ್ಲಿ ಮಾಡಲ್ಪಡುತ್ತದೆ. ಆ ಬ್ರಹ್ಮಸ್ವರೂಪದ ವಿಚಾರವಾದರೂ ಲಕ್ಷಣ ಪ್ರಮಾಣಗಳಿಂದ ಕೂಡುತ್ತದೆ. ಅದರಲ್ಲಿಯೂ 'ಬ್ರಹ್ಮನು ಸ್ವೇತರ ಸರ್ವವಸ್ತುಗಳಿಂದಲೂ ಭಿನ್ನನು' ಎಂದು ಲಕ್ಷಣದಿಂದ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸಿದ ಮೇಲೆಯೇ ಆ ವಿಷಯದಲ್ಲಿ ಪ್ರಮಾಣವು ಯಾವುದು ಎಂಬುವ ಆಕಾಂಕ್ಷೆಯು ಹುಟ್ಟುವುದರಿಂದ ಲಕ್ಷಣವನ್ನೇ ಪ್ರಥಮದಲ್ಲಿ ನಿರೂಪಿಸುವುದು ಯುಕ್ತವೆನ್ನುವ ಅಭಿಪ್ರಾಯದಿಂದ ಸೂತ್ರದ ತಾತ್ಪರ್ಯವನ್ನು ಈ ಮೂಲದಿಂದ ಹೇಳಿದರು. (2) ಸಮುದ್ರಾಂತರ್ಗತತ್ವ (ಸಮುದ್ರದಲ್ಲಿ ಮಲಗಿಕೊಂಡು ಇರುವಿಕೆ) ಮೊದಲಾದ ಅನೇಕ ವಿಶೇಷಣಗಳಿಂದೊಡಗೂಡಿದ ವಸ್ತುವನ್ನು ನಿರೂಪಿಸಿ 'ತದೇವ ಬ್ರಹ್ಮ ಪರಮಂ ಕವೀನಾಂ' ಎಂದು ಅವನೇ ಮುಖ್ಯ ಬ್ರಹ್ಮನೆಂದು ಹೇಳಿರುವುದರಿಂದ ಮುಖ್ಯ ಬ್ರಹ್ಮನು ಸವಿಶೇಷನೇ. ಅಂದರೆ, ಅವನಲ್ಲಿ ವಿಶೇಷಗಳಿವೆ. ಮಾಯಾವಾದಿಗಳು ಹೇಳುವ ರೀತಿಯಾಗಿ ನಿರ್ವಿಶೇಷನಲ್ಲ (3) ಹಾಗಾದರೆ 'ಬೃಹಂತೋ ಹ್ಯಸ್ಮಿನ್ ಗುಣಾಃ' ಇತ್ಯಾದಿ ಶ್ರುತಿಗಳಲ್ಲಿ ಸರ್ವ ಗುಣಪರಿಪೂರ್ಣತ್ವವು ಬ್ರಹ್ಮನಿಗೆ ಲಕ್ಷಣವೆಂದು ಪ್ರಸಿದ್ಧವೇ ಆಗಿದೆ. ಆದಕಾರಣ ಬೇರೆ ಲಕ್ಷಣವು (ಜನ್ಮಾದಿಕಾರಣತ್ವರೂಪ ಲಕ್ಷಣವು) ಏತಕ್ಕೆ ಎಂದರೆ— ಅದನ್ನೇ (ಗುಣಪೂರ್ಣತ್ವವನ್ನೇ) ಉಪಪಾದಿಸುವುದಕ್ಕಾಗಿ ಈ ಲಕ್ಷಣವು. ಹೇಗೆಂದರೆ— ಪ್ರಸಿದ್ಧವಾದ ಅಸಾಧಾರಣ ಧರ್ಮದಿಂದ ಅಪ್ರಸಿದ್ಧವಾದ ವಸ್ತುವು ಸರ್ವವಸ್ತುಗಳಿಂದಲೂ ಭಿನ್ನವೆಂದು

ತಿಳಿಯಬೇಕು. ಪರಮೇಶ್ವರನಿಗೆ ಸರ್ವಗುಣಪರಿಪೂರ್ಣತ್ವವು ಪ್ರಸಿದ್ಧವಲ್ಲ. ಆದಕಾರಣ ಅದನ್ನು ಲಕ್ಷಣವೆಂದು ಹೇಳಕೂಡದು. ಜನ್ಮಾದಿಕಾರಣತ್ವವು ಬ್ರಹ್ಮನಿಗೆ ಲಕ್ಷಣವೆಂದು ಸಿದ್ಧವಾದಮೇಲೆ ಸರ್ವಗುಣಪರಿಪೂರ್ಣತ್ವರೂಪವಾದ ಪ್ರಥಮಲಕ್ಷಣವು ಸಿದ್ಧಿಸುವುದು ॥ ೮೯ ॥

ಹಾಗಾದರೆ, (೧) ಜನ್ಮಾದಿಗಳು ಬ್ರಹ್ಮನಿಗೆ ಲಕ್ಷಣವೋ? (೨) ಜನ್ಮಾದಿಕಾರಣತ್ವವು ಲಕ್ಷಣವೋ? ಜನ್ಮಾದಿಗಳು ಜಗತ್ತಿನ ಧರ್ಮಗಳಾಗಿರುವುದರಿಂದ ಅವುಗಳು ಬ್ರಹ್ಮನಿಗೆ ಲಕ್ಷಣವಾಗಲಾರವು. ಜನ್ಮಾದಿಕಾರಣತ್ವವೂ ಕೂಡುವುದಿಲ್ಲ. ಏಕೆಂದರೆ, ಬ್ರಹ್ಮನು ಹೇಗೆ ಅಪ್ರಸಿದ್ಧನೋ, ಹಾಗೆಯೇ ಆತನ ಧರ್ಮರೂಪವಾದ ಜಗಜ್ಜನ್ಮಾದಿಕಾರಣತ್ವವೂ ಅಪ್ರಸಿದ್ಧವು. ಆದಕಾರಣ ಈ ಲಕ್ಷಣವು ಹೇಗೆ ಕೂಡುತ್ತದೆಂದರೆ—

ವ್ಯಾ ॥ ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ ।
ಬಂಧಮೋಕ್ಷಾವಪಿ ಹ್ಯಾಸು ಶ್ರುತಿಷೂಕ್ತಾ ಹರೇಸ್ಸದಾ ॥ ೯೦ ॥

ಅ ॥ (ಜಗಜ್ಜನ್ಮಾದಿಕಾರಣತ್ವವೇ ಬ್ರಹ್ಮನಿಗೆ ಲಕ್ಷಣವು. ಇದೂ ಅಪ್ರಸಿದ್ಧವಲ್ಲ. ಏಕೆಂದರೆ, ಅಸ್ಯ=ಈ ಜಗತ್ತಿಗೆ) ಸೃಷ್ಟಿಃ=ಸರ್ಜನವು, ಸ್ಥಿತಿಶ್ಚ=ಸ್ಥಿತಿಯೂ, ಸಂಹಾರಃ=ಸಂಹಾರವು, ನಿಯತಿಃ=ನಿಯಮನವು, (ಪ್ರೇರಣೆಯು) ಜ್ಞಾನಂ=ಜ್ಞಾನವು, ಆವೃತಿಃ=ಆವರಣವು, (ಅಜ್ಞಾನವು) ಬಂಧಮೋಕ್ಷಾವಪಿ=ಬಂಧಮೋಕ್ಷಗಳೂ ಕೂಡ, ಹರೇಃ=ಪರಬ್ರಹ್ಮನದ್ದೆಶೆಯಿಂದ, ಸದಾ=ಯಾವಾಗಲೂ (ಆಗುತ್ತವೆ ಎಂದು) ಹಿ=ಯಾವಕಾರಣದಿಂದ, ಆಸು ಶ್ರುತಿಷು='ಯ ಉ ತ್ರಿಧಾತು ಪೃಥಿವೀಮುತದ್ಯಾಂ' ಇದುಮೊದಲಾದ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಪ್ರಸಿದ್ಧ ಶ್ರುತಿಗಳಲ್ಲಿ, ಉಕ್ತಾಃ=ಪ್ರತಿಪಾದಿತಗಳಾಗಿವೆಯೋ, (ಆದಕಾರಣ ಜಗಜ್ಜನ್ಮಾದಿಕಾರಣತ್ವವು ಪ್ರಸಿದ್ಧವೇ ಆಗಿರುತ್ತದೆ.)

ತಾ ॥ ಸ. ರ. ವಿ.— (1) ಸೂತ್ರದಲ್ಲಿರುವ ಜನ್ಮಾದಿ ಪದದಿಂದ ಸೃಷ್ಟಿಯನ್ನಾರಂಭಿಸಿ ಮೋಕ್ಷ ಪರ್ಯಂತಗಳಾದ ಭಾವ ವಿಕಾರಗಳನ್ನು ಸ್ವೀಕರಿಸಬೇಕು. ಉತ್ಪತ್ತಿಯನ್ನು ಹೊಂದಿದ ವಸ್ತುವಿಗೇನೇ ಸ್ಥಿತಿ ಮೊದಲಾದುದು ಕೂಡುವುದರಿಂದ ಜನ್ಮವನ್ನು ಆದಿಯಲ್ಲಿ ಹೇಳಿದುದು ಯುಕ್ತವಾಗುತ್ತದೆ. ಆ ಜನ್ಮಾದಿಗಳು ಜಗತ್ತಿಗೆ ಶ್ರೀಹರಿಯಿಂದಲೇ ಆಗುವುವೆಂದು ನಾರಾಯಣಾನುವಾಕದಲ್ಲಿ ಹೇಳಲ್ಪಟ್ಟಿವೆ. (2) **'ಯತಃ ಪ್ರಸೂತಾ ಜಗತಃ ಪ್ರಸೂತಿಃ'** **'ಸರ್ವೇ ನಿಮೇಷಾ ಜಜ್ಞಿರೇ'** **'ವಿದ್ಯುತಃ ಪುರುಷಾದಧಿ'** ಎಂದು ಸರ್ವಕ್ಕೂ ಕಾರಣಗಳಾದ ಪ್ರಕೃತಿ ಕಾಲಾದಿಗಳಿಗೂ ಶ್ರೀಹರಿಯಿಂದಲೇ ಸೃಷ್ಟಿಯನ್ನು ಹೇಳಿರುವುದರಿಂದ ಸರ್ವಕ್ಕೂ ಶ್ರೀಹರಿಯಿಂದಲೇ ಸೃಷ್ಟಿಯೂ ಉಕ್ತವಾಯಿತು. (3) **'ಯಸ್ಮಿನ್ನಿದಂ ಸಂ ಚ ವಿ ಚೈತಿ ಸರ್ವಂ ಯಸ್ಮಿನ್ದೇವಾ ಅಧಿ ವಿಶ್ವೇ ನಿಷೇದುಃ'** ಯಾವ ಶ್ರೀಹರಿಯಲ್ಲಿಯೇ ಸರ್ವ ದೇವತೆಗಳೂ ಆಶ್ರಿತರಾಗಿರುವರೋ, ಎನ್ನುವುದರಿಂದ ಸ್ಥಿತಿಯು ಭಗವದಧೀನವೆಂದುಕ್ತವಾಯಿತು. (4) **'ವೇನಸ್ತತ್ಪಶ್ಯನ್ ವಿಶ್ವಾನಿ ಭುವನಾನಿ ವಿದ್ವಾನ್ಯತ್ರ ವಿಶ್ವಂ ಭವತ್ಯೇಕನೀಲಂ'** ಯಾವ ಶ್ರೀಹರಿಯಲ್ಲಿಯೇ ಸರ್ವ ಜಗತ್ತು ಮುಖ್ಯವಾಗಿ ಲಯವನ್ನು ಹೊಂದುತ್ತದೋ, ಅಂತಹ ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡ ವೇನನಾಮಕ ಋಷಿಯು ಶ್ರೀಹರಿಯ ಪ್ರಸಾದದಿಂದ ಸಮಸ್ತ ಲೋಕಗಳನ್ನೂ ತಿಳಿಯುವವನಾದನು. ಇದರಿಂದ ಜ್ಞಾನವೂ ಸಂಹಾರವೂ ಉಕ್ತವಾಯಿತು. (5) **'ವಿವೇಶ ಭೂತಾನಿ ಚರಾಚರಾಣಿ'** ಎನ್ನುವುದರಿಂದ ನಿಯಮನವು. ಬ್ರಹ್ಮನು ಸರ್ವ ಜಗನ್ನಿಯಾಮಕನಾಗಿ ಚೇತನಾಚೇತನ ಸರ್ವ ಪ್ರಪಂಚ

ವನ್ನು ಪ್ರವೇಶಿಸಿರುವನು ಎಂದು ಪ್ರತೀತವಾಗುವುದು. (6) **'ಋತಸ್ಯ ತಂತುಂ ವಿತತಂ ವಿವೃತ್ಯ ತದಪಶ್ಯತ್ತದಭವತ್ ಪ್ರಜಾಸು'** ಪರಬ್ರಹ್ಮನ ಅಧೀನವಾದ ಪ್ರಕೃತಿಪಾಶವನ್ನು ಪ್ರಜೆಗಳಲ್ಲಿ ವಿಸ್ತೃತವಾದುದನ್ನು ಪ್ರತ್ಯೇಕ ಪ್ರತ್ಯೇಕಿಸಿ ವೇನನಾಮಕ ಹಿರಣ್ಯಗರ್ಭನು ಕಂಡನು ಎನ್ನುವುದರಿಂದ ಅಜ್ಞಾನ ಬಂಧಗಳು. (7) **'ಯ ಏತದ್ವಿದುರಮೃತಾಸ್ತೇ ಭವಂತಿ'** ಎನ್ನುವುದರಿಂದ ಮೋಕ್ಷವೂ ಭಗವತ್ಪ್ರಸಾದ ಸಾಧ್ಯವೆಂದು ತಿಳಿಯುತ್ತದೆ. ಆದಕಾರಣ ಜನ್ಮ ಕಾರಣತ್ವ, ಸ್ಥಿತಿಕಾರಣತ್ವ, ಸಂಹಾರಕಾರಣತ್ವ ಮೊದಲಾದ ಲಕ್ಷಣವು ಶ್ರುತಿಸಿದ್ಧವೆಂದೂ, ಅತಿ ವ್ಯಾಪ್ತ್ಯಾದಿ ದೋಷಗಳಿಲ್ಲದಿರುವುದರಿಂದ ಪ್ರತ್ಯೇಕ ಪ್ರತ್ಯೇಕ ಲಕ್ಷಣವೆಂದೂ ತಿಳಿಯತಕ್ಕದ್ದು.

**ನ್ಯಾಯಸುಧಾ**— (1) ಸೃಷ್ಟಿಕಾಲದಲ್ಲಿ ಸ್ಥಿತಿಯಿರುವುದಿಲ್ಲ. ಸ್ಥಿತಿಕಾಲದಲ್ಲಿ ಸೃಷ್ಟಿ ಸಂಹಾರಗಳಿಲ್ಲ. ಸಂಹಾರಕಾಲದಲ್ಲಿ ಸೃಷ್ಟ್ಯಾದಿಗಳಿಲ್ಲ. ಮತ್ತೆ ಕಾಲಭೇದದಿಂದಲೇ ಸೃಷ್ಟ್ಯಾದಿಗಳು ಎಂದು ರಾಮಾನುಜಾದಿಗಳು ಹೇಳುವ ಪ್ರಕಾರ ಸರ್ವಥಾ ಅಲ್ಲ. 'ಸೃಷ್ಟ್ಯಾದಯೋ ಗುಣಾಃ ಸದೈವ ಸಂತಿ ಹರೌ' ಎಂದು ಸೃಷ್ಟ್ಯಾದ್ಯ ಮೊದಲಾದ ಎಲ್ಲಾ ಧರ್ಮಗಳೂ ಶಕ್ತಿ–ವ್ಯಕ್ತಿ ಎನ್ನುವ ಅವಸ್ಥೆಗಳಿಂದ ಸರ್ವ ಕಾಲದಲ್ಲಿಯೂ ಇರುತ್ತವೆ ಎಂದು ಹೇಳಿರುವುದರಿಂದ ಸರ್ವಕಾರಣ ವಾಕ್ಯಗಳಿಗೆ ವಿರೋಧವಿಲ್ಲವೆಂದು 'ಸದಾ' ಪದದಿಂದ ಸೂಚಿಸಿದರು. (2) ಸರ್ವ ಗುಣಪರಿಪೂರ್ಣತ್ವರೂಪಲಕ್ಷಣವೂ ಶ್ರುತಿಪ್ರಸಿದ್ಧವೇ ಆಗಿರುವುದರಿಂದ ಅದನ್ನೇ ಲಕ್ಷಣವಾಗಿ ಹೇಳಬಹುದಷ್ಟೇ! ಅಂದರೆ— ಅದು ಶ್ರುತಿಪ್ರಸಿದ್ಧವಾಗಿದ್ದರೂ ಬೇರೆ ಯಾರಲ್ಲಿಯೂ ಕಾಣದಿರುವುದರಿಂದ ಸರ್ವಥಾ ಕೂಡಲಾರದೆನ್ನುವ ಅಸಂಭಾವನಾಶಂಕೆಯು ಅದರಲ್ಲಿ ಬರುವುದು. ಜಗಜ್ಜನ್ಮಾದಿಕಾರಣತ್ವವಾದರೂ ಶ್ರುತಿಪ್ರಸಿದ್ಧವಾಗಿದೆ. ಚೇತನತ್ವ, ಸರ್ವಸ್ವಾತಂತ್ರ್ಯ, ಸರ್ವ ಶಕ್ತಿಮತ್ವ ಮೊದಲಾದ ಯುಕ್ತ್ಯನುಗೃಹೀತವೂ ಆಗಿದೆ. ಸರ್ವಗುಣಪರಿಪೂರ್ಣತ್ವದಲ್ಲಾದರೂ ಜಗಜ್ಜನ್ಮಾದಿಕಾರಣತ್ವವೇ ಯುಕ್ತಿಯು. ಆದಕಾರಣ ಅದನ್ನೇ ಮೊದಲು ಹೇಳತಕ್ಕದ್ದು. (3) **'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯೇನ ಜಾತಾನಿ ಜೀವಂತಿ' 'ಯತ್ಪ್ರಯಂತ್ಯಭಿಸಂವಿಶಂತಿ' 'ಯ ಆತ್ಮಾನಮಂತರೋ ಯಮಯತಿ' 'ತ್ವಂ ಮುಕ್ತಿದೋ ಬಂಧದೋಽತೋ ಮತೋ ನಸ್ತ್ವಂ ಜ್ಞಾನದೋಽಜ್ಞಾನದಶ್ಚಾಸಿ ವಿಷ್ಣೋ'** ಇದು ಮೊದಲಾದ ಶ್ರುತಿಗಳು 'ಸರ್ವ ಪ್ರಪಂಚದ ಸೃಷ್ಟ್ಯಾದಿಗಳಿಗೆ ಕಾರಣನು ಪರಬ್ರಹ್ಮನೆಂದು ಹೇಳಿರುವುದರಿಂದ ಸೃಷ್ಟಿ ಸ್ಥಿತಿ ಮೊದಲಾದದ್ದು ಎಂಟು ಜನ್ಮಾದಿಪದಾರ್ಥವು ಎಂಬುವ ಅಭಿಪ್ರಾಯದಿಂದ 'ಸೃಷ್ಟಿಃ ಸ್ಥಿತಿಶ್ಚ' ಎನ್ನುವ ಮೂಲದಿಂದ ಜನ್ಮಾದಿ ಎನ್ನುವಲ್ಲಿದ್ದ ಆದಿಪದಾರ್ಥವನ್ನು ಹೇಳಿದರು. (4) ಸಮಾಸಮಾಡದೆ 'ಸೃಷ್ಟಿಃ ಸ್ಥಿತಿಶ್ಚ' ಎಂದು ಪ್ರತ್ಯೇಕ ಹೇಳಿದುದರಿಂದ ಸೃಷ್ಟಿಕಾರಣತ್ವವು, ಸ್ಥಿತಿಕಾರಣತ್ವವು ಇತ್ಯಾದಿ ಪ್ರಕಾರ ಪ್ರತ್ಯೇಕವಾಗಿ ಎಂಟು ಲಕ್ಷಣಗಳೆಂದು ಸೂಚಿಸಿದರು. (5) ಅನೇಕ ಲಕ್ಷಣಗಳನ್ನು ಹೇಳಿದುದು ವ್ಯರ್ಥವೆಂದು ಹೇಳಕೂಡದು. ಜಿಜ್ಞಾಸ್ಯನಾದ ಬ್ರಹ್ಮನಿಗೆ ಬೇರೆ ಎಲ್ಲಾ ವಸ್ತುಗಳಿಂದಲೂ ಭೇದವನ್ನು ತಿಳಿಸುವುದಕ್ಕಾಗಿ ಲಕ್ಷಣವನ್ನು ಹೇಳಿದುದು. ಇವುಗಳಲ್ಲಿ ಒಂದೇ ಲಕ್ಷಣವನ್ನು ಜಿಜ್ಞಾಸೆಯನ್ನು ವಿಧಿಸತಕ್ಕ ಶ್ರುತಿಗಳಲ್ಲಿ ಸರ್ವತ್ರ ಹೇಳುವುದಿಲ್ಲ. ಮತ್ತೆ ಬ್ರಹ್ಮಜಿಜ್ಞಾಸೆಯನ್ನು ವಿಧಾನಮಾಡತಕ್ಕ ಶ್ರುತಿಗಳಲ್ಲಿ ಕೆಲವು ಕಡೆ ಸೃಷ್ಟಿಯು, ಕೆಲವು ಕಡೆ ಸ್ಥಿತಿಯು ಹೀಗೆ ಎಂಟೂ ಉಕ್ತವಾಗಿದೆ. ಹೀಗೆ ಎಂಟೂ ಜಿಜ್ಞಾಸ್ಯನಾದ ಶ್ರೀಹರಿಯಿಂದಲೇ ಜಗತ್ತಿಗೆ ಆಗುತ್ತವೆಂದು ಹೇಳಿರುವುದರಿಂದ ಅನೇಕ ಲಕ್ಷಣಗಳನ್ನು ಹೇಳಿದ್ದಾಗಿರುತ್ತದೆ. (6) ಅಥವಾ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ' ಎಂದು ಜಿಜ್ಞಾಸ್ಯನಲ್ಲಿ ಬ್ರಹ್ಮ ಶಬ್ದವು ಶ್ರುತವಾಗಿರುವುದರಿಂದ ಸರ್ವಗುಣಪರಿಪೂರ್ಣತ್ವವೇ ಉಕ್ತವಾಯಿತು. ಜೀವನಿಗೆ ಸರ್ವಗುಣಪರಿಪೂರ್ಣತ್ವವಿಲ್ಲದಿರುವುದರಿಂದ ಜಿಜ್ಞಾಸ್ಯವಸ್ತುವು

ಜೀವಭಿನ್ನವೆಂದು ಪ್ರಥಮ ಸೂತ್ರದಲ್ಲಿ ಹೇಳಲ್ಪಟ್ಟಿದೆ. 'ಆ ಬ್ರಹ್ಮ ಶಬ್ದವು ಪ್ರಸಿದ್ಧವಾದ ಅರ್ಥ (ಜೀವ)ದಲ್ಲಿಯೇ ತಾತ್ಪರ್ಯವುಳ್ಳದ್ದೋ, ಅರ್ಥಾಂತರದಲ್ಲಿ ತಾತ್ಪರ್ಯವುಳ್ಳದ್ದೋ? ಎಂದು ಸಂಶಯವು ಈ ಬ್ರಹ್ಮ ಶಬ್ದವು ಪ್ರಸಿದ್ಧಾರ್ಥ(ಜೀವ)ದಲ್ಲಿಯೇ ತಾತ್ಪರ್ಯವುಳ್ಳದ್ದೆಂದು ಪೂರ್ವ ಪಕ್ಷವು. ಏಕೆಂದರೆ, ಜೀವನು ಸ್ವರೂಪತಃ ಪ್ರಸಿದ್ಧನೇ ಆಗಿರುತ್ತಾನೆ ಕೋಶಾದಿಗಳಿಂದ ಬ್ರಹ್ಮ ಶಬ್ದಕ್ಕೆ ಜೀವನಲ್ಲಿ ಶಕ್ತಿಯೂ ಸಿದ್ಧವಾಗಿದೆ ಶಕ್ತಿಯಿದ್ದ ಪ್ರಯುಕ್ತವೇ ಪ್ರತೀತಾರ್ಥವನ್ನು ಬಿಡಲಿಕ್ಕೆ ಕಾರಣವಿಲ್ಲದಿರುವುದರಿಂದ ತಾತ್ಪರ್ಯವೂ ಸಿದ್ಧವಾಗುತ್ತದೆ. (7) ಜಾತ್ಯಾದಿಗಳು ಪ್ರಸಿದ್ಧಗಳಾಗಿದ್ದರೂ ಅತಿ ಪ್ರಸಿದ್ಧಗಳಾದ ಪ್ರಯುಕ್ತ 'ತದ್ವಿಜಿಜ್ಞಾಸಸ್ವ' ಎಂದು ಜಿಜ್ಞಾಸ್ಯತ್ವವು ಕೂಡದಿರುವುದರಿಂದ ಅವುಗಳನ್ನು ಇಟ್ಟುಕೊಳ್ಳಲಿಲ್ಲ. (8) ಚತುರ್ಮುಖನಿಗೆ ಪ್ರಸಿದ್ಧಿಯಿಲ್ಲದಿದ್ದರೂ ಪ್ರಯೋಜನವಿಲ್ಲದಿರುವುದರಿಂದ ಆತನಿಗೆ ಜಿಜ್ಞಾಸ್ಯತ್ವವಿಲ್ಲವು. (9) ಜೀವನಿಗೆ ಸ್ವರೂಪತಃ ಪ್ರಸಿದ್ಧಿಯಿದ್ದರೂ ದೇಹಾದಿಗಳಿಂದ ಅತಿ ಭಿನ್ನನೆಂದು ಪ್ರಸಿದ್ಧಿಯಿಲ್ಲ. ಆದಕಾರಣ ಈ ಬ್ರಹ್ಮ ಶಬ್ದವು ಜೀವಪರವೇ ಎಂದು ಪೂರ್ವಪಕ್ಷವು ಪ್ರಾಪ್ತವಾಗುವಾಗ ಸೂತ್ರಕಾರರು 'ಜನ್ಮಾದ್ಯಸ್ಯ ಯತಃ' ಎಂದು ವಿಧಿಸಿರುವರು. ಈ ಸೂತ್ರದಿಂದ ಹಿಂದಿನ ಶಂಕಾಪರಿಹಾರವು ಹೇಗೆ ಆಯಿತೆಂದರೆ— ಆಸು ಶ್ರುತಿಷು=ಜಿಜ್ಞಾಸೆಯನ್ನು ವಿಧಾನಮಾಡತಕ್ಕ 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' 'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಇದು ಮೊದಲಾದ ಶ್ರುತಿಗಳಲ್ಲಿ ಬ್ರಹ್ಮ ಆತ್ಮಾದಿ ಶಬ್ದವಾಚ್ಯನಾದ ಶ್ರೀಹರಿಯಿಂದಲೇ ಜಗತ್ತಿಗೆ ಸೃಷ್ಟ್ಯಾದಿಗಳು ಆಗುತ್ತವೆ ಎಂದು '**ಯತೋ ವಾ ಇಮಾನಿ ಭೂತಾನಿ ಜಾಯಂತೇ**' ಇತ್ಯಾದಿ ಪೂರ್ವೋತ್ತರ ವಾಕ್ಯಗಳಿಂದ ಹೇಳಲ್ಪಡುತ್ತದೆ. (10) ಅಷ್ಟರಿಂದ ಜಿಜ್ಞಾಸ್ಯನು ಜೀವನಿಂದ ಭಿನ್ನನೆಂದು ಹೇಗೆ ಸಿದ್ಧವಾಯಿತು? ಜೀವನೇ ಏಕೆ ಆಗಬಾರದೆಂದರೆ— ಸೃಷ್ಟ್ಯಾದಿಗಳೆಲ್ಲವೂ 'ಯ ಉ ತ್ರಿಧಾತು ಪೃಥಿವೀಮುತ ದ್ಯಾಂ' ಇತ್ಯಾದಿ ಭಾಷ್ಯೋದಾಹೃತ ಶ್ರುತಿಗಳಲ್ಲಿ ಶ್ರೀ ಹರಿಯಿಂದಲೇ ಜಗತ್ತಿಗೆ ಆಗುತ್ತವೆಂದು ಹೇಳಲ್ಪಟ್ಟಿವೆ. ಅವುಗಳು ಜೀವನಿಂದ ಆಗಲಾರವು. ಆದಕಾರಣ ಪ್ರಸಿದ್ಧಾರ್ಥ (ಜೀವ) ವನ್ನು ಇಟ್ಟುಕೊಂಡರೆ ಬಾಧಕವಿದ್ದುದರಿಂದ 'ತದ್ಬ್ರಹ್ಮ' ಇತ್ಯಾದಿ ಬ್ರಹ್ಮ ಆತ್ಮ ಮೊದಲಾದ ಶಬ್ದಗಳು ಅಲೌಕಿಕನಾದ ಶ್ರೀ ಹರಿಯನ್ನೇ ಪ್ರತಿಪಾದಿಸುತ್ತವೆ. ಜೀವನನ್ನು ಪ್ರತಿಪಾದಿಸುವುದಿಲ್ಲ. ಆದಕಾರಣ ಶ್ರೀ ಹರಿಗೇನೇ ಗುಣಪರಿಪೂರ್ಣತ್ವವನ್ನು ಹೇಳಿರುವುದು ಯುಕ್ತವು. ಹೀಗೆ ಸೂತ್ರಕಾರರಿಗೆ ಅಭಿಪ್ರಾಯವು. (11) ಹಾಗಾದರೆ— '**ಹಿರಣ್ಯಗರ್ಭಃ ಸಮವರ್ತತಾಗ್ರೇ**' '**ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ**' '**ಇಮಾನ್ ಲೋಕಾನೀಶತ ಈಶನೀಭಿಃ**' '**ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ**' ಇದುಮೊದಲಾದ ಶ್ರುತಿಗಳಲ್ಲಿ ಚತುರ್ಮುಖಾದಿಗಳಿಗೂ ಜಗತ್ಸೃಷ್ಟ್ಯಾದಿ ಕಾರಣತ್ವವು ತೋರಿಬರುವುದರಿಂದ ಅದು ಶ್ರೀ ಹರಿಗೇನೇ ಎಂದು ಹೇಳಿದ್ದು ಹೇಗೆ ಕೂಡಬಹುದೆಂದರೆ— ಪರರು ಉದಾಹರಿಸಿರುವ 'ಹಿರಣ್ಯಗರ್ಭಃ' ಇತ್ಯಾದಿ ಶ್ರುತಿಗಳಲ್ಲಿಯೂ ಜಗತ್ಸೃಷ್ಟ್ಯಾದಿಗಳು ಶ್ರೀ ಹರಿಯಿಂದಲೇ ಆಗುತ್ತವೆ, ಬ್ರಹ್ಮರುದ್ರಾದಿಗಳಿಂದ ಅಲ್ಲವೆಂದೇ ಹೇಳಲ್ಪಟ್ಟಿವೆ. ಆದಪ್ರಯುಕ್ತ ಈ ಜಗಜ್ಜನ್ಮಾದಿಕಾರಣತ್ವ ಲಕ್ಷಣಕ್ಕೆ ಅತಿವ್ಯಾಪ್ತಿಯಿರುವುದಿಲ್ಲ. ॥ ೯೦ ॥

**ಸ. ರ. ವಿ.— 'ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಕೋ ರುದ್ರೋ ಮಹರ್ಷಿಃ' ಇತ್ಯಾದಿ ಆಯಾಯ ಶಾಖೆಗಳಲ್ಲಿ ರುದ್ರಾದಿಗಳಿಗೂ ಜಗತ್ಕಾರಣತ್ವ ಮೊದಲಾದ ಲಕ್ಷಣಗಳು ಕಾಣಲ್ಪಡುತ್ತವೆ. ಎಂದರೆ—**

ನ್ಯಾಯಸುಧಾ— 'ಹಿರಣ್ಯಗರ್ಭಃ' ಇತ್ಯಾದಿ ಶ್ರುತಿಗಳಲ್ಲಿಯೂ ಸೃಷ್ಟ್ಯಾದಿಗಳು ಶ್ರೀಹರಿಯಿಂದಲೇ ಆಗುತ್ತವೆ. ರುದ್ರಾದಿಗಳಿಂದಲ್ಲ ಎನ್ನುವುದು ಹೇಗೆ ಕೂಡುತ್ತದೆ ಎಂದರೆ—

**ಮೂ ॥ ಯನ್ನಾಮಾನಿ ವಿಶಂತ್ಯದ್ಧಾ ಯೋ ದೇವಾನಾಮಿತಿ ಹ್ಯಪಿ ।**
**ಶ್ರುತೇರ್ನಾಮಾನಿ ಸರ್ವಾಣಿ ವಿಷ್ಣೋರೇವ ಯತಸ್ತತಃ ॥**
**ಅತೋ ನ ಮುಖ್ಯತೋ ನಾಮ ತದನ್ಯಸ್ಯ ಹಿ ಕಸ್ಯಚಿತ್ ॥ ೯೧ ॥**

ಅ ॥ ನಾಮಾನಿ=ಸರ್ವನಾಮಗಳೂ, ಯಂ=ಯಾರನ್ನು, ಅದ್ಧಾ=ಚೆನ್ನಾಗಿ (ಮುಖ್ಯ ವೃತ್ತಿಯಿಂದ) ವಿಶಂತಿ ಪ್ರವೇಶಿಸುತ್ತವೋ, (ಇದರಿಂದ '**ನಾಮಾನಿ ಸರ್ವಾಣಿ ಯಮಾ ವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ**' ಎನ್ನುವ ಶ್ರುತಿಯು ಗೃಹೀತವಾಯಿತು.) ಯಃ=ಯಾವನು, ದೇವಾನಾಂ=ದೇವತೆಗಳ, (ನಾಮಧಾರಕನೋ) ಇತಿ ಹಿ ಶ್ರುತೇರಪಿ= '**ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ**' ಎನ್ನುವ ಪ್ರಸಿದ್ಧ ಶ್ರುತಿಯಿಂದಲೂ, ನಾಮಾನಿ ಸರ್ವಾಣಿ=ಹಿರಣ್ಯಗರ್ಭ ರುದ್ರ ಮೊದಲಾದ ನಾಮಗಳೆಲ್ಲವೂ, ಯತಃ=ಯಾವಕಾರಣದಿಂದ, ವಿಷ್ಣೋರೇವ=ಶ್ರೀವಿಷ್ಣುವಿಗೇನೇ, (ಇರುತ್ತವೆ. ಶ್ರೀವಿಷ್ಣುವಿನಲ್ಲಿಯೇ ಮುಖ್ಯಗಳು. ರುದ್ರಾದಿಗಳಲ್ಲಿ ಅಮುಖ್ಯವೃತ್ತಿಯಿಂದ ಇರುತ್ತವೆ. ಆದ ಕಾರಣ 'ಹಿರಣ್ಯಗರ್ಭಃ' ಇತ್ಯಾದಿ ಶ್ರುತಿಗಳಲ್ಲಿದ್ದ ಹಿರಣ್ಯಗರ್ಭಮೊದಲಾದ ಶಬ್ದಗಳಿಗೆ ಪರಬ್ರಹ್ಮರೂಪ ಮುಖ್ಯಾರ್ಥವು ಕೂಡುವಾಗ (ಚತುರ್ಮುಖಮೊದಲಾದ ಅಮುಖ್ಯಾರ್ಥವು ಕೂಡದಿರುವುದರಿಂದ ಸರ್ವಥಾ ರುದ್ರಾದಿಗಳು ಜಗತ್ಕಾರಣರಲ್ಲ.) ತತಃ=ಆದಕಾರಣ, (ಆಸು ಶ್ರುತಿಷು='ಹಿರಣ್ಯಗರ್ಭಃ' ಇತ್ಯಾದಿ ಶ್ರುತಿಗಳಲ್ಲಿ. ಜಗತ್ಸೃಷ್ಟ್ಯಾದಿಗಳು ಶ್ರೀಹರಿ ಯಿಂದಲೇ ಆಗುತ್ತವೆಂದು ಹೇಳಲ್ಪಟ್ಟಿವೆ.) (ಹಾಗಾದರೆ ಹಿರಣ್ಯಗರ್ಭಾದಿ ಶಬ್ದಗಳನ್ನು ವಿಷ್ಣುಪರ ಗಳನ್ನಾಗಿ ವ್ಯಾಖ್ಯಾನ ಮಾಡಿ '**ಹಿರಣ್ಯಗರ್ಭಃ ಸಮವರ್ತತಾಗ್ರೇ**' ಇತ್ಯಾದಿ ಶ್ರುತಿಗಳು ಶ್ರೀ ವಿಷ್ಣುಪ್ರತಿಪಾದಕಗಳೆಂದು ಹೇಳುವುದಾದರೆ ವಿಷ್ಣುಮೊದಲಾದ ಶಬ್ದಗಳನ್ನೂ ಚತು ರ್ಮುಖಾದಿಪರಗಳನ್ನಾಗಿ ವ್ಯಾಖ್ಯಾನಮಾಡಿ ಭಾಷ್ಯದಲ್ಲಿ ಉದಾಹೃತಗಳಾದ 'ಯ ಉ ತ್ರಿಧಾತು' ಇತ್ಯಾದಿ ಶ್ರುತಿಗಳನ್ನು ಚತುರ್ಮುಖಾದಿ ಪರಗಳನ್ನಾಗಿ ಏಕೆ ಯೋಜಿಸಬಾರದು ಎಂದರೆ—) **ಅತಃ='ನಾಮಾನಿ ವಿಶ್ವಾಽಭಿ ನ ಸಂತಿ ಲೋಕೇ' 'ಯೋ ದೇವಾನಾಂ ನಾಮಧಾ ಏಕ ಏವ'** ಎಲ್ಲಾನಾಮಗಳೂ ಲೋಕದಲ್ಲಿ ಮುಖ್ಯವೃತ್ತಿಯಿಂದ ಇಲ್ಲ, ಯಾವ ಶ್ರೀಹರಿಯೊಬ್ಬನೇ ಸರ್ವ ದೇವತೆಗಳ ನಾಮಧಾರಕನೋ, ಹೀಗೆ ಪ್ರತಿಷೇಧ ಮಾಡಿರುವುದರಿಂದ, ತದನ್ಯಸ್ಯ= ಪರಬ್ರಹ್ಮನಿಂದ ವ್ಯತಿರಿಕ್ತರಾದ, ಕಸ್ಯಚಿತ್=ಯಾರಿಗೂ, ಮುಖ್ಯತಃ=ಮುಖ್ಯವೃತ್ತಿಯಿಂದ, ನಾಮ ಹಿ=ನಾಮವೇ, ನ ಹಿ=ಇರುವುದಿಲ್ಲ. ವಿಷ್ಣ್ವಾದಿ ನಾಮವು ಸುತರಾಂ ಇರುವುದಿಲ್ಲ ॥ ೯೧॥

**ಸ. ರ. ವಿ— ಹಾಗಾದರೆ 'ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ । ಜನಿತಾಽಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ'** ಇತ್ಯಾದಿ ಶ್ರುತಿಗಳಲ್ಲಿ ಶ್ರೀ ವಿಷ್ಣುವಿಗೂ ಇತರರಿಂದ ಜನ್ಮಾದಿಗಳು ಶ್ರುತ ಗಳಾಗಿರುವುದರಿಂದ ಶ್ರೀವಿಷ್ಣುವಿಗೇನೇ ಜಗಜ್ಜನ್ಮಾದಿಕಾರಣತ್ವವೆಂದು ಹೇಳಿದ್ದು ಹೇಗೆ ಕೂಡುತ್ತ ದೆಂದರೆ—

**ಸ. ಚ. ವಿ—'ನಾಮಾನಿ ಸರ್ವಾಣಿ' 'ನಾಮಾನಿ ವಿಶ್ವಾಽಭಿ ನ ಸಂತಿ ಲೋಕೇ' ಇತ್ಯಾದಿ ಪ್ರಮಾಣ ಬಲದಿಂದ ಸರ್ವಶಬ್ದಪ್ರತಿಪಾದ್ಯತ್ವವು ಶ್ರೀಹರಿಗೇನೇ ಎಂದು ಹೇಳುವುದಾದರೆ**

'ಸೋಽರೋದೀತ್ ಯದರೋದೀತ್ತದ್ರುದ್ರಸ್ಯ ರುದ್ರತ್ವಂ' ಇತ್ಯಾದಿ ಶ್ರುತಿಗಳಿಂದ ರೋದನಾದಿದೋಷಗಳೂ ಶ್ರೀಹರಿಗೆ ಬರಬೇಕಾಗುವವು ಎಂದರೆ—

ನ್ಯಾಯಸುಧಾ— ಆದರೂ ಶ್ರೀ ವಿಷ್ಣುವಿನಲ್ಲಿ ಈ ಲಕ್ಷಣವು ಕೂಡುವುದಿಲ್ಲ. 'ಜನಿತೋತ ವಿಷ್ಣೋಃ' ಇತ್ಯಾದಿ ಶ್ರುತಿಗಳಲ್ಲಿ ಶ್ರೀವಿಷ್ಣುವಿಗೂ ಜನ್ಮಾದಿ ದೋಷಗಳು ಶ್ರುತಗಳಾಗಿವೆ. ಜನ್ಮಾದಿದೋಷಗಳುಳ್ಳವನಿಗೆ ನಮ್ಮಂತೆಯೇ ಜಗಜ್ಜನ್ಮಾದಿಕಾರಣತ್ವವು ಕೂಡಲಾರದು. ಆದ ಕಾರಣ ಈ ಲಕ್ಷಣವು ಅಸಂಭವಿಯಾಯಿತೆಂದರೆ—

ಮೂ || ಗುಣಾಃ ಶ್ರುತಾ ಇತಿ ಹ್ಯಸ್ಮಾತ್
ನ ದೋಷೋಽರ್ಥಃ ಶ್ರುತೇರ್ಭವೇತ್ || ೯೨ ||

ಅ || ಗುಣಾಃ ಶ್ರುತಾಃ ಇತಿ ಅಸ್ಮಾತ್='ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ | ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಙ್ಗೀಕಾರ್ಯಾ ಹಿ ತಥಾ ಪ್ರತೀತಾಃ' || ಎಂಬೀ ವಾಕ್ಯದ್ದೆಶೆಯಿಂದ, (ಅಂದರೆ ಈ ವಾಕ್ಯಾರ್ಥವನ್ನು ಪರ್ಯಾಲೋಚಿಸಿದರೆ) ದೋಷಃ=(ಶ್ರೀ ವಿಷ್ಣುವಿಗೆ) ಜನ್ಮಾದಿದೋಷವು, ಶ್ರುತೇಃ='ಜನಿತೋತ ವಿಷ್ಣೋಃ' ಇತ್ಯಾದಿ ಶ್ರುತಿಯ, ಅರ್ಥಃ=ಅರ್ಥವು, ಹಿ=ಯಾವ ಕಾರಣ ದಿಂದ, ನ ಭವೇತ್=ಆಗಲಾರದೋ, (ಆದಕಾರಣ ಈ ಲಕ್ಷಣವು ಅಸಂಭವಿಯಲ್ಲ ತಥಾಚ ಗುಣಾಃ ಶ್ರುತಾಃ ಎಂಬುವ ಶ್ರುತಿಯಲ್ಲಿ ಯಾವ ದೋಷವೂ ಶ್ರುತಿಯಲ್ಲಿ ಹೇಳಲಿಲ್ಲವೆಂದು ಹೇಳಿರುವುದರಿಂದ ಯಾವ ಶ್ರುತಿಗೂ ಶ್ರೀಹರಿಗೆ ದೋಷಗಳನ್ನು ಪ್ರತಿಪಾದಿಸುವುದರಲ್ಲಿ ತಾತ್ಪರ್ಯವಿರುವುದಿಲ್ಲ.)

ತಾ|| **ಸ. ರ. ವಿ.**— ಸೋಮಾದಿ ಶಬ್ದವಾಚ್ಯನಾದ ಕ್ಷೀರಾಬ್ಧಿಶಾಯಿಯಾದ, ಮೂಲ ರೂಪಿಯಾದ ಶ್ರೀ ನಾರಾಯಣನಿಂದ ವಿಷ್ಣುಶಬ್ದಾಭಿಧೇಯವಾದ ಪ್ರಾದುರ್ಭಾವ ರೂಪಕ್ಕೆ ಅಭಿವ್ಯಕ್ತಿಯು. ಹೀಗೆ 'ಜನಿತೋತ ವಿಷ್ಣೋಃ' ಎನ್ನುವ ಶ್ರುತಿಗೆ ಅರ್ಥವು. ಬೇರೆಯವರಿಂದ ಯಾರಿಂದಲೂ ವಿಷ್ಣುವಿಗೆ ಉತ್ಪತ್ತಿಯನ್ನು ಹೇಳುವುದಿಲ್ಲ.

**ಸ. ಚ. ವಿ.**— 'ಗುಣಾಃ ಶ್ರುತಾಃ' ಇತ್ಯಾದಿ ಶ್ರುತಿಬಲದಿಂದ ಶ್ರೀಹರಿಗೆ ಯಾವ ವಾಕ್ಯವೂ ದೋಷವನ್ನು ಹೇಳುವುದಿಲ್ಲ. ಮತ್ತು ಬೇರೆಯವರಲ್ಲಿರುವ ದೋಷಗಳಿಗೆ ಶ್ರೀ ಹರಿಯು ಸ್ವತಂತ್ರನೆನ್ನುವ ದೋಷಸ್ವಾತಂತ್ರ್ಯಾಖ್ಯ ಗುಣವನ್ನೇ ಹೇಳುತ್ತದೆ.

ನ್ಯಾಯಸುಧಾ— (1) ವಾಕ್ಯಾರ್ಥಜ್ಞಾನವಾಗಲಿಕ್ಕೆ ವ್ಯಾಖ್ಯಾನವು ಮುಖ್ಯ ಕಾರಣವು. "**ವ್ಯಾಖ್ಯಾನತೋ ವಿಶೇಷಪ್ರತಿಪತ್ತಿರ್ನ ಹಿ ಸಂದೇಹಾದಲಕ್ಷಣಂ**" ವ್ಯಾಖ್ಯಾನದಿಂದ ವಿಶೇಷ ಜ್ಞಾನವು ಹುಟ್ಟುತ್ತದೆ, ಎಂದು ಮಹಾಭಾಷ್ಯಕಾರರು ಹೇಳಿರುವರು. ಆದರಲ್ಲಿಯೂ "**ಯದೀಯಂ ವ್ಯಾಖ್ಯೇಯಂ ತದೀಯಮೇವ ಚೇತ್ ವ್ಯಾಖ್ಯಾನಂ ತದಾ ಸುತರಾಂ ತತೋಽರ್ಥಾವಗತಿಃ**" ಯಾರದ್ದು ವ್ಯಾಖ್ಯೇಯಗ್ರಂಥವೋ ಅವರದ್ದೇ ವ್ಯಾಖ್ಯಾನವಾದರೆ ಅಗ ಅದರಿಂದ ಸುತರಾಂ ಅರ್ಥಜ್ಞಾನವಾಗುವುದು. ಹೀಗೆ ಇದ್ದುದರಿಂದ 'ಗುಣಾಃ ಶ್ರುತಾಃ' ಎಂಬುವ ಶ್ರುತಿಯೇ ಎಲ್ಲಾ ಶ್ರುತಿಗಳನ್ನೂ ವ್ಯಾಖ್ಯಾನಮಾಡುತ್ತದೆ. ಎಲ್ಲಾ ಶ್ರುತಿಗಳೂ ಶ್ರೀ ವಿಷ್ಣುವಿಗೆ ಅನಂತಾನಂತ ಅಲೌಕಿಕ ಗುಣಗಳನ್ನೇ ಪ್ರತಿಪಾದಿಸುತ್ತವೆ. ಎಲ್ಲಿಯೂ ದೋಷ ಗಳನ್ನು ಪ್ರತಿಪಾದಿಸುವುದಿಲ್ಲ. (2) 'ಶ್ರೀಹರಿಗೆ ದೋಷವನ್ನು ಹೇಳುತ್ತದೆ' ಎನ್ನುವ ಪ್ರತೀತಿ ಯಾದರೂ ಇಂತಹ ಶಬ್ದಕ್ಕೆ ಈ ಅರ್ಥದಲ್ಲಿ ಶಕ್ತಿಯು, ಈ ಅರ್ಥದಲ್ಲಿ ತಾತ್ಪರ್ಯವು, ಎನ್ನುವ

ಜ್ಞಾನವಿಲ್ಲದಿರುವುದರಿಂದ ಹುಟ್ಟುವುದು. (3) ಹೀಗೆ ಶ್ರುತಿಯೇ ಸರ್ವ ಶ್ರುತಿಗಳನ್ನೂ ವ್ಯಾಖ್ಯಾನಮಾಡುವಾಗ ಆ ಶ್ರುತಿ ವಿರುದ್ಧವಾಗಿ ದೋಷಪರಗಳೆಂದು ವ್ಯಾಖ್ಯಾನಮಾಡುವುದು ಸರ್ವಥಾ ಕೂಡುವುದಿಲ್ಲ. ಆದಕಾರಣ 'ವಿಷ್ಣುಃ' ಎನ್ನುವುದು ಯಜಮಾನನಿಗೆ ಅಥವಾ ಯಜ್ಞಕ್ಕೆ ನಾಮಧೇಯವು. ಅಂತೂ 'ಸೋಮೋ ಜನಿತೋತ ವಿಷ್ಣೋಃ' ಎನ್ನುವುದಕ್ಕೆ ಸೋಮವು ಯಜಮಾನನನ್ನು ಅಥವಾ ಯಜ್ಞವನ್ನು ಹುಟ್ಟಿಸುತ್ತದೆ ಎಂದರ್ಥವು ॥ ೯೨ ॥

ಯುಕ್ತ್ಯಂತರದಿಂದಲೂ ಶ್ರೀ ವಿಷ್ಣುವಿಗೆ ದೋಷಗಳನ್ನು ಹೇಳುವುದರಲ್ಲಿ ಶ್ರುತಿಗಳಿಗೆ ತಾತ್ಪರ್ಯವಿರುವುದಿಲ್ಲವೆಂದು ನಿರೂಪಿಸುತ್ತಾರೆ.

**ಮೂ ॥ ಪ್ರೀತ್ಯಾ ಮೋಕ್ಷಪರತ್ವಾಚ್ಚ ತಾತ್ಪರ್ಯಂ ನೈವ ದೂಷಣೇ ।**
**ಸರ್ವೇಷಾಮಪಿ ವಾಕ್ಯಾನಾಂ ಮಹಾತಾತ್ಪರ್ಯಮತ್ರ ಹಿ ॥**
**ತದ್ವಿರೋಧೇ ನ ಮಾನತ್ವಂ ಫಲಂ ಮುಕ್ತಿರ್ಹಿ ವಾಕ್ಯತಃ ॥ ೯೩ ॥**

**ಅ ॥** ಸರ್ವೇಷಾಮಪಿ ವಾಕ್ಯಾನಾಂ=ಎಲ್ಲಾ ವಾಕ್ಯಗಳಿಗೂ, ಪ್ರೀತ್ಯಾ=ಭಗವಂತನಿಗೆ ಪ್ರೀತಿಯನ್ನು ಹುಟ್ಟಿಸಿ, ಮೋಕ್ಷಪರತ್ವಾತ್=ಮುಕ್ತಿ ಯೋಗ್ಯರಾದ ಅಧಿಕಾರಿಗಳಿಗೆ ಮುಕ್ತಿಯನ್ನು ಸಾಧಿಸಿಕೊಡುವುದರಲ್ಲಿ ತಾತ್ಪರ್ಯವಿದ್ದುದರಿಂದ, ದೂಷಣೇ=ಪರಮೇಶ್ವರನ ದೂಷಣೆ ಹೇಳುವುದರಲ್ಲಿ, ತಾತ್ಪರ್ಯಂ=ತಾತ್ಪರ್ಯವು, ನೈವ=ಇರುವುದೇ ಇಲ್ಲ. (ಎಲ್ಲಾ ವೇದಗಳಿಗೆ ಶ್ರೀಹರಿಯಲ್ಲಿ ದೋಷ ಹೇಳುವುದರಲ್ಲಿ ತಾತ್ಪರ್ಯವಿಲ್ಲದಿದ್ದರೆ ಬೇರೆ ಎಲ್ಲಿ ತಾತ್ಪರ್ಯವಿರುವುದು ಎಂದರೆ) ಸರ್ವೇಷಾಮಪಿ ವಾಕ್ಯಾನಾಂ=ಎಲ್ಲಾ ವಾಕ್ಯಗಳಿಗೂ, ಅತ್ರ ಹಿ='ಗುಣಾಃ ಶ್ರುತಾಃ' ಎಂಬುವ ವಾಕ್ಯದಿಂದ ಬುದ್ಧಿ ಸನ್ನಿಹಿತಗಳಾದ ಗುಣಗಳ ಉತ್ಕರ್ಷದಲ್ಲಿಯೇ, ಮಹಾ ತಾತ್ಪರ್ಯಂ=ಮುಖ್ಯ ತಾತ್ಪರ್ಯವು. ಹಿ ಶಬ್ದದಿಂದ ಗುಣಜ್ಞಾನವು ಈಶ್ವರನ ಪ್ರೀತಿಗೆ ಕಾರಣವೆಂದು ಸೂಚಿತವಾಯಿತು ತದ್ವಿರೋಧೇ=ಪರಮೇಶ್ವರನಿಗೆ ದೋಷಗಳನ್ನು ಪ್ರತಿಪಾದಿಸುವುದು ಮೋಕ್ಷಕ್ಕೆ ವಿರುದ್ಧವಾಗುತ್ತಿರಲು ಅಂದರೆ, ವಿರುದ್ಧವಾಗಿರುವುದರಿಂದ (ವೇದ ವಾಕ್ಯಗಳು ದೋಷವನ್ನು ಪ್ರತಿಪಾದಿಸಿದರೆ), ಮಾನತ್ವಂ=ಪ್ರಾಮಾಣ್ಯವು, ನ=ಕೂಡುವುದಿಲ್ಲ. ಅಂತೂ ಶ್ರೀಹರಿಯು ಪ್ರೀತಿಯನ್ನು ಹುಟ್ಟಿಸಿ ಅಧಿಕಾರಿಗಳಿಗೆ ಮೋಕ್ಷವನ್ನು ಸಾಧಿಸಿಕೊಡಬೇಕೆಂಬ ಉದ್ದೇಶದಿಂದ ಪ್ರವೃತ್ತಗಳಾದ ವೇದಗಳಿಗೆ ಶ್ರೀಹರಿಯ ಅಪ್ರೀತಿಗೆ ಕಾರಣಗಳಾದ ದೋಷಗಳನ್ನು ಹೇಳುವುದರಲ್ಲಿ ತಾತ್ಪರ್ಯವಿರುವುದಿಲ್ಲ. ವಾಕ್ಯತಃ=ವಾಕ್ಯಗಳ ತಾತ್ಪರ್ಯ ನಿಶ್ಚಾಯಕವಾಗಿ ತಿಳಿಯಲ್ಪಟ್ಟ, ಫಲಂ=ಫಲವು, ಮುಕ್ತಿರ್ಹಿ=ಮುಖ್ಯವಾದುದು ಮೋಕ್ಷವೇ. ಅಥವಾ ವಾಕ್ಯತಃ=ಸರ್ವ ವೇದ ವಾಕ್ಯಗಳಿಂದ ಸಾಧ್ಯ (ಉದ್ದೇಶ್ಯ)ವಾದ, ಫಲಂ=ಫಲವು, ಮುಕ್ತಿರ್ಹಿ=ಜೀವನಿಗೆ ಸಂಸಾರದಿಂದ ಮುಕ್ತಿಯೇ ಶ್ರುತ್ಯಾದಿ ಪ್ರಸಿದ್ಧವಾಗಿದೆ.

**ತಾ ॥ ಸ. ರ. ವಿ.—** ಎಲ್ಲಾ ವೇದಗಳಿಗೂ ಶ್ರೀಹರಿಯ ಪ್ರೀತಿಯನ್ನು ಹುಟ್ಟಿಸಿ ಅಧಿಕಾರಿಗಳಿಗೆ ಮೋಕ್ಷವನ್ನು ಪ್ರತಿಪಾದಿಸುವುದರಲ್ಲಿಯೇ ತಾತ್ಪರ್ಯವಿರುವುದರಿಂದ ಶ್ರೀಹರಿಯನ್ನು ದೂಷಿಸುವುದರಲ್ಲಿ ತಾತ್ಪರ್ಯವಿರುವುದಿಲ್ಲ. ಮತ್ತು ಅನಂತಾನಂತ ಗುಣಗಳಿವೆ ಎನ್ನುವ ಜ್ಞಾನವು ಪ್ರೀತಿಗೆ ಸಾಧನವಾಗಿರುವುದರಿಂದ ಅವುಗಳಲ್ಲಿಯೇ ತಾತ್ಪರ್ಯವು. ಇಲ್ಲವಾದರೆ ಭಗವಂತನ ಅಪ್ರೀತಿಗೆ ಸಾಧನವಾದ ದೋಷಜ್ಞಾನವನ್ನು ಹುಟ್ಟಿಸುವುದರಿಂದ ನರಕಾದ್ಯನರ್ಥಗಳನ್ನು ಹೊಂದಿಸಿಕೊಡುವ ಪ್ರಯುಕ್ತ ವೇದವನ್ನು ಎಲ್ಲರೂ ಬಿಡಬೇಕಾಗುವುದು. ಆದ ಪ್ರಯುಕ್ತ ವೇದಗಳಿಗೆ ಭಗವಂತನ ಗುಣೋತ್ಕರ್ಷದಲ್ಲಿಯೂ ಮಹಾ ತಾತ್ಪರ್ಯವು.

ನ್ಯಾಯಸುಧಾ— (1) 'ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ । ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥ ಜೀವವ್ಯತಿರಿಕ್ತವಾದುದೆಲ್ಲವೂ (ಜಡವು) ದುಃಖರಹಿತವಾದುದು. ಜೀವರೇ ದುಃಖವುಳ್ಳವರು. ಅವರ ದುಃಖವನ್ನು ಪರಿಹರಿಸು ವುದಕ್ಕಾಗಿ ಶ್ರುತಿಯು ಪ್ರವೃತ್ತವಾಗುತ್ತದೆ, ಎನ್ನುವ ಶ್ರುತಿಯಿಂದ ಜೀವರಿಗೆ ಮೋಕ್ಷವಾಗ ಬೇಕೆಂಬುವ ಉದ್ದೇಶದಿಂದ ವೇದವು ಪ್ರವೃತ್ತವಾಗಿದೆ. (2) ಮೋಕ್ಷವಾದರೂ ಭಗವತ್ಪ್ರೀತಿ ಯಿಂದಲೇ ಸಾಧ್ಯವಾಗಿದೆ. ಬೇರೆ ಯಾವುದರಿಂದಲೂ ಸಿಗಲಾರದು ಏಕೆಂದರೆ— "ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ" ಯಾವ ಶ್ರೀ ಹರಿಯ ಪ್ರಸಾದದಿಂದಲೇ ಅತಿಕ್ಲೇಶ ರೂಪವಾದ ಈ ಸಂಸಾರದಿಂದ ಮುಕ್ತನಾಗುತ್ತಾನೆ. ಬೇರೆ ಯಾವುದರಿಂದಲೂ ಮುಕ್ತನಾಗಲಾರನು ಎಂದು ಶ್ರುತಿಯು ಸಾರುತ್ತಿದೆ. ಆದಕಾರಣ ಭಗವಂತನ ಪ್ರೀತಿಯನ್ನು ಹುಟ್ಟಿಸಿ ಮೋಕ್ಷವನ್ನು ಸಾಧಿಸುವ ವೇದವು 'ಯಾವುದನ್ನು ತಿಳಿಸಿದರೆ ಜೀವರಲ್ಲಿ ಭಗವಂತನಿಗೆ ಪ್ರೀತಿಯು ಹುಟ್ಟುವುದೋ ಅಂತಹುದನ್ನೇ' ಜೀವರಿಗೆ ಬೋಧಿಸಬೇಕು. ತಥಾಚ ದೂಷಣಜ್ಞಾನವು ಪ್ರೀತಿಸಾಧನವಾಗದಿರುವುದರಿಂದ ಪರಮೇಶ್ವರನ ದೂಷಣದಲ್ಲಿ ಶ್ರುತಿ ಗಳಿಗೆ ತಾತ್ಪರ್ಯವು ಸರ್ವಥಾ ಕೂಡಲಾರದು. (3) ಪ್ರತ್ಯಕ್ಷಾನುಮಾನಗಳು ಪ್ರಯೋ ಜನೋದ್ದೇಶದಿಂದ ಪ್ರವೃತ್ತಗಳಾಗುವುದಿಲ್ಲ. ವಾಕ್ಯ (ಆಗಮ)ವಾದರೂ ಶ್ರೋತೃಗಳಿಗೆ ಪುರು ಷಾರ್ಥ (ಮೋಕ್ಷ)ವಾಗಬೇಕೆಂಬ ಉದ್ದೇಶದಿಂದಲೇ ಪ್ರವೃತ್ತವಾದುದರಿಂದ ಅದಕ್ಕೆ ಅನುಗುಣ ವಾದ ವಿಷಯವನ್ನೇ ಪ್ರತಿಪಾದಿಸುವುದು. ಉದ್ದಿಷ್ಟ ಪುರುಷಾರ್ಥಕ್ಕೆ ವಿರೋಧಿಯಾದ ವಿಷಯ ದಲ್ಲಿ ಆದರೂ ಪ್ರವರ್ತಿಸದಂಥಾದ್ದು ಹೇಗೆತಾನೇ ಪ್ರಮಾಣವಾಗುವುದು? ಸರ್ವಥಾ ಪ್ರಮಾಣ ವಾಗಲಾರದು. ಉದಾ:— ಸ್ವರ್ಗೋದ್ದೇಶದಿಂದ ಅಗ್ನಿಹೋತ್ರವನ್ನು ವಿಧಿಸಿ "ಕೋ ಹಿ ತದ್ವೇದ ಯದ್ಯಮುಷ್ಮಿನ್ ಲೋಕೇಽಸ್ತಿ ವಾ ನ ವೇತಿ" ಪರಲೋಕದಲ್ಲಿ ಸುಖವಿದೆಯೋ ಇಲ್ಲವೋ ಎಂದು ಸಂಶಯವನ್ನು ಹುಟ್ಟಿಸತಕ್ಕ ವಾಕ್ಯವು ಉದ್ದಿಷ್ಟ ಸ್ವರ್ಗರೂಪ ಪುರುಷಾರ್ಥಕ್ಕೆ ವಿರೋಧಿಯಾದುದರಿಂದ ಆ ಅರ್ಥದಲ್ಲಿ ಹೇಗೆ ಪ್ರಮಾಣವಾಗಲಾರದೋ, 'ದಿಕ್ಷ್ವತೀಕಾಶಾನ್ ಕರೋತಿ' ಎನ್ನುವ ವಾಕ್ಯವಿಹಿತವಾದ ಅರ್ಥಾಂತರದಲ್ಲಿ ಸ್ತುತಿಪರವೆಂದೇ ಹೇಳಬೇಕು ಹಾಗೆಯೇ ಭಗವಂತನಿಗೆ ದೋಷವನ್ನು ಪ್ರತಿಪಾದಿಸುವುದಾದರೆ ಅಪ್ರಮಾಣವೇ ಆಗಬೇಕು. ಪ್ರಕೃತದಲ್ಲಿ ಆದರೂ ಸರ್ವ ವೇದವಾಕ್ಯಗಳಿಂದಲೂ ಸಾಧ್ಯವಾದ ಫಲವು ಮೋಕ್ಷವೆಂದೇ ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ. ದೋಷಪ್ರತಿಪಾದನವು ಮೋಕ್ಷಕ್ಕೆ ವಿರುದ್ಧವಾಗಿರುವುದರಿಂದ ಆ ವಿಷಯದಲ್ಲಿ ವೇದವಾಕ್ಯಗಳಿಗೆ ಸರ್ವಥಾ ಪ್ರಾಮಾಣ್ಯವು ಕೂಡುವುದಿಲ್ಲ. ॥ ೯೩ ॥

ಸ. ರ. ವಿ— ಹಾಗಾದರೆ ಲಿಂಗಪುರಾಣಾದಿಗಳಲ್ಲಿ ರುದ್ರಾದಿಗಳಿಗೇನೇ ಜಗತ್ಕಾರಣತ್ವವೂ ಶ್ರೀ ವಿಷ್ಣುವಿಗೆ ಅಮುಖ್ಯತ್ವವೂ (ಅಪ್ರಾಧಾನ್ಯವೂ) ಹೇಳಿಯದೆ ಎಂದರೆ—

ನ.ಚ.ವಿ— ಲಿಂಗಪುರಾಣಾದಿಗಳೂ ಪಾಶುಪತಾದಿ ಶಾಸ್ತ್ರಗಳೂ ಕೂಡ ಶ್ರೀವಿಷ್ಣುವಿಗೆ ಪಾರತಂತ್ರ್ಯಾದಿ ದೋಷಗಳನ್ನು ಹೇಳುತ್ತವೆಂದರೆ—

ನ್ಯಾಯಸುಧಾ— ಹಾಗಾದರೆ ಜಗಜ್ಜನ್ಮಾದಿ ಕಾರಣತ್ವರೂಪವಾದ ಲಕ್ಷಣಕ್ಕೆ 'ಹಿರಣ್ಯ ಗರ್ಭಃ ಸಮವರ್ತತಾಗ್ರೇ' ಇತ್ಯಾದಿ ಶ್ರುತಿಗಳಿಂದ ಹಿಂದೆ ಹೇಳಿದ ರೀತಿಯಿಂದ ಅತಿವ್ಯಾಪ್ತ್ಯಾದಿ ಗಳು ಬಾರದೆಯಿದ್ದರೂ ಶೈವಾದಿ ಪುರಾಣಗಳಿಂದ ಬಂದೇಬರುವುದು. ಅವುಗಳಲ್ಲಿ ರುದ್ರಾದಿ ಗಳಿಗೇನೇ ಜಗತ್ಕಾರಣತ್ವವೂ ಶ್ರೀ ವಿಷ್ಣುವಿಗೆ ಅಪ್ರಾಧಾನ್ಯವೂ ಹೇಳಿರುತ್ತದೆಂದು ಹೇಳ ಕೂಡದು. ಏಕೆಂದರೆ, ಶ್ರುತಿಗಳಿಗೆ ವಿರುದ್ಧವಾದ ಅರ್ಥವನ್ನು ಹೇಳುವ ಪುರಾಣಗಳೇ ಸರ್ವಥಾ

ಪ್ರಮಾಣವಾಗಲಾರವು "ವಿರೋಧೇ ತ್ವನಪೇಕ್ಷ್ಯಂ ಸ್ಯಾದಸತಿ ಹ್ಯನುಮಾನಂ" (ಜೈ. ಸೂ. ಅಧ್ಯಾ. ೧ ಪಾ. ೩ ಅಧಿ. ೨) ಸ್ಮೃತಿಗಳಿಗೆ ಶ್ರುತಿವಿರೋಧವಿದ್ದರೆ ಆ ಸ್ಮೃತಿಗಳ ಸಮುದಾಯವೇ ಅನಾದರಣೀಯವು (ಅಪ್ರಮಾಣವು) ಆಗುವುದು. ಪ್ರತ್ಯಕ್ಷಶ್ರುತಿವಿರೋಧವಿಲ್ಲದಿದ್ದರೆ ಸ್ಮೃತಿಯಿಂದ ಮೂಲಭೂತವಾದ ಶ್ರುತಿಯನ್ನು ಅನುಮೇಯಿಸಬೇಕು. ಹೀಗೆ ಶ್ರುತಿವಿರುದ್ಧಾರ್ಥದಲ್ಲಿ ಪ್ರಾಮಾಣ್ಯವಿಲ್ಲವೆಂದು ಜೈಮಿನ್ಯಾಚಾರ್ಯರು ಹೇಳಿರುವರು. ತಥಾಚ ಪೌರುಷೇಯವಾಗಿರುವ ಪ್ರಯುಕ್ತ ದೋಷಶಂಕಾಕಲಂಕಿತಗಳಾದ ಶೈವಾದಿ ಪುರಾಣಗಳಿಗೆ ಅಪೌರುಷೇಯವಾಕ್ಯ ವಿರೋಧವಿರುವಾಗ ಅಪ್ರಾಮಾಣ್ಯವನ್ನು ಅವಶ್ಯವಾಗಿ ಹೇಳಲೇಬೇಕು. ರುದ್ರಾದಿಗಳಿಗೆ ಜಗಜ್ಜನ್ಮಾದಿಕಾರಣತ್ವವೂ ಶ್ರೀ ಹರಿಗೆ ಅಮುಖ್ಯತ್ವವೂ ಅನೇಕಾನೇಕ ಶ್ರುತಿಗಳಿಂದ ವಿರುದ್ಧವಾಗಿದೆ. ಆ ಶ್ರುತಿಗಳನ್ನು ಅಲ್ಲಿ ಅಲ್ಲಿ ಉದಾಹರಿಸುವೆವು ಎಂದಭಿಪ್ರಾಯವುಳ್ಳವರಾಗಿ ನಿರೂಪಿಸುತ್ತಾರೆ.

**ಮೂ || ನ ಪುರಾಣಾದಿಮಾನತ್ವಂ ವಿರುದ್ಧಾರ್ಥೇ ಶ್ರುತೇರ್ಭವೇತ್ |**
**ದರ್ಶನಾಂತರಮೂಲತ್ವಾನ್ಮೋಹಾರ್ಥಂ ಚಾಜ್ಞಯಾ ಹರೇಃ ||೯೪||**

ಅ || ಶ್ರುತೇಃ ವಿರುದ್ಧಾರ್ಥೇ=ಶ್ರುತಿಗಳಿಗೆ ವಿರುದ್ಧವಾದ 'ರುದ್ರಾದಿಗಳು ಜಗತ್ಕಾರಣರು' ಇತ್ಯಾದಿರೂಪವಾದ ಅರ್ಥದಲ್ಲಿ, ಪುರಾಣಾದಿಮಾನತ್ವಂ=ಶೈವಾದಿಪುರಾಣಗಳಿಗೆ ಪ್ರಾಮಾಣ್ಯವು, ನ ಭವೇತ್=ಕೂಡಲಾರದು. (ಶೈವಪುರಾಣಾದಿಗಳೂ ಶ್ರುತಿಮೂಲಕಗಳಾಗಿವೆ. ಆದಕಾರಣ ಶ್ರುತಿವಿರೋಧದಿಂದ ಅಪ್ರಮಾಣಗಳು ಹೇಗೆ ಆಗುವುವು, ಎಂದರೆ) ದರ್ಶನಾಂತರಮೂಲತ್ವಾತ್='ಶೈವಾನ್ ಪಾಶುಪತಾತ್ಮಕ್ರೇ' ಪಾಶುಪತಾಗಮದಿಂದ ಶೈವಾಗಮಗಳನ್ನು ಮಾಡಿದರೆಂದು ಮೋಕ್ಷಧರ್ಮದಲ್ಲಿ ಶೈವಪುರಾಣಾದಿಗಳು ಶಾಸ್ತ್ರಾಂತರವೇ ಮೂಲವಾಗಿವುಳ್ಳವುಗಳೆಂದು ಹೇಳಿರುವುದರಿಂದ (ಪುರಾಣಾದೀನಾಂ=ಲಿಂಗಪುರಾಣಾದಿಗಳಿಗೆ, ಶ್ರುತಿಮೂಲತ್ವಂ=ಶ್ರುತಿಯು ಮೂಲವೆನ್ನುವುದು, ನ=ಇರುವುದಿಲ್ಲ.)

(ಆದರೂ ಪಾಶುಪತಾದಿಗಳು ಶ್ರುತಿಮೂಲಕಗಳಾದರೆ ಪುರಾಣಾದಿಗಳೂ ಶ್ರುತಿಮೂಲಕಗಳಾಗಬೇಕಾಗುವುವು, ಎಂದರೆ) ಹರೇಃ=ಶ್ರೀಪರಮಾತ್ಮನ, ಆಜ್ಞಯಾ=ಅಪ್ಪಣೆಯಿಂದ, (ಶಾಸ್ತ್ರಾಂತರಗಳು ರುದ್ರಾದಿಗಳಿಂದ) ಮೋಹಾರ್ಥಂ ಚ=ದುರ್ಜನರನ್ನ ಮೋಹಿಸುವುದಕ್ಕಾಗಿ (ಮಾಡಲ್ಪಟ್ಟವೆ. ವಿಪ್ರಲಂಭ ವಂಚನಾ ಮೂಲಕಗಳು)

ತಾ || ನ. ಚ. ವಿ.— **ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ | ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ | ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂ ಚ ಮಾಂ ಕುರು ||** ಎಲೋ ರುದ್ರನೇ ಮೋಹಕ ಶಾಸ್ತ್ರಗಳನ್ನು ಮಾಡು. ನಿನ್ನನ್ನು ಪ್ರಕಾಶಪಡಿಸಿಕೋ. ನನ್ನನ್ನು ಅಪ್ರಸಿದ್ಧನನ್ನು ಮಾಡು. ಹೀಗೆ ಶ್ರೀ ಹರಿಯ ಆಜ್ಞೆಯಿಂದ ದುರ್ಜನರನ್ನು ಮೋಹಿಸುವುದಕ್ಕಾಗಿ ರುದ್ರಾದಿಗಳು ಮಾಡಿದ್ದೆಂದು ವಾರಾಹಪುರಾಣದಲ್ಲಿ ಹೇಳಿರುವುದರಿಂದ ಶೈವಪುರಾಣದಲ್ಲಿ ಹೇಳಿದ್ದನ್ನು ಸ್ವೀಕರಿಸಕೂಡದು.

ನ್ಯಾಯಸುಧಾ— (1) ರುದ್ರಾದಿಗಳು ನಿಷ್ಕಾರಣವಾಗಿ ಪ್ರಾಣಿಗಳಿಗೆ ಮೋಹವನ್ನು ಹುಟ್ಟಿಸಿರುವುದರಿಂದ ಅವರಿಗೆ ಮಹಾಪ್ರತ್ಯವಾಯವೇ ಬರಬೇಕಾಗುವುದು. ಪರರನ್ನು ವಂಚಿಸಿದುದರಿಂದ ಯಾವದೊಂದು ಮಹಾಪ್ರಯೋಜನವೂ ಇರಲಾರದು. ಆದಕಾರಣ ಹೀಗೆ ವಂಚಿಸುವುದು ಸರ್ವಥಾ ಯುಕ್ತವಲ್ಲವೆಂದರೆ—ಶ್ರೀ ಹರಿಯ ಆಜ್ಞಾನುಸಾರವಾಗಿಯೇ ಇವರು 'ಗ್ರಂಥ'

ವನ್ನು ಮಾಡಿರುವುದರಿಂದ ಇವರಿಗೆ ಪ್ರತ್ಯವಾಯವೂ ಇಲ್ಲ 'ಹರ್ಯಾಜ್ಞಾಕರಣಾದೇವ ಪುಣ್ಯಮೇಭಿರವಾಪ್ಯತೇ' ಶ್ರೀ ಹರಿಯ ಆಜ್ಞಾನುಸಾರವಾಗಿ ಮಾಡಿರುವುದರಿಂದಲೇ ಇವರಿಂದ ಪುಣ್ಯವು ಹೊಂದಲ್ಪಡುತ್ತದೆ' ಎಂದು ಮಹಾಪ್ರಯೋಜನವಿದೆ ಎಂದೇ ಹೇಳಿರುತ್ತದೆ. (2) "ಕುತ್ಸಿತಾನಿ ಚ ಮಿಶ್ರಾಣಿ ರುದ್ರೋ ವಿಷ್ಣುಪ್ರಚೋದಿತಃ। ಚಕಾರ ಶಾಸ್ತ್ರಾಣಿ ವಿಭುಃ ಋಷಯಸ್ತತ್ಪ್ರಚೋದಿತಾಃ। ದಧೀಚ್ಯಾದ್ಯಾಃ ಪುರಾಣಾನಿ ತಚ್ಛಾಸ್ತ್ರಸಮಯೇ ನ ತು"॥ ರುದ್ರದೇವರು ಶ್ರೀ ಹರಿಯಿಂದ ಪ್ರೇರಿತರಾಗಿ ಕುತ್ಸಿತ ಶಾಸ್ತ್ರಗಳನ್ನು ಮಾಡಿದರು. ದಧೀಚ್ಯಾದಿ ಋಷಿಗಳು ರುದ್ರದೇವರಿಂದ ಪ್ರೇರಿತರಾಗಿ ಅದೇಕಾಲದಲ್ಲಿ ಪುರಾಣಾದಿಗಳನ್ನು ಮಾಡಿದರು. ಎಂದು ಗೀತಾಭಾಷ್ಯದಲ್ಲಿ ಉದಾಹರಿಸಿದ ಪುರಾಣಾಂತರದಲ್ಲಿ ಹೇಳಿಯದೆ. ॥ ೯೪ ॥

ರುದ್ರಾದಿಗಳು ಜಗತ್ಕಾರಣರಾದರೆ ಅವರಿಗೆ ವಿಷ್ಣು ಎನ್ನುವ ನಾಮವೇ ಮೊದಲಾದ ಎಲ್ಲಾ ನಾಮಗಳೂ ಇರಬೇಕಾಗುವುವು. ಇಲ್ಲವಾದರೆ ವಿಷ್ಣ್ವಾದಿಗಳಿಗೆ ಜಗತ್ಕಾರಣತ್ವಾದಿಗಳನ್ನು ಹೇಳತಕ್ಕ ವಾಕ್ಯಗಳ ವಿರೋಧವನ್ನು ಪರಿಹರಿಸತಕ್ಕ ಉಪಾಯವಿಲ್ಲದಿರುವುದರಿಂದ ನಿರ್ಣಯವೇ ಆಗಲಾರದು. ರುದ್ರಾದಿಗಳಿಗೆ ಸರ್ವನಾಮಗಳಿಲ್ಲ ಆದಕಾರಣ ರುದ್ರಾದಿಗಳಿಗೆ ಜಗತ್ಕಾರಣತ್ವವೂ ಇಲ್ಲ ಎನ್ನುತ್ತಾರೆ.

ಮೂ ॥ **ನ ಸರ್ವನಾಮತಾಽನ್ಯೇಷಾಂ ಶ್ರುತಾವುಕ್ತಾ ಹಿ ಕುತ್ರಚಿತ್** ॥ ೯೫ ॥

ಅ ॥ ಅನ್ಯೇಷಾಂ=ರುದ್ರಾದಿಗಳಿಗೆ, ಸರ್ವನಾಮತಾ=ಸರ್ವನಾಮವಿರುವಿಕೆ ಅಂದರೆ ಸರ್ವಶಬ್ದವಾಚ್ಯತ್ವವು, ಶ್ರುತೌ=ಶ್ರುತಿಯಲ್ಲಿ, ಕುತ್ರಚಿತ್=ಎಲ್ಲಿಯೂ, ನೋಕ್ತಾ=ಹೇಳಲ್ಪಡಲಿಲ್ಲ. ಹಿ=ಪ್ರಮಾಣಪ್ರಸಿದ್ಧವು.

ತಾ ॥ **ಸ.ರ.ವಿ.**— ಯಾವನು ಜಗತ್ಕಾರಣನೋ ಆತನು ಮುಖ್ಯವಾಗಿ ಇಂದ್ರಾದಿ ಸರ್ವನಾಮಗಳುಳ್ಳವನಾಗಬೇಕು. ಸರ್ವನಾಮವು ರುದ್ರಾದಿಗಳಿಗೆ ಎಲ್ಲಿಯೂ ಶ್ರುತವಾಗಲಿಲ್ಲ. ಮತ್ತು 'ಯೋ ದೇವಾನಾಂ ನಾಮಧಾ ಏಕ ಏವ' ಎನ್ನುವ ವಾಕ್ಯವು ಯತ್ ಶಬ್ದವಾಚ್ಯನಾದ ಶ್ರೀ ಹರಿಗೆ ಸರ್ವಶಬ್ದವಾಚ್ಯತ್ವವನ್ನು ಹೇಳಿ ಏಕಕಾರದಿಂದ ರುದ್ರಾದಿಗಳಿಗೆ ಸರ್ವಶಬ್ದವಾಚ್ಯತ್ವವನ್ನು ನಿಷೇಧಿಸಿರುತ್ತದೆ ಈ ವಾಕ್ಯದಲ್ಲಿದ್ದ ಯತ್ ಶಬ್ದವೇ ರುದ್ರಾದಿವಿಷಯಕವೆಂದೂ ಹೇಳಕೂಡದು '**ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ**' ಎನ್ನುವ ಪದ್ಮನಾಭನನ್ನು ಪ್ರತಿಪಾದಿಸತಕ್ಕ ವಾಕ್ಯಶೇಷದಿಂದ ವಿರೋಧವು ಬರುವುದು. ಪದ್ಮನಾಭತ್ವವು ಶ್ರೀ ಹರಿಗೇನೇ ಪ್ರಸಿದ್ಧವು ॥ ೯೫ ॥

**ಸ ರ. ವಿ.**— ಮತ್ತು ವಿಷ್ಣುವಿಗೆ ಅಜ್ಞಾನ ಪಾರತಂತ್ರ್ಯಮೊದಲಾದ ದೋಷಗಳು ಇಲ್ಲವೆಂದು ವೇದಗಳಲ್ಲಿ ಶ್ರುತಗಳಾಗಿರುವುದರಿಂದಲೂ ರುದ್ರಾದಿಗಳಿಗೆ ಆ ದೋಷಗಳು ಇರುತ್ತವೆಂದು ಶ್ರುತಗಳಾಗಿರುವುದರಿಂದಲೂ ರುದ್ರಾದಿಗಳು ಜಗತ್ಕಾರಣರಲ್ಲ ಎಂದು ನಿರೂಪಿಸುತ್ತಾರೆ.

**ನ್ಯಾಯಸುಧಾ**— ಜಗತ್ಕಾರಣನು ಅಜ್ಞಾನಾದಿ ದೋಷವಿರಹಿತನಾಗಬೇಕು. ದೋಷಿಯಾದರೆ ಆತನಿಗೆ ನಮ್ಮಂತೆಯೇ ಜಗಜ್ಜನ್ಮಾದಿಕಾರಣತ್ವವೇ ಕೂಡಲಾರದು. ಶ್ರೀ ಹರಿಯೊಬ್ಬನೇದೋಷಲೇಶರಹಿತನು. ಇತರರು ದೋಷವುಳ್ಳವರೇ ಆಗಿರುತ್ತಾರೆ. ಆದಪ್ರಯುಕ್ತ ಶ್ರೀ ಹರಿಯೇ ಜಗಜ್ಜನ್ಮಾದಿಗಳಿಗೆ ಕಾರಣನು, ರುದ್ರಾದಿಗಳಲ್ಲ ಎಂದು ನಿರೂಪಿಸುತ್ತಾರೆ.

ಮೂ || ಅದೋಷ ವಚನಾಚ್ಚೈವ ನಿಯಮೇನ ಹರೇಃ ಶ್ರುತೌ |
ಅಜ್ಞಾನಂ ಪಾರತಂತ್ರ್ಯಂ ಚ ಪ್ರಲಯೇಽಭಾವ ಏವ ಚ ||
ಅಶಕ್ತಿಶ್ಚೋದಿತಾಽನ್ಯೇಷಾಂ ಸರ್ವೇಷಾಮಪಿ ಚ ಶ್ರುತೌ || ೯೬ ||

ಅ || ಹರೇರೇವ=ಶ್ರೀ ಪರಮಾತ್ಮನಿಗೇನೇ, ನಿಯಮೇನ=ನಿಯಮವಾಗಿ, ಶ್ರುತೌ= ವೇದಗಳಲ್ಲಿ, ಅದೋಷವಚನಾಚ್ಚ=ದೋಷಪ್ರತಿಪಾದಕವಾಕ್ಯವಿಲ್ಲದಿರುವುದರಿಂದಲೂ, ದೋಷ ಗಳಿಲ್ಲವೆಂದು ಪ್ರತಿಪಾದಿಸುವ ವಾಕ್ಯವಿದ್ದುದರಿಂದಲೂ, (ಶ್ರೀ ಹರಿಯೇ ಜಗಜ್ಜನ್ಮಾದಿಕಾರಣನು). ಅಜ್ಞಾನಂ=ಅಜ್ಞಾನವು, ಪಾರತಂತ್ರ್ಯಂ=ಪರಾಧೀನತೆಯೂ, ಪ್ರಲಯೇ=ಪ್ರಲಯಕಾಲದಲ್ಲಿ, ಅಭಾವ ಏವ ಚ=ಇಲ್ಲದಿರುವಿಕೆಯೂ, ಅಶಕ್ತಿಶ್ಚ=ಸಾಮರ್ಥ್ಯಾಭಾವವೂ, ಅನ್ಯೇಷಾಂ ಸರ್ವೇಷಾ ಮಪಿ=ಬೇರೆಯವರಿಗೆಲ್ಲರಿಗೂ, ಶ್ರುತೌ=ಶ್ರುತಿಗಳಲ್ಲಿ, ಉದಿತಾ=ಹೇಳಲ್ಪಟ್ಟಿದೆ.

ತಾ || ನ್ಯಾಯಸುಧಾ— ಪಾದ್ಮಪುರಾಣಾದಿಗಳಲ್ಲಿ ವಿಷ್ಣುನಾಮ-ಗಳು ಶಿವನಲ್ಲಿ ತೋರು ತ್ತವೆ. ಅದರಿಂದ ವಿರೋಧವು ಪ್ರಾಪ್ತವಾಯಿತೆಂದು ಹೇಳಕೂಡದು. 'ಯೋ ದೇವಾನಾಂ' ಎನ್ನುವ ಶ್ರುತಿವಿರುದ್ಧವಾದ ಪುರಾಣಾದಿಗಳು ಸರ್ವಥಾ ಅನಾದರಣೀಯಗಳು ಎಂಬುವ ಅಭಿಪ್ರಾಯದಿಂದ 'ಶ್ರುತೌ' ಎಂದು ಮೂಲದಲ್ಲಿ ಹೇಳಿರುವರು || ೯೭ ||

ಸ. ರ. ವಿ— ಈಗ ಇಷ್ಟರವರೆಗೆ ಹೇಳಿದ ಅರ್ಥವನ್ನುಪಸಂಹಾರ ಮಾಡುತ್ತಾ ಜಗ ಜ್ಜನ್ಮಾದಿ ಕಾರಣತ್ವರೂಪವಾದ ಲಕ್ಷಣವು ಸ್ವಲಕ್ಷಣ (ಸ್ವರೂಪಭೂತವಾದ ಲಕ್ಷಣ) ವೇ ತಟಸ್ಥ ಲಕ್ಷಣವಲ್ಲವೆಂದು ನಿರೂಪಿಸುತ್ತಾರೆ.

ನ್ಯಾಯಸುಧಾ— ಹೀಗೆ ಸೂತ್ರದಲ್ಲಿ ಹೇಳಿರುವ ಶ್ರೀ ಹರಿಯು ಲಕ್ಷಣಕ್ಕೆ ಲಕ್ಷ್ಯವ್ಯಕ್ತಿ ಯೊಂದೇ ಇರುವುದರಿಂದ, ಅವ್ಯಾಪ್ತಿಗೆ ಪ್ರಸಕ್ತಿಯೇ ಇಲ್ಲದಿರುವುದರಿಂದ ಅತಿವ್ಯಾಪ್ತಿಯನ್ನೂ ಅಸಂಭವವನ್ನೂ ಪರಿಹರಿಸಿ ಉಪಸಂಹಾರ ಮಾಡುತ್ತಾರೆ.

ಮೂ || ಜನ್ಮಾದ್ಯಸ್ಯೇತಿ ತೇನೈತದ್ವಿಷ್ಣೋರೇವ ಸ್ವಲಕ್ಷಣಂ |
ಅಸ್ಯೋದ್ಭವಾದಿ ಹೇತುತ್ವಂ ಸಾಕ್ಷಾದೇವ ಸ್ವಲಕ್ಷಣಂ || ೯೭ ||

ಅ || ತೇನ=ಪೂರ್ವೋಕ್ತಪ್ರಕಾರದಿಂದ, ಜನ್ಮಾದ್ಯಸ್ಯೇತಿ='ಜನ್ಮಾದ್ಯಸ್ಯಯತಃ' ಎನ್ನುವ ಸೂತ್ರದಿಂದ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವವು, ವಿಷ್ಣೋರೇವ=ವಿಷ್ಣುವಿಗೇನೇ (ಕೂಡುತ್ತದೆ. ಇತರರಿಗೆ ಕೂಡುವುದಿಲ್ಲ. ಆದಪ್ರಯುಕ್ತ ಅಸಂಭವಾದಿಗಳು ಇಲ್ಲದಿರುವುದರಿಂದ ಈ ಲಕ್ಷಣವು ಶ್ರೀ ಹರಿಗೇನೇ ಯುಕ್ತವು) ಏತತ್ ಸ್ವಲಕ್ಷಣಮೇವ=ಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವ ರೂಪವಾದ ಈ ಲಕ್ಷಣವು ಸ್ವರೂಪಾಂತರ್ಗತಲಕ್ಷಣವೇ. (ಮಾಯಾವಾದಿಗಳು ಹೇಳುವ ಪ್ರಕಾರ ತಟಸ್ಥಲಕ್ಷಣವಲ್ಲ.) (ಏಕೆಂದರೆ) ಅಸ್ಯ=ಈ ಎಲ್ಲಾ ಜಗತ್ತಿನ, ಉದ್ಭವಾದಿಹೇತುತ್ವಂ= ಉತ್ಪತ್ತಿಯೇ ಮೊದಲಾದವುಗಳ ಕಾರಣತ್ವವನ್ನು, ಸ್ವಲಕ್ಷಣಮೇವ=ಬ್ರಹ್ಮನಿಗೆ ಸ್ವಲಕ್ಷಣ ವನ್ನಾಗಿಯೇ, ಸಾಕ್ಷಾದೇವ=ಸ್ಪಷ್ಟವಾಗಿಯೇ (ಸೂತ್ರಕಾರರು ಭಾಗವತದಲ್ಲಿ ಹೇಳಿರುವರು.)

ತಾ || (1) ಇಷ್ಟರವರೆಗೆ ಹೇಳಿದಪ್ರಕಾರ ತಮ್ಮ ಮತರೀತ್ಯಾ ಸೂತ್ರವನ್ನು ವ್ಯಾಖ್ಯಾನ ಮಾಡಿ ಅದರ ಪರಿಶುದ್ಧಿಗಾಗಿ ಅಂದರೆ, ಆ ವ್ಯಾಖ್ಯಾನವನ್ನು ದೃಢೀಕರಿಸುವುದಕ್ಕಾಗಿ ಮಾಯಾ ವಾದಿಗಳ ಮತದಲ್ಲಿ ಲಕ್ಷಣ ಸೂತ್ರದ ಆರಂಭವೇ ಕೂಡುವುದಿಲ್ಲವೆಂದು ಹೇಳುವರು. ಏಕೆಂದರೆ ಮಾಯಾವಾದಿಗಳು ಜಗಜ್ಜನ್ಮಾದಿಕಾರಣತ್ವವು ಲಕ್ಷ್ಯನಾದ ಬ್ರಹ್ಮನಿಗೆ ಸ್ವರೂಪಾಂತರ್ಗತವಾದ

ಲಕ್ಷಣವಲ್ಲ. ಮತ್ತೆ ಅದು ತಟಸ್ಥ (ಬ್ರಹ್ಮನಲ್ಲಿ ಇರತಕ್ಕದ್ದಲ್ಲ. ಬ್ರಹ್ಮನಲ್ಲಿರುವ ಮಾಯೆಯಲ್ಲಿ ರತಕ್ಕದ್ದು.) ಲಕ್ಷಣವೇ. ಈ ವಿಷಯಲ್ಲಿ (೧) ಮಾಯಾವಿಶಿಷ್ಟನಾದ ಬ್ರಹ್ಮನೇ ಜಗತ್ಕಾರಣನೆಂದಾಗಲೀ (ಎರಡು ಹಗ್ಗಗಳನ್ನು ಕೂಡಿಸಿ ಮಾಡಿದ ಸ್ಥೂಲಹಗ್ಗದಲ್ಲಿ ೨ ಹಗ್ಗಗಳೂ ಸಮವಾಗಿಯೇ ಕಾರಣಗಳೋ, ಅಂದರೆ, ಒಂದು ಪ್ರಧಾನ, ಮತ್ತೊಂದು ಅಪ್ರಧಾನವೆನ್ನುವುದು ಇಲ್ಲವೋ, ಹಾಗೆಯೇ ಮಾಯಾ ಬ್ರಹ್ಮ ಇಬ್ಬರೂ ಸಮಪ್ರಾಧಾನ್ಯದಿಂದಲೇ ಕಾರಣರೆಂದಾಗಲೀ) (೨) ಮಾಯಾಖ್ಯ ಸಹಕಾರಿಯುಳ್ಳ ಬ್ರಹ್ಮನು ಜಗತ್ಕಾರಣನು ಅಂದರೆ, ಬ್ರಹ್ಮನು ಪ್ರಧಾನನು ಮಾಯೆಯು ಅಪ್ರಧಾನವು ಎಂದಾಗಲೀ) (೩) ಜಗತ್ತಿಗೆ ಮಾಯೆಯೇ ಕಾರಣವು. ಅಂತಹ ಮಾಯೆಗೆ ಬ್ರಹ್ಮನು ಆಶ್ರಯನಾದುದರಿಂದ ಜಗತ್ಕಾರಣನೆನ್ನಿಸುತ್ತಾನೆ ಎಂದಾಗಲೀ ಹೇಳಬೇಕು. ಹೀಗೆ ಮೂರು ಪ್ರಕಾರವು ಕೂಡುತ್ತದೆ. ಹೇಗೆ ಇಟ್ಟುಕೊಂಡರೂ ಜಗತ್ಕಾರಣತ್ವವು ಬಾಹ್ಯಲಕ್ಷಣವೇ. ಸಾಕ್ಷಾತ್ ಸ್ವರೂಪಾಂತರ್ಗತವಾದ ಲಕ್ಷಣವಲ್ಲ, ಎಂದು ಹೇಳುವರು. ಇದು ಸರ್ವಥಾ ಅನುಪಪನ್ನವೆಂಬುವ ಅಭಿಪ್ರಾಯದಿಂದ 'ಸ್ವಲಕ್ಷಣಂ' ಎಂದು ಆಚಾರ್ಯರು ಹೇಳಿರುವರು. ಸ್ವರೂಪಾಂತರ್ಗತವಾದುದೇ ಲಕ್ಷಣವು ಮಾಯಾವಾದಿಗಳು ಹೇಳುವಪ್ರಕಾರ ತಟಸ್ಥಲಕ್ಷಣವಲ್ಲ. (2) ಏಕೆಂದರೆ— " **ಏಕಂ ಪರಂಜ್ಯೋತಿರನನ್ಯಮದ್ವಯಂ ಸ್ವಸಂಸ್ಥಯಾ ನಿತ್ಯನಿರಸ್ತಕಲ್ಮಷಂ । ಬ್ರಹ್ಮಾಖ್ಯಮಸ್ಯೋದ್ಭವನಾದಿ ಹೇತುಭಿಃ ಸ್ವಲಕ್ಷಣೈರ್ಲಕ್ಷಿತಭಾವನಿರ್ವೃತಿಂ** " ॥ (ಭಾ. ಸ್ಕಂಧ ೧೦ ಅಧ್ಯಾ. ೭೦ ಶ್ಲೋ. ೫.) ಮುಖ್ಯವಾದದ್ದು, ಅಥವಾ ಸ್ವರೂಪಭೇದ ಶೂನ್ಯವಾದುದು, ಸೂರ್ಯಮೊದಲಾದ ಜ್ಯೋತಿಸ್ಸುಗಳಿಂದ ವಿಲಕ್ಷಣವಾದವು, ಅನ್ಯಾಧೀನಸ್ವಭಾವರಹಿತವಾದುದು, ಅಸದೃಶವಾದುದು, ತನ್ನ ಮಹಿಮೆಯಿಂದ ನಿತ್ಯದಲ್ಲಿಯೂ ದೋಷಲೇಶರಹಿತವಾದುದು, ಸ್ವರೂಪಭೂತ ವ್ಯಾವರ್ತಕ ಧರ್ಮಗಳಿಂದ ಚೇತನಾಚೇತನಾತ್ಮಕ ಸರ್ವ ಪ್ರಪಂಚದ ಉತ್ಪತ್ತ್ಯಾದಿಗಳಿಗೆ ಕಾರಣಗಳಾದ ಸೃಷ್ಟ್ಯಾದಿ ಹೇತುಗಳಿಂದ ಲಕ್ಷಿತವಾದ ಸ್ವರೂಪಭೂತಾನಂದವುಳ್ಳದ್ದು, ಇಂತಹ ಬ್ರಹ್ಮಾಖ್ಯವಾದ ತನ್ನ ಸ್ವರೂಪವನ್ನೇ ಶ್ರೀಕೃಷ್ಣನು ಧ್ಯಾನಿಸಿದನೆಂದು ಭಾಗವತದಲ್ಲಿ ಹೇಳಿರುವರು. ತಥಾಚ ಪರರು ಸೂತ್ರಕಾರರ ಅಭಿಪ್ರಾಯವನ್ನು ತಿಳಿಯದೇನೇ ತಟಸ್ಥಲಕ್ಷಣವೆಂದು ವ್ಯಾಖ್ಯಾನಮಾಡಿರುವರು ॥ ೯೭ ॥

ಹಾಗಾದರೆ ಸೂತ್ರಕಾರರು ಸ್ವಲಕ್ಷಣವೆಂದು ಹೇಳಲೇ ಇಲ್ಲ. ಈ ಭಾಗವತವಾಕ್ಯವು ಪರರ ಪ್ರತೀತಿಯನ್ನನುವಾದಮಾಡಿದ್ದು. " **ಬ್ರಾಹ್ಮೇ ಮುಹೂರ್ತ ಉತ್ಥಾಯ ವಾರ್ಯುಪಸ್ಪೃಶ್ಯ ಮಾಧವಃ । ದಧ್ಯೌ ಪ್ರಸನ್ನಕರಣ ಆತ್ಮಾನಂ ತಮಸಃ ಪರಂ** " ॥ (ಭಾ. ಸ್ಕಂಧ ೧೦ ಅಧ್ಯಾ. ೭೦. ಶ್ಲೋ. ೪) ನಿತ್ಯದಲ್ಲಿಯೂ ಶ್ರೀ ಕೃಷ್ಣನು ಬ್ರಾಹ್ಮಮುಹೂರ್ತದಲ್ಲಿ ಎದ್ದು ಮುಖಪ್ರಕ್ಷಾಳನಾದಿಗಳನ್ನು ಮಾಡಿ ಪ್ರಸನ್ನವಾದ ಅಂತಃಕರಣವುಳ್ಳ ತನ್ನ ಸ್ವರೂಪವನ್ನೇ ಧ್ಯಾನಿಸಿದನು. ಹೀಗೆ ಪೂರ್ವ ವಾಕ್ಯದಲ್ಲಿ ಕೃಷ್ಣನು ಮಾಡಿದ ಧ್ಯಾನವು ಪ್ರಕೃತವಾಗಿದೆ ಎಂದರೆ—

ಮೂ ॥ **ಕೃಷ್ಣಧ್ಯಾನಚ್ಛಲೇನೈವ ಸ್ವಯಂ ಭಾಗವತೇಽಬ್ರವೀತ್** ॥ ೯೮ ॥
**ಅತೋ ಜೀವೈಕ್ಯಮಪಿ ಸ ನಿರಾಚಕ್ರೇ ಜಗದ್ಗುರುಃ ।**
**ನ ಹಿ ಜನ್ಮಾದಿಹೇತುತ್ವಂ ಜೀವಸ್ಯ ಜಗತೋ ಭವೇತ್** ॥
**ಹಿತಾಕ್ರಿಯಾದಿದೋಷಂ ಚ ವಕ್ಷ್ಯತ್ಯೇವ ಸ್ವಯಂ ಪ್ರಭುಃ** ॥ ೯೯ ॥

ಅ ॥ ಕೃಷ್ಣಧ್ಯಾನಚ್ಛಲೇನ=ಕೃಷ್ಣನು ಧ್ಯಾನಿಸಿದ್ದನ್ನು ಅನುವಾದಮಾಡಿದ್ದೆಂಬ ನೆವನದಿಂದ, ಸ್ವಯಮೇವ=ತಾನೇ, (ವೇದವ್ಯಾಸರೇವೇ) ಭಾಗವತೇ=ಭಾಗವತದಲ್ಲಿ, ಅಬ್ರವೀತ್=

ಹೇಳಿದರು. ಅತಃ=(ಯಾವಕಾರಣದಿಂದ ಸೂತ್ರಕಾರರು ಜಗಜ್ಜನ್ಮಾದಿ ಕರ್ತೃತ್ವವನ್ನು ಬ್ರಹ್ಮನಿಗೆ ಲಕ್ಷಣವನ್ನಾಗಿ ಹೇಳಿರುವರೋ) ಆದಪ್ರಯುಕ್ತವೇ, ಜೀವೈಕ್ಯಮಪಿ=ಜೀವ ಬ್ರಹ್ಮೈಕ್ಯವನ್ನೂ, ಜಗದ್ಗುರುಃ=ಜಗತ್ತಿಗೆ ಹಿತೋಪದೇಷ್ಟೃಗಳಾದ, ಸಃ=ಆ ವೇದವ್ಯಾಸರು, ನಿರಾಚಕ್ರೇ = ನಿರಾಕರಿಸಿದರು. ಜಗತಃ ಜನ್ಮಾದಿಹೇತುತ್ವಂ = ಜಗಜ್ಜನ್ಮಾದಿಕರ್ತೃತ್ವವು, ಜೀವಸ್ಯ=ಜೀವನಿಗೆ, ನ ಹಿ ಭವೇತ್=(ಸರ್ವಜ್ಞತ್ವ ಸರ್ವಶಕ್ತ್ಯಾದಿಗಳು ಇಲ್ಲದಿರುವುದರಿಂದ) ಕೂಡಲಾರದು. ಹಿತಾಕ್ರಿಯಾದಿದೋಷಂ ಚ = (ಜೀವನಿಗೆ ಸ್ವತಂತ್ರ ಕರ್ತೃತ್ವವಿದ್ದರೆ, "ಇತರವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ" ಎಂದು) ತನ್ನ ಹಿತವನ್ನು ಮಾಡದಿರುವಿಕೆ, ಅಹಿತವನ್ನು ಮಾಡೋಣ ಎನ್ನುವುದು ಕೂಡಲಾರದು ಇದುಮೊದಲಾದ ದೋಷಗಳನ್ನು, ಪ್ರಭುಃ=ಸರ್ವ ಸಮರ್ಥರಾದ ವೇದವ್ಯಾಸರು, ಸ್ವಯಮೇವ=ತಾನೇ, ವಕ್ಷ್ಯತಿ= (ಸೂತ್ರದಲ್ಲಿ) ಹೇಳುವರು.

ತಾ ॥ ನ್ಯಾಯಸುಧಾ— (1) ಭಾಗವತದಲ್ಲಿ ಕೃಷ್ಣನು ಮಾಡಿದ ಧ್ಯಾನವನ್ನು ವೇದವ್ಯಾಸರು ಅನುವಾದಮಾಡಿದ್ದು ಎರಡುಪ್ರಕಾರ ಕೂಡಬಹುದು. (೧) ಧ್ಯಾನವನ್ನು ನಿರಾಕರಿಸುವುದಕ್ಕಾಗಿ ಆಗಲೀ (೨) ಶಿಷ್ಟಾಗ್ರೇಸರನಾದ ಕೃಷ್ಣನು ಧ್ಯಾನವನ್ನು ಮಾಡಿರುವುದರಿಂದ ಇತರರೂ ಮಾಡಬೇಕೆಂದು ವಿಧಿಸುವುದಕ್ಕಾಗಿ ಆಗಲೀ ಹೇಳಬೇಕು. (೧) ಮೇಲೆ ನಿರಾಕರಿಸದಿರುವುದರಿಂದ ಧ್ಯಾನವನ್ನು ನಿರಾಕರಿಸುವುದಕ್ಕಾಗಿ ಅನುವಾದಮಾಡಿದ್ದೆಂದು ಹೇಳಕೂಡದು. ಸಾಕ್ಷಾತ್ ಭಗವಂತನ ಅವತಾರನಾದ ಕೃಷ್ಣನ ಜ್ಞಾನವೂ ನಿರಾಕರಣಾರ್ಹವಾದರೆ ವೇದವ್ಯಾಸರ ಜ್ಞಾನದಲ್ಲಿಯೂ ವಿಶ್ವಾಸವು ಹೇಗೆ ಹುಟ್ಟುವುದು? ಆದಕಾರಣ ಎರಡನೇ ಪಕ್ಷವನ್ನೇ ಒಡಂಬಡಬೇಕು. ತಥಾಚ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಸ್ವರೂಪಾಂತರ್ಗತ ಲಕ್ಷಣವೆಂದೇ ಸೂತ್ರಕಾರರ ಅಭಿಪ್ರಾಯವೆಂದಾಯಿತು. (2) ಮತ್ತು ವೇದವ್ಯಾಸರ ಸ್ಪಷ್ಟವಾದ ಬೇರೆ ವಾಕ್ಯಗಳ ಸಾಮರ್ಥ್ಯದಿಂದಲೂ ಈ ಸೂತ್ರವು ಸ್ವರೂಪಲಕ್ಷಣಪರವೆಂದೇ ಸಿದ್ಧವಾಗುವುದು. (3) ಯಾವಕಾರಣದಿಂದ ಈ ಸೂತ್ರದಲ್ಲಿ ಜಗಜ್ಜನ್ಮಾದಿಕಾರಣತ್ವವು ಸ್ವಲಕ್ಷಣವೆಂದೇ ಹೇಳಲ್ಪಡುತ್ತದೋ, ಆದಕಾರಣ ಪರರ ಮತದಲ್ಲಿ ಈ ಸೂತ್ರದ ಆರಂಭವೇ ಕೂಡುವುದಿಲ್ಲ ಎಂದು 'ಅತೋ ಜೀವೈಕ್ಯಂ' ಎನ್ನುವುದರಿಂದ ಹೇಳಿದರು. (4) ಲಕ್ಷ್ಯವಸ್ತುವಿಗೆ ಸಜಾತೀಯ, ವಿಜಾತೀಯ ಪದಾರ್ಥಗಳಿಂದ ಭೇದವನ್ನು ತಿಳಿಸುವುದಕ್ಕಾಗಿಯೇ ಲಕ್ಷಣವನ್ನು ಹೇಳುವುದು. ತಥಾಚ ಸೂತ್ರಕಾರರು ಈ ಲಕ್ಷಣದಿಂದ ಬ್ರಹ್ಮನನ್ನು ಸಜಾತೀಯರಾದ ಜೀವರಿಂದಲೂ, ವಿಜಾತೀಯವಾದ ಜಡಪದಾರ್ಥದಿಂದಲೂ ಭಿನ್ನನೆಂದೇ ತಿಳಿಸಿದರು. ಜೀವೈಕ್ಯವನ್ನು ನಿರಾಕರಿಸುವ ಸೂತ್ರದ ಆರಂಭವು ಜೀವೈಕ್ಯವಾದಿಗಳ ಮತದಲ್ಲಿ ಸರ್ವಥಾ ಕೂಡಲಾರದು. (5) ಜೀವರಿಂದ ಬ್ರಹ್ಮನಿಗೆ ಭೇದವನ್ನು ತಿಳಿಸುವುದಕ್ಕಾಗಿ ಲಕ್ಷಣವನ್ನು ಹೇಳಿದ್ದರೆ ಲಕ್ಷಣಸೂತ್ರಾರಂಭವು ಐಕ್ಯವಾದಿಗಳ ಮತದಲ್ಲಿ ಅನುಪಪನ್ನವಾಗುತ್ತಿತ್ತು. ಜಡಗಳಿಂದ ಮಾತ್ರ ಭೇದವನ್ನು ತಿಳಿಸುವುದಕ್ಕಾಗಿ ಲಕ್ಷಣಸೂತ್ರವು ಹೊರಟದೆ ಎಂದು ವ್ಯಾಖ್ಯಾನಮಾಡಿದರೆ ಜೀವೈಕ್ಯವಾದಿಗಳ ಮತದಲ್ಲಿ ಲಕ್ಷಣಸೂತ್ರಾರಂಭವು ಅನುಪಪನ್ನವಾಗಲಾರದು ಎಂದರೆ 'ನ ಹಿ ಜನ್ಮಾದಿಹೇತುತ್ವಂ' ಎಂದು. ಅಂದರೆ, ಎಲ್ಲೆಲ್ಲಿ ಲಕ್ಷಣವಿರುವುದಿಲ್ಲವೋ ಅವೆಲ್ಲವೂ ಆ ಲಕ್ಷ್ಯದಿಂದ ವ್ಯಾವರ್ತ್ಯವೆಂದು ಒಪ್ಪಬೇಕು. ಅಂದರೆ, ಆ ಲಕ್ಷಣದಿಂದ ತಿಳಿಸುವ ಭೇದಕ್ಕೆ ಪ್ರತಿಯೋಗಿಯೆಂದು ಒಪ್ಪಬೇಕು. ಲಕ್ಷ್ಯವೇ ಎಂದು ಇಟ್ಟುಕೊಂಡರೆ ಆ ಲಕ್ಷಣಕ್ಕೆ ಅವ್ಯಾಪ್ತಿಯು ಪ್ರಸಕ್ತವಾಗುವುದು. ಸರ್ವಥಾ ಈ ಲಕ್ಷಣವು ಜೀವನಲ್ಲಿರುವುದಿಲ್ಲ. (6) ಮತ್ತು ಈ ಲಕ್ಷಣದಿಂದ ಜೀವನನ್ನು ವ್ಯಾವರ್ತಿಸದಿದ್ದರೆ ಜೀವನೂ ಲಕ್ಷ್ಯನಾಗಬೇಕಾಗುವನು. ಹಾಗಿದ್ದರೆ ಲಕ್ಷಣಕ್ಕೆ

ಜೀವನಲ್ಲಿ ಅತಿವ್ಯಾಪ್ತಿಯನ್ನು ಆಶಂಕಿಸಿಕೊಂಡು "ಇತರ ವ್ಯಪದೇಶಾದ್ಧಿತಾಕರಣಾದಿದೋಷ ಪ್ರಸಕ್ತಿಃ" ಎಂದು ಸೂತ್ರಕಾರರು ಲಕ್ಷಣವನ್ನು ನಿರಾಕರಿಸಿದ್ದು ಅಸಂಗತವಾಗಬೇಕಾಗುವುದು. ಲಕ್ಷಣಕ್ಕೆ ಲಕ್ಷ್ಯದಲ್ಲಿಯೇ ಅತಿವ್ಯಾಪ್ತಿಯನ್ನು ಯಾರೂ ಶಂಕಿಸಲಾರರು. ಕಥಂಚಿತ್ ಶಂಕಿಸಿದರೂ ಅದಕ್ಕೆ ಲಕ್ಷ್ಯತ್ವವನ್ನು ಅಂಗೀಕರಿಸುವುದನ್ನು ಬಿಟ್ಟು ಅಲ್ಲಿ ಲಕ್ಷಣವನ್ನು ನಿರಾಕರಿಸಲಾರದು ॥ ೯೮ ॥ ೯೯ ॥

ಸ. ರ. ವಿ — ಮತ್ತು ಮಾಯಾವಾದಿಗಳು ಬ್ರಹ್ಮನು ನಿರ್ವಿಶೇಷನೆಂದಂಗೀಕರಿಸಿರುವುದರಿಂದ ಲಕ್ಷಣಸೂತ್ರವು ಅವರ ಮತದಲ್ಲಿ ಕೂಡಲಾರದೆಂದು ಅಭಿಪ್ರಾಯದಿಂದ ಹೇಳುತ್ತಾರೆ—

**ಮೂ ॥ ನಿರ್ಗುಣತ್ವಂ ಚ ತೇನೈವ ನಿಷಿದ್ಧಂ ಪ್ರಭುಣಾ ಸ್ವಯಂ ॥ ೧೦೦ ॥**

ಅ ॥ ತೇನೈವ ಸ್ವಯಂ ಪ್ರಭುಣಾ=ಜಗಜ್ಜನ್ಮಾದಿಕರ್ತೃತ್ವವನ್ನು ಹೇಳತಕ್ಕ ಸ್ವಯಂ ಸರ್ವಸಮರ್ಥರಾದ ಸೂತ್ರಕಾರರಿಂದಲೇ (ಅರ್ಥಾತ್ ಪರಬ್ರಹ್ಮನಿಗೆ ಸರ್ವಜ್ಞತ್ವ ಸರ್ವೇಶ್ವರತ್ವಾದಿಗಳೂ ಅಂಗೀಕೃತಪ್ರಾಯವಾಗಿರುವುದರಿಂದ) ನಿರ್ಗುಣತ್ವಂ ಚ=ಗುಣರಾಹಿತ್ಯವು, ಸ್ವಯಂ ನಿಷಿದ್ಧಂ=ಸ್ಪಷ್ಟವಾಗಿ ನಿಷಿದ್ಧವಾಗಿದೆ.

ನ್ಯಾಯಸುಧಾ— (1) ಲಕ್ಷಣವಾಕ್ಯವು ಸಾಕ್ಷಾತ್ ಲಕ್ಷ್ಯಕ್ಕೆ ಅಸಾಧಾರಣ ಧರ್ಮಸಂಬಂಧವನ್ನು ಪ್ರತಿಪಾದಿಸುತ್ತಾ ಅರ್ಥಾತ್ ಇತರ ವಸ್ತುಗಳಿಂದ ವ್ಯಾವೃತ್ತಿ (ಭೇದ) ಯನ್ನು ಪ್ರತಿಪಾದಿಸುತ್ತದೆ ಆದಕಾರಣ ಈ ಲಕ್ಷಣವಾಕ್ಯದಿಂದ ಬ್ರಹ್ಮನಿಗೆ ಜಗಜ್ಜನ್ಮಾದಿ ಕಾರಣತ್ವದಿಂದಲೂ ಅದರಿಂದ ವ್ಯಾಪ್ತಗಳಾದ ಸರ್ವಜ್ಞತ್ವಾದಿಗಳಿಂದಲೂ ಬ್ರಹ್ಮನಿಗೆ ಸಂಬಂಧವನು ಪ್ರತಿಪಾದಿಸಬೇಕು. ಅಂತೂ ಈ ಸೂತ್ರದಿಂದ ಬ್ರಹ್ಮನಿಗೆ ನಿರ್ವಿಶೇಷತ್ವವು ನಿರಾಕರಿಸಿದಂತೆಯೇ ಆಯಿತು. ನಿರ್ವಿಶೇಷತ್ವವಾದಿಗಳ ಮತದಲ್ಲಿ ನಿರ್ವಿಶೇಷತ್ವವನ್ನು ನಿಷೇಧಿಸತಕ್ಕ ಸೂತ್ರದ ಆರಂಭವು ಸರ್ವಥಾ ಕೂಡಲಾರದು. (2) ಈ ಸೂತ್ರದಿಂದ ಜಗಜ್ಜನ್ಮಾದಿಕಾರಣತ್ವವನ್ನು ಬ್ರಹ್ಮನಿಗೆ ಸ್ವಲಕ್ಷಣವೆಂದು ಹೇಳುವುದಾದರೆ ಜೀವಬ್ರಹ್ಮರಿಗೆ ಐಕ್ಯವನ್ನೂ,ಬ್ರಹ್ಮನಿಗೆ ನಿರ್ಗುಣತ್ವವನ್ನೂ ಅಂಗೀಕರಿಸುವ ಮಾಯಾವಾದಿಗಳಿಗೆ ಲಕ್ಷಣಸೂತ್ರಾರಂಭವು ಅನುಪಪನ್ನವಾಗಬಹುದಿತ್ತು ಹಾಗಲ್ಲ. ಮತ್ತೆ ಈ ಸೂತ್ರದಲ್ಲಿ ಹೇಳಿದ ಲಕ್ಷಣವು ತಟಸ್ಥಲಕ್ಷಣವೇ. ಅಂದರೆ, ಬ್ರಹ್ಮಾಶ್ರಿತವಾದ ಮಾಯೆಯಲ್ಲಿಯೇ ಇರತಕ್ಕದ್ದು. ಬ್ರಹ್ಮನಲ್ಲಿರತಕ್ಕುದಲ್ಲ. ಅಂತಹ ತಟಸ್ಥ ಲಕ್ಷಣವು ಜೀವಬ್ರಹ್ಮರ ಐಕ್ಯಕ್ಕೂ ಬ್ರಹ್ಮನ ನಿರ್ಗುಣತ್ವಕ್ಕೂ ಬಾಧಕವಾಗುವುದಿಲ್ಲ. (3) ಹಾಗಾದರೆ, ಸ್ವಲಕ್ಷಣವೆನ್ನುವಲ್ಲಿ ಪ್ರಮಾಣವನ್ನು ಹೇಳಿಯಾಗಿದೆ. ಎಂದರೆ 'ಸ್ವಸ್ಯ ಲಕ್ಷಣಾನಿ' ತನ್ನ ಲಕ್ಷಣಗಳು, ಅಥವಾ 'ಸು ಅ (ನ)ಲಕ್ಷಣಾನಿ' ಚೆನ್ನಾಗಿ (ಸ್ವರೂಪಾಂತರ್ಗತಿಯಿಂದ) ಲಕ್ಷಣಗಳಲ್ಲ. ಹೀಗೆ ಸ್ವಲಕ್ಷಣವೆನ್ನುವ ಪದಕ್ಕೆ ಅರ್ಥವು ಕೂಡಬಹುದು. ಹಾಗಾದರೆ ಯತೋಽಸ್ಯ ಜನ್ಮಾದಿ ಸಾ ಮಾಯಾ ತದಾಶ್ರಯೋ ಬ್ರಹ್ಮ=ಯಾವುದರಿಂದ ಈ ಜಗತ್ತಿಗೆ ಜನ್ಮಾದಿಗಳು ಆಗುತ್ತವೋ ಅದು ಮಾಯೆಯು. ಆ ಮಾಯೆಗೆ ಅಶ್ರಯನು ಬ್ರಹ್ಮನು. ಹೀಗೆ ನಿರ್ದೇಶವಿರಬೇಕಿತ್ತು. 'ಜನ್ಮಾದ್ಯಸ್ಯ ಯತಃ ತದ್ಬ್ರಹ್ಮ' ಎಂದು ನಿರ್ದೇಶವು ಕೂಡದೆ ಹೋಗುವುದು ಎಂದು ದ್ವೈತಿಗಳು ಹೇಳಿದರೆ— 'ಗಂಗಾಯಾಂ ಘೋಷಃ' ಎನ್ನುವಂತೆ ಲಾಕ್ಷಣಿಕ ಪ್ರಯೋಗವು ಕೂಡುತ್ತದೆ. ಅಂದರೆ, ಹೇಗೆ ಗಂಗಾಪದವು 'ಶಬರರ ಮನೆಯು ಗಂಗೆಯಲ್ಲಿರಲಾರದಾದುದರಿಂದ' ಲಕ್ಷಣಯಾ ತೀರರೂಪವಾದ ಅರ್ಥವನ್ನ ತಿಳಿಸಿಕೊಡುತ್ತದೋ, ಹಾಗೆಯೇ 'ತದ್ಬ್ರಹ್ಮ' ಎನ್ನುವಲ್ಲಿಯೂ 'ತತ್' ಎನ್ನುವ ಪದವು ಲಕ್ಷಣಯಾ ಮಾಯಾಶ್ರಯನಾದ ಬ್ರಹ್ಮನನ್ನು ತಿಳಿಸಿಕೊಡುತ್ತದೆ. ಅಂತೂ ಬ್ರಹ್ಮನು ನಿರ್ವಿಶೇಷನೇ.

(4) ಮತ್ತು ಸತ್ಯವಾದ ಪ್ರಪಂಚಕ್ಕೆ ಕಾರಣಭೂತವಾದ ಸತ್ಯವಾದ ಮಾಯೆಗೆ ಆಶ್ರಯನು ಬ್ರಹ್ಮನು ಎಂದು ಸೂತ್ರಾರ್ಥವಾಗಿದ್ದರೆ ಬ್ರಹ್ಮನು ಸವಿಶೇಷನೆಂದಾಗಬಹುದಿತ್ತು. ಹಾಗಲ್ಲ. ಮತ್ತೆ ಅನ್ಯಥಾ ಪ್ರತೀಯಮಾನವಾದ ಸಮಸ್ತ ಪ್ರಪಂಚಕ್ಕೆ ಯಾವನು ಅಧಿಷ್ಠಾನನೋ ಅವನು ಬ್ರಹ್ಮನು. ಅಂತೂ ಪ್ರಪಂಚಾರೋಪಾಧಿಷ್ಠಾನತ್ವವೇ ಈ ಸೂತ್ರದ ಅರ್ಥವು. ಜಗಜ್ಜನ್ಮಾದಿ ಕಾರಣತ್ವವಾಗಲೀ ಸತ್ಯಭೂತ ಪ್ರಪಂಚಕಾರಣೀಭೂತವಾದ ಸತ್ಯಭೂತ ಮಾಯಾಶ್ರಯತ್ವ ವಾಗಲೀ ಈ ಸೂತ್ರದ ಅರ್ಥವಲ್ಲ. ಆವಕಾರಣ ಜೀವಬ್ರಹ್ಮರ ಏಕತ್ವವಾಗಲೀ ಬ್ರಹ್ಮನಿಗೆ ನಿರ್ಗುಣತ್ವವಾಗಲೀ ವಿರುದ್ಧವಾಗುವುದಿಲ್ಲ, ಎಂದು ಅದ್ವೈತಿಗಳು ಹೇಳಿದರೆ— ಹೀಗೆ ಸಮಾಧಾನವನ್ನಿಟ್ಟುಕೊಳ್ಳತಕ್ಕದ್ದು. ಪ್ರಮಾಣವೇ ಇಲ್ಲದಿರುವುದರಿಂದ ಪ್ರಪಂಚವು ಬ್ರಹ್ಮನಲ್ಲಿ ಆರೋಪಿತವೆಂದು ಹೇಳಕೂಡದು. ಅದನ್ನು ಪ್ರಕೃತ್ಯಧಿಕರಣದಲ್ಲಿ ಸ್ಪಷ್ಟವಾಗಿ ನಿರಾಕರಿಸುವೆವು. ಮತ್ತು ಈ ಸೂತ್ರದಲ್ಲಿ ಬ್ರಹ್ಮನು ಲಕ್ಷಣಾವೃತ್ತಿಯಿಂದ ಜಗಜ್ಜನ್ಮಾದಿಕಾರಣತ್ವರೂಪ ತಟಸ್ಥ ಲಕ್ಷಣವುಳ್ಳವನೆಂದು ಪ್ರತಿಪಾದಿಸಲ್ಪಡುತ್ತಾನೆಂದು ಏಕೆ ಅಂಗೀಕರಿಸಬೇಕು. ಮುಖ್ಯಾರ್ಥವು ಕೂಡದಿದ್ದರೆ ಲಕ್ಷಣಾವನ್ನು ಆಶ್ರಯಿಸಬಹುದಿತ್ತು. ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನಲ್ಲಿಯೇ ಇದೆ ಎನ್ನುವಲ್ಲಿ ಪ್ರತ್ಯಕ್ಷವು ಬಾಧಕವಾಗಲಾರದು. ಏಕೆಂದರೆ, ಪ್ರತ್ಯಕ್ಷವು ಅದನ್ನು ವಿಷಯಿ ಕರಿಸುವುದಿಲ್ಲ. ಶ್ರುತಿಬಾಧಿತವಾಗಿರುವುದರಿಂದ ಅನುಮಾನವೂ ಕೂಡಲಾರದು. 'ನಿಷ್ಕ್ರಿಯಂ' ಇದುಮೊದಲಾದ ಆಗಮವು ಅಕ್ಲಿಷ್ಟಕಾರಿತ್ವಾದ್ಯರ್ಥಾಂತರದಲ್ಲಿ ಸಾವಕಾಶವಾಗಿರುವುದರಿಂದ ಜ್ಜನ್ಮಾದಿ ಕಾರಣತ್ವದಲ್ಲಿ ಬಾಧಕವಾಗಲಾರದು ॥ ೧೦೦ ॥

ಸ. ರ. ವಿ— ಹಾಗಾದರೆ 'ಅಯೋ ದಹತಿ' ಕಬ್ಬಿಣವು ಸುಡುತ್ತದೆ ಎನ್ನುವಲ್ಲಿ ಕಬ್ಬಿಣವು ವಸ್ತುತಃ ಸುಡದಿದ್ದರೂ ಅಗ್ನಿಯು ಸುಡತಕ್ಕದಾದುದರಿಂದ ಅಗ್ನಿಯ ದಾಹಕತ್ವವು ಕಬ್ಬಿಣದಲ್ಲಿ ಲಕ್ಷಣಯಾ ಹೇಳಲ್ಪಡುತ್ತದೋ, ಹೀಗೆಯೇ ಬ್ರಹ್ಮನಲ್ಲಿ ವಸ್ತುತಃ ಕರ್ತೃತ್ವವಿಲ್ಲದಿದ್ದರೂ ಮಾಯೆಯಲ್ಲಿರುವ ಕರ್ತೃತ್ವವು ಲಕ್ಷಣಯಾ (ಅಮುಖ್ಯವಾಗಿ) ಮಾಯೆಗೆ ಆಶ್ರಯನಾದ ಬ್ರಹ್ಮನಲ್ಲಿ ಹೇಳಲ್ಪಡುತ್ತದೆ. (ಅಂದರೆ ಔಪಚಾರಿಕವು) ಎಂದು ಏಕೆ ಆಗಲಾರದೆಂದರೆ—

ನ್ಯಾಯಸುಧಾ— ಹಾಗಾದರೆ, ಅರ್ಥಾಪತ್ತಿಯಿಂದ ಲಕ್ಷಣವು ತಟಸ್ಥವೆನ್ನುವುದು ನಿಶ್ಚಿತ ವಾಗುತ್ತದೆ. ಜೀವಬ್ರಹ್ಮರಿಗೆ ಐಕ್ಯವನ್ನು ಅವಶ್ಯವಾಗಿ ಒಡಂಬಡಬೇಕು. ಜಗಜ್ಜನ್ಮಾದಿಕಾರಣ ತ್ವವು ಬ್ರಹ್ಮನಿಗೆ ಸ್ವರೂಪಲಕ್ಷಣವೆಂದಾದರೆ ಐಕ್ಯವು ಕೂಡಲಾರದು. ಆದಪ್ರಯುಕ್ತ ಐಕ್ಯಾನ್ಯ ಥಾನುಪಪತ್ತಿಯಿಂದ ಈ ಲಕ್ಷಣವು ಮಾಯೆಯಲ್ಲಿಯೇ ಇರತಕ್ಕದ್ದು. ಜನ್ಮಾದಿಗಳು ಈ ಜಗತ್ತಿಗೆ ಯಾರಿಂದ ಆಗುತ್ತವೋ ಅವನು ಬ್ರಹ್ಮನು ಎಂದು ಜಗಜ್ಜನ್ಮಾದಿ ಕಾರಣತ್ವವುಳ್ಳ ಮಾಯೆಗೆ ಬ್ರಹ್ಮನು ಆಶ್ರಯನಾಗಿರುವುದರಿಂದ ಲಕ್ಷಣಯಾ ಹೇಳಲ್ಪಡುತ್ತದೆ, ಎಂದು ಕಲ್ಪಿಸಲ್ಪಡುತ್ತ ದೆಂದರೆ—

**ಸೂ ॥ ಭೇದೇನೈವ ತು ಮುಖ್ಯಾರ್ಥಸಂಭವೇ ಲಕ್ಷಣಾ ಕುತಃ ॥ ೧೦೧ ॥**

ಅ ॥ ಭೇದೇನೈವ ತು=ಭೇದದಿಂದಲೇ, (ಅಂದರೆ ಜೀವಬ್ರಹ್ಮರಿಗೆ ಐಕ್ಯವನ್ನು ರಕ್ಷಿಸು ವುದಕ್ಕಾಗಿ ಯಥಾಶ್ರುತವಾದ ಸೂತ್ರಾರ್ಥವನ್ನು ಬಿಟ್ಟು ಲಕ್ಷಣಾವೃತ್ತಿಯನ್ನ ಆಶ್ರಯಿಸುವುದ ಕ್ಕಿಂತ ಜೀವಬ್ರಹ್ಮರಿಗೆ ಸ್ವಾಭಾವಿಕವಾಗಿರತಕ್ಕ ಭೇದವನ್ನೇ ಅಂಗೀಕರಿಸಿ ಅದರಿಂದಲೇ) ಮುಖ್ಯಾರ್ಥಸಂಭವೇ=ಜಗಜ್ಜನ್ಮಾದಿಕರ್ತೃತ್ವವು ಬ್ರಹ್ಮನಲ್ಲಿ ಸ್ವರೂಪಲಕ್ಷಣವೇ, ತಟಸ್ಥಲಕ್ಷಣ ವಲ್ಲ. ಎನ್ನುವ ಮುಖ್ಯವಾದ ಅರ್ಥವು ಕೂಡುತ್ತಿರಲು ಲಕ್ಷಣಾ=ಅಮುಖ್ಯವೃತ್ತಿಯು, ಕುತಃ= ಏಕೆಆಶ್ರಯಿಸ ತಕ್ಕದು.

ತಾ || ಸ.ರ.ವಿ.–(1) ಸರ್ವಕರ್ತೃತ್ವವೊದಲಾದ ಬ್ರಹ್ಮಧರ್ಮಗಳೂ ಸ್ವಾಭಾವಿಕಗಳು. ಅದಕ್ಕೆ ವಿರುದ್ಧಗಳಾದ ಅಲ್ಪಜ್ಞತ್ವ ವೊದಲಾದ ಜೀವಧರ್ಮಗಳೂ ಸ್ವಾಭಾವಿಕಗಳೇ. ಹೀಗೆ ಅಂಗೀಕರಿಸಿದರೆ ವಿರುದ್ಧಧರ್ಮಾಕ್ರಾಂತರಾಗಿರುವುದರಿಂದ ಜೀವಬ್ರಹ್ಮರಿಗೆ ಅಭೇದವು ವ್ಯಾಹತ ವಾಗಬೇಕಾಗುವುದು. ಅದಕಾರಣ ಜೀವಬ್ರಹ್ಮರಿಗೆ ಐಕ್ಯವು ಸಿದ್ಧಿಸುವುದಕ್ಕಾಗಿ ಜಗತ್ಕರ್ತೃತ್ವವು ಬ್ರಹ್ಮನಿಗೆ ಮುಖ್ಯವಾದದ್ದು ಕೂಡುವುದಿಲ್ಲ, ಔಪಚಾರಿಕವೆಂದು ಮಾಯಾವಾದಿಗಳು ಕಲ್ಪಿಸಿರುವರು. ಹೀಗೆ ಮಾಯಾವಾದಿಗಳು ಹೇಳುವುದು ಸರ್ವಥಾ ಯುಕ್ತವಲ್ಲ. ಏಕೆಂದರೆ— ಜೀವೇಶರಿಗೆ ಭೇದವನ್ನು ಅಂಗೀಕರಿಸಿರುವುದರಿಂದ ಸ್ರಷ್ಟೃತ್ವ ವೊದಲಾದ ಭಗವದ್ಧರ್ಮಗಳು ಮುಖ್ಯಗಳೆಂದೇ ಕೂಡುವಾಗ ಔಪಚಾರಿಕಗಳೆಂದು ಕಲ್ಪಿಸಕೂಡದು. ಮುಖ್ಯಾರ್ಥವು ಕೂಡ ದಿದ್ದರಷ್ಟೆ ಲಕ್ಷಣಾವನ್ನ ಆಶ್ರಯಿಸಬೇಕು! (2) ಹಾಗಾದರೆ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂದು ಬ್ರಹ್ಮನಿಗೆ ನಿರ್ಗುಣತ್ವವು ಶ್ರುತವಾಗಿರುವುದರಿಂದ ಸರ್ವಕರ್ತೃತ್ವಶ್ರುತಿಗೆ ಮುಖ್ಯಾರ್ಥವು ಕೂಡುವುದಿಲ್ಲವೆಂದರೆ— ಸತ್ವ ವೊದಲಾದ ಪ್ರಾಕೃತಗುಣಗಳು ಇಲ್ಲದವನೆಂದೇ 'ನಿರ್ಗುಣಃ' ಎನ್ನುವುದಕ್ಕೆ ಅರ್ಥವು. ಯಾವ ಗುಣಗಳೂ ಇಲ್ಲವೆಂದು ನಿರ್ಗುಣ ಎನ್ನುವ ಪದಕ್ಕೆ ಅರ್ಥ ಹೇಳುವುದಾದರೆ 'ಸಾಕ್ಷೀ ಚೇತಾ' ಇದುವೊದಲಾದ ಪದಗಳಿಂದ ಹೇಳಲ್ಪಡತಕ್ಕ ಸಾಕ್ಷಿದ್ರಷ್ಟೃತ್ವವೊದಲಾದ ಧರ್ಮಗಳೂ ಕೂಡದೆಹೋಗಬೇಕಾಗುವವು. ಅದಕಾರಣ ಜಗತ್ಕರ್ತೃತ್ವಾದಿ ಪದಗಳ ಸಮುದಾಯವು ಬ್ರಹ್ಮನಲ್ಲಿ ಲಾಕ್ಷಣಿಕವಲ್ಲ.

ನ್ಯಾಯಸುಧಾ— (1) ಹಾಗಾದರೆ, ಅಭೇದವನ್ನು ಇಟ್ಟುಕೊಂಡು ಸೂತ್ರದಲ್ಲಿ ಲಕ್ಷಣಾವನ್ನು ಆಶ್ರಯಿಸುವುದೋ? ಭೇದವನ್ನು ಇಟ್ಟುಕೊಂಡು ಮುಖ್ಯವೃತ್ತಿಯನ್ನು ಆಶ್ರಯಿಸುವುದೋ? ಎಂದು ಸಂಶಯಬಂದರೆ, ಜೀವ-ಬ್ರಹ್ಮರ ಐಕ್ಯವು ಅಪ್ರಾಮಾಣಿಕವಾಗಿರುವುದರಿಂದ ಎರಡನೇ ಪಕ್ಷವೇ ಪ್ರಶಸ್ತವು. (2) 'ತತ್ತ್ವಮಸಿ' ಇತ್ಯಾದಿ ಶ್ರುತಿಸಿದ್ಧವಾಗಿರುವುದರಿಂದ ಜೀವ-ಬ್ರಹ್ಮೈಕ್ಯವು ಅಪ್ರಾಮಾಣಿಕವಾಗುವುದು. ಹೇಗೆಂದರೆ— ಯುಕ್ತಿಪರಾಹತವಾಗಿರುವುದರಿಂದ ಆ ಶ್ರುತಿಗೆ ಹಾಗೆ ಅರ್ಥವೇ ಅಲ್ಲ. ಯುಕ್ತಿಬಾಧವು ಹೇಗೆಂದರೆ— 'ತತ್ತ್ವಮಸಿ' ಎನ್ನುವಲ್ಲಿ, ತತ್ ಪದಕ್ಕೆ ಮುಖ್ಯಾರ್ಥವು ಸರ್ವರಿಗೂ ಸೃಷ್ಟಿಕರ್ತನೂ, ದೋಷಲೇಶರಹಿತನೂ, ಸರ್ವಗುಣಪರಿಪೂರ್ಣನೂ ಆದ ಪರಮಾತ್ಮನು. ತ್ವಂ ಪದಕ್ಕೆ ಮುಖ್ಯಾರ್ಥವು ಅಲ್ಪಶಕ್ತಿಯುಳ್ಳವನೂ, ಪರಾಧೀನನೂ, ದೋಷಿಯೂ ಆದ ಜೀವನು. ಇಂತಹ ಜೀವಪರಮಾತ್ಮರಿಗೆ ಈ ವಾಕ್ಯದಿಂದ ಐಕ್ಯವು ಹೇಳಲ್ಪಡುತ್ತದೋ? ಅಥವಾ ಸರ್ವಜ್ಞತ್ವ, ಅಲ್ಪಜ್ಞತ್ವವೊದಲಾದ ವಿರುದ್ಧಭಾಗಗಳನ್ನು ಬಿಟ್ಟು ಚೈತನ್ಯಗಳಿಗೆ ಮಾತ್ರ ಲಕ್ಷಣಾವೃತ್ತಿಯಿಂದ ಐಕ್ಯವು ಹೇಳಲ್ಪಡುತ್ತದೋ? ೧ನೇದ್ದು ಕೂಡಲಾರದು. ಪರಸ್ಪರ ವಿರೋಧವಿದ್ದುದರಿಂದ ಜರದ್ಗವಾದಿ ವಾಕ್ಯದಂತೆ ಆಭಾಸವಾಗಬೇಕಾಗುವುದು. ೨ ನೇದ್ದೂ ಕೂಡಲಾರದು. ಏಕೆಂದರೆ— 'ಸಿಂಹೋ ದೇವದತ್ತಃ' ಸಿಂಹಸದೃಶನು ದೇವದತ್ತನು ಇತ್ಯಾದಿಗಳಂತೆಯೇ ಸಾದೃಶ್ಯರೂಪವಾದ ಗೌಣಾರ್ಥವನ್ನು ಇಟ್ಟುಕೊಂಡು ಜೀವಬ್ರಹ್ಮರಿಗೆ ಭೇದವನ್ನು ಅಂಗೀಕರಿಸಿ ಅದರಿಂದಲೇ 'ತತ್ ತ್ವಂ' ಎನ್ನುವ ಎರಡು ಪದಗಳಿಗೆ ಮುಖ್ಯವಾದ ಅರ್ಥವು ಕೂಡುವಾಗ ಜಹದಜಹಲ್ಲಕ್ಷಣೆಯನ್ನು (ಅಂದರೆ ಕರ್ತೃತ್ವ ಸರ್ವಜ್ಞತ್ವ ವೊದಲಾದ ಅಂಶಗಳನ್ನು ಬಿಟ್ಟು ಚೈತನ್ಯಾಂಶವನ್ನು ಬಿಡದೆ ಇರುವಿಕೆ) ಏಕೆ ಆಶ್ರಯಿಸಬೇಕು? ॥ ೧೧ ॥

ಸ. ರ. ವಿ— ಬ್ರಹ್ಮನಿಗೆ ಜೀವರಿಂದ ಭೇದವಿದ್ದರೆ ಆತನಿಗೆ ಸರ್ವಕರ್ತೃತ್ವಾದಿಗಳು ಮುಖ್ಯವಾದವು ಸಿದ್ಧಿಸುವುವು. ಜೀವಭೇದವೇ ಹೇಗೆ ಕೂಡುತ್ತದೆ? ಎಂದರೆ—

**ನ್ಯಾಯಸುಧಾ—** 'ತತ್ತ್ವಮಸಿ' ಎನ್ನುವ ವಾಕ್ಯವು ಸರ್ವಜ್ಞತ್ವ, ಅಲ್ಪಜ್ಞತ್ವರೂಪ ವಿರೋಧಿ ಆಕಾರಗಳನ್ನು ಬಿಟ್ಟು ಚೈತನ್ಯಸ್ವರೂಪದಲ್ಲಿ ಮಾತ್ರ ಲಕ್ಷಣೆಯಿಂದ ಐಕ್ಯವನ್ನು ಹೇಳುತ್ತದೆಂದು ಹೇಳಿದರೆ, ವಿರೋಧಿ ಆಕಾರಗಳನ್ನು ಬಿಡುವುದೆಂದರೆ ಏನು? ಅದಕ್ಕೆ ವಿವಕ್ಷಾ ಇಲ್ಲವೆಂದು ಮಾತ್ರ ಹೇಳುತ್ತೇವೆಂದು ಹೇಳಕೂಡದು. ವಿವಕ್ಷಾಮಾಡದಿದ್ದರೂ ಆ ಧರ್ಮಗಳು ಹೋಗುವುದಿಲ್ಲ. ಮತ್ತೆ ವಿರೋಧ್ಯಾಕಾರಕ್ಕೆ ಅನಿತ್ಯತ್ವವಿದ್ದುದರಿಂದ ವಿರೋಧ್ಯಾಕಾರ ಹೋದ ಮೇಲೆ ಐಕ್ಯವನ್ನು ಹೇಳುತ್ತೇವೆಂದರೆ, ಅದು ಕೂಡುವುದಿಲ್ಲವೆಂದು ನಿರೂಪಿಸುತ್ತಾರೆ—

**ಮೂ ॥ ಕಥಂ ನಿತ್ಯಗುಣಸ್ಯಾಸ್ಯ ಸ್ಯಾದೈಕ್ಯಂ ಗುಣಹಾನತಃ ।**
**ಸದೈವ ಗುಣವತ್ತ್ವೇಽಸ್ಯ ಭಿನ್ನಂ ಸ್ಯಾನ್ನಿರ್ಗುಣಂ ಸದಾ ॥ ೧೦೨ ॥**

ಅ ॥ (ಸ. ರ. ವಿ.) ನಿತ್ಯಗುಣಸ್ಯ=ಶಾಶ್ವತಗುಣಗಳುಳ್ಳ, ಅಸ್ಯ=ಈಶ್ವರನಿಗೆ, ಗುಣ ಹಾನತಃ=ಗುಣಗಳಿಲ್ಲದಿರುವ ದೋಷಗಳುಳ್ಳ ಜೀವನದ್ವೇಷೆಯಿಂದ, ಐಕ್ಯಂ=ಅಭೇದವು, ಕಥಂ= ಹೇಗೆ, ಸ್ಯಾತ್=ಆಗುವುದು. (ಸುಧಾ) ನಿತ್ಯಗುಣಸ್ಯ=ನಿತ್ಯಗುಣಗಳುಳ್ಳ ಈಶ್ವರನಿಗೆ, ಗುಣ ಹಾನತಃ=ಗುಣಗಳನ್ನು ಬಿಟ್ಟು, ಅಂದರೆ ಗುಣಗಳು ಅನಿತ್ಯಗಳೆಂದು ಇಟ್ಟುಕೊಂಡು. (ಜೀವ ನಿಗೂ ಪಾರತಂತ್ರ್ಯ ಮೊದಲಾದ ದೋಷಗಳು ನಿತ್ಯದಲ್ಲಿಯೂ ಇದ್ದುದರಿಂದ) ಐಕ್ಯಂ ಕಥಂ= (ಆ ಜೀವನಿಂದ) ಐಕ್ಯಹೇಳುವುದು ಹೇಗೆ?

('ಅಲ್ಪಶಕ್ತಿರಸಾರ್ವಜ್ಞ್ಯಂ ಪಾರತಂತ್ರ್ಯಮಪೂರ್ಣತಾ । ಉಪಜೀವಕತ್ವಂ ಜೀವತ್ವಮೀಶತ್ವಂ ತದ್ವಿಪರ್ಯಯಃ ॥ ಸ್ವಾಭಾವಿಕಂ ತಯೋರೇತನ್ನಾನ್ಯಥಾ ತು **ಕಥಂಚನ'** ॥ ಜೀವನಿಗೆ ಅಲ್ಪಶಕ್ತಿಯು, ಅಲ್ಪಜ್ಞಾನವು, ಪರಾಧೀನತೆಯು, ಅಪೂರ್ಣತೆಯು, ಉಪಜೀವಕತ್ವವು ಇತ್ಯಾದಿಗಳಿವೆ. ಶ್ರೀಹರಿಗೆ ಇದಕ್ಕಿಂತ ವೈಪರೀತ್ಯವು. ಅಂದರೆ, ಪೂರ್ಣ ಶಕ್ತಿ ಸಾರ್ವಜ್ಞ್ಯ ಇತ್ಯಾದಿಗಳು. ಜೀವೇಶರಿಗೆ ಈ ಧರ್ಮಗಳು ಸ್ವಾಭಾವಿಕಗಳೇ. ಇವುಗಳು ಯಾವ ಪ್ರಕಾರದಿಂದಲೂ ವ್ಯತ್ಯಾಸವಾಗಲಾರವು. ಹೀಗೆ ಮಹಾವಿಷ್ಣುಪುರಾಣದಲ್ಲಿದೆ.) (ಹಾಗಾ ದರೆ ವಿರೋಧ್ಯಾಕಾರಗಳನ್ನು ಬಿಟ್ಟು ಜೀವನಿಗೆ ಬ್ರಹ್ಮೈಕ್ಯವು ವಿರೋಧ್ಯಾಕಾರಕ್ಕೆ ಅವಿವಕ್ಷೆ ಯಿಂದಲೂ ಅಲ್ಲ; ವಿರೋಧ್ಯಾಕಾರಕ್ಕೆ ಅನಿತ್ಯತ್ವದಿಂದಲೂ ಅಲ್ಲ; ಮತ್ತೆ ನಿರ್ಗುಣನಾದ ಬ್ರಹ್ಮ ನಿಂದ ಜೀವನಿಗೆ ಐಕ್ಯವೆನ್ನುವುದೇ, ಎಂದರೆ— ಹೀಗೆ ಹೇಳಕೂಡದು. ನಿರ್ಗುಣನನ್ನೇ ನಿರೂ ಪಿಸಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ, ಆ ನಿರ್ಗುಣನು ಸಗುಣನಾದ ಈಶ್ವರನಿಂದ ಭಿನ್ನನೋ, ಅಭಿನ್ನನೋ? ಅಭಿನ್ನನೆಂದರೆ— ನಿರ್ಗುಣನಿಗೂ ಸಗುಣತ್ವವು ಪ್ರಸಕ್ತವಾಗುವುದರಿಂದ ನಿರ್ಗುಣ ತ್ವವು ವ್ಯಾಹತವಾಗುವುದು.) ಭಿನ್ನನೆಂದರೆ— ನಿರ್ಗುಣಂ ಭಿನ್ನಂ=ನಿರ್ಗುಣನು ಸಗುಣನಿಂದ ಅತ್ಯಂತ ಭಿನ್ನನೆಂದಾದರೆ, ಅಸ್ಯ=ಈ ಸಗುಣಬ್ರಹ್ಮನಿಗೆ, ಸದೈವ ಗುಣವತ್ತ್ವೇ=ನಿತ್ಯದಲ್ಲಿಯೂ ಸಗುಣತ್ವವಿರಲು (ನಿತ್ಯದಲ್ಲಿಯೂ ಗುಣಗಳಿದ್ದುದರಿಂದ), ಸದಾ=ಯಾವಾಗಲೂ, ನಿರ್ಗುಣಂ= ನಿರ್ಗುಣ ಬ್ರಹ್ಮನು, ಭಿನ್ನಂ ಸ್ಯಾತ್=ಭಿನ್ನನಾಗಿಯೇ ಆಗಬೇಕಾಗುವನು ತಥಾಚ, ಯಾವಾ ಗಲೂ ಸಗುಣನಿಗೆ ನಿರ್ಗುಣಭಾವವು ಬರಲಾರದು.

ತಾ ॥ ಸ. ರ. ವಿ— ದೋಷಿಯಾದ ಜೀವನಿಂದ ಶಾಶ್ವತ ಗುಣಗಳುಳ್ಳ ಬ್ರಹ್ಮನಿಗೆ ಭೇದವೇ ಯುಕ್ತವಾಗಿದೆ. ಇಲ್ಲವಾದರೆ, ನಿತ್ಯಗುಣಗಳಿವೆ ಎನ್ನುವುದೇ ವ್ಯಾಹತವಾಗಬೇಕಾಗು ವದು. ಈ ವಿರೋಧಪರಿಹಾರಕ್ಕಾಗಿ ನಿರ್ಗುಣನೊಬ್ಬನನ್ನು ಕಲ್ಪಿಸಿಕೊಂಡು ಆತನಿಗೆ ಜೀವನಿಂದ ಅಭೇದಹೇಳುವುದಾದರೆ, ಆಗ ನಿತ್ಯಗುಣಗಳುಳ್ಳವನು ಜಗತ್ಕಾರಣನಾಗಿರುವುದರಿಂದ ಬ್ರಹ್ಮನಿಂದ

ನಿತ್ಯದಲ್ಲಿಯೂ ಭಿನ್ನನಾಗಬೇಕಾಗುವನು. ಅದು ನಿರ್ಗುಣವೆಂದರೆ ಅದ್ವೈತಕ್ಕೆ ಭಂಗವು ಬರುವುದು ॥ ೧೦೨ ॥

ಹಾಗಾದರೆ ಸ್ವಭಾವತಃ ನಿರ್ಗುಣನೇ ಆರೋಪಿತಗಳಾದ ಮಿಥ್ಯಾಗುಣಗಳಿಂದ ಸಗುಣನೆಂದು ಅಜ್ಞರಿಂದ ಹೇಳಲ್ಪಡುತ್ತಾನೆ. ಆರೋಪಪ್ರವಾಹವು ಅನಾದಿನಿತ್ಯವಾಗಿರುವುದರಿಂದ ಸದಾ ಸಗುಣನೆನ್ನುವುದೂ ಅನಿಷ್ಟವಲ್ಲ. ತಥಾಚ ಮಿಥ್ಯಾಭೂತವಾದ ವಿರೋಧ್ಯಾಕಾರವನ್ನು ಬಿಟ್ಟು ಐಕ್ಯೋಪದೇಶವೂ, ಅನುಪಪನ್ನವಾಗುವುದಿಲ್ಲವೆಂದು ಪರರು ತಮ್ಮ ಅಭಿಪ್ರಾಯವನ್ನುದ್ಘಾಟನ ಮಾಡಿದರೆ

**ಮೂ ॥ ನ ಚ ಮಿಥ್ಯಾಗುಣತ್ವಂ ಸ್ಯಾದನಿರ್ವಾಚ್ಯಸ್ಯ ದೂಷಣಾತ್ ।**
**ನಿರ್ಗುಣತ್ವಂ ತದಾ ಚ ಸ್ಯಾದಾಸುರತ್ವಂ ನ ಚಾನ್ಯಥಾ ॥ ೧೦೩ ॥**

ಅ ॥ ಅನಿರ್ವಾಚ್ಯಸ್ಯ = ಅನಿರ್ವಾಚ್ಯವಸ್ತುವನ್ನು, ದೂಷಣಾತ್ = ದೂಷಿಸಿರುವುದರಿಂದ, ಮಿಥ್ಯಾಗುಣತ್ವಂ=ಮಿಥ್ಯಾಭೂತಗಳಾದ ಗುಣಗಳಿರುವಿಕೆಯು, ನ ಚ ಸ್ಯಾತ್=ಆಗಲಾರದು. ('ಮಿಥ್ಯಾ' ಎನ್ನುವುದಕ್ಕೆ ಅಸತ್ತೆಂದರ್ಥವೋ, ಅನಿರ್ವಾಚ್ಯವೆಂದೋ, ಅಸತ್ತೆಂದು ಹೇಳಕೂಡದು ಅಂಗೀಕರಿಸಲಿಲ್ಲ. ಅನಿರ್ವಾಚ್ಯವನ್ನು ಪ್ರಥಮಸೂತ್ರದಲ್ಲಿಯೇ ನಿರಾಕರಿಸಿರುವುದರಿಂದ ಅನಿರ್ವಾಚ್ಯವೆಂದೂ ಹೇಳಕೂಡದು. ಆದಕಾರಣ ಗುಣರಾಹಿತ್ಯರೂಪವಾದ ನಿರ್ಗುಣತ್ವವನ್ನು ಸರ್ವಥಾ ನಿರೂಪಿಸಲಿಕ್ಕೆ ಶಕ್ಯವಲ್ಲ) (ಹೀಗೆ ಧರ್ಮರಾಹಿತ್ಯರೂಪವಾದ ನಿರ್ಗುಣತ್ವವನ್ನು ನಿರಾಕರಿಸಿದರೂ ಆಗ್ರಹಮಾತ್ರದಿಂದ ಯಾರು ಅಂಗೀಕರಿಸುತ್ತಾರೋ ಅವರನ್ನು ಕುರಿತು ಉಪಹಾಸಪೂರ್ವಕವಾಗಿ ಹೇಳುತ್ತಾರೆ.) ತದಾ ಚ=ನಿರ್ಗುಣನು ಯುಕ್ತಿಯಿಂದ ನಿರಾಕರಿಸಲ್ಪಟ್ಟರೂ, ನಿರ್ಗುಣತ್ವಂ ಸ್ಯಾತ್=ನಿರ್ಗುಣತ್ವವು ಪರರಿಗೆ ಪ್ರೀತಿಕರವಾಗಿದ್ದರೆ, ಆಸುರತ್ವಂ ಸ್ಯಾತ್=ಗುಣಶಬ್ದದಿಂದ ಹೇಳಲ್ಪಟ್ಟ ಸಕಲಶುಭಗುಣರಾಹಿತ್ಯರೂಪವಾದ ಆಸುರತ್ವವೇ ಬರಬೇಕಾಗುವುದು. ಅನ್ಯಥಾ ನ ಚ=ಬೇರೊಂದು ರೀತಿಯಾಗಿ ನಿರೂಪಿಸಲಿಕ್ಕೆ ಶಕ್ಯವಲ್ಲ. (ಅಂತಹ ನಿರ್ಗುಣನಿಂದ ಮಾಯಾವಾದಿಗಳಿಗೆ ಐಕ್ಯವನ್ನು ಒಪ್ಪಿಕೊಳ್ಳುತ್ತೇವೆ.)

ತಾ ॥ ಸ. ರ. ವಿ— ಜಗತ್ಕಾರಣನಾದ ಬ್ರಹ್ಮನೇ ಆರೋಪಿತಗುಣಗಳಿರುವವನಾದುದರಿಂದ ನಿರ್ಗುಣನೆನ್ನಿಸುತ್ತಾನೆಂದು ಹೇಳಕೂಡದು. ಅನಿರ್ವಚನೀಯರೂಪವಾದ ಅಧ್ಯಾಸವು ಕೂಡುವುದಿಲ್ಲವೆಂದು ಮೊದಲೇ ಹೇಳಿಯಾಗಿದೆ. ಹೀಗಾದರೂ ನಿರ್ಗುಣತ್ವವೇ ಇಷ್ಟವಾಗಿದ್ದರೆ, ಅಂತಹ ನಿರ್ಗುಣತ್ವವು ಸಕಲಕಲ್ಯಾಣಗುಣಗಳಿರುವ ಬ್ರಹ್ಮನಲ್ಲಿಲ್ಲದಿರುವ ಎಲ್ಲಾ ಶುಭಗುಣರಾಹಿತ್ಯರೂಪವಾದ ಸರ್ವದೋಷಾಸ್ಪದವಾದ ಆಸುರತ್ವವೆಂದೇ ಹೇಳಬೇಕಾಗುವುದು ॥ ೧೦೩ ॥

'ಗುಣಗುಣಿನೋರನ್ಯತ್ವಾನನ್ಯತ್ವಾಭ್ಯಾಮನಿರೂಪಣಾತ್' ಗುಣಕ್ಕೆ ಗುಣಿಯಿಂದ ಭೇದವನ್ನು, ಅಭೇದವನ್ನು ನಿರೂಪಣ ಮಾಡಲಿಲ್ಲವೆನ್ನುವ ಗ್ರಂಥದಿಂದ ಲಕ್ಷಣಕ್ಕೆ ತಟಸ್ಥತ್ವಾದಿಗಳು ಸಿದ್ಧಿಸುವುದಕ್ಕಾಗಿ ಪರರು ಹೇಳಿದ್ದನ್ನು ದೂಷಿಸುವುದಕ್ಕಾಗಿ ಅನುವಾದ ಮಾಡುತ್ತಾರೆ.

**ಮೂ ॥ ಲಕ್ಷ್ಯಲಕ್ಷಣಯೋರ್ಭೇದೋಽಭೇದೋ ವಾ ಯದಿ ವೋಭಯಂ ।**
**ಇತಿ ಪೃಷ್ಟೇ ತದೈಕ್ಯಸ್ಯ ಗತಿರೇವ ನ ವಿದ್ಯತೇ ॥ ೧೦೪ ॥**

ಅ || ಲಕ್ಷ್ಯಲಕ್ಷಣಯೋಃ=ಲಕ್ಷ್ಯನಾದ ಬ್ರಹ್ಮನು ಲಕ್ಷಣವೂ ಇವುಗಳಿಗೆ, ಭೇದಃ= ಭೇದವೋ, ಅಭೇದೋ ವಾ=ಅಭೇದವೋ, ಯದಿ ವಾ ಉಭಯಂ=ಅಥವಾ ಭೇದಾ ಭೇದವೋ, ಇತಿ=ಹೀಗೆ, ಪೃಷ್ಟೇ=ಕೇಳಲ್ಪಡುತ್ತಿರಲು, ಮತ್ತು ದೂಷಿಸಲ್ಪಡುತ್ತಿರಲು ತದಾ= ಆಗ (ಹೀಗೆ ಕೇಳಿ ಲಕ್ಷಣವನ್ನು ದೂಷಿಸುವುದಾದರೆ,) ಐಕ್ಯಸ್ಯ=ಐಕ್ಯಕ್ಕೆ, ಗತಿರೇವ=ನಿರೂಪಣ ಪ್ರಕಾರವೇ, ನ ವಿದ್ಯತೇ=ಇರುವುದಿಲ್ಲ (ವೆಂದು ಹೇಳಬೇಕು)

ತಾ || ಸ. ರ. ವಿ— (1) ಯಾವುದು ಜಗಜ್ಜನ್ಮಾದಿ ಕರ್ತೃತ್ವರೂಪವಾದ ಲಕ್ಷಣವು ಬ್ರಹ್ಮನಿಗೆ ಹೇಳಲ್ಪಟ್ಟದೋ ಅದು ಲಕ್ಷ್ಯನಾದ ಬ್ರಹ್ಮನಿಂದ ೧ ಭಿನ್ನವೋ, ೨ ಅಭಿನ್ನವೋ, ೩ ಭಿನ್ನಾಭಿನ್ನವೋ? ೧ ಭಿನ್ನವೆಂದರೆ-ಅಪಸಿದ್ಧಾಂತವು ೨ ಅಭಿನ್ನವೆಂದರೆ- ಲಕ್ಷ್ಯಲಕ್ಷಣಭಾವವೇ ಕೂಡಲಾರದು. ೩ ಭಿನ್ನಾಭಿನ್ನವೆಂದರೆ- ವಿರೋಧವು. ಆದಕಾರಣ ಜಗತ್ಕರ್ತೃತ್ವಾದಿ ಧರ್ಮ ಗಳನ್ನು ಭಿನ್ನತ್ವಾದಿಪ್ರಕಾರಗಳಿಂದ ಹೇಳಲಿಕ್ಕೆ ಬಾರದಿರುವಪ್ರಯುಕ್ತ ಭೇದಕಧರ್ಮವೇ ಕೂಡುವುದಿಲ್ಲ. ಆದುದರಿಂದ ಜೀವಬ್ರಹ್ಮರಿಗೆ ಐಕ್ಯವೇ ಯುಕ್ತವೆಂದರೆ, ಇದೂ ಸರಿಯಲ್ಲ. ನೀನು ಹೇಳಿದ ಐಕ್ಯವೂ ಹಿಂದೆ ಹೇಳಿದಪ್ರಕಾರ ನಿರ್ವಚನಮಾಡಲಿಕ್ಕೆ ಬರುವುದೇ ಇಲ್ಲ.

ನ್ಯಾಯಸುಧಾ— (1) ಯಾವುದು ಜಗಜ್ಜನ್ಮಾದಿಕಾರಣತ್ವವು ಮುಖ್ಯ ಲಕ್ಷಣವೆಂದು ಹೇಳಲ್ಪಟ್ಟದೋ, ಸರ್ವಜ್ಞತ್ವ ಮೊದಲಾದ ಸಮಸ್ತ ಗುಣವತ್ವವೂ ಅಭಿಪ್ರಾಯತಃ ಪ್ರಾಪ್ತ ವೆಂದು ಸಿದ್ಧಾಂತಿಗಳಿಂದ ಹೇಳಲ್ಪಟ್ಟದೋ, ಆ ಎರಡು ಲಕ್ಷಣಗಳೂ ಲಕ್ಷ್ಯನಾದ ಬ್ರಹ್ಮನಿಂದ ೧ ಭಿನ್ನವೋ, ೨ ಅಭಿನ್ನವೋ, ೩ ಭಿನ್ನಾಭಿನ್ನವೋ? ೧ ಭಿನ್ನವೆಂದರೆ-ಸಿದ್ಧಾಂತಿಗಳು ಬ್ರಹ್ಮಧರ್ಮ ಗಳಿಗೆ ಬ್ರಹ್ಮನಿಂದ ಭೇದವನ್ನು ಹೇಳದಿರುವುದರಿಂದ ಅಪಸಿದ್ಧಾಂತವು. ೨ ಅಭಿನ್ನವೆನ್ನುವುದೂ ಕೂಡಲಾರದು. ಏಕೆಂದರೆ- ಸರ್ವಕರ್ತೃತ್ವ, ಸರ್ವಜ್ಞತ್ವ, ಸರ್ವಶಕ್ತಿಮತ್ವಮೊದಲಾದ ಅನೇಕ ಲಕ್ಷಣಗಳಿಂದ ಅಭಿನ್ನನಾದ ಬ್ರಹ್ಮನಿಗೂ ಅನೇಕತ್ವವು ಬರಬೇಕಾಗುವುದು. ತಥಾಚ 'ಏಕಮೇವಾದ್ವಿತೀಯಂ' ಎನ್ನುವ ಶ್ರುತಿಯಿಂದ ವಿರೋಧವು ಬರುವುದು. ಅಥವಾ ಒಬ್ಬನೇ ಆದ ಬ್ರಹ್ಮನಿಂದ ಐಕ್ಯಹೇಳಿದರೆ ಲಕ್ಷಣಗಳಿಗಾಗಲೀ ಏಕತ್ವವು ಬರಬೇಕಾಗುವುದು. ೩ ಭಿನ್ನಾಭಿನ್ನ ವೆಂದೂ ಹೇಳಕೂಡದು ಏಕೆಂದರೆ- ಭೇದವೂ ಅಭೇದವೂ ಒಂದೇಕಡೆ ಕೂಡದಿರುವುದರಿಂದ ವಿರೋಧವು ಬರುವುದು. ಆದಕಾರಣ, ಜಗತ್ಕರ್ತೃತ್ವಾದಿ ಧರ್ಮಗಳನ್ನು ನಿರ್ವಚನಮಾಡಲಿಕ್ಕೆ ಶಕ್ಯವಾಗದಿರುವುದರಿಂದ ಇದು ಬ್ರಹ್ಮಸ್ವರೂಪಾಂತರ್ಗತ ಲಕ್ಷಣವಲ್ಲ. ಮತ್ತೆ ತಟಸ್ಥಲಕ್ಷಣವೇ. ಹೀಗೆ ಮಾಯಾವಾದಿಗಳು ಹೇಳುವರು. ಇದು ಸರ್ವಥಾ ಯುಕ್ತವಲ್ಲ. ಏಕೆಂದರೆ— ಜಗ ಜ್ಜನ್ಮಾದಿ ಕಾರಣತ್ವಾದಿಧರ್ಮಗಳಿಗೆ ಬ್ರಹ್ಮನಿಂದ ಭೇದವನ್ನು ಒಪ್ಪುವುದಿಲ್ಲ. ನಿರ್ವಿಶೇಷಾಭೇದ ವನ್ನೂ ಒಪ್ಪುವುದಿಲ್ಲ. ಭೇದಾಭೇದವನ್ನೂ ಒಪ್ಪುವುದಿಲ್ಲ. ಮತ್ತೆ ಸವಿಶೇಷಾಭೇದವನ್ನೇ ಹೇಳು ತ್ತೇವೆ. ಅಭಿನ್ನವಾದ ವಸ್ತುವಿನಲ್ಲಿಯೂ ಭೇದಕಾರ್ಯಕಾರಿಯಾದ, ಪದಾರ್ಥಶಕ್ತಿವಿಶೇಷರೂಪ ವಾದ ವಿಶೇಷವನ್ನು ಎಲ್ಲಾ ವಾದಿಗಳೂ ಅವಶ್ಯವಾಗಿ ಒಪ್ಪಲೇಬೇಕು. ಈ ವಿಶೇಷಬಲದಿಂದಲೇ ಲಕ್ಷ್ಯಲಕ್ಷಣಭಾವಾದಿಗಳು ಎಲ್ಲವೂ ಉಪಪನ್ನಗಳಾಗುತ್ತವೆ. ಹೀಗೆ ಒಪ್ಪದೆ ಹಿಂದೆ ಹೇಳಿದ ರೀತಿಯಿಂದ ನಮ್ಮ ಲಕ್ಷಣವನ್ನು ದೂಷಿಸುವುದಾದರೆ ನಿಮಗೆ ಅತ್ಯಂತಾಭಿಮತವಾದ ಐಕ್ಯ ವಿಷಯದಲ್ಲಿಯೂ ಹಿಂದೆ ಹೇಳಿದ ರೀತಿಯಿಂದ ವಿಕಲ್ಪದೂಷಣಗಳು ಬಂದೇ ಬರುವುದರಿಂದ ನಿಮಗೆ ಐಕ್ಯವನ್ನೂ ನಿರೂಪಣಮಾಡಲಿಕ್ಕೂ ಸಾಧ್ಯವಾಗಲಾರದು. ಹೇಗೆಂದರೆ— ಐಕ್ಯವೂ ಐಕ್ಯವುಳ್ಳ ವಸ್ತು (ಬ್ರಹ್ಮ) ವಿನಿಂದ ೧ ಭಿನ್ನವೋ, ೨ ಅಭಿನ್ನವೋ, ೩ ಭಿನ್ನಾಭಿನ್ನವೋ? ೧ ಭಿನ್ನ ವೆಂದರೆ- ನೀವು ಭಿನ್ನವಾದುದು ಮಿಥ್ಯೆಯೆಂದಂಗೀಕರಿಸಿರುವಪ್ರಯುಕ್ತ ಐಕ್ಯವೂ ಮಿಥ್ಯೆಯಾಗ

ಬೇಕಾಗುವುದು. ಐಕ್ಯವು ಮಿಥ್ಯೆಯಾದರೆ, ಅದಕ್ಕೆ ವಿರುದ್ಧವಾದ ಜೀವಬ್ರಹ್ಮರ ಭೇದವು ಪಾರಮಾರ್ಥಿಕವಾಗಬೇಕಾಗುವುದು. ೨ ಅಭಿನ್ನವಾದರೆ- ಬ್ರಹ್ಮಸ್ವರೂಪವು ಸ್ವಪ್ರಕಾಶವಾಗಿರುವುದರಿಂದ ತತ್ಸ್ವರೂಪವಾದ ಐಕ್ಯವೂ ಸಿದ್ಧವೇ ಆಗಿರುತ್ತದೆ. ಅಂತೂ ಐಕ್ಯವನ್ನು ಪ್ರತಿಪಾದಿಸತಕ್ಕ ತತ್ತ್ವಮಸ್ಯಾದಿ ಶಾಸ್ತ್ರವು ತಿಳಿದಿದ್ದನ್ನೇ ತಿಳಿಸುವಪ್ರಯುಕ್ತ ವ್ಯರ್ಥವಾಗಬೇಕಾಗುವುದು. ೩ ಭಿನ್ನಾಭಿನ್ನವೆಂದೂ ಹೇಳಕೂಡದು. ಹಿಂದೆ ಹೇಳಿದಪ್ರಕಾರ ವಿರೋಧವು ಬರುವುದು.

ಮತ್ತು ಮಾಯಾವಾದಿಗಳು ಎರಡುವಿಧ ವಾಕ್ಯವನ್ನು ತತ್ತ್ವಾವೇದಕವೆಂದಂಗೀಕರಿಸಿರುವರು. ೧ 'ತತ್ತ್ವಮಸಿ' ಇತ್ಯಾದಿಗಳು ಜೀವಬ್ರಹ್ಮರಿಗೆ ಐಕ್ಯವನ್ನು ಪ್ರತಿಪಾದಿಸುವುದು ಮಹಾವಾಕ್ಯವು. ೨ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇದುಮೊದಲಾದುದು ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವುದು ಅವಾಂತರವಾಕ್ಯವು. ಅವೆರಡೂ ಸವಿಶೇಷಾಭಿನ್ನವಾದ ವಸ್ತುವನ್ನು ತಿಳಿಸತಕ್ಕದ್ದೆಂದು ಪರರು ಒಪ್ಪಲೇಬೇಕು. ಬೇರೆ ರೀತಿಯಾಗಿ ಹೇಳಲು ಸಾಧ್ಯವಿರುವುದಿಲ್ಲ ॥ ೧೦೪ ॥

'ತತ್ತ್ವಮಸಿ' ಇತ್ಯಾದಿ ಮಹಾವಾಕ್ಯಕ್ಕೆ ಬೇರೆ ಹೇಳಲು ಏಕೆ ಸಾಧ್ಯವಿಲ್ಲವೆಂದರೆ— 'ತತ್ತ್ವಮಸಿ' ಇದುಮೊದಲಾದ ವಾಕ್ಯಗಳಲ್ಲಿ ಪ್ರತಿಪಾದಿಸಲ್ಪಡತಕ್ಕ ಐಕ್ಯವು 'ತತ್ ತ್ವಂ' ಪದಗಳಿಂದ ಲಕ್ಷಿತವಾದ ಚೈತನ್ಯದಿಂದ ೧ ಅಭಿನ್ನವೋ, ೨ ಭಿನ್ನವೋ, ೩ ಭಿನ್ನಾಭಿನ್ನವೋ? ಎಂದು ಕೇಳಬೇಕು. ಪರರು ಅಂಗೀಕರಿಸಿರುವುದರಿಂದ ಪ್ರಧಾನವಾಗಿರುವಪ್ರಯುಕ್ತ ಅಭೇದಪಕ್ಷವನ್ನು ನಿರಾಕರಿಸುತ್ತಾರೆ—

ಮೂ ॥ ಐಕ್ಯಾಭೇದೇ ನ ಶಾಸ್ತ್ರೇಣ ಜ್ಞೇಯಂ ತತ್ಸ್ವಪ್ರಕಾಶತಃ ।
ಭೇದೇ ಮಿಥ್ಯಾತ್ವತೋ ಭೇದಸತ್ಯತ್ವಂ ಸ್ಯಾದ್ಬಲಾದಪಿ ॥
ಭೇದಾಭೇದೌ ಯದಿ ತದಾ ಸ್ಯಾದೇವ ಹ್ಯನವಸ್ಥಿತಿಃ ॥ ೧೦೫ ॥

ಅ ॥ ಐಕ್ಯಾಭೇದೇ=ಐಕ್ಯಕ್ಕೆ ಚೈತನ್ಯಸ್ವರೂಪದಿಂದ ಅಭೇದವು ಅಂಗೀಕರಿಸಲ್ಪಡುತ್ತಿರಲು, ತತ್=ಆ ಐಕ್ಯವು, ಸ್ವಪ್ರಕಾಶತಃ=ಸ್ವರೂಪವು ಸ್ವಪ್ರಕಾಶವಾಗಿ ನಿತ್ಯ ಸಿದ್ಧವಾಗಿರುವುದರಿಂದ, ಶಾಸ್ತ್ರೇಣ='ತತ್ತ್ವಮಸಿ' ಇತ್ಯಾದಿ ಶಾಸ್ತ್ರದಿಂದ, ಜ್ಞೇಯಂ ನ=ಪ್ರತಿಪಾದ್ಯವಾಗಲಾರದು. (ಪ್ರಕಾಶಮಾನವಾದುದು ಶಾಸ್ತ್ರದಿಂದ ಪ್ರತಿಪಾದಿಸಲ್ಪಡಬೇಕಾಗಿಲ್ಲ. ತಿಳಿದಿದ್ದನ್ನೇ ತಿಳಿಸಿದರೆ ಶಾಸ್ತ್ರವು ವ್ಯರ್ಥವಾಗುವುದು. ಮತ್ತು ಅವೇದ್ಯವಾಗಿದ್ದು ಅಪರೋಕ್ಷವ್ಯವಹಾರಕ್ಕೆ ಯೋಗ್ಯವಾದದ್ದು ಸ್ವಪ್ರಕಾಶವೆಂದು ಪರರು ಅಂಗೀಕರಿಸಿರುವರು. ತಥಾಚ ಅವೇದ್ಯತ್ವರೂಪ ಸ್ವಪ್ರಕಾಶತ್ವವುಳ್ಳ ಚೈತನ್ಯಸ್ವರೂಪವು, ಶಾಸ್ತ್ರವೇದ್ಯವು, ಎನ್ನುವುದು ವ್ಯಾಹತವು. ಹಾಗಾದರೆ, ಶಾಸ್ತ್ರವು ಐಕ್ಯವನ್ನು ಪ್ರತಿಪಾದಿಸುವುದಿಲ್ಲ. ಭೇದಭ್ರಮವನ್ನು ನಿರಾಕರಿಸುತ್ತದೆ ಎಂದರೆ— ಸ್ವಪ್ರಕಾಶ ಚೈತನ್ಯದಿಂದ ಅಭಿನ್ನವಾದ ಐಕ್ಯವು ಯಾವಾಗಲೂ ಪ್ರಕಾಶಮಾನವಾಗಿರಲು ಭೇದಭ್ರಮಕ್ಕೇನೇ ಅವಕಾಶವಿಲ್ಲವು.) (ಭಿನ್ನ ಎನ್ನುವ ಪಕ್ಷವನ್ನು ನಿರಾಕರಿಸುತ್ತಾರೆ.) ಭೇದೇ= ಐಕ್ಯಕ್ಕೆ ಬ್ರಹ್ಮಸ್ವರೂಪದಿಂದ ಭೇದವು ಅಂಗೀಕರಿಸಲ್ಪಟ್ಟರೆ, (೧ ಅಪಸಿದ್ಧಾಂತವು. ಐಕ್ಯಕ್ಕೆ ಮಿಥ್ಯಾತ್ವವು ಪ್ರಸಕ್ತವಾಗುವುದು.) ಮಿಥ್ಯಾತ್ವತಃ = ಚೈತನ್ಯಹೊರತಾದದ್ದೆಲ್ಲವೂ ಮಿಥ್ಯೆಯೆಂದಂಗೀಕರಿಸಿರುವುದರಿಂದ, ಮಿಥ್ಯಾತ್ವತಃ = ಮಿಥ್ಯೆಯಾದುದರಿಂದಲೇ, ತತ್=ಐಕ್ಯವು, ಶಾಸ್ತ್ರೇಣ=ತತ್ತ್ವಮಸ್ಯಾದಿ ಶಾಸ್ತ್ರದಿಂದ, ಜ್ಞೇಯಂ ನ=ತಿಳಿಯತಕ್ಕುದೆಂದು ಹೇಳಕೂಡದು, (ಮಿಥ್ಯಾಭೂತವಾದುದನ್ನು ಶಾಸ್ತ್ರವು ತಿಳಿಸುವುದಾದರೆ ತತ್ತ್ವಮಸ್ಯಾದಿಶಾಸ್ತ್ರವು ಅತತ್ತ್ವಾವೇದಕವಾಗಬೇಕಾಗುವುದು.) ಮಿಥ್ಯಾತ್ವತಃ = ಜೀವಬ್ರಹ್ಮರ ಐಕ್ಯಕ್ಕೆ ಮಿಥ್ಯಾತ್ವವಿದ್ದಪ್ರಯುಕ್ತ,

ಬಲಾತ್=ಪರಸ್ಪರ ವಿರುದ್ಧವಾದವುಗಳ ಮಧ್ಯದಲ್ಲಿ ಒಂದು ಮಿಥ್ಯೆಯಾದರೆ ಅದಕ್ಕೆ ವಿರದ್ಧವಾದ ಮತ್ತೊಂದು ಸತ್ಯವೇ ಆಗಬೇಕು ಎನ್ನುವ ವ್ಯಾಪ್ತಿಯ ಸಾಮರ್ಥ್ಯದಿಂದ, ಭೇದಸತ್ಯತ್ವಮಪಿ= ಭೇದಕ್ಕೆ ಸತ್ಯತ್ವವೂ ಕೂಡ, ಸ್ಯಾತ್=ಬರಬೇಕಾಗುವುದು. ಉದಾ=ಬ್ರಹ್ಮನಲ್ಲಿ ಅನ್ಯತತ್ವ ಅಜ್ಞಾನತ್ವಾದಿಗಳಿಗೆ ಮಿಥ್ಯಾತ್ವವಿದ್ದುದರಿಂದ ಅದಕ್ಕೆ ವಿರುದ್ಧಗಳಾದ ಸತ್ಯತ್ವ ಜ್ಞಾನತ್ವಾದಿಗಳು ಸತ್ಯವು. (ಚೈತನ್ಯದಿಂದ ಐಕ್ಯವು ಭಿನ್ನಾಭಿನ್ನವು ಎನ್ನುವ ಮೂರನೇ ಪಕ್ಷವನ್ನು ನಿರಾಕರಿಸು ತ್ತಾರೆ.) ಭೇದಾಭೇದೌ ಯದಿ=ಜೀವಬ್ರಹ್ಮರ ಐಕ್ಯಕ್ಕೆ ಚೈತನ್ಯಸ್ವರೂಪದಿಂದ ಭೇದಾಭೇದಗಳು ಅಂಗೀಕರಿಸಲ್ಪಡುವುದಾದರೆ, ತದಾ=ಆಗ (ಹೇಳಬೇಕು. ಆ ಭೇದಾಭೇದಗಳು ಚೈತನ್ಯದಿಂದ ೧ ಅಭಿನ್ನಗಳೋ, ೨ ಭಿನ್ನಗಳೋ, ೩ ಭಿನ್ನಾಭಿನ್ನಗಳೋ,? ಅಭಿನ್ನಗಳಾದರೆ- ಚೈತನ್ಯಕ್ಕೂ ದ್ವಿತ್ವ ವಾಗಲೀ (ಅಂದರೆ ಚೈತನ್ಯವು ಎರಡು ಆಗಬೇಕು,) ಭೇದಾಭೇದಗಳಿಗೆ ಏಕತ್ವವಾಗಲೀ(ಭೇದಾ ಭೇದಗಳು ಒಂದಾಗಬೇಕಾಗುವುದು.) ಪ್ರಾಪ್ತವಾಗುವುದು. ೨, ೩ನೇ ಕಲ್ಪಗಳಲ್ಲಿ ದೋಷವನ್ನು ಹೇಳುತ್ತಾರೆ.) ತದಾ=ಆಗ, ಅನವಸ್ಥಿತಿಃ=ಅನವಸ್ಥೆಯು, ಸ್ಯಾದೇವ=ಬರುತ್ತದೆ. ಹಿ=ಸ್ಪಷ್ಟವು.

ತಾ ॥ ನ್ಯಾಯಸುಧಾ— (1) ಆ ಭೇದವು ಭೇದಿ (ಚೈತನ್ಯರೂಪವಾದ ವಸ್ತು, ಭೇದಾಭೇದಾಖ್ಯ ವಸ್ತು)ಗಳಿಂದ ಭಿನ್ನವೋ, ಅಭಿನ್ನವೋ, ಭಿನ್ನಾಭಿನ್ನವೋ, ಭಿನ್ನವೆಂದಾದರೆ- ಆ ಭೇದವೂ ಹಾಗೆಯೇ, ಹೀಗೆ ಅನವಸ್ಥೆಯು. ಅಭಿನ್ನವೆಂದಾದರೆ ಚೈತನ್ಯಶಬ್ದ, ಭೇದಶಬ್ದ, ಅಭೇದಶಬ್ದಗಳಿಗೆ ಪರ್ಯಾಯತ್ವಾದಿಗಳು. ಚೈತನ್ಯಾದಿಗಳಲ್ಲಿ ಒಂದೇ ಅವಶಿಷ್ಟವಾಗಬೇಕಾಗು ವುದು. ಭೇದಾಭೇದಗಳಿಗೆ ಏಕತ್ವವು, ಭೇದಕ್ಕೆ ಅನೇಕತ್ವವು, ಇತ್ಯಾದಿ ದೋಷಗಳು ಬರಬೇಕಾಗುವುದು. ಭೇದಿಗಳಿಂದ ಭೇದವು ಭಿನ್ನಾಭಿನ್ನವು ಎನ್ನುವ ಮೂರನೇ ಪಕ್ಷವು ಐಕ್ಯವು ಚೈತನ್ಯದಿಂದ ಭಿನ್ನಾಭಿನ್ನವೆನ್ನುವ ಪಕ್ಷದಲ್ಲಿಯೇ ಅಂತರ್ಭೂತವಾಗುತ್ತದೆ. ಅಲ್ಲಿಯೂ ಹಿಂದೆ ಹೇಳಿದ ಪ್ರಕಾರ ಅನವಸ್ಥೆಯೇ ಬರುವುದು ॥ ೧೦೫ ॥

ಹಾಗಾದರೆ, ಐಕ್ಯವು ಚೈತನ್ಯದಿಂದ ಅಭಿನ್ನವಾದಾಗ್ಯೂ ಸ್ವನಿರ್ವಾಹಕವಾಗಿರುವುದರಿಂದ ಸ್ವಾಭಾವಿಕಪ್ರಕಾಶದಿಂದ ಅಪ್ರಕಾಶಿತತ್ವವನ್ನು ತನಗೆ ನಿರ್ವಾಹ ಮಾಡಿಕೊಳ್ಳುತ್ತದೆ. ಅಥವಾ ಐಕ್ಯಕ್ಕೆ ಸ್ವರೂಪದಿಂದ ಭೇದಾಭೇದಗಳಿರಲಿ, ಅವುಗಳಿಗೆ ಭೇದಾಭೇದಾಂತರಗಳು ಇಲ್ಲದಿದ್ದರೂ ಸ್ವನಿರ್ವಾಹಕವಾಗಿರುವುದರಿಂದ ಐಕ್ಯವು ಚೈತನ್ಯದಿಂದ ಭಿನ್ನಾಭಿನ್ನವು ಇತ್ಯಾದಿ ವಿಶಿಷ್ಟ ವ್ಯವಹಾರವು ಉಪಪನ್ನವಾಗುವುದು ಎಂದು ಹೇಳಕೂಡದು. ವಿಶೇಷವನ್ನು ಒಡಂಬಡದಿದ್ದರೆ ಸ್ವನಿರ್ವಾಹಕತ್ವವನ್ನು ಹೇಳಲು ಶಕ್ಯವಲ್ಲ ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.

**ಮೂ ॥ ಸ್ವನಿರ್ವಾಹಕತಾ ಚೇತ್ಸ್ಯಾದ್ವಾಹ್ಯಂ ವಾ (ಬಾ) ಹಕಮಿತ್ಯಪಿ ।**
**ಪರ್ಯಾಯೋ ಭೇದವಾನ್ವಾ ಸ್ಯಾದನವಸ್ಥೋಭಯತ್ರ ಚ ॥ ೧೦೬ ॥**

ಅ ॥ ಸ್ವನಿರ್ವಾಹಕತಾ ಚೇತ್ ಸ್ಯಾತ್=ಐಕ್ಯಕ್ಕೂ ಭೇದಾಭೇದಗಳಿಗೂ ಸ್ವನಿರ್ವಾಹ ಕತ್ವವು ಅಂಗೀಕರಿಸಲ್ಪಡುವುದಾದರೆ, (ಆಗ ಕೇಳುವೆವು, ಸ್ವಸ್ಯ ನಿರ್ವಾಹಕಂ ಸ್ವನಿರ್ವಾಹಕಂ। ತಸ್ಯ ಭಾವಃ ಸ್ವನಿರ್ವಾಹಕತಾ । ತಥಾ ಚ ಒಂದು ಕ್ರಿಯೆಯಲ್ಲಿ ಒಂದು ವಸ್ತುವಿಗೆ ಕರ್ಮತ್ವ ಕರ್ತೃತ್ವರೂಪವಾದ ನಿರ್ವಾಹ್ಯತ್ವವು, ನಿರ್ವಾಹಕತ್ವವು ಎಂದು ಹೇಳಿದಂತೆ ಆಯಿತು. ಆ ನಿರ್ವಾಹ್ಯತ್ವವು, ನಿರ್ವಾಹಕತ್ವವೂ ಪರಸ್ಪರವಾಗಿಯೂ ಧರ್ಮಿಯಿಂದಲೂ ಕ್ರಿಯೆಯಿಂದಲೂ (೧) ಅತ್ಯಂತಾಭಿನ್ನವೋ ಅಥವಾ (೨) ಭಿನ್ನವೋ? ಅತ್ಯಂತಾಭಿನ್ನವೆಂದರೆ—) ವಾಹ್ಯಂ= ನಿರ್ವಾಹ್ಯವು, ವಾ(ಬಾ)ಹಕಂ=ನಿರ್ವಾಹಕವು, ಇತ್ಯಪಿ= 'ನಿರ್ವಾಹಣಂ' ಇದು ಮೊದಲಾದ

ಶಬ್ದ ಸಮುದಾಯವು, ಪರ್ಯಾಯಃ ಸ್ಯಾತ್=ಏಕಾರ್ಥಪ್ರತಿಪಾದಕವಾಗಬೇಕಾಗುವುದು. (ಅವುಗಳು ಪರ್ಯಾಯಶಬ್ದಗಳೆಂದು ಯಾವನೊಬ್ಬನೂ ತಿಳಿಯಲಾರನು.) (ಭಿನ್ನವೆಂದರೆ) ಭೇದವಾನ್ ವಾ ಸ್ಯಾತ್=ನಿರ್ವಾಹ್ಯತ್ವವೊದಲಾದ ಅರ್ಥವು ಪರಸ್ಪರವಾಗಿಯೂ ಧರ್ಮಿಯಿಂದಲೂ ಭೇದವುಳ್ಳದ್ದಾದರೆ ಆಗ, ಉಭಯತ್ರ ಚ ಅನವಸ್ಥಾ ಸ್ಯಾತ್=ಆ ಎರಡು ಭೇದಗಳು ಭೇದಿಸ್ವರೂಪವಮಾತ್ರವಾಗಿದೆ ಎಂದಂಗೀಕರಿಸಿದರೆ ಪರ್ಯಾಯತ್ವಾದಿ ದೋಷಗಳು ಪ್ರಸಕ್ತಗಳಾಗುವುದರಿಂದ ಭೇದಾಂತರವುಳ್ಳದ್ದೆಂದಂಗೀಕರಿಸಬೇಕು. ತಥಾಚ ಪರಸ್ಪರ ಭೇದವನ್ನಾಗಲೀ, ಧರ್ಮಿಭೇದವನ್ನಾಗಲೀ ಆಶ್ರಯಿಸಿ ಎರಡು ಕಡೆಗಳಲ್ಲಿ ಅನವಸ್ಥಾದೋಷವು ಬರುವುದು.

ತಾ ॥ ಸ. ರ. ವಿ— (1) ಹಾಗಾದರೆ, ಐಕ್ಯವು ತಾನೇ ನಿರ್ವಾಹ್ಯ ನಿರ್ವಾಹಕರೂಪವಾಗಿರುವುದರಿಂದ ಭೇದಾದಿಗಳನ್ನು ಕಲ್ಪಿಸಲಿಕ್ಕೆ ಅವಕಾಶವಿಲ್ಲ. ಎಂದರೆ— ಇದು ಯುಕ್ತವಲ್ಲ. ಏಕೆಂದರೆ- ನಿರ್ವಾಹ್ಯ ನಿರ್ವಾಹಕ ಶಬ್ದಗಳಿಗೆ ೧ ಒಂದೇ ಅರ್ಥವೋ, ೨ ಬೇರೆ ಬೇರೆ ಅರ್ಥಗಳೋ ೧ ನೇದ್ದು ಕೂಡಲಾರದು. ಪರ್ಯಾಯ (ಸಹಪ್ರಯೋಗಾನರ್ಹ) ವಾಗಿರುವುದರಿಂದ ಸಹಪ್ರಯೋಗವು ಕೂಡಲಾರದು. ೨ನೇದ್ದೂ (ಬೇರೆ ಬೇರೆ ಅರ್ಥಗಳೆನ್ನುವುದೂ) ಕೂಡಲಾರದು. ಪರಸ್ಪರವಾಗಿ ಪ್ರತಿಯೋಗಿತ್ವವಿದ್ದುದರಿಂದ ನಿರ್ವಾಹ್ಯದಿಂದ ನಿರ್ವಾಹಕಕ್ಕೆ ಭೇದವೂ, ನಿರ್ವಾಹಕದಿಂದ ನಿರ್ವಾಹ್ಯಕ್ಕೆ ಭೇದವೂ, ಆ ಭೇದಗಳಿಗೂ ಇತರ ಭೇದಗಳೂ, ಅವುಗಳಿಗೂ ಬೇರೆ ಭೇದಗಳೂ, ಈ ಪ್ರಕಾರವಾಗಿ ಅನವಸ್ಥೆ ಬರುವುದು. ಆದಕಾರಣ ಐಕ್ಯ ಪ್ರತಿಬಂಧಿಯಿಂದ ಪರಾಹತವಾಗಿರುವುದರಿಂದ ಲಕ್ಷಣಖಂಡನವು ಕೂಡುವುದಿಲ್ಲ. ॥ ೧೦೬ ॥

ಸ. ರ. ವಿ— ಈ ಪ್ರಕಾರ ಜನ್ಮಾದಿ ಕಾರಣತ್ವವು ತಟಸ್ಥಲಕ್ಷಣವೆನ್ನುವುದನ್ನು ನಿರಾಕರಿಸಿ ಈಗ ಸತ್ಯಜ್ಞಾನಾದಿ ಪದಗಳಿಗೆ ಅಖಂಡಾರ್ಥತ್ವ (ಚಿನ್ಮಾತ್ರಪರತ್ವ) ವನ್ನು ದೂಷಿಸುತ್ತಾರೆ.

ನ್ಯಾಯಸುಧಾ— ಹೀಗೆ ವಿಶೇಷವನ್ನು ಒಡಂಬಡದಿದ್ದರೆ ಮಹಾವಾಕ್ಯಾರ್ಥದಲ್ಲಿ ಅನುಪಪತ್ತಿಯನ್ನು ಹೇಳಿ ಅವಾಂತರ ವಾಕ್ಯದಲ್ಲಿಯೂ ಅನುಪಪತ್ತಿಯನ್ನು ಹೇಳುತ್ತಾರೆ—

**ಮೂ ॥ ಸತ್ಯಜ್ಞಾನಾದಿಕೇಽಪ್ಯೇವಂ (ವ) ನ ವ್ಯಾವೃತ್ತ್ಯಾ ಪ್ರಯೋಜನಂ ।**
**ವ್ಯಾವೃತ್ತಸ್ಯಾವಿಶೇಷತ್ವೇ ತದಖಂಡಂ ಚ ಖಂಡಿತಂ ॥**
**ನಿರ್ವಿಶೇಷತ್ವಮೇತೇನ ಮೂಕೋಽಹಮಿತಿವದ್ಭವೇತ್ ॥ ೧೦೭ ॥**

ಅ ॥ ಸತ್ಯಜ್ಞಾನಾದಿಕೇಽಪಿ='ಸತ್ಯಂ ಜ್ಞಾನಮನಂತಂ ಬ್ರಹ್ಮ' ಇದು ಮೊದಲಾದ ಅವಾಂತರ ವಾಕ್ಯದಲ್ಲಿಯೂ, ಏವಂ=ಹೀಗೆಯೇ, (ಅಂದರೆ ಸತ್ಯಜ್ಞಾನಾದಿಗಳು ಪರಸ್ಪರವಾಗಿಯೂ ಬ್ರಹ್ಮನಿಂದಲೂ ಅತ್ಯಂತಾಭಿನ್ನವೋ, ಭಿನ್ನವೋ, ಭಿನ್ನಾಭಿನ್ನವೋ? ಎನ್ನುವ ರೀತಿಯಿಂದ ವಿಕಲ್ಪಿಸಿ ದೂಷಣವನ್ನು ಹೇಳಬೇಕು.)

(ಸತ್ಯಜ್ಞಾನಾದಿ ಪದಗಳು ಸತ್ಯತ್ವ, ಜ್ಞಾನತ್ವ ಮೊದಲಾದ ಧರ್ಮಗಳನ್ನು ಹೇಳದೆ ಬ್ರಹ್ಮಸ್ವರೂಪವನ್ನು ಮಾತ್ರ ಹೇಳುತ್ತವೆ. ಆದರೂ ಅವುಗಳಿಗೆ ವೈಯರ್ಥ್ಯವಿಲ್ಲ. ಅಸತ್ಯತ್ವ ಅಜ್ಞಾನತ್ವಾದಿ ವ್ಯಾವೃತ್ತಿಜ್ಞಾನರೂಪ ಪ್ರಯೋಜನವಿರುವುದೆಂದು ಹೇಳುತ್ತೇವೆಂದರೆ, ಆ ಬ್ರಹ್ಮನಲ್ಲಿ (೧) ವಿಶೇಷಣವಾಗಿ ಅಸತ್ಯತ್ವಾದಿಗಳಿಂದ ವ್ಯಾವೃತ್ತಿ ಜ್ಞಾನವು ಪ್ರಯೋಜನವೆಂದು ಹೇಳಲ್ಪಡುತ್ತದೋ, (೨) ಸ್ವತಂತ್ರವಾಗಿಯೇ ವ್ಯಾವೃತ್ತಿ ಜ್ಞಾನವು ಪ್ರಯೋಜನವೆಂದು ಹೇಳಲ್ಪಡುತ್ತದೋ, ೧ ನೇದರಲ್ಲಿ ದೋಷವನ್ನು ಹೇಳುತ್ತಾರೆ.) ವ್ಯಾವೃತ್ತ್ಯಾ ಪ್ರಯೋಜನಂ=

ಬ್ರಹ್ಮನಲ್ಲಿ ವಿಶೇಷಣವಾಗಿ ಅಸತ್ಯತ್ವಾದಿ ವ್ಯಾವೃತ್ತಿರೂಪವಾದ ಪ್ರಯೋಜನವು, ನ=(ಸತ್ಯಾದಿ ಪದಗಳಿಗೆ ನಿನ್ನಿಂದ ಹೇಳಲು) ಶಕ್ಯವಾಗುವುದಿಲ್ಲ. (ಏಕೆಂದರೆ) ವ್ಯಾವೃತ್ತಸ್ಯ=ಭಿನ್ನನಾಗಿ ಪ್ರತೀತನಾದ ಬ್ರಹ್ಮನಿಗೆ, ಅವಿಶೇಷತ್ವೇ=ನಿರ್ವಿಶೇಷತ್ವವು (ಅಂಗೀಕೃತವಾಗುತ್ತಿರಲು, ಅಸತ್ಯತ್ವಾದಿ ವ್ಯಾವೃತ್ತಿಯು ಬ್ರಹ್ಮನಿಗೆ ವಿಶೇಷಣವಾಗಿ ಸತ್ಯಾದಿ ಪದಗಳಿಂದ ತಿಳಿಸಲ್ಪಡುತ್ತದೆಂದು ಹೇಳಕೂಡದು.)

(ಅಭಾವರೂಪವಾದ ಧರ್ಮವನ್ನು (ಅಸತ್ಯತ್ವಾದಿ ವ್ಯಾವೃತ್ತಿರೂಪವಾದುದನ್ನು) ಬ್ರಹ್ಮನಲ್ಲಿ ಅಂಗೀಕರಿಸಿರುತ್ತೇವೆಂದರೆ-ಅಭಾವವಿಶೇಷವನ್ನು ಅಂಗೀಕರಿಸಿದರೆ, ಸತ್ಯತ್ವಾದಿರೂಪವಾದ ಭಾವವಿಶೇಷವನ್ನು ಏಕೆ ಅಂಗೀಕರಿಸಬಾರದು.) (೨ನೇದ್ದನ್ನು ದೂಷಿಸುತ್ತಾರೆ) ವ್ಯಾವೃತ್ತಸ್ಯ=ಭಿನ್ನನಾದ ಬ್ರಹ್ಮನಿಗೆ, ಅವಿಶೇಷತ್ವೇ=ವ್ಯಾ(ವೃತ್ತೇಃ=ವ್ಯಾವೃತ್ತಿಗೆ) ವಿಶೇಷಣತ್ವವಿಲ್ಲದಿರಲು, ನ ವ್ಯಾವೃತ್ತ್ಯಾ ಪ್ರಯೋಜನಂ=ಆ ಸ್ವತಂತ್ರ ವ್ಯಾವೃತ್ತಿಯು (ಮುಮುಕ್ಷುವಿಗೆ ತಿಳಿಯಲಿಷ್ಟವಲ್ಲದಿರುವುದರಿಂದ) ಪ್ರಯೋಜನವಲ್ಲ. (ಏಕಂದರೆ, ಮೋಕ್ಷವನ್ನು ಬಯಸುವವನು ಬ್ರಹ್ಮನನ್ನಾಗಲೀ ಬ್ರಹ್ಮಧರ್ಮವನ್ನಾಗಲೀ ತಿಳಿಯಲಿಚ್ಛಿಸುವನು. ಅದರಲ್ಲಿ ವ್ಯಾವೃತ್ತಿಯು ಬ್ರಹ್ಮಸ್ವರೂಪವೆಂದು ಹೇಳಕೂಡದು. ಬ್ರಹ್ಮನು ಭಾವರೂಪನೂ ನಿರುಪಾಧಿಕನೂ ಒಬ್ಬನೇ ಆಗಿರುತ್ತಾನೆ. ವ್ಯಾವೃತ್ತಿಗಳಾದರೂ ಅಭಾವರೂಪಗಳೂ, ಅನೇಕ ರೂಪಗಳೂ, ಸೋಪಾಧಿಕಗಳೂ ಆಗಿರುತ್ತವೆ. ವ್ಯಾವೃತ್ತಿಯು ಬ್ರಹ್ಮಧರ್ಮವೂ ಅಲ್ಲವಾದರೆ ಮುಮುಕ್ಷುವು ಏಕೆ ಜಿಜ್ಞಾಸಮಾಡುವನು. ತಿಳಿಯಲಿಷ್ಟವಲ್ಲದಿರುವುದರ ತಿಳಿಯುವಿಕೆಯು ಹೇಗೆತಾನೆ ಪ್ರಯೋಜನವಾಗುವುದು?)

(ಮತ್ತು (೧) ಸತ್ಯಾದಿಪದಗಳು ಬ್ರಹ್ಮನಲ್ಲಿ ಸತ್ಯತ್ವಾದಿ ಧರ್ಮಗಳನ್ನು ಹೇಳುತ್ತಾ ಅಸತ್ಯತ್ವಾದಿವ್ಯಾವೃತ್ತಿಯೇ ಪ್ರಯೋಜನವಾಗಿ ಉಳ್ಳವುಗಳೆಂದು ಹೇಳುವಿರೋ, (೨) ಅಥವಾ ಸತ್ಯತ್ವಾದಿ ಧರ್ಮಗಳನ್ನು ಹೇಳದೇನೇ ಅಸತ್ಯತ್ವಾದಿ ವ್ಯಾವೃತ್ತಿಯೇ ಪ್ರಯೋಜನವಾಗಿವುಳ್ಳವುಗಳೆಂದು ಹೇಳುವಿರೋ, ಈ ಎರಡರಲ್ಲಿ ೧ನೇದ್ದು ಕೂಡಲಾರದು. ಏಕೆಂದರೆ-ನೀವು ಅದನ್ನು ಒಪ್ಪಲಿಲ್ಲ ಎನ್ನುತ್ತಾರೆ.) ವ್ಯಾವೃತ್ತಸ್ಯ=ಭಿನ್ನನಾದ ಬ್ರಹ್ಮನಿಗೆ, ಅವಿಶೇಷತ್ವೇ=ವಿಶೇಷಣವಿಲ್ಲದಿರುವಿಕೆಯು ಅಂಗೀಕರಿಸಲ್ಪಡುತ್ತಿರಲು, ನ ವ್ಯಾವೃತ್ತ್ಯಾ ಪ್ರಯೋಜನಂ=ವಿಶೇಷಣವನ್ನು ಹೇಳುತ್ತಾ ವ್ಯಾವೃತ್ತಿಯು ಪದಗಳಿಗೆ ಪ್ರಯೋಜನವೆಂದು ಹೇಳಲು ಶಕ್ಯವಾಗುವುದಿಲ್ಲ. (೨ ನೇದ್ದನ್ನು ದೂಷಿಸುತ್ತಾರೆ—) ವ್ಯಾವೃತ್ತಸ್ಯ ಅವಿಶೇಷತ್ವೇ=ವ್ಯಾವೃತ್ತನಾದ ಬ್ರಹ್ಮನಿಗೆ ವಿಶೇಷಣತ್ವವಿಲ್ಲದಿರಲು, ಅಂದರೆ ಸತ್ಯತ್ವಾದಿ ಧರ್ಮಗಳನ್ನು ಪ್ರತಿಪಾದಿಸದಿರಲು, ನ ವ್ಯಾವೃತ್ತ್ಯಾ ಪ್ರಯೋಜನಂ= ಅಸತ್ಯತ್ವಾದಿ ವ್ಯಾವೃತ್ತಿಯು ಪದಗಳಿಗೆ ಪ್ರಯೋಜನವೆಂದು ಹೇಳಲು ಶಕ್ಯವಾಗುವುದಿಲ್ಲ. (ಏಕೆಂದರೆ— ಅಸತ್ಯತ್ವಮೊದಲಾದ ಧರ್ಮಗಳಿಗೆ ವಿರೋಧಿಗಳಾದ ಸತ್ಯತ್ವಮೊದಲಾದ ಧರ್ಮಗಳನ್ನು ತಿಳಿಸಿದರೇನೇ ಅಸತ್ಯತ್ವಾದಿ ವಿರೋಧಿಧರ್ಮಗಳ ವ್ಯಾವೃತ್ತಿಯು ಪ್ರಯೋಜನವಾಗುವುದು) (ಹೀಗೆ ವಿಶೇಷವನ್ನು ಅಂಗೀಕರಿಸದಿದ್ದರೆ ಮಹಾವಾಕ್ಯ ಅವಾಂತರವಾಕ್ಯರೂಪ ಎರಡು ವಾಕ್ಯವೂ ಉಪಪನ್ನವಾಗುವುದಿಲ್ಲವೆಂದು ಹೇಳಿ ಉಪಸಂಹಾರ ಮಾಡುತ್ತಾರೆ.) ತತ್=ಆದಪ್ರಯುಕ್ತ, ಅಖಂಡಂಚ=ನಿರ್ವಿಶೇಷವು ಎರಡು ವಾಕ್ಯಗಳಿಂದ ಪ್ರತಿಪಾದಿಸಲ್ಪಡುವುದೆನ್ನುವ ಮತವು, ಖಂಡಿತಂ=ದೂಷಿಸಲ್ಪಟ್ಟಿತೆಂದು ತಿಳಿಯತಕ್ಕದ್ದು. ಬ್ರಹ್ಮನು ನಿರ್ವಿಶೇಷನು(ಅಂದರೆ ಯಾವ ವಿಶೇಷವೂ ಇಲ್ಲದಿರುವವನು) ಎನ್ನುವ ವಚನವು 'ನಾನು ಮೂಕನು' ಎನ್ನುವ ಮಾತಿನಂತೆ ಸ್ವಕ್ರಿಯಾವಿರುದ್ಧವೂ ಆಗಿದೆ ಎನ್ನುತ್ತಾರೆ.— ನಿರ್ವಿಶೇಷತ್ವಂ=ವಿಶೇಷವಿಲ್ಲವೆನ್ನುವುದು, ಏತೇನ=ನಿರ್ವಿಶೇಷತ್ವರೂಪವಾದ ವಿಶೇಷವನ್ನು ಅವಶ್ಯವಾಗಿ ಒಪ್ಪಬೇಕಾಗಿಬರುವುದರಿಂದ, ಅಹಂ ಮೂಕಃ ಇತಿವತ್=ನಾನು ಮೂಕನು ಎನ್ನುವುದರಂತೆ, ಭವೇತ್=ಆಗುವುದು.

ತಾ || ಸ. ರ. ವಿ— (1) 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವಲ್ಲಿ ಸತ್ಯಾದಿ ಪದಗಳಿಗೆ ಏಕಾರ್ಥತ್ವವಿದ್ದರೆ ಪರ್ಯಾಯತ್ವವು ಬರಬೇಕಾಗುವುದು. ಬ್ರಹ್ಮನಲ್ಲಿ ಸತ್ಯತ್ವಾದಿ ವಿಶೇಷವಿಲ್ಲದಿದ್ದರೂ ಅಸತ್ಯತ್ವಾದಿ ವ್ಯಾವೃತ್ತಿಯನ್ನು ತಿಳಿಸಿಕೊಡುವುದರಿಂದ ಪರ್ಯಾಯತ್ವವಿಲ್ಲ. ಬ್ರಹ್ಮನಲ್ಲಿ ವ್ಯಾವರ್ತಕವಾದ ವಿಶೇಷವಿಲ್ಲದಿದ್ದರೆ ಅಸತ್ಯತ್ವಾದಿಗಳಿಂದ ವ್ಯಾವೃತ್ತಿಯೂ ಕೂಡಲಾರದು ವ್ಯರ್ಥವೂ ಆಗುತ್ತದೆ. (2) ಸತ್ಯಾದಿಪದಗಳು ಬ್ರಹ್ಮನಲ್ಲಿ ಸತ್ಯತ್ವಾದಿ ಧರ್ಮಗಳನ್ನು ಹೇಳುವುದಿಲ್ಲ. ಅಸತ್ಯತ್ವಾದಿವ್ಯಾವೃತ್ತಿಯನ್ನೇ ತಿಳಿಸುತ್ತವೆಂದು ಹೇಳಿದರೆ, ಅನ್ಯಾಪೋಹವೇ. ಅಂದರೆ ಘಟಪದಕ್ಕೆ ಘಟವೆಂದು ಅರ್ಥವಲ್ಲ. ಅಘಟವ್ಯಾವೃತ್ತಿಯೇ ಅರ್ಥವೆಂದು ಹೇಳುವ ಬೌದ್ಧ ಸಿದ್ಧಾಂತವನ್ನೇ ಒಪ್ಪಿದಂತೆ ಆಯಿತು. (3) 'ಬ್ರಹ್ಮವಿದಾಪ್ನೋತಿ ಪರಂ' ಎಂದು ಉಪಕ್ರಮದಲ್ಲಿ ಬ್ರಹ್ಮನಿಗೆ ಏನು ಲಕ್ಷಣವೆಂದು ಆಕಾಂಕ್ಷಾ ಬರಲು ಆಕಾಂಕ್ಷಿತವಾದ ಬ್ರಹ್ಮಲಕ್ಷಣವನ್ನು ತಿಳಿಸುವುದಕ್ಕಾಗಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಉತ್ತರ ಲಕ್ಷಣ ವಾಕ್ಯವು ಪ್ರವೃತ್ತವಾಗಿರುವುದು. ಇದು ಕೇವಲ ಸ್ವರೂಪಮಾತ್ರಪರವೆಂದು ಹೇಳಿದರೆ ಲಕ್ಷಣ ಪ್ರಶ್ನೆಗೆ ಅನುಗುಣವಾಗದಿರುವುದರಿಂದಲೂ ಮೊದಲೇ ತಿಳಿದಿದ್ದ ಬ್ರಹ್ಮಸ್ವರೂಪಮಾತ್ರವನ್ನೇ ತಿಳಿಸುವುದರಿಂದಲೂ ವ್ಯರ್ಥವಾಗಬೇಕಾಗುವುದು. (4) 'ನಿರ್ವಿಶೇಷಂ ಬ್ರಹ್ಮ' ಎನ್ನುವ ವಚನವು ವಿಶೇಷರಾಹಿತ್ಯಮೊದಲಾದ ವಿಶೇಷವಿದ್ದಪ್ರಯುಕ್ತ 'ಅಹಂ ಮೂಕಃ' ಎನ್ನುವುದರಂತೆ ಸ್ವವ್ಯಾಹತವು ಆಗಬೇಕಾಗುವುದು. ಎಲ್ಲಿಯೂ ಶಬ್ದವು ನಿರ್ವಿಶೇಷವಾದ ಅರ್ಥವನ್ನು ತಿಳಿಸುವುದೇ ಇಲ್ಲ. ಒಂದು ಪದವೂ ಕೂಡ ಪ್ರಕೃತಿಪ್ರತ್ಯಯಭೇದದಿಂದ ಸಂಖ್ಯಾದಿವಿಶಿಷ್ಟರೂಪವಾದ ಸವಿಶೇಷಾರ್ಥವನ್ನೇ ತಿಳಿಸುತ್ತದೆ. ಆದಕಾರಣ ಸತ್ಯಾದಿ ಪದಗಳಿಗೆ ಅಖಂಡಾರ್ಥತ್ವವು (ನಿರ್ವಿಶೇಷಾರ್ಥತ್ವವು) ತಿರಸ್ಕೃತವಾಯಿತೆಂದು ತಿಳಿಯತಕ್ಕದ್ದು. ಆದುದರಿಂದ ಸತ್ಯಜ್ಞಾನಮೊದಲಾದ ಅನಂತಗುಣಗಳುಳ್ಳ ಬ್ರಹ್ಮನೇ ಸತ್ಯಾದಿಪದಾರ್ಥನೆಂದು ಒಪ್ಪಬೇಕು. ಗುಣಗುಣಿಗಳಿಗೆ ಭೇದವು ಅನವಸ್ಥಾದಿಗಳಿಂದ ದುಷ್ಟವಾಗಿರುವಪ್ರಯುಕ್ತ ಅನುಭವವಿರುದ್ಧವಾಗಿರುವುದರಿಂದ ಭೇದವಿಲ್ಲದಿದ್ದರೂ ವಿಶೇಷ ಬಲದಿಂದಲೇ ಗುಣಗುಣಿಭಾವವು ಸಿದ್ಧಿಸುತ್ತದೆ.

ನ್ಯಾಯಸುಧಾ—(1) ಸತ್ಯಜ್ಞಾನಾದಿ ಅವಾಂತರವಾಕ್ಯದಲ್ಲಿ ವಿಕಲ್ಪಿಸಿ ಹೇಗೆ ದೂಷಣವು ಹೇಳುವುದೆಂದರೆ— ಸತ್ಯಜ್ಞಾನಾದಿಗಳು ಪರಸ್ಪರವಾಗಿಯೂ ಬ್ರಹ್ಮನಿಂದಲೂ, ೧ ಅತ್ಯಂತಾಭಿನ್ನವೋ, ೨ ಭಿನ್ನವೋ, ೩ ಭಿನ್ನಾಭಿನ್ನವೋ? ೧ನೇದ್ದು ಕೂಡಲಾರದು. ಅತ್ಯಂತಾಭಿನ್ನವಾದರೆ, ಸ್ವಪ್ರಕಾಶಬ್ರಹ್ಮಾತ್ಮಕಗಳಾದ ಸತ್ಯಜ್ಞಾನಾದಿಗಳಿಗೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶಾಸ್ತ್ರಗಳಿಂದ ಪ್ರತಿಪಾದ್ಯತ್ವವು ಬಾರದೆಹೋಗಬೇಕಾಗುವುದು. (2) ಮತ್ತು ಸತ್ಯಜ್ಞಾನಾದಿಪದಗಳಿಗೆ ಪರ್ಯಾಯತ್ವವು ಬರುವುದರಿಂದ ಸಹಪ್ರಯೋಗವೂ ಕೂಡದೆ ಹೋಗಬೇಕಾಗುವುದು. ೨ನೇದ್ದೂ ಕೂಡಲಾರದು. ಏಕೆಂದರೆ- ಅಪಸಿದ್ಧಾಂತವು ಬರುವುದು. ಸತ್ಯತ್ವಾದಿಗಳಿಗೆ ಮಿಥ್ಯಾತ್ವವು ಪ್ರಾಪ್ತವಾಗುವುದರಿಂದ ಶಾಸ್ತ್ರವು ಅತತ್ವಾವೇದಕವೂ ಆಗಬೇಕಾಗುವುದು. ತದ್ವಿರುದ್ಧಗಳಾದ ಅಸತ್ಯತ್ವ, ಅಜ್ಞಾನತ್ವಾದಿಗಳಿಗೆ ಸತ್ಯತ್ವವೂ ಪ್ರಾಪ್ತವಾಗಬೇಕಾಗುವುದು. ೩ನೇದ್ದೂ ಕೂಡುವುದಿಲ್ಲ. ಹಿಂದೆ ಹೇಳಿದ ರೀತಿಯಿಂದ ಅನವಸ್ಥಾದೋಷವು ಬರುವುದು. ಹಿಂದೆ ಹೇಳಿದಪ್ರಕಾರ ಸ್ವನಿರ್ವಾಹಕತ್ವವನ್ನು ನಿರ್ವಚನ ಮಾಡಲಿಕ್ಕೆ ಶಕ್ಯವಾಗುವುದಿಲ್ಲ. (3) ಹಾಗಾದರೆ, ಸತ್ಯಜ್ಞಾನಾದಿಗಳಿಗೆ ಪರಸ್ಪರವಾಗಿಯೂ ಬ್ರಹ್ಮನಿಂದಲೂ ಅತ್ಯಂತವಾಗಿ ಅಭೇದವೇ. ಅಷ್ಟರಿಂದ ಸತ್ಯಜ್ಞಾನಾದಿಪದಗಳಿಗೆ ಪರ್ಯಾಯತ್ವವಿಲ್ಲವು. ಏಕೆಂದರೆ- ವಾಚ್ಯಾರ್ಥಗಳಿಗೆ ಭೇದವಿದೆ. ಸಾಮಾನ್ಯವಾಗಿ ಪರಾಪರಜಾತಿಯನ್ನು ಹೇಳುವ ಅಥವಾ ಸಗುಣ ಬ್ರಹ್ಮನನ್ನು ಹೇಳುವ ಸತ್ಯಜ್ಞಾನಾದಿ ಪದಗಳಿಗೆ ಪರಬ್ರಹ್ಮನಲ್ಲಿ

ಲಕ್ಷಣಯಾ ಪ್ರವೃತ್ತಿಯಿಂದಂಗೀಕರಿಸುವೆವು. ಸತ್ಯಪದದಿಂದ ಲಕ್ಷಿತವಾದುದನ್ನೇ (ಹೇಳಲ್ಪಟ್ಟ ಚಿತ್ಸ್ವರೂಪವನ್ನೇ) ಜ್ಞಾನಪದದಿಂದ ತಿಳಿಸುವುದಾದರೆ ವೈಯರ್ಥ್ಯವು. ಅಧಿಕಲಕ್ಷಣಾ ಎಂದು ಇಟ್ಟುಕೊಂಡರೆ (ಸತ್ಯಪದದಿಂದ ತಿಳಿಸದೆ ಇದ್ದದ್ದನ್ನು ಜ್ಞಾನಪದವು ತಿಳಿಸುವುದಾದರೆ) ಅಖಂಡಾರ್ಥತ್ವವು ಸಿದ್ಧಿಸುವುದಿಲ್ಲ, ಎಂದು ಹೇಳಕೂಡದು. ಲಕ್ಷ್ಯಾರ್ಥಕ್ಕೆ ಭೇದವಿಲ್ಲ ದಿದ್ದರೂ ಆರೋಪಿತ ಅಸತ್ಯತ್ವಾದಿ ವ್ಯಾವೃತ್ತಿರೂಪಪ್ರಯೋಜನವಿರುವುದರಿಂದ ಬ್ರಹ್ಮನು ಅಸತ್ಯನಲ್ಲ, ಅಜ್ಞಾನನಲ್ಲ, ಪರಿಚ್ಛಿನ್ನನಲ್ಲ, ಇದುಮೊದಲಾದ ಅರ್ಥಗಳಿದ್ದಪ್ರಯುಕ್ತ ಪದಾಂತರಗಳಿಗೆ ವೈಯರ್ಥ್ಯವಿಲ್ಲವೆಂದರೆ— ಹೀಗೆ ಹೇಳಕೂಡದು. ೧ ಬ್ರಹ್ಮನಲ್ಲಿ ವಿಶೇಷಣ ವಾಗಿ ಅಸತ್ಯತ್ವಾದಿಗಳಿಂದ ವ್ಯಾವೃತ್ತಿಜ್ಞಾನವು ಪ್ರಯೋಜನವೆಂದು ಹೇಳಲ್ಪಡುತ್ತದೋ? ೨ ಅಥವಾ ಸ್ವತಂತ್ರವಾಗಿಯೇ ಪ್ರಯೋಜನವೆಂದು ಹೇಳಲ್ಪಡುತ್ತದೋ, ೧ನೇ ಕಲ್ಪದಲ್ಲಿಯೂ ೨ನೇ ಕಲ್ಪದಲ್ಲಿಯೂ ದೋಷವನ್ನು 'ನ ವ್ಯಾವೃತ್ತ್ಯಾ' ಎನ್ನುವುದರಿಂದ ಹೇಳಿದರು. (4) ಮತ್ತು ಬ್ರಹ್ಮನು ನಿರ್ವಿಶೇಷನು ಎನ್ನುವ ಮಾತು 'ಮೂಕೋಽಹಂ' ಎನ್ನುವ ಮಾತಿನಂತೆ, ಸ್ವಕ್ರಿಯಾ ವಿರುದ್ಧವು. ಹೇಗೆಂದರೆ— ಇದರಿಂದ ವಕ್ತೃತ್ವಾಭಾವವು ಹೇಳಲ್ಪಡುತ್ತದೆ. ವಚನಕ್ರಿಯೆ ಯಿಂದ ವಕ್ತೃತ್ವವು ಸಿದ್ಧವಾಗುತ್ತದೆ. ಹಾಗೆಯೇ 'ಬ್ರಹ್ಮನು ನಿರ್ವಿಶೇಷನು ಎನ್ನುವ ವಚನವೂ ಕೂಡ ಸ್ವಕ್ರಿಯಾವಿರುದ್ಧವು ಆಗುವುದು. ಹೇಗೆಂದರೆ ನಿರ್ವಿಶೇಷತ್ವರೂಪವಾದ ವಿಶೇಷಣವು ಬ್ರಹ್ಮನಲ್ಲಿ ಬರುವುದು. 'ನಿರ್ವಿಶೇಷಂ ಬ್ರಹ್ಮ' ಎನ್ನುವ ವಾಕ್ಯದಿಂದ ವಿಶೇಷಾಭಾವವು ಪ್ರತಿಪಾದಿಸಲಿಕ್ಕೆ ಇಷ್ಟವಾಗಿದೆ. ವಿಶೇಷಾಭಾವಪ್ರತಿಪಾದನರೂಪ ಕ್ರಿಯೆಯಿಂದ ವಿಶೇಷಾ ಭಾವರೂಪವಾದ ವಿಶೇಷವು ಪ್ರಾಪ್ತವಾಗುವುದು. ವಿಶೇಷವಿಲ್ಲವೆನ್ನುವ ವಿಶೇಷವೂ ಕೂಡ 'ನಿರ್ವಿಶೇಷಂ' ಎನ್ನುವುದರಿಂದ ನಿರಾಕರಿಸಲ್ಪಡುವುದರಿಂದ ಸ್ವಕ್ರಿಯಾವಿರೋಧವು ಹೇಗೆಂದರ- ಹಾಗಾದರೆ 'ನಾನು ಮೂಕನು' ಎನ್ನುವುದರಿಂದ ಈ ವಚನಕರ್ತೃತ್ವವು ನಿರಾಕರಿಸ ಲ್ಪಡುತ್ತದೆ, ಎಂದು ಹೇಳಬಹುದಾದುದರಿಂದ ಅಲ್ಲಿಯೂ ಸ್ವಕ್ರಿಯಾವಿರೋಧವು ಇಲ್ಲವೆಂದಾಗ ಬೇಕಾಗುವುದು ॥ ೧೦೭ ॥

**ಮೂ ॥ ಅಭಿನ್ನೇಽಪಿ ವಿಶೇಷೋಽಯಂ ಬಲಾದಾಪತತಿ ಹ್ಯತಃ ॥ ೧೦೮ ॥**

ಅ ॥ ಅತಃ ಬಲಾತ್=ಹಿಂದೆ ಹೇಳಿದಪ್ರಕಾರ ಮಹಾವಾಕ್ಯ ಅವಾಂತರವಾಕ್ಯಗಳಲ್ಲಿ ವಿಶೇಷವನ್ನು ಒಪ್ಪದಿದ್ದರೆ ಅನುಪಪತ್ತಿಯು ಬರುವುದರಿಂದ, ಅಭಿನ್ನೇಽಪಿ=ಭೇದರಹಿತನಾದ ಬ್ರಹ್ಮನಲ್ಲಿಯೂ, ಅಯಂ=ಅನುಪಪತ್ತಿಯ ಶಾಂತಿಗೆ ಕಾರಣವಾದ, ವಿಶೇಷಃ=ಶಕ್ತಿವಿಶೇಷವು, ಆಪತತಿ=ಅಂಗೀಕರಣೀಯವಾಗಿ ಪ್ರಾಪ್ತವಾಗುವುದು.

ತಾ ॥ ನ್ಯಾಯಸುಧಾ— ಮಹಾವಾಕ್ಯಪ್ರತಿಪಾದ್ಯವಾದ ಐಕ್ಯವೂ ಅವಾಂತರವಾಕ್ಯ ಪ್ರತಿಪಾದ್ಯಗಳಾದ ಸತ್ಯತ್ವಾದಿಗಳೂ ಬ್ರಹ್ಮನಿಂದಲೂ ಪರಸ್ಪರವಾಗಿಯೂ ಅಭಿನ್ನಗಳೇ. ಏಕೆಂದರೆ- 'ಏಕಧೈವಾನು ದ್ರಷ್ಟವ್ಯಂ' ಇದುಮೊದಲಾದ ಶ್ರುತಿಗಳು ಏಕರಸತ್ವವನ್ನು (ಧರ್ಮಾದಿ ಗಳಿಂದ ಅಭೇದವನ್ನೇ) ಪ್ರತಿಪಾದಿಸುತ್ತವೆ. ಹೀಗೆ ಅಂಗೀಕರಿಸಿದರೆ ಅಭೇದಪಕ್ಷದಲ್ಲಿ ಹೇಳಿದ ದೋಷಗಳು ಬರುವುದಿಲ್ಲ. ಏಕೆಂದರೆ- ಭೇದವಿಲ್ಲದಿದ್ದಾಗ್ಯೂ ವಸ್ತುವಿನಲ್ಲಿ ಭೇದಕಾರ್ಯಕಾರಿ ಯಾದ ಒಂದು ಶಕ್ತಿವಿಶೇಷವು ಇರುತ್ತದೆ. ಈ ವಿಶೇಷವು ಅಭೇದ ಭೇದಕಾರ್ಯಪ್ರತೀತಿ ಈ ಉಭಯಾನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯಿಂದಲೇ ಅವಗತವಾಗುತ್ತದೆ, ಎಂದೇ ನೀವು ಹೇಳಬೇಕು ॥ ೧೦೮ ॥

ವಿಶೇಷವನ್ನು ಅಂಗೀಕರಿಸಿದರೂ ಅನುಪಪತ್ತಿಯು ಪರಿಹೃತವಾಗುವುದಿಲ್ಲ. ಹೇಗೆಂದರೆ, ಆ ವಿಶೇಷವೂ ವಸ್ತುವಿನಿಂದ ಭಿನ್ನವಾದರೆ ಭೇದಪರಂಪರೆಯಿಂದ ಅನವಸ್ಥಾದಿ ದೋಷವು ಬರುವುದು ಅಭಿನ್ನವಾದರೆ ವಿಶೇಷ, ವಿಶೇಷವುಳ್ಳದ್ದು ಎನ್ನುವುದೇ ಕೂಡಲಾರದು. ಎಂದರೆ—

ವ್ಯಾ ॥ ವಿಶೇಷತದ್ವತೋಶ್ಚೈವ ಸ್ವನಿರ್ವಾಹಕತಾ ಭವೇತ್ ।
ಭೇದಹೀನೇ ತ್ವಪರ್ಯಾಯ ಶಬ್ದಾಂತರನಿಯಾಮಕಃ ॥
ವಿಶೇಷೋ ನಾಮ ಕಥಿತಃ ಸೋಽಸ್ತಿ ವಸ್ತುಷ್ವಶೇಷತಃ ॥ ೧೦೯ ॥

ಅ ॥ ವಿಶೇಷತದ್ವತೋಶ್ಚೈವ=ವಿಶೇಷ ವಿಶೇಷಿಗಳಿಗೆ, (ಅಭೇದವನ್ನೇ ಅಂಗೀಕರಿಸಬೇಕು. ವಿಶೇಷಬಲದಿಂದಲೇ ವಿಶೇಷ ವಿಶೇಷಿಭಾವವೂ ಯುಕ್ತವಾಗುತ್ತದೆ. ಆದಾಗ್ಯೂ ವಿಶೇಷಪರಂಪರೆಯಿಂದ ಅನವಸ್ಥಾದೋಷವು ಬರುವುದು ಎಂದರೆ—) ಸ್ವನಿರ್ವಾಹಕತಾ=ಸ್ವನಿರ್ವಾಹಕತ್ವವು, ಭವೇತ್=ಆಗುವುದು. (ಅಂದರೆ, ಆ ವಿಶೇಷವೇ ವಿಶೇಷಾಂತರವನ್ನು ಹೊರತೇ ವಿಶೇಷವಿಶೇಷಿಭಾವವನ್ನೂ ಕೂಡಿಸುತ್ತದೆ. ಅದರ ಸಾಮರ್ಥ್ಯದಿಂದಲೇ ಒಂದಕ್ಕೇನೇ ನಿರ್ವಾಹ್ಯತ್ವವೂ ನಿರ್ವಾಹಕತ್ವವೂ ಸಿದ್ಧಿಸುತ್ತದೆಂದು ಅಂಗೀಕರಿಸಬೇಕು. ಹಾಗಾದರೆ, ಅಭಿನ್ನವಾದ ವಸ್ತುವಿನಲ್ಲಿ ವಿಶೇಷಕ್ಕೆ ಭೇದಕಾರ್ಯನಿರ್ವಾಹಕತ್ವವು ಯಾವಪ್ರಮಾಣದಿಂದ ಸಿದ್ಧವಾಗಿಯದೆ ಎಂದರೆ) ಭೇದಹೀನೇ ತು = ಭೇದವಿಲ್ಲದಿರುವುದರಲ್ಲಿಯೇ, ಅಪರ್ಯಾಯಶಬ್ದಾಂತರನಿಯಾಮಕಃ= ಏಕಾರ್ಥಪ್ರತಿಪಾದಕವಲ್ಲದಿರುವ ಶಬ್ದಾಂತರಗಳಿಗೆ ನಿಯಾಮಕವಾದ ಅಂದರೆ, ಸಮಸ್ತಭೇದಕಾರ್ಯಗಳನ್ನೂ ನಿರ್ವಾಹಮಾಡುವ, ವಿಶೇಷೋ ನಾಮ=ವಿಶೇಷವೆನ್ನುವುದು, ಕಥಿತಃ= ಹೇಳಲ್ಪಟ್ಟದೆ. (ಹೀಗೆ ಅದ್ವೈತವಾದಿಗಳಿಂದ ವಿಶೇಷವನ್ನು ಅಂಗೀಕಾರಮಾಡಿಸಿ ಇತರರಿಂದಲೂ ಅಂಗೀಕಾರಮಾಡಿಸುತ್ತಾರೆ.) ಸಃ=ಅದು,ಆ ವಿಶೇಷವು,(ಅಂದರೆ, ಮಾಯಾವಾದಿಯಿಂದ ಮಾತ್ರ ಬ್ರಹ್ಮನಲ್ಲಿ ವಿಶೇಷವು ಅಂಗೀಕರಿಸಲಿಕ್ಕೆ ಯೋಗ್ಯವೆಂತಲ್ಲ. ಮತ್ತೆ ಪ್ರಪಂಚಕ್ಕೆ ಸತ್ಯತ್ವವಾದಗಳಿಂದೆಲ್ಲರಿಂದಲೂ) ಅಶೇಷತಃ ವಸ್ತುಷು=ಎಲ್ಲಾ ದ್ರವ್ಯಗಳಲ್ಲಿಯೂ, ಅಸ್ತಿ=ಇದೆ. ಅಂದರೆ ಅಂಗೀಕರಿಸಬೇಕಾದುದು.

ತಾ ॥ ನ್ಯಾಯಸುಧಾ— (1) 'ಏಕಧೈವ' ಇತ್ಯಾದಿ ಶ್ರುತಿಗಳಿಂದ ಜೀವಬ್ರಹ್ಮೈಕ್ಯಾದಿಗಳಿಗೆ ಚೈತನ್ಯಸ್ವರೂಪಮಾತ್ರತ್ವವು ತೋರುತ್ತದೆ, ಚೈತನ್ಯವು ಒಂದು. ಸತ್ಯತ್ವಾದಿಗಳು ಅನೇಕಗಳು. ಹೀಗೆ ಸಂಖ್ಯೆಯಲ್ಲಿ ವೈಲಕ್ಷಣ್ಯವು ಇತ್ಯಾದಿ ಭೇದಕಾರ್ಯಗಳೂ ತಿಳಿಯಲ್ಪಡುತ್ತವೆ. ಈ ಎರಡರ ಅನ್ಯಥಾನುಪಪತ್ತಿಯಿಂದ ಭೇದರಹಿತವಾದ ಚೈತನ್ಯದಲ್ಲಿಯೂ ಭೇದಪ್ರತಿನಿಧಿಯಾದ ಭೇದಕಾರ್ಯವನ್ನು ಮಾಡುವ ಯಾವುದೋ ಒಂದು ಅತಿಶಯವದೆ ಎಂದು ಕಲ್ಪಿಸಲ್ಪಡುತ್ತದೆ. ತಥಾಚ ಸ್ವರೂಪಗ್ರಾಹಿಯಾದ ಅರ್ಥಾಪತ್ತಿಯಿಂದ ಈ ವಿಶೇಷವು ಭೇದಕಾರ್ಯವನ್ನು ನಿರ್ವಾಹಮಾಡುವುದೆಂದೇ ಸಿದ್ಧವಾಗುವುದು. ಪ್ರಮಾಣಾಂತರವನ್ನು ಅನ್ವೇಷಣಮಾಡಬೇಕಾಗಿಲ್ಲ. ಇದರಿಂದಲೇ ವಿಶೇಷಕ್ಕೆ ಲಕ್ಷಣವೂ ಉಕ್ತವಾಯಿತು. 'ಭೇದಹೀನೇಽಪಿ ಅನುಪಚರಿತಭೇದವ್ಯವಹಾರ ನಿಮಿತ್ತಂ' ಅಂದರೆ, ಭೇದವಿಲ್ಲದಿದ್ದರೂ ಮುಖ್ಯವಾಗಿ ಭೇದವ್ಯವಹಾರಕ್ಕೆ ಕಾರಣವಾದದ್ದು ವಿಶೇಷವು. ಗುಣಗುಣಿಗಳಿಗೆ ಭೇದವನ್ನು ಇಟ್ಟುಕೊಂಡರೆ ಅನವಸ್ಥಾದಿದೋಷಗಳು ಬರುವುದರಿಂದ ಪ್ರತ್ಯಕ್ಷವಾಗಿಯೇ ಪಟಶೌಕ್ಲ್ಯಗಳಿಗೆ ಅಭೇದವು ಸಿದ್ಧವಾಗಿದೆ. ಭೇದಕಾರ್ಯಗಳೂ ಕಾಣಲ್ಪಡುತ್ತವೆ. ಆದಕಾರಣ ವಿಶೇಷಬಲದಿಂದಲೇ ಗುಣಗುಣಿಭಾವವು ಸಿದ್ಧಿಸುತ್ತದೆ. ಉದಾ—ಉತ್ಪಲವು ನೀಲವು, ಪಟದ ಶೌಕ್ಲ್ಯವು, ಇತ್ಯಾದಿಗಳು. (2) ಕೇವಲವಾಗಿ ಬ್ರಹ್ಮನಲ್ಲಿ

ಮಾಯಾವಾದಿಯು ವಿಶೇಷವನ್ನು ಅಂಗೀಕರಿಸಬೇಕೆಂದಲ್ಲ. ಮತ್ತೆ ಪ್ರಪಂಚಕ್ಕೆ ಸತ್ಯತ್ವವನ್ನು ಒಡಂಬಡತಕ್ಕವರೆಲ್ಲರೂ ಎಲ್ಲಾ ದ್ರವ್ಯಗಳಲ್ಲಿಯೂ ಆ ವಿಶೇಷವನ್ನು ಅಂಗೀಕರಿಸಬೇಕು. ಹೇಗೆಂದರೆ, ವಸ್ತ್ರಕ್ಕೂ ವಸ್ತ್ರದ ಬಿಳಿಪಿಗೂ ಭೇದವಿಲ್ಲ. ಹೆಬ್ಬೆಟ್ಟು ತೋರಬೆಟ್ಟುಗಳಂತೆಯೇ ಬೇರೆಬೇರೆಯಾಗಿ ತೋರದಿರುವುದರಿಂದ. ಭೇದವಿದ್ದರೂ ಅಯುತಸಿದ್ಧಗಳಾಗಿರುವುದರಿಂದ ಭೇದ ತೋರುವುದಿಲ್ಲವೆಂದರೆ— ಅಯುತಸಿದ್ಧತ್ವವೆಂದರೆ ಎಂತಹುದು? ಯಾವುದು ಎರಡರಲ್ಲಿ ಒಂದು ವಿನಾಶವನ್ನು ಹೊಂದದಿದ್ದದ್ದಾಗಿ ಮತ್ತೊಂದನ್ನೇ ಆಶ್ರಯಿಸಿಕೊಂಡು ಇರುತ್ತದೋ ಅವುಗಳು ಅಯುತಸಿದ್ಧಗಳು. (ಗುಣಾದಿಗಳು ಗುಣಿಯನ್ನು ಬಿಟ್ಟು ಇರುವುದಿಲ್ಲ) ಅಂದರೆ, ಅವಶ್ಯವಾಗಿ ಆಶ್ರಯಾಶ್ರಯಿಭಾವದಿಂದ ಇರುವುದು, ಎಂದರೆ— ಈ ಅಯುತಸಿದ್ಧತ್ವವು ಭೇದ ತೋರಲಿಕ್ಕೆ ಅನುಕೂಲವೇ ಆಗಿದೆ. ಆದುದರಿಂದ ಇಂತಹ ಅಯುತಸಿದ್ಧತ್ವವು ಭೇದ ತೋರಲಿಕ್ಕೆ ಪ್ರತಿಕೂಲವಲ್ಲ. (3) ಆ ಅಯುತಸಿದ್ಧತ್ವವು ಅಸಿದ್ಧವೂ ಆಗಿದೆ. ಹೇಗೆಂದರೆ— ಕುಂಡದಂತೆಯೇ ಪಟವು ಅಧಿಕರಣವಾಗಿಯೂ ಬದರದಂತೆಯೇ ಬಿಳಿಪು ಆಧೇಯವಾಗಿಯೂ ತೋರುವುದಿಲ್ಲ. ಮತ್ತೆ ವಸ್ತ್ರವೇ ಬಿಳಿಪು ಎಂದು ತೋರುತ್ತದೆ. ಬಾಧಕವಿಲ್ಲದಿರುವುದರಿಂದ ಈ ಪ್ರತೀತಿಯು ಭ್ರಾಂತಿಯಲ್ಲ. (4) ಬಿಳಿಪಿಗೂ ವಸ್ತ್ರಕ್ಕೂ ಭೇದವನ್ನು ವಿಷಯೀಕರಿಸ ತಕ್ಕ ಬಾಧಕವಾದ ಪ್ರತ್ಯಕ್ಷಪ್ರತೀತಿಯೇ ಇಲ್ಲ. (5) ವಿರುದ್ಧಧರ್ಮಾಧಿಕರಣತ್ವ ರೂಪ ಅನುಮಾನವಾಗಲೀ, ಅರ್ಥಾಪತ್ತಿಯಾಗಲೀ, ವೈಶೇಷಿಕಸಮಯರೂಪ ಆಗಮವಾಗಲೀ ಪಟಶೌಕ್ಲ್ಯಗಳಿಗೆ ಭೇದವದೆ ಎನ್ನುವಲ್ಲಿ ಪ್ರಮಾಣವು ಎಂದರೆ— ಅವುಗಳು ಅಭೇದಪ್ರತ್ಯಕ್ಷ ದಿಂದ ದುರ್ಬಲಗಳಾಗಿರುವುದರಿಂದ ಅದಕ್ಕೆ ಬಾಧಕವಾಗಲಾರವು. ಆದಕಾರಣ ಪಟಶೌಕ್ಲ್ಯ ಗಳಿಗೆ ಅಭೇದವು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ. ಇಲ್ಲಿ ಭೇದಕಾರ್ಯಗಳೂ ತೋರುತ್ತವೆ. ೧ ಪಟಬುದ್ಧಿಗೂ ಶೌಕ್ಲ್ಯಬುದ್ಧಿಗೂ ಅನ್ಯೂನ ಅನತಿರಿಕ್ತವಿಷಯತ್ವವಿಲ್ಲದಿರುವುದು (ಅಂದರೆ ಸಮಾನವಿಷಯತ್ವವಿಲ್ಲದಿರುವುದು ಪಟ ಎನ್ನುವ ಬುದ್ಧಿಯಲ್ಲಿ ತೋರುವ ಪಟವು, ಹಾಲು ಬಿಳಿಪು ಎನ್ನುವ ಶೌಕ್ಲ್ಯಬುದ್ಧಿಯಲ್ಲಿ ತೋರುವುದಿಲ್ಲ. ಈ ಶೌಕ್ಲ್ಯಬುದ್ಧಿಯಲ್ಲಿ ತೋರುವುದು ಶೌಕ್ಲ್ಯವು 'ಪಟಃ' ಎನ್ನುವ ಈ ಬುದ್ಧಿಯಲ್ಲಿ ತೋರುವುದಿಲ್ಲ. (೨) ಪಟಶೌಕ್ಲ್ಯ ಶಬ್ದಗಳಿಗೆ ಪರ್ಯಾಯತ್ವ ವಿಲ್ಲದಿರುವುದೂ, (೩) ಅಪರ್ಯಾಯಶಬ್ದ ಸ್ಮಾರಕತ್ವವೂ, ಶೀತನಿವಾರಣವೊದಲಾದ ಅರ್ಥ ಕ್ರಿಯಾಭೇದವೂ, (೫) ಪಟಮಾನಯ=ವಸ್ತ್ರವನ್ನು ತೆಗೆದುಕೊಂಡುಬಾ ಎಂದು ಹೇಳಿದಾಗ ಯಾವುದಾದರೊಂದು ಶುಕ್ಲ (ಬಿಳಿಪು) ವನ್ನು (ಹಾಲುವೊದಲಾದುದನ್ನು) ತಾರದಿರುವುದೂ, (೬) ಶುಕ್ಲಮಾನಯ=ಬಿಳಿಪನ್ನು ತಾ ಎಂದು ಹೇಳಿದಾಗ ಪಟವನ್ನೇ ನಿಯಮದಿಂದ ತಾರದಿರು ವುದೂ, (೭) 'ಅಪಟಃ ಪಟಃ' ವಸ್ತ್ರವು ವಸ್ತ್ರವಲ್ಲ ಎನ್ನುವಲ್ಲಿ ವಿರೋಧವಿದ್ದಂತೆ ಅಶುಕ್ಲಃ ಪಟಃ= ಎನ್ನುವುದಕ್ಕೆ ವಿರೋಧವಿಲ್ಲದಿರುವುದೂ, (೮) ಕುರುಡನಿಗೂ ಇದು ವಸ್ತ್ರವು ಎನ್ನುವ ಜ್ಞಾನ ಬಂದಹಾಗೆ ಇದು ಬಿಳಿಪು ಎನ್ನುವ ಪ್ರತೀತಿಯು ಬಾರದಿರುವುದೂ, (೯) ಬಿಳಿಪು ಎನ್ನುವ ಜ್ಞಾನ ಬಾರದೆ ಇದ್ದಹಾಗೆ ಪಟಾಪ್ರತಿಪತ್ತಿಯು ಇಲ್ಲದಿರುವುದೂ, (೧೦) ಮಹಾರಜನದಿಂದ (ಕಾವಿ ಯಿಂದ) ಬಿಳಿಪು ಮುಚ್ಚಿಹೋದಹಾಗೆ ವಸ್ತ್ರವೂ ಮುಚ್ಚಿಹೋಗದಿರುವುದೂ, (೧೧) ಪಟದಂತೆ ಶೌಕ್ಲ್ಯಕ್ಕೂ ಅನಾವೃತತ್ವ ಇಲ್ಲದಿರುವುದೂ, ಇದುವೊದಲಾದ ಭೇದಕಾರ್ಯಗಳು. ಇವುಗಳು ಬಾಧಿತಗಳೆಂದು ಅಭಿಮಾನ ಇಲ್ಲದಿರುವುದರಿಂದಲೂ, ವ್ಯವಹಾರಾದಿಗಳಿಂದ ವಿಸಂವಾದ ವಿಲ್ಲದಿರುವುದರಿಂದಲೂ ಈ ಪ್ರತೀತಿಯು ಭ್ರಾಂತಿಯಲ್ಲ. (6) ಆದಕಾರಣ ಈ ಅಭೇದ ಭೇದ ಕಾರ್ಯಪ್ರತೀತಿಗಳು ಬೇರೆ ರೀತಿಯಾಗಿ ಕೂಡದಿರುವುದರಿಂದ ಶೌಕ್ಲ್ಯದಿಂದ ಭೇದವಿಲ್ಲದಿರುವ ಪಟದಲ್ಲಿಯೂ ಯಾವುದರಿಂದ ಈ ಭೇದಕಾರ್ಯಗಳೆಲ್ಲವೂ ಯುಕ್ತವಾಗುವುವೋ ಅಂತಹ

ಯಾವುದೋ ಒಂದು ಭೇದಪ್ರತಿನಿಧಿಯಾದ ಅತಿಶಯುವನ್ನು ಕಲ್ಪಿಸಬೇಕು. ಅಂತಹ ಅತಿಶಯುವು ಅಭಿನ್ನವಾದ ವಸ್ತುವಿನಲ್ಲಿಯೂ ಭೇದಕಾರ್ಯರೂಪ ವಿಶೇಷವನ್ನುಂಟುಮಾಡುವುದರಿಂದ ವಿಶೇಷವೆಂದು ಹೇಳಲ್ಪಡುತ್ತದೆ. ಹೀಗೆಯೇ ಬೇರೆ ದ್ರವ್ಯಗಳಲ್ಲಿಯೂ ವಿಶೇಷವನ್ನು ಅಂಗೀಕರಿಸ ತಕ್ಕದ್ದು. (7) ಹಾಗಾದರೆ, ಭೇದಾಭೇದಗಳನ್ನು ಅಂಗೀಕರಿಸಿದರೆ ಅನುಪಪತ್ತಿಯು ಬಾರದಿರು ವುದರಿಂದ ವಿಶೇಷವನ್ನು ಏಕೆ ಒಡಂಬಡುವುದೆಂದು ಹೇಳಕೂಡದು. ಪರಸ್ಪರ ವಿರುದ್ಧಗಳಾದ ಭೇದಾಭೇದಗಳಿಗೆ ಒಂದು ಕಡೆಯಲ್ಲಿ ಇರುವಿಕೆಯನ್ನು ಕೂಡಿಸಲಿಕ್ಕೂ ವಿಶೇಷವನ್ನು ಅಂಗೀ ಕರಿಸಲೇಬೇಕು (8) ಪ್ರತೀತವಾಗಿರುವುದರಿಂದ ವಿರೋಧವಿಲ್ಲವೆಂದು ಹೇಳಿದರೂ ಪ್ರತೀತಿ ಯನ್ನು ಕೂಡಿಸಬೇಕಾದರೂ ವಸ್ತುಸ್ವಭಾವಾತಿಶಯುವನ್ನೇ ಅನುಸರಿಸಬೇಕಾಗಿದೆ. ಭೇದಾಭೇದಾ ನವಸ್ಥಾಪರಿಹಾರಕ್ಕಾಗಿಯೂ ವಿಶೇಷವನ್ನು ಆವಶ್ಯವಾಗಿಯೂ ಅಂಗೀಕರಿಸಲೇಬೇಕು ॥ ೧೯ ॥

ಹಾಗಾದರೆ ಸರ್ವವಸ್ತುಗಳಲ್ಲಿಯೂ ವಿಶೇಷವುಂಟೆಂದಾದರೆ ಅದು ವಸ್ತುಗಳಿಂದ ಬೇರೆ ಯಾಗದಿದ್ದರೆ ಘಟಾದಿಗಳಿಂದ ಅಭಿನ್ನವಾದ ವಿಶೇಷದಿಂದ ಅಭಿನ್ನವಾಗಿರುವಪ್ರಯುಕ್ತ, 'ಯಃ ಯದಭಿನ್ನಧರ್ಮಾಭಿನ್ನಃ ಸಃ ತದಭಿನ್ನಃ' ಎನ್ನುವ ನ್ಯಾಯದಿಂದ ಸಕಲವಸ್ತುಗಳಿಗೂ ಐಕ್ಯವು ಪ್ರಾಪ್ತವಾಗುವುದು, ಎಂದರೆ—

ಮೂ ॥ ವಿಶೇಷಾಸ್ತೇಽಪ್ಯನಂತಾಶ್ಚ ಪರಸ್ಪರವಿಶೇಷಿಣಃ ।
ಸ್ವನಿರ್ವಾಹಕತಾ ಯುಕ್ತಾಃ ಸಂತಿ ವಸ್ತುಷ್ವಶೇಷತಃ ॥ ೧೧ ॥

ಅ ॥ ತೇ ವಿಶೇಷಾಃ = ಪ್ರಕೃತ ಸ್ವರೂಪವುಳ್ಳ ವಿಶೇಷಗಳು, ಅಶೇಷತಃ ವಸ್ತುಷು= ಅನಂತ ದ್ರವ್ಯಗಳಲ್ಲಿ, ಅನಂತಾಶ್ಚ=ಅನಂತಗಳಾಗಿಯೇ, ಸಂತಿ=ಇವೆ. (ಒಂದೇ ವಿಶೇಷವು ಎಲ್ಲಾ ಕಡೆಗಳಲ್ಲಿರತಕ್ಕುದಲ್ಲ. ಆದಕಾರಣ ಸರ್ವಪದಾರ್ಥಗಳಿಗೆ ಐಕ್ಯವು ಬರಬೇಕಾಗುವು ದೆನ್ನುವ ಹಿಂದೆ ಹೇಳಿದ ದೋಷವಿಲ್ಲ. 'ಸೋಽಸ್ತಿ' ಎನ್ನುವ ಏಕವಚನವಾದರೂ ಸಮುದಾಯ ವನ್ನು ಅಪೇಕ್ಷಿಸಿ ಪ್ರಯುಕ್ತವಾಯಿತು.) (ಹಾಗಾದರೆ ಒಂದೊಂದು ದ್ರವ್ಯದಲ್ಲಿ ಒಂದೊಂದು ವಿಶೇಷವಿರುವುದಾದರೆ ಆಗ 'ಪಟಃ ಮಹಾನ್ ಶುಕ್ಲಃ ಚಲತಿ'=ವಸ್ತ್ರವು ದೊಡ್ಡದು, ಬಿಳಿಪು, ಹಂದಾಡುತ್ತದೆ, ಹೀಗೆ ವಿಚಿತ್ರಗಳಾದ ಅನೇಕ ವ್ಯವಹಾರಗಳು ಕೂಡಲಾರವು. ವಿಚಿತ್ರಸ್ವಭಾವ ವಿಲ್ಲದಿರುವ ಬಿಂದರಿಂದ ವಿಚಿತ್ರಗಳಾದ ಅನೇಕ ಕಾರ್ಯಗಳ ಉತ್ಪತ್ತಿಯು ಕಾಣಲ್ಪಡಲಾರದು. ಅಂತೂ ವಿಶೇಷವನ್ನು ಅಂಗೀಕರಿಸಿದ್ದು ವ್ಯರ್ಥವು, ಎಂದರೆ—) ತೇಽಪಿ ವಿಶೇಷಾಃ=ಹಿಂದೆ ಹೇಳಿದ ಲಕ್ಷಣಗಳುಳ್ಳ ವಿಶೇಷಗಳು, ಅಶೇಷತೋಽಪಿ ವಸ್ತುಷು=ಎಲ್ಲಾ ವಸ್ತುಗಳಲ್ಲಿಯೂ, ಅನಂತಾಃ ಸಂತಿ=ಪ್ರತ್ಯೇಕವಾಗಿ ಅನಂತಗಳು ಇರುತ್ತವೆ. (ಆದಕಾರಣ ಹಿಂದಿನ ದೋಷಗಳಿಗೆ ಅವಕಾಶವಿರುವುದಿಲ್ಲ. ತಥಾಚ ಎಲ್ಲಿ ಎಷ್ಟು ವ್ಯವಹಾರಗಳು ಇರುತ್ತವೋ ಅಲ್ಲಿ ಅಷ್ಟು ವಿಶೇಷ ಗಳು ಇವೆ ಎಂದು ತಿಳಿಯತಕ್ಕದ್ದು.) (ಪ್ರತಿದ್ರವ್ಯದಲ್ಲಿ ವಿಶೇಷಗಳು ಅನೇಕಗಳಿದ್ದರೆ ವಿಶೇಷ ಗಳಿಗೆ ಪರಸ್ಪರವಾಗಿ ಭೇದವೂ ಆವಶ್ಯಕವು. ಅನೇಕತ್ವವಿದ್ದಲ್ಲಿ ಭೇದವು ಆವಶ್ಯಕವಷ್ಟೆ! ತಥಾಚ ಭಿನ್ನಗಳಿಗೆ ದ್ರವ್ಯದಿಂದ ಅಭೇದವಿದ್ದರೆ ದ್ರವ್ಯಕ್ಕೂ ಭೇದವು ಬರಬೇಕಾಗುವುದು. ಎಂದರೆ) ಪರಸ್ಪರವಿಶೇಷಿಣಃ=ಪರಸ್ಪರವಾಗಿ ವಿಶೇಷವುಳ್ಳವುಗಳು. (ಅಂದರೆ ಪರಸ್ಪರವಾಗಿ ವಿಶೇಷಣ ವಿಶೇಷ್ಯಭಾವದಿಂದ ತೋರತಕ್ಕವುಗಳು. ಪರಸ್ಪರವಾಗಿ ವಿಶೇಷವಿದ್ದುದರಿಂದಲೇ ಅನೇಕತ್ವವು ಕೂಡುತ್ತದೆ. ವಿಶೇಷವು ಭೇದಕಾರ್ಯಕಾರಿಯಾಗಿದೆ.) (ವಿಶೇಷಗಳಿಗೂ ವಿಶೇಷಾಂತರವನ್ನು ಅಂಗೀಕರಿಸಿದರೆ ಅನವಸ್ಥಾದೋಷವು ಬರುವುದು) ಎಂದರೆ, ಆ ವಿಶೇಷಗಳು ಸ್ವನಿರ್ವಾಹಕತ್ವ ದಿಂದ ಕೂಡಿರುತ್ತವೆ. (ಪೂರ್ವದಲ್ಲಿ ವಿಶೇಷಕ್ಕೆ ದ್ರವ್ಯದಿಂದ ಅಭೇದವೆಂದು ಹೇಳಿದ್ದು. ಈಗ ಪರಸ್ಪರವಾಗಿ ಅಭೇದವೆಂದು ಹೇಳಿದ್ದು. ಆದಪ್ರಯುಕ್ತ ಪೌನರುಕ್ತ್ಯವಿರುವುದಿಲ್ಲ)

**ತಾ ॥ ಸ. ರ. ವಿ—** (1) ವಿಶೇಷವಿಶೇಷಿಗಳು ಅಭಿನ್ನಗಳಾದಾಗ್ಯೂ ಅವುಗಳಿಗೆ ವಿಶೇಷಾಂತರವನ್ನು ಒಪ್ಪದಿದ್ದರೂ ಸ್ವನಿರ್ವಾಹಕತ್ವವಿದ್ದುದರಿಂದಲೇ ವಿಶೇಷವಿಶೇಷಿಭಾವವು ಸಂಗತವಾಗುತ್ತದೆ. (2) **ಯಃ ಏಕಸ್ಮಿನ್ನರ್ಥೇ ಭಿನ್ನಪ್ರವೃತ್ತಿನಿಮಿತ್ತಶಬ್ದಾನ್ನಿಯಾಮಯತಿ ಸ ವಿಶೇಷಃ**=ಯಾವುದು ಒಂದೇ ಅರ್ಥದಲ್ಲಿ ಬೇರೆಬೇರೆ ಪ್ರವೃತ್ತಿನಿಮಿತ್ತ ಶಬ್ದಗಳನ್ನು ನಿಯಮಿಸುತ್ತದೋ ಅದು ವಿಶೇಷವು. ಉದಾ—ನೀಲಮುತ್ಪಲಂ=ನೀಲವಾದ ಕೋಳೆ ಹೂವು. ಪಟದ ಬಿಳಿಪು ಇದು ಮೊದಲಾದುದು. ಇಂತಹ ವಿಶೇಷಗಳು ಪ್ರತಿ ದ್ರವ್ಯದಲ್ಲಿಯೂ ಅನಂತಗಳಿವೆ. ಸ್ವನಿರ್ವಾಹಕತ್ವ ಯುಕ್ತಗಳಾಗಿವೆ, ಪರಸ್ಪರವಾಗಿ ವಿಶೇಷಣವಿಶೇಷ್ಯಭಾವದಿಂದ ತೋರತಕ್ಕವುಗಳಾಗಿ ಇವೆ. ಪರಸ್ಪರವಾಗಿ ವಿಶೇಷಣವಿಶೇಷ್ಯಭಾವವು 'ಶುಕ್ಲಃ ಪಟಃ'=ಬಿಳಿಪು ಪಟವು, 'ಪಟಸ್ಯ ಶೌಕ್ಲ್ಯಂ'=ಪಟದ ಬಿಳಿಪು ಇದುಮೊದಲಾಗಿ ತಿಳಿಯತಕ್ಕದು ॥ ೧೧೦ ॥

'ತದ್ವೈಕ್ಯಸ್ಯ ಗತಿರೇವ ನ ವಿದತೇ' ಇತ್ಯಾದಿಗಳಿಂದ ಸರ್ವವಾದಿಗಳೂ ಅವಶ್ಯವಾಗಿ ವಿಶೇಷವನ್ನು ಅಂಗೀಕರಿಸಲೇಬೇಕೆಂದು ಹೇಳಿ ಪ್ರಕೃತ ಆವಶ್ಯಕವಾದ ಅರ್ಥವನ್ನು ನಿರೂಪಿಸುತ್ತಾರೆ —

**ಮೂ ॥ ಅತೋಽನಂತಗುಣಂ ಬ್ರಹ್ಮ ನಿರ್ಭೇದಮಪಿ ಭಣ್ಯತೇ ।**
**ಏವಂ ಧರ್ಮಾನಿತಿ ಶ್ರುತ್ಯಾ ತದಭೇದೋಽಪ್ಯುದೀರ್ಯತೇ ॥೧೧೧॥**

**ಅ ॥** ಅತಃ=ಬೇರೆ ಪಕ್ಷಗಳು ಕೂಡದಿರುವುದರಿಂದ ವಿಶೇಷಬಲದಿಂದಲೇ, ನಿರ್ಭೇದಮಪಿ ಬ್ರಹ್ಮ=ಸ್ವಗತಭೇದರಹಿತನಾದಾಗ್ಯೂ ಪರಬ್ರಹ್ಮನು, ಅನಂತಗುಣಂ=ಸತ್ಯ ಜ್ಞಾನ ಮೊದಲಾದ ಅನಂತಾನಂತಗುಣಗಳುಳ್ಳವನೆಂದು, ಭಣ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. (ಭೇದರಹಿತನಾದಾಗ್ಯೂ ವಿಶೇಷಬಲದಿಂದಲೇ ಗುಣಗಳಿಗೆ ಆನಂತ್ಯವೂ, ಬ್ರಹ್ಮನಿಗೆ ಏಕತ್ವವೂ 'ಅನಂತಾಃ ಗುಣಾಃ ಅಸ್ಯ' ಎಂದು ಗುಣಗುಣ್ಯಾದಿಭಾವವೂ, ಬ್ರಹ್ಮನು, ಗುಣಗಳು ಎನ್ನುವ ಅಪುನರುಕ್ತ ಶಬ್ದವು ಇತ್ಯಾದಿಗಳೆಲ್ಲವೂ ಉಪಪನ್ನಗಳಾಗುತ್ತವೆ. ಅಂತೂ ಜಗಜ್ಜನ್ಮಾದಿ ಕಾರಣತ್ವವು ಸ್ವಲಕ್ಷಣವೆಂದರೆ ಬಾಧಕವಿಲ್ಲದಿರುವುದರಿಂದ ತಟಸ್ಥಲಕ್ಷಣವೆಂದು ಕಲ್ಪಿಸುವುದು ಯುಕ್ತವಲ್ಲವೆಂದು ಸಿದ್ಧವಾಯಿತು.) ಏವಂ ಧರ್ಮಾನಿತಿಶ್ರುತ್ಯಾ='ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ' ಇತ್ಯಾದಿ ಶ್ರುತಿಗಳಿಂದ, ತದಭೇದೋಽಪಿ=ಗುಣಗಳಿಗೆ ಬ್ರಹ್ಮನಿಂದ ಅಭೇದವೂ ವಿಶೇಷವೂ ಕೂಡ, ಉದೀರ್ಯತೇ=ಹೇಳಲ್ಪಡುತ್ತದೆ.

**ತಾ ॥ ಸ. ರ. ವಿ—** (1) ಆದಕಾರಣ ಬೇರೆ ಪಕ್ಷಗಳು ಕೂಡದಿರುವುದರಿಂದ ವಿಶೇಷಬಲದಿಂದಲೇ ಸ್ವಗತಭೇದವಿರಹಿತನಾದಾಗ್ಯೂ ಸತ್ಯಜ್ಞಾನ ಮೊದಲಾದ ಅನಂತಾನಂತಗುಣಗಳುಳ್ಳವನೆಂದು ಶ್ರುತಿಸಮೂಹಗಳಿಂದ ಸಿದ್ಧನಾಗುತ್ತಾನೆ (2) **'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ'** ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗೂ ಆತನ ಗುಣಗಳಿಗೂ ಅಭೇದವೂ ಸಿದ್ಧವಾಯಿತು. ಆದಕಾರಣ ಈ ಪ್ರಕಾರ ಸ್ವಗತಭೇದವಿರಹಿತನಾದ ಶ್ರೀಪರಮಾತ್ಮನಿಗೆ ಸ್ವನಿರ್ವಾಹಕ ವಿಶೇಷಬಲದಿಂದ ಲಕ್ಷ್ಯಲಕ್ಷಣಭಾವವು ಸಿದ್ಧವಾಯಿತು.

**ನ್ಯಾಯಸುಧಾ—** (1) ಇಲ್ಲಿ ಬ್ರಹ್ಮಧರ್ಮಗಳು ಬ್ರಹ್ಮನಿಂದ ಬಿನ್ನಗಳಾಗಿವೆ ಎಂದು ತಿಳಿಯುವವರನ್ನು ನಿಂದಿಸಿರುವುದರಿಂದ ಅಭೇದವು ತಿಳಿದುಬರುತ್ತದೆ. 'ಧರ್ಮಾನ್' ಎಂದು ಧರ್ಮಗಳಿಗೆ ಬಾಹುಲ್ಯವನ್ನು ಹೇಳಿದುದರಿಂದ ವಿಶೇಷವದೆ ಎಂದು ಉಕ್ತವಾಯಿತು. (2) ಹೀಗೆ ಸ್ವಗತ ಭೇದವಿರಹಿತನಾದ ಶ್ರೀ ಹರಿಗೆ ಸ್ವನಿರ್ವಾಹಕವಾದ ವಿಶೇಷದ ಬಲದಿಂದ ಲಕ್ಷ್ಯ,

ಲಕ್ಷಣಭಾವವು ಉಪಪನ್ನವೆಂದು ಸಿದ್ಧವಾಯಿತು. (3) ಆದಪ್ರಯುಕ್ತ ಜಗಜ್ಜನ್ಮಾದಿಕಾರಣತ್ವ, ಅನಂತಗುಣವತ್ವರೂಪಗಳಾದ ಎರಡು ಲಕ್ಷಣಗಳಿಂದ ಯುಕ್ತನಾದ ನಾರಾಯಣಾಖ್ಯ ಬ್ರಹ್ಮನು ಮುಮುಕ್ಷುವಿನಿಂದ ಜಿಜ್ಞಾಸ್ಯನೆಂದು ಸಿದ್ಧವಾಯಿತು ॥ ೧೧೧ ॥

**ಜನ್ಮಾಧಿಕರಣವು ಸಮಾಪ್ತವಾಯಿತು ॥ ಶ್ರೀಃ ॥**



॥ ಶ್ರೀಃ ॥

# ಶಾಸ್ತ್ರಯೋನಿತ್ವಾಧಿಕರಣವು.

**ಸ. ರ. ವಿ.**— ಈಗ ಅನುಮಾನದಿಂದ ರುದ್ರಾದಿಗಳಿಗೂ ಜಗಜ್ಜನ್ಮಾದಿಕಾರಣತ್ವವನ್ನು ಆಶಂಕಿಸಿಕೊಂಡು ಈ ಶಂಕಾ ಪರಿಹಾರಕವಾದ 'ಶಾಸ್ತ್ರಯೋನಿತ್ವಾತ್' ಎನ್ನುವ ಸೂತ್ರವನ್ನು ವಿವರಿಸುತ್ತಾರೆ—

**ನ್ಯಾಯಸುಧಾ**— ಜಗಜ್ಜನ್ಮಾದಿಕಾರಣತ್ವವು ಪರಬ್ರಹ್ಮನ ಲಕ್ಷಣವೆಂದು ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟಿತು. ಆ ಲಕ್ಷಣಕ್ಕೆ ಪಾಶುಪತಾದ್ಯಾಗಮ ಮತ್ತು ಅನುಮಾನ ಇವುಗಳ ಬಲದಿಂದ ಹಿರಣ್ಯಗರ್ಭಾದಿ ಚೇತನರಲ್ಲಿಯೂ, ಪ್ರಧಾನಾದ್ಯಚೇತನಗಳಲ್ಲಿಯೂ ಆ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ಆಶಂಕಿಸಿ ಇಲ್ಲಿ ಸೂತ್ರಕಾರರು 'ಶಾಸ್ತ್ರಯೋನಿತ್ವಾತ್' ಎನ್ನುವ ಸೂತ್ರದಿಂದ ಶಾಸ್ತ್ರರೂಪಪ್ರಮಾಣವನ್ನು ಹೇಳಿ ಪರಿಹರಿಸುತ್ತಾರೆ.

ಈ ಸೂತ್ರದಿಂದ ಪರಿಹರಿಸತಕ್ಕ ಪೂರ್ವಪಕ್ಷವನ್ನು ತೋರಿಸುತ್ತಾರೆ—

**ಮೂ ॥ ಶೈವಾದ್ಯಾಗಮಸಂಪ್ರಾಪ್ತ ದೃಷ್ಟಗೇನ ಫಲೇನ ತು ॥ ೧೧೨ ॥**
**ತದ್ವಾಕ್ಯೋಪಮಯಾಽನ್ಯಚ್ಚ ಪ್ರಮಾಣತ್ವೇಽನುಮೀಯತೇ ।**
**ಈಶ ವಾಕ್ಯತ್ವತಃ [ಇತಿಚೇತ್ತದ್ಗವ್ಯಭಿಚಾರಿಣಾ] ॥ ೧೧೩ ॥**

ಅ ॥ ಶೈವಾದ್ಯಾಗಮಸಂಪ್ರಾಪ್ತದೃಷ್ಟಗೇನ ಶೈವ=ರುದ್ರದೇವರಿಂದ ಮಾಡಲ್ಪಟ್ಟದ್ದೇ, ಆದಿ=ಮೊದಲಾದ ಹಿರಣ್ಯಗರ್ಭಾದಿಗಳಿಂದ ಮಾಡಲ್ಪಟ್ಟ, ಆಗಮ=ಬ್ರಾಹ್ಮಾದ್ಯಾಗಮಗಳಿಂದ, ಸಂಪ್ರಾಪ್ತ=ಪ್ರಾಪ್ತವಾದ, ಅಂದರೆ— ಆಗಮಗಳಲ್ಲಿ ಹೇಳಿದ ಸಾಧನಗಳನ್ನು ಅನುಷ್ಠಾನ ಮಾಡಿದರಿಂದ ಪ್ರಾಪ್ತವಾದ, ದೃಷ್ಟಗೇನ=ಪ್ರತ್ಯಕ್ಷ ಸಿದ್ಧವಾದ, ಫಲೇನ ತು=ಫಲದಿಂದಲಾದರೂ, (ತದ್ವಾಕ್ಯಸ್ಯ=ಪ್ರತ್ಯಕ್ಷಸಿದ್ಧ ಫಲಸಾಧನವನ್ನು ಪ್ರತಿಪಾದಿಸುವ ವಾಕ್ಯಕ್ಕೆ, ಪ್ರಾಮಾಣ್ಯಂ=ಪ್ರಾಮಾಣ್ಯವನ್ನು, ಅನುಮಾಯ=ಅನುಮೇಯಿಸಿ) ಈಶವಾಕ್ಯತ್ವತಃ = ಈಶವಾಕ್ಯತ್ವರೂಪ ಹೇತುವಿನಿಂದಲೇ, (ಈಶವಾಕ್ಯವಾಗಿರುವುದರಿಂದಲೇ) ಅನ್ಯಚ್ಚ=ಬೇರೆಯಾದದ್ದೂ, (ರುದ್ರಾದಿಗಳಿಗೆ ಜಗತ್ಕಾರಣತ್ವ ಪ್ರತಿಪಾದಕವಾದ ವಾಕ್ಯವೂಕೂಡ,) ತದ್ವಾಕ್ಯೋಪಮಯಾ=ಪ್ರಮಾಣವೆಂದು ನಿಶ್ಚಿತವಾದ ಪ್ರತ್ಯಕ್ಷಸಿದ್ಧ ಫಲ ಪ್ರತಿಪಾದಕ ವಾಕ್ಯವನ್ನು ದೃಷ್ಟಾಂತೀಕರಿಸಿಕೊಂಡು, ಪ್ರಮಾಣತ್ವೇ=ಪ್ರಮಾಣತ್ವ ವಿಷಯದಲ್ಲಿ, ಅನುಮೀಯತೇ=ಅನುಮೇಯಿಸಲ್ಪಡುತ್ತದೆ ಅಂದರೆ, ಪ್ರಮಾಣವೆಂದು ಅನುಮೇಯಿಸಲ್ಪಡುತ್ತದೆ.

**ತಾ ॥ ನ್ಯಾಯಸುಧಾ**— (1) ರುದ್ರದೇವರು ಮಾಡಿರುವ ಆಗಮವು ಎರಡು ವಿಧವು. (೧) ಪ್ರತ್ಯಕ್ಷ ಯೋಗ್ಯಗಳಾದ ಸಂಪದಾದಿ ಫಲಗಳನ್ನುದ್ದೇಶಿಸಿ ಸಾಧನಗಳನ್ನು ವಿಧಿಸತಕ್ಕದ್ದು. (೨) ಮತ್ತೊಂದು ಸ್ವರ್ಗ-ಮೋಕ್ಷ ಮೊದಲಾದ ಅಪ್ರತ್ಯಕ್ಷ ಫಲಗಳನ್ನು ಉದ್ದೇಶಿಸಿಕೊಂಡು ರುದ್ರದೇವರಿಗೆ ಜಗಜ್ಜನ್ಮಾದಿಕಾರಣತ್ವ, ಸರ್ವಜ್ಞತ್ವ, ಸರ್ವಶಕ್ತಿತ್ವ, ಸತ್ಯಸಂಕಲ್ಪತ್ವ, ಮೊದಲಾದ ಅಶೇಷಗುಣಪರಿಪೂರ್ಣತ್ವವನ್ನೂ, ದೋಷಲೇಶರಾಹಿತ್ಯವನ್ನೂ ಪ್ರತಿಪಾದಿಸತಕ್ಕದ್ದು. ಅವುಗಳಲ್ಲಿ ಒಂದನೇದ್ದು ಪ್ರಮಾಣವೆಂದು ಒಪ್ಪಲೇಬೇಕು ಅದರಲ್ಲಿ ಹೇಳಿದ ಪ್ರಕಾರ ಸಾಧನಗಳನ್ನು ಅನುಷ್ಠಾನ ಮಾಡಿದರೆ ಪ್ರತ್ಯಕ್ಷದಿಂದ ಫಲವು ತೋರುವುದು. (2) ತಥಾಚ ಈ ಅನುಮಾನವು ಉಕ್ತವಾಯಿತು. (೧) ವಿಮತಃ ಆಗಮಃ, ಪ್ರಮಾಣಂ ಸಫಲಪ್ರವೃತ್ತಿ ಜನಕತ್ವಾತ್ ಚರಕ ಸುಶ್ರುತಾದಿವತ್ = ವಿವಾದ ವಿಷಯವಾದ ಶೈವಾದ್ಯಾಗಮವು, ಪ್ರಮಾಣವು, ಸಫಲ ಪ್ರವೃತ್ತಿಯನ್ನು ಹುಟ್ಟಿಸುವುದರಿಂದ ಚರಕ ಸುಶ್ರುತ (ವೈದ್ಯಗ್ರಂಥವಿಶೇಷಗಳು) ಮೊದಲಾದ ಗ್ರಂಥಗಳಂತೆಯೇ, (೨) ಯದ್ಯಪ್ರಮಾಣಮಭವಿಷ್ಯತ್ ನ ಸಮರ್ಥಾಂ ಪ್ರವೃತ್ತಿಮಕರಿಷ್ಯತ್ ವಿಪ್ರಲಂಭಕವಾಕ್ಯವತ್ = ಈ ಆಗಮವು ಅಪ್ರಮಾಣವಾಗಿದ್ದರೆ ವಂಚಕನ ಮಾತಿನಂತೆಯೇ, ಸಫಲವಾದ ಪ್ರವೃತ್ತಿಯನ್ನು ಹುಟ್ಟಿಸಲಾರದು. ಅಂತೂ ಆ ಶೈವಾಗಮವನ್ನು ನಿರ್ಮಿಸಿರುವ ರುದ್ರನು ಪರಮಾಪ್ತನೆಂದು ನಿರ್ಧರಿಸಿ ಆ ಪ್ರತ್ಯಕ್ಷಸಿದ್ಧ ಫಲಸಾಧನ ಪ್ರತಿಪಾದಕ ವಾಕ್ಯ ದೃಷ್ಟಾಂತದಿಂದ ಅವನು ಮಾಡಿರುವ ರುದ್ರಾದಿಗಳಿಗೆ ಜಗತ್ಕಾರಣತ್ವಾದ್ಯದೃಷ್ಟಾರ್ಥವನ್ನು ಪ್ರತಿಪಾದಿಸುವ ಆಗಮಕ್ಕೂ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ. (3) (೧) ವಿಪ್ರತಿಪನ್ನಃ ಆಗಮಃ ಪ್ರಮಾಣಂ ಶಿವವಾಕ್ಯತ್ವಾತ್ ಸಂಪ್ರತಿಪನ್ನವತ್ = ವಿವಾದವಿಷಯವಾದ (ರುದ್ರಾದಿಗಳಿಗೆ ಜಗತ್ಕಾರಣತ್ವಾದಿ ಪ್ರತಿಪಾದಕವಾದ) ಆಗಮವು, ಪ್ರಮಾಣವು, ರುದ್ರನ ವಾಕ್ಯವಾಗಿರುವುದರಿಂದ, ಸಮ್ಮತವಾದ ವಾಕ್ಯದಂತೆ. ಇದು ಪ್ರಮಾಣವಲ್ಲವೆಂದು ಹೇಳಿದರೆ ರುದ್ರನು ಆಪ್ತನಾಗದೆ ಹೋಗಬೇಕಾಗುವನು. ಆದಕಾರಣ ಹೀಗೆ ಪ್ರಮಾಣವೆಂದು ನಿರ್ಧಾರಿತವಾದ ಶೈವಾಗಮದಿಂದ ಶಿವನಿಗೆ ಜಗಜ್ಜನ್ಮಾದಿ ಕಾರಣತ್ವವು ನಿಶ್ಚಿತವಾಗುವುದರಿಂದ ಶ್ರೀ ವಿಷ್ಣುವಿಗೆ ಈ ಲಕ್ಷಣವು ಕೂಡುವುದಿಲ್ಲವೆಂದು ಶೈವರು ಹೇಳುತ್ತಾರೆ. ಇದೇ ರೀತಿಯಾಗಿ ಹೈರಣ್ಯಗರ್ಭಾದಿಗಳೂ ಹಿರಣ್ಯಗರ್ಭಾದಿ ಗಳಿಂದ ಮಾಡಲ್ಪಟ್ಟ ಬ್ರಾಹ್ಮಾದ್ಯಾಗಮಗಳಿಗೆ ಪ್ರಾಮಾಣ್ಯವನ್ನು ಪ್ರಸಾಧಿಸಿ ಆ ಆಗಮಗಳ ಬಲದಿಂದ ತಂತಮಗೆ ಅಭಿಮತರಾದ ಹಿರಣ್ಯಗರ್ಭಾದಿಗಳಿಗೆ ಜಗಜ್ಜನ್ಮಾದಿ ಕಾರಣತ್ವವನ್ನು ಸಾಧಿಸಿಕೊಂಡು ಶ್ರೀಹರಿಗೇನೇ ಜಗಜ್ಜನ್ಮಾದಿಕಾರಣತ್ವವು ಲಕ್ಷಣವೆಂದು ಸಿದ್ಧಾಂತಿಗಳು ಹೇಳಿದ್ದನ್ನು ದೂಷಿಸುವರು.

(4) ಮತ್ತು ಅನುಮಾನದಿಂದಲೂ ಶಿವಾದಿಗಳಿಗೆ ಜಗಜ್ಜನ್ಮಾದಿಕಾರಣತ್ವ, ಸರ್ವಜ್ಞತ್ವ, ಮೊದಲಾದುದನ್ನು ಸಾಧಿಸಲಿಕ್ಕೆ ಬರುವುದು. ಹೇಗೆಂದರೆ— (೧) ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್ = ಕ್ಷಿತ್ಯಾದಿಗಳು ಕರ್ತೃಜನ್ಯಗಳಾಗಿವೆ, ಕಾರ್ಯವಾಗಿರುವುದರಿಂದ ಘಟದಂತೆಯೇ, (೨) ವಿವಾದಾಧ್ಯಾಸಿತಂ ಕರ್ಮ ಪ್ರಯತ್ನಾಧಾರಜಂ ಕರ್ಮತ್ವಾತ್ ಸಂಪ್ರತಿಪನ್ನವತ್ = ದ್ವ್ಯಣುಕಕ್ಕೆ ಅಸಮವಾಯಿಕಾರಣವಾದ ಸಂಯೋಗವನ್ನು ಹುಟ್ಟಿಸುವ ಪರಮಾಣುಕರ್ಮವು ಕರ್ಮಾನುಕೂಲಪ್ರಯತ್ನಕ್ಕೆ ಆಧಾರಭೂತವಾದ ಚೇತನದಿಂದ ಹುಟ್ಟಿರುವುದು, ಕರ್ಮವಾಗಿರುವುದರಿಂದ ಸಮ್ಮತವಾದ ಕರ್ಮದಂತೆ, (೩) ವಿಪ್ರತಿಪನ್ನೇ ಪೃಥಿವ್ಯುದಕೇ ಪ್ರಯತ್ನವತಾ ಧೃತೇ ಗುರುತ್ವೇ ಸತ್ಯಪಾತಿತ್ವಾತ್ ಸಂಪ್ರತಿಪನ್ನವತ್ = ವಿವಾದವಿಷಯಗಳಾದ ಭೂಮಿ ಸಮುದ್ರಗಳು ಪ್ರಯತ್ನವುಳ್ಳವನಿಂದ ಧರಿಸಲ್ಪಟ್ಟವುಗಳು ಭಾರವಿದ್ದರೂ

ಬೀಳದಿರುವುದರಿಂದ ಸಮ್ಮತವಾದುದರಂತೆ. (೪) ಕ್ಷಿತ್ಯಾದಿಕಂ ಪ್ರಯತ್ನವದ್ವಿನಾಶ್ಯಂ ವಿನಾಶ್ಯತ್ವಾತ್ ಸಂಪ್ರತಿಪನ್ನವತ್ = ಭೂಮಿಮೊದಲಾದುದು ಪ್ರಯತ್ನವುಳ್ಳ ಚೇತನನಿಂದ ನಾಶವನ್ನು ಹೊಂದತಕ್ಕುದು, ನಾಶವನ್ನು ಹೊಂದತಕ್ಕುದಾದುದರಿಂದ. ಸಮ್ಮತವಾದುದರಂತೆ ಎಂದು. ಇದುಮೊದಲಾದ ಅನುಮಾನಗಳಿಂದ ಪ್ರಪಂಚಕ್ಕೆ ಸೃಷ್ಟಿ-ಸ್ಥಿತಿ-ನಾಶಗಳನ್ನು ಮಾಡುವವನು ಸಾಮಾನ್ಯತಃ ಸಿದ್ಧನಾಗಲು ನಮ್ಮಂತಹವರಿಗೆ ಪ್ರಪಂಚಸೃಷ್ಟ್ಯಾದಿಕರ್ತೃತ್ವವು ಕೂಡದಿರುವುದರಿಂದ 'ಜಗತ್ಕರ್ತೃತ್ವಾದಿಕಂ ಶಿವನಿಷ್ಠಂ ಅನ್ಯತ್ರಾನುಪಪತ್ತೌ ಸತ್ಯಾಂ ಕಿಂಚಿನ್ನಿಷ್ಠತಯಾ ಪ್ರಮಿತತ್ವಾತ್=ಜಗತ್ಕರ್ತೃತ್ವಮೊದಲಾದುದು ರುದ್ರನಲ್ಲಿಯೇ ಇರುವುದು, ಬೇರೆಕಡೆಯಲ್ಲಿರಲಿಕ್ಕೆ ಅನುಪಪತ್ತಿಯು ಇದ್ದು ಯಾರಲ್ಲಿಯೋ ಒಬ್ಬನಲ್ಲಿದೆ ಎಂದು ಪ್ರಮಾಣಸಿದ್ಧವಾಗಿರುವುದರಿಂದ ಎನ್ನುವ ಪರಿಶೇಷಾನುಮಾನದಿಂದ ಶಿವನೇ ಜಗಜ್ಜನ್ಮಾದಿಕರ್ತನೆಂದು ಸಿದ್ಧಿಸುವನು. ಹೇಗೆ ಲೋಕದಲ್ಲಿ ಪ್ರಾಸಾದಮೊದಲಾದ ವಿಚಿತ್ರಕಾರ್ಯಗಳನ್ನು ಕಂಡರೆ ಅದಕ್ಕೆ ಅನುಗುಣವಾದ ವಿಚಿತ್ರಶಕ್ತಿಯುಳ್ಳ ಒಬ್ಬ ಕರ್ತನಿರಬೇಕೆಂದು ಕಲ್ಪಿಸುವೆವೋ ಹಾಗೆಯೇ ವಿಚಿತ್ರಗಳಾದ ಪ್ರಪಂಚರೂಪ ಕಾರ್ಯಗಳನ್ನು ನೋಡಿಕೊಂಡು ಕಲ್ಪಿಸಲ್ಪಡತಕ್ಕ ಕರ್ತನು ಆ ವಿಚಿತ್ರ ಕಾರ್ಯಾನುಗುಣವಾದವನೇ ಸರ್ವವನ್ನು ತಿಳಿದವನೂ ಸರ್ವಶಕ್ತ್ಯಾದಿಗಳುಳ್ಳವನೆಂದೂ ಸಿದ್ಧಿಸುತ್ತಾನೆ.

(5) ಹೀಗೆಯೇ ಚತುರ್ಮುಖಾದಿಗಳಲ್ಲಿಯೂ ಪರಿಶೇಷಾನುಮಾನದಿಂದ ಜಗತ್ಕಾರಣತ್ವಾದಿಗಳನ್ನು ಇಟ್ಟುಕೊಳ್ಳತಕ್ಕುದು.

(6) ಹೀಗೆ ಆಗಮದಿಂದಲೂ ಅನುಮಾನದಿಂದಲೂ ರುದ್ರಾದಿಗಳಿಗೆ ಜಗಜ್ಜನ್ಮಾದಿಕಾರಣತ್ವವೆಂದು ಪೂರ್ವಪಕ್ಷ ಬರುತ್ತಿರಲು ಸೂತ್ರಕಾರರು ಆ ಪೂರ್ವಪಕ್ಷವನ್ನು ನಿಷೇಧಿಸಿ ಸಿದ್ಧಾಂತಗೊಳಿಸುವರು. ಶೈವಾಗಮದಿಂದಲಾಗಲೀ ಅನುಮಾನದಿಂದಲಾಗಲೀ ರುದ್ರಾದಿಗಳನ್ನು ಜಗತ್ಕಾರಣರೆಂದು ಕಲ್ಪಿಸಕೂಡದು. ಏಕೆಂದರೆ—

## "ಓಂ ಶಾಸ್ತ್ರಯೋನಿತ್ವಾತ್ ಓಂ"

**"ಶಾಸ್ತ್ರಂ='ಋಗ್ಯಜುಃಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ। ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ। ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ॥"** ಎಂದು ಹೇಳಲ್ಪಟ್ಟ ಋಗಾದಿ ಶಾಸ್ತ್ರವು, ಯೋನಿಃ = ಜ್ಞಪ್ತಿಕಾರಣವು, ಯಸ್ಯ ಯಾರಿಗೋ, ತತ್ ಶಾಸ್ತ್ರಯೋನಿ ತಸ್ಯ ಭಾವಃ ಶಾಸ್ತ್ರಯೋನಿತ್ವಂ–ತಸ್ಮಾತ್ ಶಾಸ್ತ್ರಯೋನಿತ್ವಾತ್' ಎಂದು ವಿಗ್ರಹವು. ತಥಾಚ ಇದರಿಂದ ಜಗಜ್ಜನ್ಮಾದಿಗಳಿಗೆ ಕಾರಣೀಭೂತವಾದ ವಸ್ತುವನ್ನು ವೇದಾದಿ ಶಾಸ್ತ್ರಗಳಿಂದಲೇ ತಿಳಿಯಬೇಕಾಗಿರುವಪ್ರಯುಕ್ತ ಶೈವಾದ್ಯಾಗಮಗಳಿಂದಲೂ ಅನುಮಾನದಿಂದಲೂ ತಿಳಿಯಲು ಸಾಧ್ಯವಿಲ್ಲ. ಆದಕಾರಣ ಅವುಗಳಿಂದ ರುದ್ರಾದಿಗಳನ್ನು ಜಗತ್ಕಾರಣರೆಂದು ಕಲ್ಪಿಸಕೂಡದು. ಮತ್ತೆ ಶಾಸ್ತ್ರವು ಯಾರಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸುತ್ತದೋ ಅವನೇ ಜಗಜ್ಜನ್ಮಾದಿಕರ್ತನೆಂದು ಅಂಗೀಕರಿಸಬೇಕೆಂದು ಸಿದ್ಧವಾಯಿತು ॥ ೧೧೨ ॥ ೧೧೩ ॥

ಶಾಸ್ತ್ರೈಕಸಮಧಿಗಮ್ಯತ್ವವು (ಕೇವಲ ಶಾಸ್ತ್ರದಿಂದ ತಿಳಿಯಲ್ಪಡುವಿಕೆಯು) ಎನ್ನುವ ಸೂತ್ರದಲ್ಲಿರುವ ಹೇತುವು ಸಿದ್ಧವಾಗಿದ್ದರೆ ಹಿಂದೆಹೇಳಿದ ಪ್ರಕಾರ ಅಂಗೀಕರಿಸಬಹುದಿತ್ತು. ಆ ಹೇತುವೇ ಸಿದ್ಧವಾಗಲಿಲ್ಲ. ಜಗತ್ಕಾರಣತ್ವವು ಪ್ರತ್ಯಕ್ಷದಿಂದ ತಿಳಿಯಲ್ಪಡದಿದ್ದರೂ ಶೈವಾದ್ಯಾಗಮಗಳಿಂದಲೂ, ಅನುಮಾನಗಳಿಂದಲೂ ಜಗತ್ಕಾರಣತ್ವವು ನಿಶ್ಚೈಸಲಿಕ್ಕೆ ಶಕ್ಯವಾಗುವುದು,

ಎಂದಾಶಂಕಿಸಿಕೊಂಡು ಸೂತ್ರಕಾರರು ಹೇಳಿದ ಹೇತುವಿಗೆ ಅಸಿದ್ಧಿಪರಿಹಾರಕ್ಕಾಗಿ ಜಗತ್ಕಾರಣ ತ್ವಕ್ಕೆ ಶೈವಾದ್ಯಾಗಮಗಮ್ಯತ್ವವನ್ನು ನಿರಾಕರಣ ಮಾಡಲಿಚ್ಛಿಸುತ್ತಾ ಶೈವಾದ್ಯಾಗಮಗಳಿಗೆ ಪ್ರಾಮಾಣ್ಯವನ್ನು ಸಾಧಿಸಿಕೊಡುವ ಅನುಮಾನವನ್ನು ನಿರಾಕರಿಸುತ್ತಾರೆ.

**ಮೂ ॥ [ಈಶವಾಕ್ಯತ್ವತಃ] ಇತಿ ಚೇತ್ತದ್ಗವ್ಯಭಿಚಾರಿಣಾ ।**
**ಅಪ್ರಾಮಾಣ್ಯಾನುಮಾ ಚ ಸ್ಯಾನ್ನ ಪೃಥಕ್ಚಾನುಮೇಶ್ವರೇ ॥ ೧೧೪ ॥**

ಅ ॥ ಇತಿ ಚೇತ್ = ಹೀಗೆ ಹೇಳುವುದಾದರೆ, ತದ್ಗವ್ಯಭಿಚಾರಿಣಾ = ಪ್ರತ್ಯಕ್ಷದಿಂದ ತಿಳಿಯಲ್ಪಟ್ಟ ಫಲವ್ಯಭಿಚಾರವುಳ್ಳ ವಾಕ್ಯವನ್ನು ದೃಷ್ಟಾಂತೀಕರಿಸಿ (ರುದ್ರಾದಿಗಳು ಜಗತ್ಕಾರಣರು ಎನ್ನುವ ಜ್ಞಾನಕ್ಕೆ ಕಾರಣವಾದ ಆಗಮಕ್ಕೆ) ಈಶವಾಕ್ಯತ್ವತಃ = ಈಶವಾಕ್ಯತ್ವ ಮೊದಲಾದ **ಹೇತುಗಳಿಂದ, ಅಪ್ರಾಮಾಣ್ಯಾನುಮಾ ಚ ಸ್ಯಾತ್=ಅಪ್ರಾಮಾಣ್ಯಾನುಮಿತಿಯೂ ಬರಬೇಕಾ** ಗುವುದು. **ಈಶ್ವರೇ=ಜಗತ್ಕಾರಣನಲ್ಲಿ, ಪೃಥಕ್ ಅನುಮಾ ಚ=ಸ್ವತಂತ್ರವಾದ ಅನುಮಾನವು, ನ=ಪ್ರಮಾಣವಲ್ಲ. ಅಥವಾ ಈಶ್ವರೇ = ರುದ್ರನು ಜಗತ್ಕರ್ತನೆನ್ನುವಲ್ಲಿ, ಪೃಥಕ್=ಪ್ರತ್ಯೇಕ, ಅನುಮಾ=ಅನುಮಾನವು, ನ=ಪ್ರಮಾಣವಲ್ಲ.**

**ತಾ ॥ ನ್ಯಾಯಸುಧಾ— (1)** ಶೈವಾಗಮಗಳಲ್ಲಿ ಹೇಳಿದ ಸಾಧನವನ್ನು ಅನುಮಾನ ಮಾಡಿದರೆ ಪ್ರತ್ಯಕ್ಷವಾಗಿಯೇ ಫಲವು ಸಿಗುವುದರಿಂದ ಶಿವಾದಿ ವಾಕ್ಯಗಳಿಗೆ ಪ್ರಾಮಾಣ್ಯವನ್ನು ಅನುಮೇಯಿಸಿ ಅಂತಹ ವಾಕ್ಯವನ್ನು ದೃಷ್ಟಾಂತೀಕರಿಸಿ ಅದೃಷ್ಟಾರ್ಥಕ ವಾಕ್ಯಗಳಿಗೂ ಶಿವಾದಿ ವಾಕ್ಯತ್ವರೂಪ ಹೇತುವಿನಿಂದ ಪ್ರಾಮಾಣ್ಯವನ್ನು ಅನುಮೇಯಿಸುವುದಾದರೆ ದೃಷ್ಟಾರ್ಥಗಳಾದ ಕೆಲವು ವಾಕ್ಯಗಳಲ್ಲಿಯೇ ಹೇಳಿದ ಸಾಧನವನ್ನು ಅನುಷ್ಠಾನಮಾಡಿದರೂ ಪ್ರತ್ಯಕ್ಷವಾಗಿಯೇ ಫಲವು ಕಾಣದಿರುವುದರಿಂದ ೧ 'ವಿಮತಂ ಅಪ್ರಮಾಣಂ ಅಸಮರ್ಥ ಪ್ರವೃತ್ತಿಜನಕತ್ವಾತ್ ವಿಪ್ರಲಂಬಕ ವಾಕ್ಯವತ್=ವಿವಾದ ವಿಷಯವಾದ ದೃಷ್ಟಫಲಾರ್ಥವಾಗಿ ಸಾಧನವನ್ನು ಹೇಳಿರುವ ಶಿವವಾಕ್ಯವು ಪ್ರಮಾಣವಲ್ಲ, ಸಫಲ ಪ್ರವೃತ್ತಿಯನ್ನು ಉಂಟುಮಾಡದಿರುವುದರಿಂದ ವಂಚಕನ ಮಾತಿನಂತೆ, **ಹೀಗೆ ಶಿವಾದಿವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಅನುಮೇಯಿಸಿ ಅಂತಹ ಅಪ್ರಮಾಣವಾದ ಶಿವ, ವಾಕ್ಯವನ್ನು ದೃಷ್ಟಾಂತೀಕರಿಸಿ, ಶಿವಾದಿ ವಾಕ್ಯತ್ವಾತ್ = ಶಿವಾದಿಗಳ ವಾಕ್ಯವಾಗಿರುವುದರಿಂದ ಇತ್ಯಾದಿ ಹೇತುಗಳಿಂದಲೇ ಅದೃಷ್ಟಾರ್ಥಕ ವಾಕ್ಯಗಳಿಗೂ, (ರುದ್ರಾದಿಗಳಿಗೆ ಕಾರಣತ್ವಾದಿ ಗಳನ್ನು ಹೇಳತಕ್ಕ ಶಿವವಾಕ್ಯಗಳಿಗೂ) ೨ ವಿಮತಾನಿ ಅಪ್ರಮಾಣಾನಿ ಶಿವವಾಕ್ಯತ್ವಾತ್** ಸಂಪ್ರತಿಪನ್ನವತ್=ವಿವಾದ ವಿಷಯಗಳಾದ ಶಿವ ವಾಕ್ಯಗಳು ಪ್ರಮಾಣಗಳಲ್ಲ. ರುದ್ರನ ವಾಕ್ಯ ವಾಗಿರುವುದರಿಂದ ಸಮ್ಮತವಾದ ವಾಕ್ಯದಂತೆ. ಹೀಗೆ ಅಪ್ರಾಮಾಣ್ಯವನ್ನು ಅನುಮೇಯಿಸಲಿಕ್ಕೆ ಬಂದೇ ಬರುತ್ತದೆ. ಪ್ರತ್ಯಕ್ಷವಾಗುವ ಅರ್ಥದಲ್ಲಿಯೇ ಶೈವಾಗಮಗಳಲ್ಲಿ ಹೇಳಿದಪ್ರಕಾರ ಸಾಧನಾನುಷ್ಠಾನಮಾಡಿದರೂ ಫಲವು ಕಾಣುವುದಿಲ್ಲ. ನಿಷ್ಫಲ ಪ್ರವೃತ್ತಿಯನ್ನು ಹುಟ್ಟಿಸು ವಂಥಾದ್ದೂ ಎಷ್ಟೋ ವಾಕ್ಯಗಳಿವೆ. (2) ಹಾಗಾದರೆ ನಿಷ್ಫಲ ಪ್ರವೃತ್ತಿಯನ್ನು ಹುಟ್ಟಿಸುವ ಆ ವಾಕ್ಯವೂ ಪ್ರಮಾಣವೇ. ಫಲಕಾಣದಿರುವುದಾದರೂ ಕರ್ತೃ-ಕರ್ಮಾದಿ ವೈಗುಣ್ಯ ನಿಮಿತ್ತ ಕವು. ಅಂದರೆ, ಕರ್ತ್ರಾದಿಗಳಲ್ಲಿ ಸದಾಚಾರ ಮೊದಲಾದ ಸದ್ಗುಣಗಳು ಇಲ್ಲದಿರುವುದರಿಂದಲೇ ಎಂದು ಹೇಳುತ್ತೇವೆಂದರೆ— ಹಾಗಾದರೆ, ಸಫಲ ಪ್ರವೃತ್ತಿಯನ್ನು ಹುಟ್ಟಿಸುವ ವಾಕ್ಯವೂ ಅಪ್ರಮಾಣವೇ. ಕೆಲವು ಕಡೆ ಫಲಕಾಣುವುದಾದರೂ ಕಾಕತಾಲೀಯವೆಂದಾಗಲೀ, ಜಗತ್ತಿಗೆ **ವ್ಯಾಮೋಹಕರಾದ ರುದ್ರಾದಿಗಳ 'ಜನರಿಗೆ ಅಭಿರುಚಿಯನ್ನು ಹುಟ್ಟಿಸತಕ್ಕ ಉಪಾಯ ವಿಶೇಷ'**

ವೆಂದಾಗಲೀ ಆಗಬಹುದು. (3) ಹಾಗಾದರೆ ಫಲಾನುಪಲಬ್ಧಿಯಿಂದ ರುದ್ರಾದಿಗಳ ವಾಕ್ಯವು ಅಪ್ರಮಾಣವೆಂದು ಹೇಳುವುದಾದರೆ ವೇದವಾಕ್ಯದಲ್ಲಿಯೂ ಕೆಲವುಕಡೆ ಹೇಳಿದ ಫಲಗಳು ಕಾಣದಿರುವುದರಿಂದ ಅದೂ ಅಪ್ರಮಾಣವಾಗಬೇಕಾಗುವುದು ಎಂದು ಹೇಳಕೂಡದು. ವೇದಕ್ಕೆ ಅಪೌರುಷೇಯತ್ವಾದಿ ಹೇತುಗಳಿಂದ ಪ್ರಾಮಾಣ್ಯವು ದೃಢನಿಶ್ಚಿತವಾಗಿರುವುದರಿಂದ ಅಲ್ಲಿ ಫಲಾನುಪಲಬ್ಧಿಗೆ ಕರ್ತ್ರಾದಿವೈಗುಣ್ಯವೇ ನಿಮಿತ್ತವೆಂದು ಕಲ್ಪಿಸಲಿಕ್ಕೆ ಬರುತ್ತದೆ. ಅದರಂತೆ ಶೈವಾದ್ಯಾಗಮಕ್ಕೆ ದೃಢವಾಗಿ ಪ್ರಾಮಾಣ್ಯವನ್ನು ತಿಳಿಸಿಕೊಡುವ ಹೇತುವು ಇರುವುದಿಲ್ಲ. ಆದುದರಿಂದ ಫಲವ್ಯಭಿಚಾರವು ಪ್ರಾಮಾಣ್ಯವಿದ್ದರೂ ಕರ್ತ್ರಾದಿವೈಗುಣ್ಯನಿಮಿತ್ತಕವೆಂದು ಹೇಳಲಿಕ್ಕೆ ಬರುವುದಿಲ್ಲ. ಆದಕಾರಣ ದೃಷ್ಟಾರ್ಥಕ ವಾಕ್ಯಗಳಲ್ಲಿಯೇ ಬಹಳ ಕಡೆ ಫಲಾನುಪಲಬ್ಧಿಯು ಕಂಡುಬರುವುದರಿಂದ ಶೈವಾಗಮವು ಪ್ರಾಮಾಣ್ಯಸಾಧಕ ಹೇತುವೇ ಇಲ್ಲದಿರುವುದರಿಂದ ಅಪ್ರಮಾಣವೆಂದೇ ನಿಶ್ಚಿತವಾಗುತ್ತದೆ. (4) 'ವಿಮತಃ ಆಗಮಃ ಪ್ರಮಾಣಂ ಸಮರ್ಥಪ್ರವೃತ್ತಿಜನಕತ್ವಾತ್' ಎನ್ನುವ ಅನುಮಾನವನ್ನು ಹೇಳಿರುವುದರಿಂದ ಫಲಾವ್ಯಭಿಚಾರದಿಂದಲೇ ಪ್ರಾಮಾಣ್ಯವನ್ನು ಕಲ್ಪಿಸುವವರಿಗೆ 'ಪ್ರಾಮಾಣ್ಯವು ಸಿದ್ಧವಾದರೆ ಫಲವ್ಯಭಿಚಾರಕ್ಕೆ ಬೇರೆ ನಿಮಿತ್ತವೆಂದು ಕಲ್ಪಿಸುವುದು. ಅದಕ್ಕೆ ಬೇರೆ ನಿಮಿತ್ತವೆನ್ನುವುದು ಸಿದ್ಧವಾದರೆ ಫಲಸಂವಾದದಿಂದ ಪ್ರಾಮಾಣ್ಯವನ್ನು ಕಲ್ಪಿಸುವುದು, ಹೀಗೆ ಅನ್ಯೋನ್ಯಾಶ್ರಯತ್ವವು. (5) ವಿಮತಾನಿ ಅಪ್ರಮಾಣಾನಿ ಶಿವವಾಕ್ಯತ್ವಾತ್ ಎನ್ನುವುದಕ್ಕೆ ಫಲಸಂವಾದಿಯಾದ ವಸ್ತುವಿನಲ್ಲಿ ವ್ಯಭಿಚಾರವೆಂದರೆ ಹಾಗೆ ಹೇಳಕೂಡದು ಶಿವವಾಕ್ಯತ್ವದಿಂದ ಪ್ರಾಮಾಣ್ಯವನ್ನು ಅನುಮೇಯಿಸುವವನಿಗೂ ಫಲಸಂವಾದವುಳ್ಳ ಸ್ಥಳದಲ್ಲಿ ವ್ಯಭಿಚಾರವು. (6) ಮತ್ತು ಯಾರು ಅದೃಷ್ಟಾರ್ಥವುಳ್ಳ ಶೈವಾಗಮಕ್ಕೂ ಹೀಗೆ ಪ್ರಾಮಾಣ್ಯವನ್ನು ತಿಳಿಯುತ್ತಾರೋ, ಅವರು ಬ್ರಾಹ್ಮಾದ್ಯಾಗಮಗಳಿಗೂ ಪ್ರಾಮಾಣ್ಯವನ್ನು ೧ ಅಂಗೀಕರಿಸುತ್ತಾರೋ, ೨ ಅಂಗೀಕರಿಸುವುದಿಲ್ಲವೊ, ೧ ಅಂಗೀಕರಿಸುತ್ತಾರೆಂದು ಹೇಳಕೂಡದು. ಪರಸ್ಪರ ವಿರುದ್ಧಗಳಾದ ಎರಡು ಆಗಮಗಳಿಗೆ ಪ್ರಾಮಾಣ್ಯವು ಕೂಡಲಾರದು. ೨ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲವೆಂದೂ ಹೇಳಕೂಡದು. ಪ್ರಾಮಾಣ್ಯವನ್ನು ಸಾಧಿಸುವ ಅನುಮಾನದ ರೀತಿಯು ಎರಡು ಕಡೆಗಳಲ್ಲಿಯೂ ಸಮಾನವಾಗಿರಲು ನಮ್ಮ ಆಗಮವು ಮಾತ್ರ ಪ್ರಮಾಣವು, ಇನ್ನೊಬ್ಬರ ಆಗಮವು ಪ್ರಮಾಣವಲ್ಲ ಎನ್ನುವ ವೈಷಮ್ಯವು ಕೂಡಲಾರದು. (7) ಹಾಗಾದರೆ ಬ್ರಾಹ್ಮಾಗಮಕ್ಕೆ ಪ್ರಾಮಾಣ್ಯಸಾಧಕವಾದ ಅನುಮಾನವು ಅಪ್ರಯೋಜಕವು, ಹಿರಣ್ಯಗರ್ಭವಾಕ್ಯತ್ವರೂಪಹೇತುವಿದ್ದರೂ ಆಗಂತುಕವಾದ ವಂಚನೆಮೊದಲಾದ ದೋಷಗಳಿಂದ ಆ ಆಗಮಕ್ಕೆ ಅಪ್ರಾಮಾಣ್ಯವು ಕೂಡಬಹುದೆಂದರೆ—ಹಾಗಾದರೆ, ಶೈವಾಗಮಕ್ಕೆ ಪ್ರಾಮಾಣ್ಯವನ್ನು ಸಾಧಿಸಿಕೊಡುವ ಅನುಮಾನವೂ ಅಪ್ರಯೋಜಕವು, ಶಿವವಾಕ್ಯತ್ವರೂಪ ಹೇತುವಿದ್ದರೂ ಆಗಂತುಕವಾದ ವಂಚನೆಮೊದಲಾದ ದೋಷಗಳಿಂದ ಅಪ್ರಾಮಾಣ್ಯವೇ ಇರಬಹುದು ಎಂದು ಸಮಾಧಾನವು ನಿಮಗೂ (ಶೈವರಿಗೂ) ಸಮವೇ ಆಯಿತು. (8) ಇದೇ ನ್ಯಾಯದಿಂದ ಚೈತ್ಯವಂದನಾದಿಗಳನ್ನು ಪ್ರತಿಪಾದಿಸುವ ವಾಕ್ಯಗಳಿಗೂ ಪ್ರಾಮಾಣ್ಯವನ್ನು ಸಾಧಿಸಬಹುದು. ಹೇಗೆಂದರೆ— ಆ ವಾಕ್ಯವನ್ನು ಹೇಳುವವನು ಯಾವಾಗಲೂ ಸತ್ಯವನ್ನು ಹೇಳಲೇ ಇಲ್ಲವೆಂದಲ್ಲವಷ್ಟೇ? ಕದಾಚಿತ್ ಸತ್ಯವನ್ನೂ ಹೇಳುತ್ತಾನೆ. ಆ ವಾಕ್ಯವನ್ನು ದೃಷ್ಟಾಂತೀಕರಿಸಿಕೊಂಡು ನೀವು ಹೇಳಿದ ರೀತಿಯಾಗಿ ಅವರ ಚೈತ್ಯವಂದನಾದಿ ಪ್ರತಿಪಾದಕವಾಕ್ಯವೂ ಪ್ರಮಾಣವೆಂದು ಸಾಧಿಸಬಹುದು. ಅಂತೂ ಶೈವಾದ್ಯಾಗಮಗಳಿಗೆ ಪ್ರಾಮಾಣ್ಯವನ್ನು ಸಾಧಿಸಲಿಕ್ಕೆ ಬಾರದಿರುವುದರಿಂದ ಶೈವಾದ್ಯಾಗಮಗಳಿಂದ ಜಗತ್ಕರ್ತನು ಸಿದ್ಧಿಸಲಾರನು. (9) ಹಾಗಾದರೆ, ಶೈವಾದ್ಯಾಗಮಗಳಿಂದ ಜಗಜ್ಜನ್ಮಾದಿಕರ್ತನು

ಸಿದ್ಧಿಸುವುದು ಬೇಡ. ಅನುಮಾನಗಳಿಂದ ಸಿದ್ಧಿಸುವನು. ಆದಕಾರಣ ಜಗತ್ಕಾರಣನನ್ನು ಶಾಸ್ತ್ರಗಳಿಂದಲೇ ತಿಳಿಯಬೇಕೆನ್ನುವುದು ಹೇಗೆ ಕೂಡುತ್ತದೆ ಎಂದರೆ— ಜಗತ್ಕಾರಣನಲ್ಲಿ ೧ ಶಾಸ್ತ್ರಾನುಸಾರಿಯಾದ ಅನುಮಾನವು ಪ್ರಮಾಣವೆಂದು ಹೇಳಲ್ಪಡುತ್ತದೋ, ೨ ಸ್ವತಂತ್ರಾನುಮಾನವು ಪ್ರಮಾಣವೆಂದು ಹೇಳಲ್ಪಡುತ್ತದೋ, ಇವುಗಳಲ್ಲಿ ೧ ಶಾಸ್ತ್ರಾನುಸಾರಿಯಾದ ಅನುಮಾನವು ಪ್ರಮಾಣವೆನ್ನುವುದು ನಮಗೂ ಸಮ್ಮತವೇ. ಅಂತಹ ಅನುಮಾನದಿಂದ ಶ್ರೀ ವಿಷ್ಣುವಿಗೇನೇ ಜಗತ್ಕಾರಣತ್ವಾದಿಗಳು ಸಿದ್ಧಿಸುತ್ತವೆ. ೨ ಶಾಸ್ತ್ರಾನನುಸಾರಿಯಾದ ಸ್ವತಂತ್ರಾನುಮಾನವೂ ಜಗತ್ಕಾರಣನಲ್ಲಿ ಪ್ರಮಾಣವಾಗಲಾರದು. ಏಕೆಂದರೆ— ಜಗತ್ಕರ್ತನು ಸಿದ್ಧಿಯಾಗಲಿಕ್ಕೆ 'ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್' ಎನ್ನುವ ಯಾವ ಸಾಮಾನ್ಯಾನುಮಾನವು ಹೇಳಲ್ಪಟ್ಟಿದೆಯೋ, ಆ ಅನುಮಾನವು ೧ ಕಾರಣಾದಿಗಳ ಸಾಕ್ಷಾತ್ಕಾರವುಳ್ಳ ಕರ್ತನಿಂದ ಜನ್ಯತ್ವವನ್ನು ಕ್ಷಿತ್ಯಾದಿಗಳಿಗೆ ಸಾಧಿಸಿಕೊಡುತ್ತದೋ, ೨ ಕರ್ತೃಜನ್ಯತ್ವವನ್ನು ಮಾತ್ರ ಸಾಧಿಸಿಕೊಡುತ್ತದೋ, ೧ನೇ ಕಲ್ಪದಲ್ಲಿ ದೃಷ್ಟಾಂತಭೂತಗಳಾದ ಘಟಾದಿಗಳಲ್ಲಿ ಕಾರಣಾದಿಗಳ ಸಾಕ್ಷಾತ್ಕಾರವುಳ್ಳ ಕರ್ತೃಜನ್ಯತ್ವರೂಪ ಸಾಧ್ಯವಿಲ್ಲ. ಏಕೆಂದರೆ— ಘಟಾದಿಗಳನ್ನು ಮಾಡುವ ಕುಲಾಲಾದಿಗಳು ಘಟಾದಿಗಳಿಗೆ ಕಾರಣಗಳಾದ ಧರ್ಮಾಧರ್ಮಾದಿಗಳನ್ನು ಸಾಕ್ಷಾತ್ಕರಿಸುವುದಿಲ್ಲವಷ್ಟೇ? ೨ನೇ ಕಲ್ಪದಲ್ಲಿ (ಅಂದರೆ, ಕರ್ತೃಜನ್ಯತ್ವವನ್ನು ಮಾತ್ರ ಸಾಧಿಸಿದರೆ) ಸಿದ್ಧವಾದ ಅರ್ಥವನ್ನೇ ಸಾಧಿಸಿರುವಪ್ರಯುಕ್ತ ಸಿದ್ಧಸಾಧನವು. ಜೀವರಿಗೇನೇ ಅದೃಷ್ಟದ್ವಾರಾ ಕ್ಷಿತ್ಯಾದಿಕರ್ತೃತ್ವವು ಯುಕ್ತವಾಗಬಹುದು. (10) ಹಾಗಾದರೂ ಅದೃಷ್ಟದ್ವಾರಾ ಜೀವರಿಗೇನೇ ಕರ್ತೃತ್ವವನ್ನು ಇಟ್ಟುಕೊಂಡು ಸಿದ್ಧಸಾಧನತ್ವವನ್ನು ಆಶಂಕಿಸುವವರೂ ಕೂಡ ಕೊನೆಗೆ ಅದೃಷ್ಟಕ್ಕೆ ನಿಯಾಮಕನಾಗಿ ಈಶ್ವರನನ್ನು ಅಂಗೀಕರಿಸಲೇಬೇಕು. ತಥಾಚ ಅವನೇ ಜಗತ್ಕರ್ತನೆಂದು ಒಪ್ಪಬೇಕೆಂದು ಹೇಳುತ್ತೇವೆಂದರೆ ಹಾಗೆ ಹೇಳಕೂಡದು. ಅದೃಷ್ಟಕ್ಕೆ ನಿಯಾಮಕನಾದವನಿಂದ ಅದೃಷ್ಟದಲ್ಲಿ ಹುಟ್ಟಬೇಕಾದ ಅತಿಶಯಾದಿಗಳು ಏನೂ ಕೂಡದಿರುವುದರಿಂದ ಅಂತಹ ಅದೃಷ್ಟನಿಯಾಮಕನಾದವನೊಬ್ಬನು ಇದ್ದಾನೆಂದು ಅಂಗೀಕರಿಸಲಿಕ್ಕೆ ಅಗತ್ಯವಿಲ್ಲ. (11) ಮತ್ತು ಕಾರ್ಯತ್ವರೂಪ ಹೇತುವು ಪಕ್ಷದಲ್ಲಿ ಯಾವುದರಿಂದ ಸಿದ್ಧವಾಯಿತು? ಅಭೂತ್ವಾಭಾವಿತ್ವದಿಂದ (ಮೊದಲು ಇಲ್ಲದೆ ಇದ್ದದ್ದು ಈಗ ಇರುವುದರಿಂದ) ಕಾರ್ಯತ್ವವು ಸಿದ್ಧವಾಯಿತೆಂದರೆ ಹಾಗೆ ಹೇಳಕೂಡದು. ಅಭೂತ್ವಾಭಾವಿತ್ವವೇ ಕಾರ್ಯತ್ವವು. (12) 'ಕೃತಿಸಾಧ್ಯತ್ವಂ ಕಾರ್ಯತ್ವಂ' ಎಂದು ಇಟ್ಟುಕೊಂಡು ಕಥಂಚಿತ್ ಕಾರ್ಯತ್ವದಿಂದ ಅಭೂತ್ವಾಭಾವಿತ್ವಕ್ಕೆ ಭೇದ ಹೇಳಿದರೂ ಅಭೂತ್ವಾಭಾವಿತ್ವರೂಪ ಹೇತುವು ಪಕ್ಷದಲ್ಲಿ ಕೆಲವುಕಡೆ ಇಲ್ಲದಿರುವುದರಿಂದ ಭಾಗಾಸಿದ್ಧವಾಗುವುದು. ಪರ್ವತ ಸಮುದ್ರ ಮೊದಲಾದುವುಗಳು ಮೊದಲು ಇಲ್ಲದೆಇದ್ದವುಗಳಾಗಿ ಈಗ ಇರುತ್ತವೆ ಎನ್ನುವುದನ್ನು ನಾನು ತಿಳಿದಿರುವುದಿಲ್ಲ. (13) ಹಾಗಾದರೆ ದ್ರವ್ಯಗಳಲ್ಲಿ ಸಾವಯುವತ್ವರೂಪ ಹೇತುವಿನಿಂದ ಕಾರ್ಯತ್ವವು ಸಿದ್ಧಿಸುತ್ತದೆಂದರೆ ಹಾಗೆ ಹೇಳಕೂಡದು. ಸಾವಯುವತ್ವವೆಂದರೆ ೧ ಸಮವಾಯಿಕಾರಣದಿಂದ ಹುಟ್ಟತಕ್ಕದು ಎಂದು ಇಟ್ಟುಕೊಂಡರೆ ಪ್ರತಿವಾದಿಗಳಿಗೆ (ಸಿದ್ಧಾಂತಿಗಳು ಸಮವಾಯಿಕಾರಣವನ್ನು ಒಪ್ಪದಿರುವುದರಿಂದ) ಅಸಿದ್ಧಿಯು. ೨ ಪರಿಣಾಮಿಕಾರಣದಿಂದ ಹುಟ್ಟತಕ್ಕದು ಎಂದು ಇಟ್ಟುಕೊಂಡರೆ ವಾದಿಗಳಿಗೆ (ತಾರ್ಕಿಕರು ಪರಿಣಾಮಿಕಾರಣವನ್ನು ಒಪ್ಪದಿರುವುದರಿಂದ) ಅಸಿದ್ಧಿಯು. ಮತ್ತು ಯಾರು ಕಾರ್ಯತ್ವಮಾತ್ರದಲ್ಲಿ (ಹುಟ್ಟಿದ್ದೆನ್ನುವುದರಲ್ಲಿ) ವಿಪ್ರತಿಪತ್ತಿ ಮಾಡುತ್ತಾರೋ, ಅವರು ಕಾರಣದಿಂದ ಹುಟ್ಟಿದ್ದೆನ್ನುವುದನ್ನೇ ಹೇಗೆ ಅಂಗೀಕರಿಸಿಯಾರು? ಸಮವಾಯಿಕಾರಣದಿಂದ ಹುಟ್ಟಿದ್ದೆನ್ನುವುದನ್ನು ಸುತರಾಂ ಒಪ್ಪಲಾರರು. ಈ ರೀತಿಯಾಗಿ ಕಾರ್ಯತ್ವಾನುಮಾನವು

ದುಷ್ಟವಾಗಿರುವಪ್ರಯುಕ್ತ ಈ ಅನುಮಾನದಿಂದ ಈಶ್ವರನು ಜಗತ್ಕರ್ತನೆಂದು ಸಿದ್ಧನಾಗಲಾರನು. (14) ಮತ್ತು 'ವಿವಾದಾಧ್ಯಾಸಿತಂ ಕರ್ಮ ಪ್ರಯತ್ನಾಧಾರಜಂ' ಎಂದು ಹಿಂದೆ ಹೇಳಿದ ಅನುಮಾನದಿಂದಲೂ ಈಶ್ವರನು ಸಿದ್ಧನಾಗಲಾರನು. ಏಕೆಂದರೆ— ಜೀವರಿಗೇನೇ ಅದೃಷ್ಟ ದ್ವಾರಾ ಕರ್ಮವನ್ನು ಹುಟ್ಟಿಸತಕ್ಕ ಪ್ರಯತ್ನಾಧಾರತ್ವವು ಕೂಡುವುದರಿಂದ ಸಿದ್ಧಸಾಧನತ್ವವು ಬರುವುದು. (15) ಮತ್ತು 'ಪೃಥಿವ್ಯುದಕೇ ಪ್ರಯತ್ನವತಾ ಧೃತೇ' ಎಂದು ಹೇಳಿದ ಅನುಮಾನ ದಲ್ಲಿಯೂ ಅದೃಷ್ಟದ್ವಾರಾ ಧಾರಣಾನುಕೂಲಪ್ರಯತ್ನವುಳ್ಳ ಜೀವರನ್ನೇ ಇಟ್ಟುಕೊಂಡು ಸಿದ್ಧ ಸಾಧನತ್ವರೂಪದೋಷವು ಬರುವುದು. ಮತ್ತು ವೃಕ್ಷಸಂಯೋಗವು ಫಲಪತನದಲ್ಲಿಯೂ, ವೇಗವು ಶರೀರಾದಿಪತನದಲ್ಲಿಯೂ, ಪ್ರಯತ್ನವು ಆಕಾಶಪ್ರದೇಶದಲ್ಲಿರುವ ಪಕ್ಷಿಶರೀರಾದಿಗಳ ಪತನದಲ್ಲಿಯೂ ಹೇಗೆ ಪ್ರತಿಬಂಧಕವೋ, ಹಾಗೆಯೇ ಪೃಥಿವ್ಯುದಕಗಳ ಪತನದಲ್ಲಿ ಕ್ಲೃಪ್ತ ಗಳಾದ ಸಂಯೋಗಾದಿಗಳು ಇಲ್ಲದಿದ್ದರೂ ಜೀವಾದೃಷ್ಟವೇ ಗುರುತ್ವಕಾರ್ಯಪತನಪ್ರತಿಬಂಧಕ ವೆಂದು ಕಲ್ಪಿಸಬಹುದು. ಧರ್ಮಿಯನ್ನು ಕಲ್ಪಿಸುವುದಕ್ಕಿಂತ ಧರ್ಮವನ್ನು ಕಲ್ಪಿಸುವುದು ಲಘುವಾದುದು. ಅಂತೂ ಈ ಅನುಮಾನಕ್ಕೆ ಈಶ್ವರನ ಸಿದ್ಧಿಯಿಲ್ಲದೇನೇ ಸಾಧ್ಯಪರ್ಯವಸಾನ ವಾಗುವುದರಿಂದ ಅನ್ಯಥಾಸಿದ್ಧಿಯು ಈ ಅನುಮಾನದಲ್ಲಿರತಕ್ಕ ಅಪಾತಿತ್ವ ಎನ್ನುವ ಹೇತುವು ಸಂದಿಗ್ಧವಾಗಿರುವುದರಿಂದ ಸಂದಿಗ್ಧಾಸಿದ್ಧವು. ಪೃಥಿವೀಸಮುದ್ರಗಳು ಅತಿದೊಡ್ಡ ಪದಾರ್ಥ ಗಳಾಗಿರುವುದರಿಂದ ಅವುಗಳ ಪತನವು ನಮಗೆ ಕಾಣದೆ ಇರಬಹುದು. (16) ಕ್ಷಿತ್ಯಾದಿಕಂ ಪ್ರಯತ್ನವದ್ವಿನಾಶ್ಯಂ ವಿನಾಶಿತ್ವಾತ್ ಎನ್ನುವ ಹೇತುವು ಸಂದಿಗ್ಧಾಸಿದ್ಧವು. (17) ಮತ್ತು ಈ ಅನುಮಾನಗಳೆಲ್ಲವೂ (೧) ಕ್ಷಿತ್ಯಾದಿಕಂ ವಿಕರ್ತೃಕಂ ಅನುಪಲಭ್ಯಮಾನಕರ್ತೃಕತ್ವಾತ್ ಗಗನವತ್=ಭೂಮಿಮೊದಲಾದುದು ಕರ್ತನಿಂದ ಹುಟ್ಟಿದ್ದಲ್ಲ, ಕ್ಷಿತ್ಯಾದಿಕರ್ತನನ್ನು ನಾವು ಕಾಣದಿರುವುದರಿಂದ, ಆಕಾಶದಂತೆ. (೨) ವಿವಾದಾಧ್ಯಾಸಿತಂ ಕರ್ಮ ನ ಪ್ರಯತ್ನಾಧಾರಜಂ ಅನುಪಲಭ್ಯಮಾನ ಸ್ವಜನಕ ಪ್ರಯತ್ನಾಧಾರಕತ್ವಾತ್ ಸಂಪ್ರತಿಪನ್ನವತ್=ವಿವಾದವಿಷಯವಾದ ಕರ್ಮವು ಪ್ರಯತ್ನಾಧಾರಜನ್ಯವಲ್ಲ, ಕರ್ಮವನ್ನು ಹುಟ್ಟಿಸತಕ್ಕ ಪ್ರಯತ್ನಾಧಾರನು ಕಾಣದಿರು ವುದರಿಂದ. (೩) ವಿಪ್ರತಿಪನ್ನೇ ಪೃಥಿವ್ಯುದಕೇ ನ ಪ್ರಯತ್ನವತಾ ಧೃತೇ ಅನುಪಲಭ್ಯಮಾನ ಸ್ವಜನಕ ಪ್ರಯತ್ನವತ್ಕತ್ವಾತ್ ಸಂಪ್ರತಿಪನ್ನವತ್' = ವಿವಾದವಿಷಯಗಳಾದ ಪೃಥಿವೀ ಜಲಗಳು ಪ್ರಯತ್ನವುಳ್ಳವನಿಂದ ಧರಿಸಲ್ಪಟ್ಟವುಗಳಲ್ಲ, ಧಾರಣವನ್ನುಂಟುಮಾಡತಕ್ಕ ಪ್ರಯತ್ನ ವುಳ್ಳವನು ಕಾಣದಿರುವುದರಿಂದ, (೪) ಕ್ಷಿತ್ಯಾದಿಕಂ ಪ್ರಯತ್ನವದ್ವಿನಾಶ್ಯಂ ಅನುಪಲಭ್ಯಮಾನ ಸ್ವವಿನಾಶಕ ಪ್ರಯತ್ನವತ್ಕತ್ವಾತ್ ಸಂಪ್ರತಿಪನ್ನವತ್=ಭೂಮಿಮೊದಲಾದುದು ಪ್ರಯತ್ನವುಳ್ಳ ವನಿಂದ ವಿನಾಶ್ಯವಲ್ಲ, ಕ್ಷಿತ್ಯಾದಿಗಳನ್ನು ವಿನಾಶಮಾಡತಕ್ಕ ಪ್ರಯತ್ನವುಳ್ಳವನು ಕಾಣದಿರುವು ದರಿಂದ, ಹೀಗೆ ಸತ್ಪ್ರತಿಪಕ್ಷಿತಗಳಾಗುತ್ತವೆ. (ಯಾವ ಹೇತುವಿಗೆ ಸಾಧ್ಯಾಭಾವವನ್ನು ಸಾಧಿಸ ತಕ್ಕ ಮತ್ತೊಂದು ಹೇತುವಿದೆಯೋ, ಅದು ಸತ್ಪ್ರತಿಪಕ್ಷಿತವು.) ಅನುಪಲಭ್ಯಮಾನತ್ವವೆಂದರೆ- ನಮ್ಮ ಉಪಲಬ್ಧಿಗೆ ಅಯೋಗ್ಯವಾದುದು. (18) 'ಕಾರ್ಯಾಯೋಜನ ಧೃತ್ಯಾದೇಃ ಪದಾ ತ್ಪ್ರತ್ಯಯತಃ ಶ್ರುತೇಃ । ವಾಕ್ಯಾತ್ಸಂಖ್ಯಾ ವಿಶೇಷಾಚ್ಚ ಸಾಧ್ಯೋ ವಿಶ್ವವಿದವ್ಯಯಃ' ಎಂದು ಉದಯನಾಚಾರ್ಯರು ಹೇಳಿದ ಅನುಮಾನಾಂತರಗಳಿಂದ ಜಗತ್ಕರ್ತನು ಸಿದ್ಧಿಸುವ ನೆಂದರೆ- ಜಗತ್ಕಾರಣನನ್ನು ಮಾತ್ರ ಸಾಧಿಸುವ ಈ ಸ್ವತಂತ್ರಾನುಮಾನಗಳನ್ನೆಲ್ಲಾ ಹಿಂದೆ ಹೇಳಿದ ಪ್ರಕಾರವೇ ನಿರಾಕರಿಸಬೇಕು. (19)ಮತ್ತು ಶಿವಾದಿಗಳು ಜಗತ್ಕಾರಣರು ಎನ್ನುವಲ್ಲಿ ಯಾವುದು ಪರಿಶೇಷಾನುಮಾನವೋ ಅದೂ (೧) ಶಾಸ್ತ್ರಾನುಸಾರಿಯಾದುದೋ, (೨) ಕೇವಲ ಪ್ರಮಾಣವೋ, (ಶಾಸ್ತ್ರಾನನುಸಾರಿಯಾದುದೋ) (೧)ಶಾಸ್ತ್ರವು ಕೇವಲ ಭಗವತ್ಪರವಾಗಿರುವುದರಿಂದ ಶಾಸ್ತ್ರಾನು

ಸಾರಿಯೆಂದು ಹೇಳಕೂಡದು. (೨) ಕೇವಲ ಪರಿಶೇಷಾನುಮಾನವು ಈಶ್ವರನ ವಿಷಯ ದಲ್ಲಿಯೂ, ಈಶ್ವರನು ಜಗತ್ಕರ್ತನೆನ್ನುವಲ್ಲಿಯೂ, ಪ್ರಮಾಣವಾಗಲಾರದು ॥ ೧೧೪ ॥

ಏಕೆ ಪ್ರಮಾಣವಾಗಲಾರದೆಂದರೆ—

**ಮೂ ॥ ಪುಂಸ್ತ್ವಹೇತು ಬಲಾದೇವ ಪೂರ್ವೋಕ್ತೇನೈವ ವರ್ತ್ಮನಾ ।**
**ಶಾಸ್ತ್ರಯೋನಿತ್ವಮೇತೇನ ಕಾರಣಸ್ಯ ಬಲಾದ್ಭವೇತ್ ॥ ೧೧೫ ॥**

ಅ ॥ ಪೂರ್ವೋಕ್ತೇನೈವ ವರ್ತ್ಮನಾ=ಶೈವಾಗಮಕ್ಕೆ ಪ್ರಾಮಾಣ್ಯವನ್ನು ಸಾಧಿಸುವ ಅನುಮಾನವನ್ನು ನಿರಾಕರಿಸುವ ಮಾರ್ಗದಿಂದಲೇ, (ಸತ್ಪ್ರತಿಪಕ್ಷತ್ವದಿಂದಲೇ) ಪುಂಸ್ತ್ವಹೇತು ಬಲಾದೇವ=ಪುಂಸ್ತ್ವರೂಪವಾದ ಹೇತುವಿನ ಸಾಮರ್ಥ್ಯದಿಂದಲೇ, (ಅಂದರೆ, ಶಿವಃ ನ ಜಗತ್ಕಾರಣಂ ಪುಂಸ್ತ್ವಾತ್ ದೇವದತ್ತವತ್=ಶಿವನು ಜಗತ್ಕಾರಣನಲ್ಲ, ಪುರುಷನಾದುದರಿಂದ ದೇವದತ್ತನಂತೆ ಎನ್ನುವ ಅನುಮಾನ ಸಾಮರ್ಥ್ಯದಿಂದಲೇ), ಏತೇನ=ಹಿಂದೆ ಹೇಳಿದಪ್ರಕಾರ, ಕಾರಣಸ್ಯ= ಜಗತ್ಕಾರಣನಿಗೆ, ಶಾಸ್ತ್ರಯೋನಿತ್ವಂ=ಋಗಾದಿಶಾಸ್ತ್ರವು ಅಭಿವ್ಯಂಜಕ ಪ್ರಮಾಣವೆನ್ನುವುದು, ಬಲಾತ್=ಬೇರೆ ರೀತಿಯಾಗಿ ಸಿದ್ಧಿಸದಿರುವ ಸಾಮರ್ಥ್ಯದಿಂದ, ಭವೇತ್=ಆಗುವುದು.

ತಾ ॥ ನ್ಯಾಯಸುಧಾ—(1) ಶಿವಃ ನ ಜಗತ್ಕಾರಣಂ ಎಂದು ಶಿವನಲ್ಲಿ ಜಗತ್ಕಾರಣತ್ವ ವಿಲ್ಲವೆಂದು ಸಾಧಿಸುವವರಿಗೆ ಪಕ್ಷನಾದ ಶಿವನೇ ಸಿದ್ಧನಲ್ಲವೆಂದು ಹೇಳುವುದಾದರೆ— 'ಜಗತ್ಕಾರಣತ್ವಂ ಶಿವನಿಷ್ಠಂ' ಎಂದು ಪರಿಶೇಷಾನುಮಾನವನ್ನು ಹೇಳುವ ನಿನಗೂ ಶಿವನು ಸಿದ್ಧನಲ್ಲವೆಂದು ಹೇಳುತ್ತೇವೆ (2) ಪರಿಶೇಷಾನುಮಾನಮಾಡುವ ನಮಗೆ ಲೋಕಪ್ರವಾದಾದಿಗಳಿಂದ ಸಿದ್ಧಿಸುವನೆಂದರೆ ನಮಗೂ ('ಶಿವನು ಜಗತ್ಕಾರಣನಲ್ಲ' ಎಂದು ಸಾಧಿಸುವ ಸಿದ್ಧಾಂತಿಗಳಿಗೂ) ಲೋಕಪ್ರವಾದಾದಿಗಳಿಂದ ಸಿದ್ಧಿಸುವವನೆಂದು ಹೇಳುತ್ತೇವೆ. (3) ಹಾಗಾದರೆ 'ಜಗತ್ಕಾರಣತ್ವಂ ಶಿವನಿಷ್ಠಂ ಅನ್ಯತ್ರಾನುಪಪತ್ತೌ ಸತ್ಯಾಂ ಕಿಂಚಿನ್ನಿಷ್ಠತಯಾ ಪ್ರಮಿತತ್ವಾತ್' ಎಂದು ನಾವು ಹೇಳಿದ ಪರಿಶೇಷಾನುಮಾನಕ್ಕೆ ಪಕ್ಷಸಾಧ್ಯಾದಿಗಳು ಬೇರೆ ಬೇರೆಯಾಗಿರುವುದರಿಂದ 'ಶಿವೋ ನ ಜಗತ್ಕಾರಣಂ ಪುಂಸ್ತ್ವಾತ್' ಎನ್ನುವುದು ಪ್ರತಿಪಕ್ಷನಾಗಲಾರದು, ಎಂದು ಹೇಳಕೂಡದು. ನೀವು ಹೇಳಿದ ಅನುಮಾನದಲ್ಲಿಯೂ ನಾವು ಹೇಳಿದ ಅನುಮಾನದಲ್ಲಿಯೂ ಪ್ರಯೋಗದ ರೀತಿಯಲ್ಲಿ ಪಕ್ಷಸಾಧ್ಯಗಳು ವ್ಯತ್ಯಸ್ತಗಳಾಗಿದ್ದರೂ ನಿಮ್ಮ ಅನುಮಾನದಿಂದ ಸಾಧಿಸುವ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಸಾಧಿಸುವ ನಮ್ಮ ಅನುಮಾನವು ಪ್ರತಿಪಕ್ಷವಾಗಿಯೇ ಆಗುತ್ತದೆ. ಪ್ರಯೋಗದಲ್ಲಿಯೂ ಸಾಮ್ಯವೇ ಇರಬೇಕೆನ್ನುವಲ್ಲಿ ಪ್ರಮಾಣವೂ ಇಲ್ಲ, ಪ್ರಯೋಜನವೂ ಇಲ್ಲ. (4) ಹಾಗಾದರೆ, ಸಾಮಾನ್ಯಸಿದ್ಧಿಯು ಅನುಪಪನ್ನವಾಗುವುದೆಂದರೆ ಆಗಲಿ, ಸಾಮಾನ್ಯತಃ ಜಗತ್ಕರ್ತೃತ್ವ ಸಾಧಕ ಅನುಮಾನಗಳು ದೂಷಿತಗಳಾಗಿವೆ. (5) ಹೀಗೆ ಜಗತ್ಕಾರಣನನ್ನು ಸಾಧಿಸುವ ಸ್ವತಂತ್ರಾನುಮಾನವನ್ನು ನಿರಾಕರಿಸಿದರಿಂದ ಜಗತ್ಕಾರಣನಿಗೆ ಶಾಸ್ತ್ರೈಕಸಮಧಿಗಮ್ಯತ್ವರೂಪವಾದ ಸೂತ್ರ ಹೇತುವು ಸಿದ್ಧವಾಯಿತು ॥ ೧೧೫ ॥

ಜಗತ್ಕಾರಣನು ಅನುಮಾನದಿಂದ ವೇದ್ಯನಲ್ಲವೆನ್ನುವುದು ಶ್ರುತಿಗಳಿಂದಲೂ ಸಿದ್ಧವಾಗಿದೆ ಎನ್ನುತ್ತಾರೆ.

**ಮೂ ॥ ನಾವೇದವಿನ್ನ ತರ್ಕೇಣ ಮತಿರಿತ್ಯಾದಿವಾಕ್ಯತಃ ।**
**ತರ್ಕೋ ಜ್ಞಾಪಯಿತುಂ ಶಕ್ತೋ ನೇಶಿತಾರಂ ಕಥಂಚನ ॥**
**ಪನಕೃತ್ವಾದಿರೂಪೇಣ ಪಕ್ಷಭೂತಸ್ಯ ಚೇಶಿತುಃ ॥ ೧೧೬ ॥**

**ಕಿಂಚಿಜ್ಜ್ಞತ್ವಂ ಹಿ ಪುಂಸ್ತ್ವೇನ ಶಕ್ಯಂ ಸಾಧಯಿತುಂ ಸುಖಂ ।**
**ವೃಕ್ಷಕೃನ್ನಾಖಿಲಂ ವೃಕ್ಷಂ ವೇತ್ತಿ ಪುಂಸ್ತ್ವಾದ್ಧಿ ಚೈತ್ರವತ್ ॥೧೧೭॥**

ಅ ॥ ನಾವೇದವಿತ್='ನಾವೇದವಿನ್ಮನುತೇದಂ ಬೃಹಂತಂ'ವೇದಜ್ಞಾನಿಯುಲ್ಲದವನು ಪೂರ್ಣನಾದ ಆ ಪರಮಾತ್ಮನನ್ನು ತಿಳಿಯಲಾರನು, ನ ತರ್ಕೇಣ ಮತಿಃ='ನೈಷಾ ತರ್ಕೇಣ ಮತಿರಾಪನೇಯಾ' ಪರಬ್ರಹ್ಮವಿಷಯಕವಾದ ಬುದ್ಧಿಯು ಅನುಮಾನದಿಂದ ಹೊಂದಲಿಕ್ಕೂ ತಿರಸ್ಕರಿಸಲಿಕ್ಕೂ ಆಗಲಾರದು, ಇತ್ಯಾದಿ ವಾಕ್ಯತಃ= 'ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ' ಪರಬ್ರಹ್ಮನನ್ನು ಇಂದ್ರಿಯಗಳು ತಿಳಿಸಲಾರವು, ಅನುಮಾನವೂ ತಿಳಿಸಲಾರದು, ವೇದಗಳೇ ತಿಳಿಸುತ್ತವೆ, ಇದುಮೊದಲಾದ ವಾಕ್ಯ (ಶ್ರುತಿ)ಗಳಿಂದ, (ಜಗತ್ಕಾರಣನು ಅನುಮಾನಗಳಿಂದ ವೇದ್ಯನಲ್ಲನೆಂದು ತಿಳಿಯಲ್ಪಡುತ್ತದೆ.) ತರ್ಕಃ=ಅನುಮಾನವು, ಈಶಿತಾರಂ=ಜಗತ್ಕರ್ತನನ್ನು, ಜ್ಞಾಪಯಿತುಂ = ತಿಳಿಸಿಕೊಡಲಿಕ್ಕೆ, ಕಥಂಚನ= ಯಾವ ಪ್ರಕಾರದಿಂದಲೂ, ಸಾಮಾನ್ಯವಾಗಿಯೂ, ವಿಶೇಷವಾಗಿಯೂ, ನ ಶಕ್ತಃ=ಸಮರ್ಥವಾಗಲಾರದು. (ಕಾರ್ಯತ್ವಾತ್ ಇದುಮೊದಲಾದ ಹೇತುಗಳಿಂದ ಈಶ್ವರನಿಗೆ ಸಾರ್ವಜ್ಞಾದಿಗಳು ಸಿದ್ಧಿಸುತ್ತವೆ ಎನ್ನುವುದೂ ಪ್ರತಿಪಕ್ಷಾನುಮಾನದಿಂದ ದುಷ್ಟವಾಗಿರುವಪ್ರಯುಕ್ತ ಅಯುಕ್ತವೆನ್ನುತ್ತಾರೆ.) ವನಕೃತ್ವಾದಿರೂಪೇಣ = 'ಪ್ರಸಿದ್ಧ ಕರ್ತೃರಹಿತಂ ವನಂ ಸಕರ್ತೃಕಂ ಕಾರ್ಯತ್ವಾತ್' ಪ್ರಸಿದ್ಧಕರ್ತೃವಿರಹಿತವಾದ ಅರಣ್ಯವು ಕರ್ತೃಸಹಿತವಾಗಿದೆ ಕಾರ್ಯವಾಗಿರುವುದರಿಂದ ಇತ್ಯಾದಿಗಳಿಂದ ಅರಣ್ಯಾದಿಗಳನ್ನು ಮಾಡಿದವನು ಯಾವನು ಸಿದ್ಧನಾಗಿರುವನೋ ಆ ಆಕಾರದಿಂದ ಮತ್ತು ಪರ್ವತಧಾರಕತ್ವ ಮೊದಲಾದ ಧರ್ಮದಿಂದ, ಪಕ್ಷಭೂತಸ್ಯ ಚ=ಸಾಧ್ಯಪ್ರಕಾರಕ ಸಂದೇಹ ವಿಶೇಷ್ಯನಾದ, ಈಶಿತುಃ=ಸ್ವಾಮಿಯಾದ ಶ್ರೀಹರಿಗೆ,(ಜಗತ್ಕಾರಣನಿಗೆ) ಪುಂಸ್ತ್ವೇನ= ಪುರುಷತ್ವರೂಪವಾದ ಹೇತುವಿನಿಂದ, ಕಿಂಚಿಜ್ಜ್ಞತ್ವಂ=ಅಲ್ಪಜ್ಞತ್ವವು, ಸುಖಂ = ಸುಖವಾಗಿ, ಸಾಧಯಿತುಂ=ಸಾಧಿಸಲಿಕ್ಕೆ, ಶಕ್ಯಂ ಹಿ=ಶಕ್ಯವಾಗುವುದಷ್ಟೇ. (ಈಶ್ವರಃ ಕಿಂಚಿಜ್ಜ್ಞಃ ಪುಂಸ್ತ್ವಾತ್ ದೇವದತ್ತವತ್ = ಈಶ್ವರನು ಅಲ್ಪಜ್ಞನು ಪುರುಷನಾದಪ್ರಯುಕ್ತ ದೇವದತ್ತನಂತೆ. ಎಂದನುಮಾನವು.) (ಅಲ್ಪಜ್ಞತ್ವವನ್ನು ಮಾತ್ರ ಸಾಧಿಸಲಿಕ್ಕೆ ಶಕ್ಯವೆಂದಲ್ಲ. ಮತ್ತೆ ತಾನು ಮಾಡತಕ್ಕ ಕಾರ್ಯವನ್ನೂ ತಿಳಿಯಲಾರನೆಂದು ಸಾಧಿಸಲಿಕ್ಕೆ ಶಕ್ಯವಾಗುವುದೆನ್ನುತ್ತಾರೆ) ವೃಕ್ಷಕೃತ್ = ಪ್ರಸಿದ್ಧಕರ್ತನಿಲ್ಲದಿರುವ ವೃಕ್ಷವನ್ನು ಮಾಡುವವನು, ಪುಂಸ್ತ್ವಾತ್ = ಪುರುಷತ್ವವಿದ್ದುದರಿಂದ, ಚೈತ್ರವತ್=ಚೈತ್ರನಂತೆ, ಅಖಿಲಂ=ಆರಂಭಕ ಅವಯವ ಸಂಖ್ಯಾ ಫಲ ಪರಿಮಾಣವಿಶೇಷಗಳಿಂದ ಸಹಿತವಾದ, ವೃಕ್ಷಂ=ಮರವನ್ನು , ನ ವೇತ್ತಿ=ತಿಳಿಯುವುದಿಲ್ಲ. 'ಹಿ= ಪ್ರಸಿದ್ಧವು. ಸರ್ವಜ್ಞತ್ವಾಭಾವವನ್ನು ಇಟ್ಟುಕೊಂಡರೆ ಬಾಧಕವಿಲ್ಲವೆಂದು ಸೂಚಿತವಾಯಿತು. ಹೇಗೆಂದರೆ— ಯಾರು ಯಾವುದನ್ನುಂಟುಮಾಡುವನೋ ಅವನು ಅವೆಲ್ಲವನ್ನು ತಿಳಿಯುತ್ತಾನೆಂದು ನಿಯಮವಿಲ್ಲವಷ್ಟೇ ॥ ೧೧೬ ॥ ೧೧೭ ॥

ಇದೇ ರೀತಿಯಾಗಿ ಎಲ್ಲಾ ಕಡೆಗಳಲ್ಲಿಯೂ ಪ್ರತಿಪಕ್ಷಾನುಮಾನವು ಕೂಡುವುದರಿಂದ ಸತ್ಯಸಂಕಲ್ಪತ್ವ-ಅಶರೀರತ್ವ-ನಿತ್ಯಜ್ಞಾನ - ಇಚ್ಛಾಪ್ರಯತ್ನವತ್ವ ದುಃಖಾದಿ ರಾಹಿತ್ಯಗಳನ್ನೂ ಅನುಮಾನದಿಂದ ಸಾಧಿಸಲಿಕ್ಕೆ ಶಕ್ಯವಾಗುವುದಿಲ್ಲ ಎಂದಭಿಪ್ರಾಯವುಳ್ಳವರಾಗಿ ಹೇಳುತ್ತಾರೆ.

**ಮೂ ॥ ಇತ್ಯಾದ್ಯನುಮಯಾ ಸ್ಪರ್ಧಿ ನಾನುಮಾನಂ ಪರೇಶಿತುಃ ।**
**ಶಕ್ತಂ ವಿಜ್ಞಾಪನೇ ಚಾತಿಪ್ರಸಂಗೋಽನುಮಯೋದ್ಭಟಾ ॥ ೧೧೮ ॥**

**ವಸ್ತುತ್ವಾತ್ತುರಗಃ ಶೃಂಗೀ ಪುಷ್ಪವತ್ ಖಂ ಸುತೈರ್ಯುತಾ |**
**ಚಿತ್ರಿಣೀ ಚ ರಸಃ ಷಷ್ಠೋ ರಸತ್ವಾತ್ ಸೋತ್ತರೋ ಭವೇತ್ ||೧೧೯||**

**ಅ ||** ಇತ್ಯಾದ್ಯನುಮಯಾ = ಇದುಮೊದಲಾದ ಪ್ರಕಾರವಿರುವ ಅನುಮಾನದಿಂದ, ಸ್ಪರ್ಧಿ=ಸತ್ಪ್ರತಿಪಕ್ಷಿತವಾದ, ಅನುಮಾನಂ=ಅನುಮಾನವು, ಪರೇಶಿತುಃ=ಸತ್ಯಸಂಕಲ್ಪತ್ವಾದಿಗಳಿಂದ ಯುಕ್ತನಾದ ಶ್ರೀಹರಿಯನ್ನು, ವಿಜ್ಞಾಪನೇ=ತಿಳಿಸಿಕೊಡುವ ವಿಷಯದಲ್ಲಿ, ನ ಶಕ್ತಂ=ಸಮರ್ಥವಾಗುವುದಿಲ್ಲ. (ಈಶ್ವರಸಾಧಕವಾದ ಅನುಮಾನಗಳ ಸಮುದಾಯವು ಆಭಾಸಸಮಾನಯೋಗಕ್ಷೇಮವಾಗಿದೆ ಎನ್ನುತ್ತಾರೆ.) ಈದೃಶಾ=ಇಂತಹ, ಅಂದರೆ, ಆಗಮಾದಿಗಳ ಸಹಾಯ ಸಂಪತ್ತನ್ನು ಬಿಟ್ಟು ಅತ್ಯಂತ ಅತೀಂದ್ರಿಯಾರ್ಥಗಳಲ್ಲಿ ಪ್ರಯೋಗಿಸಲ್ಪಡತಕ್ಕ, ಅನುಮಯಾ=ಅನುಮಾನದಿಂದ, ಅತಿಪ್ರಸಂಗಶ್ಚ=ಅತಿಪ್ರಸಂಗವೂ ಕೂಡ, (ಬರುತ್ತದೆ.) (ಅತಿಪ್ರಸಂಗವನ್ನೇ ತೋರಿಸುತ್ತಾರೆ) (೧) ತುರಗಃ ಶೃಂಗೀ ವಸ್ತುತ್ವಾತ್=ಕುದುರೆಯು, ಕೋಡುವುಳ್ಳದ್ದು, ಪಶುವಾಗಿರುವುದರಿಂದ, (೨) ಖಂ ಪುಷ್ಪವತ್ ವಸ್ತುತ್ವಾತ್=ಆಕಾಶವು ಪುಷ್ಪವುಳ್ಳದ್ದು, ಪದಾರ್ಥವಾಗಿರುವುದರಿಂದ (೩) ಚಿತ್ರಿಣೀ ಚ ಸುತೈಃ ಯುತಾ ವಸ್ತುತ್ವಾತ್= ವಂಧ್ಯೆಯು ಮಕ್ಕಳುಳ್ಳವಳು ಸ್ತ್ರೀಯಾಗಿರುವುದರಿಂದ, ಸಂಮತಳಂತೇ (೪) ಷಷ್ಠೋರಸಃ ಸೋತ್ತರಃ ಭವೇತ್ ರಸತ್ವಾತ್ ಪ್ರಥಮರಸವತ್=ಆರನೇ ರಸವು ತನ್ನಿಂದ ಮೇಲೆ ಇರುವ ಏಳನೇ ರಸವುಳ್ಳದ್ದು ಆಗುವುದು, ರಸವಾಗಿರುವುದರಿಂದ ಒಂದನೇ ರಸದಂತೆ. (ತಥಾಚ) ಆಗಮ ಸಹಾಯವಿಲ್ಲದಿರುವ ಸ್ವತಂತ್ರವಾದ ಈಶ್ವರಾನುಮಾನಕ್ಕೆ ಪ್ರಾಮಾಣ್ಯವಿದ್ದರೆ ಈ ಅನುಮಾನಗಳಿಗೂ ಪ್ರಾಮಾಣ್ಯವು ಬರಬೇಕಾಗುವುದು. ಆದಕಾರಣ ಕೇವಲಾನುಮಾನವು ಈಶ್ವರನನ್ನು ತಿಳಿಸಲಾರದು. || ೧೧೮ || || ೧೧೯ ||

ಹಾಗಾದರೆ ವಿಚಾರಶಾಸ್ತ್ರ (ಅನುಮಾನರೂಪ ನ್ಯಾಯನಿಬಂಧನಶಾಸ್ತ್ರ) ವನ್ನು ಆರಂಭಿಸಿಕೊಂಡು ಜಗತ್ಕಾರಣನಲ್ಲಿ ಅನುಮಾನಕ್ಕೆ ಅವಕಾಶವಿಲ್ಲವೆಂದು ವ್ಯುತ್ಪಾದಿಸಿದ್ದು ವ್ಯಾಹತವೆಂಬುವ ಆಶಂಕೆಯನ್ನು ಪರಿಹರಿಸುತ್ತಾ ಉಪಸಂಹಾರಮಾಡುತ್ತಾರೆ.

**ಮೂ || ಉಪಕ್ರಮಾದಿಲಿಂಗೇಭ್ಯೋ ನಾನ್ಯಾ ಸ್ಯಾದನುಮಾ ತತಃ || ೧೨೦ ||**

**ಅ ||** ತತಃ=ಆದಕಾರಣ, ಅಂದರೆ, ಕೇವಲಾನುಮಾನವು ಕಾಮಚಾರಿಯಾಗಿರುವುದರಿಂದ, ಉಪಕ್ರಮಾದಿಲಿಂಗೇಭ್ಯಃ = ಉಪಕ್ರಮ ಉಪಸಂಹಾರ ಮೊದಲಾದ ಲಿಂಗಗಳ ದೆಸೆಯಿಂದಲೂ, ಆಗಮಾನುಗ್ರಹೀತಗಳಾದ ಅನುಮಾನಗಳ ದೆಸೆಯಿಂದಲೂ, ಅನ್ಯಾ=ಬೇರೆಯಾದುದು, ಅನುಮಾ=ಅನುಮಾನವು, ನ ಸ್ಯಾತ್=ಆಗಲಾರದು.

**ತಾ ||** (1) ಯಾವುದಕ್ಕೆ ಆಗಮಗಳ ಸಾಹಾಯ್ಯವಿದೆಯೋ ಅವುಗಳೇ ಸದನುಮಾನಗಳು. ಪಕ್ಷಧರ್ಮತಾ ಮೊದಲಾದ ಅಂಗಗಳು ಅಪೌರುಷೇಯವಾಗಿರುವುದರಿಂದ ಸ್ವತಃ ಪ್ರಮಾಣವಾದ ಶಾಸ್ತ್ರದಿಂದಲೇ ಸಿದ್ಧಿಸುತ್ತವೆ. ಪ್ರತಿಪಕ್ಷಾದಿಗಳು ಶಾಸ್ತ್ರವಿರುದ್ಧವಾಗಿರುವುದರಿಂದ ಬಾಧಿತಗಳಾಗಿವೆ. (2) ಆದಕಾರಣ ಹಿಂದೆ ಹೇಳಿದ ಪ್ರಕಾರ ಜಗತ್ಕಾರಣನು ಶಾಸ್ತ್ರಗಳಿಂದಲೇ ತಿಳಿಯಲರ್ಹನಾದುದರಿಂದ ಅನುಮಾನಾದಿಗಳಿಂದ ಲಕ್ಷಣಕ್ಕೆ ಅತಿವ್ಯಾಪ್ತಿ ಹೇಳಿದ್ದು ಯುಕ್ತವಲ್ಲ. ಅಂತೂ ಅತಿಪ್ರಸಂಗಾದಿ ದೋಷಗಳು ಬರುವುದರಿಂದ ಕೇವಲ ಅನುಮಾನವು ಜಗತ್ಕಾರಣನನ್ನು ಸಾಧಿಸಿಕೊಡಲಾರದು.

(ಸಾರಾಂಶ.)

ಸ. ರ. ವಿ.— (1) ಶೈವಾಗಮಃ ಪ್ರಮಾಣಂ ರುದ್ರ ಪ್ರೋಕ್ತತ್ವಾತ್ ಪ್ರತ್ಯಕ್ಷ ಫಲಕರ್ಮ ವಿಧಾಯಕ ಶೈವಾದ್ಯಾಗಮವತ್=ರುದ್ರನಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸತಕ್ಕ ಶೈವಾದ್ಯಾಗಮವು ಪ್ರಮಾಣವು ರುದ್ರನು ಹೇಳಿರುವಪ್ರಯುಕ್ತ, ಪ್ರತ್ಯಕ್ಷ ಫಲವುಳ್ಳ ಕರ್ಮವನ್ನು ವಿಧಿಸತಕ್ಕ ಶೈವಾದ್ಯಾಗಮಗಳಂತೆ, ಎಂದರೆ, ಇದು ಯುಕ್ತವಲ್ಲ. ವಿಮತಾಗಮಃ ಅಪ್ರಮಾಣಂ ರುದ್ರ ಪ್ರೋಕ್ತತ್ವಾತ್ ಫಲವ್ಯಭಿಚಾರಿ ಕರ್ಮವಿಧಾಯಕ ಶೈವಾದ್ಯಾಗಮವತ್=ವಿವಾದಾಸ್ಪದವಾದ ಅಗಮವು ಪ್ರಮಾಣವಲ್ಲ, ರುದ್ರನು ಹೇಳಿರುವಪ್ರಯುಕ್ತ ಫಲವ್ಯಭಿಚಾರಿ (ಕರ್ಮವಾಡಿದರೂ ಫಲ ಸಿಗದಿರುವ) ಕರ್ಮವನ್ನು ವಿಧಿಸತಕ್ಕ ಶೈವಾದ್ಯಾಗಮಗಳಂತೆಯೇ, ಎಂದೂ ಹೇಳಲು ಶಕ್ಯವಾಗುತ್ತದೆ. (2) ವಿವಾದಪದಂ ಸಕರ್ತೃಕಂ ಕಾರ್ಯತ್ವಾತ್ ಯಃ ಕರ್ತಾ ಸ ಚ ರುದ್ರಃ=ವಿವಾದವಿಷಯವಾದುದು ಕರ್ತೃಜನ್ಯವು ಕಾರ್ಯವಾಗಿರುವುದರಿಂದ ಯಾರು ಕರ್ತನೋ ಅವನು ರುದ್ರನು, ಎನ್ನುವ ಅನುಮಾನಾಂತರವು ರುದ್ರನಿಗೆ ಜಗತ್ಕಾರಣತ್ವವಿದೆ ಎನ್ನುವಲ್ಲಿ ಪ್ರಮಾಣವಿದೆ ಎಂದರೆ— ಹೀಗೆ ಹೇಳಕೂಡದು. ವಿಮತಃ ಜಗತ್ಕಾರಣಂ ನ ಭವತಿ ಚೇತನತ್ವಾತ್ ಚೈತ್ರವತ್=ವಿಮತನು ಜಗತ್ಕಾರಣನಾಗುವುದಿಲ್ಲ, ಚೇತನನಾಗಿರುವುದರಿಂದ ಚೈತ್ರನಂತೆ ಎನ್ನುವ ಅನುಮಾನದಿಂದ ಪರಾಹತವಾಗಿದೆ. (3) ಈ ಹೇಳಿದ ನ್ಯಾಯದಿಂದ ಬೇರೆ ಪ್ರಮಾಣಗಳು ಕೂಡದಿರುವುದರಿಂದ ಜಗತ್ಕಾರಣನಲ್ಲಿ ಶಾಸ್ತ್ರವೇ ಪ್ರಮಾಣವೆನ್ನುವುದನ್ನು ಅವಶ್ಯವಾಗಿ ಅಂಗೀಕರಿಸತಕ್ಕದ್ದು. (4) 'ನಾವೇದವಿನ್ಮನುತೇ(ದಂ)ತಂ ಬೃಹಂತಂ ಸರ್ವಾನುಭೂಮಾತ್ಮಾನಂ ಸಾಂಪರಾಯೇ' 'ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ' ಇದು ಮೊದಲಾದ ಶ್ರುತಿಗಳಿಂದ ಶ್ರೀ ಹರಿಯು ಅನುಮಾನದಿಂದ ಗಮ್ಯನಲ್ಲವೆಂದು ಸಿದ್ಧವಾಯಿತು. (5) ಮತ್ತು ಕಾರ್ಯತ್ವಹೇತುವಿನಿಂದ ಪಕ್ಷಧರ್ಮತೆಯ ಬಲದಿಂದ ಸರ್ವಜ್ಞನಾದವನೊಬ್ಬನು ಸರ್ವಕರ್ತನೆಂದು ಸಿದ್ಧಿಸುವುದಿಲ್ಲ. ಮತ್ತೆ ಲೌಕಿಕ ಕರ್ತ್ರನವೇಕ್ಷೋತ್ಪತ್ತಿಕ ವನಕರ್ತಾ, ಕಿಂಚಿಜ್ಜ್ಞಃ ಕಿಂಚಿತ್ಕರ್ತಾ ಚ ಪುಂಸ್ತ್ವಾತ್ ಸಮ್ಮತವತ್=ಲೌಕಿಕ ಕರ್ತನ ಅಪೇಕ್ಷೆಯಿಲ್ಲದೆ ಉತ್ಪತ್ತಿಯುಳ್ಳ ವನವನ್ನು ಸೃಷ್ಟಿಸಿದವನು ಅಲ್ಪಜ್ಞನು, ಅಲ್ಪವನ್ನು ಸೃಷ್ಟಿಸುವನು, ಪುರುಷನಾದ ಪ್ರಯುಕ್ತ, ಸಮ್ಮತನಂತೆ. ಪ್ರಸಿದ್ಧವಾದ ಕರ್ತನನ್ನು ಅಪೇಕ್ಷಿಸದೆ ಉತ್ಪತ್ತಿಯುಳ್ಳ ವೃಕ್ಷವನ್ನು ಮಾಡುವವನು, ಆ ವೃಕ್ಷವನ್ನೇ ಸಂಪೂರ್ಣ ತಿಳಿದವನಲ್ಲ, ಪುರುಷನಾದ ಪ್ರಯುಕ್ತ, ಸಮ್ಮತನಂತೆ, ಎನ್ನುವ ಅನುಮಾನದಿಂದ ಪ್ರತಿಪಕ್ಷಿತವಾಗಿರುವುದರಿಂದ ಅನುಮಾನವು ಶ್ರೀ ಹರಿಯನ್ನು ತಿಳಿಸುವ ವಿಷಯದಲ್ಲಿ ಸಮರ್ಥವಾದುದಲ್ಲ. (6) ಈಶಾನುಮಾನವು ಅನೇಕ ಅತಿಪ್ರಸಂಗಾನುಮಾನದಿಂದ ಬಾಧಿತವಾಗಿದೆ. ಹೇಗೆಂದರೆ— (೧) ತುರಗಃ ಶೃಂಗೀ, ೨ ಖಂ ಪುಷ್ಪವತ್, ೩ ವಂಧ್ಯಾ ಪುತ್ರವತೀ ವಸ್ತುತ್ವಾತ್ ಸಂಮತವತ್=ಕುದುರೆಯು ಕೋಡುವುಳ್ಳದ್ದು, ಆಕಾಶವು ಪುಷ್ಪವುಳ್ಳದ್ದು, ಬಂಜೆಯು ಮಕ್ಕಳುಳ್ಳವಳು, ಪದಾರ್ಥವಾಗಿರುವುದರಿಂದ, ನಿಶ್ಚಿತವಾದುದರಂತೆ. ೪ ಷಷ್ಠೋರಸಃ ಸ್ವೋತ್ತರರಸಃ ರಸತ್ವಾತ್ ಪ್ರಥಮರಸವತ್=ಆರನೇ ರಸವು ಮೇಲಿನದ್ದಾದ ಏಳನೇ ರಸವುಳ್ಳದ್ದು, ರಸವಾಗಿರುವುದರಿಂದ ಒಂದನೇ ರಸದಂತೆ. ವಸ್ತುತ್ವಾತ್ ಎನ್ನುವ ಹೇತುವಿಗೆ ಘಟಾದಿಗಳಲ್ಲಿ ವ್ಯಭಿಚಾರವು. (ಘಟಾದಿಗಳಲ್ಲಿ ಸಾಧ್ಯವಿಲ್ಲವು, ಹೇತುವಿದೆ.) ಹೀಗೆ ಶಂಕಿಸಕೂಡದು. ಅವುಗಳು ಪಕ್ಷತುಲ್ಯಗಳು. ಪ್ರತ್ಯಕ್ಷಬಾಧವೆಂದೂ ಹೇಳಕೂಡದು. ಈಶಾನುಮಾನದಲ್ಲಿಯೂ ಪ್ರತ್ಯಕ್ಷಬಾಧವು ತುಲ್ಯವೇ. ಶ್ರೀ ಹರಿಯು ಪ್ರತ್ಯಕ್ಷಕ್ಕೆ ಅಯೋಗ್ಯನೆಂದರೆ ಅಶ್ವಶೃಂಗಾದಿಗಳೂ ಪ್ರತ್ಯಕ್ಷಕ್ಕೆ

ಅಯೋಗ್ಯಗಳು. ಆದಕಾರಣ ಅತಿಪ್ರಸಂಗ ಮೊದಲಾದ ದೂಷಣಗಳಿಂದ ಪರಾಹತವಾಗಿರುವುದರಿಂದ ಸ್ವತಂತ್ರಾನುಮಾನವು ಜಗತ್ಕಾರಣನನ್ನು ಸಾಧಿಸಲಾರದು.

## ಅದ್ವೈತಿಗಳ ವ್ಯಾಖ್ಯಾನನಿರಾಕರಣವು.

(1) ಅದ್ವೈತಿಗಳು 'ಶಾಸ್ತ್ರಸ್ಯ ಯೋನಿಃ ಶಾಸ್ತ್ರಯೋನಿಃ' ಎಂದು ವಿಗ್ರಹಮಾಡಿ ಶಾಸ್ತ್ರಕ್ಕೆ ಕಾರಣನು ಬ್ರಹ್ಮನು ಎಂದು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುವರು. ಅದು ಸರ್ವಥಾ ಅಯುಕ್ತವು. ಆ ಅರ್ಥವು ಪ್ರಕೃತವಾದುದಕ್ಕೆ (ಅಂದರೆ ಪೂರ್ವ ಸೂತ್ರದಲ್ಲಿ ಹೇಳಿದ ಜಗತ್ಕಾರಣತ್ವಕ್ಕೆ) ಉಪಯುಕ್ತವಾದುದಲ್ಲ. ಏಕೆಂದರೆ ಬ್ರಹ್ಮನು ಜಗತ್ಕಾರಣನೆನ್ನುವಲ್ಲಿ ಶಾಸ್ತ್ರಕಾರಣತ್ವವು ಹೇತುವಾಗಲಾರದು. ಯಾರು ಶಾಸ್ತ್ರವನ್ನು ನಿರ್ಮಿಸುವವನೋ? ಅವನು ಜಗತ್ತನ್ನುಂಟುಮಾಡುವವನು ಎಂದು ವ್ಯಾಪ್ತಿಯು ಕಂಡುಬರಲಿಲ್ಲ. (2) ಹಾಗಾದರೆ ಪೂರ್ವ ಸೂತ್ರದಲ್ಲಿ ಬ್ರಹ್ಮನು ಜಗತ್ಕಾರಣನೆಂದು ಹೇಳಿದುದರಿಂದ ಸಿದ್ಧವಾದ ಸಾರ್ವಜ್ಞ್ಯವು ಈ ಸೂತ್ರದಲ್ಲಿ ವೇದಾದಿ ಶಾಸ್ತ್ರಕಾರಣತ್ವರೂಪ ಹೇತುವಿನಿಂದ ಸ್ಪಷ್ಟೀಕರಿಸಲ್ಪಡುತ್ತದೆ ಎಂದು ಹೇಳಕೂಡದು. ಏಕೆಂದರೆ, ವೇದವೂ ಕೂಡ ಸಕಲಜಗತ್ತಿನಲ್ಲಿಯೇ ಅಂತರ್ಭೂತವಾಗಿದೆ. ಮತ್ತು ಅನಂತಾನಂತ ಪದಾರ್ಥಾತ್ಮಕವಾದ ಪ್ರಪಂಚವನ್ನು ಸೃಷ್ಟಿ ಮಾಡೋಣದರಿಂದಲೂ ಅಸ್ಪಷ್ಟವಾದ ಸಾರ್ವಜ್ಞ್ಯವು ಜಗತ್ತಿನ ಏಕದೇಶವಾದ ವೇದಕ್ಕೆ ಕಾರಣನೆಂದು ಹೇಳುವುದರಿಂದ ಹೇಗೆ ಸ್ಪಷ್ಟವಾಗುವುದು? (3) ಹಾಗಾದರೆ ಪ್ರಧಾನಾದಿಗಳಲ್ಲಿ ಜಗತ್ಕಾರಣತ್ವವನ್ನು ನಿರಾಕರಿಸಿ ಬ್ರಹ್ಮನಲ್ಲಿಯೇ ಜಗತ್ಕಾರಣತ್ವವನ್ನು ಸಾಧಿಸುವುದಕ್ಕಾಗಿ ಪೂರ್ವಸೂತ್ರದಲ್ಲಿ ಹೇತುವಾಗಿ ಹೇಳಿದ (ಜಗತ್ಕಾರಣತ್ವದಿಂದ ಸಾಧಿಸಲ್ಪಟ್ಟ) ಸಾರ್ವಜ್ಞ್ಯವನ್ನೇ ಶಾಸ್ತ್ರಯೋನಿತ್ವದಿಂದ ಸಾಧಿಸುತ್ತೇವೆಂದರೆ ಹಾಗೆ ಹೇಳಕೂಡದು. ಸ್ವರೂಪಾಸಿದ್ಧಿಯು (ಪಕ್ಷದಲ್ಲಿ ಹೇತುವಿಲ್ಲದಿರುವುದು.) ಬರಬೇಕಾಗುವುದು. ಹೇಗೆಂದರೆ, ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಅಂಗೀಕರಿಸದೆ ಇರುವವನು ವೇದಕಾರಣತ್ವವನ್ನು ಅಂಗೀಕರಿಸಲಾರನಷ್ಟೆ. ಆಗಮದಿಂದ ಸಾಧಿಸುತ್ತೇವೆ ಎಂದರೆ— ಜಗತ್ಕಾರಣತ್ವವನ್ನೇ ಆಗಮದಿಂದ ಏಕೆ ಸಾಧಿಸಬಾರದು? ಮತ್ತು ಈಕ್ಷತ್ಯಧಿಕರಣದಲ್ಲಿ ಈಕ್ಷಣರೂಪ ಹೇತುವಿನಿಂದ ಪ್ರಧಾನಕ್ಕೆ ಕಾರಣತ್ವವನ್ನು ನಿರಾಕರಿಸುವುದರಿಂದ ಈಕ್ಷತ್ಯಧಿಕರಣಾದಿಗಳಿಂದ ಜನ್ಮಾದಿ ಸೂತ್ರಕ್ಕೆ ಪುನರುಕ್ತಿಯೂ ಬರಬೇಕಾಗುವುದು. (4) "ಜಗತ್ಕಾರಣತ್ವದಿಂದ ಸರ್ವಜ್ಞತ್ವವು ಸಿದ್ಧಿಸುವುದಿಲ್ಲ ವೇದವನ್ನು ಮಾಡದಿರುವುದರಿಂದ ಎಂದಾಶಂಕಾ ಬಂದರೆ ಶಾಸ್ತ್ರಯೋನಿತ್ವಾತ್ ಎನ್ನುವ ಸೂತ್ರದಿಂದ ಶಾಸ್ತ್ರಕಾರಣತ್ವವು ಹೇಳಲ್ಪಟ್ಟದೆ ಎಂದರೆ ಹಾಗೆ ಹೇಳಕೂಡದು. ಹಾಗಾದರೆ ಶಾಸ್ತ್ರಯೋನಿತ್ವ ವಿಷಯದಲ್ಲಿ ಪ್ರಮಾಣವನ್ನು ಸೂತ್ರದಲ್ಲಿ ಉಪನ್ಯಾಸ ಮಾಡದಿರುವುದರಿಂದ ಈ ಸೂತ್ರವು ಕೇವಲ ಪ್ರತಿಜ್ಞೆಯೆಂದೇ ಆಗಬೇಕಾಗುವುದು. (5) ಆಕಾಶಾದಿಗಳ ವಿಷಯದಲ್ಲಿಯೂ ಹೀಗೆ ಆಶಂಕೆಯು ಬರಬೇಕಾಗುವುದು. ಹಾಗಾದರೆ ವಿಯದಧಿಕರಣಾದಿಗಳಲ್ಲಿ ಆ ಆಶಂಕೆಯೂ ನಿರಾಕರಿಸಲ್ಪಡುವುದೆಂದರೆ ಹಾಗಾದರೆ ಅದರಿಂದಲೇ ಇದು ಗತಾರ್ಥವಾಗುವುದು. (6) ಮತ್ತು ವೇದವನ್ನು ಮಾಡದಿರುವುದರಿಂದ ಸಾರ್ವಜ್ಞ್ಯವು ಕೂಡುವುದಿಲ್ಲವೆನ್ನುವ ಶಂಕೆಯೇ ನಿರ್ಮೂಲವು. ಅದನ್ನು ಮಾಡಿದವನೇ ಅದನ್ನು ತಿಳಿಯಬೇಕೆಂಬುವ ನಿಯಮವು ಇಲ್ಲವಷ್ಟೆ. ಘಟಾದಿಗಳನ್ನು ಮಾಡದಿದ್ದವನಿಗೂ ಘಟಾದಿಗಳ ಜ್ಞಾನವು ದೃಷ್ಟವಾಗಿದೆ. (7) ಮತ್ತು ವೇದವನ್ನು ಮಾಡಿದ್ದಾನೆನ್ನುವ ವೇದಕರ್ತೃತ್ವವು ಸಾರ್ವಜ್ಞ್ಯವನ್ನು ಹೇಗೆ ಸಾಧಿಸುವುದು ಎಂದರೆ, ಬಹ್ಮ ವೇದವಿಷಯಾತ್ ಅಧಿಕವಿಷಯಜ್ಞಂ ತತ್ಕರ್ತೃತ್ವಾತ್=ಬ್ರಹ್ಮನು ವೇದದಲ್ಲಿ ಹೇಳಿರುವ ವಿಷಯದಿಂದ ಹೆಚ್ಚು ವಿಷಯಗಳನ್ನು ತಿಳಿದಿ

ದ್ದಾನೆ ಅದನ್ನು ಮಾಡಿರುವುದರಿಂದ, 'ಯಃ ಯಾವದರ್ಥಪ್ರತಿಪಾದಕಸ್ಯ ವಾಕ್ಯಸ್ಯ ಪ್ರಣೇತಾ ಸಃ ತತೋऽಪ್ಯಧಿಕಮರ್ಥಂ ಜಾನಾತ್ಯೇವ ಯಥಾ ಪಾಣಿನ್ಯಾದಿಃ'=ಯಾರು ಎಷ್ಟು ಅರ್ಥವನ್ನು ಪ್ರತಿಪಾದಿಸುವ ವಾಕ್ಯವನ್ನು ನಿರ್ಮಿಸಿದವರೋ ಅವರು ಅದಕ್ಕಿಂತಲೂ ಅಧಿಕವಾದ ಅರ್ಥವನ್ನು ತಿಳಿಯುತ್ತಾರೆ, ವ್ಯಾಕರಣಾದಿ ಶಾಸ್ತ್ರಗಳನ್ನು ಮಾಡಿದ ಪಾಣಿನ್ಯಾದಿಗಳಂತೆಯೇ. ಈ ಬ್ರಹ್ಮನಾದರೂ ಅಶೇಷಾರ್ಥಗಳನ್ನು ಪ್ರಕಾಶಪಡಿಸತಕ್ಕ ಶಾಸ್ತ್ರವನ್ನು ನಿರ್ಮಿಸಿದವನು, ಆದಕಾರಣ ಸರ್ವಜ್ಞನು ಎಂದು ಹೇಳುತ್ತೇವೆ ಎಂದರೆ— ಈ ವೇದಪ್ರಣೇತೃತ್ವವೆಂದರೆ ಎಂತಹುದು? (೧) ಪ್ರಮಾಣಾಂತರದಿಂದ ಅರ್ಥವನ್ನು ತಿಳಿದು ತನ್ನ ಇಚ್ಛೆಯಿಂದಲೇ ಪದಾದಿಗಳನ್ನು ನಿಬಂಧಿಸಿದ್ದು ಎಂದೋ? (೨) ಅಥವಾ ಕೇವಲ ಉಚ್ಚಾರಣವೋ? ೧ ನೇ ಕಲ್ಪದಲ್ಲಿ ವೇದವು ಪೌರುಷೇಯವಾಗಬೇಕಾಗುವುದು. ೨ ನೇ ಕಲ್ಪದಲ್ಲಿ ವೇದೋಚ್ಚಾರಣವನ್ನುಮಾತ್ರ ಮಾಡುವ ಉಪಾಧ್ಯಾಯನಂತೆ ಉಚ್ಚಾರಣವನ್ನು ಮಾತ್ರ ಮಾಡುವುದಾದರೆ ಸರ್ವಜ್ಞತ್ವವೇ ಸಿದ್ಧಿಸದೆ ಹೋಗಬೇಕಾಗುವುದು. (೩) ಹಗ್ಗದಲ್ಲಿ ಹಾವು ಹೇಗೆ ಆರೋಪಿತವಾಗುತ್ತದೋ ಹಾಗೆಯೇ ವೇದವು ಬ್ರಹ್ಮನಲ್ಲಿ ಆರೋಪಿತವಾಗಿದೆ. ಅಂತೂ ವೇದಕರ್ತೃತ್ವವೆಂದರೆ ವೇದಾರೋಪಾಧಿಷ್ಠಾನತ್ವವು ಎಂದು ಹೇಳುತ್ತೇವೆ, ಎಂದರೆ— ಹಾಗಾದರೆ ಪಾಣಿನ್ಯಾದಿ ದೃಷ್ಟಾಂತವು ಹೇಗೆ ಕೂಡುತ್ತದೆ? ವ್ಯಾಕರಣಶಾಸ್ತ್ರವು ಪಾಣಿನಿಯಲ್ಲಿ ಆರೋಪಿತವಲ್ಲವಷ್ಟೆ. ಹೀಗಾದರೆ ವೇದಾರೋಪಾಧಿಷ್ಠಾನತ್ವದಿಂದ ಬ್ರಹ್ಮನಲ್ಲಿ ಸರ್ವಜ್ಞತ್ವವು ಹೇಗೆ ಸಿದ್ಧಿಸುವುದು? ಹಾಗಾದರೆ ಬ್ರಹ್ಮನಿಗೆ ಯಾವ ವಿಜ್ಞಾನಶಕ್ತಿಯಿದೆಯೋ ಅದರಿಂದಲೇ ಬ್ರಹ್ಮನು ವೇದಾದಿಶಾಸ್ತ್ರವೆಂಬುವ ಭ್ರಮಕ್ಕೆ ವಿಷಯನಾಗುತ್ತಾನೆ. ಆದಕಾರಣ ಶಾಸ್ತ್ರಕ್ಕೆ ಬ್ರಹ್ಮನ ವಿಜ್ಞಾನಶಕ್ತಿಯಿಂದ ಆರೋಪಿತತ್ವವಿರುವ ಪ್ರಯುಕ್ತ ಆರೋಪ್ಯವಾದ ವೇದದಲ್ಲಿ ವಿಜ್ಞಾನಜನಕತ್ವ ಶಕ್ತಿಯಿರುವುದರಿಂದ ಅಧಿಷ್ಠಾನಭೂತನಾದ ಬ್ರಹ್ಮನಲ್ಲಿಯೂ ಸತ್ಯಭೂತವಾದ ವಿಜ್ಞಾನಶಕ್ತಿಯನ್ನು ಒಪ್ಪಬೇಕಾಗಿರುವುದರಿಂದ ಬ್ರಹ್ಮನಲ್ಲಿ ಸಾರ್ವಜ್ಞ್ಯವು ಸಿದ್ಧವಾಗುವುದು, ಎಂದರೆ ಹೀಗೆ ಹೇಳಕೂಡದು. ಆಕಾಶಾದಿಗಳಿಗೂ ಶಾಸ್ತ್ರದಂತ ಬ್ರಹ್ಮನ ವಿಜ್ಞಾನಶಕ್ತಿಯಿಂದ ಆರೋಪಿತತ್ವವಿರುವುದರಿಂದ ಶಾಸ್ತ್ರದಂತೆ ಆಕಾಶಾದಿಗಳಿಗೂ ವಿಜ್ಞಾನಜನಕತ್ವಶಕ್ತಿಯು ಬರಬೇಕಾಗುವುದು. ಅವಿದ್ಯೆಯು ಚೈತನ್ಯದಲ್ಲಿ ಆರೋಪಿತವಾಗಿರುವುದರಿಂದ ಅವಿದ್ಯೆಯಲ್ಲಿರತಕ್ಕ ಆವರಣಾದಿಶಕ್ತಿಯೂ ಬ್ರಹ್ಮನಲ್ಲಿ ತಾತ್ವಿಕವಾಗಬೇಕಾಗುವುದು. ಬ್ರಹ್ಮಚೈತನ್ಯವು ಪ್ರಕಾಶಕವಾಗಿರುವುದರಿಂದ ಬ್ರಹ್ಮನ ಆವರಣಶಕ್ತಿಯನ್ನು ಒಪ್ಪುವುದು ಸರಿಯಲ್ಲ. (೪) ಆಗಲಿ, ಅಧಿಷ್ಠಾನದಲ್ಲಿರತಕ್ಕ ಶಕ್ತಿಯು ಆರೋಪ್ಯದಲ್ಲಿಯೂ, ಆರೋಪ್ಯದಲ್ಲಿರತಕ್ಕ ಶಕ್ತಿಯು ಅಧಿಷ್ಠಾನದಲ್ಲಿಯೂ ತೋರುತ್ತದೆ ಎನ್ನುವ ನಿಯಮವಿರಲಿ, ಆದಾಗ್ಯೂ ಬ್ರಹ್ಮನಿಗೆ ಸಾರ್ವಜ್ಞವು ಸಿದ್ಧಿಸುವುದಿಲ್ಲ. ಏಕೆಂದರೆ, ವೇದದಲ್ಲಿ ಜ್ಞಾನಕರಣತ್ವಶಕ್ತಿಯು, ಬ್ರಹ್ಮನಲ್ಲಿ ಕರ್ತೃತ್ವ ಶಕ್ತಿಯು ಅಂದರೆ, ಅಧಿಷ್ಠಾನದಲ್ಲಿರತಕ್ಕ ಜ್ಞಾನಕರ್ತೃತ್ವಶಕ್ತಿಯು ಆರೋಪ್ಯವಾದ ವೇದದಲ್ಲಿಲ್ಲ. ಆರೋಪ್ಯವಾದ ವೇದದಲ್ಲಿರತಕ್ಕ ಜ್ಞಾನಕರಣತ್ವಶಕ್ತಿಯು ಅಧಿಷ್ಠಾನದಲ್ಲಿಲ್ಲ. ಹೀಗೆ ಬ್ರಹ್ಮನಲ್ಲಿರತಕ್ಕ ವಿಜ್ಞಾನಕರ್ತೃತ್ವ ಶಕ್ತಿಯಿಂದ ಆರೋಪಿತ್ವವು ವೇದದಲ್ಲಿಲ್ಲದಿರುವುದರಿಂದ ಅಂತಹ ವೇದಾರೋಪಾಧಿಷ್ಠಾನತ್ವದಿಂದ ಸಾರ್ವಜ್ಞ್ಯವು ಸಿದ್ಧಿಸಲಾರದು. ಆದುದರಿಂದ ವಿಜ್ಞಾನಶಕ್ತಿವಿವರ್ತತ್ವವು ಶಾಸ್ತ್ರಕ್ಕೆ ಇರುವುದರಿಂದ ಬ್ರಹ್ಮನಿಗೆ ಸಾರ್ವಜ್ಞ್ಯವು ಸಿದ್ಧವಾಗುತ್ತದೆಂದು ಹೇಳಿರುವುದು ಅಸಂಗತವು. ಮತ್ತು ಹಾವಿನಲ್ಲಿರುವ ಭಯ ಜನಕತ್ವಶಕ್ತಿಯು ಹಗ್ಗದಲ್ಲಿಲ್ಲದಿರುವುದರಿಂದ ಆರೋಪ್ಯದಲ್ಲಿರತಕ್ಕ ಶಕ್ತಿಯೂ, ಆರೋಪಾಧಿಷ್ಠಾನದಲ್ಲಿ ವಾಸ್ತವಿಕವೆಂದು ಎಲ್ಲಿಯೂ ಉಪಲಬ್ಧವಾಗಲಿಲ್ಲ. ಇದು ಮೊದಲಾದ ಅನೇಕದೋಷಗಳು ಇದ್ದುದರಿಂದ ಮಾಯಾವಾದಿಗಳು ಹೇಳಿದ ಸೂತ್ರಾರ್ಥವು

ಸರಿಯಲ್ಲ. ನಿರ್ದುಷ್ಟವಾದ ನಾವು ಹೇಳಿದ ಪ್ರಕಾರವೇ ಸೂತ್ರಾರ್ಥವನ್ನು ಇಟ್ಟುಕೊಳ್ಳಬೇಕು. ॥ ೧೨೦ ॥ ೧ ॥ ೧ ॥ ಅಧಿ ॥ ೩ ॥

---

# ಸಮನ್ವಯಾಧಿಕರಣವು.

ಜಗತ್ಕಾರಣನು ಶಾಸ್ತ್ರಗಳಿಂದಲೇ ಮುಖ್ಯವಾಗಿ ತಿಳಿಯಲ್ಪಡತಕ್ಕವನೆಂದಾಗಲಿ ಆದಾಗ್ಯೂ (೧) **ಏಕ ಏವ ರುದ್ರೋ ನ ದ್ವಿತೀಯೋಽವತಸ್ಥೇ** (೨) **ಹಿರಣ್ಯಗರ್ಭಸ್ಸಮವರ್ತತಾಗ್ರೇ** (೩) **ಪ್ರಧಾನಾದಿದಮಾವಿರಾಸೀತ್** (೪) **ಜೀವಾದ್ಭವಂತಿ ಭೂತಾನಿ** ಇದು ಮೊದಲಾದ ಶಾಸ್ತ್ರಗಳಿಂದ ವಿಷ್ಣುವ್ಯತಿರಿಕ್ತರಾದ ಹರ ಹಿರಣ್ಯಗರ್ಭ ಮೊದಲಾದ ಚೇತನರಿಗೂ ಪ್ರಧಾನಾದಿ ಅಚೇತನಗಳಿಗೂ ಜಗತ್ಕಾರಣತ್ವವು ತೋರುವುದರಿಂದ ಈ ಲಕ್ಷಣಕ್ಕೆ ಅತಿವ್ಯಾಪ್ತಿಯು. ಹಾಗಾದರೆ, ಏಕ ಏವ ರುದ್ರಃ ಇದು ಮೊದಲಾದ ಶಾಸ್ತ್ರವೂ ವಿಷ್ಣುಪರವೆಂದು ಹೇಳಕೂಡದು. ಅಭಿಜ್ಞರು ಆ ಶಾಸ್ತ್ರವನ್ನು ಶಿವಾದ್ಯರ್ಥಪರವನ್ನಾಗಿಯೇ ವ್ಯಾಖ್ಯಾನ ಮಾಡಿರುವರು. ಆದಕಾರಣ ಜಗಜ್ಜನ್ಮಾದಿ ಕಾರಣತ್ವವು ಶ್ರೀವಿಷ್ಣುವಿಗೆ ಲಕ್ಷಣವಲ್ಲ, ಎಂಬುವ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರಕಾರರು

**"ಓಂ ತತ್ತು ಸಮನ್ವಯಾತ್ ಓಂ"**

**ಎಂಬುವ ಸೂತ್ರವನ್ನು ನಿರ್ಮಿಸಿರುವರು.**

ಅನ್ವಯಾತ್= ಉಪಕ್ರಮಾದಿ ಲಿಂಗಸಮುದಾಯದಿಂದ, ಸಮ್=ಶಾಸ್ತ್ರವು ಚೆನ್ನಾಗಿ ವಿಚಾರ ಮಾಡಲ್ಪಡುತ್ತಿರಲು, (ಸರ್ವಶಾಸ್ತ್ರಗಳಿಗೂ ಶ್ರೀಹರಿಯಲ್ಲಿಯೇ) ಸಮ್=ಶಕ್ತಿವೃತ್ತಿಯಿಂದ, ಅನ್ವಯಾತ್=ಶಕ್ತಿ ತಾತ್ಪರ್ಯರೂಪ ಸಂಬಂಧವು ತಿಳಿದುಬರುವುದರಿಂದ, ತತ್ತು= ವಿಷ್ಣ್ವಾಖ್ಯ ಬ್ರಹ್ಮನೇ, ಜಗಜ್ಜನ್ಮಾದಿಗಳಿಗೆ ಕಾರಣನಾಗಿ ಶಾಸ್ತ್ರಯೋನಿಯು (ಪರಮ ಮುಖ್ಯವೃತ್ತಿಯಿಂದ ಸರ್ವ ಶಾಸ್ತ್ರಗಳಿಂದುಂಟಾಗುವ ಯಥಾರ್ಥಜ್ಞಾನಕ್ಕೆ ವಿಷಯನು.) ಅಂದರೆ ಶಾಸ್ತ್ರೈಕಸಮಧಿಗಮ್ಯನು. **ಶಿವ** ಚತುರ್ಮುಖಾದಿಗಳಲ್ಲ.

ಅದರಲ್ಲಿ ಅನ್ವಯ ಪದಾರ್ಥವನ್ನು ವಿವರಿಸುತ್ತಾರೆ.

**ಮೂ ॥ ತ ಏವಾನ್ವಯನಾಮಾನಸ್ತೈಸ್ಸಮ್ಯಕ್ಪ್ರವಿಚಾರಿತೇ ।**
**ಮುಖ್ಯಾರ್ಥೋ ಭಗವಾನ್ವಿಷ್ಣುಃ ಸರ್ವಶಾಸ್ತ್ರಸ್ಯ ನಾಪರಃ ॥ ೧೨೧ ॥**

ಅ ॥ ತ ಏವ=ಆ ಉಪಕ್ರಮಾದಿಗಳೇವೆ, ಅನ್ವಯನಾಮಾನಃ=ಅನ್ವೀಯಂತೇ ವಾಕ್ಯಾನಿ ಏತ್ರೈಃ=ಇವುಗಳಿಂದ ವಾಕ್ಯಗಳು ಶಕ್ತಿತಾತ್ಪರ್ಯವಿಷಯವಾದ ಅರ್ಥದಿಂದ ಸಂಬಂಧಿಸಲ್ಪಡುತ್ತವೆ. ಹಾಗೆಯೇ ಶಕ್ತಿತಾತ್ಪರ್ಯಗಳಿಗೆ ವಿಷಯಭೂತಗಳಾದ ಅರ್ಥಗಳನ್ನು ಪ್ರತಿಪಾದಿಸತಕ್ಕವುಗಳೆಂದು ತಿಳಿಯಲ್ಪಡುತ್ತವೆ ಎನ್ನುವ ವ್ಯುತ್ಪತ್ತಿಯಿಂದ ಅನ್ವಯವೆಂಬುವ ಹೆಸರುಳ್ಳವುಗಳು. ತೈಃ=ಅವುಗಳಿಂದ, ಸಮ್ಯಕ್=ಚೆನ್ನಾಗಿ, ಪ್ರವಿಚಾರಿತೇ ಸತಿ=ಶಾಸ್ತ್ರವು ವಿಚಾರ ಮಾಡಲ್ಪಡುತ್ತಿರಲು, ಸರ್ವಶಾಸ್ತ್ರಸ್ಯ=ಎಲ್ಲಾ ಶಾಸ್ತ್ರಗಳಿಗೂ' ಭಗವಾನ್ ವಿಷ್ಣುಃ=ಪೂಜ್ಯನಾದ ವಿಷ್ಣುವೇ, ಮುಖ್ಯಾರ್ಥಃ=ಮುಖ್ಯಾರ್ಥನು, ಅಪರಃ ನ=ರುದ್ರಾದಿಗಳು ಮುಖ್ಯಾರ್ಥರಲ್ಲ. (ಹೀಗೆ ತಿಳಿಯಲ್ಪಡುತ್ತದೆ.)

**ತಾ ॥ ನ್ಯಾಯಸುಧಾ—** 'ಉಪಕ್ರಮಾದಿ' ಎನ್ನುವ ಪ್ರಸಿದ್ಧವಾದ ಪದವನ್ನು ಬಿಟ್ಟು ಯೌಗಿಕವಾದ ಅನ್ವಯ ಎನ್ನುವ ಪದವನ್ನು ಹೇಳಿರುವುದರಿಂದ ಈ ಅರ್ಥವು ಸೂಚಿತವಾಯಿತು.

ಶಾಸ್ತ್ರಗಳ ತಾತ್ಪರ್ಯವು ತಿಳಿಯಬೇಕಾದರೆ ಆಪಾತಪ್ರತೀತಿಯಾಗಲೀ ವ್ಯಾಖ್ಯಾತೃಗಳ ವಚನವಾಗಲೀ ಲಿಂಗವಾಗಲಾರದು. ಅವುಗಳು ವ್ಯಭಿಚಾರಿಗಳಾಗುತ್ತವೆ. ಮತ್ತೆ ಉಪಕ್ರಮಾದಿಗಳೇ ಅವ್ಯಭಿಚರಿತಗಳಾಗಿರುವುದರಿಂದ ತಾತ್ಪರ್ಯಲಿಂಗವು (೩) ಉಪಕ್ರಮಾದಿಗಳಿಗೂ ಶ್ರುತ್ಯಾದಿಗಳಿಗೂ ಸನ್ನಿಕರ್ಷ ವಿಪ್ರಕರ್ಷಗಳಿಂದಲೂ ಸಾವಕಾಶ ನಿರವಕಾಶತ್ವಾದಿಗಳಿಂದಲೂ ಬಲಾಬಲ ನಿಶ್ಚಯಮಾಡಿಕೊಂಡು ವಿರೋಧವು ಬಂದರೆ ಪ್ರಬಲದಿಂದ ದುರ್ಬಲವನ್ನು ಬಾಧಿಸಿ ವಾಕ್ಯಾರ್ಥವಿಚಾರವು ಸಮ್ಯಕ್ ಪ್ರವಿಚಾರಣವು. ಆದಕಾರಣ ಕೇವಲ ಉಪಕ್ರಮಾದಿಗಳು ಲಿಂಗವೆಂದು ಹೇಳುವುದಿಲ್ಲ. ಮತ್ತೆ ಸಮ್ಯಕ್ ಪ್ರವಿಚಾರರೂಪವಾದ ಅವಾಂತರ ವ್ಯಾಪಾರದಿಂದ ಕೂಡಿದ ಉಪಕ್ರಮಾದಿಗಳೇ ತಾತ್ಪರ್ಯಲಿಂಗಗಳು. ಆದಕಾರಣ ಅವಿಚಾರಿತಗಳಾದ ಉಪಕ್ರಮಾದಿಗಳಿಗೆ ಕ್ವಚಿತ್ ತಾತ್ಪರ್ಯವ್ಯಭಿಚಾರವು ತೋರಿದರೂ ಇಂತಹ ಸಮ್ಯಕ್ ಪ್ರವಿಚಾರಿತಗಳಾದ ಉಪಕ್ರಮಾದಿಗಳಿಗೆ ತಾತ್ಪರ್ಯವ್ಯಭಿಚಾರವು ಇರುವುದಿಲ್ಲ. ಈ ಅಭಿಪ್ರಾಯದಿಂದಲೇ 'ಸಮ್ಯಕ್‌ಪ್ರವಿಚಾರಿತೇ' ಎಂದುಕ್ತವಾಗಿದೆ. (3) ತಥಾಚ ಜಗಜ್ಜನ್ಮಾದಿಕಾರಣನಾಗಿ ಮುಖ್ಯವೃತ್ತಿಯಿಂದ ಸ್ವರ ವರ್ಣ ಪದ ವಾಕ್ಯರೂಪವಾದ ಸರ್ವಶಾಸ್ತ್ರದಿಂದ ಪ್ರತಿಪಾದ್ಯನು ನಾರಾಯಣಾಖ್ಯ ಬ್ರಹ್ಮನೇ. ಆದಕಾರಣ ಲಕ್ಷಣವು ಯುಕ್ತವೇ ॥ ೧೨೧ ॥ ೧ ॥ ೧ ॥ ೪ ॥

## ಈಕ್ಷತ್ಯಧಿಕರಣವು.

ಸ. ರ. ವಿ— 'ಯತೋ ವಾಚೋ ನಿವರ್ತಂತೇ' 'ಯದ್ವಾಚಾಽನಭ್ಯುದಿತಂ' ಏತದಪ್ರಮೇಯಂ ಧ್ರುವಂ' ಇತ್ಯಾದಿ ವಾಕ್ಯವಿರುದ್ಧವಾಗಿರುವುದರಿಂದ ಬ್ರಹ್ಮನಿಗೆ ಸರ್ವ, ವೇದವೇದ್ಯತ್ವವು ಹೇಗೆ ಕೂಡುತ್ತದೆ ಎಂಬುವ ಆಶಂಕಾ ಪರಿಹಾರರೂಪವಾಗಿ "ಓಂ ಈಕ್ಷತೇರ್ನಾಶಬ್ದಂ ಓಂ" ಎಂಬುವ ಸೂತ್ರವನ್ನು ಶ್ರೀಮದಾಚಾರ್ಯರು ವಿವರಿಸುತ್ತಾರೆ.

ನ್ಯಾಯಸುಧಾ— (1) ಶಕ್ತಿವೃತ್ತಿಯಿಂದಲೇ ಸಕಲ ಶಾಸ್ತ್ರಪ್ರತಿಪಾದ್ಯನು ಬ್ರಹ್ಮನು ಎಂದುಕ್ತವಾಗಿದೆ. ಅದನ್ನಾಕ್ಷೇಪಿಸಿ ಸಮಾಧಾನ ಹೇಳುವುದಕ್ಕಾಗಿ ಈಕ್ಷತ್ಯಧಿಕರಣವನ್ನು ಆರಂಭಿಸುತ್ತಾರೆ. ಹೇಗೆಂದರೆ—'ಯತೋ ವಾಚೋ ನಿವರ್ತಂತೇ' ಯಾರದ್ದೆಶೆಯಿಂದ ವಚನಗಳು ಹೊರಟುಹೋಗಿರುತ್ತವೋ ಅಂದರೆ ಶಬ್ದಗಳು ಯಾರನ್ನು ತಿಳಿಸುವುದಿಲ್ಲವೋ, 'ಅಶಬ್ದಮಸ್ಪರ್ಶಂ' ಯಾರಿಗೆ ಶಬ್ದವು ವಾಚಕವಾಗುವುದಿಲ್ಲವೋ ಅಂದರೆ, ಶಬ್ದದಿಂದ ಅವಾಚ್ಯನು, ಇತ್ಯಾದಿ ಶ್ರುತಿಗಳಿಂದಲೂ 'ಶಬ್ದೋ ನ ಯತ್ರ ಪುರುಕಾರಕವಾನ್' ಯಾರ ವಿಷಯದಲ್ಲಿ ಶಬ್ದವು ಸಂಪೂರ್ಣವಾಗಿ ಪ್ರತಿಪಾದಕವಾಗುವುದಿಲ್ಲವೋ ಇತ್ಯಾದಿ ಸ್ಮೃತಿಗಳಿಂದಲೂ ಬ್ರಹ್ಮನು ಅವಾಚ್ಯನೆಂದು ನಿಶ್ಚಿತನಾಗುತ್ತಾನೆ. (2) ಶಕ್ತಿವೃತ್ತಿಯು ದ್ರವ್ಯ-ಗುಣ-ಕ್ರಿಯಾ-ಜಾತಿ ಇವುಗಳನ್ನು ನಿಮಿತ್ತೀಕರಿಸಿಕೊಂಡಿರುವುದು. 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಇದು ಮೊದಲಾದ ಆಗಮಗಳಿಂದ ಬ್ರಹ್ಮನಿಗೆ ದ್ರವ್ಯಾದಿಗಳ ಸಂಬಂಧವಿಲ್ಲ. ಆದಕಾರಣ ೧ ಪೂರ್ವಸೂತ್ರದಲ್ಲಿದ್ದ ಸಂಶಬ್ದದಿಂದ ಹೇಳಲ್ಪಟ್ಟ ವಾಚ್ಯತ್ವವು ಸರ್ವಥಾ ಕೂಡುವುದಿಲ್ಲ. ಅಂತೂ ಯಾವುದಾದರೊಂದು ಶಬ್ದವಾಚ್ಯತ್ವವೂ ಕೂಡ ಇಲ್ಲದಿರುವುದರಿಂದ ಶಕ್ತಿವೃತ್ತಿಯಿಂದ ಶಾಸ್ತ್ರಗಮ್ಯತ್ವವೂ ಇರುವುದಿಲ್ಲ. (3) ಮತ್ತು ಪೂರ್ವಸೂತ್ರದಲ್ಲಿದ್ದ ಕಾರ್ತ್ಸ್ನ್ಯಾರ್ಥಕವಾದ ಸಂಶಬ್ದದಿಂದ ಲಬ್ಧವಾದ 'ಪರಬ್ರಹ್ಮನು ಸರ್ವಶಾಸ್ತ್ರಪ್ರತಿಪಾದ್ಯ'ನೆನ್ನುವ ಅರ್ಥವೂ ಕೂಡುವುದಿಲ್ಲ. ಏಕೆಂದರೆ ಇದಕ್ಕೆ ನಿಶ್ಚಯವನ್ನು ಹುಟ್ಟಿಸುವ ಉಪಾಯವಿರುವುದಿಲ್ಲ ಉಪಕ್ರಮಾದಿಗಳು ನಿಶ್ಚಯೋಪಾಯಗಳು. ಅವುಗಳಿಂದ ನಾವು ಕಲಿತ ಶಾಸ್ತ್ರಕ್ಕೆ ಕಥಂಚಿತ್ ಬ್ರಹ್ಮವಿಷಯಕತ್ವವು ನಿರ್ಧಾರಿತವಾದರೂ ನಾವು ಕಲಿಯದಿರುವ ಶಾಸ್ತ್ರಕ್ಕೆ ಬ್ರಹ್ಮಪರತ್ವ

ನಿರ್ಧಾರಣವು ಕೂಡುವುದಿಲ್ಲ. ಏಕೆಂದರೆ 'ಅನಂತಾ ವೈ ವೇದಾಃ' ಎನ್ನುವ ಶ್ರುತಿಯಿಂದ ಶಾಸ್ತ್ರವು ನಿರವಧಿಕವೆಂದು ತಿಳಿಯುತ್ತದೆ. ಅನಂತಾನಂತ ಶಾಸ್ತ್ರಗಳ ಜ್ಞಾನವು ನಮಗೆ ಅಪರಿಮಿತ ಕಲ್ಪಗಳಿಂದಲೂ ಆಗಲಾರದು. ಶಾಸ್ತ್ರೈಕದೇಶವು ಬ್ರಹ್ಮಪರವೆಂದು ನಿಶ್ಚಯಿಸುವುದು ನಿಷ್ಫಲವು. ಏಕದೇಶಾಂತರದಲ್ಲಿ ಅದಕ್ಕಿಂತ ವಿಪರೀತವಾಗಿ ಪ್ರತಿಪಾದಿಸುತ್ತದೆಂದೂ ಶಂಕೆಯು ಬರಬಹುದು. ಒಂದೇ ವಸ್ತುವಿನಲ್ಲಿ ವಿರುದ್ಧ ಧರ್ಮವು ಕೂಡಲಾರದು. ಆದಕಾರಣ ವೇದೈಕದೇಶವಾದ ನಮಗೆ ತಿಳಿದ ವೇದಭಾಗದಲ್ಲಿ ಹೇಳಿದ ವಸ್ತುವಿನಲ್ಲಿಯೂ ಸಂಶಯವು ಬರುತ್ತದೆ. ಆದಕಾರಣ ಹಿಂದೆ ಹೇಳಿದ ರೀತಿಯಿಂದ ಎಲ್ಲಾ ಶಾಸ್ತ್ರಗಳೂ ಶ್ರೀಹರಿಯನ್ನೇ ತಿಳಿಸುತ್ತವೆ ಎನ್ನುವ ನಿರ್ಣಯವೇ ಕೂಡದಿರುವುದರಿಂದ ಎಲ್ಲಾ ಶಾಸ್ತ್ರರೂಪ ಪ್ರಮಾಣಗಳಿಂದಲೂ ಜಗಜ್ಜನ್ಮಾದಿಗಳಿಗೆ ಕಾರಣನೂ ಸರ್ವ ಗುಣಪರಿಪೂರ್ಣನೂ ಆದ ಪರಬ್ರಹ್ಮನು ಸಿದ್ಧಿಸುತ್ತಾನೆಂದು ಹೇಳಿದ್ದು ಕೂಡುವುದಿಲ್ಲ. ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ (೧) ಬ್ರಹ್ಮನು ಯಾವಶಬ್ದವಾಚ್ಯನೂ ಅಲ್ಲ. (೨) ಶಾಸ್ತ್ರಗಳು ಅನಂತಗಳಾಗಿರುವುದರಿಂದ ಜಗಜ್ಜನ್ಮಾದಿಕಾರಣತ್ವಾದಿ ಧರ್ಮಗಳಿಂದ ಸಕಲ ಶಾಸ್ತ್ರಪ್ರತಿಪಾದ್ಯನೆಂದು ತಿಳಿಯುವುದು ಅಶಕ್ಯವು. ಈ ಎರಡು ಆಶಂಕೆಗಳಲ್ಲಿ * ಒಂದನೇ ಆಶಂಕೆಯನ್ನು ಸೂತ್ರಕಾರರು ಪ್ರಕೃತ ನಿರಾಕರಿಸುತ್ತಾರೆ.

## "ಓಂ ಈಕ್ಷತೇರ್ನಾಶಬ್ದಂ ಓಂ"

ಈಕ್ಷತೇಃ=ಈಕ್ಷಣೀಯನಾದುದರಿಂದ, ಅಂದರೆ ಜ್ಞಾನಕ್ಕೆ ವಿಷಯನಾಗಿರುವುದರಿಂದ, ತತ್= ಆ ಬ್ರಹ್ಮನು, ಅಶಬ್ದಂ=ನ ವಿದ್ಯತೇ ಶಬ್ದಃ ವಾಚಕಃ ಯಸ್ಯ ತತ್ ಅಶಬ್ದಂ ಎನ್ನುವ ವ್ಯುತ್ಪತ್ತಿಯಿಂದ ಶಬ್ದಾವಾಚ್ಯನು, ನ=ಅಲ್ಲ. ಶಬ್ದವಾಚ್ಯನೇ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಈಕ್ಷಣೀಯತ್ವತೋ ವಿಷ್ಣುರ್ವಾಚ್ಯ ಏವ ನ ಚಾನ್ಯಥಾ ।**
**ಲಕ್ಷ್ಯತ್ವಂ ಕ್ವಾಪಿ ದೃಷ್ಟಂ ಹಿ ಕಿಂ ತದಿತ್ಯನವಸ್ಥಿತಿಃ ॥ ೧೨೨ ॥**

ಅ ॥ ಈಕ್ಷಣೀಯತ್ವತಃ=ಈಕ್ಷಣಕ್ಕೆ ಕರ್ಮನಾಗಿರುವುದರಿಂದ, (ಜ್ಞಾನಕ್ಕೆ ವಿಷಯನಾಗಿರುವುದರಿಂದ) ವಿಷ್ಣುಃ = ಶ್ರೀ ಹರಿಯು, ವಾಚ್ಯ ಏವ = ಶಬ್ದವಾಚ್ಯನೇ ಆಗಿರುತ್ತಾನೆ. (ಅಂದರೆ 'ಬ್ರಹ್ಮ ವಾಚ್ಯಂ ಭವಿತುಮರ್ಹತಿ' ('ನ ಪುನರವಾಚ್ಯಂ') ಈಕ್ಷಣಕರ್ಮತ್ವಾತ್ ಘಟವತ್=ಬ್ರಹ್ಮನು ವಾಚ್ಯನಾಗಲು ಅರ್ಹನಾಗಿರುತ್ತಾನೆ. (ಪುನಃ ಅವಾಚ್ಯನಲ್ಲ) ಈಕ್ಷಣಕ್ಕೆ ಕರ್ಮನಾಗಿರುವುದರಿಂದ ಘಟದಂತೆ. ಬ್ರಹ್ಮನಿಗೆ ಈಕ್ಷಣೀಯತ್ವವಾದರೂ 'ಸ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' 'ಆತ್ಮನ್ಯೇವಾತ್ಮಾನಂ ಪಶ್ಯೇತ್' ಜೀವನು ಜೀವೋತ್ತಮನಾದ ವಾಯುವಿನ ಅನುಗ್ರಹದಿಂದ ಸರ್ವೋತ್ತಮನಾದ ಶ್ರೀಹರಿಯನ್ನು ನೋಡುತ್ತಾನೆ. ಹೃದಯದಲ್ಲಿಯೇ ಶ್ರೀ ಹರಿಯನ್ನು ನೋಡುತ್ತಾನೆ.' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ಬ್ರಹ್ಮನಿಗೆ ವಾಚ್ಯತ್ವವಿಲ್ಲದಿದ್ದರೆ ಈಕ್ಷಣೀಯತ್ವವು ಇಲ್ಲವೆಂದಾಗುವುದು. ತಥಾಚ ಬ್ರಹ್ಮಜ್ಞಾನವಿಲ್ಲದಿರುವುದರಿಂದ ಶಾಸ್ತ್ರಕ್ಕೆ ವೈಯರ್ಥ್ಯವು ಮೋಕ್ಷವೂ ಇಲ್ಲವೆಂದಾಗುವುದು.)

---

* ಎರಡನೇ ಆಶಂಕೆಯನ್ನು 'ಗತಿಸಾಮಾನ್ಯಾತ್' ಎನ್ನುವ ಸೂತ್ರದಿಂದ ನಿರಾಕರಿಸುವರು. ಆ ಸೂತ್ರವನ್ನು ೩ ನೇ ಅಧ್ಯಾಯ ೩ ನೇ ಪಾದದಲ್ಲಿ ವ್ಯಾಖ್ಯಾನ ಮಾಡುವರು.

(ಹಾಗಾದರೆ ಪ್ರಮಾಣಾಭಾಸಗಳಿಂದಲೂ ಪ್ರತ್ಯಕ್ಷಾನುಮಾನಗಳಿಂದಲೂ ಬ್ರಹ್ಮನಿಗೆ ಈಕ್ಷಣವು ಆಗುವುದು ಬೇಡ. ಬ್ರಹ್ಮನು ವಾಚ್ಯನೂ ಆಗುವುದೂ ಬೇಡ. ಆದಾಗ್ಯೂ ಶಬ್ದದಿಂದ ಲಕ್ಷ್ಯನಾಗಿರುವುದರಿಂದ ಈಕ್ಷಣೀಯನು ಆಗುವನು. ತಥಾಚ ವಿಪಕ್ಷೇ ಬಾಧಕವಿಲ್ಲದಿರುವುದರಿಂದ ಹೇತುವು ಅಪ್ರಯೋಜಕವು ಎಂದಾಶಂಕಿಸಿದರೆ) ಹಿ=ಯಾವ ಕಾರಣದಿಂದ, ಅನ್ಯಥಾ= ವಾಚ್ಯತ್ವವಿಲ್ಲದಿದ್ದರೆ, ಲಕ್ಷ್ಯತ್ವಂ=ಲಕ್ಷ್ಯತ್ವವು, ಕ್ವಾಪಿ=ಎಲ್ಲಿಯೂ, ನ ದೃಷ್ಟಂ=ಕಾಣಲ್ಪಡಲಿಲ್ಲವೋ, (ತಸ್ಮಾತ್=ಆದಕಾರಣ, ಬ್ರಹ್ಮನಿಗೆ ವಾಚ್ಯತ್ವವಿಲ್ಲದಿದ್ದರೆ ಲಕ್ಷ್ಯತ್ವವೇ ಕೂಡದಿರುವುದರಿಂದ ಲಕ್ಷಣಾವೃತ್ತಿಯಿಂದಲೂ ಈಕ್ಷಣೀಯತ್ವವಿಲ್ಲ. ಯಾವುದಾದರೊಂದು ಶಬ್ದದಿಂದ ವಾಚ್ಯಗಳಾದ ತೀರಾದಿಗಳೇ ಯಾವುದಾದರೊಂದು ಶಬ್ದದಿಂದ ಲಕ್ಷ್ಯಗಳಾಗಿ ಕಾಣಲ್ಪಟ್ಟಿವೆ.) (ಹಾಗಾದರೆ, ವಾಚ್ಯವಾಗದಿದ್ದರೂ ಲಕ್ಷ್ಯವು ಏತಕ್ಕೆ ಆಗಲಾರದು? ಅಂತೂ ವಿಪಕ್ಷೇ ಬಾಧಕವಿಲ್ಲದಿರುವುದರಿಂದ ಈ ದೂಷಣಾನುಮಾನವು ಅಪ್ರಯೋಜಕವು ಎಂದರೆ) ಅನ್ಯಥಾ=ಬ್ರಹ್ಮನು ಅವಾಚ್ಯನಾದಾಗ್ಯೂ ಲಕ್ಷ್ಯನೆಂದಂಗೀಕರಿಸಿದರೆ ಆಗ, ತತ್ ಕಿಂ ಇತಿ=ಲಕ್ಷ್ಯವು ಯಾವುದೆಂದು (ಜಿಜ್ಞಾಸಾಪ್ರವೃತ್ತಿಪರಂಪರೆಯು ಬರುತ್ತಿರಲು) ಅನವಸ್ಥಿತಿಃ=ಅನವಸ್ಥಾ ದೋಷವು ಬರುವುದು.

ತಾ ॥ **ನ್ಯಾಯಸುಧಾ**— (1) ಲಾಕ್ಷಣಿಕವಾದ ಶಬ್ದವು ಶ್ರುತವಾದೊಡನೆ ಅರ್ಥಾಂತರದಲ್ಲಿ ಜ್ಞಾನವನ್ನು ಹುಟ್ಟಿಸಲಾರದು. ಅರ್ಥಾಂತರದಲ್ಲಿ ಶಕ್ತಿಯು ಗೃಹೀತವಾಗಲಿಲ್ಲ. ಮತ್ತೆ ವಾಚ್ಯಾರ್ಥದಲ್ಲಿ ಬುದ್ಧಿಯನ್ನು ಹುಟ್ಟಿಸಿ ಅಲ್ಲಿ ಅನುಪಪತ್ತಿಯು ತೋರಿಯೇ ಅರ್ಥಾಂತರದಲ್ಲಿ ಜ್ಞಾನವು ಹುಟ್ಟುವುದು. ಆ ಅರ್ಥಾಂತರವು ಸ್ವರೂಪದಿಂದಲೂ, ವಾಚ್ಯವಾದ ಅರ್ಥಕ್ಕೆ ಸಂಬಂಧಿಯಾಗಿಯೂ ತಿಳಿಯಲ್ಪಡಬೇಕು. 'ಗಂಗಾಯಾಂ ಘೋಷಃ' ಎನ್ನುವಲ್ಲಿ ಸ್ವರೂಪದಿಂದಲೂ, ಗಂಗಾದಿ ಸಂಬಂಧವುಳ್ಳದ್ದೆಂದೂ ತಿಳಿಯಲ್ಪಟ್ಟ ತೀರಾದಿಗಳೇ ಗಂಗಾಶಬ್ದದಿಂದ ಲಕ್ಷ್ಯವಾಗಿ ದೃಷ್ಟವಾಗಿದೆ. ಕೂರ್ಮರೋಮಾದಿಗಳ ಸ್ವರೂಪವೇ ತಿಳಿಯಲ್ಪಡದಿರುವುದರಿಂದ ಅವುಗಳು ಲಕ್ಷ್ಯವಾಗಲಾರವು. ತಥಾಚ ಬ್ರಹ್ಮನಿಗೆ ವೈದಿಕಶಬ್ದಗಳಿಂದ ಲಕ್ಷ್ಯತ್ವ ಹೇಳಬೇಕಾದರೆ ಪ್ರತೀತಿಯನ್ನು ಅಂಗೀಕರಿಸಲೇ ಬೇಕು. ಆ ಬ್ರಹ್ಮನ ಪ್ರತೀತಿಯು ತೀರಾದಿಗಳಂತೆಯೇ ಪ್ರತ್ಯಕ್ಷಾದಿಗಳಿಂದ ಕೂಡಲಾರದಷ್ಟೆ. ಆದಕಾರಣ ಲಾಕ್ಷಣಿಕ ಶಬ್ದವನ್ನು ಪ್ರಯೋಗಿಸಿದರೆ ವಾಚ್ಯಾರ್ಥದಲ್ಲಿ ಅನುಪಪತ್ತಿಯನ್ನು ತಿಳಿದವನಿಗೆ ಇದರಿಂದ ಲಕ್ಷ್ಯವಾದ ಅರ್ಥವು ಯಾವುದು ಎಂದು ಜಿಜ್ಞಾಸಾ ಹುಟ್ಟುವಾಗ ಆ ಲಕ್ಷ್ಯಾರ್ಥವನ್ನು ತಿಳಿಸಲಿಕ್ಕೂ ಶಬ್ದವನ್ನೇ ಪ್ರಯೋಗಿಸಬೇಕು. ಆ ಶಬ್ದದಿಂದಲೂ ಬ್ರಹ್ಮನು ವಾಚ್ಯನಲ್ಲ ಮತ್ತೆ ಲಕ್ಷ್ಯನೇ ಎಂದರೆ- ಯಾವುದೆಂದು ಜಿಜ್ಞಾಸೆಯು ನಿವೃತ್ತವಾಗದಿರುವುದರಿಂದ ಪುನಃ ಶಬ್ದಾಂತರವನ್ನೇ ಪ್ರಯೋಗಿಸಬೇಕು. ಆ ಶಬ್ದದಿಂದಲೂ ಪುನಃ ವಾಚ್ಯನಲ್ಲ. ಮತ್ತೆ ಲಕ್ಷ್ಯನೇ ಎಂದರೆ ಆ ಲಕ್ಷ್ಯಾರ್ಥವು ಯಾವುದು ಎಂದು ಜಿಜ್ಞಾಸೆಯೇ ಬರುವುದು ಹೀಗೆ ಜಿಜ್ಞಾಸಾ ಪರಂಪರಾ ಪರ್ಯವಸಾನವೇ ಇಲ್ಲದಿರುವುದರಿಂದ ಅನವಸ್ಥೆಯು. ಹೀಗೆ ಪೂರ್ವಪೂರ್ವ ಲಕ್ಷಣೆಯೇ ಸಿದ್ಧವಾಗದಿದ್ದರೆ ಉತ್ತರೋತ್ತರ ಲಕ್ಷಣೆಯು ಸಿದ್ಧಿಸದಿರುವುದರಿಂದ ಮೂಲಕ್ಷತಿಯು. (2) ಯಾವುದಾದರೊಂದು ಶಬ್ದದಿಂದ ವಾಚ್ಯನಾಗಿದ್ದರೆ ಆ ವಾಚಕವಾದ ಶಬ್ದವನ್ನು ಹೇಳಿದರೆ ಜಿಜ್ಞಾಸಾನಿವೃತ್ತಿಯನ್ನು ಹೊಂದಿ ಲಾಕ್ಷಣಿಕಾರ್ಥವನ್ನು ತಿಳಿದಾನು. ಆದಕಾರಣ ಬ್ರಹ್ಮನಿಗೆ ವಾಚ್ಯತ್ವವನ್ನು ಅಂಗೀಕರಿಸದೆ ಲಕ್ಷ್ಯತ್ವವನ್ನು ಅಂಗೀಕರಿಸಿದರೆ ಅನವಸ್ಥಾರೂಪವಾದ ಬಾಧಕವಿದ್ದುದರಿಂದ ವಾಚ್ಯತ್ವವಿಲ್ಲದಿದ್ದರೆ ಲಕ್ಷ್ಯತ್ವವೂ ಇಲ್ಲದೆ ಹೋಗುವುದು ಎಂಬುವ ಅತಿಪ್ರಸಂಗವು ಯುಕ್ತವೇ ॥ ೧೨ ॥

ಹಾಗಾದರೆ ಇಕ್ಷು (ಕಬ್ಬು) ಕ್ಷೀರ (ಹಾಲು) ಗುಡ (ಬೆಲ್ಲ) ಇವು ಮೊದಲಾದುವುಗಳ ಮಾಧುರ್ಯಾದಿಗಳಲ್ಲಿ ವೈಲಕ್ಷಣ್ಯಗಳು ಇವೆ ಎನ್ನುವುದು ಸರ್ವರಿಗೂ ಅನುಭವಸಿದ್ಧವು. ಅವುಗಳನ್ನು ಹೇಳತಕ್ಕ ಶಬ್ದವೇ ಇಲ್ಲದಿರುವುದರಿಂದ ಯಾವ ಶಬ್ದದಿಂದಲೂ ಅವುಗಳು ವಾಚ್ಯಗಳಾಗಲಾರವು. ಆದಾಗ್ಯೂ ಲಕ್ಷ್ಯಗಳಾಗಿ ಕಾಣಲ್ಪಡುತ್ತವೆ. ಇಲ್ಲವಾದರೆ ವ್ಯವಹಾರಗಳೇ ಇಲ್ಲವೆಂದಾಗುವುದು. ಆದಪ್ರಯುಕ್ತ ವಾಚ್ಯತ್ವವಿಲ್ಲದಿದ್ದರೆ, ಲಕ್ಷ್ಯತ್ವವು ಇಲ್ಲವೆಂದಾಗುವುದು ಎನ್ನುವ ಅತಿಪ್ರಸಂಗವನ್ನು ಹೇಳಿದ್ದು ಯುಕ್ತವಲ್ಲ. '**ಇಕ್ಷು ಕ್ಷೀರ ಗುಡಾದೀನಾಂ ಮಾಧುರ್ಯಸ್ಯಾಂತರಂ ಮಹತ್ । ಭೇದಸ್ತಥಾಽಪಿ ನಾಖ್ಯಾತುಂ ಸರಸ್ವತ್ಯಾಪಿ ಶಕ್ಯತೇ** ' ॥ ಕಬ್ಬು, ಹಾಲು, ಬೆಲ್ಲ ಇತ್ಯಾದಿಗಳ ಮಾಧುರ್ಯಕ್ಕೆ ಮಹಾ ವೈಲಕ್ಷಣ್ಯವಿದೆ. ಆದಾಗ್ಯೂ ಅವುಗಳ ಭೇದವನ್ನು ಸರಸ್ವತಿಯಿಂದಲೂ ಹೇಳಲಿಕ್ಕೆ ಸಾಧ್ಯವಿಲ್ಲ, ಎಂದು ಪರರು ಹೇಳಿರುವರು. ತಥಾಚ ಹೇಗೆ ಮಾಧುರ್ಯಾದಿ ವಿಶೇಷಗಳು ಯಾವ ಶಬ್ದದಿಂದಲೂ ಹೇಳಲ್ಪಡದಿದ್ದರೂ ಅವುಗಳಿಗೆ ಪ್ರತೀತಿಮಾತ್ರವಿದ್ದಪ್ರಯುಕ್ತ ಲಕ್ಷ್ಯತ್ವವು ಇದೆಯೋ ಹಾಗೆಯೇ ಬ್ರಹ್ಮನೂ ಯಾವ ಶಬ್ದದಿಂದಲೂ ವಾಚ್ಯನಾಗದಿದ್ದರೂ ಸ್ವಪ್ರಕಾಶನಾಗಿರುವಪ್ರಯುಕ್ತ ಪ್ರಸಿದ್ಧಿಯಿದ್ದುದರಿಂದ ಆತನಿಗೆ ಲಕ್ಷ್ಯತ್ವವು ಉಪಪನ್ನವಾಗುತ್ತದೆ ಎಂದಾಶಂಕಿಸಿದರೆ—

**ಮೂ ॥ ಮಾಧುರ್ಯಾದಿವಿಶೇಷಾಶ್ಚ ತಚ್ಛಬ್ದೈರುದಿತಾಃ ಸದಾ ॥ ೧೨೩ ॥**

**ಅ** ॥ ಮಾಧುರ್ಯಾದಿವಿಶೇಷಾಶ್ಚ=ಮಾಧುರ್ಯಾದಿ ಪ್ರಭೇದಗಳೂ ಕೂಡ, ತಚ್ಛಬ್ದೈಃ= ಮಾಧುರ್ಯಾದಿ ವಿಶೇಷಶಬ್ದಗಳಿಂದ, ಉದಿತಾಃ ಸದಾ=ವಾಚ್ಯಗಳೇ ಆಗಿವೆ. ಅಥವಾ ಸೂದಶಾಸ್ತ್ರಾದಿ ಪ್ರಸಿದ್ಧಗಳಾದ ವಿಶದ ಮೊದಲಾದ ವಾಚಕಶಬ್ದಗಳಿಂದ, ಉದಿತಾಃ ಸದಾ=ಹೇಳಲ್ಪಟ್ಟವೆ. (ಅಂದರೆ '**ವಿಶದಂ ಕ್ಷೀರಮಾಧುರ್ಯಂ ಸ್ಥಿರಮಾಜ್ಯಸ್ಯ ತೀಕ್ಷ್ಣಕಂ । ಗುಡಸ್ಯ ಪನಸಾದೀನಾಂ ನಿಹಾರೀತ್ಯಭಿಧೀಯತೇ** ' ॥ ಕ್ಷೀರಮಾಧುರ್ಯವು ವಿಶದವೆಂದೂ, ಆಜ್ಯ ಮಾಧುರ್ಯವು ಸ್ಥಿರವೆಂದೂ, ಗುಡದ ಮಾಧುರ್ಯವು ತೀಕ್ಷ್ಣಕವೆಂದೂ, ಪನಸ (ಹಲಸಿನಕಾಯಿ) ಮೊದಲಾದವುಗಳ ಮಾಧುರ್ಯವು ನಿಹಾರಿ ಎಂದೂ ಹೇಳಲ್ಪಡುತ್ತದೆ. ಹೇಗೆ ಧ್ವನಿವಿಶೇಷಗಳಿಗೆ ವಾಚಕಗಳಾದ ಶ್ರುತಿ-ಸ್ವರ-ಜಾತಿ-ರಾಗಾದಿ ಶಬ್ದಗಳು ಅಲ್ಪಜ್ಞರಿಂದ ತಿಳಿಯದೆ ಇದ್ದವುಗಳಾದಾಗ್ಯೂ ಸಂಗೀತ ಶಾಸ್ತ್ರದಲ್ಲಿ ಪ್ರಸಿದ್ಧಗಳಾಗಿವೆಯೋ, ಹಾಗೆಯೇ ಮಾಧುರ್ಯಾದಿಗಳ ಪ್ರಭೇದಗಳಿಗೆ ವಾಚಕಗಳಾದ ವಿಶದ ಮೊದಲಾದ ಶಬ್ದಗಳು ಆಯಾಯ ಶಾಸ್ತ್ರಗಳಲ್ಲಿ ಪ್ರಸಿದ್ಧಗಳೇ ಆಗಿವೆ. ಅಂತೂ 'ಇಕ್ಷು ಕ್ಷೀರ ಗುಡಾದೀನಾಂ' ಎನ್ನುವ ವಚನವು ತಮಗೆ ವ್ಯುತ್ಪತ್ತಿಯಿಲ್ಲ ಎನ್ನುವುದನ್ನು ಪ್ರಕಟೀಕರಿಸುವುದಕ್ಕಾಗಿಯೂ ಸರಸ್ವತಿಯನ್ನು ನಿಂದಿಸಿ ಪ್ರತ್ಯವಾಯವನ್ನು ಸಂಪಾದಿಸಿಕೊಳ್ಳುವುದಕ್ಕಾಗಿಯೂ ಪರರು ಹೇಳಿದ್ದು ಆಗಿದೆ. ಆದಪ್ರಯುಕ್ತ ಹಿಂದಿನ ಅತಿಪ್ರಸಂಗವು ಯುಕ್ತವೇ ॥ ೧೨೩ ॥

ಸ. ರ. ವಿ. ' ನದೀ ತೀರೇ ಪಂಚ ಫಲಾನಿ ಸಂತಿ ' ಎನ್ನುವಲ್ಲಿ ನದೀತೀರ ಫಲಸಂಬಂಧವು ವಾಕ್ಯಾರ್ಥವು. ಇದು ಯಾವುದೊಂದು ಪದದಿಂದಲೂ ವಾಚ್ಯವಾಗಲಾರದು, ಹಾಗೆಯೇ ಬ್ರಹ್ಮನೂ ಅವಾಚ್ಯನು, ಎಂದರೆ—

**ನ್ಯಾಯಸುಧಾ**—ಹಾಗಾದರೆ 'ನದೀತೀರೆ ಪಂಚ ಫಲಾನಿ ಸಂತಿ' ಎನ್ನುವ ವಾಕ್ಯಾರ್ಥವು ಅವಾಚ್ಯವಾದಾಗ್ಯೂ ನದ್ಯಾದಿ ಪದಗಳಿಂದ ಲಕ್ಷ್ಯವಾಗಿ ಕಾಣಲ್ಪಡುತ್ತದೆ. ಹಾಗೆಯೇ ಬ್ರಹ್ಮನೂ ವಾಕ್ಯಾರ್ಥನೆಂದಂಗೀಕರಿಸುತ್ತೇವೆ. ಪದಾರ್ಥನಲ್ಲ. ಆದಪ್ರಯುಕ್ತ ಲೌಕಿಕವಾಕ್ಯಾರ್ಥದಂತೆ ಅವಾಚ್ಯನಾದಾಗ್ಯೂ ಲಕ್ಷ್ಯನೆಂದು ಏತಕ್ಕೆ ಆಗಲಾರನು? ಎಂದಾಶಂಕಿಸಿದರೆ—

ಮೂ ॥ ವಾಕ್ಯಾರ್ಥೋಽಪಿ ಹಿ ವಾಕ್ಯಾರ್ಥಶಬ್ದೇನೈವೋದಿತೋ ಭವೇತ್ ।
ನಾವಾಚ್ಯಂ ತೇನ ಕಿಂಚಿತ್ ಸ್ಯಾತ್
[ಯತ ಇತ್ಯಾದಿಕೈರ್ವದನ್] ॥ ೧೨೪ ॥

ಅ ॥ ವಾಕ್ಯಾರ್ಥೋಽಪಿ=ವಾಕ್ಯಾರ್ಥವಾದರೂ, ವಾಕ್ಯಾರ್ಥಶಬ್ದೇನ = ವಾಕ್ಯಾರ್ಥ ಎನ್ನುವ ಪದದಿಂದ, ಉದಿತ ಏವ=ವಾಚ್ಯವಾದುದೇ, ಭವೇತ್=ಆಗುವುದು ತೇನ=ಅದರಿಂದ, ಅವಾಚ್ಯಂ=ಅವಾಚ್ಯವೆನ್ನುವುದು, ಅಥವಾ ಅವಾಚ್ಯಂ = ವಾಚ್ಯವಾಗದೆ ಲಕ್ಷ್ಯವಾದುದು, ಕಿಂಚಿತ್=ಯಾವುದೊಂದು ಪ್ರಮಾಣಸಿದ್ಧವಾದುದು, ನ=ಇಲ್ಲ.

ತಾ ॥ (1) ವಾಕ್ಯಾರ್ಥಶಬ್ದವು ವಾಕ್ಯಾರ್ಥವನ್ನು ಹೇಳದಿದ್ದರೆ 'ವಾಕ್ಯಾರ್ಥ' ಎನ್ನುವ ಪದದಿಂದ ವಾಚ್ಯವಾದುದು ಬೇರೆ ಯಾವುದಾದರೊಂದು ಹೇಳಬೇಕು. ನಾವು ಲಕ್ಷಕ ಶಬ್ದದಿಂದಲೇ ವಾಚ್ಯತ್ವವನ್ನು ಹೇಳುವುದಿಲ್ಲ. ಮತ್ತೆ ಯಾವುದಾದರೊಂದು ಶಬ್ದದಿಂದ ವಾಚ್ಯವಾದುದೇ ಯಾವುದಾದರೊಂದು ಶಬ್ದದಿಂದ ಲಕ್ಷ್ಯವೆನ್ನುತ್ತೇವೆ. (2) ಅಥವಾ ಬ್ರಹ್ಮನಿಗೆ ವಾಚ್ಯತ್ವವಿಲ್ಲದಿದ್ದರೆ ವಸ್ತುತ್ವವೇ ಇಲ್ಲವೆಂದಾಗುವುದು ಏಕೆಂದರೆ, ಅವಾಚ್ಯವಾದುದು ಯಾವುದೂ ಇಲ್ಲವೇ ಇಲ್ಲ ॥ ೧೨೪ ॥

ಹಾಗಾದರೆ, 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನಿಗೆ ಅವಾಚ್ಯತ್ವವನ್ನು ಹೇಳಿರುವುದರಿಂದ ವಾಚ್ಯತ್ವವನ್ನು ಸಾಧಿಸಿಕೊಡುವ ಈಕ್ಷಣೀಯತ್ವಾನುಮಾನವು ಶ್ರುತಿಯಿಂದ ಬಾಧಿತವಾಗುವುದೆಂದು ಹೇಳಕೂಡದು. ಏಕೆಂದರೆ— ಬ್ರಹ್ಮನು ಅವಾಚ್ಯನು ಎನ್ನುವುದು 'ಯತೋ ವಾಚೋ' ಎನ್ನುವ ಶ್ರುತ್ಯರ್ಥವಾಗಿದ್ದರೆ ವಾಚ್ಯತ್ವವನ್ನು ಸಾಧಿಸಿಕೊಡುವ ಅನುಮಾನವು ಅಯುಕ್ತವಾಗುತ್ತಿತ್ತು. ಶ್ರುತಿಗೆ ಹಾಗೆ ಅರ್ಥವೇ ಅಲ್ಲ. ಹಾಗೆ ವ್ಯಾಖ್ಯಾನ ಮಾಡಿದರೆ ಸ್ವಕ್ರಿಯಾವಿರೋಧವು ಪ್ರಾಪ್ತವಾಗುವುದು ಎನ್ನುತ್ತಾರೆ.—

ಮೂ ॥ [ನಾವಾಚ್ಯಂ ತೇನ ಕಿಂಚಿತ್ ಸ್ಯಾತ್] ಯತ ಇತ್ಯಾದಿಕೈರ್ವದನ್ ।
ಅವಾಚ್ಯತ್ವಂ ಕಥಂ ಬ್ರೂಯಾನ್ಮೂಕೋಽಹಮಿತಿವತ್ಸುಧೀಃ ॥
ಯೇನ ಲಕ್ಷ್ಯಮಿತಿ ಪ್ರೋಕ್ತಂ ಲಕ್ಷ್ಯಶಬ್ದೇನ ಸೋಽವದತ್ ।
ಏಕಸ್ಯಾಪಿ ಹಿ ಶಬ್ದಸ್ಯ ಗೌಣಾರ್ಥಸ್ವೀಕೃತೌ ಸತಾಂ ।
ಮಹತೀ ಜಾಯತೇ ಲಜ್ಜಾ ಯತ್ರ ತತ್ರಾಖಿಲಾ ರವಾಃ ॥ ೧೨೫ ॥
ಅಮುಖ್ಯಾರ್ಥಾ ಇತಿ ವದನ್ಯಸ್ತನ್ಮಾರ್ಗಾನುವರ್ತಿನಾಂ ।
ಕಥಂ ನ ಜಾಯತೇ ಲಜ್ಜಾ ವಕ್ತುಂ ಶಾಬ್ದತ್ವಮಾತ್ಮನಃ ॥ ೧೨೬ ॥

ಅ ॥ ('ಯತಃ' ಇತ್ಯಾದಿಶಬ್ದಗಳಿಂದ ಬ್ರಹ್ಮನನ್ನು ಹೇಳಿಯೇ ಬ್ರಹ್ಮನಿಗೆ 'ವಾಚೋ ನಿವರ್ತಂತೇ' ಎನ್ನುವುದರಿಂದ ಅವಾಚ್ಯತ್ವವನ್ನು ಹೇಳಬೇಕು. 'ಯತಃ' ಎನ್ನುವ ಶಬ್ದವು ಬ್ರಹ್ಮನಿಗೆ ವಾಚಕವಾಗದಿದ್ದರೆ ಯಾವುದಾದರೊಂದಕ್ಕೆ ಅವಾಚ್ಯತ್ವವು ಬರಬೇಕಾಗುವುದು. ತಥಾ ಚ) ಯತ ಇತ್ಯಾದಿಕೈಃ='ಯತಃ' ಎನ್ನುವುದೇ ಮೊದಲಾದ ಶಬ್ದಗಳಿಂದ, ವದನ್=(ಬ್ರಹ್ಮನನ್ನೇ) ಹೇಳುತ್ತಾ, ಕಥಂ=ಹೇಗೆತಾನೇ, ಅವಾಚ್ಯತ್ವಂ=ಬ್ರಹ್ಮನಿಗೆ ಯಾವ ಶಬ್ದದಿಂದಲೂ ವಾಚ್ಯತ್ವವಿಲ್ಲವೆನ್ನುವುದನ್ನು, ಬ್ರೂಯಾತ್=ಶ್ರುತ್ಯರ್ಥವನ್ನಾಗಿ ಹೇಳಿಯಾನು ಅಹಂ ಮೂಕಃ ಇತಿವತ್=ನಾನು ಮೂಕನು ಎನ್ನುವುದರಂತೆ, (ಸ್ವಕ್ರಿಯಾವಿರೋಧವು

ಬರುವುದು.) ಸುಧೀಃ = ಆಂತಹನು ಮಹಾಪಂಡಿತನು. ಅಂದರೆ, ಏನೂ ತಿಳುವಳಿಕೆ ಇಲ್ಲದವನೆಂದು ಪರಿಹಾಸವು. ಯೇನ=ಯಾರಿಂದ, ಲಕ್ಷ್ಯಮಿತಿ=ಬ್ರಹ್ಮನು ಲಕ್ಷ್ಯನೆಂದು, ಪ್ರೋಕ್ತಂ=ಹೇಳಿಸಿಕೊಳ್ಳಲ್ಪಟ್ಟಿದ್ದಾನೋ, ಸಃ=ಆತನು, ಲಕ್ಷ್ಯಶಬ್ದೇನ='ಲಕ್ಷ್ಯ' ಎನ್ನುವ ಶಬ್ದದಿಂದ, ಅವದತ್=ಹೇಳಿದನು. (ಅಂದರೆ, ಬ್ರಹ್ಮನು ಲಕ್ಷ್ಯನೆಂದು ಹೇಳುವವನೂ ಬ್ರಹ್ಮನಿಗೆ 'ಲಕ್ಷ್ಯ' ಎನ್ನುವ ಶಬ್ದವಾಚ್ಯತ್ವವನ್ನು ಅಂಗೀಕರಿಸಲೇಬೇಕು ಆಗ ಶಬ್ದಾಂತರವು ಏನು ಅಪರಾಧ ಮಾಡಿಯದೆ? ಹಾಗಾದರೆ, 'ಲಕ್ಷ್ಯ' ಎನ್ನುವ ಶಬ್ದದಿಂದಲೂ ಲಕ್ಷಿತನೇ ಆಗುತ್ತಾನೆ, ವಾಚ್ಯನಾಗುವದಿಲ್ಲ ಎಂದು ಹೇಳಿದರೆ ಆಗ ಲಕ್ಷ್ಯಶಬ್ದದಿಂದ ಲಕ್ಷ್ಯವಾದುದನ್ನು ತಿಳಿಸಲಿಕ್ಕೂ ಒಂದು ಶಬ್ದವನ್ನೇ ಹೇಳಬೇಕು. ಆ ಶಬ್ದದಿಂದಲೂ ವಾಚ್ಯನಲ್ಲ. ಲಕ್ಷ್ಯನೆಂದು ಹೇಳಿದರೆ ಅದನ್ನು ತಿಳಿಸಲಿಕ್ಕೂ ಶಬ್ದಾಂತರವನ್ನೇ ಹೇಳಬೇಕು. ಹೀಗೆ ಅನವಸ್ಥೆಯು ಬರುವುದು.) (ಕಾರಣಾಂತರದಿಂದಲೂ ಬ್ರಹ್ಮನಲ್ಲಿ ಶ್ರುತಗಳಾದ ವೈದಿಕ ಎಲ್ಲಾ ಶಬ್ದಗಳಿಗೆ ಲಕ್ಷಣಾವೃತ್ತಿಯನ್ನು ಆಶ್ರಯಿಸುವುದು ಯುಕ್ತವಲ್ಲವೆನ್ನುತ್ತಾರೆ.) ಯತ್ರ=ಯಾವ ವೇದದಲ್ಲಿ, ಸತಾಂ=ಜ್ಞಾನಿಗಳಿಗೆ, ಏಕಸ್ಯಾಪಿ ಶಬ್ದಸ್ಯ=ಒಂದೇಒಂದು ಶಬ್ದಕ್ಕೂ, ಗೌಣಾರ್ಥ ಸ್ವೀಕೃತಾ=ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯಾರ್ಥ ಸ್ವೀಕಾರವು (ಮಾಡಲ್ಪಟ್ಟರೆ,) ಮಹತೀ ಲಜ್ಜಾ=ಮಹಾಲಜ್ಜೆಯು, ಜಾಯತೇ=ಹುಟ್ಟುತ್ತದೋ, ತತ್ರ=ಆ ವೇದದಲ್ಲಿರತಕ್ಕ, ಅಖಿಲಾ ಅಪಿ ಶಬ್ದಾಃ=ಎಲ್ಲಾ ಶಬ್ದಗಳೂ, ಅಮುಖ್ಯಾರ್ಥಾ ಇತಿ ವದನ್=ಅಮುಖ್ಯಾರ್ಥಗಳೆಂದು ಹೇಳುವವನು, ಯಃ=ಯಾವನಿದ್ದಾನೋ, ತಸ್ಯ=ಆತನಿಗೆ, ಆತ್ಮನಃ=ತನಗೆ, ಶಾಬ್ದತ್ವಂ=ಶಬ್ದಶಕ್ತಿ ತಾತ್ಪರ್ಯಜ್ಞಾನವನ್ನು, ವಕ್ತುಂ=ಹೇಳುವುದಕ್ಕೆ, ತನ್ಮಾರ್ಗಾನುವರ್ತಿನಾಂ=ಶಬ್ದಶಕ್ತಿಗಳ ತಾತ್ಪರ್ಯವನ್ನು ಅನುಸರಿಸಿಕೊಂಡಿರುವ ವಿದ್ವಾಂಸರ ಸಕಾಶದಿಂದ, ಅಥವಾ ತನ್ಮಾರ್ಗಾನುವರ್ತಿನಾಂ=ವ್ಯಾಖ್ಯಾನ ಮಾಡತಕ್ಕವರ ಮಾರ್ಗವನ್ನು ಅನುಸರಿಸುವವರಿಗೂ, ಲಜ್ಜಾ=ನಾಚಿಗೆಯು, ಕಥಂ=ಹೇಗೆ, ನ ಜಾಯತೇ=ಹುಟ್ಟುವುದಿಲ್ಲ.

ತಾ ॥ **ನ್ಯಾಯಸುಧಾ**— (1) ಹಾಗಾದರೆ, ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯಾರ್ಥವನ್ನು ಸ್ವೀಕರಿಸುವುದೇ ಲಜ್ಜೆಗೆ ಕಾರಣವಲ್ಲ. ಹಾಗಿದ್ದರೆ 'ಗಂಗಾಯಾಂ ಘೋಷಃ' ಇತ್ಯಾದಿಗಳಲ್ಲಿ ಅಮುಖ್ಯಾರ್ಥವನ್ನು ಸ್ವೀಕರಿಸದೆ ಹೋಗಬೇಕಾಗುವುದು. ಮತ್ತೆ ಮುಖ್ಯಾರ್ಥವು ಕೂಡುವಾಗಲೇ ಅಮುಖ್ಯಾರ್ಥವನ್ನು ಸ್ವೀಕರಿಸುವುದು ದೋಷವು. ಹೇಗೆಂದರೆ- ಮುಖ್ಯಾರ್ಥದಲ್ಲಿಯೇ ಶಕ್ತಿಯು ಗೃಹೀತವಾಗುವುದರಿಂದ ಅದೇ ಪ್ರಥಮತಃ ಬುದ್ಧಿಯಲ್ಲಿ ಆರೂಢವಾಗುವುದು. ಕಾರಣವಿಲ್ಲದೆ ಅದನ್ನು ಬಿಟ್ಟು ಲಾಕ್ಷಣಿಕಾರ್ಥವನ್ನು ಸ್ವೀಕರಿಸಿದರೆ ಹೇಗೆತಾನೇ ಅನೌಚಿತ್ಯವು ಬಾರದೆಹೋಗುವುದು? ಆದಪ್ರಯುಕ್ತ ಎಲ್ಲಿ ಮುಖ್ಯಾರ್ಥದಲ್ಲಿ ಬಾಧಕವಿದೆಯೋ, ಅಲ್ಲಿ ಅದನ್ನು ಬಿಡದಿರುವುದೇ ಲಜ್ಜಾಸ್ಪದವು. 'ಗಂಗಾಯಾಂ ಘೋಷಃ' 'ಸಿಂಹೋ ದೇವದತ್ತಃ' ಇತ್ಯಾದಿಗಳಲ್ಲಿ ಗಂಗಾದಿಶಬ್ದಗಳಿಗೆ ಮುಖ್ಯಾರ್ಥವನ್ನು ಅಂಗೀಕರಿಸುವುದೇ ಲಜ್ಜಾಹೇತುವು. ಆದಪ್ರಯುಕ್ತ ಇದು ಹೇಗೆ ಕೂಡುತ್ತದೆಂದರೆ— ಸತ್ಯವೇ. ಪ್ರಕೃತದಲ್ಲಿಯೂ ಮುಖ್ಯಾರ್ಥವನ್ನು ಸ್ವೀಕರಿಸಿದರೆ ಬಾಧಕವಿಲ್ಲ. ಬಾಧಕ ಶ್ರುತಿಯನ್ನೂ ನಿರ್ಗುಣತ್ವ ಯುಕ್ತಿಯನ್ನೂ ನಿರಾಕರಿಸಿಯಾಗಿದೆ ॥ ೧೨೫ ॥ ೧೨೬ ॥

**ನ್ಯಾಯಸುಧಾ**— (1) ಈ ವಿಷಯದಲ್ಲಿ ಅದ್ವೈತಿಗಳು ಹೀಗೆ ಹೇಳುತ್ತಾರೆ— ನಿರ್ಗುಣ ಸಗುಣ ಎಂದು ಬ್ರಹ್ಮರು ಇಬ್ಬರು. ಅದರಲ್ಲಿ ನಿರ್ಗುಣಬ್ರಹ್ಮನು, ನಿತ್ಯನು ಶುದ್ಧ (ಜಡಾಮಿಶ್ರ)ನು, ಜ್ಞಾನಸ್ವರೂಪನು, ಮುಕ್ತ ಸ್ವಭಾವನು, ಪರಿಪೂರ್ಣನು, ಆ ನಿರ್ಗುಣ ಬ್ರಹ್ಮನೇ ಮಾಯಾವಿಶಿಷ್ಟನಾಗಿ ಐಶ್ವರ್ಯಾದಿ ಧರ್ಮವುಳ್ಳವನಾದುದರಿಂದ ಸಗುಣನೆನ್ನಿಸುತ್ತಾನೆ.

ಮಾಯೆಯು ಅನಿರ್ವಾಚ್ಯವಾಗಿರುವುದರಿಂದ ಮಾಯಾವಿಶಿಷ್ಟನಿಗೆ ಸಗುಣಭಾವವು ತಾತ್ವಿಕವಲ್ಲ. ಅದರಲ್ಲಿ ಸಗುಣಬ್ರಹ್ಮನೇ 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಇತ್ಯಾದಿಗಳಲ್ಲಿ ಈಕ್ಷಣೀಯನೆಂದು ಹೇಳಲ್ಪಡುತ್ತಾನೆ ಅಂತೂ ವಾಚ್ಯತ್ವವಿಲ್ಲದೆ ಈಕ್ಷಣೀಯತ್ವವು ಕೂಡದೆ ಇರುವುದಾದರೆ ಸಗುಣಬ್ರಹ್ಮನೇ ವಾಚ್ಯನಾಗಲಿ. ನಿರ್ಗುಣನು ವಾಚ್ಯನು ಆಗುವುದು ಬೇಡ. ನಿರ್ಗುಣನಿಗೆ ಈಕ್ಷಣೀಯತ್ವವಿಷಯದಲ್ಲಿ ಪ್ರಮಾಣವಿಲ್ಲ. (2) 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಇತ್ಯಾದಿಗಳೇ ನಿರ್ಗುಣ ವಿಷಯಕಗಳೆಂದು ಹೇಳಕೂಡದು. ಜ್ಞಾಪಕ ವಿರುವುದಿಲ್ಲ. (3) ಮತ್ತು ಈಕ್ಷಣೀಯತ್ವಾದ್ಯನುಮಾನದಿಂದ ನಿರ್ಗುಣನಿಗೆ ವಾಚ್ಯತ್ವವು ಸಿದ್ಧಿಸದೆ ಇದ್ದರೂ 'ಸರ್ವೇ ವೇದಾ ಯತ್ಪದಮಾಮನಂತಿ' ಇತ್ಯಾದಿ ಶ್ರುತಿಗಳ ಸಾಮರ್ಥ್ಯ ದಿಂದ ನಿರ್ಗುಣನಿಗೆ ವಾಚ್ಯತ್ವವು ಸಿದ್ಧಿಸುತ್ತದೆಂದು ಹೇಳುತ್ತೇವೆಂದರೆ— ಹಾಗೆ ಹೇಳಕೂಡದು. ಮಾಯಾವಿಶಿಷ್ಟನಲ್ಲಿ ಶಕ್ತಗಳಾದ ಸರ್ವ ವೇದಗಳು ಲಕ್ಷಣಾವೃತ್ತಿಯಿಂದ ನಿರ್ಗುಣಸ್ವರೂಪ ವನ್ನು ತಿಳಿಸುತ್ತವೆ ಎಂದು 'ಸರ್ವೇ ವೇದಾಃ' ಎನ್ನುವ ಶ್ರುತಿಗೆ ಅರ್ಥವು ಕೂಡಬಹುದು. ಅಂತೂ ಸಗುಣನೇ ಈಕ್ಷಣೀಯನು, ವಾಚ್ಯನು, ನಿರ್ಗುಣನು ಅಲ್ಲ ಎನ್ನುವ ಆಶಂಕೆಯನ್ನು ಸೂತ್ರಕಾರರು ಪರಿಹರಿಸುತ್ತಾರೆ.

## "ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ" ಸೂ. ॥ ೬ ॥

ಗೌಣಶ್ಚೇತ್='ಪರಾತ್ಪರಂ' ಇತ್ಯಾದಿ ಶ್ರುತಿಗಳಲ್ಲಿ ಗೌಣಾತ್ಮನೇ ಈಕ್ಷಣೀಯನೆಂದು ಹೇಳಲ್ಪಡುತ್ತಾನೆ. ಆದಪ್ರಯುಕ್ತ ಆ ಸಗುಣನೇ ವಾಚ್ಯನಾಗಲಿ. ನಿರ್ಗುಣನು ಆಗುವುದು ಬೇಡ. ನಿರ್ಗುಣನಿಗೆ ಈಕ್ಷಣೀಯತ್ವದಲ್ಲಿ ಪ್ರಮಾಣವಿಲ್ಲ. 'ಪರಾತ್ಪರಂ' ಇತ್ಯಾದಿ ಶ್ರುತಿಗಳು ನಿರ್ಗುಣಪ್ರತಿಪಾದಕಗಳೆನ್ನುವಲ್ಲಿ ಜ್ಞಾಪಕವಿಲ್ಲ. ನಿರ್ಗುಣನು ಲಕ್ಷ್ಯನೇ ಸರಿ ಎಂದು, ನ= ಹೇಳಕೂಡದು. ಆತ್ಮಶಬ್ದಾತ್=ಈಕ್ಷಣೀಯನಾದ ವಸ್ತುವಿನಲ್ಲಿ ಆತ್ಮ ಬ್ರಹ್ಮ ಪುರುಷ ಮೊದಲಾದ ಶಬ್ದಗಳು ಶ್ರುತಗಳಾಗಿರುವುದರಿಂದ. ಆ ಶಬ್ದಗಳು ಪೂರ್ಣಾರ್ಥವನ್ನು ಹೇಳು ವುದರಿಂದ ಶುದ್ಧಬ್ರಹ್ಮಜ್ಞಾಪಕಗಳೇ ಆಗಿವೆ.

---

ಆತ್ಮಾದಿ ಶಬ್ದವು ಪೂರ್ಣಾರ್ಥವಾಚಕವಾಗಲಿ. ಆದಾಗ್ಯೂ ಎಲ್ಲಿ ದೃಶ್ಯವೂ, ವಾಚ್ಯವೂ ಆದ ವಸ್ತುವಿನಲ್ಲಿ ಆತ್ಮಶಬ್ದವು ಪ್ರಯೋಗಿಸಲ್ಪಡುತ್ತದೋ, ಅಲ್ಲಿ ಸಗುಣವಿಷಯಕವೇ ಎಂದು ನಿಯಮವನ್ನು ಅಂಗೀಕರಿಸಿದರೆ ಏನು ದೋಷವು ಎನ್ನುವ ಆ ಶಂಕೆಯನ್ನು ಪರಿಹರಿಸುತ್ತಾರೆ—

## "ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ" ಸೂ. ॥ ೭ ॥

(ದೃಶ್ಯವಾದ, ವಾಚ್ಯವಾದ ವಸ್ತುವಿನಲ್ಲಿ ಪ್ರಯೋಗಿಸಲ್ಪಟ್ಟ ಆತ್ಮ ಮೊದಲಾದ ಶಬ್ದಗಳು ಸಗುಣಬಾಧಕಗಳೇ ಎನ್ನುವ ಹಿಂದೆ ಹೇಳಿದ ನಿಯಮವು ಕೂಡುವುದಿಲ್ಲ.) ತನ್ನಿಷ್ಠಸ್ಯ = 'ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ' 'ತರತಿ ಶೋಕಮಾತ್ಮವಿತ್' ಇತ್ಯಾದಿ ಶ್ರುತಿ ಗಳಲ್ಲಿ ದೃಶ್ಯಾತ್ಮನನ್ನು ತಿಳಿದವನಿಗೆ, ಮೋಕ್ಷೋಪದೇಶಾತ್ = ಮುಕ್ತಿಯಾಗುತ್ತದೆಂದು ಉಪ ದೇಶಮಾಡಿರುವುದರಿಂದ ಗೌಣಾತ್ಮನನ್ನು ತಿಳಿದವನಿಗೆ ಮೋಕ್ಷವು ಕೂಡುವುದಿಲ್ಲ. ಆದುದರಿಂದ ಮೋಕ್ಷಜನಕಜ್ಞಾನಕ್ಕೆ ವಿಷಯೀಭೂತನಾದ ಆತ್ಮನು ನಿರ್ಗುಣನೇ, (ಸತ್ವಾದಿಗುಣರಹಿತನಾದ

ಮುಖ್ಯ ಬ್ರಹ್ಮನೇ) ಎಂದು ನಿಶ್ಚಯವಾಗುತ್ತದೆ. ಅಂತೂ ಅವನಿಗೇನೇ ಈಕ್ಷಣೀಯತ್ವ ಹೇತುವು ಬರುವುದರಿಂದ ವಾಚ್ಯತ್ವವು ಸಿದ್ಧವಾಯಿತು.

ಈ ಎರಡು ಸೂತ್ರಾರ್ಥಗಳನ್ನು ವಿವರಿಸುತ್ತಾ ಶ್ರೀಮದಾಚಾರ್ಯರು ಅಧಿಕವಿಷಯ ವನ್ನು ನಿರೂಪಿಸುತ್ತಾರೆ—

ಮೂ ॥ ಆತ್ಮಬ್ರಹ್ಮಾದಯಃ ಶಬ್ದಾಃ ಸಾಕ್ಷಾತ್ಪೂರ್ಣಾಭಿಧಾಯಿನಃ ।
ಜನ್ಮಾದಿಕಾರಣಂ ಬ್ರಹ್ಮ ಲಕ್ಷಿತಂ ಚ ಯದಾ ತದಾ ॥ ೧೨೭ ॥
ವಂಧ್ಯಾಪುತ್ರೋಪಮಂ ಮಾಯಾಶಬಲಂ ವಾಚ್ಯಮಿತ್ಯಪಿ ।
ಕಲ್ಪಯಿತ್ವಾ ವಿನಾ ಮಾನಂ ಲಕ್ಷ್ಯಂ ಶುದ್ಧಂ ವದನ್ಪದೈಃ ॥ ೧೨೮ ॥
ಆತ್ಮಶಬ್ದೋದಿತಸ್ಯೈವ ಜ್ಞಾನಂ ಮುಕ್ತ್ಯೇಕಸಾಧನಂ ।
ಆಹ ಶ್ರುತಪರಿತ್ಯಾಗಃ ಸ್ಯಾಚ್ಚಾಸ್ಯಾಶ್ರುತಕಲ್ಪನಾ ॥
ಸ್ಯಾತ್ಸರ್ವತ್ರ ಚ ಯತ್ರೈಕಮಪಿ ಲೋಕೋ ಜುಗುಪ್ಸತೇ ॥ ೧೨೯ ॥

ಅ ॥ (ಯಃ ವಾದೀ=ಯಾವ ವಾದಿಯು,) ಮಾಯಾಶಬಲಂ=ಅನಿರ್ವಾಚ್ಯವಾದ ಮಾಯಾಖ್ಯವಾದ ಅಜ್ಞಾನವಿಶಿಷ್ಟ(ಸಗುಣ) ಬ್ರಹ್ಮನನ್ನು, ಕಲ್ಪಯಿತ್ವಾ = ಕಲ್ಪಿಸಿಕೊಂಡು, ಪದೈಃ= ವೈದಿಕ ಎಲ್ಲಾ ಪದಗಳಿಂದಲೂ, ವಾಚ್ಯಮಿತ್ಯಪಿ ಕಲ್ಪಯಿತ್ವಾ=ಸಗುಣಬ್ರಹ್ಮನನ್ನೇ ವಾಚ್ಯನನ್ನಾಗಿಯೂ ಕಲ್ಪಿಸಿಕೊಂಡು, ಶುದ್ಧಂ=ಶುದ್ಧಬ್ರಹ್ಮನನ್ನು, ಅಂದರೆ ಮಾಯಾತೀತನು ಸರ್ವಜ್ಞನು, ಸರ್ವಶಕ್ತನು, ಪರಿಪೂರ್ಣನು- ಇಂತಹ ನನಗೆ ಅಭಿಮತನಾದ ಪರಬ್ರಹ್ಮನನ್ನು, ಪದೈಃ=ವೇದದಲ್ಲಿರುವ ಎಲ್ಲಾ ಪದಗಳಿಂದಲೂ. ಲಕ್ಷ್ಯಂ ವದನ್=ಲಕ್ಷ್ಯ(ಲಕ್ಷಣಾವೃತ್ತಿಯಿಂದ ಬೋಧ್ಯ) ನನ್ನಾಗಿ ಹೇಳುತ್ತಾನೋ, ಅಸ್ಯ=ಈ ವಾದಿಗೆ, ಶ್ರುತಪರಿತ್ಯಾಗಃ=ಶ್ರುತಾರ್ಥವನ್ನು ಪರಿತ್ಯಾಗ ಮಾಡುವಿಕೆ ಎನ್ನುವ ದೋಷವು, ಸರ್ವತ್ರ ಚ=ಎಲ್ಲಾ ವಾಕ್ಯಗಳಲ್ಲಿಯೂ, ಸ್ಯಾತ್=ಬರುವುದು. (ಹೇಗೆಂದರೆ ಶಕ್ತಿವೃತ್ತಿಯಿಂದಲೇ ಪ್ರಥಮತಃ ಪ್ರತೀತನಾದ ಶುದ್ಧಬ್ರಹ್ಮನನ್ನು ನಿಷ್ಕಾರಣವಾಗಿ ಪರಿತ್ಯಾಗಮಾಡಿರುವನಷ್ಟೆ! ಶುದ್ಧಬ್ರಹ್ಮನಿಗೆ ಪ್ರತೀತಿಯೇ ಹೇಗೆಂದರೆ, ಆತ್ಮ ಬ್ರಹ್ಮ ಮೊದಲಾದ ಶಬ್ದಗಳು ವೇದದಲ್ಲಿ ಶ್ರುತಗಳಾಗಿವೆಯಷ್ಟೆ.) ಆತ್ಮ ಬ್ರಹ್ಮಾದಯಃ ಶಬ್ದಾಃ=ಆತ್ಮ ಬ್ರಹ್ಮ ಮೊದಲಾದ ಶಬ್ದಗಳು, ಯದಾ=ಯಾವ ಕಾರಣದ್ದೆಶೆಯಿಂದ, ಸಾಕ್ಷಾತ್ ಪೂರ್ಣಾಭಿಧಾಯಿನಃ=ಶಕ್ತಿವೃತ್ತಿಯಿಂದಲೇ ಪರಿಪೂರ್ಣರೂಪ ಅರ್ಥವನ್ನು ಹೇಳುವವುಗಳೋ, ತದಾ=ಆಕಾರಣದ್ದೆಶೆಯಿಂದ, ಶ್ರುತಪರಿತ್ಯಾಗಃ=ಶ್ರುತಾರ್ಥಹಾನರೂಪದೋಷವು, ಸ್ಯಾತ್=ಬರುವುದು. (ಶ್ರುತಪರಿತ್ಯಾಗರೂಪದೋಷವು ಮಾತ್ರವಲ್ಲ. ಮತ್ತೆ) ಸರ್ವತ್ರ ಚ=ಎಲ್ಲಾ ವಾಕ್ಯಗಳಲ್ಲಿಯೂ, ಅಶ್ರುತಕಲ್ಪನಾ ಚ ಸ್ಯಾತ್=ಅಶ್ರುತಾರ್ಥವನ್ನು ಕಲ್ಪಿಸುವಿಕೆ ಎನ್ನುವ ದೋಷವೂ ಬರುವುದು. (ಹೇಗೆಂದರೆ) ಮಾಯಾಶಬಲಂ ವಂಧ್ಯಾಪುತ್ರೋಪಮಂ = ಮಾಯಾವಿಶಿಷ್ಟನಾದ ಬ್ರಹ್ಮನು ಬಂಜೆಯ ಮಗನಿಗೆ ಸಮನು. (ಅದು ಹೇಗೆಂದರೆ) ವಿನಾ ಮಾನಂ=ಪ್ರಮಾಣವಿಲ್ಲದಿರುವುದರಿಂದ. (ಪ್ರಮಾಣಾಭಾವವೂ ಹೇಗೆಂದರೆ— ಶ್ರುತಿಗಳಲ್ಲಿ ಆತ್ಮಬ್ರಹ್ಮಾದಿ ಶಬ್ದಗಳು ಶ್ರುತಗಳಾಗಿರುವವಪ್ರಯುಕ್ತ ಅವುಗಳು ಪೂರ್ಣರೂಪ ಅರ್ಥವನ್ನು ಹೇಳುವವುಗಳು. ಅದ್ವೈತಿಗಳು ಹೇಳುವ ಮಾಯಾವಿಶಿಷ್ಟನಾದ ಸಗುಣಬ್ರಹ್ಮನನ್ನು ಹೇಳುವವುಗಳೇ ಅಲ್ಲವು.) (ಹಾಗಾದರೆ ನೀವೇ (ದ್ವೈತಿಗಳೇ) ಜನ್ಮಾದಿಸೂತ್ರದಲ್ಲಿ ಮಾಯಾವಿಶಿಷ್ಟನಾದ ಶಬಲಬ್ರಹ್ಮನೇ ಲಕ್ಷ್ಯನೆಂದಂಗೀಕರಿಸಿರುವುದರಿಂದ ಸಗುಣ ಬ್ರಹ್ಮನು ವಂಧ್ಯಾಪುತ್ರನಿಗೆ ತುಲ್ಯನು ಎನ್ನುವುದು ಹೇಗೆ ಕೂಡು

ತ್ತದೆ? ಎಂದು ಹೇಳಕೂಡದು ) ಬ್ರಹ್ಮ=ಪ್ರಥಮ ಸೂತ್ರದಲ್ಲಿ ಜಿಜ್ಞಾಸ್ಯನಾಗಿ ಹೇಳಲ್ಪಟ್ಟವನು ಸರ್ವಜ್ಞನು, ಸರ್ವಶಕ್ತನೂ ಆದ ಪರಬ್ರಹ್ಮನೇ, ಜನ್ಮಾದಿಕಾರಣಂ ಲಕ್ಷಿತಂ ಚ=ಜಗಜ್ಜನ್ಮಾದಿ ಕಾರಣನೆಂದು ಲಕ್ಷಿಸಲ್ಪಟ್ಟವನೆಂದು (ನಾವು ದ್ವೈತಿಗಳು) ಅಂಗೀಕರಿಸಿರುತ್ತೇವೆ. (ಇದು ಗೌಣಶ್ಚೇತ್ ಎನ್ನುವ ಒಂದನೇ ಸೂತ್ರದ ತಾತ್ಪರ್ಯವು ) (ಆತ್ಮಾದಿ ಶಬ್ದವು ಪೂರ್ಣಾರ್ಥಕ ವಾದಾಗ್ಯೂ ದೃಶ್ಯ ಆತ್ಮನಲ್ಲಿ ಶ್ರುತವಾದುದು ಸಗುಣವಿಷಯಕವೇ. ಹೀಗೆ ನಿಯಮವನ್ನು ಯಾವನು ಹೇಳುತ್ತಾನೋ ಅವನು) ಆತ್ಮಶಬ್ದೋದಿತಸ್ಯ = ಆತ್ಮಶಬ್ದದಿಂದ ಹೇಳಲ್ಪಟ್ಟವನ, ಜ್ಞಾನಂ = ಜ್ಞಾನವನ್ನು, ಮುಕ್ತೌ = ಮೋಕ್ಷದಲ್ಲಿ, ಅಸಾಧನಮೇವ = ಸಾಧನವಲ್ಲವೆಂದೇ, ಆಹ=ಹೇಳುತ್ತಾನೆ. (ಗೌಣಾತ್ಮಜ್ಞಾನವು ಮುಕ್ತಿಗೆ ಸಾಧನವಾಗಲಾರದು. ತಥಾಚ) ಅಸ್ಯ= ಈ ವಾದಿಗೆ, ಶ್ರುತಪರಿತ್ಯಾಗಃ ಸ್ಯಾತ್ = ಶ್ರುತಾರ್ಥಹಾನಿಯೆಂಬ ದೋಷವು ಬರುವುದು. (ದೃಶ್ಯಾತ್ಮನ ಜ್ಞಾನವು ಮುಕ್ತಿಗೆ ಸಾಧನವೆನ್ನುವುದು 'ಯಸ್ಯಾನುವಿತ್ತಃ' ಇತ್ಯಾದಿ ಶ್ರುತಿಗಳಲ್ಲಿ ಶ್ರುತಗಳಾಗಿವೆ. ಇದು 'ತನ್ನಿಷ್ಠಸ್ಯ' ಎನ್ನುವ ಸೂತ್ರದ ತಾತ್ಪರ್ಯವು ಹೀಗೆ ನಾವು ಆಪಾದನೆ ಮಾಡಿದ ಶ್ರುತ ಹಾನಿ ಅಶ್ರುತಕಲ್ಪನೆಗಳು ಅಂಗೀಕಾರಾನರ್ಹಗಳೆಂದು ಹೇಳುತ್ತಾರೆ.) ಯತ್ರ= ಯಾವ ಎರಡರ (ಶ್ರುತಹಾನಿ ಅಶ್ರುತಕಲ್ಪನೆಗಳ) ಮಧ್ಯದಲ್ಲಿ, ಏಕಮಪಿ=ಒಂದನ್ನೂ ಕೂಡ, ಲೋಕಃ=ಜನರು, ಜುಗುಪ್ಸತೇ=ನಿಂದಿಸುತ್ತಾರೆ. (ಏಕತ್ರ ಎರಡೂ ಇದ್ದರೆ ನಿಂದಿಸುತ್ತಾ ರೆನ್ನುವುದು ಸುತರಾಂ ಸಿದ್ಧವು.) ॥ ೧೨೭ ॥ ೧೨೮ ॥ ೧೨೯ ॥

ಲೋಕದಲ್ಲಿ ನಿಂದಿತವಾದಾಗ್ಯೂ ಶ್ರುತಹಾನಿ ಅಶ್ರುತಕಲ್ಪನಾ ಎನ್ನುವುದು ಎರಡೂ ನಮಗೆ (ಅದ್ವೈತಿಗಳಿಗೆ) ದೂಷಣವಲ್ಲವೆಂದಂಗೀಕರಿಸಿದರೆ—

ಮೂ॥ ನಿಯಮೇನೋಭಯಂ ಸ್ಯಾದ್ಧಿ ಯಸ್ಯ ಸ್ವಪರಯೋರ್ಮತೇ॥ ೧೩೦ ॥
ಅಲಂಕೃತಃ ಸದೈವಾಯಂ ದುರ್ಘಟೈರೇವ ಭೂಷಣೈಃ ।
ಅಂಧಂತಮೋ ನಿತ್ಯದುಃಖಂ ತಸ್ಯ ಸ್ಯಾದ್ವ್ಯಸನದ್ವಯಂ ॥ ೧೩೧ ॥
ಅನಂದಾ ನಾಮ ತೇ ಲೋಕಾಃ ಅಂಧೇನ ತಮಸಾ ವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇಽವಿದ್ವಾಂಸೋ ಬುಧೋ ಜನಾಃ॥೧೩೨॥
ಅಸುರ್ಯಾ ನಾಮ ತೇ ಲೋಕಾಃ ಅಂಧೇನ ತಮಸಾ ವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥
ಇತ್ಯಾದಿ ಶ್ರುತಯೋ ಮಾನಂ ಶತಶೋಽತ್ರ ಸಮಂತತಃ ॥ ೧೩೩ ॥

ಅ ॥ ಸ್ವಪರಯೋರ್ಮತೇ=ತಮ್ಮ ಮತದಿಂದಲೂ, ಪರರ ಮತದಿಂದಲೂ, ಯಸ್ಯ= ಯಾರಿಗೆ, ನಿಯಮೇನ=ನಿಯಮದಿಂದ, ಉಭಯಂ=ಹಿಂದೆ ಹೇಳಿದ ಎರಡೂ, ಸ್ಯಾತ್= ಆಗಬಹುದೋ, ಅಯಂ=ಈತನು, ದುರ್ಘಟೈರೇವ ಭೂಷಣೈಃ = ಅಂಗೀಕಾರಕ್ಕೆ ಅನರ್ಹ ಗಳಾದ ಆಭರಣಗಳಿಂದ (ಅಂದರೆ ದೂಷಣಗಳಿಂದ), ಸದೈವ=ಯಾವಾಗಲೂ, ಅಲಂಕೃತಃ= ಅಲಂಕರಿಸಲ್ಪಟ್ಟವನು, ಸ್ಯಾತ್=ಆಗುವನು. (ಶುದ್ಧಬ್ರಹ್ಮನು ಶ್ರುತನಾದಾಗ್ಯೂ ಅವನನ್ನು ಬಿಡುವುದಾದರೆ ವಿಶೇಷವಿಲ್ಲದಿರುವುದರಿಂದ ಸಕಲವೇದಾರ್ಥವನ್ನೂ ಬಿಡಬೇಕಾಗುವುದು. ಮಾಯಾವಿಶಿಷ್ಟಬ್ರಹ್ಮನು ಅಶ್ರುತನಾದಾಗ್ಯೂ ಅವನನ್ನು ಕಲ್ಪಿಸುವುದಾದರೆ ಚೈತ್ಯವಂದನಾದಿ ಗಳಿಗೆ ಸ್ವರ್ಗಸಾಧನತ್ವಾದಿಗಳನ್ನೂ ಕಲ್ಪಿಸಬೇಕಾಗುವುದು. ವಿಶೇಷವಿಲ್ಲದಿರುವುದರಿಂದ) (ಶ್ರುತಿಸಿದ್ಧನಾದ ಪರಮಾತ್ಮನನ್ನು ಬಿಟ್ಟರೆ ಅತಿಪ್ರಸಂಗಮಾತ್ರ ಬರುವುದಲ್ಲ, ಮಹಾ ಪ್ರತ್ಯ

ವಾಯುವೂ ಅದೆ ಎನ್ನುತ್ತಾರೆ.) ತಸ್ಯ=ಅಲಂಕರಿಸಲ್ಪಟ್ಟವನಿಗೆ, ಅಂಧಂತಮಃ=ಅಂಧಂತಮಸ್ಸು, ನಿತ್ಯದುಃಖಂ=ನಿರಂತರ ದುಃಖವೂ ಕೂಡ, ವಸನದ್ವಯಂ=ಎರಡು ವಸ್ತ್ರವು, ಸ್ಯಾತ್= ಆಗುವುದು. (**"ವಸ್ತ್ರಹೀನಮಲಂಕಾರಂ ಘೃತಹೀನಂ ತು ಭೋಜನಂ । ಭಾವಹೀನಂ ತು ಸಲ್ಲಾಪಂ ನ ಪ್ರಶಂಸಂತಿ ಪಂಡಿತಾಃ "** ॥ ವಸ್ತ್ರವಿಲ್ಲದಿರುವ ಆಭರಣವನ್ನೂ, ತುಪ್ಪವಿಲ್ಲದಿರುವ ಭೋಜನವನ್ನೂ, ಭಾವಗರ್ಭಿತವಾಗದಿರುವ ವಚನವನ್ನೂ ಪಂಡಿತರು ಹೊಗಳುವುದಿಲ್ಲ, ಎನ್ನುವ ವಚನದಿಂದ ಅಲಂಕೃತನಿಗೆ ವಸ್ತ್ರಗಳು ಆವಶ್ಯಕಗಳು. ಆದಪ್ರಯುಕ್ತ ಇವೆರಡು ವಸ್ತ್ರಗಳು ಆಗುವವು, ಎಂದು ಪರಿಹಾಸವು.) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಅನಂದಾಃ ನಾಮ="ನ ವಿದ್ಯತೇ ನಂದಃ ಆನಂದಃ ಯೇಷು ತೇ ಅನಂದಾಃ" ಎನ್ನುವ ವ್ಯುತ್ಪತ್ತಿಯಿಂದ ಯಾವ ಲೋಕಗಳಲ್ಲಿ ಸುಖವಿಲ್ಲವೋ ಅವುಗಳು ಅಂದರೆ ಸುಖಲೇಶವಿಲ್ಲದಿರುವ, ತೇ ಲೋಕಾಃ=ಆ ಪ್ರಸಿದ್ಧಗಳಾದ ಲೋಕಗಳು, ಅಂಧೇನ ತಮಸಾ ವೃತಾಃ=ಕಗ್ಗತ್ತಲೆಯಿಂದ ಕೂಡಿರುತ್ತವೆ. ತಾನ್=ಆ ಲೋಕಗಳನ್ನು, ಬುಧಃ ಯೇ ಅವಿದ್ವಾಂಸಃ=ಜ್ಞಾನವನ್ನು ಹುಟ್ಟಿಸುವುದರಿಂದ ಭುತ್ ಶಬ್ದವಾಚ್ಯವಾದ ವೇದದ್ವೇಷಿಯಿಂದಲೂ, ಯಾರು ತಿಳಿಯದೆ ಇದ್ದವರೋ ಅಂದರೆ ವೇದಗಳಿಂದ ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸಲ್ಪಟ್ಟ ಪರಮಾತ್ಮಸ್ವರೂಪವನ್ನು ಅಪಲಾಪಮಾಡುವ, ಜನಾಃ=ಜನರೋ, ತೇ=ಅವರು, ಪ್ರೇತ್ಯ=ಮರಣಾನಂತರದಲ್ಲಿ, ಅಭಿಗಚ್ಛಂತಿ=ಹೊಂದುತ್ತಾರೆ. ಅಸುರ್ಯಾ ನಾಮ=ಚಲೋ ಸುಖಕ್ಕೆ ವಿರುದ್ಧವಾದ ದುಃಖಕ್ಕೆ ಸಾಧನವಾಗಿರುವುದರಿಂದಲೂ, ಅಸುರರಿಂದ ಹೊಂದಲ್ಪಡುವುದರಿಂದಲೂ, ಅಸುರ್ಯಾ ಎಂದು ಪ್ರಸಿದ್ಧಗಳಾದ, ತೇ ಲೋಕಾಃ=ಆ ಪ್ರಸಿದ್ಧಲೋಕಗಳು, ಅಂಧೇನ ತಮಸಾ ವೃತಾಃ=ಕಗ್ಗತ್ತಲೆಯಿಂದ ಕೂಡಿರುತ್ತವೆ. ತಾನ್=ಆ ಲೋಕಗಳನ್ನು, ಯೇ ಕೇ ಚ ಜನಾಃ ಆತ್ಮಹನಃ= ಯಾವ ಜನರು ವೇದವಾಚ್ಯನಾದ ಪರಮಾತ್ಮನನ್ನು ಬಿಟ್ಟವರೋ, ತೇ=ಅವರು, ಪ್ರೇತ್ಯ=ಮರಣವನ್ನು ಹೊಂದಿ, ಅಭಿಗಚ್ಛಂತಿ=ಹೊಂದುತ್ತಾರೆ. ಅತ್ರ=ಈ ಅರ್ಥದಲ್ಲಿ, ಸಮಂತತಃ= ಎಲ್ಲಾ ಶಾಖೆಗಳಲ್ಲಿಯೂ, ಇತ್ಯಾದಿ ಶ್ರುತಯಃ ಶತಶಃ=ಇವೇ ಮೊದಲಾದ ನೂರಾರು ಶ್ರುತಿಗಳು, ಮಾನಂ=ಪ್ರಮಾಣವು.

ತಾ ॥ ಸ. ರ. ವಿ— (1) 'ಆತ್ಮಾನಂ ಪಶ್ಯೇತ್' ಇತ್ಯಾದಿ ಶ್ರುತಿಗಳಲ್ಲಿ ದ್ರಷ್ಟವ್ಯನೆಂದು ಹೇಳಲ್ಪಟ್ಟ ಆತ್ಮನು ಮಾಯಾ ವಿಶಿಷ್ಟನಲ್ಲ. (2) ಪೂರ್ಣಬ್ರಹ್ಮನೇ ಜಿಜ್ಞಾಸ್ಯನೆಂದು ಪ್ರತಿಜ್ಞಾಮಾಡಲ್ಪಟ್ಟಿದ್ದಾನೆ. ಆತನೇ ಜಗಜ್ಜನ್ಮಾದಿ ಕಾರಣನೆಂದು ಲಕ್ಷಿತನಾಗಿರುತ್ತಾನೆ. ಆತನಲ್ಲಿಯೇ ಶಾಸ್ತ್ರವೂ ಪ್ರಮಾಣೀಕೃತವಾಗಿದೆ. ಅವನಲ್ಲಿಯೇ ಎಲ್ಲಾ ಶ್ರುತಿಗಳಿಗೂ ಸಮನ್ವಯವು ಪ್ರತಿಜ್ಞಾತವಾಗಿದೆ. ಆದಪ್ರಯುಕ್ತ ಶ್ರುತಿಸೂತ್ರಗಳ ಸಂಗತಿಯೇ ಇಲ್ಲದಿರುವುದರಿಂದ ಬಂಜೆಯ ಮಗನಿಗೆ ತುಲ್ಯನಾದ ಮಾಯಾ ವಿಶಿಷ್ಟನು ವಾಚ್ಯನು, ಶುದ್ಧಬ್ರಹ್ಮನು ಲಕ್ಷ್ಯನು, ಎನ್ನುವ ಈ ವಿಭಾಗವು ಶ್ರುತಿಸೂತ್ರಗಳಿಂದ ಬಹಿರ್ಭೂತವಾಗಿದೆ. (3) ಮತ್ತು ಬ್ರಹ್ಮನು ಆತ್ಮ ಬ್ರಹ್ಮ ಮೊದಲಾದ ಶಬ್ದಗಳಿಂದ ವಾಚ್ಯನಾಗದಿದ್ದರೆ ಆತನಿಗೆ ಅನಾತ್ಮತ್ವ ಅಬ್ರಹ್ಮತ್ವ ಮೊದಲಾದುದು ಬರಬೇಕಾಗುವುದು. (4) ಮತ್ತು 'ತರತಿ ಶೋಕಮಾತ್ಮವಿತ್' ಎಂದು ಆತ್ಮಶಬ್ದದಿಂದ ವಾಚ್ಯನಾದವನ ಜ್ಞಾನದಿಂದ ಮುಕ್ತಿಯು ಶ್ರುತವಾಗಿದೆ. ಇದನ್ನು ಲಕ್ಷ್ಯಜ್ಞಾನದಿಂದ ಮುಕ್ತಿಯನ್ನು ಹೇಳುವವನು ಬಿಟ್ಟಹಾಗೆ ಆಯಿತು. ಆದಕಾರಣ ಆತನಿಗೆ ಅನೇಕ ವಾಕ್ಯಗಳಲ್ಲಿ ಶ್ರುತಪರಿತ್ಯಾಗವೂ, ಅಶ್ರುತಕಲ್ಪನೆಯೂ ಬರುವುದು. ಈ ಎರಡೂ ದೋಷಗಳು ಲೋಕನಿಂದಿತಗಳಾದಾಗ್ಯೂ ತನಗೆ ಭೂಷಣವೆಂದು ಹೇಳಿದರೆ ಇಂತಹ ಅನೇಕ ದುರ್ಘಟಭೂಷಣಗಳಿಂದ ಅಲಂಕರಿಸಲ್ಪಟ್ಟವನು ವಸ್ತ್ರವಿಲ್ಲದ ಅಲಂಕಾರವು ಯೋಗ್ಯವಲ್ಲದಿರುವುದರಿಂದ, ಅಂಧಂತಮಸ್ಸು

ನಿತ್ಯದುಃಖವು, ಇವುಗಳನ್ನು ಉತ್ತರೀಯವಸ್ತ್ರ ಪ್ರಧಾನ ವಸ್ತ್ರಗಳನ್ನಾಗಿ ಸ್ವೀಕರಿಸಿಯಾನು. ಈ ಎರಡು ವಸ್ತ್ರಗಳೇ ಆತ್ಮಶಬ್ದದಿಂದ ಹೇಳಲ್ಪಟ್ಟ ಶ್ರೀ ಹರಿಯನ್ನು ಅಂಗೀಕರಿಸದಿರುವ ನಿರ್ಗುಣವಾದಿಗಳಿಗೆ ಆಗುವವು ಎನ್ನುವಲ್ಲಿ 'ಅನಂದಾಃ' ಇತ್ಯಾದಿಗಳಿಂದ ಪ್ರಮಾಣವನ್ನು ಹೇಳಿದರು. ॥ ೧೩೦ ॥ ೧೩೧ ॥ ೧೩೨ ॥ ೧೩೩ ॥

**ನ್ಯಾಯಸುಧಾ**— ದೃಶ್ಯ ವಸ್ತುವಿನಲ್ಲಿ ಶ್ರುತವಾದ ಆತ್ಮ ಶಬ್ದವು ಗೌಣಪರವೆನ್ನುವ ನಿಯಮವನ್ನು ಹೇತ್ವಂತರದಿಂದ ತಿರಸ್ಕರಿಸತಕ್ಕ ಸೂತ್ರವನ್ನು ಪಠನಮಾಡಿ ಸೂತ್ರದಲ್ಲಿ ಸಾಧ್ಯ ನಿರ್ದೇಶವಿಲ್ಲದಿರುವುದರಿಂದ ಸಾಕಾಂಕ್ಷವಾದ ವಾಕ್ಯವನ್ನು ಪೂರ್ಣೀಕರಿಸುತ್ತಾರೆ—

**" ಓಂ ಹೇಯತ್ವಾವಚನಾಚ್ಚ ಓಂ " ಸೂ. ॥ ೮ ॥**

**'ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ'** ಎಂದು ಆತ್ಮ ಶಬ್ದಾರ್ಥಕ್ಕೆ ಹೇಯತ್ವವನ್ನು ಹೇಳದಿರುವುದರಿಂದಲೂ, ಮತ್ತೆ ಆತ್ಮ ಶಬ್ದಾರ್ಥಕ್ಕೆ ಮೋಕ್ಷಕ್ಕಾಗಿ ತಿಳಿಯಬೇಕೆಂದು ಅಹೇಯತ್ವವನ್ನು ಹೇಳಿದುದರಿಂದಲೂ, ಬೇರೆಯವರಿಗೆ ಹೇಯತ್ವವನ್ನು ಹೇಳಿದುದರಿಂದಲೂ, ಆತ್ಮಶಬ್ದವಾಚ್ಯನು ಸಗುಣನಲ್ಲ. (ಸತ್ವಾದಿಗುಣಬದ್ಧನಲ್ಲ.)

ಈ ಸೂತ್ರಾರ್ಥವನ್ನು ವಿವರಿಸುತ್ತಾರೆ—

**ಮೂ ॥ ಹೇಯತ್ವಾವಚನಾಚ್ಚೈವ ನಾತ್ಮಾ ಗೌಣಃ ಶ್ರುತೌ ಶ್ರುತಃ ।**
**ತಮೇವೈಕಂ ಜಾನಥಾನ್ಯಾ ವಾಚೋ ಮುಂಚಥ ಚೇತಿ ಹ ॥೧೩೪॥**
**ಉಕ್ತ ಆತ್ಮಾ ಕಥಂ ಗೌಣೋ ಹೇಯಪಕ್ಷೇ ಹ್ಯಸೌ ಶ್ರುತಃ ।**
**ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾಃ ಪ್ರಧಾನತಃ ॥ ೧೩೫ ॥**

ಅ ॥ ಹೇಯತ್ವಾವಚನಾಚ್ಚ=ಹೇಯತ್ವವನ್ನು ಹೇಳದಿರುವುದರಿಂದ, ಗೌಣಃ ಆತ್ಮಾ= ಸಗುಣನಾದ ಆತ್ಮನು, ಶ್ರುತೌ=ವೇದದಲ್ಲಿ, ಶ್ರುತಃ=ದೃಶ್ಯನಾಗಿ ಕೇಳಲ್ಪಟ್ಟವನು, ನೈವ= ಅಲ್ಲವೇ ಅಲ್ಲ. (ದೃಶ್ಯನಾದ ಆತ್ಮನು ಗೌಣನೇ ಎನ್ನುವ ನಿಯಮವನ್ನು ಅಂಗೀಕರಿಸುವವನು) ತಮೇವ ಏಕಂ ಜಾನಥ=ಆ ಒಬ್ಬ ಶ್ರೀಹರಿಯನ್ನೇ ತಿಳಿಯಿರಿ, ಅನ್ಯಾಃ ವಾಚಃ ಮುಂಚಥ ಚ= ಬೇರೆಯವರನ್ನು ಹೇಳುವ ಮಾತುಗಳನ್ನು ಬಿಟ್ಟು ಬಿಡಿರಿ. ('ಅಮೃತಸ್ಯೈಷ ಸೇತುಃ' ಈ ಶ್ರೀ ಹರಿಯು ಮುಕ್ತವರ್ಗಕ್ಕೆ ಆಶ್ರಯನು,) ಇತಿ ಹ ಉಕ್ತಃ ಆತ್ಮಾ=ಹೀಗೆ ಶ್ರುತನಾದ ಆತ್ಮನೂ ಕೂಡ, (ಗೌಣನೆಂದಂಗೀಕರಿಸಬೇಕು. 'ತಂ ಜಾನಥ' ಎಂದು ಈ ಮುಕ್ತಾಶ್ರಯನೆಂದು ಹೇಳಲ್ಪಟ್ಟ ಆತ್ಮನಿಗೂ ಕೂಡ ದೃಶ್ಯತ್ವವು ಶ್ರುತವಾಗಿದೆಯಷ್ಟೆ.) ಕಥಂ ಗೌಣಃ=ಈ ಆತ್ಮನು ಗೌಣನೆಂದಂಗೀಕರಿಸಲಿಕ್ಕೆ ಹೇಗೆ ಶಕ್ಯವಾಗುವುದು? ಹಿ=ಯಾವ ಕಾರಣದಿಂದ, ಅಸೌ= ಗೌಣ ಆತ್ಮನು, ಹೇಯಪಕ್ಷೇ=ಮುಮುಕ್ಷುವಿನಿಂದ ಬಿಡಲರ್ಹನೆನ್ನುವ ಪಕ್ಷದಲ್ಲಿ, ಶ್ರುತಃ= ಹೇಳಲ್ಪಟ್ಟದ್ದಾನೆ. ಇತರ ವಚನಗಳನ್ನು ಬಿಟ್ಟುಬಿಡಿರಿ, ಎಂದು 'ತಮೇವೈಕಂ ಜಾನಥ' ಎನ್ನುವ ವಾಕ್ಯದಿಂದ ದೃಶ್ಯನೆಂದು ಹೇಳಿದ ಆತ್ಮನಿಗೆ ಹೇಯತ್ವವನ್ನು ಹೇಳಲಿಲ್ಲ. ಮತ್ತೆ 'ತಮೇವೈಕಂ ಜಾನಥ' ಆ ಒಬ್ಬ ಶ್ರೀಹರಿಯನ್ನೇ ತಿಳಿಯಿರಿ. ಎಂದು ಉಪಾದೇಯತ್ವವನ್ನು ಹೇಳಿರುತ್ತದೆ.) ಹ = ಅತ್ಯಾಶ್ಚರ್ಯವು. (ಹಾಗಾದರೆ ಬ್ರಹ್ಮಾದಿದೇವತೆಗಳು ಸಗುಣರಾದಾಗ್ಯೂ ಅವರಿಗೆ ಉಪಾದೇಯತ್ವವನ್ನು 'ಅಂಗಾವಬದ್ಧಾಸ್ತು' ಇತ್ಯಾದಿ ಸೂತ್ರದಲ್ಲಿಯೇ ಹೇಳುವರು. ಆದಕಾರಣ

ಗೌಣಾತ್ಮನಿಗೆ ಉಪಾದೇಯತ್ವವು ಕೂಡುವುದಿಲ್ಲವೆನ್ನುವುದು ಹೇಗೆ ಕೂಡುತ್ತದೆಂದರೆ) ಪರಿವಾರತಯಾ ಗ್ರಾಹ್ಯಾಃ=ಬ್ರಹ್ಮಾದಿ ದೇವತೆಗಳು ಶ್ರೀ ವಿಷ್ಣುವಿನ ಪರಿವಾರರಾಗಿ ಉಪಾದೇಯರೇ, ಅಪಿ=ಆದಾಗ್ಯೂ, ಪ್ರಧಾನತಃ ಹೇಯಾ ಏವ=ಸರ್ವೋತ್ತಮತ್ವದಿಂದ ಬಿಡಲರ್ಹರೇ (ತಿಳಿಯಲಿಕ್ಕೆ ಅನರ್ಹರೇ) ಆಗಿರುತ್ತಾರೆ. ಆದಕಾರಣ ಬ್ರಹ್ಮಾದಿದೇವತೆಗಳಿಗೆ ಪ್ರಾಧಾನ್ಯದಿಂದ ಉಪಾದೇಯತ್ವವಿರುವುದಿಲ್ಲ.

ತಾ || ಸ. ರ. ವಿ— 'ತಮೇವೈಕಂ ಜಾನಥ ಆತ್ಮಾನಂ' ಎಂದು ಅಹೇಯತ್ವವು ಶ್ರುತವಾಗಿರುವುದರಿಂದ ಆತ್ಮಶಬ್ದವಾಚ್ಯನು ಸಗುಣನಲ್ಲ. 'ಅನ್ಯಾ ವಾಚೋ ವಿಮುಂಚಥ' ಎಂದು ಸಗುಣನಾದ ಅಮುಖ್ಯ ಆತ್ಮನಿಗೆ ಹೇಯತ್ವವು ಶ್ರುತವಾಗಿದೆ. ಸತ್ವ-ರಜ-ಸ್ತಮೋಗುಣಯುಕ್ತರಾದ ಬ್ರಹ್ಮಾದಿದೇವತೆಗಳನ್ನು ಶ್ರೀ ಹರಿಯ ಪರಿವಾರರೆಂದು ಸ್ವೀಕರಿಸಬೇಕಾದಾಗ್ಯೂ ಸರ್ವೋತ್ತಮರೆಂದು ಸ್ವೀಕರಿಸಕೂಡದು || ೧೩೪ || ೧೩೫ ||

ನ್ಯಾಯಸುಧಾ— ಹೀಗೆ ಆತ್ಮಶಬ್ದಕ್ಕೆ ನಿರ್ಗುಣವಿಷಯತ್ವವನ್ನುಪಪಾದಿಸಿ ನಿರ್ಗುಣನಿಗೆ ವಾಚ್ಯತ್ವವನ್ನು ಸಮರ್ಥಿಸಿದರು. ಹೇತ್ವಂತರದಿಂದ ಈ ಅರ್ಥವನ್ನೇ ಉಪಪಾದಿಸತಕ್ಕ ಸೂತ್ರವನ್ನು ಹೇಳುತ್ತಾರೆ—

"ಓಂ ಸ್ವಾಪ್ಯಯಾತ್ ಓಂ" ಸೂ. || ೯ ||

('ಆತ್ಮನ್ಯೇವಾತ್ಮಾನಂ ವಿಲಾಪಯತಿ' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಪ್ರಯುಕ್ತ, ನಿರ್ಗುಣಬ್ರಹ್ಮನು ಶಬ್ದಾವಾಚ್ಯನಲ್ಲ. ಮತ್ತೆ ವಾಚ್ಯನೇ ಶ್ರುತಿಯಲ್ಲಿ ಹೇಳಲ್ಪಟ್ಟವನು ಏಕೆ ನಿರ್ಗುಣನಾಗಬೇಕೆಂದರೆ—) ಸ್ವಾಪ್ಯಯಾತ್=ತನಗೆ ತನ್ನಲ್ಲಿಯೇ ಲಯವನ್ನು ಹೇಳಿರುವುದರಿಂದ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.—

ಮೂ || ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ |
ಇತಿ ಸ್ವಸ್ಯೈವ ಪೂರ್ಣಸ್ಯ ಪೂರ್ಣೇಽಪ್ಯಯ ಉದಾಹೃತಃ ||
ಕಥಂ ಮಾಯಾವ್ಯವಚ್ಛಿನ್ನಃ ಪೂರ್ಣೋ ಮುಖ್ಯತಯಾ ಭವೇತ್ ||
|| ೧೩೬ ||

ಅ || ಪೂರ್ಣಸ್ಯ=ಪೂರ್ಣವಾದ ಮೂಲರೂಪದ ಸಕಾಶದಿಂದ, ಪೂರ್ಣಂ=ಪೂರ್ಣವಾದ ಅವತಾರ ರೂಪವನ್ನು, ಆದಾಯ=ಸ್ವೀಕರಿಸಿ, ಅಂದರೆ ತನ್ನಲ್ಲಿ ಏಕೀಕರಿಸಿಕೊಂಡು, ಪೂರ್ಣಮೇವ=ಪೂರ್ಣವಾದ ಮೂಲರೂಪವೇ, ಅವಶಿಷ್ಯತೇ=ಅವಶಿಷ್ಟವಾಗುತ್ತದೆ. ಇತಿ=ಈ ಪ್ರಕಾರ, ಪೂರ್ಣಸ್ಯ ಸ್ವಸ್ಯೈವ=ಪೂರ್ಣನಾದ ತನಗೇನೇ (ಅವತಾರ ರೂಪಕ್ಕೇನೇ) ಪೂರ್ಣೇ=ಪೂರ್ಣನಲ್ಲಿ, (ಮೂಲರೂಪದಲ್ಲಿ) ಅಪ್ಯಯಃ=ಲಯವು, ಉದಾಹೃತಃ=ಹೇಳಲ್ಪಟ್ಟಿದೆ. (ಅಂದರೆ 'ಪೂರ್ಣಸ್ಯ' ಎನ್ನುವ ಶ್ರುತಿಯಲ್ಲಿ ಯಾರೋ ಒಬ್ಬನಿಗೆ ಮಹಾಪ್ರಲಯದಲ್ಲಿ ತನಗೆ ತನ್ನಲ್ಲಿಯೇ ಲಯವೂ, ಪೂರ್ಣತ್ವವೂ ಹೇಳಲ್ಪಟ್ಟಿದೆ. ಇತರರಲ್ಲಿ ಹೇಳಲ್ಪಡಲಿಲ್ಲ. ಅವುಗಳಿಂದ ಈ ಆತ್ಮನು ನಿರ್ಗುಣನೆಂದು ತಿಳಿಯಲ್ಪಡುತ್ತದೆ. ಶ್ರುತಿಯಲ್ಲಿ ಹೇಳಿರುವುದರಿಂದ ವಾಚ್ಯನಾಗಿರುತ್ತಾನೆ. ಆದಕಾರಣ ನಿರ್ಗುಣನಿಗೆ ವಾಚ್ಯತ್ವವು ಸಿದ್ಧವಾಯಿತು.) (ಹಾಗಾದರೆ, ಲಯವೂ ಪೂರ್ಣತ್ವವೂ ಸಗುಣನಿಗೆ ಏಕೆ ಆಗಲಾರದು ಎಂದರೆ, ಸಗುಣನಿಗೆ ಲಯವು ಕೂಡಲಾರದೆಂದು 'ನ ಹಿ ಗೌಣ ಆತ್ಮನಿ ನಿರ್ದೋಷಸ್ಯ ಲಯಃ' ಎನ್ನುವ ಭಾಷ್ಯದಲ್ಲಿಯೇ ಹೇಳಲ್ಪಟ್ಟಿದೆ. ಪೂರ್ಣತ್ವವು ಕೂಡಲಾರದೆಂದು ಇಲ್ಲಿ ಹೇಳುತ್ತಾರೆ.) ಮಾಯಾವ್ಯವಚ್ಛಿನ್ನಃ=ಮಾಯಾವಿಶಿಷ್ಟನು, ಮುಖ್ಯತಯಾ ಪೂರ್ಣಃ=ಮುಖ್ಯವಾಗಿ ಪೂರ್ಣನು, ಕಥಂ=ಹೇಗೆ, ಭವೇತ್=ಆಗುವನು.

ತಾ || ಸ. ರ. ವಿ. — " ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ | ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ||" ಎಂದು ಆತ್ಮಶಬ್ದದ ಅರ್ಥಭೂತನಾದ ಬ್ರಹ್ಮನ ಮೂಲರೂಪಕ್ಕೂ ಅವತಾರರೂಪಕ್ಕೂ ಶ್ರೂಯಮಾಣವಾದ ಪೂರ್ಣತ್ವವು ಮಾಯಾವಿಶಿಷ್ಟನಾದ ಸಗುಣಬ್ರಹ್ಮನಲ್ಲಿ ವ್ಯಾಹತವಾಗುವುದು.

ಶಾಖಾಂತರಗಳಲ್ಲಿ ರುದ್ರಾದಿಗಳೇ ಜಗತ್ಕಾರಣರೆಂದು ಹೇಳಿರಬಹುದಷ್ಟೆ!ಎಂದರೆ- ವಿಷ್ಣುವೇ ಸರ್ವಶಾಸ್ತ್ರಪ್ರತಿಪಾದ್ಯನೆನ್ನುತ್ತಾರೆ.

" ಓಂ ಗತಿಸಾಮಾನ್ಯಾತ್ ಓಂ " ಸೂ. || ೧೦ ||

ಗತಿಸಾಮಾನ್ಯಾತ್ = ಎಲ್ಲಾ ವೇದಗಳಿಂದ ಹುಟ್ಟತಕ್ಕ ಜ್ಞಾನವು ಏಕವಿಷಯಕವಾಗಿರುವುದರಿಂದ, ('ಸರ್ವೇ ವೇದಾ ಯುಕ್ತಯಃ' ಇತ್ಯಾದಿಗಳಲ್ಲಿ) ತದೇವ=ವಿಷ್ಣ್ವಾಖ್ಯಬ್ರಹ್ಮನೇ ಜಗತ್ಕಾರಣನೆಂದು, ಶಾಸ್ತ್ರಯೋನಿ=ಸರ್ವಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಡುತ್ತಾನೆ. ಬೇರೆ ಎಲ್ಲಿಯೂ ಬೇರೆ ರೀತಿಯಾಗಿ ಹೇಳಲ್ಪಡುವುದಿಲ್ಲ ಅಥವಾ ಆತ್ಮಶಬ್ದ ಮೋಕ್ಷೋಪದೇಶ ಹೇಯತ್ವಾವಚನ ಸ್ವಾಪ್ಯಯಗಳು ಶಾಖಾಂತರಗಳಲ್ಲಿ ಸಗುಣಾತ್ಮನಲ್ಲಿಯೂ ಇರಬಹುದಷ್ಟೆ ಎಂದರೆ—ಸರ್ವವೇದಗಳಿಂದ ಹುಟ್ಟತಕ್ಕ ಜ್ಞಾನವು ಏಕವಿಷಯಕವಾಗಿಯೇ ಇರುತ್ತದೆ ॥ ೧೩೬ ||

ಯುಕ್ತ್ಯಂತರದಿಂದ ನಿರ್ಗುಣನಾದ ಬ್ರಹ್ಮನಿಗೆ ವಾಚ್ಯತ್ವವನ್ನುಪಪಾದಿಸತಕ್ಕ ಸೂತ್ರವು.

" ಓಂ ಶ್ರುತತ್ವಾಚ್ಚ ಓಂ " ಸೂ. || ೧೧ ||

" ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ | ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" || ಎನ್ನುವ ಶ್ರುತಿಯಲ್ಲಿ ನಿರ್ಗುಣನಾದ (ಸತ್ವಾದಿ ಗುಣರಹಿತನಾದ) ಬ್ರಹ್ಮನು ಶ್ರುತನಾಗಿರುವುದರಿಂದಲೂ ಬ್ರಹ್ಮನು ಅವಾಚ್ಯನಲ್ಲ. ಆತನಿಗೆ ವಾಚ್ಯತ್ವವೇ ಯುಕ್ತವು ಶ್ರುತಿಸಿದ್ಧನಾದಾಗ್ಯೂ ಸಗುಣನು ಏತಕ್ಕೆ ಆಗಲಾರನು ಎಂದರೆ—

ಮೂ || ಪದಂ ಚ ನಿರ್ಗುಣ ಇತಿ ಕಥಂ ಗೌಣಂ ವದಿಷ್ಯತಿ |
ಗುಣಾಭಾವೋಪಲಕ್ಷ್ಯಂ ಚೇತ್ಪದಂ ತದಪಿ ವಾಚಕಂ ॥ ೧೩೭ ॥
ಅತೋಽನವಸ್ಥಿತಿಮುಖ ಸರ್ವದೋಷಸಮಾ (ಮಹಾ) ಸ್ಪದಂ |
ಕಥಮೇತನ್ಮತಂ ಸದ್ಭಿರಾದ್ರಿಯೇತ ವಿಚಕ್ಷಣೈಃ || ೧೩೮ ||

ಅ || ನಿರ್ಗುಣ ಇತಿ ಪದಂ ಚ=ನಿರ್ಗುಣ ಎನ್ನುವ ಪದವು, ಕಥಂ=ಹೇಗೆ, ಗೌಣಂ=ಸಗುಣನನ್ನು, ವದಿಷ್ಯತಿ=ಹೇಳುವುದು. (ವ್ಯಾಹತವಾಗಿದೆ. ಆದಕಾರಣ ಇಲ್ಲಿ ಸಗುಣನು ಶ್ರುತನಾಗಲಿಲ್ಲ.)

(೧) (ಹಾಗಾದರೆ ಈ ಶ್ರುತಿಯಲ್ಲಿ ನಿರ್ಗುಣಾದಿ ಪದಪ್ರತಿಪಾದ್ಯನು ನಿರ್ಗುಣಬ್ರಹ್ಮನೆನ್ನುವುದು ಸತ್ಯವೇ. ಆದರೆ, ಲಕ್ಷಣಾ (ಅಮುಖ್ಯ)ವೃತ್ತಿಯಿಂದಲೇ. ತಥಾಚ ಇದರಿಂದ ನಿರ್ಗುಣನಿಗೆ ವಾಚ್ಯತ್ವವು ಹೇಗೆ ಸಿದ್ಧಿಸುವುದು? (೨) ಹಾಗಾದರೆ ನಿರ್ಗುಣಶಬ್ದದಿಂದ ನಿರ್ಗುಣನು ಲಕ್ಷ್ಯನಾದರೆ ನಿರ್ಗುಣಶಬ್ದದಿಂದ ವಾಚ್ಯನಾದುದನ್ನು ಹೇಳಬೇಕು. ಸಗುಣನು ನಿರ್ಗುಣಪದದಿಂದ ವಾಚ್ಯನಾಗಲಾರನು. ವ್ಯಾಹತಿ ಬರುವುದು. (೩) ಮತ್ತೂ ಸಗುಣನಿಗೆ ನಿರ್ಗುಣತ್ವವು ಬರಬೇಕಾಗುವುದು, ಹೀಗೆ ಹೇಳಕೂಡದು. ನಿರ್ಗುಣಪದದಿಂದ ಗುಣಾಭಾವವಿಶಿಷ್ಟವು

ವಾಚ್ಯವೆಂದಂಗೀಕರಿಸಿರುತ್ತೀವೆ. ನಿರ್ಧರ್ಮಕಸ್ವರೂಪಮಾತ್ರವು ಉಪಲಕ್ಷ್ಯವು. ಒಂದೇ ನಿರ್ವಿಶೇಷವಾದ ಪರಮಸೂಕ್ಷ್ಮವಾದ ವಸ್ತುವು ಗುಣಾಭಾವಾದ್ಯುಪಾಧಿಗಳಿಂದ ಸ್ವಲ್ಪ ಸ್ಥೂಲವಾಗುವುದು. ಗುಣಾದ್ಯುಪಾಧಿಗಳಿಂದ ಅತಿ ಸ್ಥೂಲವಾಯಿತು. ಆದಕಾರಣ ನಿರ್ಗುಣಪದದಿಂದ ಗುಣಾಭಾವವಿಶಿಷ್ಟವಾದ ವಸ್ತುವು ವಾಚ್ಯವಾಗಿ ಶುದ್ಧಸ್ವರೂಪವು ಉಪಲಕ್ಷ್ಯವೆಂದಂಗೀಕರಿಸಿರುವುದರಿಂದ ಯಾವ ವಿರೋಧವೂ ಇರುವುದಿಲ್ಲ ಎಂದಾಶಂಕಿಸಿದರೆ ಹಿಂದೆ ಹೇಳಿದ ಪರಿಹಾರವನ್ನೇ ಪುನಃ ಹೇಳುತ್ತಾರೆ.) ಗುಣಾಭಾವೋಪಲಕ್ಷ್ಯಂ ಚೇತ್=ನಿರ್ಗುಣ ಪದದಿಂದ ಗುಣಾಭಾವ ವಿಶಿಷ್ಟವಾದ ವಸ್ತುವು ವಾಚ್ಯವಾಗಿ ಶುದ್ಧಬ್ರಹ್ಮನು ಉಪಲಕ್ಷ್ಯನೆಂದು ತಿಳಿಯುವುದಾದರೆ, ಅಪಿ=ಆದಾಗ್ಯೂ, ತತ್ ಪದಂ=ಆ ಲಕ್ಷ್ಯವೆನ್ನುವ ಪದವು, ವಾಚಕಂ=ಬ್ರಹ್ಮನನ್ನು ಶಕ್ತಿವೃತ್ತಿಯಿಂದ ಹೇಳುತ್ತದೆಂದು ಅಂಗೀಕರಿಸಬೇಕು. ಅಂತೂ ಲಕ್ಷ್ಯಪದದಿಂದಲಾದರೂ ವಾಚ್ಯತ್ವವೇ ಪ್ರಾಪ್ತವಾಯಿತು (ಲಕ್ಷ್ಯಪದದಿಂದಲೂ ಬ್ರಹ್ಮನು ಲಕ್ಷ್ಯನೇ. ವಾಚ್ಯನಲ್ಲ. ಎನ್ನಕೂಡದು. ಅನವಸ್ಥಾ ಬರುವುದು.) ಮತ್ತು ನಿರ್ಗುಣಪದ ಲಕ್ಷ್ಯವೆನ್ನುವ ಪದದಿಂದಲೂ ಬ್ರಹ್ಮನು ವಾಚ್ಯನಲ್ಲ. ಮತ್ತೆ ಲಕ್ಷ್ಯನೆಂದು ಹೇಳಿದರೆ ಬ್ರಹ್ಮನನ್ನು ಪ್ರತಿಪಾದಿಸುವವುಗಳೆಂದು ಲೋಕಸಮ್ಮತಗಳಾದ ಎಲ್ಲಾ ಪದಗಳೂ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ಮತ್ತೆ ಯಾವುದೋ ಒಂದು ವಸ್ತುವನ್ನು ಹೇಳುತ್ತದೆ ಎಂದು ಹೇಳತಕ್ಕವರು ಬ್ರಹ್ಮಾದಿಗಳೇ ಆಗಲಾರರು, ಎನ್ನುವ ಅಭಿಪ್ರಾಯದಿಂದ ಅಧಿಕರಣಾರ್ಥವನ್ನು ಉಪಸಂಹಾರಮಾಡುತ್ತಾರೆ.) ಅತಃ=ಆದಪ್ರಯುಕ್ತ, ಅನವಸ್ಥಿತಿಮುಖ ಸರ್ವದೋಷಸಮಾ (ಮಹಾ) ಸ್ಪದಂ=ಅನವಸ್ಥಿತಿಯೇ ಮೊದಲಾದ ಎಲ್ಲಾ ದೋಷಗಳಿಗೆ ಮುಖ್ಯಾಸ್ಪದವಾದ, ಏತನ್ಮತಂ=ಬ್ರಹ್ಮನಿಗೆ ವಾಚ್ಯತ್ವವಿಲ್ಲವೆನ್ನುವ ಮತವು, ವಿಚಕ್ಷಣೈಃ ಸದ್ಭಿಃ= ಜ್ಞಾನಿಗಳಾದ ಸಜ್ಜನರಿಂದ, ಕಥಂ=ಹೇಗೆ, ಆದ್ರಿಯೇತ=ಆದರಿಸಲ್ಪಡುವುದು. (ಅವಾಚ್ಯತ್ವ ಮತವು ಅನಾದರಣೀಯವಾದರೆ ಬ್ರಹ್ಮನಿಗೆ ಸರ್ವಶಾಸ್ತ್ರದ ಮುಖ್ಯಾರ್ಥತ್ವವು ಸಿದ್ಧಿಸುವುದು.)

**ತಾ ॥ ಸ. ರ. ವಿ.— ' ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ '** ಎನ್ನುವಲ್ಲಿ ನಿರ್ಗುಣಪದವಾಚ್ಯನಾದವನು ಸತ್ವರಜಸ್ತಮೋಗುಣಗಳನ್ನು ಅತಿಕ್ರಮಿಸಿದ ಪರಬ್ರಹ್ಮನು. ಅವನು ಹೊರತು ಸಗುಣನು ಆಗಲಿಕ್ಕೆ ಯೋಗ್ಯನಾಗುವುದಿಲ್ಲ. ವ್ಯಾಹತವಾಗಿದೆ. ನಿರ್ಗುಣ ಶಬ್ದದಿಂದ ಗುಣಾಭಾವದ್ವಾರಾ ಬ್ರಹ್ಮನು ಉಪಲಕ್ಷಿತನೆಂದು ಹೇಳುವುದಾದರೆ ಗುಣಾಭಾವೋಪಲಕ್ಷಿತಪದದಿಂದ ವಾಚ್ಯನಾಗಬೇಕಾಗುವನು. ಗುಣಾಭಾವೋಪಲಕ್ಷಿತ ಪದದಿಂದಲೂ ಗುಣಾಭಾವವು ಉಪಲಕ್ಷಿತವಾಗಿ ಬ್ರಹ್ಮನು ಉಪಲಕ್ಷಿತನೆಂದರೆ ಅಲ್ಲಿಯೂ ಹೀಗೆಯೇ, ಹೀಗೆ ಅನವಸ್ಥಾದಿ ದೋಷಗಳು ಬರುವುದರಿಂದ ಬ್ರಹ್ಮನು ನಿರ್ಗುಣನೆಂದು ಹೇಳುವ ಮತವು ಮಹಾಜನರಿಂದ ಅತ್ಯಂತ ಹೇಯವಾಗುವುದು. ॥ ೧೩೭ ॥ ೧೩೮ ॥

ಸ. ರ. ವಿ.— ' ಈಕ್ಷತೇರ್ನಾಶಬ್ದಂ ' ಎನ್ನುವುದನ್ನಾರಂಭಿಸಿ ' ಶ್ರುತತ್ವಾಚ್ಚ ' ಎನ್ನುವ ಪರ್ಯಂತ ಸೂತ್ರಗಳಿಂದ ಜಗತ್ತಿಗೆ ಪ್ರಧಾನವು ಕಾರಣವು ಎಂದು ಹೇಳುವ ಸಾಂಖ್ಯಮತವು ನಿರಾಕರಿಸಲ್ಪಡುತ್ತದೆ ಎಂದು ಅದ್ವೈತಿಗಳು ಹೇಳುವರು. ಅದು ಅಯುಕ್ತವೆನ್ನುತ್ತಾರೆ.

ನ್ಯಾಯಸುಧಾ— ಹೀಗೆ ' ಈಕ್ಷತೇರ್ನಾಶಬ್ದಂ ' ಎನ್ನುವುದನ್ನು ಆರಂಭಿಸಿ ' ಶ್ರುತತ್ವಾಚ್ಚ ' ಎನ್ನುವ ಪರ್ಯಂತ ಸೂತ್ರಗಳನ್ನು ತಮ್ಮ ಮತಪ್ರಕಾರ ವ್ಯಾಖ್ಯಾನಮಾಡಿ ಪರರ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ.

**ಮೂ ॥ ನ ಚ ಸಾಂಖ್ಯನಿರಾಕೃತ್ಯೈ ಸೂತ್ರಾಣ್ಯೇತಾನ್ಯಪೇಕ್ಷಿತ್ |**
**ಭಗವಾನ್ನ ಹ್ಯಶಬ್ದತ್ವಂ ಪ್ರಧಾನೇಽಂಗೀಕರೋತ್ಯಸೌ ॥ ೧೩೯ ॥**

ಸಮನ್ವಯೇ ಪ್ರತಿಜ್ಞಾತೇ ಶಬ್ದಗೋಚರತೈವ ಹಿ ।
ಪ್ರಥಮ ಪ್ರತಿಪಾದ್ಯಾ ಸ್ಯಾತ್ತದಭಾವೇ ಕುತೋಽನ್ವಯಃ ॥ ೧೪೦ ॥
ಕಥಂ ಚ ಲಕ್ಷಣಾವಾದೀ ಬ್ರೂಯಾದ್ಬ್ರಹ್ಮ ಸಮನ್ವಯಂ ।
ಯೋಽಸೌ ಶಬ್ದಸ್ಯ ಮುಖ್ಯಾರ್ಥಸ್ತತ್ರೈವ ಸ್ಯಾತ್ಸಮನ್ವಯಃ ॥ ೧೪೧ ॥

ಅ ॥ ಭಗವಾನ್=ಸೂತ್ರಕಾರರು, ಸಾಂಖ್ಯನಿರಾಕೃತ್ಯೈ = ಸಾಂಖ್ಯಮತವನ್ನು ನಿರಾಕರಿಸುವುದಕ್ಕಾಗಿ, ಏತಾನಿ ಸೂತ್ರಾಣಿ='ಈಕ್ಷತೇರ್ನಾಶಬ್ದಂ' ಎನ್ನುವುದನ್ನಾರಂಭಿಸಿಕೊಂಡು 'ಶ್ರುತತ್ವಾಚ್ಚ' ಎನ್ನುವ ಪರ್ಯಂತ ಸೂತ್ರಗಳನ್ನು, ಅಚೀಕ್ಲೃಪತ್=ನಿರ್ಮಿಸಿದರು, (ಎಂದು ಮಾಯಾವಾದಿಗಳು ಹೇಳುವರೋ ಅದು) ನ ಚ=ಅಲ್ಲವು. (ಏಕೆ ಅಲ್ಲವೆಂದರೆ, ಅವರು ಹೇಳುವ ಅರ್ಥದಲ್ಲಿ ಸೂತ್ರಾಕ್ಷರಗಳು ಅನನುಗುಣಗಳಾಗಿವೆ.) ಹಿ=ಏಕೆಂದರೆ, ಅಸೌ=ಈ ಸೂತ್ರಕಾರರು, ಅಶಬ್ದತ್ವಂ=ಶಬ್ದಾಗೋಚರತ್ವವನ್ನಾಗಲೀ, ಶಬ್ದಾವಾಚ್ಯತ್ವವನ್ನಾಗಲೀ, ಅವೈದಿಕತ್ವವನ್ನಾಗಲೀ, ಜಗತ್ತಿಗೆ ಕಾರಣವೆಂದು ವೇದದಲ್ಲಿ ಹೇಳಲ್ಪಡದಿರುವಿಕೆಯನ್ನಾಗಲೀ, ಪ್ರಧಾನೇ=ಪ್ರಧಾನದಲ್ಲಿ, ನಾಂಗೀಕರೋತಿ=ಅಂಗೀಕರಿಸುವುದಿಲ್ಲ. (ಸೂತ್ರಯೋಜನೆಯು ಹೇಗೂ ಇರಲಿ. ಆದಾಗ್ಯೂ ಪೂರ್ವಸಂಗತಿಯನ್ನು ಪರ್ಯಾಲೋಚಿಸುವಾಗ ಇಲ್ಲಿ ವಾಚ್ಯತ್ವ ಸಮರ್ಥನವೇ ಯುಕ್ತವು, ಸಾಂಖ್ಯಮತನಿರಾಕರಣವು ಯುಕ್ತವಲ್ಲವೆನ್ನುತ್ತಾರೆ.) ಸಮನ್ವಯೇ ಪ್ರತಿಜ್ಞಾತೇ='ತತ್ತು ಸಮನ್ವಯಾತ್' ಎಂದು ಸರ್ವ ಶಾಸ್ತ್ರಕ್ಕೂ ಬ್ರಹ್ಮನಲ್ಲಿ ಸಮನ್ವಯವು ಪ್ರತಿಜ್ಞಾತವಾಗುತ್ತಿರಲು, (ಯದ್ಯಪಿ ಮುಖ್ಯವೃತ್ತಿಯಿಂದ ಶಬ್ದಗೋಚರತ್ವವೂ, ಸಾಂಖ್ಯನಿರಾಕರಣವೂ ಹೀಗೆ ಎರಡೂ ಅವಶ್ಯವಾಗಿ ಪ್ರತಿಪಾದಿಸತಕ್ಕದು. ಎರಡೂ ಇಲ್ಲದಿದ್ದರೂ ಸಮನ್ವಯವು ಕೂಡಲಾರದು. ಆದಾಗ್ಯೂ) ಹಿ=ಯಾವ ಕಾರಣದಿಂದ, ಶಬ್ದಗೋಚರತೈವ=ಶಬ್ದವಾಚ್ಯತ್ವವೇ, ಪ್ರಥಮಪ್ರತಿಪಾದ್ಯಾ ಸ್ಯಾತ್=ಪ್ರಥಮದಲ್ಲಿ ಪ್ರತಿಪಾದಿಸಲಿಕ್ಕೆ ಯೋಗ್ಯವಾಗುವುದೋ, (ಆದ ಪ್ರಯುಕ್ತ ಶಬ್ದ ವಾಚ್ಯತ್ವವೇ ಇಲ್ಲಿ ಪ್ರತಿಪಾದಿಸಲ್ಪಡುತ್ತದೆ. ಸಾಂಖ್ಯ ನಿರಾಕರಣವಲ್ಲ.) (ಶಬ್ದವಾಚ್ಯತ್ವಕ್ಕೆ ಪ್ರಥಮಪ್ರತಿಪಾದ್ಯತ್ವವನ್ನು ಏಕೆ ಒಡಂಬಡಬೇಕೆಂದರೆ) ತದಭಾವೇ=ಶಬ್ದವಾಚ್ಯತ್ವವಿಲ್ಲದಿದ್ದರೆ, ಅನ್ವಯಃ=ಬ್ರಹ್ಮನಲ್ಲಿ ಶಬ್ದ ಸಂಬಂಧವು, ಕುತಃ=ಯಾವ ಕಾರಣದಿಂದ, (ಅಂದರೆ ಶಬ್ದ ಸಂಬಂಧವೇ ಕೂಡಲಾರದು. ಜಗತ್ಕಾರಣತ್ವಾದಿ ವಾಕ್ಯವಿಚಾರವಾದರೂ ಸುತರಾಂ ಕೂಡಲಾರದು.) ಲಕ್ಷಣಾವಾದೀ=ಶಬ್ದಗಳಿಗೆ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಹೇಳುವವನು, ಬ್ರಹ್ಮಸಮನ್ವಯಂ=ಬ್ರಹ್ಮನಲ್ಲಿ ಶಬ್ದಗಳಿಗೆ ಸಮನ್ವಯವನ್ನು, ಕಥಂಚ=ಹೇಗೆ, ಬ್ರೂಯಾತ್=ಹೇಳಿಯಾನು. (ಸಮನ್ವಯವನ್ನು ಹೇಳತಕ್ಕ ವೇದವ್ಯಾಸರಿಗೆ ಮುಖ್ಯ ವೃತ್ತಿಯೇ ಅಭಿಪ್ರೇತವೆಂದು ಹೇಗೆ ತಿಳಿಯಲ್ಪಡುತ್ತದೆಂದರೆ) ಯೋಽಸೌ = ಯಾವದಿದು, ಶಬ್ದಸ್ಯ = ಶಬ್ದಕ್ಕೆ, ಮುಖ್ಯಾರ್ಥಃ=ಮುಖ್ಯವಾಗಿ ವಾಚ್ಯವಾದ ಅರ್ಥವೋ, ತತ್ರೈವ=ಅದರಲ್ಲಿಯೇ, ಸಮನ್ವಯಃ=ಸಮನ್ವಯವು, ಸ್ಯಾತ್=ಕೂಡುವುದು.

**ತಾ ॥ ಸ. ರ. ವಿ—** (1) ಪ್ರಧಾನಕ್ಕೆ ಜಗತ್ಕಾರಣತ್ವವನ್ನು ನಿಷೇಧಿಸುವುದಾದರೆ 'ಈಕ್ಷತೇರ್ನ ಪ್ರಧಾನಂ' ಎಂದು ಸೂತ್ರವಿರಬೇಕಿತ್ತು. 'ಈಕ್ಷತೇರ್ನಾಶಬ್ದಂ' ಎಂದು ಹೇಳದೇನೇ ಇರುತ್ತಿದ್ದರು. ಅಶಬ್ದ ಪದಕ್ಕೆ ಪ್ರಧಾನದಲ್ಲಿ ರೂಢಿಯಿರುವುದಿಲ್ಲ. (2) ಶಬ್ದರಹಿತತ್ವ ರೂಪ ಯೋಗಾರ್ಥವೆಂದರೆ ಅಸಿದ್ಧಿಯು. ಸಾಂಖ್ಯರು ಅದನ್ನು ಒಡಂಬಡಲಿಲ್ಲ. ಅಶಬ್ದ ಪದದಿಂದ ಅಶ್ರೌತತ್ವವೇ ಹೇಳಲ್ಪಡುತ್ತದೆಂದೂ ಹೇಳಕೂಡದು. 'ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ' ಇತ್ಯಾದಿಗಳಿಂದ ಪ್ರಧಾನವು ಶ್ರುತವಾಗಿರುವುದರಿಂದ ಅಶ್ರೌತತ್ವವು ಇರುವುದಿಲ್ಲ.

(3) 'ಯದ್ವಾಚಾನಭ್ಯುದಿತಂ' ಎಂದು 'ಅಪಾತತಃ' ಶ್ರುತಿಪ್ರಾಪ್ತವಾದ ಶಬ್ದಾವಾಚ್ಯತ್ವವನ್ನು ಪರಿಹರಿಸದಿರುವ ತನಕ ಬ್ರಹ್ಮನಲ್ಲಿ ವೇದಗಳಿಗೆ ಸಮನ್ವಯ ಪ್ರತಿಜ್ಞೆಯು ಅಸಂಭಾವಿತಾರ್ಥಕ ವಾಗುವುದು. ಆದಪ್ರಯುಕ್ತ ಬ್ರಹ್ಮನಿಗೆ ಶಬ್ದವಾಚ್ಯತ್ವವನ್ನು ಪ್ರತಿಪಾದಿಸುವುದೇ ಪೂರ್ವಾಧಿ ಕರಣ ಸಂಗತವಾಗಿದೆ. ಪ್ರಧಾನಕ್ಕೆ ಜಗತ್ಕಾರಣತ್ವ ನಿಷೇಧವಲ್ಲ. ಪ್ರಧಾನಕ್ಕೆ ಜಗತ್ಕಾರಣತ್ವದ ನಿಷೇಧವು 'ಈಕ್ಷತಿ ಕರ್ಮವ್ಯಪದೇಶಾತ್ಸಃ' ಇತ್ಯಾದಿಗಳಲ್ಲಿ ಮಾಡಲ್ಪಡುವುದು. (4) ಮತ್ತು ಎಲ್ಲಾ ವೇದವಾಕ್ಯಗಳಿಗೂ ಬ್ರಹ್ಮನಲ್ಲಿ ಲಾಕ್ಷಣಿಕತ್ವವು ಎಂದಾದರೆ ಸಮನ್ವಯ ಪ್ರತಿಜ್ಞೆಯೇ ಕೂಡಲಾರದು. ವಾಕ್ಯಕ್ಕೆ ಅಮುಖ್ಯವಾದ ಅರ್ಥದಲ್ಲಿ ಸಮೀಚೀನವಾದ ಅನ್ವಯವು ಆಗ ಲಾರದು. ಸಮನ್ವಯವನ್ನಾದರೂ ಜಗತ್ಕಾರಣನಾದ ಬ್ರಹ್ಮನಲ್ಲಿ ಪ್ರತಿಜ್ಞಾ ಮಾಡಿರುವರು.

## ಸಾಂಖ್ಯಮತ ನಿರಾಸಕವಾದ ಮಾಯಾವಾದಿಗಳ ವ್ಯಾಖ್ಯಾನವು.

ತಾ || ನ್ಯಾಯಸುಧಾ— (1) ಪರಬ್ರಹ್ಮನು ಸರ್ವಜ್ಞನು, ಸರ್ವಶಕ್ತನು, ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣನು, ವೇದಾಂತಗಳಿಂದ ತಿಳಿಯಲರ್ಹನು ಎಂದು ಸೂತ್ರದಲ್ಲಿ ಹೇಳಿರುತ್ತದೆ. ಆ ವಿಷಯದಲ್ಲಿ ಸಾಂಖ್ಯರು ಹೀಗೆ ತಿಳಿಯುತ್ತಾರೆ— 'ಸದೇವ ಸೌಮ್ಯೇದಮಗ್ರ ಆಸೀತ್' ಇದು ಮೊದಲಾದ ಯಾವ ವಾಕ್ಯಗಳು ಬ್ರಹ್ಮನಿಗೆ ಜಗತ್ಕಾರಣತ್ವ ಪ್ರತಿಪಾದಕಗಳೆಂದು ಅಂಗೀಕೃತಗಳಾಗಿವೆಯೋ, ಅವುಗಳೆಲ್ಲವೂ ಸತ್ವ-ರಜ-ಸ್ತಮೋಗುಣಾತ್ಮಕವಾದ ಅಚೇತನವಾದ ಪ್ರಧಾನವನ್ನೇ ಜಗತ್ಕಾರಣವನ್ನಾಗಿ ಪ್ರತಿಪಾದಿಸುತ್ತವೆ. ಬ್ರಹ್ಮನಿಗೆ ಜ್ಞಾನಶಕ್ತಿಯೂ ಕ್ರಿಯಾ ಶಕ್ತಿಯೂ ಇರುವುದಿಲ್ಲ. ಚಿದಾತ್ಮನು ಅಪರಿಣಾಮಿಯಾಗಿರುವುದರಿಂದ ಆತನಿಗೆ ಜ್ಞಾನರೂಪ ದಿಂದ ಪರಿಣಾಮವೂ ಇಲ್ಲ. ಅವನೊಬ್ಬನೇ ಆಗಿರುವುದರಿಂದ ಅನೇಕ ರೂಪವಾಗಿ ಪರಿಣಾಮವೂ ಕೂಡುವುದಿಲ್ಲ. ತ್ರಿಗುಣವಾದ ಪ್ರಧಾನವು ಪರಿಣಾಮಿಯಾಗಿರುವುದರಿಂದ ಅದಕ್ಕೆ ಜ್ಞಾನಕ್ರಿಯೆ ಗಳು ಉಪಪನ್ನಗಳಾಗಬಹುದು. ಆದಕಾರಣ ಪ್ರಕೃತಿಯೇ 'ಸದೇವ ಸೌಮ್ಯ' ಇತ್ಯಾದಿಗಳಲ್ಲಿ ಜಗತ್ಕಾರಣವೆಂದು ಪ್ರತಿಪಾದಿಸಲ್ಪಡುತ್ತದೆ. ಹೀಗೆ ಸಾಂಖ್ಯರು ಶಂಕಿಸಿದರೆ ಅದ್ವೈತಿಗಳಿಂದ ನಿರಾಕರಿಸಲ್ಪಡುತ್ತದೆ.

## ಅದ್ವೈತಿಗಳ ವ್ಯಾಖ್ಯಾನವು.

(2)"ಓಂ ಈಕ್ಷತೇರ್ನಾಶಬ್ದಂಓಂ"ಸಾಂಖ್ಯರಿಂದ ಹೇಳಲ್ಪಡತಕ್ಕ ಅಚೇತನವಾದ ಪ್ರಧಾ ನವು ಜಗತ್ಕಾರಣವೆಂದು ವೇದಾಂತವಾಕ್ಯಗಳಲ್ಲಿ ಪ್ರತಿಪಾದಿಸಲ್ಪಡುವುದೆಂದರೆ— ಅಶಬ್ದಂ ಹಿ ತತ್=ಪ್ರಧಾನವು ಶಬ್ದಾವಾಚ್ಯವಾಗಿದೆ. ಹೇಗೆಂದರೆ— 'ತದೈಕ್ಷತ ಬಹು ಸ್ಯಾಂ ಪ್ರಜಾ ಯೇಯ' 'ತತ್ತೇಜೋಽಸೃಜತ' 'ಸ ಐಕ್ಷತ ಲೋಕಾನಸೃಜಾ ಇತಿ' 'ಸ ಇಮಾನ್ ಲೋಕಾನಸೃಜತ' 'ಸ ಈಕ್ಷಾಂಚಕ್ರೇ ಸ ಪ್ರಾಣಮಸೃಜತ' ಎಂದು ಜಗತ್ಕಾರಣ ವಾದುದಕ್ಕೆ ಈಕ್ಷಿತೃತ್ವವು ಶ್ರುತವಾಗಿದೆ. ಅಚೇತನವಾದ ಪ್ರಧಾನಕ್ಕೆ ಈಕ್ಷಣಕರ್ತೃತ್ವವು ಕೂಡಲಾರದು.

(3) ಹಾಗಾದರೆ, ಈ ಈಕ್ಷಣವು ಗೌಣವೆಂದು ಹೇಳಲರ್ಹವಾಗಿದೆ. 'ತತ್ತೇಜ ಐಕ್ಷತ' 'ತಾ ಆಪ ಐಕ್ಷಂತ' ಎಂದು ಜಡಗಳಾದ ತೇಜಸ್ಸು ಜಲ ಮೊದಲಾದವುಗಳಲ್ಲಿ ಹೇಳಿರುವ ಗೌಣ ವಾದ ಈಕ್ಷಣದ ಪ್ರಾಯ ಪಾಠದಲ್ಲಿ ಪಠಿತವಾಗಿದೆ. ಆದಕಾರಣ ಕಾರ್ಯೋನ್ಮುಖವಾದ ಪ್ರಧಾನದಲ್ಲಿಯೂ 'ಐಕ್ಷತ' ಎಂದು ಹೇಳಿದ್ದು ಔಪಚಾರಿಕವಾಗಬಹುದು. ಎಂದರೆ— 'ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ' ಜಲತೇಜಸ್ಸುಗಳಲ್ಲಿದ್ದಂತೆಯೇ ಅಚೇತನವಾದ ಪ್ರಧಾನದಲ್ಲಿ ಈ ಈಕ್ಷಣವು ಗೌಣವೆನ್ನುವುದು ಅಯುಕ್ತವು. ಏಕೆಂದರೆ— 'ಅನೇನ ಜೀವೇನಾತ್ಮನಾ' ಎಂದು

ಚೇತನಸ್ವರೂಪತ್ವವನ್ನು ಹೇಳುವ ಆತ್ಮ ಶಬ್ದವಿರುವುದರಿಂದ, ಚೇತನನಾದ ಜೀವನು ಅಚೇತನವಾದ ಪ್ರಧಾನದ ಸ್ವರೂಪನು ಆಗಲಾರನು. (4) ಇನ್ನು ಹೇಳಬಹುದು. ಆತ್ಮಸಂಬಂಧಿಯಾದ ಸರ್ವಕಾರ್ಯವನ್ನು ಮಾಡುವ ಅಚೇತನವಾದ ಪ್ರಧಾನದಲ್ಲಿ ಆತ್ಮ ಶಬ್ದವು ಕೂಡುತ್ತದೆ. ಲೋಕದಲ್ಲಿ ರಾಜನ ಸರ್ವಕಾರ್ಯವನ್ನು ಮಾಡುವ ಭೃತ್ಯನಲ್ಲಿ 'ಮಮ ಆತ್ಮಾ ಭದ್ರಸೇನಃ' ಭದ್ರಸೇನನು ನನ್ನ ಆತ್ಮನು ಎಂದು ಆತ್ಮಶಬ್ದವು ಇದ್ದಂತೆಯೇ ಎಂದರೆ— "ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ" ಆತ್ಮಶಬ್ದಕ್ಕೆ ಪ್ರತಿಪಾದ್ಯವಾದುದು ಪ್ರಧಾನವೆಂದು ಕಲ್ಪಿಸಕೂಡದು. 'ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ' ಎಂದು ಶ್ವೇತಕೇತುವಿಗೆ ಆತ್ಮಜ್ಞಾನದಿಂದ 'ತಸ್ಯ ತಾವದೇವ ಚಿರಂ' ಎಂದು ಮೋಕ್ಷವು ಉಪದಿಷ್ಟವಾಗಿದೆ. ಅಚೇತನ ಜ್ಞಾನದಿಂದ ಮೋಕ್ಷವು ಕೂಡಲಾರದು. (5) ಹಾಗಾದರೆ ಬ್ರಹ್ಮನು ಜೀವಾಭಿನ್ನನು ಎಂದು ಶ್ವೇತಕೇತುವಿಗೆ ತಿಳಿಸಿಕೊಡಬೇಕೆಂದು ಉದ್ದಾಲಕರಿಗೆ ಇಷ್ಟವಾಗಿದೆ. ಬ್ರಹ್ಮನು ಅತಿಸೂಕ್ಷ್ಮನಾದ ಪ್ರಯುಕ್ತ ಪ್ರಥಮದಲ್ಲಿಯೇ ಶ್ವೇತಕೇತುವಿಗೆ ಜೀವಾಭಿನ್ನನು ಬ್ರಹ್ಮನು ಎಂದು ತಿಳಿಸಲಿಕ್ಕೆ ಶಕ್ಯವಲ್ಲದಿರುವುದರಿಂದ ಪ್ರಧಾನವು ಸ್ಥೂಲವಾದಪ್ರಯುಕ್ತ ಬ್ರಹ್ಮಸಂಬದ್ಧವಾದ ಪ್ರಧಾನವನ್ನೇ ಆತ್ಮವೆಂದು ಶ್ವೇತಕೇತುವಿಗೆ ಉದ್ದಾಲಕರು ಉಪದೇಶಿಸುವರು. ಅರುಂಧತೀ ನಕ್ಷತ್ರವು ಅತಿಸೂಕ್ಷ್ಮವಾಗಿರುವುದರಿಂದ ಮೊದಲೇ ಅದನ್ನು ತೋರಿಸಲಿಕ್ಕೆ ಸಾಧ್ಯವಾಗದೆ ಅದನ್ನು ತಿಳಿಸುವುದಕ್ಕಾಗಿ ಅದರ ಸಮೀಪದಲ್ಲಿರತಕ್ಕ ಸ್ಥೂಲವಾದ ನಕ್ಷತ್ರವನ್ನು ಇದೇ ಅರುಂಧತೀ ನಕ್ಷತ್ರವೆಂದು ಹೇಗೆ ತೋರಿಸುವರೋ, ಹಾಗೆಯೇ, ಎಂದು ಸಾಂಖ್ಯರು ಶಂಕಿಸಿದರೆ— ಅದ್ವೈತಿಗಳು, 'ಹೇಯತ್ವಾವಚನಾಚ್ಚ' ಸಾಂಖ್ಯರು ಹೇಳುವಂತೆ ಆದರೆ ಸ್ಥೂಲವಾದ ನಕ್ಷತ್ರವನ್ನು ಇದು ಅರುಂಧತೀ ನಕ್ಷತ್ರವಲ್ಲವೆಂದು ಹೇಳಿದಂತೆ ಪ್ರಧಾನವು ಆತ್ಮವಲ್ಲವೆಂದು ಹೇಯತ್ವವನ್ನು ಹೇಳುತ್ತಿದ್ದರು. ಹಾಗೆ ಸೂತ್ರಕಾರರು ಹೇಳಲಿಲ್ಲ. ಆದಪ್ರಯುಕ್ತ ಹೀಗೆ ಕಲ್ಪಿಸಕೂಡದು. (6) ಮತ್ತು 'ಸ್ವಾಪ್ಯಯಾತ್' 'ಸದೇವ ಸೌಮ್ಯೇದಮಗ್ರ ಆಸೀತ್' ಎನ್ನುವಲ್ಲಿದ್ದ 'ಸತ್' ಶಬ್ದದಿಂದ ವಾಚ್ಯವಾದುದರಲ್ಲಿ 'ಸ್ವಮಪೀತೋ ಭವತಿ' ಎನ್ನುವಲ್ಲಿದ್ದ ಸ್ವ ಶಬ್ದದಿಂದ ವಾಚ್ಯನಾದ ಜೀವನಿಗೆ ಲಯವು ಹೇಳಲ್ಪಡುತ್ತದೆ. ಸುಪ್ತಿಕಾಲದಲ್ಲಿಯೂ ಪ್ರಲಯಕಾಲದಲ್ಲಿಯೂ ಚೇತನನಿಗೆ ಅಚೇತನದಲ್ಲಿ ಲಯವು ಕೂಡದಿರುವಪ್ರಯುಕ್ತ ಸತ್ ಶಬ್ದದಿಂದ ಪ್ರಧಾನವು ವಾಚ್ಯವಾಗಲಾರದು. (7) 'ಗತಿಸಾಮಾನ್ಯಾತ್' ವೇದಾಂತಶಾಸ್ತ್ರದಲ್ಲಿ ಎಲ್ಲಿಯಾದರೂ ಅಚೇತನವಾದ ಪ್ರಧಾನವು ಜಗತ್ತಿಗೆ ಕಾರಣವೆಂದು ಹೇಳಿದ್ದಿದ್ದರೆ ಆಗ ಪ್ರಧಾನಕ್ಕೆ ಕಥಂಚಿತ್ ಈಕ್ಷಣಾದಿಗಳನ್ನು ಕಲ್ಪಿಸಬಹುದಿತ್ತು. ಹೀಗೆ ಎಲ್ಲಿಯೂ ಹೇಳಲಿಲ್ಲ. ಆದಕಾರಣ ವೇದಾಂತಗಳು ಎಲ್ಲಾ ಕಡೆಗಳಲ್ಲಿಯೂ ಬ್ರಹ್ಮನಿಗೇನೇ ಜಗತ್ಕಾರಣತ್ವವನ್ನು ಹೇಳುವುದರಿಂದ ಪ್ರಧಾನವು ಜಗತ್ತಿಗೆ ಕಾರಣವಾಗಲಾರದು. (8) 'ಶ್ರುತತ್ವಾಚ್ಚ' 'ಜ್ಞಃ ಕಾಲಕಾರೋ ಗುಣೀ ಸರ್ವವಿದ್ಯಃ ಸ ಕಾರಣಂ ಕಾರಣಾಧಿಪಾಧಿಪಃ ನ ತಸ್ಯ ಕಶ್ಚಿಜ್ಜನಿತಾ ನ ಚಾಧಿಪಃ' ಯಾವನು ಸರ್ವಕರ್ತನೋ, ಸರ್ವಗುಣಪರಿಪೂರ್ಣನೋ, ಸರ್ವಜ್ಞನೋ, ಅವನೇ ಜಗತ್ಕಾರಣನು, ಕಾರಣಗಳಿಗೂ ನಿಯಾಮಕರಾದ ಜೀವರಿಗೆ ಅಧಿಪತಿಯು, ಆ ಜಗತ್ಕಾರಣನಿಗೆ ಉತ್ಪಾದಕನೂ ನಿಯಾಮಕನೂ ಯಾವನೊಬ್ಬನೂ ಇಲ್ಲ, ಹೀಗೆ ಸಾಕ್ಷಾತ್ ಸರ್ವಜ್ಞನಾದ ಈಶ್ವರನು ಜಗತ್ಕಾರಣನೆಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಸಾಕ್ಷಾತ್ ಉಕ್ತವಾಗಿದೆ. ಆದಪ್ರಯುಕ್ತ ಪ್ರಧಾನವು ಜಗತ್ಕಾರಣವೆಂದು ವೇದಾಂತದಿಂದ ವೇದ್ಯವಾಗುವುದಿಲ್ಲ. ಪ್ರತಿನಿತ್ಯವೂ ಪರಿಣಾಮಿಯಾಗದಿರುವ ಸೂರ್ಯನಿಗೆ ಹೇಗೆ ಸರ್ವಪ್ರಕಾಶನಾದಿ ಶಕ್ತಿಯಿದೆಯೋ, ಹಾಗೆಯೇ ಪರಿಣಾಮಿಯಾಗದೇನೇ ಇರುವ ಈಶ್ವರನಿಗೆ ಜ್ಞಾನರೂಪ, ಕ್ರಿಯಾರೂಪ ಧರ್ಮಗಳು ಯುಕ್ತಗಳಾಗುತ್ತವೆ. ಈ ಪ್ರಕಾರವಾಗಿ

ಸಾಂಖ್ಯಮತವನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು ಈ ಸೂತ್ರಗಳನ್ನು ನಿರ್ಮಿಸಿರುವ ರೆಂದು ಮಾಯಾವಾದಿಗಳು ಹೇಳುವರು.

## ಸಿದ್ಧಾಂತವು.

ಈ ರೀತಿಯಾಗಿ ಮಾಯಾವಾದಿಗಳು ಮಾಡಿದ ವ್ಯಾಖ್ಯಾನವು ಅತ್ಯಯುಕ್ತವು. ಏಕೆಂದರೆ- ಸೂತ್ರಾಕ್ಷರಗಳು ನೀವು ಹೇಳುವ ಅರ್ಥದಲ್ಲಿ ಅನುಗುಣಗಳಾಗುವುದಿಲ್ಲ. ಹೇಗೆಂದರೆ, ಸಾಂಖ್ಯರು ಅಚೇತನವಾದ ಪ್ರಧಾನವು ಜಗತ್ತಿಗೆ ಕಾರಣವೆಂದು 'ಸದೇವ ಸೌಮ್ಯ' ಇತ್ಯಾದಿ ವೇದಾಂತಗಳಲ್ಲಿ ಪ್ರತಿಪಾದಿಸಲ್ಪಡುವುದೆಂದು ಹೇಳಿದ ಅರ್ಥವನ್ನು ನಿರಾಕರಿಸುವುದಕ್ಕಾಗಿ ಅಶಬ್ದತ್ವವನ್ನು ಮಾಯಾವಾದಿಗಳು ಹೇತೂಕರಿಸಿರುವರು. ಆ ಹೇತೂಕೃತವಾದ ಅಶಬ್ದತ್ವವೆಂದರೆ ೧ ಶಬ್ದಾಗೋಚರತ್ವವೋ, (ಶಬ್ದಗಳಿಂದ ಪ್ರತಿಪಾದಿಸಲ್ಪಡದಿರುವಿಕೆಯೋ) ೨ ಶಬ್ದಾವಾಚ್ಯತ್ವವೋ, ೩ ಅವೈದಿಕತ್ವವೋ, (ವೇದಗಳಲ್ಲಿ ಪ್ರತಿಪಾದಿಸಲ್ಪಡದಿರುವಿಕೆಯೋ) ೪ ಜಗತ್ಕಾರಣವೆಂದು ವೇದಗಳಲ್ಲಿ ಹೇಳಲ್ಪಡದಿರುವಿಕೆಯೋ, ಈ ನಾಲ್ಕು ವಿಧವಾದ ಅಶಬ್ದತ್ವರೂಪಹೇತುವೂ ಪಕ್ಷದಲ್ಲಿ ಸಿದ್ಧಿಸದಿರುವುದರಿಂದ ಹೇತುವಿಗೆ ಅಸಿದ್ಧಿಯು. ಹೇಗೆಂದರೆ— **'ನ ಹ್ಯಶಬ್ದತ್ವಂ ಪ್ರಧಾನೇಽಂಗೀಕರೋತ್ಯಸೌ'** ಸಾಂಖ್ಯನು ಪ್ರಧಾನದಲ್ಲಿ ಅಶಬ್ದತ್ವವನ್ನು ಅಂಗೀಕರಿಸಲಿಲ್ಲವಷ್ಟೆ. (9) ಹಾಗಾದರೆ ಸಾಂಖ್ಯರಿಗೆ ಅಶಬ್ದತ್ವವು ಅಸಿದ್ಧವಾದರೂ ಸೂತ್ರಕಾರರಿಗೆ ಸಿದ್ಧವಾದ ಅಶಬ್ದತ್ವರೂಪವಾದ ಹೇತುವಿನಿಂದ ಸಾಂಖ್ಯಮತ ನಿರಾಕರಣವು ಸೂತ್ರಕಾರರಿಂದ ಮಾಡಲ್ಪಡುತ್ತದೆ ಎಂದರೆ— ಹಾಗೆ ಹೇಳಕೂಡದು. ಏಕೆಂದರೆ— ಸೂತ್ರಕಾರರು ಪ್ರಧಾನಕ್ಕೆ ಅಶಬ್ದತ್ವವನ್ನು ಅಂಗೀಕರಿಸಲಿಲ್ಲ. ಈ ವಿಷಯವನ್ನು ೪ನೇ ಪಾದದಲ್ಲಿ **'ಸರ್ವವೇದೇತಿಹಾಸೇಷು ಪುರಾಣೇಷು ಚ ಸಂಗ್ರಹಾತ್'** ಇತ್ಯಾದಿಗಳಲ್ಲಿ ವಿವರಿಸುವೆವು. (10) ಮತ್ತು ಹಿಂದಿನ ನಾಲ್ಕು ಪಕ್ಷಗಳಲ್ಲಿ 'ಶಬ್ದಾಗೋಚರತ್ವಂ' ಎನ್ನುವ ಐದನೇ ಪಕ್ಷವು (೧) ಪ್ರಧಾನಾಸತ್ತ್ವರೂಪಾರ್ಥದಲ್ಲಿ ಪರ್ಯವಸಿತವಾಗುತ್ತದೋ ಅಥವಾ (೨) ಪ್ರಧಾನವು ಪ್ರಮಾಣಾಂತರಗಳಿಂದ ವೇದ್ಯವು ಎನ್ನುವ ಅರ್ಥದಲ್ಲಿ ಪರ್ಯವಸಿತವಾಗುತ್ತದೋ? (೧) ಪ್ರಧಾನಾಸತ್ವರೂಪಾರ್ಥದಲ್ಲಿ ಪರ್ಯವಸಿತವಾಗುತ್ತದೆಂದು ಹೇಳುವುದಾದರೆ— ಅಸತ್ವವನ್ನುಪಪಾದಿಸುವುದಕ್ಕಾಗಿ 'ಈಕ್ಷತೇಃ' ಎಂದು ಹೇಳಿದ್ದು ಕೂಡುವುದಿಲ್ಲ. ಈಕ್ಷಣದಿಂದ ಈಕ್ಷಣಸಮಭಿವ್ಯಾಹೃತ ಶಬ್ದವಿಶೇಷವಿಷಯತ್ವವೇ ಸಿದ್ಧಿಸುತ್ತದೆ. ಆದರಿಂದ ಪ್ರಧಾನವು ಅಸತ್ತೆಂದು ಹೇಳಿದಂತೆ ಆಗುವುದಿಲ್ಲ. (೨) ಪ್ರಧಾನವು ಪ್ರಮಾಣಾಂತರವೇದ್ಯವು ಎನ್ನುವುದನ್ನು ಹೇಳುವುದಕ್ಕಾಗಿ 'ಈಕ್ಷತೇಃ' ಎಂದು ಹೇಳಿದ್ದು ಎನ್ನುವುದೂ ಕೂಡುವುದಿಲ್ಲ ಪ್ರಧಾನವು ಈಕ್ಷಣಾಸಮಭಿವ್ಯಾಹೃತ ಶಬ್ದವೇ ಪ್ರಮಾಣವಾಗಿ ಉಳ್ಳದ್ದು ಎಂದಾದರೂ ಕೂಡುವುದರಿಂದ ಪ್ರಧಾನವು ಶಬ್ದೇತರಪ್ರಮಾಣವೇದ್ಯವು ಎಂದುಪಪಾದಿಸಲಿಕ್ಕೆ ಈಕ್ಷತಿಗೆ ಸಾಮರ್ಥ್ಯವಿಲ್ಲವು. ಅಶಬ್ದತ್ವಂ ಎನ್ನುವುದಕ್ಕೆ ಶಬ್ದಾವಾಚ್ಯತ್ವವೆಂದರ್ಥವು ಎನ್ನುವ ಎರಡನೇ ಕಲ್ಪದಲ್ಲಿ ಬ್ರಹ್ಮನಲ್ಲಿ ವ್ಯಭಿಚಾರವು. ಹೇಗೆಂದರೆ— ಪ್ರಧಾನಂ ಜಗತ್ಕಾರಣತಯಾ ವೇದಾಂತವೇದ್ಯತ್ವಾಭಾವವತ್ ಶಬ್ದಾವಾಚ್ಯತ್ವಾತ್ ಎನ್ನುವ ಅನುಮಾನದಿಂದ ಬ್ರಹ್ಮನಲ್ಲಿ ಶಬ್ದಾವಾಚ್ಯತ್ವರೂಪ ಹೇತುವಿದೆ. ಬ್ರಹ್ಮನು ಜಗತ್ಕಾರಣನೆಂದು ವೇದಾಂತಗಳಲ್ಲಿ ಪ್ರತಿಪಾದಿಸಲ್ಪಡುತ್ತಾನೆಂದಂಗೀಕರಿಸಿರುವುದರಿಂದ ಜಗತ್ಕಾರಣವೆಂದು ವೇದಾಂತವೇದ್ಯತ್ವಾಭಾವರೂಪಸಾಧ್ಯವಿಲ್ಲ. ಆದುದರಿಂದ ಸಾಧ್ಯವಿಲ್ಲದಿರುವುದರಲ್ಲಿ ಹೇತುವಿದ್ದ ಪ್ರಯುಕ್ತ ವ್ಯಭಿಚಾರವು. ಅವೈದಿಕತ್ವವು, ಕಾರಣವಾಗಿ ಅವೈದಿಕತ್ವವು ಎನ್ನುವ ಮೂರನೇ ನಾಲ್ಕನೇ ಪಕ್ಷಗಳಲ್ಲಿ ಈ ಹೇತುಗಳಿಗೆ ಜಗತ್ಕಾರಣವೆಂದು ವೇದಾಂತಾಪ್ರತಿಪಾದ್ಯತ್ವರೂಪಸಾಧ್ಯದಿಂದ ಸಮಾನಾರ್ಥಕತ್ವವಿದ್ದ ಪ್ರಯುಕ್ತ ಸಾಧ್ಯಾವಿಶಿಷ್ಟತ್ವವು. (ಹೇತುಸಾಧ್ಯಗಳಿಗೆ ಐಕ್ಯವು.) (11) ಮತ್ತು ಈಕ್ಷಣದಿಂದಲೇ 'ಪ್ರಧಾ

ನವು ಜಗತ್ಕಾರಣವೆಂದು ವೇದಾಂತವೇದ್ಯವಲ್ಲ' ಎಂದು ಪ್ರತಿಜ್ಞಾರ್ಥವು ಸಿದ್ಧಿಸುವಾಗ 'ಅಶಬ್ದಂ ಹಿ ತತ್' ಪ್ರಧಾನವು ಅಶಬ್ದವಷ್ಟೆ ಅಂದರೆ, ಅಶಬ್ದತ್ವಾತ್ ಎಂದು ಮಧ್ಯದಲ್ಲಿ ಹೇತ್ವಂತರವನ್ನು ಕಲ್ಪಿಸಿದ್ದು ವ್ಯರ್ಥವು. ಮತ್ತು ಈಕ್ಷಿತೃತ್ವವೆಂದರೆ- ಈಕ್ಷಣರೂಪ ಗುಣಸಂಬಂಧವು ಅದನ್ನು ಬ್ರಹ್ಮನು ನಿರ್ಗುಣನೆಂದು ಹೇಳುವ ಅದ್ವೈತಿಗಳು ಬ್ರಹ್ಮನಲ್ಲಿಯೂ ಗೌಣವನ್ನಾಗಿಯೇ ಅಂಗೀಕರಿಸತಕ್ಕದು. ಅಂತೂ ಅದ್ವೈತಿಗಳ ಪಕ್ಷದಲ್ಲಿ 'ಗೌಣಶ್ಚೇನ್ನಾತ್ಮಶಬ್ದಾತ್' ಎನ್ನುವ ಸೂತ್ರವೇ ವ್ಯರ್ಥವಾಗುವುದು. (12) ಮತ್ತು 'ಈಕ್ಷತೇರ್ಗೌಣತ್ವಂ ನ ಕಲ್ಪ್ಯಂ ಮುಖ್ಯಾರ್ಥೇ ಬಾಧಕಾಭಾವಾತ್' ಈಕ್ಷತಿಗೆ ಮುಖ್ಯಾರ್ಥದಲ್ಲಿ ಬಾಧಕವಿಲ್ಲದಿರುವುದರಿಂದ ಗೌಣತ್ವವನ್ನು ಕಲ್ಪಿಸಕೂಡದು ಎಂದು ಹೇಳದೆ, 'ಆತ್ಮಶಬ್ದಾತ್' ಎಂದು ಹೇಳಿದ್ದು ಅಸಂಗತವು. (13) ಹಾಗಾದರೆ- ಅದ್ವೈತಿಗಳು ಪ್ರಾಯಪಾಠ ವಿರೋಧವು ಬಾಧಕವೆಂದು ಉಪನ್ಯಾಸಮಾಡಿರುವರು. ಆ ವಿರೋಧ ಬರಬಾರದು ಎನ್ನುವುದಕ್ಕಾಗಿ ಆತ್ಮಶಬ್ದಾತ್ ಎನ್ನುವುದರಿಂದ 'ತತ್ತೇಜ ಐಕ್ಷತ' ಇತ್ಯಾದಿಗಳಲ್ಲಿ ಆತ್ಮಶಬ್ದವಿಲ್ಲದಿರುವಪ್ರಯುಕ್ತ ವೈಷಮ್ಯವನ್ನು ಹೇಳುವರು. ಅಂದರೆ,ಆತ್ಮಶಬ್ದದ ಸಾಮರ್ಥ್ಯದಿಂದ ಸತ್ ಶಬ್ದವಾಚ್ಯವಾದುದು ಚೇತನವೆಂದವಗತವಾಗಿರುವುದರಿಂದ ಈಕ್ಷತಿಗೆ ಮುಖ್ಯಾರ್ಥತ್ವವೇ ಕೂಡುವಪ್ರಯುಕ್ತ ಗೌಣಪ್ರಾಯಪಾಠ ವಿರೋಧವಿಲ್ಲವು, ಹೀಗೆ ವೈಷಮ್ಯವು ಹೇಳಲ್ಪಡುತ್ತದೆಂದರೆ— ಹಾಗೆ ಹೇಳಕೂಡದು. ತೇಜೋಬನ್ನ ಶಬ್ದಗಳಿಂದಲೂ ವಾಚ್ಯಗೂ ದೇವತೆಗಳಾಗಿರುವುದರಿಂದ ಪ್ರಾಯಪಾಠ ವಿರೋಧವಿಲ್ಲವು. ತಥಾಚ ಈಕ್ಷಣವು ಗೌಣವೆಂದೇ ಹೇಳತಕ್ಕದು 'ತತ್ತೇಜ ಐಕ್ಷತ, ತಾ ಆಪ ಐಕ್ಷಂತ' ಎಂದು ಗೌಣನೊಂದಿಗೆ ಪಠಿತವಾಗಿರುವುದರಿಂದ ಎನ್ನುವುದು ಅಯುಕ್ತವೇ. ಆದಕಾರಣ ಪ್ರಾಯಪಾಠ ವಿರೋಧವೇ ಇಲ್ಲದಿರುವುದರಿಂದ 'ಗೌಣಶ್ಚೇನ್ನಾತ್ಮಶಬ್ದಾತ್' ಎನ್ನುವ ಸೂತ್ರವು ವ್ಯರ್ಥವೇ. (14) ಮತ್ತು 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎನ್ನುವಲ್ಲಿ (೧) ಪ್ರಧಾನದಿಂದ ಜೀವನಿಗೆ ಐಕ್ಯವನ್ನು ಹೇಳಿದ್ದು ಕೂಡುವುದಿಲ್ಲ ಎನ್ನುವ ಅರ್ಥವು ವಿವಕ್ಷಿತವಾಗಿದ್ದರೆ ಜೀವನಿಗೆ ಬ್ರಹ್ಮನಿಂದ ಐಕ್ಯವೆನ್ನುವ ಪಕ್ಷದಲ್ಲಿಯೂ ಈ ದೋಷವು ಬಂದೇಬರುತ್ತದೆ. ಹೇಗೆಂದರೆ, ಜೀವನಿಗೂ ಬ್ರಹ್ಮನಿಂದ ಐಕ್ಯವನ್ನು ಹೇಳಿದ್ದು ಯುಕ್ತವಾಗುವುದಿಲ್ಲವೆಂದು, 'ಯಜಮಾನಪ್ರಸ್ತರತ್ವಂ ಯಥಾ ಸಾರ್ಥಃ ಶ್ರುತೇರ್ಭವೇತ್' ಎನ್ನುವಲ್ಲಿ (ಪು. ೧೩೭) ಹೇಳಿಯಾಗಿದೆ. (೨) ಪ್ರಧಾನವನ್ನು ತಿಳಿದುಕೊಂಡವನಿಗೆ ಮೋಕ್ಷವು ಕೂಡುವುದಿಲ್ಲ ಎನ್ನುವ ಅರ್ಥವು ವಿವಕ್ಷಿತವಾಗಿದ್ದರೆ ಈ ಅರ್ಥವೂ ಕೂಡುವುದೇ ಇಲ್ಲವು. ಆತ್ಮ, ಅನಾತ್ಮ(ಜಡ)ಗಳಿಂದ ಭೇದಜ್ಞಾನ ಬರಬೇಕಾಗಿದ್ದರೆ ಅನಾತ್ಮ (ಜಡ) ಜ್ಞಾನವು ಆವಶ್ಯಕವೇ. ಮತ್ತು ಆತ್ಮಶಬ್ದಕ್ಕೆ ಮೊದಲು ಹೇಳಿದ ಪ್ರಕಾರ ಗೌಣತ್ವವನ್ನು ಶಂಕಿಸಿದರೆ ಬಾಧಕಾಭಾವವನ್ನೇ ಹೇಳಬೇಕು. ಪ್ರಧಾನದಲ್ಲಿ ಆಸಕ್ತನಿಗೆ ಮೋಕ್ಷವನ್ನು ಹೇಳಿದ್ದು ಕೂಡುವುದಿಲ್ಲ. ತಥಾಚ ಸೂತ್ರದಲ್ಲಿದ್ದ 'ಮೋಕ್ಷೋಪದೇಶಾತ್' ಎನ್ನುವ ಹೇತುವು ಅಯುಕ್ತವೇಸರಿ. (15) 'ಹೇಯತ್ವಾವಚನಾಚ್ಚ' ಎನ್ನುವುದಕ್ಕೆ ಅವತಾರಿಕಾ ರೂಪವಾದ ಶಂಕೆಯೇ ಕೂಡುವುದಿಲ್ಲ. ಏಕೆಂದರೆ— ಸಾಂಖ್ಯನೂ ಪ್ರಧಾನದಿಂದ ಐಕ್ಯಜ್ಞಾನ ಬರುವುದಕ್ಕಾಗಿ ಪ್ರಧಾನವನ್ನು ಹೇಳಿದ್ದೆಂದೂ ಹೇಳುವುದಿಲ್ಲ. ಮತ್ತು ಹೇಯತ್ವಾವಚನಾತ್ ಎನ್ನುವ ಹೇತುವಿಗೆ ವ್ಯಭಿಚಾರರೂಪ ದೋಷವು ಬರುವುದು. ಹೇಗೆಂದರೆ—ಅನ್ನಮಯ, ಪ್ರಾಣಮಯಾದಿಗಳಿಗೆ ಅಬ್ರಹ್ಮತ್ವವಿದ್ದರೂ, ಅನ್ನಮಯಾದಿ ನ ಬ್ರಹ್ಮ=ಅನ್ನಮಯಾದಿಗಳು ಬ್ರಹ್ಮನಲ್ಲ ಎಂದು ಹೇತುವಚನವಿರುವುದಿಲ್ಲ. ಪುಚ್ಛರೂಪ ಬ್ರಹ್ಮಜ್ಞಾನಕ್ಕಾಗಿ ಬ್ರಹ್ಮವೆಂದೇ ಉಪದೇಶವಿದೆ. ಆದಕಾರಣ ಹೇತುವಿದ್ದರೂ, ಹಿಂದಿನ ಸಾಧ್ಯವಿಲ್ಲದಿರುವುದರಿಂದ ವ್ಯಭಿಚಾರವು. (16) ಹಾಗಾದರೆ, 'ಪ್ರಾಣೋ ಬ್ರಹ್ಮೇತಿ ವ್ಯಜಾನಾತ್' 'ಮನೋ ಬ್ರಹ್ಮೇತಿ ವ್ಯಜಾನಾತ್' ಇದು ಮೊದಲಾದ ಉತ್ತ

ರೋತ್ತರ ಬ್ರಹ್ಮತ್ವವಚನವು ಆ ವಿಷಯದಲ್ಲಿ ಜ್ಞಾಪಕವು, ಅಂದರೆ ಅನ್ನಮಯನಿಗೆ ಬ್ರಹ್ಮತ್ವವಿಲ್ಲವೆನ್ನುವ ವಿಷಯದಲ್ಲಿ 'ಯೋ ಪ್ರಾಣಂ ಬ್ರಹ್ಮೋಪಾಸತೇ' ಎಂದು ಪ್ರಾಣಮಯನಿಗೆ ಬ್ರಹ್ಮತ್ವವಚನವು ಜ್ಞಾಪಕವು; ಹೀಗೆಯೇ ಪ್ರಾಣಮಯನಿಗೆ ಬ್ರಹ್ಮತ್ವವಿಲ್ಲವೆನ್ನುವ ವಿಷಯದಲ್ಲಿ ಮನೋಮಯನು ಬ್ರಹ್ಮನೆಂದು ಹೇಳಿದ ವಚನವು ಜ್ಞಾಪಕವು. ಎಂದರೆ— 'ಸದೇವ ಸೌಮ್ಯ' ಇತ್ಯಾದಿ ಪ್ರಕರಣದಲ್ಲಿಯೂ ಸತ್ ಶಬ್ದಾರ್ಥವು ಬ್ರಹ್ಮವಲ್ಲವೆನ್ನುವ ವಿಷಯದಲ್ಲಿ **'ಭೂಯ ಏವ ಮಾ ಭಗವಾನ್ವಿಜ್ಞಾಪಯತು'** 'ತದ್ಧಾಸ್ಯ ವಿಜಜ್ಞೌ' ಎಂದು ಬ್ರಹ್ಮಜ್ಞಾನಾರ್ಥವಾಗಿ ವಚನವೇ ಹಿಂದಿನದ್ದು ಬ್ರಹ್ಮವಲ್ಲ ಎನ್ನುವುದಕ್ಕೆ ಜ್ಞಾಪಕವೆಂದು ಹೇಳಬಹುದು. (17) 'ಹೇಯತ್ವಾವಚನಾಚ್ಚ' ಎನ್ನುವಲ್ಲಿದ್ದ ಚ ಶಬ್ದದಿಂದ ಸಮುಚ್ಚಿತವಾದ ಒಂದರ ಜ್ಞಾನದಿಂದ ಸರ್ವಜ್ಞಾನವಾಗುವುದು ಎನ್ನುವ ಪ್ರತಿಜ್ಞಾ ವಿರೋಧವಾದರೂ ಬ್ರಹ್ಮನೆನ್ನುವ ವಾದದಲ್ಲಿಯೇ; ಪ್ರಧಾನವೆನ್ನುವ ವಾದದಲ್ಲಿಲ್ಲ. ಪ್ರಧಾನವೇ ಸರ್ವಾತ್ಮಕವೆಂದಂಗೀಕರಿಸಿರುತ್ತೇವೆ. ತಥಾಚ ಬ್ರಹ್ಮಜ್ಞಾನದಿಂದ ಸರ್ವವಸ್ತುವಿನ ಜ್ಞಾನವಾಗುವುದಿಲ್ಲ. ಸರ್ವವೂ ಬ್ರಹ್ಮವಿಕಾರವಾಗದಿರುವುದರಿಂದ ಬ್ರಹ್ಮಾತ್ಮಕವಲ್ಲ. (18) ಭೋಕ್ತೃವರ್ಗಕ್ಕೆ ಪ್ರಧಾನಸ್ವರೂಪತ್ವವಿಲ್ಲವೆಂದರೆ— ಸತ್ಯವೇ ಬ್ರಹ್ಮನು ಯಾವ ಸ್ವರೂಪವನೂ ಆಗುವುದಿಲ್ಲ. ಭೋಗ್ಯಸ್ವರೂಪನೂ ಭೋಕ್ತೃಸ್ವರೂಪನೂ ಆಗುವುದಿಲ್ಲ. ಬ್ರಹ್ಮನಿಗೆ ಜಡದಿಂದ ಐಕ್ಯವನ್ನು ನೀವು ಅಂಗೀಕರಿಸಲಿಲ್ಲ. ಭೋಕ್ತ್ರೈಕ್ಯವನ್ನು ನಾವು ನಿರಾಕರಿಸಿಯಾಗಿದೆ. ಅಂದರೆ, ಸಾಂಖ್ಯರ ಮತದಲ್ಲಿ ಭೋಕ್ತೃವರ್ಗವು ಪ್ರಧಾನಸ್ವರೂಪವಾಗದಿದ್ದರೂ ಭೋಗ್ಯವರ್ಗವು ಪ್ರಧಾನವೆಂದು ಅಂಗೀಕೃತವೇ ಆಗಿದೆ. ಅದ್ವೈತಿಗಳ ಮತದಲ್ಲಿ ಆದರೂ ಭೋಕ್ತೃವರ್ಗಕ್ಕಾಗಲೀ, ಭೋಗ್ಯವರ್ಗಕ್ಕಾಗಲೀ ಬ್ರಹ್ಮವಿಕಾರತ್ವವು ಕೂಡದಿರುವುದರಿಂದ ಬ್ರಹ್ಮಾತ್ಮಕತ್ವವು ಕೂಡುವುದೇ ಇಲ್ಲವು. (19) ಸ್ವಾಪ್ಯಯಾತ್ ಎನ್ನುವುದಕ್ಕೆ ಹೇಳಿದ ಅರ್ಥವೂ ಅಯುಕ್ತವು. ಸ್ವಾಪ್ಯಯವೆಂದರೆ ೧ ಏಕೀಭಾವವೋ, ಕೇವಲಪರಿಷ್ವಂಗ (ಸಂಬಂಧ)ವೋ, ೧ ಏಕೀಭಾವವು ಬ್ರಹ್ಮನೆನ್ನುವ ಕಲ್ಪದಲ್ಲಿಯೂ ಇರುವುದಿಲ್ಲ. ೨ ಪರಿಷ್ವಂಗಮಾತ್ರವು ಪ್ರಧಾನದಲ್ಲಿಯೂ ಕೂಡಬಹುದು. ಅಂದರೆ, ಪ್ರಧಾನಕ್ಕೂ ಲಿಂಗದೇಹದ ಪರಿಷ್ವಂಗ (ಸಂಬಂಧ)ವಿದೆಯಷ್ಟೆ. (20) ಬ್ರಹ್ಮವಿಷಯಕವಾದ ಗತಿಸಾಮಾನ್ಯವಾದರೂ ಸಾಂಖ್ಯನಿಗೆ ಅಸಿದ್ಧವೇ ಆಗಿದೆ. ಈಕ್ಷಣಾದಿಗಳಿಂದ ಗತಿಸಾಮಾನ್ಯವನ್ನು ಸಾಧಿಸಿದರೆ 'ಈಕ್ಷತೇರ್ನಾಶಬ್ದಂ' ಎನ್ನುವ ಸೂತ್ರದಿಂದಲೇ ಗತಾರ್ಥವಾಗುವುದು. (21) ಬ್ರಹ್ಮವಿಷಯಕವಾದ ಗತಿಸಾಮಾನ್ಯವು ಸಾಂಖ್ಯನಿಗೆ ಅಸಿದ್ಧವಾಗಿರುವುದರಿಂದಲೇ 'ಶ್ರುತತ್ವಾಚ್ಚ' ಎನ್ನುವ ಹೇತುವೂ ಪಕ್ಷದಲ್ಲಿಲ್ಲದಿರುವುದರಿಂದ ಅಸಿದ್ಧವೇ ಆಗಿದೆ. ಅಂದರೆ **'ಸ ಕಾರಣಂ ಕಾರಣಾಧಿಪಾಧಿಪಃ'** ಎನ್ನುವಲ್ಲಿಯೂ ಪ್ರಧಾನವೇ ಪ್ರತಿಪಾದ್ಯವೆಂದು ಸಾಂಖ್ಯನು ಹೇಳುವನು. ಮತ್ತು ಶ್ರುತಿಗಳಿಂದ ಬ್ರಹ್ಮನು ಕಾರಣನೆನ್ನುವುದು **'ಗತಿಸಾಮಾನ್ಯಾತ್'** ಎನ್ನುವಲ್ಲಿ ಸಮರ್ಥಿಸಿರುವುದರಿಂದ **'ಗತಿಸಾಮಾನ್ಯಾತ್'** ಎನ್ನುವುದರಿಂದ ಗತಾರ್ಥವೂ ಆಯಿತು. ಇದುಮೊದಲಾದ ಅನೇಕದೋಷಗಳಿದ್ದ ಪ್ರಯುಕ್ತ ಸಾಂಖ್ಯಮತನಿರಾಸಕವೆನ್ನುವ ಮಾಯಾವಾದಿಗಳ ವ್ಯಾಖ್ಯಾನವು ಅತ್ಯಯುಕ್ತವು.

**ಹೀಗೆ ಮಾಯಾವಾದಿಗಳ ಸೂತ್ರಾರ್ಥ ನಿರಾಕರಣವು.**

(22) ಮತ್ತೂ ಮಾಯಾವಾದಿಗಳ ಸೂತ್ರಯೋಜನೆಯು ಹೇಗೂ ಇರಲಿ. "ತತ್ತು ಸಮನ್ವಯಾತ್" ಎಂದು ಪೂರ್ವಪ್ರಕೃತವಾದ ಅರ್ಥದಿಂದ ಸಂಗತಿಯನ್ನು ವಿಚಾರ ಮಾಡಿದರೂ ಈ ಸೂತ್ರಗಳಿಂದ ವಾಚ್ಯತ್ವಸಮರ್ಥನೆಯೇ ಯುಕ್ತವು ಸಾಂಖ್ಯಮತ ನಿರಾಕರಣವಲ್ಲ. ಏಕೆಂದರೆ— "ತತ್ತು ಸಮನ್ವಯಾತ್" ಎನ್ನುವ ಸೂತ್ರದಿಂದ ಸಕಲ ಶಾಸ್ತ್ರಕ್ಕೂ ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಜ್ಞಾಮಾಡಿದಮೇಲೆ ಮುಖ್ಯವೃತ್ತಿಯಿಂದ (೧) ಶಬ್ದವಾಚ್ಯತ್ವವೂ, (೨) ಸಾಂಖ್ಯಮತ

ನಿರಾಕರಣವೂ ಈ ಎರಡನ್ನೂ ಪ್ರತಿಪಾದಿಸತಕ್ಕದು. ಈ ಎರಡೂ ಇಲ್ಲದಿದ್ದರೆ ಹಿಂದೆ ಪ್ರತಿಜ್ಞಾ ಮಾಡಿದ ಸಮನ್ವಯವೇ ಕೂಡಲಾರದು. ಆದರೂ ಅದರಲ್ಲಿ ಶಬ್ದವಾಚ್ಯತ್ವವನ್ನೇ ಪ್ರಥಮದಲ್ಲಿ ಪ್ರತಿಪಾದಿಸತಕ್ಕದು ಸಾಂಖ್ಯಮತನಿರಾಕರಣವಲ್ಲ. ಅದು 'ಈಕ್ಷತಿಕರ್ಮವ್ಯಪದೇಶಾತ್ಸಃ' ಇತ್ಯಾದಿಗಳಲ್ಲಿ ಮಾಡಲ್ಪಡುತ್ತದೆ. ಮೊದಲು ಶಬ್ದವಾಚ್ಯತ್ವ ಸಮರ್ಥನವನ್ನೇ ಏಕೆ ಮಾಡಬೇಕೆಂದರೆ, ಬ್ರಹ್ಮನಿಗೆ ಯಾವುದೊಂದು ಶಬ್ದದಿಂದಲೂ ವಾಚ್ಯತ್ವವಿಲ್ಲದಿದ್ದರೆ ಶಬ್ದಸಂಬಂಧ ರೂಪವಾದ ಸಮನ್ವಯವೇ ಕೂಡಲಾರದು. ಸಾಂಖ್ಯಮತನಿರಾಕರಣವಿಲ್ಲವಿದ್ದರೆ ಸೃಷ್ಟಿವಾಕ್ಯಗಳದ್ದು ಮಾತ್ರ ಸಮನ್ವಯವು ಅನುಪಪನ್ನವಾಗುವುದು. ಆದುದರಿಂದ ಪ್ರಥಮದಲ್ಲಿ ಶಬ್ದವಾಚ್ಯತ್ವವನ್ನು ಸಮರ್ಥಿಸಿ ಸಮನ್ವಯವು ಸಂಭಾವಿತವಾಗುತ್ತಿರಲು ಸೃಷ್ಟಿವಾಕ್ಯಗಳ ವಿಚಾರಕ್ಕೆ ಅನಂತರದಲ್ಲಿಯೇ ಅವಸರವಿರುವುದು. ಈ ರೀತಿಯಾಗಿ ಪೂರ್ವ ಸಂಗತಿಯನ್ನು ಪರ್ಯಾಲೋಚಿಸಿದರೆ ವಾಚ್ಯತ್ವಸಮರ್ಥನವನ್ನೇ ಮೊದಲು ಮಾಡತಕ್ಕದ್ದು ಸಾಂಖ್ಯಮತನಿರಾಕರಣವಲ್ಲ. (23) ಹಾಗಾದರೆ, ವಾಚ್ಯತ್ವವಿಲ್ಲದಿದ್ದರೂ ಲಕ್ಷಣಾ (ಅಮುಖ್ಯ)ವೃತ್ತಿಯಿಂದ ಸಮನ್ವಯವು ಕೂಡುವಪ್ರಯುಕ್ತ ಅವಾಚ್ಯತ್ವಾಕ್ಷೇಪವನ್ನು ದುರ್ಬಲವೆಂದು ಉಪೇಕ್ಷಾಮಾಡಿ ಸೂತ್ರಕಾರರು ಮೊದಲು ಸಾಂಖ್ಯಮತವನ್ನು ನಿರಾಕರಿಸಿದರೆಂದು ಅಂಗೀಕರಿಸಿದರೆ ಅಸಂಗತಿಯು ಇರುವುದಿಲ್ಲವೆಂದರೆ— 'ಕಥಂ ಚ ಲಕ್ಷಣಾವಾದೀ' ಎಂದು. ಅಂದರೆ— ಮಾಯಾವಾದಿಗಳು ಹೇಳುವ ರೀತಿಯಿಂದ ಶಬ್ದಗಳಿಗೆ ಲಕ್ಷಣಾವೃತ್ತಿಯಿಂದ ಬ್ರಹ್ಮನಲ್ಲಿ ಸಮನ್ವಯವು ಸೂತ್ರಕಾರರಿಗೆ ಅಭಿಪ್ರೇತವಾಗಿದ್ದರೆ ಸೂತ್ರಕಾರರು ಅನ್ವಯಮಾತ್ರವನ್ನು ಹೇಳುತ್ತಿದ್ದರು. ಮುಖ್ಯವೃತ್ತಿಯಿಂದ ಅನ್ವಯರೂಪವಾದ ಸಮನ್ವಯವನ್ನು ಹೇಳುತ್ತಿರಲಿಲ್ಲ. 'ತತ್ತು ಸಮನ್ವಯಾತ್' ಎಂದು ಸಮನ್ವಯವನ್ನೂ ಹೇಳಿದ್ದಾರೆ. ಆದಪ್ರಯುಕ್ತ ಸೂತ್ರಕಾರರಿಗೆ ಲಕ್ಷಣಾವೃತ್ತಿಯು ಇಷ್ಟವಲ್ಲ. ಮತ್ತೆ ಮುಖ್ಯವೃತ್ತಿಯೇ ಅಭಿಪ್ರೇತವೆಂದು ತಿಳಿಯುತ್ತದೆ. (24) ಸಮನ್ವಯವನ್ನು ಹೇಳಿರುವುದರಿಂದ ಮುಖ್ಯವೃತ್ತಿಯು ಇಷ್ಟವಾಗಿದೆಂದು ಹೇಗೆ ತಿಳಿಯುತ್ತದೆಂದರೆ— **'ಯೋಽಸೌ ಶಬ್ದಸ್ಯ ಮುಖ್ಯಾರ್ಥಸ್ತತ್ರೈವ ಸ್ಯಾತ್ಸಮನ್ವಯಃ'** ಸಮೀಚೀನವಾದ ಅನ್ವಯವು ಸಮನ್ವಯವು. ಆ ಸಮನ್ವಯವಾದರೂ ಶಬ್ದಕ್ಕೆ ವಾಚ್ಯವಾದ ಅರ್ಥದಲ್ಲಿಯೇ ಕೂಡುತ್ತದೆ. ವಾಚ್ಯಾರ್ಥದಲ್ಲಿರುವ ಅನ್ವಯವೇ ಸಮೀಚೀನವಾದ ಅನ್ವಯವು. ಲಕ್ಷ್ಯಾರ್ಥದಲ್ಲಿ ಆದರೂ ವಾಚ್ಯಾರ್ಥದ್ವಾರಾ ಇರುವ ಅನ್ವಯವು ಸಮೀಚೀನವಲ್ಲ. ಆದಕಾರಣ ಸಮನ್ವಯ ಶಬ್ದವನ್ನು ಪ್ರಯೋಗಿಸತಕ್ಕ ಸೂತ್ರಕಾರರು ವಾಚ್ಯವಾಚಕಭಾವ ಸಂಬಂಧವನ್ನೇ ಹೇಳಿದ್ದಾರೆಂದು ತಿಳಿಯುತ್ತದೆ. ವಾಚ್ಯವಾಚಕಭಾವ ಸಂಬಂಧವಾದರೂ ಅವಾಚ್ಯತ್ವಶಂಕಾನಿರಾಕರಣಮಾಡದೆ ಸರ್ವಥಾ ಕೂಡಲಾರದು. ಆದುದರಿಂದ ಪ್ರಥಮದಲ್ಲಿ ವಾಚ್ಯತ್ವವನ್ನೇ ಸಮರ್ಥಿಸಬೇಕು ॥ ೧೩೯ ॥ ॥ ೧೪೦ ॥ ೧೪೧ ॥

(1) ಪುನಃ ಮಾಯಾವಾದಿಗಳು ಶಂಕಿಸುವರು. ಲಕ್ಷಣಾಪಕ್ಷದಲ್ಲಿ ಸಮೀಚೀನ ಅನ್ವಯರೂಪವಾದ ಸಮನ್ವಯವು ಕೂಡುತ್ತದೆ. ಸಮೀಚೀನತ್ವವೆಂದರೆ— ತಾತ್ಪರ್ಯವತ್ತ್ವವು. ಇಂತಹ ಸಮೀಚೀನತ್ವವು ಲಾಕ್ಷಣಿಕವಾದ ಅರ್ಥದಲ್ಲಿಯೂ ಶಬ್ದಗಳಿಗೆ ಕೂಡುತ್ತದೆ. ಆದಕಾರಣ ಸಮನ್ವಯಸಿದ್ಧಿಗಾಗಿ ವಾಚ್ಯತ್ವವನ್ನು ಸಮರ್ಥಿಸಬೇಕಾಗಿಲ್ಲ, ಎಂದರೆ— ಹಾಗೆ ಹೇಳಕೂಡದು. ಸಂಶಬ್ದಕ್ಕೆ ತಾತ್ಪರ್ಯವತ್ತ್ವರೂಪ ಸಮೀಚೀನತ್ವವೆಂಬುವ ಅರ್ಥಾಂತರವನ್ನು ಇಟ್ಟುಕೊಂಡಾದರೂ ನಿಕೃಷ್ಟವಾದ ಲಕ್ಷಣಾವೃತ್ತಿಯಿಂದ ಸಮನ್ವಯವನ್ನು ಆಶ್ರಯಿಸಬೇಕೆನ್ನುವ ನಿರ್ಬಂಧಕ್ಕೆ ಕಾರಣವಿಲ್ಲ. (2) ಹಾಗಾದರೆ ನಿರ್ಬಂಧಕ್ಕೆ ಕಾರಣವಿಲ್ಲವೆಂದು ಹೇಳಕೂಡದು. ಕಾರಣವಿದೆ— 'ತತ್ತು ಸಮನ್ವಯಾತ್' ಎನ್ನುವುದರಿಂದ ಸೂತ್ರಕಾರರು ನಿರ್ಗುಣ

ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಜ್ಞಾಮಾಡಿರುವರು. ಆ ನಿರ್ಗುಣಬ್ರಹ್ಮನಲ್ಲಿ ಶಬ್ದಗಳಿಗೆ ಶಕ್ತಿವೃತ್ತಿಯೂ ಕೂಡಲಾರದು. ಆ ಮುಖ್ಯವೃತ್ತಿಯೂ ದ್ರವ್ಯಾದಿ ಸಂಬಂಧ ನಿಮಿತ್ತಕವು. ನಿರ್ಗುಣನಲ್ಲಿ ದ್ರವ್ಯಾದಿ ಸಂಬಂಧವಿರುವುದಿಲ್ಲ ಆದಕಾರಣ ಸೂತ್ರಕಾರರು ಲಕ್ಷಣಾವೃತ್ತಿಯನ್ನು ಆಶ್ರಯಿಸಿದ್ದಾರೆಂದು ತಿಳಿಯುತ್ತದೆ. ಲಕ್ಷಣಾವೃತ್ತಿಯೆಂದು ನಿಶ್ಚಿತವಾದಮೇಲೆ ಸಮನ್ವಯಾತ್ ಎನ್ನುವಲ್ಲಿದ್ದ ಸಂಶಬ್ದಕ್ಕೂ ಹಿಂದೆಹೇಳಿದ ಅರ್ಥವೆಂದೇ ನಿಶ್ಚಿತವಾಗುತ್ತದೆ, ಎಂದರೆ- ನಿರ್ಗುಣನಲ್ಲಿ ಸಮನ್ವಯವು ಪ್ರತಿಜ್ಞಾತವಾಗಿದ್ದರೆ ಹೀಗೂ ಆಗಬಹುದಿತ್ತು. ನಿರ್ಗುಣನಲ್ಲಿ ಸಮನ್ವಯವನ್ನು ಪ್ರತಿಜ್ಞಾಮಾಡಲೇ ಇಲ್ಲ ಹೇಗೆಂದರೆ— (೧) ನಿರ್ಗುಣನು ಪೂರ್ವದಲ್ಲಿ ಪ್ರಕೃತನಾದುದರಿಂದ 'ತತ್ತು ಸಮನ್ವಯಾತ್' ಎನ್ನುವ ಸೂತ್ರದಲ್ಲಿ 'ತತ್' ಎನ್ನುವ ಶಬ್ದದಿಂದ ನಿರ್ಗುಣನಿಗೆ ಪರಾಮರ್ಶವೆಂದಂಗೀಕರಿಸಲ್ಪಡುತ್ತದೋ? (೨) ಅಥವಾ ಸಗುಣನು ಪ್ರಸ್ತುತನಾದಾಗ್ಯೂ ಸಗುಣನಿಗೆ ಪರಾಮರ್ಶವು ಕೂಡದಿರುವುದರಿಂದ ಜಹದಜಹಲ್ಲಕ್ಷಣಾವೃತ್ತಿಯಿಂದ ನಿರ್ಗುಣನಿಗೆ ಪರಾಮರ್ಶವೆಂದು ಅಂಗೀಕರಿಸಲ್ಪಡುತ್ತದೋ? ಇವುಗಳಲ್ಲಿ ಒಂದನೇದ್ದನ್ನೂ ಎರಡನೇದ್ದನ್ನೂ ಯಥಾಕ್ರಮವಾಗಿ ದೂಷಿಸುತ್ತಾರೆ—

ಮೂ ॥ ಜನ್ಮಾದಿಕಾರಣೇ ಸಾಕ್ಷಾದಾಹ ದೇವಃ ಸಮನ್ವಯಂ ॥ ೧೪೨ ॥
ಉಕ್ತಂ ತದೇವ ಜಿಜ್ಞಾಸ್ಯಂ ಕ್ವಾವಕಾಶೋಽತ್ರ ನಿರ್ಗುಣೇ ।
ಕಥಂ ಚಾಸಂಭವಸ್ತಸ್ಯ ಮುಖ್ಯಾರ್ಥಸ್ಯ ನಿರಾಕೃತೌ ॥ ೧೪೩ ॥

ಅ ॥ (೧) ದೇವಃ=ಸೂತ್ರಕಾರರು, ಸಾಕ್ಷಾತ್=ಮುಖ್ಯವಾಗಿ, ಜನ್ಮಾದಿಕಾರಣೇ= ಜಗಜ್ಜನ್ಮಾದಿಕಾರಣೀಭೂತನಾದ ಶ್ರೀನಾರಾಯಣನಲ್ಲಿಯೇ, ಸಾಕ್ಷಾತ್=ಮುಖ್ಯವಾಗಿ, ಸಮನ್ವಯಂ=ಮುಖ್ಯವೃತ್ತಿಯನ್ನೇ, ಆಹ=ಹೇಳಿರುವರು. ತದೇವ=ನಾರಾಯಣಾಖ್ಯಪರಬ್ರಹ್ಮನೇ, ಜಿಜ್ಞಾಸ್ಯಂ=ವಿಚಾರ್ಯನೆಂದು, ಉಕ್ತಂ=ಹೇಳಲ್ಪಟ್ಟಿದ್ದಾನೆ— ಅತ್ರ =ಈ'ತತ್ತು ಸಮನ್ವಯಾತ್' ಎನ್ನುವ ಸೂತ್ರದಲ್ಲಿ, ನಿರ್ಗುಣೇ=ನಿರ್ಗುಣಬ್ರಹ್ಮನಲ್ಲಿ, ಸಮನ್ವಯಸ್ಯ=ಸಮನ್ವಯಕ್ಕೆ, ಅವಕಾಶಃ=ಪ್ರಸಂಗವು, ಕ್ವ=ಎಲ್ಲಿ, (ಏಕೆಂದರೆ— ಯಾವ ಕಾರಣದಿಂದ,) ಅತ್ರ=ಈ ಅತೀತಗಳಾದ ಮೂರು ಸೂತ್ರಗಳಲ್ಲಿ, ನಿರ್ಗುಣೇ=ನಿರ್ಗುಣವಿಷಯದಲ್ಲಿ, (ನಿರ್ಗುಣನಿಗೆ) ಅವಕಾಶಃ = ಪ್ರಸಂಗವು, ಕ್ವ=ಎಲ್ಲಿದೆ.

(೨) ತಸ್ಯ=ಹಿಂದಿನ ಮೂರು ಸೂತ್ರಗಳಲ್ಲಿ ಪ್ರಕೃತವಾದ, ಮುಖ್ಯಾರ್ಥಸ್ಯ=ವಾಚ್ಯಾರ್ಥವನ್ನು, ನಿರಾಕೃತೌ=ನಿರಾಕರಿಸುವ ವಿಷಯದಲ್ಲಿ ಅಂದರೆ— ಸಮನ್ವಯವಿಷಯವಾಗಿ ಬಿಡುವ ವಿಷಯದಲ್ಲಿ, ಅಸಂಭವಃ=ಅನುಪಪತ್ತಿಯೂ, ಕಥಂ ಚ=ಹೇಗೆ ಬರುವುದು.

ತಾ॥ ನ್ಯಾಯಸುಧಾ—(1) 'ತತ್ತು ಸಮನ್ವಯಾತ್' ಎನ್ನುವ ಸೂತ್ರದಲ್ಲಿ, ನಿರ್ಗುಣನಲ್ಲಿ ಸಮನ್ವಯಕ್ಕೆ ಪ್ರಸಂಗವೇ ಇರುವುದಿಲ್ಲ. ಏಕೆಂದರೆ— ಅತೀತಗಳಾದ ಮೂರು ಸೂತ್ರಗಳಲ್ಲಿ ನಿರ್ಗುಣನಿಗೆ ಪ್ರಸಂಗವೇ ಇಲ್ಲ. ಹೇಗೆಂದರೆ— 'ಜನ್ಮಾದ್ಯಸ್ಯಯತಃ' ಎನ್ನುವ ಲಕ್ಷಣಸೂತ್ರದಲ್ಲಿ ಜಗಜ್ಜನ್ಮಾದಿಕಾರಣನೆಂದು ಲಕ್ಷಿತನಾದ ಬ್ರಹ್ಮನಲ್ಲಿ 'ಶಾಸ್ತ್ರಯೋನಿತ್ವಾತ್' ಎನ್ನುವ ೩ನೇ ಸೂತ್ರದಿಂದ ಶಾಸ್ತ್ರವು ಪ್ರಮಾಣವೆಂದು ಹೇಳಿ ಆ ಶಾಸ್ತ್ರಕ್ಕೆ ಸೂತ್ರಕಾರರು 'ತತ್ತು ಸಮನ್ವಯಾತ್' ಎನ್ನುವ ೪ನೇ ಸೂತ್ರದಿಂದ ಸಮನ್ವಯವನ್ನು ಹೇಳಿರುವರು. ಜಗಜ್ಜನ್ಮಾದಿಕಾರಣತ್ವರೂಪಗುಣಸಂಬಂಧವು ಇದ್ದಪ್ರಯುಕ್ತ ಆ ಬ್ರಹ್ಮನು ನಿರ್ಗುಣನಲ್ಲ. (2) ಹಾಗಾದರೆ ಜನ್ಮಾದಿಕಾರಣತ್ವವು ತಟಸ್ಥವಾಗಿಯೇ (ಬ್ರಹ್ಮಾಶ್ರಿತವಾದ ಮಾಯೆಯಲ್ಲಿರತಕ್ಕದಾಗಿಯೇ) ಬ್ರಹ್ಮನಿಗ

ಲಕ್ಷಣವೆನ್ನುತ್ತೇವೆ. ಆದಕಾರಣ ಲಕ್ಷಣಸೂತ್ರದಲ್ಲಿ ಪ್ರಕೃತನಾದವನು ನಿರ್ಗುಣನೇ ಎಂದರೆ— ಹಾಗೆ ಹೇಳಕೂಡದು. ಜನ್ಮಾದಿಕಾರಣತ್ವವು ಸ್ವರೂಪಲಕ್ಷಣವೇ ಎಂದು ಜನ್ಮಾಧಿಕರಣದಲ್ಲಿ ನಿರೂಪಿಸಿರುವೆವು. (3) ಹಾಗೂದರೆ— ಲಕ್ಷಣಸೂತ್ರದಲ್ಲಿ ನಿರ್ಗುಣನು ಪ್ರಕೃತನಾಗುವುದು ಬೇಡ. ಪ್ರಥಮ ಸೂತ್ರದಲ್ಲಿ ಜಿಜ್ಞಾಸ್ಯನೆಂದು ಹೇಳಲ್ಪಟ್ಟವನು ನಿರ್ಗುಣನೇ. ಅವನಿಗೆ ಯಾವ ಧರ್ಮವೂ ಶ್ರುತವಾಗಲಿಲ್ಲವೆಂದು ಹೇಳಕೂಡದು. ಏಕೆಂದರೆ— ಜನ್ಮಾದಿ ಸೂತ್ರದಲ್ಲಿ ಜನ್ಮಾದಿ ಕಾರಣನೆಂದು ಲಕ್ಷಣ ಹೇಳಿಸಿಕೊಳ್ಳಲ್ಪಡಲಿಕ್ಕೆ ಇಷ್ಟನಾದಬ್ರಹ್ಮನೇ ಜಿಜ್ಞಾಸ್ಯನೆಂದು ೧ನೇ ಸೂತ್ರ ದಲ್ಲಿ ಹೇಳಲ್ಪಟ್ಟಿದ್ದಾನೆ. ಒಬ್ಬನನ್ನು ಜಿಜ್ಞಾಸಾವಾಡಬೇಕೆಂದು ಪ್ರತಿಜ್ಞಾಮಾಡಿ ಮತ್ತೊಬ್ಬನಿಗೆ ಲಕ್ಷಣ ಹೇಳುವುದು ಯುಕ್ತವಲ್ಲ. ತಥಾಚ, ೧ನೇ ಪಕ್ಷವು (ನಿರ್ಗುಣನು ಪ್ರಕೃತನಾದುದರಿಂದ 'ತತ್ತು ಸಮನ್ವಯಾತ್' ಎನ್ನುವಲ್ಲಿದ್ದ 'ತತ್' ಶಬ್ದದಿಂದ ನಿರ್ಗುಣನಿಗೆ ಪರಾಮರ್ಶವೆನ್ನುವುದು) ಕೂಡಲಾರದು.

(4) ೨ನೇ ಪಕ್ಷವೂ (ಸಗುಣನು ಪ್ರಕೃತನಾದಾಗ್ಯೂ ಸಗುಣನಿಗೆ ಪರಾಮರ್ಶವು ಕೂಡ ದಿರುವುದರಿಂದ ಜಹದಜಹಲ್ಲಕ್ಷಣಾವೃತ್ತಿಯಿಂದ ನಿರ್ಗುಣನಿಗೆ ಪರಾಮರ್ಶವೆನ್ನುವುದು) ಕೂಡ ಲಾರದು. ಏಕೆಂದರೆ— ಹಿಂದಿನ ಮೂರು ಸೂತ್ರಗಳಲ್ಲಿ ಪ್ರಕೃತವಾದ ಮುಖ್ಯಾರ್ಥವನ್ನು ಬಿಡಬೇಕೆನ್ನುವಲ್ಲಿ ಅನುಪಪತ್ತಿಯು ಇರುವುದಿಲ್ಲ. ಹಿಂದೆ ಹೇಳಿದ ಎರಡು ರೀತಿಯಿಂದಲೂ ನಿರ್ಗುಣನಿಗೆ ತತ್ ಶಬ್ದದಿಂದ ಪರಾಮರ್ಶವು ಕೂಡದಿರುವುದರಿಂದ ನಿರ್ಗುಣನಲ್ಲಿ ಸಮನ್ವಯ ವನ್ನೇ ಪ್ರತಿಜ್ಞಾಮಾಡದಿರುವುದರಿಂದ ಇಲ್ಲಿ ಲಕ್ಷಣಾ (ಅಮುಖ್ಯ) ವೃತ್ತಿಯನ್ನಾಶ್ರಯಿಸಕೂ ಡದು. ಮತ್ತೆ ಪ್ರಥಮತಃ ಪ್ರಾಪ್ತವಾದ ಮುಖ್ಯ ವೃತ್ತಿಯಿಂದಲೇ ಹೇಳಿದ್ದೆಂದು ಹೇಳಬೇಕು. ಆದುದರಿಂದ 'ಸಮನ್ವಯಾತ್' ಎನ್ನುವಲ್ಲಿದ್ದ ಸಂಶಬ್ದದಿಂದಲೂ ಮುಖ್ಯತ್ವರೂಪವಾದ ಸವ್ಯಕ್ತ್ವವನ್ನೇ ಹೇಳಿರುವರು ॥ ೧೪೨ ॥ ೧೪೩ ॥

ಮತ್ತು 'ತತ್' ಶಬ್ದದಿಂದ ನಿರ್ಗುಣನಿಗೆ ಪರಾಮರ್ಶವಾದರೆ, ಆ ನಿರ್ಗುಣನಲ್ಲಿ ಲಕ್ಷಣಾ ವೃತ್ತಿಯೂ ಕೂಡುವುದಿಲ್ಲವಾದಕಾರಣ ಸಮನ್ವಯಸೂತ್ರವೇ ವ್ಯರ್ಥವಾಗುವುದೆಂದು ಹೇಳಲಿಕ್ಕೆ ನಿರ್ಗುಣನಿಗೆ ಅಪ್ರಮೇಯತ್ವವನ್ನು ಸಾಧಿಸುತ್ತಾರೆ—

**ವ.ೂ ॥ ಮಾನೇನ ಕೇನ ವಿಜ್ಞೇಯಮವಾಚ್ಯಾಜ್ಞೇಯನಿರ್ಗುಣಂ ।**
**ಅಮೇಯಂ ಚೇನ್ನ ಶಾಸ್ತ್ರಸ್ಯ ತತ್ರ ವೃತ್ತಿಃ ಕಥಂಚನ ॥ ೧೪೪ ॥**

ಅ ॥ ಅವಾಚ್ಯಾಜ್ಞೇಯನಿರ್ಗುಣಂ=ಅವಾಚ್ಯವೂ (ಹೇಳಲ್ಪಡದಿರುವಿಕೆ) ಅಜ್ಞೇಯವೂ (ತಿಳಿಯಲ್ಪಡದಿರುವಿಕೆಯೂ) ನಿರ್ಗುಣವೂ ಆದ ವಸ್ತುವು, ಕೇನ ಮಾನೇನ=ಯಾವ ಪ್ರಮಾಣ ದಿಂದ, ವಿಜ್ಞೇಯಂ=ತಿಳಿಯಲ್ಪಡಬೇಕು. ಅಮೇಯಂ ಚೇತ್=(ನಿರ್ಗುಣನಾದ ಬ್ರಹ್ಮನು) ತಿಳಿಯಲರ್ಹನಲ್ಲವೆಂದು ಅಂಗೀಕರಿಸಲ್ಪಟ್ಟರೆ, ತತ್ರ=ಆ ಬ್ರಹ್ಮನಲ್ಲಿ, ಶಾಸ್ತ್ರಸ್ಯ=ಶಾಸ್ತ್ರಕ್ಕೆ, ಕಥಂಚನ ವೃತ್ತಿಃ=ಯಾವ ವೃತ್ತಿಯೂ (ಅಂದರೆ ಶಕ್ಯಸಂಬಂಧರೂಪವಾದ ಲಕ್ಷಣಾ ವೃತ್ತಿಯೂ) ಕೂಡ, ನ=ಕೂಡುವುದಿಲ್ಲ.

**ತಾ ॥ ನ್ಯಾಯಸುಧಾ—** (1) ನಿರ್ಗುಣವಾದ ವಸ್ತುವನ್ನು ಯಾವ ಪ್ರಮಾಣ ದಿಂದಲೂ ತಿಳಿಯಲು ಸಾಧ್ಯವಿಲ್ಲ. ಏಕೆಂದರೆ— ಆ ನಿರ್ಗುಣವಾದ ವಸ್ತುವು ಅಜ್ಞೇಯ

ವಾಗಿದೆ. ತಿಳಿಯಲರ್ಹವಾದುದೇ ಪ್ರಮೇಯವು. ಶಬ್ದರೂಪಪ್ರಮಾಣಕ್ಕೆ ವಿಷಯವಾಗದಿರಲಿಕ್ಕೆ ಅವಾಚ್ಯತ್ವವೇ ಹೇತುವು. ವಾಚ್ಯವಾದುದೇ ಶಬ್ದಕ್ಕೆ ವಿಷಯವಾಗುವುದು. ಜ್ಞೇಯತ್ವಾದಿಗಳನ್ನು ಅಂಗೀಕರಿಸಿದರೆ ನಿರ್ಧರ್ಮಕತ್ವರೂಪವಾದ ನಿರ್ಗುಣತ್ವವೇ ಕೂಡಲಾರದು. (2) ನಿರ್ಗುಣನಾದ ಬ್ರಹ್ಮನನ್ನು ಅಮೇಯನೆಂದಂಗೀಕರಿಸಿದರೆ ಆತನಲ್ಲಿ ಶಾಸ್ತ್ರಗಳಿಗೆ ಲಕ್ಷಣಾದಿವೃತ್ತಿಯೂ ಕೂಡಲಾರದು. ಆದವ್ರಯುಕ್ತ ಸಮನ್ವಯ ಸೂತ್ರವು ವ್ಯರ್ಥವೇ ಆಗಬೇಕಾಗುವುದು. ಲಕ್ಷ್ಯಾರ್ಥಜ್ಞಾನವಿದ್ದರೇನೇ ಲಕ್ಷಣಾವೃತ್ತಿಯು ತಿಳಿಯುವುದು. ಹೇಗೆಂದರೆ— ಗಂಗಾಯಾಂ ಘೋಷಃ=ಭಾಗೀರಥೀತೀರದಲ್ಲಿ ಗೊಗೆಯರ ಮನೆಯು, ಎನ್ನುವಲ್ಲಿ ತೀರವನ್ನು ಸ್ವರೂಪದಿಂದಲೂ ಗಂಗಾಸಂಬಂಧಿಯೆಂದೂ ಪ್ರಮಾಣಗಳಿಂದ ತಿಳಿಯದಿದ್ದರೆ ಗಂಗಾಶಬ್ದದಿಂದ ತಿಳಿಸಲು ಸಾಧ್ಯವಿಲ್ಲ. ಲಾಕ್ಷಣಿಕವಾದ ಶಬ್ದವೂ ಲಕ್ಷ್ಯಾರ್ಥಜ್ಞಾನವನ್ನು ಹುಟ್ಟಿಸಲಿಕ್ಕೆ 'ಗಂಗಾಯಾಂ ಘೋಷಃ' ಎನ್ನುವಲ್ಲಿದ್ದ ಗಂಗಾಶಬ್ದವು ಗಂಗಾಶಬ್ದದ ಮುಖ್ಯಾರ್ಥವಾದ ಪ್ರವಾಹದಿಂದ ಸಂಬದ್ಧವಾದ ತೀರರೂಪವಾದ ಲಕ್ಷ್ಯಾರ್ಥವನ್ನು ತಿಳಿಸುವುದಕ್ಕಾಗಿ ಪ್ರಯುಕ್ತವಾಗುತ್ತದೆ. ಅಂತೂ ಅಪ್ರಮೇಯವಾದರೆ ಅದರಲ್ಲಿ ಹೇತುವೂ ಪ್ರಯೋಜನವೂ ಇಲ್ಲದಿರುವುದರಿಂದ ಲಕ್ಷಣಾವೃತ್ತಿಯೂ ಕೂಡಲಾರದು ॥ ೧೪೪ ॥

ನಿರ್ಗುಣನಲ್ಲಿ ಸಮನ್ವಯವನ್ನು ನಿರಾಕರಿಸಿ ಸಗುಣನೇ ಶಾಸ್ತ್ರಪ್ರತಿಪಾದ್ಯನೆಂದು ಉಪಸಂಹಾರ ಮಾಡುತ್ತಾರೆ.—

**ಮೂ ॥ ತಸ್ಮಾಚ್ಛಾಸ್ತ್ರೇಣ ಜಿಜ್ಞಾಸ್ಯಮಸ್ಮದೀಯಂ ಗುಣಾರ್ಣವಂ ।**
**ವಾಸುದೇವಾಖ್ಯಮದ್ವಂದ್ವಂ ಪರಂ ಬ್ರಹ್ಮಾಖಿಲೋತ್ತಮಂ ॥ ೧೪೫ ॥**

ಅ ॥ ತಸ್ಮಾತ್=ನಿರ್ಗುಣನಲ್ಲಿ ಸಮನ್ವಯವು ಕೂಡದಿರುವುದರಿಂದ, ಅಸ್ಮದೀಯಂ= ನಮಗೆ ಸಮ್ಮತನಾದ, ಗುಣಾರ್ಣವಂ=ಗುಣಗಳಿಂದ ಸಮುದ್ರದಂತಿರುವವನೂ (ಗುಣಪರಿಪೂರ್ಣನೂ), ಅದ್ವಂದ್ವಂ=ಅಸದೃಶನೂ, (ಸಮಾಧಿಕರಹಿತನೂ) ಅಖಿಲೋತ್ತಮಂ= ಬ್ರಹ್ಮರುದ್ರಾದಿದೇವತೆಗಳಿಂದ ಉತ್ತಮನೂ ಆದ, ವಾಸುದೇವಾಖ್ಯಂ=ವಾಸುದೇವನೆನಿಸಿಕೊಂಡ, ಪರಂಬ್ರಹ್ಮ=ಪರಬ್ರಹ್ಮನು, ಶಾಸ್ತ್ರೇಣ=ಬ್ರಹ್ಮಮೀಮಾಂಸಾಶಾಸ್ತ್ರದಿಂದ, ಜಿಜ್ಞಾಸ್ಯಂ= ವಿಚಾರ್ಯನೆಂದು ಅಂಗೀಕರಿಸತಕ್ಕದು.

ತಾ ॥ **ನ್ಯಾಯಸುಧಾ**— (1) ಮೊದಲು ವಿಷ್ಣುವಿನ ಜಿಜ್ಞಾಸಾಮಾಡಬೇಕೆಂದು ಹೇಳಿಯದೆ. ಈಗ ಸಗುಣಬ್ರಹ್ಮನ ಜಿಜ್ಞಾಸಾಮಾಡಬೇಕೆಂದು ಹೇಳಿರುವುದರಿಂದ ವಿರೋಧವೆಂದರೆ, ವಾಸುದೇವಾಖ್ಯಂ=ಸಗುಣಬ್ರಹ್ಮನು ವಾಸುದೇವನು. ಆತನೇ ವಿಷ್ಣುವು. (2) ಆದಾಗ್ಯೂ ಮೊದಲು ಗೌಣಶ್ಚೇತ್ ಇತ್ಯಾದಿಗಳಲ್ಲಿ ಸಗುಣನಿಗೆ ಹೇಯತ್ವಾದಿಗಳನ್ನು ಹೇಳಿ ಈಗ ಜಿಜ್ಞಾಸ್ಯತ್ವವನ್ನು ಹೇಳಿರುವುದರಿಂದ ವಿರೋಧವೆಂದರೆ— 'ಗುಣಾರ್ಣವಂ' ಅಂದರೆ, ಮೊದಲು ಅನಿರ್ವಚನೀಯ ಅವಿದ್ಯಾವಿಶಿಷ್ಟನಾದ ಸಗುಣನು ಅಪ್ರಾಮಾಣಿಕನೆಂದೂ, ಪ್ರಾಕೃತಸತ್ವಾದಿಗುಣವಿಶಿಷ್ಟನು ಹೇಯನೆಂದೂ ಹೇಳಿದ್ದಾಗಿರುತ್ತದೆ. ಈಗಲಾದರೂ ಜ್ಞಾನ ಆನಂದ ಮೊದಲಾದ ಅನಂತಾನಂತ ಗುಣಗಳಿದ್ದುದರಿಂದ ಸಗುಣನಾದ ಪರಬ್ರಹ್ಮನು ಉಪಾದೇಯನೆಂದು ಹೇಳಿರುವುದರಿಂದ (ಅಂದರೆ, ಹಿಂದೆ ಹೇಳಿದ ಸಗುಣನು ಜೀವನು. ಈಗ ಜಿಜ್ಞಾಸ್ಯನಾಗಿ ಹೇಳಲ್ಪಟ್ಟ ಗುಣಪೂರ್ಣನು ಬ್ರಹ್ಮನಾಗಿರುವುದರಿಂದ) ವಿರೋಧವಿಲ್ಲ. (3) ಹಾಗಾದರೆ 'ಏಕಮೇವಾದ್ವಿತೀಯಂ' ಎನ್ನುವ ಶ್ರುತಿಯು ಬ್ರಹ್ಮನು ನಿರ್ಗುಣನೆಂದು ಹೇಳುತ್ತದೆ. ಆದಕಾರಣ

ಗುಣಾರ್ಣವನು ಹೇಗೆಂದರೆ— ಅದ್ವಂದ್ವಂ ಅಖಿಲೋತ್ತಮಂ=ಸಮಾಧಿಕರಹಿತನೂ ಸರ್ವೋತ್ತಮನೂ ಆಗಿರುತ್ತಾನೆ ಅಂದರೆ, 'ಏಕಂ' ಎನ್ನುವುದಕ್ಕೆ ಸರ್ವೋತ್ತಮನೆಂದರ್ಥವು. 'ಅದ್ವಿತೀಯಂ' ಎನ್ನುವುದಕ್ಕೆ ಅಸದೃಶನೆಂದರ್ಥವು. ಆದುದರಿಂದ ಆ ಶ್ರುತಿಯು ಬ್ರಹ್ಮನಿಗೆ ನಿರ್ಗುಣತ್ವವನ್ನು ಹೇಳುವುದಿಲ್ಲ ॥ ೧೪೫ ॥

ನಿರ್ಗುಣನಲ್ಲಿ ಶಾಸ್ತ್ರಸಮನ್ವಯವು ಕೂಡುವುದಿಲ್ಲವೆಂದುಮಾತ್ರವಲ್ಲ. ಮತ್ತೆ ಅಂತಹ ನಿರ್ಗುಣವಸ್ತುವು ಇರುತ್ತದೆ ಎನ್ನುವುದೇ ಕೂಡುವುದಿಲ್ಲವೆನ್ನುತ್ತಾರೆ.

**ಮೂ ॥ ವಿಜ್ಞೇಯ ವಾಚ್ಯಲಕ್ಷ್ಯತ್ವ ಪೂರ್ವಾಶೇಷವಿಶೇಷತಃ ।**
**ನಿರ್ಗತಂ ಮನಸೋ ವಾಚೋ ಯದಿ ತತ್ಸ್ಯಾದಗೋಚರಂ ।**
**ಅಸ್ತು ತನ್ನಾಮ ವದೇದ್ವಾದೀ ನ ಚಾಸ್ಮಚ್ಛಾಸ್ತ್ರಗಂ ತು ತತ್ ॥ ೧೪೬ ॥**

ಅ ॥ ವಿಜ್ಞೇಯವಾಚ್ಯಲಕ್ಷ್ಯತ್ವಪೂರ್ವಾಶೇಷವಿಶೇಷತಃ = ವಿಜ್ಞೇಯತ್ವ (ತಿಳಿಯಲ್ಪಡುವಿಕೆ,) ವಾಚ್ಯತ್ವ (ಹೇಳಲ್ಪಡುವಿಕೆ,) ಲಕ್ಷ್ಯತ್ವ (ಲಕ್ಷಿಸಲ್ಪಡುವಿಕೆ,) ಮೊದಲಾದ ಎಲ್ಲಾ ವಿಶೇಷಗಳಿಂದ, ನಿರ್ಗತಂ=ಹೊರಟು ಹೋಗುವುದು, ಮನಸಃ=ಮನಸ್ಸಿಗೂ, ವಾಚಃ=ವಚನಕ್ಕೂ, ಅಗೋಚರಂ=ವಿಷಯವಾಗದಿರುವುದು, ಅಂದರೆ, ಶಶವಿಷಾಣದಂತೆ ಎಲ್ಲಾ ಪ್ರಮಾಣಗಳಿಗೂ ಅವಿಷಯವಾದುದು, ಇಂತಹ ತತ್ = ನಿರ್ಗುಣಬ್ರಹ್ಮವು, ನ ಚ = ಇಲ್ಲವೇ ಇಲ್ಲ. (ಸರ್ವಪ್ರಮಾಣಗಳಿಗೆ ಅವಿಷಯನಾದಾಗ್ಯೂ ನಿರ್ಗುಣನು ಸ್ವಪ್ರಕಾಶನಾಗಿ ಸಿದ್ಧಿಸುವನೆಂದರೆ—) ಯದಿ ತತ್ ಸ್ಯಾತ್ = ಹೀಗಾದಾಗ್ಯೂ ಸ್ವಪ್ರಕಾಶನಾಗಿ ಆ ಬ್ರಹ್ಮನು ಸಿದ್ಧಿಸಿದರೆ, ಅಸ್ತು= ಆಗಲಿ. (ಆದರೆ ಸಮನ್ವಯವಿಷಯನೆಂದು ಹೇಳಕೂಡದು. ಏಕೆಂದರೆ) ತತ್=ಆ ಬ್ರಹ್ಮನು, ಅಸ್ಮಚ್ಛಾಸ್ತ್ರಗಂ ತು=ನಮ್ಮ ವೇದಾದಿಗಳಿಗೆ ವಿಷಯನಾದರೂ, ನ ಚ=ಆಗುವುದಿಲ್ಲ. ತತ್= ಅಂತಹ ನಿರ್ಗುಣಬ್ರಹ್ಮನನ್ನು, ವಾದೀ=ವಾದಿಯು, ಮಾ ವದೇತ್=ಹೇಳಬಾರದು.

ತಾ ॥ (1) ಸರ್ವಪ್ರಮಾಣಗಳಿಗೆ ಅವಿಷಯನು ಹೇಗೆಂದರೆ— ವಿಜ್ಞೇಯನಾಗದಿರುವುದರಿಂದ ಯಾವ ಪ್ರಮಾಣಕ್ಕೂ ವಿಷಯನಲ್ಲ. ವಾಚ್ಯತ್ವ, ಲಕ್ಷ್ಯತ್ವ, ಸದೃಶ ಗುಣಸಂಬಂಧ— ಇವು ಮೂರೂ ಇಲ್ಲದಿರುವುದರಿಂದ ಶಾಬ್ದ ಪ್ರಮಾಣಕ್ಕೆ ವಿಷಯನಲ್ಲ. ರೂಪಾದಿಗಳು ಇಲ್ಲದಿರುವುದರಿಂದ ಪ್ರತ್ಯಕ್ಷವಿಷಯನೂ ಆಗಲಾರನು. ಲಿಂಗಸಂಬಂಧವಿಲ್ಲದಿರುವುದರಿಂದ ಅನುಮೇಯನೂ ಆಗಲಾರನು. (2) ನಿರ್ಗುಣನು ಪ್ರಮಾಣಗಳಿಗೆ ಅವಿಷಯನಾದಾಗ್ಯೂ ಸ್ವಪ್ರಕಾಶನಾಗಿ ಸಿದ್ಧಿಸುವನೆಂದರೆ— ಸ್ವಪ್ರಕಾಶನಾಗಿ ಸಿದ್ಧನಾದಾಗ್ಯೂ ಸಮನ್ವಯವಿಷಯನೆಂದು ಹೇಳಕೂಡದು. ಏಕೆಂದರೆ, ಆ ಬ್ರಹ್ಮನು ವೇದಾದಿಗಳಿಗೆ ವಿಷಯನಲ್ಲ. ವೇದಾದಿಗಳಿಗೆ ವಿಷಯನಾದರೆ ಸ್ವಪ್ರಕಾಶನಾಗದೆ ಹೋಗಬೇಕಾಗುವನು. ಸ್ವಪ್ರಕಾಶನೆಂದರೆ ಪ್ರಕಾಶಾಂತರವ್ಯಾವೃತ್ತಿಯೇ ಅಂದರೆ, ಸ್ವಸ್ವರೂಪವ್ಯತಿರಿಕ್ತವಾದ ಜ್ಞಾನಕ್ಕೆ ಅವಿಷಯನು ಎಂದು ಮಾಯಾವಾದಿಗಳಿಗೆ ಅಭಿಪ್ರೇತವಾಗಿದೆ ॥ ೧೪೬ ॥

ಹಾಗಾದರೆ, ಬ್ರಹ್ಮನು ಸ್ವಪ್ರಕಾಶನಾದಾಗ್ಯೂ ಆತನು ಶಾಸ್ತ್ರಕ್ಕೆ ವಿಷಯನೆನ್ನುವುದು ವಿರುದ್ಧವಲ್ಲ. ಏಕೆಂದರೆ— ೧ ವಚನದಿಂದುಂಟಾಗತಕ್ಕ ಸ್ಫುರಣಕ್ಕೆ ಆಶ್ರಯವಾದದ್ದು. ೨ ವಚನದಿಂದುಂಟಾಗತಕ್ಕ ಸ್ಫುರಣಕ್ಕೆ ಕರ್ಮವಾದದ್ದು. ೩ ವಚನದಿಂದುಂಟಾಗತಕ್ಕ ವೃತ್ತಿವಿಷಯವಾದದ್ದು— ಹೀಗೆ ಮೂರು ಪ್ರಕಾರ ವಚನವಿಷಯತ್ವವಿರುವುದು. ಅವುಗಳಲ್ಲಿ ವಚನದಿಂದುಂಟಾ

ಗತಕ್ಕ ಸ್ಫುರಣಾಶ್ರಯತ್ವದಿಂದಾಗಲೀ, ಸ್ಫುರಣಕರ್ಮತ್ವದಿಂದಾಗಲೀ ವಚನವಿಷಯತ್ವವಿಲ್ಲದಿರುವುದರಿಂದ ಸ್ವಪ್ರಕಾಶತ್ವವು ಕೂಡಬಹುದು. ವಚನಜನ್ಯವೃತ್ತಿವಿಷಯತ್ವವಿರುವುದರಿಂದ ಶಾಸ್ತ್ರವಿಷಯತ್ವವೂ ಕೂಡಬಹುದು. ಆದಕಾರಣ ಯಾವ ದೋಷವೂ ಇಲ್ಲ, ಹೀಗೆ ವ್ಯವಸ್ಥೆಯು ಕೂಡಬಹುದು ಎಂದು ಮಾಯಾವಾದಿಗಳು ಹೇಳುವರು. ಅದಯುಕ್ತವು. ಏಕೆಂದರೆ— ಸ್ಫುರಣವೆಂದರೆ ೧ ಜ್ಞಾತತೆಯೆನ್ನಕೂಡದು. ಜ್ಞಾತತಾಸ್ವರೂಪವನ್ನೇ ನಿರಾಕರಿಸುವೆವು. ೨ ಜ್ಞಾನವೆಂದರೆ ಜ್ಞಾನಾಶ್ರಯವಾಗಿ ವಿಷಯತ್ವವು ಎಲ್ಲಿಯೂ ಇಲ್ಲ ಅಂದರೆ— ವಚನಜನ್ಯಜ್ಞಾನಾಶ್ರಯತ್ವವಿಲ್ಲದಿರುವುದರಿಂದ ವಚನವಿಷಯತ್ವಾಭಾವರೂಪವಾದ ಸ್ವಪ್ರಕಾಶತ್ವವು ಘಟಾದಿಗಳಲ್ಲಿಯೂ ಇದ್ದಪ್ರಯುಕ್ತ ಅತಿವ್ಯಾಪ್ತಿಯು. ಆದಪ್ರಯುಕ್ತ ಸ್ಫುರಣವೆಂದರೆ ಕರ್ಮತ್ವವೆಂದೇ ಹೇಳಬೇಕು. ಜ್ಞಾನಕರ್ಮತ್ವವೆಂದರೂ ಜ್ಞಾನವಿಷಯತ್ವವೆಂದರೂ ಒಂದೇ. ಅಂತೂ ವಚನದಿಂದುಂಟಾಗತಕ್ಕ ಜ್ಞಾನಕ್ಕೆ ಅವಿಷಯವಾದದ್ದೆಂದುಕ್ತವಾಯಿತು. ೩ ವಚನಜನ್ಯವೃತ್ತಿವ್ಯಾಪ್ಯವಾಗಿ ಶಾಸ್ತ್ರವಿಷಯತ್ವವೆನ್ನುವ ಕಲ್ಪದಲ್ಲಿ ವೃತ್ತಿಯೆಂದರೆ— ಜ್ಞಾನವೋ, ಜ್ಞಾನಾತಿರಿಕ್ತವೋ, ಪ್ರಮಾಣವೇ ಇಲ್ಲದಿರುವುದರಿಂದ ಜ್ಞಾನಾತಿರಿಕ್ತವೆನ್ನಕೂಡದು. ಜ್ಞಾನವೆನ್ನುವ ಕಲ್ಪದಲ್ಲಿ ವಿಷಯತ್ವದಿಂದ ಬೇರೆಯಾದ ವ್ಯಾಪ್ಯತ್ವವನ್ನು ಹೇಳಲು ಸಾಧ್ಯವಿಲ್ಲದಿರುವುದರಿಂದ ವಚನಜನ್ಯಜ್ಞಾನವಿಷಯತ್ವವನ್ನೇ ಹೇಳಿದಂತಾಯಿತು ತಥಾಚ, ವಚನಜನ್ಯಜ್ಞಾನಕ್ಕೆ ಅವಿಷಯವಾಗಿ ಸ್ವಪ್ರಕಾಶತ್ವವು, ವಚನಜನ್ಯಜ್ಞಾನಕ್ಕೆ ವಿಷಯವಾಗಿ ವಚನವಿಷಯತ್ವವು ಎನ್ನುವುದು ವ್ಯಾಹತವಾಗಿರುವುದರಿಂದ ಸ್ವಪ್ರಕಾಶತ್ವ ಶಾಸ್ತ್ರವಿಷಯತ್ವಗಳಲ್ಲಿ ಯಾವುದೊಂದೂ ಸಿದ್ಧಿಸುವುದಿಲ್ಲವೆನ್ನುತ್ತಾರೆ—

**ಮೂ॥ ಅವಾಚ್ಯಂ ವಾಚ್ಯಮಿತ್ಯುಕ್ತ್ವಾ ಕಿಮಿತ್ಯುನ್ಮತ್ತವನ್ಮೃಷಾ ।**
**ಅಸ್ಮಚ್ಛಾಸ್ತ್ರಸ್ಯ ಚೌರ್ಯಾಯ ಯತತೇ ಸ್ವೋಕ್ತಿದೂಷಕಃ ॥ ೧೪೭ ॥**

ಅ॥ ಅವಾಚ್ಯಮಿತಿ ಉಕ್ತ್ವಾ=ವಚನದಿಂದುಂಟಾಗತಕ್ಕ ಜ್ಞಾನಕ್ಕೆ ಅವಿಷಯವಾದದ್ದೆಂದು ಹೇಳಿ ಪುನಃ, ವಾಚ್ಯಂ ಇತಿ=ವಚನಜನ್ಯಜ್ಞಾನವಿಷಯವಾಗುತ್ತದೆಂದು, ಉನ್ಮತ್ತವತ್=ಹುಚ್ಚುಹಿಡಿದವನಂತೆ, ಸ್ವೋಕ್ತಿದೂಷಕಃ=ತನ್ನ ಮಾತನ್ನೇ ದೂಷಿಸುವವನು. (ವ್ಯಾಹತಭಾಷಿಯು ಆಗುತ್ತಾನೆ.) ಕಿಮಿತಿ=ಏಕೆಂದರೆ— ಮೃಷಾ=ವ್ಯರ್ಥವಾಗಿಯೇ, ಅಸ್ಮಚ್ಛಾಸ್ತ್ರಸ್ಯ=ನಮ್ಮ ಶಾಸ್ತ್ರಗಳಾದ ಋಗಾದಿ ವೇದಗಳನ್ನು, ಚೌರ್ಯಾಯ = ನಿರ್ಗುಣವಿಷಯವಾಗಿ ಯೋಜಿಸಲಿಕ್ಕೆ, ಯತತೇ = ಪ್ರಯತ್ನಮಾಡುತ್ತಾನೆ. (ಹುಚ್ಚುಹಿಡಿದವನಿಗೂ, ಕಳ್ಳನಿಗೂ ಹೇಗೆ ಯಾವುದೂ ಸಿದ್ಧಿಸುವುದಿಲ್ಲವೋ ಹಾಗೆಯೇ ವ್ಯಾಹತಭಾಷಿಗೂ ಯಾವುದೂ ಸಿದ್ಧಿಸುವುದಿಲ್ಲ) ॥ ೧೪೭ ॥

ಹಾಗಾದರೆ, '**ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ । ಇತಿಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತಿ**' ॥ ಎಂದು ಹೇಳಿದಪ್ರಕಾರ ಶ್ರುತಿಸೂತ್ರಗಳಿಗೆ ಸಮಾನಾರ್ಥಕತ್ವವನ್ನು ಹೇಳಬೇಕು. ಏಕಾರ್ಥತ್ವವಿಲ್ಲದಿದ್ದರೆ, ವೇದಗಳಿಗೆ ಕರಣತ್ವವೂ ಸೂತ್ರ (ಮೀಮಾಂಸಾ ಶಾಸ್ತ್ರ) ಗಳಿಗೆ ಇತಿಕರ್ತವ್ಯತಾಭಾವವೂ ಕೂಡದೆ ಹೋಗುವುದು. ಶ್ರುತಿಗಳೂ ಉಪಕ್ರಮಾದಿಗಳ ವಶದಿಂದ ನಿತ್ಯನೂ, ಶುದ್ಧನೂ, ಜ್ಞಾನರೂಪಿಯೂ, ಅದ್ವಿತೀಯನೂ ಆದ ನಿರ್ಗುಣಬ್ರಹ್ಮನನ್ನೇ ಪ್ರತಿಪಾದಿಸುತ್ತಾ ನಿರವಕಾಶಗಳಾಗಿ ತೋರುತ್ತವೆ. ಆದಪ್ರಯುಕ್ತ ವೇದಾರ್ಥನಿರ್ಣಾಯಕವಾದ ಮೀಮಾಂಸಾ ಶಾಸ್ತ್ರವೂ (ಸೂತ್ರವೂ) ಕೂಡ, ನಿರ್ಗುಣಬ್ರಹ್ಮನನ್ನೇ ಪ್ರತಿಪಾದಿಸುತ್ತದೆ. ತಥಾಚ, ಬೇರೆ ಯಾವ ರೀತಿಯೂ ಕೂಡದಿರುವುದ

ರಿಂದ ಹೇಗಾದರೂ ಶ್ರುತಿ ಸೂತ್ರಗಳಿಗೆ ನಿರ್ಗುಣನೇ ವಿಷಯನೆಂದು ಹೇಳಬೇಕು. ನಿರ್ಗುಣ ವಿಷಯತ್ವವನ್ನೇ ಅಂಗೀಕರಿಸದಿದ್ದರೆ ವಿಷಯವೇ ಇಲ್ಲದಿರುವುದರಿಂದ ಅಪ್ರಾಮಾಣ್ಯವು ಬರಬೇಕಾಗುವುದು, ಎಂದು ಅದ್ವೈತಿಗಳು ಶಂಕಿಸಿದರೆ—

ಮೂ ॥ ಜನ್ಮಾದಿಕಾರಣಂ ಯತ್ತತ್ಸಾಕ್ಷಾನ್ನಾರಾಯಣಾಭಿಧಂ ॥ ೧೪೮ ॥
ವದಂತಿ ಶ್ರುತಯೋ ಬ್ರಹ್ಮ ಶಾಸ್ತ್ರಂ ಚೈತತ್ತದರ್ಥತಃ ॥
ಪ್ರವೃತ್ತಮಸ್ತ್ವವಾಚ್ಯಂ ತೇ ನ್ಯ(ವ್ಯ)ವಂ ಬ್ರೂಯಾಃ ಕಥಂಚನ ॥
॥ ೧೪೯ ॥

ಅ ॥ ಶ್ರುತಯಃ=ಶ್ರುತಿಗಳು, ಯತ್ = ಯಾವನು, ಸಾಕ್ಷಾತ್ = ಮುಖ್ಯವಾಗಿ, ಜನ್ಮಾದಿಕಾರಣಂ=ಉತ್ಪತ್ತ್ಯಾದಿಗಳಿಗೆ ಕಾರಣನೋ, ತತ್=ಆತನನ್ನು, ನಾರಾಯಣಾಭಿಧಂ= (ನರಾಣಾಂ ಇದಂ ನಾರಂ=ಉತ್ಪತ್ತಿ ಮೊದಲಾದುದು, ನಾರಸ್ಯ ಅಯನಂ = ಉತ್ಪತ್ತಿಮೊದಲಾದುದನ್ನು ಕೊಡುವುದರಿಂದ ಆಶ್ರಯನಾದಪ್ರಯುಕ್ತ) ನಾರಾಯಣನೆಂದು ಹೆಸರುಳ್ಳ, ಬ್ರಹ್ಮ=ಬ್ರಹ್ಮನನ್ನು, ವದಂತಿ = ಹೇಳುತ್ತವೆ. ಏತತ್ ಶಾಸ್ತ್ರಂ ಚ=ಈ ಶಾಸ್ತ್ರವಾದರೂ, ತದರ್ಥತಃ = ಬ್ರಹ್ಮನು ಜಗಜ್ಜನ್ಮಾದಿ ಕಾರಣನು ಎಂದು ಪ್ರತಿಪಾದಿಸುವುದಕ್ಕಾಗಿಯೇ, ಪ್ರವೃತ್ತಂ=ಪ್ರವೃತ್ತವಾದದ್ದು, ಅಸ್ತು=ಆಗಲಿ, ತೇ=ನಿನ್ನದಾದ, ಯತ್ ಅವಾಚ್ಯಂ ಬ್ರಹ್ಮ= ಯಾವುದು ಅವಾಚ್ಯವಾದ ಬ್ರಹ್ಮವೋ, ತತ್=ಅದನ್ನು, ಕಥಂಚನ=ಯಾವ ಪ್ರಕಾರದಿಂದಲೂ ಏವಂ=ಶಾಸ್ತ್ರವಿಷಯವಾದುದನ್ನಾಗಲೀ, ನ ಬ್ರೂಯಾಃ=ಹೇಳಲೇ ಬೇಡ. ಅಂದರೆ, ಅವಾಚ್ಯನಾದವನಿಗೆ ಶಾಸ್ತ್ರವಿಷಯತ್ವವನ್ನೇ ಕಲ್ಪಿಸಕೂಡದು.

ತಾ ॥ ನ್ಯಾಯಸುಧಾ— (1) ಶ್ರುತಿಸೂತ್ರಗಳಿಗೆ ವಿಷಯವೇ ಇಲ್ಲವೆಂದಾಗುತ್ತದೆ ಎನ್ನುವ ಹೆದರಿಕೆಯಿಂದ ಅವಾಚ್ಯನಾದ ಬ್ರಹ್ಮನಿಗೂ ಶ್ರುತಿಸೂತ್ರವಿಷಯತ್ವವನ್ನು ಕಲ್ಪಿಸಕೂಡದು. ಶ್ರುತಿಸೂತ್ರಗಳು ಸಗುಣವಿಷಯಕಗಳಾಗಿರುವುದರಿಂದ ಅವುಗಳಿಗೆ ಸವಿಷಯತ್ವವು (ವಿಷಯವುಂಟೆನ್ನುವುದು) ಕೂಡಬಹುದು ಉಪಕ್ರಮಾದಿ ವೈಗುಣ್ಯವಿಲ್ಲವು. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಸ್ಥಳಗಳಲ್ಲಿ, ಸಾಕ್ಷಾತ್ ಜಗಜ್ಜನ್ಮಾದಿಕಾರಣನೆಂದು ಶ್ರೀ ನಾರಾಯಣನನ್ನು ಮುಖ್ಯವಾಗಿ ತಿಳಿಯತಕ್ಕದ್ದು, ಹೀಗೆ ನಾರಾಯಣಶಬ್ದದಿಂದ ಹೇಳಲ್ಪಟ್ಟ ಅನಂತಾನಂತ ಗುಣಗಳಿದ್ದಪ್ರಯುಕ್ತ ಉಪಕ್ರಮಾದಿ ಲಿಂಗಬಲದಿಂದ ಎಲ್ಲಾ ಶ್ರುತಿಗಳಿಂದ ಸಗುಣನೇ ಪ್ರತೀತನಾಗಿರುತ್ತಾನೆ ॥ ೧೪೮ ॥ ೧೪೯ ॥

ಎಲ್ಲಾ ಪ್ರಮಾಣಗಳಿಗೆ ಅವಿಷಯನಾದಾಗ್ಯೂ ಶಾಸ್ತ್ರಗಳಿಗೆ ವಿಷಯನೆಂದಂಗೀಕರಿಸಿದರೆ ವ್ಯಾಘಾತವದೆ ಎನ್ನುವುದು ಸರ್ವಾನುಭವಸಿದ್ಧವೆಂದು ನಿರೂಪಿಸುತ್ತಾರೆ—

ಮೂ ॥ ಸರ್ವಶಬ್ದೈರವಾಚ್ಯಂ ತದುಕ್ತ್ವಾ ತದ್ವಿಷಯಂ ಪುನಃ ।
ಶಾಸ್ತ್ರಂ ವದಂತಮುನ್ಮತ್ತಂ ಕಥಂ ಲೋಕೋ ನ ವಾರಯೇತ್ ॥
ಮಾ ವದೋ ಮಾ ವಿಜಾನೀಹಿತ್ಯಜಾಸ್ಮಚ್ಛಾಸ್ತ್ರಚೋರತಾಂ ॥೧೫೦॥

ಅ ॥ ತತ್=ಪರಬ್ರಹ್ಮನನ್ನು, ಸರ್ವಶಬ್ದೈಃ=ಎಲ್ಲಾ ಶಬ್ದಗಳಿಂದಲೂ, ಅವಾಚ್ಯಂ= ಹೇಳಲ್ಪಡದಿರುವವನನ್ನಾಗಿ, ಉಕ್ತ್ವಾ=ಹೇಳಿ, ಪುನಃ=ಮತ್ತೂ, ಶಾಸ್ತ್ರಂ=ಋಗಾದಿ ಶಾಸ್ತ್ರ

ವನ್ನು, ತದ್ವಿಷಯಂ=ಬ್ರಹ್ಮವಿಷಯಕವನ್ನಾಗಿ, ವದಂತಂ=ಹೇಳತಕ್ಕ, ಉನ್ಮತ್ತಂ=ವ್ಯಾಹತ ಭಾಷಿಯನ್ನು. ಕಥಂ=ಹೇಗೆ, ಲೋಕಃ=ಜನರು, ನ ವಾರಯೇತ್=ತಡಿಯದೆ ಇರುವರು. ಮಾ ಸ್ಮ ವದಃ=ಹೇಳಬೇಡ. ಮಾ ವಿಜಾನೀಹಿ=ತಿಳಿಯಬೇಡ ಅಸ್ಮಚ್ಛಾಸ್ತ್ರಚೋರತಾಂ= ನಮ್ಮ ಋಗಾದಿ ಶಾಸ್ತ್ರಗಳ ಚೌರ್ಯವನ್ನು, ತ್ಯಜ=ಬಿಟ್ಟುಬಿಡು.

ತಾ ॥ ನಿರ್ಗುಣಬ್ರಹ್ಮನನ್ನು ಹೇಳಲಿಕ್ಕೂ ತಿಳಿಯಲಿಕ್ಕೂ ಸಾಧ್ಯವಿಲ್ಲದಿರುವುದರಿಂದ ಶಾಸ್ತ್ರವು ನಿರ್ಗುಣವಿಷಯಕವೆನ್ನುವ ಆಗ್ರಹವನ್ನು ಬಿಟ್ಟುಬಿಡಬೇಕು. ತಥಾಚ, ನಿರ್ಗುಣ ಬ್ರಹ್ಮನಲ್ಲಿ ಸಮನ್ವಯವು ಯುಕ್ತವಲ್ಲ. ಆದಕಾರಣ ನಿರ್ಗುಣಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಜ್ಞಾಮಾಡದಿರುವುದರಿಂದ ಶಕ್ತಿವೃತ್ತಿಯಿಂದಲೇ ಈ ಸಮನ್ವಯವು. ಪ್ರಥಮತಃ ವಾಚ್ಯತ್ವ ಸಮರ್ಥನವೇ ಸಂಗತವು. ಸಾಂಖ್ಯಮತ ನಿರಾಕರಣವಲ್ಲವೆಂದು ಸಿದ್ಧವಾಯಿತು ॥ ೧೫೦ ॥

ಪುನಃ ಅದ್ವೈತಿಗಳು ಆಶಂಕಿಸುವರು.

ಹಾಗಾದರೆ, ಸಾಂಖ್ಯಮತನಿರಾಕರಣವು ಸೂತ್ರಾವಿವಕ್ಷಿತವಾಗಿರುವುದರಿಂದ ಅದನ್ನು ಮಾಡತಕ್ಕ ನಮಗೆ (ಅದ್ವೈತಿಗಳಿಗೆ) ದೋಷಬಂದಹಾಗೆಯೇ ನಮ್ಮನ್ನು (ಮಾಯಾವಾದಿ ಗಳನ್ನು) ನಿರಾಕರಿಸತಕ್ಕ ನಿಮಗೂ (ದ್ವೈತಿಗಳಿಗೂ) ದೋಷಬಾರದಿರುವುದು ಹೇಗೆ? ಇದು ಯಾವುದೊಂದೂ ಸೂತ್ರಾರ್ಥವೆಂದು ಹೇಳಲ್ಪಡುವುದಿಲ್ಲವೆಂದಾಶಂಕಿಸಿದರೆ—

**ಮೂ ॥ ವಯಂ ತ್ವಾಂ ಶ್ರುತಿಯುಕ್ತಿಭ್ಯಾಂ ಬಧ್ವಾಽಸ್ಮಚ್ಛಾಸ್ತ್ರಮಂಜಸಾ ।**
**ವಿಚಾರಯಾಮಃ ಶ್ರುತಿಭಿರ್ಯುಕ್ತಿಭಿಶ್ಚೈವ ಸಾದರಂ ॥ ೧೫೧ ॥**

ಅ ॥ ವಯಂ=ನಾವು, ತ್ವಾಂ=ಅಪವ್ಯಾಖ್ಯಾನಮಾಡತಕ್ಕ ನಿನ್ನನ್ನು, ಶ್ರುತಿಯುಕ್ತಿಭ್ಯಾಂ= ಶ್ರುತಿಗಳಿಂದಲೂ, ಯುಕ್ತಿಗಳಿಂದಲೂ, ಬಧ್ವಾ=ಕಟ್ಟಿ, ಅಂದರೆ ನಿರಾಕರಿಸಿ, ಅಸ್ಮಚ್ಛಾಸ್ತ್ರಂ= ಋಗಾದಿ ವೇದವನ್ನು, ಶ್ರುತಿಭಿಃ=ಸೂತ್ರಸೂಚಿತಗಳಾದ ಶ್ರುತಿಗಳಿಂದಲೂ, ಯುಕ್ತಿಭಿಶ್ಚ= ಯುಕ್ತಿಗಳಿಂದಲೂ, ಅಂಜಸಾ=ಚೆನ್ನಾಗಿ, ನಿರಂತರದಲ್ಲಿಯೂ, ಸಾದರಂ ಚ=ಆದರಪೂರ್ವಕ ವಾಗಿಯೇ, ವಿಚಾರಯಾಮ ಏವ=ಶಿಷ್ಯರಿಂದ ವಿಚಾರವನ್ನೇ ಮಾಡುವೆವು.

ತಾ ॥ ಪರರ ವ್ಯಾಖ್ಯಾನವು ಅಪಾತರಮಣೀಯವೆಂದು ಶಿಷ್ಯರು ತಿಳಿಯುವತನಕ ಸೂತ್ರ ಗಳಿಗೆ ನಾವು ಹೇಳಿದ ಅರ್ಥವು ನಿಜವಾಗಿದ್ದಾಗ್ಯೂ ಅದರಲ್ಲಿ ಇದು ಸೂತ್ರಾರ್ಥವೋ ಅದೋ ಎನ್ನುವ ಸಂಶಯಬರುವುದರಿಂದ ಚೆನ್ನಾಗಿ ಆದರವನ್ನು ಮಾಡಲಾರರು. ಅಪವ್ಯಾಖ್ಯಾನವನ್ನು ನಿರಾಕರಿಸಿದಮೇಲೆ ನೈರಂತರ್ಯ ಆದರಗಳಿಂದ ನಾವು ಹೇಳಿದ ಸೂತ್ರಾರ್ಥವನ್ನೇ ಇಟ್ಟು ಕೊಂಡು ಶಾಸ್ತ್ರಾರ್ಥವನ್ನು ವಿಚಾರಮಾಡಿದರೆ ಸಂಶಯವಿರಹಿತರಾಗಿ ಪ್ರವರ್ತಿಸುವರು. ಆದುದರಿಂದ ಇದು ಸೂತ್ರಾರ್ಥವಾಗುವುದು ಬೇಡ. ಆದಾಗ್ಯೂ ಸೂತ್ರಾರ್ಥವನ್ನು ಗ್ರಹಿಸ ಲಿಕ್ಕೆ ಉಪಾಯಭೂತವಾಗಿರುವುದರಿಂದ ವ್ಯಾಕರಣಾದಿಗಳಲ್ಲಿ ಉದಾಹರಣ, ಪ್ರತ್ಯುದಾಹರಣ ಗಳನ್ನು ಪ್ರದರ್ಶನಮಾಡುವಂತೆ ಈ ಪರಮತ ನಿರಾಕರಣವು ಯಾವ ದೋಷವನ್ನೂ ಹೊಂದಿಸಿ ಕೊಡುವುದಿಲ್ಲ. ಮತ್ತೆ ಗುಣಕ್ಕೇನೇ ಕಾರಣವಾಗುವುದು ॥ ೧೫೧ ॥

ಬ್ರಹ್ಮನು ವಾಚ್ಯನೆಂದಾದರೆ, ಅವಾಚ್ಯತ್ವಾದಿಗಳನ್ನು ಹೇಳತಕ್ಕ ಶ್ರುತಿಸ್ಮೃತಿಗಳಿಗೆ ಏನು ಅರ್ಥವು, ಎಂದರೆ— ಶ್ರುತ್ಯಂತರದಿಂದಲೇ ಆ ಶ್ರುತಿಗಳ ಅರ್ಥವನ್ನು ಹೇಳುವರು—

ಮೂ ॥ ಅದ್ಭುತತ್ವಾದವಾಚ್ಯಂ ತದತರ್ಕ್ಯಾಜ್ಞೇಯಮೇವ ಚ ॥ ೧೫೨ ॥
ಅನಂತಗುಣಪೂರ್ಣತ್ವಾದಿತ್ಯೂದೇ ಪೈಂಗಿನಾಂ ಶ್ರುತಿಃ ।
ಅವಾಚ್ಯಮಿತಿ ಲೋಕೋಽಪಿ ವಕ್ತ್ಯಾಶ್ಚರ್ಯತಮಂ ಭುವಿ ॥ ೧೫೩ ॥
ಸೂ. ೧೧ ॥ ಅಧಿ. ೫ ॥

ಅ ॥ ತತ್=ಆ ಬ್ರಹ್ಮನು, ಅದ್ಭುತತ್ವಾತ್=ಅತ್ಯಾಶ್ಚರ್ಯಕರನಾದುದರಿಂದ, ಅವಾಚ್ಯಂ=ಸಾಕಲ್ಯವಾಗಿ ಹೇಳಲ್ಪಡದಿರುವವನು, ಅನಂತಗುಣಪೂರ್ಣತ್ವಾತ್=ಅನಂತಾನಂತಗುಣಗಳಿಂದ ಪರಿಪೂರ್ಣನಾದ ಪ್ರಯುಕ್ತ, (ಆಶ್ಚರ್ಯತಮನು.) ಅತರ್ಕ್ಯಾಜ್ಞೇಯಮೇವ ಚ= ತರ್ಕಕ್ಕೆ ಅವಿಷಯನೂ, ಜ್ಞಾನಾವಿಷಯನೂ ಆಗಿರುತ್ತಾನೆ. ಇತಿ=ಹೀಗೆ, ಪೈಂಗಿನಾಂ ಶ್ರುತಿಃ= ಪೈಂಗಿಗಳ ಶ್ರುತಿಯು, ಊದೇ=ಪ್ರತಿಪಾದಿಸುತ್ತದೆ. ಲೋಕೋಽಪಿ=ಜನರೂಕೂಡ, ಭುವಿ= ಭೂಲೋಕದಲ್ಲಿ, ಆಶ್ಚರ್ಯತಮಂ=ಅತ್ಯಾಶ್ಚರ್ಯಕರವಾದ ವಸ್ತುವನ್ನು, ಅವಾಚ್ಯಮಿತಿ= ಅವಾಚ್ಯವೆಂದು, ವಕ್ತಿ=ಹೇಳುತ್ತದೆ.

ತಾ ॥ ಸ. ರ. ವಿ.— (1) ಸೂತ್ರಕಾರರು ಜಗತ್ಕಾರಣನಾದ ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಜ್ಞಾಮಾಡಿರುವರು. ಅವನೇ ಜಿಜ್ಞಾಸ್ಯನೆಂದೂ ಪ್ರತಿಜ್ಞಾಮಾಡಿರುವರು. ಆದಕಾರಣ 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಸೂತ್ರಗಳಲ್ಲಿ ನಿರ್ಗುಣನಿಗೆ ಅವಕಾಶವು ಕೂಡಲಾರದು. ಮುಖ್ಯಾರ್ಥವನ್ನು ಬಿಡಲಿಕ್ಕೆ ಕಾರಣವಿಲ್ಲದಿರುವುದರಿಂದ ಲಾಕ್ಷಣಿಕವಾಗಿ(ಅಮುಖ್ಯವೃತ್ತಿಯಿಂದ) ನಿರ್ಗುಣನು ವಾಚ್ಯನೆಂದೂ ಹೇಳಕೂಡದು. (2) ನಿರ್ಗುಣನು ವೇದಾಂತಗಳಿಂದ ವೇದ್ಯನಾಗದಿದ್ದರೂ ಪ್ರಮಾಣಾಂತರದಿಂದ ಸಿದ್ಧಿಸುತ್ತಾನೆಂದು ಹೇಳಕೂಡದು. ಏಕೆಂದರೆ— ನಿರ್ಗುಣನೂ, ಅವಾಚ್ಯನೂ, ಅಜ್ಞೇಯನೂ, ನಿರ್ವಿಶೇಷನೂ ಆಗಿರುತ್ತಾನೆ. ಅವಾಚ್ಯನಾದವನು ಸರ್ವಥಾ ಮೇಯನಾಗಲಾರನು. (3) ಮತ್ತೂ ನಿರ್ಗುಣನು ಅಪ್ರಮೇಯನಾಗಿರುವುದರಿಂದ ಆತನಲ್ಲಿ ಶಾಸ್ತ್ರಗಳಿಗೆ ಲಕ್ಷಣಾವೃತ್ತಿಯೂ (ಅಮುಖ್ಯವೃತ್ತಿಯೂ) ಕೂಡಲಾರದು. ಅಪ್ರಮೇಯವಾಗಿರುವುದು ಯಾವುದೊಂದೂ ಎಲ್ಲಿಯೂ ಲಾಕ್ಷಣಿಕವಾಗಲಾರದು. ಆದಕಾರಣ ಶಾಸ್ತ್ರದಿಂದ ಗುಣಪರಿಪೂರ್ಣನಾದ ವಾಸುದೇವನನ್ನೇ ಜಿಜ್ಞಾಸಾ ಮಾಡಬೇಕೆನ್ನುವುದು ಯುಕ್ತವು.

(4) ಬ್ರಹ್ಮನಲ್ಲಿ ವಿಜ್ಞೇಯತ್ವಾದಿಗಳು ಇಲ್ಲದಿದ್ದರೂ, ಪ್ರಮಾಣವಿಲ್ಲದಿದ್ದರೂ ಬ್ರಹ್ಮನು ನಿರ್ಗುಣನೆಂದವಶ್ಯವಾಗಿ ಅಂಗೀಕರಿಸುವುದಾದರೆ ಮನಸ್ಸಿನಲ್ಲಿಯೇ ಅಂಗೀಕರಿಸೋಣಾಗಲಿ. ಈ ಶಾಸ್ತ್ರಪ್ರತಿಪಾದ್ಯನೆಂದು ಹೇಳಕೂಡದು. (5) ಶಬ್ದವೇದ್ಯವಲ್ಲವೆಂದು ಅಂಗೀಕರಿಸಿ ಶಾಸ್ತ್ರವೇದ್ಯವೆಂದಂಗೀಕರಿಸಿದರೆ ತನ್ನಮಾತೇ ತನಗೆ ವಿರುದ್ಧವಾಗಿರುವುದರಿಂದ ಈ ಶಾಸ್ತ್ರವನ್ನು ಮಾತ್ರ ಅಪಹರಿಸಿದಂತೆ ಆಯಿತು. ಪ್ರಯೋಜನವೇನೂ ಇಲ್ಲ- (6) ಬ್ರಹ್ಮನು ಅವಾಚ್ಯನು ಇತ್ಯಾದಿಗಳನ್ನು ಹೇಳತಕ್ಕ ವಚನಗಳಿಗೆ ಅದ್ಭುತನಾದಪ್ರಯುಕ್ತ ಅವಾಚ್ಯನು ಇತ್ಯಾದಿರೂಪವಾದ ಅರ್ಥವನ್ನು ಇಟ್ಟುಕೊಳ್ಳತಕ್ಕದ್ದು. ಆದಕಾರಣ ಬ್ರಹ್ಮನು ಸರ್ವಶಾಸ್ತ್ರಪ್ರತಿಪಾದ್ಯನೆಂದು ಸಿದ್ಧಿಸುವನು.

ತಾ || ನ್ಯಾಯಸುಧಾ— (1) ಬ್ರಹ್ಮನು ಅನಂತಾನಂತ ಗುಣಗಳಿಂದ ಪೂರ್ಣನಾದ ಪ್ರಯುಕ್ತ ಅತ್ಯಾಶ್ಚರ್ಯಕರನು. ದುರ್ಲಭವಾದುದು ಆಶ್ಚರ್ಯವಾಗುವುದು. ಅನಂತಗುಣ ಭರಿತವಾದುದನ್ನು ಸುಖದಿಂದ ಹೊಂದಲು ಸಾಧ್ಯವಿಲ್ಲ. (2) ಆಶ್ಚರ್ಯವಾದ ವಸ್ತುವು ವಾಚ್ಯವಾಗಿದ್ದಾಗ್ಯೂ ಆಯಾಯ ಆಕಾರದಿಂದ ವಿಶೇಷವಾಗಿ ನಿರ್ದೇಶಮಾಡಲಿಕ್ಕೆ ಶಕ್ಯ ವಾಗುವುದಿಲ್ಲ; ವ್ಯುತ್ಪತ್ತಿಯೂ ಇಲ್ಲ. ವಚನಮನಸ್ಸುಗಳು ವ್ಯಾಕುಲಗಳೂ ಆಗಿವೆ, ಎಂದರೆ-ಅವಾಚ್ಯಂ ಎಂದು ಹೇಳಿದ್ದಾಗಿರುತ್ತದೆ. (3) ಆದಪ್ರಯುಕ್ತ ಹಿಂದೆ ಹೇಳಿದಪ್ರಕಾರ ಬ್ರಹ್ಮನು ಅವಾಚ್ಯನಾದಪ್ರಯುಕ್ತವೂ ಗತಿಸಾಮಾನ್ಯದಿಂದಲೂ (ಸರ್ವ ಶಾಖೆಗಳಿಂದ ಹುಟ್ಟತಕ್ಕ ಜ್ಞಾನವು ಏಕವಿಷಯಕವಾಗಿರುವುದರಿಂದಲೂ) ಸಮನ್ವಯಸೂತ್ರವು ಯುಕ್ತವೆಂದೇ ಸಿದ್ಧ ವಾಯಿತು || ೧೫೨ || ೧೫೩ || ಸೂ. ೧೧ || ಅಧಿ. ೫ ||

ಶ್ರೀಮನ್ನಾರಾಯಣಾಖ್ಯಾನಂ ಸಜ್ಜ್ಞಾನಾನಂದಲಕ್ಷಣಂ |
ವೇದಾಂತವೇದಿತೌದಾರ್ಯಂ ಮುಖ್ಯಂ ಬ್ರಹ್ಮಪ್ರತನ್ಮಹೇ ||
ನಮೋ ವೇದಾಂತರಾದ್ಧಾಂತ ಸೂಕ್ತಿರತ್ನಾಕರಾತ್ಮನೇ |
ಶ್ರೀಮದಾನಂದತೀರ್ಥಾಖ್ಯ ಭಗವದ್ದುಗ್ಧಸಿಂಧವೇ ||

## || ಈಕ್ಷತ್ಯಧಿಕರಣಂ ಸಮಾಪ್ತಂ ||

## || ಅಧಿಕರಣ ಪಂಚಕಂ ಸಮಾಪ್ತಂ ||

|| ಐದು ಅಧಿಕರಣಗಳು ಮುಗಿದವು. || ಶ್ರೀಃ ||



# ಆನಂದಮಯಾಧಿಕರಣವು.

## " ಓಂ ಆನಂದಮಯೋಽಭ್ಯಾಸಾತ್ ಓಂ " ಸೂ. ॥ ೧೨ ॥

ಆನಂದಮಯಃ = ತೈತ್ತಿರೀಯದಲ್ಲಿ ಶ್ರುತಗಳಾದ ಆನಂದಮಯ ಮೊದಲಾದವುಗಳು ಐದು, ತತ್ತು=ಬ್ರಹ್ಮನೇ, ಅಂದರೆ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮಯ, ಆನಂದಮಯ ಎನ್ನುವ ಐದು ಶಬ್ದಗಳಿಂದ ವಾಚ್ಯನಾದವನು ಬ್ರಹ್ಮನೇ, ಅಭ್ಯಾಸಾತ್= ಪ್ರತಿಪ್ರಕರಣಗಳಲ್ಲಿಯೂ 'ಯೇಽನ್ನಂ ಬ್ರಹ್ಮೋಪಾಸತೇ' ಇತ್ಯಾದಿ ರೂಪದಿಂದ ಬ್ರಹ್ಮಶಬ್ದವು ಶ್ರುತವಾಗಿರುವುದರಿಂದ, ಅಥವಾ 'ಅನ್ಯೋಽಂತರ ಆತ್ಮಾ' 'ಏತಮನ್ನಮಯಮಾತ್ಮಾನ ಮುಪಸಂಕ್ರಾಮತಿ' 'ಏತಮನ್ನಮಯಮಾತ್ಮಾನಮುಪಸಂಕ್ರಮ್ಯ' ಎಂದು ಪ್ರತಿಪ್ರಕರಣ ದಲ್ಲಿಯೂ ಬ್ರಹ್ಮವಾಚಕವಾದ ಬ್ರಹ್ಮಶಬ್ದ, ಆತ್ಮಶಬ್ದಗಳಿಗೆ ಅಭ್ಯಾಸ (ಅನೇಕಾವರ್ತಿ ಇರೋಣ) ವಿದ್ದುದರಿಂದ, ಅಥವಾ 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂದು ಪೂರ್ವೋತ್ತರಾನುವಾಕ ದಲ್ಲಿ ಬ್ರಹ್ಮಶಬ್ದಕ್ಕೇನೇ ಅಭ್ಯಾಸವಿದ್ದುದರಿಂದ.

ನ್ಯಾಯಸುಧಾ— (1) 'ಅಥಾತೋ ಬ್ರಹ್ಮಜಿಜ್ಞಾಸಾ' ಎನ್ನುವುದರಿಂದ ಯಾವ ಬ್ರಹ್ಮನ ಜಿಜ್ಞಾಸಾ (ವಿಚಾರವು) ವಿಹಿತವಾಗಿಯದೋ, ಆತನಿಗೆ 'ಜನ್ಮಾದ್ಯಸ್ಯಯತಃ' ಎನ್ನುವು ದರಿಂದ ಲಕ್ಷಣವನ್ನೂ, 'ಶಾಸ್ತ್ರಯೋನಿತ್ವಾತ್' ಎನ್ನುವುದರಿಂದ ಪ್ರಮಾಣವನ್ನೂ ಹೇಳಿ ಆ ಲಕ್ಷಣಪ್ರಮಾಣಗಳಿಂದ ಆ ಬ್ರಹ್ಮನು ಎಲ್ಲಾ ವಸ್ತುಗಳಿಂದಲೂ ಭಿನ್ನನೆಂದು ಸಮರ್ಥಿಸಿರುವರು. (2) ಪ್ರಮಾಣಗಳು ರುದ್ರಾದಿಗಳ ಪರವಾದರೆ ಸೃಷ್ಟ್ಯಾದ್ಯಷ್ಟಕರ್ತೃತ್ವರೂಪವಾದ ಲಕ್ಷಣವೂ ರುದ್ರಾದಿಗಳಲ್ಲಿರಬೇಕಾಗುವುದರಿಂದ ಆ ಲಕ್ಷಣಕ್ಕೆ ಅತಿವ್ಯಾಪ್ತಿಯೆನ್ನುವ ಆಶಂಕೆಯನ್ನು ಸಮ ನ್ವಯಸೂತ್ರದಿಂದ ಪರಿಹರಿಸಿದರು. (3) ಬ್ರಹ್ಮನು ಯಾವ ಶಬ್ದದಿಂದಲೂ ವಾಚ್ಯನಾಗದೆ ಇದ್ದುದರಿಂದ ಬ್ರಹ್ಮನಲ್ಲಿ ಸಕಲ ಶಾಸ್ತ್ರಗಳೂ ಪ್ರಮಾಣಗಳಿವೆ ಎನ್ನುವುದು ಅಸಂಭಾವಿತವು, ಎನ್ನುವ ಆಶಂಕೆಯನ್ನು ಈಕ್ಷತ್ಯಧಿಕರಣದಲ್ಲಿ ವಾಚ್ಯತ್ವವನ್ನು ಸಮರ್ಥನಮಾಡಿ ನಿರಾಕರಿ ಸಿದರು. ಲಕ್ಷಣ ಪ್ರಮಾಣಗಳನ್ನು ಹೇಳುವುದೇ ವಸ್ತುವಿಚಾರಣವು. ಲಕ್ಷಣಪ್ರಮಾಣಗಳನ್ನು ನಿರೂಪಣಮಾಡೋಣದರಿಂದಲೇ ಬ್ರಹ್ಮಾಖ್ಯವಸ್ತುವು ನಿರೂಪಿತವಾಗುವುದರಿಂದ ಬ್ರಹ್ಮಸ್ವರೂಪ ವನ್ನು ನಿರೂಪಿಸುವವಿಷಯದಲ್ಲಿ ಯಾವುದೂ ಅವಶಿಷ್ಟವಾಗದಿರುವಪ್ರಯುಕ್ತ 'ಆನಂದಮ ಯೋಽಭ್ಯಾಸಾತ್' ಇತ್ಯಾದ್ಯಧ್ಯಾಯದಿಂದ ಏನು ಪ್ರಯೋಜನವು ಎಂದಾಶಂಕಿಸಿ ಅಧ್ಯಾಯ ಶೇಷಕ್ಕೆ ಕೃತ್ಯವನ್ನು ಹೇಳುತ್ತಾರೆ.

**ಮೂ॥ ಏವಂ ಶಾಸ್ತ್ರಾವಗಮ್ಯತ್ವೇ ವಿಭಾಗೇನ ಸಮನ್ವಯಂ ।**
**ಆನಂದಮಯ ಇತ್ಯಾದಿನಾಽಧ್ಯಾಯೇನ ವದತ್ಯಜಃ ॥ ೧೫೪ ॥**

ಅ॥ ಏವಂ=ಈಕ್ಷತ್ಯಧಿಕರಣದಲ್ಲಿ ಪ್ರತಿಪಾದಿತವಾದ ನ್ಯಾಯದಿಂದ, (ಬ್ರಹ್ಮನಿಗೆ)ಶಾಸ್ತ್ರಾ ವಗಮ್ಯತ್ವೇ=ಮುಖ್ಯವೃತ್ತಿಯಿಂದಲೇ 'ತತ್ತು ಸಮನ್ವಯಾತ್' ಎನ್ನುವ ಸೂತ್ರದಲ್ಲಿಹೇಳಿದ ಸಕಲ ಶಾಸ್ತ್ರಪ್ರತಿಪಾದ್ಯತ್ವವು ಸಂಭಾವಿತವಾಗುತ್ತಿರಲು, ಸಮನ್ವಯಂ=ಸಮನ್ವಯವನ್ನು, ವಿಭಾಗೇನ=ವಿಸ್ತಾರದಿಂದ, ಅಜಃ=ಸೂತ್ರಕಾರರು, ಆನಂದಮಯ ಇತ್ಯಾದಿನಾ=ಆನಂದ ಮಯೋಽಭ್ಯಾಸಾತ್ ಇದುಮೊದಲಾದ, ಅಧ್ಯಾಯೇನ=ಅಧ್ಯಾಯದಿಂದ, ವದತಿ=ಹೇಳುತ್ತಾರೆ.

**ತಾ ॥ ನ್ಯಾಯಸುಧಾ**— (1) ಬ್ರಹ್ಮಸ್ವರೂಪವನ್ನು ನಿರೂಪಿಸುವ ವಿಷಯದಲ್ಲಿ ಯಾವುದೂ ಅವಶಿಷ್ಟವಾಗಲಿಲ್ಲವೆನ್ನುವುದು ಸತ್ಯವೆ. ಆದಾಗ್ಯೂ 'ತತ್ತು ಸಮನ್ವಯಾತ್' ಎನ್ನುವುದರಿಂದ ಉಪಕ್ರಮಾದಿ ತಾತ್ಪರ್ಯಲಿಂಗಗಳ ಸಾಮರ್ಥ್ಯದಿಂದ ಸಕಲ ಶಾಸ್ತ್ರಗಳಿಗೂ ಬ್ರಹ್ಮನಲ್ಲಿ ಪರಮ ಮುಖ್ಯವೃತ್ತಿಯಿಂದ ಪ್ರತಿಪಾದ್ಯ, ಪ್ರತಿಪಾದಕತ್ವರೂಪವಾದ ಯಾವ ಸಮನ್ವಯವು ಹೇಳಲ್ಪಟ್ಟದೋ, ಅಂತಹ ಸಮನ್ವಯವನ್ನೇ ಸೂತ್ರಕಾರರು ಹೇಳುತ್ತಾರೆ. (2) 'ತತ್ತು ಸಮನ್ವಯಾತ್' ಎನ್ನುವುದರಿಂದ ಎಲ್ಲಾ ಶಬ್ದಗಳಿಗೆ ಶ್ರೀಹರಿಯಲ್ಲಿ ಸಮನ್ವಯವನ್ನು ಪ್ರತಿಜ್ಞಾಮಾತ್ರ ಮಾಡಿರುವರು. ಅದನ್ನು ವಾಕ್ಯವಿಶೇಷಗಳನ್ನು ಹೇಳಿ ಉದಾಹರಣೆಕೊಟ್ಟು ವಿಚಾರಮಾಡುತ್ತಾ ಪೂರ್ವಪಕ್ಷವನ್ನು ತಿರಸ್ಕರಿಸಿ ಸಿದ್ಧಾಂತವನ್ನು ಸಾಧಿಸಿ ವಿಸ್ತರಿಸದಿರುವತನಕ ಕಾರ್ಯಕಾರಿಯಾಗದಿರುವುದರಿಂದ ಹೇಳದಿದ್ದಪ್ರಾಯವೇ. ಪರಮಾತ್ಮನಿಗೆ ಸರ್ವಶಾಸ್ತ್ರಪ್ರತಿಪಾದ್ಯತ್ವವನ್ನು ಸಮರ್ಥನೆ ಮಾಡದಿದ್ದರೆ ಪಾಶುಪತರೂ ರುದ್ರನೇ ಸರ್ವಶಾಸ್ತ್ರಪ್ರತಿಪಾದ್ಯನೆಂದು ಹೇಳಿ ಕೃತಾರ್ಥರಾಗಬೇಕಾಗುವರು. (3) ಆದಪ್ರಯುಕ್ತ ಸಮನ್ವಯವನ್ನು ವಿಸ್ತರಿಸುವುದು ಆವಶ್ಯಕವೇ. ಈ ಸಮನ್ವಯಸೂತ್ರದಿಂದ ಅಧ್ಯಾಯಶೇಷಕ್ಕೆ ಪ್ರಸಂಗ ಪ್ರಪಂಚಕಭಾವಸಂಗತಿಯೆಂದು ಈ ಮೂಲದಿಂದ ತೋರಿಸಿದಂತೆಯೇ ಆಯಿತು. (4) ಹಾಗಾದರೆ 'ತತ್ತು ಸಮನ್ವಯಾತ್' ಎನ್ನುವ ಸೂತ್ರವನ್ನು ಹೇಳಿದೊಡನೆಯೇ ಈ ಸೂತ್ರವನ್ನು ಹೇಳಬೇಕಿದ್ದಿತು. (ಮಧ್ಯದಲ್ಲಿ ಬೇರೆ ಸೂತ್ರಗಳನ್ನು ಹೇಳಿದ್ದು ಸರಿಯಲ್ಲ.) ಆದಾಗ್ಯೂ ಬ್ರಹ್ಮನು ಅವಾಚ್ಯನು ಇದುಮೊದಲಾದ ಆಶಂಕೆಗಳನ್ನು ನಿರಾಕರಿಸಿ ಶಾಸ್ತ್ರಗಳಿಂದ ತಿಳಿಯಲ್ಪಡತಕ್ಕವನೆಂದು ಸಮರ್ಥಿಸಿದರೇನೇ ಇದಕ್ಕೆ ಅವಕಾಶವಿರುವುದು. ಯಾವುದೊಂದು ಶಬ್ದಕ್ಕೂ ಸಂಬಂಧವೇ ಕೂಡದಿದ್ದರೆ ವಾಕ್ಯಗಳ ತಾತ್ಪರ್ಯವಿಚಾರಕ್ಕೆ ಅವಕಾಶವೇ ಇಲ್ಲವಷ್ಟೆ! ನೀರನ್ನು ಕುಡಿಯಲಿಕ್ಕೂ ಸಾಮರ್ಥ್ಯವಿಲ್ಲದಿರುವ ಮುಮೂರ್ಷುವಿಗೆ ಚಕ್ಕುಲಿಯನ್ನು ತಿನ್ನತಕ್ಕ ಸಾಮರ್ಥ್ಯವನ್ನು ಯಾರೊಬ್ಬನೂ ಊಹಿಸಲಾರನಷ್ಟೆ!

(5) ಮಾಯಾವಾದಿಗಳು ಮೇಲಿನ ಸೂತ್ರಸಂದರ್ಭವನ್ನಾದರೂ ಆಕ್ಷೇಪಿಸಿಕೊಂಡು ಸಮಾಧಾನವನ್ನು ಹೇಳುವರು.

(6) ಬ್ರಹ್ಮನು ೧ ನಾಮ (ಶಬ್ದಾತ್ಮಕ ಪ್ರಪಂಚ)ರೂಪ, (ಅರ್ಥಾತ್ಮಕ ಪ್ರಪಂಚ) ರೂಪಗಳಾದ ವಿಕಾರೋಪಾಧಿಗಳಿಂದ ಕೂಡಿದವನು, ೨ ಆ ವಿಕಾರಗಳಿಲ್ಲದಿರುವವನು ಅಂದರೆ— ಎಲ್ಲಾ ಉಪಾಧಿಗಳಿಂದ ವಿರಹಿತನಾದವನು ಹೀಗೆ ಎರಡು ರೂಪಗಳುಳ್ಳವನೆಂದು ವೇದಾಂತವಾಕ್ಯಗಳಲ್ಲಿ ತಿಳಿಯಲ್ಪಡುತ್ತಾನೆ. ಹೇಗೆಂದರೆ— '**ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ**' '**ಸರ್ವಾಣಿ ರೂಪಾಣಿ ವಿಚಿಂತ್ಯ ಧೀರಃ**' ಈ ಪ್ರಕಾರ ಸಾವಿರಾರುಕಡೆ ವೇದಾಂತವಾಕ್ಯಗಳು ಬ್ರಹ್ಮನು ಅವಿದ್ಯಾವಿಷಯನು (ಭ್ರಮವಿಷಯನು) ವಿದ್ಯಾವಿಷಯನು (ಪ್ರಮಾವಿಷಯನು) ಎನ್ನುವ ಭೇದದಿಂದ ಎರಡು ರೂಪಗಳುಳ್ಳವನೆಂದು ತೋರಿಸುತ್ತವೆ. ಅವುಗಳಲ್ಲಿ ಬ್ರಹ್ಮನಿಗೆ ಅವಿದ್ಯಾವಸ್ಥೆಯಲ್ಲಿ ಇವನು ಉಪಾಸ್ಯನು, ಈತನು ಉಪಾಸಕನು ಇದುಮೊದಲಾದ ಎಲ್ಲಾ ವ್ಯವಹಾರಗಳು ಸಂಗತಗಳಾಗುತ್ತವೆ. ಅವುಗಳಲ್ಲಿ ಬ್ರಹ್ಮನ ಕೆಲವು ಉಪಾಸನೆಗಳು(ಪ್ರತೀಕೋಪಾಸನಗಳು)ಶ್ರೇಯಃಸಾಧನಗಳು. ಕೆಲವು ಉಪಾಸನೆಗಳು ಅರ್ಚಿರಾದಿ ಮಾರ್ಗಕ್ರಮದಿಂದ ಮುಕ್ತಿಯು ಆಗುತ್ತದೆನ್ನುವುದಕ್ಕೆ ಉಪಯುಕ್ತಗಳಾಗುತ್ತವೆ. ಕೆಲವು ಕರ್ಮಸಮೃದ್ಧಿಗೆ ಉಪಯುಕ್ತಗಳು. ಈ ಪ್ರಕಾರ ಉಪಾಧಿಕೃತಭೇದವಿರುವ ಅಪೇಕ್ಷಿತ ಫಲಗಳಿಗೆ ಸಾಧನೀಭೂತನಾದ, ನಾನಾಗುಣವಿಶಿಷ್ಟನಾದ ಬ್ರಹ್ಮನು ಉಪಾಸ್ಯನೆಂದೂ, ಎಲ್ಲಾ ಉಪಾಧಿಗಳು ಇಲ್ಲದಿರುವವನು ಜ್ಞೇಯನೆಂದೂ ಉಪದೇಶಿಸ

ಲ್ಪಡುತ್ತಾನೆನ್ನುವ ಅರ್ಥವನ್ನು ತೋರಿಸುವುದಕ್ಕಾಗಿ ಉತ್ತರಗ್ರಂಥವು ಆರಬ್ಧವಾಗುವುದು ಎಂದು ಮಾಯಾವಾದಿಗಳು ಹೇಳುವರು. (7) ಇದು ಅಯುಕ್ತವು. ವಿಶಿಷ್ಟಬ್ರಹ್ಮ-ಶುದ್ಧ ಬ್ರಹ್ಮ ಎಂದು ಬ್ರಹ್ಮನು ಎರಡುರೂಪಗಳುಳ್ಳವನು ಎನ್ನುವುದೇ ಅಪ್ರಾಮಾಣಿಕವು. ಹೇಗೆಂದರೆ- ಎಲ್ಲಾ ವೇದವಾಕ್ಯಗಳು ಅಪರಿಮಿತಗಳಾದ ಮಂಗಳಕರಗಳಾದ ಗುಣಗಳಿರುವವನೂ ದೋಷ ಲೇಶವಿರಹಿತನೂ ಸರ್ವೋತ್ತಮನೂ ಆದ ನಾರಾಯಣನೆನಿಸಿಕೊಂಡ ಪರಬ್ರಹ್ಮನನ್ನೇ ಪ್ರತಿಪಾದಿ ಸುತ್ತವೆ. ಆದರೆ ಕೆಲವು ವೇದವಾಕ್ಯಗಳು ('ಯಃ ಸರ್ವಜ್ಞಃ ಸರ್ವವಿತ್' ಇದುಮೊದಲಾದವು ಗಳು) ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವಾಂತರ್ಯಾಮಿತ್ವ,ಸೌಂದರ್ಯ ಔದಾರ್ಯಮೊದಲಾದ ಗುಣಗಳಿಂದ ವಿಶಿಷ್ಟನೆಂದು ಬ್ರಹ್ಮನನ್ನು ಹೇಳುತ್ತವೆ. ಇನ್ನು ಕೆಲವು ವೇದವಾಕ್ಯಗಳು ('ಅಪಹತಪಾಪ್ಮಾ ವಿರಜೋ ವಿಮೃತ್ಯುಃ ನಿರವಿಷ್ಟೋ ನಿರವದ್ಯಃ ಅಶರೀರಃ ಪ್ರಜ್ಞಾತ್ಮಾ ಅಸ್ಥೂಲಮನಣು ಅಹ್ರಸ್ವಂ' ಇತ್ಯಾದಿಗಳು) ಪಾಪರಾಹಿತ್ಯ, ನಿರ್ದುಃಖತ್ವ, ಪ್ರಾಕೃತ ಭೌತಿಕ ಶರೀರರಾಹಿತ್ಯ, ಮೊದಲಾದ ದೋಷಾಭಾವವಿಶಿಷ್ಟನೆಂದು ಬ್ರಹ್ಮನನ್ನು ಹೇಳುತ್ತವೆ ಬೇರೆ ಕೆಲವು ವಾಕ್ಯಗಳು ('ಯತೋ ವಾಚೋ ನಿವರ್ತಂತೆ' ಇತ್ಯಾದಿಗಳು) ಅತಿ ದೌರ್ಲಭ್ಯ ವನ್ನು ತಿಳಿಸುವುದಕ್ಕಾಗಿ ಬ್ರಹ್ಮನು ವಾಙ್ಮನಸ್ಸುಗಳಿಗೆ ಅಗೋಚರನು, ಇತ್ಯಾದಿಪ್ರಕಾರದಿಂದ ತಿಳಿಸುತ್ತವೆ. ಕೆಲವು ವಾಕ್ಯಗಳು ('ಏಕಮೇವಾದ್ವಿತೀಯಂ' ಇತ್ಯಾದಿಗಳು) ಚತುರ್ಮುಖ ಮೊದಲಾದ ಇತರ ದೇವತೆಗಳನ್ನು ಪ್ರಾಧಾನ್ಯದಿಂದ ಬಿಟ್ಟುಬಿಟ್ಟು ಬ್ರಹ್ಮನನ್ನೇ ಪ್ರಾಧಾನ್ಯದಿಂದ ಸ್ವೀಕರಿಸುವುದಕ್ಕಾಗಿ ಆ ಬ್ರಹ್ಮನು ಅದ್ವಿತೀಯನು (ಅಸದೃಶನು) ಎಂದು ತಿಳಿಸುತ್ತವೆ. ಕೆಲವು ವಾಕ್ಯಗಳು('ಸರ್ವಂ ಖಲ್ವಿದಂ ಬ್ರಹ್ಮ' 'ಪುರುಷ ಏವೇದಂ ಸರ್ವಂ' ಇತ್ಯಾದಿ ಗಳು) ಎಲ್ಲಾ ವಸ್ತುಗಳ ಸತ್ತಾ ಪ್ರತೀತಿ ಪ್ರವೃತ್ತಿಗಳಿಗೆ ನಿಮಿತ್ತಕಾರಣತ್ವವನ್ನು ಬ್ರಹ್ಮನಿಗೆ ತಿಳಿಸುವುದಕ್ಕಾಗಿ ಬ್ರಹ್ಮನು ಸರ್ವಾತ್ಮಕನು, ಇದುಮೊದಲಾದ ಅನೇಕ ಪ್ರಕಾರಗಳಿಂದ ಸರ್ವೋತ್ತಮನಾದ ಶ್ರೀ ನಾರಾಯಣನನ್ನು ತಿಳಿಸಿಕೊಡುತ್ತವೆ. ಆಮೇಲೆ ವ್ಯಾಕುಲಚಿತ್ತರೂ, ಗುರುಗಳ ಸಂಪ್ರದಾಯವನ್ನು ತಿಳಿಯದವರೂ, (ಗುರುಪೂರ್ವಕ ಅಧ್ಯಯನವಿಲ್ಲದಿದ್ದವರೂ) ವೇದವ್ಯಾಖ್ಯಾನವನ್ನು ತಿಳಿಯದೆ ಇದ್ದವರೂ, ಆದವರು ಎಲ್ಲಾ ಕಡೆಗಳಲ್ಲಿಯೂ ಏಕರೂಪತ್ವ ವನ್ನು ಅನುಸಂಧಾನ ಮಾಡಿಕೊಳ್ಳದಿದ್ದವರು ವೇದವನ್ನೇ ಹಾಳುಮಾಡುವರು. ಬ್ರಹ್ಮನಿಗೆ ಎರಡು ರೂಪಗಳಿವೆ ಎನ್ನುವುದರ ವಿಸ್ತಾರವು ಮೇಲೆ ಎಲ್ಲಿಯೂ ಉಪಲಬ್ಧವಾಗುವುದಿಲ್ಲ. ಮತ್ತು ಈ ಅವಿದ್ಯಾವಿಷಯವನ್ನು ವಿಸ್ತರಿಸುವುದೂ ಈ ಮೋಕ್ಷಶಾಸ್ತ್ರದಲ್ಲಿ ಉಪಯುಕ್ತವಾಗುವುದಿಲ್ಲ. (8) ಪ್ರಸಂಗಸಂಗತಿಯಿಂದ ಹೇಳುತ್ತೇವೆಂದರೆ ಹಾಗೆ ಹೇಳಕೂಡದು. ಸರ್ವವೂ ಪ್ರಾಸಂಗಿಕ ವಾದರೆ ಮುಖ್ಯಪ್ರತಿಪಾದ್ಯವೇ ಇಲ್ಲವೆಂದಾಗಬೇಕಾಗುವುದು. (9) ಈ ವಿಷಯವನ್ನು 'ನಾನ್ಯಥಾ ತದದೃಷ್ಟೇಃ' ಎನ್ನುವ ಭಾಷ್ಯದಲ್ಲಿಯೇ ಸಗುಣನಿರ್ಗುಣಭೇದವನ್ನು ನಿರಾಕರಿಸ ತಕ್ಕ ಆಚಾರ್ಯರು ನಿರಾಕರಿಸಿರುವುದರಿಂದ ಪುನಃ ಇಲ್ಲಿ ನಿರಾಕರಿಸಲಿಲ್ಲ ॥ ೧೫ ॥

ಸ. ರ. ವಿ.— ಮೊದಲು ಸಾಮಾನ್ಯವಾಗಿ ಬ್ರಹ್ಮನಲ್ಲಿ ಶಾಸ್ತ್ರಸಮನ್ವಯವನ್ನು ವ್ಯುತ್ಪಾದಿಸಿ ದರು. ಅದನ್ನೇ ಈಗ ಸೂತ್ರಕಾರರು ಆನಂದಮಯೋಽಭ್ಯಾಸಾತ್ ಇತ್ಯಾದಿ ಅಧ್ಯಾಯಶೇಷ ದಿಂದ ವಿಭಾಗಮಾಡಿಕೊಂಡು ಪ್ರತಿಪಾದಿಸುತ್ತಾರೆ. ಅವುಗಳಲ್ಲಿ ಈಗಲಾದರೂ ಅರ್ಥಾಂತರ ಗಳಲ್ಲಿ ನಿರೂಢಗಳಾದ ಶಬ್ದಗಳಿಗೆ ಈ ಸೂತ್ರವನ್ನು ಮೊದಲುಗೊಂಡು ಪಾದಮುಗಿಯುವ ವರೇಗೆ ವಿಷ್ಣುವಿನಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಅವುಗಳಲ್ಲಿಯೂ ಈ ಅಧಿಕರಣದಲ್ಲಿ ಎಲ್ಲಿಯೂ ನಿರೂಢವಾಗದಿರುವುದರಿಂದ ಗುಣಿಸಾಮಾನ್ಯವಾಚಕಗಳಾದ ಆನಂದಮಯಾದಿ

ಶಬ್ದಗಳಿಗೂ ಗುಣವಾಚಕಗಳಾದ ಆನಂದವೊದಲಾದ ಶಬ್ದಗಳಿಗೂ ಬ್ರಹ್ಮನಲ್ಲಿ ಸಮನ್ವಯು ವನ್ನು ಪ್ರತಿಪಾದಿಸುತ್ತಾರೆ.

ನ್ಯಾಯಸುಧಾ— ಹಾಗಾದರೆ ಹಿಂದೆ ಹೇಳಿದಪ್ರಕಾರ ಒಂದನೇ ಅಧ್ಯಾಯದಲ್ಲಿ ಸಮನ್ವಯಪ್ರತಿಪಾದನರೂಪವಾದ ಒಂದೇ ಅರ್ಥವಿರುವುದರಿಂದ ಏಕವಾಕ್ಯತ್ವವಿದ್ದರೆ ೧ನೇ ಪಾದ, ೨ನೇ ಪಾದ, ೩ನೇ ಪಾದ, ೪ನೇ ಪಾದ ಎನ್ನುವ ಪಾದಭೇದಕ್ಕೆ ಕಾರಣವೇನು? ಎಂದರೆ-ಅವಾಂತರಾರ್ಥರೂಪ ಉಪಾಧಿಗಳು ಬೇರೆಬೇರೆಯಾಗಿರುವುದರಿಂದ ಪಾದಭೇದವು ಎಂದು ನಿರೂಪಿಸುತ್ತಾರೆ.

**ಮೂ ॥ ತತ್ರಾನ್ಯತ್ರಪ್ರಸಿದ್ಧಾನಾಂ ವಿಷ್ಣಾವೇವ ಸಮನ್ವಯಂ ।**
**ಶಬ್ದಾನಾಂ ಪ್ರಥಮೇ ಪಾದೇ ಗುಣಿಸಾಮಾನ್ಯವಾಚಿನಾಂ ॥**
**ಗುಣವಾಚಿನಾಂ ಚ ಪ್ರಥಮಮಾಹ ದೇವಃ ಸಮನ್ವಯಂ ॥ ೧೫೫ ॥**

ಅ ॥ ತತ್ರ=ಹೇಳಲರ್ಹವಾದ ಸಮನ್ವಯವುಳ್ಳ ಮೂರು ವಿಧಗಳಾದ ಶಬ್ದಗಳಲ್ಲಿ, ಅನ್ಯತ್ರ ಪ್ರಸಿದ್ಧಾನಾಂ=ಬೇರೆ ಕಡೆಗಳಲ್ಲಿ ಪ್ರಸಿದ್ಧಗಳಾದ, ಶಬ್ದಾನಾಂ=ನಾಮಾತ್ಮಕ ಶಬ್ದಗಳಿಗೆ, ವಿಷ್ಣಾವೇವ=ಶ್ರೀನಾರಾಯಣನಲ್ಲಿಯೇ, ಸಮನ್ವಯಂ=ಶಕ್ತಿತಾತ್ಪರ್ಯರೂಪ ಸಂಬಂಧವನ್ನು, ತತ್ರ=ಒಂದನೇಅಧ್ಯಾಯದಲ್ಲಿ, ಪ್ರಥಮೇ ಪಾದೇ=ಒಂದನೇ ಪಾದದಲ್ಲಿ, ಅಜಃ=ವೇದವ್ಯಾಸರು, ವದತಿ=ಹೇಳುತ್ತಾರೆ. (ಬೇರೆ ಶಬ್ದಗಳಿಗೆ ಬೇರೆ ಕಡೆಗಳಲ್ಲಿ ಸಮನ್ವಯವನ್ನು ಅಲ್ಲಲ್ಲಿ ಹೇಳುವರು) (2) ದೇವಃ=ವೇದವ್ಯಾಸರು, ಗುಣಿಸಾಮಾನ್ಯವಾಚಿನಾಂ=ಗುಣಿಸಾಮಾನ್ಯವನ್ನು ಹೇಳುವ (ನ ಚ. ವಿ. ಲಿಂಗಾತ್ಮಕಗಳಾದ) ಆನಂದಮಯ ವೊದಲಾದ ಶಬ್ದಗಳಿಗೂ, ಗುಣ ವಾಚಿನಾಂ ಚ=ಗುಣಗಳನ್ನು ಹೇಳುವ ನಾಮಾತ್ಮಕಗಳಾದ ಆನಂದವೊದಲಾದ ಶಬ್ದಗಳಿಗೂ, ಸಮನ್ವಯಂ=ಮುಖ್ಯವೃತ್ತಿಯಿಂದ ಸಂಬಂಧವನ್ನು, ಪ್ರಥಮಂ=ವೊದಲು (ಆನಂದಮಯಾಧಿಕರಣದಲ್ಲಿ) ಆಹ=ಹೇಳಿದರು.

ತಾ ॥ ನ್ಯಾಯಸುಧಾ— (1) ವೇದದಲ್ಲಿರುವ (ಸಂಸ್ಕೃತಗಳಾದ) ಶಬ್ದಗಳು ನಾಲ್ಕು ವಿಧಗಳು. ಕೆಲವು ಶಬ್ದಗಳು (೧) ತತ್ರ ಪ್ರಸಿದ್ಧಗಳು (ಬ್ರಹ್ಮನಲ್ಲಿಯೇ ಪ್ರಸಿದ್ಧಗಳು.) ಇನ್ನು ಕೆಲವು (೨) ಅನ್ಯತ್ರ ಪ್ರಸಿದ್ಧಗಳು. ಕೆಲವು ಶಬ್ದಗಳು (೩) ಉಭಯತ್ರ ಪ್ರಸಿದ್ಧಗಳು. ಬೇರೆ ಕೆಲವು (೪) ಅನ್ಯತ್ರೈವ ಪ್ರಸಿದ್ಧಗಳು. ಅವುಗಳೆಲ್ಲವೂ ಪ್ರತಿಯೊಂದೂ ನಾಮಾತ್ಮಕಗಳು ಲಿಂಗಾತ್ಮಕಗಳೆಂದು ಎರಡು ವಿಧಗಳು. ಸಾಕ್ಷಾದ್ಧರ್ಮಿಯನ್ನು ಹೇಳುವವುಗಳು ನಾಮಾತ್ಮಕಗಳು. ಧರ್ಮದ್ವಾರಾಧರ್ಮಿಯಲ್ಲಿರುವವುಗಳು ಲಿಂಗಾತ್ಮಕಗಳು. (2) ಇವುಗಳಿಗೆ ವೈಲಕ್ಷಣ್ಯ ವನ್ನು ಚಂದ್ರಿಕಾದಲ್ಲಿ ಹೇಳಿದರೀತಿಯಾಗಿ ತಿಳಿಯತಕ್ಕದ್ದು. ಹೇಗೆಂದರೆ— '**ಶ್ರುತ್ಯಂತರಾದಿಭಿಸ್ತುಲ್ಯಾಹ್ಯುಭಯಸ್ಮಿನ್ಪ್ರಸಿದ್ಧತಾ । ಶ್ರುತ್ಯಾದಿತೋ ಲೋಕತೋ ವಾ ಹೀತರೇಷು ಪ್ರಸಿದ್ಧತಾ ॥ ೧ ॥ ಬಲವಚ್ಛ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ** ॥ ಅಥವಾ '**ಯೇಷಾಂ ಪ್ರಸಿದ್ಧಿರನ್ಯತ್ರ ಕೇವಲೈವ ವಿರೋಧಿನೀ । ಸಮನ್ವಯಸ್ಯೋಭಯತ್ರ ಪ್ರಸಿದ್ಧಾಸ್ತೇ ಹಿ ಕೀರ್ತಿತಾಃ ॥ ೧ ॥ ಯೇಷಾಂ ಬ್ರಹ್ಮಣ್ಯಪ್ರಸಿದ್ಧಿಃ ಪ್ರಸಿದ್ಧಿಶ್ಚಾನ್ಯವಸ್ತುಷು । ವಿರೋಧಿನ್ಯಾ ಹಿ ತೇಽನ್ಯತ್ರ ಪ್ರಸಿದ್ಧಾಃ ಕಥಿತಾ ಇಹ ॥ ೨ ॥ ಯೇಷಾಮುಕ್ತದ್ವಯಂ ಬ್ರಹ್ಮಪರತ್ವಸ್ಯಾತ್ಯಶಕ್ಯತಾ । ಇತಿ ತಿಸ್ರೋ ವಿರೋಧಿನ್ಯಸ್ತೇಽನ್ಯತ್ರೈವ ಪ್ರಸಿದ್ಧಕಾಃ ॥ ೩ ॥** (೧) ಎರಡುಕಡೆಗಳಲ್ಲಿಯೂ ಶ್ರುತ್ಯಾದಿಗಳು ಸಮಗಳಾಗಿದ್ದರೆ ಉಭಯತ್ರ

ಪ್ರಸಿದ್ಧಗಳು. ಅಂದರೆ, ಯಾವ ಶಬ್ದಗಳಿಗೆ ಲೋಕದಲ್ಲಿ ಬ್ರಹ್ಮನಲ್ಲಿ ಪ್ರಯೋಗವಿಲ್ಲದಂತೆಯೇ ಬೇರೆ ಕಡೆಯಲ್ಲಿ ಪ್ರಯೋಗವಿಲ್ಲದಿರುವುದರಿಂದ ವ್ಯಕ್ತಿವಿಶೇಷವನ್ನು ನಿಶ್ಚಯಿಸುವುದಕ್ಕಾಗಿ ಬೇರೆ ಶ್ರುತಿಗಳನ್ನು ಹುಡುಕುವಾಗ ಆ ಶ್ರುತಿಗಳಲ್ಲಿ ಬೇರೆ ಕಡೆಗಳಲ್ಲಿ ಪ್ರಯೋಗವಿದ್ದಂತೆಯೇ ಬ್ರಹ್ಮನಲ್ಲಿಯೂ ಪ್ರಯೋಗವಿದ್ದುದರಿಂದ ಶ್ರುತ್ಯಂತರ ಸಾಧಾರಣ್ಯವಾಗಲೀ ಪ್ರವೃತ್ತಿನಿಮಿತ್ತಾದಿ ಸಾಧಾರಣ್ಯವಾಗಲೀ ಇದೆಯೋ, ಅವುಗಳು ಉಭಯತ್ರ ಪ್ರಸಿದ್ಧಗಳು. (೨) ಶ್ರುತ್ಯಾದಿಗಳಿಂದಲಾಗಲೀ ಲೋಕವ್ಯವಹಾರದಿಂದಾಗಲೀ ಬ್ರಹ್ಮವ್ಯತಿರಿಕ್ತರಲ್ಲಿ ಪ್ರಸಿದ್ಧಿಯಿದ್ದರೆ ಆ ಶಬ್ದಗಳು ಅನ್ಯತ್ರ ಪ್ರಸಿದ್ಧಗಳು. (೩) ಪ್ರಬಲಗಳಾದ ಶ್ರುತಿಲಿಂಗಾದಿಗಳಿಂದ ಬೇರೆಕಡೆಯಲ್ಲಿಯೇ ಶಬ್ದಗಳಿಗೆ ಪ್ರಸಿದ್ಧಿಯಿದ್ದರೆ ಆ ಶಬ್ದಗಳು ಅನ್ಯತ್ರೈವ ಪ್ರಸಿದ್ಧಗಳು. ಅಥವಾ (೧) ಯಾವ ಶಬ್ದಗಳಿಗೆ ವಿಷಯವಾಕ್ಯದಲ್ಲಿ ಆಪಾತತಃ ಬೇರೆಯವರಿಗೆ ಉಪಸ್ಥಿತಿಯಿರುವಾಗ ಸಮಾನವಾಗಿ ಬ್ರಹ್ಮನಿಗೆ ಉಪಸ್ಥಿತಿಯಿದೆಯೋ, ಇಬ್ಬರಿಗೂ ಉಪಸ್ಥಿತಿಯಿದ್ದಪ್ರಯುಕ್ತವೇ ಯಾವ ಶಬ್ದಗಳಿಗೆ ಕೇವಲ ಬೇರೆಯವರಿಗೆ ಉಪಸ್ಥಿತಿಯಿದ್ದಪ್ರಯುಕ್ತ ಬ್ರಹ್ಮನಲ್ಲಿ ಸಮನ್ವಯಕ್ಕೆ ಪ್ರತಿಬಂಧವಿದೆಯೋ ಅವುಗಳು ಉಭಯತ್ರ ಪ್ರಸಿದ್ಧಗಳು (೨)ಯಾವ ಶಬ್ದಗಳಿಗೆ ಬೇರೆಯವರ ಉಪಸ್ಥಿತಿಯೂ ಬ್ರಹ್ಮನ ಉಪಸ್ಥಿತಿಯಿಲ್ಲದಿರುವಿಕೆಯೂ ಇವುಗಳಿಂದಲೇ ಸಮನ್ವಯಕ್ಕೆ ಪ್ರತಿಬಂಧವಿದೆಯೋ ಅವುಗಳು ಅನ್ಯತ್ರ ಪ್ರಸಿದ್ಧಗಳು. (೩) ಯಾವ ಶಬ್ದಗಳಿಗೆ ಬ್ರಹ್ಮನಲ್ಲಿ ಅಪ್ರಸಿದ್ಧಿಯೂ ಬೇರೆಯವರಲ್ಲಿ ಪ್ರಸಿದ್ಧಿಯೂ ಶಬ್ದವು ಬ್ರಹ್ಮಪರವಾಗಿದೆ ಎನ್ನುವುದಕ್ಕೆ ಅತ್ಯಶಕ್ಯತ್ವವೂ ಇವುಗಳಿಂದ ಅತ್ಯಂತವಾಗಿ ಪ್ರತಿಬಂಧವಿದೆಯೋ ಅವುಗಳು ಅನ್ಯತ್ರೈವ ಪ್ರಸಿದ್ಧಗಳು. (3) **ಯಾನ್ಯಾಪಾತತೋ ರೂಢಾನ್ಯೇವ ತಾನಿ ನಾಮಾನಿ ತದ್ವಿಪರೀತಾನಿ ತು ಲಿಂಗಾನಿ**=ಅಂದರೆ ಯಾವ ಶಬ್ದಗಳು ಆಪಾತತಃ ರೂಢಗಳೇ ಆಗಿವೆಯೋ, ಅವುಗಳು ನಾಮಾತ್ಮಕಶಬ್ದಗಳು. ಆಪಾತತಃ ರೂಢಗಳಾಗದಿದ್ದವುಗಳು. ಲಿಂಗಾತ್ಮಕ ಶಬ್ದಗಳು. ಅಥವಾ '**ಯಾನ್ಯಾಪಾತತಃ ರೂಢಾನಿ ತಾನಿ ನಾಮಾನಿ ಯಾನ್ಯಾಪಾತತಃ ಯೌಗಿಕಾನಿ ತಾನಿ ಲಿಂಗಾನಿ**'=ಯಾವ ಶಬ್ದಗಳು ಆಪಾತತಃ ರೂಢಗಳಾಗಿವೆಯೋ, ಅವುಗಳು ನಾಮಾತ್ಮಕಗಳು. ಯಾವ ಶಬ್ದಗಳು ಆಪಾತತಃ ಯೌಗಿಕಗಳೋ ಅವುಗಳು ಲಿಂಗಾತ್ಮಕ ಶಬ್ದಗಳು. ಈ ಪ್ರಕಾರ ಇವುಗಳಿಗೆಲ್ಲಾ ಭೇದವನ್ನು ತಿಳಿಯತಕ್ಕದ್ದು. (4) ಆ ನಾಲ್ಕುವಿಧ ಶಬ್ದಗಳ ಮಧ್ಯದಲ್ಲಿ ಬ್ರಹ್ಮನಲ್ಲಿ ಪ್ರಸಿದ್ಧಗಳಾದ ಶಬ್ದಗಳಿಗೆ ಸಮನ್ವಯವನ್ನು ಹೇಳಬೇಕಾಗಿಲ್ಲ ಆವಿಷಯದಲ್ಲಿ ವಿವಾದವೇ ಇಲ್ಲ. ವಿವಾದವಿದ್ದಲ್ಲಿಯೇ ವಿಚಾರವು ಪ್ರವೃತ್ತವಾಗುತ್ತದೆ. (5) ಸಮನ್ವಯವನ್ನು ಹೇಳಬೇಕಾದ ಮೂರುವಿಧ ಶಬ್ದಗಳಲ್ಲಿ ಅನ್ಯತ್ರಪ್ರಸಿದ್ಧಗಳಾದ ನಾಮಾತ್ಮಕಶಬ್ದಗಳಿಗೆ ವಿಷ್ಣುವಿನಲ್ಲಿಯೇ ಸಮನ್ವಯವನ್ನು ೧ ನೇ ಅಧ್ಯಾಯದ ೧ನೇ ಪಾದದಲ್ಲಿ ಸೂತ್ರಕಾರರು ಹೇಳುವರು. ಬೇರೆ ಶಬ್ದಗಳಿಗೆ ಬೇರೆ ಪಾದಗಳಲ್ಲಿ ಸಮನ್ವಯವನ್ನು ಹೇಳುವರು.

(6) ಮಾಯಾವಾದಿಗಳು, '೧ನೇ ಪಾದದಲ್ಲಿ ಸ್ಪಷ್ಟ (ವಾಕ್ಯಾಂತರದಲ್ಲಿ ಬ್ರಹ್ಮಪರವೆಂದು ನಿರ್ಣಯಿಸಲ್ಪಟ್ಟದ್ದು) ಬ್ರಹ್ಮಲಿಂಗವುಳ್ಳ ವಾಕ್ಯಗಳಿಗೂ, ೨ನೇ ೩ನೇ ಪಾದಗಳಲ್ಲಿ ಅಸ್ಪಷ್ಟ ಬ್ರಹ್ಮಲಿಂಗವುಳ್ಳ ವಾಕ್ಯಗಳಿಗೂ ಸಮನ್ವಯವು, ೪ನೇ ಪಾದದಲ್ಲಿ ಪ್ರಧಾನಕ್ಕೆ ಶಬ್ದಬೋಧ್ಯತ್ವವನ್ನು ನಿರಾಕರಿಸುವುದು' ಎನ್ನುತ್ತಾರೆ. ಇದು ಅಯುಕ್ತವು. ಏಕೆಂದರೆ, ೨ನೇ ೩ನೇ ಪಾದಗಳಲ್ಲಿ ಉದಾಹರಿಸಿರುವ ವಾಕ್ಯಗಳಲ್ಲಿಯೂ ಅನೇಕವಾಗಿ ಸ್ಪಷ್ಟಬ್ರಹ್ಮಲಿಂಗಗಳಿವೆ. ಮತ್ತು ೨ನೇ ಪಾದಕ್ಕೂ ೩ನೇ ಪಾದಕ್ಕೂ ಭೇದವಿಲ್ಲವೆಂದಾಗಬೇಕಾಗುವುದು. ಹಾಗಾದರೆ, ೨ನೇ ಪಾದದಲ್ಲಿ ಸಗುಣ ಬ್ರಹ್ಮನು ೩ನೇ ಪಾದದಲ್ಲಿ ನಿರ್ಗುಣಬ್ರಹ್ಮನು ಹೇಳಲ್ಪಡುವಪ್ರಯುಕ್ತ ೨ನೇ ೩ನೇ ಪಾದಗಳಿಗೆ ಭೇದವು ಎಂದು ಕಲ್ಪತರುಕಾರನು ಹೇಳಿದ್ದು ಅಯುಕ್ತವು. ಸಗುಣಾ(ಸವಿಶೇಷಾ) ತಿರಿಕ್ತವಾದ

ನಿರ್ಗುಣ (ನಿರ್ವಿಶೇಷ) ವೇ ಅಪ್ರಾಮಾಣಿಕವೆಂದು ಈಕ್ಷತ್ಯಧಿಕರಣದಲ್ಲಿ ನಿರಾಕರಿಸಿರುವುದರಿಂದ ತನ್ನಿಮಿತ್ತವಾಗಿ ಪಾದಭೇದವು ಕೂಡಲಾರದು. ಮತ್ತು ಪ್ರಧಾನಕ್ಕೆ ಶಬ್ದಬೋಧ್ಯತ್ವನಿರಾಕರಣವನ್ನು ಈಕ್ಷತ್ಯಧಿಕರಣಾನಂತರದಲ್ಲಿಯೇ ಮಾಡಬೇಕಿತ್ತು, ಆನಂತರ್ಯವನ್ನು ಬಿಟ್ಟು, ಮಧ್ಯೆ ವಿಚ್ಛೇದಮಾಡಲಿಕ್ಕೆ ಕಾರಣವೇ ಇಲ್ಲ. (7) ಹಾಗಾದರೆ, ಈ ಪಾದದಲ್ಲಿ ಏಳು ಅಧಿಕರಣಗಳು ಸಮನ್ವಯವಿಸ್ತಾರಕ್ಕೆ ಉಪಯುಕ್ತಗಳು ಅವುಗಳಲ್ಲಿ ಏಳು ಶಬ್ದಗಳಿಗೆ ಬ್ರಹ್ಮನಲ್ಲಿ ಸಮನ್ವಯವು ಸಿದ್ಧಿಸುವುದು ಆದಕಾರಣ, ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕಗಳಾದ ಎಲ್ಲಾ ಶಬ್ದಗಳಿಗೆ ಸಮನ್ವಯ ಸಿದ್ಧಿಯು ಇಲ್ಲಿ ಹೇಗೆ ಆಗುವುದು? ಇಲ್ಲವಾದರೆ ಸಮನ್ವಯ ಸೂತ್ರವೇ ಸಾಕು. ಈ ಅತ್ಯಲ್ಪ ವಿಸ್ತಾರದಿಂದ ಏನು ಪ್ರಯೋಜನವು? ಎಂದರೆ- ಹೀಗೆ ಹೇಳಬಾರದು. ಒಂದೊಂದು ಅಧಿಕರಣದಲ್ಲಿ ಸಮಾನನ್ಯಾಯವುಳ್ಳ ಅನೇಕ ಶಬ್ದರಾಶಿಗಳಿಗೆ ಸಮನ್ವಯ ನಿರ್ಣಯವಾಗುತ್ತದೆ. '**ಆಕಾಶ ಇತಿ ಹೋವಾಚ**' ಎನ್ನುವ ವಾಕ್ಯವಿಶೇಷಗ್ರಹಣವು, ಪೂರ್ವಪಕ್ಷವಿಶೇಷಗ್ರಹಣವು, ಸಿದ್ಧಾಂತಪ್ರಮಾಣ ವಿಶೇಷಗ್ರಹಣವು ಇಷ್ಟು ಉದಾಹರಣಕ್ಕಾಗಿಯೇ ಹೊರತು ಒಂದೇ ಶಬ್ದ ಸಮನ್ವಯಕ್ಕಾಗಿ ಎಂದು ತಿಳಿಯಬಾರದು. ಪ್ರತ್ಯೇಕವಾಗಿ ನಿಶ್ಚಯಿಸುವುದಾದರೆ ಶಾಸ್ತ್ರಕ್ಕೆ ಪರ್ಯವಸಾನವೇ ಇಲ್ಲವೆಂದಾಗಬೇಕಾಗುವುದು. ಸೂತ್ರಗಳಿಗೆ ಸರ್ವಶಾಖಾನಿರ್ಣಾಯಕತ್ವವು ಇಲ್ಲದೆ ಹೋಗುವುದು, ಹಾಗಾದರೆ, ನಿರ್ಣೇತವ್ಯಗಳಾದ ಶಬ್ದಗಳಿಗೆ ವಿಭಾಜಕೋಪಾಧಿಗಳನ್ನು ಹೇಳಬೇಕು. ಇಲ್ಲವಾದರೆ ಈ ಅಧಿಕರಣಕ್ಕೆ ಈ ವಾಕ್ಯವು ಉದಾಹರಣವೆಂದು ತಿಳಿಯಲು ಸಾಧ್ಯವಿಲ್ಲ. ಒಂದು ಅಧಿಕರಣಕ್ಕೆ ಸರ್ವಶಬ್ದಗಳೂ ಉದಾಹರಣಗಳಾದರೆ ಸರ್ವಥಾ ಬೇರೆ ಅಧಿಕರಣವನ್ನು ಆರಂಭಿಸದೇನೇ ಇರಬೇಕಾಗುವುದು, ಎಂದರೆ— ಸತ್ಯವೇ. ಪ್ರತ್ಯಧಿಕರಣದಲ್ಲಿಯೂ ನಿರ್ಣೇತವ್ಯಗಳಾದ ಅರ್ಥಗಳ ವಿಭಾಜಕೋಪಾಧಿಗಳು ಇರುತ್ತವೆ, ಎಂದು ಅಭಿಪ್ರಾಯವುಳ್ಳವರಾಗಿ ಆನಂದಮಯಾಧಿಕರಣದಲ್ಲಿ ನಿರ್ಣೇಯವಾದ ಶಬ್ದೋಪಾಧಿಯನ್ನು 'ಗುಣಿಸಾಮಾನ್ಯವಾಚಿನಾಂ' ಎನ್ನುವುದರಿಂದ ಹೇಳಿದರು (8) ಆನಂದಮಯಾದಿ ಶಬ್ದಗಳು ಗುಣಿಸಾಮಾನ್ಯವನ್ನು ಹೇಳುತ್ತವೆ. ಶತಕ್ರತು ಮೊದಲಾದ ಶಬ್ದಗಳಿಂದಲೆಂಬಂತೆ ಈ ಶಬ್ದಗಳಿಂದ ಗುಣಿವಿಶೇಷಗಳ ಪ್ರತೀತಿಯಾಗುವುದಿಲ್ಲ. ಆ ಶಬ್ದಗಳು ಮಯಟ್ ಪ್ರತ್ಯಯಾದಿಗಳಿಂದ ಬ್ರಹ್ಮನಿಂದ ಇರತವಾದುದನ್ನು ತಿಳಿಸಿಕೊಡುವುದರಿಂದ ಅನ್ಯತ್ರ ಪ್ರಸಿದ್ಧಗಳಾಗಿವೆ. (9) '**ಆನಂದೋ ಬ್ರಹ್ಮೇತಿ ವ್ಯಜಾನಾತ್**' '**ವಿಜ್ಞಾನಂ ಯಜ್ಞಂ ತನುತೇ**' ಇತ್ಯಾದಿಗಳಿಂದ ಶ್ರುತಗಳಾದ ಗುಣವಾಚಿಗಳಾದ ಆನಂದಾದಿಶಬ್ದಗಳಾದರೂ ಗುಣಿಯಾದ ಬ್ರಹ್ಮನಲ್ಲಿ ಇರಲಿಕ್ಕೆ ಯೋಗ್ಯಗಳಾಗದಿರುವುದರಿಂದ ಅನ್ಯತ್ರ ಪ್ರಸಿದ್ಧಗಳಾಗಿವೆ. (10) ಗುಣಗುಣಿಗಳಿಗೆ ಅಭೇದವನ್ನಾದರೂ ಭಕ್ತಿಪಾದದಲ್ಲಿ ಅಹಿಕುಂಡಲಾಧಿಕರಣದಲ್ಲಿಯೇ ಸಾಕ್ಷಾತ್ ಸೂತ್ರಕಾರರು ಹೇಳುವರು. ಅಭೇದವಿದ್ದರೂ ಅಪರ್ಯಾಯತ್ವವು (ಶಬ್ದಸಾಂಕರ್ಯಾಭಾವವು) ಅರ್ಥಕ್ರಿಯಾದಿಸಾಂಕರ್ಯಾಭಾವವು ಯುಕ್ತವಾಗುತ್ತದೆಂದು ಸೂತ್ರಕಾರರು ಹೇಳುವರು ॥ ೧೫೫ ॥

**ತಾ ॥ ನ್ಯಾಯಸುಧಾ**—(1) ತೈತರೀಯೋಪನಿಷತ್ತಿನಲ್ಲಿ '**ಸವಾ ಏಷ ಪುರುಷೋಽನ್ನರಸಮಯಃ**' (ಪು.೧೨೪) ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯರು ಹೇಳಲ್ಪಟ್ಟಿರುತ್ತಾರೆ. ಈ ಅನ್ನಮಯಾದಿ ಐದುಶಬ್ದಗಳಿಂದ ವಾಚ್ಯನಾದವನು ಪರಮಾತ್ಮನೋ, ಅಥವಾ ಪರಮಾತ್ಮನಿಂದ ವ್ಯತಿರಿಕ್ತನಾದವನು ಯಾವನಾದರೊಬ್ಬನೋ? ಅನ್ನಮಯಾದಿ ಐದರಲ್ಲಿಯೂ ಬ್ರಹ್ಮಶಬ್ದವು ಶ್ರುತವಾಗಿದೆ ಅದಕ್ಕೆ ಶ್ರೀವಿಷ್ಣುವಿನಲ್ಲಿಯೂ ಬೇರೆಯವರಲ್ಲಿಯೂ ಪ್ರಯೋಗವಿದೆ. ಆದಪ್ರಯುಕ್ತ ಸಂಶಯವು. ಆದರೆ ಅನ್ನಮಯಾದಿ ಶಬ್ದಾರ್ಥನು ಶ್ರೀವಿಷ್ಣುವ್ಯತಿರಿಕ್ತನೇ. ಏಕೆಂದರೆ— ಅನ್ನಮಯಾದಿ ಶಬ್ದಗಳು ಅನ್ನವಿಕಾರ

ವಾಚಕಗಳು. ಮಯಟ್ ಪ್ರತ್ಯಯವು ವಿಕಾರಾರ್ಥದಲ್ಲಿದೆ. ವಿಕಾರವು ಶರೀರಾದಿ ಕೋಶಗಳಲ್ಲಿಯೇ ಕೂಡುತ್ತದೆ. (2) ಪ್ರಕೃತಿಯು ಸರ್ವವಿಕಾರಾತ್ಮಕವಾಗಿರುವುದರಿಂದ ಪ್ರಕೃತಿಯಲ್ಲಿಯೇ ಈ ಶಬ್ದವಾಚ್ಯತ್ವವು ಕೂಡುತ್ತದೆ. ಅಥವಾ ಜೀವರು ಅನ್ನಮಯಾದಿ ಶಬ್ದವಾಚ್ಯರು ಹೇಗೆಂದರೆ—ದೇಹದಲ್ಲಿ ಮಾತ್ರ ಗೌರತ್ವ, ಶ್ಯಾಮತ್ವ ಮೊದಲಾದವುಗಳು ಇದ್ದರೂ ಹೇಗೆ ಶರೀರಾಭಿಮಾನಿಯಾದ ಜೀವನು ಗೌರವೊದಲಾದ ಪದಗಳಿಂದ ವಾಚ್ಯನಾಗುತ್ತಾನೋ ಹಾಗೆಯೇ ಅನ್ನವಿಕಾರ ದೇಹಾಭಿಮಾನಿಯಾದ ಜೀವನು ಅನ್ನವಿಕಾರ ದೇಹವಾಚಿಯಾದ ಅನ್ನಮಯಾದಿ ಶಬ್ದಗಳಿಂದ ಹೇಳಲ್ಪಡುತ್ತಾನೆ ಅಥವಾ ವಜ್ರಸ್ವಾಮಿಯಾದಪ್ರಯುಕ್ತ ಇಂದ್ರನು ಹೇಗೆ ವಜ್ರವಾಚಕವಾದ 'ಅಶನಿ' ಎನ್ನುವ ಪದದಿಂದ ಹೇಳಲ್ಪಡುತ್ತಾನೋ ಹಾಗೆಯೇ ಬ್ರಹ್ಮಾದಿ ದೇವತೆಗಳು ಅನ್ನಾದಿಗಳಿಗೆ ನಿಯಾಮಕರಾಗಿರುವುದರಿಂದ ಅನ್ನಮಯಾದಿ ಶಬ್ದಗಳಿಂದ ಹೇಳಲ್ಪಡುತ್ತಾರೆ (3)'ನಿರ್ವಿಕಾರೋಽಕ್ಷರಃ ಶುದ್ಧಃ'ಇದುಮೊದಲಾದ ಪ್ರಮಾಣಗಳಿದ್ದಪ್ರಯುಕ್ತ ಪರಬ್ರಹ್ಮನಿಗೆ ವಿಕಾರವೂ ಕೂಡಲಾರದು. (4) ಯದ್ಯಪಿ 'ತಾದಾತ್ಮ್ಯೇರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿಧಾ' ಎಂದು ಸ್ಮೃತಿಯಿದ್ದಪ್ರಯುಕ್ತ ವಿಕಾರಾರ್ಥದಲ್ಲಿದ್ದಂತೆಯೇ ಪ್ರಾಚುರ್ಯಾರ್ಥದಲ್ಲಿಯೂ ಮಯಟ್‌ಪ್ರತ್ಯಯವಿದೆ. ಆದಾಗ್ಯೂ ಅನ್ನಮಯಶಬ್ದವು ವಿಕಾರಾರ್ಥಕವೆಂದಂಗೀಕರಿಸತಕ್ಕದ್ದು. 'ಓಷಧೀಭ್ಯೋಽನ್ನಂ ಅನ್ನಾತ್ಪುರುಷಃ' ಎಂದು ಓಷಧಿಗಳಿಂದ ಹುಟ್ಟಿರುವ ಅನ್ನವಿಕಾರವಾದ ಪುರುಷಶಬ್ದದಿಂದ ಹೇಳಲ್ಪಡುವ ಶರೀರವನ್ನುಪಕ್ರಮಿಸಿ 'ಸ ವಾ ಏಷ ಪುರುಷೋಽನ್ನರಸಮಯಃ' ಎಂದುಕ್ತವಾಗಿದೆ. 'ತಸ್ಯೇದಮೇವ ಶಿರಃ' ಎಂದು ಪ್ರತ್ಯಕ್ಷವಾಗಿ ನಿರ್ದಿಷ್ಟವಾಗಿದೆ. ಅಂತೂ ಎರಡು ವಿಧವಾಗಿ ಕಲ್ಪನೆಯೇ ಕೂಡದಿರುವುದರಿಂದ ಎಲ್ಲಾ ಕಡೆಗಳಲ್ಲಿಯೂ ವಿಕಾರಾರ್ಥಕವೆಂದೇ ಅಂಗೀಕರಿಸತಕ್ಕದು. (5) ಮತ್ತು ಅನ್ನಮಯಾದಿಗಳು ಐದು ಇವೆ. ಬ್ರಹ್ಮನಾದರೂ ಒಬ್ಬನೇ. ಆದಕಾರಣ ಆತನೊಬ್ಬನು ಈ ಐದು ಶಬ್ದಗಳಿಂದ ಹೇಗೆ ಹೇಳಲ್ಪಡುತ್ತಾನೆ? (6) ಮತ್ತು ಈ ಪ್ರಾಣಮಯಮೊದಲಾದ ನಾಲ್ಕುಮಂದಿ ಪರಸ್ಪರವಾಗಿ ಭಿನ್ನಗಳೆಂದೂ, ಶರೀರಶರೀರಿಭಾವಾಪನ್ನಗಳೆಂದೂ, ಅಂತರವೆಂದೂ 'ತಸ್ಮಾದ್ವಾ ಏತಸ್ಮಾದನ್ಯೋಽಂತರ ಆತ್ಮಾ ಪ್ರಾಣಮಯಃ' 'ತಸ್ಯೈಷ ಏವ ಶಾರೀರ ಆತ್ಮಾ' ಇದುಮೊದಲಾದ ಶ್ರುತಿಗಳಿಂದ ಹೇಳಲ್ಪಡುತ್ತಾರೆ. ಬ್ರಹ್ಮನು ಹೀಗೆ ಆಗಲಿಕ್ಕೆ ಯೋಗ್ಯನಾಗುವುದಿಲ್ಲ. ಹಾಗಾದರೆ ಎಲ್ಲಾ ವಸ್ತುಗಳ ಅಂತರ್ಗತನಾಗಿರುವುದರಿಂದ ಆನಂದಮಯನು ಬ್ರಹ್ಮನಾಗಲಿ, ಎಂದು ಹೇಳಕೂಡದು. ವಿಕಾರಪ್ರವಾಹದಲ್ಲಿಯೇ ಇದೂ ಪ್ರವಿಷ್ಟವಾಗಿದೆ. ಆನಂದಮಯನು ಅನ್ನಮಯಾದಿಗಳ ಅಂತರನೆನ್ನುವುದರಿಂದ ಮಾತ್ರ ಸರ್ವಾಂತರನೆಂದು ನಿಶ್ಚಿತನಾಗುವುದಿಲ್ಲವಷ್ಟೆ. (7) ಮತ್ತು 'ಬ್ರಹ್ಮವಿದಾಪ್ನೋತಿ ಪರಂ' ಎಂದು ಪ್ರಕೃತನಾದ ಪರಬ್ರಹ್ಮನು 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎನ್ನುವುದರಿಂದ ಆನಂದಮಯನಿಗೆ ಅವಯವನೆಂದು ತೋರುತ್ತಾನೆ. ವಿರುದ್ಧವಾಗಿರುವುದರಿಂದ ಅವಯವವೇ ಅವಯವಿಯು ಆಗಲಾರದು. ಆದಕಾರಣ ಆನಂದಮಯಮೊದಲಾದುದು ಐದೂ ಬ್ರಹ್ಮರೂಪಗಳಲ್ಲ. ಬ್ರಹ್ಮವ್ಯತಿರಿಕ್ತಗಳಾದ ಕೋಶಾದಿಗಳೇ. ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸಿದ್ಧಾಂತೀಕರಿಸತಕ್ಕ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

ಮೂ ॥ ಸಮುದ್ರಶಾಯಿನಂ ಸರ್ವಪ್ರಸೂತಿಪ್ರಭವಂ ಶ್ರುತಿಃ ॥ ೧೫೬ ॥
ತದೇವ ಬ್ರಹ್ಮಪರಮಮಿತಿ ಸಾವಧೃತಿರ್ಜಗೌ ।
ಯತೋಽತೋ ಬ್ರಹ್ಮಶಬ್ದಸ್ಯ ತತ್ರೈವ ನಿಯತತ್ವತಃ ॥ ೧೫೭ ॥

**ಯೋಽನ್ನಂ ಬ್ರಹ್ಮೇತ್ಯಾದಿರೂಪಾದಭ್ಯಾಸಾತ್ತೈತ್ತಿರೀಯಕೇ ।**
**ಅನ್ಯಾಸು ಚೈತದ್ರೂಪಾಸು ಶಾಖಾಸ್ವಪಿ ಸಹಸ್ರಶಃ ॥**
**ಆನಂದಮಯ ಇತ್ಯಾದ್ಯೈಃ ಶಬ್ದೈರ್ವಾಚ್ಯೋ ಹರಿಃ ಸ್ವಯಂ ॥**
**॥ ೧೫೮ ॥**

ಅ ॥ ತದೇವ ಬ್ರಹ್ಮ ಪರಮಮಿತಿ=ಜ್ಞಾನಿಗಳಾದ ಬ್ರಹ್ಮಾದಿಗಳ ಮತದಲ್ಲಿ ಆ ವಿಷ್ಣುವನ್ನೇ ಪರಬ್ರಹ್ಮನೆಂದು ಹೇಳುತ್ತಾರೆ ಎಂದು, ಸಾವಧೃತಿಃ=ಅವಧಾರಣದಿಂದ ಯುಕ್ತವಾದ, ಶ್ರುತಿಃ= ಶ್ರುತಿಯು, ಸಮುದ್ರಶಾಯಿನಂ=ಸಮುದ್ರದಲ್ಲಿ ಮಲಗಿಕೊಂಡಿರುವವನು, ಸರ್ವಪ್ರಸೂತಿ ಪ್ರಭವಂ=ಎಲ್ಲಾ ವಸ್ತುಗಳಿಗೂ ಉತ್ಪಾದಕಳಾದ ಲಕ್ಷ್ಮೀದೇವಿಗೂ ಉತ್ಪಾದಕನೂ ಆದ ಶ್ರೀ ವಿಷ್ಣುವನ್ನೇ, ಬ್ರಹ್ಮಶಬ್ದವಾಚ್ಯನನ್ನಾಗಿ, ಯತಃ=ಯಾವಕಾರಣದ್ದೆಶೆಯಿಂದ, ಜಗೌ= ಹೇಳಿತೋ, ಅತಃ=ಆದಕಾರಣ, ಬ್ರಹ್ಮಶಬ್ದಸ್ಯ=ಬ್ರಹ್ಮಶಬ್ದಕ್ಕೆ, ತತ್ರೈವ=ಆ ವಿಷ್ಣುವಿನಲ್ಲಿಯೇ, ನಿಯತತ್ವತಃ=ವ್ಯಾಪ್ತಿಯಿದ್ದಪ್ರಯುಕ್ತ, ಯೋಽನ್ನಂ ಬ್ರಹ್ಮೇತ್ಯಾದಿ ರೂಪಾತ್ ಅಭ್ಯಾಸಾತ್= 'ಯೋಽನ್ನಂ ಬ್ರಹ್ಮೋಪಾಸತೇ, ಯೋ ಪ್ರಾಣಂ ಬ್ರಹ್ಮೋಪಾಸತೇ, ಆನಂದಂ ಬ್ರಹ್ಮಣೋ ವಿದ್ವಾನ್, ವಿಜ್ಞಾನಂ ಬ್ರಹ್ಮ ಚೇದ್ವೇದ, ಅಸದ್ಬ್ರಹ್ಮೇತಿ ವೇದ ಚೇತ್, (ತೈ. ಉ ಪು. ೧೨೫-೧೨೯)ಎಂದು ಅನ್ನಮಯಾದಿ ವಿಷಯವಾಗಿ ಉದಾಹೃತಗಳಾದ ಶ್ಲೋಕ ಗಳಲ್ಲಿ ಬ್ರಹ್ಮಶಬ್ದಕ್ಕೆ ಅಭ್ಯಾಸವಿದ್ದಪ್ರಯುಕ್ತ (ಅಂದರೆ ಅನ್ನಮಯಾದಿ ವಿಷಯವಾಗಿ ಬ್ರಹ್ಮ ಶಬ್ದವು ಶ್ರುತವಾಗಿರುವುದರಿಂದ), ತೈತ್ತಿರೀಯಕೇ=ತೈತ್ತಿರೀಯೋಪನಿಷತ್ತಿನಲ್ಲಿಯೂ, ಅನ್ಯಾಸು ಚ=ಇತರಗಳಾದ, (ಅಂದರೆ ನಿರ್ಣಯಿಸಲಿಕ್ಕೆ ಯೋಗ್ಯಗಳಾದ) ಏತದ್ರೂಪಾಸು=ಗುಣಿ ಸಾಮಾನ್ಯವನ್ನು ಹೇಳುವವುಗಳೂ ಮತ್ತು ಗುಣವಾಚಕಗಳೂ ಆದ ಯಾವ ನಾಮಗಳೋ ಅವುಗಳಿಂದ ಯುಕ್ತಗಳಾದ, ಸಹಸ್ರಶಃ ಶಾಖಾಸ್ವಪಿ=ಸಾವಿರಾರು ಶಾಖೆಗಳಲ್ಲಿಯೂ, ಆನಂದ ಮಯ ಇತ್ಯಾದ್ಯೈಃ ಶಬ್ದೈಃ=ಆನಂದಮಯಎನ್ನುವುದೇ ಮೊದಲಾದ ಶಬ್ದಗಳಿಂದ, ಹರಿಃ= ಶ್ರೀಪರಮಾತ್ಮನು, ಸ್ವಯಂ=ತಾನು, ವಾಚ್ಯಃ=ಹೇಳಲ್ಪಡುತ್ತಾನೆ.

ತಾ ॥ ನ್ಯಾಯಸುಧಾ— (1) ತೈತ್ತಿರೀಯಕೇ ಅನ್ಯಾಸು ಚೈತದ್ರೂಪಾಸು—ಹರಿಃ ಸ್ವಯಂ, ಇಷ್ಟರಿಂದ ಆನಂದಮಯನು ಎನ್ನುವ ಪ್ರತಿಜ್ಞಾಭಾಗವು ವ್ಯಾಖ್ಯಾತವಾಯಿತು. (2) ತೈತ್ತಿರೀಯಕೇ ಎನ್ನುವುದರಿಂದ ಉದಾಹರಣವಾಕ್ಯಗ್ರಹಣವು (3) ಅನ್ಯಾಸು ಎನ್ನುವುದರಿಂದ ನಿರ್ಣೇತವ್ಯವನ್ನು ಹೇಳಿದರು. (4) ಅನ್ನಮಯಾದಿವಿಷಯವಾಗಿ ಬ್ರಹ್ಮ ಶಬ್ದವು ಶ್ರುತವಾಗಿದೆ ಎನ್ನುವುದು ಹೇತುವು. ॥ ೧೫೬ ॥ ೧೫೭ ॥ ೧೫೮ ॥

ಹಾಗಾದರೆ ಸೂತ್ರದಲ್ಲಿ 'ಆನಂದಮಯಃ' ಎಂದೇ ಪ್ರತಿಜ್ಞಾ ಮಾಡಿರುವರು. ಆದ ಕಾರಣ 'ಆನಂದಮಯ ಇತ್ಯಾದ್ಯೈಃ' ಎಂದು ವ್ಯಾಖ್ಯಾನವು ಹೇಗೆ ಕೂಡುತ್ತದೆಂದರೆ—

**ಮೂ ॥ ಉಪಲಕ್ಷಣತ್ವಂ ಶಬ್ದಾನಾಮಾನಂದಮಯಪೂರ್ವಿಣಾಂ ॥ ೧೫೯ ॥**
**ಸೂತ್ರಸ್ಯಾಲ್ಪಾಕ್ಷರತ್ವೇನ ಸರ್ವಶಾಖಾವಿನಿರ್ಣಯೇ ॥**
**ಪುನಶ್ಚ ಪ್ರಾಪಕಾದ್ಧೇತೋಸ್ತತ್ರಾಧಿಕರಣಾಂತರಂ ।**
**ಸರ್ವೇ ವೇದಾ ಆಮನಂತಿ ಯತ್ಪದಂತ್ವಿತಿ ಹಿ ಶ್ರುತಿಃ ॥ ೧೬೦ ॥**

ಅ ॥ ಆನಂದಮಯಪೂರ್ವಿಣಾಂ=ಆನಂದಮಯ ಎನ್ನುವುದೇ ಮೊದಲಾಗಿ ಉಳ್ಳ ಅಂದರೆ 'ಆನಂದಮಯಃ, ಅಂತರಃ, ದ್ಯುಭ್ವಾದ್ಯಾಯತನಂ' ಇದು ಮೊದಲಾದ ಸೂತ್ರ

ಗಳಲ್ಲಿರತಕ್ಕ ಅಥವಾ ಆನಂದಮಯ ಎನ್ನುವುದು ಮೊದಲನೆಯದ್ದಾಗಿವುಳ್ಳ, ಶಬ್ದಾನಾಂ= ಆಯಾಯ ಶಾಖೆಗಳಲ್ಲಿರತಕ್ಕ, ಅನ್ನಮಯಾದಿ ಶಬ್ದಾಂತರಗಳಿಗೆ, ಉಪಲಕ್ಷಣತ್ವಂ= ತನ್ನ ಅರ್ಥವನ್ನು ಬಿಡದೆ ಅನ್ವರ್ಥಸ್ವೀಕಾರವು, (ಅಸ್ತಿ=ಇದೆ ಆಯಾಯ ನಿರ್ದೇಶಬಲದಿಂದಲೇ ಅವುಗಳಿಗೂ ಗ್ರಹಣವಾಗುವುದು) ಸೂತ್ರಸ್ಯ = ಬ್ರಹ್ಮಸೂತ್ರಗಳಿಗೆ, ಅಲ್ಪಾಕ್ಷರತ್ವೇನ = ಅಲ್ಪಾಕ್ಷರತ್ವವಿದ್ದ ಪ್ರಯುಕ್ತವೇ, ಸರ್ವಶಾಖಾವಿನಿರ್ಣಯೇ=ಎಲ್ಲಾ ಶಾಖೆಗಳನ್ನು ಚೆನ್ನಾಗಿ ನಿರ್ಣಯಮಾಡುವುದಕ್ಕಾಗಿಯೇ, (ಪ್ರವೃತ್ತವಾಗಿರುವುದರಿಂದ ಉಪಲಕ್ಷಣತ್ವವನ್ನು ಹೇಳಲೇ ಬೇಕು.) (ನ. ಚ ವಿ. ಹಾಗಾದರೆ ಆಯಾಯ ಸಮಾಖ್ಯಾಬಲದಿಂದಲೇ ಸರ್ವಶಾಖೆಗಳಿಗೂ ಸಮನ್ವಯವು ಕೂಡುವುದರಿಂದ ಅಧಿಕರಣಾಂತರಗಳನ್ನು ಏಕೆ ಆರಂಭಿಸಿದ್ದೆಂದರೆ-) ಪುನಶ್ಚ= ಮತ್ತು, ಪ್ರಾಪಕಾತ್ ಹೇತೋಃ=ಸಮಾಖ್ಯಾದಿಗಳಿಗೆ ಪ್ರಾಬಲ್ಯವಿದ್ದಪ್ರಯುಕ್ತ ಶಂಕೆಯನ್ನು ಹೊಂದಿಸಿಕೊಡತಕ್ಕ ಹೇತುವನ್ನು ನಿಮಿತ್ತೀಕರಿಸಿಕೊಂಡು, ಆ ಹೇತುವನ್ನು ನಿರಾಕರಿಸುವುದಕ್ಕಾಗಿ, ಅಥವಾ ಅತಿಪ್ರಾಬಲ್ಯದಿಂದ ಸಿದ್ಧಾಂತಪ್ರಾಪಕ ಹೇತುವಿನಿಂದ, ಅಧಿಕರಣಾಂತರಂ= ಬೇರೆ ಅಧಿಕರಣವು, (ಆವಶ್ಯಕವು.) (ನ್ಯಾಯಸುಧಾ—) ಅಥವಾ ಪುನಶ್ಚ ಮತ್ತು, ತತ್ರ= ಪೂರ್ವಾಧಿಕರಣದಲ್ಲಿ ವ್ಯುತ್ಪಾದಿತವಾದ ನ್ಯಾಯವಿಷಯವಾದ ಅರ್ಥದಲ್ಲಿಯೂ, ಪ್ರಾಪಕಾತ್ ಹೇತೋಃ=ಪೂರ್ವನ್ಯಾಯವನ್ನು ಆಚ್ಛಾದನೆ ಮಾಡುವ ಅಧಿಕ ಆಶಂಕಾರೂಪವಾದ ಪುನಃ ಅಧಿಕರಣಾಂತರವನ್ನು ಆರಂಭಿಸಿಕೊಡುವ ಹೇತುವಿದ್ದಪ್ರಯುಕ್ತ, ಅಧಿಕರಣಾಂತರಂ= ಬೇರೆ ಅಧಿಕರಣಾರಂಭವು ಯುಕ್ತವಾಗುತ್ತದೆ. ಸರ್ವೇ ವೇದಾಃ = ಎಲ್ಲಾ ವೇದಗಳು, ಯತ್ಪದಂ ತು= ಯಾರ ಸ್ವರೂಪವನ್ನಾದರೂ, ಆಮನಂತಿ=ತಿಳಿಸಿಕೊಡುತವ್ರೋ, ಇತಿ ಹಿ= ಹೀಗೆಯೇ, ಶ್ರುತಿಃ ಕಠಶ್ರುತಿಯು. (ಅಸ್ತಿ =ಇದೆ.) ಅಂತೂ ಅನಂತಾನಂತ ವೇದವಾಚ್ಯನಾದ ಪರಬ್ರಹ್ಮನನ್ನು ಪ್ರತಿಪಾದಿಸುವುದು ಉಪಲಕ್ಷಣದಿಂದಲೇ ಯುಕ್ತವಾಗುತ್ತದೆಂದಭಿಪ್ರಾಯವು.)

ತಾ || ನ್ಯಾಯಸುಧಾ— (1) ಆನಂದಮಯಶಬ್ದವು ಆನಂದಮಯನನ್ನುಮಾತ್ರ ತಿಳಿಸಿಕೊಡುವುದಾದರೆ ವ್ಯಾಖ್ಯಾನ ('ಆನಂದಮಯಇತ್ಯಾದ್ಯೈಃ ಶಬ್ದೈಃ' ಈ ಮೂಲದಿಂದ ಮಾಡತಕ್ಕದ್ದು.) ವ್ಯಾಖ್ಯೇಯ ('ಆನಂದಮಯೋಭ್ಯಾಸಾತ್' ಎನ್ನುವಲ್ಲಿದ್ದ ಆನಂದಮಯ ಎನ್ನುವುದು) ಗಳಿಗೆ ವಿಸಂವಾದವು ಬರುತ್ತಿತ್ತು. ಹೀಗೆ ಅಲ್ಲವಷ್ಟೇ. ಮತ್ತೆ ಇಲ್ಲಿ ಆನಂದಮಯ ಶಬ್ದವು ಸಮಾನ ನ್ಯಾಯಾಪನ್ನಗಳಾದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮಯ ಶಬ್ದಗಳಿಗೆ ಉಪಲಕ್ಷಣವು. ಇದೇರೀತಿಯಾಗಿ ಮೇಲಿನ ಅಧಿಕರಣಗಳಲ್ಲಿಯೂ ಆಕಾಶಾದಿ ಶಬ್ದಗಳೂ ಶಬ್ದಾಂತರಗಳಿಗೆ ಉಪಲಕ್ಷಕವೆಂದು ತಿಳಿಯತಕ್ಕದ್ದು. (2) ಹಾಗಾದರೆ ಮುಖ್ಯಾರ್ಥಕ್ಕೆ ಬಾಧವಿದ್ದು ಮುಖ್ಯಾರ್ಥಸಂಬಂಧವಿದ್ದು ಪ್ರಯೋಜನವೂ ಇದ್ದರೇನೇ ಶಕ್ಯಾರ್ಥ ಸಂಬಂಧರೂಪವಾದ ಲಕ್ಷಣೆಯು ದೃಷ್ಟವಾಗಿದೆ. ಆದಕಾರಣ ಇಲ್ಲಿ ವಾಚಕವಾದ ಶಬ್ದಪ್ರಯೋಗವು ಕೂಡುವಾಗ ಲಾಕ್ಷಣಿಕವಾದ ಶಬ್ದವನ್ನು ಪ್ರಯೋಗಮಾಡುವುದರಲ್ಲಿ ಸೂತ್ರಕಾರರಿಗೆ ಏನು ಪ್ರಯೋಜನವು? ಎಂದರೆ— 'ಸೂತ್ರಸ್ಯಾಲ್ಪಾಕ್ಷರತ್ವೇನ' ಎಂದು. ಅಂದರೆ ಮುಖ್ಯಪ್ರಯೋಜನವನ್ನೇ ಮಾಡಿದರೆ ಆಗ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಾಃ ಎಂದು ಪ್ರಯೋಗಮಾಡಬೇಕಿದ್ದಿತು. ಆಗ ಸೂತ್ರಗಳಿಗೆ ಅಲ್ಪಾಕ್ಷರತ್ವರೂಪವಾದ ಲಕ್ಷಣವು ಕೂಡದೆ ಹೋಗುವುದು ಶಬ್ದದಿಂದಾಗಲೀ ಅಭಿಪ್ರಾಯದಿಂದಾಗಲೀ ತಿಳಿಯಲ್ಪಡತಕ್ಕ ಅರ್ಥವನ್ನು ಹೇಳದಿರುವುದೇ ಅಲ್ಪಾಕ್ಷರತ್ವವು. ಈ ಅರ್ಥವಾದರೂ '**ಬ್ರಹ್ಮಶಬ್ದಸ್ಯ ಚಾಭ್ಯಾಸಾತ್ಪಂಚ ರೂಪಾದಿಷು ಸ್ಫುಟಂ**' ಎನ್ನುವುದನ್ನು ವ್ಯಾಖ್ಯಾನಮಾಡುವ ಕಾಲದಲ್ಲಿ ಅಭಿಪ್ರಾಯತಃ ತಿಳಿಯಲ್ಪಡುತ್ತದೆಂದು ಹೇಳುವೆವು.

ಆದಪ್ರಯುಕ್ತ ಅಲ್ಪಾಕ್ಷರತ್ವರೂಪ ಪ್ರಯೋಜನವಿದ್ದುದರಿಂದ ಸೂತ್ರಕಾರರು ಲಾಕ್ಷಣಿಕ ಪ್ರಯೋಗವನ್ನು ಮಾಡಿರುವರು. (3) ಹಾಗಾದರೆ ಸೂತ್ರದಲ್ಲಿ ಯಥಾಶ್ರುತವಾಗಿಯೇ ಇಟ್ಟುಕೊಂಡರೆ ದೋಷವೇನಿದೆ? ಲಕ್ಷಣಾವೆಂದು ಏಕೆ ವ್ಯಾಖ್ಯಾನಮಾಡಬೇಕು, ಎಂದರೆ— ಸೂತ್ರದಲ್ಲಿ ಶ್ರುತವಾದಹಾಗೆಯೇ ಇಟ್ಟುಕೊಂಡರೆ ನೂರು ಸೂತ್ರಗಳಿಂದ ನೂರು ವಾಕ್ಯಗಳ ಸಮನ್ವಯಮಾತ್ರವೇ ಸಿದ್ಧಿಸುವುದು. ಸರ್ವಶಾಖೆಗಳ ನಿರ್ಣಯವು ಆಗಲಾರದು. ಈ ಸೂತ್ರಗಳಾದರೂ ಸರ್ವಶಾಖೆಗಳನ್ನು ನಿರ್ಣಯಿಸುವುದಕ್ಕಾಗಿಯೇ ಪ್ರವೃತ್ತಗಳಾಗಿವೆ. ಅವುಗಳನ್ನು ನಿರ್ಣಯಿಸಲಿಕ್ಕೆ ಬೇರೆ ಸೂತ್ರಗಳು ಇಲ್ಲವು. ಆದಕಾರಣ ಸರ್ವಶಾಖಾನಿರ್ಣಾಯಕತ್ವವು ಬೇರೆ ರೀತಿಯಾಗಿ ಕೂಡದಿರುವುದರಿಂದ ಯಥಾಶ್ರುತವಾದುದನ್ನು ಬಿಟ್ಟು ಲಕ್ಷಣಾವೆಂದು ವ್ಯಾಖ್ಯಾನ ಮಾಡಬೇಕೆಂದು ತಿಳಿಯುತ್ತದೆ ಲಕ್ಷಣಾವನ್ನ ಆಶ್ರಯಿಸಿದರೆ ಸರ್ವಶಾಖಾ ನಿರ್ಣಯವು ಸಿದ್ಧಿಸುವುದು. (4) ಹಾಗಾದರೆ ಯಥಾಶ್ರುತವನ್ನು ಇಟ್ಟುಕೊಂಡರೆ ಸೂತ್ರಗಳಿಗೆ ವಿಶ್ವತೋಮುಖತ್ವವು ಕೂಡಲಿಕ್ಕಿಲ್ಲವೆನ್ನುವ ಬಾಧಕವು ಹೇಗೆ ಇದೆಯೋ, ಹಾಗೆಯೇ ಉಪಲಕ್ಷಣವೆಂದು ಆಶ್ರಯಿಸಿದರೂ ಬಾಧಕವು ಇದ್ದೇಯಿದೆ. ಹೇಗೆಂದರೆ— ಆನಂದಮಯ ಶಬ್ದವು ಅನ್ನಮಯಾದಿಗಳಿಗೆ ಉಪಲಕ್ಷಕವೆಂದು ಹೇಳಿದಂತೆಯೇ ಎಲ್ಲಾ ಆಕಾಶಾದಿ ಶಬ್ದಗಳಿಗೂ ಉಪಲಕ್ಷಕವೆಂದು ಹೇಳಲು ಶಕ್ಯವಾಗುವುದರಿಂದ ಮೇಲಿನ ಎಲ್ಲಾ ಅಧಿಕರಣಗಳಿಗೂ ಆರಂಭವೇ ಕೂಡಲಾರದು, ಎಂದರೆ— ೧ ಸಮಾನ ನ್ಯಾಯವುಳ್ಳ ಶಬ್ದಾಂತರಗಳನ್ನು (ಅನ್ನಮಯಾದಿಗಳನ್ನು) ವಿಷಯೀಕರಿಸಿಕೊಂಡಿರುವ ಅಧಿಕರಣಗಳಿಗೆ ಆರಂಭವೇ ಕೂಡದೆ ಹೋಗಬೇಕಾಗುವುದು ಎನ್ನುವುದು ಬಾಧಕವೋ? ೨ ಅಥವಾ ನ್ಯಾಯಾಂತರಕ್ಕೆ ವಿಷಯಗಳಾದ ಶಬ್ದಗಳೇ (ಆಕಾಶಾದಿ ಶಬ್ದಗಳೇ) ವಿಷಯವಾಗಿವುಳ್ಳ ಅಧಿಕರಣಗಳಿಗೆ ಆರಂಭವೇ ಕೂಡದೆ ಹೋಗಬೇಕಾಗುವುದು ಎನ್ನುವುದು ಬಾಧಕವೋ? ಇವುಗಳಲ್ಲಿ (೧) ಒಂದನೇದ್ದು ಇಷ್ಟವಾಗಿದೆ. (೨) ಎರಡನೇದ್ದು ಕೂಡಲಾರದು. ವೈಷಮ್ಯವಿದೆ. ಅನ್ನಮಯಾದಿ ಶಬ್ದಗಳಾದರೂ ಸಮಾನನ್ಯಾಯವುಳ್ಳವುಗಳಾದುದರಿಂದ ಶಕ್ಯಾರ್ಥಸಂಬಂಧದಿಂದ ಉಪಲಕ್ಷಿತಗಳಾಗುತ್ತವೆ. ಆದರಿಂದ ಬೇರೆಯಾದ ಆಕಾಶಾದಿ ಶಬ್ದಗಳು ಶಕ್ಯಸಂಬಂಧವಿಲ್ಲದಿರುವುದರಿಂದ ಉಪಲಕ್ಷಿತಗಳಾಗುವುದಿಲ್ಲ. ಸಂಬಂಧವಿಲ್ಲದೆ ಲಕ್ಷಣಾ ಎಲ್ಲಿಯೂ ದೃಷ್ಟವಾಗಲಿಲ್ಲವಷ್ಟೆ. (5) ಹಾಗಾದರೆ ಸಮಾನನ್ಯಾಯ ವಿಷಯತ್ವವಿದ್ದಾಗ್ಯೂ ಅಧಿಕರಣಾಂತರಾರಂಭವು ದೃಷ್ಟವಾಗಿದೆ. ಉಪಲಕ್ಷಣವೆನ್ನುವ ಕಲ್ಪದಲ್ಲಿ ಅಧಿಕರಣಾಂತರಾರಂಭವು ಕೂಡದೆಹೋಗಬೇಕಾಗುವುದು. ಎಂದರೆ—'ಪುನಶ್ಚ ಪ್ರಾಪಕಾತ್' ಎಂದು. ಅಂದರೆ, ನ್ಯಾಯಸಮಾನವಾಗಿದ್ದರೂ ಅಧಿಕರಣಾಂತರಾರಂಭವು ಬೇರೆ ಯಾವ ರೀತಿಯಲ್ಲಿಯೂ ಕೂಡದೆಯಿರುವುದರಿಂದ ಯಥಾಶ್ರುತವಾಗಿಯೇ ಸೂತ್ರಾರ್ಥವೆಂದು ಹೇಳಿದ್ದು ಅಯುಕ್ತವು. ಅನ್ಯಥೋಪಪನ್ನವಾಗುತ್ತದೆ. ಅಧಿಕಾಶಂಕೆಯಿಂದ ಪೂರ್ವನ್ಯಾಯವಿಷಯತ್ವವಿಲ್ಲವೆಂದು ಪರರು ಶಂಕಿಸಲು ಅಧಿಕಾಶಂಕೆಯನ್ನು ನಿರಾಕರಿಸಿ ಪುನಃ ಪೂರ್ವನ್ಯಾಯವಿಷಯತ್ವವನ್ನು ತೋರಿಸುವುದಕ್ಕಾಗಿ ಅಧಿಕರಣಾಂತರಾರಂಭವು ಯುಕ್ತವಾಗುತ್ತದೆ. ಸಮಾನ ನ್ಯಾಯಾಕ್ರಾಂತಗಳಾದ ಶಬ್ದಗಳಿಗೆ ಉಪಲಕ್ಷಣತ್ವವಿಲ್ಲವೆನ್ನುವ ಪಕ್ಷದಲ್ಲಿ ಸೂತ್ರಗಳಿಗೆ ವಿಶ್ವತೋಮುಖತ್ವವಿಲ್ಲವೆನ್ನುವುದು ನಿರವಕಾಶವಾಗಿರುವುದರಿಂದ ಲಕ್ಷಣಾ ಎಂದು ಆಶ್ರಯಿಸುವುದೇ ನ್ಯಾಯವು (6) ಹಾಗಾದರೆ ಈ ಸೂತ್ರಗಳಿಗೆ ಸರ್ವಶಾಖಾನಿರ್ಣಾಯಕತ್ವವೇ ಇಲ್ಲ. ಸರ್ವಶಾಖೆಗಳು ಕಾರ್ಯ (ಕೃತಿಸಾಧ್ಯವಾಗಿದ್ದು ಕೃತ್ಯುದ್ದೇಶ್ಯವಾದುದು) ಪರವಾಗಿರುವುದರಿಂದ ಬ್ರಹ್ಮಪರಗಳೇ ಅಲ್ಲವು. ಬ್ರಹ್ಮಪರವಾದ ವೇದಾಂತ ಭಾಗವಾದರೂ ಅತ್ಯಲ್ಪವಾದುದು. ಲಕ್ಷಣಾವನ್ನು ಆಶ್ರಯಿಸದೆಯಿದ್ದರೂ ಸೂತ್ರಗಳಿಗೆ

ಯಥಾಶ್ರುತಾರ್ಥಗಳನ್ನು ಇಟ್ಟುಕೊಂಡು ನಿರ್ಣಯಿಸಲಿಕ್ಕೆ ಶಕ್ಯವಾಗುವುದು ಲಕ್ಷಣಾವನ್ನ ಆಶ್ರಯಿಸಿದರಿಂದ ಏನು ಪ್ರಯೋಜನವೆಂದರೆ— 'ಸರ್ವೇ ವೇದಾಃ' ಎಂದು. ಅಂದರೆ— ಎಲ್ಲಾ ವೇದಗಳೂ ಬ್ರಹ್ಮಪರಗಳೇ ಆಗಿವೆ ಎಂದು ಶ್ರುತಿಯು ಸಾರುತ್ತಿದೆ. ॥ ೧೫ ॥ ೧೬೦ ॥

ಇಲ್ಲಿ ಉಪಲಕ್ಷಣವೆಂದಭಿಪ್ರೇತವಾಗದಿದ್ದರೆ ಅನ್ನಮಯ ಶಬ್ದವು ಮೊದಲು ಇದ್ದ ಪ್ರಯುಕ್ತ 'ಅನ್ನಮಯೋಽಭ್ಯಾಸಾತ್' ಎಂದೇ ಹೇಳುತ್ತಿದ್ದರು. 'ಆನಂದಮಯೋಽಭ್ಯಾಸಾತ್' ಎಂದು ಆನಂದಮಯಶಬ್ದವನ್ನಾದರೂ ತೆಗೆದುಕೊಂಡ ಸೂತ್ರಕಾರರಿಗೆ ಅದು ಮಾತ್ರವೇ ವಿವಕ್ಷಿತವಾಗಿದೆ ಎಂದು ತಿಳಿಯುತ್ತದೆ, ಎಂದರೆ —

**ಮೂ ॥ ಆನಂದಮಯ ರೂಪೇ ತು ಬ್ರಹ್ಮಣಃ ಪುಚ್ಛತೋಕ್ತಿತಃ ।**
**ಸಮಸ್ತಬ್ರಹ್ಮತಾ ಪ್ರಾಪ್ತೇರಾನಂದಮಯನಾಮ ಹಿ ॥ ೧೬೧ ॥**

ಅ ॥ ಆನಂದಮಯರೂಪೇ ತು='ಅನ್ಯೋಽಂತರ ಆತ್ಮಾನಂದಮಯಃ' ಎಂದು ಪ್ರಸ್ತುತವಾದ ಆನಂದಮಯಾಖ್ಯರೂಪದಲ್ಲಿ ಆದರೂ, ಬ್ರಹ್ಮಣಃ ಪುಚ್ಛತೋಕ್ತಿತಃ=ಬ್ರಹ್ಮವಿದಾಪ್ನೋತಿ ಪರಂ ಎಂದುಕ್ತನಾದ ಬ್ರಹ್ಮನಿಗೆ 'ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ॥' (ಪು. ೧೭೮) ಎಂದು ಆನಂದಮಯನ ಪುಚ್ಛತ್ವವನ್ನು ಹೇಳಿರುವ ಪ್ರಯುಕ್ತ, ಸಮಸ್ತಾಬ್ರಹ್ಮತಾಪ್ರಾಪ್ತೇಃ = ಸಮಸ್ತ ಅವಯವಿಯಾದ ಆನಂದಮಯನಿಗೆ, ಅಬ್ರಹ್ಮತಾ ಪ್ರಾಪ್ತೇಃ=ಬ್ರಹ್ಮತ್ವವು ಪ್ರಾಪ್ತವಾಗದಿರುವುದರಿಂದ,(ಆನಂದಮಯನು ಬ್ರಹ್ಮನಾದರೆ ಆಗ ಆನಂದಮಯನ ಅವಯವನಾದ ಬ್ರಹ್ಮನಿಗೆ) ಸಮಸ್ತ=ಮುಖ್ಯವಾದ, ಆ ಬ್ರಹ್ಮತಾ=ಚೆನ್ನಾಗಿ ಬ್ರಹ್ಮತ್ವವು, ಅಪ್ರಾಪ್ತೇಃ=ಪ್ರಾಪ್ತಿಯಾಗದಿರುವುದರಿಂದ, ಆನಂದಮಯ ನಾಮ ಹಿ=ಆನಂದಮಯ ಎನ್ನುವ ನಾಮಧೇಯವು, ಹಿ=ಶ್ರುತ್ಯಾದಿ ಪ್ರಸಿದ್ಧವು. ಅಂತೂ ಆನಂದಮಯನ ವಿಷಯದಲ್ಲಿ ಅಬ್ರಹ್ಮತ್ವ ಪ್ರಾಪ್ತಿರೂಪವಾದ ಅಧಿಕಾನುಪಪತ್ತಿಯು ಇದ್ದುದರಿಂದ ಈ ವಿಷಯದಲ್ಲಿ ಜಾಗರೂಕರಾಗಿರಬೇಕೆಂದು ತಿಳಿಸುವುದಕ್ಕಾಗಿ ಸೂತ್ರಕಾರರು 'ಆನಂದಮಯಃ' ಎನ್ನುವ ನಾಮವನ್ನೇ ಗ್ರಹಣಮಾಡಿರುವರು.

**ತಾ ॥ ನ. ಚ. ವಿ.**— (1) ಆನಂದಮಯ ಸ್ವರೂಪದ ಅವಯವಕ್ಕೆ ಬ್ರಹ್ಮತ್ವವು ಪ್ರಾಪ್ತವಾಗದಿರುವುದರಿಂದ ಅದನ್ನು ನಿರಾಕರಿಸುವುದಕ್ಕಾಗಿ ಆನಂದಮಯನಾಮವು ಸೂಚಿತವಾಗಿದೆ. ಆದಕಾರಣ ಬ್ರಹ್ಮನು ಆನಂದಮಯನೇ. ಪುಚ್ಛವಲ್ಲ. ಅದನ್ನು ನಿರಾಕರಿಸದಿದ್ದರೆ ಬ್ರಹ್ಮನಿಗೆ ಅವಯವಿತ್ವವೇ ಸಿದ್ಧಿಸದಿರುವುದರಿಂದ ಬ್ರಹ್ಮಜಿಜ್ಞಾಸೆಯೇ ಕೂಡದೆ ಹೋಗುವುದು.

**ನ್ಯಾಯಸುಧಾ.**— (1) ಪುಚ್ಛಕ್ಕೆ ಮುಖ್ಯ ಬ್ರಹ್ಮತ್ವವಿಲ್ಲದಿದ್ದರೆ 'ಬ್ರಹ್ಮವಿದಾಪ್ನೋತಿ ಪರಂ' ಎಂದು ಹೇಳಿದ ಬ್ರಹ್ಮಜ್ಞಾನದಿಂದ ಪರಬ್ರಹ್ಮಪ್ರಾಪ್ತಿಯು ಶ್ರುತವಾದದ್ದು ಬಾಧಿತವಾಗಬೇಕಾಗುವುದು. (2) ಹಾಗಾದರೆ— ಅನ್ನಮಯನಲ್ಲಿಯೂ 'ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ । ಸ ವಾ ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ ॥" (ತೈ.ಉ.ಪು.೧೨೪.) ಎಂದು ಪ್ರಾಕೃತಾನ್ನ ವಿಕಾರದೇಹ ಪರಾಮರ್ಶಾದಿರೂಪವಾದ ಅಧಿಕವಾದ ಅನುಪಪತ್ತಿಯು ಇದ್ದೇ ಇದೆ, ಎಂದರೆ ಹಾಗೆ ಹೇಳಕೂಡದು. ಪರಾಮರ್ಶ ಪ್ರತ್ಯಕ್ಷನಿರ್ದೇಶ ಇವುಗಳಿಂದ ಅನ್ನವಿಕಾರಿಯಾದ ಶರೀರವನ್ನೇ ವಿವಕ್ಷಾಮಾಡಿಕೊಂಡರೆ ಅನ್ನಮಯ ಎನ್ನುವಲ್ಲಿದ್ದ ಮಯಟ್‌ಪ್ರತ್ಯಯಕ್ಕೆ ವಿಕಾರಾರ್ಥತ್ವವೇ ನ್ಯಾಯವು ಎಂದು ವಿಕಾರರೂಪ ಅರ್ಥವನ್ನು

ಉಪಪಾದಿಸುತ್ತಾ ಇದೂ ಅದರಲ್ಲಿಯೇ ಸೇರುತ್ತದೆ. (3) ಅಥವಾ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಜಿಜ್ಞಾಸ್ಯನಾಗಿ ಹೇಳಲ್ಪಟ್ಟ ಬ್ರಹ್ಮನಿಗೆ ಆನಂದಮಯನ ಪುಚ್ಛತ್ವವನ್ನು ಹೇಳಿದರಿಂದ, ಅವಯವಿಗೆ ಬ್ರಹ್ಮತ್ವವು ಪ್ರಾಪ್ತವಾಗದಿರುವುದರಿಂದ, ಆನಂದಮಯವಿಚಾರವೇ ಪ್ರಕೃತವಾದ ಜಿಜ್ಞಾಸಾ ಸೂತ್ರದಿಂದ ಸಂಗತವಾಗಿರುವುದರಿಂದ ಆನಂದಮಯನಾಮವನ್ನೇ ಗ್ರಹಣಮಾಡಿರುತ್ತಾರೆ ॥ ೧೬೧ ॥

ಹಾಗಾದರೆ, ಸೂತ್ರಗಳಿಗೆ ಉಪಲಕ್ಷಣತ್ವವಿಲ್ಲದಿದ್ದರೆ ಸರ್ವಶಾಖಾನಿರ್ಣಾಯಕತ್ವವಿಲ್ಲದೆ ಹೋಗಬೇಕಾಗುವುದೆಂಬುವ ಅನಿಷ್ಟವು ಪ್ರಸಕ್ತವಾಗುವುದರಿಂದ ಉಪಲಕ್ಷಣತ್ವವಿರಲಿ. ಆನಂದಮಯಶಬ್ದಕ್ಕೆ ಅನ್ನಮಯಾದ್ಯುಪಲಕ್ಷಣತ್ವವಿದೆ ಎನ್ನುವ ವಿಶೇಷವನ್ನು ಏಕೆ ಒಡಂಬಡಬೇಕೆಂದರೆ—

ಮೂ ॥ ಬ್ರಹ್ಮಶಬ್ದಸ್ಯ ಚಾಭ್ಯಾಸಾತ್ಪಂಚರೂಪಾದಿಷು ಸ್ಫುಟಂ ॥ ೧೬೨ ॥
ಬ್ರಹ್ಮತಾಽವಯವೇಽಪಿ ಸ್ಯಾತ್ತಥಾಽವಯವಿನಿ ಸ್ವತಃ ॥
ಯಥೈವ ಕೃಷ್ಣಕೇಶಸ್ಯ ಕೃಷ್ಣಸ್ಯ ಬ್ರಹ್ಮತಾಽಖಿಲಾ ।
ದರ್ಶಿತಾ ಚೈವ ಪಾರ್ಥಾಯ ನಿಸ್ಸೀಮಾಃ ಶಕ್ತಯೋಽಸ್ಯ ಹಿ ॥೧೬೩॥

ಅ ॥ ಪಂಚರೂಪಾದಿಷು = "ಯೋಽನ್ನಂ ಬ್ರಹ್ಮೋಪಾಸತೇ । ಯೋ ಪ್ರಾಣಂ ಬ್ರಹ್ಮೋಪಾಸತೇ । ಅಸ್ತಿ ಬ್ರಹ್ಮೇತಿ ಚೇದ್ವೇದ । ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮಜ್ಯೇಷ್ಠಮುಪಾಸತೇ । ಆನಂದಂ ಬ್ರಹ್ಮಣೋ ವಿದ್ವಾನ್" ಎಂದು। ೧ ಅನ್ನಮಯ, ೨ ಪ್ರಾಣಮಯ, ೩ ಮನೋಮಯ, ೪ ವಿಜ್ಞಾನಮಯ, ೫ ಆನಂದಮಯ— ಎನ್ನುವ ಐದು ರೂಪಗಳನ್ನು ಪ್ರತಿಪಾದಿಸುವ ಐದು ಪ್ರಕರಣದಲ್ಲಿಯೂ, "ಅಧೀಹಿ ಭಗವೋ ಬ್ರಹ್ಮೇತಿ ; ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ" ॥ ಇತ್ಯಾದಿ ಭಾಗವಿಶೇಷದಲ್ಲಿಯೂ, ಸ್ಫುಟಂ=ಸ್ಪಷ್ಟವಾಗಿ, ಬ್ರಹ್ಮಶಬ್ದಸ್ಯಚಾಭ್ಯಾಸಾತ್=ಬ್ರಹ್ಮಶಬ್ದಕ್ಕೆ ಅಭ್ಯಾಸವಿದ್ದಪ್ರಯುಕ್ತವೂ, ('ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದು ಪುಚ್ಛತ್ವವನ್ನು ಹೇಳಿರುವುದರಿಂದಲೂ) ಯಥೈವ=ಹೇಗೆ ತಾನೆ, ಕೃಷ್ಣಕೇಶಸ್ಯ = ಮೂಲರೂಪದ ಅವಯವಸ್ವರೂಪವಾದ ಕೃಷ್ಣಕೇಶರೂಪನಾದ, ಕೃಷ್ಣಸ್ಯ=ಶ್ರೀ ಕೃಷ್ಣನಿಗೆ, ಅಖಿಲಾ = ನಿರುಪಚರಿತವಾದ, ಬ್ರಹ್ಮತಾ = ಬ್ರಹ್ಮತ್ವವಿದೆಯೋ, ತಥಾ=ಹಾಗೆಯೇ, (ಸ. ಚ. ವಿ.) ಅವಯವಿನಿಸ್ವತಃ=ಬ್ರಹ್ಮನ ಅವಯವದಲ್ಲಿಯೇ (ಗಳಿಗೇನೇ) ಅವಯವಿಸ್ವರೂಪತ್ವವಿದ್ದಪ್ರಯುಕ್ತ, ಅವಯವೇಽಪಿ=ಎಲ್ಲಾ ಅವಯವದಲ್ಲಿಯೂ, ಬ್ರಹ್ಮತಾ= ಬ್ರಹ್ಮತ್ವವು, ಸ್ಯಾತ್=ಆಗುವುದು. ಅಥವಾ (ಸುಧಾ) ಅವಯವೇಽಪಿ=ಅವಯವದಲ್ಲಿಯೂ, ಬ್ರಹ್ಮತಾ=ಯಾವಾಗ ಪೂರ್ಣತ್ವವು ಇರುವುದೋ, ತಥಾ=ಹಾಗಾದರೆ, ಅವಯವಿನಿ=ಅವಯವಿಯಲ್ಲಿ, ಸ್ವತಃ=ಅನಾಯಾಸದಿಂದಲೇ, ಸ್ಯಾತ್=ಬರುವುದು. ಪಾರ್ಥಾಯ=ಅರ್ಜುನನಿಗೋಸ್ಕರ, ಬ್ರಹ್ಮತಾ=ಪೂರ್ಣತ್ವವು, ದರ್ಶಿತಾ ಚೈವ=ತೋರಿಸಲ್ಪಟ್ಟದೆ. ಅಸ್ಯ=ಈ ಶ್ರೀಹರಿಗೆ, ನಿಸ್ಸೀಮಾಃ=ನಿರವಧಿಕಗಳಾದ, ಶಕ್ತಯಃ=ಶಕ್ತಿಗಳು, ಹಿ=ಪ್ರಮಾಣಪ್ರಸಿದ್ಧವು.

ತಾ ॥ ನ್ಯಾಯಸುಧಾ— (1) ಆನಂದಮಯನಿಗೆ ಬ್ರಹ್ಮತ್ವವಿದೆ ಎನ್ನುವಲ್ಲಿ ಹೇತುವಾಗಿ ಹೇಳಲ್ಪಟ್ಟ ಬ್ರಹ್ಮಶಬ್ದಾಭ್ಯಾಸವು ಅನ್ನಮಯಾದಿಗಳಲ್ಲಿಯೂ ಸಮಾನವೇ. ತಥಾಚ, ಅನ್ನಮಯಾದಿಗಳಿಗೆ ಬ್ರಹ್ಮತ್ವವಿಲ್ಲದಿದ್ದರೆ ಅಲ್ಲಿರುವ ಬ್ರಹ್ಮಶಬ್ದಾಭ್ಯಾಸವು ವ್ಯಭಿಚರಿತವಾಗಿರುವಪ್ರಯುಕ್ತ ಆನಂದಮಯನಿಗೂ ಬ್ರಹ್ಮತ್ವವನ್ನು ಹೇಗೆ ಸಾಧಿಸಿಕೊಡುವುದು? ಆದಪ್ರಯುಕ್ತ

ಅನ್ನಮಯಾದಿಗಳಲ್ಲಿರತಕ್ಕ ಬ್ರಹ್ಮಶಬ್ದಾಭ್ಯಾಸವನ್ನು ಹೇತುವನ್ನಾಗಿ ಹೇಳಿದ ಸೂತ್ರಕಾರರು ಅನ್ನಮಯಾದಿಗಳಿಗೂ ಪಕ್ಷತ್ವವನ್ನೇ ಅಂಗೀಕರಿಸಿದ್ದಾರೆಂದು ತಿಳಿಯುತ್ತದೆ. (2) ಬ್ರಹ್ಮ ಶಬ್ದಸ್ಯ 'ಚ' ಎನ್ನುವಲ್ಲಿದ್ದ ಚ ಶಬ್ದವು 'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ' ಇತ್ಯಾದಿ ಸೂತ್ರದಲ್ಲಿ ಹೇಳಿದ ಮುಕ್ತಗಮ್ಯತ್ವ, ಮಾಂತ್ರವರ್ಣಿಕಗಾನ, ಭೃಗುವಲ್ಲೀಸಮಾಖ್ಯಾ ಮೊದಲಾದ ಹೇತು ಗಳಿಗೂ ಅನ್ನಮಯಾದಿ ಸಾಧಾರಣ್ಯವನ್ನು ಸೂಚಿಸುತ್ತದೆ. (3) 'ಪಂಚರೂಪಾದಿಷು' ಎನ್ನು ವಲ್ಲಿದ್ದ ಆದಿಶಬ್ದದಿಂದ 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಆನಂದಾದಿಗಳನ್ನು ಇಟ್ಟುಕೊಳ್ಳಬೇಕು ಆದಪ್ರಯುಕ್ತ ಅನ್ನಮಯಾದಿಗಳಲ್ಲಿ ಸಾಧಾರಣವಾದ ಬ್ರಹ್ಮಶಬ್ದಾಭ್ಯಾಸ ಮೊದಲಾದ ಬ್ರಹ್ಮತ್ವಸಾಧಕ ಹೇತುವನ್ನು ಸೂತ್ರಕಾರರು ಹೇಳಿರುವುದರಿಂದ ಅನ್ನಮಯ ಮೊದಲಾದ ಐದು ಶಬ್ದಗಳಿಂದ ವಾಚ್ಯನಾದವನು ಬ್ರಹ್ಮನೆಂದು ಹಿಂದೆ ಹೇಳಿದ ಸೂತ್ರಾರ್ಥವೇ ಯುಕ್ತವಾದುದು.

(4) ಹಾಗಾದರೆ— 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಬ್ರಹ್ಮನಿಗೆ ಆನಂದಮಯನ ಪುಚ್ಛತ್ವವನ್ನು ಹೇಳಿದುದರಿಂದ ಆನಂದಮಯನಿಗೆ ಬ್ರಹ್ಮತ್ವವು ಹೇಗೆ? ಬ್ರಹ್ಮಶಬ್ದವು ಜಿಜ್ಞಾಸ್ಯ ಬ್ರಹ್ಮನಿಂದ ವ್ಯತಿರಿಕ್ತರಾದ ಚತುರ್ಮುಖಾದಿಗಳ ಪರವೆನ್ನಕೂಡದು. ಹಾಗಾದರೆ— ಆನಂದ ಮಯನಲ್ಲಿಯೇ ವ್ಯಭಿಚಾರ ಬರಬೇಕಾಗುವುದು. (ಬ್ರಹ್ಮಸ್ವರೂಪ ಸಾಧ್ಯವಿಲ್ಲ. 'ಬ್ರಹ್ಮಶಬ್ದಾ ಭ್ಯಾಸಾತ್' ಎನ್ನುವ ಹೇತುವಿದೆ.) (5) ಅಪವಾದವಿಲ್ಲದಿರುವ ಬ್ರಹ್ಮಶಬ್ದವೇ ಹೇತುವು. ಬರೀ ಬ್ರಹ್ಮಶಬ್ದವಲ್ಲ, ಎಂದು ಹೇಳಕೂಡದು. 'ಬ್ರಹ್ಮ ಪುಚ್ಛಂ' ಎನ್ನುವಲ್ಲಿಯೂ ಅಪವಾದವಿಲ್ಲವು. (6) ಬ್ರಹ್ಮಾವಯವತ್ವವೇ ಅಪವಾದವೆಂದರೆ— ಹಾಗೆ ಹೇಳಕೂಡದು. ಈಗಲೂ ಆನಂದ ಮಯನಿಗೆ ಬ್ರಹ್ಮತ್ವವು ಸಿದ್ಧವಾಗಲಿಲ್ಲ. ಎಂದು ಶಂಕಿಸಿದರೆ—

(೧) ಅವಯವಕ್ಕೆ ಪೂರ್ಣತ್ವವಿದ್ದರೆ ಅವಯವಿಗೆ ಪೂರ್ಣತ್ವವು ಕೂಡುವುದಿಲ್ಲವೆಂದಭಿ ಪ್ರಾಯವೋ? (೨) ಅಥವಾ ಅವಯವಿಯಾದ ಆನಂದಮಯನಿಗೆ ಪೂರ್ಣತ್ವವಿದ್ದರೆ ಆನಂದ ಮಯನ ಅವಯವಕ್ಕೆ ಪೂರ್ಣತ್ವವಿಲ್ಲವೆಂದು ಆವಾದಿಸುವುದೋ? (೩) ಅಥವಾ ಅವಯವ ಅವಯವಿಗಳಿಗೆ ಭೇದವಿದ್ದಪ್ರಯುಕ್ತ ಅವಯವಕ್ಕ ಪರಮಾತ್ಮತ್ವವಿದ್ದರೆ ಅವಯವಿಗೆ ಪರಮಾ ತ್ಮತ್ವವಿಲ್ಲವೆಂದಭಿಪ್ರಾಯವೋ? ಈ ಮೂರು ಕಲ್ಪಗಳಲ್ಲಿ ೧ನೇದ್ದು ಕೂಡುವುದಿಲ್ಲ. ಯಾವಾಗ ಅವಯವದಲ್ಲಿಯೂ ಬ್ರಹ್ಮತ್ವವಿದೆಯೋ, ಹಾಗಾದರೆ ಅವಯವಿಯಲ್ಲಿ ಬ್ರಹ್ಮತ್ವವು ಅನಾಯಾಸ ದಿಂದಲೇ ಬರುವುದು. ಅವಯವಿಯು ಅವಯವಕಿಂತ ಮಹತ್ತಾಗಿಯೇ ದೃಷ್ಟವಾಗಿದೆ. ಅಂತೂ ಅವಯವಕ್ಕೆ ಪೂರ್ಣತ್ವವಿದ್ದರೆ ಅವಯವಿಗೆ ಪೂರ್ಣತ್ವವು ಕೂಡುವುದಿಲ್ಲವೆನ್ನುವುದು ವಿರುದ್ಧವಾಗಿದೆ. ೨ ಅವಯವಿಗೆ ಪೂರ್ಣತ್ವವಿದ್ದರೆ ಅವಯವಕ್ಕೆ ಪೂರ್ಣತ್ವವಿಲ್ಲವೆನ್ನುವ ವ್ಯಾಪ್ತಿಯು ದೃಷ್ಟವಾಗಲಿಲ್ಲ. "ಏವಂ ಸಂಸ್ತೂಯಮಾನಸ್ತು ಭಗವಾನ್ ಪರಮೇಶ್ವರಃ । ಉದ್ಬಬರ್ಹ (ಉಜ್ಜಹಾರಾ)ತ್ಮನಃ ಕೇಶೌ ಸಿತಕೃಷ್ಣೌ ಮಹಾಮುನೇ ॥ ಉವಾಚ ಚ ಸುರಾನೇತೌ ಮತ್ಕೇಶೌ ವಸುಧಾತಲೇ । ಅವತೀರ್ಯ ಭುವೋ ಭಾರ(ರಂ)ಕ್ಲೇಶ ಹಾನಿಂ ಕರಿಷ್ಯತಃ" ॥ ಇತ್ಯಾದಿ ವಿಷ್ಣುಪುರಾಣದಲ್ಲಿಯೂ, "ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ । ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ॥ ಅನೇಕವಕ್ತ್ರನಯನಮನೇಕಾದ್ಭುತದರ್ಶನಂ" ॥ (ಗೀ. ಅಧ್ಯಾ.೧೧ ಶ್ಲೋ. ೯, ೧೦) ಎಂದು ಭಗವದ್ಗೀತೆಯಲ್ಲಿಯೂ ಶ್ರೀ ನಾರಾಯಣನ ಅವಯವರೂಪ ಕೃಷ್ಣ ಕೇಶಾವತಾರಭೂತನಾದ ಶ್ರೀ ಕೃಷ್ಣನಿಗೆ ಪೂರ್ಣತ್ವವನ್ನು ಹೇಳಿರುವುದರಿಂದ ಅವಯವಿಗೆ

ಪೂರ್ಣತ್ವವಿದ್ದರೆ, ಅವಯುವಕ್ಕೆ ಪೂರ್ಣತ್ವವಿಲ್ಲವೆನ್ನುವ ವ್ಯಾಪ್ತಿಯು ಸಿದ್ಧವಾಗಲಿಲ್ಲ. (5) ಅವಯುವರೂಪನಾದ ಶ್ರೀ ಕೃಷ್ಣನಿಗೆ ಪೂರ್ಣತ್ವವಿದೆ ಎನ್ನುವಲ್ಲಿಯೂ ಬ್ರಹ್ಮನು ವ್ಯಾಪ್ತನಾಗಿದ್ದಾನೆನ್ನುವ ವಿಷಯುದಲ್ಲಿಯೂ "ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ" ॥ (ಗೀ. ಅಧ್ಯಾ. ೧೧ ಶ್ಲೋ. ೨೦) ಎನ್ನುವ ಗೀತಾರೂಪವಾದ ಅರ್ಜುನನ ವಾಕ್ಯದಿಂದ ತಿಳಿದುಬರುವ ಅರ್ಜುನನ ಪ್ರತ್ಯಕ್ಷವು ಪ್ರಮಾಣವಾಗಿದೆ (6) 'ಚ' ಶಬ್ದದಿಂದ ಪುರಾಣ ಇತಿಹಾಸಾದಿಗಳಲ್ಲಿ ಶ್ರೀ ಕೃಷ್ಣನಿಗೆ ವ್ಯಾಪ್ತತ್ವವು ಉಕ್ತವಾಗಿದೆ ಎಂದು ಸಿದ್ಧವಾಯಿತು. (7) 'ದರ್ಶಿತಾಚೈವ' ಎನ್ನುವಲ್ಲಿದ್ದ ಏವ ಶಬ್ದದಿಂದ ಹೀಗೆ ಪ್ರಮಿತವೇ ಆಗಿದೆ. ಬಾಯಿಯಿಂದ ಮಾತ್ರ ಹೇಳುವುದಲ್ಲ, ಎಂದು ಸಿದ್ಧವಾಯಿತು. (8) ಹಾಗಾದರೆ, ಲೋಕದಲ್ಲಿ ಯಾವುದು ಅವಯುವವೋ ಅದು ಪರಿಚ್ಛಿನ್ನವಾಗಿಯೇ (ಅಲ್ಪದೇಶದಲ್ಲಿದ್ದದ್ದಾಗಿಯೇ) ದೃಷ್ಟವಾಗಿದೆ. ಆದ ಪ್ರಯುಕ್ತ ಅವಯುವಕ್ಕೆ ವ್ಯಾಪ್ತತ್ವವು ಹೇಗೆ ಕೂಡುತ್ತದೆಂದರೆ— ಪರಮೇಶ್ವರನಿಗೆ ಅಘಟಿತವಾದುದನ್ನೂ ಕೂಡಿಸುವ ಅಪ್ರತಿಬದ್ಧವಾದ ಅಚಿಂತ್ಯವಾದ ಶಕ್ತಿಯಿದ್ದಪ್ರಯುಕ್ತ ಬೇರೆ ಕಡೆಯುಲ್ಲಿ ಕೂಡದಿದ್ದರೂ ಶ್ರೀಹರಿಯಲ್ಲಿ ಕೂಡಬಹುದು, ಎನ್ನುವ ಅಭಿಪ್ರಾಯದಿಂದ 'ನಿಸ್ಸೀಮಾಃ ಶಕ್ತಯೋಽಸ್ಯ ಹಿ' ಎಂದರು. (9) (೩) ಅವಯುವ ಅವಯುವಿಗಳಿಗೆ ಭೇದವಿದ್ದಪ್ರಯುಕ್ತ ಅವಯುವಕ್ಕೆ ಪರಮಾತ್ಮತ್ವವಿದ್ದರೆ ಅವಯುವಿಗೆ ಪರಮಾತ್ಮತ್ವವಿಲ್ಲವೆನ್ನುವ ೩ನೇ ಕಲ್ಪದಲ್ಲಿಯೂ ಇದೇ ಉತ್ತರವು. ಶ್ರೀ ಹರಿಗೆ ನಿರವಧಿಕಗಳಾದ ಶಕ್ತಿಗಳಿವೆ. 'ಶಿರೋ ನಾರಾಯಣಃ ಪಕ್ಷಃ ಪ್ರದ್ಯುಮ್ನಃ' ಇತ್ಯಾದಿ ಪುರಾಣಪ್ರಸಿದ್ಧವು. ತಥಾಚ "ಅಂಗಾಂಗಿತ್ವೇನ ಭಗವಾನ್ ಸ್ವಾನಂದಾನುಭವೇಸ್ಥಿತಃ । ಸ ಏವ ವ್ಯೂಹ್ಯ ಚಾತ್ಮಾನಂ ಪೃಥಗ್ರೂಪ ಇವ ಸ್ಥಿತಃ"॥ ಎಂದು ಐತರೇಯ ಭಾಷ್ಯದಲ್ಲಿ (ಪು. ೩೪೩) ಹೇಳಿದಪ್ರಕಾರ ನಾರಾಯಣ ವಾಸುದೇವಾದಿ ರೂಪಗಳಿಂದ ನಾನಾರತ್ನಗಳಿಂದ ನಿರ್ಮಿತವಾದ ಪ್ರತಿಮೆಯಂತೆ ಪುಂಜೀಭೂತವಾದ ದಿವ್ಯಲಕ್ಷಣ ರೂಪವಿಶೇಷದಿಂದ ಶ್ರೀ ಹರಿಗೇನೇ ಅಂಗತ್ವವೂ, ಅಂಗಿತ್ವವೂ ಕೂಡುವ ಪ್ರಯುಕ್ತ ಅವಯುವಕ್ಕೂ ಅವಯುವಿಗೂ ಪರಮಾತ್ಮತ್ವವು ಅಯುಕ್ತವಲ್ಲ ॥ ೧೬೨ ॥ ೧೬೩ ॥

ಆದಾಗ್ಯೂ ಬ್ರಹ್ಮಶಬ್ದದ ಸಾಮರ್ಥ್ಯದಿಂದ ಅನ್ನಮಯಾದಿಗಳಿಗೆ ವಿಷ್ಣುತ್ವವನ್ನು ನಿಶ್ಚೈಸಲಿಕ್ಕೆ ಶಕ್ಯವಲ್ಲ. ಏಕೆಂದರೆ— 'ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ । ಊರ್ಧ್ವರೇತಂ ವಿರೂಪಾಕ್ಷಂ ಶಂಕರಂ ನೀಲಲೋಹಿತಂ' ॥ ಎನ್ನುವ ತಾಪನೀಯ ಶ್ರುತಿಯಲ್ಲಿ ರುದ್ರನಲ್ಲಿಯೂ ಪರಬ್ರಹ್ಮ ಶಬ್ದವು ಶ್ರುತವಾಗಿದೆ ಎಂದರೆ— ಪೂರ್ವಾರ್ಧವು ವಿಷ್ಣುವಿಷಯಕವು, ಉತ್ತರಾರ್ಧವು ರುದ್ರವಿಷಯಕವು, ಅಂತೂ ಪೂರ್ವೋತ್ತರಾರ್ಧಗಳು ಭಿನ್ನವಿಷಯಕಗಳೆಂದು ನಿರೂಪಿಸುತ್ತಾರೆ—

ಮೂ ॥ ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ॥ ೧೬೪ ॥
ವಿಷ್ಣ್ವಾಖ್ಯಮುಕ್ತಮನ್ಯತ್ರ ಹ್ಯೂರ್ಧ್ವರೇತಂ ಚ ತಚ್ಛ್ರುತಿ ।
ವಿರೂಪಾಕ್ಷಾಖ್ಯಮಪರಂ ಬ್ರಹ್ಮೋಕ್ತಂ ತಚ್ಛ್ರುತೇ ಸ್ಥಿತಂ ॥ ೧೬೫ ॥
ಸಮಾನಾಧಿಕೃತತ್ವಂ ಚೇದುತ್ತರಂ ನೀಲಲೋಹಿತಂ ।
ಕೃಷ್ಣಪಿಂಗಲರೂಪೇಣ ಪುನರುಕ್ತಂ ಭವಿಷ್ಯತಿ ॥ ೧೬೬ ॥

ಅ ॥ ಋತಂ=ಯಥಾರ್ಥಜ್ಞಾನಸ್ವರೂಪನು, ಸತ್ಯಂ=ಜಗದಾದಿಗಳನ್ನು ಸೃಷ್ಟಿಸಿದವನು, ಪುರುಷಂ=ಪೂರ್ಣಗಳಾದ ಷಡ್ಗುಣಗಳುಳ್ಳವನು, ಕೃಷ್ಣಪಿಂಗಲಂ=ಕಪ್ಪು-ಕೆಂಪು ಬಣ್ಣ

ವುಳ್ಳವನು, ಇಂತ -, ವಿಷ್ಣ್ವಾಖ್ಯಂ = ವಿಷ್ಣುವೆಂದು ಹೆಸರುಳ್ಳ, ಪರಂಬ್ರಹ್ಮ = ಪರಬ್ರಹ್ಮನು, ಉಕ್ತಂ=ಪೂರ್ವಾರ್ಧದಲ್ಲಿ ಹೇಳಲ್ಪಟ್ಟಿದ್ದಾನೆ. ಅನ್ಯತ್ರ=ಉತ್ತರಾರ್ಧದಲ್ಲಿ, ವಿರೂಪಾಕ್ಷಾಖ್ಯಂ= ವಿರೂಪಾಕ್ಷನೆಂದು ಹೆಸರುಳ್ಳ, ಅಪರಂ ಬ್ರಹ್ಮ=ಅಪರಬ್ರಹ್ಮನು, ತತ್ಪ್ರತಿ=ವಿಷ್ಣುವನ್ನು ಕುರಿತು, ಊರ್ಧ್ವರೇತಂ ಚ=ಊರ್ಧ್ವರೇತಸ್ಸುಳ್ಳವನು, ಅಂದರೆ, ತದ್ವ್ರತೇ ಸ್ಥಿತಂ=ವಿಷ್ಣುಪ್ರೀತಿಕರವಾದ ನಿಯಮದಲ್ಲಿದ್ದವನೆಂದು, ಉಕ್ತಂ = ಹೇಳಲ್ಪಟ್ಟಿದ್ದಾನೆ. ಅಂದರೆ, ವಿರೂಪಾಕ್ಷಾಖ್ಯರುದ್ರನು ವಿಷ್ಣ್ವಾಖ್ಯಪರಬ್ರಹ್ಮನ ಉಪಾಸನಾದಿಗಳನ್ನು ಮಾಡಿಕೊಂಡಿದ್ದಾನೆ. ಸಮಾನಾಧಿಕೃತತ್ವಂ ಚೇತ್=(ಸಮಾನಂ=ಏಕಂ, ಅಧಿಕೃತಂ=ಅಧಿಕರಣಂ ವಿಷಯಃ ಯಯೋಃ ಪೂರ್ವೋತ್ತರಾರ್ಧಯೋಃ ತೇ ಸಮಾನಾಧಿಕೃತೇ, ತಯೋರ್ಭಾವಃ ಎನ್ನುವ ವ್ಯುತ್ಪತ್ತಿಯಿಂದ) ಪೂರ್ವೋತ್ತರಾರ್ಧಗಳಿಗೆ ಏಕವಿಷಯತ್ವವಿದ್ದರೆ, ಉತ್ತರಂ = ಉತ್ತರಾರ್ಧದಲ್ಲಿ ಹೇಳಲ್ಪಟ್ಟ, ನೀಲಲೋಹಿತಂ = ನೀಲಲೋಹಿತ ಎನ್ನುವ ಪದವು, ಕೃಷ್ಣಪಿಂಗಲರೂಪೇಣ = ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಕೃಷ್ಣಪಿಂಗಲಶಬ್ದದಿಂದ, ಪುನರುಕ್ತಂ=ಪುನರುಕ್ತವಾದುದು, ಭವಿಷ್ಯತಿ=ಆಗುವುದು.

ತಾ || (1) ಋತಂ ಇತ್ಯಾದಿಗಳು ದ್ವಿತೀಯಾಂತ ಪದಗಳು. ಊರ್ಧ್ವರೇತಂ ಇತ್ಯಾದಿಗಳು ಪ್ರಥಮಾಂತ ಪದಗಳು. (2) ಹಾಗಾದರೆ, ನಪುಂಸಕಲಿಂಗ ಪ್ರಯೋಗವು ಹೇಗೆ ಕೂಡುತ್ತದೆಂದರೆ— ಅಪರಂ ಬ್ರಹ್ಮ ಅಂದರೆ, ಅಮುಖ್ಯವೃತ್ತಿಯಿಂದ ಜೀವನಲ್ಲಿಯೂ, ಬ್ರಹ್ಮಶಬ್ದವು ಕೂಡುವುದರಿಂದ ಅದನ್ನು ಇಟ್ಟುಕೊಂಡು ನಪುಂಸಕಲಿಂಗವು ಕೂಡುತ್ತದೆ. (3) ಏಕ ವಿಷಯವಾಗಿ ತೋರುವ ಪೂರ್ವೋತ್ತರಾರ್ಧಗಳಿಗೆ ಬೇರೆ ಬೇರೆ ವಿಷಯಗಳೆಂದು ಏಕೆ ಕಲ್ಪಿಸುವುದೆಂದರೆ— ಪೂರ್ವೋತ್ತರಾರ್ಧಗಳಿಗೆ ಒಂದೇ ವಿಷಯವಾಗಿದ್ದರೆ ಉತ್ತರಾರ್ಧದಲ್ಲಿ ಹೇಳಿದ ನೀಲಲೋಹಿತ ಪದದಿಂದ ಪೌನರುಕ್ತ್ಯವು ಬರುವುದು. ಕೃಷ್ಣಪಿಂಗಲ ನೀಲಲೋಹಿತ ಶಬ್ದಗಳು ಏಕಾರ್ಥಗಳಾಗಿವೆ. ಆದ್ದರಿಂದ ಯುಕ್ತ ಏಕವಿಷಯಕಗಳೆಂದು ತೋರಿದರೂ ಏಕವಿಷಯತ್ವವನ್ನು ಬಿಟ್ಟು ಭಿನ್ನವಿಷಯತ್ವವನ್ನು ಇಟ್ಟುಕೊಳ್ಳುವುದೇ ನ್ಯಾಯವು || ೧೬೪ || ೧೬೫ || ೧೬೬ ||

ನ. ಚ. ವಿ— ಆದಾಗ್ಯೂ ರುದ್ರನಿಂದ ವ್ಯತಿರಿಕ್ತರಾದವರಿಗೆ ಪರಬ್ರಹ್ಮತ್ವವು ಕೂಡುವುದಿಲ್ಲ. ಏಕೆಂದರೆ— ರುದ್ರನಿಗೆ ಬ್ರಹ್ಮಾಧಿಪತಿತ್ವವನ್ನು ಹೇಳಿಯದೆ, ಎಂದರೆ—

ನ್ಯಾಯಸುಧಾ— (1) ಮತ್ತು 'ಬ್ರಹ್ಮಾಧಿಪತಿಃ ಬ್ರಹ್ಮಣೋಽಧಿಪತಿಃ' ಎನ್ನುವ ಉತ್ತರ ವಾಕ್ಯದಲ್ಲಿ ಬ್ರಹ್ಮಾಧಿಪತಿಯೆನ್ನುವ ಪದದಿಂದ ರುದ್ರನಿಗೆ ಬ್ರಹ್ಮನು ಅಧಿಪತಿಯೆಂದು ತೋರುತ್ತದೆ. ಯಾವ ರುದ್ರನಿಗೆ ಮತ್ತೊಬ್ಬ ಅಧಿಪತಿಯು ಇದ್ದಾನೋ ಆತನಿಗೆ ಪರಬ್ರಹ್ಮತ್ವವು ಹೇಗೆ ಬರುವುದು? ಈ ಕಾರಣದಿಂದಲೂ ಪೂರ್ವಾರ್ಧವು ರುದ್ರವಿಷಯಕವಲ್ಲವೆಂದು ನಿರೂಪಿಸುತ್ತಾರೆ.

ಮೂ || ಬ್ರಹ್ಮಾಧಿಪತಿರಿತ್ಯತ್ರ ತಾಪನೀಯ ಶ್ರುತೌ ಪುರಃ |
ಸ್ವರಿತಬ್ರಹ್ಮಶಬ್ದಾಂತಂ ಬಹುವ್ರೀಹಿಂತ್ವಮೋಸ್ಯತಿ || ೧೬೭ ||
ಸ್ವಾಹೇಂದ್ರಶತ್ರುರ್ವರ್ಧಸ್ವ ಯದ್ವಹುವ್ರೀಹಿತಾಮಗಾತ್ |
ತಸ್ಮಾದಸ್ಯೇಂದ್ರ ಏವಾಭೂಚ್ಛತ್ರುರಿತ್ಯುತ್ತರಶ್ರುತೇಃ || ೧೬೮ ||
ಪೂರ್ವಾಂತಸ್ವರಿತೇ ಪುಂಸೋರ್ಬಹುವ್ರೀಹಿತ್ವಮೋಸ್ಯತಿ |
ಮಹಾವ್ಯಾಕರಣೇ ಸೂತ್ರಮಿತಿ ಸ್ವರವಿನಿರ್ಣಯೇ || ೧೬೯ ||

ಅ ॥ ನ. ಚ. ವಿ.— ಅತ್ರ ತಾಪನೀಯ ಶ್ರುತೌ=ಈ ತಾಪನೀಯ ಶ್ರುತಿಯಲ್ಲಿಯೇ, ಪುರಃ=ಮೇಲಿನ ವಾಕ್ಯದಲ್ಲಿ, ಬ್ರಹ್ಮಾಧಿಪತಿರಿತಿ=ಬ್ರಹ್ಮಾಧಿಪತಿಯೆಂದು, ಸ್ವರಿತಬ್ರಹ್ಮಶಬ್ದಾಂತಂ=ಅಂತ್ಯದಲ್ಲಿ ಸ್ವರಿತಸ್ವರವುಳ್ಳ ಬ್ರಹ್ಮಶಬ್ದಘಟಿತವಾದ ಬ್ರಹ್ಮಾಧಿಪತಿಯೆನ್ನುವ ಪದವು, ಬಹುವ್ರೀಹಿತ್ವಂ= ('ಬ್ರಹ್ಮ ಅಧಿಪತಿರ್ಯಸ್ಯ' ಎಂದು) ಬಹುವ್ರೀಹಿ ಸಮಾಸತ್ವವನ್ನು, ಏಷ್ಯತಿ=ಹೊಂದುವುದು

ನ್ಯಾಯಸುಧಾ.— ಅತ್ರ ತಾಪನೀಯ ಶ್ರುತೌ=ಋತಂ ಸತ್ಯಂ ಎನ್ನುವ ವಾಕ್ಯವು ಎಲ್ಲಿ ಅದೆಯೋ, ಈ ತಾಪನೀಯ ಶ್ರುತಿಯಲ್ಲಿಯೇ, ಪುರಃ='ಋತಂ' ಎನ್ನುವ ವಾಕ್ಯದಿಂದ ಮೇಲಿನ ವಾಕ್ಯದಲ್ಲಿ, ಬ್ರಹ್ಮಾಧಿಪತಿರಿತಿ=ಬ್ರಹ್ಮನೇ ಅಧಿಪತಿಯಾಗಿ ಉಳ್ಳವನೆಂದು, ರುದ್ರನಿಗೆ ಪರಾಧೀನತ್ವವನ್ನು ಪ್ರತಿಪಾದನ ಮಾಡತಕ್ಕ ಪದವಿದೆ. (ಹೀಗೆ 'ಬ್ರಹ್ಮಾಧಿಪತಿ' ಎನ್ನುವ ಶಬ್ದಕ್ಕೆ ಬಹುವ್ರೀಹಿ ಸಮಾಸತ್ವವಿದ್ದರೆ ಆಗಬಹುದಿತ್ತು. ಅದೇ ಕೂಡುವುದಿಲ್ಲ, ಬ್ರಹ್ಮಣಃ ಅಧಿಪತಿಃ ಬ್ರಹ್ಮಾಧಿಪತಿಃ ಎಂಬ ಷಷ್ಠೀ ತತ್ಪುರುಷವಾಗಲೀ ಬ್ರಹ್ಮಚಾಸೌ ಅಧಿಪತಿಶ್ಚ ಬ್ರಹ್ಮಾಧಿಪತಿಃ ಎಂದು ಕರ್ಮಧಾರಯ ಸಮಾಸವಾಗಲೀ ಕೂಡುವಾಗ ಬಹುವ್ರೀಹಿಯೇ ಎಂದು ನಿಯಾಮಕವಾದುದು ಇಲ್ಲವೆಂದರೆ) ಸ್ವರಿತಬ್ರಹ್ಮಶಬ್ದಾಂತಂ=(ಯಾವ ಕಾರಣದಿಂದ ಬ್ರಹ್ಮಾಧಿಪತಿ ಎನ್ನುವ ಪ್ರಾತಿಪದಿಕವು) ಅಂತ್ಯದಲ್ಲಿ ಸ್ವರಿತಸ್ವರವುಳ್ಳ ಬ್ರಹ್ಮಶಬ್ದವುಳ್ಳದ್ದೋ (ಆದಕಾರಣ) ಬಹುವ್ರೀಹಿತ್ವಂ=ಬಹುವ್ರೀಹಿಸಮಾಸತ್ವವನ್ನೇ, ಏಷ್ಯತಿ=ಹೊಂದುತ್ತದೆ. (ಷಷ್ಠೀ ತತ್ಪುರುಷ ಸಮಾಸತ್ವವನ್ನಾಗಲೀ, ಕರ್ಮಧಾರಯಸಮಾಸತ್ವವನ್ನಾಗಲೀ ಹೊಂದುವುದೇ ಇಲ್ಲ) (ಪೂರ್ವ ಪದಾಂತಸ್ವರವು ಸ್ವರಿತವಾದಾಗ್ಯೂ ಬಹುವ್ರೀಹಿ ಸಮಾಸವೇ ಏಕೆ ಆಗಬೇಕೆಂದರೆ) ಯತ್= ಯಾವ ಕಾರಣದಿಂದ, ಸ್ವಾಹೇಂದ್ರಶತ್ರುರ್ವರ್ಧಸ್ವ='ಇಂದ್ರ ಶತ್ರುರ್ವರ್ಧಸ್ವ ಸ್ವಾಹಾ' ಎನ್ನುವ ಮಂತ್ರದಲ್ಲಿ, ಇಂದ್ರಶತ್ರು ಎನ್ನುವ ಪ್ರಾತಿಪದಿಕವು ಅಂತ್ಯದಲ್ಲಿ ಸ್ವರಿತ ಸ್ವರವುಳ್ಳ ಇಂದ್ರಶಬ್ದ ಉಳ್ಳದ್ದಾಗಿ, ಬಹುವ್ರೀಹಿತಾಂ=ಬಹುವ್ರೀಹಿಸಮಾಸತ್ವವನ್ನು, ಅಗಾತ್=ಹೊಂದಿಯದೋ, (ಆದಕಾರಣ ಬ್ರಹ್ಮಾಧಿಪತಿ ಎನ್ನುವುದೂ ಕೂಡ ಬಹುವ್ರೀಹಿಯೇ) (ಇಂದ್ರಶತ್ರು ಎನ್ನುವ ಪ್ರಾತಿಪದಿಕಕ್ಕೆ ಬಹುವ್ರೀಹಿ ಸಮಾಸತ್ವವೆಂದು ಏಕೆ ಹೇಳಬೇಕು? ಷಷ್ಠೀ ತತ್ಪುರುಷ ಸಮಾಸತ್ವವೆಂದು ಕೂಡಬಹುದಷ್ಟೆ, ಎಂದರೆ) ತಸ್ಮಾತ್=(ಯಾವ ಕಾರಣದಿಂದ ಇಂದ್ರ ಶಬ್ದವು ಸ್ವರಿತಸ್ವರವೇ ಅಂತವಾಗಿ ಉಳ್ಳದ್ದೆಂದು ಸ್ವೀಕರಿಸಲ್ಪಟ್ಟದೋ,) ಆದಕಾರಣ, ಮಂತ್ರಕ್ಕೆ ಅಭಿಮತವಾದ ಸ್ವರರಾಹಿತ್ಯದೋಷದಿಂದ, ಅಸ್ಯ=ಈ ವೃತ್ರಾಸುರನಿಗೆ, ಇಂದ್ರಃ ಏವ=ದೇವೇಂದ್ರನೇ * ಶತ್ರುಃ=ಸಂಹಾರಕನು, ಅಭೂತ್=ಆದನು. (ತ್ವಷ್ಟೃವಿನ ಅಭಿಪ್ರಾಯಾನುಸಾರವಾಗಿ ಇಂದ್ರನಿಗೆ ವೃತ್ರಾಸುರನು ಶತ್ರುವಾಗಲಿಲ್ಲ) ಇತಿ ಉತ್ತರ ಶ್ರುತೇಃ=ಹೀಗೆ ಮೇಲಿನ ವಾಕ್ಯದ

---

* ತ್ವಷ್ಟೃವಿನ ಮಗನಾದ ವಿಶ್ವರೂಪನನ್ನು ದೇವೇಂದ್ರನು ಸಂಹರಿಸಿದನು. ಆ ತ್ವಷ್ಟೃವು ಇಂದ್ರನನ್ನು ಕೊಲ್ಲತಕ್ಕ ಮಗನನ್ನು ಹೊಂದಲಿಚ್ಛಿದವನಾಗಿ ಸೋಮಾಯಣಾಖ್ಯ ಯಾಗವನ್ನು ಮಾಡಿದನು. ಅದರಲ್ಲಿ ಇಂದ್ರನಿಗೆ ಆಹುತಿಯನ್ನು ಕೊಡಲೇ ಇಲ್ಲ. ಆಗ ಇಂದ್ರನು ತಾನಾಗಿಯೇ ಬಂದು ಬಲಾತ್ಕಾರದಿಂದ ಸೋಮರಸವನ್ನು ಕುಡಿದು ಬಿಟ್ಟನು. ತ್ವಷ್ಟೃವು ಸೋಮಪಾತ್ರದಲ್ಲಿ ಅವಶಿಷ್ಟವಾದ ಸೋಮರಸವನ್ನು 'ಇಂದ್ರನನ್ನು ಸಂಹರಿಸತಕ್ಕ ಮಗನು ಹುಟ್ಟಲಿ' ಎಂದು ಹೇಳುತ್ತಾ 'ಸ್ವಾಹೇಂದ್ರ ಶತ್ರುರ್ವರ್ಧಸ್ವ' ಎನ್ನುವ ಮಂತ್ರದಿಂದ ಹೋಮಿಸಿದನು. ಆಗ 'ಇಂದ್ರಶತ್ರುಃ' ಎನ್ನುವ ಶಬ್ದದಲ್ಲಿ ತನ್ನ ಇಷ್ಟ ಸಿದ್ಧಿಯಾಗಬೇಕಾದರೆ ತತ್ಪುರುಷ ಸ್ವರವನ್ನು ಊಹಮಾಡಬೇಕಿದ್ದಿತು. ಅದನ್ನು ಬಿಟ್ಟು ಇದ್ದ ಹಾಗೆಯೇ ಬಹುವ್ರೀಹಿ ಸ್ವರವನ್ನೇ ಅಲ್ಲಿ ಪ್ರಯೋಗಿಸಿದನು. ಆ ಸ್ವರಾಪರಾಧದಿಂದ, ತನಗೆ ಹುಟ್ಟಿದ ವೃತ್ರಾಸುರನಿಗೇನೇ ಸಂಹಾರಕನು ದೇವೇಂದ್ರನಾದನು. ಇತ್ಯಾದಿ ವಿಷಯವು ತೈತ್ತಿರೀಯ ಶ್ರುತಿಯಲ್ಲಿ ಪ್ರತಿಪಾದಿತವಾಗಿದೆ.

ಸಾಮರ್ಥ್ಯದಿಂದ, 'ಇಂದ್ರ ಶತ್ರುಃ' ಎನ್ನುವಲ್ಲಿ ಬಹುವ್ರೀಹಿಸಮಾಸವೇ. ತತ್ಪುರುಷಸಮಾಸ ವಲ್ಲವೆಂದು ನಿಶ್ಚಿತವಾಗುತ್ತದೆ.)

(ಪೂರ್ವಪದಾಂತಕ್ಕೆ ಸ್ವರಿತತ್ವವಿದ್ದರೆ ಬಹುವ್ರೀಹಿ ಸಮಾಸವೆಂದು ಕೇವಲ ಉದಾಹರಣಸಾಮರ್ಥ್ಯದಿಂದಲೂ, ಉದಾಹರಣದಲ್ಲಿಯೂ, ಉತ್ತರ ಶ್ರುತಿಯ ಸಾಮರ್ಥ್ಯ ದಿಂದಲೂ ಮಾತ್ರ ಕಲ್ಪಿಸುವದು ಅಲ್ಲ. ಮತ್ತೆ ಈ ವಿಷಯದಲ್ಲಿ ಅನುಶಾಸನವೂ ಇದೆ ಎನ್ನುತ್ತಾರೆ) ಪುಂಸೋಃ=ಪುಲ್ಲಿಂಗಗಳಾದ ಸಮಸ್ಯಮಾನಗಳಾದ ಪದಗಳಲ್ಲಿ, ಪೂರ್ವಾಂತ ಸ್ವರಿತೇ=ಪೂರ್ವಪದಾಂತವು ಸ್ವರಿತವಾದರೆ (ಆಸಮಾಸಪ್ರಾತಿಪದಿಕವು,) ಬಹುವ್ರೀಹಿತ್ವಂ= ಬಹುವ್ರೀಹಿ ಸಮಾಸತ್ವವನ್ನು, ಏಷ್ಯತಿ=ಹೊಂದುವುದು. ಇತಿ=ಹೀಗೆ, ಮಹಾವ್ಯಾಕರಣೇ= ಮಹಾವ್ಯಾಕರಣದಲ್ಲಿ, ಸ್ವರವಿನಿರ್ಣಯೇ=ಸ್ವರವಿನಿರ್ಣಯದಲ್ಲಿ, ಸೂತ್ರಂ=ಸೂತ್ರವು, ಅಂದರೆ, **'ಪೂರ್ವಾಂತಸ್ವರಿತೇ ಪುಂಸೋರ್ಬಹುವ್ರೀಹಿಃ'** ಎಂದು ಸೂತ್ರಿತವಾಗಿದೆ.

**ತಾ ||** ನ್ಯಾಯಸುಧಾ— (1) ಯದ್ಯಪಿ ಬಹುವ್ರೀಹಿತ್ವವು ಮೊದಲು ಸಿದ್ಧವೇ ಆಗಿದೆ. ಆದಾಗ್ಯೂ ಅದರ ನಿಶ್ಚಯವನ್ನು ಅಪೇಕ್ಷಿಸಿ 'ಏಷ್ಯತಿ' ಎಂದು ಪ್ರಯೋಗವು. (2) ಇಂದ್ರ ಶತ್ರು ಎನ್ನುವ ಪ್ರಾತಿಪದಿಕವು ಬಹುವ್ರೀಹಿಯೇ, ತತ್ಪುರುಷವಲ್ಲ ಎನ್ನುವುದು ಶಿಕ್ಷಾಗ್ರಂಥ ಶ್ಲೋಕದಿಂದ ತಿಳಿಯುತ್ತದೆ. **ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾ ಪ್ರಯುಕ್ತೋ ನ ತಮರ್ಥಮಾಹ । ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರ ಶತ್ರುಃ ಸ್ವರತೋಽಪರಾಧಾತ್"** ॥ ಸ್ವರದಿಂದಲಾಗಲೀ ವರ್ಣದಿಂದಲಾಗಲೀ ರಹಿತವಾದ ಅಯಥಾಪ್ರಯುಕ್ತವಾದ ಮಂತ್ರವು ವಿವಕ್ಷಿತಾರ್ಥಪ್ರತಿಪಾದಕವಾಗುವುದಿಲ್ಲ. ಹೇಗೆ 'ಇಂದ್ರಶತ್ರುಃ' ಎನ್ನುವ ಮಂತ್ರವು ಅಭಿಮತವಾದ ಸ್ವರದ ವ್ಯತ್ಯಾಸದಿಂದ ಯಜಮಾನ ನಿಗೇನೇ ಅನಿಷ್ಟವನ್ನುಂಟುಮಾಡಿಯದೋ ಹಾಗೆಯೇ ಬ್ರಹ್ಮಾಧಿಪತಿ ಎನ್ನುವ ಮಂತ್ರವು ವಾಗ್ವಜ್ರರೂಪವಾಗಿ ಯಜಮಾನನಿಗೇನೇ ಅನಿಷ್ಟವನ್ನುಂಟುಮಾಡುತ್ತದೆ. (3) 'ಅಶ್ವಪತೇ ಗೋಪತೇ' ಇತ್ಯಾದಿಗಳಲ್ಲಿ ಅಶ್ವ ಗೋ ಇತ್ಯಾದಿಗಳು ಪೂರ್ವಾಂತಸ್ವರಿತವಾಗಿರುವುದರಿಂದ ಬಹು ವ್ರೀಹಿ ಸಮಾಸತ್ವವು ಬರಬೇಕಾಗುವುದು. ಅದನ್ನು ವ್ಯವಚ್ಛೇದಮಾಡುವುದಕ್ಕಾಗಿ 'ಪುಂಸೋಃ' ಎಂದು ಉಕ್ತವಾಗಿದೆ ॥ ೧೬೭ ॥ ೧೬೮ ॥ ೧೬೯ ॥

ಈಪ್ರಕಾರ ಪುನರುಕ್ತಿಯು ಬರಬೇಕಾಗುವುದರಿಂದಲೂ, ಮೇಲಿನ ವಾಕ್ಯದ ಸಾಮರ್ಥ್ಯ ದಿಂದಲೂ 'ಋತಂ ಸತ್ಯಂ' ಎನ್ನುವ ವಾಕ್ಯದಲ್ಲಿ ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಬೇರೆ ಬೇರೆ ವಿಷಯಗಳೆಂದು ಉಪಪಾದಿಸಿ ಸಂಕ್ಷೇಪವಾಗಿ ವ್ಯಾಖ್ಯಾತವಾದ ವಾಕ್ಯವನ್ನು ವಿಸ್ತಾರವಾಗಿ ವ್ಯಾಖ್ಯಾನಮಾಡುತ್ತಾರೆ—

**ಮೂ ||** **ಋತಂ ಸತ್ಯಂ ಪರಂ ಬ್ರಹ್ಮೇತ್ಯಾದ್ಯುದ್ದೇಶ್ಯ ದ್ವಿತೀಯಕಾ ।**
**ವಿಭಕ್ತಿರೂರ್ಧ್ವರೇತಾದಿಃ ಪ್ರಥಮಾ ರುದ್ರಗೋಚರಾ ॥ ೧೭೦ ॥**
**ತಸ್ಮಾದ್ವಿಷ್ಣುಂ ಪರಂ ಬ್ರಹ್ಮ ಪ್ರತಿರುದ್ರೋ ವ್ರತೇ ಸ್ಥಿತಃ ।**
**ಊರ್ಧ್ವರೇತಾ ಇತಿ ಹ್ಯೇವ ಶ್ರುತ್ಯರ್ಥೋಽವಸಿತೋ ಭವೇತ್ ॥**
**॥ ೧೭೧ ॥**

**ಅ ||** ಋತಂ ಸತ್ಯಂ ಪರಂ ಬ್ರಹ್ಮೇತ್ಯಾದಿ='ಋತಂ ಸತ್ಯಂ ಪರಂ ಬ್ರಹ್ಮ' ಇದುಮೊದ ಲಾದುದು, ಅಥವಾ ಇದುಮೊದಲಾಗಿ ಪೂರ್ವಾರ್ಧದಲ್ಲಿರತಕ್ಕದು ಯಾವುದು ಪದಗಳ

ಸಮುದಾಯವೋ ಅದರಲ್ಲಿರತಕ್ಕ, ಉದ್ದೇಶ್ಯದ್ವಿತೀಯಕಾ=ಉದ್ದೇಶ್ಯವಾದ ದ್ವಿತೀಯಾವುಳ್ಳ, ವಿಭಕ್ತಿಃ=ದ್ವಿತೀಯಾ ವಿಭಕ್ತಿಯು, (ವಿಷ್ಣುಗೋಚರಾ=ವಿಷ್ಣುವಿಷಯಕವಾದುದು,) ಊರ್ಧ್ವರೇತಾದಿಃ='ಊರ್ಧ್ವರೇತಂ' ಇದುಮೊದಲಾದ ಪದಾವಯವಭೂತವಾದ, ಪ್ರಥಮಾ=ಪ್ರಥಮಾ ವಿಭಕ್ತಿಯು, ರುದ್ರಗೋಚರಾ=ರುದ್ರವಿಷಯಕವು, ತಸ್ಮಾತ್=ಹಿಂದೆ ಹೇಳಿದ ಯುಕ್ತಿಗಳ ಸಮುದಾಯದಿಂದ, ಪರಂ ಬ್ರಹ್ಮ=ಪರಬ್ರಹ್ಮಶಬ್ದವಾಚ್ಯನಾದ, ವಿಷ್ಣುಂ ಪ್ರತಿ=ಶ್ರೀನಾರಾಯಣನನ್ನು ಕುರಿತು, ರುದ್ರಃ=ರುದ್ರನು, ಊರ್ಧ್ವರೇತಾಃ=ಊರ್ಧ್ವರೇತಸ್ಕನಾಗಿ, ವ್ರತೇ ಸ್ಥಿತಃ=ವಿಷ್ಣುವಿಗೆ ಪ್ರೀತಿಯನ್ನುಂಟುಮಾಡುವ ನಿಯಮದಲ್ಲಿದ್ದಾನೆ. ಇತಿ ಹ್ಯೇವ = ಹೀಗೆಯೇ, ಶ್ರುತ್ಯರ್ಥಃ = ಶ್ರುತಿಯ ಅಭಿಪ್ರಾಯವು, ಅವಸಿತಃ = ನಿಶ್ಚಿತವಾಗುವಂಥಾದ್ದು, ಭವೇತ್= ಆಗುವುದು.

ತಾ ॥ 'ಊರ್ಧ್ವರೇತಾದಿಃ' ಎನ್ನುವಲ್ಲಿದ್ದ ರೇತಶಬ್ದವು ಅಕಾರಾಂತವು. ಅಥವಾ ಸಮಾಸಾಂತವಾದ 'ಡ'ಪ್ರತ್ಯಯಾಂತವು ॥ ೧೭೦ ॥ ೧೭೧ ॥

ಹಿಂದೆ ಹೇಳಿದ ಯುಕ್ತಿಗಳ ಬಲದಿಂದ ಮಾತ್ರ ಹೀಗೆ ಶ್ರುತ್ಯರ್ಥವಲ್ಲ. ಮತ್ತೆ ಶ್ರುತ್ಯಂತರ ಸಮಾಖ್ಯೆಯಿಂದಲೂ ಈ ರೀತಿಯಾಗಿಯೇ ಅರ್ಥವಾಗಬೇಕೆಂದು ನಿರೂಪಿಸುತ್ತಾರೆ—

**ಮೂ ॥ ಋತಂ ಸತ್ಯಂ ಪರಂ ಬ್ರಹ್ಮ ಪ್ರತಿವಿಷ್ಣುಂ ಸದಾಶಿವಃ ।**
**ಊರ್ಧ್ವರೇತಾ ಧ್ಯಾಯತಿ ಹ ಶಂಕರೋ ನೀಲಲೋಹಿತಃ ॥೧೭೨॥**
**ಇತ್ಯರ್ಥಮೇತಮೇವಾಹ ನೀಲಗ್ರೀವಶ್ರುತಿಃ ಪರಾ ।**
**ಆಥರ್ವಣೀ ಪರಂ ಬ್ರಹ್ಮ ತಸ್ಮಾದೇಕೋ ಹರಿಃ ಶ್ರುತೌ ॥ ೧೭೩ ॥**

ಅ ॥ ಋತಂ=ಯಥಾರ್ಥಜ್ಞಾನಸ್ವರೂಪವನು, ಸತ್ಯಂ=ಜಗದಾದಿಗಳನ್ನು ಸೃಷ್ಟಿಸುವವನು, ಪರಂ ಬ್ರಹ್ಮ=ಪರಬ್ರಹ್ಮಶಬ್ದವಾಚ್ಯನೂ ಆದ, ವಿಷ್ಣುಂ ಪ್ರತಿ=ವಿಷ್ಣುವನ್ನು ಕುರಿತು, ಊರ್ಧ್ವರೇತಾಃ = ಊರ್ಧ್ವರೇತಸ್ಕನಾದ, ಶಂಕರಃ=ಸುಖಕರನಾದ, ನೀಲಲೋಹಿತಃ= ಕಪ್ಪು-ಕೆಂಪು-ಬಣ್ಣವುಳ್ಳ, ಸದಾಶಿವಃ=ಸದಾಶಿವನು, (ಆ ಶ್ರೀಹರಿಯನ್ನೇ)ಧ್ಯಾಯತಿ=ಭಕ್ತಿಪೂರ್ವಕವಾಗಿ ಧ್ಯಾನಮಾಡುತ್ತಾನೆ. ಹ=ಪ್ರಸಿದ್ಧವು. ಇತಿ = ಈಪ್ರಕಾರವಾಗಿ, ಏತಮೇವ ಅರ್ಥಂ= ಈ ಅರ್ಥವನ್ನೇ, ಆಥರ್ವಣೀ=ಅಥರ್ವಣ ವೇದಕ್ಕೆ ಸಂಬಂಧಪಟ್ಟ, ಪರಾ=ತಾಪನೀಯಶ್ರುತಿಯಿಂದ ಬೇರೆಯಾದ, ನೀಲಗ್ರೀವಶ್ರುತಿಃ=ನೀಲಗ್ರೀವ ಶ್ರುತಿಯು, ಆಹ=ಪ್ರತಿಪಾದಿಸುತ್ತದೆ. ತಸ್ಮಾತ್ = ಪೂರ್ವಾರ್ಧವು ವಿಷ್ಣುವಿಷಯಕವಾಗಿರುವುದರಿಂದ, ಶ್ರುತೌ = 'ಋತಂ ಸತ್ಯಂ' ಎನ್ನುವ ಈ ಶ್ರುತಿಯಲ್ಲಿ ಪ್ರತೀತನಾದ, ಪರಂ ಬ್ರಹ್ಮ=ಪರಬ್ರಹ್ಮನು, ಏಕಃ ಹರಿಃ=ಸರ್ವೋತ್ತಮನಾದ ಶ್ರೀಹರಿಯೇ ॥ ೧೭೨ ॥ ೧೭೩ ॥

ಬಾಧಕಾಂತರವನ್ನು ಹೇಳುತ್ತಾರೆ—

**ಮೂ ॥ ತದೇವರ್ತಮಿತಿ ಪ್ರಾಹ ಕಥಮೇವಾನ್ಯಥಾ ಶ್ರುತಿಃ ।**
**ಅವಧಾರಯಂತೀ ತಸ್ಯೈವ ಹ್ಯೃತತ್ವಾದಿಕಮಂಜಸಾ ॥ ೧೭೪ ॥**

ಅ ॥ ಅನ್ಯಥಾ='ಋತಂ ಸತ್ಯಂ ಪರಂ ಬ್ರಹ್ಮ' ಎನ್ನುವ ಪೂರ್ವಾರ್ಧವೂಕೂಡ ರುದ್ರವಿಷಯಕವಾದರೆ, ತಸ್ಯೈವ ಅವಧಾರಯಂತೀ=ವಿಷ್ಣುವಿಗೇನೇ ಪರಬ್ರಹ್ಮತ್ವವನ್ನು ನಿರ್ಧರಿಸಿಕೊಡುವ, ತದೇವರ್ತಮಿತಿಶ್ರುತಿಃ = '**ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ**

ಪರಮಂ ಕವೀನಾಂ' ಎನ್ನುವ ಶ್ರುತಿಯು, ತಸ್ಯ=ವಿಷ್ಣುವಿಗೆ, ಋತತ್ವಾದಿಕಂ=ಋತತ್ವ ಮೊದಲಾದುದನ್ನು, ಕಥಂ ಏವ=ಹೇಗೆತಾನೇ, ಅಂಜಸಾ=ಚೆನ್ನಾಗಿ, (ಜ್ಞಾನಿಗಳ ಸಮ್ಮತಿಯಿಂದ) ಪ್ರಾಹ=ಹೇಳಿತು. (ಅಂದರೆ ಪರಸ್ಪರ ವಿರೋಧಬಂದರೆ ಆ ಎರಡು ಶ್ರುತಿಗಳಲ್ಲಿ ಯಾವುದಾದರೊಂದು ಶ್ರುತಿಗೆ ಅಪ್ರಾಮಾಣ್ಯವು ಬರಬೇಕಾಗುವುದು.)

ತಾ ॥ (1) 'ಋತಂ' ಎನ್ನುವ ಶ್ರುತಿಯು ರುದ್ರನಿಗೆ ಋತತ್ವ, ಸತ್ಯತ್ವ, ಬ್ರಹ್ಮತ್ವಗಳನ್ನು ಹೇಳುತ್ತದೆ. 'ತದೇವರ್ತಂ' ಎನ್ನುವ ಶ್ರುತಿಯು ವಿಷ್ಣುವಿಗೆ ಹೇಳುತ್ತದೆ. ಎರಡು ಶ್ರುತಿಗಳ ಸಾಮರ್ಥ್ಯದಿಂದ ಹರಿ-ಹರರಿಬ್ಬರಿಗೂ ಋತಾದಿಶಬ್ದವಾಚ್ಯತ್ವವಿದ್ದರೆ ವಿರೋಧವೆಲ್ಲಿದೆ? ಎಂದರೆ— ವಿಷ್ಣುವಿಗೇನೇ ಪರಬ್ರಹ್ಮತ್ವವನ್ನು ನಿರ್ಧರಿಸಿಕೊಡುವುದರಿಂದ ವಿರೋಧವಿದ್ದೇ ಇದೆ. ವಿರೋಧವಿದ್ದರೆ ಪ್ರಥಮಶ್ರುತಿಗೇನೇ ಬಾಧನನ್ನು ಹೇಳುವುದು ಯುಕ್ತವು. (2) ತದೇವ ಎನ್ನುವ ಶ್ರುತಿಯು ಪ್ರಬಲವಾಗಿರುವುದರಿಂದ ಆ ವಾಕ್ಯವು ಈ ಶ್ರುತಿಯಿಂದ ಆಪಾತಪ್ರತೀತಿಯಿಂದ ಹುಟ್ಟತಕ್ಕ ಭ್ರಾಂತಿ ಬಾಧರೂಪವಾಗಿ ನಿಶ್ಚಿತವಾಗುತ್ತದೆ. ಅಪ್ರಾಪ್ತಕ್ಕೆ ನಿಷೇಧವು ಕೂಡಲಾರದು. ಶ್ರುತ್ಯರ್ಥಪರಿಜ್ಞಾನನಿಮಿತ್ತವಾಗಿ ಪ್ರಾಪ್ತಿಹೇಳಬೇಕಲ್ಲದೆ ಬೇರೆ ಯಾವುದೂ ಪ್ರಾಪಕವಾದುದು ಇಲ್ಲ. ಹಾಗಾದರೆ ರುದ್ರನು ವಿಷ್ಣುಸ್ವರೂಪನಾಗಿರುವುದರಿಂದ ವಿರೋಧವಿಲ್ಲವೆಂದಾಗಲಿ, ಪೌನರುಕ್ತ್ಯಪರಿಹಾರಕ್ಕಾಗಿ ಉತ್ತರಾರ್ಧದಲ್ಲಿ ಹೇಳಲ್ಪಟ್ಟ ವಿರೂಪಾಕ್ಷನು ಮತ್ತೊಬ್ಬ ಜೀವನು ಆಗುವನು ಎಂದು ಹೇಳುತ್ತೇವೆಂದರೆ— ಶ್ರೀ ವಿಷ್ಣುವಿಗೂ, ರುದ್ರನಿಗೂ ಅಭೇದವಿಟ್ಟುಕೊಂಡರೆ ರುದ್ರನಲ್ಲಿ ತೋರುವ ಬ್ರಹ್ಮಶಬ್ದವು ವಿಷ್ಣುವಿನಲ್ಲಿಯೂ ಇದ್ದಂತೆಯೇ ಆಯಿತು. ಆದಕಾರಣ ಹಿಂದೆ ಹೇಳಿದ ವ್ಯಭಿಚಾರವು ಕೂಡುವುದಿಲ್ಲ ॥ ೧೭೪ ॥

ರುದ್ರಾದಿಗಳೆಲ್ಲರೂ ಪ್ರಲಯಕಾಲದಲ್ಲಿ ಇಲ್ಲದಿರುವುದರಿಂದ ಸೃಷ್ಟಿಕಾಲದಲ್ಲಿ ಈಶ್ವರನಿಂದ ಉತ್ಪತ್ತಿಯನ್ನು ಹೊಂದತಕ್ಕವರಿಗೆ ಬ್ರಹ್ಮತ್ವವು ಹೇಗೆ ಉಪಪನ್ನವಾಗುತ್ತದೆ? ಅವರಿಗೆ ಉತ್ಪತ್ತಿಯಿದೆ. ಎನ್ನುವುದೇ ಯಾವುದರಿಂದ ತಿಳಿಯುತ್ತದೆ ಎಂದರೆ—

**ಮೂ ॥ ಏಕೋ ನಾರಾಯಣ ಆಸೀನ್ನಬ್ರಹ್ಮಾ ನ ಚ ಶಂಕರಃ ।**
**ವಾಸುದೇವೋಽಗ್ರ ಏವಾಸೀನ್ನಬ್ರಹ್ಮಾ ನ ಚ ಶಂಕರಃ ॥ ೧೭೫ ॥**
**ನೇಂದ್ರಸೂರ್ಯೌ ನ ಚ ಗುಹೋ ನ ಸೋಮೋ ನ ವಿನಾಯಕಃ ।**
**ಇತ್ಯಾದಿ ವಾಕ್ಯತೋ ವಿಷ್ಣೋರುತ್ಪತ್ತಿರವತಾರಗಾ ॥ ೧೭೬ ॥**

ಅ ॥ ಏಕಃ ನಾರಾಯಣಃ=ಸರ್ವೋತ್ತಮನಾದ ನಾರಾಯಣನೊಬ್ಬನೇ, ಆಸೀತ್=ಇದ್ದನು, ಬ್ರಹ್ಮಾ=ಚತುರ್ಮುಖ ಬ್ರಹ್ಮನು, ನ=ಇರಲಿಲ್ಲ, ನ ಚ ಶಂಕರಃ=ರುದ್ರನೂ ಇರಲಿಲ್ಲ. (೨) ಅಗ್ರೇ=ಪ್ರಲಯಕಾಲದಲ್ಲಿ, ವಾಸುದೇವ ಏವ=ಶ್ರೀಕೃಷ್ಣನೇ, ಆಸೀತ್=ಇದ್ದನು. ನ ಬ್ರಹ್ಮಾ=ಚತುರ್ಮುಖಬ್ರಹ್ಮನೂ ಇರಲಿಲ್ಲ. ನ ಚ ಶಂಕರಃ=ರುದ್ರನೂ ಇರಲಿಲ್ಲ. ಇಂದ್ರಸೂರ್ಯೌ=ದೇವೇಂದ್ರ ಸೂರ್ಯರೂ, ನ=ಇರಲಿಲ್ಲ. ಗುಹಃ ನ ಚ=ಷಣ್ಮುಖನೂ ಇರಲಿಲ್ಲ. ಸೋಮಃ ನ=ಚಂದ್ರನೂ ಇರಲಿಲ್ಲ. ನ ವಿನಾಯಕಃ=ಗಣಪತಿಯೂ ಇರಲಿಲ್ಲ. ಇತ್ಯಾದಿ ವಾಕ್ಯತಃ=ಇದು ಮೊದಲಾದ ವಾಕ್ಯಗಳದ್ದೆಸೆಯಿಂದ, (ರುದ್ರಾದಿಗಳು ಪ್ರಲಯಕಾಲದಲ್ಲಿ ಇರಲಿಲ್ಲವೆಂದೂ ಅವರಿಗೆ ವಿಷ್ಣುವಿನಿಂದ ಉತ್ಪತ್ತಿ ಇದೆಯೆಂದೂ ಅವಗತವಾಗುತ್ತದೆ.) (೩) (ಉತ್ಪತ್ತಿ ಇದ್ದಪ್ರಯುಕ್ತ ರುದ್ರಾದಿಗಳಿಗೆ ಬ್ರಹ್ಮತ್ವವಿಲ್ಲವೆಂದಾದರೆ ವಿಷ್ಣುವಿಗೂ ರಾಮಕೃಷ್ಣಾದಿರೂಪದಿಂದ ಉತ್ಪತ್ತಿಯಿದ್ದಪ್ರಯುಕ್ತ ಬ್ರಹ್ಮತ್ವವಿಲ್ಲವೆಂದಾಗಬೇಕಾಗುವುದು ಎಂದರೆ—) ವಿಷ್ಣೋಃ=ಶ್ರೀ

ವಿಷ್ಣುವಿಗೆ, ಉತ್ಪತ್ತಿಃ=ಉತ್ಪತ್ತಿಪ್ರತಿಪಾದಕ ವಾಕ್ಯವು, ಅವತಾರಗಾ=ಪ್ರಾದುರ್ಭಾವ ವಿಷಯಕವೇ, (ಶರೀರಾದಿಗಳ ಪ್ರಾಪ್ತ್ಯಾದಿರೂಪವಾದುದನ್ನು ಪ್ರತಿಪಾದಿಸತಕ್ಕುದಲ್ಲ. ಏಕೆಂದರೆ—) ಏಕೋನಾರಾಯಣ ಆಸೀತ್—ಇತ್ಯಾದಿ ವಾಕ್ಯತಃ=ಇದು ಮೊದಲಾದ ವಾಕ್ಯಗಳದ್ದೆಸೆಯಿಂದ ವಿಷ್ಣೋಃ = ಶ್ರೀ ಹರಿಗೆ, (ಮಹಾ ಪ್ರಲಯಕಾಲದಲ್ಲಿಯೂ ಅವಸ್ಥಿತಿಯು ಅವಗತವಾಗುತ್ತದೆ. ॥ ೧೭೫ ॥ ॥ ೧೭೬ ॥

೧ ಬ್ರಹ್ಮಶಬ್ದವು ಕೇವಲ ವಿಷ್ಣುವಾಚಕನೇ ಆಗಿದ್ದರೆ ಆಗ ಜೀವಾದಿಗಳಲ್ಲಿ ವ್ಯವಹಾರವು ಇಲ್ಲವೆಂದಾಗಬೇಕಾಗುವುದು. ಅಂತೂ ಬ್ರಹ್ಮತ್ವವನ್ನು ಅಪೇಕ್ಷಿಸಿ ನಪುಂಸಕಲಿಂಗಪ್ರಯೋಗವೆನ್ನುವುದು ಆಗದೆ ಹೋಗುವುದು. ೨ ಮತ್ತು ಬ್ರಹ್ಮಣೋಽಧಿಪತಿಃ ಎನ್ನುವುದೂ ವ್ಯಾಹತವಾಗಬೇಕಾಗುವುದು ಎನ್ನುವ ಆಶಂಕೆಯನ್ನು ಪರಿಹರಿಸುತ್ತಾ ಉಪಸಂಹಾರಮಾಡುತ್ತಾರೆ—

ಮೂ ॥ ಮುಖ್ಯಂ ಬ್ರಹ್ಮ ಹರಿಸ್ತಸ್ಮಾತ್ಪ್ರಸ್ತಾವಃ ಪರಮಿತ್ಯಪಿ ।
ಮುಖ್ಯಬ್ರಹ್ಮಗ್ರಹೇ ಯುಕ್ತೇ ನಾಮುಖ್ಯಂ ಯುಜ್ಯತೇ ಕ್ವಚಿತ್ ॥
ಅಸಂಭವೇ ಹಿ ಮುಖ್ಯಸ್ಯ ಗೌಣಾರ್ಥಾಂಗೀಕೃತಿರ್ಭವೇತ್ ॥೧೭೭॥

ಅ ॥ ಮುಖ್ಯಂ ಬ್ರಹ್ಮ=ಮುಖ್ಯವಾಗಿ ಬ್ರಹ್ಮಶಬ್ದವಾಚ್ಯನು, ಹರಿಃ=ಶ್ರೀನಾರಾಯಣನು, (ಬ್ರಹ್ಮಾದಿಗಳಲ್ಲಿ ಅಮುಖ್ಯವೃತ್ತಿಯಿಂದ ಬ್ರಹ್ಮಶಬ್ದವನ್ನು ಅಂಗೀಕರಿಸಿರುವುದರಿಂದ ವ್ಯಾಹತಿಯಿಲ್ಲ. ಆದಪ್ರಯುಕ್ತವೇ 'ಅಪರಂ ಬ್ರಹ್ಮ' ಎಂದು ಹಿಂದೆ ಹೇಳಿರುವರು) (ಹಾಗಾದರೆ, ಬ್ರಹ್ಮಶಬ್ದವು ಅಮುಖ್ಯವೃತ್ತಿಯಿಂದ ಬ್ರಹ್ಮಾದಿಗಳಲ್ಲಿ ಇರುವುದಾದರೆ ಅನ್ನಮಯಾದಿಗಳೂ ಅಮುಖ್ಯಬ್ರಹ್ಮರೆಂದು ಏಕೆ ವ್ಯಾಖ್ಯಾನಮಾಡಬಾರದು? ಅನ್ನಮಯಾದಿಗಳು ಮುಖ್ಯಬ್ರಹ್ಮರು ಎಂದು ಜ್ಞಾಪಕವಾದುದು ಯಾವುದೂ ಇಲ್ಲವೆಂದರೆ) ಪರಮಿತ್ಯಪಿ='ಬ್ರಹ್ಮವಿದಾಪ್ನೋತಿ ಪರಂ' ಎಂದು ಪರಬ್ರಹ್ಮನಿಗೇನೇ, ಪ್ರಸ್ತಾವಃ=ಪ್ರಸಂಗವು, ಅಸ್ತಿ=ಇದೆ. ತಸ್ಮಾತ್ = ಆದುದರಿಂದ, ಮುಖ್ಯಬ್ರಹ್ಮಗ್ರಹೇ=ಪರಬ್ರಹ್ಮನಿಗೆ ಗ್ರಹಣವು, ಯುಕ್ತೇ=ಕೂಡುವಾಗ, ಅಮುಖ್ಯಂ=ಅಮುಖ್ಯಾರ್ಥಸ್ವೀಕಾರವು, ಕ್ವಚಿತ್=ಎಲ್ಲಿಯೂ, ನ ಯುಜ್ಯತೇ=ಕೂಡುವುದಿಲ್ಲ. (ಮುಖ್ಯಾರ್ಥವು ಕೂಡಿದರೂ ಅಮುಖ್ಯಾರ್ಥಗ್ರಹಣವು ಏಕೆ ಆಗಲಾರದೆಂದು ಹೇಳಕೂಡದು. ಮುಖ್ಯಾರ್ಥವು ಕೂಡದಿದ್ದರೇನೇ ಅಮುಖ್ಯಾರ್ಥಾಂಗೀಕಾರವು ಎಂದು ವ್ಯಾಪ್ತಿಯಿದೆ ಎನ್ನುತ್ತಾರೆ.) ಮುಖ್ಯಸ್ಯ ಅಸಂಭವೇ ಹಿ=ಮುಖ್ಯಾರ್ಥವು ಕೂಡದಿದ್ದರೇನೇ, ಗೌಣಾರ್ಥಾಂಗೀಕೃತಿಃ=ಅಮುಖ್ಯಾರ್ಥಾಂಗೀಕಾರವು, ಭವೇತ್=ಆಗುವುದು.

ತಾ ॥ ವಸ್ತುತಸ್ತು ಶಕ್ತಿಗ್ರಹಣದ ಸಾಮರ್ಥ್ಯದಿಂದ ಪ್ರಥಮತಃ ಪ್ರಾಪ್ತವಾಗಿರುವುದರಿಂದಲೂ, ಬಾಧಕವಿಲ್ಲದಿರುವುದರಿಂದಲೂ ಅಮುಖ್ಯಾರ್ಥವನ್ನು ಕಲ್ಪಿಸಕೂಡದೆಂದು 'ಮುಖ್ಯಬ್ರಹ್ಮಗ್ರಹೇ' ಎನ್ನುವುದರಿಂದ ಹೇಳಿದರು. (2) ಹಾಗಾದರೆ, 'ಬ್ರಹ್ಮವೇದ ಬ್ರಹ್ಮೈವ ಭವತಿ' ಇತ್ಯಾದಿಗಳಲ್ಲಿ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥ ಗ್ರಹಣವು ಹೇಗೆ ಕೂಡುತ್ತದೆಂದರೆ 'ಕ್ವಚಿತ್ ಅಸಂಭವೇ' ಅಂದರೆ, ಮುಖ್ಯಾರ್ಥವು ಎಲ್ಲಿಯೂ ಕೂಡದಿದ್ದರೆ ಅಮುಖ್ಯಾರ್ಥವನ್ನು ಸ್ವೀಕರಿಸಬಹುದು.

ಸಾರಾಂಶ.

ಸ. ರ. ವಿ— (1) ತೈತ್ತಿರೀಯೋಪನಿಷತ್ತಿನಲ್ಲಿ ಶ್ರುತವಾಗಿದೆ. "ಸ ವಾ ಏಷ ಪುರುಷೋಽನ್ನರಸಮಯಃ । ತಸ್ಮಾದ್ವಾ ಏತಸ್ಮಾದನ್ನರಸಮಯಾತ್ । ಅನ್ಯೋಽಂ

ತರ ಆತ್ಮಾ ಪ್ರಾಣಮಯಃ । ತಸ್ಮಾದ್ವಾ ಏತಸ್ಮಾತ್ಪ್ರಾಣಮಯಾತ್ । ಅನ್ಯೋऽಂತರ ಆತ್ಮಾ ಮನೋಮಯಃ । ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋऽಂತರ ಆತ್ಮಾ ವಿಜ್ಞಾನಮಯಃ । ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ । ಅನ್ಯೋऽಂತರ ಆತ್ಮಾ ಆನಂದಮಯಃ " ॥ (ತೈ. ಉ. ಪ್ರ. ೧೨೪, ೧೨೫, ೧೨೭, ೧೨೮) ಇದರಲ್ಲಿ (೧) ಅನ್ನಮಯ ಮೊದಲಾದ ಶಬ್ದಗಳಿಂದ ವಾಚ್ಯಗಳಾದವುಗಳು ಐದೂ ಕೋಶಗಳೋ, ಅಥವಾ (೨) ಶ್ರೀವಿಷ್ಣುರೂಪಗಳೋ ಎಂದು ಸಂಶಯವು. ಅನ್ನಮಯಾದಿಗಳು ವಿಕಾರರೂಪಗಳಾಗಿರುವುದರಿಂದ ಕೋಶಗಳು. ವಿಷ್ಣುರೂಪಗಳಲ್ಲ, ಏಕೆಂದರೆ— 'ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯಾನಂದಮಯಾ ಮೇ ಶುಧ್ಯಂತಾಂ' ಎಂದು ಶ್ರುತ್ಯಂತರದಲ್ಲಿ ಶುದ್ಧಿಪ್ರಾರ್ಥನಾವಿಷಯಗಳಾಗಿ ಪಠಿತಗಳಾಗಿವೆ. ಎಂದು ಪೂರ್ವಪಕ್ಷಿಸಿದರೆ— ಸಮಾಧಾನವನ್ನು ಹೇಳುತ್ತೇವೆ. (2) "ಯೋऽನ್ನಂ ಬ್ರಹ್ಮೋಪಾಸತೇ" (ಪ್ರ. ೧೨೫) "ಯೋ ಪ್ರಾಣಂ ಬ್ರಹ್ಮೋಪಾಸತೇ" (ಪ್ರ. ೧೨೬) "ಆನಂದಂ ಬ್ರಹ್ಮಣೋ ವಿದ್ವಾನ್" (ಪ್ರ. ೧೨೭) "ವಿಜ್ಞಾನಂ ಬ್ರಹ್ಮ ಚೇದ್ವೇದ" (ಪ್ರ ೧೨೮) ಎಂದು ಬ್ರಹ್ಮಶಬ್ದವಾಚ್ಯವಾಗಿಯೇ ಪ್ರತೀತವಾಗುವುದರಿಂದ ಅನ್ನಮಯಾದಿ ಶಬ್ದವಾಚ್ಯವಾದವುಗಳು ಐದೂ ಶ್ರೀ ವಿಷ್ಣುರೂಪಗಳೇ. "ತದೇವ ಬ್ರಹ್ಮ ಪರಮಂ ಕವೀನಾಂ" ಎನ್ನುವ ಶ್ರುತಿಯಿಂದ ಬ್ರಹ್ಮ ಶಬ್ದವಾದರೂ ಕೇವಲ ವಿಷ್ಣುವಿಷಯಕವಾಗಿದೆ.

(3) "ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯಾನಂದಮಯಾ ಮೇ ಶುಧ್ಯಂತಾಂ" ಎನ್ನುವ ಶ್ರುತ್ಯಂತರ ಸಮಾಖ್ಯೆಯಿಂದ ಅನ್ನಮಯಾದಿ ಶಬ್ದಗಳು ಕೋಶಾರ್ಥಕಗಳು ಎಂದು ಯಾವುದು ಉಕ್ತವಾಗಿಯದೋ, ಅದೂ ಅಯುಕ್ತವು. ಅಲ್ಲಿ ಬ್ರಹ್ಮಶಬ್ದವೇ ಇಲ್ಲ 'ತ್ವಕ್ಚರ್ಮ-ಮಾಂಸ-ಮೇದೋ-ಮಜ್ಜಾ-ಸ್ನಾಯವೋऽಸ್ಥೀನಿ ಮೇ ಶುಧ್ಯಂತಾಂ ಜ್ಯೋತಿರಹಂ ವಿರಾಜಾ ವಿಪಾಪ್ಮಾ ಭೂಯಾಸಂ ಸ್ವಾಹಾ' । ಇತ್ಯಾದಿಪ್ರಕಾರತ್ವಕ್ ಚರ್ಮಾದಿಗಳ ವಿಕಾರೊಂದಿಗೆ ಪಠಿತವಾಗಿದೆ. 'ಶುಧ್ಯಂತಾಂ' ಎಂದು ಶುದ್ಧಿಪ್ರಾರ್ಥನಲಿಂಗವೂ ಇದೆ. ತಥಾಚ ಯಾವ ಯಾವ ಶಾಖೆಗಳಲ್ಲಿ ಬ್ರಹ್ಮ ಶಬ್ದದೊಂದಿಗೆ ಶಬ್ದಗಳು ಪಠಿತಗಳಾಗಿವೆಯೋ ಅಲ್ಲಿ ಅಲ್ಲಿ ಇದೇ ನ್ಯಾಯದಿಂದ ಆ ಶಬ್ದಗಳಿಂದ ಶ್ರೀ ಹರಿಯೇ ಹೇಳಿಸಿಕೊಳ್ಳಲ್ಪಡುತ್ತಾನೆ. (4) ಹಾಗಾದರೆ ಸೂತ್ರಕಾರರು 'ಆನಂದಮಯೋऽಭ್ಯಾಸಾತ್' ಎಂದು ಆನಂದಮಯನಿಗೇನೇ ವಿಷ್ಣುತ್ವವನ್ನು ಹೇಳಿದ್ದಾರೆಂದು ಹೇಳಕೂಡದು. ಆನಂದಮಯಶಬ್ದವು ಸಮಾನನ್ಯಾಯದಿಂದ ಅನ್ನಮಯಾದಿಗಳಿಗೆ ಉಪಲಕ್ಷಕವು. ಹೀಗೆಯೇ 'ಆಕಾಶಸ್ತಲ್ಲಿಂಗಾತ್' ಇದುಮೊದಲಾದ ಅಧಿಕರಣಗಳಲ್ಲಿ ಆಕಾಶಾದಿಶಬ್ದಗಳೂ ಸಮಾನನ್ಯಾಯವುಳ್ಳ ಶಬ್ದಾಂತರಗಳಿಗೆ ಉಪಲಕ್ಷಕವೆಂದು ತಿಳಿಯತಕ್ಕದ್ದು. ಸೂತ್ರಗಳು ಸರ್ವಶಾಖಾ ನಿರ್ಣಾಯಕಗಳಾಗಿರುವುದರಿಂದಲೂ, ಸೂಚಕಗಳಾಗಿರುವುದರಿಂದಲೂ ಅಲ್ಪಾಕ್ಷರವಿರತಕ್ಕವುಗಳಾದುದರಿಂದಲೂ, ಸೂತ್ರಗಳಲ್ಲಿ ಹೆಚ್ಚು ಶಬ್ದಗಳಿಗೆ ಪಾಠವಿಲ್ಲವು. ಅಂದರೆ, 'ಆನಂದಮಯೋऽಭ್ಯಾಸಾತ್' ಎಂದಿಷ್ಟೆ ಹೇಳಿರುವರು. ಅನ್ನಮಯ, ಪ್ರಾಣಮಯ ಮೊದಲಾದ ಶಬ್ದಗಳನ್ನು ಕಂಠತಃ ಹೇಳಲಿಲ್ಲ. (5) ಹಾಗಾದರೆ, ಆನಂದಮಯ ಶಬ್ದದಿಂದಲೇ ಬ್ರಹ್ಮನಲ್ಲಿ ಸರ್ವಶಾಖೆಗಳ ಸಮನ್ವಯವನ್ನೂ ಲಕ್ಷಿಸಲಿಕ್ಕೆ ಶಕ್ಯವಾಗುವುದರಿಂದ ಮೇಲಿನ ಎಲ್ಲಾ ಅಧಿಕರಣಗಳಿಗೆ ವೈಯರ್ಥ್ಯವೆಂದು ಹೇಳಕೂಡದು. (6) ಅಭ್ಯಧಿಕಾಶಂಕೆಯಿಂದ ಶ್ರುತ್ಯಂತರದಲ್ಲಿದ್ದ ಬ್ರಹ್ಮಶಬ್ದವು ವಿಷ್ಣುಪರವಲ್ಲವೆಂದಾಕ್ಷೇಪಬಂದರೆ ಆ ಆಕ್ಷೇಪವನ್ನು ವಿಶೇಷಯುಕ್ತಿಯಿಂದ ಪರಿಹರಿಸುವುದಕ್ಕಾಗಿ ಬೇರೆ ಅಧಿಕರಣಗಳನ್ನು ಆರಂಭಿಸಿದ್ದಾಗಿರುತ್ತದೆ.

(7) ಮತ್ತು '**ಸರ್ವೇ ವೇದಾ ಯತ್ಪದಮಾಮನಂತಿ**' ಎನ್ನುವ ಶ್ರುತಿಯಿಂದ ವಿಷ್ಣುವಿನಲ್ಲಿ ಸರ್ವವೇದಗಳಿಗೂ ಸಮನ್ವಯವು ಆವಶ್ಯಕವಾಗಿರುವುದರಿಂದ, ಸೂತ್ರಗಳಲ್ಲಿ ಹೇಳಿದಷ್ಟುಮಾತ್ರ ಇಟ್ಟುಕೊಳ್ಳಲಿಕ್ಕೆ ಬಾರದಿರುವುದರಿಂದ ಆನಂದಮಯ ಶಬ್ದವು ಶಬ್ದಾಂತರಗಳಿಗೆ ಉಪಲಕ್ಷಕವೆನ್ನುವುದೇ ಯುಕ್ತವು.

(8) ಹಾಗಾದರೆ ಸೂತ್ರಗಳಿಗೆ ಉಪಲಕ್ಷಣತ್ವವಿದ್ದರೂ ಆನಂದಮಯನಿಗೇನೇ ಬ್ರಹ್ಮತ್ವವನು ಏಕೆ ಪ್ರತಿಜ್ಞಾಮಾಡಿರುತ್ತಾರೆ? ಅನ್ನಮಯನಿಗೆ ಏಕೆ ಮಾಡಲಿಲ್ಲವೆಂದರೆ— '**ಅನ್ಯೋಽಂತರ ಆತ್ಮಾ ಆನಂದಮಯಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮಪುಚ್ಛಂ ಪ್ರತಿಷ್ಠಾ**' । (ತೈ. ಉ ಪು ೧೨೮) ಎಂದು ಆನಂದಮಯನ ಅವಯವವಾದ ಪುಚ್ಛವೇ ಬ್ರಹ್ಮವು ಎಂದು ಹೇಳಿರುತ್ತದೆ ಆಗ ಅವಯವಿಯಾದ ಆನಂದಮಯನು ಬ್ರಹ್ಮನಲ್ಲ ಎನ್ನುವ ಶಂಕೆಯನ್ನು ಪರಿಹರಿಸುವುದಕ್ಕಾಗಿ ಆನಂದಮಯನು ಬ್ರಹ್ಮನು ಎಂದು ಸೂತಕಾರರು ಪ್ರತಿಜ್ಞಾ ಮಾಡಿರುತ್ತಾರೆ. ಆದಕಾರಣ ಬ್ರಹ್ಮಶಬ್ದಾಭ್ಯಾಸವಿದ್ದುದರಿಂದ ಆನಂದಮಯ ಮೊದಲಾದ ಐದಕ್ಕೂ ವಿಷ್ಣುತ್ವವು ಸಿದ್ಧಿಸುತ್ತದೆ (9) '**ಏನಂ ಸಂಸ್ತೂಯಮಾನಸ್ತು**' '**ಏನಮುಕ್ತ್ವಾ ತತೋ ರಾಜನ್**' ಎಂದು ಹಿಂದೆ ಉದಾಹರಿಸಿದ ವಿಷ್ಣುಪುರಾಣ, ಭಾರತಗಳಲ್ಲಿ ಹೇಳಿದ ಪ್ರಕಾರ ಶ್ರೀ ಹರಿಯ ಅವಯವಕ್ಕೂ ಬ್ರಹ್ಮತ್ವವಿದ್ದುದರಿಂದ 'ಬ್ರಹ್ಮಪುಚ್ಛಂ' ಎನ್ನುವ ವಚನವು ವಿರುದ್ಧವಲ್ಲವು. ಹೇಗೆಂದರೆ, ಕೃಷ್ಣನಾಗಿ ಪ್ರಾದುರ್ಭವಿಸಿದ, ಶ್ರೀನಾರಾಯಣನ ಕೃಷ್ಣಕೇಶಕ್ಕೆ ಬ್ರಹ್ಮತ್ವವು ದೃಷ್ಟವಾಗಿಯದೋ, ಹೀಗೆಯೇ ಆನಂದಮಯನ ಪುಚ್ಛಕ್ಕೂ ನಿರವಧಿಕ ಅಚಿಂತ್ಯಶಕ್ತಿಯಿದ್ದಪ ಯುಕ್ತ ಬ್ರಹ್ಮತ್ವವು ವಿರುದ್ಧವಲ್ಲ. (10) ಬ್ರಹ್ಮಶಬ್ದವು ವಿಷ್ಣುವಿಗೇನೇ ನಿಯತವಾಗಿರುವುದರಿಂದ ಬ್ರಹ್ಮಶಬ್ದದಿಂದ ಸಹಚರಿತಗಳಾದ ಆನಂದಮಯಾದಿ ಶಬ್ದಗಳೂ ವಿಷ್ಣುಪರಗಳೆಂದು ಹೇಳಿದ್ದೂ ಕೂಡುವುದಿಲ್ಲ. '**ಯತ್ಕಾರಣಮೃತಂ ಸತ್ಯಂ ಪರಂ ಬ್ರಹ್ಮ**' ಎನ್ನುವ ಶ್ರುತ್ಯಂತರದಲ್ಲಿ ರುದ್ರನಲ್ಲಿಯೂ ಬ್ರಹ್ಮಶಬ್ದವು ಶ್ರುತವಾಗಿದೆ ಎಂದರೆ—ಆ ತಾಪನೀಯ ಶ್ರುತಿಯಲ್ಲಿ ಶ್ರೀವಿಷ್ಣುವಾಖ್ಯ ಪರಬ್ರಹ್ಮನನ್ನು ಉದ್ದೇಶಿಸಿಕೊಂಡು ವಿರೂಪಾಕ್ಷಾಖ್ಯ ಅಪರಬ್ರಹ್ಮನು ತಪಸ್ಸು ಮಾಡಿಕೊಂಡು ಇದ್ದಾನೆಂದೇ ಹೇಳಿದ್ದಾಗಿರುತ್ತದೆ. ಮತ್ತು 'ಋತಂ ಸತ್ಯಂ ಪರಂ ಬ್ರಹ್ಮ' ಎನ್ನುವ ವಾಕ್ಯವೂ ರುದ್ರಪರವೆಂದೇ ಇಟ್ಟುಕೊಂಡು ರುದ್ರನೇ ಪರಬ್ರಹ್ಮನೆಂದಾದರೆ— '**ಕ್ಷೀರೋದಾರ್ಣವಶಾಯಿನಂ ನೃಕೇಸರಿಣಂ ಯೋಗಿಧ್ಯೇಯಂ ಪರಮಂಪದಂ ಜಾನೀಯಾಂ**' ಕ್ಷೀರಸಮುದ್ರಶಾಯಿಯಾದ ನರಸಿಂಹರೂಪಿಯಾದ ಶ್ರೀ ಪರಮಾತ್ಮನನ್ನು ತಿಳಿಯುವೆನು ಎನ್ನುವ ಉಪಕ್ರಮವಾಕ್ಯವಿರೋಧವೂ ಬರುವುದು. (11) ಆದಪ್ರಯುಕ್ತ 'ತದೇವರ್ತಂ ತದು ಸತ್ಯಮಾಹುಸ್ತದೇವ ಬ್ರಹ್ಮ ಪರಮಂ ಕವೀನಾಂ' ಇದುಮೊದಲಾದ ಅನೇಕಾನೇಕ ಶ್ರುತಿಗಳಲ್ಲಿ ಸಾಧಿಸಿದಪ್ರಕಾರ ಶ್ರೀವಿಷ್ಣುವೇ ಪರಬ್ರಹ್ಮನು. (12) ಯಾವುದಾದರೂ ಪುರಾಣಗಳಲ್ಲಿ ವಿಷ್ಣುವಿಗೆ ಉತ್ಪತ್ತಿಹೇಳಿದ್ದು* ಇದ್ದರೆ ಆ ವಾಕ್ಯವು ಅವತಾರಾಭಿಪ್ರಾಯವುಳ್ಳದ್ದೆಂದು ತಿಳಿಯತಕ್ಕದ್ದು ಆದಪ್ರಯುಕ್ತ ಶ್ರೀವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವು ಮುಖ್ಯವಾಗಿರುವುದರಿಂದ ಬ್ರಹ್ಮಶಬ್ದಸಮಭಿವ್ಯಾಹೃತವಾದ ಅನ್ನಮಯಾದಿ ಶಬ್ದವೂ ಶ್ರೀವಿಷ್ಣುಪರವೆಂದೇ ಅಂಗೀಕರಿಸತಕ್ಕದು (13) ಮತ್ತು 'ಬ್ರಹ್ಮವಿದಾಪ್ನೋತಿ ಪರಂ' ಎಂದು ಮುಖ್ಯಬ್ರಹ್ಮನು ಉಪಕ್ರಾಂತನಾಗಿರುತ್ತಾನೆ. ಆದಪ್ರಯುಕ್ತ 'ಯೇಽನ್ನಂ ಬ್ರಹ್ಮೋಪಾಸತೇ' ಇದುಮೊದಲಾದುದಕ್ಕೆ ಅರ್ಥಾಂತರವನ್ನು ಅಂಗೀಕರಿಸಿದರೆ ಉಪಕ್ರಮ (ಪ್ರಕರಣದ ಆದಿಯಲ್ಲಿದ್ದ ವಾಕ್ಯ) ವಿರೋಧವೂ ಬರುವುದು ॥

॥ ೧೬೬ ॥ ಸೂ. ೧೨ ॥

ಹಾಗಾದರೆ, ಅನ್ನಮಯಾದಿ ಶಬ್ದವಾಚ್ಯನಾದವನು ಪರಮಾತ್ಮನಲ್ಲ. ವಿಕಾರವಾಚಕವಾದ ಮಯಟ್ ಶಬ್ದವು ಶ್ರುತವಾಗಿದೆ. ಪರಮಾತ್ಮನಿಗೆ ಅನ್ನಾದಿ ವಿಕಾರತ್ವವು ಕೂಡಲಾರದಷ್ಟೇ? ಅನ್ನಮಯಾದಿ ಶಬ್ದವಾಚ್ಯವಾದ ವಸ್ತುವು ಬ್ರಹ್ಮವ್ಯತಿರಿಕ್ತವಾದರೆ ಅಲ್ಲಿ ಬ್ರಹ್ಮಶಬ್ದವು ಕೂಡುವುದಿಲ್ಲವೆಂದೂ ಹೇಳಕೂಡದು. ಅಮುಖ್ಯವೃತ್ತಿಯಿಂದ ಬ್ರಹ್ಮಶಬ್ದವು ಪರಮಾತ್ಮನಿಂದ ವ್ಯತಿರಿಕ್ತರಾದ ಚತುರ್ಮುಖಾದಿಗಳಲ್ಲಿಯೂ ಕೂಡಬಹುದು. ಆದುದರಿಂದ ಅನ್ನಮಯಾದಿ ಶಬ್ದವಾಚ್ಯನಾದವನು ಪರಮಾತ್ಮನಲ್ಲ, ಎಂದಾಶಂಕಿಸಿದರೆ—

ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವು.

**"ಓಂ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ಓಂ"**

|| ಸೂ. ೧೩ ||

**ವಿಕಾರಶಬ್ದಾತ್** = ವಿಕಾರಾರ್ಥಕವಾದ ಮಯಟ್ ಶಬ್ದವಿದ್ದಪ್ರಯುಕ್ತ. **ನ** = ಅನ್ನಮಯಾದಿಶಬ್ದವಾಚ್ಯನಾದವನು ಪರಬ್ರಹ್ಮನಲ್ಲ, **ಇತಿ ಚೇನ್ನ**=ಎಂದರೆ ಹೀಗೆ ಹೇಳಕೂಡದು. **ಪ್ರಾಚುರ್ಯಾತ್**=ಪ್ರಾಚುರ್ಯಾರ್ಥತ್ವವಿದ್ದಪ್ರಯುಕ್ತ. ಅಂದರೆ ಇಲ್ಲಿದ್ದ ಮಯಟ್ ಪ್ರತ್ಯಯ ಸಮುದಾಯವು ಪ್ರಾಚುರ್ಯಾರ್ಥಕವು.

**ಸ. ರ ವಿ.—** (1) ಚತುರ್ಮುಖಾದಿಗಳಿಗೂ ಕಿಂಚಿತ್ ಪೂರ್ಣತ್ವವಿದ್ದಪ್ರಯುಕ್ತ ಬ್ರಹ್ಮಶಬ್ದದಿಂದ ಚತುರ್ಮುಖಾದಿಗಳನ್ನು ಏಕೆ ಇಟ್ಟುಕೊಳ್ಳಬಾರದು ಎನ್ನಕೂಡದು. ಮುಖ್ಯಾರ್ಥವು ಕೂಡುವಾಗ ಅಮುಖ್ಯಾರ್ಥವನ್ನು ಕಲ್ಪಿಸಕೂಡದು. (2) ಹಾಗಾದರೆ, ಅನ್ನಮಯಾದಿ ಶಬ್ದಗಳು ಬ್ರಹ್ಮಪರವಾದರೆ ಮಯಟ್ ಪ್ರತ್ಯಯವು ಹೇಗೆ ಕೂಡುತ್ತದೆ? 'ಮೃನ್ಮಯೋ ಘಟಃ ಇತ್ಯಾದಿಗಳಲ್ಲಿ ಮಯಟ್ ಪ್ರತ್ಯಯಕ್ಕೆ ವಿಕಾರರೂಪವಾದ ಅರ್ಥವು ದೃಷ್ಟವಾಗಿದೆ. ಎಂದರೆ— 'ಪ್ರಕಾಶಮಯೋ ರವಿಃ' ಇತ್ಯಾದಿಗಳಲ್ಲಿ ಪ್ರಾಚುರ್ಯಾರ್ಥದಲ್ಲಿಯೂ ಮಯಟ್ ಪ್ರಯೋಗವು ದೃಷ್ಟವಾಗಿರುವುದರಿಂದ ಇಲ್ಲಿದ್ದ ಮಯಟ್ ಪ್ರತ್ಯಯವು ಅನ್ನಾದಿಪ್ರಾಚುರ್ಯಾರ್ಥಕವು, ಆದಪ್ರಯುಕ್ತ ವಿರೋಧವಿಲ್ಲವೆನ್ನುತ್ತಾರೆ.

**ನ್ಯಾಯಸುಧಾ—** ಆಕ್ಷೇಪ ಪರಿಹಾರಗಳು ಆನಂದಮಯವಿಷಯಕಗಳೇ ಎನ್ನುವ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಸಿದ್ಧಾಂತಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ || ಪ್ರಾಚುರ್ಯಾರ್ಥಾಶ್ಚ ಮಯಟಃ ಸರ್ವೇಽತ್ರ ಪ್ರತಿಪಾದಿತಾಃ ||**

|| ೧೭೮ ||

**ಅ ||** ಅತ್ರ ಸರ್ವೇ ಮಯಟಃ=ಇಲ್ಲಿ ಕೇಳಲ್ಪಡತಕ್ಕ ಎಲ್ಲಾ ಮಯಟ್ ಪ್ರತ್ಯಯಗಳು, ಅತ್ರ=ಈ ಶ್ರುತಿಯಲ್ಲಿ, ಪ್ರಾಚುರ್ಯಾರ್ಥಾಶ್ಚ = ಪ್ರಾಚುರ್ಯರೂಪವಾದ ಅರ್ಥವುಳ್ಳವುಗಳಾಗಿಯೇ, ಪ್ರತಿಪಾದಿತಾಃ=ಪ್ರತಿಪಾದಿಸಲ್ಪಟ್ಟವೆ.

**ತಾ || ನ. ಚ. ವಿ.—** ಅನ್ನಮಯಾದಿ ಶ್ಲೋಕಗಳಲ್ಲಿ ' ಅನ್ನಂ ಹಿ ಭೂತಾನಾಂ ಜ್ಯೇಷ್ಠಂ । (ಪು. ೧೨೫) ಪ್ರಾಣಂ ದೇವಾಃ ಅನುಪ್ರಾಣಂತಿ । (ಪು. ೧೨೬) ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮ ಜ್ಯೇಷ್ಠಮುಪಾಸತೇ । (ಪು. ೧೨೮)' ಇತ್ಯಾದಿಗಳಲ್ಲಿ ಸರ್ವಜ್ಯೇಷ್ಠತ್ವ ಸರ್ವದೇವಾದಿ ಚೇಷ್ಟಕತ್ವ ಮೊದಲಾದುದನ್ನು ಹೇಳಿದುದರಿಂದ ಅನ್ನಾದಿಗಳ ಪ್ರಾಚು

ರ್ಯವೇ ಪ್ರತಿಪಾದಿಸಲ್ಪಡುತ್ತದೆ. ಅಪೂರ್ಣನಿಗೆ ಇಂತಹ ಗುಣಗಳು ಕೂಡಲಾರವು. 'ವಿಕಾರೆ ಪ್ರಧಾನೆ ಪ್ರಾಚುರ್ಯೇಷು ಮಯಟ್' ಎಂಬ ಅಭಿಯುಕ್ತರ ಪ್ರಯೋಗವಿದ್ದುದರಿಂದ ಪ್ರಾಚುರ್ಯಾರ್ಥದಲ್ಲಿಯೂ ಮಯಟ್ ಪ್ರತ್ಯಯವು ದೃಷ್ಟವಾಗಿದೆ.

ನ್ಯಾಯಸುಧಾ— (1) 'ತತ್ಪ್ರಕೃತವಚನೇ ಮಯಟ್' ಎನ್ನುವ ಪಾಣಿನಿಸೂತ್ರ ವಿದ್ದಪ್ರಯುಕ್ತ ಮಯಟ್ ಶಬ್ದವು ವಿಕಾರರೂಪ ಅರ್ಥದಲ್ಲಿದ್ದಂತೆಯೇ ಪ್ರಾಚುರ್ಯಾರ್ಥದಲ್ಲಿಯೂ ಮುಖ್ಯವಾದದ್ದು. (2) ಬ್ರಹ್ಮಶಬ್ದವು ಬೇರೆ ಕಡೆಗಳಲ್ಲಿ ಮುಖ್ಯವೂ ಅಲ್ಲ. ಸಾವಕಾಶವಾದ ಮಯಟ್ ಪ್ರತ್ಯಯದಿಂದ ನಿರವಕಾಶವಾದ ಬ್ರಹ್ಮಶಬ್ದಕ್ಕೆ ಬಾಧವೂ ಕೂಡಲಾರದು. ಆದಕಾರಣ ನಿರವಕಾಶವಾದ ಬ್ರಹ್ಮಶಬ್ದದ ಬಲದಿಂದ ಸಾವಕಾಶವಾದ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯರೂಪ ಅರ್ಥವು ಕೂಡುವಪ್ರಯುಕ್ತ ಮಯಟ್ ಪ್ರತ್ಯಯದ ಬಲದಿಂದ ಅನ್ನಮಯಾದಿ ಶಬ್ದವಾಚ್ಯರು ಬ್ರಹ್ಮರಲ್ಲವೆಂದು ಕಲ್ಪಿಸಕೂಡದು.

(3) ಸಂಕರಾಚಾರ್ಯರು 'ಅನ್ನಮಯಾದಿಗಳು ವಿಕಾರಾರ್ಥಕಗಳಾಗಿರುವುದರಿಂದ ಆ ವಿಕಾರಪ್ರವಾಹದ ಮಧ್ಯದಲ್ಲಿಯೇ ಆನಂದಮಯಶಬ್ದವೂ ಬಿದ್ದಪ್ರಯುಕ್ತ ವಿಕಾರಾರ್ಥಕವೇ, ಪ್ರಾಚುರ್ಯಾರ್ಥಕವಲ್ಲ,' ಎಂದು ಹೇಳಿದ್ದು ಅಯುಕ್ತವು. ಅನ್ನಮಯಾದಿಗಳಲ್ಲಿಯೂ ಇದ್ದ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯರೂಪ ಅರ್ಥವೆಂದೇ ಸ್ವೀಕಾರ ಮಾಡಿದ್ದೇವೆ. (4) ಮತ್ತೂ ದೇಹ, ಪ್ರಾಣ, ಮನಸ್ಸು, ಬುದ್ಧಿ ಆನಂದರೂಪಗಳಾದ ಅನಾತ್ಮಗಳೇ ಕ್ರಮವಾಗಿ ಅನ್ನಮಯ ಮೊದಲಾದ ಶಬ್ದಗಳಿಂದ ಹೇಳಲ್ಪಡುತ್ತವೆಂದು ಸಂಕರಾಚಾರ್ಯರ ಅಭಿಪ್ರಾಯವು. ಆಯಾಯ ದೇಹಗಳಿಗೆ ಅನ್ನವಿಕಾರತ್ವವಿದ್ದರೂ ಪ್ರಾಣಾದಿಗಳಿಗೆ ಪ್ರಾಣಾದಿ ವಿಕಾರತ್ವವಿಲ್ಲ. ಆತ್ಮಾಶ್ರಯತ್ವವು ಬರಬೇಕಾಗುವುದು. ಆದಕಾರಣ ಇಲ್ಲಿದ್ದ ಮಯಟ್ ಪ್ರತ್ಯಯಗಳಿಗೆ ವಿಕಾರಾರ್ಥತ್ವವು ಕೂಡುವುದಿಲ್ಲವಾದಕಾರಣ ಸ್ವಾರ್ಥಕತ್ವವನ್ನೇ ಸಂಕರಾಚಾರ್ಯರೂ ಅವಶ್ಯವಾಗಿ ಹೇಳಲೇಬೇಕು. ಹೀಗೆ ಇರುವಾಗ ಆನಂದಮಯಶಬ್ದದಲ್ಲಿ ಪ್ರಾಚುರ್ಯಾರ್ಥತ್ವವನ್ನು ಸ್ವೀಕಾರ ಮಾಡಿದರೆ ಪ್ರಾಯಪಾಠವಿರೋಧವೆಂದು ಹೇಳಿದ್ದು ಹೇಗೆ ಕೂಡುತ್ತದೆ (5) ಪ್ರಾಣಾದ್ಯುಪಾಧ್ಯವಚ್ಛಿನ್ನವಾದುದು ಕಥಂಚಿತ್ ಪ್ರಾಣಾದಿ ವಿಕಾರವಾಗುತ್ತದೆಂದು ಪ್ರಯಾಸಪಟ್ಟು ಕಲ್ಪಿಸಿದರೆ ಉಪಾಧಿಜ್ಞಾಪ್ಯವಾದ ವಿಭಾಗಕ್ಕೆ ಮುಖ್ಯವಾಗಿ ವಿಕಾರತ್ವವು ಇಲ್ಲದಿರುವುದರಿಂದ ಮುಖ್ಯಾರ್ಥಪರಿತ್ಯಾಗವು. ಆದಕಾರಣ ಸಂಕರಾಚಾರ್ಯರ ವ್ಯಾಖ್ಯಾನವು ಅಯುಕ್ತವು ॥ ೧೭೮ ॥

ಸ. ರ ವಿ.— ಅನ್ನಮಯ ಶಬ್ದವು ವಿಷ್ಣುಪರವಾದರೆ 'ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತೇ' ಎನ್ನುವಲ್ಲಿ ಅದ್ಯತ್ವ (ತಿನ್ನಲಿಕ್ಕೆ ಯೋಗ್ಯವಾಗಿರುವಿಕೆ) ಎನ್ನುವ ಪ್ರಸಿದ್ಧಾನ್ನಲಿಂಗವು ಹೇಗೆ ಕೂಡುತ್ತದೆಂದರೆ—

ನ್ಯಾಯಸುಧಾ—(1) ಅನ್ನಮಯ ಎನ್ನುವುದಕ್ಕೆ ಅನ್ನವಿಕಾರವೆನ್ನುವ ಅರ್ಥವು ಹೇಗೆ ಕೂಡುವುದಿಲ್ಲವೋ, ಹಾಗೆಯೇ ಅನ್ನಪ್ರಾಚುರ್ಯವೆನ್ನುವ ಅರ್ಥವೂ ಕೂಡ ಈಶ್ವರನಿಗೆ ಕೂಡುವುದಿಲ್ಲ. ಅನ್ನಪ್ರಾಚುರ್ಯರೂಪ ಅರ್ಥವಾದರೂ ಅನ್ನವನ್ನೇ ಉಪಜೀವಿಸಿಕೊಂಡಿರುವ ಪಾರ್ಥಿವ ಶರೀರಗಳಿಗೆ ಕೂಡಬಹುದು ಎಂದು ಹೇಳಕೂಡದು. ಈ ಶ್ರುತಿಯಲ್ಲಿದ್ದ ಅನ್ನ ಶಬ್ದಕ್ಕೆ ಪ್ರಸಿದ್ಧ ಅನ್ನವೆಂದು ಅರ್ಥವಲ್ಲ. ಏಕೆಂದರೆ, ಶ್ರುತಿಯು ತಾನೇ 'ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತೇ' (ತೈ. ಉ. ಪು. ೧–೫) ಎಂದು ಅನ್ನಶಬ್ದವನ್ನು ನಿರ್ವಚನ ಮಾಡಿರುತ್ತದೆ. ಭಕ್ಷಣಾರ್ಥಕವಾದ 'ಅದ' ಧಾತುವಿಗೆ ಕರ್ಮಾರ್ಥದಲ್ಲಿಯೂ, ಕರ್ತ್ರರ್ಥದಲ್ಲಿಯೂ 'ಕ್ತ' ಪ್ರತ್ಯಯ ಮಾಡಿದರೆ ಅನ್ನವೆಂದು ಶಬ್ದವು ಆಗುತ್ತದೆ. ಪ್ರಸಿದ್ಧವಾದ

ಅನ್ನಕ್ಕೆ ಭೂತಾತ್ತೃತ್ವವು ಕೂಡುವುದಿಲ್ಲ. ಆದಪ್ರಯುಕ್ತ ಈ ಅನ್ನಶಬ್ದವು ಭಾವಪ್ರಧಾನವಾಗಿ ಭೂತಾದ್ಯತ್ವವನ್ನು (ಪ್ರಾಣಿಗಳಿಂದ ತಿನ್ನಲ್ಪಡುವಿಕೆ ಎನ್ನುವುದನ್ನು) ಭೂತಾತ್ತೃತ್ವವನ್ನು (ಪ್ರಾಣಿಗಳನ್ನು ತಿನ್ನುವುದು ಎನ್ನುವುದನ್ನು) ಹೇಳುತ್ತದೆ. ಆದಾಗ್ಯೂ ಅಂತಹ ಅನ್ನಪ್ರಾಚುರ್ಯವು ಪರಮೇಶ್ವರನಿಗೆ ಕೂಡುವುದಿಲ್ಲ. ಭೂತಾತ್ತೃತ್ವಂ ಎನ್ನುವುದಕ್ಕೆ ಭೂತಸಂಹಾರಕನೆನ್ನುವ ಅರ್ಥವು ಕಥಂಚಿತ್ ಕೂಡಿದರೂ ಭೂತಾದ್ಯತ್ವರೂಪವಾದ ಅರ್ಥವು ಹೇಗೂ ಕೂಡಲಾರದು; ಎಂದರೆ —

ಮೂ ॥ ಭೋಗ್ಯತ್ವಮತ್ರ ಚಾದ್ಯತ್ವಮುಪಜೀವ್ಯತಯಾ ಹರೇಃ ।
ಮಹಾಭೋಕ್ತಾ ಮಹಾಭೋಗ್ಯ ಇತ್ಯರ್ಥೋಽನ್ನಮಯೇ ಭವೇತ್॥
ಮಹಾಪ್ರಾಣೋ ಮಹಾಬೋಧೋ ಮಹಾವಿಜ್ಞಾನವಾನಪಿ॥೧೭॥

ಅ ॥ ನ. ಚ. ವಿ. ಅತ್ರ ಈ ಶ್ರುತಿಯಲ್ಲಿ, ಹರೇಃ=ಶ್ರೀ ಹರಿಗೆ, ಉಪಜೀವ್ಯತಯಾ= (ಯಾರು ಇಲ್ಲದೆ ಯಾರಿಗೆ ಉಸ್ಥಿತಿಯಾಗಲಾರದೋ ಅದು ಅದಕ್ಕೆ ಉಪಜೀವ್ಯವು) ಉಪಜೀವ್ಯತ್ವದಿಂದ, ಭೋಗತ್ವಂ ಚ=ಭೋಗ್ಯತ್ವವೇ, ಅದ್ಯತ್ವಂ=ಅದ್ಯತ್ವವು. (ಭಕ್ಷ್ಯತ್ವವಲ್ಲ) ನ್ಯಾಯಸುಧಾ—ಅತ್ರ=ಈ ಶ್ರುತಿಯಲ್ಲಿ, ಅದ್ಯತ್ವಂ=ಅದ್ಯತ್ವವೆಂದರೆ, ಭೋಗ್ಯತ್ವಂ ಚ= ಅಮುಖ್ಯವೃತ್ತಿಯಿಂದ ಭೋಗ್ಯತ್ವವೇ. ಭೋಗ್ಯತ್ವಂ ಚ=ಭೋಗ್ಯತ್ವವೆನ್ನುವುದಾದರೂ, ಹರೇಃ=ಶ್ರೀಪರಮಾತ್ಮನಿಗೆ. ಉಪಜೀವ್ಯತಯಾ=ಸರ್ವ ಭೂತೋಪಜೀವ್ಯತ್ವವಿದ್ದ ಪ್ರಯುಕ್ತ, (ಯುಕ್ತವಾಗುತ್ತದೆ). (ಇದೇಪ್ರಕಾರ ಪ್ರಾಣಶಬ್ದ, ಮನಶ್ಶಬ್ದ, ವಿಜ್ಞಾನಶಬ್ದಗಳಿಗೂ ವಾಯು. ಅಂತಃಕರಣ, ಬುದ್ಧಿ ಎನ್ನುವ ಪ್ರಸಿದ್ಧಾರ್ಥತ್ವವನ್ನು ಬಿಟ್ಟುಬಿಟ್ಟು ಪ್ರಾಣನ (ಚೆನ್ನಾಗಿ ಚೇಷ್ಟೆಮಾಡುವಿಕೆ,) ಅವಬೋಧನ (ತಿಳಿದುಕೊಳ್ಳುವಿಕೆ) ವಿಜ್ಞಾನ( ವಿಶೇಷ ಜ್ಞಾನ) ರೂಪ ಅರ್ಥವನ್ನು ಇಟ್ಟುಕೊಂಡು ಆ ಪ್ರಾಣನಾದಿಗಳ ಪ್ರಾಚುರ್ಯವನ್ನು ಅಶರೀರನಾದ ಪರಮಾತ್ಮನಿಗೂ ಉಪಪಾದಿಸಬೇಕು. ಪ್ರಸಿದ್ಧಾರ್ಥವನ್ನೇ ಇಟ್ಟುಕೊಂಡರೆ ಹಿಂದೆ ಉದಾಹರಿಸಿದ ಶ್ಲೋಕಾರ್ಥಗಳು ಕೂಡಲಾರವು.) ಸ. ರ. ವಿ. ಅನ್ನಮಯಶಬ್ದವು ಪ್ರಸಿದ್ಧಾನ್ನವಿಷಯಕವಾದರೆ ಭೂತಾತ್ತೃತ್ವ (ಸರ್ವಪ್ರಾಣಿಸಂಹರ್ತೃತ್ವ) ವೆನ್ನುವ ಪ್ರಸಿದ್ಧ ಬ್ರಹ್ಮಲಿಂಗವು ಅಯುಕ್ತವಾಗುವುದು. ಅನ್ನಮಯಾದಿಶಬ್ದಗಳನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಾರೆ. ಮಹಾಭೋಕ್ತಾ=ಮುಖ್ಯವಾಗಿ ಸರ್ವಭಕ್ಷಕನು (ಸರ್ವ ಸಂಹಾರಕನು), ಮಹಾಭೋಗ್ಯಃ=ಸರ್ವಪ್ರಾಣಿಗಳಿಗೂ ಉಪಜೀವ್ಯನು, ಇತಿ=ಈ ಪ್ರಕಾರ, ಅನ್ನಮಯೇ= ಅನ್ನಮಯ ಶಬ್ದದಲ್ಲಿ, ಅಥವಾ ಪರಮೇಶ್ವರನಲ್ಲಿ, (ಅನ್ನಮಯಶಬ್ದದಿಂದ ಹೇಳಲ್ಪಟ್ಟ,) ಅರ್ಥಃ=ಅರ್ಥವು, ಭವೇತ್=ಆಗುವುದು. ಮಹಾಪ್ರಾಣಃ=ಮಹಾವ್ಯಾಪಾರವುಳ್ಳವನೆಂದು, (ಪ್ರಾಣಮಯ ಶಬ್ದಕ್ಕೆ ಅರ್ಥವಾಗುವುದು. ಮಹಾಬೋಧಃ=ಮಹಾಜ್ಞಾನವುಳ್ಳವನೆನ್ನುವ ಅರ್ಥವು, (ಮನೋಮಯಶಬ್ದಕ್ಕೆ ಆಗುವುದು.) ಮಹಾವಿಜ್ಞಾನವಾನ್=ಮಹಾವಿಶೇಷ ಜ್ಞಾನವುಳ್ಳವನು, (ಎನ್ನುವ ಅರ್ಥವು ವಿಜ್ಞಾನಮಯಶಬ್ದಕ್ಕೆ ಆಗುವುದು.) ಅಪಿ=ಅಪಿಶಬ್ದದಿಂದ, (ಮಹಾನಂದ ಎನ್ನುವುದು ಆನಂದಮಯಶಬ್ದಾರ್ಥವಾಗುವುದು).

ತಾ ॥ ಸ. ರ. ವಿ—ಅತ್ತೃತ್ವವೆನ್ನುವಗುಣದಿಂದ ಯುಕ್ತನಾದ ಹಾಗೆಯೇ ಉಪಜೀವ್ಯತ್ವರೂಪವಾದ ಅದ್ಯತ್ವಗುಣದಿಂದ ಯುಕ್ತನಾದ ಅನ್ನಮಯಶಬ್ದವಾಚ್ಯನು, ಅನ್ನಮಯಶಬ್ದಕ್ಕೆ ಅನ್ನಪ್ರಾಚುರ್ಯವಿದ್ದಪ್ರಯುಕ್ತ ಪ್ರಚುರಾತ್ತನೆಂದೂ ಪ್ರಚುರೋಪಜೀವ್ಯನೆಂದೂ ಅರ್ಥವನ್ನು

ಹೇಳಬೇಕು. ಪ್ರಚುರಾತ್ತನೂ-ಪ್ರಚುರೋಪಜೀವ್ಯನೂ ಆದವನು ಜಗತ್ಸಂಹಾರಪೋಷಣಾದಿಗಳನ್ನು ಮಾಡುವುದರಿಂದ ಜಗತ್ತಿಗೆ ಉಪಜೀವ್ಯನಾದಪ್ರಯುಕ್ತ ಶ್ರೀ ವಿಷ್ಣುವು. ತಥಾಚ ಚೇಷ್ಟಾಪ್ರಚುರನು ಪ್ರಾಣಮಯನು, ಬೋಧಪ್ರಚುರನು, ಮನೋಮಯನು, ವಿಜ್ಞಾನಪ್ರಚುರನು, ವಿಜ್ಞಾನಮಯನು ॥ ೧೭೯ ॥

ಹಾಗಾದರೆ (1) ಪರಮಾತ್ಮನಿಗೆ ಅನ್ನಮಯ ಮೊದಲಾದ ಐದರ ಸ್ವರೂಪತ್ವವಿದ್ದರೆ ಅನೇಕತ್ವವು ಬರಬೇಕಾಗುವುದು. ಆಗ 'ಏಕಮೇವಾದ್ವಿತೀಯಂ' ಎನ್ನುವ ಶ್ರುತಿಯಲ್ಲಿ ಶ್ರೀ ಹರಿಯು ಒಬ್ಬನೇ ಎಂದು ಹೇಳಿರುವುದರಿಂದ ಆ ಶ್ರುತಿಯಿಂದ ವಿರೋಧವು ಬರುವುದು. (2) ಹಾಗೆಯೇ ಪ್ರಚುರವಾದ ವಿಜ್ಞಾನವು ಇವನಲ್ಲಿದೆ, ಪ್ರಚುರವಾದ ಆನಂದವು ಇವನಲ್ಲಿದೆ, ಎಂದು ವಿಜ್ಞಾನಾದಿಗಳಿಗೂ ಪರಮಾತ್ಮನಿಗೂ ಭೇದವು ಪ್ರಸಕ್ತವಾಗುವುದರಿಂದ 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿವಿರೋಧವೂ ಬರುವುದು (3) ಹಾಗೆಯೇ ಮನಶ್ಶಬ್ದಕ್ಕೆ ಜ್ಞಾನವೆಂದು ಅರ್ಥವನ್ನು ಇಟ್ಟುಕೊಂಡರೆ ಮನಶ್ಶಬ್ದಕ್ಕೂ ವಿಜ್ಞಾನಶಬ್ದಕ್ಕೂ ಒಂದೇ ಅರ್ಥವಾಗುವುದರಿಂದ 'ವಿಜ್ಞಾನಮಯಃ ಮನೋಮಯಃ' ಎಂದು ಪ್ರತ್ಯೇಕ ಉಕ್ತಿಯು ಕೂಡಲಾರದೆಂದರೆ—

**ಮೂ ॥ ವಿಶೇಷಸಾಮಾನ್ಯತಯಾ ವಿಜ್ಞಾನಂ ಮನ ಇತ್ಯಪಿ ।**
**ಏಕಸ್ಯ ಜ್ಞಾನರೂಪಸ್ಯ ಹರೇರುಕ್ತಿರ್ವಿಭಾಗತಃ ॥ ೧೮೦ ॥**

ಅ ॥ ಜ್ಞಾನರೂಪಸ್ಯ=ಜ್ಞಾನಾನಂದಾದ್ಯಾತ್ಮಕನಾದ, ಏಕಸ್ಯ ಹರೇಃ=ನಿರ್ಭಿನ್ನನಾದ ಒಬ್ಬ ಶ್ರೀ ಹರಿಗೇನೇ, ವಿಶೇಷಸಾಮಾನ್ಯತಯಾ=ವಿಶೇಷಸಾಮಾನ್ಯವಿಷಯಕತ್ವವಿದ್ದಪ್ರಯುಕ್ತ, ವಿಜ್ಞಾನಂ ಮನಃ ಇತ್ಯಪಿ=ವಿಜ್ಞಾನವೆಂದೂ ಮನಃ ಎಂದೂ, ವಿಭಾಗತಃ = ಪ್ರತ್ಯೇಕವಾಗಿ, ಉಕ್ತಿಃ=ವಚನವು, (ಯುಕ್ತವಾಗುತ್ತದೆ).

**ತಾ ॥ ನ್ಯಾಯಸುಧಾ—** ಇಲ್ಲಿ ವಿವಕ್ಷಾಭೇದದಿಂದ ಮೂರುಪ್ರಕಾರ ಪರಿಹಾರವನ್ನು ಇಟ್ಟುಕೊಳ್ಳತಕ್ಕದ್ದು. (1) ಶ್ರೀ ಹರಿಯ ರೂಪಗಳಿಗೆ ಭೇದವಿಲ್ಲದಿದ್ದರೂ ವಿಶೇಷ (ಭೇದವಿಲ್ಲದಿದ್ದಲ್ಲಿಯೂ ಭೇದಕಾರ್ಯವನ್ನು ನಿರ್ವಾಹಮಾಡತಕ್ಕ ಶಕ್ತಿವಿಶೇಷ) ಬಲದಿಂದ ಅನೇಕತ್ವಸಂಖ್ಯಾವಿದ್ದಪ್ರಯುಕ್ತ ಪ್ರತ್ಯೇಕವಾಗಿ ಅನ್ನಮಯ ಮೊದಲಾದ ಅನೇಕತ್ವೋಕ್ತಿಯು ಯುಕ್ತವಾಗುತ್ತದೆ. (2) ಶ್ರೀ ಹರಿಯು ಜ್ಞಾನಾನಂದಾದ್ಯಾತ್ಮಕನಾಗಿದ್ದಾಗ್ಯೂ ಆತನಿಗೆ ವಿಶೇಷಶಕ್ತಿಯಿಂದಲೇ ಜ್ಞಾನವುಳ್ಳವನು, ಆನಂದವುಳ್ಳವನು ಎನ್ನುವ ವಚನವು ಯುಕ್ತವಾಗುತ್ತದೆ. (3) ಹೀಗೆಯೇ ಮನಃಶಬ್ದಕ್ಕೆ ಜ್ಞಾನವೆಂದು ಅರ್ಥವಿದ್ದಾಗ್ಯೂ 'ವಿಜ್ಞಾನಮಯಃ' 'ಮನೋಮಯಃ' ಎಂದೂ ಪ್ರತ್ಯೇಕ ವಚನವು ವಿಶೇಷವಿಷಯಕ ಜ್ಞಾನಪ್ರಾಚುರ್ಯವಿದ್ದುದರಿಂದಲೂ ಸಾಮಾನ್ಯವಿಷಯಕಜ್ಞಾನಪ್ರಾಚುರ್ಯವಿದ್ದುದರಿಂದಲೂ ಯುಕ್ತವಾಗುತ್ತದೆ. ವಿಜ್ಞಾನಶಬ್ದವು ವಿಶೇಷಜ್ಞಾನವನ್ನು ಹೇಳುತ್ತದೆ. " **ಸಾಮಾನ್ಯೈರ್ಯೇ ತ್ವವಿಜ್ಞೇಯಾಃ ವಿಶೇಷಾ ಮಮ ಗೋಚರಾಃ । ದೇವಾದೀನಾಂ ತು ತಜ್ಜ್ಞಾನಂ ವಿಜ್ಞಾನಮಿತಿ ಕೀರ್ತಿತಂ** " ॥ ಸಾಧಾರಣ ಪುರುಷರಿಂದ ತಿಳಿಯಲ್ಪಡದಿರುವ ವಿಶೇಷಗಳಾದರೂ ನನ್ನ ಜ್ಞಾನಕ್ಕೆ ವಿಷಯಗಳಾಗುತ್ತವೆ. ದೇವಾದಿಗಳ ಆ ಜ್ಞಾನವಾದರೂ ವಿಜ್ಞಾನವೆಂದು ಹೇಳಲ್ಪಡುತ್ತದೆ, ಎಂದು ಗೀತಾಭಾಷ್ಯದಲ್ಲಿ ಹೇಳಿದ ವಚನದಿಂದ ವಿಜ್ಞಾನಶಬ್ದಕ್ಕೆ ವಿಶೇಷಜ್ಞಾನವೆಂದರ್ಥವು. ಮನಶ್ಶಬ್ದವು ಕೇವಲ ಜ್ಞಾನವನ್ನು ಹೇಳುತ್ತದೆ. ವಿಜ್ಞಾನಶಬ್ದದ ಒಟ್ಟಿಗೆ ಪಠಿತವಾಗಿರುವುದರಿಂದ ಸಾಮಾನ್ಯ ಜ್ಞಾನದಲ್ಲಿ ಪರ್ಯವಸಿತವಾಗುತ್ತದೆ ॥ ೧೮೦ ॥

ಸ. ರ. ವಿ.— "ತಸ್ಮಾದ್ವಾ ಏತಸ್ಮಾದನ್ನರಸಮಯಾತ್ । ಅನ್ಯೋಽಂತರ ಆತ್ಮಾ ಪ್ರಾಣಮಯಃ" ॥ (ಪು. ೧-೫) ಇತ್ಯಾದಿಗಳಲ್ಲಿ ಅನ್ಯಶಬ್ದವು ಸ್ವಗತಭೇದವಿರಹಿತನಾದ ವಿಷ್ಣುವಿನಲ್ಲಿ ಹೇಗೆ ಕೂಡುತ್ತದೆಂದರೆ—

ನ್ಯಾಯಸುಧಾ— ಆದಾಗ್ಯೂ ಅನ್ನಮಯಾದಿ ಶಬ್ದವಾಚ್ಯನು, ಪರಮಾತ್ಮನಲ್ಲ. 'ತಸ್ಮಾದ್ವಾ ಏತಸ್ಮಾತ್' ಇತ್ಯಾದಿಗಳಿಂದ ಅನ್ನಮಯಾದಿಗಳಿಗೆ ಪರಸ್ಪರವಾಗಿ ಭೇದವು ಅವಗತವಾಗುತ್ತದೆ. ಪರಮಾತ್ಮನ ರೂಪಗಳಿಗಾದರೂ ಭೇದವೇ ಇಲ್ಲವೆಂದರೆ—

ಮೂ ॥ ಅಭೇದೇಽಪಿ (ಅಭಿನ್ನೋಽಪಿ) ವಿಶೇಷೇಣೈವಾನ್ಯ ಇತ್ಯುದಿತೋ ಹರಿಃ ॥ ೧೮೧ ॥

ಭೇದಶಬ್ದಾ ವಿಶೇಷಂ ತು ಹರಾವನ್ಯತ್ರ ಭಿನ್ನತಾಂ ।
ಬ್ರೂಯು ರ್ಹರೇ ರ್ಜೀವ ಜಡೈರಪಿ ಭೇದಂ ಹಿ ಮುಖ್ಯತಃ ॥೧೮೨॥
ಬ್ರಹ್ಮತರ್ಕವಚೋಽಸ್ತ್ಯೇವಮತ ಏಕಃ ಸ ಪಂಚಧಾ ।
ಉಕ್ತೋಽನ್ನಮಯ ಇತ್ಯಾದಿ ಭೃಗೋಶ್ಚೈತದ್ವದಿಷ್ಯತಿ ॥ ೧೮೩ ॥

ಅ ॥ ಅಭೇದೇಽಪಿ = ಭಗವದ್ರೂಪಗಳಿಗೆ ಭೇದವಿಲ್ಲದಿದ್ದರೂ, ಹರಿಃ = ಶ್ರೀ ಪರಮಾತ್ಮನು, (ಅಭಿನ್ನೋಽಪಿ = ನಿರ್ಭಿನ್ನನಾದಾಗ್ಯೂ) ವಿಶೇಷೇಣೈವ = ಭೇದಪ್ರತಿನಿಧಿಯಾಗಿ ಭೇದಕಾರ್ಯನಿರ್ವಾಹಕವಾದ ವಿಶೇಷದಿಂದಲೇ, (ಮುಖ್ಯ ಭೇದದಿಂದ ಅಲ್ಲ) ಅನ್ಯ ಇತಿ= ಭಿನ್ನನೆಂದು, ಉದಿತಃ=ಹೇಳಲ್ಪಟ್ಟಿದ್ದಾನೆ. (ವಿಶೇಷ ವಿಷಯಕವಾದ ಆಗಮವನ್ನೂ ಹೇಳುತ್ತಾರೆ.) ಭೇದಶಬ್ದಾಃ=ಭೇದನಿಮಿತ್ತಗಳಾದ ಅನ್ಯ ಮೊದಲಾದ ಶಬ್ದಗಳೂ, ಹರೌ ತು=ಶ್ರೀ ಪರಮಾತ್ಮನಲ್ಲಿ ಆದರೂ, ವಿಶೇಷಂ=ಭೇದಕಾರ್ಯ ನಿರ್ವಾಹಕವಾದ ವಿಶೇಷವನ್ನೂ, ಅನ್ಯತ್ರ= ಭಗವದ್ರೂಪ ವ್ಯತಿರಿಕ್ತಗಳಲ್ಲಿ, ಭಿನ್ನತಾಂ=ಶ್ರೀ ಹರಿಯಿಂದ ಭೇದವನ್ನೂ, ಬ್ರೂಯುಃ=ಹೇಳುತ್ತವೆ. ಹರೇಃ = ಶ್ರೀ ಪರಮಾತ್ಮನಿಗೆ, ಜೀವಜಡೈರಪಿ = ಚೇತನಾಚೇತನವಸ್ತುಗಳಿಂದಲೂ, ಮುಖ್ಯತೋ ಹಿ = ಮುಖ್ಯವಾಗಿಯೇ, ಭೇದಂ = ಭೇದವನ್ನು, ಬ್ರೂಯುಃ = ಹೇಳುತ್ತವೆ. ಬ್ರಹ್ಮತರ್ಕವಚೋಽಪಿ=(ಹಿಂದೆ ಹೇಳಿದ ಯುಕ್ತಿಮಾತ್ರವಲ್ಲ.) ವಿಷ್ಣುವಿನಿಂದ ಹೇಳಲ್ಪಟ್ಟ ತರ್ಕಶಾಸ್ತ್ರವಚನವೂಕೂಡ, ಏವಂ=ಹಿಂದೆಹೇಳಿದಪ್ರಕಾರನೇ, (ತಿಳಿಸಿಕೊಡುತ್ತದೆ.) ಅತಃ=ವಿಶೇಷದ ಸಾಮರ್ಥ್ಯದಿಂದಲೇ, ಸಃ=ಶ್ರೀಹರಿಯು, ಏಕೋಽಪಿ=ನಿರ್ಭಿನ್ನನಾದಾಗ್ಯೂ, ಪಂಚಧಾ= ಐದುಪ್ರಕಾರ, ಅನ್ನಮಯ ಇತ್ಯಾದಿ = ಅನ್ನಮಯ-ಪ್ರಾಣಮಯ ಮೊದಲಾದುದು ಹೇಗೆ ಆದೀತೋ, ಹಾಗೆ, ಉಕ್ತಃ=ಹೇಳಲ್ಪಟ್ಟಿದ್ದಾನೆ. ಭೃಗೋಶ್ಚ=ಭೃಗುಋಷಿಗೋಸ್ಕರ, (ವರುಣನೂಕೂಡ) ಏತಚ್ಚ=ಈ ಅನ್ನಮಯಾದಿ ರೂಪವನ್ನು, ವದಿಷ್ಯತಿ=ಪರಬ್ರಹ್ಮನೆಂದೇ ಉಪದೇಶಿಸುವನು.

ತಾ ॥ ಸ. ರ. ವಿ.— (1) ಆನಂದ (ಬ್ರಹ್ಮ)ವಲ್ಲಿಯಲ್ಲಿ ಪರಬ್ರಹ್ಮನು ಅನ್ನಮಯಾದಿ ಐದು ರೂಪಗಳುಳ್ಳವನೆಂದು ಪ್ರತಿಪಾದಿಸಲ್ಪಟ್ಟಿದ್ದಾನೆ. ಆ ಅನ್ನಮಯಾದಿರೂಪವನ್ನೇ ಮೇಲಿನ ಭೃಗುವಲ್ಲಿಯಲ್ಲಿ ಭೃಗುವಿಗೋಸ್ಕರ ವರುಣನು ಬ್ರಹ್ಮನೆಂದು ಉಪದೇಶಿಸಿರುವನು.

ತಾ ॥ ಬ್ರಹ್ಮಶಬ್ದದಿಂದಲೂ, ಉತ್ತರಾನುವಾಕದ ಸಂವಾದದಿಂದಲೂ, ಅನ್ನಮಯ ಮೊದಲಾದ ಐದು ಶಬ್ದಗಳಿಂದ ವಾಚ್ಯರಿಗೂ ಬ್ರಹ್ಮತ್ವವು ಸಿದ್ಧವಾದಮೇಲೆ ಮಯಟ್ ಪ್ರತ್ಯ

ಯಾದಿಗಳಿಗೆ ಪ್ರಾಚುರ್ಯಾದಿ ರೂಪದಿಂದ ವ್ಯಾಖ್ಯಾನವು ಯುಕ್ತವೆಂದು ಸಿದ್ಧವಾಯಿತು. ॥ ೧೪೧ ॥ ೧೪೨ ॥ ೧೪೩ ॥

ನ್ಯಾಯಸುಧಾ— ಹಾಗಾದರೆ ಬ್ರಹ್ಮವಲ್ಲಿಯಲ್ಲಿ ಅನ್ನಮಯಾದಿ ಶಬ್ದಗಳು ಶ್ರುತಗಳಾಗಿವೆ. ಮೇಲೆ ಭೃಗುವಲ್ಲಿಯಲ್ಲಿ ಮಯಟ್ ಪ್ರತ್ಯಯವಿಲ್ಲದಿರುವ ಕೇವಲ ಅನ್ನಾದಿಶಬ್ದಗಳು ಮಾತ್ರ ಶ್ರುತಗಳಾಗಿವೆ. ಶಬ್ದಗಳಿಗೆ ಭೇದವಿದ್ದಮೇಲೆ ಅವುಗಳ ಪ್ರವೃತ್ತಿನಿಮಿತ್ತಕ್ಕೂ ಅವುಗಳಿಂದ ವಾಚ್ಯವಾದ ಅರ್ಥಕ್ಕೂ ಭೇದವು ಅವಶ್ಯವಾಗಿರಬೇಕು. ಅನ್ನಮಯಾದಿ ಶಬ್ದಗಳು ಅನ್ನಾದಿಶಬ್ದಗಳ ಪರ್ಯಾಯಗಳೆನ್ನುವುದು ಯುಕ್ತವಾಗಲಾರದು. ಏಕೆಂದರೆ, ಅನ್ನಮಯ ಎನ್ನುವಲ್ಲಿ ಮಯಟ್ ಪ್ರತ್ಯಯಾರ್ಥವು ಹೆಚ್ಚು ಇದೆ. ಹಾಗಾದರೆ, ಭೀಮಸೇನನು ಭೀಮನು, ಬಲಭದ್ರನು ಭದ್ರನು, ಸತ್ಯಭಾಮೆಯು ಸತ್ಯೆಯು. ಪುನರ್ನವೆಯು ನವೆಯು,(ಔಷಧಿವಿಶೇಷವು, ಕಾಕಮಾಚಿಯು ಮಾಚಿಯು,) (ಕಾಗೆಯು ಯಾ ಔಷಧಿವಿಶೇಷವು) ಇತ್ಯಾದಿಗಳಂತೆಯೇ ಶಬ್ದ ಭೇದವಿದ್ದರೂ ವಾಚ್ಯಾರ್ಥವು ಒಂದೇಆಗಬಹುದೆಂದು ಹೇಳಕೂಡದು. ವೈಷಮ್ಯವಿದೆ. ಭೀಮಾದಿ ಶಬ್ದಗಳು ಪ್ರತ್ಯೇಕವಾಗಿಯೂ ಭೀಮಸೇನ ಮೊದಲಾದ ಅರ್ಥಗಳನ್ನು ಹೇಳುತ್ತವೆ. ಕೇವಲ ಅನ್ನಶಬ್ದವು ಅನ್ನಮಯರೂಪವಾದ ಅರ್ಥವನ್ನು ಹೇಳಲಾರದು. ಹೇಳುವುದಾದರೆ ಮಯಟ್ ಪ್ರತ್ಯಯಕ್ಕೆ ಅರ್ಥವೇ ಇಲ್ಲವೆಂದಾಗಬೇಕಾಗುವುದು. ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥಕವೆಂದುಕ್ತವಾಗಿದೆ. 'ಅನ್ನಮಯೋ ಯಜ್ಞಃ' ಎಂದು ಹೇಳುವಬದಲಿಗೆ ಬರೀ ಅನ್ನಶಬ್ದಮಾತ್ರವನ್ನು ಪ್ರಯೋಗಿಸುವುದಿಲ್ಲವಷ್ಟೇ! ಆದಕಾರಣ ಭೃಗುವಲ್ಲಿಯಲ್ಲಿಯೂ, ಬ್ರಹ್ಮವಲ್ಲಿಯಲ್ಲಿಯೂ ಬೇರೆ ಬೇರೆ ವಸ್ತುಗಳನ್ನು ಪ್ರತಿಪಾದಿಸುವುದರಿಂದ ಭೃಗುವಲ್ಲೀ ಸಂವಾದದಿಂದ ಬ್ರಹ್ಮವಲ್ಲಿಯಲ್ಲಿಯೂ ಪರಬ್ರಹ್ಮನೇ ಪ್ರತಿಪಾದ್ಯನೆನ್ನುವುದು ಹೇಗೆ ಹೇಳುವುದು? ಮತ್ತೆ ಬ್ರಹ್ಮವಲ್ಲಿಯಲ್ಲಿದ್ದ ಅನ್ನಮಯಾದಿ ಶಬ್ದಗಳಿಂದ ಕೋಶಗಳು ಹೇಳಲ್ಪಡುತ್ತವೆ. ಭೃಗುವಲ್ಲಿಯಲ್ಲಿದ್ದ ಅನ್ನಾದಿಶಬ್ದಗಳಿಂದ ಪರಬ್ರಹ್ಮನು ಹೇಳಿಸಲ್ಪಡುತ್ತಾನೆಂದರೆ—

ಮೂ ॥ ಪ್ರಾಪ್ಯತ್ವೇನ ಮಯಟ್ ಪ್ರೋಕ್ತೇರ್ನ ತತ್ರಾಪ್ಯನ್ಯದುಚ್ಯತೇ ।
ಪ್ರಚುರಾನ್ನಾದಿರೇವಾತೋ ಹ್ಯನ್ನಮನ್ನಮಯೇತ್ಯಪಿ ॥
ಉಚ್ಯತೇ ಹ್ಯವಿಶೇಷೇಣ ನಾನ್ಯತ್ಕಿಂಚಿದಿಹೋಚ್ಯತೇ ॥ ೧೪೪ ॥

ಅ॥ ಪ್ರಾಪ್ಯತ್ವೇನ='ಏತಮನ್ನಮಯಮಾತ್ಮಾನಮುಪಸಂಕ್ರಮ್ಯ' ಇತ್ಯಾದಿಗಳಿಂದ ಪ್ರಾಪ್ಯತ್ವವನ್ನು ನಿರ್ದೇಶಮಾಡುವ ಸ್ಥಳದಲ್ಲಿ, ಮಯಟ್ ಪ್ರೋಕ್ತೇಃ = ಮಯಟ್ ಪ್ರತ್ಯಯವನ್ನು ಸ್ಪಷ್ಟವಾಗಿ ಹೇಳಿರುವುದರಿಂದ, ತತ್ರಾಪಿ = ಭೃಗುವಲ್ಲಿಯಲ್ಲಿಯೂ, ಬ್ರಹ್ಮವಲ್ಲಿಯಲ್ಲಿಯೂ ಅನ್ಯತ್=ಬ್ರಹ್ಮ ವ್ಯತಿರಿಕ್ತವಾದುದು ಯಾವುದೂ, ನೋಚ್ಯತೇ=ಹೇಳಲ್ಪಡುವುದಿಲ್ಲ. ಅತಃ= ಪ್ರಾಪ್ಯತ್ವವನ್ನು ಹೇಳುವ ಸ್ಥಳದಲ್ಲಿ ಮಯಟ್ ಪ್ರತ್ಯಯದ ಪ್ರಯೋಗದ ಬಲದಿಂದ, ಅನ್ನಂ ಅನ್ನಮಯ ಇತ್ಯಪಿ=ಅನ್ನ ಮೊದಲಾದ ಶಬ್ದಗಳಿಗೂ, ಅನ್ನಮಯ ಮೊದಲಾದ ಶಬ್ದಗಳಿಗೂ ಅವಿಶೇಷೇಣ=ಸ್ವರೂಪೈಕ್ಯರೂಪಕಾರಣದಿಂದ,(ಆಯಾಯ ಶಬ್ದಗಳಿಂದ) ಪ್ರಚುರಾನ್ನಾದಿರೇವ= ಪ್ರಚುರಾದ್ಯತ್ವಾದಿಗಳುಳ್ಳ ಪರಮಾತ್ಮನೇ, ಉಚ್ಯತೇ=ಹೇಳಲ್ಪಡುತ್ತಾನೆ. ಹಿ=ಅನ್ಯವಿದ್ಯೆಯಿಂದ ಅನ್ಯಪ್ರಾಪ್ತಿಯು ಯುಕ್ತವಲ್ಲವೆನ್ನುವ ನ್ಯಾಯಸಿದ್ಧವು (ಮತ್ತೆ ಎರಡು ಅನುವಾಕಗಳಲ್ಲಿ ಪ್ರತಿಪಾದ್ಯಗಳಿಗೆ ಭೇದವನ್ನು ಅಂಗೀಕರಿಸಿ) ಇಹ=ಬ್ರಹ್ಮವಲ್ಲಿಯಲ್ಲಿ, ಅನ್ಯತ್=ಬ್ರಹ್ಮನಿಂದ ವ್ಯತಿರಿಕ್ತವಾದುದು, ಕಿಂಚಿತ್=ಶರೀರಾದಿ ಕೋಶರೂಪವಾದುದು, ನ ಹ್ಯುಚ್ಯತೇ =ಹೇಳಲ್ಪಡುವುದಿಲ್ಲ. ಶಬ್ದೈಕ್ಯವಿದ್ದಮೇಲೆ ನಿಮಿತ್ತಗಳಿಗೂ, ಅಭಿಧೇಯಕ್ಕೂ ಐಕ್ಯವು ಪ್ರಸಿದ್ಧವು.

ತಾ ॥ ಸ. ರ. ವಿ — ಅನ್ನಂ ಪ್ರಾಣಃ ಇತ್ಯಾದಿಗಳಲ್ಲಿ ಮಯಟ್ ಪ್ರತ್ಯಯವು ಶ್ರುತವಾಗದಿರುವುದರಿಂದ ಆನಂದ (ಬ್ರಹ್ಮ) ವಲ್ಲಿಯಲ್ಲಿ ಹೇಳಿದ ಅನ್ನಮಯಾದಿ ಶಬ್ದವಾಚ್ಯವಾದುದನ್ನೇ ಭೃಗುವಲ್ಲಿಯಲ್ಲಿ ವರುಣನು ಭೃಗುವಿಗೆ ಉಪದೇಶಮಾಡಿದ್ದಲ್ಲ ಎಂದರೆ— ಇದು ಯುಕ್ತವಲ್ಲ. ಉಪಕ್ರಮದಲ್ಲಿ ಉಪದೇಶಿಸಲ್ಪಟ್ಟ ಈ ಅನ್ನಾದಿ ಶಬ್ದವಾಚ್ಯವಾದುದನ್ನೇ 'ಏತಮನ್ನಮಯಮಾತ್ಮಾನಮುಪಸಂಕ್ರಮ್ಯ' 'ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ' ಇದು ಮೊದಲಾದ ವಾಕ್ಯಶೇಷದಲ್ಲಿ ಪ್ರಾಪ್ಯನನ್ನಾಗಿ ವರುಣನು ಹೇಳಿರುತ್ತಾನೆ. ಇಲ್ಲವಾದರೆ ಉಪಕ್ರಮ ವಾಕ್ಯಕ್ಕೂ, ಉಪಸಂಹಾರವಾಕ್ಯಕ್ಕೂ ವಿರೋಧವು ಬರುವುದು. ಆದಪ್ರಯುಕ್ತ ಇಲ್ಲಿ ಅತ್ರೃತ್ವಾದಿಗಳ ಪ್ರಾಚುರ್ಯದಿಂದ ಯುಕ್ತನಾದ ಬ್ರಹ್ಮನೇ ಅನ್ನಾದಿ ಶಬ್ದಗಳಿಂದಲೂ, ಅನ್ನಮಯಾದಿ ಶಬ್ದಗಳಿಂದಲೂ ವಾಚ್ಯನೆಂದು ಅಂಗೀಕರಿಸತಕ್ಕದ್ದು.

ನ್ಯಾಯಸುಧಾ— ಹೇಗೆ ಜ್ಯೋತಿಷ್ಟೋಮಪ್ರಕರಣದಲ್ಲಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂದು ವಸಂತರೂಪಕಾಲವಿಶೇಷವನ್ನು ವಿಧಿಸತಕ್ಕ ವಾಕ್ಯದಲ್ಲಿ ಜ್ಯೋತಿಶ್ಶಬ್ದವು ಜ್ಯೋತಿಷ್ಟೋಮವನ್ನು ಹೇಳುತ್ತದೋ, ಅಲ್ಲಿ ಜ್ಯೋತಿಃ ಶಬ್ದಕ್ಕೂ, ಜ್ಯೋತಿಷ್ಟೋಮ ಶಬ್ದಕ್ಕೂ ಪರ್ಯಾಯತ್ವವಿಲ್ಲವು. ಪರ್ಯಾಯತ್ವವಿದ್ದರೆ ರಾಜಶಬ್ದಕ್ಕೂ, ರಾಜಪುರುಷಶಬ್ದಕ್ಕೂ ಪರ್ಯಾಯತ್ವವು ಬರಬೇಕಾಗುವುದು. ಜ್ಯೋತಿಷಾಂ ಸ್ತೋಮಃ = ಜ್ಯೋತಿಸ್ಸುಗಳ ಸ್ತೋಮವು ಎಂದು ಜ್ಯೋತಿಷ್ಟೋಮಶಬ್ದದ ವಿಗ್ರಹಾರ್ಥವು. ರಾಜಶಬ್ದಕ್ಕೂ, ರಾಜಪುರುಷವಾಚಕತ್ವವು ಪ್ರಸಕ್ತವಾಗುವುದರಿಂದಲೇ, ಪ್ರತ್ಯೇಕವಾಗಿ ವಾಚಕಗಳಾಗುವುದಿಲ್ಲ. ಮತ್ತೆ ಪ್ರಕರಣಬಲದಿಂದ ಏಕದೇಶವನ್ನು ಹೇಳಿದ್ದರಿಂದ ಇಡೀ ಶಬ್ದಕ್ಕೆ ಲಕ್ಷಣಾವೆಂದಂಗೀಕರಿಸಿ ನಿಮಿತ್ತಗಳಿಗೂ, ವಾಚ್ಯವಾದ ಅರ್ಥಕ್ಕೂ ಐಕ್ಯವನ್ನು ಅಂಗೀಕರಿಸತಕ್ಕದ್ದೋ, ಹೀಗೆಯೇ ಇಲ್ಲಿಯೂ ಅನ್ನಪ್ರಾಣಾದಿ ರೂಪವಾದ ಏಕದೇಶವನ್ನು ಹೇಳಿದ್ದರಿಂದ ಅನ್ನಾದಿ ಶಬ್ದಗಳಿಗೆ ಅನ್ನಮಯಾದಿ ಶಬ್ದಗಳಲ್ಲಿ ಲಕ್ಷಣಾವೆಂದಂಗೀಕರಿಸಿ ಅನ್ನಾದಿಶಬ್ದಗಳಿಗೂ, ಅನ್ನಮಯಾದಿಶಬ್ದಗಳಿಗೂ ಐಕ್ಯವನ್ನಂಗೀಕರಿಸಿ ಅದರ ನಿಮಿತ್ತಗಳಿಗೂ, ವಾಚ್ಯಾರ್ಥಕ್ಕೂ ಐಕ್ಯವನ್ನಂಗೀಕರಿಸುತ್ತೇವೆ. ಏಕೆಂದರೆ—ಪ್ರಾಪ್ಯವಾಗಿ ಹೇಳಿದ ಸ್ಥಾನದಲ್ಲಿ ಮಯಟ್ ಪ್ರತ್ಯಯವು ದೃಷ್ಟವಾಗಿದೆ. ಒಬ್ಬನನ್ನು ತಿಳಿದುಕೊಂಡು ಮತ್ತೊಬ್ಬನನ್ನು ಹೊಂದುತ್ತದೆನ್ನುವುದು ಯುಕ್ತವಾಗಲಾರದು ॥ ೧೮೪ ॥ ಸೂ. ॥ ೧೩ ॥

ಈ ಪ್ರಕಾರ ಎರಡು ಸೂತ್ರಗಳಿಂದ ಅನ್ನಮಯ-ಮೊದಲಾದ ಐದು ಶಬ್ದಗಳು ಈಶ್ವರನನ್ನು ಪ್ರತಿಪಾದಿಸುತ್ತವೆ. ಅಲ್ಲಿದ್ದ ಮಯಟ್ ಪ್ರತ್ಯಯವು ಪ್ರಾಚುರ್ಯರೂಪ ಅರ್ಥವನ್ನು ಪ್ರತಿಪಾದಿಸುತ್ತದೆಂಬೂ ಉಪಪಾದಿಸಿರುತ್ತೇವೆ. ಈಗ ಆನಂದಮಯಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೆ, ಅಲ್ಲಿದ್ದ ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥಕವೇ ಎನ್ನುವುದನ್ನು ಹೇತ್ವಂತರದಿಂದ ಉಪಪಾದಿಸತಕ್ಕ ಸೂತ್ರವು.

## 'ಓಂ ತದ್ಧೇತುವ್ಯಪದೇಶಾಚ್ಚ ಓಂ' ಸೂ. ॥ ೧೪ ॥

ಆ ಶ್ರೀ ವಿಷ್ಣುವಿಗೆ ಪರಿಪೂರ್ಣವಾದ ಆನಂದವಿದೆ ಎನ್ನುವ ವಿಷಯದಲ್ಲಿ 'ಕೋ ಹ್ಯೇವಾನ್ಯಾತ್' ಎಂದು ಲೋಕಚೇಷ್ಟಕತ್ವರೂಪವಾದ ಹೇತುವನ್ನು ಹೇಳಿರುವುದರಿಂದ ಆನಂದಮಯನು ಶ್ರೀ ಪರಬ್ರಹ್ಮನೇ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಮಹಾನಂದತ್ವ ಏವಾಸ್ಯ**
**ಹೇತುಃ ಕೋಽನ್ಯಾದಿತಿ ಸ್ಫುಟಂ ॥ ೧೮೫ ॥**
**ಉಕ್ತಃ ಶ್ರುತ್ಯಂತರೇ ಯಸ್ಮಾ**
**ತ್ಸುಖಂ ಲಬ್ಧ್ವಾ ಕರೋತ್ಯಯಂ ॥**
**ಕರೋತಿ ನಾ ಸುಖೀ ಭೂಮಾ**
**ಸುಖಂ ನಾಲ್ಪೇ ಸುಖಂ ಭವೇತ್ ॥ ೧೮೬ ॥**
**ಇತ್ಯುಕ್ತಂ ಯತ್ಪ್ರವೃತ್ತಿಶ್ಚ**
**ನೃತ್ತಗಾನಾದಿಕಾ ಸುಖಾತ್ ॥**
**ದುಃಖಾದ್ರೋದಾದಿಕಾ ಚೈವ**
**ಸರ್ವಕರ್ತೃತ್ವತೋಽಸ್ಯ ಚ ॥ ೧೮೭ ॥**
**ಸರ್ವಶಕ್ತೇರ್ನ ದುಃಖಂ ಸ್ಯಾ**
**ದತಃ ಕೇವಲಲೀಲಯಾ ॥**
**ಪ್ರವರ್ತಕೋ ನ ಚೇದೇಷ**
**ಪ್ರಾಣ್ಯಾದನ್ಯಶ್ಚ ಕಃ ಪುಮಾನ್ ॥ ೧೮೮ ॥** ಸೂ. ॥ ೧೪ ॥

ಅ ॥ ಕೋಽನ್ಯಾದಿತಿ=(ಆನಂದಮಯಪ್ರಕರಣದಲ್ಲಿ 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್, ಯದೇಷ ಆಕಾಶ ಆನಂದೋ ನ ಸ್ಯಾತ್' ಈ ಆಕಾಶಶಬ್ದವಾಚ್ಯನಾದ ಪರಮಾತ್ಮನು ಪೂರ್ಣಾನಂದವುಳ್ಳವನು ಆಗದಿದ್ದರೆ) ಯಾವನೇ ಸಾಮಾನ್ಯವಾಗಿ ಚೇಷ್ಟೆಯನ್ನು ಮಾಡಿಯಾನು, (ಚೇಷ್ಟಕನೇ ಇಲ್ಲದಿರುವುದರಿಂದ ಚೆನ್ನಾಗಿ ಚೇಷ್ಟೆಯನ್ನು ಮಾಡಿಯಾನು?) ಎನ್ನುವ ವಾಕ್ಯದಿಂದ, ಅಸ್ಯ=ಈ ವಿಷ್ಣುವಿಗೇನೇ, ಮಹಾನಂದತ್ವಏವ=ಪೂರ್ಣಾನಂದತ್ವ ವಿಷಯದಲ್ಲಿಯೇ, ಹೇತುಃ=ಲೋಕಚೇಷ್ಟಕತ್ವರೂಪಹೇತುವು, ಸ್ಫುಟಂ=ಸ್ಪಷ್ಟವಾಗಿ, ಉಕ್ತಃ= ಹೇಳಲ್ಪಟ್ಟದೆ. (ವಿಷ್ಣುವು ಪೂರ್ಣಾನಂದನು ಆಗದಿದ್ದರೆ ಜಗತ್ತಿಗೆ ಚೇಷ್ಟೆಯೇ ಇಲ್ಲವೆಂದಾಗ ಬೇಕಾಗುವುದು ಎಂದಾಪಾದಿಸತಕ್ಕ ಶ್ರುತಿಯಿಂದ ಜಗಚ್ಚೇಷ್ಟಕತ್ವವು ಪೂರ್ಣಾನಂದವಿದೆ ಎನ್ನುವ ವಿಷಯದಲ್ಲಿ ಹೇತುವೆಂದು ವಿವಕ್ಷೆವುಳ್ಳವರು ಅದಕ್ಕೆ ಆನಂದತ್ವದಿಂದ ವ್ಯಾಪ್ತಿಯನ್ನು ಉಪಪಾದಿಸುತ್ತಾರೆ.) ಯಸ್ಮಾತ್=ಯಾವ ಕಾರಣದಿಂದ, ಶ್ರುತ್ಯಂತರೇ= '**ಯದಾ ವೈ ಸುಖಂ ಲಭತೇಽಥ ಕರೋತಿ ನಾಸುಖಂ ಲಬ್ಧ್ವಾ ಕರೋತಿ ಸುಖಮೇವ ಲಬ್ಧ್ವಾ ಕರೋತಿ**' ಎನ್ನುವ ಛಂದೋಗಶ್ರುತಿಯಲ್ಲಿ, ಅಯಂ=ಈ ಶ್ರೀಹರಿಯು, ಸುಖಂ=ಸುಖವನ್ನು, ಲಬ್ಧ್ವಾ=ಹೊಂದಿ, ಕರೋತಿ=ಮಾಡುತ್ತಾನೆ. ಅಸುಖೀ=ಸುಖವಿಲ್ಲದಿರುವವನು, ನ ಕರೋತಿ=ಮಾಡುವುದಿಲ್ಲ. (ಹೀಗೆ ಪರಮೇಶ್ವರನ ವ್ಯಾಪಾರಕ್ಕೆ ಆನಂದದಿಂದ ವ್ಯಾಪ್ತಿಯು **ಉಕ್ತವಾಗಿದೆ.) (ಆನಂದ ಶಬ್ದಕ್ಕೆ ಪೂರ್ಣಾನಂದ ಎನ್ನುವುದರಲ್ಲಿಯೇ ಮುಖ್ಯವಾಗಿ ಶಕ್ತಿ ವೃತ್ತಿಯಿರುವುದು ಎನ್ನುವಲ್ಲಿಯೂ ಶ್ರುತಿಯನ್ನು ಹೇಳುತ್ತಾರೆ.) '**ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ**' ಎನ್ನುವ ಛಂದೋಗ ಶ್ರುತಿಯಲ್ಲಿ, ಭೂಮಾ=ಸಂಪೂರ್ಣನಾದ ಶ್ರೀಪರಮಾತ್ಮನು, ಸುಖಂ=ಪೂರ್ಣ ಸುಖರೂಪನು, ಅಲ್ಪೇ=ಅಲ್ಪಗುಣವುಳ್ಳವನಲ್ಲಿ, ಸುಖಂ=ಪೂರ್ಣಸುಖವು, ನ ಭವೇತ್=ಆಗಲಾರದು, ಇತಿ ಉಕ್ತಂ=(ಸುಖಶಬ್ದಕ್ಕೆ ಪೂರ್ಣ ಸುಖದಲ್ಲಿಯೇ ಮುಖ್ಯವೃತ್ತಿಯು) ಈ ಪ್ರಕಾರ ಹೇಳಲ್ಪಟ್ಟದೆ.

ಸ. ರ. ವಿ—(ಛಾಂದೋಗ್ಯ ಶ್ರುತಿಯಲ್ಲಿ ಹೇಳಿದ್ದು ಪ್ರಕೃತಕ್ಕೆ ಉಪಯುಕ್ತವಾಗಿರುವುದರಿಂದ ಉಪಪಾದಿಸುತ್ತಾರೆ.) (ನ್ಯಾಯಸುಧಾ—ಈಶ್ವರಪ್ರವೃತ್ತಿಗೆ ಪೂರ್ಣಾನಂದತ್ವದಿಂದ ವ್ಯಾಪ್ತಿಯನ್ನು ಶ್ರುತಿಯಿಂದ ಉಪಪಾದಿಸಿ ಯುಕ್ತಿಯಿಂದಲೂ ಸಮರ್ಥನ ಮಾಡುತ್ತಾರೆ) (ಉನ್ಮತ್ತನಿಗೆ) ನೃತ್ತಗಾನಾದಿಕಾ=ನರ್ತನಗಾನಮೊದಲಾಗಿವುಳ್ಳ, ಪ್ರವೃತ್ತಿಶ್ಚ=ಪ್ರವೃತ್ತಿಯಾದರೂ, ಸುಖಾತ್=ಸುಖದಿಂದ, (ಆಗುವುದು.) ದುಃಖಾತ್=ದುಃಖದಿಂದ, ರೋದಾದಿಕಾ ಚೈವ=ರೋದನ ಮೊದಲಾದ ಪ್ರವೃತ್ತಿಯು (ಆಗುವುದು), ಅಸ್ಯ ಚ=ಈ ಶ್ರೀಹರಿಗೆ, ಸರ್ವಕರ್ತೃತ್ವತಃ=ಸರ್ವಕರ್ತೃತ್ವವಿದ್ದಪ್ರಯುಕ್ತ ಶ್ರೀಹರಿಯೇ ಸರ್ವವನ್ನೂ ಮಾಡತಕ್ಕವನಾದ ಪ್ರಯುಕ್ತ ಸುಖದ ಅಪ್ರಾಪ್ತಿಯು ಇರುವುದಿಲ್ಲ) ಸರ್ವಶಕ್ತೇಃ=ಸರ್ವವಿಷಯಕ ಶಕ್ತಿಯುಳ್ಳ ಪರಮಾತ್ಮನಿಗೆ, ದುಃಖಂ=ದುಃಖವು, ನ ಸ್ಯಾತ್=ಆಗಲಾರದು. (ಅಂತೂ (೧) ದುಃಖೋದ್ರೇಕವೇ ನಿಮಿತ್ತವಾಗಿವುಳ್ಳದ್ದು, (೨) ಸುಖೇಚ್ಛೆಯೇ ಕಾರಣವಾಗಿಕೊಂಡು ಇದ್ದ ಸುಖಪ್ರಾಪ್ತಿಗೆ ಕಾರಣವಾದದ್ದು, (೩) ದುಃಖದ್ವೇಷವೇ ಕಾರಣವಾಗಿಕೊಂಡು ಇದ್ದ ದುಃಖನಿವೃತ್ತಿಗೆ ಕಾರಣವಾದದ್ದು, ಇಂತಹ ಮೂರು ವಿಧ ಪ್ರವೃತ್ತಿಯು ಪರಮೇಶ್ವರನಲ್ಲಿ ಕೂಡಲಾರದು.) ಅತಃ=ಪರಿಶೇಷಪ್ರಮಾಣದಿಂದ, ಪ್ರವರ್ತಕಃ=ಈಶ್ವರನು ಪ್ರವರ್ತಕನೆನ್ನುವುದು, ಕೇವಲಲೀಲಯಾ=ಆನಂದೋದ್ರೇಕದಿಂದಲೇ ಆಗುವುದು. (ಹೀಗೆ ಪರಮೇಶ್ವರನ ಪ್ರವೃತ್ತಿಗೆ ಪೂರ್ಣಾನಂದದಿಂದ ವ್ಯಾಪ್ತಿಯು ಸಿದ್ಧವಾಯಿತು.) (ಈ ಪ್ರಕಾರ ಉಪೋದ್ಘಾತವನ್ನು ಹೇಳಿ ಅನುಮಾನವನ್ನು ಹೇಳುತ್ತಾರೆ.) ಅತಃ=(ಯಾವ ಕಾರಣದಿಂದ ಹೀಗೆ ಪರಮೇಶ್ವರಪ್ರವೃತ್ತಿಗೆ ಪೂರ್ಣಾನಂದದಿಂದ ವ್ಯಾಪ್ತಿಯು ಸಿದ್ಧವಾಗಿದೆಯೋ), ಆದಕಾರಣ, ಪ್ರವರ್ತಕಃ=ಪ್ರವರ್ತಕನಾದ ಶ್ರೀಹರಿಯು, ಕೇವಲಲೀಲಯಾ=ಪೂರ್ಣಾನಂದದಿಂದ ಯುಕ್ತನಾಗುವನು. (ಈ ಪ್ರಕಾರ ಶ್ರುತಿಯ ಅಭಿಪ್ರಾಯದಿಂದ ಸಿದ್ಧವಾದ ಹೇತುವನ್ನು ವ್ಯಾಖ್ಯಾನ ಮಾಡಿ ಶ್ರೀ ಹರಿಗೆ ಪೂರ್ಣಾನಂದವನ್ನು ಒಪ್ಪದಿದ್ದರೆ ಬಾಧಕವನ್ನು ವಿವರಿಸುತ್ತಾರೆ) ಏಷಃ=ಈ ಪರಮಾತ್ಮನು, ನ ಚೇತ್=ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶಶಬ್ದವಾಚ್ಯನಾಗಿ ಪೂರ್ಣಾನಂದನು ಆಗದಿದ್ದರೆ, ಆಗ ಬೇರೆ ಕಾರಣಗಳೇ ಇಲ್ಲದಿರುವುದರಿಂದ ಯಾವುದನ್ನೂ ಪ್ರವರ್ತಿಸಲಾರನು. ನ ಚೇತ್=ಇವನು ಯಾವುದನ್ನೂ ಪ್ರವರ್ತಿಸದಿದ್ದರೆ, (ಆಗ,) ಕಃ ಪುಮಾನ್=ಯಾವ ಪುರುಷನು, ಪ್ರಾಣ್ಯಾತ್=ಚೆನ್ನಾಗಿ ಚೇಷ್ಟೆಯನ್ನು ಮಾಡಿಯಾನು? ಅನ್ಯಾಚ್ಚ=ಸಾಮಾನ್ಯವಾಗಿಯೂ ಚೇಷ್ಟೆಯನ್ನು ಮಾಡಿಯಾನು? (ಯಾರೊಬ್ಬನೂ ಲೌಕಿಕ ಪ್ರವೃತ್ತಿಯನ್ನಾಗಲೀ ವೈದಿಕಪ್ರವೃತ್ತಿಯನ್ನಾಗಲೀ ಮಾಡಲಾರನು. ಸ್ವಾತಂತ್ರ್ಯವೇ ಇರುವುದಿಲ್ಲ.)

ತಾ ॥ ಸ. ರ. ಎ—(1) ಲೌಕಿಕವಾದ ಚೇಷ್ಟೆಯು ನಾಲ್ಕು ವಿಧವಾಗಿ ಕಾಣಲ್ಪಡುತ್ತದೆ. (೧) ಸುಖೋದ್ರೇಕದಿಂದ ನರ್ತನಗಾನಾದಿರೂಪವಾದುದು, (೨) ದುಃಖೋದ್ರೇಕದಿಂದ ರೋದನ ಉದರತಾಡನಾದಿರೂಪವಾದುದು, (೩) ಸುಖಪ್ರಾಪ್ತಿಗಾಗಿ ಭೋಜನಾದಿರೂಪವಾದುದು, (೪) ದುಃಖನಿವೃತ್ತಿಗಾಗಿ ಔಷಧಸೇವನಾದಿರೂಪವಾದುದು, ಹೇಗೂ ಮಾಡಲಿಕ್ಕೂ ಮಾಡದಿರಲಿಕ್ಕೂ ಬೇರೆ ರೀತಿಯಾಗಿ ಮಾಡಲಿಕ್ಕೂ ಸಮರ್ಥನಾದ ಸರ್ವಶಕ್ತಿಯುಳ್ಳ ಶ್ರೀವಿಷ್ಣುವಿಗೆ ದುಃಖಾದಿನಿಮಿತ್ತಕವಾದ ಚೇಷ್ಟೆಯೇ ಕೂಡದಿರುವುದರಿಂದ ಸುಖವನ್ನೇ ಹೊಂದಿಕೊಂಡು ಮಾಡುತ್ತಾನೆಂದು ಶ್ರುತಿಯು ಸಾರುತ್ತಿದೆ. ಆದಕಾರಣ ಜೀವರ ಚೇಷ್ಟೆಯು ಬೇರೆ ಯಾವರೀತಿಯಾಗಿಯೂ ಕೂಡದಿರುವುದರಿಂದ ಜೀವಚೇಷ್ಟಾಪ್ರವರ್ತಕನಾದ ಶ್ರೀ ವಿಷ್ಣುವಿನ ಪ್ರವೃತ್ತಿಯು ಆನಂದೋದ್ರೇಕದಿಂದಲೇ ಎಂದು ಸಿದ್ಧವಾಗುತ್ತದೆ. (2) ಮತ್ತು 'ಏಷ ಏವಾನಂದಯತಿ' ಇತರರಿಗೆ ಆನಂದವನ್ನು ಕೊಡುವವನು ಎಂದು ಶ್ರುತಿಯಲ್ಲಿ ಹೇಳಿರುವ ಪ್ರಯುಕ್ತ

ವಿಷ್ಣುವಿಗೇನೇ ಆನಂದಮಯತ್ವವೆಂದು ತಿಳಿಯುತ್ತದೆ. ಯಾವನು ಇತರರಿಗೆ ಆನಂದವನ್ನು ಕೊಡುತ್ತಾನೋ ಆತನು ಪ್ರಚುರಾನಂದನು ಎಂದು ಲೋಕದಲ್ಲಿಯೂ ಪ್ರಸಿದ್ಧವಾಗಿದೆ. ಆವ ಕಾರಣ ವಾಕ್ಯಶೇಷಬಲದಿಂದಲೂ ಈ ಶ್ರುತಿಯಲ್ಲಿದ್ದ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯರೂಪ ಅರ್ಥವನ್ನೇ ಇಟ್ಟುಕೊಳ್ಳಬೇಕೆಂದು ಸಿದ್ಧವಾಯಿತು.

**ನ್ಯಾಯಸುಧಾ**— (1) ಶ್ರೀಹರಿಗೆ ಪೂರ್ಣಾನಂದವಿದೆ ಎನ್ನುವ ವಿಷಯದಲ್ಲಿ ಜಗಚ್ಚೇಷ್ಟಕತ್ವರೂಪ ಹೇತುವನ್ನು ಹೇಳಿರುವುದರಿಂದ ವಿಷ್ಣುವೇ ಆನಂದಮಯಃಶಬ್ದಾರ್ಥನು; ಅಲ್ಲಿದ್ದ ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥಕವೆಂದೂ ತಿಳಿಯುತ್ತದೆ. (2) ಆನಂದಮಯನು ಶ್ರೀವಿಷ್ಣುವಿನಿಂದ ಭಿನ್ನನಾದರೆ ಮಯಟ್ ಪ್ರತ್ಯಯವು ವಿಕಾರಾರ್ಥಕವಾದರೆ ಆಗ ಶ್ರುತಿಯು ಜೀವರಿಗೂ ಆನಂದವಿಕಾರತ್ವವದೆ ಎನ್ನುವಲ್ಲಿ ಯಾವುದಾದರೂ ಹೇತುವನ್ನು ಹೇಳುತ್ತಿತ್ತು. ವಿಷ್ಣುವಿಗೆ ಪೂರ್ಣಾನಂದವಿದೆ ಎನ್ನುವ ವಿಷಯದಲ್ಲಿ ಹೇತುವನ್ನು ಹೇಳಿದ್ದು ಅಸಂಗತವೇ ಆಗಬೇಕಾಗಿರುವುದು. ಇದರಿಂದ ಸೂತ್ರದಲ್ಲಿದ್ದ 'ತತ್' ಶಬ್ದವನ್ನು ತಂತ್ರನ್ಯಾಯ (ಒಂದಾವರ್ತಿಯೇ ಹೇಳಿ ಅನೇಕಾರ್ಥಗಳಿಗೆ ಉಪಕಾರಕವಾದುದು)ದಿಂದ (೧) ವಿಷ್ಣುವಿಗೆ (೨) ಮಹಾನಂದತ್ವದಲ್ಲಿ ಎಂದು ಷಷ್ಠ್ಯಂತವಾಗಿಯೂ, ಸಪ್ತಮ್ಯಂತವಾಗಿಯೂ ಸ್ವೀಕರಿಸಬೇಕೆಂದು ಹೇಳಿದಂತೆ ಆಯಿತು. (3) ಹಾಗಾದರೆ, ಇಲ್ಲಿ ಆಕಾಶಕ್ಕೆ ಆನಂದತ್ವವಿಲ್ಲವೆನ್ನುವಲ್ಲಿ ಅನನವು (ಸಾಮಾನ್ಯ ಚೇಷ್ಟೆಯು) ಪ್ರಾಣನವು (ಚೆನ್ನಾಗಿ ಚೇಷ್ಟೆಯೂ) ಯಾರಿಗೂ ಆಗದೆ ಹೋಗುವುದು ಎಂದೇ ಹೇಳುತ್ತದೆ. ವಿಷ್ಣುವು ಪೂರ್ಣಾನಂದನು ಎನ್ನುವ ವಿಷಯದಲ್ಲಿ ಯಾವ ಹೇತುವೂ ಹೇಳಲಿಲ್ಲವೆಂದರೆ 'ಸ್ಫುಟಂ' ಸ್ಪಷ್ಟವಾಗಿ, ಎಂದು ಹೇಳಿರುವರು. ಅದು ಹೇಗೆಂದರೆ- 'ಆಕಾಶಸ್ತಲ್ಲಿಂಗಾತ್' ಎನ್ನುವಲ್ಲಿ ಆಕಾಶ ಶಬ್ದವು ವಿಷ್ಣುಪರವೇ ಎಂದು ಹೇಳುವರು. ಅಂತೂ ವಿಷ್ಣುವಿಗೆ ಆನಂದವಿಲ್ಲದಿದ್ದರೆ ಪ್ರಪಂಚಕ್ಕೆ ಚೇಷ್ಟೆಯೇ ಇಲ್ಲವೆಂದಾಗಬೇಕಾಗುವುದು ಎಂದು ಅಪಾದಿಸತಕ್ಕ ಶ್ರುತಿಯಿಂದ ಸರ್ವಜಗಚ್ಚೇಷ್ಟಕತ್ವವೇ ಹೇತುವಾಗಿ ವಿವಕ್ಷಿತವಾಗಿದೆ ಎಂದು ತಿಳಿಯುತ್ತದೆ. (4) ತಾರ್ಕಿಕರು 'ಪ್ರವರ್ತನಾ ಲಕ್ಷಣಾ ದೋಷಾಃ'=ರಾಗ ದ್ವೇಷ ಮೋಹಗಳು ಪ್ರವರ್ತನಾರೂಪಗಳು, ಅಂತೂ ಸುಖ, ದುಃಖ, ಸುಖದುಃಖಗಳಸಾಧನ, ಇವುಗಳ ರಾಗದ್ವೇಷಗಳೇ ಪ್ರವರ್ತಕಗಳು ಎಂದು ಹೇಳುವರು. ಅದನ್ನು ನಿರಾಕರಿಸುವುದಕ್ಕಾಗಿ 'ರೋದಾದಿಕಾಚ್ಚೈವ' ಎನ್ನುವಲ್ಲಿ 'ಏವ' ಶಬ್ದವನ್ನು ಹೇಳಿರುವರು. ಸುಖದಿಂದಲೇ, ದುಃಖದಿಂದಲೇ ಎಂದು. ಉನ್ಮತ್ತನಿಗೆ ಯಾವುದೊಂದು ವಿಷಯದಲ್ಲಿಯೂ ಅನುಸಂಧಾನವೇ ಇಲ್ಲ. ಆದಪ್ರಯುಕ್ತ ಸುಖದಲ್ಲಿ ರಾಗದಿಂದ ಇದು ಸುಖಸಾಧನವೆಂದು ಅನುಸಂಧಾನಮಾಡಿಕೊಂಡು ನರ್ತನಾದಿಗಳಲ್ಲಿ ಹೇಗೆ ತಾನೇ ಪ್ರವರ್ತಿಸಿಯಾನು? ಮತ್ತೆ ಉದ್ರಿಕ್ತವಾದ ಸುಖವೇ ನರ್ತನಾದಿಗಳ ಪ್ರವೃತ್ತಿಯಲ್ಲಿ ಕಾರಣವು. ೨ ಮತ್ತು ದುಃಖವನ್ನು ದ್ವೇಷಿಸುವವನಿಗೂ ನರಕದಲ್ಲಿದ್ದವನಿಗೆ ರೋದನಾದಿಗಳು ದುಃಖಪರಿಹಾರ ಕಾರಣವೆಂದು ಅನುಸಂಧಾನವಿಲ್ಲವಷ್ಟೆ! ಮತ್ತು ದುಃಖೋದ್ರೇಕವೇ ಅದರಲ್ಲಿ ಕಾರಣವೆಂದು ಸರ್ವಾನುಭವಸಿದ್ಧವು. (5) ಸುಖರಾಗದಿಂದ ಸುಖಪ್ರಾಪ್ತಿಗಾಗಿ ಭೋಜನಾದಿಗಳಲ್ಲಿ ಪ್ರವೃತ್ತಿಯೂ, ದುಃಖದ್ವೇಷದಿಂದ ದುಃಖನಿವೃತ್ತಿಗಾಗಿ ಕಂಟಕೋದ್ಧರಣಾದಿಗಳಲ್ಲಿ ಪ್ರವೃತ್ತಿಯು ಸುಪ್ರಸಿದ್ಧವಾಗಿರುವುದರಿಂದ ಅದನ್ನು ಮೂಲದಲ್ಲಿ ಉದಾಹರಿಸಲಿಲ್ಲ. (6) ದುಃಖೋದ್ರೇಕನಿಮಿತ್ತದಿಂದಲೂ, ದುಃಖನಿವೃತ್ತಿಗಾಗಿಯೂ, ಸುಖಪ್ರಾಪ್ತಿಗಾಗಿಯೂ ಹೀಗೆ ಮೂರುವಿಧ ಪ್ರವೃತ್ತಿಗಳು ಪರಮೇಶ್ವರನಲ್ಲಿ ಕೂಡುವುದಿಲ್ಲ. ಆದಕಾರಣ ಆನಂದೋದ್ರೇಕದಿಂದಲೇ ಪರಮೇಶ್ವರನ ಪ್ರವೃತ್ತಿಯೆಂದು ಸಿದ್ಧವಾಯಿತು. ತಥಾಚ 'ಈಶ್ವರಃ ಸುಖೀ **ಭವಿತುಮರ್ಹತಿ ಪ್ರವೃತ್ತಿಕಾರಣತ್ರಯರಹಿತತ್ವೇ ಸತಿ ಪ್ರವೃತ್ತಿಮತ್ವಾತ್ ಉನ್ಮತ್ತವತ್ =**

ಈಶ್ವರನು ಸುಖಿಯಾಗಲು ಅರ್ಹನಾಗಿರುತ್ತಾನೆ, ಪ್ರವೃತ್ತಿಕಾರಣಗಳು ಮೂರು (ದುಃಖೋದ್ರೇಕ ಸುಖರಾಗ ದುಃಖದ್ವೇಷಗಳು) ಇಲ್ಲದಿದ್ದು ಪ್ರವೃತ್ತಿಯಿದ್ದಪ್ರಯುಕ್ತ, ಉನ್ಮತ್ತನಂತೆ. ಕಾರಣವು ಕಾರ್ಯಾನುಗುಣವಾಗಿರುವುದರಿಂದ ಮಹಾಪ್ರವೃತ್ತಿಯಿಂದ ಮಹಾ (ಪೂರ್ಣಾ) ನಂದವೇ ಸಿದ್ಧಿಸುವುದು ॥ ೧೮೫ ॥ ೧೮೬ ॥ ೧೮೭ ॥ ೧೮೮ ॥ ಸೂ ೧೪ ॥

ಅನ್ನಮಯ ಮೊದಲಾದ ಐದು ರೂಪಗಳಿಗೂ ಯುಕ್ತ್ಯಂತರದಿಂದ ಪರಬ್ರಹ್ಮತ್ವವನ್ನು ಪ್ರತಿಪಾದಿಸುವ ಸೂತ್ರವು.

## “ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ” ಸೂ. ॥ ೧೫ ॥

ಚ=ಯಾವಕಾರಣದಿಂದ, ಮಾಂತ್ರವರ್ಣಿಕಮೇವ='ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವ ಮಂತ್ರವರ್ಣದಿಂದ ಲಕ್ಷಣವತ್ತಾಗಿ ಹೇಳಲ್ಪಟ್ಟ ಪರಬ್ರಹ್ಮನೇ, ಗೀಯತೇ=ಅನ್ನಮಯ ಮೊದಲಾದ ಐದುಶಬ್ದಗಳಿಂದ, ಉತ್ತರಗ್ರಂಥದಿಂದ ಗಾನಮಾಡಿಸಿ ಕೊಳ್ಳಲ್ಪಡುತ್ತಾನೋ (ಆದ ಕಾರಣ ಅನ್ನಮಯಮೊದಲಾದ ಐದು ರೂಪಗಳೂ ಬ್ರಹ್ಮನೇ-ಸತ್ಯ ಜ್ಞಾನ ಅನಂತ ಎನ್ನುವ ಪದಗಳಿಗೂ, ಅನ್ನಮಯಾದಿಶಬ್ದಗಳಿಗೂ ಅರ್ಥವನ್ನು ಅನುಸಂಧಾನಮಾಡಿದರೆ ಏಕಾರ್ಥವು ತೋರುತ್ತದೆ.)

ಮಂತ್ರವರ್ಣವೂ, ಪರಬ್ರಹ್ಮವಿಷಯಕವಾಗಿದ್ದರೆ ಆ ಮಂತ್ರವರ್ಣದ ಸಮಾಖ್ಯೆಯಿಂದ ಅನ್ನಮಯಾದಿ ಶಬ್ದವಾಚ್ಯನು ಪರಬ್ರಹ್ಮನೆಂದು ಹೇಳಬಹುದಿತ್ತು. ಅದೇ ಹೇಗೆ ಕೂಡುತ್ತದೆ? ಮಂತ್ರವರ್ಣದಲ್ಲಿ ಬ್ರಹ್ಮ ಎಂದೇ ಶ್ರುತವಾಗಿದೆ. ಆ ಬ್ರಹ್ಮಶಬ್ದವು ಅಮುಖ್ಯವೃತ್ತಿಯಿಂದ ಬೇರೆಯುವರಲ್ಲಿಯೂ ಸಂಭವಿಸುತ್ತದೆ. ಮತ್ತು ಮಂತ್ರವರ್ಣದಲ್ಲಿ ಹೇಳಿದ ಅರ್ಥವನ್ನು ವಿಸ್ತರಿಸುವುದಕ್ಕಾಗಿಯೇ ಮೇಲಿನ ಗ್ರಂಥವೆನ್ನುವುದೂ ಹೇಗೆ ಕೂಡುತ್ತದೆ, ಎಂದಾಶಂಕಿಸಿದರೆ— ಸೂತ್ರಾರ್ಥವನ್ನು ವಿಸ್ತರಿಸುವುದಕ್ಕಾಗಿ ಉಪೋದ್ಘಾತವನ್ನು ಹೇಳುತ್ತಾರೆ—

ಮೂ ॥ ಬ್ರಹ್ಮವಿತ್ಪರಮಾಪ್ನೋತೀತಿ ಯತ್ಪ್ರಥಮಸೂಚಿತಂ ।
ತದೇವ ಮಂತ್ರವರ್ಣೇನ ಸತ್ಯಂ ಜ್ಞಾನಮನಂತವತ್ ॥ ೧೮೯ ॥
ಲಕ್ಷಿತಂ ತತ್ರ ಸತ್ಯತ್ವಂ ಸೃಷ್ಟ್ಯಾಽನ್ನಪ್ರಾಣಯೋರಪಿ ।
ಉಕ್ತಂ ಜ್ಞಾನಂ ತು ಮನಸಾ ವಿಜ್ಞಾನೇನಾಪ್ಯುದೀರಿತಂ ॥
ಅನಂತತ್ವಂ ತಥಾಽನಂದಮಯವಾಚಾಽಪ್ಯುದಾಹೃತಂ ॥ ೧೯೦ ॥

ಅ ॥ ಬ್ರಹ್ಮವಿತ್=ಬ್ರಹ್ಮಜ್ಞಾನಿಯು, ಪರಂ=ಪರಬ್ರಹ್ಮನನ್ನು, ಆಪ್ನೋತಿ=ಹೊಂದುತ್ತಾನೆ, ಇತಿ=ಈಪ್ರಕಾರ, ಯತ್=ಯಾವುದು, ಪ್ರಥಮಸೂಚಿತಂ=ಮೊದಲು ಸೂಚಿಸಲ್ಪಟ್ಟದೋ (ಅಂದರೆ 'ಬ್ರಹ್ಮವಿದಾಪ್ನೋತಿ ಪರಂ' ಎನ್ನುವ ಅನುವಾಕದ ಪ್ರಥಮವಾಕ್ಯದಲ್ಲಿ ಸೂಚಿತನಾದವನು ಪರಬ್ರಹ್ಮನೇ. ಶಬ್ದವೂ ಶ್ರುತವಾಗಿದೆ. ಆ ಪರಬ್ರಹ್ಮನ ಜ್ಞಾನದಿಂದ ಮೋಕ್ಷವು ಲಭಿಸುತ್ತದೆಂದು ಶ್ರುತವಾಗಿದೆ.) ತದೇವ=ಅದೇ, ಮಂತ್ರವರ್ಣೇನ='ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವ ವೇದಭಾಗದಿಂದ, ಸತ್ಯಂ=ಜಗತ್ತನ್ನು ಸೃಷ್ಟಿಸುವವನು, ಜ್ಞಾನಂ = ಸರ್ವವಿಷಯಕ ಜ್ಞಾನರೂಪನು, ಅನಂತವತ್=ಅಂತವುಳ್ಳವನಲ್ಲ ಎಂದು, ಲಕ್ಷಿತಂ=ಅಸಾಧಾರಣಧರ್ಮದಿಂದ ಯುಕ್ತನೆಂದು ಪ್ರತಿಪಾದಿಸಲ್ಪಟ್ಟದೆ. (ಆದಕಾರಣ ಮಂತ್ರವರ್ಣದಲ್ಲಿ ಹೇಳಲ್ಪಟ್ಟವನು ಪರಬ್ರಹ್ಮನೇ.)

ತತ್ರ=ಆ ಲಕ್ಷಣಗಳಲ್ಲಿ, ಸತ್ಯತ್ವಂ = ಸತ್ಯತ್ವರೂಪಲಕ್ಷಣವು, ಸೃಷ್ಟ್ಯಾ='ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ' ಎನ್ನುವ ಸೃಷ್ಟಿಪ್ರಕರಣದಿಂದಲೂ, ಅನ್ನಪ್ರಾಣಯೋರಪಿ = '**ಸ ವಾ ಏಷ ಪುರುಷೋಽನ್ನರಸಮಯಃ**' **ತಸ್ಮಾದ್ವಾ ಏತಸ್ಮಾದನ್ನರಸಮಯಾತ್** ಎನ್ನುವ ಅನ್ನಮಯ, ಪ್ರಾಣಮಯರ ಪ್ರಕರಣಗಳಿಂದಲೂ, ಉಕ್ತಂ = ಹೇಳಲ್ಪಟ್ಟಿದೆ. ಜ್ಞಾನಂ ತು=ಜ್ಞಾನರೂಪವಾದ ಬ್ರಹ್ಮಲಕ್ಷಣವಾದರೂ, ಮನಸಾ='ತಸ್ಮಾದ್ವಾ ಏತಸ್ಮಾತ್ಪ್ರಾಣಮಯಾತ್' ಇದುಮೊದಲಾದ ಮನೋಮಯಪ್ರಕರಣದಿಂದಲೂ, ವಿಜ್ಞಾನೇನಾಪಿ='ತಸ್ಮಾದ್ವಾ ಏತಸ್ಮಾನ್ಮನೋಮಯಾತ್' ಇತ್ಯಾದಿ ವಿಜ್ಞಾನಮಯ ಪ್ರಕರಣದಿಂದಲೂ, ಉದೀರಿತಂ=ಹೇಳಲ್ಪಟ್ಟದೆ. ಅನಂತತ್ವಂ ತಥಾ=ಅನಂತತ್ವರೂಪವಾದ ಬ್ರಹ್ಮಲಕ್ಷಣವೂ ಕೂಡ, ಆನಂದಮಯವಾಕ್ಯಾಪಿ = ತತ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ ಇತ್ಯಾದಿ ಆನಂದಮಯ ಪ್ರಕರಣದಿಂದಲೂ ಮೇಲಿನ ವಾಕ್ಯಗಳಿಂದಲೂ, ಉದಾಹೃತಂ=ಹೇಳಲ್ಪಟ್ಟದೆ.

ತಾ || **ನ್ಯಾಯಸುಧಾ**—(1) 'ಬ್ರಹ್ಮವಿದಾಪ್ನೋತಿ ಪರಂ' ಎಂದು ಹೇಳಿದಮೇಲೆ ಮೂರು ಶಂಕೆಗಳು ಹುಟ್ಟುತ್ತವೆ (೧) ಬ್ರಹ್ಮನಿಗೆ ಲಕ್ಷಣವು ಯಾವುದು? ಲಕ್ಷಣ ಹೇಳದೆ ವಸ್ತುವು ಎಲ್ಲಾ ವಸ್ತುಗಳಿಂದಲೂ ಭಿನ್ನವೆಂದು ತಿಳಿಯಲು ಸಾಧ್ಯವಿಲ್ಲ. (೨) ಆ ಬ್ರಹ್ಮನನ್ನು ತಿಳಿದುಕೊಳ್ಳುವುದು ಹೇಗೆ? ತನ್ನಲ್ಲಿ ತೋರುವ ದುಃಖಿತ್ವಾದ್ಯಾಕಾರವು ಆರೋಪಿತವೆಂದು ಇಟ್ಟುಕೊಂಡು ಬ್ರಹ್ಮನೇ ನಾನಾಗಿದ್ದೇನೆಂದು ಐಕ್ಯರೂಪದಿಂದಲೋ ಅಥವಾ ಬೇರೆ ರೀತಿಯಾಗಿಯೋ ಅಂದರೆ ಸರ್ವೋತ್ತಮತ್ವ, ಸರ್ವಸ್ವಾಮಿತ್ವ ಮೊದಲಾದ ರೂಪಾಂತರದಿಂದಲೋ, ಬ್ರಹ್ಮಎನ್ನುವುದರಿಂದ ಅಪರಿಚ್ಛಿನ್ನತ್ವವು ಸರ್ವತ್ರ ವ್ಯಾಪ್ತತ್ವವು ತೋರುತ್ತದೆ. ಅಂತಹ ಪೂರ್ಣ ಬ್ರಹ್ಮನ ಸಾಕ್ಷಾತ್ಕಾರವು ನಮಗೆ ಆಗಲಾರದು. (೩) ಬ್ರಹ್ಮನು ಸರ್ವತ್ರ ವ್ಯಾಪ್ತನಾಗಿರುವುದರಿಂದ ನಿತ್ಯದಲ್ಲಿಯೂ ಅವನ ಸಂಬಂಧವು ಇರುವುದರಿಂದ ಜ್ಞಾನಸಾಧ್ಯವಾದ ಅವನ ಪ್ರಾಪ್ತಿಯು ಎಂತಹುದು? ಎಂದು ಶಂಕಾ ಬಂದರೆ ಅದನ್ನು ಪರಿಹರಿಸುವುದಕ್ಕಾಗಿ ಶ್ರುತಿಯು ಮಂತ್ರವರ್ಣವನ್ನುದಾಹರಿಸಿಯದೆ. ತದೇಷಾಽಭ್ಯುಕ್ತಾ=ಈ ಶಂಕಾತ್ರಯಕ್ಕೆ ಸಮಾಧಾನವಾಗಿ ಈ ಋಕ್ಕು ಹೇಳಲ್ಪಡುತ್ತದೆ. ೧ನೇ ಶಂಕೆಗೆ '**ಸತ್ಯಂ ಜ್ಞಾನಮನಂತಂ ಬ್ರಹ್ಮ**' ಎನ್ನುವುದು ಉತ್ತರವು ಇದು ಪ್ರತ್ಯೇಕ ಲಕ್ಷಣವು. ೨ನೇ ಶಂಕಗೆ '**ಯೋ ವೇದ ನಿಹಿತಂ ಗುಹಾಯಾಂ**' ಎನ್ನುವುದು ಉತ್ತರವು. ಪರಿಪೂರ್ಣ ಪರಿಮಾಣವುಳ್ಳವನಾದಾಗ್ಯೂ ಬ್ರಹ್ಮನು ಮಹಾಶಕ್ತಿಯಿಂದ ಭಕ್ತರಿಗೆ ಅನುಗ್ರಹಿಸುವುದಕ್ಕಾಗಿ ಅಲ್ಪಪರಿಮಾಣವನ್ನು ಪ್ರಕಟಿಸುತ್ತಾ ಸರ್ವಜೀವರಿಗೂ ಅವರಿಗೆ ಉಪಯುಕ್ತಗಳಾದ ಕಾರ್ಯಕಾರಣಗಳಿಗೂ ಪ್ರೇರಕನಾಗಿ ಹೃದಯಗುಹೆಯಲ್ಲಿ ಇದ್ದವನು ತಿಳಿಯಲರ್ಹನು. ೩ನೇ ಶಂಕೆಗೆ '**ಸೋಽಶ್ನುತೇ ಸರ್ವಾನ್ ಕಾಮಾನ್ ಸಹ**' ಎನ್ನುವುದು ಉತ್ತರವು. ಸಂಯೋಗಮಾತ್ರವು ಆತನ ಪ್ರಾಪ್ತಿಯಲ್ಲ. ಐಕ್ಯಾಪತ್ತ್ಯಾದಿಗಳೂ ಅಲ್ಲ. ಮತ್ತೆ ಬ್ರಹ್ಮನ ವ್ಯಕ್ತಿಸ್ಥಾನದಲ್ಲಿ ಅಂದರೆ ವೈಕುಂಠಾದಿ ಸ್ಥಾನವಿಶೇಷಗಳಲ್ಲಿ ಬ್ರಹ್ಮನಿಂದ ಅತ್ಯಂತ ಭಿನ್ನನಾಗಿ ಸತ್ಯಕಾಮತ್ವಮೊದಲಾದ ಬ್ರಹ್ಮಸಾರೂಪ್ಯಕ್ಕೆ ಅಭಿವ್ಯಕ್ತಿಯೇ ಆತನ ಪ್ರಾಪ್ತಿಯು. (2) ಮೇಲಿನ ಆರು ಪ್ರಕರಣಗಳು ಅಂದರೆ ಸೃಷ್ಟಿಪ್ರಕರಣ ಸೇರಿ ಅನ್ನಮಯಾದಿ ಆರು ಪ್ರಕರಣಗಳು, ಮಂತ್ರವರ್ಣದಲ್ಲಿ ಹೇಳಿದ ಪರಬ್ರಹ್ಮಲಕ್ಷಣವನ್ನೇ ವಿವರಿಸತಕ್ಕವುಗಳಾದುದರಿಂದ ಪರಬ್ರಹ್ಮನೇ ಅನ್ನಮಯಾದಿ ಶಬ್ದವಾಚ್ಯನು || ೧೮೯ || ೧೯೦ ||

**ಸತ್ಯತ್ವವು ಸೃಷ್ಟಿಪ್ರಕರಣದಿಂದ ಹೇಳಲ್ಪಡುವುದು ಹೇಗೆಂದರೆ—**

ಮೂ || ಸದ್ಭಾವಂ ಯಾಪಯೇದ್ಯಸ್ಮಾತ್ಸತ್ಯಂ ತತ್ತೇನ ಕಥ್ಯತೇ || ೧೯೧ ||
ಇತಿ ಸೃಷ್ಟಿರಿಹ ಪ್ರೋಕ್ತಾ ಜಗತ್ಸದ್ಭಾವಯಾಪಕಂ |
ಬ್ರಹ್ಮೇತಿ ಸ್ಥಾಪನಾಯೈವ ಸತ್ತ್ವಂ ಜೀವನಮೇವ ಚ || ೧೯೨ ||
ವಿಶೀರ್ಣತಾ ಚ ಸತ್ತ್ವಂ ಸ್ಯಾತ್ಸನ್ನಮಿತ್ಯಾಹುರೇವ ಯತ್ |
ಅತೋಽದ್ಯತಾಽತ್ತೃತಾಽನ್ನತ್ವಂ ಸತ್ಯಶಬ್ದಾರ್ಥ ಏವ ಹಿ || ೧೯೩ ||

ಅ || ಯಸ್ಮಾತ್=ಯಾವಕಾರಣದ್ದೆಶೆಯಿಂದ, (ತಾನು ಹೊರತಾದುದೆಲ್ಲಾದಕ್ಕೂ,) ಸದ್ಭಾವಂ=ಉತ್ಪತ್ತಿಯನ್ನು, ಯಾಪಯೇತ್=ಹೊಂದಿಸಿಕೊಡುತ್ತಾನೋ,(ಆದಕಾರಣದಿಂದ) ತತ್=ಬ್ರಹ್ಮನು, ಸತ್ಯಂ=(ಸತ್=ಉತ್ಪತ್ತಿಯನ್ನು, ಯಾಪಯತಿ=ಹೊಂದಿಸಿಕೊಡುತ್ತಾನೆ, ಎನ್ನುವ ವ್ಯುತ್ಪತ್ತಿಯಿಂದ) ಸತ್ಯನೆಂದು, ತೇನ='ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ಸೃಷ್ಟಿ ವಾಕ್ಯದಿಂದ, ಕಥ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ ಇತಿ=ಹೀಗೆ, (ಸಕಲ ಪ್ರಪಂಚದ ಉತ್ಪತ್ತಿ ಕಾರಣತ್ವವೇ ಸತ್ಯಶಬ್ದಾರ್ಥವೆಂದು ಹೃದಯದಲ್ಲಿಟ್ಟುಕೊಂಡು 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಗಳಿಂದ) ಇಹ=ಈ ಅನುವಾಕದಲ್ಲಿ, ಸೃಷ್ಟಿಃ=ಜಗತ್ಸರ್ಜನವು, ಪ್ರೋಕ್ತಾ= ಹೇಳಲ್ಪಟ್ಟದೆ (ಸರ್ವಜಗತ್ಸ್ರಷ್ಟೃತ್ವವೇ ಸತ್ಯಶಬ್ದಾರ್ಥವಾಗಲಿ. ಆದಾಗ್ಯೂ 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ಸೃಷ್ಟಿಪ್ರಕರಣವು ಅವಯವಾರ್ಥಕಥನಾದಿಗಳು ಇಲ್ಲದಿರುವಪ್ರಯುಕ್ತ ಸತ್ಯ ಶಬ್ದದ ವ್ಯಾಖ್ಯಾನವೆನ್ನುವುದು ಯುಕ್ತವಲ್ಲ ಎಂದರೆ) ತೇನ=ಆ ಸತ್ಯಶಬ್ದದಿಂದ, ಜಗತ್ಸದ್ಭಾವ ಯಾಪಕಂ=ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ಉತ್ಪತ್ತಿಯನ್ನು ಹೊಂದಿಸಿಕೊಡುವವನು, ಬ್ರಹ್ಮೇತಿ=ಪರಬ್ರಹ್ಮನೆಂದು, (ಹೇಳಲ್ಪಟ್ಟದ್ದಾನೆ. ಸ್ಥಾಪನಾಯೈವ=ಆ ಅರ್ಥವನ್ನು ಸ್ಥಾಪಿಸು ವುದಕ್ಕಾಗಿಯೇ, (ಸೃಷ್ಟಿಯು ಹೇಳಲ್ಪಟ್ಟದೆ. ಅವಯವಾರ್ಥವನ್ನು ಹೇಳುವುದಕ್ಕಾಗಿ ಅಲ್ಲ. (೨) (ಅನ್ನಮಯ ಪ್ರಕರಣವು ಸತ್ಯಶಬ್ದಾರ್ಥವಾಗುವುದು ಹೇಗೆಂದರೆ—) ಜೀವನಂ ಚ= (ಕೇವಲ ಉತ್ಪತ್ತಿಯುಮಾತ್ರ ಸತ್‌ಶಬ್ದದ ಅರ್ಥವಲ್ಲ. ಮತ್ತೆ) ಪ್ರಾಣಧಾರಣವೂ ಕೂಡ ಸತ್ತ್ವಮೇವ=ಸತ್‌ಶಬ್ದದ ಪ್ರವೃತ್ತಿನಿಮಿತ್ತವೇ. **'ಅನ್ನಾದ್ಭೂತಾನಿ ಜಾಯಂತೇ | ಜಾತಾ ನ್ಯನ್ನೇನ ವರ್ಧಂತೇ |** ಇತ್ಯಾದಿ ಶ್ರುತಿಯು. ಹೇಗೆಂದರೆ, ದೇವದತ್ತನು ಇದ್ದಾನೆಂದು ಹೇಳಿ ದಾಗ ಜೀವಿಸುತ್ತಾನೆನ್ನುವ ಪ್ರತೀತಿಯು ಇದೆಯಷ್ಟೆ) ಯತ್=ಯಾವಕಾರಣದ್ದೆಶೆಯಿಂದ, ವಿಶೀರ್ಣಂ=ವಿನಷ್ಟವಾದ ವಸ್ತುವನ್ನು, ಸನ್ನಮಿತಿ=(**'ಅತ್ತಿ ಚ ಭೂತಾನಿ- ಸನ್ನಂ ತು ವರ್ಧಿತಂ ಪ್ರೋಕ್ತಂ ಸನ್ನಂ ಶಾಂತಂ ಚ ಸೂರಿಭಿಃ'** ಇತ್ಯಾದಿಗಳಲ್ಲಿ), ಸನ್ನವೆಂದು, ಆಹುರೇವ=ಹೇಳುತ್ತಾರೋ, ಏವಶಬ್ದದಿಂದ 'ಷದ್ಲೃವಿಶರಣಗತ್ಯವಸಾದನೇಷು' ಎನ್ನುವ ಪಾಠದಿಂದ ಈ ಪ್ರಯೋಗವು ಮುಖ್ಯವೇ ಎಂದು ಸೂಚಿತವಾಗುತ್ತದೆ. ತಥಾಚ ಸತ್= ಸತ್ತ್ವವನ್ನು, ಅಂದರೆ ಜೀವನವನ್ನಾಗಲೀ ವಿನಾಶವನ್ನಾಗಲೀ, ಯಾಪಯತಿ=ಭೂತಗಳಿಗೆ ಹೊಂದಿಸಿಕೊಡುವಪ್ರಯುಕ್ತ ಸತ್ಯನೆನ್ನುತ್ತಾನೆ, ಎಂದುಕ್ತವಾಯಿತು.) ಅತಃ=(ಯಾವ ಕಾರಣದ್ದೆಶೆಯಿಂದ ಹೀಗೆ ಎಲ್ಲಾ ಪ್ರಾಣಿಗಳ ಜೀವನ ವಿನಾಶಗಳ ಕಾರಣತ್ವವು ಸತ್ಯಶಬ್ದದಿಂದ ಹೇಳಲ್ಪಟ್ಟದೋ) ಆದಕಾರಣ, ಸತ್ಯಶಬ್ದಾರ್ಥಏವ=ಸತ್ಯಶಬ್ದಾರ್ಥವೇ, ಅನ್ನತ್ವಂ=ಅನ್ನಶಬ್ದ ಪ್ರವೃತ್ತಿನಿಮಿತ್ತವು. (ಅದು ಹೇಗೆಂದರೆ) ಹಿ=ಯಾವಕಾರಣದಿಂದ, ಅದ್ಯತಾ=ಉತ್ಪತ್ತಿ ವೃದ್ಧಿ ಎರಡರಲ್ಲಿಯೂ ಉಪಜೀವ್ಯತ್ವವೂ, ಅತ್ತೃತಾ ಚ=ಸಂಹರ್ತೃತ್ವವೂಕೂಡ, ಅನ್ನತ್ವಂ= ಅನ್ನಶಬ್ದಪ್ರವೃತ್ತಿನಿಮಿತ್ತವೇ.

ತಾ || ನ್ಯಾಯಸುಧಾ— (1) ಅವಯವಾರ್ಥವನ್ನು ಹೇಳುವುದು ಇತ್ಯಾದಿಗಳೇ ವ್ಯಾಖ್ಯಾನವಲ್ಲ. ಮತ್ತೆ ಹೇಳಿದ ಅರ್ಥವನ್ನು ಸ್ಥಾಪಿಸುವುದೂ ಅತ್ಯಗತ್ಯವು. ಪ್ರಕೃತದಲ್ಲಿ 'ಸತ್ಯಂ ಬ್ರಹ್ಮ' ಎಂದು ಬ್ರಹ್ಮನಿಗೆ ಲಕ್ಷಣವನ್ನು ಹೇಳಿದಾಗ ಪೃಥಿವೀ ಮೊದಲಾದ ಐದು ಮಹಾಭೂತಗಳಿಗೇನೇ ಜಗಜ್ಜನ್ಮಾದಿಕಾರಣತ್ವವಿದ್ದಪ್ರಯುಕ್ತ ಬ್ರಹ್ಮನಿಗೆ ಈ ಲಕ್ಷಣವು ಕೂಡುವುದಿಲ್ಲವೆಂದಾಶಂಕಿಸಿದಾಗ ಆ ಪಂಚ ಮಹಾಭೂತಗಳಿಗೂ ಪರಬ್ರಹ್ಮನೇ ಕಾರಣನು, ಮಹಾಭೂತಗಳಲ್ಲಿ ಅಂತರ್ಗತನು, ಅವುಗಳಿಗೆ ಸತ್ತಾದಿಗಳನ್ನು ಕೊಡುವವನು ಆದಕಾರಣ ಬ್ರಹ್ಮನೇ ಜಗಜ್ಜನಕನು, ಎಂದು 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿಗಳಿಂದ ಸಾಧಿಸುವಪ್ರಯುಕ್ತ ಇದು ಅದಕ್ಕೆ ವ್ಯಾಖ್ಯಾನವಾಗುತ್ತದೆ ॥ ೧೯೧ ॥ ೧೯೨ ॥ ೧೯೩ ॥

ಪ್ರಾಣಮಯ ಪ್ರಕರಣವೂ ಸತ್ಯಶಬ್ದಾರ್ಥವಾಗುವುದು ಹೇಗೆಂದರೆ—

ಮೂ || ಪ್ರಾಣಂ ದೇವಾ ಅನುಪ್ರಾಣಂತಿ ಮನುಷ್ಯಾಃ ಪಶವಶ್ಚ ಯೇ ।
ಆಯುಃ ಪ್ರಾಣೋ ಹಿ ಭೂತಾನಾಮಿತಿ ಯದ್ಗತಿ ಜೀವನೇ ||೧೯೪||
ಉಕ್ತೇ ಸದಿತಿ ಧಾತ್ವರ್ಥೋ ಗತಿಶ್ಚಾತೋ ಹಿ ಸತ್ಯತಾ ।
ಪ್ರಾಣತ್ವಮವಬೋಧಾರ್ಥೋ ಮನುಧಾತುಃ ಪ್ರಕೀರ್ತಿತಃ ||೧೯೫||

ಅ || ದೇವಾಃ=ದೇವತೆಗಳೂ, ಮನುಷ್ಯಾಃ=ಮನುಷ್ಯರೂ, ಪಶವಶ್ಚ ಯೇ=ಯಾವವು ಪಶುಗಳೋ ಅವುಗಳೂ ಕೂಡ, ಪ್ರಾಣಂ=ಚೆನ್ನಾಗಿ ಸರ್ವಜಗಚ್ಚೇಷ್ಟಕನಾದ ಪರಮಾತ್ಮನನ್ನು, ಅನು=ಪರಮಾತ್ಮನ ಪ್ರೇರಣಾನುಸಾರವಾಗಿ, ಪ್ರಾಣಂತಿ = ಚೇಷ್ಟೆಮಾಡುತ್ತಾರೆ. ಪ್ರಾಣಃ= ಪರಮಾತ್ಮನು, ಭೂತಾನಾಂ=ಪ್ರಾಣಿಗಳಿಗೆಲ್ಲಾ, ಆಯುಃ = ಜೀವನಕ್ಕೆ ಕಾರಣನಾಗಿದ್ದಾನೆ. (ಆದಕಾರಣ ಇವನು ಪ್ರಾಣನೆನ್ನಿಸುತ್ತಾನೆ) ಇತಿ=ಎನ್ನುವ ಮಂತ್ರದಿಂದ, ಯತ್ = ಯಾವ ಕಾರಣದ್ದೆಶೆಯಿಂದ, ಭೂತಾನಾಂ=ಪ್ರಾಣಿಗಳಿಗೆ, ಗತಿಜೀವನೇ=ಗಮನಜೀವನಗಳು, (ಗತಿ ಜೀವನ ಪ್ರದತ್ವವು,) ಉಕ್ತೇ = (ಪ್ರಾಣಂತಿ ಪ್ರವರ್ತಂತೇ = ಪ್ರವರ್ತಿಸುತ್ತಾವೆ, ಅಥವಾ ಜೀವಂತಿ ವಾ=ಬದುಕುತ್ತವೆ, ಸರ್ವಭೂತಾನಿ=ಎಲ್ಲಾ ಪ್ರಾಣಿಗಳೂ, ಅನೇನ=ಈ ಬ್ರಹ್ಮನಿಂದ ಎನ್ನುವ ವ್ಯುತ್ಪತ್ತಿಯಿಂದ ಪ್ರಾಣಶಬ್ದಾರ್ಥವಾಗಿ) ಹೇಳಲ್ಪಟ್ಟವೆಯೋ, ಅತಶ್ಚ=ಆದಪ್ರಯುಕ್ತ, ಸತ್ ಇತಿ ಧಾತ್ವರ್ಥಃ=ಸದ್ ಎನ್ನುವ ಧಾತುವಿನ ಅರ್ಥವು. ಗತಿಶ್ಚ=ಗತಿಯೂ ಜೀವನವೂ ಕೂಡ, (ಅಸ್ ಧಾತುವಿನ ಅರ್ಥವು.) (ತಥಾಚ ಸತ್ = ಗತಿಯನ್ನು ಜೀವನವನ್ನಾಗಲೀ, ಯಾಪಯತಿ=ಭೂತಗಳಿಗೆ ಹೊಂದಿಸಿಕೊಡುವಪ್ರಯುಕ್ತ ಸತ್ಯಶಬ್ದವೂ ಕೂಡ ಗತಿಯನ್ನು ಕೊಡುವಿಕೆ, ಜೀವನವನ್ನು ಕೊಡುವಿಕೆ ಎನ್ನುವ ಅರ್ಥವನ್ನು ಹೇಳುತ್ತದೆ.) ಅತಃ=ಆದ ಪ್ರಯುಕ್ತ, ಸತ್ಯತಾ=ಸತ್ಯತ್ವವೇ, ಪ್ರಾಣತ್ವಂ=ಪ್ರಾಣತ್ವವು. (ಸತ್ಯ ಪ್ರಾಣ ಶಬ್ದಗಳಿಗೆ ಒಂದೇ ಅರ್ಥವು. ಇದರಿಂದ ಅನ್ನಮಯ ಪ್ರಕರಣ ಪ್ರಾಣಮಯಪ್ರಕರಣಗಳು ಸತ್ಯಶಬ್ದಾರ್ಥವನ್ನು ವಿಸ್ತರಿಸುವುದರಿಂದ ಸತ್ಯಶಬ್ದದ ವ್ಯಾಖ್ಯಾನಗಳೆಂದು ಉಕ್ತವಾಯಿತು.)

(ಜ್ಞಾನಶಬ್ದಾರ್ಥವು ಮನೋಮಯಪ್ರಕರಣವಾಗುವುದು ಹೇಗೆಂದರೆ-) ಮನುಧಾತುಃ= ಮನು ಎನ್ನುವ ಧಾತುವು, ಅವಬೋಧಾರ್ಥಃ=ಜ್ಞಾನವೆನ್ನುವ ಅರ್ಥವುಳ್ಳದ್ದಾಗಿ, ಪ್ರಕೀರ್ತಿತಃ= 'ಮನು ಅವಬೋಧನೇ' ಎಂದು ವ್ಯಾಖ್ಯಾತವಾಗಿದೆ.

ತಾ || ನ್ಯಾಯಸುಧಾ—ಅವಬೋಧನಾರ್ಥಕವಾದ ಮನು ಧಾತುವಿನದ್ದೆಶೆಯಿಂದ ಭಾವಾರ್ಥದಲ್ಲಿ ಅಸುನ್ ಪ್ರತ್ಯಯವು ವಿಹಿತವಾಗುವಾಗ ಮನಃ ಎನ್ನುವುದಕ್ಕೂ ಜ್ಞಾನ ಎನ್ನು

ವುದಕ್ಕೂ ಒಂದೇ ಅರ್ಥವು. (2) ವಿಜ್ಞಾನಮಯ ಪ್ರಕರಣವು ಜ್ಞಾನಶಬ್ದಾರ್ಥವೆನ್ನುವುದು ಸ್ಪಷ್ಟವೇ ಆಗಿರುವುದರಿಂದ ಅದನ್ನು ವಿಸ್ತರಿಸಲಿಲ್ಲ. (3) 'ಜ್ಞಾನಂ ಬ್ರಹ್ಮ' ಎಂದು ಲಕ್ಷಣವನ್ನು ಹೇಳಿದಾಗ ಈ ಲಕ್ಷಣವು ಎಲ್ಲಾ ಚೇತನರಲ್ಲಿಯೂ ಸಾಧಾರಣವಾಗಿರುವುದರಿಂದ ಇದು ಅಲಕ್ಷಣವು ಎಂದು ಆಶಂಕಾ ಬಂದರೆ ಅವಬೋಧಮಾತ್ರವು ಜ್ಞಾನವೆಂದು ಇಲ್ಲಿ ವಿವಕ್ಷಿತವಾಗಲಿಲ್ಲ. ಮತ್ತೆ ಎಲ್ಲಾ ಪದಾರ್ಥಗಳ ಸಾಮಾನ್ಯಾಕಾರ ವಿಶೇಷಾಕಾರಗಳನ್ನು ವಿಷಯೀಕರಿಸಿಕೊಂಡಿರುವ ಜ್ಞಾನವು ವಿವಕ್ಷಿತವಾಗಿರುವುದರಿಂದ ಅತಿವ್ಯಾಪ್ತಿಯಿರುವುದಿಲ್ಲ ಎಂದು ಬ್ರಹ್ಮವಲ್ಲಿಯಲ್ಲಿರತಕ್ಕ ಮನೋಮಯ, ವಿಜ್ಞಾನಮಯ ಪ್ರಕರಣಗಳಿಂದ ಲಕ್ಷಣಕ್ಕೆ ಅತಿವ್ಯಾಪ್ತಿಪರಿಹಾರಕ್ಕಾಗಿ ಜ್ಞಾನತ್ವವನ್ನು ವಿಸ್ತರಿಸಿರುವರು ‖ ೧೪ ‖ ೧೫ ‖

ಆನಂದಮಯ ಪ್ರಕರಣದಿಂದ ಅನಂತತ್ವವು ವ್ಯಾಖ್ಯಾತವಾಗುವುದು ಹೇಗೆಂದರೆ—

ಮೂ ‖ ನಾಲ್ಪೇ ಸುಖಮಿತಿ ಪ್ರೋಕ್ತ್ಯೈವಾನಂದಮಯತೋಕ್ತಿತಃ ।
ಅನಂತತ್ವಂ ಸುನಿರ್ಣೀತಂ ಪೂರ್ಣಾನಂದೋ ಹಿ ನಾಲ್ಪಕೇ ‖ ೧೬ ‖
ಅತೋ ಹಿ ಮಂತ್ರವರ್ಣೋಕ್ತ ವಿಸ್ತೃತಿಸ್ತು ಸಮಸ್ತಯಾ ।
ಕ್ರಿಯತೇ ಪರಯಾ ಯಸ್ಮಾತ್ [ಇತರೋತ್ರ ನ ಕಥ್ಯತೇ ‖ ೧೭ ‖

ಅ ‖ (ಆನಂದಮಯಪ್ರಕರಣವು ಅನಂತಎನ್ನುವ ಪದವನ್ನು ನಿರ್ವಚನಮಾಡುವುದು ಇತ್ಯಾದಿರೂಪದಿಂದ ಅನಂತಎನ್ನುವ ಪದಕ್ಕೆ ವ್ಯಾಖ್ಯಾನರೂಪವಲ್ಲ, ಮತ್ತೆ ಅನಂತತ್ವ ಎನ್ನುವ ಲಕ್ಷಣಕ್ಕೆ ಅಸಂಭವನಾಶಂಕೆಯು ಬಂದರೆ) ಆನಂದಮಯತೋಕ್ತಿತಃ=ಆನಂದಮಯತ್ವದ ವಚನದಿಂದ, ಅನಂತತ್ವಂ=ಅನಂತತ್ವವು, ಸುನಿರ್ಣೀತಂ= (ಪರಮೇಶ್ವರಃ ಅನಂತಃ ಪೂರ್ಣಾನಂದತ್ವಾತ್=ಪರಮೇಶ್ವರನು ನಾಶವಿಲ್ಲದವನು ಪೂರ್ಣಾನಂದವುಳ್ಳವನ ದಪ್ರಯುಕ್ತ, ಎಂದು) ಚೆನ್ನಾಗಿ ಉಪಪಾದಿಸಲ್ಪಟ್ಟದೆ (ಅನಂತತ್ವರೂಪ ಸಾಧ್ಯವೂ ಪೂರ್ಣಾನಂದತ್ವರೂಪ ಸಾಧನವೂ ಎಲ್ಲಿಯೂ ದೃಷ್ಟವಾಗದಿರುವುದರಿಂದ ವ್ಯಾಪ್ತಿಯೇ ಇಲ್ಲದಿರುವಪ್ರಯುಕ್ತ ಇದು ಹೇಗೆ ಕೂಡುತ್ತದೆಂದು ಹೇಳಕೂಡದು) ನಾಲ್ಪೇ ಸುಖಮಿತಿ=ಅಲ್ಪನಲ್ಲಿ ಸುಖವೇ ಇರುವುದಿಲ್ಲವೆನ್ನುವ, ಪ್ರೋಕ್ತ್ಯೈವ=ಶ್ರುತಿಯ ವಚನದಿಂದಲೇ, ಹಿ=ಯಾವಕಾರಣದಿಂದ, ಅಲ್ಪಕೇ=ಅಂತವುಳ್ಳವನಲ್ಲಿ, ಪೂರ್ಣಾನಂದಃ=ಪರಿಪೂರ್ಣವಾದ ಆನಂದವು, ನ=ಇಲ್ಲವೆಂದು ನಿಶ್ಚಿತವಾಗುತ್ತದೆ. (ತಥಾಚ ಅನ್ವಯವ್ಯಾಪ್ತಿಯಿಲ್ಲದಿದ್ದರೂ ವ್ಯತಿರೇಕವ್ಯಾಪ್ತಿಯಿದೆ) ಅತಃ=ಆದಕಾರಣ, ಮಂತ್ರವರ್ಣೋಕ್ತ ವಿಸ್ತೃತಿಸ್ತು='ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವ ಮಂತ್ರವರ್ಣದಲ್ಲಿ ಹೇಳಲ್ಪಟ್ಟದರ ವಿಸ್ತಾರವೇ, ಸಮಸ್ತಯಾ=ಎಲ್ಲಾ, ಪರಯಾ=ಮಂತ್ರವರ್ಣಕ್ಕಿಂತ ಮೇಲಿನದ್ದಾದ ಶ್ರುತಿಯಿಂದ, ಯಸ್ಮಾತ್=ಯಾವ ಕಾರಣದ್ದೆಶೆಯಿಂದ, ಕ್ರಿಯತೇ=ಮಾಡಲ್ಪಡುತ್ತದೋ, (ಆದಕಾರಣ ಶ್ರೀವಿಷ್ಣುವೇ ಅನ್ನಮಯಾದಿಶಬ್ದವಾಚ್ಯನು.) ಹಿ=ಪ್ರಸಿದ್ಧವು.

### ಸಾರಾಂಶ.

ಸ. ರ. ವಿ—(1) 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ವಾಕ್ಯದಿಂದ 'ಸತ್ ಯಾಪಯತೀತಿ' ಎನ್ನುವ ವ್ಯುತ್ಪತ್ತಿಯಿಂದ ಸತ್ಯಶಬ್ದವು ನಿರುಕ್ತವಾಯಿತು. (2) ಜೀವನವನ್ನು ಕೊಡುವಿಕೆ, ಸಂಹಾರವನ್ನು ಮಾಡುವಿಕೆ ಎನ್ನುವ ಅರ್ಥವನ್ನು ಹೇಳುವ ಅನ್ನಶಬ್ದದಿಂದ ಜೀವನಸಂಹಾರಗಳನ್ನು ಹೊಂದಿಸಿಕೊಡುವಪ್ರಯುಕ್ತ ಸತ್ಯನೆನ್ನಿಸುತ್ತಾನೆಂದು ಸತ್ಯಶಬ್ದವು ನಿರುಕ್ತವಾಯಿತು. (3) ಜೀವನವು ಗತಿಯೂ ಕೂಡ ಸತ್‌ಶಬ್ದದಿಂದ ಹೇಳಲ್ಪಡುತ್ತದೆ. ಆ

ಎಗಡನ್ನು ಹೊಂದಿಸಿಕೊಡುವವಪ್ರಯುಕ್ತ ಸತ್ಯನೆನ್ನಿಸುತ್ತಾನೆಂದು ಸತ್ಯಶಬ್ದವು ನಿರುಕ್ತ ವಾಯಿತು. (4) ಪ್ರಾಣಯತೀತಿ ಪ್ರಾಣಃ ಎಂದು ಜೀವನಗತಿಗಳನು ಕೊಡುವವನು ಎನ್ನುವ ಅರ್ಥಗಳನ್ನು ಹೇಳುವ ಪ್ರಾಣಶಬ್ದದಿಂದ ಹೇಳಲ್ಪಡುತ್ತದೆ. (5) 'ಮನು ಅವಬೋಧನೇ' ಎನ್ನುವ ಧಾತುವಿನಿಂದ ಬೋಧಪ್ರಾಚುರ್ಯವನ್ನು ಹೇಳುವ ಮನೋಮಯ ಶಬ್ದದಿಂದಲೂ. ವಿಜ್ಞಾನಮಯ ಶಬ್ದದಿಂದಲೂ ಜ್ಞಾನಶಬ್ದವು ವಿವೃತವಾಯಿತು. (6) ಆನಂದಪ್ರಾಚುರ್ಯ ವೆನ್ನುವ ಅರ್ಥವನ್ನು ಹೇಳುವ ಆನಂದಮಯ ಶಬ್ದದಿಂದ ಬ್ರಹ್ಮನಿಗೆ ಅನಂತತ್ವವು ಉಪಪಾದಿಸ ಲ್ಪಟ್ಟಿತು ॥ ೧೯೬ ॥ ೧೯೭ ॥ ಸೂ. ೧೫ ॥

ಹಿಂದೆ ಹೇಳಿದಪ್ರಕಾರ ಆನಂದಮಯೋಽಭ್ಯಾಸಾತ್ ಇತ್ಯಾದಿ ಸೂತ್ರಗಳಿಂದ ತಮ್ಮ ಪಕ್ಷವನ್ನು ಸಾಧಿಸಿದರು. ಈಗ ಪರಪಕ್ಷವನ್ನು ತಿರಸ್ಕರಿಸತಕ್ಕ ಸೂತ್ರವು

**'ಓಂ ನೇತರೋಽನುಪಪತ್ತೇಃ ಓಂ'** ಸೂ. ॥ ೧೬ ॥

(ಆನಂದಮಯಾದಿ ಶಬ್ದವಾಚ್ಯರು,) ಇತರಃ=ವಿಷ್ಣುವಿನಿಂದ ಇತರರಾದ ಚತುರ್ಮುಖಾದಿ ಗಳು, ನ=ಆಗಲಾರರು ಅನುಪಪತ್ತೇಃ=ಬ್ರಹ್ಮವಿದಾಪ್ನೋತಿ ಪರಂ ಎಂದು ಹೇಳಿದ ಮುಕ್ತಿ ಕಾರಣವಾದ ಜ್ಞಾನವಿಷಯತ್ವವು ಕೂಡದಿರುವುದರಿಂದ

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ [ಕ್ರಿಯತೇ ಪರಯಾ ಯಸ್ಮಾತ್] ಇತರೋಽತ್ರ ನ ಕಥ್ಯತೇ ।**
**ಪುರುಷಂ ವೇತ್ತಿ ಯೋ ಮುಚ್ಯೇನ್ನಾನ್ಯಃ ಪಂಥಾ ಹಿ ವಿದ್ಯತೇ ।**
**ಇತಿ ಶ್ರುತೇರನ್ಯವೇದೀ ಕಥಂ ಮುಕ್ತಿಂ ಪ್ರಯಾಸ್ಯತಿ ॥ ೯೮ ॥**

ಅ ॥ ಇತರಃ=ಜೀವರಾಗಲೀ ಶರೀರಾದಿ ಕೋಶಗಳಾಗಲೀ ಪ್ರಕೃತಿಯಾಗಲೀ, ಅತ್ರ= ಈ ಅನ್ನಮಯಾದಿ ಪ್ರಕರಣದಲ್ಲಿ, ನ ಕಥ್ಯತೇ=ಹೇಳಲ್ಪಡುವುದಿಲ್ಲ. (ಅನುಪಪತ್ತೇಃ="**ಸರ್ವಂ ವೈ ತೇಽನ್ನಮಾಪ್ನುವಂತಿ । ಯೇಽನ್ನಂ ಬ್ರಹ್ಮೋಪಾಸತೇ । ಸರ್ವಮೇವ ತ ಆಯು ರ್ಯಂತಿ । ಯೇ ಪ್ರಾಣಂ ಬ್ರಹ್ಮೋಪಾಸತೇ**" ॥ ಇತ್ಯಾದಿಗಳಿಂದ ಅನ್ನಮಯಾದಿಗಳ ಜ್ಞಾನದಿಂದ ಮೋಕ್ಷವು ಪ್ರತೀತವಾಗುತ್ತದೆ. ಅನ್ನಮಯಾದಿ ಶಬ್ದಗಳು ಜೀವಾದಿಗಳನ್ನು ಹೇಳುವುದಾದರೆ ಅದು ಕೂಡಲಾರದು.) (ಏಕೆ ಕೂಡಲಾರದೆಂದರೆ) ಯಃ = ಯಾವನು, ಪುರುಷಂ=ಗುಣಪೂರ್ಣನಾದ ಶ್ರೀ ನಾರಾಯಣನನ್ನು, ವೇತ್ತಿ = ತಿಳಿಯುತ್ತಾನೋ, (ಸಃ= ಆತನು) ಮುಚ್ಯೇತ್=ಮುಕ್ತನಾಗುವನು. ಅನ್ಯಃ=ಪರಮಪುರುಷಜ್ಞಾನದಿಂದ ಬೇರೆಯಾದ, ಪಂಥಾಃ=ಮೋಕ್ಷಕ್ಕೆ ಮಾರ್ಗವು, ನ ವಿದ್ಯತೇ=ಇರುವುದಿಲ್ಲ ಹಿ=ಶ್ರುತ್ಯಾದಿಪ್ರಸಿದ್ಧವು. ಇತಿ= ಈಪ್ರಕಾರವಾದ, ಶ್ರುತೇಃ=ಶ್ರುತಿಯಿದ್ದಪ್ರಯುಕ್ತ, ಅನ್ಯವೇದೀ=ಪರಮಾತ್ಮನಿಂದ ವ್ಯತಿರಿಕ್ತ ರಾದವರನ್ನು ತಿಳಿದವನು, ಕಥಂ = ಹೇಗೆ, ಮುಕ್ತಿಂ = ಮೋಕ್ಷವನ್ನು, ಪ್ರಯಾಸ್ಯತಿ= ಹೊಂದುವನು.

ತಾ ॥ ನ್ಯಾಯಸುಧಾ— (1) ಈ ಮೂಲದಿಂದ "**ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ**" ॥ ಎನ್ನುವ ಶ್ರುತಿಯು ಸೂಚಿತ ವಾಯಿತು. (2) ಹಾಗಾದರೆ ಈ ಶ್ರುತಿಯಲ್ಲಿ 'ತಮೇವಂ ವಿದ್ವಾನ್' ಎನ್ನುವಲ್ಲಿ 'ತಂ' ಎಂದೇ

ಶ್ರುತವಾಗಿದೆ. ವಿಷ್ಣುಂ ಎಂದು ಶ್ರುತವಾಗಲಿಲ್ಲ ಎಂದರೆ– 'ಸಹಸ್ರಶೀರ್ಷಾ ಪುರುಷಃ' ಇತ್ಯಾದಿಗಳಲ್ಲಿ ಪ್ರಸ್ತುತನಾದ ಪುರುಷನಿಗೆ ತಂ ಎಂದು ಪರಾಮರ್ಶವು ಈ ಅಭಿಪ್ರಾಯದಿಂದ ಪುರುಷಂ ಎಂದು ಹೇಳಿರುವರು ॥ ೧೯೮ ॥

ಹಾಗಾದರೆ, ಪುರುಷಶಬ್ದದಿಂದ ವಾಚ್ಯನಾದವನ ಜ್ಞಾನದಿಂದಲೇ ಮೋಕ್ಷವಾಗಲಿ. ಪುರುಷಶಬ್ದವಾಚ್ಯನೂ ಮತ್ತೊಬ್ಬನಾದರೆ ಆತನ ಜ್ಞಾನದಿಂದ ಮೋಕ್ಷವಾಗುವುದಿಲ್ಲವೆನ್ನುವುದು ಹೇಗೆ ಕೂಡುತ್ತದೆಂದರೆ—

ಮೂ ॥ ಪುರುಷಃ ಪರ ಆತ್ಮಾಽಜೋ ಬ್ರಹ್ಮ ನಾರಾಯಣಃ ಪ್ರಭುಃ ।
ಮಹಾನಾನಂದ ಉದ್ವಿಷ್ಣುರ್ಭರ್ಗ ಓಮ ಇತೀರ್ಯತೇ ॥ ೧೯೯ ॥
ಸ್ವಯಂ ನಾರಾಯಣೋ ದೇವೋ ನಾನ್ಯಸ್ಯೈತಾನಿ ಕಸ್ಯಚಿತ್ ॥
ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನಾದಿ ಕುರ್ವತೇ ॥ ೨೦೦ ॥
ಸೂಕ್ತೇನ ಪೌರುಷೇಣೈನಂ ಯಜಂತ್ಯಧ್ಯಾತ್ಮಕೋವಿದಾಃ ।
ಇತಿ ಪೈಂಗಿಶ್ರುತಿಸ್ತೇನ ನಾನ್ಯಜ್ಞಾನಾದ್ವಿಮುಚ್ಯತೇ ॥ ೨೦೧ ॥

ಅ ॥ ಪುರುಷಃ=ಪೂರ್ಣಗಳಾದ ಷಡ್ಗುಣಗಳುಳ್ಳವನು, ಪರಃ=ಸರ್ವೋತ್ತಮನು, ಆತ್ಮಾ=ಸರ್ವಾಂತರ್ಯಾಮಿಯು, ಅಜಃ=ಉತ್ಪತ್ತಿಶೂನ್ಯನು, ಬ್ರಹ್ಮ=ಗುಣಪೂರ್ಣನು, ನಾರಾಯಣಃ=ಸರ್ವಗುಣಪರಿಪೂರ್ಣನು, ಪ್ರಭುಃ=ಸರ್ವಸ್ವಾಮಿಯು, ಮಹಾನ್=ಸರ್ವಶ್ರೇಷ್ಠನು, ಆನಂದಃ=ಪೂರ್ಣಾನಂದ ರೂಪನು, ಉತ್=ಸರ್ವೋತ್ಕೃಷ್ಟನು, ವಿಷ್ಣುಃ=ವ್ಯಾಪ್ತನು, ಭರ್ಗಃ=ಭರಣಗಮನ ಕರ್ತನು, ಓಂ=ಗುಣಪೂರ್ಣನು, ಅಃ=ನಿರ್ದೋಷನು, ಇತಿ=ಇತ್ಯಾದಿಶಬ್ದಗಳಿಂದ, ಸ್ವಯಂ = ಮುಖ್ಯವೃತ್ತಿಯಿಂದ, ದೇವಃ=ಕ್ರೀಡಾದಿಗುಣವಿಶಿಷ್ಟನಾದ, ನಾರಾಯಣಃ = ಶ್ರೀ ನಾರಾಯಣನೇ. ಈರ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. ಅನ್ಯಸ್ಯ ಕಸ್ಯಚಿತ್ = ಬೇರೆ ಯಾವನೊಬ್ಬನಿಗೂ, ಏತಾನಿ=ಈ ನಾಮಧೇಯಗಳು, ನ=ಇರುವುದಿಲ್ಲ. ತಸ್ಮಾತ್=ಓಂಕಾರವು ಶ್ರೀವಿಷ್ಣುವಿನ ನಾಮಧೇಯವಾಗಿರುವುದರಿಂದಲೇ (ಯಾರು ವಿಷ್ಣುವನ್ನು ಉದ್ದೇಶಿಸಿಕೊಂಡು) ಯಜ್ಞದಾನಾದಿ=ಯಜ್ಞದಾನ ಮೊದಲಾದುದನ್ನು, ಕುರ್ವತೇ=ಮಾಡುತ್ತಾರೋ, (ಅವರು) ಓಮಿತಿ = ಓಂ ಎಂದು, ಉದಾಹೃತ್ಯ=ಉದಾಹರಿಸಿಯೇ, (ಯಜ್ಞದಾನಾದಿಗಳನ್ನು ಮಾಡುತ್ತಾರೆ.) (ಇಲ್ಲವಾದರೆ ಅದು ಕೂಡದೇಹೋಗುವುದು. ಒಬ್ಬನನ್ನು ಉದ್ದೇಶಿಸಿಕೊಂಡು ಕರ್ಮವನ್ನು ಮಾಡುವವರು ಮತ್ತೊಬ್ಬನ ವಿಷಯಕವಾದ ಮಂತ್ರವನ್ನು ಜಪಿಸುತ್ತಾರೆನ್ನುವುದು ಕೂಡಲಾರದಷ್ಟೆ.) (ಪುರುಷಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆ ಎನ್ನುವಲ್ಲಿ ಯುಕ್ತಿಯನ್ನು ಹೇಳುತ್ತಾರೆ.) (ಯೇ=ಯಾರು) ಏನಂ=ಈ ಶ್ರೀ ನಾರಾಯಣನನ್ನು, ಯಜಂತಿ=ಯಾಗ ಮಾಡುತ್ತಾರೋ, ಅಧ್ಯಾತ್ಮಕೋವಿದಾಃ = ಸರ್ವೋತ್ತಮನಾದ ಶ್ರೀಪರಮಾತ್ಮನ ಜ್ಞಾನದಲ್ಲಿ ನಿಪುಣರಾದ, (ತೇ=ಅವರು) ಪೌರುಷೇಣ ಸೂಕ್ತೇನ=ಗುಣಪರಿಪೂರ್ಣನಾದ ಶ್ರೀನಾರಾಯಣನನ್ನೇ ಪ್ರತಿಪಾದಿಸುವ ಪುರುಷಸೂಕ್ತದಿಂದ, ಯಜಂತಿ=ಯಾಗಮಾಡುತ್ತಾರೆ. (ಇದರಿಂದ ಪುರುಷಶಬ್ದವು ಕೇವಲ ವಿಷ್ಣುವಾಚಕವೆಂದು ತಿಳಿಯುತ್ತದೆ.) ಇತಿ=ಹೀಗೆ, ಪೈಂಗಿಶ್ರುತಿಃ=ಪೈಂಗಿ ಶ್ರುತಿಯು (ಪುರುಷಶಬ್ದವು ಕೇವಲ ಭಗವಂತನನ್ನೇ ಪ್ರತಿಪಾದಿಸುತ್ತದೆಂದು ಯಾವ ಕಾರಣದಿಂದ ಹೇಳುತ್ತದೋ ಆ ಕಾರಣದಿಂದ) ತೇನ=ಶ್ರೀ ಹರಿಯಿಂದ ಭಿನ್ನರಾದವರಿಗೆ ಪುರುಷತ್ವವನ್ನು ನಿಷೇಧಿಸಿದರಿಂದಲೂ, ಮುಕ್ತಿಯನ್ನು ನಿಷೇಧಮಾಡಿದರಿಂದಲೂ, ಅಥವಾ 'ತಮೇವಂ ವಿದ್ವಾ

ಸಮೃತ ಇಹ ಭವತಿ' ಎನ್ನುವುದು ಕೇವಲ ವಿಷ್ಣುಪರವಾಗಿರುವುದರಿಂದ, ಅನ್ಯಜ್ಞಾನಾತ್= ಬೇರೆಯವರ ಜ್ಞಾನದಿಂದ, ನ ವಿಮುಚ್ಯತೇ=ಮುಕ್ತನಾಗುವುದಿಲ್ಲ ॥ ೧೯೯ ॥ ೨೦೦ ॥ ೨೦೧ ॥

**ನ. ಚ. ವಿ.**— ಹಾಗಾದರೆ, 'ಆಕಾಶಾದ್ವಾಯುಃ' ಇತ್ಯಾದಿಗಳಿಂದ ಪಂಚಭೂತಗಳ ಸೃಷ್ಟಿಯನ್ನು ಹೇಳಿ ಓಷಧಿಕಾರ್ಯವಾದ, ಅನ್ನಮಯವಾದ ಪುರುಷಶಬ್ದವನ್ನು ಪ್ರಸ್ತಾವಮಾಡಿ ಅದನ್ನು ಅನ್ನಮಯವೆಂದು ಪ್ರತಿಪಾದಿಸಿದರಿಂದ ಕೋಶಗಳು ಪ್ರತಿಪಾದಿಸಲ್ಪಡುವುದಿಲ್ಲವೆನ್ನುವುದು ಹೇಗೆ ಕೂಡುತ್ತದೆಂದರೆ—

ನ್ಯಾಯಸುಧಾ— ವಿಷ್ಣುವಿನಿಂದ ಇತರರಾದವರನ್ನು ತೆಗೆದುಕೊಂಡರೆ ಅನುಪಪತ್ತಿಯು ಇದ್ದಂತೆಯೇ ಈಶ್ವರನನ್ನು ತೆಗೆದುಕೊಂಡರೂ ಅನುಪಪತ್ತಿಯು ಇದ್ದೇಇದೆ. 'ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ' ಎಂದು ಓಷಧಿಕಾರ್ಯವಾದ, ಅನ್ನವಿಕಾರವಾದ ಶರೀರವನ್ನು ಪುರುಷಪದದಿಂದ ಹೇಳಿಕೊಂಡು **'ಸ ವಾ ಏಷ ಪುರುಷೋಽನ್ನರಸಮಯಃ'** ಎಂದು ಆ ಶರೀರವನ್ನೇ ಪರಾಮರ್ಶಮಾಡಿಕೊಂಡು ಅನ್ನರಸಮಯ ಎಂದು ಹೇಳಲ್ಪಡುತ್ತದೆ. ಅನ್ನರಸಮಯವು ಈಶ್ವರನೆಂದಾದರೆ ಅನುಪಪತ್ತಿ ಇದ್ದೇಇದೆ. ಅನ್ನರಸಮಯತ್ವವು ಅನ್ನವನ್ನೇ ಉಪಜೀವಿಸಿಕೊಂಡಿರುವ ಪಾರ್ಥಿವ ಶರೀರಗಳಿಗೇನೇ ಯುಕ್ತವು. ಶ್ರೀ ಹರಿಗೆ ಯುಕ್ತವಲ್ಲ. ಪ್ರಾಣಮಯಾದಿಗಳು ವಿಕಾರಪ್ರವಾಹದ ಮಧ್ಯದಲ್ಲಿಯೇ ಪ್ರವಿಷ್ಟಗಳಾಗಿವೆ. ಆದಕಾರಣ ಪ್ರಾಣಮಯಾದಿಗಳಿಗೆ ವಿಷ್ಣುತ್ವವು ಕೂಡುವುದಿಲ್ಲ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಮಾಡಲರ್ಹವಾದ ವಿಚಾರಕ್ಕೆ ಉಪಯುಕ್ತವಾದ ಅರ್ಥವನ್ನು ತೋರಿಸುತ್ತಾರೆ—

**ಮೂ ॥ ಬ್ರಹ್ಮಶಬ್ದೋದಿತೇ ತಸ್ಮಿನ್ನಾತ್ಮಶಬ್ದಂ ಪ್ರಯುಜ್ಯ ಚ ।**
**ತಸ್ಮಾದಾಕಾಶಸೃಷ್ಟಿಂ ಚ ಪ್ರೋವಾಚಾತ್ರ ಚತುರ್ವಿಧಾಂ ॥ ೨೦೨ ॥**
**ಭೂತಂ ಭೂತಾಭಿಮಾನೀ ಚ ತದ್ದೇಹೋಽಂತರ್ನಿಯಾಮಕಃ ।**
**ಹರಿಶ್ಚಾಕಾಶಶಬ್ದೋಕ್ತೋ ಮುಖ್ಯತೋ ಹರಿರೇವ ಚ ॥ ೨೦೩ ॥**

ಅ ॥ ಬ್ರಹ್ಮಶಬ್ದೋದಿತೇ='ಬ್ರಹ್ಮವಿದಾಪ್ನೋತಿ ಪರಂ । ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಬ್ರಹ್ಮಶಬ್ದದಿಂದ ಹೇಳಲ್ಪಟ್ಟ, ತಸ್ಮಿನ್=ಆ ವಿಷ್ಣುವಿನಲ್ಲಿ, ಆತ್ಮಶಬ್ದಂ ಚ ಪ್ರಯುಜ್ಯ='ತಸ್ಮಾದ್ವಾ ಏತಸ್ಮಾದಾತ್ಮನಃ ಆಕಾಶಃ ಸಂಭೂತಃ' ಎಂದು ಆತ್ಮಶಬ್ದವನ್ನೂ ಪ್ರಯೋಗಿಸಿ, ತಸ್ಮಾತ್ = 'ಬ್ರಹ್ಮವಿದಾಪ್ನೋತಿ ಪರಂ' ಎನ್ನುವಲ್ಲಿ ಪರಬ್ರಹ್ಮನನ್ನು ಹೊಂದಲಿಚ್ಛಿಸುವವನಿಂದ ತಿಳಿಯಲ್ಪಡತಕ್ಕವನೆಂದು ಹೇಳಲ್ಪಟ್ಟ, (ಏತಸ್ಮಾತ್ = 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಲಕ್ಷಿತನಾದ, ಬ್ರಹ್ಮಶಬ್ದದಿಂದ ಹೇಳಲ್ಪಟ್ಟವನಿಗೆ ಆತ್ಮತ್ವವನ್ನು ವಿಧಿಸತಕ್ಕ ವಾಕ್ಯದಲ್ಲಿ ಆತ್ಮಶಬ್ದದಿಂದ ಪ್ರಕೃತನೂ ಆದ) ಪರಮಾತ್ಮನಿಂದ, ಚತುರ್ವಿಧಾಂ= ನಾಲ್ಕು ವಿಧವಾದ, ಆಕಾಶಸೃಷ್ಟಿಂ ಚ=ಆಕಾಶಸೃಷ್ಟಿಯನ್ನೂ ಕೂಡ, ಅತ್ರ=ಈ ಅನುವಾಕದಲ್ಲಿ, ಪ್ರೋವಾಚ=ಹೇಳಿದರು. ಭೂತಂ=ಭೂತಾಕಾಶವೂ, (ಆಕಾಶಶಬ್ದೋಕ್ತಂ=ಆಕಾಶಶಬ್ದದಿಂದ ಹೇಳಲ್ಪಡುತ್ತದೆ.) ಭೂತಾಭಿಮಾನೀ ಚ=ಭೂತಾಕಾಶಕ್ಕೆ ಅಭಿಮಾನಿಯಾದ ಗಣಪತಿಯೂ ಕೂಡ, ತದ್ದೇಹಃ = ಭೂತಾಕಾಶಾಭಿಮಾನಿಯ ಶರೀರವೂ, ಅಂತರ್ನಿಯಾಮಕಃ=ಭೂತಾಕಾಶ, ಭೂತಾಕಾಶಾಭಿಮಾನಿ, ಅಭಿಮಾನಿಯ ಶರೀರ, ಈ ಮೂರರ ಒಳಗೆ ನಿಯಾಮಕನಾಗಿರುವ, ಹರಿಶ್ಚ=ಶ್ರೀ ಪರಮಾತ್ಮನೂ ಕೂಡ, ಆಕಾಶಶಬ್ದೋಕ್ತಃ=ಆಕಾಶ ಎನ್ನುವ ಶಬ್ದದಿಂದ ಹೇಳಲ್ಪಡುತ್ತಾನೆ. ಮುಖ್ಯತಃ=ಮುಖ್ಯವಾಗಿ, ಹರಿರೇವ ಚ=ಶ್ರೀಹರಿಯೇ ಆಕಾಶಶಬ್ದದಿಂದ ಪ್ರತಿಪಾದ್ಯನು.

ತಾ ॥ ನ್ಯಾಯಸುಧಾ— (1) 'ಆತ್ಮ ಶಬ್ದವನ್ನು ಪ್ರಯೋಗಮಾಡಿ ಸೃಷ್ಟಿಯನ್ನೂ ಹೇಳಿದನು' ಎನ್ನುವುದರಿಂದ ಯಾವನು ಸತ್ಯಜ್ಞಾನಾದಿವಾಕ್ಯದಿಂದ ಹೇಳಲ್ಪಟ್ಟಿದ್ದಾನೋ ಅವನು ಆತ್ಮನು ಎಂದು ಆತ್ಮತ್ವವೂ ವಿಧೇಯವೆಂದು ಸೂಚಿತವಾಯಿತು. ತಥಾ ಚ ಅಪ್ರಸ್ತುತನಿಗೆ ಆತ್ಮ ಶಬ್ದದಿಂದ ಅನುವಾದವು ಹೇಗೆ ಕೂಡಬಹುದು ಎನ್ನುವ ಶಂಕೆಗೆ ಅವಕಾಶವಿಲ್ಲ. (2) ಭೂತ ಭೂತಾಭಿಮಾನಿ, ಅವನದೇಹ, ಅಂತರ್ನಿಯಾಮಕರೂಪ. ಹೀಗೆ ನಾಲ್ಕು ವಿಧವಾದ ಆಕಾಶದ ಸಂಬಂಧಿಯಾಗಿರುವುದರಿಂದ ಸೃಷ್ಟಿಯೂ ನಾಲ್ಕು ವಿಧವು. 'ಪ್ರಾದುರ್ಭಾವೋ ಹರೇರ್ಜನಿಃ' ಇತ್ಯಾದಿಗಳಿಂದ ಸೃಷ್ಟಿಯು ಮೂರು ವಿಧವೆಂದು ಹೇಳುವುದರಿಂದ ಸ್ವರೂಪತಃ ನಾಲ್ಕು ವಿಧವಲ್ಲ ॥ ೨೦೨ ॥ ೨೦೩ ॥

ಆಕಾಶ ಮೊದಲಾದ ಶಬ್ದಗಳಿಂದ ಶ್ರೀ ಹರಿಯೇ ಪ್ರತಿಪಾದ್ಯನೆನ್ನುವುದು ಹೇಗೆ ಕೂಡುತ್ತದೆಂದರೆ—

ಮೂ ॥ ಆಸಮಂತಾತ್ಕಾಶತೇ ಯದಾಕಾಶೋ ಮುಖ್ಯತೋ ಹರಿಃ ।
ಬಲಜ್ಞಾನಸ್ವರೂಪತ್ವಾದ್ವಾಯುರಗ್ನಿರಗಂ ನಯನ್ ॥ ೨೦೪ ॥
ಆಪ ಆಪಾಲನಾಚ್ಚೈವ ಪೃಥಿವೀ ಪ್ರಥಿತೋ ಯತಃ ।
ಉಷ್ಣಾನಾಮಾಶ್ರಯತ್ವೇನ ಸ ಏವೌ (ವೋ) ಷಧಿನಾಮಕಃ ॥ ೨೦೫ ॥
ಓಷಧೀಷು ಸ್ಥಿತೋ ವಿಷ್ಣುಃ ಕ್ಷುಧಿತೈರಾಶ್ರಿತೋ ಭವೇತ್ ।
ಪುರಿ ಶೇತೇ ಯತಃ ಸೋಽಥ ಪುರುಷಶ್ಚೇತಿ ಗೀಯತೇ ॥ ೨೦೬ ॥

ಅ ॥ ಯತ್=ಯಾವಕಾರಣದ್ದೆಸೆಯಿಂದ, ಹರಿರೇವ=ಶ್ರೀಪರಮಾತ್ಮನೇ, ಮುಖ್ಯತಃ= ಮುಖ್ಯವೃತ್ತಿಯಿಂದ, ಆ=ಅಂದರೆ, ಸಮಂತಾತ್=ಸುತ್ತಮುತ್ತಲೂ, ಕಾಶತೇ = ಪ್ರಕಾಶಿಸುತ್ತಾನೋ, (ಆದಕಾರಣ ಆ ಶ್ರೀಹರಿಯೇ) ಮುಖ್ಯತಃ=ಮುಖ್ಯವೃತ್ತಿಯಿಂದ, ಆಕಾಶಃ= ಆಕಾಶನೆನ್ನಿಸುತ್ತಾನೆ. (ಈ ಪ್ರಕಾರ ಮುಖ್ಯ-ಅಮುಖ್ಯಭೇದದಿಂದ ನಾಲ್ಕುವಿಧವಾದ ಆಕಾಶ ದ್ದೆಶೆಯಿಂದ 'ಆಕಾಶಾದ್ವಾಯುಃ' ಎಂದು ಹೇಳಿದಪ್ರಕಾರ ನಾಲ್ಕು ವಿಧವಾದ ವಾಯುವಿಗೆ ಸೃಷ್ಟಿಯನ್ನು ಹೇಳಿದರು. ಅಲ್ಲಿಯೂ ವಾಯುಶಬ್ದದಿಂದ ಮುಖ್ಯವಾಗಿ ಶ್ರೀಹರಿಯೇ ಹೇಳಲ್ಪಡುತ್ತಾನೆಂದು ಹೇಳಬೇಕು. ಅದು ಹೇಗೆಂದರೆ)— ಬಲಜ್ಞಾನಸ್ವರೂಪತ್ವಾತ್ = ಬಲಜ್ಞಾನ ಸ್ವರೂಪತ್ವವಿದ್ದಪ್ರಯುಕ್ತ, ಹರಿಃ=ಶ್ರೀಪರಮಾತ್ಮನು, ವಾಯುಃ = ವಾಯುಶಬ್ದವಾಚ್ಯನು. (ಅಂದರೆ ವ ಶಬ್ದವು ಬಲವೆನ್ನುವ ಅರ್ಥವನ್ನು ಹೇಳುತ್ತದೆ. ಅಯ ಧಾತುವು ಗತಿಯೆನ್ನುವ ಅರ್ಥವಿರತಕ್ಕುದಾದಪ್ರಯುಕ್ತ ಜ್ಞಾನಾರ್ಥಕವು. ಆದಕಾರಣ ಆಯು ಎಂದರೆ ಜ್ಞಾನವು. ತಥಾಚ ವಶ್ಚಾಸೌ ಆಯುಶ್ಚ ವಾಯುಃ=ಬಲಜ್ಞಾನಸ್ವರೂಪನು,'ವಾಯೋರಗ್ನಿಃ' ಎಂದು ನಾಲ್ಕು ವಿಧವಾದ ವಾಯುವಿನಿಂದ, ನಾಲ್ಕು ವಿಧವಾದ ಅಗ್ನಿಗೆ ಸೃಷ್ಟಿಯನ್ನು ಹೇಳಿದರು. ಅಲ್ಲಿಯೂ ಶ್ರೀಹರಿಯೇ ಮುಖ್ಯವಾಗಿ ಅಗ್ನಿಶಬ್ದವಾಚ್ಯನು.) ಅದು ಹೇಗೆಂದರೆ— ಅಗಂ=(ನ ಗಚ್ಛತಿ ಎನ್ನುವ ವ್ಯುತ್ಪತ್ತಿಯಿಂದ ಸ್ವತಃ ಪ್ರವರ್ತಿಸದೆ ಇರತಕ್ಕದು ಜಗತ್ತು.) ಸಮಸ್ತ ಪ್ರಪಂಚವನ್ನು, ನಯನ್=ಒಯ್ಯತಕ್ಕ (ಆಯಾಯ ಕಾರ್ಯಗಳಲ್ಲಿ ನಿಯೋಗಿಸತಕ್ಕ) ಶ್ರೀ ಹರಿಯು, ಅಗ್ನಿಃ= ಮುಖ್ಯವಾಗಿ ಅಗ್ನಿಶಬ್ದವಾಚ್ಯನು. ('ಅಗ್ನೇರಾಪಃ' ಎಂದು ನಾಲ್ಕುವಿಧವಾದ ಅಗ್ನಿಯದ್ದೆಸೆಯಿಂದ, ನಾಲ್ಕುವಿಧಗಳಾದ ಜಲಗಳಿಗೆ ಸೃಷ್ಟಿಯನ್ನು ಹೇಳಿದರು. ಅಲ್ಲಿಯೂ ಮುಖ್ಯವಾಗಿ ಶ್ರೀ ಹರಿಯೇ 'ಆಪಃ' ಎನ್ನುವ ಶಬ್ದವಾಚ್ಯನು.) ಅದು ಹೇಗೆಂದರೆ— ಹರಿರೇವ ಶ್ರೀ ಪರ

ಮಾತ್ಮನೇ, ಆ ಪಾಲನಾಚ್ಚ=ಚೆನ್ನಾಗಿ ರಕ್ಷಿಸುವುದರಿಂದ, ಆಪಃ='ಆಪಃ' ಎನ್ನಿಸುತ್ತಾನೆ. ಅಂದರೆ, ಅಪ್ ಶಬ್ದವಾಚ್ಯನು. (ಶ್ರೀಹರಿಗೆ ಸ್ತ್ರೀರೂಪತ್ವವಿದ್ದಪ್ರಯುಕ್ತ ಸ್ತ್ರೀಲಿಂಗವು. ಬಹು ರೂಪತ್ವವಿದ್ದುದರಿಂದ ಆಪಃ ಎಂದು ಬಹುವಚನವೂ ಸಂಗತವಾಗುತ್ತದೆ. ಹೀಗೆಯೇ 'ಅದ್ಭ್ಯಃ ಪೃಥಿವೀ' ಎಂದು ನಾಲ್ಕು ವಿಧಗಳಾದ ಜಲಗಳದ್ದೆಶೆಯಿಂದ ನಾಲ್ಕು ವಿಧವಾದ ಪೃಥಿವಿಗೆ ಸೃಷ್ಟಿ ಯನ್ನು ಹೇಳಿದರು. ಅಲ್ಲಿಯೂ ಶ್ರೀಹರಿಯೇ ಮುಖ್ಯವಾಗಿ ಪೃಥಿವೀಶಬ್ದವಾಚ್ಯನು. ಅದು ಹೇಗೆಂದರೆ—) ಯತಃ = ಯಾವಕಾರಣದ್ದೆಸೆಯಿಂದ, ಪ್ರಥಿತಃ = ವಿಸ್ತೃತನಾಗಿರುತ್ತಾನೋ, (ಆದಪ್ರಯುಕ್ತ) ಪೃಥಿವೀ=ಪೃಥಿವೀಶಬ್ದವಾಚ್ಯನು. (ತಥಾಚ ನಾಲ್ಕುವಿಧವಾದ ಪೃಥಿವಿಯು ದ್ದೆಸೆಯಿಂದ 'ಪೃಥಿವ್ಯಾ ಓಷಧಯಃ' ಎಂದು ನಾಲ್ಕು ವಿಧಗಳಾದ ಓಷಧಿಗಳ ಸೃಷ್ಟಿಯನ್ನು ಹೇಳಿದರು. ಪಂಚಭೂತಗಳು ಸಮಾಪ್ತಗಳಾಗಿರುವುದರಿಂದ 'ಭೂತಂ' ಎನ್ನುವುದರ ಸ್ಥಾನದಲ್ಲಿ ಭೌತಿಕ ಎನ್ನುವ ಪದವನ್ನೂ, 'ಭೂತಾಭಿಮಾನಿ' ಎನ್ನುವ ಪದದ ಸ್ಥಾನದಲ್ಲಿ ಭೌತಿಕಾಭಿಮಾನಿ ಎನ್ನುವ ಪದವನ್ನೂ ಇಟ್ಟುಕೊಳ್ಳಬೇಕು. ಅಲ್ಲಿಯೂ ಓಷಧಿಶಬ್ದದಿಂದ ಮುಖ್ಯವಾಗಿ ಹರಿಯೇ ಹೇಳಲ್ಪಡುತ್ತಾನೆ. ಅದು ಹೇಗೆಂದರೆ,) ಉಷ್ಟಾನಾಂ=ಸಂಸಾರದಲ್ಲಿ ಸುಡಲ್ಪಟ್ಟವರಿಗೆ, ಆಶ್ರಯು ತ್ವೇನ=ಆಶ್ರಯನಾಗಿರುವುದರಿಂದ, ಸ ಏವ=ಆ ಶ್ರೀಹರಿಯೇ, ಓಷಧಿನಾಮಕಃ= (ಓಷಾಃ= ಸಂಸಾರದಲ್ಲಿ ಸುಡಲ್ಪಟ್ಟವರು, ಧೀಯಂತೇ=ಧರಿಸಲ್ಪಡುತ್ತಾರೆ. ಅಸ್ಮಿನ್=ಈ ಶ್ರೀಹರಿಯಲ್ಲಿ, ಎನ್ನುವ ವ್ಯುತ್ಪತ್ತಿಯಿಂದ), ಓಷಧಿಯೆಂದು ಹೆಸರುಳ್ಳವನು. (ಓಷಧಿಗಳಲ್ಲಿ ಅಂತರ್ಗತನಾದ ವನು ಸಂಸಾರದಲ್ಲಿ ಕ್ಲೇಶವನ್ನನುಭವಿಸುವವರಿಗೆ ಆಶ್ರಯನಾಗುವುದು ಹೇಗೆಂದರೆ,) ಓಷ ಧೀಷು=ವ್ರೀಹ್ಯಾದಿಗಳಲ್ಲಿ, ಸ್ಥಿತಃ=ಇರತಕ್ಕ, ವಿಷ್ಣುಃ=ಶ್ರೀ ಪರಮಾತ್ಮನು, ಕ್ಷುಧಿತೈಃ=ಜಾಠ ರಾಗ್ನಿಯಿಂದ ಸುಡಲ್ಪಟ್ಟವರಿಂದ, (ಹಸಿವೆ ಇರುವವರಿಂದ) ಆಶ್ರಿತಃ = ಆಶ್ರಯಿಸಲ್ಪಟ್ಟವನು, ಭವೇತ್=ಆಗುವನು. ('ಓಷಧೀಭ್ಯೋಽನ್ನಂ' ಎಂದು ನಾಲ್ಕು ವಿಧಗಳಾದ ವ್ರೀಹ್ಯಾದಿಗಳದ್ದೆಶೆ ಯಿಂದ ನಾಲ್ಕು ವಿಧವಾದ ಅನ್ನದ ಸೃಷ್ಟಿಯನ್ನು ಹೇಳಿದರು. ಅಲ್ಲಿಯೂ ಅನ್ನಶಬ್ದವು ವಿಷ್ಣುವಿ ನಲ್ಲಿಯೇ ಮುಖ್ಯವು. ಆ ಮೇಲೆ 'ಅನ್ನಾತ್ಪುರುಷಃ' ಎಂದು ನಾಲ್ಕು ವಿಧವಾದ ಅನ್ನದ್ದೆಶೆಯಿಂದ ಶರೀರ, ಶರೀರಾಭಿಮಾನಿ, ಆ ಎರಡರ ಅಂತರ್ಗತರೂಪ, ಹೀಗೆ ಮೂರು ವಿಧನಾದ ಪುರುಷನಿಗೆ ಸೃಷ್ಟಿಯನ್ನು ಹೇಳಿದರು. ಅಲ್ಲಿಯೂ ಪುರುಷ ಶಬ್ದದಿಂದ ಮುಖ್ಯವಾಗಿ ಹರಿಯೇ ಪ್ರತಿಪಾದಿಸ ಲ್ಪಡುತ್ತಾನೆ. ಅದು ಹೇಗೆಂದರೆ) ಯತಃ=ಯಾವ ಕಾರಣದ್ದೆಶೆಯಿಂದ, ಸಃ=ಶ್ರೀಪರಮಾತ್ಮನು, ಪುರಿ ಶೇತೇ=ಸರ್ವರ ಶರೀರದಲ್ಲಿ ನಿಯಾಮಕನಾಗಿದ್ದಾನೋ, ಅಥ=ಆದಕಾರಣ, ಪುರುಷ ಶ್ಚೇತಿ=ಪುರುಷನೆಂದೂ, ಗೀಯತೇ=ಗಾನಮಾಡಿಸಿಕೊಳ್ಳಲ್ಪಡುತ್ತಾನೆ ॥ ೨೦೪ ॥ ೨೦೫ ॥ ೨೦೬ ॥

ಈ ಪ್ರಕಾರ ಆತ್ಮಾದಿ ಶಬ್ದಗಳನ್ನು ವ್ಯಾಖ್ಯಾನಮಾಡಿ ಅವುಗಳ ಸೃಷ್ಟಿಯನ್ನು ವಿವರಿ ಸುತ್ತಾರೆ—

ಮೂ ॥ ಕ್ರಿಯಾಪ್ರವರ್ತಕತ್ವೇನ ಪ್ರಾದುರ್ಭಾವೋ ಹರೇರ್ಜನಿಃ ।
ಆಕಾಶಾದಿಷು ನಾನ್ಯಾಸ್ತಿ ಹ್ಯಭಿಮಾನೋಽಭಿಮಾನಿನಃ ।
ಅಭಿಮಾನಿ ಶರೀರಸ್ಯ ಸಾಕ್ಷಾದ್ಭೂತಸ್ಯ ಚೋದ್ಭವಃ ॥ ೨೦೭ ॥

ಅ ॥ ಆಕಾಶಾದಿಷು=ಆಕಾಶಮೊದಲಾದುವುಗಳಲ್ಲಿ, ಕ್ರಿಯಾಪ್ರವರ್ತಕತ್ವೇನ=ಆಯಾಯು ಕ್ರಿಯೆಯನ್ನು ಪ್ರವರ್ತಿಸಿಕೊಡುವುದರಿಂದ, ಪ್ರಾದುರ್ಭಾವಃ=ಅಭಿವ್ಯಕ್ತಿವಿಶೇಷವೇ, ಹರೇ ರ್ಜನಿಃ=ಶ್ರೀ ಪರಮಾತ್ಮನ ಉತ್ಪತ್ತಿಯು, ಅನ್ಯಾ=ಬೇರೆವಿಧವಾದ, ಜನಿಃ=ಉತ್ಪತ್ತಿಯು, ನ=ಇಲ್ಲ. ಹಿ='ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ' ಇತ್ಯಾದಿ ಶ್ರುತಿಪ್ರಸಿದ್ಧವು,

ಅಭಿಮಾನಿನಃ=ಭೂತಾದ್ಯಭಿಮಾನಿಗೆ, ಅಭಿಮಾನಃ=ನನ್ನದು ಇದು ಎನ್ನುವ ಬುದ್ಧಿಯೇ, ಜನಿಃ=ಉತ್ಪತ್ತಿಯು. ಅಭಿಮಾನಿ ಶರೀರಸ್ಯ=ಅಭಿಮಾನಿಯ ಶರೀರಕ್ಕೂ, ಭೂತಸ್ಯ ಚ= ಪಂಚಭೂತಗಳಿಗೂ, ವ್ರೀಹಿಮೊದಲಾದ ಭೌತಿಕಗಳಿಗೂ, ಸಾಕ್ಷಾತ್=ಮುಖ್ಯವಾಗಿ, ಉದ್ಭವಶ್ಚ=ಉತ್ಪತ್ತಿಯೇ, ಜನಿಃ=ಉತ್ಪತ್ತಿಯು ॥ ೨೦೭ ॥

ಹಿಂದೆ ಹೇಳಿದಪ್ರಕಾರ ಆತ್ಮ-ಆಕಾಶ-ವಾಯು-ಅಗ್ನಿ-ಅಪ್-ಪೃಥಿವಿ-ಓಷಧಿ-ಅನ್ನ-ಪುರುಷ ಪದಗಳಿಂದ ಮುಖ್ಯವಾಗಿ ಶ್ರೀ ಹರಿಯೇ ಹೇಳಿಸಿಕೊಳ್ಳಲ್ಪಡುತ್ತಾನೆ, ಈ ಪದಗಳಿಂದ ಶ್ರೀ ಹರಿಯಿಂದ ಬೇರೆಯಾದ ಭೂತಾದಿಗಳು ಅಮುಖ್ಯವೃತ್ತಿಯಿಂದ ಹೇಳಲ್ಪಡುತ್ತವೆಂದಾದರೆ ಪ್ರಕೃತಕ್ಕೆ ಏನಾಯಿತೆಂದರೆ—

**ಮೂ ॥ ಏವಂ ದೇಹಾದಿಪರ್ಯಂತಮಾಗತಂ ಹರಿಮೇವ ತು ॥ ೨೦೮ ॥**
**ಪರಾಮೃಶತಿ ತಸ್ಯೈವ ಪಂಚರೂಪತ್ವವಿತ್ತಯೇ ।**
**ತ್ಯಕ್ತ್ವಾ ಭೂತಾದಿಕಂ ಸರ್ವಂ ಸ ವಾ ಏಷ ಇತಿ ಶ್ರುತಿಃ ॥ ೨೦೯ ॥**

ಅ ॥ ಸ ವಾ ಏಷ ಇತಿ ಶ್ರುತಿಃ=ಸವಾ ಏಷ ಪುರುಷಃ ಎನ್ನುವ ಶ್ರುತಿಯು,ಭೂತಾದಿಕಂ ಸರ್ವಂ=ಪ್ರಕೃತವಾದಾಗ್ಯೂ ಭೂತಮೊದಲಾದುದೆಲ್ಲವನ್ನೂ, ತ್ಯಕ್ತ್ವಾ=ಬಿಟ್ಟು, ಏವಂ=ಹಿಂದೆ ಹೇಳಿದಪ್ರಕಾರ, ದೇಹಾದಿಪರ್ಯಂತಂ=ಆತ್ಮವನ್ನು ಆರಂಭಿಸಿ ದೇಹಪರ್ಯಂತವಾಗಿ,= ಆಗತಂ=ಆ ಶಬ್ದಗಳಿಂದ ಪ್ರಕೃತನಾದ, ಹರಿಮೇವ=ಶ್ರೀ ಪರಮಾತ್ಮನನ್ನೇ, ಪರಾಮೃಶತಿ= ಪರಾಮರ್ಶಮಾಡುತ್ತದೆ. ತಸ್ಯೈವ ತು=ಆ ಸೃಷ್ಟಿಕರ್ತನಾದ ಪರಮಾತ್ಮನಿಗೇನೇ, ಪಂಚ ರೂಪತ್ವವಿತ್ತಯೇ=ಶರೀರದಲ್ಲಿ ಅನ್ನಮಯಮೊದಲಾದ ಪಂಚರೂಪತ್ವವನ್ನು ತಿಳಿಸುವುದಕ್ಕಾಗಿ.

ತಾ ॥ ನ್ಯಾಯಸುಧಾ—(1) ಅನ್ನಮಯಾದಿಗಳಿಗೆ ಪರಬ್ರಹ್ಮತ್ವವನ್ನು ಇಟ್ಟುಕೊಂಡರೆ 'ಸ ವಾ ಏಷ ಪುರುಷಃ' ಎನ್ನುವ ಪರಾಮರ್ಶವಿರೋಧವಿಲ್ಲವು. ಆತ್ಮಪದದಿಂದ ಹೇಳಲ್ಪಟ್ಟದ್ದ ಕ್ಕೇನೇ ಇದು ಪರಾಮರ್ಶವೆಂದು ಸ್ವೀಕಾರಮಾಡಿದ್ದೇವೆ. ಆತ್ಮಪದದಿಂದ ಹೇಳಲ್ಪಟ್ಟವನು ಪರಬ್ರಹ್ಮನಲ್ಲವೆಂದು ಅಲ್ಲ. 'ತಸ್ಮಾದೇತಸ್ಮಾದಾತ್ಮನಃ=ಪರಬ್ರಹ್ಮನ ಪ್ರಾಪ್ತಿಯನ್ನು ಇಚ್ಛಿಸುವವ ನಿಂದ ತಿಳಿಯಲರ್ಹನೆಂದು ಹೇಳಲ್ಪಟ್ಟ ಮತ್ತು ಸತ್ಯಜ್ಞಾನ ಅನಂತನೆಂದು ಲಕ್ಷಿತನಾದ ಪರಮಾತ್ಮನಿಂದ ಎನ್ನುವಲ್ಲಿ ಪ್ರಸ್ತುತವಾದುದನ್ನೇ 'ಸವಾ ಏಷ ಪುರುಷಃ' ಎನ್ನುವಲ್ಲಿ ಅನು ಸಂಧಾನ ಮಾಡಿರುತ್ತೇವೆ. (2) ಸನ್ನಿಹಿತವಾದ ಪರಾಮರ್ಶವನ್ನು ಬಿಟ್ಟು ದೂರದಲ್ಲಿ ಪ್ರಕೃತ ವಾದುದುದನ್ನು ಪರಾಮರ್ಶ ಮಾಡಿಕೊಳ್ಳುವುದು ಅನುಚಿತವೆಂದು ಹೇಳಕೂಡದು. ಆತ್ಮ ಶಬ್ದವನ್ನು ಆರಂಭಿಸಿ ಪುರುಷಪರ್ಯಂತ ಎಲ್ಲಾ ಶಬ್ದಗಳಿಂದಲೂ ಆ ಶ್ರೀ ಹರಿಯೇ ಪ್ರಕೃತ ನಾಗಿರುತ್ತಾನೆಂದು ಅಂಗೀಕರಿಸಿರುತ್ತೇವೆ. (3) ಹಾಗಾದರೆ ಈಶ್ವರನಿಗೆ ಉತ್ಪತ್ತಿಯೇ ಅನುಚಿತ ವೆಂದು ಹೇಳಕೂಡದು. ಉತ್ಪತ್ತಿಪ್ರತಿಪಾದಕ ವಾಕ್ಯವು ಪ್ರಾದುರ್ಭಾವವಿಷಯಕವು. ಈ ವ್ಯಾಖ್ಯಾನವು ಅಪ್ರಾಮಾಣಿಕವೆಂದು ಹೇಳಕೂಡದು. 'ಕಾರಣತ್ವೇನ ಚಾಕಾಶಾದಿಷು' ಎನ್ನು ವಲ್ಲಿ ಅವಾಂತರ ಕಾರಣಭೂತವಾದ ಆಕಾಶಾದಿ ಪುರುಷಾಂತ ಶಬ್ದಗಳಿಂದ ಶ್ರೀ ಹರಿಯೇ ಹೇಳಲ್ಪಡುತ್ತಾನೆಂದು ಉಪಪಾದಿಸುವೆವು. (4) ಹಾಗಾದರೆ 'ಆಕಾಶಃ ಸಂಭೂತಃ' ಇತ್ಯಾದಿ ಗಳಲ್ಲಿ ಶ್ರೀಹರಿಯು ಪ್ರಾದುರ್ಭೂತನಾದನು, ಎಂದರ್ಥವನ್ನು ಇಟ್ಟುಕೊಂಡರೆ ಪಂಚಭೂತಾದಿ ಗಳ ಸೃಷ್ಟಿಯಲ್ಲಿ ಪ್ರಮಾಣವೇ ಇಲ್ಲವೆಂದಾಗಬೇಕಾಗುವುದು ಎಂದು ಹೇಳಕೂಡದು. ಭೂತಾದಿಗಳು ಹುಟ್ಟಿದವು ಎನ್ನುವ ಅರ್ಥವನ್ನೂ ಅಂಗೀಕರಿಸುತ್ತೇವೆ. ಅಂದರೆ, ಆಕಾಶಾದಿ

ಶಬ್ದಗಳು ಅಮುಖ್ಯವೃತ್ತಿಯಿಂದ ಪಂಚಭೂತಾದಿರೂಪ ಅರ್ಥವನ್ನೂ ಹೇಳುತ್ತವೆ. ಸಮಾ ಕರ್ಷಾದ್ಯಧಿಕರಣಗಳಲ್ಲಿ ಒಂದೇ ಶಬ್ದಕ್ಕೆ ಅನೇಕಾರ್ಥಗಳು ಕೂಡಬಹುದೆಂದು ಉಪಪಾದಿಸು ವೆವು. (5) ಹೀಗಾದರೆ, ಪಂಚಭೂತಾದಿಗಳಿಗೂ ಪ್ರಾದುರ್ಭಾವರೂಪ ಅರ್ಥವಾತ್ರ ಬರ ಬೇಕಾಗುವುದು ಎಂದು ಹೇಳಕೂಡದು. ಸಾಮಾನ್ಯವಾಗಿ ಶ್ರುತವಾದ 'ಸಂಭೂತಃ' ಎನ್ನುವ ಶಬ್ದಕ್ಕೆ ಯಥಾಯೋಗ್ಯವಾಗಿ ವ್ಯಾಖ್ಯಾನವು ಕೂಡುತ್ತದೆ. ಹೀಗಾದಾಗ್ಯೂ ಅನ್ನರಸಮಯವು ಪ್ರಕೃತವಾದ ಭೂತಾದ್ಯಾತ್ಮಕವೇ ಆಗಬೇಕಾಗುವುದು. ಅಂದರೆ, ಆಕಾಶಾದಿ ಶಬ್ದಗಳಿಂದ ಯಾವುದು ನಾಲ್ಕು ವಿಧವಾದ ಆಕಾಶಾದಿಗಳು ಪ್ರಕೃತಗಳಾಗಿವೆಯೋ ಆ ಎಲ್ಲಾದಕ್ಕೂ ಅನ್ನರಸ ಮಯತ್ವವು ಹೇಳಲ್ಪಡುತ್ತದೆಂದು ಪ್ರಾಪ್ತವಾಗಬೇಕಾಗುವುದು ಎಂದು ಹೇಳಕೂಡದು. ಭೂತಾದಿಗಳು ಪ್ರಕೃತಗಳಾದಾಗ್ಯೂ ಅವುಗಳನ್ನು ಬಿಟ್ಟು ಶ್ರೀ ಹರಿಗೇನೇ ಪರಾಮರ್ಶವೆಂದಂಗೀ ಕರಿಸುತ್ತೇವೆ. ಇದು ಅನ್ಯಾಯವಲ್ಲ, ಆಕಾಶಾದಿ ಶಬ್ದಗಳು ಶ್ರೀ ಹರಿಯಲ್ಲಿಯೇ ಮುಖ್ಯಗಳಾ ಗಿರುವುದರಿಂದ ಅವನೇ ಮುಖ್ಯವಾಗಿ ಬುದ್ಧಿಸನ್ನಿಹಿತನಾಗಿದ್ದಾನೆ. (6) ಹಾಗಾದರೆ, ಈಶ್ವರ ನನ್ನು ಪರಾಮರ್ಶಮಾಡಿಕೊಂಡದ್ದೂ ವ್ಯರ್ಥವೆಂದು ಹೇಳಕೂಡದು. ಶ್ರೀ ಹರಿಗೇನೇ ಅನ್ನ ಮಯಾದಿ ಪಂಚರೂಪತ್ವವು ಎಂದು ತಿಳಿಸುವುದಕ್ಕಾಗಿ ಪ್ರಕರಣಾಂತರಾರಂಭವು. ಪ್ರಕ ರಣಾಂತರಾರಂಭವು ಶ್ರೀ ಹರಿಯ ಲಕ್ಷಣವನ್ನು ವಿವರಿಸುವುದಕ್ಕಾಗಿ ಉಪಯುಕ್ತವಾಗುವುದು. ತಥಾ ಚ ಅನ್ನಮಯನಿಗೆ ಬ್ರಹ್ಮತ್ವವನ್ನು ಇಟ್ಟುಕೊಂಡರೆ ಯಾವುದೊಂದು ಅನುಪಪತ್ತಿಯೂ ಇಲ್ಲದಿರುವುದರಿಂದ ಅನ್ನಮಯದ ಪ್ರವಾಹದಲ್ಲಿಯೇ ಸೇರಿರುವ ಪ್ರಾಣಮಯಾದಿಗಳು ಬ್ರಹ್ಮ ರಲ್ಲವೆಂದು ಸರ್ವಥಾ ಕಲ್ಪಿಸಕೂಡದು ॥ ೨೦೮ ॥ ೨೦೯ ॥

ಹಾಗಾದರೆ, ಹೀಗೆ ಬಹುಪ್ರಯತ್ನವೇತಕ್ಕೆ? ಶರೀರವನ್ನುಮಾತ್ರ ಪರಾಮರ್ಶಮಾಡಿ ಕೊಳ್ಳುವುದೆಂದು ಏಕೆ ಆಗಬಾರದು? ಎಂದು ಹೇಳಕೂಡದು. ಹಾಗೆ ಇಟ್ಟುಕೊಳ್ಳುವುದಾದರೆ 'ಏಷಃ ಪುರುಷಃ' ಇಷ್ಟರಿಂದಲೇ ಪೂರ್ಣವಾಗುವುದರಿಂದ 'ಸವಾ ಏಷ ಪುರುಷಃ' ಎನ್ನುವಲ್ಲಿದ್ದ 'ಸಃ' ಎನ್ನುವುದು ವ್ಯರ್ಥವಾಗಬೇಕಾಗುವುದು. ನಿಮ್ಮ (ಸಿದ್ಧಾಂತಿಗಳ) ಪಕ್ಷದಲ್ಲಿಯೂ ವ್ಯರ್ಥವೇ ಎಂದರೆ ಹಾಗೆ ಹೇಳಕೂಡದು. ಏಕೆಂದರೆ–

**ಮೂ ॥ ಸ ಇತ್ಯಾತ್ಮಪದೋದ್ದಿಷ್ಟಃ ಏಷ ಜೀವ ಶರೀರಗಃ |**
**ಸಾರಾನ್ನಮಯ ಏವಾಯಂ ನ ಲೋಕಾನ್ನಮಯಃ ಪ್ರಭುಃ |**
**ಇತಿ ತಂ ರಸಶಬ್ದೇನ ವಿಶಿನಷ್ಟಿ ಶರೀರಗಂ ॥ ೨೧೦ ॥**

ಅ ॥ **ಸ ಇತಿ**='ಸ ವಾ ಏಷ ಪುರುಷೋಽನ್ನರಸಮಯಃ' ಎನ್ನುವಲ್ಲಿದ್ದ ಸಃ ಎನ್ನುವ ಪದದಿಂದ, ಆತ್ಮಪದೋದ್ದಿಷ್ಟಃ=ಆತ್ಮಪದದಿಂದ ಹೇಳಲ್ಪಟ್ಟವನು, (ಪರಾಮರ್ಶಿಸಲ್ಪಡುತ್ತಾನೆ.) ಏಷ ಇತಿ=ಏಷಃ ಎನ್ನುವ ಪದದಿಂದ, ಜೀವಶರೀರಗಃ=ಸರ್ವ ಜೀವರ ಶರೀರದಲ್ಲಿ ಅಂತರ್ಗತ ನಾಗಿ ನಿಯಾಮಕನಾದವನು, (ಪರಾಮರ್ಶಿಸಲ್ಪಡುತ್ತಾನೆ.) ಅಯಂ=ಈ, ಪ್ರಭುಃ=ಸರ್ವ ಸಮರ್ಥನಾದ ಶ್ರೀಹರಿಯು, ಸಾರಾನ್ನಮಯ ಏವ=ಶ್ರೇಷ್ಠವಾದ ಅತ್ತೃತ್ವಾದಿ ಲಕ್ಷಣ ಪ್ರಾಚುರ್ಯವುಳ್ಳವನೇ. ಲೋಕಾನ್ನಮಯಃ=ಲೌಕಿಕವಾದ ಅನ್ನ ಪ್ರಚುರನು, ನ=ಅಲ್ಲ, ಇತಿ=ಈ ಪ್ರಕಾರವಾಗಿ, (ಜ್ಞಾಪಯಿತುಂ=ತಿಳಿಸುವುದಕ್ಕಾಗಿ,) ಶರೀರಗಂ=ಶರೀರಾಂತರ್ಗತ ನಾದ, ತಂ=ಆ ಶ್ರೀ ಹರಿಯನ್ನು, ರಸಶಬ್ದೇನ=ರಸ ಎನ್ನುವ ಶಬ್ದದಿಂದ, (ಶ್ರುತಿಃ= ಶ್ರುತಿಯು,) ವಿಶಿನಷ್ಟಿ=ವಿಶೇಷಣದಿಂದ ಯುಕ್ತವನ್ನಾಗಿಮಾಡುತ್ತದೆ.

ತಾ ॥ ನ್ಯಾಯಸುಧಾ—(1) ಶರೀರಕ್ಕೆ ಪರಾಮರ್ಶವೆಂದು ಅಂಗೀಕರಿಸಿದರೆ 'ಸವಾ ಏಷ ಪುರುಷೋನ್ನಮಯಃ' ಎಂದೇ ಹೇಳಬೇಕಿದ್ದಿತು. ಪ್ರಯೋಜನವಿಲ್ಲದಿರುವುದರಿಂದ 'ರಸ' ಶಬ್ದವು ವ್ಯರ್ಥವಾಗುವುದು. 'ಅನ್ನಾತ್ಪುರುಷಃ' ಎಂದೇ ಪ್ರಕೃತವಾಗಿದೆ. ನಮ್ಮ (ಸಿದ್ಧಾಂತಿಗಳ) ಪಕ್ಷದಲ್ಲಿಯೂ ರಸಶಬ್ದವು ವ್ಯರ್ಥವೆನ್ನಕೂಡದು. 'ಅನ್ನಮಯಃ' ಎಂದಿಷ್ಟೇ ಹೇಳಿದರೆ ಪ್ರಾಕೃತಾನ್ನಮಯತ್ವವೇ ಪ್ರತೀತವಾಗುವುದು. ಅಂತಹ ಪ್ರತೀತಿಯು ಬರಬಾರದೆನ್ನುವ ಉದ್ದೇಶದಿಂದ ಸಾರ್ಥಕವೇ ಆಗಿದೆ.(2)'ರಸಃ ಸಾರೋ ವರಶ್ಚೇತಿ ಶಬ್ದಾಃ ಪರ್ಯಾಯವಾಚಕಾಃ' ಎನ್ನುವ ಸ್ಮೃತಿಯಿಂದ ರಸಶಬ್ದವು ಸಾರವಾಚಕವಾಗಿದೆ ॥ ೨೧೦ ॥

(1) ಮತ್ತು ಶರೀರಕ್ಕೆ ಪರಾಮರ್ಶವೆಂದು ಇಟ್ಟುಕೊಂಡರೆ "ತಸ್ಯೇದಮೇವ ಶಿರಃ । ಅಯಂ ದಕ್ಷಿಣಃಪಕ್ಷಃ । ಅಯಮುತ್ತರಃ ಪಕ್ಷಃ । ಅಯಮಾತ್ಮಾ । ಇದಂ ಪುಚ್ಛಂ ಪ್ರತಿಷ್ಠಾ ॥" (ತೈ. ಉ. ಪು. ೧೨೪) ಎನ್ನುವುದೆಲ್ಲವೂ ವ್ಯರ್ಥವೇ ಆಗಬೇಕಾಗುವುದು. ಶರೀರ ಶಿರಸ್ಸು ಮೊದಲಾದುದು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಉಪದೇಶವೇ ಬೇಕಾಗಿಲ್ಲ. (2) ಹಾಗಾದರೆ ಈಶ್ವರನೆಂದು ಇಟ್ಟುಕೊಂಡರೂ ಅನುಪಪತ್ತಿಯು ಇದ್ದೇ ಇದೆ. ಈಶ್ವರನಿಗೆ ಶಿರಸ್ಸು ಮೊದಲಾದ ಅವಯವಗಳು ಇರುವುದಿಲ್ಲ ಎಂದರೆ— ಹಾಗೆ ಹೇಳಕೂಡದು. 'ಪ್ರಕಾಶವಚ್ಚಾವೈಯರ್ಥ್ಯಂ' ಎನ್ನುವ ಸೂತ್ರದಿಂದ 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' ಇತ್ಯಾದಿ ಶ್ರುತಿಗಳಿಗೆ ವೈಯರ್ಥ್ಯವು ಬರಬಾರದೆನ್ನುವ ಉದ್ದೇಶದಿಂದ ಲೋಕವಿಲಕ್ಷಣವಾದ ವಿಗ್ರಹವು ಇದೆ ಎಂದು ಹೇಳುವರು. (3) ಆದಾಗ್ಯೂ ಅನುಪಪತ್ತಿಯು ಇದ್ದೇ ಇದೆ. ಈಶ್ವರನ ಶಿರಸ್ಸು ಮೊದಲಾದವುಗಳು ಪ್ರತ್ಯಕ್ಷಗಳಾಗದಿರುವುದರಿಂದ 'ಇದಂ'ಎಂದು ನಿರ್ದೇಶವೇ ಕೂಡಲಾರದು, ಎಂದರೆ ಹಾಗೆಹೇಳ ಕೂಡದು. ಲಕ್ಷಣಾ (ಅಮುಖ್ಯ) ವೃತ್ತಿಯಿಂದ ಕೂಡಬಹುದೆನ್ನುತ್ತಾರೆ.

ಮೂ ॥ ಇದಮಿತ್ಯೇವ ನಿರ್ದೇಶೋ ವಸ್ತ್ರಪ್ರಾವೃತವದ್ವಿಭೋಃ ॥ ೨೧೧ ॥
ಶಿರಆದೇರ್ಭವೇಜ್ಜೀವ ಶಿರ ಆದೌ ವ್ಯವಸ್ಥಿತೇಃ ।
ತಂ ವಿದಿತ್ವಾಽಸ್ಯ ಮುಕ್ತಿಃಸ್ಯಾನ್ನಾನ್ಯ ಜ್ಞಾನಾತ್ಕಥಂಚನ ॥ ೨೧೨ ॥

ಅ ॥ ಇದಮಿತಿ ನಿರ್ದೇಶಃ='ತಸ್ಯೇದಮೇವ ಶಿರಃ' ಇತ್ಯಾದಿಗಳಲ್ಲಿದ್ದ 'ಇದಂ ಎನ್ನುವ ನಿರ್ದೇಶವು, (ಪ್ರತ್ಯಕ್ಷವಾಗದಿರುವುದಾದರೂ ಪರಮೇಶ್ವರನ ಶಿರಸ್ಸು ಮೊದಲಾದುದರಲ್ಲಿ ಲಕ್ಷಣಾವೃತ್ತಿಯಿಂದ) ಭವೇದೇವ=ಕೂಡಬಹುದು. ವಿಭೋಃ=ಶ್ರೀ ಹರಿಯ, ಶಿರ ಆದೇಃ= ಶಿರಸ್ಸುಮೊದಲಾದುದಕ್ಕೆ, ಜೀವ ಶಿರ ಆದೌ=ಜೀವ=ಜೀವರ, ಶಿರ ಆದೌ=ಪ್ರತ್ಯಕ್ಷವಾದ ಶಿರಸ್ಸು ಮೊದಲಾದುದರಲ್ಲಿ, ವ್ಯವಸ್ಥಿತೇಃ=ಸ್ಥಿತಿಯಿದ್ದಪ್ರಯುಕ್ತ, (ಲಕ್ಷಣಾಕ್ಕೆ ಕಾರಣವಾದ ಸಂಬಂಧವನ್ನು ತೋರಿಸಿದಂತೆಯೇ ಆಯಿತು.) ವಸ್ತ್ರಪ್ರಾವೃತವತ್=ವಸ್ತ್ರದಿಂದ ಮುಚ್ಚಲ್ಪಟ್ಟ ಜಾನು ಮೊದಲಾದುದು ಪ್ರತ್ಯಕ್ಷವಾಗದಿರುವುದಾದರೂ ಪ್ರತ್ಯಕ್ಷವಾದ ವಸ್ತ್ರದ ಸನ್ನಿಧಾನದಿಂದ 'ಇದಂ'=ಇದುಮೊಳಕಾಲು ಎನ್ನುವ ನಿರ್ದೇಶವು ಹೇಗೆ ಕೂಡುತ್ತದೋ ಹಾಗೆಯೇ ಪ್ರಕೃತದಲ್ಲಿಯೂ ಇಟ್ಟುಕೊಳ್ಳಬೇಕು. ತಂ=ಆ ಪರಮಾತ್ಮನನ್ನು, ವಿದಿತ್ವಾ=ತಿಳಿದುಕೊಂಡು, (ಸಾಕ್ಷಾತ್ಕರಿಸತಕ್ಕ) ಅಸ್ಯ=ಈ ಜ್ಞಾನಿಗೆ, ಮುಕ್ತಿಃ=ಮೋಕ್ಷವು, ಸ್ಯಾತ್=ಆಗುವುದು. ಅನ್ಯ ಜ್ಞಾನಾತ್=ಬೇರೆಯವರ ಜ್ಞಾನದಿಂದ, ಕಥಂಚನ=ಯಾವ ಪ್ರಕಾರದಿಂದಲೂ, ಮುಕ್ತಿಃ= ಮೋಕ್ಷವು, ನ ಸ್ಯಾತ್=ಆಗಲಾರದು.

ತಾ ॥ ನ್ಯಾಯಸುಧಾ—(1) ಮುಖ್ಯ ಪ್ರಯೋಗವನ್ನು ಬಿಟ್ಟು ಲಾಕ್ಷಣಿಕ ಪ್ರಯೋಗ ಮಾಡಲಿಕ್ಕೆ ಪ್ರಯೋಜನವನ್ನು ಹೇಳಬೇಕು. 'ಗಂಗಾಯಾಂ ಘೋಷಃ' ಇತ್ಯಾದಿ ಲಾಕ್ಷಣಿಕ

ಪ್ರಯೋಗ ಸ್ಥಳದಲ್ಲಿ ಶಬರರ ಮನೆಯು ಭಾಗೀರಥೀತೀರದಲ್ಲಿದ್ದಪ್ರಯುಕ್ತ ಪವಿತ್ರವಾಗಿದೆ ಎಂದು ತಿಳಿಸುವುದು ಪ್ರಯೋಜನವೆಂದರೆ—ಹಾಗೆ ಹೇಳಕೂಡದು. ಪ್ರಕೃತದಲ್ಲಿ ರೂಢ ಲಕ್ಷಣವಾಗಿದೆ, ಎನ್ನುವ ಅಭಿಪ್ರಾಯದಿಂದ 'ವಸ್ತ್ರಪ್ರಾವೃತವತ್' ಎಂದು ಹೇಳಿರುವರು. (2) ಮುಖ್ಯಾರ್ಥದಲ್ಲಿ ಬಾಧಕವಿಲ್ಲದಿರುವ ಪ್ರಯುಕ್ತ ಲಕ್ಷಣಾವನ್ನು ಏಕೆ ಆಶ್ರಯಿಸಿದ್ದೆಂದು ಹೇಳಕೂಡದು. ಶರೀರವೆಂದು ಇಟ್ಟುಕೊಂಡರೆ ವೈಯರ್ಥ್ಯವೆನ್ನುವುದು ಸ್ಪಷ್ಟವಾಗಿಯೇ ತೋರುವುದು. ಮತ್ತು 'ಸರ್ವಮೇವ ತ ಆಯುರ್ಯಂತಿ' ಎಂದು ಪ್ರಾಣಮಯನ ಜ್ಞಾನ ದಿಂದ ಮೋಕ್ಷವು ಶ್ರುತವಾಗುತ್ತದೆ 'ಸರ್ವಮಾಯುಃ' ಎಂದರೆ ಯಾವಾಗಲೂ ಮರಣವಿಲ್ಲ ದಿರುವುದೆಂದೇ. ಯಾವಾಗಲೂ ಮರಣವಿಲ್ಲದಿರುವುದು ಮೋಕ್ಷಹೊರತು ಬೇರೆ ಕೂಡಲಾರದು. ಶರೀರವೆಂದು ಇಟ್ಟುಕೊಂಡರೆ ಮೋಕ್ಷವೇ ಕೂಡಲಾರದು. ಏಕೆಂದರೆ—'ತಮೇವಂ ವಿದ್ವಾನಮೃತ ಇಹ ಭವತಿ' ಹೀಗೆ ಪರಮಾತ್ಮನನ್ನು ತಿಳಿದವನು ಮುಕ್ತನಾಗುತ್ತಾನೆ— ಇತ್ಯಾದಿ ಶ್ರುತಿವಿರೋಧವು ಬರುತ್ತದೆ. (3) ಮತ್ತು ಬ್ರಹ್ಮಶಬ್ದ ಮಂತ್ರವರ್ಣಿಕ ಗಾನಾದಿ ಸಿದ್ಧಾಂತ ಸಾಧಕಗಳು ಅನ್ನಮಯಾದಿ ಶಬ್ದವಾಚ್ಯಗಳು ಶರೀರಗಳೆಂದು ಇಟ್ಟುಕೊಂಡರೆ ಬಾಧಕಗಳೆಂದು ತಿಳಿಯತಕ್ಕದ್ದು.

## ಸಾರಾಂಶ.

ಸ. ರ. ವಿ— (1) 'ತದೇಷಾಽಭ್ಯುಕ್ತಾ। ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಹೇಳಿದ ಅರ್ಥವನ್ನು ವಿಸ್ತರಿಸುವಪ್ರಯುಕ್ತ ಆನಂದಮಯಾದಿ ವಾಕ್ಯಗಳಿಂದ ಬ್ರಹ್ಮನಿಂದ ವ್ಯತಿರಿಕ್ತಗಳಾದ ಕೋಶಾದಿಗಳು ಹೇಳಲ್ಪಡುವುದಿಲ್ಲ. (2) 'ಮಮ ಯೋನಿರ್ಮಹದ್ಬ್ರಹ್ಮ' ಇತ್ಯಾದಿ ವಾಕ್ಯಗಳಲ್ಲಿ ಪ್ರಕೃತ್ಯಾದಿಗಳೇ ಪ್ರತಿಪಾದಿಸಲ್ಪಡುತ್ತವೆಂದು ಹೇಳಕೂಡದು. ಅಲ್ಲಿಯೂ ಬ್ರಹ್ಮಶಬ್ದಪ್ರಯೋಗವಿದೆ. ಮತ್ತು 'ಬ್ರಹ್ಮವಿದಾಪ್ನೋತಿ ಪರಂ । ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತಾ ॥ (ಪು. ೧೨೩) ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನ ॥ (ಪು. ೧೨೭). ವಿಜ್ಞಾನಂ ಬ್ರಹ್ಮ ಚೇದ್ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ । ಸರ್ವಾನ್ ಕಾಮಾನ್ ಸಮಶ್ನುತೇ ॥ (ತೈ. ಉ. ಪು. ೧೨೮.) ಇದು ಮೊದಲಾದ ಮುಕ್ತಿಶ್ರುತಿಗಳಿಂದ ವಿರೋಧವೂ ಅದೆ. (3) ಪ್ರಕೃತ್ಯಾದಿಗಳ ಜ್ಞಾನದಿಂದಲೂ ಮೋಕ್ಷವೆಂದು ಹೇಳಕೂಡದು. ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ । ಎಂದು ಶ್ರುತ್ಯಂತರ ದಿಂದ ವಿರೋಧವೂ ಅದೆ. ಈ ವಚನವು ಇತರ ವಿಷಯಕವೂ ಆಗಲಾರದು. 'ಸಹಸ್ರಶೀರ್ಷಾ ಪುರುಷಃ' ಎಂದು ಉಪಕ್ರಮದಲ್ಲಿ ಪುರುಷಶಬ್ದವಿದ್ದಪ್ರಯುಕ್ತ ಅದರಿಂದ ವಿರೋಧವು ಬರುತ್ತದೆ. ಪುರುಷಶಬ್ದವಾದರೂ ಕೇವಲ ವಿಷ್ಣುವಿಷಯಕವೇ ಸರಿ. (4) ಉಪಕ್ರಮದಲ್ಲಿ ಬ್ರಹ್ಮಶಬ್ದದಿಂದ ನಿರ್ದಿಷ್ಟನಾದ ವಿಷ್ಣುವೇ ಆತ್ಮಶಬ್ದದಿಂದಲೂ ನಿರ್ದಿಷ್ಟನಾಗಿದ್ದಾನೆ. ಅಂತಹ ಆತ್ಮನದ್ದೆಶೆಯಿಂದ ಆಕಾಶಶಬ್ದವಾಚ್ಯವಾದ ನಾಲ್ಕು ವಸ್ತುಗಳ ಸೃಷ್ಟಿಯು 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿಗಳಿಂದ ಯಥಾಯೋಗ್ಯವಾಗಿ ಹೇಳಲ್ಪಡುತ್ತದೆ ॥ ೨೧೧ ॥ ೨೧೨ ॥ ಸೂ. ॥ ೧೬ ॥

ಸ. ಚ. ವಿ.— 'ಏತಮಾನಂದಮಯಮಾತ್ಮಾನಮುಪಸಂಕ್ರಾಮ್ಯ' ಇತ್ಯಾದಿ ಗಳಲ್ಲಿ ಹೇಳಿದ ಯುಕ್ತಿಯಿಂದಲೇ ಬ್ರಹ್ಮಾದಿಗಳನ್ನು ಪರಿತ್ಯಾಗಮಾಡಲಿಕ್ಕೆ ಯುಕ್ತವಾಗದಿರು

ವುದರಿಂದ ಆ ಬ್ರಹ್ಮಾದಿಗಳಿಗೂ, ವಿಷ್ಣುವಿಗೂ ಐಕ್ಯವಿದ್ದಪ್ರಯುಕ್ತ ಬ್ರಹ್ಮಾದಿಗಳಿಗೂ ಆನಂದ ಮಯತ್ವವು ಬರಲಿ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವು.

ನ್ಯಾಯಸುಧಾ— ಆನಂದಮಯಾದಿಗಳು ವಿರಿಂಚಾದಿಗಳೂ ಆಗುವರು ಮುಕ್ತಿಗೆ ಕಾರಣವಾದ ಜ್ಞಾನವಿಷಯತ್ವ ಮೊದಲಾದ ಬ್ರಹ್ಮಧರ್ಮಗಳು ಜೀವಬ್ರಹ್ಮರಿಗೆ ಅಭೇದವಿದ್ದ ಪ್ರಯುಕ್ತ ಜೀವರಿಗೂ ಕಥಂಚಿತ್ ಕೂಡಬಹುದು ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವು.

## "ಓಂ ಭೇದವ್ಯಪದೇಶಾಚ್ಚ ಓಂ" ಸೂ. ॥ ೧೭ ॥

ಆನಂದಮಯನದ್ದೆಶೆಯಿಂದ ಭೇದವನ್ನು ಹೇಳಿರುವಪ್ರಯುಕ್ತ ಆನಂದಮಯನು ವಿಷ್ಣು ವ್ಯತಿರಿಕ್ತರಾದ ಜೀವಾದಿಗಳು ಆಗಲಾರರು. 'ಸ ಏಕೋ ಬ್ರಹ್ಮಣ ಆನಂದಃ' ಇತ್ಯಾದಿ ಗಳಿಂದ ವಿರಿಂಚಾದಿಗಳಿಗೆ ಪರಿಮಿತ ಆನಂದವನ್ನು ಹೇಳಿ ಆನಂದಮಯನಿಗೆ 'ಯತೋ ವಾಚೋ ನಿವರ್ತಂತೇ' ಇತ್ಯಾದಿಗಳಿಂದ ಪೂರ್ಣಾನಂದವು ಹೇಳಲ್ಪಡುತ್ತದೆ. ಅಥವಾ ಕೇವಲ ಜೀವನು ಆನಂದಮಯಾದಿಶಬ್ದವಾಚ್ಯನು ಆಗುವುದಿಲ್ಲವೆಂದಲ್ಲ. ಮತ್ತೆ ಜೀವನು ಬ್ರಹ್ಮ ನಿಂದ ಅಭಿನ್ನನೂ ಆಗುವುದಿಲ್ಲ. 'ಸಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ' ಇತ್ಯಾದಿಗಳಲ್ಲಿ ಅಧಿಷ್ಠಾತೃತ್ವಾದಿಗಳನ್ನು ಹೇಳಿರುವುದರಿಂದ ಬ್ರಹ್ಮನಿಂದ ಭೇದವೇ ಹೇಳಲ್ಪಟ್ಟಿದೆ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

ಮೂ ॥ ಆದಿತ್ಯೇ ಪುರುಷೇ ಚಾಯಮಿತಿ ಭೇದೋಪದೇಶತಃ ।
ನಾಸ್ಯಾಭೇದೋಽಸ್ತಿ ಜೀವೇನ [ನಾನುಮಾ ಕಾಮಚಾರಿಣೇ] ॥೨೧೩॥

ಅ ॥ ಆದಿತ್ಯೇ=ಆದಿತ್ಯನಲ್ಲಿಯೂ, ಪುರುಷೇಚ=ಪುರುಷನಲ್ಲಿಯೂ, ಅಯಂ=ಈ ಶ್ರೀ ಹರಿಯು ನಿಯಾಮಕನು. ಇತಿ=ಹೀಗೆ, ಭೇದೋಪದೇಶತಃ=ಭೇದವನ್ನು ಹೇಳಿದರಿಂದ, ಅಸ್ಯ= ಈ ಶ್ರೀಹರಿಗೆ, ಜೀವೇನ=ಜೀವನಿಂದ, ಅಭೇದಃ=ಐಕ್ಯವು, ನ=ಕೂಡುವುದಿಲ್ಲ.

ತಾ ॥ ನ್ಯಾಯಸುಧಾ—ಈ ಉಪನಿಷತ್ತಿನಲ್ಲಿ ಜೀವಪರಮಾತ್ಮರಿಗೆ ಅಭೇದವು ವಿವಕ್ಷಿತ ವಾಗಿದ್ದರೆ ಹೀಗಾಗಬಹುದಿತ್ತು. ಹೀಗೆ ಇಲ್ಲ. ಮತ್ತೆ 'ಸಯಶ್ಚಾಯಂ ಪುರುಷೇ । ಯಶ್ಚಾ ಸಾವಾದಿತ್ಯೇ । ಸಏಕಃ । '(ಪು. ೧೭೫.) ಎಂದು ಪುರುಷ, ಆದಿತ್ಯಶಬ್ದದಿಂದ ಉಪಲಕ್ಷಿತರಾದ ಅಪಕೃಷ್ಟರೂ ನಿಕೃಷ್ಟರೂ ಆದ ಸರ್ವಜೀವರೂ ನಿಯಮ್ಯರಾಗಿರುವುದರಿಂದ ಅಧಿಕರಣರು; ಪರಮಾತ್ಮನು ನಿಯಾಮಕನಾಗಿರುವ ಪ್ರಯುಕ್ತ ಅಧಿಷ್ಠಾತನು. ಆದಪ್ರಯುಕ್ತ ಭೇದವೇ ಇಲ್ಲಿ ಹೇಳಲ್ಪಟ್ಟದೆ. (2) ಹಾಗಯೇ 'ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ' ಎಂದು ಹೊಂದುವವನು ಹೊಂದಲರ್ಹನು, 'ಯದಾ ಹ್ಯೇವೈಷಃ' ಎನ್ನುವುದರಿಂದ ಉಪಾಸಕನೂ, ಉಪಾಸ್ಯನೂ, 'ಉಪಸಂಕ್ರಾಮತಿ' ಎಂದು ಪ್ರಾಪಿಸುವವನು ಪ್ರಾಪ್ಯನೂ, 'ಭೀಷಾಸ್ಮಾ ದ್ವಾತಃ ಪವತೇ' ನಿಯಮ್ಯನೂ, ನಿಯಾಮಕನೂ ಇತ್ಯಾದಿಗಳನ್ನು ಹೇಳಿರುವುದರಿಂದ ಭೇದೋಪದೇಶಗಳೇ ಸ್ಪಷ್ಟವಾಗಿ ತೋರಿರುತ್ತವೆ ॥ ೨೧೩ ॥ ಸೂ. ॥ ೧೭ ॥

ಹಾಗಾದರೆ, ಶ್ರೀ ಹರಿಗೆ ಜೀವನಿಂದ ಅಭೇದವಿಲ್ಲವೆಂದು ಹೇಗೆ ಹೇಳುವುದು? ಅನುಮಾನ ದಿಂದ ಜೀವಬ್ರಹ್ಮರಿಗೆ ಅಭೇದವೇ ಪ್ರಮಿತವಾಗಿದೆ. ತಥಾಚ ಹಿಂದೆ ಹೇಳಿದ ಪ್ರಕಾರ ಜೀವನಿಗೆ

ಅನ್ನಮಯತ್ವಾದಿಗಳು ಏಕೆ ಆಗಲಾರವು? ಹಿಂದೆ ಹೇಳಿದ ಭೇದಪ್ರತಿಪಾದಕ ವಾಕ್ಯಗಳಿಂದ ವಿರೋಧವಿಲ್ಲವು. ಅನುಮಾನ ವಿರೋಧವಿದ್ದುದರಿಂದ ಅದಕ್ಕೇನೇ ವ್ಯಾವಹಾರಿಕ ಭೇದಪರತ್ವವು ಕೂಡಬಹುದು ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವು.

“ ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ ” ಸೂ. ॥ ೧೮ ॥

ಅನುಮಾನಾಪೇಕ್ಷಾ = ಅದೃಷ್ಟಾರ್ಥದಲ್ಲಿ ಶುಷ್ಕವಾದ ಅನುಮಾನಾಪೇಕ್ಷೆಯು, ನ= ಮಾಡಕೂಡದು. ಕಾಮಾಚ್ಚ=ಅನುಮಾನಕ್ಕೆ ಕಾಮಚಾರಿತ್ವವಿದ್ದಪ್ರಯುಕ್ತವೇ.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

ಮೂ ॥ [ನಾಸ್ಯಾಭೇದೋಽಸ್ತಿ ಜೀವೇನ] ನಾನುಮಾ ಕಾಮಚಾರಿಣೀ ।
ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಯತ್ ।
ಶರೀರಾಣೀತ್ಯಾದಿಕಾ ತು ತತ್ವಜ್ಞಾನೇ ಹ್ಯಪೇಕ್ಷ(ಕ್ಷ್ಯ)ತೇ ॥ ೨೧೪ ॥
ಪ್ರತ್ಯಕ್ಷಾದಿವಿರುದ್ಧತ್ವಾದಕ್ಷಾಗಮಭಯೋಜ್ಝಿತಾ ।
ಅನುಮಾ ಕಾಮವೃತ್ತಾ ಹಿ ಕುತ್ರ ನಾವಸರಂ ವ್ರಜೇತ್ ॥ ೨೧೫ ॥
ಜಡ ಆತ್ಮೈವ ವಸ್ತುತ್ವಾ ತ್ಪ್ರಮೇಯತ್ವಾಜ್ಜಡಂ ಚಿತಿಃ ।
ಘನ ಆಕಾಶ ಇತ್ಯಾದ್ಯಾ ನಾಯುಜ್ಯಂತೇ ಕೇನ ಹೇತುನಾ ॥ ೨೧೬ ॥

ಅ ॥ ಅನುಮಾ=ಅನುಮಾನವು, ಕಾಮಚಾರಿಣೀ=ಇಚ್ಛಾನುಸಾರವಾಗಿ ಅನುಮೇಯಿಸಲಿಕ್ಕೆ ಶಕ್ಯವಾಗುವುದು. ಯತ್=ಯಾವಕಾರಣದ್ದೆಶೆಯಿಂದ, ವಿಮತಾನಿ=ವಿವಾದವಿಷಯಗಳಾದ, ಶರೀರಾಣಿ=ಚೈತ್ರಮೈತ್ರಾದಿಗಳ ಶರೀರಗಳು, ಮದ್ಭೋಗಾಯತನಾನಿ=ನನ್ನ ಭೋಗ (ಸುಖದುಃಖಸಾಕ್ಷಾತ್ಕಾರ) ಕ್ಕೆ ಆಶ್ರಯಗಳೋ, ಶರೀರಾಣಿ = ಶರೀರತ್ವವಿದ್ದಪ್ರಯುಕ್ತ, (ಮಚ್ಛರೀರವತ್=ನನ್ನ ಶರೀರದಂತೆ) ಇತ್ಯಾದಿಕಾ ತು=ಇದುಮೊದಲಾದುದಾದರೂ, ಅಂದರೆ ಆದಿಶಬ್ದದಿಂದ ‘ ವಿಪ್ರತಿಪನ್ನಾನಿ ಇಂದ್ರಿಯಾಣಿ ಮಮೈವ ಕರಣಾನಿ ಇಂದ್ರಿಯತ್ವಾತ್ ಸಂಪ್ರತಿಪನ್ನವತ್=ವಿವಾದವಿಷಯಗಳಾದ ಚೈತ್ರಮೈತ್ರಾದಿಗಳ ಚಕ್ಷುರಾದೀಂದ್ರಿಯಗಳು ನನಗೇನೇ ಯಥಾರ್ಥಜ್ಞಾನವನ್ನು ಹುಟ್ಟಿಸುವವುಗಳು ಇಂದ್ರಿಯವಾಗಿರುವುದರಿಂದ ನಿಶ್ಚಿತವಾದ ನನ್ನ ಇಂದ್ರಿಯದಂತೆ. ಇತ್ಯಾದಿಗಳನ್ನು ಇಟ್ಟುಕೊಳ್ಳಬೇಕು.) ತತ್ವಜ್ಞಾನೇ=ಯಥಾರ್ಥಜ್ಞಾನಕ್ಕಾಗಿ, ನಾಪೇಕ್ಷ್ಯತೇ=ಅಪೇಕ್ಷಿಸಲ್ಪಡುವುದಿಲ್ಲ. ಅಂದರೆ ಯಥಾರ್ಥಜ್ಞಾನಕ್ಕೆ ಕಾರಣವಾಗುವುದಿಲ್ಲ, ಪ್ರತ್ಯಕ್ಷಾದಿ ವಿರುದ್ಧತ್ವಾತ್=ಪ್ರತ್ಯಕ್ಷವೊದಲಾದ ಪ್ರಮಾಣಗಳಿಂದ ವಿರುದ್ಧವಾಗಿರುವುದರಿಂದ, ಹಿ=ದೃಷ್ಟಾಂತವು ಪ್ರಸಿದ್ಧವಾಗಿದೆ. (ಪ್ರತ್ಯಕ್ಷಾದಿವಿರುದ್ಧವಾದಾಗ್ಯೂ ಸದನುಮಾನವು ಏಕೆ ಆಗಲಾರದೆಂದರೆ) ಅನುಮಾ=ಅನುಮಾನವು ಕಾಮಚಾರಿಣೀ=ಸ್ವೇಚ್ಛಾನುಸಾರಿಯಾದುದು. ಅಂದರೆ ಅಕ್ಷಾಗಮಭಯೋಜ್ಝಿತಾ=ಪ್ರತ್ಯಕ್ಷ ಆಗಮ ಅನುಮಾನಗಳಿಂದ ವಿರೋಧಬರುತ್ತದೆನ್ನುವ ಭಯವಿಲ್ಲದಿರುವುದು, ಕಾಮವೃತ್ತಾ ಏವ=ಪುರುಷರ ಇಚ್ಛಾನುಸಾರವಾದ ಪ್ರವೃತ್ತಿಯುಳ್ಳದ್ದೇ ಸರಿ. ಹಿ=ಆದಕಾರಣ, ಕುತ್ರ=ಎಲ್ಲಿತಾನೇ, ಅವಸರಂ=ಅವಕಾಶವನ್ನು, ನ ವ್ರಜೇತ್=ಹೊಂದಲಾರದು. (ಎಲ್ಲಾ ಕಡೆಗಳಲ್ಲಿಯೂ ಅವಕಾಶವನ್ನು ಹೊಂದುತ್ತದೆಯೇ ಸರಿ.) (ಅದು ಹೇಗೆಂದರೆ) (೧) ಆತ್ಮಾ=ಜೀವನು, ಜಡಃ=ಜ್ಞಾನಕ್ಕೆ ಆಶ್ರಯನಾಗದಿರುವವನು, ವಸ್ತುತ್ವಾತ್ = ಪದಾರ್ಥನಾಗಿರುವುದರಿಂದ, (ಘಟವತ್ = ಮಡಿಕೆಯಂತೆ.)

(೨) ಆಕಾಶಃ=ಆಕಾಶವು, ಘನಃ=ನಿಬಿಡಾವಯವವುಳ್ಳದ್ದು, ಪ್ರಮೇಯತ್ವಾತ್=ಪ್ರಮೇಯವಾಗಿರುವುದರಿಂದ, ಪಾಷಾಣವತ್=ಕಲ್ಲಿನಂತೆ. (ಈ ಎರಡು ಅನುಮಾನಗಳು ಇತ್ಯಾದ್ಯನುಮಾನಗಳು ಸಾಕ್ಷಿಪ್ರತ್ಯಕ್ಷವಿರುದ್ಧವಾಗಿವೆ.) (೩) ಜಡಂ=ಘಟವೊದಲಾದ ಜಡವಸ್ತುವು, ಚಿತಿಃ=ಚೇತನವು, ಪ್ರಮೇಯತ್ವಾತ್=ಪ್ರಮೇಯವಾಗಿರುವುದರಿಂದ, ಆತ್ಮವತ್=ಜೀವನಂತೆ. (ಇತ್ಯಾದಿಗಳು ಅನುಮಾನವಿರುದ್ಧಗಳು. ಘಟಾದಿಗಳಲ್ಲಿ ಚೈತನ್ಯದ ಕಾರ್ಯವು ಸರ್ವಥಾ ತೋರಿಬರುವುದಿಲ್ಲವಷ್ಟೇ.) ಇತ್ಯಾದ್ಯಾಃ = ಇದುವೊದಲಾದುವುಗಳು, (ಆದ್ಯ ಎನ್ನುವ ಪದದಿಂದ (೪) 'ಬ್ರಾಹ್ಮಣೇನ ಸುರಾ ಪೇಯಾ ದ್ರವದ್ರವ್ಯತ್ವಾತ್ ಕ್ಷೀರವತ್'=ಬ್ರಾಹ್ಮಣನಿಂದ ಮದ್ಯವು ಪಾನಮಾಡಲರ್ಹವು ದ್ರವದ್ರವ್ಯವಾಗಿರುವುದರಿಂದ ಹಾಲಿನಂತೆ, ಇದುವೊದಲಾದ, ಆಗಮವಿರುದ್ಧವಾದುದನ್ನು ಸಂಗ್ರಹಿಸತಕ್ಕುದು.) ಕೇನ ಹೇತುನಾ=(ಪ್ರತ್ಯಕ್ಷಾದಿಗಳಿಂದ ವಿರುದ್ಧವಾದುದಕ್ಕೂ ಅನುಮಾನತ್ವವಿರುವುದಾದರೆ) ಯಾವಹೇತುವಿನಿಂದ, ವಾರ್ಯಂತೇ=ನಿವಾರಿಸಲ್ಪಡುತ್ತವೆ. ತಥಾಚ ಜೀವೇಶ್ವರೈಕ್ಯಾನುಮಾನವು ಪ್ರತ್ಯಕ್ಷಾದಿಗಳಿಂದ ವಿರುದ್ಧವಾದಾಗ್ಯೂ ಪ್ರಮಾಣವಾಗುವುದಾದರೆ ಈಗ ಉದಾಹರಿಸಿದ ಅನುಮಾನಗಳೂ ಏಕೆ ಪ್ರಮಾಣವಾಗಲಾರವು?) ಆ ಐಕ್ಯಾನುಮಾನಗಳಿಗೂ, ಜೀವಾದಿಗಳಿಗೆ ಜಡತ್ವಾದಿಗಳನ್ನು ಸಾಧಿಸತಕ್ಕ ಅನುಮಾನಗಳಿಗೂ ವಿಶೇಷವಿಲ್ಲ.

ತಾ ॥ ನ್ಯಾಯಸುಧಾ— (1) ಹಿಂದೆ ಉದಾಹರಿಸಿದ ಶರೀರತ್ವಾದ್ಯನುಮಾನಗಳು ಪ್ರತಿದೇಹದಲ್ಲಿಯೂ ಜೀವರಿಗೆ ಅಭೇದಸಾಧಕಗಳು. ಜೀವರಿಗೆ ಪರಮಾತ್ಮನಿಂದ ಅಭೇದಸಾಧಕಗಳಲ್ಲ, ಆದಪ್ರಯುಕ್ತ "ವಿಮತಾಃ ಆತ್ಮಾನಃ ಪರಮಾತ್ಮನಃ ತತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್" ಇತ್ಯಾದ್ಯನುಮಾನಗಳನ್ನು ಇಲ್ಲಿ ಶಂಕಿಸಬೇಕು. ಈ ಶರೀರತ್ವಾದ್ಯನುಮಾನವನ್ನು ಶಂಕಿಸುವುದು ಅಲ್ಲ. ಎಂದು ಹೇಳಕೂಡದು. ಉಪಹಿತ (ವಿಶಿಷ್ಟ) ಸ್ವರೂಪವುಳ್ಳ ಜೀವರಿಗೇನೇ ಸಾಕ್ಷಾತ್ ಅಭೇದವು ಕೂಡುವುದಿಲ್ಲ. ಜೀವರಿಗೆ ಭೇದವಿಲ್ಲವೆನ್ನುವುದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ವಿರುದ್ಧವಾಗಿದೆ. ಅಂತೂ ನಿರುಪಾಧಿಕವಾದ ರೂಪದಿಂದ ಅಭೇದವಿದೆ ಎನ್ನುವಲ್ಲಿ ಅನುಮಾನವೇ ಪರ್ಯವಸಿತವಾಗುತ್ತದೆ. ಆದಕಾರಣ, ಪ್ರಕೃತ ಸಂಗತಿಯಿದ್ದೇ ಇದೆ. (2) "ವಿಮತಾನಿ ಶರೀರಾಣೀತ್ಯಾದಿಕಾನುಮಾ ಯಥಾರ್ಥ ಜ್ಞಾನಕಾರಣಂ ನ ಭವತಿ ಪ್ರಮಾಣವಿರುದ್ಧತ್ವಾತ್ ದಹನಾನುಷ್ಣತಾ ಸಾಧನಾನುಮಾನವತ್"=ವಿಮತಾನಿ ಶರೀರಾಣಿ ಇವು ವೊದಲಾದುದು ಅನುಮಾನವೆಂದು ಪರರಿಗೆ ಅಭಿಪ್ರೇತವಾದುದು ಯಥಾರ್ಥಜ್ಞಾನವನ್ನು ಹುಟ್ಟಿಸುವುದಿಲ್ಲ. ಪ್ರಮಾಣ ವಿರುದ್ಧವಾಗಿರುವುದರಿಂದ, ಬೆಂಕಿಯು ಬಿಸಿಯಲ್ಲವೆಂದು ಸಾಧಿಸುವ ಅನುಮಾನದಂತೆ, ಎನ್ನುವ ಪ್ರಯೋಗವು 'ತತ್ವಜ್ಞಾನೇ ಹ್ಯಪೇಕ್ಷತೇ' ಎನ್ನುವುದರಿಂದ ಉಕ್ತವಾಯಿತು ॥ ೨೧೪ ॥ ೨೧೫ ॥ ॥ ೨೧೬ ॥

ಹಾಗಾದರೆ 'ಅಥಾತೋ ಬ್ರಹ್ಮಜಿಜ್ಞಾಸಾ' ಎನ್ನುವಲ್ಲಿಯೇ ಜೀವೇಶಭೇದವು ಸಮರ್ಥಿಸಲ್ಪಟ್ಟಿದೆ. ಹಾಗೆಯೇ ಜನ್ಮಾದಿಸೂತ್ರದಿಂದಲೂ ಸಮರ್ಥಿಸಲ್ಪಟ್ಟಿದೆ. ಈ ಸೂತ್ರದಲ್ಲಿಯೂ ಪುನಃ ಭೇದವನ್ನು ಸಾಧಿಸಿದರೆ ಪುನರುಕ್ತಿಯು ಬರಬೇಕಾಗುವುದೆಂದರೆ—

**ಮೂ ॥ ನ ಜೀವ ಭೇದಸೂತ್ರಾಣಾಂ ಶಂಕ್ಯಾತ್ರ ಪುನರುಕ್ತತಾ ।**
**ವಾಕ್ಯಾಂತರದ್ಯೋತಕತ್ವಾತ್ಪೃಥಗಿತ್ಯತ್ರ ಪೂರ್ಣತಾ ॥ ೨೧೭ ॥**

ಅ ॥ ಅತ್ರ=ಈ ಶಾಸ್ತ್ರದಲ್ಲಿ, ಜೀವಭೇದಸೂತ್ರಾಣಾಂ=ಜೀವರಿಗೆ ಭೇದವನ್ನು ಸಾಧಿಸುವ ಸೂತ್ರಗಳಿಗೆ, ಪುನರುಕ್ತತಾ=ಪುನರುಕ್ತಿಯು, ನ ಶಂಕ್ಯಾ=ಶಂಕಿಸಕೂಡದು. ಏಕೆಂದರೆ—

ವಾಕ್ಯಾಂತರದ್ಯೋತಕತ್ವಾತ್=ಆಯಾಯ ಪ್ರಕರಣದಲ್ಲಿರುವ ಭೇದಸಾಧಕವಾದ ವಾಕ್ಯಾಂತರವನ್ನು ತೋರಿಸಿಕೊಡುವುದರಿಂದ, ಪೃಥಗಿತ್ಯತ್ರ=ಪೃಥಗುಪದೇಶಾತ್ ಎನ್ನುವಲ್ಲಿ(ಸೂತ್ರಕಾರರು ಮುಖ್ಯವಾಗಿ ಭೇದವಿಷಯಕವಿಚಾರವನ್ನೇ ಮಾಡಿದರಿಂದ ಭೇದಸಾಧನಕ್ಕೆ) ಪೂರ್ಣತಾ=ಪ್ರಾಧಾನ್ಯವು ಇರುವುದು. ಅಂದರೆ ಪೃಥಗುಪದೇಶಾತ್ ಎನ್ನುವಲ್ಲಿ ಸೂತ್ರಕಾರರಿಂದ ಮುಖ್ಯ (ಪ್ರಧಾನ)ವಾಗಿ ಭೇದವು ಸಾಧಿಸಲ್ಪಡುತ್ತದೆ.

ತಾ || ನ್ಯಾಯಸುಧಾ— (1) ಈ ಶಾಸ್ತ್ರದಲ್ಲಿ ಆಯಾಯ ಪ್ರಕರಣದಲ್ಲಿ ಐಕ್ಯವು ವಿವಕ್ಷಿತವೆಂದು ಹೇಳಿದರೆ ಆಯಾಯ ಪ್ರಕರಣಗಳಲ್ಲಿರುವ ಭೇದವಾಕ್ಯವನ್ನು ತೋರಿಸಿಕೊಂಡು ಸೂತ್ರಗಳಲ್ಲಿ ಭೇದವು ಸಮರ್ಥಿಸಲ್ಪಡುತ್ತದೆ. ಆದ ಪ್ರಯುಕ್ತ ತಾತ್ಪರ್ಯವು ಬೇರೆ ಬೇರೆಯಾಗಿರುವುದರಿಂದ ಪುನರುಕ್ತಿಯನ್ನು ಶಂಕಿಸಕೂಡದು. ಹೇಗೆಂದರೆ– ಜಿಜ್ಞಾಸಾವಾಕ್ಯಗಳಲ್ಲಿ ಅಭೇದವನ್ನು ಶಂಕಿಸಿದರೆ, ಜಿಜ್ಞಾಸಾವಾಕ್ಯದಲ್ಲಿರತಕ್ಕ ಬ್ರಹ್ಮಶಬ್ದದಿಂದಲೇ ಭೇದವು ಸಮರ್ಥಿಸಲ್ಪಡುತ್ತದೆ. ಜಿಜ್ಞಾಸ್ಯನಾದ ಬ್ರಹ್ಮನಿಗೆ ಜೀವತ್ವವನ್ನು ಶಂಕಿಸಿದರೆ, ಪೂರ್ವವಾಕ್ಯದಲ್ಲಿ ಹೇಳಿದ ಲಕ್ಷಣದಿಂದ ಭೇದವು ಸಾಧಿಸಲ್ಪಡುವುದು. (2) ಇದೇ ರೀತಿಯಾಗಿ 'ಭೇದವ್ಯಪದೇಶಾಚ್ಚಾನ್ಯಃ' ಇತ್ಯಾದಿಗಳಲ್ಲಿಯೂ ಪುನರುಕ್ತಿ ದೋಷವನ್ನು ಪರಿಹರಿಸಬೇಕು. (3) ಹಾಗಾದರೆ, ಅಭೇದವು ಇಲ್ಲವೇ ಇಲ್ಲವೆಂದು ಕಂಠತಃ ಎಲ್ಲಿಯೂ ನಿರಾಕೃತವೇ ಆಗಲಿಲ್ಲವೆಂದಾಗಬೇಕಾಗುವುದು. ಎಂದರೆ, ಪೃಥಗುಪದೇಶಾತ್ ಎನ್ನುವಲ್ಲಿ ಸೂತ್ರಕಾರರು ಅಭೇದವನ್ನು ಸ್ವರೂಪತಃ ನಿರಾಕರಿಸಿ ಮುಖ್ಯವಾಗಿ ಭೇದವನ್ನೇ ಸಮರ್ಥಿಸುವರು.

ಸಾರಾಂಶ:—

ಸ. ರ. ವಿ—(1) ಬ್ರಹ್ಮಾದಿ ಜೀವರಿಗೂ, ವಿಷ್ಣುವಿಗೂ ಅಭೇದವಿದ್ದ ಪ್ರಯುಕ್ತ ಬ್ರಹ್ಮಾದಿಗಳ ಜ್ಞಾನದಿಂದಲೇ ಮುಕ್ತಿಯು ಏಕೆ ಆಗಲಾರದೆಂದರೆ 'ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ । (ಪು. ೧೪೦) ಸಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ' (ಪು. ೧೪೭)ಇತ್ಯಾದ್ಯಾಧಾರಾಧೇಯಭಾವದಿಂದ ಭೇದವನ್ನೇ ಹೇಳಿರುವುದರಿಂದ ಬ್ರಹ್ಮಾದಿಜೀವರಾಶಿಗಳಿಗೆ ವಿಷ್ಣುವಿನಿಂದ ಅಭೇದವಿಲ್ಲ. (2) 'ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಶರೀರತ್ವಾತ್ ಮಚ್ಛರೀರವತ್' ಎನ್ನುವ ಅನುಮಾನದಿಂದ ಆತ್ಮೈಕ್ಯವು ಸಿದ್ಧಿಸುವುದೆಂದರೆ—ಹೀಗೆ ಹೇಳಕೂಡದು. ಹೇಗೆಂದರೆ— ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ವಿರುದ್ಧವಾಗಿರುವುದರಿಂದ ಅತಿಪ್ರಸಂಗವು. ಹೇಗೆಂದರೆ— ೧ ಚೇತನಂ ಅಚೇತನಂ ಭವಿತುಮರ್ಹತಿ ವಸ್ತುತ್ವಾತ್ ಘಟವತ್=ಚೇತನವು ಅಚೇತನವು ಆಗಲಿಕ್ಕೆ ಯೋಗ್ಯವಾಗಿದೆ, ವಸ್ತುವಾಗಿರುವುದರಿಂದ, ಮಡಿಕೆಯಂತೆ. ೨ ಅಚೇತನಂ ವಾ ಚೇತನಂ ಭವಿತುಮರ್ಹತಿ ಪ್ರಮೇಯತ್ವಾತ್ ಆತ್ಮವತ್=ಅಚೇತನವು ಚೇತನವಾಗಲಿಕ್ಕೆ ಯೋಗ್ಯವಾಗಿದೆ, ಪ್ರಮೇಯವಾಗಿರುವುದರಿಂದ ಆತ್ಮನಂತೆ. ೩ ಆಕಾಶಂ ಮೂರ್ತಂ ಭವಿತುಮರ್ಹತಿ ಭೂತತ್ವಾತ್ ಪೃಥಿವೀವತ್=ಆಕಾಶವು ಮೂರ್ತವಾಗಲಿಕ್ಕೆ ಯೋಗ್ಯವಾಗಿದೆ, ಭೂತವಾಗಿರುವುದರಿಂದ ಪೃಥಿವಿಯಂತೆ, ಎಂದೂ ಪ್ರಯೋಗಿಸಲು ಶಕ್ಯನಾಗುವುದರಿಂದ ಅತಿಪ್ರಸಂಗವು. ೪ ಹಾಗಾದರೆ 'ನೇತರೋಽನುಪಪತ್ತೇಃ ' 'ಭೇದವ್ಯಪದೇಶಾಚ್ಚ ' 'ಕಾಮಾಚ್ಚ ನಾನುಮಾನಾಪೇಕ್ಷಾ ' ಎನ್ನುವಲ್ಲಿ ಜೀವಪರಮಾತ್ಮರಿಗೆ ಭೇದವು ನಿರೂಪಿಸಲ್ಪಟ್ಟಿದೆ. ಅಂತಹ ಭೇದವೇ ಪುನಃ 'ಭೇದವ್ಯಪದೇಶಾಚ್ಚಾನ್ಯಃ ' 'ಅನುಪಪತ್ತೇಸ್ತು ನ ಶಾರೀರಃ ' 'ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ' ಇತ್ಯಾದಿಗಳಲ್ಲಿ ನಿರೂಪಿಸಲ್ಪಡುವುದು. ಆದ

ಕಾರಣ ಈ ಸೂತ್ರಗಳಿಗೆ ಪೌನರುಕ್ತ್ಯವೆಂದು ಹೇಳಕೂಡದು. ಪ್ರಕಾರಾಂತರದಿಂದ ಅಲ್ಲಲ್ಲಿ ಭೇದವು ಕೂಡುವುದಿಲ್ಲವೆಂದು ಭೇದವನ್ನು ಆಕ್ಷೇಪಿಸಿದರೆ, ಶ್ರುತ್ಯಂತರದಿಂದಲೂ ನ್ಯಾಯಾಂತರದಿಂದಲೂ ಸಮಾಧಾನವನ್ನು ಹೇಳುವುದಕ್ಕಾಗಿ ಈ ಸೂತ್ರಗಳು. (3)ಮತ್ತು ಪೃಥಗುಪದೇಶಾತ್ ಎನ್ನುವಲ್ಲಿ ಎಲ್ಲಾ ಶಂಕೆಗಳನ್ನೂ ಪರಿಹರಿಸಿ ಜೀವಪರಮಾತ್ಮರಿಗೆ ಭೇದವನ್ನೇ ಸಮರ್ಥಿಸುವರು. ॥ ೨೧೭ ॥ ಸೂ. ॥ ೧೮ ॥

ಶರೀರಾದಿ ಕೋಶಗಳೇ ಅನ್ನಮಯಾದಿಶಬ್ದವಾಚ್ಯಗಳು ಎನ್ನುವ ಪಕ್ಷವೂ ಕೂಡ 'ನೇತರೋಽನುಪಪತ್ತೇಃ' ಎನ್ನುವ ಸಾಧಾರಣ ದೋಷದಿಂದ ದೂಷಿತವೇ ಆದಾಗ್ಯೂ ವಿಶೇಷ ದೋಷದಿಂದ ದೂಷಿಸುವುದಕ್ಕಾಗಿ ಸೂತ್ರವು.

## 'ಓಂ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ಓಂ' ಸೂ. ॥ ೧೯ ॥

ಅಸ್ಮಿನ್ ಈ=ಪ್ರಕರಣದಲ್ಲಿ, ಅಸ್ಯ=ಇತರನಾದ ಜೀವನಿಗೆ, ತದ್ಯೋಗಂ=ಆನಂದಮಯಾದಿರೂಪನಾದ ಬ್ರಹ್ಮನಿಂದ ಕೂಡಿಕೊಂಡು ಸಂಬಂಧವನ್ನು, (ಮುಕ್ತಿಯಲ್ಲಿಯೂ 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ' ಎನ್ನುವ ಶ್ರುತಿಯು.) ಶಾಸ್ತಿ=ಯಾವಕಾರಣದಿಂದ ಶಾಸನಮಾಡುತ್ತದೋ, (ಆದಕಾರಣ ಐಕ್ಯವು ಕೂಡದಿರುವುದರಿಂದ ಆನಂದಮಯಾದಿಶಬ್ದವಾಚ್ಯನು ಜೀವನಲ್ಲ.) ಚ=ಭೇದವನ್ನು ಹೇಳದರಿಂದ ಮಾತ್ರವಲ್ಲ, ಮತ್ತೆ ಮುಕ್ತಿಯಲ್ಲಿಯೂ ಕೂಡ ಭೇದಾಕ್ಷೇಪಕವಾದ ಸಂಬಂಧವನ್ನು ಶಾಸನಮಾಡಿದರಿಂದಲೂ ಕೂಡ, ಮುಕ್ತಿಯಲ್ಲಿರತಕ್ಕ ಭೇದವು ಅಸತ್ಯವಲ್ಲ, ಅಥವಾ ಈ ಪ್ರಕರಣದಲ್ಲಿ 'ಸ ಯ ಏವಂ ವಿತ್' ಎನ್ನುವಲ್ಲಿ ಹೇಳಿದ ಬ್ರಹ್ಮಜ್ಞಾನಿಗೆ ಅನ್ನಮಯಾದಿಗಳಿಂದ ಪ್ರಾಪ್ತಿಯು ಫಲವೆಂದು 'ಏತಮನ್ನಮಯಮಾತ್ಮಾನಂ' ಎನ್ನುವ ಶ್ರುತಿಯು ಶಾಸನಮಾಡುತ್ತದೋ, ಆದಕಾರಣ ಅನ್ನಮಯಾದಿಶಬ್ದವಾಚ್ಯನು ಬ್ರಹ್ಮನೇ. ಬ್ರಹ್ಮಜ್ಞಾನದಿಂದ ಮತ್ತೊಬ್ಬನ ಪ್ರಾಪ್ತಿಯು ಕೂಡಲಾರದು.

ಈ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಯೋಗಮನ್ನಮಯಾದ್ಯೈರ್ಯತ್ಫಲತ್ವೇನಾಸ್ಯ ಶಂಸತಿ ।**
**ಸ್ಥಾನದ್ವಯೇಽಪ್ಯತಃ ಕೋಶಾ ಏತ ಇತ್ಯತಿಸಾಹಸಂ ॥ ೨೧೮ ॥**

ಅ ॥ ಯತ್=ಯಾವಕಾರಣದ್ದೆಶೆಯಿಂದ, ಅಸ್ಯ='ಸ ಯ ಏವಂವಿತ್' ಎಂದು ಹೇಳಿದ ಬ್ರಹ್ಮಜ್ಞಾನಿಗೆ, ಫಲತ್ವೇನ=ಫಲವಾಗಿ, ಅನ್ನಮಯಾದ್ಯೈಃ=ಅನ್ನಮಯಮೊದಲಾದ ಭಗವದ್ರೂಪಗಳಿಂದ, ಯೋಗಂ ಅನ್ನಮಯಾದಿಗಳ ಪ್ರಾಪ್ತಿಯನ್ನು, ಸ್ಥಾನದ್ವಯೇಽಪಿ= ಬ್ರಹ್ಮವಲ್ಲಿಯಲ್ಲಿಯೂ, ಭೃಗುವಲ್ಲಿಯಲ್ಲಿಯೂ (ಏತಮನ್ನಮಯಮಾತ್ಮಾನಮುಪಸಂಕ್ರಾಮತಿ । ಏತಮನ್ನಮಯಮಾತ್ಮಾನಮುಪಸಂಕ್ರಮ್ಯ । ಇತ್ಯಾದಿ ಶ್ರುತಿಯು) ಶಂಸತಿ= ಹೇಳುತ್ತದೋ, ಅತಃ=ಆದಕಾರಣ, ಏತೇ=ಈ ಅನ್ನಮಯಾದಿಶಬ್ದವಾಚ್ಯಗಳು, ಕೋಶಾಃ= ಕೋಶಗಳು, ಇತಿ=ಈ ವ್ಯಾಖ್ಯಾನವು, ಅತಿಸಾಹಸಂ=ಪೂರ್ವೋತ್ತರಾಪರಾಮರ್ಶಮೂಲಕವು. (ಶರೀರಾದಿ ಕೋಶಪ್ರಾಪ್ತಿಯು ಬ್ರಹ್ಮವಿದ್ಯೆಗೆ ಫಲವೆನ್ನುವುದು ಕೂಡುವುದಿಲ್ಲ. 'ತರತಿ ಶೋಕಮಾತ್ಮವಿತ್' ಇತ್ಯಾದಿ ಶ್ರುತಿಗಳಿಂದ ವಿರೋಧವು ಬರುವುದು. ಶರೀರಾದಿಗಳು ಶೋಕರೂಪಗಳಾಗಿವೆ. ॥ ೨೧೮ ॥

ಇಲ್ಲಿ ಅನ್ನಮಯಾದಿ ಪ್ರಾಪ್ತಿಯು ಹೇಳಲ್ಪಡುವುದಾದರೆ ಹಾಗಾಗಬಹುದಿತ್ತು. ಇದಲ್ಲ, ಉಪಸಂಕ್ರಮಶಬ್ದವು ಅತಿಕ್ರಮಾರ್ಥಕವಾಗಿದೆ, ಎಂದರೆ —

**ಮೂ ॥ ಉಪಸಂಕ್ರಮಣಂ ಚೈವ ದ್ವಿತೀಯೋದ್ದೇಶಿತಂ ಪ್ರತಿ ।**
**ಅತಿಕ್ರಮಂ ವದಂತಂ ತಮುಪಶಬ್ದೋ ನಿವಾರಯೇತ್ ॥ ೨೧೯ ॥**

ಅ ॥ ದ್ವಿತೀಯೋದ್ದೇಶಿತಂಪ್ರತಿ=ದ್ವಿತೀಯಾವಿಭಕ್ತಿಯಿಂದ ಕರ್ಮವಾಗಿ ಹೇಳಲ್ಪಟ್ಟ ಅನ್ನಮಯಾದಿಗಳನ್ನು ಕುರಿತು, ಉಪಸಂಕ್ರಮಣಂ ಚೈವ=ಯಾವುದು ಉಪಸಂಕ್ರಮಣವು ಹೇಳಲ್ಪಡುತ್ತದೋ, ಅದನ್ನು, ಅತಿಕ್ರಮಂ ವದಂತಂತಂ=ಅತಿಕ್ರಮಾರ್ಥಕವನ್ನಾಗಿ ಹೇಳುವವನನ್ನು, ಅಂದರೆ ಉಪಸಂಕ್ರಮಣವಾಚಕವಾದ ಪದವು ಅತಿಕ್ರಮಾರ್ಥಕವೆಂದು ವ್ಯಾಖ್ಯಾನ ಮಾಡುವ ಪುರುಷನನ್ನು, ಉಪಶಬ್ದಃ=ಉಪಶಬ್ದವು, ನಿವಾರಯೇತ್=ನಿವಾರಿಸುವುದು. ಅಂದರೆ ಉಪಶಬ್ದದಿಂದ ವಿರೋಧವು ಬರುವುದು. ಉಪಪೂರ್ವಕವಾದ ಕ್ರಮ್‌ಧಾತುವು ಪ್ರಾಪ್ತ್ಯರ್ಥಕವು. ॥ ೨೧೯ ॥

ದೋಷಾಂತರವನ್ನು ಹೇಳುತ್ತಾರೆ—

**ಮೂ ॥ ಅಶ್ರುತಸ್ಯಾತಿಶಬ್ದಸ್ಯ ಸ್ಥಾನಂ ದದ್ಯಾತ್ಕಥಂ ಪುನಃ ।**
**ಶ್ರುತಾಶ್ರುತಪರಿತ್ಯಾಗಕಲ್ಪನೇ ವಿಗತಹ್ರಿಯಾಂ ॥**
**ಮೃತಾವೇವ ಪರಿತ್ಯಾಗಃ ಕೃತೋ ಹ್ಯನ್ನಮಯಸ್ಯಚ ॥ ೨೨೦ ॥**

ಅ॥ ಪುನಃ=ಮತ್ತು, ಅಶ್ರುತಸ್ಯ=ಕೇಳಲ್ಪಡದಿರುವ, ಅತಿಶಬ್ದಸ್ಯ=ಅತಿ ಎನ್ನುವ ಶಬಕ್ಕೆ, ಸ್ಥಾನಂ=ಸ್ಥಾನವನ್ನು, ಕಥಂ=ಹೇಗೆ, ದದ್ಯಾತ್=ಕೊಡುವುದು. ಅಂದರೆ ವಿಗತಹ್ರಿಯಾಂ= ಹೋಗಲ್ಪಟ್ಟ ನಾಚಿಗೆಯುಳ್ಳವರಿಗೆ, ಶ್ರುತಾಶ್ರುತಪರಿತ್ಯಾಗಕಲ್ಪನೇ=(ಹೀಗೆ ವ್ಯಾಖ್ಯಾನ ಮಾಡುವವನು ಶ್ರುತವಾದ ಉಪಶಬ್ದವನ್ನು ಬಿಟ್ಟು ಆ ಉಪಶಬ್ದದ ಸ್ಥಾನದಲ್ಲಿ ಅಶ್ರುತವಾದ ಅತಿಶಬ್ದವನ್ನು ಅಧ್ಯಾಹಾರಮಾಡಬೇಕಾಯಿತು. ತಥಾಚ ಹೀಗೆ ವ್ಯಾಖ್ಯಾನಮಾಡುವವನಿಗೆ) ಶ್ರುತವಾದುದನ್ನು ಬಿಡುವಿಕೆ, ಅಶ್ರುತವಾದುದನ್ನು ಕಲ್ಪಿಸುವಿಕೆ ಎನ್ನುವ ಎರಡು ದೋಷಗಳೂ ಬರಬೇಕಾಗುವವು. (ಆ ಎರಡೂ ಲಜ್ಜೆಗೆ ಕಾರಣಗಳು.) ಹಿ=ಯಾವಕಾರಣದಿಂದ, ಅನ್ನಮಯಸ್ಯಚ=ಅನ್ನಮಯಕೋಶದ ಮತ್ತು ಪ್ರಾಣಮಯಕೋಶದ, ಪರಿತ್ಯಾಗಃ=ಬಿಡುವಿಕೆಯು, ಮೃತಾವೇವ=ಮರಣದಲ್ಲಿಯೇ, ಕೃತಃ=ಮಾಡಲ್ಪಟ್ಟದ್ದು, (ಆಗುತ್ತದೆ.) ಮೃತಿಯು ಶರೀರ ಪರಿತ್ಯಾಗರೂಪವಾಗಿದೆ).

**ಶಾ ॥ ನ್ಯಾಯಸುಧಾ**—(1) ನಾವು ಶ್ರುತವಾದುದನ್ನು ಬಿಟ್ಟು ಅಶ್ರುತವಾದುದನ್ನು ಅಧ್ಯಾಹಾರಮಾಡುವುದಿಲ್ಲ. ಇದು ಹೇಗೆ ದೋಷವಾಗುವುದು? ಮತ್ತೆ ಅವ್ಯಯಗಳಿಗೆ ಅನೇಕಾರ್ಥವಿದ್ದಪ್ರಯುಕ್ತ ಉಪಶಬ್ದಕ್ಕೇನೇ ಅತಿಶಬ್ದದ ಅರ್ಥವೆಂದು ವ್ಯಾಖ್ಯಾನಮಾಡುತ್ತೇವೆ, ಎಂದು ಹೇಳಕೂಡದು. ನಿಯಾಮಕವಿಲ್ಲದೆ ಪ್ರಸಿದ್ಧಾರ್ಥವನ್ನು ಬಿಡುವುದು ಅಪ್ರಸಿದ್ಧವಾದ ಅರ್ಥವನ್ನು ಸ್ವೀಕರಿಸುವುದು ಎನ್ನುವುದು ಎರಡೂ ಕೂಡಲಾರದು. ಅವ್ಯಯಗಳಿಗೆ ಅನೇಕಾರ್ಥಗಳಿವೆ ಎಂದು ಇಷ್ಟರಿಂದ ಅಂತಃ (ಒಳಗೆ) ಶಬ್ದಕ್ಕೆ ಬಹಿಃ (ಹೊರಗೆ) ಎನ್ನುವ ಅರ್ಥವು ಕೂಡಲಾರದಷ್ಟೆ! ಮತ್ತೆ ಪ್ರಯೋಗಾದಿಗಳನ್ನು ಅನುಸರಿಸಿಯೇ ಎಂದು ವಸ್ತುಸ್ಥಿತಿ ಇದ್ದರೂ ಅವನು ಹೇಳಿದ್ದನ್ನು ಅಂಗೀಕಾರ ಮಾಡಿಕೊಂಡು, ಮೃತಾವೇವ ಎನ್ನುವುದರಿಂದ ಪೌನರುಕ್ತ್ಯ ದೋಷವನ್ನು ಹೇಳಿದರು. ಏಕೆಂದರೆ—'ಅಸ್ಮಾಲ್ಲೋಕಾತ್ಪ್ರೇತ್ಯ'ಎಂದು ಮರಣೋಕ್ತಿಯಿಂದಲೇ ಅನ್ನಮಯಾದಿಗಳ ಅತಿಕ್ರಮವನ್ನು ಹೇಳಿದರಿಂದ ಪುನಃ 'ಏತಮನ್ನಮಯಮಾತ್ಮಾನಮುಪಸಂಕ್ರಾಮತಿ' ಎಂದು ಅನ್ನಮಯನ ಅತಿಕ್ರಮವನ್ನು ಹೇಳಿದರೆ ಪುನರುಕ್ತಿಯು ಬರಬೇಕಾಗು

ವುದು. (2) ಮತ್ತು ಪ್ರಾಪ್ತಿಯೆನ್ನುವ ಅರ್ಥವನ್ನು ಇಟ್ಟುಕೊಂಡರೆ 'ಬ್ರಹ್ಮವಿದಾಪ್ನೋತಿ ಪರಂ' ಎಂದು ಉಪಕ್ರಮದ ಆನುಗುಣ್ಯವೂ ಬರುವುದು. ಆದಪ್ರಯುಕ್ತ ಅನ್ನಮಯಾದಿ ಶಬ್ದವಾಚ್ಯಗಳು ಕೋಶಗಳಲ್ಲ, ವಿಷ್ಣುವೇ. ಶುದ್ಧಿಯನ್ನು ಪ್ರಾರ್ಥನಮಾಡಿದರಿಂದ ವಾಕ್ಯಾಂತರ ದಲ್ಲಿ ಹೇಳಲ್ಪಟ್ಟವುಗಳು ಕೋಶಗಳೆಂದು ಇಟ್ಟುಕೊಂಡರೂ ಯಾವ ವಿರೋಧವೂ ಇಲ್ಲ ॥ ೨೨೦ ॥

ಈಪ್ರಕಾರ ಅನ್ನಮಯಾದಿ ಐದು ಶಬ್ದಗಳಿಂದಲೂ ಪರಬ್ರಹ್ಮನೇ ಪ್ರತಿಪಾದ್ಯನೆಂದು ಸೂತ್ರಗಳನ್ನು ವ್ಯಾಖ್ಯಾನಮಾಡಿ ಪರರ (ಮಾಯಾವಾದಿಗಳ) ಅಪವ್ಯಾಖ್ಯಾನವನ್ನು ತಿರಸ್ಕರಿ ಸುವುದಕ್ಕಾಗಿ ಮೇಲಿನ ಗ್ರಂಥವು.

(1) ಮಾಯಾವಾದಿಗಳು ಅನ್ನಮಯಾದಿ ಶಬ್ದವಾಚ್ಯವಾದವುಗಳು ಐದೂ ಕೋಶ ಗಳೆಂದು ತಿಳಿಯುತ್ತಾ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎನ್ನುವಲ್ಲಿ ಹೇಳಲ್ಪಟ್ಟ ಬ್ರಹ್ಮನು ತಾನು ಪ್ರಧಾನನಾಗಿಯೇ (ಆನಂದಮಯನ ಅವಯವನಾಗಿ ಅಲ್ಲ.) ಜ್ಞೇಯನೆಂದು ಈ ಸೂತ್ರಗಳು ಪ್ರತಿಪಾದಿಸುತ್ತವೆಂದು ವ್ಯಾಖ್ಯಾನಮಾಡುತ್ತಾರೆ. ಹೇಗೆಂದರೆ— ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ-ಈ ನಾಲ್ಕು ಅನ್ನಾದಿ ವಿಕಾರಗಳಾದ ಕೋಶಗಳೇ, ಅಂತೂ ಅಲ್ಲಿದ್ದ ಮಯಟ್ ಪ್ರತ್ಯಯಗಳು ವಿಕಾರಾರ್ಥಗಳು, ಅವುಗಳ ಮಧ್ಯದಲ್ಲಿರುವ ಆನಂದಮಯ ಎನ್ನುವಲ್ಲಿದ್ದ ಮಯಟ್ ಪ್ರತ್ಯಯವೂ ವಿಕಾರಾರ್ಥಕವೆಂದೇ ಇಟ್ಟುಕೊಳ್ಳಬೇಕು. ಆದಕಾರಣ ಆನಂದಮಯ ಎನ್ನುವಲ್ಲಿದ್ದ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯರೂಪ ಅರ್ಥವನ್ನೂ ಬ್ರಹ್ಮ ವಿಷಯಕತ್ವವನ್ನೂ ಹೇಗೆ ತಾನೇ ಆಶ್ರಯಿಸುವುದು? 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವ ಮಂತ್ರವರ್ಣದಲ್ಲಿ ಬ್ರಹ್ಮಶಬ್ದವು ಇದ್ದಪ್ರಯುಕ್ತ ಅದರ ಅಧಿಕಾರದಿಂದ ಎಂದು ಶಂಕಿಸಿದರೆ— ಹಾಗಾದರೆ— ನಿಮ್ಮ ಪಕ್ಷದಲ್ಲಿಯೂ ಅನ್ನಮಯಾದಿಗಳು ಬ್ರಹ್ಮರೆಂದು ಆಗಬೇಕಾಗುವವು. (2) ಹಾಗಾದರೆ, ಅನ್ನಮಯಾದಿಗಳಲ್ಲಿ ಅಬ್ರಹ್ಮತ್ವಸಾಧಕವಾದುದು ಅಂತರ ಅನ್ಯ ಎನ್ನುವ ಎರಡು ಪದಗಳು ಶ್ರುತಗಳಾಗಿವೆ. ಆನಂದಮಯನಿಗೆ ಅಬ್ರಹ್ಮತ್ವಸಾಧಕಗಳಾದ ಅಂತರ ಅನ್ಯ ಎನ್ನುವ ಎರಡು ಪದಗಳು ಇಲ್ಲದಿರುವುದರಿಂದ ಆನಂದಮಯನು ಬ್ರಹ್ಮನು ಎಂದರೆ ಹಾಗೆ ಹೇಳಕೂಡದು. ಅಲ್ಲಿಯೂ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವಲ್ಲಿ ಪ್ರಕೃತನಾದ ಬ್ರಹ್ಮನು 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಆನಂದಮಯನ ಆಶ್ರಯನೆಂದು ಹೇಳಲ್ಪಟ್ಟಿದ್ದಾನೆ. ಆ ಬ್ರಹ್ಮ ನನ್ನು ತಿಳಿಸಬೇಕೆಂಬ ಇಚ್ಛೆಯಿಂದಲೇ ಅನ್ನಮಯಾದಿ ಶಬ್ದವಾಚ್ಯವಾದವುಗಳು ಐದೂ ಕೋಶ ಗಳೆಂದು ಕಲ್ಪಿಸಲ್ಪಡುತ್ತವೆ. ಆದುದರಿಂದ ಅನ್ನಮಯಾದಿ ಶಬ್ದವಾಚ್ಯವಾದುವುಗಳು ಐದೂ ಕೋಶಗಳು. ಬ್ರಹ್ಮನಲ್ಲ. ಮತ್ತೆ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಹೇಳಿದ ಆನಂದಮಯನ ಪುಚ್ಛವೇ ಬ್ರಹ್ಮನು. ಹಾಗಾದರೆ, ಆನಂದಮಯನಿಗೆ ಬ್ರಹ್ಮತ್ವವನ್ನು ಹೇಳತಕ್ಕ ಸೂತ್ರವು ಹೇಗೆ ಕೂಡುತ್ತದೆಂದರೆ— ವೇದಗಳಿಗೂ, ಸೂತ್ರಗಳಿಗೂ ವಿರೋಧವು ಬಂದರೆ ಅಪ್ರಧಾನಭೂತ ಗಳಾದ ಸೂತ್ರಗಳಲ್ಲಿಯೇ 'ಗುಣೇ ತ್ವನ್ಯಾಯ್ಯ ಕಲ್ಪನಾ' ಎನ್ನುವ ನ್ಯಾಯದಿಂದ, ಲಕ್ಷಣಾ ವೃತ್ತಿಯಿಂದ ಆನಂದಮಯನ ಪುಚ್ಛಪರವಾಗಿ ಸೂತ್ರವನ್ನು ಕಥಂಚಿತ್ ಯೋಜಿಸಬೇಕು, ಎನ್ನುವ ಮಾಯಾವಾದಿಗಳ ವ್ಯಾಖ್ಯಾನವನ್ನು ಶಿಷ್ಯರ ಹಿತಕ್ಕಾಗಿ ಸ್ಪಷ್ಟವಾಗಿ ನಿರಾಕರಿಸುತ್ತಾರೆ.

**ಮೂ ॥ ಯೋಽನ್ನಂ ಬ್ರಹ್ಮೇತ್ಯಾದ್ಯುಪಾಸಾಂ ಸಾಮಾನಾಧಿಕರಣ್ಯತಃ ॥೨೨೧॥**
**ಉಕ್ತ್ವಾ ಪಂಚಸ್ವರೂಪಾಣಾಂ ಪುನಸ್ತತ್ಪ್ರಾಪ್ತಿವಾದಿನೀ ।**
**ಸ್ಥಾನದ್ವಯಗತಾ ವೇದವಾಣೀ ತದಪಲಾಪಿನಾಂ ।**
**ತಮಸೋಽನ್ಯತ್ರ ಸಂಸ್ಥಾನಂ ಕಥಮೇವ ಸಹೇತ ಸಾ ॥ ೨೨೨ ॥**

ಅ || ಪಂಚಸ್ವರೂಪಾಣಾಂ=ಅನ್ನಮಯ ಮೊದಲಾದ ಐದು ರೂಪಗಳಿಗೆ, ಸಾಮಾನಾಧಿಕರಣ್ಯತಃ=ಏಕಾಧಿಕರಣವೃತ್ತಿತ್ವವಿದ್ದಪ್ರಯುಕ್ತ, ಯೋಽನ್ನಂ ಬ್ರಹ್ಮೇತ್ಯಾದಿ='ಯೋಽನ್ನಂ ಬ್ರಹ್ಮೋಪಾಸತೇ' ಇದುಮೊದಲಾದುದು ಹೇಗೆ ಆದೀತೋ ಹಾಗೆ, ಉಪಾಸಾಂ = ಉಪಾಸನೆಯನ್ನು, ಉಕ್ತ್ವಾ=ಹೇಳಿ, ಪುನಃ=ಮತ್ತು, ತತ್ಪ್ರಾಪ್ತಿವಾದಿನೀ=ಜ್ಞಾನಕ್ಕೆ ಫಲವಾಗಿ ಅನ ಮಯಾದಿಗಳ ಪ್ರಾಪ್ತಿಯನ್ನು ಹೇಳತಕ್ಕ, ಸ್ಥಾನದ್ವಯಗತಾ=ಬ್ರಹ್ಮವಲ್ಲಿಯಲ್ಲಿಯೂ, ಭೃಗುವಲ್ಲಿಯಲ್ಲಿಯೂ ಇರತಕ್ಕ, ಸಾ=ಆ, ವೇದವಾಣೀ=ವೇದವಾಕ್ಯವು, ತದಪಲಾಪಿನಾಂ=ಅನ್ನಮಯಾದಿಗಳಿಗೆ ಬ್ರಹ್ಮತ್ವವನ್ನು ಅಪಲಾಪಮಾಡತಕ್ಕ ಮಾಯಾವಾದಿಗಳಿಗೆ, ತಮಸಃ=ಅಂಧಂತಮಸ್ಸಿನಿಂದ, ಅನ್ಯತ್ರ=ಬೇರೆಕಡೆಗಳಲ್ಲಿ, ಸಂಸ್ಥಾನಂ=ಸ್ಥಿತಿಯನ್ನು, ಕಥಮೇವ=ಹೇಗೆ ತಾನೇ, ಸಹೇತ=ಸಹನಮಾಡುವುದು.

ತಾ || (1) ಅನ್ನಮಯಾದಿ ಐದು ಶಬ್ದಗಳಿಂದ ವಾಚ್ಯನಾದವನು ಬ್ರಹ್ಮನಲ್ಲವೆಂದಾದರೆ ಆಗ ಅನ್ನಮಯಾದಿಗಳನ್ನು ಉದಾಹರಿಸಿದ ಶ್ಲೋಕಗಳಲ್ಲಿ 'ಯೋಽನ್ನಂ ಬ್ರಹ್ಮೋಪಾಸತೇ' ಎನ್ನುವ ಪ್ರಥಮಾನುವಾಕದಲ್ಲಿಯೂ, 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎನ್ನುವ ಉತ್ತರಾನುವಾಕದಲ್ಲಿಯೂ ಬ್ರಹ್ಮನೆಂದು ಹೇಳಿದ ವಚನವು ವಿರುದ್ಧವಾಗುವುದು. ಪುಚ್ಛವೂ ಬ್ರಹ್ಮ ಎಂದು ಹೇಳಲಿಕ್ಕೆ ಈ ಬ್ರಹ್ಮಶಬ್ದ ಹೊರತು ಬೇರೆ ಪ್ರಮಾಣವಿಲ್ಲ. ಆದುದರಿಂದ ಅನ್ನಮಯಾದಿ ಶಬ್ದವಾಚ್ಯರು ಬ್ರಹ್ಮರೆಂದು ಹೇಳಿದಪ್ರಯುಕ್ತ ಬ್ರಹ್ಮರೆಂದೇ ಒಪ್ಪಬೇಕು || ೨೨೧ || ೨೨೨ ||

ಈಗ 'ಸ್ಥಾನದ್ವಯಗತಾ' ಎಂದು ಹೇಳಲ್ಪಟ್ಟಿತು. ಹಿಂದೆ 'ಭೃಗೋಶ್ಚೈತದ್ವದಿಷ್ಯತಿ' ಎಂದು ಹೇಳಿರುವರು. ಅದರಲ್ಲಿ ಉತ್ತರಾನುವಾಕ (ಭೃಗುವಲ್ಲಿ) ದಲ್ಲಿ ಹೇಳಲ್ಪಟ್ಟವನು ಬ್ರಹ್ಮನೆಂದು ಹೇಳಿದ್ದನ್ನು ವಿಸ್ತರಿಸುತ್ತಾರೆ—

ಮೂ || ಅಧೀಹಿ ಭಗವೋ ಬ್ರಹ್ಮೇತ್ಯುಕ್ತೋಽನ್ನಪ್ರಾಣಪೂರ್ವಕಂ || ೨೨೩ ||
ಆಹ ಬ್ರಹ್ಮ ಕಥಂ ತನ್ನ ದ್ವಾರಂ ತದಿತಿ ವಾದಿನಃ |
ಉಪಸತ್ತಿಂ ಕಥಂ ವಿದ್ಯುರುಪಸನ್ನಾಯ ಹಿ ತ್ರಿಶಃ || ೨೨೪ ||
ವಕ್ತವ್ಯಂ ಬ್ರಹ್ಮ ಗುರುಣಾ ಚತುರ್ವಾರಮಥಾಪಿ ವಾ |
ಸಕೃದ್ವೇತ್ಯಾಗಮಾ ಬ್ರೂಯುಃ ಸಂಪ್ರದಾಯವಿದೋಽಪಿ ಚ || ೨೨೫ ||
ತದ್ಯುಕ್ತಿಂ ಚಿತ್ಕಥಂ ಬ್ರೂಯಾದುಪಸನ್ನಾಯ ದಿಕ್ಪತಿಃ |
ನ ವದೇದ್ಬ್ರಹ್ಮ ಚ ಕಥಂ ಮಾಯಾವೀ ನಹಿ ವಾರಿರಾಟ್ || ೨೨೬ ||

ಅ || ಭಗವಃ=ಪೂಜ್ಯನಾದ ವರುಣನೇ, ಬ್ರಹ್ಮ=ಪರಬ್ರಹ್ಮನನ್ನು, ಅಧೀಹಿ=ಕಲಿಸಿಕೊಡು, (ಉಪದೇಶಿಸು) ಇತಿ=ಈ ಪ್ರಕಾರ, ಉಕ್ತಃ=ಭೃಗುಋಷಿಯಿಂದ ಪ್ರಶ್ನಿಸಲ್ಪಟ್ಟ ವರುಣನು, ಅನ್ನಪ್ರಾಣಪೂರ್ವಕಂ=ಅನ್ನಪ್ರಾಣ ಮೊದಲಾದುದನ್ನು, ಬ್ರಹ್ಮ=ಪರಬ್ರಹ್ಮನನ್ನಾಗಿ, ಆಹ=ಉಪದೇಶಕೊಡುತ್ತಾನೆ. ತತ್=ಆದಕಾರಣ, ತತ್=ಅನ್ನಪ್ರಾಣ ಮೊದಲಾದುದು, ಬ್ರಹ್ಮ=ಪರಬ್ರಹ್ಮವು, ಕಥಂ=ಹೇಗೆ, ನ ಸ್ಯಾತ್=ಆಗದೆ ಹೋಗುವುದು, ತತ್=ಆ ಅನ್ನಾದಿಗಳನ್ನು, ದ್ವಾರಮಿತಿ ದ್ವಾರವೆಂತೆಂದು, ವಾದಿನಃ=ಹೇಳುವವರು, ಉಪಸತ್ತಿಂ=ಬ್ರಹ್ಮಜ್ಞಾನಕ್ಕೆ, ಉಪಯುಕ್ತವಾದ ಉಪಸತ್ತಿಯ ಉತ್ತರಕಾಲದಲ್ಲಿರುವ ಗುರೂಪದೇಶಪ್ರಕಾರವನ್ನು, ಕಥಂ=ಹೇಗೆ ನ ವಿದ್ಯುಃ=ತಿಳಿಯದೆ ಹೋದಾರು? (ಅಂದರೆ ಗುರುಗಳ ಉಪದೇಶಪ್ರಕಾರವನ್ನು ತಿಳಿಯದೆ

ಮಾಡಿದ ಶಂಕೆಯನ್ನು ಏಕೆ ತಿಳಿಯಲಾರರು ಎಂದರೆ) ಉಪಸನ್ನಾಯ=ಗುರೂಪಸತ್ತಿಯನ್ನು ಮಾಡಿದವನಿಗೋಸ್ಕರ, ಗುರುಣಾ=ಗುರುಗಳಿಂದ, ತ್ರಿಃಶಃ=ಮೂರಾವರ್ತಿ, ಬ್ರಹ್ಮ ಹಿ=ಬ್ರಹ್ಮನೇ, ವಕ್ತವ್ಯಂ=ಹೇಳಲ್ಪಡಬೇಕು. ಅಥಾಪಿ=ಅಥವಾ, ಚತುರ್ವಾರಂ ವಾ=ನಾಲ್ಕಾವರ್ತಿಯಾಗಲೀ ಸಕೃದ್ವಾ = ಒಂದಾವರ್ತಿಯಾಗಲೀ, ವಕ್ತವ್ಯಂ = ಹೇಳಲ್ಪಡಬೇಕು. ಇತಿ = ಈ ಪ್ರಕಾರ, ಆಗಮಾಃ=ವೇದಗಳು, ಸಂಪ್ರದಾಯವಿದೋಽಪಿ ಚ=ಸ್ಮೃತಿ ಇತಿಹಾಸ ಪುರಾಣ ಕರ್ತೃಗಳೂ ಕೂಡ, ಬ್ರೂಯುಃ = ಹೇಳುತ್ತಾರೆ. ತತ್=ಆದಕಾರಣ, ಯತ್ಕಿಂಚಿತ್ = ಬ್ರಹ್ಮಜ್ಞಾನದ್ವಾರವನ್ನು, ಉಪಸನ್ನಾಯ=ಗುರೂಪಸತ್ತಿಯನ್ನು ಮಾಡುವವನಿಗೋಸ್ಕರ, ದಿಕ್ಪತಿಃ=ವರುಣನು, ಕಥಂ=ಹೇಗೆ, ಬ್ರೂಯಾತ್=ಬ್ರಹ್ಮನೇ ಎಂದು ಹೇಳಿಯಾನು. (ಬ್ರಹ್ಮನನ್ನು ಕೇಳಿದ ಭೃಗುವಿಗೋಸ್ಕರ ವರುಣನು ವ್ಯಾಮೋಹನಕ್ಕಾಗಿ ಅಬ್ರಹ್ಮನನೇ ಹೇಳಿದನೆಂದು ಏಕೆ ಆಗಲಾರದೆಂದರೆ) ಬ್ರಹ್ಮ ಚ=ಬ್ರಹ್ಮನನ್ನೇ, ಕಥಂ ನ ವದೇತ್=ಏಕೆ ಹೇಳದೆ ಇರುವವನು? ಅಂದರೆ ಬ್ರಹ್ಮನನ್ನೇ ಹೇಳುವನು. ವಾರಿರಾಟ್=ವರುಣನು, ಮಾಯಾವೀ=ಕಪಟಿಯಾದವನು, ನ ಹಿ=ಆಗಲಾರನಷ್ಟೆ.

ತಾ || ನ್ಯಾಯಸುಧಾ—(1) ಭೃಗುರ್ವೈ ವಾರುಣಿಃ | ವರುಣಂ ಪಿತರಮುಪಸಸಾರ | ಅಧೀಹಿ ಭಗವೋ ಬ್ರಹ್ಮೇತಿ | ತಸ್ಮಾ ಏತತ್ಪ್ರೋವಾಚ | ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋವಾಚಮಿತಿ | (ತೈ. ಉ. ಪು. ೧೬೪.) ಈ ಪ್ರಕಾರ ಪರಬ್ರಹ್ಮನ ವಿಷಯದಲ್ಲಿ ಭೃಗುಋಷಿಯು ಪ್ರಶ್ನೆ ಮಾಡಿದ್ದಕ್ಕೆ ಉತ್ತರವಾಗಿ ವರುಣನು ಹೇಳಿರುವುದರಿಂದ ಅನ್ನಾದಿಶಬ್ದವಾಚ್ಯವಾದ ವಸ್ತುವು ಬ್ರಹ್ಮನೇ ಆಗಲು ಯೋಗ್ಯವಾಗಿರುತ್ತದೆ. (2) ಬ್ರಹ್ಮವಿಷಯಕವಾದ ಪ್ರಶ್ನೆಗೆ ಉತ್ತರವಾಗಿ ಹೇಳಿದರಿಂದಮಾತ್ರ ವರುಣನು ಹೇಳಿದ ಅನ್ನಾದಿಗಳಿಗೆ ಬ್ರಹ್ಮತ್ವವು ಸಿದ್ಧಿಸುವುದಲ್ಲ, ಬ್ರಹ್ಮಜ್ಞಾನಕ್ಕೆ ಉಪಾಯವಾಗಿಯೂ ಅನ್ನಾದಿಗಳ ಉಪದೇಶವು ಕೂಡಬಹುದು. ಹೇಗೆಂದರೆ—ಚಂದ್ರನು ಯಾರು ಎಂದು ಪ್ರಶ್ನೆಮಾಡಿದ್ದಕ್ಕೆ ಚಂದ್ರಜ್ಞಾನಕ್ಕೆ ಉಪಾಯಭೂತವಾಗಿರುವುದರಿಂದ ಚಂದ್ರರೂಪವಾಗದಿರುವುದಾದರೂ ಶಾಖೆಯು ಚಂದ್ರನೆಂದು ಹೇಳಲ್ಪಡುತ್ತದೆ. ಅರುಂಧತೀನಕ್ಷತ್ರವು ಯಾವುದೆಂದು ಪ್ರಶ್ನೆಮಾಡಿದ್ದಕ್ಕೆ ಅರುಂಧತೀ ಜ್ಞಾನಕ್ಕೆ ದ್ವಾರವಾಗಿರುವುದರಿಂದ ಆ ನಕ್ಷತ್ರದ ಸಮೀಪದಲ್ಲಿರುವ ಸ್ಥೂಲವಾದ ನಕ್ಷತ್ರವೇ ಅರುಂಧತೀ ನಕ್ಷತ್ರವೆಂದು ಹೇಗೆ ಉಪದೇಶಿಸಲ್ಪಡುತ್ತದೋ, ಹಾಗೆಯೇ ಅನ್ನಾದಿಶಬ್ದಗಳಿಂದ ಹೇಳಲ್ಪಟ್ಟ ಶರೀರಾದಿಗಳು ಮನಸ್ಸಿಗೆ ಬಾಹ್ಯವ್ಯಾಪಾರಗಳನ್ನು ನಿವಾರಣೆ ಮಾಡುತ್ತಾ ಬ್ರಹ್ಮಜ್ಞಾನಕ್ಕೆ ದ್ವಾರಗಳಾಗಿ ಉಪಯುಕ್ತಗಳಾಗುತ್ತವೆ, ಎಂದರೆ— ಹೀಗೆ ಹೇಳಕೂಡದು. 'ಚಂದ್ರನು ಯಾರು ಎಂದು ಪ್ರಶ್ನೆಮಾಡಿದ್ದಕ್ಕೆ' ಚಂದ್ರಜ್ಞಾನೋಪಾಯವನ್ನು ಹೇಳುವವನು ಶಾಖಾದಿಗಳು ಚಂದ್ರಜ್ಞಾನೋಪಾಯವೆಂದೇ ಉಪದೇಶಿಸಬೇಕು. ಅಲ್ಲದೆ ಚಂದ್ರನೆಂದು ಹೇಳಬಾರದು. ಅಂತೂ ಬ್ರಹ್ಮಪ್ರಶ್ನೆಗೆ ಉತ್ತರವಾಗಿ ಹೇಳಿದ ಅನ್ನಾದಿಗಳು ಬ್ರಹ್ಮನೇ ಆಗಬೇಕು. ಈ ವಿಷಯದಲ್ಲಿ ಅನುಮಾನವು. "ಅನ್ನಾದಿಕಂ ಬ್ರಹ್ಮ ಭವಿತುಮರ್ಹತಿ ಬ್ರಹ್ಮಪ್ರಶ್ನೋತ್ತರತ್ವಾತ್ ಯತ್ ಯತ್ಪ್ರಶ್ನೋತ್ತರಂ ತತ್ತದ್ಭವತಿ=ಅನ್ನಾದಿಗಳು ಬ್ರಹ್ಮನು ಆಗಲಿಕ್ಕೆ ಯೋಗ್ಯವಾಗಿವೆ, ಬ್ರಹ್ಮವಿಷಯಕ ಪ್ರಶ್ನೆಗೆ ಉತ್ತರವಾಗಿರುವುದರಿಂದ, ಯಾವುದು ಯಾವ ಪ್ರಶ್ನೆಗೆ ಉತ್ತರವೋ ಅದು ಅದಾಗುತ್ತದೆ, ಎಂದು ವಿವಕ್ಷಿತಾನುಮಾನದಲ್ಲಿ (೧) ಶಾಖಾದಿಗಳಲ್ಲಿ ವ್ಯಭಿಚಾರವು ಶಂಕಿಸಲ್ಪಡುತ್ತದೋ, (೨) ಆ ಪ್ರಶ್ನೋತ್ತರತ್ವವು ಬ್ರಹ್ಮತ್ವವಿಲ್ಲದೆ ದ್ವಾರವಾಗಿಯೂ ಅನ್ಯಥಾಸಿದ್ಧವಾಗುತ್ತದೆ ಎಂದು, ಅನ್ಯಥಾಸಿದ್ಧಿಯು ಸಂಭಾವಿಸಲ್ಪಡುತ್ತದೋ, (೩) ಅಥವಾ ಅನ್ಯಥಾಸಿದ್ಧಿಯು ನಿಶ್ಚಯಿಸಲ್ಪಡುತ್ತದೋ,-ಈ ಮೂರುಪಕ್ಷವೂ ಕೂಡುವುದಿಲ್ಲವೆಂದು 'ದ್ವಾರಂ ತದಿತಿ ವಾದಿನಃ'

ಎನ್ನುವುದರಿಂದ ಹೇಳಿದರು. (3) ಗುರೂಪಸತ್ತಿಮಾಡುವವನಿಗೆ ಬ್ರಹ್ಮನನ್ನೇ ಹೇಳಬೇಕಲ್ಲದೆ ಯಾವುದಾದರೊಂದನ್ನು ಹೇಳುವುದಲ್ಲ, ಒಂದಾವರ್ತಿ ಹೇಳುವಾಗ ತಿಳಿಯದೆ ಇದ್ದರೂ ಮತ್ತೂ ಮತ್ತೂ ಶಬ್ದಾಂತರದಿಂದ ಬ್ರಹ್ಮನನ್ನೇ ಹೇಳಬೇಕು. ದ್ವಾರ (ಉಪಾಯ) ವನ್ನು ದ್ವಾರವೆಂದೇ ಹೇಳಬೇಕು. ದ್ವಾರ(ಉಪಾಯ)ವನ್ನು ಬ್ರಹ್ಮವೆಂದು ಹೇಳಬಾರದು. ಧೂಮವು ಅಗ್ನ್ಯಾತ್ಮಕವೆಂದು ತೋರಿಸಲ್ಪಡುವುದಿಲ್ಲವಷ್ಟೆ! ಚಂದ್ರಾದಿಪ್ರಶ್ನೆಗೆ ಶಾಖೆಯನ್ನು ಚಂದ್ರಜ್ಞಾನೋಪಾಯವನ್ನಾಗಿ ಹೇಳಿದರಿಂದ ಚಂದ್ರಾದ್ಯುದಾಹರಣವೂ ಅಸಿದ್ಧವೇ ಆಗಿದೆ. (4) ವರುಣನು ಆಪ್ತನಾಗಿರುವುದರಿಂದ ವ್ಯಾಮೋಹಿಸುವುದಕ್ಕಾಗಿ ಅಂದರೆ, ಮೋಸಕೊಡಬೇಕೆಂಬ ಉದ್ದೇಶದಿಂದ ಹೇಳಲಾರನು ದೀಕ್ಷಿತಿಯಾದ ವರುಣನಿಗೆ ವಿವಕ್ಷಿತಾರ್ಥ ತತ್ವಜ್ಞಾನವು ಪ್ರಸಿದ್ಧವೇ ಆಗಿದೆ. ವರುಣನು ತಂದೆಯೂ ಆಗಿರುವುದರಿಂದ ಆತನಿಗೆ ವಂಚನೇಚ್ಛೆಯೂ ಇರಲಾರದು. ಭೃಗು ಋಷಿಯು ಬ್ರಹ್ಮಜ್ಞಾನಕ್ಕೆ ಯೋಗ್ಯನಾಗಿರುತ್ತಾನೆ ಉಪಸನ್ನಾಯ ಎನ್ನುವುದರಿಂದ ಪ್ರಸಂಗ ದೋಷವೂ ನಿರಸ್ತವಾಯಿತು. ವಾರಿರಾಟ್ ಎನ್ನುವುದರಿಂದ ಭೂತಗಳಿಗೆ ಅಭಿಮಾನಿಯೆಂದು ಹೇಳಿರುವಪ್ರಯುಕ್ತ ಆತನಿಗೆ ಅಪಟುಕರಣತ್ವವು ಕೂಡಲಾರದು. ಉಪದೇಶಮಾಡಿದರಿಂದಲೇ ಹೇಳಬೇಕೆಂಬ ಇಚ್ಛೆಯೂ ಇದೆಎಂದು ಸಿದ್ಧಿಸುವುದು. ಈ ಅಭಿಪ್ರಾಯದಿಂದಲೇ ಶ್ರುತಿಯು 'ವರುಣಂ ಪಿತರಮುಪಸಸಾರ' ಎಂದು ಹೇಳಿರುತ್ತದೆ. ಆದಪ್ರಯುಕ್ತ ಆಪ್ತನಾದ ವರುಣನು ಬ್ರಹ್ಮವಿಷಯಕ ಪ್ರಶ್ನೆಗೆ ಉತ್ತರವಾಗಿ ಹೇಳಿದ್ದು ಅನ್ನಪ್ರಾಣಮೊದಲಾದವುಗಳಿಗೆ ಬ್ರಹ್ಮತ್ವವಿದೆ ಎನ್ನುವಲ್ಲಿ ಹೇತುವೆಂದು ಉಕ್ತವಾಯಿತು. ॥ ೨೨೩ ॥ ೨೨೪ ॥ ೨೨೫ ॥ ೨೨೬ ॥

ಹಾಗಾದರೆ ವರುಣನು ಉಪದೇಶಿಸಿದ ಅನ್ನಾದಿಗಳ ಮಧ್ಯದಲ್ಲಿ ಅನ್ನ-ಪ್ರಾಣ-ಮನಸ್ಸುಗಳು ಬ್ರಹ್ಮಸ್ವರೂಪಗಳಾಗಲಿ. ಅನ್ನಾದಿಶಬ್ದಗಳಿಗೆ ಅತ್ತೃತ್ವಮೊದಲಾದ ಅರ್ಥವು ಕೂಡುವುದರಿಂದ ಅನುಪಪತ್ತಿಯು ಇರುವುದಿಲ್ಲ. ಆದರೆ ಚಕ್ಷುಃ, ಶ್ರೋತ್ರ, ವಾಕ್ ಶಬ್ದಗಳಿಂದ ವಾಚ್ಯನಾದವನು ಬ್ರಹ್ಮನು ಹೇಗೆ ಆದಾನು? ಚಕ್ಷುರಾದಿ ಶಬ್ದಗಳಿಗೆ 'ಚಷ್ಟೇಽನೇನೇತಿ ಚಕ್ಷುಃ'= ಇದರಿಂದ ನೋಡುತ್ತಾನೆ. ಆದುದರಿಂದ, ಚಕ್ಷುಃ=ಕಣ್ಣು- 'ಶೃಣೋತ್ಯನೇನೇತಿ ಶ್ರೋತ್ರಂ'= ಇದರಿಂದ ಕೇಳುವಪ್ರಯುಕ್ತ ಕಿವಿಯು, 'ವದತ್ಯನಯೇತಿ ವಾಕ್'=ಇದರಿಂದ ಹೇಳುವಪ್ರಯುಕ್ತ ವಾಕ್ ಎನ್ನಿಸುತ್ತದೆ. ಈ ಶಬ್ದಗಳು ಕರಣಾರ್ಥಕಗಳಾಗಿವೆ. ಬ್ರಹ್ಮನಿಗೆ ಕರಣತ್ವವು ಕೂಡಲಾರದು, ಎಂದರೆ ಹಾಗೆ ಹೇಳಕೂಡದು. ಕರ್ತ್ರರ್ಥದಲ್ಲಿಯೂ ಚಕ್ಷುಃ ಮೊದಲಾದ ಶಬ್ದಗಳಿಗೆ ವ್ಯುತ್ಪತ್ತಿಯು ಕೂಡಬಹುದು, ಎನ್ನುತ್ತಾರೆ.

ಮೂ ॥ ಚಷ್ಟ ಇತ್ಯೇವ ತಚ್ಚಕ್ಷುಃ ಶ್ರವಣಾಚ್ಛ್ರೋತ್ರಮುಚ್ಯತೇ ।
ವಚನಾದೇವ ವಾಗ್ಬ್ರಹ್ಮ ಸೃಷ್ಟಿಸ್ಥಿತ್ಯಾದಿಕಾರಣಂ ॥ ೨೨೭ ॥
ತಚ್ಚ ವಾ ಭೂಲಶಾಖಾಯಾಮುಷ್ಪರೂಪಮುದಾಹೃತಂ ।
ವಿಜ್ಞಾನಾನಂದಸಹಿತಂ ಸ್ಪೃಥಕ್ಸೃಷ್ಟ್ಯಾದಿಲಕ್ಷಣೈಃ ॥ ೨೨೮ ॥

ಅ ॥ ತತ್=ಆ ಬ್ರಹ್ಮನು, ಚಷ್ಟ ಇತ್ಯೇವ=ಸ್ಪಷ್ಟವಾಗಿ ಹೇಳುವಪ್ರಯುಕ್ತವೇ, ಚಕ್ಷುಃ= ಚಕ್ಷುಶ್ಶಬ್ದವಾಚ್ಯನೆನ್ನಿಸುತ್ತಾನೆ, ಶ್ರವಣಾತ್=ಕೇಳುವಪ್ರಯುಕ್ತ, ಶ್ರೋತ್ರಂ=ಶ್ರೋತ್ರಶಬ್ದವಾಚ್ಯನೆಂದು, ಉಚ್ಯತೇ=ಹೇಳಲ್ಪಡುತ್ತಾನೆ. ಬ್ರಹ್ಮ=ಪರಬ್ರಹ್ಮನು, ವಚನಾದೇವ=ಹೇಳುವುದರಿಂದಲೇ, ವಾಕ್=ವಾಕ್ ಶಬ್ದವಾಚ್ಯನು. (ಯಾವಕಾರಣದಿಂದ) ಸೃಷ್ಟಿಸ್ಥಿತ್ಯಾದಿಕಾರಣಂ= ಸೃಷ್ಟಿಸ್ಥಿತ್ಯಾದಿಗಳಿಗೆ ಕಾರಣನೆಂದು, (ಹೇಳಲ್ಪಟ್ಟದ್ದಾನೋ ಆದಪ್ರಯುಕ್ತವೂ ಬ್ರಹ್ಮನೇ.)

(ಹಾಗಾದಾಗ್ಯೂ ಎರಡು ಅನುವಾಕಗಳಲ್ಲಿ ಹೇಳಲ್ಪಟ್ಟದ್ದು ಒಂದು ವಸ್ತುವಾಗಲಿಕ್ಕೆ ಯೋಗ್ಯವಾಗುವುದಿಲ್ಲ. ಸಂಖ್ಯೆಗಳೂ ಬೇರೆಯಾಗಿವೆ. ಸಂಜ್ಞೆಗಳೂ ಬೇರೆಬೇರೆಯಾಗಿವೆ. ಮೊದಲು ಅನ್ನಮಯಮೊದಲಾದುವುಗಳು ಐದು ಹೇಳಲ್ಪಟ್ಟವೆ ಚಕ್ಷುಃ-ಶ್ರೋತ್ರ-ವಾಕ್‌ಗಳು ಹೇಳಲ್ಪಡಲಿಲ್ಲ. ಮೇಲೆಯಾದರೂ ಅನ್ನಮೊದಲಾದುವುಗಳು ಆರು ಹೇಳಲ್ಪಟ್ಟವೆ. ವಿಜ್ಞಾನಾನಂದಗಳು ಹೇಳಲ್ಪಡುವುದಿಲ್ಲ ಎಂದರೆ—) ಚ=ಯಾವ ಕಾರಣದಿಂದ, ವಾಧೂಲಶಾಖಾಯಾಂ=ವಾಧೂಲ ಶಾಖೆಯಲ್ಲಿ, ವಿಜ್ಞಾನಾನಂದಸಹಿತಂ=ವಿಜ್ಞಾನ. ಆನಂದಗಳಿಂದಕೂಡಿರುವ, ತತ್=ಅನ್ನಮೊದಲಾದುದು ಆರು. ಹೀಗೆ, ಅಷ್ಟರೂಪಂ=ಎಂಟುರೂಪಗಳುಳ್ಳವನೆಂದು, ಉದಾಹೃತಂ=(ಬ್ರಹ್ಮನು) ಹೇಳಲ್ಪಟ್ಟಿದ್ದಾನೆ. (ಆದಕಾರಣ ಅದನ್ನು ಅನುಸರಿಸಿಕೊಂಡು ಪ್ರಥಮಾನುವಾಕದಲ್ಲಿ ಚಕ್ಷುಃಶ್ರೋತ್ರ ವಾಕ್‌ಗಳನ್ನೂ, ಉತ್ತರಾನುವಾಕದಲ್ಲಿ ವಿಜ್ಞಾನ ಆನಂದಗಳನ್ನೂ ಅಧ್ಯಾಹಾರ ಮಾಡಿಕೊಂಡು ಸಂಖ್ಯಾಸಂಜ್ಞೆಗಳಿಗೆ ಸಾಮ್ಯವನ್ನು ಇಟ್ಟುಕೊಳ್ಳಬೇಕು ಅಥವಾ ಹೇತ್ವಂತರ ಸಮುಚ್ಚಾಯಕವಾದುದು ಚ ಶಬ್ದವು. ಇಲ್ಲಿಯೂ 'ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್' 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಎಂದು ಉತ್ತರವಾಕ್ಯವನ್ನು ಪರ್ಯಾಲೋಚಿಸಿಯೂ ಇಲ್ಲಿ ವಿಜ್ಞಾನ ಆನಂದಗಳನ್ನು ಅಧ್ಯಾಹಾರ ಮಾಡಬೇಕೆಂದು ತಿಳಿಯುತ್ತದೆ. ಒಂದು ವಸ್ತುವನ್ನು ವರುಣನು ಉಪದೇಶಿಸಿದನು. ಭೃಗುವು ಮತ್ತೊಂದನ್ನು ತಿಳಿದನೆನ್ನುವುದು ಕೂಡಲಾರದು.) (ವಾಧೂಲ ಶಾಖೆಯಲ್ಲಿ ಹೇಳಿದ್ದು ಏಕೆ ಬ್ರಹ್ಮರೂಪವೆಂದರೆ) ಪೃಥಕ್=ಪ್ರತ್ಯೇಕವಾಗಿ, ಸೃಷ್ಟ್ಯಾದಿಲಕ್ಷಣೈಃ=ಸೃಷ್ಟಿಸ್ಥಿತಿ ಮೊದಲಾದ ಲಕ್ಷಣಗಳಿಂದ, (ವಾಧೂಲ ಶಾಖೆಯಲ್ಲಿ ಹೇಳಲ್ಪಟ್ಟವನು ಬ್ರಹ್ಮನೇ ಆಗಬೇಕು ಅನೇಕಶಾಖೆಗಳನ್ನು ತಿಳಿದವನಿಗೇನೇ ಚೆನ್ನಾಗಿ ಅಧಿಕಾರವೆಂದು ತಿಳಿಸುವುದಕ್ಕಾಗಿ ವಾಧೂಲ ಶಾಖೆಯಲ್ಲಿ ಹೇಳಿದ್ದೆಂದು ಹೇಳಿದ್ದಾಗಿರುತ್ತದೆ. ॥ ೨೭ ॥ ॥ ೨೮ ॥

ಹಾಗಾದರೆ 'ತಸ್ಮಾದ್ವಾ ಏತಸ್ಮಾದನ್ನರಸಮಯಾತ್ । ಅನ್ಯೋಽಂತರ ಆತ್ಮಾ ವಾಙ್ಮಯಃ। ತಸ್ಮಾದ್ವಾ ಏತಸ್ಮಾದ್ವಾಙ್ಮಯಾದನ್ಯೋಽಂತರ ಆತ್ಮಾ ಚಕ್ಷುರ್ಮಯಃ। ತಸ್ಮಾದ್ವಾ ಏತಸ್ಮಾಚ್ಚಕ್ಷುರ್ಮಯಾದನ್ಯೋಽಂತರ ಆತ್ಮಾ ಶ್ರೋತ್ರಮಯಃ ತಸ್ಮಾತ್ಪ್ರಾಣಮಯಃ ತಸ್ಮಾನ್ಮನೋಮಯಃ ತಸ್ಮಾದ್ವಿಜ್ಞಾನಮಯಃ ತಸ್ಮಾದಾನಂದಮಯಃ' ॥ ಎಂದು ವಾಧೂಲಶಾಖೆಯಲ್ಲಿ ಹೇಳಿದಂತೆಯೇ ಇಲ್ಲಿ ಬ್ರಹ್ಮವಲ್ಲಿಯಲ್ಲಿಯೂ, ಭೃಗುವಲ್ಲಿಯಲ್ಲಿಯೂ ಎರಡುಕಡೆಗಳಲ್ಲಿಯೂ ಎಂಟು ರೂಪಗಳಿಂದೇ ಏತಕ್ಕೆ ಹೇಳಬಾರದು ಎಂದರೆ—

ಮೂ॥ ಆವಾಪೋದ್ವಾಪತಃ ಶಾಖಾ ಯತ ಆಹುಃ ಪರಂ ಪದಂ ।
ಯತೋ ಭೂತಾನಿ ಜಾಯಂತೇ ಇತ್ಯಾದ್ಯೈರ್ಲಕ್ಷಣೈಃ ಸ್ವಯಂ॥೨೯॥
ಲಕ್ಷಿತಂ ಗುರುಣಾ ಪಶ್ಚಾತ್ತಪಸೈವಾಪರೋಕ್ಷತಃ ।
ದೃಷ್ಟ್ವೈಕೈಕಸ್ವರೂಪಂ ತು ಸಮಸ್ತೋಕ್ತ್ಯಾನುದರ್ಶನಂ ॥ ೩೦ ॥
ಇಚ್ಛತಾಽಜ್ಞಾಂ ಗುರೋಃ ಪ್ರಾಪ್ಯ ತಪಸೈವಾಪರೋಕ್ಷಿತಂ ।
ಅಬ್ರಹ್ಮೇತ್ಯೇವ ವದತಾಂ ಶ್ರುತಹಾನ್ಯಶ್ರುತಗ್ರಹೌ ।
ಸಾಕ್ಷಾಲ್ಲಕ್ಷಣತಾಂ ಪ್ರಾಪ್ತಾವಿತಿ ಲಜ್ಜಾ ತದುಕ್ತಿಷು ॥ ೩೧ ॥

ಅ ॥ ಯತಃ=ಯಾವಕಾರಣದ್ದೆಶೆಯಿಂದ, ಆವಾಪೋದ್ವಾಪತಃ=ಪ್ರಕ್ಷೇಪ ಪರಿತ್ಯಾಗಗಳದ್ದೆಶೆಯಿಂದ, ಶಾಖಾಃ=ಋಗಾದಿಶಾಖೆಗಳು, ಪರಂ=ಸರ್ವೋತ್ತಮವಾದ, ಪದಂ=

ಸ್ವರೂಪವನ್ನು, ಆಹುಃ=ಪ್ರತಿಪಾದಿಸುತ್ತವೋ, ಯತಃ=ಯಾವ ಶ್ರೀಪರಮಾತ್ಮನದ್ದೆಶೆಯಿಂದ, ಭೂತಾನಿ=ಪ್ರಾಣಿಗಳೆಲ್ಲವೂ, ಜಾಯಂತೇ=ಹುಟ್ಟುತ್ತವೆ, ಇತ್ಯಾದ್ಯೈಃ=ಇದುಮೊದಲಾದ, ಸ್ವಯಂ ಲಕ್ಷಣೈಃ=ಸ್ವರೂಪಲಕ್ಷಣಗಳಿಂದ. ಗುರುಣಾ=ಗುರುವಾದ ವರುಣನಿಂದ. ಏತಚ್ಚ=ಈ ಅನ್ನಾದಿರೂಪನಾದ ಪರಬ್ರಹ್ಮನು. ಲಕ್ಷಿತಂ=ಲಕ್ಷಿತನಾಗಿ ಉಪದಿಷ್ಟನಾಗಿದ್ದಾನೆ ಪಶ್ಚಾತ್=ಆಮೇಲೆ, (ಶಿಷ್ಯೇಣ=ಶಿಷ್ಯನಿಂದ) ತಪಸೈವ=ತಪಸ್ಸಿನಿಂದಲೇ, ಅಪರೋಕ್ಷಿತಃ=ಪ್ರತ್ಯಕ್ಷವಾಗಿ, ಏಕೈಕಸ್ವರೂಪಂತು = ಅನ್ನಮೊದಲಾದ ಒಂದೊಂದು ಸ್ವರೂಪವನ್ನಾದರೂ, ದೃಷ್ಟ್ವಾ = ನೋಡಿ, ಸಮಸ್ತೋಕ್ತಾನುದರ್ಶನಂ = ಗುರುಗಳಿಂದ ಉಪದಿಷ್ಟವಾದ ಎಲ್ಲಾ ರೂಪಗಳ ಅಪರೋಕ್ಷ ಜ್ಞಾನವನ್ನು, ಇಚ್ಛತಾ=ಇಚ್ಛಿಸುವ ಭೃಗುವಿನಿಂದ, ಗುರೋಃ=ವರುಣನ, ಆಜ್ಞಾಂ=ಆಜ್ಞೆಯನ್ನು, ಪ್ರಾಪ್ಯ=ಹೊಂದಿ, ತಪಸೈವ=ತಪಸ್ಸಿನಿಂದಲೇ, ಅಪರೋಕ್ಷಿತಂ=ಪ್ರತ್ಯಕ್ಷೀಕರಿಸಲ್ಪಟ್ಟ ರೂಪವನ್ನು, ಅಬ್ರಹ್ಮ=ಬ್ರಹ್ಮನಲ್ಲ, ಇತ್ಯೇವ=ಈ ಪ್ರಕಾರವಾಗಿಯೇ. ವದತಾಂ=ಹೇಳುವವರಿಗೆ, ಶ್ರುತಹಾನ್ಯಶ್ರುತಗಹೌ=ಶ್ರುತವಾದುದನ್ನು ಬಿಡುವುದು, ಅಶ್ರುತವಾದುದನ್ನು ಕಲ್ಪಿಸುವುದು, ಎನ್ನುವುದು ಎರಡು, ಸಾಕ್ಷಾತ್=ಮುಖ್ಯವಾಗಿ, ಲಕ್ಷಣತಾಂ=ಲಕ್ಷಣತ್ವವನ್ನು, ಪ್ರಾಪ್ತೌ=ಹೊಂದುತ್ತವೆ. ಇತಿ=ಈ ಪ್ರಕಾರ, ತದುಕ್ತಿಷು=ಮಾಯಾವಾದಿಗಳ ವಚನಗಳನ್ನು ದೂಷಿಸುವವಿಷಯದಲ್ಲಿ, (ನಮಗೇನೇ) ಲಜ್ಜಾ=ನಾಚಿಕೆಯು ಬರುತ್ತದೆ.

ಶಾ || ಸ. ರ. ವಿ—(1) ಯದ್ಯಪಿ ಇಲ್ಲಿ ಮೊದಲು ಹೇಳಿದ ವಿಜ್ಞಾನ-ಆನಂದಾದಿಗಳ ದ್ವಾರಾ ಚಕ್ಷುಃ ಶ್ರೋತ್ರ ವಾಕ್‌ಗಳಿಂದ ಅನ್ನಾದಿ ಆರುರೂಪಗಳುಳ್ಳ ಬ್ರಹ್ಮನೇ ಉಪದಿಷ್ಟನಾಗಿದ್ದಾನೆ. ಆದಾಗ್ಯೂ ವಿಜ್ಞಾನ ಆನಂದಗಳಿಂದ ಸಹಿತನಾದ ಅನ್ನಮೊದಲಾದರೂಪಗಳುಳ್ಳ ಬ್ರಹ್ಮನು ವಾಧೂಲ ಶಾಖೆಯಲ್ಲಿ ಪ್ರತಿಪಾದಿತನಾಗಿದ್ದಾನೆ. ವಿಜ್ಞಾನ ಆನಂದಗಳಿಗೆ ಅಬ್ರಹ್ಮತ್ವವನ್ನು ಶಂಕಿಸಕೂಡದು. ಯಾವಕಾರಣದ್ದೆಶೆಯಿಂದ ಶಾಖೆಗಳು ಆವಾಪೋದ್ವಾಪಗಳಿಂದ ಸರ್ವೋತ್ತಮನಾದ ಶ್ರೀ ಹರಿಯನ್ನು ಪ್ರತಿಪಾದಿಸುತ್ತವೆ. ಈ ಅನ್ನಮೊದಲಾದರೂಪಗಳುಳ್ಳ ಬ್ರಹ್ಮನು **'ಯತೋ ವಾ ಇಮಾನಿ ಭೂತಾನಿ ಜಾಯಂತೇ। ಯೇನ ಜಾತಾನಿ ಜೀವಂತಿ। ಯತ್ಪ್ರಯಂತ್ಯಭಿಸಂವಿಶಂತಿ। ತದ್ವಿಜಿಜ್ಞಾಸಸ್ವ। ತದ್ಬ್ರಹ್ಮೇತಿ'** । (ತೈ. ಉ. ಪು. ೧೬೪) ಎಂದು ಸೃಷ್ಟ್ಯಾದಿ ಲಕ್ಷಣಗಳಿಂದ ಲಕ್ಷಿತನಾಗಿ ವರುಣನಿಂದ ಉಪದಿಷ್ಟನಾಗಿದ್ದಾನೆ. ಶಿಷ್ಯನಾದ ಭೃಗುವಿನಿಂದ ತಪಸ್ಸಿನಿಂದಲೇ ಪ್ರತ್ಯಕ್ಷೀಕರಿಸಲ್ಪಟ್ಟ ರೂಪವು ಬ್ರಹ್ಮವಲ್ಲವೆಂದು ಹೇಳಕೂಡದು. ಪ್ರಸಿದ್ಧವಾದ ಅನ್ನಾದಿಗಳನ್ನು ತಪಸ್ಸಿನಿಂದ ಪ್ರತ್ಯಕ್ಷೀಕರಿಸಬೇಕಾಗಿಲ್ಲ. ಅನ್ನಾದಿಗಳಿಗೆ ಬ್ರಹ್ಮತ್ವವಿದ್ದರೆ **'ಸ ತಪೋಽತಪ್ಯತ। ಸ ತಪಸ್ತಪ್ತ್ವಾ। ಅನ್ನಂ ಬ್ರಹ್ಮೇತಿ ವ್ಯಜಾನಾತ್'** ಎಂದು ಅನ್ನಜ್ಞಾನದಿಂದಬ್ರಹ್ಮನು ತಿಳಿಯಲ್ಪಟ್ಟಿರುವಪ್ರಯುಕ್ತ ಪುನಃ **'ಸ ತಪೋಽತಪ್ಯತ। ಸ ತಪಸ್ತಪ್ತ್ವಾ। ಪ್ರಾಣೋ ಬ್ರಹ್ಮೇತಿ ವ್ಯಜಾನಾತ್'** । (ಪು. ೧೬೫) ಇತ್ಯಾದಿಗಳು ವ್ಯರ್ಥವೆಂದು ಹೇಳಕೂಡದು. ಉಪದಿಷ್ಟಗಳಾದ ಅನ್ನಮೊದಲಾದ ಐದು ರೂಪಗಳುಳ್ಳ ಬ್ರಹ್ಮನ ಒಂದು ರೂಪವನ್ನು ಪ್ರತ್ಯಕ್ಷೀಕರಿಸಿದ ಮೇಲೆ ರೂಪಾಂತರವನ್ನು ಪ್ರತ್ಯಕ್ಷೀಕರಿಸಬೇಕೆಂಬ ಇಚ್ಛೆಯಿಂದ ಪುನಃ ಧ್ಯಾನಾದಿರೂಪವಾದ ತಪಸ್ಸು ವ್ಯರ್ಥವಾಗುವುದಿಲ್ಲ. (2) **ತದ್ವಿಜ್ಞಾಯ। ಪುನರೇವ ವರುಣಂ ಪಿತರಮುಪಸಸಾರ। ಅಧೀಹಿ ಭಗವೋ ಬ್ರಹ್ಮೇತಿ। ತಂಹೋವಾಚ। ತಪಸಾ ಬ್ರಹ್ಮ ವಿಜಿಜ್ಞಾಸಸ್ವ।** (ಪು. ೧೬೫) ಎಂದು ಆವೃತ್ತಿಯು. ಪ್ರತಿರೂಪವನ್ನು ಪ್ರತ್ಯಕ್ಷೀಕರಿಸುವುದರಲ್ಲಿ ಗುರ್ವನುಜ್ಞೆಯನ್ನು ಹೊಂದುವುದಕ್ಕಾಗಿ, ಮೊದಲು ಮೊದಲು ಹೇಳಿರುವ ರೂಪಗಳಿಗೆ 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿಗಳಿಂದ ಬ್ರಹ್ಮತ್ವವೇ ಶ್ರುತವಾಗಿರುವುದರಿಂದ ಅಬ್ರಹ್ಮತ್ವವನ್ನು ಹೇಳಿದರೆ ಅಶ್ರುತ

ಕಲ್ಪನಾದೋಷವು ಬರುವುದು. (3) ಮತ್ತು "ಅನ್ನಾದ್ಧ್ಯೇವ ಖಲ್ವಿಮಾನಿ ಜಾಯಂತೇ। ಅನ್ನೇನ ಜಾತಾನಿ ಜೀವಂತಿ। ಅನ್ನಂಪ್ರಯಂತ್ಯಭಿಸಂಪಿಶಂತಿ" । (ಪು. ೧೬೪) ಇತ್ಯಾದಿಗಳಿಂದ ಪ್ರತಿರೂಪದಲ್ಲಿ ಬ್ರಹ್ಮಲಿಂಗವು ಕಾಣುವುದರಿಂದಲೂ ಅನ್ನಮೊದಲಾದ ಐದು ರೂಪಗಳುಳ್ಳವನು ಬ್ರಹ್ಮನೇ. ಅನ್ನಮೊದಲಾದ ಶಬ್ದವಾಚ್ಯವಾದುದು ಬ್ರಹ್ಮವಲ್ಲವೆಂದು ಯಾರು ಹೇಳುತ್ತಾರೋ ಅವರಿಗೆ ಶ್ರುತಹಾನಿ ಅಶ್ರುತಕಲ್ಪನಾ ದೋಷಗಳು ಬರುವವು. ಅವರ ಮತವನ್ನು ಅನುವಾದ ಮಾಡಿದರೆ ನಮಗೇನೇ ನಾಚಿಗೆಯು ಹುಟ್ಟುವುದು.

ತಾ ॥ ನ್ಯಾಯಸುಧಾ— (1) ಆವಾಪೋದ್ವಾಪಗಳು ಹೇಗೆಂದರೆ— ೧ ಬ್ರಹ್ಮವಲ್ಲಿಯಲ್ಲಿ ಹೇಳಲ್ಪಡದಿರುವ ಚಕ್ಷುರಾದಿಗಳಿಗೆ ಭೃಗುವಲ್ಲಿಯಲ್ಲಿ ಆವಾಪವು(ಪ್ರಕ್ಷೇಪವು)ಅಂದರೆ(ಹೇಳುವಿಕೆ.) ೨ ಭೃಗುವಲ್ಲಿಯಲ್ಲಿ ಹೇಳಲ್ಪಟ್ಟ ಚಕ್ಷುರಾದಿಗಳಿಗೆ ಬ್ರಹ್ಮವಲ್ಲಿಯಲ್ಲಿ ಉದ್ವಾಪವು (ಹೇಳದಿರುವಿಕೆಯು). ೩ ಭೃಗುವಲ್ಲಿಯಲ್ಲಿಯೇ ಬೇರೆ ಕಡೆ ಹೇಳಲ್ಪಡದಿರುವ ಚಕ್ಷುರಾದಿಗಳ ಉದ್ವಾಪವು ಬೇರೆ ಕಡೆಯಲ್ಲಿ ಹೇಳಿರುವ ಜ್ಞಾನಾದಿಗಳ ಉದ್ವಾಪವು ಹೀಗೆ ಎರಡು ಪ್ರಕಾರವಾಗಿಯೂ, ೪ ಕೆಲವು ಕಡೆ ವಾಧೂಲಶಾಖೆಯಲ್ಲಿ ಸಂಪೂರ್ಣವಾಗಿ ಹೇಳುವಿಕೆ, ಈ ಪ್ರಕಾರ ಪರಮೇಶ್ವರನ ಸ್ವರೂಪವನ್ನು ಪ್ರತಿಪಾದಿಸುವಂತಾದ್ದು ಶಾಖೆಗಳ ಸ್ವಭಾವವು; ಆದಕಾರಣ ಯಾವ ವಿರೋಧವೂ ಇಲ್ಲ. (2) ಅಹುದು ಆದಾಗ್ಯೂ ವರುಣನು ಉಪದೇಶಿಸಿದ ಅನ್ನಾದಿಗಳಿಗೆ ಬ್ರಹ್ಮತ್ವವು ಕೂಡುವುದಿಲ್ಲ. ಏಕೆಂದರೆ— 'ತದ್ವಿಜಿಜ್ಞಾಸಸ್ವ' 'ಪುನರೇವ ವರುಣಂ ಪಿತರಮುಪಸಸಾರ' ಎಂದು ಉಪದೇಶವನ್ನು ಹೊಂದಿದ ಭೃಗುವಿಗೂ ಪುನಃ ಉಪಸರಣವನ್ನು ಹೇಳಿರುತ್ತದೆ. (3) ಹಿಂದೆ ಹೇಳಿದ್ದೇ ಬ್ರಹ್ಮವಾಗಿದ್ದರೆ 'ಅಧೀಹಿ ಭಗವೋ ಬ್ರಹ್ಮೇತಿ' ಎಂದು ಪುನಃ ಬ್ರಹ್ಮೋಪದೇಶವನ್ನು ಹೊಂದುವುದಕ್ಕಾಗಿ ಗುರೂಪಸತ್ತಿಯು ವ್ಯರ್ಥವಾಗುವುದು. ಇದರಿಂದ ಮೊದಲು ಉಪದಿಷ್ಟವಾದುದು ಬ್ರಹ್ಮವಲ್ಲವೆಂದು ತಿಳಿಯುತ್ತದೆ. ಹೇಗೆಂದರೆ, ಯಾವನಾದರೊಬ್ಬನು ಸುವರ್ಣವನ್ನು ಬೇಡಿದವನಿಗೆ ಬೆಳ್ಳಿಯನ್ನು ಕೊಡುತ್ತಾನೆ. ಅವನಾದರೂ ಅದನ್ನು ತೆಗೆದುಕೊಂಡು ತಾನೇ ಇದು ಸುವರ್ಣವಲ್ಲವೆಂದು ಆಲೋಚನೆ ಮಾಡಿ ಮತ್ತು ಮತ್ತೂ ಸುವರ್ಣವನ್ನು ನನಗೆ ಕೊಡು ಎಂದು ಬೇಡಿದರೆ ಅದರಿಂದ ಸಮೀಪದಲ್ಲಿದ್ದ ಹುಡುಗನು ಮೊದಲು ಕೊಟ್ಟದ್ದು ಬೇರೆಯೇ ಯಾವುದೋ ಒಂದು; ಸುವರ್ಣವಲ್ಲವೆಂದು ತಿಳಿಯುತ್ತಾನೆ. ಅದೇ ಪ್ರಕಾರ ಇಲ್ಲಿಯೂ ಮತ್ತು ಮತ್ತೂ ಪರಬ್ರಹ್ಮನನ್ನು ಉಪದೇಶಿಸು ಎಂದು ಗುರೂಪಸತ್ತಿಯನ್ನು ಮಾಡಿದರಿಂದ ಮೊದಲು ಉಪದಿಷ್ಟವಾದುದು ಬೇರೆಯೇ, ಬ್ರಹ್ಮನಲ್ಲವೆನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಯತೋ ಭೂತಾನಿ ಜಾಯಂತೇ' ಇತ್ಯಾದಿಗಳು. ಅಂದರೆ, ಪುನಃ ಗುರೂಪಸತ್ತಿಯು ಅನ್ಯಥಾನುಪಪನ್ನವಾಗಿ ಮೊದಲು ಉಪದಿಷ್ಟವಾದುದು ಬ್ರಹ್ಮವಲ್ಲವೆಂದು ಕಲ್ಪಿಸಕೂಡದು. ಪುನಃ ಪುನಃ ಗುರೂಪಸತ್ತಿಯು ಬೇರೆ ರೀತಿಯಾಗಿಯೂ ಕೂಡಬಹುದು. ಹೇಗೆಂದರೆ,ವರುಣನು ಉದ್ದೇಶಲಕ್ಷಣಗಳಿಂದ ಭೃಗುವಿಗೋಸ್ಕರ ಬ್ರಹ್ಮನನ್ನು ಉಪದೇಶಕೊಟ್ಟು ಹೇಳಿದನು. ಏನೆಂದರೆ, ಶ್ರವಣಮಾತ್ರದಿಂದ ನೀನು ಕೃತಾರ್ಥನಾಗುವುದಿಲ್ಲ. ಶ್ರವಣಮಾತ್ರವು ಬ್ರಹ್ಮನ ಸಾಕ್ಷಾತ್ಕಾರಕ್ಕೆ ಸಾಧನವಾಗಲಾರದು. ಸಾಕ್ಷಾತ್ಕಾರವೇ ಮೋಕ್ಷಕ್ಕೆ ಸಾಧನವು. ಆದುದರಿಂದ ನೀನು ಮನನ ನಿದಿಧ್ಯಾಸನರೂಪ ತಪಸ್ಸನ್ನು ಮಾಡಬೇಕು ಎಂದು. ಆ ಭೃಗುವಾದರೂ ಈ ಪ್ರಕಾರ ಅನ್ನಮೊದಲಾದ ಎಂಟು ರೂಪಗಳ ಉಪದೇಶವನ್ನು ಪಡಕೊಂಡವನಾಗಿ ಏಕಕಾಲದಲ್ಲಿ ಎಲ್ಲಾ ರೂಪಗಳನ್ನು ಸಾಕ್ಷಾತ್ಕರಿಸಲಿಕ್ಕೆ ಅಶಕ್ಯವಾದಪ್ರಯುಕ್ತ ಮನನ ನಿದಿಧ್ಯಾಸನಗಳಿಂದ ಅನ್ನಾಖ್ಯವಾದ ಭಗವದ್ರೂಪವನ್ನು ಸಾಕ್ಷಾತ್ಕರಿಸಿ ಗುರುಪ್ರಸಾದದಿಂದ ಲಬ್ಧವಾದ ಅತ್ಯಪೂರ್ವವಾದ ಧನದಂತೆ ಇದ್ದದ್ದನ್ನು ಆತನಿಗೆ ತಿಳಿಸುವುದಕ್ಕಾಗಿ ಪ್ರಾಣಾಖ್ಯ

ರೂಪಾಂತರವನ್ನು ಸಾಕ್ಷಾತ್ಕರಿಸುವುದಕ್ಕೋಸ್ಕರ ಮನನ ನಿದಿಧ್ಯಾಸನಗಳನ್ನು ಮಾಡಲಿಚ್ಛಿಸುವವನಾಗಿ ಗುರುಗಳ ಅನುಜ್ಞೆಯನ್ನು ಹೊಂದಬೇಕೆಂಬ ಉದ್ದೇಶದಿಂದ ಪುನಃ ಗುರೂಪಸತ್ತಿಯನ್ನು ಮಾಡಿದನು. ಇದೇ ರೀತಿಯಾಗಿ ರೂಪಾಂತರಗಳಲ್ಲಿಯೂ ಇಟ್ಟುಕೊಳ್ಳಬೇಕು. (3) ಅನುಜಾನೀಹಿ=ಅನುಜ್ಞೆ ಕೊಡು ಎಂದು ಹೇಳುವ ಬದಲಿಗೆ 'ಅಧೀಹಿ ಭಗವೋ ಬ್ರಹ್ಮ' ಎಂದು ಹೇಳಿದ್ದು ಅಹಂಕಾರವನ್ನು ನಿರಾಕರಿಸುವುದಕ್ಕಾಗಿ. (4) ಹಾಗಾದರೆ, ಪುನಃಪುನಃ ಗುರೂಪಸತ್ತ್ಯನ್ಯಥಾನುಪಪತ್ತಿಯು ಅನುಜ್ಞಾಸ್ವೀಕಾರವನ್ನು ಮಾಡುವುದಕ್ಕಾಗಿ ಎಂದು ಬೇರೆ ರೀತಿಯಾಗಿಯೂ ಕೂಡುವುದರಿಂದ ಕುಂಠಿತಶಕ್ತಿಯುಳ್ಳದ್ದಾಗಲಿ, (೧) ಆದಾಗ್ಯೂ ಮೊದಲು ಮೊದಲು ಹೇಳಿದ್ದು ಬ್ರಹ್ಮವಲ್ಲದಿರುವುದರಿಂದ ಪುನಃಪುನಃ ಗುರೂಪಸತ್ತಿಯೋ, (೨) ಅಥವಾ ಹಿಂದೆ ಹೇಳಿದಪ್ರಕಾರ ಅನುಜ್ಞೆಯನ್ನು ಹೊಂದುವುದಕ್ಕಾಗಿ ಪುನಃ ಪುನಃ ಗುರೂಪಸತ್ತಿಯೋ ಎಂದು ಸಂಶಯಬರುತ್ತದೆ. ಸಂಶಯ ಬಂದರೆ ಅನ್ನಮಯಾದಿಗಳು ಬ್ರಹ್ಮರೂಪಗಳು ಎನ್ನುವ ನಿಶ್ಚಯವು ಕೂಡುವುದಿಲ್ಲ, ಎಂದರೆ ಹೀಗೆ ಹೇಳಕೂಡದು. 'ಯತೋ ವಾ ಇಮಾನಿ ಭೂತಾನಿ ಜಾಯಂತೆ' ಇದುಮೊದಲಾದ ವಾಕ್ಯಗಳಲ್ಲಿ ಹೇಳಿರುವ ಸೃಷ್ಟಿಕರ್ತೃತ್ವಮೊದಲಾದ ಲಕ್ಷಣಗಳಿಂದಲೂ, ತಪಸ್ಸಿನಿಂದಲೇ ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿದನು ಎನ್ನುವ ಅಪರೋಕ್ಷಿತತ್ವ ಲಿಂಗದಿಂದಲೂ ಅನ್ನಮಯಾದಿ ಶಬ್ದಗಳಿಂದ ವಾಚ್ಯನಾದವನು ಪರಬ್ರಹ್ಮನೇ ಎನ್ನುವ ನಿಶ್ಚಯವು ಆಗಬಹುದು. ಶರೀರಾದಿಗಳಲ್ಲಿ ಈ ಲಕ್ಷಣವು ಕೂಡುವುದಿಲ್ಲ. ಅಂತಹ ಶರೀರಾದಿಗಳು ಯಾವಾಗಲೂ ತಿಳಿಯಲ್ಪಟ್ಟವುಗಳೇ ಆಗಿರುವುದರಿಂದ ಅವುಗಳನ್ನು ತಿಳಿಯುವುದಕ್ಕಾಗಿ ತಪಸ್ಸು ಮಾಡಬೇಕಾಗಿಲ್ಲ. (5) ಮತ್ತು ಮೊದಲು ಉಪದೇಶಮಾಡಲ್ಪಟ್ಟದ್ದು ಪರಬ್ರಹ್ಮರೂಪವಾಗದಿರುವುದರಿಂದ ಪುನಃ ಭೃಗುಋಷಿಯು ಬ್ರಹ್ಮಜ್ಞಾನವನ್ನು ಹೊಂದುವುದಕ್ಕಾಗಿ ಗುರೂಪಸತ್ತಿಯನ್ನು ಮಾಡಿದ್ದೆಂದು ಹೇಳಿವರೆ 'ಸ ತಪಸ್ತಪ್ತ್ವಾ । ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ' ಇತ್ಯಾದಿ ರೀತಿಯಾಗಿಯೇ ಹೇಳುತ್ತಿದ್ದರು. (6) ಈ ಪ್ರಕಾರ ಬ್ರಹ್ಮತ್ವವನ್ನು ಜ್ಞಾಪಿಸಿಕೊಡತಕ್ಕವುಗಳು ಶ್ರುತಗಳಾಗಿರುವಾಗ ಅಶ್ರುತವಾದ ಅಬ್ರಹ್ಮತ್ವವನ್ನು ಕಲ್ಪಿಸುವವರಿಗೆ ಶ್ರುತಹಾನಿಯೂ ಅಶ್ರುತಕಲ್ಪನೆಯೂ ಬರಬೇಕಾಗುವುದು. ಅದುದರಿಂದ ನಿರ್ಬಲವಾದ ಪಕ್ಷವನ್ನು ನಿರಾಕರಿಸುವುದರಲ್ಲಿ ನಮಗೇನೇ ಲಜ್ಜೆಯು ಹುಟ್ಟುವುದು. (7) ತಾವು ಹೇಳುವ 'ಪುಚ್ಛವೇ ಬ್ರಹ್ಮ' ಇದುಮೊದಲಾದ ಅರ್ಥಗಳಲ್ಲಿ 'ಆನಂದಮಯೋಽಭ್ಯಾಸಾತ್' ಇತ್ಯಾದಿ ಸೂತ್ರಾಕ್ಷರಗಳಿಗೆ ಆನುಗುಣ್ಯವಿಲ್ಲವೆನ್ನುವುದನ್ನು ಪರರು ತಾವೇ ಅಂಗೀಕರಿಸಿರುವುದರಿಂದ ಪರರ ಪಕ್ಷದಲ್ಲಿ ಸೂತ್ರಾಕ್ಷರಗಳಿಗೆ ಅಸ್ವಾರಸ್ಯವನ್ನು ಶ್ರೀಮದಾಚಾರ್ಯರು ಹೇಳಲಿಲ್ಲ. ಯಾವನು ತಾನೇ ತನ್ನವ್ಯಾಖ್ಯಾನವು ಸ್ವರಸವಲ್ಲವೆಂದು ತಿಳಿಯುತ್ತಾನೋ ಆತನಿಗೆ ಅದನ್ನು ವ್ಯುತ್ಪಾದಿಸುವುದು ಸತ್ತವನನ್ನು ಕೊಲ್ಲುವುದರಂತೆ ನಿರಾಕರಿಸುವವರಿಗೇನೇ ಲಜ್ಜಾಕರವು. ಆದುದರಿಂದಲೇ ಅವರ ವಚನಗಳಿಗೆ ದೂಷಣವನ್ನು ಹೇಳಿದರೆ ನಮಗೇನೇ ಲಜ್ಜೆಯು ಉಂಟಾಗುವುದೆಂದು ಹೇಳಿರುವರು ॥ ೨೯ ॥ ೩೦ ॥ ೩೧ ॥

**ಸ. ರ. ವಿ.**— ಈ ಪ್ರಕಾರ 'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ' ಎನ್ನುವ ಸೂತ್ರವನ್ನು ಅನ್ನಮಯಾದಿ ಶಬ್ದವಾಚ್ಯಗಳು ಕೋಶಗಳು ' ಎನ್ನುವ ಅರ್ಥದ ನಿರಾಕರಣ ಪರವಾಗಿ ವಾಖ್ಯಾನಮಾಡಿ, ಜೀವಬ್ರಹ್ಮರ ಅಭೇದ ನಿರಾಕರಣವೂ, ಪ್ರಸ್ತುತವಾಗಿರುವುದರಿಂದ ಜೀವ ಬ್ರಹ್ಮರ ಐಕ್ಯ ನಿರಾಕರಣಪರವಾಗಿಯೂ, ಆ ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ.—

ನ್ಯಾಯಸುಧಾ— 'ಭೇದವ್ಯಪದೇಶಾಚ್ಚ' ಎನ್ನುವ ಸೂತ್ರವನ್ನು ವ್ಯಾಖ್ಯಾನಮಾಡಿ, ಮಿಥ್ಯಾಭೂತವಾದ ಜೀವಬ್ರಹ್ಮರ ಭೇದವನ್ನು ಆಶ್ರಯಿಸಿ ಸೂತ್ರಕಾರರು 'ಭೇದವ್ಯಪದೇಶಾಚ್ಚ' ಎಂದು ಹೇಳಿದ್ದೆಂದು ಪರರು ಹೇಳಿರುವರು. ಅದು ಅಯುಕ್ತವೆಂದು ನಿರೂಪಿಸುತ್ತಾರೆ—

ಮೂ || ಸಮೀಪೇ ಸಹಭೋಗಸ್ಯ ಮುಕ್ತಿತ್ವೇನೋಕ್ತಿತೋಽಸಕೃತ್ |
ಭೇದೋ ಜೀವೇಶಯೋರ್ಮಿಥ್ಯೇತ್ಯೇವ ಮಿಥ್ಯಾ ಸ್ವಯಂ ಭವೇತ್
|| ೩೩೨ ||

ಅ || ಸಮೀಪೇ=('ಏ‍ತಮಾನಂದಮಯಮಾತ್ಮಾನಮುಪಸಂಕ್ರಮ್ಯ' ಇತ್ಯಾದಿ ಶ್ರುತಿಯಲ್ಲಿ ಶ್ರೀ ಪರಮೇಶ್ವರನ) ಸಮೀಪದಲ್ಲಿ, ಸಹಭೋಗಸ್ಯ= ('ಸೋಽಶ್ನುತೇ ಸರ್ವಾನ್ ಕಾಮಾನ್ ಸಹ' ಇತ್ಯಾದಿ ಶ್ರುತಿಯಲ್ಲಿ ಪರಬ್ರಹ್ಮನಿಂದ) ಕೂಡಿಕೊಂಡು ಭೋಗಿಸುವುದಕ್ಕೆ, ಮುಕ್ತಿತ್ವೇನ=ಮೋಕ್ಷತ್ವದಿಂದ ಅಂದರೆ ಬ್ರಹ್ಮನಿಂದ ಕೂಡಿಕೊಂಡು ಭೋಗಿಸುವುದೇ ಮೋಕ್ಷವೆಂದು, ಅಸಕೃತ್=ಅನೇಕಾವರ್ತಿ, ಉಕ್ತಿತಃ=ಹೇಳಿರುವುದರಿಂದ, ಜೀವೇಶಯೋಃ=ಜೀವಬ್ರಹ್ಮರ, ಭೇದಃ= ಭೇದವು, ಮಿಥ್ಯಾ = ಮಿಥ್ಯೆಯು, ಇತ್ಯೇವ = ಎನ್ನುವುದೇ, ಮಿಥ್ಯಾ= ಮಿಥ್ಯೆಯು, ಸ್ವಯಂ=ತಾನು, ಭವೇತ್=ಆಗುವುದು.

ತಾ || (1) 'ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ' ಎನ್ನುವಲ್ಲಿ ಹೇಳಿದ ಸಾಮೀಪ್ಯವೂ, 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ' ಎನ್ನುವಲ್ಲಿ ಹೇಳಿದ ಬ್ರಹ್ಮನಿಂದ ಜೀವನಿಗೆ ಸಾಹಿತ್ಯವೂ (ಕೂಡಿರುವಿಕೆಯು) ಕೂಡ ಭೇದವಿಲ್ಲದೆ ಕೂಡಲಾರದು. ಮೋಕ್ಷದಲ್ಲಿಯೂ ಕೂಡ ಇರುವ ಭೇದವು ಮಿಥ್ಯೆಯಾಗಲಿಕ್ಕೆ ಯೋಗ್ಯವಲ್ಲ. ಮೋಕ್ಷದಲ್ಲಿದ್ದದ್ದೂ ಮಿಥ್ಯೆಯಾಗುವುದಾದರೆ ಆತ್ಮಸ್ವರೂಪವೂ ಮಿಥ್ಯೆಯಾಗಬೇಕಾಗುವುದು. (2) ಅಥವಾ 'ಭೇದವ್ಯಪದೇಶಾಚ್ಚ' ಎನ್ನುವ ಸೂತ್ರದಲ್ಲಿ ಹೇಳಿದ ಭೇದವು ಮಿಥ್ಯಾಭೇದವು ಏತಕ್ಕೆ ಆಗಲಾರದೆನ್ನುವ ಆಕಾಂಕ್ಷಾ ನಿರಾಸಾರ್ಥವಾಗಿ 'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ' ಎನ್ನುವ ಸೂತ್ರವನ್ನು ರೀತ್ಯಂತರದಿಂದ ವ್ಯಾಖ್ಯಾನಮಾಡಿದರು. || ೩೩೨ ||

ಹಿಂದೆ ಹೇಳಿದ ಪ್ರಕಾರ ಅನ್ನಮಯಾದಿ ಶಬ್ದವಾಚ್ಯವಾದವುಗಳು ಐದೂ ಕೋಶಗಳು ಎಂದು ಹೇಳುವ ಮಾಯಾವಾದಿಗಳ ವ್ಯಾಖ್ಯಾನವನ್ನು ನಿರಾಕರಿಸಿ ಈಗ ಅನ್ನಮಯಾದಿ ನಾಲ್ಕು ಶಬ್ದವಾಚ್ಯವಾದವುಗಳು ಕೋಶಗಳು, ಆನಂದಮಯ ಶಬ್ದವಾಚ್ಯನೊಬ್ಬನು ಪರಮಾತ್ಮನು ಎಂದು ಯಾವ ಭಾಸ್ಕರಾದಿಗಳು ಯಥಾ ಶ್ರುತವಾಗಿ ಸೂತ್ರವನ್ನು ಅನುಸರಿಸುತ್ತಾ ವ್ಯಾಖ್ಯಾನಮಾಡುತ್ತಾರೋ ಅವರ ಮತವನ್ನು ನಿರಾಕರಿಸುತ್ತಾರೆ—

ಮೂ || ಏತೇನ ಮಯಟಶ್ಚೈವ ದ್ವೈವಿಧ್ಯೇನಾರ್ಥಕಲ್ಪನಾತ್ || ೩೩೩ ||
ತದನ್ಯೇಷಾಂ ಮತಮಪಿ ಸತ್ಸಂಸತ್ಸು ನ ಭಾಸತೇ ||
ಅತೋ ನಾರಾಯಣೋ ದೇವೋ ನಿಶ್ಶೇಷಗುಣವಾಚಕೈಃ || ೩೩೪ ||
ಗುಣಿ ಸಾಮಾನ್ಯವಚನೈರಪಿ ಮುಖ್ಯತಯೋದಿತಃ |
ಅಧ್ಯಾತ್ಮಗೈಶ್ಚ ಪ್ರಾಣಾದ್ಯೈಸ್ತಥೈವ ಹ್ಯಧಿಭೂತಗೈಃ |
ಅನ್ನಾದಿಶಬ್ದೈರ್ಭಗವಾನೇಕೋ ಮುಖ್ಯತಯೋದಿತಃ || ೩೩೫ ||

ಅ || ಏತೇನೈವ=ಅನ್ನಮಯ ಮೊದಲಾದ ಐದು ರೂಪಗಳಿಗೂ ಪರಬ್ರಹ್ಮತ್ವವನ್ನು ಸಪಾದಿಸಿದುದರಿಂದಲೇ, ಮಯಟಶ್ಚ = ಮಯಟ್‌ಪ್ರತ್ಯಯಕ್ಕಾದರೂ, ದ್ವೈವಿಧ್ಯೇನ = ಎರಡು

ಪ್ರಕಾರ, ಅಂದರೆ ಅನ್ನಮಯ ಮೊದಲಾದ ನಾಲ್ಕರಲ್ಲಿದ್ದ ಮಯಟ್ ಪ್ರತ್ಯಯಕ್ಕೆ ವಿಕಾರರೂಪ ಅರ್ಥವು, ಆನಂದಮಯ ಎನ್ನುವಲ್ಲಿದ್ದ ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯರೂಪಾರ್ಥವು ಎಂದು ಎರಡು ಪ್ರಕಾರ, ಅರ್ಥಕಲ್ಪನಾತ್=ಅರ್ಥವನ್ನು ಕಲ್ಪಿಸಿದುದರಿಂದ, ತದನ್ಯೇಷಾಂ=ಅನ್ನಮಯಾದಿ ಶಬ್ದವಾಚ್ಯವಾದವುಗಳು ಐದೂ ಕೋಶಗಳು ಎಂದು ಹೇಳುವ ಮಾಯಾವಾದಿಗಳ ದ್ದೆಶಯಿಂದ ಇತರರಾದ, ಅನ್ನಮಯಾದಿ ನಾಲ್ಕು ಮಾತ್ರ ಕೋಶಗಳು ಆನಂದಮಯ ಶಬ್ದ ವಾಚ್ಯನು ಶ್ರೀ ಹರಿಯೇ ಎಂದು ಹೇಳುವ ಭಾಸ್ಕರಾದಿಗಳ, ಮತಮಪಿ=ಮತವೂ ಕೂಡ, ಸತ್ಸಂಸತ್ಸು = ವಿದ್ವತ್ಸಭೆಗಳಲ್ಲಿ, ನ ಭಾಸತೇ = ಪ್ರಕಾಶಿಸುವುದಿಲ್ಲ. (ಹಾಗಾದರೆ ಸೂತ್ರ ವ್ಯಾಖ್ಯಾನವನ್ನುಪೇಕ್ಷಿಸಿ ಅಪವ್ಯಾಖ್ಯಾನವನ್ನು ನಿರಾಕರಿಸಿದ್ದು ಅಸಂಗತವೆಂದು ಹೇಳ ಕೂಡದು. ತಾನು ಮಾಡಿದ ವ್ಯಾಖ್ಯಾನವು ದೃಢವಾಗಬೇಕಾದರೆ ಪರರ ವ್ಯಾಖ್ಯಾನ ನಿರಾಕರಣವು ಆವಶ್ಯಕವೇ ಎನ್ನುವ ಅಭಿಪ್ರಾಯದಿಂದ ಅಧಿಕರಣಾರ್ಥವನ್ನುಪಸಂಹಾರ ಮಾಡುತ್ತಾರೆ.) ಅತಃ=ಆದಪ್ರಯುಕ್ತ, ದೇವಃ=ಕ್ರೀಡಾದಿಗುಣವಿಶಿಷ್ಟನಾದ, ನಾರಾಯಣಃ=ಶ್ರೀ ನಾರಾಯಣನು, ನಿಶ್ಶೇಷಗುಣವಾಚಕ್ಯೈಃ=ಎಲ್ಲಾ ಗುಣವಾಚಕ ಶಬ್ದಗಳಿಂದಲೂ, ಗುಣಿಸಾಮಾನ್ಯವಚನೈರಪಿ=ಗುಣಿಸಾಮಾನ್ಯವಾಚಕಗಳಾದ ಶಬ್ದಗಳಿಂದಲೂ, ಮುಖ್ಯತಯಾ=ಮುಖ್ಯವಾಗಿ, ಉದಿತಃ=ಹೇಳಿಸಿಕೊಳ್ಳಲ್ಪಡುತ್ತಾನೆ. (ಅಧಿಕರಣವು ಗುಣಿಸಾಮಾನ್ಯವಾಚಕಗಳಾದ ಶಬ್ದಗಳಿಗೂ, ಗುಣವಾಚಕ ಶಬ್ದಗಳಿಗೂ ಸಮನ್ವಯಕ್ಕಾಗಿ ಪ್ರವೃತ್ತವಾದಾಗ್ಯೂ * ಅಧಿಕರಣ ಸಿದ್ಧಾಂತ ನ್ಯಾಯದಿಂದ ಸಿದ್ಧವಾದ ಅರ್ಥಾಂತರವನ್ನುಪಸಂಹಾರ ಮಾಡುತ್ತಾರೆ.) ಅಧ್ಯಾತ್ಮಗೈಶ್ಚ=ಅಧ್ಯಾತ್ಮವಿಷಯಕಗಳಾದ ಅಂದರೆ ದೇಹದಲ್ಲಿರುವ ವಸ್ತುವನ್ನು ವಿಷಯೀಕರಿಸಿಕೊಂಡಿರುವ, ಪ್ರಾಣಾದ್ಯೈಃ=ಪ್ರಾಣಮೊದಲಾದ ಶಬ್ದಗಳಿಂದಲೂ, ತಥೈವ=ಅದೇ ರೀತಿಯಾಗಿ, ಅಧಿಭೂತಗೈಃ=ಭೂತವಿಷಯಕಗಳಾದ, ಅನ್ನಾದಿ ಶಬ್ದೈಃ=ಅನ್ನ ಮೊದಲಾದ ಶಬ್ದಗಳಿಂದಲೂ, ಏಕಃ=ಸರ್ವೋತ್ತಮ (ಒಬ್ಬ) ನಾದ, ಭಗವಾನ್=ಶ್ರೀಪರಮಾತ್ಮನು, ಮುಖ್ಯತಯಾ=ಮುಖ್ಯವಾಗಿ, ಉದಿತಃ=ಹೇಳಿಸಲ್ಪಟ್ಟಿದ್ದಾನೆ. ಹಿ=ಶ್ರುತ್ಯಾದಿಪ್ರಸಿದ್ಧವು. (ತಥಾಚ-ಅನ್ನಮಯ ಮೊದಲಾದ ಐದು ಶಬ್ದಗಳಿಂದಲೂ ವಾಚ್ಯನಾದವನು ಶ್ರೀವಿಷ್ಣುವೆಂದು ಸಿದ್ಧವಾಯಿತು) ॥ ೨೩೩ ॥ ೨೩೪ ॥ ೨೩೫ ॥

ಸ. ರ. ವಿ—ಪ್ರಥಮದಲ್ಲಿ ಜಗಜ್ಜನ್ಮಾದಿಕಾರಣತ್ವವನ್ನು ಮಾತ್ರ ಪ್ರತಿಜ್ಞಾ ಮಾಡಿರುವುದರಿಂದ ಅದನ್ನೇ ಪ್ರತಿಪಾದಿಸುವುದು ಯುಕ್ತವು. ಬ್ರಹ್ಮನಿಗೆ ಪೂರ್ಣಾನಂದಮೊದಲಾದ ಗುಣಗಳನ್ನು ಪ್ರತಿಪಾದಿಸುವುದು ಯುಕ್ತವಲ್ಲ ಎಂದರೆ—

ನ್ಯಾಯಸುಧಾ— (1) ಎಲ್ಲಾ ಗುಣಿಸಾಮಾನ್ಯವಾಚಕ ಶಬ್ದಗಳಿಂದಲೂ, ಗುಣವಾಚಕ ಶಬ್ದಗಳಿಂದಲೂ ಅಧ್ಯಾತ್ಮವಿಷಯಗಳಾದ ಪ್ರಾಣ ವಾಕ್ ಮೊದಲಾದ ಶಬ್ದಗಳಿಂದಲೂ, ಅಧಿಭೂತವಿಷಯಗಳಾದ ಅನ್ನ ಔಷಧಿ ಮೊದಲಾದ ಶಬ್ದಗಳಿಂದಲೂ ಶ್ರೀಹರಿಯೊಬ್ಬನೇ ಮುಖ್ಯವಾಗಿ ಹೇಳಿಸಲ್ಪಡುತ್ತಾನೆನ್ನುವ ಉಪಸಂಹಾರವು ಕೂಡುವುದಿಲ್ಲ. ಈ ಅರ್ಥವನ್ನು ಮೊದಲು ಪ್ರತಿಪಾದಿಸಲಿಲ್ಲ. (2)ಹಾಗಾದರೆಆನಂದಮಯಶಬ್ದವು ಉಪಲಕ್ಷಣಪರವೆಂದು ಹೇಳಿದ್ದೇವೆಂದರೆ

---

* ಸಿದ್ಧಾಂತವು ೧ ಸ್ವತಂತ್ರಸಿದ್ಧಾಂತ, ೨ ಪ್ರತಿತಂತ್ರ ಸಿದ್ಧಾಂತ, ೩ ಅಧಿಕರಣ ಸಿದ್ಧಾಂತ, ೪ ಅಭ್ಯುಪಗಮ ಸಿದ್ಧಾಂತ ಎನ್ನುವ ಭೇದದಿಂದ ನಾಲ್ಕು ವಿಧವು. ಅವುಗಳಲ್ಲಿ ಯಾವುದಾದರೊಂದು ಅರ್ಥವು ಸಿದ್ಧವಾದರೆ ಅನುಷಂಗದಿಂದ ಸಿದ್ಧವಾದ ಅರ್ಥವು ಅಂದರೆ, ಒಂದು ಅರ್ಥವು ಸಿದ್ಧಿಸುವ ಕಾಲಕ್ಕೆ ಅರ್ಥಾತ್ ಸಿದ್ಧಿಸುವ ಅರ್ಥಾಂತರವು ಅಧಿಕರಣ ಸಿದ್ಧಾಂತವು.

ಅಹುದು— ಆದರೆ ಉಪಲಕ್ಷಣವು (ತನ್ನ ಅರ್ಥವನ್ನು ಬಿಡದೆ ಅನ್ಯಾರ್ಥ ಸ್ವೀಕಾರವು) ಪ್ರಕೃತೋಪಯುಕ್ತವಾದ ಮತ್ತು ಯುಕ್ತವಾದ ಅರ್ಥಕ್ಕೇನೇ ಕೂಡುತ್ತದೆ. ಇಲ್ಲವಾದರೆ ಅತಿಪ್ರಸಂಗವು— ಈ ಎಲ್ಲಾ ಶಬ್ದಗಳೂ ಮುಖ್ಯವೃತ್ತಿಯಿಂದ ಶ್ರೀ ಹರಿಯೊಬ್ಬನನ್ನೇ ಹೇಳುತ್ತವೆಂದು ಸಮರ್ಥಿಸುವುದು ಪ್ರಕೃತೋಪಯುಕ್ತವೂ ಅಲ್ಲ, ಯುಕ್ತವೂ ಅಲ್ಲ. ಏಕೆಂದರೆ— 'ಜನ್ಮಾದ್ಯಸ್ಯ ಯತಃ' ಎನ್ನುವ ಸೂತ್ರದಲ್ಲಿ ಜಗಜ್ಜನ್ಮಾದಿ ಕಾರಣತ್ವ ಮೊದಲಾದ ಎಂಟು ಲಕ್ಷಣಗಳು ಬ್ರಹ್ಮನಿಗೆ ಹೇಳಲ್ಪಟ್ಟಿವೆ. ಜಗಜ್ಜನ್ಮಾದಿಕಾರಣತ್ವರೂಪ ಬ್ರಹ್ಮಲಕ್ಷಣದಲ್ಲಿಯೇ ಶಾಸ್ತ್ರವು ಪ್ರಮಾಣವೆಂದು ೩ನೇ ಸೂತ್ರದಲ್ಲಿ ಹೇಳಿಯದೆ. ಸಮನ್ವಯಸೂತ್ರದಲ್ಲಿ ಕಾರಣತ್ವ ಪ್ರತಿಪಾದಕ ವಾಕ್ಯಗಳಿಗೇನೇ ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಜ್ಞೆ ಮಾಡಿರುವರು. ಆದ ಕಾರಣ ಜಗಜ್ಜನ್ಮಾದಿ ಕಾರಣತ್ವವು ಯಾವಯಾವ ವಾಕ್ಯಗಳಲ್ಲಿ ತೋರುತ್ತದೋ? ಆ ವಾಕ್ಯಗಳಿಗೇನೇ ಪರಮೇಶ್ವರನಲ್ಲಿ ಸಮನ್ವಯವನ್ನು ಸಮರ್ಥಿಸುವುದು ಪ್ರಕೃತ ಸಂಗತವು. ಎಲ್ಲಾ ವಾಕ್ಯಗಳಿಗೆ ಅಲ್ಲ. ಏಕೆಂದರೆ— ಬೇರೆ ಎಲ್ಲಾ ವಾಕ್ಯಗಳಲ್ಲಿ ಜಗಜ್ಜನ್ಮಾದಿ ಕಾರಣತ್ವವನ್ನು ಪ್ರತಿಪಾದಿಸಲಿಲ್ಲ. (3) ಮತ್ತು ಜಗಜ್ಜನ್ಮಾದಿ ಕಾರಣತ್ವವು ಎಲ್ಲಿ ಇರುವುದಾಗಿ ತೋರುತ್ತದೋ ಅದನ್ನು ಪ್ರತಿಪಾದಿಸುವ ಶಬ್ದಗಳಿಗೆ ಮುಖ್ಯವೃತ್ತಿ, ಅಮುಖ್ಯವೃತ್ತಿಗಳ ಮಧ್ಯದಲ್ಲಿ ಯಾವ ವೃತ್ತಿಯಿಂದ ಭಗವತ್ಪರತ್ವವನ್ನು ಸಮರ್ಥಿಸಿದರೂ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ಪರಿಹರಿಸಿದ ಹಾಗೆಯೇ ಆಗುತ್ತದೆ. ಆದಪ್ರಯುಕ್ತ ಎಲ್ಲಾ ಶಬ್ದಗಳೂ ಮುಖ್ಯವೃತ್ತಿಯಿಂದಲೇ ಶ್ರೀಹರಿಯನ್ನು ಪ್ರತಿಪಾದಿಸುತ್ತವೆ ಎಂದು ಸಮರ್ಥಿಸುವುದಕ್ಕೆ ಉಪಯೋಗವಿಲ್ಲ. (4) ಮತ್ತು ಎಲ್ಲಾ ಶಬ್ದಗಳೂ ಶ್ರೀಹರಿಯಲ್ಲಿಯೇ ಮುಖ್ಯವೃತ್ತಿಯಿಂದ ಇರುತ್ತವೆ ಎಂದು ಸಮರ್ಥನವು ಕೂಡುವುದೂ ಇಲ್ಲವು. ರೂಢಿಯೋಗಗಳು ಮುಖ್ಯವೃತ್ತಿಗಳು. ಅದರಲ್ಲಿಯೂ ಯೋಗದ್ದೆಶೆಯಿಂದ ರೂಢಿಯು ಪ್ರಬಲವು. ಶಬ್ದಗಳಿಗೆ ಶ್ರೀಹರಿಯಲ್ಲಿ ರೂಢಿಯಿರುವುದಿಲ್ಲ. ಯೋಗವೃತ್ತಿಯು ಕೂಡಿದರೂ ಅದು ಬೇರೆಯವರಲ್ಲಿಯೂ ಸಮಾನವೇ ಆಗಿದೆ. ತಥಾಚ ರೂಢಿಯೋಗಗಳು ಎರಡೂ ಇದ್ದಪ್ರಯುಕ್ತ ಅರ್ಥಾಂತರದಲ್ಲಿಯೇ ಶಬ್ದಗಳಿಗೆ ಮುಖ್ಯವೃತ್ತಿಗಳು. ಕೇವಲ ಯೋಗವು ಕಥಂಚಿತ್ ಈಶ್ವರನಲ್ಲಿ ಕೂಡಿದರೂ ರೂಢಿಯು ಕೂಡಲಾರದು. ಆದಕಾರಣ ಸೂತ್ರಕಾರರಿಗೆ ಎಲ್ಲಾ ಶಬ್ದಗಳಿಗೆ ಮುಖ್ಯವೃತ್ತಿಯಿಂದ ಶ್ರೀಹರಿಯಲ್ಲಿಯೇ ಸಮನ್ವಯವನ್ನು ಸಮರ್ಥಿಸುವ ವಿಷಯದಲ್ಲಿ ಸಂಗತಿಯೂ ಯುಕ್ತಿಯೂ ಇಲ್ಲದಿರುವಪ್ರಯುಕ್ತ ಇದು ಅಪವ್ಯಾಖ್ಯಾನವು ಎಂದಾಶಂಕಿಸಿ ಈಗ ಸಂಗತಿಯನ್ನು ತೋರಿಸುತ್ತಾರೆ—

**ಮೂ ॥ ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ॥ ೨೩೬ ॥**
**ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ಶಾಸ್ತ್ರಮೂಲಂ ಯತಸ್ತತಃ ।**
**ಅನ್ವಯಃ ಸರ್ವಶಬ್ದಾನಾಂ ಗುಣಸರ್ವಸ್ವವೇದಕಃ ॥ ೨೩೭ ॥**

ಅ ॥ ('ಅಥಾತೋ ಬ್ರಹ್ಮ ಜಿಜ್ಞಾಸಾ' ಎನ್ನುವ ಪ್ರಥಮಸೂತ್ರದಲ್ಲಿ ಬ್ರಹ್ಮಶಬ್ದದಿಂದ ಶ್ರೀಹರಿಯು ಜೀವಾದಿಗಳಿಂದ ಭಿನ್ನನೆಂದು ತೋರಿಸುವುದಕ್ಕಾಗಿ ಜಿಜ್ಞಾಸ್ಯನು ಸಕಲಗುಣ ಪರಿಪೂರ್ಣನೆಂದು ಹೇಳಿರುವರು.) ಜನ್ಮಾದ್ಯಸ್ಯೇತಿ ಸೂತ್ರೇಣ=ಜನ್ಮಾದ್ಯಸ್ಯ ಯತಃ ಎನ್ನುವ ಎರಡನೇ ಸೂತ್ರದಿಂದ, ಗುಣಸರ್ವಸ್ವಸಿದ್ಧಯೇ=ಸಕಲಗುಣಪರಿಪೂರ್ಣತ್ವವು ಸಿದ್ಧಿಯಾಗುವುದಕ್ಕಾಗಿ, ಬ್ರಹ್ಮಣಃ=ಪರಬ್ರಹ್ಮನಿಗೆ, ಲಕ್ಷಣಂ=ಜಗಜ್ಜನ್ಮಾದಿಕಾರಣತ್ವವು ಲಕ್ಷಣವೆಂದು, ಪ್ರೋಕ್ತಂ=ಹೇಳಲ್ಪಟ್ಟದೆ. (ಆದಪ್ರಯುಕ್ತ ಈ ಎರಡು ಸೂತ್ರಗಳಿಂದ ಸಾಧ್ಯವಾಗಿ ಆನಂದ ಮೊದಲಾದ ಸರ್ವಗುಣಪರಿಪೂರ್ಣತ್ವವು ಸಾಧಕವಾಗಿ ಜಗಜ್ಜನ್ಮಾದಿಕಾರಣತ್ವವೂ ಪ್ರಕೃತವಾಗಿದೆ.) ಆ ಲಕ್ಷಣಗಳಿಗೆ ಅನುಮಾನಾದಿಗಳಿಂದ ಅತಿವ್ಯಾಪ್ತಿಯನ್ನು ಶಂಕಿಸಿದಾಗ ಅದನ್ನು

ಹೋಗಲಾಡಿಸುವುದಕ್ಕಾಗಿ ಶಾಸ್ತ್ರಯೋನಿತ್ವಾತ್ ಎನ್ನುವ ಮೂರನೇ ಸೂತ್ರದಲ್ಲಿ, ಪ್ರಧಾನ-ಅಪ್ರಧಾನ ಆ ಎರಡು ಲಕ್ಷಣಗಳೂ) ಶಾಸ್ತ್ರಮೂಲಂ = ಶಾಸ್ತ್ರವೇ ಪ್ರಮಾಣವಾಗಿ ಉಳ್ಳದ್ದೆಂದು, ಯತಃ=ಯಾವ ಕಾರಣದ್ದೆಶೆಯಿಂದ, ಪ್ರೋಕ್ತಂ=ಹೇಳಲ್ಪಟ್ಟದೋ, ತತಃ=ಆದಪ್ರಯುಕ್ತ, (ಶಾಸ್ತ್ರಗಳು ಶ್ರೀ ಹರಿಯಿಂದ ವ್ಯತಿರಿಕ್ತರನ್ನು ಪ್ರತಿಪಾದಿಸುತ್ತವೆಂದು ಶಂಕಿಸಿದಾಗ ತತ್ತು ಸಮನ್ವಯಾತ್ ಎನ್ನುವ ನಾಲ್ಕನೇ ಸೂತ್ರದಲ್ಲಿ ಸರ್ವಶಬ್ದಗಳಿಗೂ ಶ್ರೀ ಹರಿಯಲ್ಲಿಯೇ ಸಂಬಂಧವನ್ನು ಪ್ರತಿಜ್ಞಾಮಾಡುವುದು ಯೋಗ್ಯವಲ್ಲದೆ ಕೆಲವು ಶಬ್ದಗಳಿಗೆ ಮಾತ್ರ ಸಂಬಂಧವನ್ನು ಪ್ರತಿಜ್ಞಾಮಾಡುವುದು ಯೋಗ್ಯವಲ್ಲ.)

(ಶ್ರೀ ಹರಿಯು ಸರ್ವಗುಣಪರಿಪೂರ್ಣನೆನ್ನುವಲ್ಲಿ ಶಾಸ್ತ್ರವು ಪ್ರಮಾಣವೆಂದು ಹೇಳಿದರೂ ಏಕೆ ಸರ್ವಶಬ್ದಗಳಿಗೂ ಸಮನ್ವಯವನ್ನು ಪ್ರತಿಜ್ಞಾಮಾಡಬೇಕೆಂದರೆ—) ಯತಃ=ಯಾವ ಕಾರಣದ್ದೆಶೆಯಿಂದ, ಸರ್ವಶಬ್ದಾನಾಂ=ಎಲ್ಲಾ ಶಬ್ದಗಳ, ಅನ್ವಯಃ = ಸಂಬಂಧವೇ, ಗುಣ ಸರ್ವಸ್ವವೇದಕಃ=ಸರ್ವಗುಣಪರಿಪೂರ್ಣತ್ವವನ್ನು ತಿಳಿಸಿಕೊಡುತ್ತದೆ. (ಕೆಲವು ಶಬ್ದಗಳದ್ದು ಮಾತ್ರ ಸಂಬಂಧವು ಸರ್ವಗುಣಪರಿಪೂರ್ಣತ್ವವನ್ನು ತಿಳಿಸಿಕೊಡುವುದಿಲ್ಲ. ಆದಪ್ರಯುಕ್ತ ಎಲ್ಲಾ ಶಾಸ್ತ್ರಗಳದ್ದೆಶೆಯಿಂದ ಗುಣಪೂರ್ಣತ್ವವು ಸಿದ್ಧಿಯಾಗುವುದಕ್ಕಾಗಿ ಎಲ್ಲಾ ಶಬ್ದಗಳ ಅನ್ವಯವನ್ನೇ ಪ್ರತಿಜ್ಞಾಮಾಡಬೇಕು. ಸಮನ್ವಯ ಸೂತ್ರದಿಂದ ಸಕಲ ಶಬ್ದಗಳಿಗೂ ಸಮನ್ವಯವನ್ನು ಪ್ರತಿಜ್ಞಾಮಾಡಿರುವುದರಿಂದ ಅದನ್ನು ವಿಸ್ತರಿಸಿದರೆ ಸೂತ್ರಕಾರರಿಗೆ ಅಸಂಗತಿಯು ಹೇಗೆ ಬರುವುದು? ಮುಖ್ಯವೃತ್ತಿಯಿಂದ ಸಮನ್ವಯವೇ ಗುಣಪೂರ್ಣತ್ವಕ್ಕೆ ಸಾಧಕವಾಗುವುದರಿಂದ ಮುಖ್ಯವೃತ್ತಿಗೂ ಸಂಗತಿಯಿದೆ ಎಂದು ತಿಳಿಯತಕ್ಕದ್ದು ॥೨೩೭॥೨೩೭॥

ಈ ಪ್ರಕಾರ ಪರರು ಹೇಳಿದ ಅಸಂಗತಿಯನ್ನು ಪರಿಹರಿಸಿ ಶ್ರೀ ಪರಮಾತ್ಮನಿಗೇನೇ ಸರ್ವ ಶಬ್ದಗಳ ಮುಖ್ಯಾರ್ಥತ್ವವಿದೆ ಎನ್ನುವುದು ಕೂಡುವುದಿಲ್ಲ; ಯೋಗವಾದರೂ ಪರಮೇಶ್ವರನಲ್ಲಿ ಇದ್ದಂತೆಯೇ ಬೇರೆಯವರಲ್ಲಿಯೂ ಕೂಡಬಹುದು. ಈಶ್ವರನಲ್ಲಿ ರೂಢಿಯಿರುವುದಿಲ್ಲ; ಬೇರೆಯ ರಲ್ಲಿ ರೂಢಿಯಿರುವುದರಿಂದ ಆಧಿಕ್ಯವೂ ಬಂತು. ಎಂದು ಯೋಗಕ್ಕೆ ಎರಡು ಕಡೆಗಳಲ್ಲಿಯೂ ಅಂದರೆ, ಈಶ್ವರನಲ್ಲಿಯೂ ಇತರರಲ್ಲಿಯೂ ಪರರು ಸಾಮ್ಯವನ್ನು ಹೇಳಿರುವರು. ಅದನ್ನು ನಿರಾಕರಿಸುತ್ತಾರೆ—

ಮೂ ॥ ಶಬ್ದಪ್ರವೃತ್ತಿಹೇತೂನಾಂ ತಸ್ಮಿನ್ಮುಖ್ಯಸಮನ್ವಯಾತ್ ।
ಅನ್ಯಾರ್ಥೇಽಸ್ವಲ್ಪತಾ ಹೇತೋಸ್ತನ್ನಿಮಿತ್ತತ್ವತಸ್ತಥಾ ॥ ೨೩೮ ॥
ತದ್ವಾಚಕತ್ವಂ ಶಬ್ದಾನಾಂ ಬಹುಲಾತಿಪ್ರಯೋಗತಃ ।
ರೂಢಮಿತ್ಯೇವ ಸಾಧ್ಯಂ ಸ್ಯಾದ್ರೂಢಿರ್ಹಿ ದ್ವಿವಿಧಾ ಮತಾ ॥ ೨೩೯ ॥
ಅವಿದ್ವದ್ವಿದ್ವದಾಪ್ತ್ಯೈವ ಮುಖ್ಯಾ ಹಿ ವಿದುಷಾಂ ತು ಸಾ ।
ವಿದ್ವದ್ರೂಢಿರ್ವೈದಿಕಾ ಸ್ಯಾತ್ಸಾ ಯೋಗಾದೇವ ಲಭ್ಯತೇ ॥ ೨೪೦ ॥
ತಸ್ಮಾನ್ಮುಖ್ಯಾರ್ಥತಾ ವಿಷ್ಣೋರಿತಿ ಕೃತ್ವಾ ಹೃದಿ ಪ್ರಭುಃ ।
ಸಮನ್ವಯಂ ಸಾಧಯತಿ ॥ [ದೇವಾನಾಂ ತತ್ರ ಶಕ್ತತಾಂ] ॥ ೨೪೧ ॥
ಸೂ. ೧೯ ಅಧಿ. ॥ ೬ ॥

ಅ || ಶಬ್ದಪ್ರವೃತ್ತಿಹೇತೂನಾಂ=ಇಂದ್ರವೊದಲಾದ ಶಬ್ದಗಳ ಪ್ರವೃತ್ತಿಗಳಿಗೆ ಕಾರಣೀಭೂತಗಳಾದ ಪರಮೈಶ್ವರ್ಯಾದಿಗಳಿಗೆ, ತಸ್ಮಿನ್ = ಆ ಪರಮೇಶ್ವರನಲ್ಲಿ, ಮುಖ್ಯಸಮನ್ವಯಾತ್ = ಮುಖ್ಯಸಂಬಂಧವಿದ್ದುದರಿಂದ, ಶಬ್ದಾನಾಂ = ಇಂದ್ರವೊದಲಾದ ಶಬ್ದಗಳಿಗೆ, ತದ್ವಾಚಕತ್ವಂ = ಪರಮೇಶ್ವರ ಪ್ರತಿಪಾದಕತ್ವವೇ. (ಶ್ರೀ ಹರಿಗೇನೇ ಪರಮೈಶ್ವರ್ಯವೂ ನಿರವಧಿಕವಾದ ಸ್ವಾತಂತ್ರ್ಯವೂ ಇದೆ.) ಅನ್ಯಾರ್ಥೇಷು = ಇತರರಾದ ಪುರಂದರಾದಿಗಳಲ್ಲಿ, ಹೇತ್ತೋಃ=ಶಬ್ದಪ್ರವೃತ್ತಿಗಳಿಗೆ ಕಾರಣಗಳಾದ ಐಶ್ವರ್ಯಾದಿಗಳಿಗೆ, ಅಲ್ಪತಾ = ಅಲ್ಪತ್ವವಿದೆ. ಅಂದರೆ ಪುರಂದರಾದಿಗಳಲ್ಲಿದ್ದ ಐಶ್ವರ್ಯವು ದೇಶದಿಂದಲೂ, ಕಾಲದಿಂದಲೂ, ಸ್ವರೂಪದಿಂದಲೂ ಸಾವಧಿಕವಾಗಿದೆ. ತಥಾ=ಹಾಗೆ, ತನ್ನಿಮಿತ್ತತ್ವತಃ=ಅಲ್ಪವಾದ ಐಶ್ವರ್ಯಾದಿಗಳಿಗೂ ಭಗವನ್ನಿಮಿತ್ತತ್ವವಿದ್ದಪ್ರಯುಕ್ತ ಅಂದರೆ, ಇಂದ್ರಾದಿಗಳಲ್ಲಿದ್ದ ಅಲ್ಪವಾದ ಐಶ್ವರ್ಯವೂ ಕೂಡ ಭಗವದ್ದತ್ತವೂ ಭಗವದಧೀನವೂ ಆಗಿದೆ (ಈಶ್ವರನಲ್ಲಿ ಶಬ್ದಗಳಿಗೆ ರೂಢಿಯಿಲ್ಲವೆಂದು ಹೇಳಿದ್ದನ್ನು ನಿರಾಕರಿಸುತ್ತಾರೆ.) ಬಹುಲಾತಿಪ್ರಯೋಗತಃ=ಬಹುಲಾತಿಪ್ರಯೋಗರೂಪವಾದ ಹೇತುವಿನಿಂದ, (ಶಬ್ದಗಳ ಸಮುದಾಯವು ಶ್ರೀ ಹರಿಯಲ್ಲಿ) ರೂಢಮೇವೇತಿ=ರೂಢವೇ ಎಂತೆಂದು, ಸಾಧ್ಯಂ ಸ್ಯಾತ್=ಸಾಧಿಸಲಿಕ್ಕೆ ಯೋಗ್ಯವಾದುದು ಆಗುವುದು. ಅಂತೂ 'ವಿಮತಾಃ ಶಬ್ದಾಃ ಹರೌ ರೂಢಾಃ ಬಹುಲಾತಿಪ್ರಯೋಗವತ್ವಾತ್ ನಾರಾಯಣಾದಿ ಶಬ್ದವತ್'=ವಿವಾದವಿಷಯಗಳಾದ ಇಂದ್ರಾದಿ ಶಬ್ದಗಳು ಶ್ರೀ ಹರಿಯಲ್ಲಿ ರೂಢಗಳಾಗಿವೆ, ಬಹುಲವಾದ ಪೂಜ್ಯಪ್ರಯೋಗವಿದ್ದುದರಿಂದ ನಾರಾಯಣ ವೊದಲಾದ ಶಬ್ದಗಳಂತೆ, ಎನ್ನುವ ಅನುಮಾನವು ಉಕ್ತವಾಯಿತು. (ಇಂದ್ರಾದಿ ಶಬ್ದಗಳಿಗೆ ಪರಮೇಶ್ವರನಲ್ಲಿ ಪ್ರಯೋಗವೇ ಇಲ್ಲದಿರುವುದರಿಂದ ಈ ಹೇತುವು ಅಸಿದ್ಧವಾಗಿದೆ ಎಂದರೆ) ರೂಢಿರ್ಹಿ=ರೂಢಿಯಾದರೂ ಅಂದರೆ ರೂಢಿಜ್ಞಾಪಕವಾದ ಬಹುಲಾತಿಪ್ರಯೋಗವು, ದ್ವಿವಿಧಾ=ಎರಡುಪ್ರಕಾರ, ಮತಾ=ಸಮ್ಮತವಾಗಿದೆ. ಅವಿದ್ವದ್ವಿದ್ವದಾಪ್ತ್ಯೈವ=ಅವಿದ್ವಾಂಸರು ಮತ್ತು ವಿದ್ವಾಂಸರು—ಇವರ ಸಂಬಂಧದಿಂದಲೇ. (ಅಂತೂ ಪರಮೇಶ್ವರನಲ್ಲಿ ಅವಿದ್ವಾಂಸರ ಸಂಬಂಧಿಯಾದ ಬಹುಲಾತಿಪ್ರಯೋಗವಿಲ್ಲದಿದ್ದರೂ ವಿದ್ವತ್ಸಂಬಂಧಿಯಾದ ಬಹುಲಾತಿಪ್ರಯೋಗವಿದ್ದಪ್ರಯುಕ್ತ ಹೇತುವಿಗೆ ಅಸಿದ್ಧಿಯಿಲ್ಲ.) (ಹಾಗಾದರೆ ಶಬ್ದಗಳಿಗೆ ಈಶ್ವರನಲ್ಲಿ ರೂಢಿಯಿದ್ದಂತೆಯೇ ಲೋಕದಲ್ಲಿಯೂ ಇದ್ದಪ್ರಯುಕ್ತ ಶ್ರೀ ಹರಿಯೇ ಮುಖ್ಯವಾಚ್ಯನೆನ್ನುವುದು ಕೂಡುವುದಿಲ್ಲವೆಂದರೆ—) ವಿದುಷಾಂ=ಜ್ಞಾನಿಗಳ, ಸಾ=ಬಹುಲಾತಿಪ್ರಯೋಗಾನುಮಿತವಾದ ರೂಢಿಯು, ಹಿ=ಯಾವ ಕಾರಣದಿಂದ, ಮುಖ್ಯಾ=ಮುಖ್ಯವಾಗಿಯದೋ, (ಆದಕಾರಣ ಸಾಮ್ಯವಿಲ್ಲ.) ವೈದಿಕಾ= ವೈದಿಕಬಹುಲಪ್ರಯೋಗದಿಂದ ಅನುಮಿತವಾದುದು, ವಿದ್ವದ್ರೂಢಿಃ ಸ್ಯಾತ್=ವಿದ್ವದ್ರೂಢಿಯು ಆಗುವುದು. ಸಾ=ವಿದ್ವದ್ರೂಢಿಯು, ಯೋಗಾತ್=ಯೋಗವೃತ್ತಿಯನ್ನು ಬಿಡವೇನೇ, ಲಭ್ಯತೇ=ಉಪಲಬ್ಧವಾಗುತ್ತದೆ. (ಅವಿದ್ವದ್ರೂಢಿಯಂತೆ ಸಂಕೇತಕ್ಕೆ ಸಮಾನವಲ್ಲ. ಆದಪ್ರಯುಕ್ತವೂ ಅದು ಮುಖ್ಯವು.) ತಸ್ಮಾತ್ = ಆದುದರಿಂದ ಅಂದರೆ, ಯಾವ ಕಾರಣದಿಂದ ಶ್ರೀ ವಿಷ್ಣುವಿನಲ್ಲಿ ಮಹಾಯೋಗವೂ ಮುಖ್ಯವಾದ ರೂಢಿಯೂ ಇದೆಯೋ, ಇತರರಾದ ದೇವತೆಗಳಲ್ಲಿ ಯೋಗಮಾತ್ರವು ಅಮುಖ್ಯವಾದ ರೂಢಿಯೂ ಅದೆಯೋ ಆದಕಾರಣ) ಮುಖ್ಯಾರ್ಥತಾ = ಸರ್ವಶಬ್ದಮುಖ್ಯಾರ್ಥತ್ವವು, ವಿಷ್ಣೋಃ = ಶ್ರೀ ಹರಿಗೆ, (ಯುಕ್ತವಾಗುತ್ತದೆ.) ಇತಿ=ಈ ಪ್ರಕಾರ, (ಈ ಸಂಗತಿಯನ್ನೂ ಈ ಯುಕ್ತಿಯನ್ನೂ) ಹೃದಿ=ಹೃದಯದಲ್ಲಿ, ಕೃತ್ವಾ=ಮಾಡಿಕೊಂಡು, ಪ್ರಭುಃ=ಸೂತ್ರಕಾರರು, (ಆನಂದಮಯೋಽಭ್ಯಾಸಾತ್ ಇತ್ಯಾದಿಗಳಿಂದ ಎಲ್ಲಾ ಗುಣಿಸಾಮಾನ್ಯವಾಚಕಾದಿ ಶಬ್ದಗಳಿಗೆ ಮುಖ್ಯವೃತ್ತಿಯಿಂದ ಶ್ರೀಹರಿಯಲ್ಲಿ) ಸಮನ್ವಯಂ=ಸಮನ್ವಯವನ್ನು, ಸಾಧಯತಿ=ಸಾಧಿಸುತ್ತಾರೆ. (ಆದಕಾರಣ ಈ ವ್ಯಾಖ್ಯಾನವು ಯುಕ್ತವೇ ಆಗಿಯದೆ.)

ತಾ ॥ ಸ. ರ. ವಿ— (1) ಇಂದ್ರ ಮೊದಲಾದ ಎಲ್ಲಾ ಶಬ್ದಗಳಿಗೂ ಶ್ರೀಹರಿಯು ಲ್ಲಿಯೇ ಮುಖ್ಯವೃತ್ತಿಯು ಸಿದ್ಧಿಸುತ್ತದೆ. ಇಂದ್ರಾದಿ ದೇವತೆಗಳಲ್ಲಿ ಅಲ್ಲ, ಇದಿ ಪರಮೈ ಶ್ವರ್ಯೇ ಇತ್ಯಾದಿ ಧಾತು ವ್ಯಾಖ್ಯಾನದ್ದೆಶೆಯಿಂದ ಪರಮೈಶ್ವರ್ಯಾದಿಗಳೇ ಇಂದ್ರಾದಿ ಶಬ್ದ ಪ್ರವೃತ್ತಿನಿಮಿತ್ತಗಳೆಂದು ಮುಖ್ಯವಾಗಿ ಅವಗತವಾಗುತ್ತವೆ. ಆ ಪ್ರವೃತ್ತಿನಿಮಿತ್ತವು ವಿಷ್ಣುವಿನಿಂದ ವ್ಯತಿರಿಕ್ತರಾದ ಇಂದ್ರಾದಿಗಳಿಗೆ ಕೂಡುವುದಿಲ್ಲ. ಆದಪ್ರಯುಕ್ತ ಪರಮೇಶ್ವರನಿಂದ ಇತರ ರಾದ ದೇವತೆಗಳಲ್ಲಿ ಇಂದ್ರ ಮೊದಲಾದ ಶಬ್ದಪ್ರಯೋಗವು ಐಶ್ವರ್ಯಾದಿ ಲೇಶನಿಮಿತ್ತಕತ್ವವಿದ್ದ ಪ್ರಯುಕ್ತಾ ಔಪಚಾರಿಕವು. ಪುರಂದರಾದಿಗಳಲ್ಯಾದರೂ ಇಂದ್ರಮೊದಲಾದ ಶಬ್ದಪ್ರವೃತ್ತಿಗೆ ನಿಮಿತ್ತವಾದ ಯಾವುದು ಅಲ್ಪವಾದ ಐಶ್ವರ್ಯಮೊದಲಾದುದು ಇದೆಯೋ ಅದೂ ಭಗವದ್ದತ್ತವೇ. ಆದಪ್ರಯುಕ್ತವೂ ಇಂದ್ರಾದಿ ಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾದದ್ದು. (2) ವಿಷ್ಣುವಿನಲ್ಲಿ ಇಂದ್ರಾದಿ ಶಬ್ದಗಳಿಗೆ ಮುಖ್ಯಯೋಗವೃತ್ತಿ ಮಾತ್ರ ಇರುವುದಲ್ಲ, ಮತ್ತೆ ಮುಖ್ಯರೂಢಿಯೂ ಇದೆ ಎಂದು ತಿಳಿಯತಕ್ಕದ್ದು, 'ಸ ಬ್ರಹ್ಮಾ ಸ ಹರಿಃ ಸ ಶಿವಃ ಸೇಂದ್ರಃ' ಇತ್ಯಾದಿ ಅನೇಕ ಶ್ರೌತ ಪ್ರಯೋಗವಿದೆ. ವೈದಿಕಪ್ರಯೋಗ ಸಿದ್ಧವಾದುದೇ ವಿದ್ವದ್ರೂಢಿಯೆಂದು ಹೇಳಲ್ಪಡುತ್ತದೆ. (3) ನಿರುಕ್ತಿಯನ್ನೇ ತಿಳಿಯದೆ ಇರತಕ್ಕವರಿಗೂ ಕೂಡ ಅಗ್ನಿ ಮೊದಲಾದ ಶಬ್ದಗಳಿಗೆ ಜ್ವಲನಾದಿ ಗಳಲ್ಲಿ ಪ್ರಸಿದ್ಧಿಯದೆ. ಅದು ಅವಿದ್ವದ್ರೂಢಿಯೆನ್ನಿಸುತ್ತದೆ. ವಿದ್ವದ್ರೂಢಿಗೆ ವೇದಗಳ ಆನುಕೂಲ್ಯ ವಿದ್ದ ಪ್ರಯುಕ್ತ ವಿದ್ವದ್ರೂಢಿಯೇ ಪ್ರಬಲವಾದುದು. ಆದಪ್ರಯುಕ್ತ ಯೌಗಿಕವಾಗಿರುವು ದರಿಂದಲೂ, ರೂಢವಾಗಿರುವುದರಿಂದಲೂ, ಎಲ್ಲಾ ಶಬ್ದಗಳಿಗೂ ಶ್ರೀವಿಷ್ಣುವೇ ಮುಖ್ಯಾರ್ಥನು ಎಂದಭಿಪ್ರೇತವಾದ ಸಮನ್ವಯವನ್ನು ಸೂತ್ರಕಾರರು ಸಾಧಿಸಿರುತ್ತಾರೆ. ॥ ೨೩೮ ॥ ೨೩೯ ॥ ॥ ೨೪೦ ॥ ೨೪೧ ॥ ಸೂ. ॥ ೧೯ ॥ ॥ ಅಧಿ ॥ ೬ ॥

ಆನಂದಮಯಾಧಿಕರಣವು ಸಮಾಪ್ತವಾಯಿತು.



## ಅಂತಸ್ಥತ್ವಾಧಿಕರಣವು.

ಈ ಅಧಿಕರಣದಲ್ಲಿ ಅಂತಸ್ಥತ್ವ ಲಿಂಗದ್ವಾರಾ ಅಧಿದೈವವಿಷಯಕಗಳಾದ ಎಲ್ಲಾ ಶಬ್ದಗಳಿಗೂ ಸಮನ್ವಯವನ್ನು ಮಾಡುತ್ತಾರೆ.

### "ಓಂ ಅಂತಸ್ತದ್ಧರ್ಮೋಪದೇಶಾತ್ ಓಂ" ಸೂ. ॥ ೨೦ ॥

ಅಂತಃ='ಅಂತಃ ಪ್ರವಿಷ್ಟಂ ಕರ್ತಾರಮೇತಂ' 'ಅಂತಶ್ಚಂದ್ರಮಸಿ' ಎಂದು ತೈತ್ತಿರೀಯು ದಲ್ಲಿ ಅಂತಃಶ್ರುತನಾದವನು, ತತ್ತು=ಬ್ರಹ್ಮನೇ. ಇಂದ್ರಾದಿಗಳಲ್ಲ, ತದ ರ್ಮೋಪದೇಶಾತ್= ಆ ಬ್ರಹ್ಮನ ಸಮುದ್ರಸ್ಥತ್ವ ಬ್ರಹ್ಮಾಂಡ ವೀರ್ಯತ್ವಾದಿರೂಪಗಳಾದ ಧರ್ಮಗಳನ್ನು, 'ಅಂತಸ್ಸಮುದ್ರೇ' 'ಯಸ್ಯಾಂಡಕೋಶಂ' ಇತ್ಯಾದಿ ಶ್ರುತಿಗಳಿಂದ ಉಪದೇಶಮಾಡಿರುವುದರಿಂದ.

### "ಓಂ ಭೇದವ್ಯಪದೇಶಾಚ್ಚಾನ್ಯಃ ಓಂ" ಸೂ. ॥ ೨೧ ॥

ಅಂತಃ=ಅಂತಃ ಶ್ರುತನಾದವನು, ಅನ್ಯಶ್ಚ=ಇಂದ್ರಾದಿಗಳಿಂದ, ಭಿನ್ನನೂ ಆಗಿದ್ದಾನೆ, ಭೇದವ್ಯಪದೇಶಾಚ್ಚ='ಇಂದ್ರಸ್ಯಾತ್ಮಾ' 'ವಾಯೋರಾತ್ಮಾನಂ' ಇತ್ಯಾದಿಗಳಲ್ಲಿ ಇಂದ್ರಾದ್ಯಂತ ರ್ಯಾಮಿತ್ವಾದಿಗಳನ್ನು ಹೇಳಿರುವುದರಿಂದ, ಭೇದವನ್ನು ಹೇಳಿದಪ್ರಯುಕ್ತ.

'ಆನಂದಮಯೋಽಭ್ಯಾಸಾತ್' ಎಂದು ಹೇಳುವ ಸೂತ್ರಕಾರರಿಗೆ ಸರ್ವಶಬ್ದಗಳಿಗೂ ಮುಖ್ಯಾರ್ಥನು ವಿಷ್ಣುವೇ ಎನ್ನುವ ಅರ್ಥವು ಅಭಿಮತವಾಗಿದ್ದರೆ ಅದರಿಂದಲೇ ಗತಾರ್ಥವಾಗುವುದರಿಂದ 'ಅಂತಸ್ತದ್ಧರ್ಮೋಪದೇಶಾತ್' ಇತ್ಯಾದ್ಯಧಿಕರಣಗಳು ಹೊರಡದೇನೇ ಇರಬೇಕಾಗುವುವು. ಪದಾರ್ಥಾಂತರವನ್ನು ವಿಷಯೀಕರಿಸಿಕೊಂಡಿರುವ ರೂಢಿಯೋಗಗಳನ್ನು ಆಶ್ರಯಿಸಿಯೇ ಪೂರ್ವಪಕ್ಷವು ಪ್ರವೃತ್ತವಾಗುತ್ತದೆ. ಹೇಗೆಂದರೆ, ಅವರಲ್ಲಿ ಇಂದ್ರಾದಿದೇವತಾ ವಿಷಯಕವಾದ ರೂಢಿಯು ವಿದ್ವದ್ರೂಢಿಯಾಗದಿರುವುದರಿಂದ ಭಗವದ್ವಿಷಯಕವಾದ ವಿದ್ವದ್ರೂಢಿಯಿಂದಲೂ, ಯೋಗವಾದರೂ ಅಲ್ಪವಾದ ಭಗವದಧೀನಸ್ವಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿಕೊಂಡಿರುವುದರಿಂದ ನಿರವಧಿಕವಾದ ಪರಾಧೀನವಲ್ಲದ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿಕೊಂಡಿರುವಮಹಾಯೋಗದಿಂದಲೂ ದುರ್ಬಲವೇ ಆಗಿದೆ ಎಂದು ಉಪಪಾದಿಸಿರುವೆವು. ಆದಕಾರಣ ಅಧಿಕರಣಾಂತರಕ್ಕೆ ಅವಕಾಶವು ಹೇಗೆ? ಎಂದರೆ, ಸತ್ಯವೇ-ಆದಾಗ್ಯೂ ಅಧಿಕಾಶಂಕೆಯು ಇದ್ದ ಪ್ರಯುಕ್ತ ಅಧಿಕರಣಾಂತರಾರಂಭವು ಕೂಡಬಹುದೆಂದು ಅಭಿಪ್ರಾಯಪಟ್ಟು ಅಧಿಕಾಶಂಕಾ ಪ್ರವರ್ತನಪೂರ್ವಕವಾಗಿ ಅಂತಸ್ತದ್ಧರ್ಮೋಪದೇಶಾತ್ ಎನ್ನುವ ಅಧಿಕರಣತಾತ್ಪರ್ಯವನ್ನು ತೋರಿಸುತ್ತಾರೆ.

ಮೂ ॥ [ಸಮನ್ವಯಂ ಸಾಧಯತಿ] ದೇವಾನಾಂ ತತ್ರ ಶಕ್ತತಾಂ ।<br>
ಆಶಂಕ್ಯ ತತ್ರ ರೂಢಿಂ ಚ ತಚ್ಛಬ್ದಾನಾಮಪಿ ಸ್ವಯಂ ।<br>
ಸಮುದ್ರಾಂತಸ್ಥಿತತ್ವಾದ್ಯೈಸ್ತದ್ಧರ್ಮೈರ್ವಿಷ್ಣುರೂಢತಾಂ ।<br>
ಸಾಧಯಿತ್ವಾಽಭಿದಾಂ ತೈಶ್ಚ ಪುನರೇವ ನ್ಯವಾರಯತ್ ॥ ೨೪೨ ॥<br>
ಸೂ. ॥ ೨೦ ॥ ೨೧ ॥ ಅಧಿ ॥ ೭ ॥

ಅ ॥ ದೇವಾನಾಂ=ಇಂದ್ರಾದಿದೇವತೆಗಳಿಗೆ, ತತ್ರ=ನಿರವಧಿಕವಾದ ಇಂದ್ರಾದಿ ಶಬ್ದ ಪ್ರವೃತ್ತಿನಿಮಿತ್ತವಿರುವುದರಲ್ಲಿ, ಶಕ್ತತಾಂ=ಶಕ್ತಿಯನ್ನು, ಹಾಗೆಯೇ, ತಚ್ಛಬ್ದಾನಾಂ=ಇಂದ್ರಾದಿಶಬ್ದಗಳಿಗೆ, ತತ್ರ=ಇಂದ್ರಾದಿದೇವತೆಗಳಲ್ಲಿ, ಸ್ವಯಮಪಿ=ಸಾಕ್ಷಾತ್ತಾಗಿಯೂ, ವಿದ್ವತ್ಸಂಬಂಧಿಯಾದ, ರೂಢಿಂ ಚ=ರೂಢಿಯನ್ನೂಕೂಡ, ಆಶಂಕ್ಯ=ಅಭ್ಯಧಿಕವಾದುದನ್ನು ಆಶಂಕಿಸಿ, ಸಮುದ್ರಾಂತಸ್ಥಿತತ್ವಾದ್ಯೈಃ=ಸಮುದ್ರದೊಳಗಿರುವಿಕೆ, ಬ್ರಹ್ಮಾಂಡವೀರ್ಯತ್ವ, ಬ್ರಹ್ಮತಪೋಲಭ್ಯತ್ವವೊದಲಾದ, ತದ್ಧರ್ಮೈಃ=ವಿಷ್ಣುಧರ್ಮಗಳಿಂದ, ವಿಷ್ಣುರೂಢತಾಂ=ಅಂತಃಪ್ರವಿಷ್ಟತ್ವಕ್ಕೆ ವಿಷ್ಣುನಿಷ್ಠತ್ವವನ್ನೂ ಹಾಗೆಯೇ ಇಂದ್ರಾದಿಶಬ್ದಗಳಿಗೂ ವಿಷ್ಣುನಿಷ್ಠತ್ವವನ್ನೂ, (ಯೌಗಿಕತ್ವವನ್ನೂ) ಸಾಧಯಿತ್ವಾ=ಸಾಧಯಿಸಿ, ತೈಃ=ಆ ದೇವತೆಗಳಿಂದ, (ಈಶ್ವರನಿಗೆ) ಅಭಿದಾಂ ಚ=ಅಭೇದವನ್ನೂ (ಪುನಃ ಆಶಂಕಿಸಿ) ಪುನರೇವ=ಮತ್ತು, ನ್ಯವಾರಯತ್=ನಿವಾರಿಸಿದರು.

ತಾ ॥ ನ್ಯಾಯಸುಧಾ—(1) ತೈತ್ತಿರೀಯರು ಹೇಳುವರು. '**ಅಂತಃಪ್ರವಿಷ್ಟಂ ಕರ್ತಾರಮೇತಂ। ಅಂತಃ ಚಂದ್ರಮಸಿ ಮನಸಾ ಚರಂತಂ। ಸಹೈವ ಸಂತಂ ನ ವಿಜಾನಂತಿ ದೇವಾಃ**'॥ (ತೈ. ಆ ೩. ೧೧. ೨೪) ಎಂದು ಈ ಅಂತಃಪ್ರವಿಷ್ಟನು ಶ್ರೀಹರಿಯೋ? ಶ್ರೀಹರಿಯಿಂದ ವ್ಯತಿರಿಕ್ತರಾದ ಇಂದ್ರಾದಿಗಳೋ? ಎಂದು ಸಂಶಯವು. (2) ಇಂದ್ರಾದಿಗಳು ಎಂದು ಪೂರ್ವಪಕ್ಷವು. ಏಕೆಂದರೆ-'ಇಂದ್ರೋರಾಜಾಜಗತೋ ಯ ಈಶೇ' । (ತೈ. ಆ. ೩. ೧೧. ೨೫) '**ತ್ವಷ್ಟಾರಂ ರೂಪಾಣಿ ವಿಕುರ್ವಂತಂ ವಿಪಶ್ಚಿಂ। ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ। ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಂ**' ॥ (ತೈ. ಆ. ೩.೧೧. ೨೧) ಎಂದು ಇಂದ್ರಾದಿ ಶ್ರುತಿಯಿದೆ. '**ಸಪ್ತ ಯುಂಜಂತಿ ರಥಮೇಕಚಕ್ರಂ**'(ತೈ. ಆ. ೩. ೧೧. ೨೭)। ಎಂದು ಆದಿತ್ಯಲಿಂಗವೂ ಇದೆ.

(3) ಇಂದ್ರಾದಿಶ್ರುತಿಯು ಇಂದ್ರಾದಿಗಳಲ್ಲಿ ರೂಢವಾಗಿರುವುದರಿಂದಲೂ, ಯೌಗಿಕವಾಗಿರುವುದರಿಂದಲೂ ಇಂದ್ರಾದಿಗಳಿಂದ ವ್ಯತಿರಿಕ್ತರಲ್ಲಿ ಒಯ್ಯಲಿಕ್ಕೆ ಸಾಧ್ಯವಿಲ್ಲ. (4) ಹಾಗಾದರೆ ಇಂದ್ರಾದಿಗಳಲ್ಲಿ ರೂಢಿಯು ವಿದ್ವತ್ಸಂಬಂಧಿಯಾಗದಿರುವುದರಿಂದಲೂ ಯೋಗವು ಪರಮೇಶ್ವರಾಧೀನ ಅಲ್ಪನಿಮಿತ್ತವುಳ್ಳದ್ದಾದಪ್ರಯುಕ್ತವೂ ಅಮುಖ್ಯವೆಂದು ಹೇಳಿಯಾಗಿದೆ ಎಂದರೆ—ಸತ್ಯವೇ. ಆದರೆ; ಅದು ಅನ್ನ ಔಷಧ್ಯಾದಿಪದಾರ್ಥಗಳಲ್ಲಿ ಆಗಬಹುದು. ಪುರಂದರಾದಿಗಳಲ್ಲಿ ಆಗಲಾರದು. ಅವರಲ್ಲಿ ಇಂದ್ರಾದಿಶಬ್ದಪ್ರವೃತ್ತಿನಿಮಿತ್ತವಾದ ಪರಮೈಶ್ವರ್ಯವೊದಲಾದುದು ನಿರವಧಿಕವಾಗಿಯೂ, ಪರಾಧೀನವಾಗಿಯೂ ಇರುವುದರಿಂದ ಮುಖ್ಯಯೋಗವು ಕೂಡುತ್ತದೆ ಅಶಕ್ತರಾದ ಸಾಮಂತರಾಜರಲ್ಲಿ ಐಶ್ವರ್ಯಾದಿಗಳು ಅಲ್ಪವೂ, ಪರಾಧೀನವೂ ಆಗಿರುತ್ತವೆ. ದೇವತೆಗಳಾದರೂ ಮಹಾಶಕ್ತಿಯುಳ್ಳವರಾದಪ್ರಯುಕ್ತ ಅಲ್ಪ ಐಶ್ವರ್ಯಾದಿಗಳುಳ್ಳವರು ಹೇಗೆ ಆದಾರು? 'ಇಂದ್ರೋ ವೈ ದೇವಾನಾಮೋಜಿಷ್ಠಃ । ಇತ್ಯಾದಿ ಶ್ರುತಿಯೂ ಇದೆ. (5) ಸ್ವತಂತ್ರವೂ, ನಿರವಧಿಕವೂ ಆದ ಐಶ್ವರ್ಯವೊದಲಾದುದು ಅನೇಕರಲ್ಲಿ ವಿರುದ್ಧವೆಂದು ಹೇಳಕೂಡದು. ಇಂದ್ರಾದಿಗಳೇ ಪರಮೇಶ್ವರ ಸ್ವರೂಪರಾಗಿದ್ದಾರೆ. ಆ ಶ್ರೀಹರಿಯೇ ಆಯಾಯ ಕಾರ್ಯವಶದಿಂದ ಹರಿ-ಹರ, ಇಂದ್ರ ಮೊದಲಾದ ಆಯಾಯ ಸಂಜ್ಞೆಗಳನ್ನು ಹೊಂದುತ್ತಾನೆ. ಆದುದರಿಂದಲೇ 'ಅಹಂ ಭವೋ ಭವಂತಶ್ಚ ಸರ್ವಂ ನಾರಾಯಣಾತ್ಮಕಂ' ಇತ್ಯಾದಿ ಪುರಾಣವಾಕ್ಯವು. ಆದುದರಿಂದ ಇಂದ್ರಾದಿಗಳೇ 'ಅಂತಃಪ್ರವಿಷ್ಟಂ ಕರ್ತಾರಮೇತಂ' ಇತ್ಯಾದಿ ಶ್ರುತಿಗಳಲ್ಲಿ ಅಂತಃಪ್ರವಿಷ್ಟರೆಂದು ಪ್ರತಿಪಾದಿಸಲ್ಪಡುತ್ತಾರೆ. ಈಪ್ರಕಾರ ಇಂದ್ರಾದಿ ಶಬ್ದಗಳಿಗೆ ಇಂದ್ರಾದಿಗಳಲ್ಲಿಯೇ ಮಹಾಯೋಗವೃತ್ತಿಯನ್ನೂ, ರೂಢಿಯನ್ನೂ ಆಶಂಕಿಸಿ ಪ್ರಾಪ್ತವಾದ ಪೂರ್ವಪಕ್ಷವನ್ನು ಸೂತ್ರಕಾರರು 'ಅಂತಸ್ತದ್ಧರ್ಮೋಪದೇಶಾತ್' ಎನ್ನುವ ಸೂತ್ರದಿಂದ ನಿರಾಕರಿಸುತ್ತಾರೆ. ಅಂತಃಪ್ರವಿಷ್ಟನಾದವನು ಶ್ರೀ ವಿಷ್ಣುವೇ. 'ಸಮುದ್ರೇಽಂತಃ ಕವಯಃ' 'ಯಸ್ಯಾಂಡಕೋಶಂ ಶುಷ್ಮಮಾಹುಃ' 'ಬ್ರಹ್ಮಾ ತಪಸಾನ್ವವಿಂದತ್' ಎಂದು ಸಮುದ್ರಾಂತಸ್ಥಿತತ್ವ, ಬ್ರಹ್ಮಾಂಡವೀರ್ಯತ್ವ, ಬ್ರಹ್ಮತಪೋಲಭ್ಯತ್ವ ಮೊದಲಾದ ಧರ್ಮಗಳನ್ನು ಹೇಳಿರುವುದರಿಂದ. ಅವುಗಳು ವಿಷ್ಣುವಿನ ಧರ್ಮಗಳೆಂದು ಶ್ರುತಿಸ್ಮೃತಿಸಿದ್ಧಗಳಾಗಿವೆ. 'ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ' ಇತ್ಯಾದಿ ಶ್ರುತಿಗಳಿಂದ ಇಂದ್ರಾದಿ ಶಬ್ದಗಳಿಗೆ ಶ್ರೀ ಹರಿಯಲ್ಲಿ ವಿದ್ವದ್ರೂಢಿಯೂ ಇದೆ. ಮಹಾಯೋಗವೆಂತೂ ಸುಪ್ರಸಿದ್ಧವಾಗಿದೆ. ಇಂದ್ರಾದಿಗಳಲ್ಲಿರತಕ್ಕ ಪರಮೈಶ್ವರ್ಯಾದಿಗಳು ಅಲ್ಪಗಳೆಂದೂ ಪರಾಧೀನಗಳೆಂದೂ ಸುಪ್ರಸಿದ್ಧಗಳಾಗಿವೆ (6) ಹಾಗಾದರೆ, ದೇವತೆಗಳು ಪರಮೇಶ್ವರನ ಸ್ವರೂಪರಾಗಿರುವುದರಿಂದ ಸಮುದ್ರಾಂತಸ್ಥಿತತ್ವ ಮೊದಲಾದುದೆಲ್ಲವೂ ಕೂಡುತ್ತದೆ. ಮತ್ತು ದೇವತೆಗಳಿಂದ ಶ್ರೀಹರಿಗೆ ಐಕ್ಯವೂ ಕೂಡಬಹುದೆಂದಾಶಂಕಿಸಿದರೆ—'ಭೇದವ್ಯಪದೇಶಾಚ್ಚಾನ್ಯಃ' ಎನ್ನುವ ಸೂತ್ರದಿಂದ 'ಇಂದ್ರಸ್ಯಾತ್ಮಾ' ಇತ್ಯಾದಿ ವಿಶೇಷವಿಷಯಕವಾದ ಭೇದವ್ಯಪದೇಶವಿದ್ದ ಪ್ರಯುಕ್ತವೂ ಅಭೇದವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ, ಶ್ರೀಹರಿಯು ಇಂದ್ರಾದಿ ದೇವತೆಗಳಿಂದ ಭಿನ್ನನು, ಮತ್ತು ಅಂತಃಪ್ರವಿಷ್ಟನು, ಎಂದು ಸೂತ್ರಕಾರರು ಸಾಧಿಸಿರುವರು.

### ಸಾರಾಂಶ:—

ಸ. ರ. ವಿ—(1) 'ಬ್ರಹ್ಮೇಂದ್ರಮಗ್ನಿಂ । ಜಗತಃ ಪ್ರತಿಷ್ಠಾಂ ॥ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಂ । ಚತುರ್ಹೋತಾರಂ ಪ್ರದಿಶೋನು ಕ್ಲೃಪ್ತಂ ॥ ವಾಚೋ ವೀರ್ಯಂ ತಪಸಾನ್ವವಿಂದತ್' । (ತೈ.ಆ.೩.೧೧.೨೧) ಎಂದು ಶ್ರುತಿಯು. ಅದರಲ್ಲಿ ಇಂದ್ರಾದಿ ಶಬ್ದಗಳಿಗೆ ಪುರಂದರಾದಿಗಳಲ್ಲಿಯೇ ಲೋಕರೂಢಿಯಿದ್ದ ಪ್ರಯುಕ್ತವೂ ಯೋಗವು ಕೂಡುವುದರಿಂದಲೂ

ಈ ತೈತ್ತಿರೀಯೋಪನಿಷತ್ತು ಪುರಂದರಾದಿ ಪರವಾಗುತ್ತದೆಂದು ಆಶಂಕಾಬಂದರೇ ಇಂದ್ರಾದಿ ಶಬ್ದಗಳಿಂದ ವಿಷ್ಣುವನ್ನೇ ಇಟ್ಟುಕೊಳ್ಳಬೇಕು. ಏಕೆಂದರೆ—ಬ್ರಹ್ಮತಪೋಲಭ್ಯತ್ವ ಜಗತ್ಪ್ರತಿಷ್ಠಾತ್ವ ಮೊದಲಾದ ಲಿಂಗವೂ'ಅಂತಸ್ಸಮುದ್ರೇ ಮನಸಾ ಚರಂತಂ' ಇತ್ಯಾದಿ ಸನ್ನಿಹಿತವಾಕ್ಯಗಳಿಂದ ಅವಗತವಾದ ಕ್ಷೀರಾಬ್ಧಿ ಶಾಯಿತ್ವ ಮೊದಲಾದ ಲಿಂಗಗಳೂ ಇವೆ. ಅಂತಹ ಲಿಂಗವು ಇಂದ್ರಾದಿಗಳಲ್ಲಿ ಸರ್ವಥಾ ಕೂಡದಿರುವುದರಿಂದ ಲೌಕಿಕವಾದ ರೂಢಿಯು ಬಾಧಿತವಾಗುತ್ತದೆನ್ನುವುದು ಕೂಡುತ್ತದೆ. 'ಕಶ್ಯಪೋ ದೇವರಾಡಿಂದ್ರಃ' ಇದು ಮೊದಲಾದ ವಿಷ್ಣುನಾಮಗಳಲ್ಲಿಯೇ ಇಂದ್ರಾದಿ ಶಬ್ದಕ್ಕೆ ಪ್ರಯೋಗವಿದ್ದುದರಿಂದ ವಿದ್ವದ್ರೂಢಿಯುದ್ಧಪ್ರಯುಕ್ತವೂ ಮಹಾಯೋಗವಿದ್ದುದರಿಂದಲೂ ವಿಷ್ಣುವಿನಲ್ಲಿಯೇ ಮುಖ್ಯವಾಗಿರುವುದರಿಂದ ವಿಷ್ಣುವೇ ಇಲ್ಲಿ ಪ್ರತಿಪಾದಿಸಲ್ಪಡುತ್ತಾನೆ. (2) ಇಂದ್ರಾದಿಶಬ್ದಗಳಿಗೆ ಶ್ರೀ ಹರಿಯಲ್ಲಿ ಪ್ರಯೋಗವಿದ್ದುದರಿಂದ ಇಂದ್ರಾದಿ ದೇವತೆಗಳಿಂದ ಐಕ್ಯವು ಶ್ರೀ ಹರಿಗೆ ವಿವಕ್ಷಿತವೆಂದು ಹೇಳಕೂಡದು. 'ಇಂದ್ರಸ್ಯಾತ್ಮಾ ನಿಹಿತಃ ಪಂಚಹೋತಾ। ವಾಯೋರಾತ್ಮಾನಂ ಕವಯೋ ನಿಚಿಕ್ಯುಃ। ಅಂತರಾದಿತ್ಯೇ ಮನಸಾ ಚರಂತಂ। ದೇವಾನಾಂ ಹೃದಯಂ ಬ್ರಹ್ಮಾನ್ವವಿಂದತ್' ॥ (ತೈ. ಆ. ೩ ೧೧ ೨೨.೨೩.೨೫) ಇದುಮೊದಲಾದ ಸನ್ನಿಹಿತವಾಕ್ಯಗಳಲ್ಲಿ ಇಂದ್ರನಲ್ಲಿ ಅಂತರ್ಯಾಮಿಯಾಗಿದ್ದಾನೆಂದು ಭೇದವನ್ನು ಹೇಳಿರುವರು. ಆದಕಾರಣ ಶ್ರೀ ವಿಷ್ಣುವೇ ಇಲ್ಲಿ ಪ್ರತಿಪಾದಿಸಲ್ಪಡುತ್ತಾನೆಂದು ಸಿದ್ಧವಾಯಿತು ॥ ೨೪೨ ॥ ಸೂ ॥ ೨೦ ॥ ೨೧ ॥ ಅಧಿ ॥ ೭ ॥

**ಅಂತಸ್ಥತ್ವಾಧಿಕರಣವು ಸಮಾಪ್ತವಾಯಿತು.**

## ಆಕಾಶಾಧಿಕರಣವು.

ಈ ಪ್ರಕಾರ ಅಧಿದೈವವಿಷಯಕವಾದ ಶಬ್ದಸಮನ್ವಯವನ್ನು ಹೇಳಿ, ಈಗ ಅಧಿಭೂತ ವಿಷಯಕವಾದ ಶಬ್ದಸಮನ್ವಯವನ್ನು ಹೇಳಲಿಚ್ಛಿಸುವವರಾಗಿ, ಆಕಾಶವು ಭೂತಗಳಲ್ಲಿ ಪ್ರಧಾನವಾಗಿರುವುದರಿಂದ ಆಕಾಶಶಬ್ದ ಸಮನ್ವಯವನ್ನು ಶ್ರೀ ಹರಿಯಲ್ಲಿ ಸೂತ್ರಕಾರರು ಹೇಳುವರು.

### " ಓಂ ಆಕಾಶಸ್ತಲ್ಲಿಂಗಾತ್ ಓಂ " ಸೂ. ॥ ೨೨ ॥

'ಆಕಾಶ ಇತಿ ಹೋವಾಚ' ಎನ್ನುವ ಛಾಂದೋಗ್ಯದಲ್ಲಿರುವ ಆಕಾಶಶಬ್ದವಾಚ್ಯನು ಶ್ರೀ ಹರಿಯೇ, ಅಂದರೆ ಮಹಾಯೋಗವಿದ್ವದ್ರೂಢಿಗಳಿಂದ ಮುಖ್ಯವೃತ್ತಿಯಿಂದ ಆಕಾಶಶಬ್ದವು ಬ್ರಹ್ಮಪರವೇ. 'ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ' ಎಂದು ಪರೋವರೀಯಸ್ತ್ವ ಮೊದಲಾದ ವಿಷ್ಣುವಿನ ಲಿಂಗವಿದ್ದಪ್ರಯುಕ್ತ.

ಛಂದೋಗರು ಹೇಳುವರು. "ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ। ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ। ಆಕಾಶಂ ಪ್ರತ್ಯಸ್ತಂ ಯಂತಿ। ಆಕಾಶೋ ಹ್ಯೇವೈಭ್ಯೋ ಜ್ಯಾಯಾನ್ ಆಕಾಶಃ ಪರಾಯಣಂ ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ ॥" (ಛಾ. ಉ. ೧. ೯.೧) ಅಂದರೆ, ಈ ಲೋಕಕ್ಕೆ ಆಶ್ರಯವು ಯಾವುದು ಎಂದರೆ ಆಕಾಶವೆಂದು ಹೇಳಿದನು. ಈ ಎಲ್ಲಾ ಭೂತಗಳೂ ಆಕಾಶದಿಂದಲೇ ಹುಟ್ಟುತ್ತವೆ. ಆಕಾಶದಲ್ಲಿಯೇ ಲಯವನ್ನು ಹೊಂದುತ್ತವೆ. ಈ ಎಲ್ಲಾ ಭೂತಗಳಿಂದ ಆಕಾಶವೇ ಶ್ರೇಷ್ಠವಾದುದು. ಆಕಾಶವೇ ಮುಖ್ಯಾಶ್ರಯವಾದುದು.

ಈ ಆಕಾಶವೇ ಸರ್ವೋತ್ತಮವಾದುದು. ಸರ್ವೋತ್ತಮವೆಂದು ಗಾನಮಾಡಲ್ಪಡತಕ್ಕದ್ದು. ಅವಿನಾಶಿಯಾದುದು ಎಂದು. ಈ ಆಕಾಶಶಬ್ದವಾಚ್ಯನು ಪರಮಾತ್ಮನೋ ಭೂತಾಕಾಶವೋ ಎಂದು ಸಂಶಯವು. ಭೂತಾಕಾಶವೇ ಸರಿ ಎಂದು ಪೂರ್ವಪಕ್ಷವು ಏಕೆಂದರೆ ಯೋಗ ರೂಢಿಗಳಿಂದ ಆಕಾಶಶಬ್ದಕ್ಕೆ ಭೂತಾಕಾಶದಲ್ಲಿಯೇ ಪ್ರಸಿದ್ಧಿಯಿರುವುದು. ಆಕಾಶನವೆಂದರೆ ಅವಕಾಶತ್ವವು. ಅದು ಭೂತಾಕಾಶದಲ್ಲಿಯೇ ಪ್ರಸಿದ್ಧವಾಗಿದೆ. ಆಕಾಶಶಬ್ದಕ್ಕೆ ಭೂತಾಕಾಶ ವಿಷಯದಲ್ಲಿಯೇ ಲೌಕಿಕ ವೈದಿಕ ಪ್ರಯೋಗಗಳು ಬಹಳ ದೃಷವಾಗಿವೆ. (2) ಹಾಗಾದರೆ, 'ಸರ್ವಾಣಿ ಹವಾ' ಇದುಮೊದಲಾದ ವಾಕ್ಯಗಳಲ್ಲಿ ಹೇಳಿದ ಕಾರಣತ್ವರೂಪಲಿಂಗದಿಂದ ಶ್ರೀ ಹರಿಯು ಆಕಾಶಶಬ್ದವಾಚ್ಯನೆಂದು ಹೇಳಕೂಡದು. ಲಿಂಗದಿಂದ ಶ್ರುತಿಯು ಸ್ವಭಾವತಃ ಪ್ರಬಲವು. ಹಾಗಾದರೆ, ಲಿಂಗಗಳೂ ಹೆಚ್ಚು ಇದ್ದಪ್ರಯುಕ್ತ ಪ್ರಬಲಗಳಾಗಿವೆ ಎಂದು ಹೇಳು ತ್ತೇವೆಂದರೆ ಹಾಗಾದರೂ ಸಾಮ್ಯವೇ ಬಂದಿರುವುದರಿಂದ ನಿರ್ಣಯವಾಗಲಾರದು. ಮತ್ತು ಶ್ರುತಿಲಿಂಗಗಳಿಗೆ ಹಿಂದೆ ಹೇಳಿದಪ್ರಕಾರ ಸಾಮ್ಯವೂ ಇರುವುದಿಲ್ಲ. ಏಕೆಂದರೆ— '**ದ್ವಿವಿಧಂ ಬಲವತ್ವಂ ಚ ಬಹುತ್ವಾಚ್ಚ ಸ್ವಭಾವತಃ । ತಯೋಃ ಸ್ವಭಾವೋ ಬಲವಾನುಪ ಜೀವ್ಯಾದಿಕಶ್ಚ ಸಃ**' ॥ ಎಂದು ಹೇಳಿದ ರೀತಿಯಿಂದ ಬಹುತ್ವಪ್ರಯುಕ್ತ ಪ್ರಾಬಲ್ಯಕ್ಕಿಂತ ಸ್ವಭಾವಪ್ರಯುಕ್ತ ಪ್ರಾಬಲ್ಯವೇ ಬಲವಾಗಿದೆ. ಆದುದರಿಂದ ಪ್ರಥಮದಲ್ಲಿ ಅವಗತವಾದ ಸ್ವಭಾವತಃ ಪ್ರಬಲವಾದ ಶ್ರುತಿಯನ್ನು ಅನುಸರಿಸಿ ಲಿಂಗಗಳನ್ನು ಕಥಂಚಿತ್ ಯೋಜಿಸಬೇಕು. (3) ಹಾಗಾದರೆ, ಈ ಶಂಕೆಯು 'ಅಂತಸ್ತದ್ಧರ್ಮೋಪದೇಶಾತ್' ಎನ್ನುವುದರಿಂದಲೇ ಪರಿಹೃತ ವಾಗಿದೆ. ಇಂದ್ರ ಮೊದಲಾದ ಶಬ್ದಗಳಂತೆಯೇ ಆಕಾಶಶಬ್ದಕ್ಕೂ ಭೂತಾಕಾಶದಲ್ಲಿ ಅಮುಖ್ಯ ವೃತ್ತಿಯಿಂದ ಪ್ರವೃತ್ತವಾದುದಕ್ಕೆ ಮಹಾಯೋಗವಿದ್ವದ್ರೂಢಿಗಳಿಂದ ಈಶ್ವರವಾಚಕತ್ವವೇ ನ್ಯಾಯವು. ನಿರವಕಾಶವಾದ ಲಿಂಗದ ಸಾಮರ್ಥ್ಯವಿರುವಾಗ ಈಶ್ವರವಾಚಕತ್ವವನ್ನು ಅವಶ್ಯ ವಾಗಿ ಅಂಗೀಕರಿಸಲೇಬೇಕು. ಮತ್ತು ಇಲ್ಲಿ ಹಿಂದಿನಂತೆ ಯಾವುದೊಂದು ಅಭ್ಯಧಿಕಾಶಂಕೆಯೂ ಇರುವುದಿಲ್ಲ. ಆದುದರಿಂದ ಈ ಅಧಿಕರಣವನ್ನು ಆರಂಭಿಸಕೂಡದೆಂದು ಶಂಕಿಸಿಕೊಂಡು ಈಗ ಅಭ್ಯಧಿಕಾಶಂಕೆಯನ್ನು ತೋರಿಸುತ್ತಾರೆ—

**ಮೂ ॥ ಚೇಷ್ಟಾ ಹಿ ಚೇತನಾನಾಂ ಯಾ ಸಾ ಭವೇತತ್ಪ್ರಸಾದತಃ ॥ ೨೪೩ ॥**
**ಅಚೇತನಸ್ವಭಾವಸ್ತು ವಿವರಾದಿಃ ಕಥಂ ತತಃ ।**
**ಇತಿ ಶಂಕಾನಿವೃತ್ಯರ್ಥಮಾಕಾಶ ಇತಿ ನಾಮ ಚ ॥ ೨೪೪ ॥**
**ಪರತೋಽಪಿ ವರೀಯಸ್ತ್ವಪೂರ್ವಾಲ್ಲಿಂಗಾದ್ಧರೇರ್ಭವೇತ್ ।**
**ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ ॥**
**ಇತ್ಯಾದಿ ವಾಕ್ಯೈಃ [ಅಧ್ಯಾತ್ಮಮನ್ವಯವ್ಯತಿರೇಕತಃ] ॥ ೨೪೫ ॥**
**ಸೂ. ॥ ೨೨ ॥**

ಅ ॥ **ಚೇತನಾನಾಂ**=ಜೀವರಿಗೆ, **ಯಾ ಚೇಷ್ಟಾ ಹಿ**=ಯಾವ ಚೇಷ್ಟೆಯಿದೆಯೋ, **ಸಾ**= ಅದು, **ತತ್ಪ್ರಸಾದತಃ**=ಶ್ರೀಹರಿಯ ಅನುಗ್ರಹದಿಂದಲೇ, **ಭವೇತ್**=ಆಗುವುದು. **ಅಚೇತನ ಸ್ವಭಾವಸ್ತು**=ಅಚೇತನಸ್ವಭಾವಭೂತವಾದ, **ವಿವರಾದಿಃ**=ವಿವರತ್ವಾದಿಗಳು, **ತತಃ**=ಪರಮೇ ಶ್ವರನದ್ದೆಶೆಯಿಂದ, ಅಂದರೆ ಪರಮೇಶ್ವರನ ಅಧೀನವು, **ಕಥಂ**=ಹೇಗೆ ಆಗುವುದು? **ಇತಿ**= ಇಂತಹ, **ಶಂಕಾನಿವೃತ್ಯರ್ಥಂ** ಶಂಕೆಯನ್ನು ನಿವೃತ್ತಿಗೊಳಿಸುವುದಕ್ಕಾಗಿ, **ಪರತೋಽಪಿ ವರೀಯಸ್ತ್ವಪೂರ್ವಾತ್ ಲಿಂಗಾತ್** = ನಿರವಕಾಶವಾದ ಪರೋವರೀಯಸ್ತ್ವ ಮೊದಲಾದ

(ಅನೇಕಾನೇಕ)ಲಿಂಗಗಳದ್ದೆಶೆಯಿಂದ,ಆಕಾಶ ಇತಿ ನಾಮ ಚ=ಆಕಾಶ ಎನ್ನುವ ನಾಮಧೇಯವೂ ಕೂಡ,ಹರೇಃ ಭವೇತ್=ಶ್ರೀವಿಷ್ಣುವಿಗೇನೇ ವಾಚಕವಾಗುವುದು. ಅದಃ ನಭಃ=ಈ ಆಕಾಶವು, ಯನ್ನಿಯಮಾತ್=ಯಾರ ಪ್ರೇರಣೆಯಿಂದಲೇ, ಶ್ವಸತಾಂ=ಶ್ವಾಸಬಿಡುವವರಿಗೂ, ಮಾರ್ಗಂ= ಅವಕಾಶವನ್ನು, ದದಾತಿ=ಕೊಡುತ್ತದೋ, ಇತ್ಯಾದಿವಾಕ್ಯೈಃ=ಇದುಮೊದಲಾದ, 'ಸರ್ವ ಭೂತಗುಣೈರ್ಯುಕ್ತಂ' ಇದುಮೊದಲಾದ ವಾಕ್ಯಗಳಿಂದ, (ದೇಶಕಾಲಗಳಿಂದ ಪರಿಚ್ಛಿನ್ನವಾದ ಆಕಾಶಕ್ಕೆ ಅವಕಾಶದಾತೃತ್ವವೂ ನಿರವಧಿಕವಾದುದು ಕೂಡುವುದಿಲ್ಲ. ಪರಮೇಶ್ವರನ ಅಧೀನ ವಾಗಿರುವುದರಿಂದ ಸ್ವತಂತ್ರವೂ ಅಲ್ಲ. ಶ್ರೀಹರಿಗೆ ಸ್ವತಂತ್ರವೂ, ನಿರವಧಿಕವೂ ಆದ ಆಕಾಶ ಶಬ್ದಪ್ರವೃತ್ತಿನಿಮಿತ್ತವಾದ ಅವಕಾಶ ಪ್ರದತ್ವವೂ ಇದೆ ಎಂದು ತಿಳಿಯುತ್ತದೆ.)

ತಾ || ನ್ಯಾಯಸುಧಾ—(1) ನಿರವಧಿಕವಾದ ಪ್ರವೃತ್ತಿನಿಮಿತ್ತವಾದ ಐಶ್ವರ್ಯಾದಿ ಗಳು ಕೂಡದಿರುವುದರಿಂದ ಇಂದ್ರಾದಿಶಬ್ದಗಳಿಗೆ ಪುರಂದರಾದಿಗಳಲ್ಲಿ ಅಮುಖ್ಯತ್ವವು ಯುಕ್ತವು. ಇಂದ್ರಾದಿಗಳಲ್ಲಿರತಕ್ಕ ಅಲ್ಪವಾದ ಐಶ್ವರ್ಯವೂ ಕೂಡ ಪರಮೇಶ್ವರನ ಅಧೀನವೇ ಆಗಿದೆ. ಸ್ವತಂತ್ರ ನಿರವಧಿಕ ಐಶ್ವರ್ಯಾದಿಗಳುಳ್ಳ ಪರಮೇಶ್ವರನಲ್ಲಿ ಮುಖ್ಯವು. ಆದುದರಿಂದ ಶ್ರೀಹರಿ ಯಲ್ಲಿ ಇಂದ್ರಾದಿಶಬ್ದವಾಚ್ಯತ್ವವು ಪೂರ್ವಾಧಿಕರಣದಲ್ಲಿ ಹೇಳಿದ್ದು ಯುಕ್ತವಾಗಬಹುದು. ಆಕಾಶ ಶಬ್ದವಾಚ್ಯತ್ವವನ್ನು ಶ್ರೀ ಹರಿಗೆ ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ—ಆಕಾಶಶಬ್ದಪ್ರವೃತ್ತಿ ನಿಮಿತ್ತವಾದ ಅವಕಾಶತ್ವವು ಭೂತಾಕಾಶದಲ್ಲಿ ನಿರವಧಿಕವಾದುದು ಇಲ್ಲವೆಂದು ಹೇಳ ಕೂಡದು; ಈಶ್ವರಾಧೀನವೆಂದೂ ಹೇಳಕೂಡದು. ವರ್ಷಣ ಶಾಸನ ಪಾಲನಾದಿರೂಪವಾದ ಚೇತನಸಂಬಂಧಿಯಾದ ಚೇಷ್ಟೆಯೇ ಐಶ್ವರ್ಯವು. ಆ ಚೇಷ್ಟೆಯು ಆಗಂತುಕವಾದ ಜ್ಞಾನ ಇಚ್ಛಾ ಮೊದಲಾದ ಕಾರಣಗಳನ್ನು ಅಪೇಕ್ಷಿಸಿಕೊಂಡಿದ್ದಪ್ರಯುಕ್ತವೂ ತಾನು ಆಗಂತುಕ ವಾಗಿರುವುದರಿಂದಲೂ ಕಾರಣದ್ವಾರಾ ಸ್ವರೂಪದಿಂದಲೂ ಪರಮೇಶ್ವರನ ಪ್ರಸಾದದ ಅಧೀನ ವಾದುದು ಎಂದು ಯುಕ್ತವಾಗುತ್ತದೆ. ಆಕಾಶಾದಿ ಶಬ್ದಪ್ರವೃತ್ತಿನಿಮಿತ್ತವಾದ ವಿವರತ್ವಾದಿಗಳು ಅಚೇತನವನ್ನು ಆಶ್ರಯಿಸಿಕೊಂಡು ಇರುವುದರಿಂದ ಆಗಂತುಕವಾದ ಜ್ಞಾನಾದಿಕಾರಣಗಳ ದ್ವಾರಾ ಪರಮೇಶ್ವರನ ಅಧೀನವಲ್ಲ. ಅನಾಗಂತುಕವಾಗಿರುವುದರಿಂದ ಸ್ವರೂಪದಿಂದಲೂ ಪರಮೇಶ್ವರನ ಅಧೀನವಲ್ಲ. ಈಶ್ವರನಿಗೆ ಸ್ವಲ್ಪವೂ ಅವಕಾಶತ್ವವು ಇಲ್ಲದಿರುವುದರಿಂದ ಆಕಾಶ ಶಬ್ದಕ್ಕೆ ಈಶ್ವರನಲ್ಲಿ ಯೋಗವು ಕೂಡಲಾರದು. ಆದಪ್ರಯುಕ್ತ ಆಕಾಶಶಬ್ದವು ಭೂತಾಕಾಶ ಪರವೇ ಎನ್ನುವ ಅಭ್ಯಧಿಕಾಶಂಕೆಯನ್ನು ನಿವೃತ್ತಿಗೊಳಿಸುವುದಕ್ಕಾಗಿ ಸೂತ್ರವನ್ನು ನಿರ್ಮಿ ಸಿರುವರು. (2) ಆಕಾಶವೆನ್ನುವ ನಾಮದ ಸಾಮರ್ಥ್ಯದಿಂದ 'ಆಕಾಶ ಇತಿ ಹೋವಾಚ' ಎನ್ನುವಲ್ಲಿದ್ದ ಆಕಾಶಶಬ್ದವಾಚ್ಯವು ಭೂತಾಕಾಶವೆಂದು ಪರರು ಆಶಂಕಿಸುವರಷ್ಟೆ! ಅದು ಯುಕ್ತವಲ್ಲ. ಏಕೆಂದರೆ— ದೇಶಕಾಲಪರಿಚ್ಛಿನ್ನವಾದ ಭೂತಾಕಾಶಕ್ಕೆ ಆಕಾಶಶಬ್ದಪ್ರವೃತ್ತಿ ನಿಮಿತ್ತವಾದ ಅವಕಾಶಪ್ರದತ್ವವು ನಿರವಧಿಕವೆಂದು ಹೇಳಕೂಡದು. ಮತ್ತು ಅಲ್ಪವಾದ ಅವಕಾಶಪ್ರದತ್ವವೂ ಕೂಡ 'ನಭೋ ದದಾತಿ' ಇತ್ಯಾದಿಪ್ರಕಾರ ಶ್ರೀಹರಿಯ ಅಧೀನವೂ ಆಗಿದೆ. ಪರಮಾತ್ಮನಲ್ಲಿ ಸ್ವತಂತ್ರವೂ ನಿರವಧಿಕವೂ ಆದ ಅವಕಾಶಪ್ರದತ್ವವು ಕೂಡುತ್ತದೆ. ಆದುದರಿಂದ ನಿರವಕಾಶವಾದ ಪರೋವರೀಯಸ್ತ್ವ ಮೊದಲಾದ ಅನೇಕ ಲಿಂಗಗಳೂ ಇರುವುದ ರಿಂದ ಆಕಾಶವೆನ್ನುವ ನಾಮವು ಶ್ರೀಹರಿಗೇನೇ ವಾಚಕವಾಗುವುದು. ಆದಕಾರಣ ಆಕಾಶೋಪ ಲಕ್ಷಿತ ಸಕಲಾಧಿಭೂತ ಶಬ್ದಗಳಿಂದ ಪರಮ ಮುಖ್ಯವೃತ್ತಿಯಿಂದ ವಾಚ್ಯನಾದವನು ಶ್ರೀ ಹರಿಯೆಂದು ಸಿದ್ಧವಾಯಿತು.

**ಸಾರಾಂಶ—**

**ಸ. ರ. ವಿ.—'ಅಸ್ಯ ಲೋಕಸ್ಯ ಕಾಗತಿರಿತ್ಯಾಕಾಶ ಇತಿ ಹೋವಾಚ ಉದ್ಗೀಥಃ ಸ ಏಷೋಽನಂತಃ'** ಎನ್ನುವಲ್ಲಿ ಆಕಾಶಶಬ್ದದಿಂದ ಭೂತಾಕಾಶವನ್ನೇ ಇಟ್ಟುಕೊಳ್ಳಬೇಕು. ಪ್ರಥಮತಃ ಪಠಿತವಾಗಿದೆ, ಪ್ರಸಿದ್ಧವೂ ಆಗಿದೆ. ಪ್ರಸಿದ್ಧಾಕಾಶಕ್ಕೂ ಭೂತಕಾರಣತ್ವಾದಿಗಳು ಕೂಡಬಹುದು. ಪೂರ್ವನ್ಯಾಯದಿಂದ ಆಕಾಶಶಬ್ದವು ವಿಷ್ಣುಪರವೆಂದು ಹೇಳಕೂಡದು. ಏಕೆಂದರೆ, ಇಂದ್ರಾದಿ ಶಬ್ದಗಳಿಗೆ ಭಗವದ್ಧರ್ಮವಾದ ಐಶ್ವರ್ಯಾದಿಗಳುಳ್ಳ ಪುರಂದರಾದಿ ಚೇತನರನ್ನು ಬಿಟ್ಟು ವಿಷ್ಣುಪರತ್ವವು ಯುಕ್ತವಾಗಬಹುದು. ಜಡಾಕಾಶಕ್ಕೆ ಅವಕಾಶಾದಿರೂಪವಾದುದು ಭಗವದ್ಧರ್ಮವಾದುದಲ್ಲ. ಆದಕಾರಣ ಈ ವಾಕ್ಯವು ಭೂತಾಕಾಶಪರವೇ. ಆದಪ್ರಯುಕ್ತ ಜಗತ್ಕಾರಣ ಬ್ರಹ್ಮನಲ್ಲಿ ಸರ್ವವೇದಗಳಿಗೆ ಸಮನ್ವಯವು ಯುಕ್ತವಲ್ಲವೆಂದರೆ—ಪರೋವರೀಯಸ್ತ್ವ ಮೊದಲಾದ ಲಿಂಗಗಳು ಇಲ್ಲಿ ಇದ್ದಪ್ರಯುಕ್ತ ಆಕಾಶಶಬ್ದದಿಂದ ವಿಷ್ಣುವೇ ಹೇಳಲ್ಪಡುತ್ತಾನೆ. ಆ ಲಿಂಗವು 'ಮಹತೋ ಮಹೀಯಾನ್' ಇತ್ಯಾದಿಗಳಿಂದ ವಿಷ್ಣುವಿಗೇನೇ ಅವಗತವಾಗುತ್ತದೆ. ಭೂತಾಕಾಶಕ್ಕೆ ಸರ್ವಭೂತೋತ್ಪತ್ತಿ ಕಾರಣತ್ವವು ಕೂಡಲಾರದು. ಪಂಚಭೂತಗಳಲ್ಲಿ ತಾನೂ ಸೇರಿರುವುದರಿಂದ ಸ್ವಕಾರಣತ್ವವು ತನಗೆ ವಿರುದ್ಧವಾಗಿದೆ. 'ಆಸಮಂತಾತ್ಕಾಶತೇ' ಎನ್ನುವ ಯೋಗದಿಂದಲೂ, ವಿದ್ವದ್ರೂಢಿಯಿಂದಲೂ, ಆಕಾಶಶಬ್ದದಿಂದ ವಿಷ್ಣುವಿಗೇನೇ ಪ್ರತೀತಿಯಿದ್ದ ಪ್ರಯುಕ್ತವೂ, ಅಪರಿಚ್ಛಿನ್ನತ್ವಾರ್ಥಕವಾದ ಅನಂತ ಎನ್ನುವ ಶಬ್ದದಿಂದ ವಿರೋಧವಿದ್ದಪ್ರಯುಕ್ತವೂ ಲೋಕಸಿದ್ಧವಾದ ಪರಿಚ್ಛಿನ್ನವಾದ ಭೂತಾಕಾಶವನ್ನು ಪರಿತ್ಯಾಗಮಾಡುವುದು ಯುಕ್ತವಾಗಿದೆ. **'ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ'** ಇತ್ಯಾದಿ ವಾಕ್ಯಗಳಿಂದ ಆಕಾಶದ ವಿವರಾದಿ ಭಾವವೂ, ಭಗವಂತನ ಅಧೀನವೆಂದು ಶ್ರುತವಾಗಿದೆ. ಆದಕಾರಣ ಮುಖ್ಯವಾಗಿ ಆಕಾಶಶಬ್ದದಿಂದ ಶ್ರೀ ಹರಿಯೇ ಪ್ರತಿಪಾದ್ಯನೆಂದು ಸಿದ್ಧವಾಯಿತು. ॥ ೨೪೩ ॥ ೨೪೪ ॥ ೨೪೫ ॥ ಸೂ. ೨೨ ॥ ಅಧಿ. ೮ ॥

**ಆಕಾಶಾಧಿಕರಣವು ಸಮಾಪ್ತವಾಯಿತು.**



# ಪ್ರಾಣಾಧಿಕರಣವು

ಈಗ ಆಧ್ಯಾತ್ಮಿಕ ಶಬ್ದಗಳ ಸಮನ್ವಯವನ್ನು ಸಾಧಿಸಲಿಚ್ಛಿಸುವವರಾಗಿ ಪ್ರಧಾನವಾಗಿರುವುದರಿಂದ ಪ್ರಾಣಶಬ್ದಸಮನ್ವಯವನ್ನು ಮಾಡುತ್ತಾರೆ—

**"ಓಂ ಅತ ಏವ ಪ್ರಾಣಃ ಓಂ" ॥ ಸೂ. ೨೩ ॥**

'ತದ್ವೈ ತ್ವಂ ಪ್ರಾಣೋಽಭವಃ' ಎಂದು ಹೇಳಲ್ಪಟ್ಟ ಪ್ರಾಣನು ಬ್ರಹ್ಮನೇ. ಮುಖ್ಯಪ್ರಾಣನಲ್ಲ. 'ಶ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದು ನಿರವಕಾಶವಾದ ಶ್ರೀಲಕ್ಷ್ಮೀಪತಿತ್ವ ಲಿಂಗವಿದ್ದ ಪ್ರಯುಕ್ತವೇ.

(1) ತೈತ್ತಿರೀಯೋಪನಿಷತ್ತಿನಲ್ಲಿ ಶ್ರುತವಾಗುತ್ತದೆ. **"ತದ್ವೈ ತ್ವಂ ಪ್ರಾಣೋ ಅಭವಃ । ಮಹಾನ್ ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯಮಾಣಃ । ಯದ್ದೇವಾನ್ ಪ್ರಾಣಯೋ ನವ" ॥** ಎಂದು. (2) ಈ ಪ್ರಾಣಶಬ್ದವಾಚ್ಯನು ಪರಮಾತ್ಮನೋ, ಮುಖ್ಯಪ್ರಾಣನೋ, ಎಂದು ಸಂಶಯವು. ಅಚೇತನಕ್ಕೆ ಪ್ರಾಣಶಬ್ದವಾಚ್ಯತ್ವವಿದ್ದರೂ

ಅಚೇತನವನ್ನು ಕುರಿತು 'ತಸ್ಮೈ ತ್ವಂ ಪ್ರಾಣೋ ಅಭವಃ' ಎಂದು ತಿಳಿದವರು ಹೇಳಲಾರರಾದ ಕಾರಣ ಸಂಶಯವಿಷಯತ್ವವಿಲ್ಲ. ಮತ್ತೆ ಮುಖ್ಯಪ್ರಾಣನೆಂದೇ ಹೇಳಬೇಕು. ಏಕೆಂದರೆ— ಪ್ರಾಣಶಬ್ದಕ್ಕೆ ಲೌಕಿಕ-ವೈದಿಕ ಪ್ರಯೋಗಗಳಲ್ಲಿ ಮುಖ್ಯಪ್ರಾಣನಲ್ಲಿ ಪ್ರಯೋಗಕ್ಕೆ ಪ್ರಾಚುರ್ಯವಿದೆ, 'ಪ್ರಾಣಂತಿ ಅನೇನ'=ಇವನಿಂದ ಜೀವಿಸುತ್ತಾರೆ, ಎಂದು ನಿರುಕ್ತಿಯೂ ಕೂಡುತ್ತದೆ. (3) ಹಾಗಾದರೆ, ಇದೂ ಕೂಡ ಪೂರ್ವನ್ಯಾಯದಿಂದಲೇ ಪರಿಹೃತವಾಗಿದೆ. ಸೂತ್ರಾರಂಭಕ್ಕೆ ಪ್ರಯೋಜಕವಾಗುವುದಿಲ್ಲವೆಂದರೆ ಅಭ್ಯಧಿಕಾಶಂಕೆಯನ್ನು ತೋರಿಸುತ್ತಾರೆ—

ಮೂ || [ಇತ್ಯಾದಿ ವಾಕ್ಯೈಃ] ಅಧ್ಯಾತ್ಮಮನ್ವಯವ್ಯತಿರೇಕತಃ |
ಪ್ರಾಣಾದಿ ಹೇತುತಾದೃಷ್ಟೇರತಿದೇಶೋ ಹಿ ತಾದೃಶಃ |
ಲಿಂಗಂ ಬಲವದೇವ ಸ್ಯಾತ್ ಪ್ರೇರಕೋಽಸ್ಯಾಪಿ ಯದ್ಧರಿಃ || ೨೪೬ ||

ಅ || ಅಧ್ಯಾತ್ಮಂ=ಆತ್ಮನನ್ನು ಅಧಿಕರಿಸಿಕೊಂಡು ಆತ್ಮನಿಗೆ ಭೋಗಾವಛೇದಕವಾಗಿರುವ ಶರೀರದಲ್ಲಿ, ಅನ್ವಯವ್ಯತಿರೇಕತಃ=ಶರೀರದಲ್ಲಿ ಮುಖ್ಯಪ್ರಾಣನಿದ್ದರೆ ಜೀವನಾದಿಗಳು ಕೂಡುತ್ತವೆ, ಶರೀರದಲ್ಲಿ ಮುಖ್ಯಪ್ರಾಣನಿಲ್ಲದಿದ್ದರೆ ಕೂಡಲಾರವು ಎನ್ನುವ ಅನ್ವಯವ್ಯತಿರೇಕಗಳಿಂದ, ಪ್ರಾಣಾದಿಹೇತುತಾದೃಷ್ಟೇಃ=(ಮುಖ್ಯಪ್ರಾಣನಿಗೆ)ಜೀವನ ಚೇಷ್ಟಾ ಮೊದಲಾದವುಗಳ ಕಾರಣತ್ವವು ತೋರಿಬರುವುದರಿಂದ, ಅಥವಾ ಪ್ರಾಣಾದಿಹೇತುತ್ವವು ಪರಮಾತ್ಮನಿಗೆ ಕಾಣದಿರುವುದರಿಂದ, (ಮುಖ್ಯಪ್ರಾಣನೇ ಇಲ್ಲಿ ಪ್ರಾಣಶಬ್ದವಾಚ್ಯನು ಆಗಲಿಕ್ಕೆ ಯೋಗ್ಯನಾಗಿರುತ್ತಾನೆ.) ಹಿ= ಯಾವ ಕಾರಣದಿಂದ, (ಹಿಂದೆ ಹೇಳಿದಪ್ರಕಾರ ಅಧಿಕಾಶಂಕೆಯಿಂದ ಪೂರ್ವಪಕ್ಷವು ಪ್ರಾಪ್ತವಾಗುವಾಗ ಸೂತ್ರಕಾರರು) ತಾದೃಶಃ=ಅಂತಹ, ಹಿಂದೆ ಹೇಳಿದ್ದಕ್ಕೆ ಸಮಾನವಾದ ಪರಿಹಾರ ನ್ಯಾಯದ. ಅತಿದೇಶಃ=ಅತಿದೇಶವು, (ಯಾವುದು ಯಾವುದಕ್ಕೆ ಉಪಕಾರಕವಾಗಿ, ಯಾವುದಕ್ಕೆ ಅಂಗವಾಗಿ ನಿರ್ಧಾರಿತವಾಗಿಯದೋ ಅಂತಹುದು ಅದಕ್ಕೆ ಉಪಕಾರಕವಾಗಿಯೇ ಇತರಕ್ಕೂ ಅಂಗವಾಗುತ್ತದೆನ್ನುವ ನಿರ್ಧಾರಣವು.) (ಕೃತಃ = ಮಾಡಲ್ಪಡುತ್ತದೋ, ಆದಕಾರಣ ಈ ಸೂತ್ರವು ಹಿಂದೆ ಹೇಳಿದ ಆಶಂಕೆಯನ್ನು ಪರಿಹರಿಸುತ್ತದೆಯೇ ಸರಿ.) ಹರಿರೇವ=ಶ್ರೀ ಪರಮಾತ್ಮನೇ, (ಇಲ್ಲಿ ಪ್ರಾಣಶಬ್ದವಾಚ್ಯನಾಗುವನು. ಏಕೆಂದರೆ ಇಲ್ಲಿ) ಲಿಂಗಂ=ವಿಷ್ಣುಲಿಂಗವು (ಶ್ರುತವಾಗುತ್ತದೆ. ಆದಕಾರಣ) ಬಲವದೇವ ಸ್ಯಾತ್ ='ಶ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದು ಸನ್ನಿಹಿತವಾಕ್ಯದಲ್ಲಿ ಕೇಳಲ್ಪಡತಕ್ಕ ಶ್ರೀ ಲಕ್ಷ್ಮೀಪತಿತ್ವವು ಬಲಿಷ್ಠವಾಗಿಯೇ ಇರುವುದು. ಅಸ್ಯಾಪಿ=ಮುಖ್ಯಪ್ರಾಣನ ಅಧೀನವೆಂದು ಪ್ರತೀತವಾದಾಗ್ಯೂ ಜೀವನಾದಿಗಳಿಗೆ, ಯತ್= ಯಾವಕಾರಣದ್ದೆಶೆಯಿಂದ, ಹರಿಃ=ಶ್ರೀ ಪರಮಾತ್ಮನು, ಪ್ರೇರಕಃ=ಪ್ರೇರಕನಾಗಿ, (ಶ್ರುತನಾಗಿದ್ದಾನೆ) (ಶ್ರೀ ಹರಿಗೂ ಮುಖ್ಯಪ್ರಾಣನಿಗೂ ಜೀವನಾದಿ ಹೇತುತ್ವವಿರುವಾಗ ಶ್ರೀ ಹರಿಗೇನೇ ಮುಖ್ಯವಾಗುವುದು, ಹೇಗೆಂದರೆ) ಯತ್ = ಯಾವಕಾರಣದ್ದೆಶೆಯಿಂದ, ಅಸ್ಯಾಪಿ=ಮುಖ್ಯಪ್ರಾಣನಿಗೂ ಕೂಡ, ಹರಿಃ=ಶ್ರೀಪರಮಾತ್ಮನು, ಪ್ರೇರಕಃ=ಪ್ರೇರಕನಾಗಿ,(ಶ್ರುತನಾಗಿರುತ್ತಾನೆ).

ತಾ || ನ್ಯಾಯಸುಧಾ— (1) ಹಿಂದಿನ ಅಧಿಕರಣಗಳಲ್ಲಿ ಇಂದ್ರಮೊದಲಾದ ಶಬ್ದಗಳಿಗೂ, ಆಕಾಶ ಮೊದಲಾದ ಶಬ್ದಗಳಿಗೂ ಶ್ರೀ ಹರಿಯಲ್ಲಿ ಸಮನ್ವಯ:ಮಾಡಿದ್ದು ಕೂಡಬಹುದು. ಪುರಂದರಾದಿಗಳಲ್ಲಿ ಪ್ರವೃತ್ತಿನಿಮಿತ್ತವು ಮುಖ್ಯವಾದುದು ಕೂಡಲಾರದು. ಪರಮಾತ್ಮನಲ್ಲಿಯೇ ಕೂಡುತ್ತದೆ. ಪ್ರಕೃತದಲ್ಲಿ ಪ್ರಾಣಶಬ್ದವಾಚ್ಯತ್ವವು ಪರಮಾತ್ಮನಿಗೆ ಕೂಡುವುದಿಲ್ಲ. ಮುಖ್ಯಪ್ರಾಣನಿಗೇನೇ ಕೂಡುತ್ತದೆ. ಏಕೆಂದರೆ— ಜೀವನಚೇಷ್ಟೆಗಳ ಕಾರಣತ್ವವೇ ಪ್ರಾಣಶಬ್ದ ಪ್ರವೃತ್ತಿನಿಮಿತ್ತವು. ಅದು ಮುಖ್ಯಪ್ರಾಣನಲ್ಲಿ ಕೂಡುತ್ತದೆ. ಶರೀರದಲ್ಲಿ ಮುಖ್ಯಪ್ರಾಣನಿದ್ದರೆ,

ಜೀವನಾದಿಗಳು ಆಗುತ್ತವೆ. ಶರೀರದಲ್ಲಿ ಮುಖ್ಯಪ್ರಾಣನಿಲ್ಲದಿದ್ದರೆ ಕೂಡಲಾರವು. ಹೀಗೆ ಅನ್ವಯವ್ಯತಿರೇಕಗಳಿಂದ ಮುಖ್ಯಪ್ರಾಣನಿಗೇನೇ ಜೀವನಾದಿ ಕಾರಣತ್ವವು ತೋರುತ್ತದೆ. (2) ಅಥವಾ 'ಯದ್ದೇವಾನ್ ಪ್ರಾಣಯೋ ನವ' ಎನ್ನುವ ವಾಕ್ಯದಲ್ಲಿ ಒಂಭತ್ತು ದೇವತೆಗಳನ್ನು ಚೆನ್ನಾಗಿ ಚೇಷ್ಟಾಯುಕ್ತರನ್ನಾಗಿ ಮಾಡುತ್ತಿ ಎಂದು ಯಾವುದು ಇಂದ್ರಿಯಗಳ ಪ್ರಾಣನವು ಹೇಳಲ್ಪಟ್ಟದೋ, ಪ್ರಜಾಪತಿ ಮೊದಲಾದ ಎಲ್ಲಾ ಜೀವರಿಗೂ ಭೋಗಕಾರಣತ್ವವು ಹೇಳಲ್ಪಟ್ಟದೋ, ಆ ಎರಡೂ ಶರೀರದಲ್ಲಿ ಅನ್ವಯವ್ಯತಿರೇಕಗಳಿಂದ ಮುಖ್ಯಪ್ರಾಣನಿಗೆ ಕಾಣಲ್ಪಡುತ್ತದೆ. ಪರಮಾತ್ಮನಿಗೆ ಕಾಣಲ್ಪಡುವುದಿಲ್ಲ. ಆದಕಾರಣ, ಯುಕ್ತಿಸಂವಾದದಿಂದ ಈ ವಾಕ್ಯವು ಮುಖ್ಯಪ್ರಾಣವಿಷಯಕವೇ ಆಗಿದೆ. ಎಂದು ಅಭ್ಯಧಿಕಾಶಂಕೆಯನ್ನು ಮಾಡಿದರೆ ಇಲ್ಲಿದ್ದ ಪ್ರಾಣಶಬ್ದವಾಚ್ಯನು ಪರಮಾತ್ಮನೇ ಆಗುತ್ತಾನೆ. ಪ್ರಾಣಶಬ್ದಪ್ರವೃತ್ತಿನಿಮಿತ್ತವಾದ ಜೀವನ ಹೇತುತ್ವವೂ ಪರಮಾತ್ಮನಲ್ಲಿಯೇ ಮುಖ್ಯವಾಗಿದೆ. ಮುಖ್ಯಪ್ರಾಣನಿಗೂ ಶ್ರೀಹರಿಯು ನಿಯಾಮಕನಾಗಿರುವುದರಿಂದ ಮುಖ್ಯಪ್ರಾಣನಲ್ಲಿರತಕ್ಕ ಜೀವನಹೇತುತ್ವವೂ ಕೂಡ ಪರಮಾತ್ಮಾಧೀನವೇ ಆಗಿದೆ. ಆದುದರಿಂದ ನಿರವಧಿಕವಾದ, ಸ್ವತಂತ್ರವಾದ ಪ್ರಾಣಶಬ್ದಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿಯೇ ಇದ್ದಪ್ರಯುಕ್ತವೂ ವಾಕ್ಯಶೇಷದಲ್ಲಿ ಹೇಳಿದ ಶ್ರೀಲಕ್ಷ್ಮೀಪತಿತ್ವ ಲಿಂಗವು ಸರ್ವಥಾ ಮುಖ್ಯಪ್ರಾಣನಲ್ಲಿ ಕೂಡದಿರುವುದರಿಂದಲೂ ಮಹಾಯೋಗ ವಿದ್ವತ್ಪ್ರಸಿದ್ಧಿಗಳಿಂದ ಪ್ರಾಣಶಬ್ದವಾಚ್ಯನು ಪರಮಾತ್ಮನೇ.

**ಸಾರಾಂಶ:—**

**ಸ. ರ. ವಿ—** (1) **"ತದ್ವ್ಯೈತ್ವಂ ಪ್ರಾಣೋ ಅಭವಃ । ಮಹಾನ್ ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯಮಾಣಃ । ಯದ್ದೇವಾನ್ ಪ್ರಾಣಯೋ ನವ"** ॥ ಎಂದು. ಪ್ರಾಣಶಬ್ದಕ್ಕೆ ವಾಯುವಿನಲ್ಲಿ ಪ್ರಸಿದ್ಧಿಯಿದ್ದುದರಿಂದ ವಾಯುಪರವೆಂದೇ ಇಟ್ಟುಕೊಳ್ಳಬೇಕು. ನವದೇವ ಶಬ್ದದಿಂದ ಹೇಳಲ್ಪಟ್ಟ ಇಂದ್ರಿಯಗಳ ಸಮುದಾಯಕ್ಕೆ ಪ್ರೇರಕನಾಗಿರುವುದರಿಂದ ಹೃಷೀಕೇಶನೆಂದು ಹೇಳಕೂಡದು. ಇಂದ್ರಿಯಗಳ ಪ್ರವೃತ್ತಿನಿವೃತ್ತಿಗಳು ಅನ್ವಯವ್ಯತಿರೇಕಗಳಿಂದ ಮುಖ್ಯಪ್ರಾಣಾಧೀನವೆಂದು ದೃಷ್ಟವಾಗಿದೆ. ಆ ಲಿಂಗವು ವಾಯುವಿನಲ್ಲಿಯೇ ಕೂಡುತ್ತದೆ, ಎಂದಾಶಂಕಿಸಿದರೆ— "ಕತರಃ ಸ ಆತ್ಮಾ ಯೇನ ವಾ ಪಶ್ಯತಿ । ಯೇನ ವಾ ಶೃಣೋತಿ" ಇತ್ಯಾದಿ ವಚನಗಳಿಂದಲೂ, 'ಪ್ರಾಣಸ್ಯ ಪ್ರಾಣಂ' ಇತ್ಯಾದಿಗಳಲ್ಲಿ ಪಂಚವೃತ್ತಿ ಪ್ರಾಣನು ಹೃಷೀಕೇಶನಿಂದ ಪ್ರೇರ್ಯನೆಂದು ಶ್ರುತನಾಗಿರುವುದರಿಂದಲೂ ಮುಖ್ಯವಾಗಿ ಇಂದ್ರಿಯ ಪ್ರೇರಕತ್ವವು ವಿಷ್ಣುವಿಗೇನೇ ಕೂಡುತ್ತದೆ. ಆದಪ್ರಯುಕ್ತ ಪ್ರಾಣಪದವಾಚ್ಯನು ಶ್ರೀವಿಷ್ಣುವೇ. ಮತ್ತು ಶ್ರೀಲಕ್ಷ್ಮೀಪತಿತ್ವ ಲಿಂಗದಿಂದಲೂ ಯೋಗದಿಂದಲೂ ವಿದ್ವತ್ಪ್ರಸಿದ್ಧಿಯಿಂದಲೂ ಪ್ರಾಣಶಬ್ದವು ಮುಖ್ಯವಾಗಿ ವಿಷ್ಣುಪ್ರತಿಪಾದಕವೆಂದೇ ಸಿದ್ಧವಾಯಿತು ॥ ೨೪೬ ॥
॥ ಸೂ. ೨೩ ॥ ಅಧಿ. ೯ ॥

**ಪ್ರಾಣಾಧಿಕರಣವು ಸಮಾಪ್ತವಾಯಿತು.**



# ಜ್ಯೋತಿರಧಿಕರಣವು.

**"ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ"** ॥ ಸೂ. ೨೪ ॥

'ಜ್ಯೋತಿರ್ಹೃದಯ ಆಹಿತಂ' ಎಂದು ಅಗ್ನಿಸೂಕ್ತದಲ್ಲಿ ಹೇಳಲ್ಪಟ್ಟ ಜ್ಯೋತಿಶ್ಶಬ್ದವಾಚ್ಯನಾದವನು ಬ್ರಹ್ಮನೇ. ಅಗ್ನಿಯಲ್ಲ. 'ವಿಮೇ ಕರ್ಣಾ ಪತಯತಃ' ಇತ್ಯಾದಿ ಶ್ರುತಿಗಳಲ್ಲಿ

ಕರ್ಣಾದಿ ಸರ್ವೇಂದ್ರಿಯ ವಿದೂರತ್ವ ಲಿಂಗವನ್ನು ಹೇಳಿರುವುದರಿಂದ, ಅಂದರೆ ಅಪರಿಚ್ಛಿನ್ನ ವೈಭವವಿದ್ದಪ್ರಯುಕ್ತ.

* ಈ ಜ್ಯೋತಿರಧಿಕರಣದ ಅಧಿಕಾಶಂಕೆಯು ಅಗ್ನಿಸೂಕ್ತತ್ವಾತ್ ಎಂದು ಭಾಷ್ಯದಲ್ಲಿಯೇ ತೋರಿಸಿರುವುದರಿಂದ ಹೇಳಬೇಕಾದ ವಿಶೇಷಾಂಶವಿಲ್ಲದಿರುವುದರಿಂದ ಈ ಅಧಿಕರಣವನ್ನು ಇಲ್ಲಿ ವಿವರಿಸಲಿಲ್ಲ ॥ ೨೪ ॥ ಅಧಿ. ೧೦ ॥

**ಜ್ಯೋತಿರಧಿಕರಣವು ಸಮಾಪ್ತವಾಯಿತು.**



# ಗಾಯತ್ರ್ಯಧಿಕರಣವು.

ಅಧಿವೇದದಲ್ಲಿರತಕ್ಕ ಎಲ್ಲಾನಾಮಗಳಿಗೆ ಉಪಲಕ್ಷಣವಾದ ವೇದಮಾತೆಯಾದ ತ್ರೈವರ್ಣಿಕರಿಗೆ ದ್ವಿಜತ್ವವನ್ನು ಹೊಂದಿಸಿಕೊಡುವ ಗಾಯತ್ರಿಯು ಪ್ರಧಾನವಾಗಿರುವುದರಿಂದ ಗಾಯತ್ರೀ ನಾಮಕ್ಕೆ ಸಮನ್ವಯವನ್ನು ಪ್ರತಿಪಾದಿಸುತ್ತಾರೆ—

**" ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾಚೇತೋಽರ್ಪಣ ನಿಗದಾತ್ತಥಾ ಹಿ ದರ್ಶನಂ ಓಂ "** ॥ ಸೂ. ೨೫ ॥

'ಗಾಯತ್ರೀ ವಾ ಇದಂ ಸರ್ವಂ' ಎಂದು ಹೇಳಲ್ಪಟ್ಟ ಗಾಯತ್ರಿಯು, ಛಂದಃ=ಛಂದಸ್ಸು ಆಗುವುದು. ಛಂದೋಽಭಿಧಾನಾತ್ = ಗಾಯತ್ರೀಪದದಿಂದ ಛಂದಸ್ಸನ್ನು ಹೇಳಿರುವುದರಿಂದ, (ಗಾಯತ್ರೀ ಶಬ್ದವು ಛಂದಸ್ಸಿನಲ್ಲಿ ರೂಢವಾಗಿರುವುದರಿಂದ) ನ ಇತಿ ಚೇತ್=ಬ್ರಹ್ಮನಲ್ಲವೆಂದರೆ— ನ=ಅಲ್ಲ, ತಥಾ ಹಿ ದರ್ಶನಂ='ಗಾಯತಿ ಚ ತ್ರಾಯತಿ ಚ' ಎಂದು ಗಾನ ತ್ರಾಣ ಕರ್ತೃತ್ವಾದಿ ಲಿಂಗ ಬೋಧಕವಾದ ಶ್ರುತಿಯು ಯಾವ ಕಾರಣದಿಂದ ಇದೆಯೋ, ಆದಕಾರಣ, ತಥಾಚೇತೋಽರ್ಪಣ ನಿಗದಾತ್ = ಗಾನಾದಿಕರ್ತೃತ್ವಗುಣವಿಶಿಷ್ಟವಾಗಿ ಮನಸ್ಸಿನಲ್ಲಿ ಉಪಾಸನೆಗಾಗಿ 'ಗಾಯತ್ರೀವಾ ಇದಂ ಸರ್ವಂ' ಎಂದು ಹೇಳಿರುವುದರಿಂದ- ಅಥವಾ 'ಪರೋ ದಿವೋ ಜ್ಯೋತಿಃ' ಎಂದು ಹೇಳಲ್ಪಟ್ಟ ಜ್ಯೋತಿಸ್ಸು ಛಂದಸ್ಸೇ, ವಿಷ್ಣುವಲ್ಲ. 'ಗಾಯತ್ರೀ' ವಾ ಎಂದು ಉಪಕ್ರಮದಲ್ಲಿ ಗಾಯತ್ರೀರೂಪವಾದ ಛಂದಸ್ಸನ್ನು ಹೇಳಿರುವುದರಿಂದ ಎಂದರೆ— ಗಾನ ತ್ರಾಣ ಕರ್ತೃತ್ವರೂಪ ಲಿಂಗದಿಂದ ಗಾಯತ್ರೀಶಬ್ದವಾಚ್ಯನು ಬ್ರಹ್ಮನು, ಜ್ಯೋತಿಶ್ಶಬ್ದವಾಚ್ಯನೂ ಬ್ರಹ್ಮನೇ.

**" ಓಂ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ ಓಂ "** ॥ ಸೂ. ೨೬ ॥

---

* 'ಜ್ಯೋತಿಶ್ಚರಣಾಭಿಧಾನಾತ್' ಎನ್ನುವ ಅಧಿಕರಣ ತಾತ್ಪರ್ಯವನ್ನೇ 'ನಿತ್ಯತ್ವಾದೇವ ಶಬ್ದಸ್ಯ' ಇತ್ಯಾದಿ ಮೂಲದಿಂದ ಆಚಾರ್ಯರು ವಿವರಿಸಿದರು. ಆದಕಾರಣ 'ಜ್ಯೋತಿಶ್ಚರಣಾಭಿಧಾನಾತ್' 'ಛಂದೋಽಭಿಧಾನಾನ್ನೇತಿ ಚೇನ್ನ' ಎನ್ನುವವುಗಳು ಜ್ಯೋತಿರಧಿಕರಣ-ಗಾಯತ್ರ್ಯಧಿಕರಣಗಳೆಂದು ಪ್ರತ್ಯೇಕವಲ್ಲ. ಜ್ಯೋತಿರಧಿಕರಣವನ್ನೇ ಛಂದೋಭಿಧಾನಾತ್ ಎನ್ನುವುದರಿಂದ ವಿವರಿಸಿದ್ದೆಂದು ಸನ್ಯಾಯರತ್ನಾವಳೀಕಾರರ ಅಭಿಪ್ರಾಯವು.

ಜ್ಯೋತಿಶ್ಚರಣಾಭಿಧಾನಾತ್ ಎನ್ನುವುದರಿಂದ ಜ್ಯೋತಿರಧಿಕರಣವು. ಛಂದೋಭಿಧಾನಾತ್ ಎನ್ನುವುದರಿಂದ ಗಾಯತ್ರ್ಯಧಿಕರಣವು, ಹೀಗೆ ಪ್ರತ್ಯೇಕ ಅಧಿಕರಣಗಳೆಂದು ನ್ಯಾಯಸುಧಾಕಾರರ ಅಭಿಪ್ರಾಯವು. ಇವರಿಬ್ಬರ ವ್ಯಾಖ್ಯಾನಗಳಿಗೂ ಪರಸ್ಪರ ವಿರೋಧವಿಲ್ಲವೆಂದು ಚಂದ್ರಿಕಾದಲ್ಲಿ ಶ್ರೀವ್ಯಾಸರಾಜ ಶ್ರೀಮಚ್ಚರಣರು ಸಮರ್ಥಿಸಿರುವರು.

'ಪಾದೋಽಸ್ಯ ಸರ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ' ಎಂದು ಭೂತಾಮೃತರೂಪಗಳಾದ ಪಾದಗಳ ವ್ಯವಹಾರವು ಶ್ರೀ ವಿಷ್ಣುವಿನಲ್ಲಿಯೇ ಕೂಡುವುದರಿಂದ ಗಾಯತ್ರೀಶಬ್ದವಾಚ್ಯನು ಶ್ರೀ ಪರಮಾತ್ಮನೇ. ಅಂದರೆ— 'ಚತುಷ್ಪದಾ ಗಾಯತ್ರೀ' ಎಂದು ಹೇಳಿ ಅದನ್ನು ವಿವರಿಸುವುದಕ್ಕಾಗಿ ಸಮ್ಮತಿಯಾಗಿ ಉದಾಹೃತವಾದ ಮಂತ್ರದಲ್ಲಿ ಈ ಪುರುಷನಿಗೆ ಸರ್ವಜಗತ್ತು ಒಂದು ಪಾದವು. ಅಮೃತಗಳೆನ್ನಿಸುವ, ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿರತಕ್ಕ ಮೂರು ರೂಪಗಳು ಮೂರು ಪಾದಗಳು, ಹೀಗೆ ನಾಲ್ಕು ಪಾದಗಳೆಂದು ಹೇಳಿಯದೆ. ಅದು ಛಂದಸ್ಸಿನಲ್ಲಿ ಕೂಡಲಾರದು. ಶ್ರೀ ವಿಷ್ಣುವಿನಲ್ಲಿಯೇ ಕೂಡುತ್ತದೆ.

## "ಓಂ ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯ ವಿರೋಧಾತ್ ಓಂ" || ಸೂ. ೨೭ ||

'ಗಾಯತ್ರೀ ಜ್ಯೋತಿಃ' ಎನ್ನುವ ಪದ ಪ್ರತಿಪಾದ್ಯಗಳಿಗೆ 'ತ್ರಿಪಾದಸ್ಯಾಮೃತಂ ದಿವಿ' 'ಪರೋ ದಿವಾ' ಎಂದೂ ಉಪದಿಶ್ಯಮಾನಗಳಾದ ದ್ಯುಸ್ಥತ್ವ ದಿವಃ ಪರತ್ವಗಳು ವಿರುದ್ಧಗಳಾಗಿರುವುದರಿಂದ ಗಾಯತ್ರೀ ಜ್ಯೋತಿಃ ಎನ್ನುವ ಎರಡು ಶಬ್ದಗಳಿಂದ ಹೇಳಲ್ಪಡತಕ್ಕದು ಬ್ರಹ್ಮಾಖ್ಯವಾದ ಒಂದು ವಸ್ತುವೆಂದು ಹೇಳಿದ್ದು ಯುಕ್ತವಲ್ಲ. ಎಂದರೆ— ಹಾಗೆ ಹೇಳಕೂಡದು. ಎರಡುಪ್ರಕಾರ ನಿರ್ದೇಶನಮಾಡಿದರೂ, ಒಬ್ಬನೇ ಪ್ರತಿಪಾದ್ಯನಾದರೂ ವಿವಕ್ಷಾಭೇದದಿಂದ ವಿರೋಧ ಪರಿಹಾರವಾಗುತ್ತದೆ. ಹೇಗೆಂದರೆ, ಭೂಲೋಕ, ಭುವರ್ಲೋಕ, ಸ್ವರ್ಲೋಕ ಎಂದು ಮೂರು ಲೋಕಗಳೆಂದು ವಿವಕ್ಷಾಮಾಡಿಕೊಂಡರೆ ಭುವರ್ಲೋಕದಿಂದ ಮೇಲೆ ಇದ್ದುದೆಲ್ಲವೂ ದ್ಯುಲೋಕವೆನ್ನಿಸಿಕೊಳ್ಳುವುದರಿಂದ ಅನಂತಾಸನ, ಶ್ವೇತದ್ವೀಪ, ವೈಕುಂಠಸ್ಥರೂಪಗಳು ದ್ಯುಸ್ಥಗಳೆನ್ನಿಸುತ್ತವೆ. ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಂ ಎಂದು ಏಳು ಲೋಕಗಳೆಂದು ವಿವಕ್ಷಾಮಾಡಿಕೊಂಡರೆ ಮೇರುಪರ್ವತ, ಸೂರ್ಯಮಂಡಲ, ಇಂದ್ರ ಸದನಗಳು 'ಪೃಥಿವ್ಯಾಂ ದ್ಯೌರ್ಮಹಾಮೇರುರಾಕಾಶೇ ಸೂರ್ಯಮಂಡಲಂ । ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ ॥' ಎನ್ನುವ ಸ್ಮೃತಿಯಿಂದ ದ್ಯು ಎನ್ನಿಸುತ್ತವೆ. ಕ್ರಮವಾಗಿ ಅದರಮೇಲೆ ಇರುವ ಅನಂತಾಸನ, ಶ್ವೇತದ್ವೀಪ, ವೈಕುಂಠಸ್ಥರೂಪಗಳು ದ್ಯುಪರ (ದಿವಃ ಪರ)ಗಳೆನ್ನಿಸುತ್ತವೆ. 'ದ್ಯಾವ್ಯತ್ರ ಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ' ॥ ಎಲ್ಲಾ ಲೋಕಗಳಿಂದಲೂ ವೈಕುಂಠವು ಉನ್ನತವಾದುದು.

ಛಂದೋಗರು 'ಗಾಯತ್ರೀ ವಾ ಇದಂ ಸರ್ವಂ ಭೂತಂ' ಇತ್ಯಾದಿಪ್ರಕಾರ ಪಠನ ಮಾಡುತ್ತಾರೆ. ಈ ಗಾಯತ್ರೀಶಬ್ದವಾಚ್ಯವಾದುದು ಬ್ರಹ್ಮವೋ? ವರ್ಣಸಮಾವೇಶರೂಪವಾದ ಮಂತ್ರವೋ? ಎಂದು ಸಂಶಯವು. ಗಾಯತ್ರೀ ಶಬ್ದಕ್ಕೆ ಛಂದೋ ವಿಶೇಷದಲ್ಲಿಯೇ ಪ್ರಸಿದ್ಧಿಯಿದ್ದಪ್ರಯುಕ್ತ ಮಂತ್ರವೇ ಎಂದು ಪೂರ್ವಪಕ್ಷವು. ಇದೂ ಕೂಡ ಪೂರ್ವನ್ಯಾಯದಿಂದಲೇ ಪರಿಹೃತವಾಗಿದೆ ಎಂದರೆ, ಅಭ್ಯಧಿಕಾ ಶಂಕೆಯಿಂದ ಪೂರ್ವಪಕ್ಷಮಾಡುತ್ತಾರೆ—

ಮೂ ॥ ನಿತ್ಯತ್ವಾದೇವ ಶಬ್ದಸ್ಯ ತತ್ಸ್ವಭಾವಃ ಕಥಂ ಹರೇಃ ॥ ೨೪೭ ॥
ಕಥಂ ಪ್ರಸಿದ್ಧಬಹುಲಶಬ್ದಾನಾಮನ್ಯಥಾರ್ಥತಾ ।
ಇತಿ ಚೇತ್ತದ್ಧರೇರೇವ ಬಾಹುಲ್ಯಾಚ್ಛ್ರುತಿಲಿಂಗಯೋಃ ।
ತಾದೃಶತ್ವಾಚ್ಚ ತಚ್ಛಕ್ತೇಃ[ಬಾಹುಲ್ಯೇ ಶ್ರುತಿಲಿಂಗಯೋಃ] ॥ ೨೪೮ ॥

ಅ ॥ (ಗಾನತ್ರಾಣ ಕರ್ತೃತ್ವ ಎರಡೂ) ಕಥಂ = ಯಾವಪ್ರಕಾರದಿಂದ, ಹರೇಃ= ಶ್ರೀ ಪರಮಾತ್ಮನ ಅಧೀನವಾಗುವುವು? (ಯಾವ ರೀತಿಯಿಂದಲೂ ಆಗಲಾರವು.) ಶಬ್ದಸ್ಯ= ಧರ್ಮಿಯಾದ ವೇದಕ್ಕೆ, ನಿತ್ಯತ್ವಾತ್ = ನಿತ್ಯತ್ವವಿದ್ದಪ್ರಯುಕ್ತ, ಅನಾದಿತ್ವವಿದ್ದಪ್ರಯುಕ್ತ, ಏವ=ಧರ್ಮಿಗೇನೇ ನಿತ್ಯತ್ವವಿರುವಾಗ ಅದರಿಂದ ಕೂಡಿಕೊಂಡು ಪರಾಧೀನತ್ವವು ಬರಲಾರದು. ತತ್ಸ್ವಭಾವಃ=ಶಬ್ದಸ್ವಭಾವವು, ಹರೇಃ=ಶ್ರೀ ಪರಮಾತ್ಮನ ಅಧೀನವು, ಕಥಂ=ಹೇಗೆ, ಆಗುವುದು? (ಸ್ವಭಾವಕ್ಕೆ ಅನ್ಯಾಧೀನತ್ವವಿಲ್ಲದಿರುವುದರಿಂದ)ಪ್ರಸಿದ್ಧಬಹುಲಶಬ್ದಾನಾಂ='**ಗಾಯತ್ರೀ ವಾ ಇದಂ ಸರ್ವಂ । ವಾಗ್ವೈಗಾಯತ್ರೀ**' ಇದುಮೊದಲಾದ ಶಬ್ದಗಳಲ್ಲಿಯೇ ಪ್ರಸಿದ್ಧಗಳಾದ ಅನೇಕಶಬ್ದಗಳಿಗೆ, ಅನ್ಯಾರ್ಥತಾ=ಬೇರೆ ಅರ್ಥವಿರುವಿಕೆಯು, ಕಥಂ=ಹೇಗೆ? ಇತಿ ಚೇತ್= ಎಂದರೆ— (ಅತ್ರ ಬ್ರೂಮಃ=ಈ ವಿಷಯದಲ್ಲಿ ಸಮಾಧಾನವನ್ನು ಹೇಳುವೆವು.) ತತ್=ಜ್ಯೋತಿಃ ಪ್ರಕರಣವೂ, ಗಾಯತ್ರೀಪ್ರಕರಣವೂ ಕೂಡ, ಹರೇರೇವ=ಶ್ರೀಪರಮಾತ್ಮನಿಗೇನೇ ಪ್ರತಿಪಾದಕವಾಗುತ್ತದೆ. (ಗಾಯತ್ರೀಪದವಿರೋಧವಿಲ್ಲವು. ಏಕೆಂದರೆ—) ತತ್ = ಗಾಯತ್ರೀಪದವು, ಹರೇರೇವ=ಶ್ರೀ ಪರಮಾತ್ಮನಿಗೇನೇ ವಾಚಕವಾಗುತ್ತದೆ. ಹೇಗೆಂದರೆ—ತತ್=ಗಾಯತ್ರೀಪದ ಪ್ರವೃತ್ತಿನಿಮಿತ್ತವು, ಹರೇರೇವ=ಮುಖ್ಯವಾಗಿ ಶ್ರೀ ಹರಿಗೇನೇ, ಇತರವಾದ ಛಂದಸ್ಸಿನಲ್ಲಿರುವ ಪ್ರವೃತ್ತಿನಿಮಿತ್ತವೂ ಪರಮಾತ್ಮನ ಅಧೀನವೇ. ಮತ್ತು ದಿವಃಪರತ್ವವೂ, ದಿವಿಸ್ಥಿತತ್ವವೂ ಕೂಡ, ವಿವಕ್ಷಾಭೇದದಿಂದ, ಹರೇರೇವ=ಶ್ರೀ ಪರಮಾತ್ಮನಿಗೇನೇ ಯುಕ್ತವಾಗುತ್ತದೆ. ಏಕೆಂದರೆ— ಶ್ರುತಿಲಿಂಗಯೋಃ='**ತತೋ ಜ್ಯಾಯಾಂಶ್ಚ ಪುರುಷಃ । ಯದ್ವೈತದ್ಬ್ರಹ್ಮ । ಯ ಏತಾಮೇವ ಬ್ರಹ್ಮೋಪನಿಷದಂ ವೇದ**' ಇತ್ಯಾದಿ ಶ್ರುತಿಗಳು ಗಾನ ತ್ರಾಣ ಕರ್ತೃತ್ವ, ಭೂತಾದಿಪಾದವತ್ವ, ಸರ್ವೋತ್ತಮತ್ವ, ಇತ್ಯಾದಿ ಲಿಂಗಗಳೂ ಇವುಗಳಿಗೆ, ಬಾಹುಲ್ಯಾತ್= ಬಹುಲತ್ವವಿದ್ದಪ್ರಯುಕ್ತ, (ಪ್ರಸಿದ್ಧವಾದ ಅನೇಕ ಶಬ್ದಗಳ ಸಮುದಾಯವೂಕೂಡ ಶ್ರೀ ಹರಿಗೇನೇ ವಾಚಕವಾಗುತ್ತದೆ.) (ಹಾಗಾದರೆ ಗಾಯತ್ರಿಯು ನಿತ್ಯವಾಗಿದೆ. ಮತ್ತು ಗಾಯತ್ರೀ ಶಬ್ದಪ್ರವೃತ್ತಿನಿಮಿತ್ತವಾದ ಗಾನತ್ರಾಣಕರ್ತೃತ್ವವು ಗಾಯತ್ರೀಸ್ವಭಾವವು. ಅದು ಶ್ರೀ ಹರಿಯ ಅಧೀನವು ಹೇಗೆ ಆಗುವುದು? ಎಂದರೆ—) ತಚ್ಛಕ್ತೇಃ=ಆ ಪರಮಾತ್ಮನ ನಿಯಮನಶಕ್ತಿಗೆ, ತಾದೃಶತ್ವಾಚ್ಚ=ನಿತ್ಯ, ಅನಿತ್ಯ, ಸ್ವಭಾವ, ಅಸ್ವಭಾವ ಮೊದಲಾದ ಸರ್ವವಸ್ತು ವಿಷಯಕತ್ವವಿದ್ದುದರಿಂದ (ಸರ್ವವೂ ಪರಮಾತ್ಮನ ಅಧೀನವಾಗುವುದು.)

**ತಾ ॥ ನ್ಯಾಯಸುಧಾ** (1) ಆಕಾಶಾದಿ ಶಬ್ದಗಳಿಗೆ ಪರಮಾತ್ಮ ಪರತ್ವವು ಕೂಡಬಹುದು. ಇತರರಲ್ಲಿರುವ ಶಬ್ದಪ್ರವೃತ್ತಿ ನಿಮಿತ್ತವೂ ಈಶ್ವರನ ಅಧೀನವಾಗಿರುವುದರಿಂದ ಇತರರಲ್ಲಿ ಮುಖ್ಯವೃತ್ತಿಯು ಕೂಡಲಾರದು. (2) ಯದ್ಯಪಿ ವಿವರತ್ವಾದಿಗಳು ಕಾರಣದಿಂದಲೂ ಸ್ವರೂಪದಿಂದಲೂ ಆಗಂತುಕವಲ್ಲ. ಆದಾಗ್ಯೂ ಉತ್ಪತ್ತಿವಿನಾಶವುಳ್ಳ ಧರ್ಮಿಯಾದ ಆಕಾಶಾದಿಗಳಿಗೇನೇ, ಉತ್ಪತ್ತಿ ಸ್ಥಿತಿ ನಾಶಗಳಲ್ಲಿ ಈಶ್ವರನ ಅಧೀನತ್ವವಿದ್ದರೆ ಧರ್ಮಕ್ಕೂ ಈಶ್ವರಾಧೀನತ್ವವು ತಪ್ಪಿದ್ದಲ್ಲ. (3) ಆಕಾಶವು ಅನಾದಿ ನಿತ್ಯವೆಂದು ಯುಕ್ತವಲ್ಲ. ಏಕೆಂದರೆ—'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿವಿರೋಧವು ಬರುತ್ತದೆ. (4) 'ಅನಾದಿರ್ವಾ ಅಯಮಾಕಾಶಃ' ಎಂದು ಹೇಳಲ್ಪಟ್ಟ ಅವ್ಯಾಕೃತಾಕಾಶವು ಅನಾದಿ ನಿತ್ಯವಾದಾಗ್ಯೂ ಭೂತಪ್ರಕರಣವಾಗಿರುವುದರಿಂದ ಪೂರ್ವಪಕ್ಷಿಯು ಅದನ್ನು ಇಟ್ಟುಕೊಳ್ಳಲಿಲ್ಲ. ಹೀಗೆಯೇ ಪ್ರಕೃತದಲ್ಲಿ ಕೂಡಲಾರದು. ಗಾಯತ್ರೀಶಬ್ದ ಪ್ರವೃತ್ತಿನಿಮಿತ್ತವು ಗಾನತ್ರಾಣಕರ್ತೃತ್ವವು. '**ಗಾಯತಿ ಚ ತ್ರಾಯತಿ ಚ ತಸ್ಮಾದ್ಗಾಯತ್ರೀ**' ಎಂದು ಶ್ರುತಿಯು. ಅದರಲ್ಲಿ ಗಾನಕರ್ತೃತ್ವವೆಂದರೆ— ಅರ್ಥವನ್ನು ಪ್ರತಿಪಾದಿಸುವಿಕೆ. ತ್ರಾಣಕರ್ತೃತ್ವವೆಂದರೆ ಅಧ್ಯಯನ ಮಾಡುವವರನ್ನು ಪಾಪದಿಂದ ರಕ್ಷಿಸುವ ಶಕ್ತಿಯು.

ಅವೆರಡೂ ಯಾವ ಪ್ರಕಾರದಿಂದಲೂ ಶ್ರೀ ಹರಿಯು ಅಧೀನವಾಗಲಾರವು. ಹೇಗೆಂದರೆ— ೧ ವಿವರತ್ವಾದಿಗಳಂತೆಯೇ ಧರ್ಮಿಯಿಂದ ಕೂಡಿಕೊಂಡೇ ಅನ್ಯಾಧೀನವಾಗುವುದೋ ೨ ಧ್ವನಿಯಂತೆ ಸ್ವರೂಪದಿಂದಲೇ ಅನ್ಯಾಧೀನವಾಗುವುದೋ, ೧ನೇದ್ದು ಕೂಡಲಾರದು. ಧರ್ಮಿಯಾದ ವೇದವು ಅನಾದಿ ನಿತ್ಯವಾಗಿದೆ. ಧರ್ಮಿಗೇನೇ ನಿತ್ಯತ್ವವಿರುವಾಗ ಧರ್ಮಿಯಿಂದ ಕೂಡಿಕೊಂಡು ಪರಾಧೀನತ್ವವು ಹೇಗೆ ಬರುವುದು? ೨ನೇದ್ದೂ ಕೂಡಲಾರದು. ಅರ್ಥಪ್ರತಿಪಾದನಶಕ್ತಿಯು ಶಬ್ದಸ್ವಭಾವವಾಗಿದೆ. (5)ಮತ್ತು ಆಕಾಶಾದಿವಾಕ್ಯಗಳಲ್ಲಿ ಪರಮೇಶ್ವರನ ಲಿಂಗಗಳು ಇರುವುದರಿಂದ ಆ ಶಬ್ದಗಳಿಗೆ ಪರಮಾತ್ಮ ಪರತ್ವವು ಯುಕ್ತವು. ಇಲ್ಲಿ ಅಂತಹುದನ್ನು(ನಿರವಕಾಶವಾದ ವಿಷ್ಣುಲಿಂಗವನ್ನು )ನೋಡಲಾರೆವು. ಮತ್ತೆ 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ' ಇತ್ಯಾದಿಗಳು ಶಬ್ದದಲ್ಲಿಯೇ ಪ್ರಸಿದ್ಧಗಳಾದ ಅನೇಕ ಶಬ್ದಗಳು ಶ್ರುತಗಳಾಗುತ್ತವೆ. ಅವುಗಳಿಗೆ ಪ್ರಬಲವಾದ ಬಾಧಕವಿಲ್ಲದೆ ಅನ್ಯಾರ್ಥವನ್ನು ಕಲ್ಪಿಸುವುದು ಯುಕ್ತವಲ್ಲ. ಅವ್ಯವಸ್ಥೆಯು ಬರಬೇಕಾಗುವುದು. ಛಂದಸ್ಸಿಗೆ ಸರ್ವಾತ್ಮಕತ್ವವು ಕೂಡಲಾರದೆಂದರೆ ಬ್ರಹ್ಮನಿಗೂ ಸಮಾನವಾಗಿದೆ. ಹೀಗೆ ಅಭ್ಯಧಿಕಾಶಂಕೆಯು ಬಂದರೆ— ಗಾಯತ್ರೀ ಪ್ರಕರಣವು ಪರಮಾತ್ಮಪರವೇ. ಛಂದಃಪರವಾದ ಗಾಯತ್ರೀ ಶಬ್ದದಿಂದ ವಿರೋಧವಿದೆ ಎಂದು ಹೇಳಕೂಡದು. ಗಾಯತ್ರೀ ಶಬ್ದಪ್ರವೃತ್ತಿನಿಮಿತ್ತವು ಮುಖ್ಯವಾಗಿ ಪರಮಾತ್ಮನಿಗೇನೇ ಕೂಡುವುದರಿಂದ ಗಾಯತ್ರೀಶಬ್ದವು ಪರಮಾತ್ಮನಿಗೇನೇ ವಾಚಕವಾಗುವುದು. ಗಾಯತ್ರಿಯು ನಿತ್ಯವಾಗಿದ್ದರೂ ಗಾಯತ್ರೀಶಬ್ದ ಪ್ರವೃತ್ತಿನಿಮಿತ್ತವು ಗಾಯತ್ರಿಯ ಸ್ವಭಾವವಾಗಿದ್ದರೂ ಶ್ರೀ ಹರಿಗೆ ನಿತ್ಯ-ಅನಿತ್ಯ-ಸ್ವಭಾವ-ಅಸ್ವಭಾವ ಸರ್ವವಿಷಯಕ ಶಕ್ತಿಯಿದ್ದುದರಿಂದ ಸರ್ವವೂ ಶ್ರೀಹರಿಯ ಅಧೀನವೇ. ಆದುದರಿಂದ ಗಾಯತ್ರೀ ಶಬ್ದವಾಚ್ಯನು ಶ್ರೀಪರಮಾತ್ಮನೇ ॥ ೨೪೭ ॥ ೨೪೮ ॥ ಸೂ. ॥ ೨೫ ॥ ೨೬ ॥ ೨೭ ॥ ॥ ಅಧಿ ॥ ೧೧ ॥

ಗಾಯತ್ರ್ಯಧಿಕರಣವು ಸಮಾಪ್ತವಾಯಿತು.



## ಅಂತಿಮ ಪ್ರಾಣಾಧಿಕರಣವು

ಈ ಅಧಿಕರಣದಲ್ಲಿ ಇಂದ್ರಾದಿಪ್ರಾಪಕಗಳಾದ ಬಹು ಲಿಂಗಗಳಿಂದ ಯುಕ್ತವಾದ ನಾಮಸಮನ್ವಯವನ್ನು ಮಾಡುತ್ತಾರೆ.

### "ಓಂ ಪ್ರಾಣಸ್ತಥಾಽನುಗಮಾತ್ ಓಂ" ಸೂ. ॥ ೨೮ ॥

ತಥಾ='ತದ್ವೈತತ್ವಂ ಪ್ರಾಣೋಽಭವಃ' ಎಂದು ಹೇಳಲ್ಪಟ್ಟ ಪ್ರಾಣನು ಹೇಗೆ ಬ್ರಹ್ಮನೋ, ಹಾಗೆಯೇ, ಪ್ರಾಣಃ=ಐತರೇಯದಲ್ಲಿ 'ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಃ ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ' ಎನ್ನುವಲ್ಲಿ ಶ್ರುತನಾದ ಪ್ರಾಣನು, ತತ್ತ್ವ=ಬ್ರಹ್ಮನೇ, ಅನುಗಮಾತ್=ಬಹ್ಮಶಬ್ದ ದೇವೋಪಾಸ್ಯತ್ವಮೊದಲಾದ ಬ್ರಹ್ಮಶ್ರುತಿ—ಬ್ರಹ್ಮಲಿಂಗಗಳು ಈ ಪ್ರಕರಣದಲ್ಲಿ ಇದ್ದ ಪ್ರಯುಕ್ತ.

### "ಓಂ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ಓಂ" ಸೂ. ॥ ೨೯ ॥

ಬೃಹತೀ ಸಹಸ್ರವನ್ನು ಹೇಳತಕ್ಕ ವಿಶ್ವಾಮಿತ್ರನಿಗೆ ಅಂದರೆ, ಅವನನ್ನು ಉದ್ದೇಶಿಸಿ ಕೊಂಡು ಪ್ರಕೃತ ಉಪದೇಶಮಾಡತಕ್ಕ ಇಂದ್ರನು 'ಪ್ರಾಣೋ ವಾ ಅಹಮಸ್ಮ್ಯೃಷೇ' ಎಂದು ತನ್ನನ್ನೇ ಪ್ರಾಣನೆಂದು ಉಪದೇಶಮಾಡಿರುವುದರಿಂದ ಪ್ರಾಣನು ಶ್ರೀವಿಷ್ಣುವಲ್ಲ, ಎಂದರೆ– ಹಾಗೆ ಹೇಳಕೂಡದು ಏಕೆಂದರೆ ಈ ಪ್ರಕರಣದಲ್ಲಿ 'ಪ್ರಾಣೋ ವಾಽಹಮಸ್ಮಿ' ಎಂದು ಹೇಳ ಲ್ಪಟ್ಟ ಪ್ರಾಣಶಬ್ದ ವಾಚ್ಯನಿಗೆ 'ಪ್ರಾಣೋಽಹಂ ಪ್ರಾಣಸ್ತ್ವಂ ಪ್ರಾಣಸ್ಸರ್ವಾಣಿ ಭೂತಾನಿ' ಇತ್ಯಾದಿಗಳಿಂದ ಬಹುದೇಹ ಸಂಬಂಧವು ಅಥವಾ ಇಂದ್ರನಲ್ಲಿ ಪರಮಾತ್ಮನ ಆವೇಶಬಾಹುಳ್ಯವು ಹೇಳಲ್ಪಡುತ್ತದೆ. ಆದಪ್ರಯುಕ್ತ ಪ್ರಾಣಶಬ್ದವಾಚ್ಯನು ಶ್ರೀ ವಿಷ್ಣುವೇ. ಅಂತೂ ಇಂದ್ರನು ಪ್ರಾಣಾಖ್ಯ ಬ್ರಹ್ಮನು ಸರ್ವಗತನು' ಎಂದೇ ಉಪದೇಶಮಾಡಿರುವನು, ತನ್ನನ್ನು ಪ್ರಾಣನೆಂದು ಉಪದೇಶಮಾಡಿದ್ದಲ್ಲ.

ಅಂತರ್ಯಾಮಿ ಪರವಾಗಿದ್ದರೆ 'ಮಯಿ ಪ್ರಾಣಃ ತ್ವಯಿ ಪ್ರಾಣಃ' ಇತ್ಯಾದಿ ನಿರ್ದೇಶ ವಿರಬೇಕಿತ್ತು. 'ಅಹಂ ಪ್ರಾಣಃ ತ್ವಂ ಪ್ರಾಣಃ' ಎನ್ನುವ ನಿರ್ದೇಶವು ಕೂಡದೆ ಹೋಗಬೇಕಾ ಗುವುದು ಎಂದಾಶಂಕಿಸಿದರೆ—

## "ಓಂ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ಓಂ"

ಸೂ. ॥ ೩೦ ॥

'ಪ್ರಾಣೋ ವಾಽಹಮಸ್ಮಿ' ಎಂದು ಇಂದ್ರಕರ್ತೃಕವಾದ ಉಪದೇಶವು ವಾಮದೇವ ಕರ್ತೃಕವಾದ 'ಅಹಂ ಮನುರಭವಂ ಸೂರ್ಯಶ್ಚ' ಇತ್ಯಾದ್ಯುಪದೇಶದಂತೆ ಅಂತರ್ಯಾಮ್ಯಭಿ ಪ್ರಾಯದಿಂದಲೇ ಉಪಪನ್ನವಾಗುತ್ತದೆ.

## "ಓಂ ಜೀವ ಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈ ವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ಓಂ" ॥ ಸೂ. ೩೧ ॥ ಅಧಿ. ೧೨ ॥

'ತಂ ಶತಂ ವರ್ಷಾಣ್ಯಭ್ಯಾರ್ಚತ್' ಎಂದು ಶತಾಯುಷ್ಟ್ವ ಮೊದಲಾದ ಜೀವಲಿಂಗ ವಿದ್ದಪ್ರಯುಕ್ತವೂ 'ತಾ ಅಹಿಂಸಂತೇ ವಾಹಮುಕ್ಥಮಸ್ಮಿ ಅಹಮುಕ್ಥಮಸ್ಮಿ' ಎಂದು ಪ್ರಾಣ ಸಂವಾದ ಮೊದಲಾದ ಮುಖ್ಯಪ್ರಾಣಲಿಂಗವಿದ್ದಪ್ರಯುಕ್ತವೂ ಪ್ರಾಣನು ಬ್ರಹ್ಮನಲ್ಲ. ಎಂದರೆ— ಹಾಗೆ ಹೇಳಕೂಡದು. ಜೀವ ಮುಖ್ಯಪ್ರಾಣಲಿಂಗಗಳು ಅಂತರ್ಯಾಮಿ ದೃಷ್ಟಿ ಯಿಂದಲೇ ಉಪಪನ್ನಗಳಾಗುತ್ತವೆ. ಅಂತರುಪಾಸನಾ, ವ್ಯಾಪ್ತತ್ವೋಪಾಸನಾ, ಬಹಿರುಪಾ ಸನಾ ಎಂದು ಮೂರುಪ್ರಕಾರ ಬ್ರಹ್ಮನನ್ನು ಉಪಾಸನೆಮಾಡುವುದಕ್ಕಾಗಿ ಅಂತರ್ಯಾಮಿಯನ್ನು ಹೇಳಿದ್ದು. ಈ ಪ್ರಕರಣದಲ್ಲಿ 'ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ' 'ಸ ಏತಮೇವ ಪುರುಷಂ ಬ್ರಹ್ಮತತಮಮಪಶ್ಯತ್' 'ಏತದ್ಧಸ್ಮ ವೈತ ದ್ವಿದ್ವಾನಾಹ ಮಹಿದಾಸ ಐತರೇಯಃ' ಎಂದೂ ಮೂರು ವಿಧವಾದ ಉಪಾಸನೆಯು ಹೇಳಲ್ಪಟ್ಟದೆ. ಅಧಿಕಾರಿಗಳ ಭೇದದಿಂದ ಮೂರು ವಿಧವಾದ ಉಪಾಸನೆಯೂ ಯುಕ್ತ ವಾಗುತ್ತದೆ.

ಹಾಗಾದರೆ 'ಅತ ಏವ ಪ್ರಾಣಃ' ಎನ್ನುವ ಪ್ರಾಣಾಧಿಕರಣದಿಂದಲೇ ಗತಾರ್ಥವಾಗಿರು ವುದರಿಂದ ಈ ಅಧಿಕರಣವು ವ್ಯರ್ಥವೆಂದರೆ— ಹಾಗೆ ಹೇಳಕೂಡದು. ಏಕೆಂದರೆ— ಈ ಅಧಿ ಕರಣದಲ್ಲಿ 'ತಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಃ' ಇತ್ಯಾದಿ ವಾಕ್ಯಾಂತರವು ವಿಷಯವಾಗಿದೆ. ಆದಪ್ರಯುಕ್ತ ವ್ಯರ್ಥವಲ್ಲವೆಂದು ಹೇಳುತ್ತೇವೆಂದರೆ ಹಾಗೆ ಹೇಳಕೂಡದು. ವಿಷಯವಾಕ್ಯಗಳು

ಮಾತ್ರ ಬೇರೆಯಾಗಿರುವುದರಿಂದ ಅಧಿಕರಣಗಳಿಗೆ ಭೇದ ಹೇಳುವುದಾದರೆ ಶಾಸ್ತ್ರಗಳಿಗೆ ಪರ್ಯವಸಾನವೇ ಇಲ್ಲವೆಂದಾಗಬೇಕಾಗುವುದು. (2) ಅಭ್ಯಧಿಕಾಶಂಕೆಯು ಇದ್ದಪ್ರಯುಕ್ತ ಈ ಅಧಿಕರಣವು ವ್ಯರ್ಥವಲ್ಲವೆಂದರೆ— ಹಾಗೆ ಹೇಳಕೂಡದು. ಏಕೆಂದರೆ— ಅಭ್ಯಧಿಕಾಶಂಕೆಯೂ ತೋರುವುದಿಲ್ಲ. ಇದ್ದರೆ ಆ ಸೂತ್ರವನ್ನು ಹೇಳಿದೊಡನೆಯೇ ಆರಂಭಿಸಬೇಕಿತ್ತು. ಎಂದರೆ ಪೂರ್ವಾಧಿಕರಣ ಸಿದ್ಧಾಂತನ್ಯಾಯವನ್ನುಪಜೀವಿಸಿಕೊಂಡು ಬರುವ ಅಧಿಕಾಶಂಕೆಯಿಂದ ಪೂರ್ವಪಕ್ಷಿ ಸುತ್ತಾರೆ—

ಸೂ ॥ [ಶಾದ್ಯಶತ್ವಾಚ್ಚ ತಚ್ಛಕ್ತೇಃ] ಬಾಹುಲ್ಯೇ ಶ್ರುತಿಲಿಂಗಯೋಃ ।
ಅನ್ಯಸ್ಯ ಮುಖ್ಯವಾಚ್ಯತ್ವಮಿತಿ ತನ್ನಾತ್ರಗಸ್ಯ ಹಿ ॥ ೨೪೯ ॥
ವಿಷ್ಣೋರೇವ ತು ಲಿಂಗಾನಿ ಪ್ರಾಣಸ್ಥಾನಿ ತು ಸರ್ವಶಃ ।
ಪ್ರಾಣಸಂವಾದ ಪೂರ್ವಾಣಿ ಮುಖ್ಯತೋ ಜೀವಗಾನಿ ಚ ॥ ೨೫೦ ॥
ಅಭ್ಯಾರ್ಚಚ್ಛತವರ್ಷಾಣಿ ಪ್ರಾಣವಂಶತ್ವಮಿತ್ಯಪಿ ।
ತಸ್ಮಾದನ್ಯತ್ರ ಗೈಶ್ಯಬ್ದೈರುಕ್ತನ್ಯಾಯೈಃ ಸಮಂತತಃ ॥ ೨೫೧ ॥
ಏಕೋ ನಾರಾಯಣೋ ದೇವೋ ಭಣ್ಯತೇ ನಾತ್ರ ಸಂಶಯಃ ।
ವಾಸುದೇವಾದಿ ರೂಪೇಣ ಚತುರ್ಮೂರ್ತಿಶ್ಚ ಸರ್ವಶಃ ॥ ೨೫೨ ॥
ಅಥವಾ ಪಂಚಮೂರ್ತಿಃ ಸಃ ಪ್ರೋಕ್ತೋಽಧಿಕರಣಂ ಪ್ರತಿ ।
ಪ್ರತಿಸೂತ್ರಂ ಪ್ರತಿಪದಂ ಪ್ರತ್ಯಕ್ಷರಮಥಾಪಿ ವಾ ॥ ೨೫೩ ॥
ತೈಸ್ತೈರ್ಯುಕ್ತಿಶ್ರುತಿನ್ಯಾಯವಿಶೇಷೈರ್ಯೋಗ್ಯತಾ ಯಥಾ ।
ಬೃಹತ್ತಂತ್ರಪ್ರಮಾಣೇನ ಬಹ್ವರ್ಥಮಪಿ ಸಂಗ್ರಹಾತ್ ॥ ೨೫೪ ॥
ಉಚ್ಯತೇ ನರಬುದ್ಧೀನಾಮಪಿ ಕಿಂಚಿದ್ಗ್ರಹಾರ್ಥತಃ ।
ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಂ ॥ ೨೫೫ ॥
ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ।
ತಸ್ಮಾನ್ಮಹಾಗುಣೋ ವಿಷ್ಣುರ್ನಾಮ್ನಾಮಪುನರುಕ್ತಿತಃ ॥ ೨೫೬ ॥
ಸೂ. ೨೮ ॥ ೨೯ ॥ ೩೦ ॥ ೩೦ ॥ ॥ ಅಧಿ. ೧೨ ॥

ಅ ॥ ಶ್ರುತಿಲಿಂಗಯೋಃ = ಇಂದ್ರಾದಿಗಳ ಸಂಬಂಧಿಗಳಾದ ಶ್ರುತಿ ಲಿಂಗಗಳಿಗೆ, ಬಾಹುಲ್ಯೇ = ಅತ್ಯಾಧಿಕ್ಯವಿರುವಾಗ, ಅನ್ಯಸ್ಯ = ವಿಷ್ಣುವ್ಯತಿರಿಕ್ತರಾದ ಇಂದ್ರಾದಿಗಳಿಗೆ, ಮುಖ್ಯವಾಚ್ಯತ್ವಂ = ಪ್ರಾಣಶಬ್ದಮುಖ್ಯವಾಚ್ಯತ್ವವು ಯುಕ್ತವು. ಇತಿ = ಹೀಗೆ, ಶಂಕಾಬಂದರೆ, ತತ್ = ಇಂದ್ರಾದಿಗಳಿಗೆ ಪ್ರಾಣಶಬ್ದ ಮುಖ್ಯವಾಚ್ಯತ್ವವು, ನ = ಯುಕ್ತವಲ್ಲ. (ಮತ್ತೆ ಬ್ರಹ್ಮನಿಗೇನೇ, ಪ್ರಾಣಶಬ್ದಮುಖ್ಯವಾಚ್ಯತ್ವವು ಯುಕ್ತವು. ಏಕೆಂದರೆ— ಬ್ರಹ್ಮಶಬ್ದವೂ, ಪರಮೇಶ್ವರನ ಲಿಂಗಗಳೂ ಇರುತ್ತವೆ.) ಅಥವಾ, ಶ್ರುತಿಲಿಂಗಯೋಃ = ಬ್ರಹ್ಮವಿಷಯಕಗಳಾದ ಶ್ರುತಿಲಿಂಗಗಳಿಗೆ, ಬಾಹುಲ್ಯೇ = ಆಧಿಕ್ಯವಿರುವಾಗ, ಅನ್ಯಸ್ಯ = ವಿಷ್ಣುವ್ಯತಿರಿಕ್ತರಾದ ಇಂದ್ರಾದಿಗಳಿಗೆ, ಮುಖ್ಯವಾಚ್ಯತ್ವಂ = ಪ್ರಾಣಶಬ್ದಮುಖ್ಯವಾಚ್ಯತ್ವವು, (ಯಾವುದು ಪೂರ್ವಪಕ್ಷಿಯಿಂದ ಹೇಳಲ್ಪಟ್ಟದೋ) ತತ್ = ಪ್ರಾಣಶಬ್ದಮುಖ್ಯವಾಚ್ಯತ್ವವು, ನ = ಯುಕ್ತವಲ್ಲ. ಹಿ = ಯಾವ ಕಾರಣದಿಂದ, ಅತ್ರಗಸ್ಯ = ಇಂದ್ರಾದಿಗಳಲ್ಲಿರತಕ್ಕ, ವಿಷ್ಣೋರೇವ = ಪರಬ್ರಹ್ಮನಿಗೇನೇ, ಪ್ರಾಣಸ್ಥಾನಿ ತು = ಪ್ರಾಣ

ಸಂಬಂಧಿಯಾಗಿ ಪ್ರತೀತಗಳಾದ, ಪ್ರಾಣಸಂವಾದ ಪೂರ್ವಾಣಿ=ಇಂದ್ರಿಯಾಭಿಮಾನಿ ದೇವತೆಗಳಿಂದ ಸಂವಾದವೇ ಮೊದಲಾಗಿರತಕ್ಕ, ಪ್ರಾಣವಂಶತ್ವಮಿತ್ಯಪಿ = 'ಪ್ರಾಣೋ ವಂಶಃ' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಚಕ್ಷುರಾದೀಂದ್ರಿಯಗಳನ್ನು ಕುಂತು ಆಶ್ರಯತ್ವವೇ ಮೊದಲಾದ, ಸರ್ವಶಃ=ಎಲ್ಲಾ, ಲಿಂಗಾನಿ ತು=ಪ್ರಾಣಲಿಂಗಗಳು, ಜೀವಗಾನಿ=ಜೀವರಲ್ಲಿ ತೋರತಕ್ಕ, ಅಭ್ಯಾರ್ಚಚ್ಛತವರ್ಷಾಣಿ='ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ನೂರುವರ್ಷಪರ್ಯಂತ ದೇಹದಲ್ಲಿ ಇರೋಣ ಅಂದರೆ ಶತಾಯುಷ್ಟ್ವ ಮೊದಲಾದ ಎಲ್ಲಾ ಜೀವಲಿಂಗಗಳೂ, ಮುಖ್ಯತಃ=ಮುಖ್ಯವಾಗಿ, (ಕೂಡುತ್ತವೋ, ಆದುದರಿಂದ ಇಂದ್ರಾದಿ ವಿಷಯಕ ಶ್ರುತಿಲಿಂಗಗಳು ಸಾವಕಾಶಗಳಾಗಿರುವುದರಿಂದ ಪ್ರಾಣಶಬ್ದ ಮುಖ್ಯಾರ್ಥನು ಶ್ರೀ ಪರಮಾತ್ಮನೇ. ಇಂದ್ರ ಮುಖ್ಯಪ್ರಾಣ ಜೀವರು ಅಲ್ಲ.) (ಪಾದಾರ್ಥವನ್ನು ಉಪಸಂಹಾರ ಮಾಡುತ್ತಾರೆ.) ತಸ್ಮಾತ್=ಆದಕಾರಣ, ಅನ್ಯತ್ರಗೈಃ=ವಿಷ್ಣುವ್ಯತಿರಿಕ್ತರಲ್ಲಿರತಕ್ಕ, ಅಂದರೆ ವಿಷ್ಣುವ್ಯತಿರಿಕ್ತರಾದ ಇಂದ್ರಾದಿಗಳ ಪರವೆಂದು ತೋರುವ, ಉಕ್ತನ್ಯಾಯೈಃ=ಹಿಂದೆ ಹೇಳಲ್ಪಟ್ಟ ನ್ಯಾಯವುಳ್ಳ, ಸಮಂತತಃ=ಎಲ್ಲಾ ವೇದಗಳಲ್ಲಿರತಕ್ಕ, ಶಬ್ದೈಃ=ನಾಮಾತ್ಮಕ ಶಬ್ದಗಳಿಂದ, ಏಕಃ = ಮುಖ್ಯಾರ್ಥನಾದ, ದೇವಃ = ಕ್ರೀಡಾದಿ ಗುಣವಿಶಿಷ್ಟನಾದ, ನಾರಾಯಣಃ=ಶ್ರೀನಾರಾಯಣನು, ಭಣ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. ಅತ್ರ=ಈ ವಿಷಯದಲ್ಲಿ, ಸಂಶಯಃ=ಸಂದೇಹವು, ನ=ಇಲ್ಲ. (ಈ ಸೂತ್ರಗಳಿಗೆ ಈಗ ಹೇಳಿದಷ್ಟೇ ಅರ್ಥಗಳಲ್ಲ. ಇನ್ನೂ ಅನೇಕಾರ್ಥಗಳಿವೆಯೆನ್ನುತ್ತಾರೆ.) ವಾಸುದೇವಾದಿರೂಪೇಣ=ವಾಸುದೇವ ಮೊದಲಾದ ಸ್ವರೂಪಗಳಿಂದ, ಚತುರ್ಮೂರ್ತಿಃ=ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎನ್ನುವ ನಾಲ್ಕುಮೂರ್ತಿಯುಳ್ಳವನು, ಸರ್ವಶಃ=ಎಲ್ಲಾ ಪಾದಗಳಲ್ಲಿಯೂ, ಅಥವಾ ಪಂಚಮೂರ್ತಿಃ=ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎನ್ನುವ ಐದು ಸ್ವರೂಪವುಳ್ಳ, ಸಃ=ಶ್ರೀಪರಮಾತ್ಮನು, ಪ್ರತ್ಯಧಿಕರಣಂ=ಎಲ್ಲಾ ಅಧಿಕರಣಗಳಲ್ಲಿಯೂ, ವಾ=ಅಥವಾ, ಪ್ರತಿಸೂತ್ರಂ=ಪ್ರತಿಸೂತ್ರಗಳಲ್ಲಿಯೂ, ಅಥಾಪಿ=ಅಥವಾ, ಪ್ರತಿಪದಂ=ಎಲ್ಲಾ ಪದಗಳಲ್ಲಿಯೂ, ಪ್ರತ್ಯಕ್ಷರಂ=ಎಲ್ಲಾ ಅಕ್ಷರಗಳಲ್ಲಿಯೂ, ಪ್ರೋಕ್ತಃ=ಹೇಳಿಸಿಕೊಳ್ಳಲ್ಪಟ್ಟಿದ್ದಾನೆ. ತೈಸ್ತೈಃ=ಆಯಾವ, ಅಂದರೆ, ಆಯಾಯ ಮೂರ್ತಿಗಳಲ್ಲಿ ಪ್ರಸಿದ್ಧಗಳಾದ, ಯುಕ್ತಿಶ್ರುತಿನ್ಯಾಯವಿಶೇಷೈಃ=ಲಿಂಗಶ್ರುತಿಸಮಾಖ್ಯಾರೂಪವ್ಯಾವರ್ತಕಗಳಿಂದ (ಭೇದವನ್ನು ತಿಳಿಯತಕ್ಕದ್ದು) (ಚತುರ್ಮೂರ್ತಿಃ ಪಂಚಮೂರ್ತಿಃ ವಾಸುದೇವಾದಿ ನಾಲ್ಕುಮೂರ್ತಿಯಾಗಲೀ, ನಾರಾಯಣಾದಿ ಐದು ಮೂರ್ತಿಯಾಗಲೀ ಎಂದೂ, ಪ್ರತ್ಯಧಿಕರಣಗಳಲ್ಲಾಗಲೀ, ಪ್ರತಿಸೂತ್ರಗಳಲ್ಲಾಗಲೀ, ಪ್ರತಿಪದಗಳಲ್ಲಾಗಲೀ, ಪ್ರತ್ಯಕ್ಷರಗಳಲ್ಯಾಗಲೀ ಎಂದೂ ವಸ್ತು ವಿಕಲ್ಪವು ಹೇಗೆ ಕೂಡುತ್ತದೆಂದರೆ) ಯೋಗ್ಯತಾಯಥಾ=(ಎಲ್ಲಾ ಪಕ್ಷಗಳೂ ಸೂತ್ರಕಾರರಿಗೆ ವಿವಕ್ಷಿತಗಳಾಗಿವೆ. ಪುರುಷರಿಗೆ) ಯೋಗ್ಯತಾನುಸಾರವಾಗಿ ತೋರುತ್ತವೆ. ಪುರುಷರ ಯೋಗ್ಯತೆಯನ್ನನುಸರಿಸಿ ವಿಕಲ್ಪವು ಯುಕ್ತವಾಗುತ್ತದೆ. (ಸೂತ್ರಗಳಿಗೆ ಇಂತಹ ಅಲೌಕಿಕವಾದ ಅರ್ಥವದೆ ಎನ್ನುವುದು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆಂದರೆ—) ಬೃಹತ್ತಂತ್ರಪ್ರಮಾಣೇನ = ಬೃಹತ್ತಂತ್ರ ಪ್ರಮಾಣದಿಂದ, (ಸೂತ್ರಗಳಿಗೆ ಇಂತಹ ಅರ್ಥವಿಶೇಷವದೆ ಎಂದು ತಿಳಿಯತಕ್ಕದ್ದು.) ಬಹ್ವರ್ಥಮಪಿ=ಸೂತ್ರಗಳ ಸಮುದಾಯವು ಅನೇಕಾರ್ಥವುಳ್ಳದ್ದಾಗಿಯೂ, ನರಬುದ್ಧೀನಾಮಪಿ=ಅಲ್ಪಬುದ್ಧಿಯುಳ್ಳವರಿಗೂ ಕೂಡ, ಕಿಂಚಿತ್ ಗ್ರಹಾರ್ಥತಃ = ಸ್ವಲ್ಪಸೂತ್ರಾರ್ಥಜ್ಞಾನರೂಪ ಪ್ರಯೋಜನಕ್ಕೋಸ್ಕರ, ಸಂಗ್ರಹಾತ್=ಸಂಗ್ರಹಿಸಿ, ಸಂಕ್ಷೇಪದಿಂದ, ಉಚ್ಯತೇ=ವ್ಯಾಖ್ಯಾನಮಾಡಲ್ಪಡುತ್ತದೆ. ಅಪಿ = ಸಂಪೂರ್ಣಾರ್ಥವನ್ನು ತಿಳಿಸಿಕೊಡದೆ ಇದ್ದಾಗ್ಯೂ, ಅಯಂ ಗ್ರಂಥಃ =

ಈ ಅನುವ್ಯಾಖ್ಯಾನಗ್ರಂಥವೂ, ಬಹ್ವರ್ಥಃ=ಅನೇಕಾರ್ಥವುಳ್ಳದ್ದು. ಭಾಷ್ಯಂ ಚ=ಬ್ರಹ್ಮಸೂತ್ರ ಭಾಷ್ಯವಾದರೂ, ಅತ್ಯರ್ಥವಿಸ್ತರಂ=ಹೆಚ್ಚು ಅರ್ಥದಿಂದ ವಿಸ್ತಾರವುಳ್ಳದ್ದು, ಏತಯೋಃ=ಈ ಅನುವ್ಯಾಖ್ಯಾನ ಭಾಷ್ಯಗಳ, ಅರ್ಥಂ = ಅರ್ಥವನ್ನು, ಬಹುಜ್ಞಾ ಏವ = ಹೆಚ್ಚು ತಿಳಿದವರೇ, ವಿಶೇಷೇಣ=ವಿಶೇಷಾಕಾರವಾಗಿ, ಜಾನಂತಿ=ತಿಳಿಯುತ್ತಾರೆ. ತಸ್ಮಾತ್=ಎಲ್ಲಾ ವೇದಗಳಲ್ಲಿ ರತಕ್ಕ ಎಲ್ಲಾ ನಾಮಗಳಿಂದಲೂ ವಾಚ್ಯನಾದ ಪ್ರಯುಕ್ತ, ನಾಮ್ನಾಂ=ನಾಮಗಳಿಗೆ, ಅಪುನ ರುಕ್ತಿತಃ=(ಯೌಗಿಕತ್ವವಿದ್ದಪ್ರಯುಕ್ತವೂ) ಪುನರುಕ್ತಿಯಿಲ್ಲದಿರುವುದರಿಂದಲೂ, ವಿಷ್ಣುಃ=ಶ್ರೀ ಪರಮಾತ್ಮನು, ಮಹಾಗುಣಃ=ಅನಂತಾನಂತಕಲ್ಯಾಣಗುಣಪರಿಪೂರ್ಣನು.

ತಾ || ನ್ಯಾಯಸುಧಾ— (1) ಪೂರ್ವಾಧಿಕರಣದಲ್ಲಿ ಗಾಯತ್ರೀ ವಾಕ್ ಇದು ಮೊದಲಾದ ಇತರವಸ್ತುಗಳನ್ನು ಹೇಳತಕ್ಕ ಶಬ್ದಗಳು ಹೆಚ್ಚು ಇದ್ದಾಗ್ಯೂ ಪರಬ್ರಹ್ಮವಿಷಯಕ ಗಳಾದ ಶ್ರುತಿಲಿಂಗಗಳಿಗೆ ಬಾಹುಲ್ಯವಿದೆಯೆಂದಾಶ್ರಯಿಸಿ ಗಾಯತ್ರೀಶಬ್ದವಾಚ್ಯನು ಪರಮಾತ್ಮನೇ ಎಂದು ನಿರ್ಣಯಿಸಲ್ಪಟ್ಟದೆ. ಇಲ್ಲಿಯೂ ವಿಷ್ಣುವಿನಿಂದ ವ್ಯತಿರಿಕ್ತರಾದ ಇಂದ್ರಾದಿಗಳನ್ನು ತಿಳಿಸಿಕೊಡತಕ್ಕ ಶ್ರುತಿಲಿಂಗಗಳು ಹೆಚ್ಚು ಇವೆ. ಹೇಗೆಂದರೆ—ಅಪ್ರಧಾನಗಳಾದ ಚಕ್ಷು ರಾದೀಂದ್ರಿಯಗಳನ್ನು ಹೇಳುವ ಸಂದರ್ಭದಲ್ಲಿ ಹೇಳಿದ ಪ್ರಾಣಶಬ್ದವು ಪ್ರಧಾನನಾದ ಬ್ರಹ್ಮನನ್ನು ತಿಳಿಸಿಕೊಡುತ್ತದೆನ್ನುವುದು ಕೂಡಲಾರದು. ಮತ್ತು ಈ ಪ್ರಾಣನು ಬ್ರಹ್ಮನೇ ಎಂದು ತಿಳಿಸಿ ಕೊಡುವ ಶ್ರುತಿಲಿಂಗಗಳು ಯಾವುದೂ ಇರುವುದಿಲ್ಲ. ಮತ್ತೆ ಇಂದ್ರನಾಗಲೀ, ಜೀವನಾಗಲೀ, ಮುಖ್ಯಪ್ರಾಣನಾಗಲೀ ಇವರು ಇಂದ್ರಿಯಗಳ ಒಟ್ಟಿಗೆ ಹೇಳಿದ ಪ್ರಾಣಶಬ್ದವಾಚ್ಯರೆಂದು ಹೇಳುವುದೇ ಯುಕ್ತವಾಗುತ್ತದೆ. ಏಕೆಂದರೆ, ಹಸ್ತರೂಪ ಕರ್ಮೇಂದ್ರಿಯಾಭಿಮಾನಿಯಾದ ಇಂದ್ರನಿಗೆ ಇಂದ್ರಿಯತ್ವವಿದೆ. ಜೀವನಿಗೆ ಇಂದ್ರಿಯಜನ್ಯಫಲಾಶ್ರಯತ್ವವಿದೆ. ಮುಖ್ಯಪ್ರಾಣನು ಸರ್ವೇಂದ್ರಿಯಗಳಿಗೂ ಸ್ವಾಮಿಯಾಗಿದ್ದಾನೆ. ಮತ್ತು 'ಪ್ರಾಣೋ ವಾ ಅಹಮಸ್ಮ್ಯೃಷೇ' ಎಂದು ಇಂದ್ರಶ್ರುತಿಯಿದೆ. 'ತಾ ಅಹಿಂಸಂತ' ಇತ್ಯಾದಿಗಳಿಂದ ಹೇಳಲ್ಪಟ್ಟ ಇಂದ್ರಿಯಾಭಿಮಾನಿ ಗಳಿಂದ ಕಲಹವು, ದೇಹಪಾತಉತ್ಥಾನಕಾರಣಗಳಾದ ದೇಹದಿಂದ ಉತ್ಕ್ರಮಣಪ್ರವೇಶಗಳು ಪ್ರಾಣಸಂವಾದವೂ ಹೀಗೆ ಮುಖ್ಯಪ್ರಾಣಲಿಂಗಗಳೂ ಇವೆ. ಹಾಗೆಯೇ 'ತಂ ಶತಂ ವರ್ಷಾ ಣ್ಯಭ್ಯಾರ್ಚತ್' ಎಂದು ಶತಾಯುಷ್ಟ್ವವೊದಲಾದ ಜೀವಲಿಂಗಗಳೂ ಇವೆ. ಈ ಪ್ರಕಾರ ಇಂದ್ರಾದಿವಿಷಯಕಗಳಾದ ಶ್ರುತಿಲಿಂಗಗಳು ಹೆಚ್ಚು ಇರುವಾಗ ಇತರರಾದ ಇಂದ್ರಾದಿಗಳಿಗೇನೇ ಪ್ರಾಣಶಬ್ದವಾಚ್ಯತ್ವವು ಯುಕ್ತವು. ಎಂದರೆ ಹಾಗೆ ಶಂಕಿಸಕೂಡದು. ಏಕೆಂದರೆ— ಬ್ರಹ್ಮಶಬ್ದ ವಿದ್ದಪ್ರಯುಕ್ತವೂ ದೇವೋಪಾಸ್ಯತ್ವ, ದೇವೋಪದೇಶ್ಯತ್ವ, ಸರ್ವವೇದಪ್ರತಿಪಾದ್ಯತ್ವ, ಸೂರ್ಯ ಮಂಡಲಸ್ಥತ್ವ, ಸರ್ವಾಂತರ್ಯಾಮಿತ್ವ, ಸರ್ವವ್ಯಾಪಿತ್ವ ಮೊದಲಾದ ಪರಮೇಶ್ವರನ ಲಿಂಗ ಗಳು ಪ್ರಾಣನಲ್ಲಿ ಶ್ರುತಗಳಾಗಿರುವುದರಿಂದಲೂ ಬ್ರಹ್ಮನಿಗೇನೇ ಪ್ರಾಣಶಬ್ದಮುಖ್ಯವಾಚ್ಯತ್ವವೂ ಯುಕ್ತವು. ಇಂದ್ರಾದಿವಿಷಯಕ ಶ್ರುತಿಲಿಂಗಾದಿಗಳೂ ಕೂಡ ಆಯಾಯ ಅಂತರ್ಯಾಮಿಯಲ್ಲಿ 'ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್' ಎನ್ನುವ ಸೂತ್ರದಲ್ಲಿ ಹೇಳಿದ ನ್ಯಾಯದಿಂದ ಸಾವಕಾಶಗಳಾಗಿವೆ. (ಐತ.ಉ. ಪು. ೩೪೭).

**ಸಾರಾಂಶ:—**

ಸ. ರ. ವಿ— (1) ಐತರೇಯೋಪನಿಷತ್ತಿನಲ್ಲಿ ಶ್ರುತವಾಗುತ್ತದೆ. * '**ತಾ ವಾ ಏತಾಃ ಶೀರ್ಷನ್‌ಶ್ರಿಯಃ ಶ್ರಿತಾಃ ಚಕ್ಷುಃ ಶ್ರೋತ್ರಂ ಮನೋ ವಾಕ್ಪ್ರಾಣಃ**' (ಐತ. ಉ.

---

* ಐತರೇಯೋಪನಿಷತ್ತನ್ನು ವ್ಯಾಖ್ಯಾನ ಮಾಡುವಾಗ ಇವುಗಳ ಅರ್ಥವನ್ನು ವಿವರಿಸಿರುವುದರಿಂದ ಗ್ರಂಥಾಧಿಕ್ಯಭಯದಿಂದ ಇಲ್ಲಿ ಪುನಃ ವಿವರಿಸುವುದಿಲ್ಲ.

ಪು. ೩೪೭) ಎಂದು. ಯಾವ ಶ್ರುತಿಲಿಂಗಬಾಹುಲ್ಯನ್ಯಾಯದಿಂದ ಜ್ಯೋತಿಶ್ಶಬ್ದವಾಚ್ಯನು ವಿಷ್ಣುವೆಂದು ಹೇಳಿಯುದೋ ಅದೇ ನ್ಯಾಯದಿಂದ ಚಕ್ಷುರಾದಿಗಳಿಂದೊಡಗೂಡಿ ಪಠಿತವಾಗಿರುವುದರಿಂದ ಪ್ರಾಣಶಬ್ದವಾಚ್ಯನು ಮುಖ್ಯಪ್ರಾಣನಾಗಲು ಯೋಗ್ಯನಾಗಿರುತ್ತಾನೆ. ಆ ಪ್ರಾಣನಿಗೂ ಇತರ ಇಂದ್ರಿಯಾಭಿಮಾನಿ ದೇವತೆಗಳಿಗೂ ಶ್ರೇಷ್ಠತ್ವವಿಷಯದಲ್ಲಿ ವಿವಾದವು ತೋರುತ್ತದೆ. 'ತಾ ಅಹಿಂಸಂತಾಹಮುಕ್ಥಮಸ್ಮ್ಯಹಮುಕ್ಥಮಸ್ಮೀತಿ ತಾ ಅಬ್ರುವನ್ । ಹಂತಾಸ್ಮಾಚ್ಛರೀರಾದುತ್ಕ್ರಾಮಾಮ । ತದ್ಯಸ್ಮಿನ್ನುತ್ಕ್ರಾಂತ ಇದಂ ಶರೀರಂ ಪತ್ಸ್ಯತಿ ತದುಕ್ಥಂ ಭವಿಷ್ಯತಿ' ॥ (ಐತ. ಉ. ಪು. ೩೪೭. ೩೪೮). ಇತ್ಯಾದಿ ಶ್ರುತಿಗಳಲ್ಲಿ ಪ್ರಾಣನಿಗೆ ಇಂದ್ರಿಯಾಭಿಮಾನಿ ದೇವತೆಗಳಿಂದ ಜಗಳವು ಪ್ರಸಿದ್ಧವಾಗಿದೆ. ಮತ್ತು 'ಅಥ ಹ ಪ್ರಾಣಾ ಅಹಂ ಶ್ರೇಯಸಿ ವ್ಯೂದಿರೇ' ಇಂದ್ರಿಯಾಭಿಮಾನಿಗಳು ಶ್ರೇಷ್ಠತ್ವವಿಷಯದಲ್ಲಿ ಜಗಳಮಾಡಿಕೊಂಡರು, ಎಂದು ಶಾಖಾಂತರಗಳಲ್ಲಿಯೂ ಇದೆ. (2) ಮತ್ತು 'ಪ್ರಾಣ ಉದಕ್ರಾಮತ್ ತತ್ಪ್ರಾಣೇ ಉತ್ಕ್ರಾಂತೇಽಪದ್ಯತ । ಪ್ರಾಣಃ ಪ್ರಾವಿಶತ್ । ತತ್ಪ್ರಾಣೇ ಪ್ರಪನ್ನ ಉದತಿಷ್ಠತ್' (ಐತ. ಉ. ಪು. ೩೪೮) ಇಲ್ಲಿ ನಿರ್ಗಮನ ಪ್ರವೇಶಗಳಿಂದ ಶರೀರನಿಪಾತ ಶರೀರೋತ್ಥಾನಗಳು ಪ್ರಸಿದ್ಧಗಳಾಗುವುದರಿಂದ ಇದು ಮುಖ್ಯಪ್ರಾಣಲಿಂಗವೆಂದೇ ಪ್ರಸಿದ್ಧವಾಗುವುದು. (3) ಹಾಗೆಯೇ ಮೇಲಿನ ಭಾಗದಲ್ಲಿಯೂ ಮುಖ್ಯಪ್ರಾಣನ ಲಿಂಗವೇ ಶ್ರುತವಾಗುತ್ತದೆ. 'ಪ್ರಾಣೋ ವಂಶ ಇತಿ ಸ್ಥವಿರಃ ಶಾಕಲ್ಯಸ್ತದ್ಯಥಾ ಶಾಲಾವಂಶೇ ಸರ್ವೇ ಅನ್ಯೇ ವಂಶಾಃ ಸಮಾಹಿತಾಃ ಸ್ಯುರೇವಮೇತಸ್ಮಿನ್ ಪ್ರಾಣೇ ಚಕ್ಷುಃ ಶ್ರೋತ್ರಂ ಮನೋ ವಾಗಿಂದ್ರಿಯಾಣಿ ಶರೀರಂ ಸರ್ವಮಾತ್ಮಾ ಸಮಾಹಿತಃ' ಎಂದು(ಐತ. ಉ ಪು. ೬೫೬). (4) ಜೀವಸಹಿತವಾದ ದೇಹ ಇಂದ್ರಿಯಾಧಾರತ್ವವು ಮುಖ್ಯಪ್ರಾಣನಿಗೇನೇ ಎಂದು ಬೇರೆಕಡೆಗಳಲ್ಲಿಯೂ ಹೇಳಿರುತ್ತದೆ. 'ತಾನ್ ವರಿಷ್ಠಃ ಪ್ರಾಣ ಉವಾಚ । ಮಾ ಮೋಹಮಾಪದ್ಯಥಾಹಮೇವೈತತ್ಪಂಚಧಾತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾಮಿ' ಎಂದಾರಂಭಿಸಿ 'ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ' (ಷಟ್ಪ್ರಶ್ನ. ಉ. ಪು. ೨೧೨. ೨೧೩. ೨೧೪). ಎಂದು ಪ್ರಾಣನಲ್ಲಿಯೇ ಸರ್ವ ಜಗತ್ತು ಆಶ್ರಿತವಾಗಿರುವುದರಿಂದ ಮುಖ್ಯಪ್ರಾಣನೇ ಆಗಬೇಕು. (5) ಅಥವಾ ಜೀವನೇ ಪ್ರಾಣಶಬ್ದವಾಚ್ಯನು. ಹೇಗೆಂದರೆ—ಏಷ ಇಮಂ ಲೋಕಮಭ್ಯಾರ್ಚತ್ ಪುರುಷರೂಪೇಣ ಯ ಏಷ ತಪತಿ ಪ್ರಾಣೋ ವಾ ವ ತದಭ್ಯಾರ್ಚತ್ ಪ್ರಾಣೋ ಹ್ಯೇಷ ಯ ಏಷ ತಪತಿ ತಂ ಶತಂ ವರ್ಷಾಣ್ಯಭ್ಯಾರ್ಚತ್ ತಸ್ಮಾಚ್ಛತಂ ವರ್ಷಾಣಿ ಪುರುಷಾಯುಷೋ ಭವಂತಿ' (ಐತ. ಉ. ಪು. ೩೯೦) ಎಂದು ಉತ್ತರವಾಕ್ಯದಲ್ಲಿ ಶತಾಯುಷ್ಟ್ವಲಿಂಗದಿಂದ ಜೀವನೇ ಪ್ರಾಣನೆಂದು ತಿಳಿಯುತ್ತದೆ. 'ಶತಾಯುರ್ವೈ ಪುರುಷಃ ಶತವೀರ್ಯಃ ಶತೇಂದ್ರಿಯಃ' ಎನ್ನುವ ಶ್ರುತಿಯಲ್ಲಿ ಜೀವನಿಗೆ ನೂರು ವರ್ಷ ಆಯುಷ್ಯವೆಂದು ಪ್ರಸಿದ್ಧವಾಗಿದೆ. (6) ಅಥವಾ ಇಂದ್ರನೇ ಇಲ್ಲಿ ಪ್ರಾಣನಾಗಬಹುದು. ಅವನಿಗೂ ಉತ್ತರವಾಕ್ಯದಲ್ಲಿ ಪ್ರಾಣತ್ವವು ಶ್ರುತವಾಗುತ್ತದೆ. 'ತಮಿಂದ್ರ ಉವಾಚ । ಋಷೇ ಪ್ರಿಯಂ ವೈ ಮೇ ಧಾಮೋಪಾಗಾಃ । ವರಂ ತೇ ದದಾಮಿ । ಸಹೋವಾಚ । ತ್ವಾಮೇವ ಜಾನೀಯಾಂ' ಎಂದು. ತಮಿಂದ್ರ ಉವಾಚ । ಪ್ರಾಣೋ ವಾ ಅಹಮಸ್ಮೀತಿ । (ಐತ. ಉ. ಪು. ೪೧೦.) ಹೀಗೆ ಪೂರ್ವಪಕ್ಷವು ಬಂದರೆ—

ಶ್ರೀ ವಿಷ್ಣುವೇ ಪ್ರಾಣಶಬ್ದವಾಚ್ಯನು. ಪ್ರಾಣಶಬ್ದವು ಮೇಲಿನ ವಾಕ್ಯಗಳಲ್ಲಿಯೂ, ಶ್ರೀವಿಷ್ಣುವಿನಲ್ಲಿಯೇ ಅನುಗತವಾಗಿದೆ. ಹೇಗೆಂದರೆ- "ಸರ್ವಂ ಹೀದಂ ಪ್ರಾಣೇನಾವೃತಂ । ಸ ಏಷೋಽಸುಃ । ಸ ಏಷ ಪ್ರಾಣಃ । ಸ ಏಷ ಭೂತಿಶ್ಚಾಭೂತಿಶ್ಚ । ತಂ ಭೂತಿರಿತಿ

ದೇವಾ ಉಪಾಸಾಂ ಚಕ್ರಿರೇ ತೇ ಬಭೂವುಃ (ಐತ. ಉ. ಪು. ೩೭೩) । ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್ (ಐತ. ಉ. ಪು. ೪೦೦) । ಅಥ ದೇವರಥಸ್ತಸ್ಯ ವಾಗುದ್ಧಿಃ । ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇ ಮನಃ ಸಂಗ್ರಹೀತಾ ತದಯಂ ಪ್ರಾಣೋಽಧಿಷ್ಠತಿ (ಐತ. ಉ. ಪು. ೫೩೩) ಎಂದು. (7) ಸರ್ವದೇವೋಪಾಸ್ಯತ್ವಾದಿಗಳು ಶ್ರೀ ವಿಷ್ಣುವಿನ ಲಿಂಗಗಳೆಂದು ಬೇರೆಕಡೆಗಳಲ್ಲಿಯೂ ಪ್ರಸಿದ್ಧಗಳಾಗಿವೆ. "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" । "ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ" । (ಕಾಠ. ಉ. ಪು. ೭೭) ಸರ್ವೇ ವೇದಾ ಯತ್ಪದಮಾಮನಂತಿ । (ಕಾಠ. ಉ. ಪು. ೪೮.) ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ ! (ಕಾಠ ಉ. ಪು. ೫೭) ತಂ ಪ್ರಪದಾಭ್ಯಾಂ ಪ್ರಾಪದ್ಯತ । ಬ್ರಹ್ಮೇಮಂ ಪುರುಷಂ (ಐತ.ಉ. ಪು ೩೪೭) ಎಂದು ಉಪಕ್ರಮದಲ್ಲಿ ಬ್ರಹ್ಮನು ನಿರ್ದಿಷ್ಟನಾಗಿರುತ್ತಾನೆ. ಮತ್ತು "ತಸ್ಯ ವಾಕ್ತಂತಿರ್ನಾಮಾನಿ ದಾಮಾನಿ ತಸ್ಯೇದಂ ವಾಚಾ ತಂತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಂ"(ಐತ. ಉ. ಪು. ೩೬೦) ಎಂದು ಪ್ರಾಣಶಬ್ದವು ಪರಮಾತ್ಮ ಪರವಾಗಿದೆ. ಮತ್ತು "ಅಥಾತೋ ವಿಭೂತಯೋಽಸ್ಯ ಪುರುಷಸ್ಯ ತಸ್ಯ ವಾಚಾ ಸೃಷ್ಟೌ ಪೃಥಿವೀ ಚಾಗ್ನಿಶ್ಚ" (ಐತ.ಉ. ಪು. ೩೬೭) ಇದು ಮೊದಲಾದ ವಿಷ್ಣುಲಿಂಗ ಪ್ರತಿಪಾದಕ ಮೇಲಿನ ವಾಕ್ಯಗಳು ಹೆಚ್ಚು ಇದ್ದ ಪ್ರಯುಕ್ತವೂ ಪ್ರಾಣಶಬ್ದವು ಪರಮಾತ್ಮಪರವಾಗಿದೆ. (8) (ಇಂದ್ರಿಯಾಧಾರತ್ವಮೊದಲಾದುದು ಮುಖ್ಯಪ್ರಾಣ ಲಿಂಗವೆಂದು ಹೇಳಿದಾಗ್ಯೂ ಮುಖ್ಯಪ್ರಾಣವ್ಯಾಪಾರವು ವಿಷ್ಣುವಿನ ಅಧೀನವಾಗಿರುವುದರಿಂದಲೂ, "ಯಃ ಪ್ರಾಣಮಂತರೋ ಯಮಯತಿ" ಎನ್ನುವ ಶ್ರುತಿಯಿದ್ದ ಪ್ರಯುಕ್ತವೂ ವಿಷ್ಣುವಿನಲ್ಲಿಯೇ ಮುಖ್ಯವಾಗಿ ಇರತಕ್ಕದೆಂದು ತಿಳಿಯತಕ್ಕದು. (9) ಶತಂ ವರ್ಷಾಣ್ಯಭ್ಯಾರ್ಚತ್ ಎಂದು ಜೀವಲಿಂಗವೆಂದು ಹೇಳಿದಾಗ್ಯೂ 'ಸ ಇದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂಚ' ಇತ್ಯಾದಿ ಶಿಷ್ಟವಾಕ್ಯದಿಂದ ಆ ಲಿಂಗವು ಜೀವಾಂತರ್ಯಾಮಿ ವಿಷ್ಣು ವಿಷಯಕವೇ. (10) 'ಪ್ರಾಣೋ ವಾ ಅಹಮಸ್ಮಿ' ಎನ್ನುವುದು ಇಂದ್ರನ ವಾಕ್ಯವೆಂದು ಹೇಳಿದಾಗ್ಯೂ 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ ಪ್ರಾಣೋ ಹ್ಯೇಷ ಯ ಏಷ ತಪತಿ । ಸ ಏತೇನ ರೂಪೇಣ ಸರ್ವಾ ದಿಶೋಽಸ್ಮಿ' ಎನ್ನುವ ಶಿಷ್ಟವಾಕ್ಯದಿಂದ ಆ ವಾಕ್ಯವು ಇಂದ್ರಾವಿಷ್ಟನಾದ ಶ್ರೀ ವಿಷ್ಣು ವಿಷಯಕವೇ. (11) ಈ ವಿಷಯವನ್ನು ಪಾದ್ಮಪುರಾಣದಲ್ಲಿಯೂ ಉಪಪಾದಿಸಿರುವರು. 'ತತ್ರನಾನ್ಯೋ ಮ್ಯತೇ ವಿಷ್ಣುಃ ಸರ್ವಶಾಸ್ತ್ರೈತ್ತ ಹೇತುತಃ । ನ ಕ್ವಾಪಿ ಕಿಂಚಿನ್ನಾಮಾಸ್ತಿ ತಮೃತೇ ಪುರುಷೋತ್ತಮಂ । ಎಂದು. ಇದೇ ಅಭಿಪ್ರಾಯವನ್ನು ಶ್ರೀ ವಿಷ್ಣುಪುರಾಣದಲ್ಲಿ ಪ್ರಹ್ಲಾದನೂ ಹೇಳಿರುವನು. 'ಸರ್ವಗತ್ವಾದನಂತಸ್ಯ ಸ ಏವಾಹಮಿತಿ ಸ್ಥಿತಃ । ಎಂದು. ಜೀವನಾದ ಇಂದ್ರನಿಗೆ ಸರ್ವಗತ್ವಾದಿಗಳು ಕೂಡಲಾರವು. ಮತ್ತು ಇಂದ್ರನನ್ನು ಪ್ರತ್ಯಕ್ಷವಾಗಿ ನೋಡತಕ್ಕ ಋಷಿಯು ಇಂದ್ರನ ಜ್ಞಾನರೂಪ ವರವನ್ನು ಬೇಡುತ್ತಾನೆನ್ನುವುದೂ ಕೂಡಲಾರದು. ಆದಕಾರಣ ಇಂದ್ರನ ವಚನವು ಅಂತರ್ಯಾಮಿ ವಿಷಯಕವೇ. ಆದಪ್ರಯುಕ್ತ ಮುಖ್ಯವಾಗಿ ಪ್ರಾಣನಾಮಕನಾದ ವಿಷ್ಣುವೇ ಪ್ರತಿಪಾದಿಸಲ್ಪಡುತ್ತಾನೆಂದು ಸಿದ್ಧವಾಯಿತು.

'ತಸ್ಮಾದನ್ಯತ್ರಗೈಶ್ಶಬ್ದೈಃ' ಇತ್ಯಾದಿಗಳಿಂದ 'ಆನಂದಮಯೋಭ್ಯಾಸಾತ್' ಇತ್ಯಾದಿಗಳಿಂದ ಪ್ರತಿಪಾದಿಸಿದ್ದನ್ನುಪಸಂಹಾರಮಾಡುತ್ತಾರೆ. ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎನ್ನುವ ಐದುರೂಪಗಳುಳ್ಳ ಶ್ರೀಹರಿಯಾಗಲೀ, ವಾಸುದೇವ ಮೊದಲಾದ

ನಾಲ್ಕುರೂಪಗಳುಳ್ಳ ಶ್ರೀ ಹರಿಯಾಗಲೀ ಪ್ರತಿ ಅಧಿಕರಣಗಳಲ್ಲಿಯೂ, ಪ್ರತಿ ಸೂತ್ರಗಳಲ್ಲಿಯೂ, ಪ್ರತಿ ಪದಗಳಲ್ಲಿಯೂ, ಪ್ರತ್ಯಕ್ಷರಗಳಲ್ಲಿಯೂ ಆಯಾಯ ಮೂರ್ತಿಗಳಲ್ಲಿ ಪ್ರಸಿದ್ಧವಾದ ನಾಮದಿಂದಲೂ, ನಿರ್ವಚನಬಲದಿಂದಲೂ ಪ್ರತಿಪಾದ್ಯನೆಂದು ತಿಳಿಯತಕ್ಕದು. (12) ಏಕಾಯನ ಸಂಹಿತೆಯಲ್ಲಿ 'ಓಂ ಭಗವಾನ್ ವಾಸುದೇವಃ ಆತ್ಮಾऽವ್ಯಕ್ತಂ ಪ್ರಕೃತಿಃ ಪ್ರಧಾನಂ ನಿತ್ಯಮನಂತಂ ಇತ್ಯಾದಿಗಳಿಂದ ವಾಸುದೇವಾದಿಮೂರ್ತಿಗಳಲ್ಲಿ ನಾಮ ವಿಭಾಗವು ಪ್ರಸಿದ್ಧವಾಗಿದೆ. 'ಅದ್ಯತೇऽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಇತ್ಯಾದಿಗಳಲ್ಲಿ ಒಂದೇ ಶಬ್ದಕ್ಕೆ ನಿರ್ವಚನ ಭೇದದಿಂದ ಅರ್ಥಭೇದವು ತಿಳಿಯಲ್ಪಡುತ್ತದೆ. (13) ಅಧಿಕರಣಕ್ಕೆ ಪಂಚಾವಯವಗಳ ಭೇದವಿದ್ದಪ್ರಯುಕ್ತವೂ, ಸೂತ್ರಕ್ಕೆ ಪದಗಳ ಭೇದವಿದ್ದಪ್ರಯುಕ್ತವೂ ಪದಕ್ಕೆ ಅಕ್ಷರಭೇದವಿದ್ದಪ್ರಯುಕ್ತವೂ ಅಕ್ಷರದಲ್ಲಿ ಸ್ವರ, ವ್ಯಂಜನ, ಸಂಧಿ, ಸಂಧಾನಗಳೆನ್ನುವ ಭೇದವಿದ್ದಪ್ರಯುಕ್ತವೂ ಚತುರ್ವ್ಯೂಹಾದಿ ವಿಷಯತ್ವವು ಯುಕ್ತವಾಗುತ್ತದೆ. ಚತುರ್ವ್ಯೂಹಾದಿ ವಿಷಯತ್ವವು ವೇದದಲ್ಲಿಯೂ ಪ್ರಸಿದ್ಧವಾಗಿದೆ. 'ತಾವಾ ಏತಾಶ್ಚತಸ್ರಶ್ಚತುರ್ಧಾ' । (ತೈ. ಉ. ಪು. ೧೦೭) 'ಅಥಾತಃ ಸಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಂಚಸ್ವಧಿಕರಣೇಷು' ॥ (ತೈ. ಉ. ಪು. ೧೦೦) ಇತ್ಯಾದಿಗಳಲ್ಲಿ (14) ಸೂತ್ರಗಳಿಗೆ ಶ್ರುತಿಯುಕ್ತಿಗಳ ಸಾಮರ್ಥ್ಯದಿಂದ ಕೂಡಿರುವ ಇಂತಹ ಅರ್ಥವು ಬೃಹತ್ತಂತ್ರಪ್ರಮಾಣದಲ್ಲಿ ಚೆನ್ನಾಗಿ ವ್ಯಾಖ್ಯಾತವಾಗಿದೆ. ಆ ಅರ್ಥವು ಮನುಷ್ಯರಿಗೆ ಹೆಚ್ಚು ಜ್ಞಾನವನ್ನು ಸಂಪಾದಿಸಲಿಕ್ಕೆ ಸಾಮರ್ಥ್ಯವಿಲ್ಲದಿರುವುದರಿಂದ ಸ್ವಲ್ಪ ಜ್ಞಾನವು ಬರುವುದಕ್ಕಾಗಿ ಸಂಗ್ರಹಿಸಿ ಭಾಷ್ಯಾನುವ್ಯಾಖ್ಯಾನಗಳಲ್ಲಿ ವ್ಯಾಖ್ಯಾತವಾಗಿದೆ. ಆದುದರಿಂದ ಅರ್ಥಗಾಂಭೀರ್ಯವಿದ್ದಪ್ರಯುಕ್ತ ಇವುಗಳ ಅರ್ಥವನ್ನು ಅತಿಶಯವಾಗಿ ಬಹುಜ್ಞರಿಗೇನೇ ತಿಳಿಯಲು ಸಾಧ್ಯವು. ಆದಪ್ರಯುಕ್ತ ನಿಖಿಲ ವೇದವಿಚಾರಕವಾದ ಈ ಶಾಸ್ತ್ರದಲ್ಲಿ 'ಅನಂತಧಾ' ಬೇರೆ ಬೇರೆ ಪ್ರವೃತ್ತಿನಿಮಿತ್ತವುಳ್ಳ ಅನಂತ ಶಬ್ದಗಳಿಂದ ಪ್ರತಿಪಾದಿಸಲ್ಪಡುವುದರಿಂದ ನಾರಾಯಣನು ಅನಂತ ಗುಣಗಳುಳ್ಳವನೆಂದು ಸಿದ್ಧವಾಯಿತು.

ತಥಾಚ ೧ ಆನಂದಮಯಾಧಿಕರಣದಲ್ಲಿ ಶ್ರೀ ವಿಷ್ಣುವಿಗೆ ತನ್ನ ಅವಯವಗಳಿಂದ ಐಕ್ಯವೂ, ೨ ಅಂತಸ್ಥತ್ವಾಧಿಕರಣದಲ್ಲಿ ಇಂದ್ರಾದಿ ದೇವತೆಗಳಲ್ಲಿರತಕ್ಕ ಐಶ್ವರ್ಯಾದಿಗಳು ಶ್ರೀ ಹರಿಯ ಅಧೀನಗಳೆಂದೂ, ೩ ಆಕಾಶಾಧಿಕರಣದಲ್ಲಿ ಸರ್ವ ಸ್ವಭಾವವೂ ಈಶಾಧೀನವೆಂದೂ, ೪ ಪ್ರಾಣಾಧಿಕರಣದಲ್ಲಿ ಸರ್ವಜೀವನ ಹೇತುತ್ವವೂ, ೫ ಜ್ಯೋತಿರಧಿಕರಣದಲ್ಲಿ ಸರ್ವ ಸೂಕ್ತಗಳಿಗೆ ಅನ್ಯೈಷ್ಣವತ್ವಪ್ರಸಿದ್ಧಿಯು ಅಜ್ಞಾನ ಮೂಲಕವೆಂದೂ, ೬ ಗಾಯತ್ರ್ಯಧಿಕರಣದಲ್ಲಿ ಅನಾದಿ ನಿತ್ಯವಾದುದೂ ಈಶಾಧೀನವೆಂದೂ, ೭ ಅಂತಿಮ ಪ್ರಾಣಾಧಿಕರಣದಲ್ಲಿ ಎಲ್ಲಾ ಆಯಾಯ ಶ್ರುತಿ ಲಿಂಗಗಳು ಆಯಾಯ ಅಂತರ್ಯಾಮಿ ವಿಷಯಕಗಳೆಂದೂ ಸಿದ್ಧವಾಯಿತು. ಈಪ್ರಕಾರ ಸಮನ್ವಯಾಧ್ಯಾಯದಲ್ಲಿ ಸೇರಿದ ೧ನೇ ಪಾದದಲ್ಲಿ ಅನ್ಯತ್ರ ಪ್ರಸಿದ್ಧಗಳಾದ ಎಲ್ಲಾ ನಾಮಗಳಿಗೂ ಸಮನ್ವಯವನ್ನು ಮಾಡಿದದರಿಂದ ಸರ್ವಶಬ್ದವಾಚ್ಯನು ಶ್ರೀ ಹರಿಯೆಂದು ಸಿದ್ಧವಾಯಿತು ॥ ೨೪೯ ॥ ೨೫೦ ॥ ೨೫೧ ॥ ೨೫೨ ॥ ೨೫೩ ॥ ೨೫೪ ॥ ೨೫೫ ॥ ೨೫೬ ॥ ಸೂ. ॥ ೨೮ ॥ ೨೯ ॥ ೩೦ ॥ ೩೧ ॥ ಅಧಿ. ೧೨ ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ
ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ ॥

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ ಒಂದನೇದ್ದಾದ ಸಮನ್ವಯಾಧ್ಯಾಯದಲ್ಲಿ
ಒಂದನೇ ಪಾದವು ಸಮಾಪ್ತವಾಯಿತು.

ನಮೋ ಭಗವತೇ ತಸ್ಮೈ ವ್ಯಾಸರೂಪಾಯ ವಿಷ್ಣವೇ ।
ಯತ್ಪ್ರಸಾದಾತ್ಪರಂ ಜ್ಞಾನಂ ಪ್ರಾಪ್ಯತೇ ವಿಬುಧಾದಿಭಿಃ ॥
ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ವಿದ್ಯಾದಿವಾಕರಾನ್ ।
ವಂದೇ ಕುದೃಷ್ಟಿದುರ್ಬೋಧ ವ್ಯಾಸಸಿದ್ಧಾಂತದೀಪಕಾನ್ ॥
ಶಬ್ದಾಃ ಸಾಮಾನ್ಯಾಧಿದೈವಾಧಿಭೂತಾಧ್ಯಾತ್ಮಗೋಚರಾಃ ।
ಸಸೂಕ್ತಾ ಅಧಿವೇದಸ್ಥಾಃ ಸಲಿಂಗಾಶ್ಚಾತ್ರ ಚಿಂತಿತಾಃ ॥
ಇತಿ ಶ್ರೀಮತ್ಪೂರ್ಣಪ್ರಮತಿ ಭಗವತ್ಪಾದಸುಕೃತೇ-
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯ ಯತಿನಾ ।
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತಾವಯಂ
ಪೂರ್ವಾಧ್ಯಾಯೇ ಪ್ರಥಮಚರಣಃ ಪರ್ಯವಸಿತಃ ॥
ತಂತ್ರಿನಾರಾಯಣಾಖ್ಯೇನ ಭಾಷಯಾ ಸುಧಿಯಾಂ ಮುದೇ ।
ಅನುವ್ಯಾಖ್ಯಾಸುಧಾಸಾರಃ ಕೀರ್ತಿತಃ ಕೃಪಯಾ ಗುರೋಃ ॥
ಅನುವ್ಯಾಖ್ಯಾನ ಟೀಕಾ ಸನ್ನ್ಯಾಯರತ್ನಾವಳೀ ಶುಭಾ ।
ಪುರಾತನೀ ಪರಾ ಸ್ಯಾಪಿ ಶ್ಲಾಘಿತಾ ನಯಚಂದ್ರಿಕಾ ॥
ತಯೋರ್ವಿಶೇಷೋಽಪ್ಯತ್ರೈವ ಸಂಗೃಹೀತಃ ಪ್ರಯತ್ನತಃ ।
ಗ್ರಂಥೋಽಯಂ ಭಾತು ಮಣಿವಲ್ಲೋಕೇ ಕೃಷ್ಣೇ ನಿವೇದಿತಃ ॥

॥ ಪ್ರಥಮಃ ಪಾದಃ ಸಮಾಪ್ತಃ ॥

೧ನೇ ಅಧ್ಯಾಯದಲ್ಲಿ ೧ನೇ ಪಾದವು ಸಮಾಪ್ತವಾಯಿತು. ॥ ಶ್ರೀಃ ॥



|| ಶ್ರೀಃ ||

# ಎರಡನೇ ಪಾದವು.



## ಸರ್ವಗತತ್ವಾಧಿಕರಣವು.

ಓಂ || ಸುಶಾಸ್ತ್ರಪ್ರಭಯಾ ಸ್ವಸ್ಯ ಪರೇಷಾಂ ಚ ಪ್ರಕಾಶಕಂ |
ಭಜತಾಮಿಷ್ಟದಂ ವ್ಯಾಸಚಿಂತಾಮಣಿಮಹಂ ಭಜೇ ||

ವೇದಭೇದ ವಿವಿಧೋರುಸುಶಾಖಂ
ಬೋಧಪೂರ್ವಕಗುಣಾಢ್ಯಫಲೇತಂ |
ಆದರೇಣ ಭಜತಾಂ ಫಲದಂ ಶ್ರೀ
ಮೋದತೀರ್ಥ ಸುರಭೂರುಹಮೀಡೇ ||

ಯೈರ್ಲಿಂಗೈಃ ಸಾಧಿತಃ ಪೂರ್ವಂ ನಾಮ್ನಾಂ ವಿಷ್ಣೌ ಸಮನ್ವಯಃ |
ತೇಷಾಮಿಹೋಚ್ಯತೇ ಲಿಂಗಜಾತೀಯಾನಾಂ ಸಮನ್ವಯಃ ||

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ || ಹರಿಃ ಓಂ ||

**ಸ. ರ. ವಿ.**— ೧ನೇ ಪಾದದಲ್ಲಿ ಅರ್ಥಾಂತರಗಳಲ್ಲಿ ನಿರೂಢಗಳಾದ ನಾಮಾತ್ಮಕ ಶಬ್ದಗಳಿಗೆ ಲಿಂಗಬಲದಿಂದ ಸಮನ್ವಯವನ್ನು ನಿರೂಪಿಸಿದರು. ೨ನೇ ಪಾದದಲ್ಲಿ ಅರ್ಥಾಂತರಪರವಾಗಿ ತೋರುವ ಲಿಂಗವನ್ನು ಪ್ರತಿಪಾದಿಸುವ ಶಬ್ದಗಳಿಗೆ ಶ್ರೀ ವಿಷ್ಣುವಿನಲ್ಲಿ ಸಮನ್ವಯವನ್ನು ನಿರೂಪಿಸುತ್ತಾರೆ—

**ನ್ಯಾಯಸುಧಾ**— ೧ನೇ ಪಾದದಲ್ಲಿ ಅನ್ಯತ್ರ ಪ್ರಸಿದ್ಧಗಳಾದ ಎಲ್ಲಾ ನಾಮಗಳಿಗೆ ಸಮನ್ವಯವನ್ನು ನಿರೂಪಿಸಿ ೨ನೇ ಪಾದದಲ್ಲಿ ಅನ್ಯತ್ರ ಪ್ರಸಿದ್ಧಗಳಾದ ಎಲ್ಲಾ ಲಿಂಗಗಳಿಗೆ ಸಮನ್ವಯವನ್ನು ನಿರೂಪಿಸಲಿಚ್ಛಿಸುತ್ತಾ ೨ನೇ ಪಾದಕ್ಕೆ ಪೂರ್ವೋತ್ತರ ಪಾದಭೇದವೂ, ತನ್ನಲ್ಲಿ ಏಕವಾಕ್ಯತ್ವವೂ ಸಿದ್ಧಿಯಾಗುವುದಕ್ಕಾಗಿ ಈ ಪಾದದಲ್ಲಿ ಪ್ರತಿಪಾದಿಸಲ್ಪಡತಕ್ಕ ಅರ್ಥವನ್ನು ತೋರಿಸುತ್ತಾರೆ.

**ಮೂ ||** ಲಿಂಗಾತ್ಮಕಾನಾಂ ಶಬ್ದಾನಾಂ ವೃತ್ತಿರ್ನಾರಾಯಣೇ ಪರೇ ||
ಚಿಂತ್ಯತೇ [ಸರ್ವಗತ್ವಂ ತು ಪ್ರಥಮಂ ಪ್ರವಿಚಾರ್ಯತೇ] || ೧ ||

**ಅ ||** ಲಿಂಗಾತ್ಮಕಾನಾಂ=ಲಿಂಗಂ ಆತ್ಮೇವಾತ್ಮಾ ಯೇಷಾಂ ಎನ್ನುವ ವ್ಯುತ್ಪತ್ತಿಯಿಂದ ಅವಯವಶಕ್ತಿಯಿಂದ ಬೋಧ್ಯವಾದ ಧರ್ಮವು ಸ್ವಾಮಿಯಂತೆ ಇರತಕ್ಕುದು ಅಂದರೆ, ಪ್ರವೃತ್ತಿನಿಮಿತ್ತವು, ಯಾವ ಶಬ್ದಗಳಿಗೋ ಅವುಗಳು ಲಿಂಗಾತ್ಮಕಗಳು, ಅಂತಹ, ಶಬ್ದಾನಾಂ=ಎಲ್ಲಾ ವೇದಗಳಲ್ಲಿರತಕ್ಕ ಅನ್ಯತ್ರ ಪ್ರಸಿದ್ಧಗಳಾದ ಶಬ್ದಗಳಿಗೆ, ಪರೇ=ಸರ್ವೋತ್ತಮನಾದ, ನಾರಾಯಣೇ=ಶ್ರೀ ನಾರಾಯಣನಲ್ಲಿ, ವೃತ್ತಿಃ=ಮುಖ್ಯವೃತ್ತಿಯು, ಚಿಂತ್ಯತೇ = ಈ ಪಾದದಲ್ಲಿ ಸಮರ್ಥಿಸಲ್ಪಡುತ್ತದೆ.

ಶಾ || ಹಾಗಾದರೆ 'ಯಚ್ಛಬ್ದಾ ಯೋಗವೃತ್ತಯಃ' ಎಂದು ಅಣುಭಾಷ್ಯದಲ್ಲಿ ಹೇಳಿದ ಪ್ರಕಾರ ಸರ್ವಶಬ್ದಗಳೂ ಶ್ರೀ ಹರಿಯಲ್ಲಿ ಯೌಗಿಕಗಳಾಗಿರುವುದರಿಂದ ೧ನೇ ಪಾದದಲ್ಲಿ ಸಮನ್ವಯಮಾಡಿದ ಶಬ್ದಗಳೂ ಕೂಡ ಲಿಂಗಾತ್ಮಕಗಳೇ. ಆದಪ್ರಯುಕ್ತ ಈ ನಾಮ ಲಿಂಗ ವಿಭಾಗವು ಹೇಗೆ ಕೂಡುತ್ತದೆಂದರೆ— ಸತ್ಯವೇ. ಆದಾಗ್ಯೂ ಅನ್ಯತ್ರ ಪ್ರಸಿದ್ಧತ್ವಾದಿಗಳಂತೆ ಅಪಾತಪ್ರತೀತಿಯನ್ನು ಅನುಸರಿಸಿ ಈಪ್ರಕಾರ ಹೇಳಿರುವುದರಿಂದ ದೋಷವಿಲ್ಲ. ಅಂದರೆ, ಸಿದ್ಧಾಂತ ರೀತಿಯಾಗಿ ಶ್ರೀ ಹರಿಯಲ್ಲಿ ಎಲ್ಲಾ ಶಬ್ದಗಳೂ ಯೌಗಿಕಗಳಾದಾಗ್ಯೂ ಆಪಾತತಃ ರೂಢಗಳಾದ ಶಬ್ದಗಳು ನಾಮಾತ್ಮಕಗಳೆಂದೂ, ಆಪಾತತಃ ಯೌಗಿಕಗಳಾದ ಶಬ್ದಗಳು ಲಿಂಗಾತ್ಮಕಗಳೆಂದೂ ಈ ರೀತಿಯಾಗಿ ವಿಭಾಗಗಳನ್ನು ಇಟ್ಟುಕೊಂಡು ಪಾದ ಭೇದವ್ಯವಸ್ಥೆಯನ್ನು ಮಾಡಿದ್ದಾಗಿರುತ್ತದೆ ॥ ೧ ॥

ಈ ಅಧಿಕರಣದಲ್ಲಿ ಸರ್ವತ್ರಾವಸ್ಥಿತತ್ವರೂಪವಾದ ಭಾವಾಖ್ಯವಾದ ಲಿಂಗಕ್ಕೆ ಸಮನ್ವಯವನ್ನು ಮಾಡುತ್ತಾರೆ—

* "ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ" ॥ ಸೂ. ೧ ॥

'ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇಮೀಮಾಂಸಂತೇ । ಏತಮಗ್ನಾವಧ್ವರ್ಯವಃ ಏತಂ ಮಹಾವ್ರತೇ ಛಂದೋಗಾಃ ಏತಮಸ್ಯಾಮೇತಂ ದಿವಿ' (ಐತ. ಉ. ಪ್ರ. ೬೬೩. ೬೬೪. ೬೬೫.) ಇತ್ಯಾದಿಶ್ರುತಿಗಳಿಂದ ಪೃಥಿವ್ಯಾದಿಗಳಲ್ಲಿರುವವನೆಂದು ಹೇಳಲ್ಪಡತಕ್ಕವನು ಬ್ರಹ್ಮನೇ. ಆದಿತ್ಯನಾಗಲೀ, ಜೀವನಾಗಲೀ ಅಲ್ಲ. ಪರಬ್ರಹ್ಮನಲ್ಲಿಯೇ ಪ್ರಸಿದ್ಧವಾದ ಬ್ರಹ್ಮಶಬ್ದವನ್ನು 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂದು ಉಪದೇಶಮಾಡಿರುವುದರಿಂದ.

ಮಾಯಾವಾದಿಗಳು ಮತ್ತು ರಾಮಾನುಜೀಯರು "ಮನೋಮಯಃ ಪ್ರಾಣ ಶರೀರೋ ಭಾರೂಪಃ" ಎಂದು ಹೇಳಿದ ಮನೋಮಯತ್ವಾದಿಗಳಿಂದ ಶ್ರೀಹರಿಯು ಉಪಾಸ್ಯನೆಂದು ಪ್ರತಿಪಾದಿಸುವುದಕ್ಕಾಗಿ ಈ ಅಧಿಕರಣವೆಂದು ವ್ಯಾಖ್ಯಾನಮಾಡುತ್ತಾರೆ. ಅದು ಅಯುಕ್ತವೆಂದು ನಿರೂಪಿಸುತ್ತಾರೆ.

ಮೂ ॥ [ಚಿಂತ್ಯತೇ] ಸರ್ವಗತ್ವಂ ತು ಪ್ರಥಮಂ ಪ್ರವಿಚಾರ್ಯತೇ ।
ತತ್ರ ತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತಿಪ್ರಬೋಧಕಃ ॥
ದೂರತೋಽಪ್ಯತಿ ಶಕ್ತಃ ಸ ಲೀಲಯಾ ಕೇವಲಂ ಪ್ರಭುಃ ।
ಇತಿ ಜ್ಞಾಪಯಿತುಂ [ಕರ್ಮಕರ್ತ್ರೋರುತ್ಸರ್ಗತೋ ಭಿದಾ] ॥ ೨ ॥

---

* ಶ್ರೀಮದಾಚಾರ್ಯರು ಪ್ರತ್ಯೇಕವಾಗಿಯೇ ಸೂತ್ರಭಾಷ್ಯವನ್ನು ಮಾಡಿರುವಪ್ರಯುಕ್ತ ಈ ಅನುವ್ಯಾಖ್ಯಾನದಲ್ಲಿ ಕೆಲವು ವಿಶೇಷ ಸೂತ್ರಗಳಿಗೆ ಮಾತ್ರ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಆದರೆ ನಾವು ಬ್ರಹ್ಮಸೂತ್ರಭಾಷ್ಯ ಟೀಕೆಯನ್ನು ಇನ್ನು ಪ್ರಕಟಿಸದೆ ಇರುವುದರಿಂದ ವಾಚಕರ ಸೌಕರ್ಯಕ್ಕಾಗಿ ಉಳಿದ ಸೂತ್ರಗಳನ್ನು ಸಂಕ್ಷೇಪಾರ್ಥಸಹಿತವಾಗಿ ( ) ಈ ಅವರಣ ಚಿಹ್ನೆಯೊಳಗೆ ಕೊಟ್ಟಿರುತ್ತೇವೆ.

ಅ || ಯದ್ಯಪಿ, ಸಃ ಪ್ರಭುಃ=ಸರ್ವಸಮರ್ಥನಾದ ಶ್ರೀವಿಷ್ಣುವು, ದೂರತೋಽಪಿ= ದೂರದಿಂದಲೂ, ಅಂದರೆ ದೂರದಲ್ಲಿದ್ದುಕೊಂಡೇ ಆಯಾಯ ವಸ್ತುಗಳಿಗೆ ಆಯಾಯ ಶಕ್ತಿ ಯನ್ನು ಹೊಂದಿಸಿಕೊಡುವ ವಿಷಯದಲ್ಲಿ, ಅತಿಶಕ್ತಃ=ಅತಿಸಮರ್ಥನು. (ತಥಾಽಪಿ= ಆದಾಗ್ಯೂ) ವಿಷ್ಣುಃ=ವ್ಯಾಪ್ತನಾದ ಶ್ರೀಹರಿಯು, ಕೇವಲಂ ಲೀಲಯಾ=ಕೇವಲ ಕ್ರೀಡೆಯಿಂದ, ತತ್ರ ತತ್ರ ಸ್ಥಿತಃ=ಪೃಥಿವೀಮೊದಲಾದ ಆಯಾಯ ವಸ್ತುಗಳಲ್ಲಿದ್ದವನಾಗಿ, ತತ್ತಚ್ಛಕ್ತಿ ಪ್ರಬೋಧಕಃ=ಆಯಾಯ ಶಕ್ತಿಗಳನ್ನು ಕಾರ್ಯದಲ್ಲಿ ಉದ್ಯುಕ್ತವಾದುದನ್ನಾಗಿ ಮಾಡುತ್ತಾನೆ. ಇತಿ=ಹೀಗೆ,ಜ್ಞಾಪಯಿತುಂ=ತಿಳಿಸಿಕೊಡುವುದಕ್ಕಾಗಿ. ಸರ್ವಗತತ್ವಂ ತು='ಏತಮಸ್ಯಾಮೇತಂ ದಿವಿ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಸರ್ವಗತತ್ವವೇ, (ಈ ಪಾದದಲ್ಲಿ) ಪ್ರಥಮಂ= ಮೊದಲು (೧ನೇ ಅಧಿಕರಣದಲ್ಲಿ) ಪ್ರವಿಚಾರ್ಯತೇ=ಪರಮೇಶ್ವರನಿಗೆ ಸಮರ್ಥಿಸಲ್ಪಡುತ್ತದೆ. (ಮನೋಮಯನು ಇತ್ಯಾದಿರೂಪದಿಂದ ಶ್ರೀಹರಿಯು ಉಪಾಸ್ಯನೆಂದು ಸಮರ್ಥಿಸುವುದಿಲ್ಲ. ಆ ವಾಕ್ಯದಲ್ಲಿ ಸತ್ಯಕಾಮತ್ವ ಮೊದಲಾದ ಪರಮೇಶ್ವರ ಧರ್ಮಗಳು ಸ್ಪಷ್ಟವಾಗಿ ತೋರುವುದ ರಿಂದ ಸಂದೇಹಾದಿಗಳೇ ಕೂಡಲಾರವು.)

ತಾ || ಸ. ರ. ವಿ—(1) "ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತೇ | ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಛಂದೋಗಾ ಏತಮಸ್ಯಾಮೇತಂ ದಿವಿ" ಇತ್ಯಾದಿ ವಾಕ್ಯಗಳನ್ನು ಉದಾಹರಿಸಿ ಸರ್ವಗತತ್ವವನ್ನು ಪ್ರತಿಪಾದಿಸುತ್ತಾರೆ. (2) ಶ್ರೀ ಹರಿಯು ಜಗತ್ತಿನಿಂದ ಹೊರಗೇನೇ ಇದ್ದು ಜಗತ್ತನ್ನು ಆಯಾಯ ಕಾರ್ಯಗಳಲ್ಲಿ ನಿಯೋಜಿಸಲಿಕ್ಕೆ ಶಕ್ತನಾದಾಗ್ಯೂ ಲೀಲೆಯಿಂದಲೇ ಎಲ್ಲಾ ಕಡೆಗಳಲ್ಲಿಯೂ ಇದ್ದು, ಸರ್ವ ಶಕ್ತ್ಯುದ್ಬೋಧಕನಾಗುತ್ತಾನೆಂದು ತಿಳಿಸಿಕೊಡುವುದಕ್ಕಾಗಿ ಸರ್ವಗತತ್ವವನ್ನು ಪ್ರತಿಪಾದಿಸಿದರು.

ನ್ಯಾಯಸುಧಾ— (1) ತಾವು ಪ್ರವೇಶಮಾಡಿದೊಡನೆ ಶರೀರವು ಏಳುತ್ತದೆ, ಹೊರಟು ಹೋದೊಡನೆ ಶರೀರವು ಬೀಳುತ್ತದೆ, ಇದು ಮೊದಲಾದ ಮುಖ್ಯಪ್ರಾಣಾದಿಗಳ ಶಕ್ತಿಗಳು ಮುಖ್ಯಪ್ರಾಣಾಂತರ್ಗತನಾದ ಶ್ರೀ ಹರಿಯ ಅಧೀನಗಳೆಂದು ೧ನೇ ಪಾದದಲ್ಲಿ ಮೊದಲು ಹೇಳಿರುತ್ತದೆ ಅದು ಅಯುಕ್ತವು. ಶ್ರೀ ಭಗವಂತನು ಸರ್ವಗತನಲ್ಲ. ಏಕೆಂದರೆ— ಸರ್ವ ಗತತ್ವವನ್ನು ಕೇವಲ ಶಾಸ್ತ್ರದಿಂದಲೇ ತಿಳಿಯಬೇಕು. 'ಏತಮಸ್ಯಾಮೇತಂ ದಿವಿ' ಇತ್ಯಾದಿ ಶಾಸ್ತ್ರವಾದರೂ ಇತರರಿಗೆ ಸರ್ವಗತತ್ವವನ್ನು ಪ್ರತಿಪಾದಿಸುತ್ತದೆ, ಎಂದಾಶಂಕಿಸಿದರೆ— ಹಿಂದೆ ಹೇಳಿದ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಶ್ರೀಹರಿಯೇ ಸರ್ವಗತನೆಂದು ಉಪಪಾದಿ ಸುತ್ತಾರೆ. (2) ಅಥವಾ ಆನಂದಾದಿಗಳಂತೆಯೂ, ಸ್ರಷ್ಟೃತ್ವಾದಿಗಳಂತೆಯೂ ಸರ್ವಗತತ್ವವು ಉತ್ಕರ್ಷಜ್ಞಾಪಕವಾದ ಗುಣವಾಗದಿರುವುದರಿಂದ ಅದನ್ನು ಶ್ರೀ ಹರಿಗೆ ಉಪಪಾದಿಸಬೇಕಾಗಿಲ್ಲ. ಎಂದಾಶಂಕಿಸಿದರೆ— ಸರ್ವಗತತ್ವವೆಂದರೆ— ಸರ್ವಸಂಯೋಗಿತ್ವಮಾತ್ರವು ವಿವಕ್ಷಿತವಾಗಲಿಲ್ಲ. ಮತ್ತೆ ಆಯಾಯ ಶಕ್ತಿಪ್ರೇರಕನಾಗಿ ಸರ್ವತ್ರ ಇರೋಣವು; ಇದು ಗುಣವಾಗಿರುವುದರಿಂದ ಇದನ್ನು ಉಪಪಾದಿಸುವುದು ಯುಕ್ತವು. (3) ಅಥವಾ ಅದೃಶ್ಯತ್ವಾದ್ಯಧಿಕರಣಗಳಲ್ಲಿ ಸರ್ವ ಗತತ್ವವನ್ನು ಪ್ರತಿಪಾದನೆ ಮಾಡುವುದರಿಂದ ಇಲ್ಲಿ ಸರ್ವಗತತ್ವವನ್ನು ಪ್ರತಿಪಾದಿಸಬೇಕಾಗಿಲ್ಲ. ಎಂದಾಶಂಕಿಸಿದರೆ—ಅಲ್ಲಿ ಸರ್ವಗತತ್ವವನ್ನು ಮಾತ್ರ ಪ್ರತಿಪಾದಿಸುತ್ತಾರೆ. ಇಲ್ಲಿಯಾದರೂ ತತ್ತಚ್ಛಕ್ತಿಪ್ರಬೋಧಕತ್ವವು. ಹೀಗೆ ತಾತ್ಪರ್ಯಭೇದವಿದೆ. (4) ಅಥವಾ ಅಂತರ್ಯಾಮ್ಯಧಿ ಕರಣದಲ್ಲಿ ಪೃಥಿವ್ಯಾದಿಗಳಲ್ಲಿದ್ದಾನೆಂದು ಹೇಳುವುದರಿಂದ ಇದನ್ನು ಆರಂಭಿಸಬೇಕಾಗಿಲ್ಲ. ಎಂದಾಶಂಕಿಸಿದರೆ—ಅಲ್ಲಿ ಸತ್ತಾದಿಗಳನ್ನು ಕೊಡುತ್ತಾ ಆಯಾಯ ವಸ್ತುಗಳಲ್ಲಿ ಅಂತರ್ಗತ

ನೆಂದು ಹೇಳುವರು. ಇಲ್ಲಿ ಶಕ್ತಿಪ್ರೇರಕನಾಗಿ ಆಯಾಯ ವಸ್ತುಗಳಲ್ಲಿ ಅಂತರ್ಗತನೆಂದು ಹೇಳುತ್ತಾರೆ. (5) ಅಥವಾ ಅಂತಸ್ಥತ್ವಾಧಿಕರಣದಿಂದ ಇದು ಗತಾರ್ಥವಾಗಿದೆ, ಎಂದಾಶಂಕಿಸಿ ದರೆ— ಅಲ್ಲಿ ಚಂದ್ರಮೊದಲಾದ ಕೆಲವು ಪದಾರ್ಥಗಳಲ್ಲಿ ಅಂತರ್ಗತನೆಂದು ಹೇಳಿರುವರು. ಇಲ್ಲಿ ಯಾದರೂ ಎಲ್ಲಾ ಪದಾರ್ಥಗಳಲ್ಲಿಯೂ ಅಂತರ್ಗತನೆಂದು ಹೇಳುವರು. ಆದಕಾರಣ ಪ್ರತಿಪಾದ್ಯವಾದ ಅರ್ಥಕ್ಕೆ ಭೇದವಿದೆ. (6) ಅಥವಾ ಸರ್ವಗತತ್ವವೆಂದರೆ— ಸರ್ವಮೂರ್ತ ದ್ರವ್ಯಸಂಯೋಗಿತ್ವವೆಂದು ಇಟ್ಟುಕೊಂಡರೆ— 'ಅರ್ಭಕೌಕಸ್ತ್ವಾತ್' ಎನ್ನುವ ಆಕ್ಷೇಪವೇ ಕೂಡದೆಹೋಗುವುದು. ಪರಮಮಹತ್ಪರಿಮಾಣತ್ವವೆಂದು ಇಟ್ಟುಕೊಂಡರೆ 'ಅದೃಶ್ಯತ್ವಾದ್ಯಧಿಕರಣಗಳಿಂದ ಗತಾರ್ಥತಾ ಬರಬೇಕಾಗುವುದು, ಎಂದಾಶಂಕಿಸಿದರೆ ಈ ಅಧಿಕರಣದಿಂದ 'ತತ್ತಚ್ಛಕ್ತಿಪ್ರಬೋಧಕಃ' ಎಂದು ಬೇರೆ ರೀತಿಯಾಗಿ ವ್ಯಾಖ್ಯಾನಮಾಡಿದರು ॥ ೨ ॥ ಸೂ ೧ ॥

('ಓಂ ವಿವಕ್ಷಿತ ಗುಣೋಪಪತ್ತೇಶ್ಚ ಓಂ') ॥ ಸೂ. ೨ ॥

(ತಾತ್ಪರ್ಯವಿಷಯಗಳಾದ 'ಸ ಯೋऽತೋऽಶ್ರುತಃ' ಇತ್ಯಾದಿಗಳಿಂದ ಹೇಳಲ್ಪಡತಕ್ಕ ಅಶ್ರುತತ್ವಾದಿ ಧರ್ಮಗಳು ಶ್ರೀಹರಿಯಲ್ಲಿಯೇ ಕೂಡುವುದರಿಂದ ಪೃಥಿವ್ಯಾದಿಗಳಲ್ಲಿ ಹೇಳಲ್ಪಡತಕ್ಕವನು ಬ್ರಹ್ಮನೇ.)

('ಓಂ ಅನುಪಪತ್ತೇಸ್ತು ನ ಶಾರೀರಃ ಓಂ') ॥ ಸೂ. ೩ ॥

(ಸರ್ವಗತತ್ವವು ಕೂಡದಿರುವುದರಿಂದಲೇ ಶರೀರಸಂಬಂಧಿಯಾದ ಸೂರ್ಯನಾಗಲೀ ಜೀವನಾಗಲೀ ಸರ್ವತ್ರ ಹೇಳಲ್ಪಡತಕ್ಕವನು ಆಗಲಾರನು.)

"ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ" ॥ ಸೂ. ೪ ॥

'ಆತ್ಮಾನಂ ಪರಸ್ಮೈ ಶಂಸತಿ' ಎಂದು ಶಂಸನಕ್ರಿಯೆಯಲ್ಲಿ ಸರ್ವಗತನಾದ ಆತ್ಮನು ಕರ್ಮನೆಂದೂ, ಜೀವನು ಕರ್ತನು (ಕ್ರಿಯಾಶ್ರಯನು) ಎಂದೂ ಹೇಳಿರುವುದರಿಂದ ಈ ಜೀವನು ಸರ್ವಗತನಲ್ಲ. ಒಂದೇ ಕ್ರಿಯೆಯಲ್ಲಿ ಕರ್ಮಕರ್ತೃಗಳು ಒಂದಾಗಲಾರವು. ದೇವದತ್ತನು ಮರಕಡಿಯಲಿಕ್ಕೆ ಕರ್ತನೂ, ಕರ್ಮನೂ ಒಬ್ಬನು ಆಗಲಾರನು.

('ಓಂ ಶಬ್ದವಿಶೇಷಾತ್ ಓಂ') ॥ ಸೂ. ೫ ॥

ಬ್ರಹ್ಮಶಬ್ದಕ್ಕೆ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂದು ಸಾವಧಾರಣತ್ವರೂಪವಾದ ವಿಶೇಷವಿದ್ದಪ್ರಯುಕ್ತ ಬ್ರಹ್ಮಶಬ್ದವು ಜೀವಪರವಲ್ಲ.)

('ಓಂ ಸ್ಮೃತೇಶ್ಚ ಓಂ') ॥ ಸೂ. ೬ ॥

(ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ॥ (ಗೀ. ಅಧ್ಯಾ. ೧೦ ಶ್ಲೋ. ೨೦) 'ಗಾಮಾವಿಶ್ಯ ಚ ಭೂತಾನಿ' (ಗೀ. ಅಧ್ಯಾ. ೧೫ ಶ್ಲೋ. ೧೩)ಇತ್ಯಾದಿಸ್ಮೃತಿಗಳಿಂದ ಸರ್ವತ್ರ ಉಚ್ಯಮಾನನು ಶ್ರೀ ವಿಷ್ಣುವೇ.)

('ಓಂ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಓಂ) ॥ ಸೂ. ೭ ॥

'ಸರ್ವೇಷು ಭೂತೇಷು' ಎಂದು ಸರ್ವಗತನಿಗೆ ಅಲ್ಪಾಶ್ರಯತ್ವವು ಶ್ರುತವಾಗಿರುವುದರಿಂದಲೂ, ಚಕ್ಷುರ್ವರ್ಯತ್ವಾದಿ ಜೀವಲಿಂಗವನ್ನು ಹೇಳಿರುವುದರಿಂದಲೂ, ಆದಿತ್ಯಶ್ರುತಿಯಿದ್ದಪ್ರಯುಕ್ತವೂ ಸರ್ವತ್ರ ಉಚ್ಯಮಾನನು ಬ್ರಹ್ಮನೇ ಎನ್ನುವುದು ಯುಕ್ತವಲ್ಲ, ಎಂದರೆ ಹೀಗೆ ಹೇಳಕೂಡದು. ಶ್ರೀ ವಿಷ್ಣುವನ್ನು ಅಲ್ಪಾಶ್ರಯಕತ್ವ ಚಕ್ಷುರ್ವರ್ಯತ್ವಾದಿರೂಪದಿಂದ ಉಪಾಸನಾಮಾಡಬೇಕೆಂದು ಹೇಳಿದ್ದು. ವ್ಯಾಪ್ತವಾದ ಆಕಾಶಕ್ಕೂ ಏಕೈಕದೇಶದಲ್ಲಿ ಹೇಗೆ ಅವಸ್ಥಿತಿಯೋ ಹಾಗೆಯೇ ಬ್ರಹ್ಮನಿಗೂ ಭೂತಾಶಯಾದಿಗಳಲ್ಲಿ ಸ್ಥಿತಿಯು ಯುಕ್ತವಾಗುತ್ತದೆ)

'(ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ')|| ಸೂ. ೮ ||

(ವಿಷ್ಣುವು ಜೀವನಿಂದ ಕೂಡಿಕೊಂಡು ಶರೀರದಲ್ಲಿ ಇರುವುದಾದರೆ ಆ ವಿಷ್ಣುವಿಗೆ ಜೀವನಿಂದ ಸಮಾನಭೋಗವು ಬರಬೇಕಾಗುವುದು ಎಂದು ಹೇಳಕೂಡದು. ಶ್ರೀ ಹರಿಗೆ ವಿಶೇಷ ಸಾಮರ್ಥ್ಯವಿದೆ.)

ನ್ಯಾಯಸುಧಾ— (1) ಒಂದು ಕ್ರಿಯೆಯಲ್ಲಿ ಕರ್ಮಕರ್ತೃಗಳು ಒಂದಾಗಲಾರವು. ದೇವದತ್ತನು ಛೇದನದಲ್ಲಿ ಕರ್ತನೂ, ಕರ್ಮನೂ ಆಗಲಾರನು. ಒಂದೇ ಕ್ರಿಯೆಯಲ್ಲಿ ಕರ್ತೃಕರ್ಮಭಾವವು ಎಲ್ಲಿದೆಯೋ ಅಲ್ಲಿ ಭೇದವು ಎನ್ನುವ ವ್ಯಾಪ್ತಿ ಇದೆಯೋ, ಇಲ್ಲವೋ? ಒಂದನೇದ್ದು ಕೂಡಲಾರದು. ನಿಯಾಮಕವಿಲ್ಲದಿರುವುದರಿಂದ ವ್ಯಾಪ್ತಿಯು ನಿಶ್ಚಿತವಾಗಲಾರದು. (2) ಹಾಗಾದರೆ ನಿಯಾಮಕವಿಲ್ಲವೆನ್ನುವುದು ಅಸಿದ್ಧವು. ಏಕೆಂದರೆ— ಕರ್ಮಾದಿಲಕ್ಷಣವಿರೋಧವು ವ್ಯಭಿಚಾರಾದರ್ಶನಸಹಕೃತವಾದ ಸಹಚಾರದರ್ಶನವೂ ನಿಯಾಮಕವಿದೆ ಎಂದರೆ, ಒಂದನೇದ್ದು ಕೂಡಲಾರದು. ಗಮನಾದಿರೂಪಕ್ರಿಯಾಶ್ರಯನು ಕರ್ತನು. ಪರಸಮವೇತಕ್ರಿಯಾಜನ್ಯ ಫಲಶಾಲಿಯಾದುದು ಕರ್ಮವು. ಉದಾ=ದೇವದತ್ತಸಮವೇತವಾದ ಗಮನಕ್ರಿಯೆಗೆ ಫಲಭೂತವಾದ ಸಂಯೋಗದಿಂದ ಯುಕ್ತವಾದುದು ಗ್ರಾಮವು. ಕ್ರಿಯಾಜನ್ಯಫಲದಿಂದ ಕೂಡಿರುವುದೇ ಕರ್ಮವೆಂದು ಇಟ್ಟುಕೊಂಡರೆ ಗ್ರಾಮಸಂಯೋಗವಿರುವ ದೇವದತ್ತನಿಗೂ ಕರ್ಮತ್ವವು ಬರಬೇಕಾಗುವುದು. ಹಾಗಾದರೆ, 'ದೇವದತ್ತಂ ಗ್ರಾಮಂ ಗಚ್ಛತಿ' ಎಂದು ದ್ವಿತೀಯಾವಿಭಕ್ತಿಯು ಬರಬೇಕಾಗುವುದು. ಆದಪ್ರಯುಕ್ತ ಅನ್ಯತ್ವಗರ್ಭಿತವಾದ ಕರ್ಮಲಕ್ಷಣವಿರೋಧ ಬರುವುದರಿಂದ ಕರ್ಮಕರ್ತೃಗಳಿಗೆ ಭೇದವು ನಿಯತವೇ ಆಗಿದೆ, ಎಂದರೆ, ಹೀಗೆ ಹೇಳಕೂಡದು. ಯಾವ ದೇಶದ್ದೆಸೆಯಿಂದ ದೇವದತ್ತನು ಗ್ರಾಮಕ್ಕೆ ಹೋಗುತ್ತಾನೋ ಆ ಅವಧಿಭೂತವಾದ ದೇಶಕ್ಕೂ ದೇವದತ್ತನಲ್ಲಿರುವ ಗಮನಕ್ರಿಯಾಜನ್ಯವಾದ ವಿಭಾಗರೂಪಫಲವಿದ್ದುದರಿಂದ ಕರ್ಮತ್ವವು ಬರಬೇಕಾಗುವುದು. ಅಂತೂ ಕೌಶಾಂಬ್ಯಾಃ ಪಾಟಲೀಪುತ್ರಂ ಗಚ್ಛತಿ=ಕೌಶಾಂಬೀದೇಶದ್ದೆಸೆಯಿಂದ ಪಾಟಲೀಪುತ್ರಕ್ಕೆ ಹೋಗುತ್ತಾನೆ ಎನ್ನುವಲ್ಲಿ ಪಂಚಮಾವಿಭಕ್ತಿಯು ಬಾರದೆ ಹೋಗುವುದು. 'ದೇವದತ್ತಃ ಕೌಶಾಂಬೀಂ ಪಾಟಲೀಪುತ್ರಂ ಗಚ್ಛತಿ' ಎಂದು ಪ್ರಯೋಗವು, ಅಂದರೆ, ದ್ವಿತೀಯಾವಿಭಕ್ತಿಯು ಬರಬೇಕಾಗುವುದು. (೩) ಮತ್ತು 'ಶ್ವಸ್ತನಂ ಭೋಜನಂ ಇಚ್ಛಾಮಿ' ನಾಳೆಯ ಭೋಜನವನ್ನು ಇಚ್ಛಿಸುತ್ತೇನೆ ಇತ್ಯಾದಿಗಳಲ್ಲ ಭವಿಷ್ಯದ್ವಿಷಯಕವಾದ ಇಚ್ಛಾದಿರೂಪ ಕ್ರಿಯೆಯಿಂದ ಹುಟ್ಟತಕ್ಕ ಫಲವು ಅನಾಗತಕ್ಕೆ ಇಲ್ಲದಿರುವುದರಿಂದ 'ಭೋಜನಂ' ಎಂದು ಕರ್ಮತ್ವವು ಬಾರದೆಹೋಗುವುದು. ಅನಾಗತಾದಿಗಳು ಇಲ್ಲದಿದ್ದರೆ ಅಲ್ಲಿ ಫಲವೇ ಹುಟ್ಟಲಾರದು. ಫಲವೇ ಹುಟ್ಟುವುದು ಬೇಡವೆಂದರೆ— ಹಾಗೆ ಹೇಳಕೂಡದು. ಇಚ್ಛಾದಿಗಳಿಗೆ ಸಕರ್ಮಕತ್ವವೇ ವ್ಯಾಹತವಾಗುವುದು. ಮತ್ತು ಕರ್ಮವನ್ನು ಹೇಳುವ ಭೋಜನಾದಿಶಬ್ದದ ಮೇಲೆ ದ್ವಿತೀಯಾ ವಿಭಕ್ತಿಯು ಕೂಡದೆ ಹೋಗುವುದು. (4) ಘಟಂ ಇಚ್ಛತಿ, ಘಟಂ ಕರೋತಿ = ಘಟವನ್ನು

ಇಚ್ಛಿಸುತ್ತಾನೆ, ಘಟವನ್ನು ಮಾಡುತ್ತಾನೆ ಇತ್ಯಾದಿಗಳಲ್ಲಿ ವರ್ತಮಾನಕಾಲದಲ್ಲಿರುವ ಘಟಾದಿಗಳಲ್ಲಿಯೂ ಜ್ಞಾನಾದಿಗಳಿಂದ ಹುಟ್ಟುವ ಫಲವು ತೋರುವುದಿಲ್ಲ. ಜ್ಞಾನಾದಿಗಳಿಂದ ಹುಟ್ಟುವ ಫಲವು ಜ್ಞಾತತಾ ಎಂದು ಹೇಳಕೂಡದು. ಅದನ್ನು 'ನ ಪರಿಚ್ಛೇದಕಾರ್ಯೇವ ಪ್ರಮಾಣಮಿತಿ ಚ ಪ್ರಮಾ' ಎನ್ನುವಲ್ಲಿ ಯುಕ್ತಿಪಾದದಲ್ಲಿ ನಿರಾಕರಿಸುವೆವು. ಮತ್ತು 'ಘಟಂ ಇಚ್ಛತಿ ಘಟಂ ಕರೋತಿ ಶತ್ರುಂ ದ್ವೇಷ್ಟಿ' ಇತ್ಯಾದಿ ಪ್ರಯೋಗಗಳಲ್ಲಿ ಇಚ್ಛಾದಿಗಳ ಕರ್ಮಗಳಲ್ಲಿ ಇಚ್ಛಾದಿಗಳಿಂದ ಜ್ಞಾತತೆಯು ಹುಟ್ಟದಿರುವುದರಿಂದ ಅವ್ಯಾಪ್ತಿಯು. ಮತ್ತು ಜ್ಞಾನದಿಂದ ಹುಟ್ಟ ತಕ್ಕ ಫಲವು ಸಂಸ್ಕಾರವು ಮತ್ತು ಇಚ್ಛಾದ್ವೇಷಗಳು, ಇಚ್ಛಾದ್ವೇಷಗಳಿಂದ ಕೃತಿರೂಪವಾದ ಫಲವು ಹುಟ್ಟುತ್ತದೆ. ಕೃತಿಯಿಂದ ಧರ್ಮಾಧರ್ಮರೂಪಫಲವು ಹುಟ್ಟುತ್ತದೆ ಎಂದೂ ಹೇಳ ಕೂಡದು. ಸಂಸ್ಕಾರಾದಿಗಳು ಜೀವನಲ್ಲಿಯೇ ಹುಟ್ಟುವುವು. ಘಟಾದಿಗಳಲ್ಲಿ ಹುಟ್ಟುವುದಿಲ್ಲ. ಜ್ಞಾನಾದಿಗಳಿಂದ ಹುಟ್ಟತಕ್ಕ ಫಲವು ವ್ಯವಹಾರವೆಂದೂ ಹೇಳಕೂಡದು. ಏಕೆಂದರೆ— ಅಭಿಲ ಪನರೂಪವ್ಯವಹಾರವೂ, ಹಾನಾದಿಬುದ್ಧಿರೂಪವ್ಯವಹಾರವೂ ಕರ್ತೃನಲ್ಲಿಯೇ ಇರುವುದು. ಸ್ವೀಕಾರ ಪರಿತ್ಯಾಗಾದಿರೂಪವಾದ ವ್ಯವಹಾರವು ಉಪೇಕ್ಷಣೀಯದಲ್ಲಿ ಇಲ್ಲ. ಅದಪ್ರಯುಕ್ತ ಕ್ರಿಯಾಜನ್ಯಫಲಶಾಲಿತ್ವಂ ಕರ್ಮತ್ವಂ ಎನ್ನುವ ಪಕ್ಷದಲ್ಲಿ ಹಿಂದೆಹೇಳಿದಪ್ರಕಾರ ಅನೇಕ ದೋಷ ಗಳು ಬರುವುದರಿಂದ ಹಾಗೆ ಹೇಳಕೂಡದು. ಮತ್ತೆ ಕ್ರಿಯಾವಿಷಯತ್ವವು ಕರ್ಮತ್ವವು, ಕ್ರಿಯಾ ಸ್ವಾತಂತ್ರ್ಯವು ಕರ್ತೃತ್ವವು, ಎಂದು ಹೇಳಬೇಕು. ಈ ಲಕ್ಷಣಗಳಿಗೆ ಸ್ವರೂಪಾನುಬಂಧಿಯಾದ ಅಥವಾ ಲಕ್ಷಣಾನುಬಂಧಿಯಾದ ಯಾವ ವಿರೋಧವೂ ಇರುವುದಿಲ್ಲ. ಪರಸಮವೇತಕ್ರಿಯಾ ಫಲಶಾಲಿಯಾದುದು ಕರ್ಮವು ಎನ್ನುವ ಕರ್ಮಲಕ್ಷಣವಿರೋಧದಿಂದ ಕರ್ಮ ಕರ್ತೃಗಳಿಗೆ ಭೇದವು ನಿಯತವೆಂದು ಇಟ್ಟುಕೊಂಡರೆ 'ತಂಡುಲಾಃ ಸ್ವಯಮೇವ ಪಚ್ಯಂತೇ=ತಂಡುಲಗಳು ತಾನೇ ಬೇಯಿಸಲ್ಪಡುತ್ತವೆ, ಭಿದ್ಯತೇ ಕಾಷ್ಠಂ ಸ್ವಯಮೇವ = ಕಟ್ಟಿಗೆಯು ತನ್ನಷ್ಟಕ್ಕೇನೇ ಒಡಿಸಲ್ಪಡುತ್ತದೆ, ಇತ್ಯಾದಿ ರೂಪವಾದ ಕರ್ಮಕರ್ತೃಪ್ರಯೋಗವು ದುರ್ಲಭವಾಗುವುದು. ಅಂದರೆ— ಕರ್ಮಕಾರಕದಲ್ಲಿರತಕ್ಕ ಕ್ರಿಯೆಯಿಂದ ಸಮಾನವಾದ ಕ್ರಿಯೆಯುಳ್ಳ ಕರ್ತೃ, ಕರ್ಮ ದಂತೆ ಕಾರ್ಯವನ್ನು ಹೊಂದುತ್ತದೆ ಎನ್ನುವುದರಿಂದ ಸಿದ್ಧವಾದ ಕರ್ತೃ, ದುರ್ಲಭವಾಗುವುದು. ತಥಾ ಚ 'ಕರ್ಮವತ್ಕರ್ಮಣಾ ತುಲ್ಯಕ್ರಿಯಃ=(ಪಾಣಿನಿ ಸೂ. ಅಧ್ಯಾ. ೩. ಪಾ. ೧. ಸೂ. ೩. ) ಎನ್ನುವುದರಿಂದ ಕರ್ತೃಗೇನೇ ಕರ್ಮತ್ವವು ವಿಹಿತವಾಗಿದೆ. ಪರಸಮವೇತಕ್ರಿಯಾಫಲಶಾಲಿತ್ವ ರೂಪವಾದ ಕರ್ಮತ್ವವನ್ನು ಅಂಗೀಕರಿಸಿ ಅದರ ವಿರೋಧದಿಂದ ಕರ್ತೃಕರ್ಮಗಳಿಗೆ ಭೇದವು ನಿಯತವೆಂದು ಹೇಳಿದರೆ ಆಗ ಈ ಸೂತ್ರದಲ್ಲಿ ಹೇಳಿದ ಕರ್ಮಕರ್ತೃಗಳಿಗೆ ಐಕ್ಯವು ಅನುಪಪನ್ನ ವಾಗುವುದು. (5) ಮತ್ತು ಕಾಂಸ್ಯಪಾತ್ರ್ಯಾ ಭುಂಕ್ತೇ=ಕಂಚೀಪಾತ್ರದಿಂದ ಭೋಜನಮಾಡು ತ್ತಾನೆ, ಕಾಂಸ್ಯಪಾತ್ರ್ಯಾಂ ಭುಂಕ್ತೇ=ಕಂಚೀಪಾತ್ರದಲ್ಲಿ ಭೋಜನಮಾಡುತ್ತಾನೆ, ಇದುಮೊದಲಾದ ಪ್ರಯೋಗಗಳು ದೃಷ್ಟಗಳಾಗಿರುವುದರಿಂದ ಒಂದೇ ಕ್ರಿಯೆಯಲ್ಲಿ ಕರಣಕಾರಕದಲ್ಲಿ ಅಧಿಕರಣ ರೂಪವಾದ ಕಾರಕಾಂತರಕ್ಕೆ ಸಮಾವೇಶವು ಕಂಡದರಿಂದ ಪ್ರಕೃತದಲ್ಲಿಯೂ ಕರ್ಮಕರ್ತೃ ಗಳಿಗೂ ಸಮಾವೇಶವು ಬರಲಿ. ವಿರೋಧವೇನಿದೆ?

(6) ಹಾಗಾದರೆ ಕರ್ಮಕರ್ತೃಗಳಿಗೆ ಭೇದವು ದೃಷ್ಟವಾಗಿದೆ. ವ್ಯಭಿಚಾರವು ತೋರುವು ದಿಲ್ಲ. ಅದರಿಂದ ವ್ಯಾಪ್ತಿನಿಶ್ಚಯವಾಗುವುದು. ಅಂತೂ ವ್ಯಭಿಚಾರಾದರ್ಶನದಿಂದ ಸಹಿತವಾದ ಸಹಚಾರದರ್ಶನವು ಕರ್ತೃಕರ್ಮಗಳಿಗೆ ಭೇದಪಡೆ ಎನ್ನುವಲ್ಲಿ ನಿಯಾಮಕವು ಎಂದೂ ಹೇಳ ಕೂಡದು. ದರ್ಶನಾದರ್ಶನಮಾತ್ರವು ವ್ಯಾಪ್ತಿಯನ್ನು ನಿಶ್ಚಯಿಸಿ ಕೊಡಲಾರದು ಎಂದು 'ಸಹ ದರ್ಶನಮಾತ್ರೇಣ ನ ವ್ಯಾಪ್ತಿರವಸೀಯತೇ' ಎನ್ನುವಲ್ಲಿ ಹೇಳುವರು. (7)

ಮತ್ತು ವ್ಯಭಿಚಾರಾದರ್ಶನವೂ ಇಲ್ಲ. ಮಾಮಹಂ ಜಾನಾಮಿ=ನನ್ನನ್ನು ನಾನು ತಿಳಿಯುತ್ತೇನೆ ಎನ್ನುವಲ್ಲಿ ಒಂದು ಕ್ರಿಯೆಯಲ್ಲಿ ಒಬ್ಬನಿಗೇನೇ ಕರ್ತೃತ್ವವೂ ಕರ್ಮತ್ವವೂ ದೃಷ್ಟವಾಗಿದೆ. 'ಮಾಮಹಂ ಜಾನಾಮಿ' ಎನ್ನುವ ಆತ್ಮಕರ್ತೃಕಜ್ಞಾನದಲ್ಲಿ ಆತ್ಮನಿಗೆ ಸಾಕ್ಷಿರೂಪವಾದ ಈ ಜ್ಞಾನಕರ್ಮತ್ವವಿಲ್ಲದಿದ್ದರೆ ಆತ್ಮಸಾಕ್ಷಾತ್ಕಾರವೇ ಸಿದ್ಧಿಸದೆ ಹೋಗಬೇಕಾಗುವುದು. ಅಂತೂ ಆತ್ಮನಿಗೂ ಪ್ರತ್ಯಕ್ಷತ್ವವು ಇಲ್ಲದೆ ಹೋಗಬೇಕಾಗುವುದು. (8) ೧ ಹಾಗಾದರೆ ಆತ್ಮನು ಪ್ರತ್ಯಕ್ಷ ವಿಷಯನಾಗುವುದಿಲ್ಲ, ಆತ್ಮನು ನಿತ್ಯದಲ್ಲಿಯೂ ಅನುಮೇಯನೇ ಆಗಿರುತ್ತಾನೆ, ಎಂದೂ ಹೇಳ ಕೂಡದು. 'ಮಾಮಹಂ ಜಾನಾಮಿ' ಎನ್ನುವ ಸಾಕ್ಷಾತ್ಕಾರವನ್ನು ಅಪಲಾಪಮಾಡಲಿಕ್ಕೆ ಅಶಕ್ಯವಾಗಿದೆ. ತಥಾಚ ಎಲ್ಲಿ ಒಂದೇ ಕ್ರಿಯೆಗೆ ಸಂಬಂಧಪಟ್ಟ ಕರ್ಮಕರ್ತೃಭಾವವೋ ಅಲ್ಲಿ ಪರಸ್ಪರವಾಗಿ ಭೇದವದೆ ಎನ್ನುವ ವ್ಯಾಪ್ತಿಯಿಟ್ಟುಕೊಂಡರೆ 'ಮಾಮಹಂ ಜಾನಾಮಿ' ಎನ್ನುವಲ್ಲಿ ಆತ್ಮಸಾಕ್ಷಾತ್ಕಾರವೇ ಅನುಪಪನ್ನವಾಗುವುದು. ೨ ವ್ಯಾಪ್ತಿಯಿಲ್ಲವೆಂದು ಹೇಳಿದರೆ ಸೂತ್ರದಲ್ಲಿ ಕರ್ಮಕರ್ತೃಭಾವಕ್ಕೆ ಭೇದವ್ಯಾಪ್ತತ್ವವನ್ನು ಇಟ್ಟುಕೊಂಡು ಕರ್ಮಕರ್ತೃವ್ಯಪದೇಶವು ಹೇತುವೆಂದು ಹೇಳಿದ್ದು ಅನುಪಪನ್ನವಾಗುವುದು. ಅಂತೂ ಕರ್ತೃಕರ್ಮಭಾವವು ಭೇದ ವ್ಯಾಪ್ತವಲ್ಲವೆಂದು ಸಿದ್ಧವಾಯಿತು. ಆದಕಾರಣ 'ಕರ್ಮಕರ್ತೃವ್ಯಪದೇಶಾಚ್ಚ' ಎಂದು ಹೇತುವಾಗಿ ಹೇಳಿದ್ದು ಹೇಗೆ ಕೂಡುತ್ತದೆಂದರೆ—

ಮೂ || [ಇತಿ ಜ್ಞಾಪಯಿತುಂ] ಕರ್ಮಕರ್ತ್ರೋರುತ್ಸರ್ಗತೋ ಭಿದಾ |
ಅಭೇದೋಽಪಿ ವಿಶೇಷೇ ಸ್ಯಾದ್ಬಲೀ ಸೋಽಪ್ಯನಪೋದಿತಃ || ೩ ||

ಅ || ಕರ್ಮಕರ್ತ್ರೋಃ = ಕರ್ಮ-ಕರ್ತೃಗಳಿಗೆ, ಉತ್ಸರ್ಗತಃ = ಸ್ವಾಭಾವಿಕವಾಗಿ ಅಂದರೆ, ಅಪವಾದವಿಲ್ಲದಿದ್ದರೆ, ಭಿದಾ=ಭೇದವು, (ನಿಯತವು) ಅಂದರೆ ಯಾವುಗಳು ಒಂದು ಕ್ರಿಯೆಯಲ್ಲಿ ಕರ್ಮಕರ್ತೃಗಳೋ ಅವುಗಳಿಗೆ ಭೇದವು, ಹೀಗೆ ವ್ಯಾಪ್ತಿಯಿದೆ. ಆದರೆ ಸಾಪವಾದ ನಿಯತವು. (ಇದರಿಂದ ಎರಡು ದೋಷಗಳೂ ಪರಿಹೃತಗಳಾದವೆನ್ನುತ್ತಾರೆ.) ವಿಶೇಷೇ= (ಯಾವ ಕಾರಣದಿಂದ ಕರ್ಮಕರ್ತೃಗಳಿಗೆ ಅಪವಾದವಿಲ್ಲದಿದ್ದರೆ ಭೇದವು ನಿಯತವಾಗಿ ಯದೋ ಆದಪ್ರಯುಕ್ತ ತನ್ನ ವಿಷಯವನ್ನು ಉತ್ಸರ್ಗವಿಷಯದ್ದೇಶೆಯಿಂದ ವ್ಯವಚ್ಛೇದಮಾಡುವ ಪ್ರಯುಕ್ತ, ವಿಶೇಷಃ = ಅಪವಾದವು.) ಅಪವಾದವಿರುವಾಗ, ಅಭೇದೋಽಪಿ = ಅಭೇದವೂ ಕೂಡ, ಸ್ಯಾತ್=ಆಗಬಹುದು. (ಅಂತೂ ಮಾಮಹಂ ಜಾನಾಮಿ=ನನ್ನನ್ನು ನಾನು ತಿಳಿಯು ತ್ತೇನೆ ಇತ್ಯಾದಿಗಳು ಉಪಪನ್ನಗಳಾಗುತ್ತವೆ.) ಸೋಽಪಿ=ಉತ್ಸರ್ಗವೂ ಕೂಡ, ಅನಪೋದಿತಃ= ಅಪವಾದವಿಲ್ಲದಿದ್ದರೆ, ಬಲೀ=ತನ್ನ ಸಾಧ್ಯವನ್ನು ಸಾಧಿಸುವ ವಿಷಯದಲ್ಲಿ ಸಮರ್ಥವಾಗುತ್ತದೆ. (ಪ್ರಕೃತದಲ್ಲಿ ಅಪವಾದವಿಲ್ಲ.)

ತಾ || ಸ. ರ. ವಿ— (1) ಸರ್ವಗತನೆಂದು ಪ್ರತಿಪಾದಿಸಲ್ಪಟ್ಟ ಶ್ರೀ ಹರಿಯು 'ಆತ್ಮಾನಂ ಪರಸ್ಮೈ ಶಂಸತಿ' ಎನ್ನುವ ಶಂಸನಕ್ರಿಯೆಯಲ್ಲಿ ಕರ್ಮನೆಂದು ಹೇಳಿರುವುದರಿಂದಲೂ, ಜೀವನು ಕರ್ತನೆಂದು ಹೇಳಿರುವುದರಿಂದಲೂ ಒಂದೇ ಕ್ರಿಯೆಯಲ್ಲಿ ಒಂದೇ ವಸ್ತುವಿಗೆ ಕರ್ತೃ ಕರ್ಮ ಭಾವವು ವಿರುದ್ಧವಾಗಿರುವುದರಿಂದ ಇಲ್ಲಿ ಜೀವನು ಪ್ರತಿಪಾದಿಸಲ್ಪಡುವುದಿಲ್ಲ. ಆದರೆ ಕರ್ತೃ-ಕರ್ಮಭಾವಕ್ಕೆ ಭೇದವದೆ ಎನ್ನುವುದು ಅಪವಾದವಿಲ್ಲದಿದ್ದರೆ ನಿಯತವು. 'ತದಾತ್ಮಾನ ಮೇವಾವೇತ್' ಇತ್ಯಾದಿಗಳಲ್ಲಿ ಒಂದೇ ವಸ್ತುವಿಗೆ ಕರ್ತೃ-ಕರ್ಮಭಾವವು ಶ್ರುತವಾಗಿದೆ. ವಾಕ್ಯಶೇಷದಲ್ಲಿರುವ ಸರ್ವದರ್ಶನ-ಸರ್ವಶ್ರವಣಾದಿ ಸಾಮರ್ಥ್ಯವದೆ ಎನ್ನುವ ಅಭಿಪ್ರಾಯದಿಂದ

ಪ್ರವೃತ್ತಗಳಾದ 'ಚಕ್ಷುರ್ಮಯಃ ಶ್ರೋತ್ರಮಯಃ' ಇತ್ಯಾದಿ ಶಬ್ದಗಳು ಶ್ರೀ ಹರಿಯಲ್ಲಿ ಕೂಡುವುದರಿಂದ ಅಪವಾದವಿಲ್ಲದಿರುವ ಕರ್ತೃಕರ್ಮಭಾವವು ಜೀವೇಶರಿಗೆ ಭೇದವನ್ನೇ ಆಪಾದಿಸಿಕೊಡುತ್ತದೆ. (2) ಇಲ್ಲಿ ಪ್ರತಿಪಾದಿಸಿದ ಸರ್ವಗತತ್ವವು ಶ್ರೀ ವಿಷ್ಣುವಿಗೆ ಸರ್ವತ್ರ ಸ್ಥಿತಿರೂಪವಾದ ಲಿಂಗವು.

ನ. ಚ. ವಿ—(1) 'ಅಹಂ ಮಾಂ ಜಾನಾಮಿ' ಇತ್ಯಾದಿಗಳಲ್ಲಿ ಕರ್ತೃಕರ್ಮಗಳಿಗೆ ಭೇದವಿಲ್ಲದಿರುವುದರಿಂದ ಅಪವಾದವಿದ್ದ ಪ್ರಯುಕ್ತ ಅಭೇದವು ಬರುವುದು ಸಾಪವಾದ ನಿಯತವಾದ ಭೇದವೂ ಕೂಡ ಅಪವಾದವಿಲ್ಲದಿದ್ದರೆ ಬಲಿಷ್ಠವಾಗುವುದು.

ನ್ಯಾಯಸುಧಾ— (1) ಏಕಕ್ರಿಯಾನಿರೂಪಿತಗಳಾದ ಯಾವ ಕರ್ತೃಕರ್ಮಗಳೋ ಅವುಗಳಿಗೆ ಭೇದವು ಎನ್ನುವ ವ್ಯಾಪ್ತಿಯಿದೆ. ಆದರೆ ಔತ್ಸರ್ಗಿಕವು. ಅಂದರೆ, ಅಪವಾದವಿಲ್ಲದಿದ್ದರೆ ನಿಯತವು. ಅಂದರೆ, ಕ್ವಚಿತ್ ವ್ಯಾಪ್ತಿಯನ್ನು ಸಂಕೋಚ ಮಾಡಿಕೊಳ್ಳಬೇಕು. (2) ಅಪವಾದವಿದ್ದರೆ ಅಭೇದವೂ ಇರಬಹುದು. ತಥಾಚ ಕರ್ತೃಕರ್ಮಭಾವವು ಭೇದವ್ಯಾಪ್ತವೆಂದು ಇಟ್ಟುಕೊಂಡರೆ 'ಮಾಮಹಂ ಜಾನಾಮಿ' ಎನ್ನುವ ಆತ್ಮಸಾಕ್ಷಾತ್ಕಾರವು ಕೂಡದೆ ಹೋಗುವುದು ಎನ್ನುವ ದೋಷವು ಪರಿಹೃತವಾಯಿತು. ಅಂತೂ 'ಮಾಮಹಂ ಜಾನಾಮಿ' ಇತ್ಯಾದಿಗಳು ಉಪಪನ್ನಗಳಾಗುತ್ತವೆಂದು ಸಿದ್ಧವಾಯಿತು. (3) ಉತ್ಸರ್ಗವೂ ಅಪವಾದವಿಲ್ಲದಿದ್ದರೆ ತನ್ನ ಸಾಧ್ಯವನ್ನು ಸಾಧಿಸಲಿಕ್ಕೆ ಸಮರ್ಥವಾಗುವುದು, ಎನ್ನುವುದರಿಂದ ೨ನೇ ದೋಷವೂ (ವ್ಯಾಪ್ತಿಯಿಲ್ಲದಿದ್ದರೆ ಕರ್ಮಕರ್ತೃವ್ಯಪದೇಶವು ಹೇತುವೆಂದು ಹೇಳಿದ್ದು ಕೂಡುವುದಿಲ್ಲ ಎನ್ನುವ ದೋಷವೂ)ಪರಿಹೃತವಾಯಿತು. ಪ್ರಕೃತ ಅಪವಾದವಿಲ್ಲದಿರುವುದರಿಂದ ಸೂತ್ರದಲ್ಲಿ ಹೇತುವನ್ನಾಗಿ ಹೇಳಿದ್ದು ಯುಕ್ತವಾಗುತ್ತದೆ. ಉದಾ:— ನ ಹಿಂಸ್ಯಾತ್ಸರ್ವಾ ಭೂತಾನಿ=ಎಲ್ಲಾ ಪ್ರಾಣಿಗಳನ್ನೂ ಕೊಲ್ಲಬಾರದೆನ್ನುವ ಔತ್ಸರ್ಗಿಕವಾದ ಸರ್ವಪ್ರಾಣಿಗಳ ಹಿಂಸಾನಿಷೇಧವು 'ಅಗ್ನೀಷೋಮೀಯಂ ಪಶುಮಾಲಭೇತ'=ಅಗ್ನೀಷೋಮೀಯ ಪಶುವನ್ನು ಹಿಂಸಾಮಾಡಬೇಕು ಎನ್ನುವ ವಿಶೇಷ ವಿಧಿಯಿಂದ ಅಪೋದಿತವಾಗುತ್ತದೆ. ಈ ಔತ್ಸರ್ಗಿಕವಾದ ಈ ವಿಧಿಯೇ ಬ್ರಾಹ್ಮಣರನ್ನು ಕೊಲ್ಲಬೇಕೆಂದು ಇಲ್ಲದಿರುವುದರಿಂದ ಆ ವಿಷಯದಲ್ಲಿ ಅಪೋದಿತವಾಗದಿರುವುದರಿಂದ ಬ್ರಾಹ್ಮಣರ ಹಿಂಸಾದಿಗಳನ್ನು ಮಾಡಬಾರದೆನ್ನುವ ವಿಷಯದಲ್ಲಿ ಪ್ರಮಾಣವೇ ಆಗುತ್ತದೆ ॥ ೩ ॥

(1) ಪ್ರಥಮಾಧಿಕರಣದಲ್ಲಿ ಸರ್ವಗತತ್ವವು ಪ್ರತಿಪಾದಿಸಲ್ಪಡುತ್ತದೆಂದು ಉಕ್ತವಾಯಿತು. (೧) ಅದನ್ನು ಮಾತ್ರ ಪ್ರತಿಪಾದಿಸುವುದಾದರೆ ಸೂತ್ರಗಳಿಗೆ ವಿಶ್ವತೋಮುಖತ್ವವು ಬಾರದೆ ಹೋಗುವುದು. ಶಾಸ್ತ್ರಗಳಿಗೆ ಪರ್ಯವಸಾನವೂ ಇಲ್ಲವೆಂದಾಗುವುದು. (೨) ಸರ್ವಗತತ್ವವು ಇತರಗಳಿಗ ಉಪಲಕ್ಷಣವೆಂದು ಹೇಳುವುದಾದರೆ ಉಪಾಧಿಗಳನ್ನು (ಸಂಗ್ರಾಹಕಧರ್ಮಗಳನ್ನು) ಹೇಳಬೇಕು. ಇಲ್ಲವಾದರೆ ಬೇರೆ ಅಧಿಕರಣಗಳೇ ಇಲ್ಲದೆಹೋಗಬೇಕಾಗುವುದು, ಎಂದರೆ— ೧ನೇ ಅಧಿಕರಣದ ಉಪಾಧಿಯನ್ನು ಹೇಳುತ್ತಾ ಪ್ರಸಂಗ ಸಂಗತಿಯಿಂದ ಎಲ್ಲಾ ಅಧಿಕರಣಗಳ ಉಪಾಧಿಗಳನ್ನು ಹೇಳುತ್ತಾರೆ—

**ಮೂ ॥ ಏತದ್ಭಾವಾಭಿಧಂ ಲಿಂಗಂ ಕ್ರಿಯಾಲಿಂಗೇ ತತಃ ಪರಂ ।**
**ಅಂತರ್ಯಾಮ್ಯಂತರಶ್ಚೇತಿ ಕ್ರಿಯಾಭಾವಾಖ್ಯಮುಚ್ಯತೇ ॥**
**ಅದೃಶ್ಯತ್ವಾದ್ಯಭಾವಾಖ್ಯಂ ಶ್ರುತಿರ್ಲಿಂಗಾಧಿಕಾ ಪರಾ ॥ ೪ ॥**

ಅ ॥ ಏತತ್=ಈ ಸರ್ವಗತತ್ವವು, ಭಾವಾಭಿಧಂ= ('ಸರ್ವತ್ರ ಪ್ರಸಿದ್ಧೋಪದೇಶಾತ್' ಎನ್ನುವಲ್ಲಿ ಸರ್ವತ್ರ ಅವಸ್ಥಿತಿರೂಪವಾದ) ಭಾವಾಖ್ಯವಾದ (ಸತ್ತಾ ಎಂದು ಹೆಸರುಳ್ಳ) ಲಿಂಗಂ=ಲಿಂಗವು, (ಪ್ರತಿಪಾದ್ಯವು) ('ಏತಮಸ್ಯಾಮೇತಂ ದಿವಿ' ಇತ್ಯಾದಿ ಕೆಲವು ಸ್ಥಲ ವಿಶೇಷಗಳಲ್ಲಿ ಸ್ಥಿತಿವಾಚಕಗಳಾದ ಎಷ್ಟು ಶಬ್ದಗಳು ಇರುತ್ತವೋ ಅವುಗಳೆಲ್ಲವೂ ಇದರಿಂದ ಉಪಲಕ್ಷಿತಗಳಾಗುತ್ತವೆ. ಇದೇ ರೀತಿಯಾಗಿ 'ಕ್ರಿಯಾಲಿಂಗೇ' ಇತ್ಯಾದಿಗಳಲ್ಲಿಯೂ ಕ್ರಿಯಾ ವಾಚಕಗಳಾದ ಎಲ್ಲಾ ಶಬ್ದಗಳೂ ಉಪಲಕ್ಷಿತಗಳಾಗುತ್ತವೆ ಇತ್ಯಾದಿಪ್ರಕಾರ ತಿಳಿಯತಕ್ಕದು.) ತತಃ=೧ನೇ ಅಧಿಕರಣದ್ದೆಶೆಯಿಂದ, ಪರಂ=ಮೇಲಿನದಾದ ಅತ್ತೃತ್ವಾಧಿಕರಣ ಗುಹಾಧಿಕರಣ ಗಳಲ್ಲಿ, ಕ್ರಿಯಾಲಿಂಗೇ=(ಕ್ರಿಯೇ ಚ ತೇ ಲಿಂಗೇ ಚ ಎನ್ನುವ ವ್ಯುತ್ಪತ್ತಿಯಿಂದ) ಅತ್ತಾ ಚರಾ ಚರಗ್ರಹಣಾತ್ ಎನ್ನುವಲ್ಲಿ ಸಂಹಾರರೂಪವಾದ ಕ್ರಿಯಾತ್ಮಕ ಲಿಂಗವೂ, 'ಗುಹಾಂ ಪ್ರವಿಷ್ಟಾ' ಎನ್ನುವಲ್ಲಿಯೂ ಕರ್ಮಫಲಭೋಗರೂಪವಾದ ಕ್ರಿಯಾತ್ಮಕಲಿಂಗವೂ (ಪ್ರತಿಪಾದಿಸಲ್ಪಡುತ್ತವೆ.) ಅಂತರಶ್ಚೇತಿ=ಅಂತರ ಉಪಪತ್ತೇಃ ಎನ್ನುವ ಅಂತರಾಧಿಕರಣದಲ್ಲಿ, ಕ್ರಿಯಾಭಾವಾಖ್ಯಂ= ಅಂತಃಸ್ಥಿತಿರೂಪವಾದ, ಭಾವಸಹಿತವಾದ, ರಮಣರೂಪವಾದ ಕ್ರಿಯಾತ್ಮಕಲಿಂಗವೂ, ಅಂತರ್ಯಾಮೀ ಚೇತಿ = ಅಂತರ್ಯಾಮ್ಯಧಿದೈವಾದಿಷು ತದ್ಧರ್ಮ ವ್ಯಪದೇಶಾತ್ ಎನ್ನುವ ಅಂತರ್ಯಾಮ್ಯಧಿಕರಣದಲ್ಲಿಯೂ, ಕ್ರಿಯಾಭಾವಾಖ್ಯಂ=ಅಂತಃಸ್ಥಿತಿ ಸಹಿತವಾದ, ನಿಯಮನ ರೂಪವಾದ ಕ್ರಿಯಾತ್ಮಕ ಲಿಂಗವೂ, ಉಚ್ಯತೇ=ಹೇಳಲ್ಪಡುತ್ತದೆ. ಅದೃಶ್ಯತ್ವಾದಿ=ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ ಎನ್ನುವ ಅದೃಶ್ಯತ್ವಾಧಿಕರಣದಲ್ಲಿ, ಅಭಾವಾಖ್ಯಂ = ಅದೃಶ್ಯತ್ವಾದಿ ರೂಪವಾದ ಅಭಾವಾತ್ಮಕಲಿಂಗವು,(ಪ್ರತಿಪಾದಿಸಲ್ಪಡುತ್ತದೆ)ಪರಾ=ಮೇಲಿನದಾದ 'ವೈಶ್ವಾನರಃ ಸಾಧಾರಣ ಶಬ್ದವಿಶೇಷಾತ್' ಎನ್ನುವ ವೈಶ್ವಾನರಾಧಿಕರಣದಲ್ಲಿ ಪ್ರತಿಪಾದ್ಯವಾದದ್ದು, ಲಿಂಗಾ ಧಿಕಾ=(ಲಿಂಗಾನಿ ಅಧಿಕಾನಿ ಸಮಾನಾಧಿಕರಣಾನಿ ಯಯಾ ಸಾ ಎನ್ನುವ ವ್ಯುತ್ಪತ್ತಿಯಿಂದ) ಲಿಂಗಗಳು ಅಧಿಕಗಳಾಗಿರುವ ಅಂದರೆ ಪಾಚಕತ್ವಮೊದಲಾದ ಅನೇಕ ಲಿಂಗಗಳಿಂದ ಕೂಡಿರುವ, ಶ್ರುತಿಃ=ವೈಶ್ವಾನರನಾಮವು ಪ್ರತಿಪಾದ್ಯವು.

ತಾ ॥ ಸ. ರ. ವಿ— (1) ಯಾವುದು ಇಲ್ಲಿ ಸರ್ವಗತತ್ವವು ಪ್ರತಿಪಾದಿಸಲ್ಪಟ್ಟಿತೋ ಅದು ವಿಷ್ಣುವಿಗೆ ಸರ್ವತ್ರ ಸ್ಥಿತಿರೂಪವಾದ ಲಿಂಗವು. (2) 'ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತಿ' ಇತ್ಯಾದಿವಾಕ್ಯಗಳನ್ನು ಉದಾಹರಿಸಿ 'ಅತ್ತಾ ಚರಾಚರಗ್ರಹಣಾತ್' ಎನ್ನುವಲ್ಲಿ ಯಾವುದು ಸಂಹಾರವು ಶ್ರೀ ವಿಷ್ಣುವಿಗೆ ಪ್ರತಿಪಾದಿಸ ಲ್ಪಟ್ಟದೋ ಅದು ಕ್ರಿಯಾಲಿಂಗವು. (3) 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ' ಇತ್ಯಾದಿವಾಕ್ಯಗಳನ್ನುದಾಹರಿಸಿ 'ಗುಹಾಂಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎನ್ನುವಲ್ಲಿ ಯಾವ ಶುಭಪಾನವು ವಿಷ್ಣುವಿಗೆ ಪ್ರತಿಪಾದಿಸಲ್ಪಟ್ಟಿದೆಯೋ ಅದೂ ಕ್ರಿಯಾಲಿಂಗವು. (4) 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ ಇತಿ ಹೋವಾಚ' ಇತ್ಯಾದಿ ವಾಕ್ಯಗಳನ್ನುದಾಹರಿಸಿ 'ಅಂತರ ಉಪಪತ್ತೇಃ' ಎನ್ನುವಲ್ಲಿ ಚಕ್ಷು ರಾದ್ಯಂತಃ ಸ್ಥಿತಿಯಿಂದ ಯುಕ್ತವಾದ ರಮಣವು ಶ್ರೀ ವಿಷ್ಣುವಿಗೆ ಪ್ರತಿಪಾದಿಸಲ್ಪಟ್ಟದೋ ಅದು ಕ್ರಿಯಾಭಾವಲಿಂಗವು. (5) 'ಯಃಪೃಥಿವೀಮಂತರೋ ಯಮಯತಿ' ಇತ್ಯಾದಿ ವಾಕ್ಯ ಗಳನ್ನು ಉದಾಹರಿಸಿ 'ಅಂತರ್ಯಾಮ್ಯಧಿದೈವಾದಿಷು' ಎನ್ನುವಲ್ಲಿ ಪೃಥಿವ್ಯಾದ್ಯಂತಃ ಸ್ಥಿತ್ಯುಪೇತವಾದ ನಿಯಮನವು ಶ್ರೀ ವಿಷ್ಣುವಿಗೆ ಪ್ರತಿಪಾದಿಸಲ್ಪಟ್ಟದೋ, ಅದೂ ಕ್ರಿಯಾಭಾವ ಲಿಂಗವು. (6) 'ಯತ್ತದದ್ರೇಶ್ಯಮಗ್ರಾಹ್ಯಂ' ಇತ್ಯಾದಿ ವಾಕ್ಯಗಳನ್ನುದಾಹರಿಸಿ 'ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ' ಎನ್ನುವಲ್ಲಿ ಯಾವ ಅದೃಶ್ಯಾದಿ ಶಬ್ದವಾಚ್ಯವಾದ ವಸ್ತ್ವಂತರಾ

ನ್ಯೋನ್ಯಾಭಾವವು ಶ್ರೀ ವಿಷ್ಣುವಿಗೆ ಪ್ರತಿಪಾದಿಸಲ್ಪಟ್ಟದೋ ಅದು ಅಭಾವಾತ್ಮಕವಾದ ಲಿಂಗವು. (7) 'ವೈಶ್ವಾನರಃ ಸಾಧಾರಣಶಬ್ದವಿಶೇಷಾತ್' ಎನ್ನುವಲ್ಲಿ 'ಆತ್ಮಾನಂ ವೈಶ್ವಾನರಮುಪಾಸ್ತೇ ಯೋನ್ನೇದಮನ್ನಂಪಚ್ಯತೇ' ಇತ್ಯಾದಿ ವಾಕ್ಯಗಳನ್ನುದಾಹರಿಸಿ ಪಚನ ಮೊದಲಾದ ಬಹು ಲಿಂಗಗಳಿಂದ ಕೂಡಿರುವ ವೈಶ್ವಾನರ ಶಬ್ದವು ಶ್ರೀವಿಷ್ಣುವಿಗೆ ಪ್ರತಿಪಾದಿಸಲ್ಪಟ್ಟದೆ

**ನ್ಯಾಯಸುಧಾ**— (1) ಹೇಗೆ ಪ್ರಥಮ ಪಾದದಲ್ಲಿ 'ಅಂತಸ್ತದ್ಧರ್ಮೋಪದೇಶಾತ್' ಎನ್ನುವಲ್ಲಿ ಲಿಂಗನಿರ್ಣಯವು ಬಹು ನಾಮುಗಳಿಗೆ ಸಮನ್ವಯಲಾಭಕ್ಕಾಗಿ ಎಂದು ಹೇಳಿಯದೋ ಹಾಗೆಯೇ ಬಹುಲಿಂಗಗಳ ಸಮನ್ವಯಲಾಭಕ್ಕಾಗಿ ನಾಮವಿಚಾರವು ಇಲ್ಲಿ ಮಾಡಲ್ಪಡುತ್ತದೆ. ಈ ಅಧಿಕರಣದಲ್ಲಿ ಅನೇಕ ಲಿಂಗಗಳಿಗೆ ಸಮನ್ವಯವನ್ನು ಮಾಡುವುದರಿಂದ ಇದಕ್ಕೆ ಲಿಂಗಪಾದಾಂತರ್ಭಾವವು ಯುಕ್ತವಾಗುತ್ತದೆ ॥ ೪ ॥ ಸೂ. ೮ ॥ ಅಧಿ. ೧ ॥

॥ **ಸರ್ವಗತತ್ವಾಧಿಕರಣವು ಸಮಾಪ್ತವಾಯಿತು.** ॥



# ಅತ್ತೃತ್ವಾಧಿಕರಣವು.

ಸಂಹಾರರೂಪವಾದ ಕ್ರಿಯಾತ್ಮಕ ಲಿಂಗಕ್ಕೆ ಸಮನ್ವಯವನ್ನು ಮಾಡುತ್ತಾರೆ.

**"ಓಂ ಅತ್ತಾ ಚರಾಚರಗ್ರಹಣಾತ್ ಓಂ"** ॥ ಸೂ. ೯ ॥

'ಸರ್ವಂ ವಾ ಅತ್ತಿ' ಎಂದು ಹೇಳಲ್ಪಟ್ಟ, ಅತ್ತೃಶಬ್ದವಾಚ್ಯನು ಬ್ರಹ್ಮನೇ, ಅದಿತಿಯಲ್ಲ. 'ಸರ್ವಂ' ಎನ್ನುವ ಪದದಿಂದ ಚೇತನಾಚೇತನಗಳನ್ನು ಅದ್ಯ (ಭಕ್ಷಣಕ್ಕೆ ಕರ್ಮ) ಗಳನ್ನಾಗಿ ಗ್ರಹಣಮಾಡಿರುವುದರಿಂದ.

(॥ **ಓಂ ಪ್ರಕರಣಾಚ್ಚ ಓಂ** )॥ ಸೂ. ೧೦ ॥

('ನೈವೇಹ ಕಿಂಚನಾಗ್ರ ಆಸೀತ್' ಇದು ಮೊದಲಾದ ನಿರವಕಾಶವಾದ ಬ್ರಹ್ಮಪ್ರಕರಣವಾಗಿರುವುದರಿಂದಲೂ ಅತ್ತೃಶಬ್ದವಾಚ್ಯನು ಬ್ರಹ್ಮನೇ) ॥ ಸೂ. ೧೦ ॥ ಅಧಿ ೨ ॥

(1) ವೃತ್ತಿಕಾರರು '**ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ । ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ**' ॥ (ಕಾಠ ಉ. ಪು. ೫೧) ಎನ್ನುವ ವಾಕ್ಯವನ್ನು ವಿಷಯವಾಕ್ಯವನ್ನಾಗಿ ಉದಾಹರಿಸಿ ಅತ್ತೃಶಬ್ದವಾಚ್ಯನನ್ನು ವಿಚಾರಮಾಡಿರುವರು. ಶ್ರೀಮದಾಚಾರ್ಯರು ಅದನ್ನುಬಿಟ್ಟು '**ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ**' (ಬೃ.೩.೨.೧.) ಎನ್ನುವ ವಾಕ್ಯವನ್ನು ವಿಷಯವಾಕ್ಯವನ್ನಾಗಿ ಇಟ್ಟುಕೊಂಡು ಅತ್ತೃಶಬ್ದವಾಚ್ಯನನ್ನು ವಿಚಾರಮಾಡಲು ಕಾರಣವೇನೆಂದರೆ—(೧) ಆಚಾರ್ಯರು ಉದಾಹರಿಸಿದ ವಿಷಯವಾಕ್ಯದಲ್ಲಿ 'ಅತ್ತುಮಧ್ರಿಯತ' 'ಸರ್ವಂ ವಾ ಅತ್ತೀತಿ' ಅತ್ತಾ ಎಂದು ಅತ್ತೃತ್ವವು ಸಾಕ್ಷಾತ್ತಾಗಿ ಪ್ರತೀತವಾಗುವುದು.ವೃತ್ತಿಕಾರರು ಉದಾಹರಿಸಿದ ವಿಷಯವಾಕ್ಯದಲ್ಲಿ ಓದನ ಉಪಸೇಚನ ಎನ್ನುವ

ಎರಡು ಪದಗಳಿಂದ ಉಪಲಕ್ಷ್ಯವನ್ನಾಗಿ ಇಟ್ಟುಕೊಳ್ಳಬೇಕು. (೨) ಭಾಷ್ಯಕಾರರು ಹೇಳಿದ ವಾಕ್ಯದಲ್ಲಿ ಅದಧಾತುವಿನ ಅನುಗತಿಯಿದೆ. ಉಪಲಕ್ಷಿತವೆಂದು ಇಟ್ಟುಕೊಂಡರೆ, ಭೋಕ್ತ್ರಾದಿ ಗಳಿಗೂ ಉಪಲಕ್ಷಿತತ್ವವು ಕೂಡುವಾಗ ಭೋಕ್ತೃಶಬ್ದದಲ್ಲಿ ಅದಧಾತ್ವನುಗತಿಯಿಲ್ಲ (೩) ಮತ್ತು ಭಾಷ್ಯಕಾರರು ಹೇಳಿದ ವಾಕ್ಯದಲ್ಲಿ 'ಚರಾಚರಗ್ರಹಣಾತ್' ಎನ್ನುವ ಹೇತುವು 'ಸರ್ವಂ ವಾ ಅತ್ತಿ' ಎನ್ನುವುದರಿಂದ ಕಂಠೋಕ್ತವಾಗಿದೆ. ಆ ವೃತ್ತಿಕಾರರ ವ್ಯಾಖ್ಯಾನದಲ್ಲಿ ಬ್ರಹ್ಮ-ಕ್ಷತ್ರ-ಮೃತ್ಯುಪದ ಗಳಿಂದ ಚೇತನಾಚೇತನಗಳಿಗೆ ಉಪಲಕ್ಷಣವು ಹೀಗೆ ವೃತ್ತಿಕಾರರ ವ್ಯಾಖ್ಯಾನಕ್ಕಿಂತ ಆಚಾರ್ಯರ ವ್ಯಾಖ್ಯಾನದಲ್ಲಿ ಮಹಾ ವಿಶೇಷವದೆ. (೪) ಹಾಗಾದರೆ ಶ್ರುತ್ಯನುಗಮಕ್ಕಾಗಿ 'ಸರ್ವ ಗ್ರಹಣಾತ್' ಎಂದು ಸೂತ್ರಕಾರರು ಏಕೆ ಮಾಡಲಿಲ್ಲವೆಂದರೆ—'ಸರ್ವಗ್ರಹಣಾತ್' ಎಂದು ಹೇಳಿದರೆ ಸರ್ವ ಶಬ್ದಾರ್ಥವನ್ನು ಸಂಕೋಚಮಾಡಿಕೊಂಡು ಅದಿತಿಯೂ ಸ್ವಭೋಗ್ಯವಾದ ಅನ್ನಪಾನಾದಿಗಳೆಲ್ಲ ವನ್ನು ಭೋಗಿಸುವಳು ಎಂದು ಪೂರ್ವಪಕ್ಷಿಗಳಿಗೆ ಹೇಳಲಿಕ್ಕೆ ಬರಬಹುದು. ಹಾಗೆ ಸರ್ವ ಶಬ್ದಾರ್ಥವನ್ನು ಸಂಕೋಚಮಾಡಬಾರದು. ಮತ್ತೆ 'ಸ ತಯಾ ವಾಚಾ' ಇತ್ಯಾದಿ ಪೂರ್ವ ವಾಕ್ಯವನ್ನು ಪರ್ಯಾಲೋಚಿಸಿ ಚೇತನಾಚೇತನಾತ್ಮಕವಾದ ಎಲ್ಲಾ ವಸ್ತುಗಳನ್ನು ಹೇಳುತ್ತದೆ ಎನ್ನುವ ಮಹಾಪ್ರಯೋಜನಕ್ಕಾಗಿ 'ಚರಾಚರ' ಎನ್ನುವ ಪದವನ್ನು ಗ್ರಹಣಮಾಡಿದ್ದು. (2) ಈ ಅಧ್ಯಾಯದಲ್ಲಿ ಸಮನ್ವಿಯವಾದುದೆಲ್ಲವೂ ಲಕ್ಷಣವಾಗಿಯೇ ಪ್ರಕೃತವಾಗಿದೆ, ಎಂದು ಆನಂದಮಯಾಧಿಕರಣದ ಅಂತ್ಯದಲ್ಲಿ 'ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ' ಇತ್ಯಾದಿಗಳಿಂದ ಹೇಳಲ್ಪಟ್ಟದೆ. ಲಕ್ಷಣವೂ ಲಕ್ಷ್ಯನಾದ ಬ್ರಹ್ಮನಿಂದ ಅಭಿನ್ನವೆಂದು 'ಲಕ್ಷ್ಯ ಲಕ್ಷಣಯೋರ್ಭೇದಃ' ಎಂದಾರಂಭಿಸಿ 'ಅತೋಽನಂತಗುಣಂ ಬ್ರಹ್ಮ ನಿರ್ಭೇದಮಪಿ ಭಣ್ಯತೇ' ಎನ್ನುವ ಪರ್ಯಂತ ಗ್ರಂಥಗಳಿಂದ ಪ್ರತಿಪಾದಿತವಾಗಿದೆ. (3) ಈ ಅಧಿಕರಣದಲ್ಲಿ ಕ್ರಿಯಾಲಿಂಗಕ್ಕೆ ಸಮನ್ವಯವೆಂದು ಹೇಳಿಯದೆ. ಅಂತೂ ಆ ಅದನಾದಿ ಕ್ರಿಯೆಗಳು ಶ್ರೀ ಪರ ಮಾತ್ಮನ ಸ್ವರೂಪಗಳೆಂದು ಹೇಳಿದಂತೆ ಆಯಿತು. ಅದನ್ನು ಆಕ್ಷೇಪಿಸಿ ಪರಿಹರಿಸುತ್ತಾರೆ—

**ಮೂ || ಅನಿತ್ಯತ್ವಾತ್ಕ್ರಿಯಾಣಾಂ ತು ಕಥಮೇವ ಸ್ವರೂಪತಾ ।**
**ಇತಿಚೇನ್ನ ವಿಶೇಷೋಽಪಿ ಕ್ರಿಯಾಶಕ್ತ್ಯಾತ್ಮನಾ ಸ್ಥಿತ(ರಃ) || ೫ ||**

ಅ || ಕ್ರಿಯಾಣಾಂ ತು = ಅದನ ಪಾನ ಮೊದಲಾದ ಕ್ರಿಯೆಗಳಿಗಾದರೂ, ಅನಿತ್ಯ ತ್ವಾತ್=ನಿತ್ಯತ್ವವಿಲ್ಲದಿರುವುದರಿಂದ, ಅಂದರೆ ಕ್ರಿಯೆಗಳು ಅನಿತ್ಯಗಳಾಗಿರುವುದರಿಂದ, ಸ್ವರೂ ಪತಾ=ನಿತ್ಯನಾದ ಪರಮೇಶ್ವರನ ಸ್ವರೂಪತ್ವವು, ಕಥಮೇವ=ಹೇಗೆತಾನೇ ಕೂಡಬಹುದು. (ಹೇಗೂ ಕೂಡಲಾರದು.) ಇತಿ ಚೇತ್=ಎಂದು ಶಂಕಿಸಿದರೆ— (ನ=ಹಾಗೆ ಹೇಳಕೂಡದು. ಈಶ್ವರನು ಮಾತ್ರ ಸ್ಥಿರನಲ್ಲ ಮತ್ತೆ) ಸಃ=ಈಶ್ವರಸಂಬಂಧಿಯಾದ, ವಿಶೇಷೋಽಪಿ=ಧರ್ಮವೂ ಕೂಡ, ಕ್ರಿಯಾ=ಕ್ರಿಯಾರೂಪವಾದುದು, ಶಕ್ತ್ಯಾತ್ಮನಾ=ಶಕ್ತಿರೂಪದಿಂದ ಯಾವಾಗಲೂ ಇದ್ದಪ್ರಯುಕ್ತ, ಸ್ಥಿರಃ=(ಯಾವ ಕಾರಣದಿಂದ) ನಿತ್ಯವಾಗಿಯದೋ, ಆದಪ್ರಯುಕ್ತ ಹಾಗೆ ಹೇಳಕೂಡದು. ಅಥವಾ ಸರ್ವಗತತ್ವಮೊದಲಾದ ಆ ವಿಶೇಷವು ಮಾತ್ರ ನಿತ್ಯವಲ್ಲ. ಮತ್ತೆ ಪರಮೇಶ್ವರನ ಸಂಬಂಧಿಯಾದ ಎಲ್ಲಾಕ್ರಿಯೆಗಳು ನಿತ್ಯಗಳಾಗಿವೆ.

ತಾ || ನ್ಯಾಯಸುಧಾ—(1)ಪರಮೇಶ್ವರನು ನಿತ್ಯನೆಂದು 'ಜನ್ಮಾದ್ಯಸ್ಯಯತಃ' ಎನ್ನುವ ಸೂತ್ರದಲ್ಲಿ ಹೇಳಿರುತ್ತದೆ. ತಾನು ಅನಿತ್ಯನಾದರೆ ಸಕಲ ವಸ್ತುಗಳಿಗೂ ಕಾರಣನೆನ್ನುವುದು ಕೂಡಲಾರದು. (2) ಹಾಗಾದರೆ ಶ್ರೀ ಹರಿಯೂ ಪ್ರಪಂಚದಿಂದ ಹುಟ್ಟತಕ್ಕವನಾದಪ್ರಯುಕ್ತ

ಪ್ರಪಂಚವೇ ಶ್ರೀ ಹರಿಗೆ ವಿನಾಶಕವಾಗಲಿ ಎಂದರೆ— ಯಾವ ಬ್ರಹ್ಮನು ಯಾವ ಪ್ರಪಂಚವನ್ನು ಸೃಷ್ಟಿಸಿದವನೋ ಆ ಬ್ರಹ್ಮನನ್ನು ಈ ಪ್ರಪಂಚವು ಸೃಷ್ಟಿಸಿದ್ದೆಂದು ಕೂಡಲಾರದು. ಯಾವ ಬ್ರಹ್ಮನು ಯಾವ ಪ್ರಪಂಚವನ್ನು ನಾಶಮಾಡುತ್ತಾನೋ, ಆ ಪ್ರಪಂಚವು ಆ ಬ್ರಹ್ಮನನ್ನು ನಾಶ ಮಾಡುತ್ತದೆನ್ನುವುದೂ ಕೂಡಲಾರದು. ಕ್ರಿಯೆಗಳಿಗಾದರೂ ಅನಿತ್ಯತ್ವವು ಸುಪ್ರಸಿದ್ಧವಾಗಿದೆ. ತಥಾಚ ನಿತ್ಯಾನಿತ್ಯಗಳಿಗೆ ಅಭೇದವು ಹೇಗೆ ಬರುವುದು? 'ಕ್ರಿಯಾ ಬ್ರಹ್ಮಣೋ ನಾಭಿನ್ನೇ ನಿತ್ಯತ್ವಾ ನಿತ್ಯತ್ವರೂಪ ವಿರುದ್ಧಧರ್ಮಾಧಿಕರಣತ್ವಾತ್ ಯತ್ ಯದ್ವಿರುದ್ಧಧರ್ಮಾಧಿಕರಣಂ ತತ್ ತನ್ನ ಯಥಾ ಘಟಪಟೌ'=ಅದನ ಮೊದಲಾದ ಕ್ರಿಯೆ, ಪರಬ್ರಹ್ಮ ಇವೆರಡು ಅಭಿನ್ನಗಳಲ್ಲ. ನಿತ್ಯತ್ವ, ಅನಿತ್ಯತ್ವರೂಪ ವಿರುದ್ಧಧರ್ಮಕ್ಕೆ ಆಶ್ರಯಗಳಾಗಿರುವುದರಿಂದ, ಯಾವುದು ಯಾವುದರ ವಿರುದ್ಧಧರ್ಮಕ್ಕೆ ಆಶ್ರಯವಾಗುತ್ತದೋ ಅದು ಅದಲ್ಲ. ಘಟ-ಪಟಗಳಂತೆ-ವಿರುದ್ಧಧರ್ಮ ಗಳು ಇರತಕ್ಕವುಗಳಾದ ಪ್ರಯುಕ್ತ ಘಟವು ಪಟವಾಗಲಿಕ್ಕಿಲ್ಲ. ಪಟವು ಘಟವಾಗಲಿಕ್ಕಿಲ್ಲ, ಎನ್ನುವ ಅನುಮಾನವು ಉಕ್ತವಾಯಿತು. ವಿರುದ್ಧಧರ್ಮಗಳಿದ್ದರೆ ವಸ್ತುಗಳಿಗೆ ಭೇದವು ಎನ್ನುವ ವ್ಯಾಪ್ತಿಯು ಸಿದ್ಧವಾಗಿದೆ. ವಿರುದ್ಧಧರ್ಮವತ್ವವೂ ಪದಾರ್ಥಗಳಿಗೆ ಭೇದಸಾಧಕವಾಗದಿದ್ದರೆ ಜಗತ್ತಿನಲ್ಲಿಯೇ ಭೇದವಿಲ್ಲವೆಂದಾಗಬೇಕಾಗುವುದು. ಆದಪ್ರಯುಕ್ತ ಯಾವದ್ದ್ರವ್ಯಭಾವಿ ಗಳಾದ ಸರ್ವಗತತ್ವಾದಿಗಳಿಗೆ ಅಭೇದವು ಯುಕ್ತವಾದಾಗ್ಯೂ ಅದನಾದಿ ಕ್ರಿಯೆಗಳಿಗೆ ಕೂಡ ಲಾರದು, ಎಂದಾಶಂಕಿಸಿದರೆ— 'ಇತಿ ಚೇತ್' ಇತ್ಯಾದಿಗಳಿಂದ ಪರಿಹರಿಸುತ್ತಾರೆ— ಈಶ್ವರನು ಮಾತ್ರ ಸ್ಥಿರನಲ್ಲ. ಮತ್ತೆ ಈಶ್ವರನಿಗೆ ಕ್ರಿಯಾರೂಪವಾದ ಧರ್ಮವೂ ಸ್ಥಿರವಾಗಿದೆ. (3) ಕ್ರಿಯೆ ಗಳಿಗೆ ಪರಮೇಶ್ವರನಿಂದ ಐಕ್ಯವಿದ್ದಾಗ್ಯೂ 'ಅತೋಽನಂತಗುಣಂ ಬ್ರಹ್ಮ ನಿರ್ಭೇದಮಪಿ ಭಣ್ಯತೇ' ಇತ್ಯಾದಿಗಳಲ್ಲಿ ಹೇಳಿದ ನ್ಯಾಯದಿಂದಲೂ, ಭಕ್ತಿಪಾದದಲ್ಲಿ ಅಹಿಕುಂಡಲಾಧಿಕರಣ ದಲ್ಲಿ ಹೇಳಲ್ಪಡತಕ್ಕ ನ್ಯಾಯದಿಂದಲೂ, ಅಂದರೆ ಭಗವದ್ಧರ್ಮಗಳಿಗೆ ಶ್ರೀ ಹರಿಯಿಂದ ಸವಿ ಶೇಷಾಭೇದವನ್ನು ಸಾಧಿಸಿಕೊಡುವ ನ್ಯಾಯದಿಂದ ಈಶ್ವರ ಧರ್ಮತ್ವವನ್ನೂ ಅಂಗೀಕರಿಸ ಬೇಕು ಎಂದು ತಿಳಿಸಿಕೊಡುವುದಕ್ಕಾಗಿ 'ವಿಶೇಷಃ' ಎನ್ನುವ ಪದವು. ಇಲ್ಲವಾದರೆ 'ಕ್ರಿಯಾ ಸ್ಥಿರಾ' ಎಂದೇ ಹೇಳಬಹುದಿತ್ತು. (4) ಈಶ್ವರನ ಕ್ರಿಯೆಗಳಿಗೂ ನಿತ್ಯತ್ವವನ್ನು ಪ್ರತಿಜ್ಞಾ ಮಾಡಿದರಿಂದ ವಿರುದ್ಧಧರ್ಮಾಧಿಕರಣತ್ವರೂಪವಾದ ಹೇತುವಿಗೆ ಅಸಿದ್ಧಿಯು (ಪಕ್ಷದಲ್ಲಿ ಹೇತು ವಿಲ್ಲವೆಂದು) ಹೇಳಿದಹಾಗಾಯಿತು. ಹೇಗೆಂದರೆ— ಈಶ್ವರ ಕರ್ತೃಕಗಳಾದ ಸಂಹರಣಾದಿ ಕ್ರಿಯೆಗಳು ಅನಿತ್ಯಗಳೆಂದು ಪ್ರಮಾಣಗಳ ಸಾಮರ್ಥ್ಯದಿಂದ ಅಂಗೀಕರಿಸಲ್ಪಡುವುದೋ? ಅಥವಾ ನಿತ್ಯಗಳೆಂದು ಹೇಳಿದರೆ ಬಾಧಕವಿದ್ದಪ್ರಯುಕ್ತವೋ? ಅಥವಾ ನಿತ್ಯತ್ವಸಾಧಕವಾದ ಪ್ರಮಾಣವಿಲ್ಲದಿರುವಪ್ರಯುಕ್ತವೋ? ೧ನೇದ್ದು (ಕ್ರಿಯೆಯು ಅನಿತ್ಯವೆಂದು ಪ್ರಮಾಣಗಳ ಸಾಮರ್ಥ್ಯದಿಂದ ಅಂಗೀಕರಿಸುತ್ತೇವೆಂದು) ಹೇಳಕೂಡದು. ಪ್ರಮಾಣವನ್ನು ಹೇಳುವುದಾದರೆ ೧ ಪ್ರತ್ಯಕ್ಷವನ್ನಾಗಲೀ, ೨ ಅನುಮಾನವನ್ನಾಗಲೀ, ೩ ಆಗಮವನ್ನಾಗಲೀ ಹೇಳಬೇಕು. ಅದರಲ್ಲಿ ೧ ಈಶ್ವರನೂ, ಈಶ್ವರನಕ್ರಿಯೆಯೂ ಅತೀಂದ್ರಿಯವಾಗಿರುವುದರಿಂದ ಕ್ರಿಯೆಯು ಅನಿತ್ಯವೆಂದು ಪ್ರತ್ಯಕ್ಷದಿಂದ ತಿಳಿಯುವುದು ಅಶಕ್ಯವು. ೨ ನಿರ್ದುಷ್ಟವಾದ ಲಿಂಗವಿಲ್ಲದಿರುವುದ ರಿಂದ ಅನುಮಾನದಿಂದ ಈಶ್ವರನ ಕ್ರಿಯೆಯು ಅನಿತ್ಯವೆನ್ನುವುದು ಕೂಡಲಾರದು. ೩ ಆಗಮ ದಿಂದಲೂ ಈಶ್ವರನ ಕ್ರಿಯೆಯು ಅನಿತ್ಯವೆಂದು ತಿಳಿಯುವುದಿಲ್ಲ. ಏಕೆಂದರೆ— ಆ ಆಗಮವು ಈಶ್ವರನ ಕ್ರಿಯೆಯು ಅನಿತ್ಯವು ಈ ಪ್ರಕಾರವಾದುದೋ? 'ಸ ಇಮಾನ್ ಲೋಕಾನಸೃಜತ' ಏತದ್ರೂಪವಾದುದೋ?(ಅಸೃಜತ ಎನ್ನುವ ಭೂತಾರ್ಥಕವಾದ ಲಙ್‌ನಿಂದ ಅತೀತಕಾಲಸಂಬಂ ಧವು ಸರ್ಜನಕ್ರಿಯೆಗೆ ತೋರುವುದರಿಂದ ಅನಿತ್ಯವೆಂದು ತಿಳಿಯತಕ್ಕದ್ದು.) ೧ನೇದ್ದು ಈಶ್ವರ

ಕ್ರಿಯೆಯೂ ಅನಿತ್ಯವು ಎಂದು ತಿಳಿಸುವ ಆಗಮವು ಇರುವುದಿಲ್ಲ. ೨ನೇದ್ದು ಅಂದರೆ 'ಸ ಇಮಾನ್ ಲೋಕಾನಸೃಜತ' ಏತದ್ರೂಪವಾದುದು ಎಂದು ಇಟ್ಟುಕೊಂಡರೆ 'ಸ ಐಕ್ಷತ ಸೋಽಕಾಮ ಯತ' ಇತ್ಯಾದಿಗಳಿಂದ ಸಮಾನವಾಗಿದೆ. ಅಂದರೆ, ಈಶ್ವರನ ಕ್ರಿಯೆಗೆ ಅನಿತ್ಯತ್ವವನ್ನು ಆಗಮಗಳ ಸಾಮರ್ಥ್ಯದಿಂದ ಅಂಗೀಕರಿಸುವುದಾದರೆ ಜ್ಞಾನಾದಿಗಳಿಗೂ ಆಗಮಬಲದಿಂದಲೇ ಅನಿತ್ಯತ್ವವನ್ನು ಏಕೆ ಅಂಗೀಕರಿಸಬಾರದು? ಅಲ್ಲಿಯೂ ಭೂತಾರ್ಥಕವಾದ ಲಙ್ ಇರುವುದು. ಹಾಗಾದರೆ ಈಶ್ವರನ ಸಂಹರಣಾದಿ ಕ್ರಿಯೆಗಳು ನಿತ್ಯಗಳೆಂದು ಇಟ್ಟುಕೊಂಡರೆ ಬಾಧಕವಿದ್ದ ಪ್ರಯುಕ್ತ ಅನಿತ್ಯಗಳೆಂದು ಅಂಗೀಕರಿಸುತ್ತೇವೆ ಎನ್ನುವ ೨ನೇ ಪಕ್ಷವಾಗಲಿ. (ನಿತ್ಯಗಳೆಂದು ಇಟ್ಟುಕೊಂಡರೆ ಬಾಧಕಗಳು ಯಾವುವೆಂದರೆ—) ಈಶ್ವರನ ಕ್ರಿಯೆಗಳು ಸರ್ವದಾ ಇರತಕ್ಕವು ಗಳಾದಪ್ರಯುಕ್ತ ಸೃಷ್ಟಿಮಾಡುವ ಕಾಲದಲ್ಲಿಯೂ ಸಂಹಾರಕ್ರಿಯೆಯು ಇರುವುದಾದರೆ ಆಗ ಹಾಗೆಯೇ ಶ್ರುತ್ಯಾದಿಗಳಲ್ಲಿ ತೋರಬೇಕಾಗುವುದು. ಘಟಕ್ಕೆ ಏಕಕಾಲದಲ್ಲಿಯೇ ಉತ್ಪತ್ತಿವಿನಾಶ ಗಳು ಬರಬೇಕಾಗುವುವು. (5) ಮತ್ತು ಈಶ್ವರನ ಕ್ರಿಯೆಯು ನಿತ್ಯವಾಗಿದ್ದರೆ ಆಗ ಸಂಯೋಗ ವಿಭಾಗಗಳನ್ನು ಕುರಿತು ಕಾರಣಾಂತರವನ್ನು ಅಪೇಕ್ಷಿಸದೇನೇ ಕರಣವಾಗಿರುವುದರಿಂದ ಸರ್ವದಾ ಸಂಯೋಗವಿಭಾಗಗಳ ಉತ್ಪತ್ತಿಯಾಗಬೇಕಾಗುವುದು. (6) ಮತ್ತು ಈಶ್ವರನ ಕ್ರಿಯೆಯು ೧ ಸಂಯೋಗ ವಿಭಾಗಗಳನ್ನು ಮಾಡುತ್ತದೋ? ೨ ಇಲ್ಲವೋ? ೨ ಇಲ್ಲವೆಂದಾದರೆ 'ಸಂಯೋಗ, ವಿಭಾಗಾಸಮವಾಯಿಕಾರಣಂ ಕರ್ಮ' ಎಂದು ಕರ್ಮಲಕ್ಷಣವಾಗಿರುವುದ ರಿಂದ ಕ್ರಿಯಾತ್ವವೇ ವ್ಯಾಹತವಾಗುವುದು. ೧ನೇ ಕಲ್ಪದಲ್ಲಿಯೂ ಅಂದರೆ, ಈಶ್ವರನ ಕ್ರಿಯೆಯು ಸಂಯೋಗವಿಭಾಗಗಳನ್ನು ಮಾಡುತ್ತದೆ ಎನ್ನುವ ಕಲ್ಪದಲ್ಲಿಯೂ, ಈಶ್ವರ ಕ್ರಿಯೆಯು ತನ್ನ ಸತ್ವದ (ಇರುವಿಕೆಯ) ಉತ್ತರಕ್ಷಣದಲ್ಲಿಯೇ ಸಂಯೋಗ ವಿಭಾಗಗಳನ್ನು ಮಾಡುತ್ತದೋ? ೨ ಕೆಲವು ಕ್ಷಣಗಳ ವ್ಯವಧಾನದಿಂದ ಸಂಯೋಗ ವಿಭಾಗಗಳನ್ನು ಮಾಡುತ್ತದೋ? ಈ ಎರಡ ರಲ್ಲಿ ಒಂದನೇದ್ದು ಕೂಡಲಾರದು ಈಶ್ವರಕ್ರಿಯಾಸತ್ವಕ್ಕೆ ಇದೇ ಮೊದಲು ಎಂದು ಇಲ್ಲದಿರು ವುದರಿಂದ ಯಾವ ಕ್ಷಣದಲ್ಲಿ ಸಂಯೋಗ ವಿಶೇಷಾದಿಗಳು ಆಗುತ್ತವೆಂದು ನೀವು ಹೇಳುತ್ತೀರೋ ಆ ಕ್ಷಣಕ್ಕಿಂತ ಮೊದಲೂ ಸಂಯೋಗವಿಶೇಷಾದಿಗಳು ಹುಟ್ಟಬೇಕಾಗುವುವು. ಕ್ರಿಯೆಯು ಆ ಕ್ಷಣಕ್ಕಿಂತ ಮೊದಲೂ ಇದೆ. ೨ ಕೆಲವುಕ್ಷಣಗಳ ವ್ಯವಧಾನದಿಂದ ಈಶ್ವರ ಕ್ರಿಯೆಯು ಸಂಯೋಗ ವಿಭಾಗಗಳನ್ನು ಮಾಡುತ್ತದೆ ಎನ್ನುವ ಎರಡನೇ ಪಕ್ಷವೂ ಕೂಡುವುದಿಲ್ಲ. ಏಕೆಂದರೆ— ಪೂರ್ವಕ್ಷಣಕ್ಕಿಂತ ಉತ್ತರಕ್ಷಣದಲ್ಲಿ ಕಿಂಚಿದ್ವೈಲಕ್ಷಣ್ಯವು ಕ್ರಿಯೆಯಲ್ಲಿ ಬರುತ್ತದೆಂದಾದರೆ ಆಗ ಅದರ ವೈಲಕ್ಷಣ್ಯವು ಪೂರ್ವಪೂರ್ವಕ್ಷಣದಲ್ಲಿ ಇಲ್ಲದಿರುವುದರಿಂದ ವಿರಮ್ಯ ವ್ಯಾಪಾರವು ಯುಕ್ತವಾಗಬಹುದಿತ್ತು. ಇಂತಹ ವೈಲಕ್ಷಣ್ಯವು ಕಾಣದಿರುವುದರಿಂದ ವಿರಮ್ಯ ವ್ಯಾಪಾರವು ಕೂಡಲಾರದು. ಉತ್ತರ ಸಂಯೋಗವು ಕರ್ಮ ವಿನಾಶಕವಾಗಿರುವುದರಿಂದ ಸಂಯೋಗವನ್ನು ಹುಟ್ಟಿಸಿದ ಕರ್ಮಕ್ಕೆ ಅವಸ್ಥಿತಿಯೇ ಕೂಡಲಾರದು. ಎಂದರೆ— 'ಶಕ್ತ್ಯಾತ್ಮನಾ ಸ್ಥಿರಃ' ಎಂದು ಹೇಳಿರುವರು. ಅಂದರೆ, ಆಯಾಯ ಕಾರ್ಯವನ್ನು ಹುಟ್ಟಿಸುವ ಶಕ್ತಿಯೇ ಕ್ರಿಯೆಯೆನ್ನಿ ಸುತ್ತದೆ. ಆದಪ್ರಯುಕ್ತ ಶಕ್ತಿರೂಪದಿಂದ ಸ್ಥಿರವಾದ(ನಿತ್ಯವಾದ) ಈಶ್ವರ ಕ್ರಿಯೆಯು ಯಾವಾಗ ವ್ಯಕ್ತವಾಗುತ್ತದೋ ಆಗ ವ್ಯವಹಾರ ವಿಷಯವಾಗುತ್ತದೆ. ಆಯಾಯ ಕಾರ್ಯಗಳನ್ನೂ ಹುಟ್ಟಿಸುತ್ತದೆ, ಯಾವ ದೋಷವೂ ಇರುವುದಿಲ್ಲ. (7) ಅಥವಾ ಕ್ರಿಯಾ ಶಕ್ತ್ಯಾತ್ಮನಾ=ವ್ಯಕ್ತಿ ಶಕ್ತಿರೂಪಕಾರಣದಿಂದ ವಿಶೇಷವು ಸ್ಥಿರವಾಗಿದೆ. ಅಂದರೆ, ವ್ಯಕ್ತಿರೂಪತ್ವ, ಶಕ್ತಿರೂಪತ್ವಗಳೆಂದು ಕ್ರಿಯೆಗೆ ದ್ವಿರೂಪತ್ವವಿದ್ದುದರಿಂದ (ಕ್ರಿಯೆಯು ಎರಡು ಪ್ರಕಾರವಾಗಿರುವುದರಿಂದ) ಕ್ರಿಯಾ ರೂಪವಾದವಿಶೇಷವು ಸ್ಥಿರವೆಂದು ಯುಕ್ತವು. ಶಕ್ತಿರೂಪದಿಂದ ಸ್ಥೈರ್ಯವೂ, ಕದಾಚಿತ್ ವ್ಯಕ್ತವಾಗುತ್ತದೆಂದು ಇಟ್ಟುಕೊಂಡು ಬಾಧಕ ಪರಿಹಾರವೂ ಕೂಡುತ್ತದೆ.

(8) ಹಾಗಾದರೆ ಶಕ್ತಿಗೆ ವ್ಯಕ್ತಿಯೆಂದರೆ ಯಾವುದು? ಪ್ರತೀತಿಯು ಎಂದು ಹೇಳಕೂಡದು, ಏಕೆಂದರೆ ಪ್ರತೀತಿಯು (೧) ಈಶ್ವರನಿಗೆಹೇಳಲ್ಪಡುತ್ತದೋ? (೨) ಬೇರೆಯುವರಿಗೋ? ೧ನೇದ್ದು ಕೂಡಲಾರದು. ಈಶ್ವರನಿಗೆ ಶಕ್ತಿಪ್ರತೀತಿಯು ನಿತ್ಯಸಿದ್ಧವಾಗಿರುವುದರಿಂದ ಸೃಷ್ಟಿಸಮಯ ದಲ್ಲಿಯೂ ಸಂಹಾರಕ್ರಿಯೆಯು ಇರುವುದಾದರೆ ಶ್ರುತ್ಯಾದಿಗಳಲ್ಲಿ ಹಾಗೆಯೇ ಇರಬೇಕಿತ್ತು. ಇದು ಮೊದಲಾದ ಹಿಂದಿನ ದೋಷಗಳು ಬರುತ್ತವೆ. ೨ನೇದ್ದು (ಬೇರೆಯುವರಿಗೆ ಎನ್ನುವುದು) ಕೂಡಲಾರದು. ಭಗವಂತನ ಶಕ್ತಿಯು ಅತೀಂದ್ರಿಯವಾಗಿರುವುದರಿಂದ ಪರರಿಗೆ ಭಗವಂತನ ಶಕ್ತಿಪ್ರತೀತಿಯು ಯಾವಾಗಲೂ ಇರುವುದಿಲ್ಲ. (9) ಆಗಮಾದಿಗಳಿಂದ ಪರರಿಗೆ ಭಗವಂತನ ಶಕ್ತಿಜ್ಞಾನ ಬರುತ್ತದೆಂದರೆ— ಶಕ್ತಿಜ್ಞಾನಬಂದರೂ ಕಾರ್ಯವು ಹುಟ್ಟಲಿಕ್ಕೆ ಪರ ಪ್ರತೀತಿಯು ಅಪೇಕ್ಷೆಯಿರುವುದಿಲ್ಲ, ಅಂದರೆ ಇತರರಿಗೆ ಯಾವಾಗ ಭಗವಂತನ ಶಕ್ತಿಜ್ಞಾನವು ಬರುತ್ತದೋ ಆವಾಗಲೇ ಕಾರ್ಯವಾಗುತ್ತದೆ,ಶಕ್ತಿಪ್ರತೀತಿಯಾಗದಿದ್ದರೆ ಕಾರ್ಯವಾಗುವುದಿಲ್ಲವೆಂದು ಯುಕ್ತ ವಲ್ಲ. ಶಕ್ತಿಯು ಕಾರ್ಯಭೂತವಾದ ಕಾರ್ಯೋತ್ಪತ್ತಿಗೆ ಯಾವಾಗಲೂ ಪರಪ್ರತೀತಿಯು ಅಪೇಕ್ಷೆಯಿಲ್ಲದಿರುವುದರಿಂದ ಇತರರಿಗೆ ಶಕ್ತಿಯ ಪ್ರತೀತಿಯು ಆಗಲಿ, ಆಗದಿರಲಿ, ಕಾರ್ಯವಾದರೂ ಯಾವಾಗಲೂ ಆಗುವುದು. ತಥಾಚ ಕ್ರಿಯಾರೂಪಶಕ್ತಿಯಲ್ಲಿ ಪರಪ್ರತೀತಿ ರೂಪವಾದ ವ್ಯಕ್ತಿಯಿರುವಾಗ ಕಾರ್ಯೋತ್ಪತ್ತಿಯು. ಕಾರ್ಯೋತ್ಪತ್ತಿಯಿರುವಾಗ ಪರ ಪದಾರ್ಥಸಿದ್ಧ ಪರಪ್ರತೀತಿರೂಪವಾದ ವ್ಯಕ್ತಿಯು ಸಿದ್ಧಿಸುತ್ತದೆ. ಹೀಗೆ ಅನ್ಯೋನ್ಯಾಶ್ರಯವು. (10) ಆದಪ್ರಯುಕ್ತವೇ ಆವರಣನಿವೃತ್ತಿಯು ವ್ಯಕ್ತಿಯು ಎಂದು ಹೇಳಕೂಡದು. ಏಕೆಂದರೆ— ಈಶ್ವರನಿಗೆ ಆವರಣವೇ ಕೂಡಲಾರದು. ಇತರರಿಗಾದರೂ ಈಶ್ವರನ ಶಕ್ತಿಜ್ಞಾನಕ್ಕೆ ಪ್ರಸಕ್ತಿಯೇ ಇಲ್ಲದಿರುವುದರಿಂದ ಇತರರನ್ನು ಕುರಿತು ಆವರಣವನ್ನು ಕಲ್ಪಿಸಲಿಕ್ಕೇನೇ ಬಾರದಿರುವುದರಿಂದ ಪರರನ್ನು ಅಪೇಕ್ಷಿಸಿ ಯಾವಾಗಲೂ ಆವರಣನಿವೃತ್ತಿಯು ಕೂಡುವುದಿಲ್ಲ, ಇದ್ದರೂ ಕಾರ್ಯೋತ್ಪತ್ತಿಗೆ ಅದರ ಅಪೇಕ್ಷೆಯಿರುವುದಿಲ್ಲ, ಎಂದರೆ ಹೀಗೆ ಹೇಳಕೂಡದು. ವ್ಯಕ್ತಿಶಬ್ದ ದಿಂದ ಶಕ್ತಿಯು ಸೃಷ್ಟ್ಯಾದಿ ಕಾಲವಿಶೇಷಸಂಬಂಧರೂಪವಾದ ಅವಸ್ಥಾವಿಶೇಷವು ವಿವಕ್ಷಿತ ವಾಗಿದೆ. (11) ಸೃಷ್ಟಿಸಮಯದಲ್ಲಿಯೂ ಸಂಹಾರಕ್ರಿಯೆಯು ಇರುವುದಾದರೆ ಆಗ ಹಾಗೆಯೇ ವ್ಯವಹಾರವಿರಬೇಕಾಗುವುದು ಎಂದು ಯಾವುದು ಉಕ್ತವಾಗಿಯದೋ ಅದು ಅಯುಕ್ತವು. ವ್ಯಕ್ತಿರೂಪದಿಂದಲೇ ಅಂದರೆ, ಶಕ್ತಿಗೆ ಯಾವಾಗ ಸೃಷ್ಟ್ಯಾದಿ ಕಾಲವಿಶೇಷಸಂಬಂಧವು ಇದೆಯೋ ಆವಾಗಲೇ ವ್ಯವಹಾರವು ಬರುವುದು. (12) ಉತ್ಪತ್ತಿವಿನಾಶಗಳು ಏಕಕಾಲದಲ್ಲಿ ಬರಬೇಕಾ ಗುವವು ಎಂದು ಹೇಳಿದ್ದೂ ಸೃಷ್ಟ್ಯಾದಿ ಕಾಲವಿಶೇಷಸಂಬಂಧವುಳ್ಳ ಶಕ್ತಿಯೇ ಹುಟ್ಟಿಸತಕ್ಕದಾದ ಪ್ರಯುಕ್ತ ಅಯುಕ್ತವು. ಅಂದರೆ, ಶಕ್ತಿಗೆ ಸೃಷ್ಟಿಸಂಹಾರಕಾಲ ಸಂಬಂಧವು ಏಕಕಾಲದಲ್ಲಿ ಇಲ್ಲದಿರುವುದರಿಂದ ಏಕಕಾಲದಲ್ಲಿ ಸೃಷ್ಟಿಸಂಹಾರಗಳು ಆಗುವುದಿಲ್ಲ. (13) ಕ್ರಿಯೆಯು ನಿತ್ಯವಾದರೆ ನಿರಂತರದಲ್ಲಿಯೂ ಸಂಯೋಗವಿಭಾಗಗಳ ಉತ್ಪತ್ತಿಯು ಪ್ರಸಕ್ತವಾಗುವುದು ಎಂದು ಯಾವುದು ಉಕ್ತವಾಗಿಯದೋ ಅದೂ ಕೂಡ ಇದೇ ರೀತಿಯಾಗಿ ಪರಿಹೃತವಾಯಿತು. ಅಂದರೆ, ಸೃಷ್ಟ್ಯಾದಿ ಕಾಲವಿಶೇಷಸಂಬಂಧರೂಪವಾದ ವ್ಯಕ್ತ್ಯವಸ್ಥೆಯುಳ್ಳ ಶಕ್ತಿಯೇ ಸಂಯೋ ಗಾದಿಗಳನ್ನು ಹುಟ್ಟಿಸತಕ್ಕದಾದಪ್ರಯುಕ್ತ ವ್ಯಕ್ತ್ಯವಸ್ಥೆಯೂ ಯಾವಾಗಲೂ ಇಲ್ಲವಿರುವುದ ರಿಂದ ಯಾವಾಗಲೂ ಸಂಯೋಗಾದಿಗಳ ಉತ್ಪತ್ತಿಯು ಆಗುವುದಿಲ್ಲ. ಮತ್ತು ಕ್ರಿಯೆಯು ಸಂಯೋಗ ವಿಭಾಗಗಳನ್ನು ಕುರಿತು ಪರಾಪೇಕ್ಷೆಯಿಲ್ಲದೇನೇ ಕರಣವಾಗಿರುವುದರಿಂದ ಸರ್ವದಾ ಕ್ರಿಯೋತ್ಪತ್ತಿಯಾಗಬೇಕಾಗುವುದು ಎಂದಾಪಾದಿಸಿದರೆ ಪಟಸಾಮಗ್ರಿಯೂ ಪಟ ಹುಟ್ಟಲಿಕ್ಕೆ ಇತರವನ್ನು ಅಪೇಕ್ಷಿಸದೇನೇ ಕಾರಣವಾಗಿರುವುದರಿಂದ ಸರ್ವದಾ ಪಟವು ಹುಟ್ಟುತ್ತಲೇ ಇರ

ಬೇಕಾಗುವುದು. (14) ಹಾಗಾದರೆ ಪಟಸಾಮಗ್ರಿಯು ೧ ಪೂರ್ವದಲ್ಲಿ ಹುಟ್ಟಿರತಕ್ಕ ಪಟವನ್ನೇ ಹುಟ್ಟಿಸುವುದೋ? ೨ ಪಟಾಂತರವನ್ನೋ? ೧ನೇದ್ದು ಕೂಡಲಾರದು. ಪಟಪ್ರಾಗಭಾವವೂ ಪಟಸಾಮಗ್ರಿಯಲ್ಲಿಯೇ ಸೇರಿರುವುದರಿಂದ ಪಟವು ಹುಟ್ಟಿದಕೂಡಲೇ ಪಟಪ್ರಾಗಭಾವವು ನಷ್ಟವಾಗಿರುವುದರಿಂದ ಪಟಸಾಮಗ್ರಿಯೇ ಇಲ್ಲವೆಂದಾಯಿತು ೨ನೇದ್ದೂ (ಪಟಾಂತರವನ್ನು ಹುಟ್ಟಿಸುತ್ತದೆ ಎನ್ನುವುದೂ) ಕೂಡಲಾರದು. ಪೂರ್ವಪಟದಿಂದ ಪ್ರತಿಬದ್ಧವಾಗಿದೆ. ಅಂದರೆ, ಪಟಸಾಮಗ್ರಿಯಿಂದ ತಂತುವಿನಲ್ಲಿ ಪಟವು ಹುಟ್ಟಬೇಕು. ಆ ತಂತುವಿನಲ್ಲಿಪೂರ್ವಪಟವೇ ಪ್ರತಿಬಂಧಕವಾಗಿ ಇದ್ದಪ್ರಯುಕ್ತ ಪಟಾಂತರಕ್ಕೆ ಅವಕಾಶವಿರುವುದಿಲ್ಲ. ಆದಪ್ರಯುಕ್ತ ಸರ್ವದಾ ಪಟವು ಹುಟ್ಟಬೇಕಾಗುವುದು ಎನ್ನುವ ಆಪಾದನವು ಹೇಗೆ ಕೂಡುತ್ತದೆ ಎಂದರೆ– ಇದು ಪ್ರಕೃತದಲ್ಲಿಯೂ ಸಮಾನವೇ ಆಗಿದೆ. ಅಂದರೆ ಕ್ರಿಯಾರೂಪ ಸಾಮಗ್ರಿಯೂ ಆ ಸಂಯೋಗಾದಿಗಳನ್ನೇ ಹುಟ್ಟಿಸುವುದೋ? ಸಂಯೋಗಾಂತರವನ್ನೋ? ೧ನೇದ್ದು ಕೂಡಲಾರದು. ಸಂಯೋಗಾದಿಗಳ ಪ್ರಾಗಭಾವವು ಇಲ್ಲದಿರುವುದರಿಂದ ಸಾಮಗ್ರಿಯೇ ಇರುವುದಿಲ್ಲ ೨ನೇದ್ದೂ ಕೂಡಲಾರದು. ಪೂರ್ವ ಸಂಯೋಗಾದಿಗಳಿಂದಲೇ ಪ್ರತಿಬದ್ಧವಾಗಿದೆ. (15) ಈಶ್ವರನ ಕ್ರಿಯೆಯು ಸಂಯೋಗವಿಭಾಗಗಳನ್ನು ಮಾಡುತ್ತದೋ ಇಲ್ಲವೋ ಎಂದು ಯಾವುದು ಕೇಳಲ್ಪಟ್ಟದೋ ಆ ವಿಷಯದಲ್ಲಿ ಕೆಲವು ಕ್ಷಣಗಳ ವ್ಯವಧಾನದಿಂದ ಮಾಡುತ್ತದೆಂದೇ ಹೇಳುತ್ತೇವೆ. ವಿರಮ್ಯವ್ಯಾಪಾರವು ಕೂಡಲಿಕ್ಕಿಲ್ಲವೆನ್ನುವ ಅನುಪಪತ್ತಿಯು ಇರುವುದಿಲ್ಲ. ಏಕೆಂದರೆ, ಆ ಕ್ರಿಯೆಯು ಕಾಲವಿಶೇಷಸಂಬಂಧರೂಪವಾದವ್ಯಕ್ತಿಯಿಂದ ವಿಶಿಷ್ಟವಾಗಿದೆ. ಅಂತೂ ಪೂರ್ವೋತ್ತರಕ್ಷಣಗಳಲ್ಲಿ ಅವೈಲಕ್ಷಣ್ಯವೇ ಇರುವುದಿಲ್ಲ. (16) ಸಂಯೋಗವನ್ನು ಹುಟ್ಟಿಸಿದ ಈಶ್ವರಕರ್ಮಕ್ಕೆ ಅವಸ್ಥಿತಿಯೇ ಕೂಡಲಾರದು, ಎಂದೂ ಅಲ್ಲ. ಆ ವ್ಯವಸ್ಥೆಯು ಅನಿತ್ಯಕ್ರಿಯೆಗಳಲ್ಲಿ ಕೂಡಬಹುದು. ಈಶ್ವರನ ಕ್ರಿಯೆಯಾದರೂ ನಿತ್ಯವೇ ಆಗಿದೆ. (17) ಹಾಗಾದರೆ, ಸಂಹಾರಕಾಲದಲ್ಲಿ (೧) ಶಕ್ತಿಯು ವ್ಯಕ್ತವಾಗುತ್ತದೋ? (೨) ಇಲ್ಲವೋ? ಇಲ್ಲವಾದರೆ ಸಂಹಾರಕಾಲದಲ್ಲಿ ಸಂಹಾರವ್ಯವಹಾರವಾಗಲೀ ಸಂಹರಣರೂಪವಾದ ಅರ್ಥಕ್ರಿಯೆಯಾಗಲೀ ಹೇಗೆ ಕೂಡಬಹುದು? ೧ನೇ ಕಲ್ಪದಲ್ಲಿ (ಸಂಹಾರಕಾಲದಲ್ಲಿ ಶಕ್ತಿಯು ವ್ಯಕ್ತವಾಗುತ್ತದೆನ್ನುವ ಕಲ್ಪದಲ್ಲಿ) ಸೃಷ್ಟಿವ್ಯವಹಾರಾದಿಗಳು ಇಲ್ಲವೆಂದಾಗಬೇಕಾಗುವುದು ಎನ್ನುವುದು ಹೇಗೆ? ಅಂದರೆ ಶಕ್ತಿ (ಕ್ರಿಯೆ) ಯಲ್ಲಿರತಕ್ಕ, ಸಾಮಾನ್ಯತಃ ಕಾಲಸಂಬಂಧರೂಪವಾದ ವ್ಯಕ್ತಿಯು ಒಂದೇಯಾದುದರಿಂದ ವ್ಯಕ್ತಿಯು ಹುಟ್ಟಿರುವ ಪ್ರಯುಕ್ತ ಸೃಷ್ಟಿವ್ಯವಹಾರವಾಗಲೀ ಸೃಷ್ಟಿರೂಪಕ್ರಿಯೆಯಾಗಲೀ ಆಗಬೇಕಾಗುವುದು. ಎಂದರೆ, ಹೀಗೆ ಹೇಳಕೂಡದು. ಕ್ರಿಯೆಯಲ್ಲಿರತಕ್ಕ ವ್ಯಕ್ತಿಗೂ ಅವಾಂತರ ಅನಂತ ವಿಶೇಷಗಳಿದ್ದಾವೆಂದು ಅಂಗೀಕೃತವಾಗಿದೆ. ತಥಾಚ ವ್ಯಕ್ತಿಯೆಂದರೆ ಸಾಮಾನ್ಯವಾಗಿ ಕಾಲಸಂಬಂಧರೂಪವಾದುದು ವಿವಕ್ಷಿತವಾಗಲಿಲ್ಲ. ಹೇಗೆ ದೋಷ ಬರುವುದು? ಮತ್ತೆ ವ್ಯಕ್ತಿಯೆಂದರೆ ಆಯಾಯ ಕಾಲ ವಿಶೇಷಸಂಬಂಧರೂಪವಾದುದೇ. ಆದಪ್ರಯುಕ್ತ ದೋಷವಿಲ್ಲ ಈ ಅಭಿಪ್ರಾಯದಿಂದಲೇ 'ಸವಿಶೇಷೋಽಪಿ' ಎಂದುಕ್ತವಾಗಿದೆ. ಅಂದರೆ ವ್ಯವಹಾರಕ್ಕೆ ಕಾರಣವಾದ ವ್ಯಕ್ತಿರೂಪವಾದ ಯಾವ ವಿಶೇಷವದೆಯೋ ಅದು ಅವಾಂತರ ಅನಂತ ವಿಶೇಷಗಳಿಂದೊಡಗೂಡಿದ್ದೂ ಆಗಿದೆ. ಆದ ಕಾರಣ ಕಾರ್ಯಗಳಿಗೆ ಸಾಂಕರ್ಯವು ಪ್ರಸಕ್ತವಾಗುವುದಿಲ್ಲ, ಎಂದೂ ಮೂಲಕ್ಕೆ ಅರ್ಥವನ್ನು ಇಟ್ಟುಕೊಳ್ಳಬೇಕು. ಹೀಗೆ ಅಂಗೀಕರಿಸದಿದ್ದರೆ ಪರರಿಗೂ ಸರ್ವದಾ ಸಂಹಾರ ವ್ಯವಹಾರವೂ ಸಂಹರಣರೂಪವಾದ ಅರ್ಥಕ್ರಿಯೆಯೂ ಬರಬೇಕಾಗುವುದು ಎನ್ನುವುದು ಸಮಾನವಾಗಿದೆ. ಪರಮೇಶ್ವರನ ಸಂಬಂಧಿಯಾದ ಜ್ಞಾನ-ಇಚ್ಛಾ-ಪ್ರಯತ್ನರೂಪವಾದ ಸಂಹಾರಪ್ರವೃತ್ತಿಯು ನಿತ್ಯವಾಗಿದೆ, ಪರಮೇಶ್ವರನ ಇಚ್ಛಾದಿಗಳು ನಿತ್ಯಗಳಾದಾಗ್ಯೂ ಸಹಕಾರಿಯು ಇದ್ದರೇನೇ

ಕಾರ್ಯಕಾರಿಯಾಗುತ್ತದೆ ಎಂದರೆ—ಹಾಗೆ ಹೇಳಕೂಡದು. ಸಹಕಾರಿಗಳೂ ನಿತ್ಯಗಳಾಗಿವೆ. ಮತ್ತು ಈಶ್ವರನ ಇಚ್ಛಾದಿಗಳ ಅಧೀನಗಳಾಗಿವೆ. (18) ಹಾಗಾದರೆ, ಕೇವಲ ಇಚ್ಛಾದಿಗಳು ಮಾತ್ರ ಸಂಹಾರಾದಿಗಳಿಗೆ ಕಾರಣವಲ್ಲ. ಮತ್ತೆ ಸಂಹರಿಸಬೇಕೆಂಬ ಇಚ್ಛೆಯೂ ಸೃಷ್ಟಿಮಾಡಬೇಕೆಂಬ ಇಚ್ಛೆಯೂ ಇವುಗಳೇ, ಎಂದರೆ— ಆ ಸಂಜಿಹೀರ್ಷಾದಿಗಳು ೧ ನಿತ್ಯವಾದ ಇಚ್ಛಾದಿಗಳಿಂದ ಬೇರೆಯೋ, ೨ ಅಥವಾ ಸಂಹಾರಮೊದಲಾದ ವಿಶೇಷಗಳಿಂದ ಕೂಡಿರುವ ನಿತ್ಯ ಇಚ್ಛಾದಿಗಳೆಯೋ. ೧ನೇದ್ದು ಕೂಡಲಾರದು. ಅದನ್ನು ಅಂಗೀಕರಿಸಲಿಲ್ಲ. ಅಂಗೀಕರಿಸುವುದಾದರೆ ನಿತ್ಯೇಚ್ಛಾದಿಗಳಿಂದ ಬೇರೆಯಾದ ಸಂಜಿಹೀರ್ಷಾ (ಸಂಹಾರೇಚ್ಛಾ) ದಿಗಳಿಂದಲೇ ಸಂಹಾರಾದಿಗಳು ಸಿದ್ಧಿಸುವಾಗ ಇಚ್ಛಾದಿಗಳನ್ನು ಕಲ್ಪಿಸುವುದು ವ್ಯರ್ಥವಾಗುವುದು. ಮತ್ತು ಸಂಜಿಹೀರ್ಷಾದಿಗಳು ನಿತ್ಯಗಳಾದರೆ ನಿತ್ಯದಲ್ಲಿಯೂ ಸಂಹಾರಾದಿಗಳು ಬರಬೇಕಾಗುವುವು. ಅನಿತ್ಯವಾದರೆ ಆ ಸಂಜಿಹೀರ್ಷಾದಿಗಳ ಸಂಹಾರಕ್ಕೂ ಸಂಜಿಹೀರ್ಷಾ (ಸಂಹಾರೇಚ್ಛಾ) ದ್ಯಧೀನತ್ವವಿದ್ದಪ್ರಯುಕ್ತ ಆತ್ಮಾಶ್ರಯತ್ವವು ಬರಬೇಕಾಗುವುದು. ಆ ಸಂಹಾರಕ್ಕೆ ಸಂಹಾರೇಚ್ಛಾಧೀನತ್ವವಿಲ್ಲದಿದ್ದರೆ ಇತರರ ಸಂಹಾರಕ್ಕೂ ಸಂಜಿಹೀರ್ಷಾಧೀನತ್ವವಿಲ್ಲವೆಂದಾಗಬೇಕಾಗುವುದು, ಹೀಗೆ ದೂಷಣವು ಪ್ರಸಕ್ತವಾಗುವುದರಿಂದ ನಿತ್ಯಾನಿತ್ಯವಿಕಲ್ಪವು ಕೂಡುವುದಿಲ್ಲ. ೨ನೇದ್ದು ಅಂದರೆ ಸಂಹಾರಮೊದಲಾದ ವಿಶೇಷಗಳಿಂದ ಕೂಡಿರುವ ನಿತ್ಯ ಇಚ್ಛಾದಿಗಳು ಎನ್ನುವುದೂ ಕೂಡುವುದಿಲ್ಲ. ಸಂಹಾರಾದಿಗಳು ಇದ್ದರೆ ಸಂಹಾರೇಚ್ಛಾದಿಗಳು, ಸಂಜಿಹೀರ್ಷಾದಿಗಳಿಂದ ಸಂಹಾರಾದಿಗಳು ಹೀಗೆ ಅನ್ಯೋನ್ಯಾಶ್ರಯವು ಪ್ರಸಕ್ತವಾಗುವುದು. ಸ್ವರೂಪಸತ್ತಾಗಿದ್ದ ಸಂಹಾರಾದಿಗಳಿಂದ ಇಚ್ಛಾದಿಗಳು ವಿಶಿಷ್ಟವಾಗುತ್ತದೆಂದು ಅಲ್ಲ. ಮತ್ತೆ ಇಚ್ಛೆಗೆ ವಿಷಯಭೂತಗಳಾದ ಸಂಹಾರಾದಿಗಳಿಂದ ಇಚ್ಛೆಯಲ್ಲಿ ಸಂಜಿಹೀರ್ಷಾತ್ವಾದಿರೂಪವಾದ ವಿಶೇಷವು ಇರುತ್ತದೆ. ಇಚ್ಛಾವಿಷಯತ್ವವು ಆಗಾಮಿಯಾದ ಸಂಹಾರದಲ್ಲಿಯೂ ಇದ್ದಪ್ರಯುಕ್ತ ಅನ್ಯೋನ್ಯಾಶ್ರಯವಿಲ್ಲ. ಅಂದರೆ, ಇನ್ನುಮುಂದೆ ಇರುವುದಕ್ಕೂ ವಿಷಯತ್ವವು ಕೂಡುವುದರಿಂದ ಸ್ವರೂಪಸತ್ವವು ಬೇಕಾಗಿಲ್ಲ. ಈಗ ಸಂಹಾರವಿಲ್ಲದಿದ್ದರೂ ಭಾವಿಯಾದ ಸಂಹಾರದಿಂದ ಇಚ್ಛಾದಿಗಳು ವಿಶಿಷ್ಟಗಳಾಗುತ್ತವೆ. ಆದರಿಂದ ಸಂಜಿಹೀರ್ಷಾತ್ವವು ಕೂಡುತ್ತದೆ, ಎಂದೇ ಅಂಗೀಕರಿಸಿ ' ಸಂಹಾರಾದಿಗಳು ಇದ್ದರೆ ಸಂಹಾರೇಚ್ಛಾದಿಗಳು ಎನ್ನುವುದನ್ನು ಅಂಗೀಕರಿಸದೆ ಇರುವುದರಿಂದ ಅನ್ಯೋನ್ಯಾಶ್ರಯವಿಲ್ಲ, ಎಂದರೆ— ಇಚ್ಛಾದಿಗಳಿಗೆ ಭಾವಿಸಂಹಾರಾದಿವಿಷಯತ್ವವು ಆಗಂತುಕವೋ, ಅಥವಾ ನಿತ್ಯವೋ, ೧ನೇದ್ದು ಕೂಡಲಾರದು. ಗುಣಗಳಲ್ಲಿ ಆಗಂತುಕಧರ್ಮಗಳು ಹುಟ್ಟುತ್ತವೆಂದು ಅಂಗೀಕರಿಸಲಿಲ್ಲ. ೨ನೇ ಕಲ್ಪದಲ್ಲಿ ಇಚ್ಛಾದಿಗಳಲ್ಲಿ ಭಾವಿಸಂಹಾರಾದಿ ವಿಷಯತ್ವವು ನಿತ್ಯವಾದಪ್ರಯುಕ್ತ ಸಂಹಾರೇಚ್ಛೆಯು ಯಾವಾಗಲೂ ಇದ್ದಪ್ರಯುಕ್ತ ಸರ್ವದಾ ಸಂಹಾರಾದಿಗಳು ಆಗಬೇಕಾಗುವುವು. ಆದಪ್ರಯುಕ್ತ ಸಂಜಿಹೀರ್ಷಾದಿಗಳಲ್ಲಿ ಶಕ್ತಿವ್ಯಕ್ತಿರೂಪತ್ವವನ್ನು ಸರ್ವಥಾ ಅನುಸರಿಸಬೇಕು. ಅದಾದರೂ ಕ್ರಿಯೆಯಲ್ಲಿಯೂ ಸಮವೇ ಆಗಿದೆ. (19) ಹಾಗಾದರೆ ಪರಮೇಶ್ವರನ ಸಂಬಂಧಿಯಾದ ಜ್ಞಾನಾದಿರೂಪವಾದ ಸಂಹಾರಾದಿಕ್ರಿಯೆಯನ್ನು ನಿತ್ಯವೆಂದು ಪರರೂ ಅಂಗೀಕರಿಸಿರುವರು. ಮಹತ್ಪರಿಮಾಣವುಳ್ಳ ದ್ರವ್ಯದಲ್ಲಿ ಪರಿಸ್ಪಂದವೇ ಇಲ್ಲದಿರುವುದರಿಂದ ಪರಿಸ್ಪಂದರೂಪವಾದ ಕ್ರಿಯೆಯು ಇಲ್ಲವೇ ಇಲ್ಲ. ಆದಪ್ರಯುಕ್ತ ಕ್ರಿಯೆಯು ನಿತ್ಯವೆಂದು ಸಾಧಿಸುವ ಪರರ ಪ್ರಯತ್ನವು ವ್ಯರ್ಥವೇ ಎಂದರೆ— ಹೀಗೆ ಹೇಳಕೂಡದು. ಪರಿಸ್ಪಂದರೂಪವಾದ ಕ್ರಿಯೆಯು ಇಲ್ಲವೆನ್ನುವ ವಿಷಯದಲ್ಲಿ ಪ್ರಮಾಣವೇ ಇಲ್ಲ. ಹಾಗಾದರೆ ಪರಮ ಮಹತ್ಪರಿಮಾಣವೇ ಪ್ರಮಾಣವು, ಅಂದರೆ (೧) ಈಶ್ವರಃ ಪರಿಸ್ಪಂದಹೀನಃ ಪರಮ ಮಹತ್ಪರಿಮಾಣವತ್ವಾತ್=ಈಶ್ವರನು ಪರಿಸ್ಪಂದವಿಲ್ಲದಿರುವವನು,

ಪರಮಮಹತ್ಪರಿಮಾಣವುಳ್ಳವನಾದುದರಿಂದ, ಗಗನದಂತೆ ಎಂದು ಹೇಳಿದರೆ 'ಈಶ್ವರಃ ಪರಿಸ್ಪಂದವಾನ್ ಅಣುಪರಿಮಾಣವತ್ವಾತ್, ಮಧ್ಯಮಪರಿಮಾಣವತ್ವಾತ್ ಘಟಾದಿವತ್' ಈಶ್ವರನು ಪರಿಸ್ಪಂದವುಳ್ಳವನು, ಅಣುಪರಿಮಾಣವುಳ್ಳವನಾದುದರಿಂದಲೂ, ಮಧ್ಯಮಪರಿಮಾಣವುಳ್ಳವನಾದುದರಿಂದಲೂ, ಘಟಾದಿಗಳಂತೆ ಎಂದೂ ಪ್ರತಿಪಕ್ಷಾನುಮಾನವನ್ನು ಹೇಳಲು ಶಕ್ಯವಾಗುತ್ತದೆ. ಅಣುಪರಿಮಾಣ, ಮಧ್ಯಮ ಪರಿಮಾಣಗಳು ಇಲ್ಲವೆಂದು ಹೇಳಕೂಡದು. ಪರಮಮಹತ್ಪರಿಮಾಣವು ಇಲ್ಲವೆಂದು ಹೇಳಲು ಶಕ್ಯವಾಗುವುದು. 'ಅಣೋರಣೀಯಾನ್ ಮಹತೋ ಮಹೀಯಾನ್' ಎನ್ನುವ ಶ್ರುತಿಯಿಂದ ಅಣುತ್ವ, ಮಹತ್ವಗಳೆರಡೂ ಸಿದ್ಧಗಳಾಗಿವೆ. ಅಣುತ್ವ ಮಹತ್ವಗಳು ಪರಸ್ಪರ ವಿರುದ್ಧಗಳಾಗಿರುವುದರಿಂದ ಎರಡನ್ನು ಅಂಗೀಕರಿಸಕೂಡದೆಂದರೆ—ಹಾಗಾದರೆ, ಪ್ರಥಮಪ್ರಾಪ್ತವಾದಪ್ರಯುಕ್ತ ಅಣುತ್ವವನ್ನೇ ಸ್ವೀಕಾರ ಮಾಡಬಹುದು. ಮತ್ತು 'ಅತೋ ವಿರುದ್ಧವದ್ಭಾತಮಪಿ ವ್ಯಾಖ್ಯಾಯ ತತ್ವತಃ । ಯೋಜನೀಯಂ ಹರೌ ವಾಕ್ಯಂ ವಿರುದ್ಧೈರ್ಲಕ್ಷಣೈರ್ಯುತಂ' ಇತ್ಯಾದಿಗಳಿಂದ ವಿರೋಧವನ್ನೂ ಪರಿಹರಿಸುವರು ॥ ೫ ॥

ಹಾಗಾದರೆ ಕ್ರಿಯೆಯ ಶಕ್ತಿರೂಪ, ವ್ಯಕ್ತಿರೂಪಗಳು. ೧ ಪರಸ್ಪರಭಿನ್ನಗಳೋ? ೨ ಅಭಿನ್ನಗಳೋ? ೧ನೇ ಕಲ್ಪದಲ್ಲಿ ಶಕ್ತಿಯೇ ನಿತ್ಯವು, ಕ್ರಿಯೆಯಾದರೂ (ವ್ಯಕ್ತಿಯಾದರೂ) ಅನಿತ್ಯವು ಎಂದಾಯಿತು. ೨ನೇ ಕಲ್ಪದಲ್ಲಿ ಆದರೂ ಸರ್ವದಾ ವ್ಯವಹಾರಾದಿಗಳು ಬರಲೇ ಬೇಕಾಗುವವು ಎಂದರೆ—

ಮೂ ॥ ಶಕ್ತಿತಾ ವ್ಯಕ್ತಿ(ಕ್ತ)ತಾ ಚೇತಿ ವಿಶೇಷೋಽಪಿ ವಿಶೇಷವಾನ್ ॥ ೬ ॥
ಅಭಿನ್ನೋಽಪಿ ಕ್ರಿಯಾದಿಶ್ಚ ಸ್ವಭಾವ ಇತಿ ಹಿ ಶ್ರುತಿಃ ।
ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ ॥ ೭ ॥
ನಿತ್ಯಾನಂದೋಽವ್ಯಯಃ ಪೂರ್ಣೋ ಭಗವಾನ್ ವಿಷ್ಣುರಚ್ಯುತಃ ।
ಇತಿ ಪೈಂಗಿಶ್ರುತಿಶ್ಚಾಹ ಶಕ್ತಿ ಸದ್ಭಾವ ಏವ ತು ॥
ಕ್ರಿಯಾದಿ ನಿತ್ಯತಾ ಜ್ಞೇಯಾ ತದನ್ಯತ್ರ ತ್ವನಿತ್ಯತಾ ।
ಇತಿ ಸತ್ತತ್ತ್ವವಚನಂ [ದ್ವಿತ್ವಂ ಚೈಕಸ್ಯ ಯುಜ್ಯತೇ] ॥ ೮ ॥

ಅ ॥ (ಶಕ್ತಿವ್ಯಕ್ತಿಗಳು ಅಭಿನ್ನಗಳೇ. ಸದಾ ವ್ಯವಹಾರಾದಿಗಳು ಬರಬೇಕಾಗುವವು ಎಂದು ಹೇಳಿದ ದೋಷವು ಬರುವುದಿಲ್ಲ. ಏಕೆಂದರೆ—) ಶಕ್ತಿತೇತಿ ವ್ಯಕ್ತಿತೇತಿ ಚ=ಶಕ್ತಿತ್ವ, ವ್ಯಕ್ತಿತ್ವವೆನ್ನುವ, ವಿಶೇಷೋಽಪಿ=ವಿಶೇಷವೂ ಕೂಡ (ಇದೆ. ಅದು ಭೇದಕಾರ್ಯವನ್ನು ನಿರ್ವಹಿಸಿ ಕೊಡುತ್ತದೆಂದು ಹೇಳಿರುವೆವು.) (ಆ ವಿಶೇಷವು ಪರಸ್ಪರವಾಗಿಯೂ ಶಕ್ತಿ-ವ್ಯಕ್ತಿರೂಪವಾದ ಧರ್ಮಿಯಿಂದಲೂ, ಭಿನ್ನವೆಂದಾದರೆ ಆಗ ಶಕ್ತಿ-ವ್ಯಕ್ತಿಗಳಿಗೂ ಭೇದವು ಏಕೆ ಆಗಲಾರದು? ಅಂದರೆ, ಶಕ್ತಿ-ವ್ಯಕ್ತಿ ಧರ್ಮಭೂತಗಳಾದ ಶಕ್ತಿತ್ವ-ವ್ಯಕ್ತಿತ್ವಗಳನ್ನು ಉಪಪಾದಿಸುವ ವಿಶೇಷಗಳಿಗೆ ಭೇದವನ್ನು ಹೇಳಿದರೆ ಕ್ರಿಯೆಯಲ್ಲಿರತಕ್ಕ ಧರ್ಮಭೂತಗಳಾದ ಶಕ್ತಿ-ವ್ಯಕ್ತಿಗಳಿಗೂ ಭೇದವು ಏಕೆ ಆಗಲಾರದು? ಧರ್ಮತ್ವವು ಎರಡರಲ್ಲಿಯೂ ಸಮಾನವೇ. ೨ ಅಭಿನ್ನವೆಂದಾದರೆ ಶಕ್ತಿಯು ಒಂದೇ ಉಳಿದಿರುವುದರಿಂದ ಸೃಷ್ಟಿಕಾಲದಲ್ಲಿಯೂ ಸಂಹಾರಾದಿ ವ್ಯವಹಾರವು ಬರಬೇಕಾಗುವುದು. ಎಂದರೆ—) ವಿಶೇಷಃ=ಶಕ್ತಿತ್ವ-ವ್ಯಕ್ತಿತ್ವೋಪಪಾದಕವಾದ ಶಕ್ತಿ-ವ್ಯಕ್ತಿಗಳಲ್ಲಿರತಕ್ಕ ಎರಡು ಪ್ರಕಾರವಾದ ವಿಶೇಷವು, ಅಭಿನ್ನೋಽಪಿ=ಅಭಿನ್ನವಾದಾಗ್ಯೂ, ವಿಶೇಷವಾನ್=ವಿಶೇಷವುಳ್ಳದ್ದೆಂದು ಅಂಗೀಕರಿಸಲ್ಪಡುತ್ತದೆ. ಸ್ವನಿರ್ವಾಹಕವು. ಅಂತೂ ಸ್ವನಿರ್ವಾಹಕತ್ವರೂಪ

ವಿಶೇಷವುಳ್ಳದ್ದು. (ಹಾಗಾದರೆ, ಹೀಗೆಯೇ ಘಟ-ಪಟಾದಿಗಳಲ್ಲಿಯೂ ಇರತಕ್ಕ ಕ್ರಿಯೆಯು ನಿತ್ಯವೆಂದು ಅಂಗೀಕರಿಸಬಹುದು. ಶಕ್ತಿ ವ್ಯಕ್ತಿಯೆಂದು ಸ್ವೀಕಾರವಮಾಡಿಕೊಂಡು ಎಲ್ಲಾ ದೋಷಗಳನ್ನೂ ಪರಿಹರಿಸಬಹುದು. ಎಂದರೆ—ಘಟಾದಿಗಳಲ್ಲಿರತಕ್ಕ ಕ್ರಿಯೆಯೂ ನಿತ್ಯವೆನ್ನುವ ವಿಷಯದಲ್ಲಿ ಪ್ರಮಾಣವಿದ್ದರೆ ಅಂಗೀಕರಿಸಬಹುದಿತ್ತು. ಅಂದರೆ, ನಿರ್ಬಾಧಪ್ರಮಾಣವಿದ್ದು ನಿತ್ಯತ್ವವನ್ನು ಅಂಗೀಕರಿಸಲಿಕ್ಕೆ ವಿರೋಧಿಗಳಾದ ಕಾದಾಚಿತ್ಕ ಸಂಹಾರಾದಿ ವ್ಯವಹಾರಗಳೂ ಇದ್ದರೆ ಅವು ಬೇರೆ ಯಾವ ರೀತಿಯಿಂದಲೂ ಕೂಡದಿರುವುದರಿಂದ ಶಕ್ತಿ-ವ್ಯಕ್ತಿಯನ್ನು ಅಂಗೀಕರಿಸಿಕೊಂಡು ಪರಿಹಾರವನ್ನು ಕಲ್ಪಿಸಬಹುದಿತ್ತು. ಘಟಾದಿಕ್ರಿಯೆಗಳು ನಿತ್ಯಗಳೆನ್ನುವ ವಿಷಯದಲ್ಲಿ ನಿರ್ಬಾಧಪ್ರಮಾಣವಿರುವುದಿಲ್ಲ. ಪರಮೇಶ್ವರನ ಕ್ರಿಯೆಯಾದರೂ ನಿತ್ಯವೆನ್ನುವ ವಿಷಯದಲ್ಲಿ ನಿರ್ಬಾಧಪ್ರಮಾಣವದೆ ಎನ್ನುತ್ತಾರೆ.) ಕ್ರಿಯಾದಿಶ್ಚ=ಕ್ರಿಯಾ ಮೊದಲಾದುದು, ಸ್ವಭಾವ ಇತಿ=ಯಾವದ್ದ್ರವ್ಯಭಾವಿಯೆಂದು, ಶ್ರುತಿಃ=ಶ್ರುತಿಯು, ಹಿ=ಪ್ರಸಿದ್ಧವು. 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'= ಪರಮಾತ್ಮನಿಗೆ ಜ್ಞಾನ-ಬಲಕ್ರಿಯಾರೂಪವಾದ, ಉತ್ಕೃಷ್ಟವಾದ, ಅನೇಕವಿಧವಾದ ಶಕ್ತಿಯೂ ಯಾವದ್ದ್ರವ್ಯಭಾವಿಯಾಗಿ ಅಥವಾ ಭಗವಂತನ ಸ್ವರೂಪವೆಂದು ಶ್ರುತಿಸಿದ್ಧವಾಗಿದೆ ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು. (ಈ ವಿಷಯದಲ್ಲಿ ಸ್ಪಷ್ಟವಾದ ಶ್ರುತಿಯನ್ನು ಹೇಳುತ್ತಾರೆ) ಪರಾತ್ಮನಃ=ಶ್ರೀಹರಿಯ, ಜ್ಞಾನಂ=ಜ್ಞಾನವು, ನಿತ್ಯಂ=ನಿತ್ಯವಾದುದು, ಕ್ರಿಯಾ=ಕ್ರಿಯೆಯು, ನಿತ್ಯಾ=ನಿತ್ಯವಾದುದು,(ಅಥವಾ ಮೊದಲಿನ ಶ್ರುತಿಯು ಶ್ರೀಹರಿಯ ಸ್ವರೂಪಗಳೆನ್ನುವ ವಿಷಯದಲ್ಲಿ ಪ್ರಮಾಣವು. ಎರಡನೇದ್ದು ಸ್ವರೂಪತ್ವಕ್ಕೆ ಹೇತುಭೂತವಾದನಿತ್ಯತ್ವ ವಿಷಯದಲ್ಲಿ ಪ್ರಮಾಣವು.)ಬಲಂ=ಬಲವೂ ನಿತ್ಯವಾದುದು. ಶಕ್ತಿಃ=ಶಕ್ತಿಯೂ ನಿತ್ಯವಾದುದು ಭಗವಾನ್=ಶ್ರೀಹರಿಯು, ನಿತ್ಯಾನಂದಃ= ನಿತ್ಯವಾದ ಆನಂದವುಳ್ಳವನು. ಅವ್ಯಯಃ=ವೃದ್ಧಿಹ್ರಾಸ ವಿರಹಿತನು. ಪೂರ್ಣಃ=ಗುಣಪರಿಪೂರ್ಣನು. ವಿಷ್ಣುಃ=ವ್ಯಾಪ್ತನು. ಅಚ್ಯುತಃ=ವಿನಾಶರಹಿತನು. ಇತಿ=ಈ ಪ್ರಕಾರ, ಪೈಂಗಿಶ್ರುತಿಶ್ಚ= ಪೈಂಗಿಶ್ರುತಿಯು, ಆಹ=ಪ್ರತಿಪಾದಿಸುತ್ತದೆ. (ಹಾಗಾದರೆ. ಈಶ್ವರನ ಕ್ರಿಯೆಯು ನಿತ್ಯವಾಗಲಿ, ಜೀವರಲ್ಲಿರತಕ್ಕ ಎಲ್ಲಾ ಕ್ರಿಯೆಯೂ ಅನಿತ್ಯವೋ ಎಂದಾಶಂಕಿಸಿದರೆ— ಪ್ರಮಾಣಾಂತರದಿಂದ ಭೇದವನ್ನು ತೋರಿಸುತ್ತಾರೆ)ಶಕ್ತಿಸದ್ಭಾವ ಏವ ತು=ಶಕ್ತಿಗೆ ನಿತ್ಯತ್ವವಿದ್ದರೆ, ಕ್ರಿಯಾದಿನಿತ್ಯತಾ= ಕ್ರಿಯಾ-ಜ್ಞಾನ ಇತ್ಯಾದಿಗಳಿಗೆ ನಿತ್ಯತ್ವವು ಅಥವಾ ಸ್ಥಾಯಿತ್ವವು,ಜ್ಞೇಯಾ=ತಿಳಿಯಲ್ಪಡತಕ್ಕದು. ಶಕ್ತಿ ಸದ್ಭಾವ ಏವ=ಶಕ್ತಿಯಿದೆ ಎನ್ನುವ ವಿಷಯದಲ್ಲಿಯೇ, ಸ್ವಭಾವ ಇತಿ ಶ್ರುತಿಃ=ಶಕ್ತಿಯು ಸ್ವಾಭಾವಿಕವು ಎಂದು ಪ್ರತಿಪಾದಿಸುವ ಶ್ರುತಿಯು, ಪೈಂಗಿಶ್ರುತಿಶ್ಚ=ಪೈಂಗಿಶ್ರುತಿಯೂ ಕೂಡ ಇದೆ. (ಹೀಗೆ ಅರ್ಥಾಂತರವನ್ನೂ ಇಟ್ಟುಕೊಳ್ಳಬೇಕು.) ತದನ್ಯತ್ರ ತು=ಶಕ್ತಿಗೆ ನಿತ್ಯತ್ವವಿಲ್ಲದಿದ್ದರೆ (ಅದಕ್ಕಿಂತಬೇರೆ ಕಡೆಗಳಲ್ಲಿ), ಅನಿತ್ಯತಾ=ಕ್ರಿಯೆಗೆ ಅನಿತ್ಯತ್ವವು, ಜ್ಞೇಯಾ=ತಿಳಿಯಲ್ಪಡಬೇಕು. ಇತಿ=ಈ ಪಕಾರ, ಸತ್ತ್ರತ್ವವಚನಂ=ಸತ್ತ್ರತ್ವವೆನ್ನುವ ಗ್ರಂಥದ ವಚನವು. ಅಂತೂ ಜ್ಞಾನಕ್ರಿಯಾದಿಗಳ ಶಕ್ತಿಯು ಎಷ್ಟು ಕಾಲಪರ್ಯಂತವಿರುತ್ತದೋ ಅಷ್ಟುಕಾಲತನಕ ಜ್ಞಾನಾದಿಗಳೂ ಇರುತ್ತವೆ. ತಥಾಚ ಶಕ್ತಿಯು ನಿತ್ಯವಾದರೆ ಜೀವರ ಜ್ಞಾನಾದಿಗಳೂ ನಿತ್ಯಗಳು. ಶಕ್ತಿಯು ಅನಿತ್ಯವಾದರೆ ಜ್ಞಾನಾದಿಗಳೂ ಅನಿತ್ಯಗಳು. ಈ ಪ್ರಕಾರ ಶ್ರೀ ಹರಿಯಿಂದ ಇತರರಾದ ಜೀವಾದಿಗಳಲ್ಲಿರತಕ್ಕ ಕ್ರಿಯಾದಿಗಳು ನಿತ್ಯ-ಅನಿತ್ಯ ಎನ್ನುವ ಪ್ರಭೇದದಿಂದ ಎರಡು ವಿಧವು.

ತಾ || ನ್ಯಾಯಸುಧಾ— (1) ಈಶ್ವರನ ಕ್ರಿಯೆಗಳು ಅನಿತ್ಯಗಳೆಂದು ೧ ಪ್ರಮಾಣಗಳ ಸಾಮರ್ಥ್ಯದಿಂದ ಅಂಗೀಕರಿಸಲ್ಪಡುತ್ತದೋ? ೨ ನಿತ್ಯಗಳೆಂದು ಇಟ್ಟುಕೊಂಡರೆ ಬಾಧಕವಿದ್ದ

ಪ್ರಯುಕ್ತವೋ? ೩ ಸಾಧಕವಿಲ್ಲದಿರುವಪ್ರಯುಕ್ತವೋ? ಎಂದು ಮೊದಲು ವಿಕಲ್ಪಿಸಿದ ಮೂರು ಪಕ್ಷಗಳಲ್ಲಿ ೧ನೇ ಪಕ್ಷವು ಬಹಿರೇವ ನಿರಾಕರಿಸಲ್ಪಟ್ಟಿತು. ೨ನೇ ಪಕ್ಷವು ಶಕ್ತ್ಯಾತ್ಮನಾ ಎನ್ನುವ ಮೂಲದಿಂದ ನಿರಸ್ತವಾಯಿತು. ೩ನೇ ಪಕ್ಷವೂ 'ಕ್ರಿಯಾದಿಶ್ಚ' ಇತ್ಯಾದಿ ಮೂಲದಲ್ಲಿ ಪ್ರಮಾಣ ವನ್ನು ಹೇಳಿದರಿಂದ ನಿರಸ್ತವಾಯಿತು. (2) ಸ್ವರೂಪ, ಸಹಕಾರಿಸಮವಧಾನ ಇವುಗಳಿಂದ ಅತಿರಿಕ್ತವಾದ ಶಕ್ತಿಯೇ ಇಲ್ಲವೆಂದು ತಾರ್ಕಿಕಾದಿಗಳು ಹೇಳುವರು. ಅವರಿಗೆ ಶಕ್ತಿಯು ಸ್ವಾಭಾ ವಿಕವೂ, ನಿತ್ಯವೂ ಎಂದು ಪ್ರತಿಪಾದಿಸುವ ಉದಾಹೃತಗಳಾದ ಶ್ರುತ್ಯಾದಿಗಳು, ಸತ್ತತ್ವವಚನವು, 'ಶಕ್ತಯಃ ಸರ್ವಭಾವಾನಾಮಚಿಂತ್ಯಾ ಜ್ಞಾನಗೋಚರಾಃ' ಇತ್ಯಾದಿ ಸ್ಮೃತಿ, ಇವುಗಳ ವಿರೋಧವು ಬರುವುದು. ಹೀಗೆ ಶಕ್ತಿಯನ್ನು ಅಂಗೀಕರಿಸದಿದ್ದರೆ ಅನೇಕ ಬಾಧಕಗಳು ಇದ್ದ ಪ್ರಯುಕ್ತ ಅವಶ್ಯವಾಗಿ ಶಕ್ತಿಯನ್ನು ಅಂಗೀಕರಿಸತಕ್ಕದ್ದು.

**ಸಾರಾಂಶ: —**

ಸ. ರ. ವಿ.— (1) ಅದನ ಪಾನ ಮೊದಲಾದ ಕ್ರಿಯೆಗಳು ಶಕ್ತಿರೂಪದಿಂದ ಯಾವಾ ಗಲೂ ಇದ್ದಪ್ರಯುಕ್ತ ನಿತ್ಯಗಳು. ಕ್ರಿಯೆಗೂ, ಶಕ್ತಿಗೂ ಶ್ರೀ ಹರಿಯಿಂದ ಕೂಡಿಕೊಂಡು ಪರಸ್ಪರವಾಗಿ ಅಭೇದವಿದ್ದರೂ ವಿಶೇಷಬಲದಿಂದಲೇ ವ್ಯವಹಾರ ಭೇದವು ಸಿದ್ಧಿಸುತ್ತದೆ. ಶಕ್ತಿ ರೂಪತ್ವವೆಂದರೆ— ಕ್ರಿಯೆಗೆ ಅವ್ಯಕ್ತತ್ವವು. ಕ್ರಿಯಾ, ಕ್ರಿಯಾಶಕ್ತಿ ಇತ್ಯಾದಿಗಳಿಗೆ ಶ್ರೀ ಹರಿ ಯಿಂದ ಅಭೇದವೂ, ನಿತ್ಯತ್ವವೂ ಕೂಡ ಜ್ಞಾನದಂತೆ ಸ್ವಾಭಾವಿಕತ್ವವನ್ನು ಪ್ರತಿಪಾದಿಸುವ 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎನ್ನುವ ಶ್ರುತಿಯಿಂದ ಸಿದ್ಧವಾಗುತ್ತದೆ. (2) ಶ್ರೀ ಹರಿಯ ಕ್ರಿಯೆಗಳಿಗೆ ನಿತ್ಯತ್ವವು 'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ' ಇತ್ಯಾದಿ ಪೈಂಗಿಶ್ರುತಿಯಿಂದಲೂ ಸಿದ್ಧವಾಗಿದೆ. ಆದಕಾರಣ ಕ್ರಿಯಾದಿಗಳಿಗೆ ಭಗವತ್ಸ್ವರೂಪತ್ವವು ವಿರುದ್ಧವಲ್ಲ. (3) ಶಕ್ತ್ಯನಾಶ ನಾಶಗಳಿಂದ ಜೀವಾದಿಗಳಲ್ಲಿರತಕ್ಕ ಕ್ರಿಯಾದಿಗಳಿಗೆ ನಿತ್ಯತ್ವವನ್ನೂ, ಅನಿತ್ಯತ್ವವನ್ನೂ ತಿಳಿಯತಕ್ಕದ್ದು. ಎಷ್ಟರತನಕ ಶ್ರವಣಾದಿ ಶಕ್ತಿಯು ನಷ್ಟವಾಗುವುದಿಲ್ಲವೋ? ಅಷ್ಟರತನಕ ಒಂದೇ ಶ್ರವಣಕ್ರಿಯಾಸ್ಥಾಯಿಯಾದುದು ಜೀವನಿಗೆ ಕದಾಚಿತ್ ಆವಿರ್ಭೂತವಾಗುತ್ತದೆ. ಕದಾಚಿತ್ ತಿರೋಭೂತವೇ ಆಗುತ್ತದೆ. ಅದರಲ್ಲಿ ಕಲ್ಪನಾಗೌರವವು ಬರುವುದರಿಂದ ವ್ಯಕ್ತಿಭೇದವನ್ನು ಅಂಗೀಕರಿಸಲಿಲ್ಲ. ಯಾವಾಗ ಅತ್ಯಂತ ಬಾಧಿರ್ಯವೇ ಬರುತ್ತದೋ, ಆಗ ಶ್ರವಣಕ್ರಿಯೆಯು ವಿನಷ್ಟವೆಂದು ಅನುಭೂತವಾಗುತ್ತದೆ. ॥ ೬ ॥ ೭ ॥ ೮ ॥ ಸೂ. ೧೦ ॥ ಅಧಿ. ೨ ॥

**ಅತ್ತೃತ್ವಾಧಿಕರಣವು ಸಮಾಪ್ತವಾಯಿತು.**



# ಗುಹಾಧಿಕರಣವು.

ಈ ಅಧಿಕರಣದಲ್ಲಿ ಶುಭ ಕರ್ಮಫಲ ಭೋಗರೂಪವಾದ ಕ್ರಿಯಾಲಿಂಗಕ್ಕೆ ಸಮನ್ವಯ ವನ್ನು ಮಾಡುತ್ತಾರೆ—

## "ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ"

॥ ಸೂ. ೧೧ ॥

'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಸುಕೃತ-ಭೋಕ್ತೃಗಳು ಆತ್ಮ-ಅಂತರಾತ್ಮಾಖ್ಯ ಬ್ರಹ್ಮರೂಪವಿಶೇಷಣಗಳೇ. ಜೀವೇಶ್ವರರಲ್ಲ. ಹೃದಯ ಗುಹಾಪ್ರವಿಷ್ಟತ್ವರೂಪಲಿಂಗವಿದ್ದಪ್ರಯುಕ್ತ. ಗುಹಾಪ್ರವಿಷ್ಟತ್ವವು, ಹಿ= 'ಯೋ ವೇದ ನಿಹಿತಂ ಗುಹಾಯಾಂ' ಇತ್ಯಾದಿ ಶ್ರುತಿಪ್ರಸಿದ್ಧವು. ಆ ರೂಪವಿಶೇಷಗಳು ಹೃದಯಗುಹೆಯಲ್ಲಿರುತ್ತವೆಂದು 'ಘರ್ಮಾ ಸಮಂತಾತ್ತ್ರಿವೃತಂ ವ್ಯಾಪತುಃ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟವೆ.

"ಓಂ ವಿಶೇಷಣಾಚ್ಚ ಓಂ" ॥ ಸೂ ೧೨ ॥ ಅಧಿ. ೩ ॥

'ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಂ' ಎನ್ನುವ ಏಕವಚನದಿಂದ ಸೇತುತ್ವ-ಬ್ರಹ್ಮತ್ವಾದಿಗಳಿಂದಲೂ ವಿಶೇಷಣವಿದ್ದಪ್ರಯುಕ್ತವೂ ಸುಕೃತ-ಭೋಕ್ತೃಗಳು ಭಗವದ್ರೂಪಗಳೇ, ಜೀವೇಶರಲ್ಲ.

'ಋತಂ ಪಿಬಂತೌ' ಎನ್ನುವ ವಾಕ್ಯವು ಜೀವೇಶ್ವರರನ್ನು ಪ್ರತಿಪಾದಿಸುತ್ತದೋ, ಅಥವಾ ಪರಮೇಶ್ವರನನ್ನೇ ಪ್ರತಿಪಾದಿಸುತ್ತದೋ ಎಂದು ಸಂಶಯಬಂದರೆ ದ್ವಿವಚನವಿದ್ದಪ್ರಯುಕ್ತ ಜೀವೇಶ್ವರರು ಎಂದು ಪೂರ್ವಪಕ್ಷವು ಪ್ರಾಪ್ತವಾಯಿತು. ಬ್ರಹ್ಮಶಬ್ದ ಮೊದಲಾದ ಬಾಧಕವೂ ಇಲ್ಲ. ಕೇವಲ ಈಶ್ವರನನ್ನೆ ಪ್ರತಿಪಾದಿಸುತ್ತದೆಂದು ಇಟ್ಟುಕೊಂಡರೆ ಕರ್ಮ ಫಲಭೋಗವು ಕೂಡದೇ ಹೋಗುವುದು. ಜೀವೇಶ್ವರರನ್ನು ಪ್ರತಿಪಾದಿಸುತ್ತದೆಂದು ಇಟ್ಟುಕೊಂಡರೆ ಜೀವನಿಗೆ ಕರ್ಮಫಲ ಭೋಗವಿದ್ದಪ್ರಯುಕ್ತ ಜೀವನೊಟ್ಟಿಗೆ ಕೂಡಿರುವ ಈಶ್ವರನಲ್ಲಿ ಛತ್ರಿನ್ಯಾಯದಿಂದ ಔಪಚಾರಿಕಪ್ರಯೋಗವು ಕೂಡುವುದೆಂದು ಪ್ರಾಪ್ತವಾದರೆ ಶ್ರೀಹರಿಯನ್ನೇ ಪ್ರತಿಪಾದಿಸುತ್ತದೆಂದು ಸಿದ್ಧಾಂತವು. ಹೇಗೆಂದರೆ—ಗುಹಾನಿಹಿತತ್ವರೂಪಲಿಂಗದಿಂದಲೂ ಬ್ರಹ್ಮಶಬ್ದದಿಂದ ವಿಶೇಷಣ ವಿದ್ದಪ್ರಯುಕ್ತವೂ ಜೀವಪರವೆಂದು ಇಟ್ಟುಕೊಂಡರೆ ಬ್ರಹ್ಮನಲ್ಲಿಯೇ ಸರ್ವಶಬ್ದಗಳಿಗೂ ಸಮನ್ವಯವೆಂದುಪಕ್ರಮಿಸಿದ್ದಕ್ಕೆ ವಿರೋಧವು ಬರುವುದರಿಂದಲೂ ಈ ವಾಕ್ಯವು ಪರಮಾತ್ಮನೊಬ್ಬನನ್ನೇ ಪ್ರತಿಪಾದಿಸುತ್ತದೆ ಎಂದು ಸಿದ್ಧಾಂತಪಡಿಸಿರುವರು. ದ್ವಿವಚನವು ಹೇಗೆ ಕೂಡುತ್ತದೆಂದರೆ—

ಮೂ ॥ [ಇತಿ ಸತ್ತ್ವತ್ವವಚನಂ] ದ್ವಿತ್ವಂ ಚೈಕಸ್ಯ ಯುಜ್ಯತೇ ।
ಯಃ ಸೇತುರಿತಿ ಚೈಕತ್ವವಚನೇನ ವಿಶೇಷಣಾತ್ ॥ ೯ ॥

ಅ ॥ ದ್ವಿತ್ವಂ ಚ=ಋತಂ ಪಿಬಂತೌ ಎನ್ನುವ ದ್ವಿವಚನಬೋಧ್ಯವಾದ ದ್ವಿತ್ವವು, ಏಕಸ್ಯ=ಭೇದರಹಿತನಾದ ಕೇವಲ ಏಕತ್ವಾಧಾರನೂ ಆದ ಒಬ್ಬ ಶ್ರೀಹರಿಗೇನೇ, ಯುಜ್ಯತೇ= ಆತ್ಮ ಅಂತರಾತ್ಮ ಎನ್ನುವ ಎರಡು ರೂಪಗಳಿಂದ ಉಪಪನ್ನವಾಗುತ್ತದೆ. ಯಃ= ಯಾವಾತನು, (ಈಜಾನಾನಾಂ=ಯಾಗ ಮಾಡುವವರಿಗೆ,) ಸೇತುಃ=ಆಶ್ರಯನೋ, ಇತಿಚ= ಹೀಗೂ (ವಾಕ್ಯಶೇಷದಲ್ಲಿ) ಏಕತ್ವವಚನೇನ=ಏಕವಚನದಿಂದ, ವಿಶೇಷಣಾತ್=ವಿಶೇಷಣ (ಪರಾಮರ್ಶ)ವಿದ್ದಪ್ರಯುಕ್ತವೂ (ಉಪಪನ್ನವಾಗುತ್ತದೆ.)

ಕಾ ॥ ನ್ಯಾಯಸುಧಾ— (1) ಪರಮೇಶ್ವರನೊಬ್ಬನನ್ನು ಮಾತ್ರ ಇಟ್ಟುಕೊಂಡರೆ ದ್ವಿವಚನವು ಕೂಡುವುದಿಲ್ಲ ಎಂದು ಹೇಳುವವನ ಹತ್ತಿರ ಅನುಪಪತ್ತಿಯು ಹೇಗೆಂದು

ಪ್ರಶ್ನಿಸಬೇಕು. ಆಗ ದ್ವಿವಚನವು ಭೇದವನ್ನು ಹೇಳುತ್ತದೆ. ಪರಮಾತ್ಮನಲ್ಲಿ ತನ್ನಲ್ಲಿರತಕ್ಕ ಭೇದವು ಕೂಡುವುದಿಲ್ಲ, ಎಂದರೆ, ಹಾಗೆ ಹೇಳಕೂಡದು. ದ್ವಿವಚನವು ಭೇದವನ್ನು ಹೇಳುತ್ತದೆನ್ನುವಲ್ಲಿ ಅನುಶಾಸನ (ವ್ಯಾಕರಣಾದಿರೂಪವಾದ ಪ್ರಮಾಣ)ವಿರುವುದಿಲ್ಲ. (2) ಹಾಗಾದರೆ 'ಋತಂ ಪಿಬಂತೌ' ಎನ್ನುವ ದ್ವಿವಚನವು ದ್ವಿತ್ವಸಂಖ್ಯೆಯನ್ನು ಹೇಳುತ್ತದೆ. ಆ ದ್ವಿತ್ವ ಸಂಖ್ಯೆಯು ಪರಮಾತ್ಮನಲ್ಲಿ ಭೇದವಿಲ್ಲದಿರುವುದರಿಂದಲೂ, ಏಕತ್ವಸಂಖ್ಯೆಯಿಂದಲೂ ವಿರುದ್ಧವಾಗುತ್ತದೆ ಎಂದರೆ ಹಾಗೆ ಹೇಳಕೂಡದು. ಅಭೇದದಿಂದ ಏಕತ್ವವೇ ಇರುವ ಘಟವು ದ್ರವ್ಯಾಂತರದಿಂದ ಕೂಡಿಕೊಂಡು ಇದ್ದರೆ ಅದರಲ್ಲಿ ದ್ವಿತ್ವವು ಕಾಣುತ್ತದೆ. (3) ದ್ರವ್ಯಾಂತರ ವಿಧುರನಿಗೆ ದ್ವಿತ್ವವು ಕೂಡುವುದಿಲ್ಲ. ವಿರೋಧವಿದ್ದಪ್ರಯುಕ್ತ ಎಂದಭಿಪ್ರಾಯವಾದರೆ—

ಸಂಸಾರಧರ್ಮವಿರಹಿತನಿಗೆ ಕರ್ಮಫಲಭೋಗವು ಕೂಡುತ್ತದೆ ಎಂದು ಇಷ್ಟೇ ಅಲ್ಲ. ಮತ್ತೆ ಭೇದವಿರಹಿತವೂ ದ್ರವ್ಯಾಂತರಶೂನ್ಯವೂ ಆದ ಒಂದು ವಸ್ತುವಿಗೆ ದ್ವಿತ್ವವೂ ಕೂಡುತ್ತದೆ. ಹೇಗೆಂದರೆ, ದ್ವಿತ್ವಕ್ಕೆ ಅಭೇದ ಏಕತ್ವಗಳಿಂದ ಭಾವಾಭಾವರೂಪವಾದ ವಿರೋಧವಿಲ್ಲ. ಭಾವಾಭಾವರೂಪತ್ವವಿಲ್ಲದಿರುವಪ್ರಯುಕ್ತ ವಧ್ಯಘಾತುಕಭಾವರೂಪವಾದ ವಿರೋಧವೂ ಇಲ್ಲ. ಸಹಾವಸ್ಥಿತಿಯೇ ಬರಬೇಕಾಗುವುದು 'ನಾಜಾತ ಏಕೋಽನ್ಯಂ ಹಂತಿ ನಾಪ್ಯನ್ಯಾಧಾರಃ'= ಒಬ್ಬನು ಹುಟ್ಟದೆ ಮತ್ತೊಬ್ಬನನ್ನು ಕೊಲ್ಲುವುದಿಲ್ಲ, ಅನ್ಯಾಧಾರನಾಗಿಯೂ ಕೊಲ್ಲುವುದಿಲ್ಲ. ಎನ್ನುವ ನ್ಯಾಯದಿಂದ ಮೂಷಕ (ಇಲಿ) ಮಾರ್ಜಾರ (ಬೆಕ್ಕು) ಗಳು ಸ್ವಲ್ಪಕಾಲದಲ್ಲಿ ಒಟ್ಟಿಗೆ ಇದ್ದೇ ಅವುಗಳಿಗೆ ವಧ್ಯಘಾತುಕಭಾವವು ದೃಷ್ಟವಾಗಿದೆ. ತಾದಾತ್ಮ್ಯಾಭಾವರೂಪವಾದ ವಿರೋಧವಾದರೂ ಅನ್ಯೋನ್ಯಾಭಾವರೂಪವಾಗಿರುವುದರಿಂದ ಸಹಾವಸ್ಥಾನಕ್ಕೆ ವಿರುದ್ಧವಾಗದಿರುವುದರಿಂದ ಪ್ರಕೃತಕ್ಕೆ ಉಪಯುಕ್ತವಾಗುವುದಿಲ್ಲ. ಆದಕಾರಣ ಸಹಾವಸ್ಥಾನರೂಪವಾದ ವಿರೋಧವೆಂದೇ ಹೇಳಬೇಕು. ಅದಕ್ಕೆ ನಿಯಮದಿಂದ ಪರಸ್ಪರವಾಗಿ ಬಿಟ್ಟುಕೊಂಡಿದ್ದು ತೋರುವುದೇ ಬೀಜವು. ಅದು ಪ್ರಕೃತದಲ್ಲಿ ಇಲ್ಲ. 'ಋತಂ ಪಿಬಂತೌ' ಎಂದು ದ್ವಿವಚನವಿಷಯರಾಗಿ ಪ್ರಕೃತರಾದ ದ್ವಿತ್ವಾಶ್ರಯರಿಗೆ 'ಯಃ ಸೇತುಃ' ಎನ್ನುವ ಏಕವಚನದಿಂದ ವಿಶೇಷಣವದೆ. ಅಭೇದವೂ ಏಕತ್ವಾಶ್ರಯತ್ವವೂ ತೋರುತ್ತದೆ.

(4) ಅದ್ವೈತಿಗಳು ದ್ವಿವಚನವಿಷಯರು, ಬುದ್ಧಿಜೀವರು ಎಂದು ಪೂರ್ವಪಕ್ಷಮಾಡಿಕೊಂಡು ಜೀವೇಶ್ವರರು ಎಂದು ಸಿದ್ಧಾಂತಪಡಿಸಿರುವರು. ಅದೂ ಇದರಿಂದಲೇ ನಿರಸ್ತವಾಯಿತು. ಹೇಗೆಂದರೆ—'ತತ್ತು ಸಮನ್ವಯಾತ್' ಎನ್ನುವುದರಿಂದ ಶ್ರೀ ಬ್ರಹ್ಮನಲ್ಲಿಯೇ ಸರ್ವಶಬ್ದಗಳಿಗೂ ಸಮನ್ವಯವನ್ನು ಪ್ರತಿಜ್ಞಾಮಾಡಿದ ಸೂತ್ರಕಾರರು ವಿವರಿಸತಕ್ಕ ಉತ್ತರ ವಾಕ್ಯಗಳಿಂದ ಅದನ್ನೇ ವಿಸ್ತರಿಸಬೇಕು. ಈ ವಾಕ್ಯಕ್ಕೆ ಜೀವೇಶ್ವರರಲ್ಲಿ ಸಮನ್ವಯವೆಂದು ಪ್ರತಿಪಾದಿಸುವವರು ಹಾಗೆ ಹೇಳಿದರೆ ಉಪಕ್ರಮವನ್ನು ಬಿಟ್ಟಂತೆ ಆಯಿತು. ಬಾಧಕವಿದ್ದರೆ ಇದು ದೋಷವಲ್ಲವೆಂದರೆ—ಹಾಗೆ ಹೇಳಕೂಡದು. ಬಾಧಕವನ್ನು ಹೇಳಲಿಲ್ಲ. ದ್ವಿವಚನವು ಬಾಧಕವೆಂದರೆ— ಹಾಗಾದರೆ ಜೀವೇಶ್ವರರಿಗೆ ಐಕ್ಯವನ್ನು ಅಂಗೀಕರಿಸಿರುವುದರಿಂದ ಜೀವೇಶ್ವರರು ಈ ವಾಕ್ಯಪ್ರತಿಪಾದ್ಯರೆಂದು ಅಂಗೀಕರಿಸಿದರೂ ದ್ವಿವಚನರೂಪಬಾಧಕವು ಪರಿಹೃತವಾಗುವುದಿಲ್ಲ. ಜೀವೇಶ್ವರರಿಗೆ ಕಾಲ್ಪನಿಕ ಭೇದವದೆ. ಆದುದರಿಂದ ದ್ವಿವಚನಬೋಧ್ಯವಾದ ದ್ವಿತ್ವವು ಕೂಡಬಹುದೆಂದರೆ ಈಶ್ವರನಿಗೇನೇ ಅದ್ಭುತವಾದ ಅಚಿಂತ್ಯ ಐಶ್ವರ್ಯವಿದ್ದುದರಿಂದ ಎರಡು ರೂಪಗಳಿದ್ದಪ್ರಯುಕ್ತ ದ್ವಿತ್ವವು ಕೂಡಬಹುದು. ತಥಾಚ ಸೂತ್ರಕ್ಕೆ ಉಪಕ್ರಮಾನುಗುಣ್ಯವೂ ಬರುವುದು. ಶಾಸ್ತ್ರವು ತತ್ವಾವೇದಕವೂ ಆಗುವುದು ॥ ೯ ॥ ಸೂ. ೧೧ ॥ ೧೨ ॥ ಅಧಿ. ೩ ॥

॥ ಗುಹಾಧಿಕರಣವು ಸಮಾಪ್ತವಾಯಿತು ॥

# ಅಂತರಾಧಿಕರಣವು.

ಈ ಅಧಿಕರಣದಲ್ಲಿ ಚಕ್ಷುಸ್ಸಿನ ಒಳಗೆ ಸ್ಥಿತಿರೂಪವಾದ ಭಾವದಿಂದ ಯುಕ್ತವಾದ ರಮಣ ರೂಪವಾದ ಕ್ರಿಯಾಲಿಂಗಕ್ಕೆ ಸಮನ್ವಯವನ್ನು ಮಾಡುತ್ತಾರೆ—

"ಓಂ ಅಂತರ ಉಪಪತ್ತೇಃ ಓಂ" ॥ ಸೂ. ೧೩ ॥

ಅಂತರಃ='ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಎಂದು ಹೇಳಲ್ಪಟ್ಟ ಚಕ್ಷುಸ್ಸಿನ ಒಳಗೆ ಇದ್ದು ರಮಿಸುವವನು ಬ್ರಹ್ಮನೇ, ಅಗ್ನಿಯಲ್ಲ. 'ಏತದಭಯ ಮೇತದ್ಬ್ರಹ್ಮ' ಎಂದು ಹೇಳಲ್ಪಟ್ಟ ಅಮೃತತ್ವ-ಅಭಯತ್ವ ಲಿಂಗಗಳು, ಬ್ರಹ್ಮಶಬ್ದವು ಶ್ರೀ ಹರಿಯಲ್ಲಿಯೇ ಉಪಪನ್ನಗಳಾಗುವುದರಿಂದ.

('ಓಂ ಸ್ಥಾನಾದಿವ್ಯಪದೇಶಾಚ್ಚ ಓಂ') ॥ ಸೂ. ೧೪ ॥

(ಸ್ಥಾನರೂಪವಾದ ಅಕ್ಷಿಶಕ್ತಿಯನ್ನೂ (ಅಸಂಗತ್ವ ಶಕ್ತಿಯನ್ನೂ) ಅಧಿಷ್ಠಾತೃಶಕ್ತಿ ಯನ್ನೂ (ಸಂಯದ್ವಾಮತ್ವ ಶಕ್ತಿಯನ್ನೂ) ಹೇಳಿರುವುದರಿಂದಲೂ ಅಂತರನು ಬ್ರಹ್ಮನೇ.)

ಈ ಅಧಿಕರಣದಲ್ಲಿ ಕ್ರಿಯಾಭಾವರೂಪ ಲಿಂಗಸಮನ್ವಯವೆಂದು 'ಅಂತರ್ಯಾಮ್ಯಂತ ರಶ್ಚೇತಿ ಕ್ರಿಯಾಭಾವಾಖ್ಯಮುಚ್ಯತೇ' ಎನ್ನುವಲ್ಲಿ ಹೇಳಿರುವರು. ಅದು ಅಯುಕ್ತವು. ಸೂತ್ರದಲ್ಲಿ ಭಾವವನ್ನೇ ಪ್ರತಿಜ್ಞಾಮಾಡಿರುತ್ತಾರೆ, ಕ್ರಿಯೆಯನ್ನು ಹೇಳಲಿಲ್ಲ ಎಂದರೆ, ಅಂತರ ಶಬ್ದವನ್ನು ಎರಡು ಅರ್ಥವುಳ್ಳದ್ದನ್ನಾಗಿ ವ್ಯಾಖ್ಯಾನಮಾಡುತ್ತಾರೆ—

ಮೂ ॥ ಅಂತಃ ಸ್ಥಿತ್ವಾ ರಮಣಕೃದಂತರಃ ಸ ಉದಾಹೃತಃ ।
ರಮಣಂ ಚಾತ್ಮಶಬ್ದೇನಾದೇಯಂ ಯಾತೀತಿ ಚೋಚ್ಯತೇ ॥ ೧೦ ॥

ಅ ॥ ಸಃ=ಪರಬ್ರಹ್ಮನು, ಅಂತಃ=ಚಕ್ಷುಸ್ಸಿನ ಒಳಗೆ, ಸ್ಥಿತ್ವಾ=ಇದ್ದು, ರಮಣಕೃತ್= ಕ್ರೀಡೆಯನ್ನು ಮಾಡುವವನಾಗಿ, ಅಂತರಃ=ಅಂತರನೆಂದು, ಉದಾಹೃತಃ=ಹೇಳಿಸಲ್ಪಟ್ಟದ್ದಾನೆ. (ಹಾಗಾದರೆ, 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿಹೋವಾಚ' ಎನ್ನುವುದು ಇಲ್ಲಿ ಉದಾಹರಣವಾಕ್ಯವು. ಇಲ್ಲಿ ಅಕ್ಷಿಸ್ಥನೇ ತೋರುತ್ತಾನೆ. ರಮಣಕರ್ತೃತ್ವವು ತೋರುವುದಿಲ್ಲ. ಶ್ರುತಿಯಲ್ಲಿ ಹೇಳಿದ್ದನ್ನೇ ಸೂತ್ರದಲ್ಲಿ ಪ್ರತಿಜ್ಞಾಮಾಡಬೇಕು. ಆದಪ್ರಯುಕ್ತ ಶ್ರುತಿಯಲ್ಲಿ ಹೇಳದೆ ಇದ್ದ ರಮಣಕರ್ತೃತ್ವವನ್ನು ಸೂತ್ರಕಾರರು ಹೇಗೆ ಪ್ರತಿಜ್ಞಾಮಾಡಿರುವರು ಎಂದರೆ—) ರಮಣಂ ಚ=ಅಕ್ಷಿಸ್ಥತ್ವವು ಮಾತ್ರವಲ್ಲ. ಮತ್ತೆ ರಮಣಕರ್ತೃತ್ವವೂ ಕೂಡ, ಎರಡನೇ ಚ=ಶಬ್ದದಿಂದ ಸೂತ್ರದಲ್ಲಿ ಮಾತ್ರವಲ್ಲ ಮತ್ತೆ ಶ್ರುತಿಯಲ್ಲಿಯೂ ಕೂಡ, ಎಂದುಕ್ತ ವಾಯಿತು. ಆತ್ಮಶಬ್ದೇನ=ಏಷ ಆತ್ಮಾ ಎನ್ನುವ ವಾಕ್ಯದಿಂದ, ಆದೇಯಂ=ಉಪಾದೇಯವಾದ ಸುಖವನ್ನೂ, ಸುಖಸಾಧನವನ್ನೂ, ಯಾತಿ=ಅನುಭವಿಸುತ್ತಾನೆ, ಇತಿ=ಈ ನಿರ್ವಚನದಿಂದ, ಉಚ್ಯತೇ=ಹೇಳಲ್ಪಡುತ್ತಾನೆ.

ತಾ ॥ ನ್ಯಾಯಸುಧಾ- ಸೂತ್ರಕಾರರಿಗೆ ಈ ರಮಣಕರ್ತೃತ್ವರೂಪವಾದ ಅರ್ಥವು ವಿವ ಕ್ಷಿತವಾಗಿದೆ. ಇಲ್ಲವಾದರೆ 'ಅಂತಸ್ತದ್ಧರ್ಮೋಪದೇಶಾತ್' ಎಂದು ಹೇಳಿದಂತೆ 'ಅಂತರುಪಪತ್ತೇಃ' ಎಂದೇ ಹೇಳುತ್ತಿದ್ದರು. ಹೀಗೆ ಹೇಳುತ್ತಿದ್ದರೆ ಸೂತ್ರವೂ ಲಘುವಾಗಬಹುದಿತ್ತು. ಅಂತಶ್ಶಬ್ದವೇ

ಉಪಪದವಾಗಿವುಳ್ಳ ಡಪ್ರತ್ಯಯಾಂತವಾದ ಕ್ರೀಡಾರ್ಥಕವಾದ ರಮ್ ಧಾತುವನ್ನು ಪ್ರಯೋಗಿಸಿರುವುದರಿಂದ ಈ ಅರ್ಥವನ್ನೇ ಪ್ರತಿಜ್ಞಾಮಾಡಿರುವರು ॥ ೧೦ ॥ ಸೂ. ೧೩ ॥ ೧೪ ॥

ಪ್ರಕರಣಬಲದಿಂದಲೂ ಚಕ್ಷುಸ್ಸಿನ ಒಳಗೆ ಇರುವವನು ಪರಮೇಶ್ವರನು ಎಂದು ಉಪಪಾದಿಸುವ ಸೂತ್ರವು.

## "ಓಂ ಸುಖವಿಶಿಷ್ಟಾಭಿಧಾನಾದೇವ ಚ ಓಂ" ॥ ಸೂ. ೧೫ ॥

'ವಿಶಿಷ್ಟಂ ಚ ತತ್ ಸುಖಂ ಚ, ಸುಖೇನ ವಿಶಿಷ್ಟಂ, ಸುಖೇಷು ವಿಶಿಷ್ಟಂ' ಎನ್ನುವ ವ್ಯುತ್ಪತ್ತಿಯಿಂದಾಗಲೀ 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಎನ್ನುವ ಶ್ರುತಿಯಲ್ಲಿ ಉಪಕ್ರಮದಲ್ಲಿ ಕಂ=ಸುಖವು, ಬ್ರಹ್ಮ=ಪೂರ್ಣವು ಎಂದು ಪೂರ್ಣತ್ವವಿಶಿಷ್ಟವಾದ ಸುಖರೂಪತ್ವವನ್ನು ಹೇಳಿರುವುದರಿಂದ ಅಂತರನು ಬ್ರಹ್ಮನೇ.

ಇಲ್ಲಿ ವಿಶಿಷ್ಟಪದವು ವ್ಯರ್ಥವು. 'ಸುಖಾಭಿಧಾನಾದೇವ' ಎಂದೇ ಹೇಳಿದ್ದರೆ ಸಾಕಾಗುತ್ತಿತ್ತು. ಸುಖಸಂಬಂಧವನ್ನು ಹೇಳುವುದಕ್ಕಾಗಿ ವಿಶಿಷ್ಟಪದವು ಎಂದರೆ— 'ಸುಖಿತ್ವಾಭಿಧಾನಾದೇವ' ಎಂದೂ ಮಾಡಲು ಶಕ್ಯವಾಗುವುದು. ಸೂತ್ರವೂ ಲಘುವಾಗುತ್ತಿತ್ತು. ಮತ್ತು ಸುಖಸಂಬಂಧವನ್ನು ಹೇಳುವುದು ಅಯುಕ್ತವೂ ಆಗುತ್ತದೆ. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ' ಎನ್ನುವ ಶ್ರುತಿಯಲ್ಲಿ ಸುಖಮಾತ್ರವನ್ನು ಹೇಳಿಯದೆ. ಎಂದರೆ—

### ಮೂ ॥ ವಿಶಿಷ್ಟಸುಖವತ್ವಾಚ್ಚ ಬ್ರಹ್ಮತ್ವಂ ಚ ವಿಶಿಷ್ಟತಾ ॥ ೧೧ ॥

ಅ ॥ ವಿಶಿಷ್ಟಸುಖವತ್ವಾಚ್ಚ = ಪೂರ್ಣತ್ವವಿಶಿಷ್ಟ ಸುಖರೂಪತ್ವವನ್ನು ಹೇಳಿರುವುದರಿಂದಲೂ, (ಅಂತರನು ಬ್ರಹ್ಮನೇ.) ಬ್ರಹ್ಮತ್ವಂ ಚ = ಬ್ರಹ್ಮತ್ವವೆಂದರೆ— ವಿಶಿಷ್ಟತಾ = ಪೂರ್ಣತ್ವವು.

ಟೀ ॥ (1) ಇಲ್ಲಿದ್ದ ಸುಖವಿಶಿಷ್ಟಶಬ್ದಕ್ಕೆ ಸುಖವುಳ್ಳವನೆಂದು ಅರ್ಥವಲ್ಲ. ಮತ್ತೆ ಸುಖಪೂರ್ಣತ್ವವೆಂದರ್ಥವು. ಸುಖಾಭಿಧಾನಾತ್ ಎಂದಿಷ್ಟೆ ಹೇಳಿದರೆ ಸುಖವು ಜೀವನಲ್ಲಿಯೂ ಇದ್ದಪ್ರಯುಕ್ತ ವ್ಯಭಿಚಾರವು ಬರುವುದು. ಆದಪ್ರಯುಕ್ತ ವಿಶಿಷ್ಟವೆನ್ನುವ ವಿಶೇಷಣವನ್ನು ತೆಗೆದುಕೊಂಡದ್ದು ಸಾರ್ಥಕವೇ. (2) ಶ್ರುತಿಯಲ್ಲಿ ಹೇಳದಿರುವುದರಿಂದ 'ವಿಶಿಷ್ಟಸುಖವತ್ವಾಚ್ಚ' ಎನ್ನುವ ಮತುಪ್ ಪ್ರಯೋಗವು ಹೇಗೆ ಕೂಡುತ್ತದೆಂದರೆ— ಸುಖವು ಸ್ವರೂಪವಾದಾಗ್ಯೂ ವಿಶೇಷಶಕ್ತಿಯಿಂದ ಸುಖವುಳ್ಳವನು ಆಗುತ್ತಾನೆಂದು ತಿಳಿಸುವುದಕ್ಕಾಗಿ. (3) ಸುಖದಲ್ಲಿ ವಿಶೇಷಣವಾದ ವಿಶಿಷ್ಟತ್ವವನ್ನು ಶ್ರುತಿಯಲ್ಲಿ ಹೇಳದಿರುವುದರಿಂದ ಹೀಗೆ ವ್ಯಾಖ್ಯಾನಮಾಡಿದರೆ ಹೇತುವು ಅಸಿದ್ಧವಾಗುತ್ತದೆಂದರೆ— ವಿಶಿಷ್ಟತ್ವವು (ಪೂರ್ಣತ್ವವು) ಬ್ರಹ್ಮಶಬ್ದಾರ್ಥವೇ. 'ಕಂ ಬ್ರಹ್ಮ' ಸುಖವು ಪೂರ್ಣವು ಎನ್ನುವ ಶ್ರುತಿಯಲ್ಲಿ ಉಕ್ತವಾಗಿದೆ ॥ ೧೧ ॥ ಸೂ. ೧೫ ॥

## ('ಓಂ ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ಓಂ') ॥ ಸೂ. ೧೬ ॥

(ಉಪನಿಷತ್ತಿನ ಶ್ರವಣಮನನಾದಿಗಳನ್ನು ಮಾಡಿದ ಪುರುಷರಿಗೆ 'ಸ ಏನಾನ್ ಬ್ರಹ್ಮ ಗಮಯತಿ' ಎನ್ನುವ ಶ್ರುತಿಯಲ್ಲಿ ಶ್ರೀ ವಾಯುವು ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾನೆಂದು ಹೇಳಿರುವುದರಿಂದ ಅಂತರನು ಬ್ರಹ್ಮನೇ.)

ಚಕ್ಷುಸ್ಸಿನ ಒಳಗೆ ಇರುವವನು ಈಶ್ವರನೆಂದು ಪ್ರತಿಪಾದಿಸಿ ಅಕ್ಷಿ ಆದಿತ್ಯರಿಗೆ ಅಗ್ನಿಯೇ ನಿಯಾಮಕನೆಂದು ಇಲ್ಲಿ ಹೇಳಿಸಿಕೊಳ್ಳಲ್ಪಡುತ್ತಾನೆ ಎಂದು ಪೂರ್ವಪಕ್ಷಿಯು ಹೇಳಿದ್ದನ್ನು ನಿರಾಕರಿಸುವುದಕ್ಕಾಗಿ ಸೂತ್ರವು.

**"ಓಂ ಅನವಸ್ಥಿತೇರಸಂಭವಾಚ್ಚ ನೇತರಃ ಓಂ"** ||ಸೂ.೧೭|| ಅಧಿ೪ ||

ಜೀವನಾದ ಅಗ್ನಿಯು ಮತ್ತೊಬ್ಬ ಜೀವನಿಗೆ ನಿಯಾಮಕನಾದರೆ ಆ ಅಗ್ನಿಗೂ ಮತ್ತೊಬ್ಬನು ನಿಯಾಮಕನು ಆವಶ್ಯಕನು. ಅವನಿಗೂ ಹೀಗೆ, ಹೀಗೆ ಅನವಸ್ಥಾದೋಷವು ಬರುವುದು. ಅಗ್ನಿಗೂ ಅಗ್ನಿಪ್ರೇರ್ಯನಾದ ಜೀವನಿಗೂ ಜೀವತ್ವವು ಸಮಾನವಾಗಿರುವುದರಿಂದ ನಿಯಮ್ಯ ನಿಯಾಮಕಭಾವವು ಕೂಡಲಾರದು. ಆದಪ್ರಯುಕ್ತ ಅಗ್ನಿಯು ಅಕ್ಷ್ಯಾದಿತ್ಯಸ್ಥನಾಗಿ ಇಲ್ಲಿ ಹೇಳಲ್ಪಡುವುದಿಲ್ಲ.

ಹೀಗೆ ಸೂತ್ರಕಾರರು ಹೇಳಿದ್ದು ಆಯುಕ್ತವು. ಸ್ವವ್ಯಾಹತಿಯು ಬರುವುದು. ನಾವೂ ಕೂಡ ಬ್ರಹ್ಮಾದಿ ಜೀವರು ಮಾನುಷಾದಿ ಜೀವರಿಗೆ ನಿಯಾಮಕರೆಂದು ಅಂಗೀಕರಿಸಿರುತ್ತೇವೆ ಪರರಿಗೆ ಅನವಸ್ಥಿತಿಯು ಅಸಂಭವವೂ ಬರುವುದಾದರೆ ನಮಗೂ ಏತಕ್ಕೆ ಬರಲಾರವು? ನಮಗೆ ಆ ದೋಷಗಳು ಬಾರದಿರುವುದಾದರೆ ಪರರಿಗೂ ಬಾರದಿರಲಿ, ಎಂದರೆ ಸೂತ್ರವನ್ನು ಚೆನ್ನಾಗಿ ವ್ಯಾಖ್ಯಾನಮಾಡಲಿಕ್ಕೆ ಉಪಯುಕ್ತವಾದ ಪ್ರಮೇಯವನ್ನು ಹೇಳುತ್ತಾರೆ—

ಮೂ || ಅನ್ಯೋನ್ಯ ನಿಯತಿಶ್ಚೇಶನಿಯಮೇನಾನ್ಯಥಾ ಭವೇತ್ ।
ಚೇತನಾನಾಂ ವಿಶೇಷೋ ಯಃ ಸ್ವಭಾವೋಽಪೀಶ್ವರಾರ್ಪಿತಃ ।
ಅನ್ಯೋನ್ಯನಿಯಮೋ ತಸ್ಮಾದನವಸ್ಥಿತ್ಯಸಂಭವೌ || ೧೨ ||

ಅ || ಚೇತನಾನಾಂ = ಜೀವರಿಗೆ, ಅನ್ಯೋನ್ಯನಿಯತಿಃ = ಯಾವುದು ಪರಸ್ಪರವಾಗಿ ನಿಯಮನವೋ ಅದು, ಅಂದರೆ ಬ್ರಹ್ಮಾದಿಗಳಿಗೆ ನಿಯಾಮಕತ್ವವು ಮನುಷ್ಯಾದಿಗಳಿಗಾದರೂ ನಿಯಮ್ಯತ್ವವು ಯಾವುದೋ ಅದು, ಈಶನಿಯಮೇ= ಶ್ರೀ ಹರಿಯ ಪ್ರೇರಣೆಯು ಇದ್ದರೇನೇ ಯುಕ್ತವಾದದ್ದು, ಭವೇತ್=ಆಗುವುದು. (ಅನವಸ್ಥಿತಿಯೂ ಅಸಂಭವವೂ ಇಲ್ಲ. ಪ್ರೇರಕ ಪರಂಪರೆಯಾದರೂ ಪರಾಪೇಕ್ಷೆಯಿಲ್ಲದಿರುವ ಪರಮೇಶ್ವರನಲ್ಲಿ ವಿಶ್ರಾಂತವಾಗುತ್ತದೆ. ಶ್ರೀ ಹರಿಯ ಪ್ರೇರಣೆಯಿಂದಲೇ ಇತರರಿಗೆ ನಿಯಮ್ಯ ನಿಯಾಮಕಭಾವವು ಬರುವುದು.) ಅನ್ಯಥಾ= ನಿಯಾಮಕನಾದ ಈಶ್ವರನು ಇಲ್ಲವಾದರೆ, ಅನ್ಯೋನ್ಯನಿಯತಿಃ=ಪರಸ್ಪರ ನಿಯಮನವು, ನ ಭವೇತ್=ಯುಕ್ತವಾಗಲಾರದು. (ಅನವಸ್ಥಿತಿ ಅಸಂಭವಗಳನ್ನು ಪರಿಹರಿಸತಕ್ಕ ಉಪಾಯ ವಿರುವುದಿಲ್ಲ.)

(ಹಾಗಾದರೆ, ಬ್ರಹ್ಮಾದಿಗಳಿಗೆ ನಿಯಾಮಕತ್ವವೂ ಮನುಷ್ಯಾದಿಗಳಿಗೆ ನಿಯಮ್ಯತ್ವವೂ ಎನ್ನುವ ಈ ವಿಶೇಷವು ಅವರ ಸ್ವಭಾವವೇ. ಏಕೆಂದರೆ— 'ನಚಾಧಿಕಾರಿಕಮಪಿ ಪತನಾನು ಮಾನಾತ್ತದಯೋಗಾತ್' (ಅಧ್ಯಾ. ೩. ಪಾ. ೪ ಅಧಿ. ೭ ಸೂ. ೪೧) ಎನ್ನುವಲ್ಲಿ ನಿಯಮನ ಮೊದಲಾದ ಆಯಾವ ವ್ಯಾಪಾರವು ಅವರವರ ಸ್ವಭಾವವೆಂದವಗತವಾಗಿದೆ. ಮತ್ತು 'ಪ್ರತ್ಯ ಕ್ಷೋಪದೇಶಾದಿತಿ ಚೇನ್ನಾಧಿಕಾರಿಕಮಂಡಲಸ್ಥೋಕ್ತೇಃ' (ಅಧ್ಯಾ. ೪. ಪಾ. ೪ ಅಧಿ. ೯. ಸೂ. ೧೯.) ಮುಕ್ತರಾದ ತಮ್ಮಿಂದ ಅವರನ್ನು ಪ್ರೇರಿಸುತ್ತಾ ಯಾವ ಮುಕ್ತರಾದ ದೇವತೆ

ಗಳೋ ಅವರು ಆಧಿಕಾರಿಕರು, ಅವರ ಸಮುದಾಯಕ್ಕೆ ನಿಯಾಮಕನಾಗಿರತಕ್ಕ ಮುಕ್ತಬ್ರಹ್ಮನಿಗೆ ಮುಕ್ತರಾದ ಸರ್ವದೇವತಾಪೂಜ್ಯತ್ವವನ್ನು ಹೇಳಿರುವುದರಿಂದ ಮೋಕ್ಷದಲ್ಲಿಯೂ ಇರತಕ್ಕದಾದಪ್ರಯುಕ್ತ ಅವರವರ ಸ್ವಭಾವವೇ. ಸ್ವಭಾವವೇ ಎಂದಾದಮೇಲೆ ಅದರಲ್ಲಿ ಪರಮೇಶ್ವರನ ಅಪೇಕ್ಷೆಯು ಎಂತಹುದು? ಎಂದರೆ) ಚೇತನಾನಾಂ=ಬ್ರಹ್ಮಾದಿಗಳ ಮತ್ತು ಮನುಷ್ಯಾದಿಗಳ ಯಃ ವಿಶೇಷಃ=ನಿಯಮ್ಯ ನಿಯಾಮಕತ್ವರೂಪವಾದ ಯಾವ ವಿಶೇಷವೋ ಅದು, ಸ್ವಭಾವೋಽಪಿ=ಅವರವರ ಸ್ವಭಾವವಾದಾಗ್ಯೂ, ಈಶ್ವರಾರ್ಪಿತಃ=ಈಶ್ವರನಿಂದ ಪ್ರಾಪಿಸಲ್ಪಟ್ಟದೆ. ('ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಂ' ಎನ್ನುವ ವಚನದಿಂದ. ಇಲ್ಲವಾದರೆ ಈಶ್ವರನಿಗೆ ಸರ್ವೈಶ್ವರ್ಯವು ಬಾರದೆ ಹೋಗುವುದು.)

ಪರರಿಗೆ ಸ್ವಾತಂತ್ರ್ಯವು ಬರಬೇಕಾಗುವುದು. ತಾರ್ಕಿಕರು ಆಕಾಶದಲ್ಲಿರತಕ್ಕ ಅನಾದಿಯಾದ ದ್ರವ್ಯತ್ವಕ್ಕೂ ಗುಣವತ್ವದ ಅಧೀನತ್ವವನ್ನೂ, ಅದ್ವೈತಿಗಳು ಜೀವಬ್ರಹ್ಮವಿಭಾಗಕ್ಕೆ ಅವಿದ್ಯಾಧೀನತ್ವವನ್ನೂ ಅಂಗೀಕರಿಸಿರುವರು ಯಾವ ಪದಾರ್ಥದ ಯಾವ ಧರ್ಮವು ಸರ್ವದಾ ಈಶ್ವರನಿಂದ ನಿಯಮಿಸಲ್ಪಡುತ್ತದೋ ಆ ಧರ್ಮವು ಆ ಪದಾರ್ಥದ ಸ್ವಭಾವವೆಂದು ಹೇಳಲ್ಪಡುತ್ತದೆ. ಯಾವ ಧರ್ಮವು ಕದಾಚಿತ್ ನಿಯಮಿಸಲ್ಪಡುತ್ತದೋ ಅದು ಸ್ವಭಾವವಲ್ಲ. ಹೀಗಾದರೆ ವ್ಯಾಹತಿಯಿಲ್ಲದೇನೇ ಸೂತ್ರಾರ್ಥವು ಉಪಪನ್ನವಾಯಿತೆನ್ನುತ್ತಾರೆ. ಅನ್ಯೋನ್ಯನಿಯಮವೇ ಎನ್ನುವುದರಿಂದ (ಯಾವ ಕಾರಣದಿಂದ ಈಶ್ವರನನ್ನು ಅಂಗೀಕರಿಸಿದರೇನೇ ಪರಸ್ಪರ ನಿಯಮನವು ಯುಕ್ತವಾಗುತ್ತದೋ, ಇಲ್ಲವಾದರೆ ಕೂಡುವುದಿಲ್ಲವೋ,) ತಸ್ಮಾತ್ = ಆದ ಪ್ರಯುಕ್ತ (ಈಶ್ವರನನ್ನು ಅಂಗೀಕರಿಸದೆ ಪರರಿಂದ) ಅನ್ಯೋನ್ಯನಿಯಮೇ = ಪರಸ್ಪರ ನಿಯಮನವು ಅಂಗೀಕರಿಸಲ್ಪಡುತ್ತಿರಲು, ಅನವಸ್ಥಿತ್ಯಸಂಭವೌ=ಅನವಸ್ಥಿತಿ ಅಸಂಭವಗಳು (ಸೂತ್ರಕಾರರಿಂದ ಹೇಳಲ್ಪಟ್ಟವುಗಳು ಯುಕ್ತಗಳಾಗುತ್ತವೆ).

ತಾ ॥ ಅಸಂಭವಶಬ್ದಾಭಿಧೇಯವಾದ, ಪ್ರವೃತ್ತ್ಯನುಪಪತ್ತಿರೂಪವಾದ ಫಲವು ಅನವಸ್ಥೆಯಲ್ಲಿಯೂ ಸಮಾನವಾಗಿರುವುದರಿಂದ ಅನವಸ್ಥಿತಿಗೂ, ಅಸಂಭವಕ್ಕೂ ಪ್ರಭೇದವೇನು? ಎಂದರೆ— ಅನವಸ್ಥೆಯಲ್ಲಿ ಯಾವುದಕ್ಕಾಗಿ ಉತ್ತರೋತ್ತರವನ್ನು ಅನುಸರಿಸುವುದೋ ಅದು ಮೂಲವು, ಅಂತಹ ಮೊದಲಿನದ್ದು ಪ್ರಮಾಣಸಿದ್ಧವಾಗದಿರುವುದರಿಂದ ಪ್ರವೃತ್ತಿಯಿಲ್ಲವೆಂದಾಗುವುದು. ಅಸಂಭವದಲ್ಲಿ ಆದರೂ ಸಾಮ್ಯದಿಂದ ವಿನಿಗಮಕವೇ ಇಲ್ಲದಿರುವುದರಿಂದ ಪ್ರವೃತ್ತಿಯಿಲ್ಲವೆಂದಾಗುವುದು. ಈಪ್ರಕಾರ ಎರಡರಲ್ಲಿಯೂ ಪ್ರವೃತ್ತಿನಿರೋಧವು ಸಮಾನವಾಗಿದ್ದರೂ ಅದನ್ನುಪಪಾದಿಸತಕ್ಕ ಪ್ರಕಾರಮಾತ್ರಕ್ಕೇನೇ ಭೇದವು. ಉದಾ = ನೀರಿನಲ್ಲಿ ಪೃಥಿವಿಯ ಸಂಬಂಧದಿಂದ ಗಂಧವು ತೋರುವುದು ಎಂದು ಹೇಳುವವನನ್ನು ಕುರಿತು ವಿನಿಗಮಕವಿಲ್ಲದಿರುವುದರಿಂದ ನೀರಿನ ಸಂಬಂಧದಿಂದಲೇ ಪೃಥಿವಿಯಲ್ಲಿ ಗಂಧವು ತೋರುವುದೆಂದು ಏಕೆ ಆಗಬಾರದು? ॥ ೧೨ ॥

ಈಶ್ವರನನ್ನು ಅಂಗೀಕರಿಸದೆ ಇರುವವನನ್ನು ಕುರಿತು ಈ ದೋಷವನ್ನು ಹೇಳಿದ್ದು. ಈಶ್ವರನನ್ನು ಅಂಗೀಕರಿಸಿ ಅಗ್ನಿಯು ನಿಯಾಮಕನಾಗಿ, ಅಕ್ಷ್ಯಾದಿಸ್ಥನಾಗಿ ಹೇಳಲ್ಪಡುತ್ತಾನೆ ಎಂದು ಹೇಳುವವನಿಗೆ ದೋಷವೇನೆಂದರೆ—

ಮೂ ॥ ಈಶ್ವರಶ್ಚೇನ್ನಿಯಂತಾ ಸ್ಯಾತ್ಸ ಏವ ಪ್ರಥಮಾಗತಃ ॥ ೧೩ ॥
ಕಿಮಿತ್ಯಪೋದ್ಯತೇ ಕಸ್ಮಾದ್ಪೃಥಾವಸ್ಥಿತಿಕಲ್ಪನಾ ॥
ದೋಷವತ್ಯೇವ ತಸ್ಮಾತ್ಸಾ ನೈವ ಕಾರ್ಯಾ ಕಥಂಚನ ॥ ೧೪ ॥

ಅ || ಈಶ್ವರಃ ನಿಯಂತಾ ಸ್ಯಾಚ್ಚೇತ್ = ಈಶ್ವರನು ಸರ್ವರಿಗೂ ನಿಯಾಮಕನೆಂದು ಅಂಗೀಕರಿಸುವುದಾದರೆ, ಆಗ, ಸ ಏವ=ಆ ಈಶ್ವರನೇ, ಪ್ರಥಮಾಗತಃ=ಮುಖ್ಯವಾಗಿ ಅಕ್ಷ್ಯಾದಿತ್ಯರಲ್ಲಿದ್ದವನಾಗಿ ಅಮೃತತ್ವಾದಿ ಪ್ರಮಾಣಗಳಿಂದ ಪ್ರತೀತನಾದವನು, ಕಿಮಿತಿ ಅಪೋದ್ಯತೇ= ಯಾವ ಕಾರಣದಿಂದ ಪರಿತ್ಯಾಗಮಾಡಲ್ಪಡುತ್ತಾನೆ, ಕಸ್ಮಾಚ್ಚ=ಯಾವ ಕಾರಣದಿಂದ, ಈಶ್ವರನು ಮತ್ತು ಆದಿತ್ಯಾದಿಗಳು ಇವರ ಮಧ್ಯದಲ್ಲಿ, ವೃಥಾ=ವ್ಯರ್ಥವಾಗಿ, ಅವಸ್ಥಿತಿ ಕಲ್ಪನಾ=ಅಗ್ನಿಯು ನಿಯಾಮಕನೆಂದು ಅಗ್ನಿಗೆ ಅವಸ್ಥಿತಿಕಲ್ಪನೆಯು (ಮಾಡಲ್ಪಡುತ್ತದೆ), ('ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ' ಎಂದು ಅಗ್ನಿಯು ಆದಿತ್ಯನಲ್ಲಿದ್ದಾನೆಂದು ಪ್ರತಿಪಾದಿಸುವ ಶ್ರುತಿಯು, 'ಸ ಏವಾಹಮಸ್ಮಿ' ಎಂದು ಅಭ್ಯಾಸವು, 'ಅಥ ಹಾಗ್ನಯಃ ಸಮೂದಿರೆ' ಇತ್ಯಾದಿ ಬಹ್ವಗ್ನಿ ಶ್ರುತಿಯು ಇತ್ಯಾದಿ ಪೂರ್ವಪಕ್ಷಪ್ರಾಪಕಗಳಾದ ಶ್ರುತಿಗಳು ಭಾಷ್ಯದಲ್ಲಿ ನಿರಸ್ತಗಳಾಗಿವೆ.

(ಈಶ್ವರನನ್ನು ಪರಿತ್ಯಾಗಮಾಡಲಿಕ್ಕೂ ಈಶ್ವರನು ಮತ್ತು ಆದಿತ್ಯ ಮೊದಲಾದವರು ಇವರ ಮಧ್ಯದಲ್ಲಿ ಅಗ್ನಿಯನ್ನು ಕಲ್ಪಿಸಲಿಕ್ಕೂ ಪ್ರಮಾಣವಿಲ್ಲವೆಂದು ಹೇಳಲ್ಪಟ್ಟಿತು. ಆದರಿಂದ ಏನಾಯಿತೆಂದರೆ) ತಸ್ಮಾತ್=ಈಶ್ವರನನ್ನು ಬಿಡಲಿಕ್ಕೂ, ಮಧ್ಯದಲ್ಲಿ ಅಗ್ನಿಯನ್ನು ಕಲ್ಪಿಸಲಿಕ್ಕೂ ಪ್ರಮಾಣವಿಲ್ಲದಿರುವುದರಿಂದ, ಸಾ=ಪರಮೇಶ್ವರನನ್ನು ಬಿಟ್ಟು ಅವಸ್ಥಿತಿಯನ್ನು ಕಲ್ಪಿಸುವುದು, ದೋಷವತ್ಯೇವ=ಶ್ರುತಹಾನಿ ಅಶ್ರುತಕಲ್ಪನಾರೂಪದೋಷವುಳ್ಳದ್ದೇ ಆದಪ್ರಯುಕ್ತ, ಕಥಂಚನ= ಯಾವಪ್ರಕಾರದಿಂದಲೂ, ನೈವ ಕಾರ್ಯಾ=ಮಾಡಲೇ ಕೂಡದು (ಇದರಿಂದ ಈಶ್ವರ-ಆದಿತ್ಯಾದಿಗಳ ಮಧ್ಯದಲ್ಲಿ ಅಗ್ನಿಯು ನಿಯಾಮಕನಾಗಿ ಇದ್ದಾನೆಂದು ಕಲ್ಪಕವಾದುದು ಇಲ್ಲದಿರುವುದರಿಂದಲೂ ಪ್ರಥಮದಲ್ಲಿ ತಿಳಿಯಲ್ಪಟ್ಟ ಈಶ್ವರನನ್ನು ಬಿಡುವುದು ಅಯುಕ್ತವಾಗಿರುವುದರಿಂದಲೂ ಅಂತರನು ಅಗ್ನಿಯಲ್ಲ, ಬ್ರಹ್ಮನೇ.

ತಾ || ನ್ಯಾಯಸುಧಾ— (1) ಅಕ್ಷ್ಯಾದಿತ್ಯರಲ್ಲಿರತಕ್ಕವನಾಗಿ ಇಲ್ಲಿ ಅಗ್ನಿಯು ಪ್ರತಿಪಾದ್ಯನಾಗುತ್ತಾನೆಂದು ತಿಳಿಯುವವನನ್ನು ಕುರಿತು ಸ್ವತಂತ್ರನಾದ ಈಶ್ವರನನ್ನು ಅಂಗೀಕರಿಸದೆ ಇದು ಹೇಳಲ್ಪಡುತ್ತದೋ, ಅಂಗೀಕರಿಸಿಕೊಂಡು ಹೇಳಲ್ಪಡುತ್ತದೋ ಎಂದು ವಿಕಲ್ಪಿಸಿಕೊಂಡು ಎರಡು ಪಕ್ಷಗಳಲ್ಲಿಯೂ ಸೂತ್ರಕಾರರು ದೂಷಣವನ್ನು ಹೇಳಿದರು. (2) ಅಥವಾ ಪ್ರತಿವಾದಿಯು ನಿರೀಶ್ವರನೆಂದು ನಿಶ್ಚಯಿಸಿ ಸೂತ್ರಕಾರರು ಅನವಸ್ಥಿತಿ, ಅಸಂಭವಗಳನ್ನು ಹೇಳಿದರೆಂದು ಪೂರ್ವಗ್ರಂಥಾರ್ಥವು. ಇದು ಹೇಗೆ ನಿಶ್ಚಿತವಾಯಿತೆಂದರೆ— ಸರ್ವ ನಿಯಾಮಕನು ಈಶ್ವರನೆಂದು ಪ್ರತಿವಾದಿಯು ಅಂಗೀಕರಿಸಿರುವುದಾದರೆ ಆಗ ಆ ಈಶ್ವರನೇ ಉಪಪತ್ಯಾದಿಗಳಿಂದ ಪ್ರಥಮತಃ ನಿಯಾಮಕನೆಂದು ಪ್ರಾಪ್ತನಾದಪ್ರಯುಕ್ತ ಯಾವುದಕ್ಕಾಗಿ ಆತನನ್ನು ಬಿಟ್ಟಿರುವನು? ಯಾವುದಕ್ಕಾಗಿ ವ್ಯರ್ಥವಾಗಿ ಅಗ್ನಿಗೆ ಅವಸ್ಥಿತಿಯನ್ನು ಕಲ್ಪಿಸಿರುವನು? ಪ್ರಯೋಜನವೂ, ಪ್ರಮಾಣವೂ ಇಲ್ಲದಿರುವುದರಿಂದ ಈ ಕಲ್ಪನೆಯನ್ನೇ ಮಾಡದೆ ಇರಬೇಕಿತ್ತು. ಪೂರ್ವಪಕ್ಷಿಯು ಸರ್ವಥಾ ಏನೂ ಜ್ಞಾನವಿಲ್ಲದವನಲ್ಲ. ಹಾಗಿದ್ದರೆ ಉನ್ಮತ್ತನಂತೆ ಆತನನ್ನು ಉಪೇಕ್ಷೆಮಾಡಬೇಕಿತ್ತು. ಹೀಗೆಲ್ಲಾ ಕಲ್ಪಿಸಿರುವುದರಿಂದ ಪೂರ್ವಪಕ್ಷಿಯು ನಿರೀಶ್ವರನೆಂದು ಸೂತ್ರಕಾರರ ಅಭಿಪ್ರಾಯವು.

## ಸಾರಾಂಶ.

ಸ. ರ. ವಿ— (1) ಅಗ್ನಿಗೂ, ಆದಿತ್ಯಾದಿಗಳಿಗೂ ನಿಯಮ್ಯ-ನಿಯಾಮಕಭಾವವು ಪರಮೇಶ್ವರನ ಆಜ್ಞಾನಿಮಿತ್ತಕವೆಂದು ಪೂರ್ವಪಕ್ಷಿಯೂ ಅಂಗೀಕರಿಸಿರುವನು. ಉದಾ=ದೇಶ

ಗಳಲ್ಲಿ ಅಧಿಕೃತನಾದ ಪುರುಷನಿಗೂ, ಪ್ರಜೆಗಳಿಗೂ ನಿಯಮ್ಯ-ನಿಯಾಮಕಭಾವವು ರಾಜಾಜ್ಞಾ ನಿಮಿತ್ತಕವು. ಸುರ-ನರಾದಿರೂಪರಾದ ಜೀವರಿಗೆ ನಿಯಮ್ಯ-ನಿಯಾಮಕಭಾವವು ಸ್ವಾಭಾವಿಕ ವಾಗಿರುವುದರಿಂದ ಕೃತ್ರಿಮವಾಗದೆ ಇದ್ದಾಗ್ಯೂ ಭಗವದಧೀನವೇ. (2) ಈಶ್ವರನ ಆಜ್ಞಾಪೇಕ್ಷೆ ಯಿಲ್ಲದೇನೇ ಗಾರ್ಹಪತ್ಯಾದಿಜೀವನು ಜೀವಾಂತರ ನಿಯಾಮಕನಾದರೆ ಅವನೂ ಜೀವನಾದ ಪ್ರಯುಕ್ತ ಮತ್ತೊಬ್ಬ ನಿಯಾಮಕನು, ಅವನಿಗೂ, ಮತ್ತೊಬ್ಬ ನಿಯಾಮಕನು ಹೀಗೆ ಅನವಸ್ಥೆಯು ಬರುವಪ್ರಯುಕ್ತ ಇಬ್ಬರಿಗೂ ಜೀವತ್ವವು ಸಮಾನವಾಗಿರುವುದರಿಂದ ನಿಯಮ್ಯ ನಿಯಾಮಕಭಾವವು ಕೂಡದೆ ಹೋಗುವುದು (2) ಅನವಸ್ಥಾ ಪರಿಹಾರಕ್ಕಾಗಿ ಯಾವನಾದರೂ ಒಬ್ಬನಿಗೆ ಶ್ರೀಹರಿಯು ನಿಯಾಮಕನೆಂದು ಅಂಗೀಕರಿಸುವುದಾದರೆ ಆ ಶ್ರೀಹರಿಯೇ ಅಗ್ನ್ಯಾದಿ ಗಳಲ್ಲಿ ಮುಖ್ಯ ನಿಯಾಮಕನೆಂದು ಶ್ರುತಿಗಳಲ್ಲಿ ಪ್ರತೀತನಾಗಿರುವುದರಿಂದ ಸ್ವೀಕರಿಸಲೇಬೇಕು ಪರಿತ್ಯಾಗಮಾಡಲಿಕ್ಕೆ ಕಾರಣವಿರುವುದಿಲ್ಲ. (3) ಅಕ್ಷ್ಯಾದಿಗಳಿಗೆ ನಿಯಾಮಕರು ಅಗ್ನ್ಯಾದಿ ಗಳು, ಅಗ್ನ್ಯಾದಿಗಳಿಗೆ ನಿಯಾಮಕನು ಶ್ರೀಹರಿಯು ಎನ್ನುವ ಕಲ್ಪನೆಯು ನಿಷ್ಪ್ರಮಾಣಕವೂ ವ್ಯರ್ಥವೂ ಆಗಿದೆ. 'ಸರ್ವಾಣಿ ಭೂತಾನಿ ಯೋಽಂತರೋ ಯಮಯತಿ' ಇತ್ಯಾದಿ ಶ್ರುತಿ ಗಳಿಂದ ವಿರುದ್ಧವೂ ಆಗಿದೆ. 'ಸೋಽಹಮಸ್ಮಿ' ಎನ್ನುವುದು ಅಗ್ನ್ಯಂತರ್ಯಾಮಿಯ ವಚನ ವೆಂದು ಯುಕ್ತವಾಗುತ್ತದೆ ॥ ೧೩ ॥ ೧೪ ॥ ಸೂ. ೧೭ ॥ ಅಧಿ ೪ ॥

॥ ಅಂತರಾಧಿಕರಣವು ಸಮಾಪ್ತವಾಯಿತು. ॥

---

## ಅಂತರ್ಯಾಮ್ಯಧಿಕರಣವು.

ಈ ಅಧಿಕರಣದಲ್ಲಿ ಅಂತಸ್ಥಿತಿರೂಪವಾದ, ಭಾವಯುಕ್ತವಾದ, ನಿಯಮನಾಖ್ಯವಾದ, ಕ್ರಿಯಾತ್ಮಕವಾದ ಲಿಂಗಕ್ಕೆ ಸಮನ್ವಯವನ್ನು ಮಾಡುತ್ತಾರೆ.

"ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮ ವ್ಯಪದೇಶಾತ್ ಓಂ" ॥ ಸೂ. ೧೮ ॥

'ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ' ಎಂದು ಶ್ರುತನಾದ ಅಂತರ್ಯಾಮಿಯು ಬ್ರಹ್ಮನೇ. ಪ್ರಕೃತಿಯು ಅಲ್ಲ. ತತ್ತದಭಿಮಾನಿ ಜೀವರೂ ಅಲ್ಲ. ಏಕೆಂದರೆ-ಅಧಿದೈವ ಅಧಿಭೂತಾದಿ ಪ್ರಕರಣಗಳಲ್ಲಿ ಆ ಅಂತರ್ಯಾಮಿಗೆ 'ಯಂ ಪೃಥಿವೀ ನ ವೇದ ಯಃ ಪೃಥಿವೀಮಂತರೋ ಯಮಯತಿ' ಇತ್ಯಾದಿಗಳಿಂದ ಪೃಥಿವ್ಯಾದ್ಯವಿದಿತತ್ವ ಅಂತರತ್ವ ಮೊದಲಾದ ಬ್ರಹ್ಮಧರ್ಮ ಗಳನ್ನು ಹೇಳಿರುವುದರಿಂದ.

('ಓಂ ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಓಂ') ॥ ಸೂ. ೧೯ ॥

(ಜೀವನೂ ಸಾಂಖ್ಯಸ್ಮೃತಿಯಲ್ಲಿ ಹೇಳಿದ ಪ್ರಧಾನವೂ ಅಂತರ್ಯಾಮಿಯಲ್ಲ. ಸಂಸಾರಿತ್ವ ತ್ರಿಗುಣತ್ವ ಮೊದಲಾದ ಜೀವ ಪ್ರಧಾನರ ಧರ್ಮಗಳನ್ನು ಹೇಳದಿರುವುದರಿಂದ.)

(' ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ ') ॥ ಸೂ. ೨೦ ॥ ಅಧಿ ॥ ೫ ॥

(ಯಾವ ಕಾರಣದಿಂದ 'ಆತ್ಮನೋಽಂತರಃ' ಎಂದು ಮಾಧ್ಯಂದಿನಾಯನರೂ, 'ವಿಜ್ಞಾನಾದಂತರಃ' ಎಂದು ಕಾಣ್ವರೂ, ಈ ಜೀವನನ್ನು ಅಂತರ್ಯಾಮಿಯಿಂದ ಭಿನ್ನನೆಂದು ಹೇಳುತ್ತಾರೋ, ಆದಕಾರಣ ಶಾರೀರನು ಅಂತರ್ಯಾಮಿಯಲ್ಲ. ಚಿತ್ಪ್ರಕೃತಿಯೂ ಅಂತರ್ಯಾಮಿಯಲ್ಲ.)

ಸ. ರ. ವಿ.— ಲೋಕದಲ್ಲಿ ಬಹುವ್ಯಾಪಾರವುಳ್ಳವನಿಗೆ ಕ್ಲೇಶವು ಕಂಡದರಿಂದ ಸರ್ವನಿಯಮನಾದಿ ವ್ಯಾಪಾರವುಳ್ಳ ಶ್ರೀ ಹರಿಗೆ ಚಿತ್ತ ವಿಕ್ಷೇಪವು ಕೂಡುವುದರಿಂದ ಕರ್ಮಕರ್ತೃತ್ವವು ಹೇಗೆ ಕೂಡುತ್ತದೆಂದು ಆಶಂಕಿಸಿ ಪರಿಹರಿಸುತ್ತಾರೆ.

ನ್ಯಾಯಸುಧಾ— ಹಾಗಾದರೆ ಈ ಅಧಿಕರಣವು ಅತೀತಾಧಿಕರಣದಿಂದಲೇ ಗತಾರ್ಥವಾಗಿದೆ. ಅಂತರ್ಯಾಮಿತ್ವವೆಂದರೆ ಒಳಗೆ ಇದ್ದು ನಿಯಮಿಸುವುದು. 'ಅಂತರ ಉಪಪತ್ತೇಃ' ಎನ್ನುವಲ್ಲಿ 'ಅಂತರಃ' ಎನ್ನುವುದಕ್ಕೂ ಇದೇ ಅರ್ಥವು ಅಂತರಃ ಎನ್ನುವಲ್ಲಿ ನಿಯಾಮಕತ್ವವು ವಿವಕ್ಷಿತವಲ್ಲವೆಂದಲ್ಲ. ಹಾಗಿದ್ದರೆ 'ಅನವಸ್ಥಿತೇರಸಂಭವಾಚ್ಚ' ಎನ್ನುವ ದೂಷಣವು ಸಂಬದ್ಧವಾಗದೇನೇ ಇರಬೇಕಾಗುವುದು, ಎಂದರೆ -- ಪ್ರಮೇಯಗಳಿಗೆ ಭೇದವನ್ನು ತೋರಿಸುವುದಕ್ಕಾಗಿ ಈ ಅಧಿಕರಣದಿಂದ ನಿವರ್ತನೀಯವಾದ ಆಶಂಕೆಯನ್ನು ತೋರಿಸುತ್ತಾರೆ.

ಮೂ || ರಮಣಂ ನಾತಿಯತ್ನಸ್ಯ ವಿಕ್ಷೇಪಾದೇವ ಯುಜ್ಯತೇ ।
ಇತಿ ಚೇತ್ಸರ್ವನಿಯಮೋ ಯಸ್ಯ ಕಸ್ಮಾನ್ನ ಶಕ್ಯತೇ || ೧೫ ||

ಅ || ಅತಿಯತ್ನಸ್ಯ=ಅತ್ಯಂತಪ್ರಯತ್ನವುಳ್ಳವನಿಗೆ, ವಿಕ್ಷೇಪಾದೇವ=ಚಿತ್ತವಿಕ್ಷೇಪವಿದ್ದ ಪ್ರಯುಕ್ತವೇ, ಮನಸ್ಸಿಗೆ ವ್ಯಾಕುಲತ್ವವಿದ್ದಪ್ರಯುಕ್ತವೇ, ರಮಣಂ = ಕ್ರೀಡೆಯು, ನ ಯುಜ್ಯತೇ = ಕೂಡುವುದಿಲ್ಲ. ಇತಿ ಚೇತ್=ಎಂದರೆ ಆ ವಿಷಯದಲ್ಲಿ ಇದು ಉತ್ತರವು. ಯಸ್ಯ=ಯಾವ ಪರಮೇಶ್ವರನಿಗೆ, ಸರ್ವ ನಿಯಮಃ=ಸರ್ವಾಂತರ್ಯಾಮಿತ್ವವು ಇದೆಯೋ, ತಸ್ಯ=ಆ ಪರಮೇಶ್ವರನಿಗೆ, ಕಸ್ಮಾತ್=ಯಾವ ಕಾರಣದ್ದೆಶೆಯಿಂದ ರಮಣಂ=ಕ್ರೀಡೆಯು, ನ ಶಕ್ಯತೇ=ಶಕ್ಯವಾಗುವುದಿಲ್ಲ. (ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸರ್ವಾಂತರ್ಯಾಮಿತ್ವವು ಇಲ್ಲಿ ಹೇತುವೆಂದು ಹೇಳಲ್ಪಡುತ್ತದೆ.)

ತಾ || ನ್ಯಾಯಸುಧಾ— (1) ಪೂರ್ವಾಧಿಕರಣದಲ್ಲಿ ಶ್ರೀ ಹರಿಯು ಅಕ್ಷ್ಯಾದಿಗಳಲ್ಲಿದ್ದು ಕ್ರೀಡಿಸುವವನು ಅಕ್ಷ್ಯಾದಿಗಳಿಗೆ ಪ್ರೇರಕನೆಂದು ಹೇಳಲ್ಪಟ್ಟಿದೆ. ವಿರುದ್ಧವಾಗಿರುವುದರಿಂದ ಅದು ಅಯುಕ್ತವು. ವ್ಯಾಪಾರಾನುಗುಣವಾಗಿ ಪ್ರಯತ್ನವು ಕಾಣುವುದರಿಂದ ಆದಿತ್ಯಾದಿಗಳನ್ನು ನಿಯಮಿಸಲಿಕ್ಕೆ ಅತಿಪ್ರಯತ್ನವು ಆವಶ್ಯಕವು. ಅತಿಪ್ರಯತ್ನವುಳ್ಳವನಿಗೆ ಚಿತ್ತವಿಕ್ಷೇಪವು (ಮನೋವ್ಯಾಕುಲತ್ವವು) ನಿಯತವಾಗಿದೆ. ವ್ಯಾಕುಲಚಿತ್ತನಿಗೆ ರಮಣವು ಕೂಡಲಾರದು. ಆದಪ್ರಯುಕ್ತ ನಿಯಾಮಕನು ರತಿ (ಕ್ರೀಡೆ) ಯುಳ್ಳವನು ಎನ್ನುವುದು ವ್ಯಾಹತವು. ಶ್ರುತಿ ಲಿಂಗ ಪ್ರಕರಣಾದಿ ನೂರಾರು ಹೇತುಗಳಿಂದಲೂ, ವ್ಯಾಹತಾರ್ಥವು ಸಿದ್ಧಿಸಲಾರದು. 'ಬಹುವ್ಯಾಪಾರತಾಯಾಶ್ಚ ಕ್ಲೇಶೋಽಧಿಕತರೋ ಭವೇತ್' ಎಂದು ಕ್ತವಾಗಿದೆ. (2) '೧ ಭಗವಾನ್ ನ ರಮಣಯುಕ್ತಃ ವಿಕ್ಷೇಪಯುಕ್ತತ್ವಾತ್ ಸಮ್ಮತವತ್' ಶ್ರೀ ಹರಿಯು ರಮಣದಿಂದ ಕೂಡಿದವನಲ್ಲ, ಚಿತ್ತವಿಕ್ಷೇಪದಿಂದ ಕೂಡಿರುವ ಪ್ರಯುಕ್ತ ಸಮ್ಮತನಂತೆ, ಹೇತುವು ಸಿದ್ಧವಾಗಲಿಲ್ಲವೆಂದು ಹೇಳಕೂಡದು. ೨ 'ಭಗವಾನ್ ವಿಕ್ಷೇಪ

ಯುಕ್ತಃ ಅತಿಪ್ರಯತ್ನವತ್ವಾತ್ ಸಮ್ಮತವತ್" ಶ್ರೀ ಹರಿಯು ವಿಕ್ಷೇಪದಿಂದ ಕೂಡಿದ್ದಾನೆ, ಅತಿಪ್ರಯತ್ನವುಳ್ಳವನಾದುದರಿಂದ ಸಮ್ಮತನಂತೆ, ಇಲ್ಲಿಯೂ ಹೇತುವಿಗೆಅಸಿದ್ಧಿಯಿಲ್ಲ. ಇ "ಭಗವಾನ್‌ಅತಿಪ್ರಯತ್ನವಾನ್ ವಿಶ್ವನಿಯಮನರೂಪಮಹಾವ್ಯಾಪಾರವತ್ವಾತ್ ಸಮ್ಮತವತ್" ಶ್ರೀಹರಿಯು ಅತ್ಯಂತಪ್ರಯತ್ನವುಳ್ಳವನು ಜಗನ್ನಿಯಮನರೂಪವಾದ ಮಹಾವ್ಯಾಪಾರವುಳ್ಳವನಾದ ಪ್ರಯುಕ್ತ, ಸಮ್ಮತನಂತೆ ಇಲ್ಲಿಯೂ ಅಸಿದ್ಧಿಯು ಇಲ್ಲ. ಮೊದಲಿನ ಅಧಿಕರಣದಲ್ಲಿಯೇ ಅಂತಹ ವ್ಯಾಪಾರವು ಸಿದ್ಧವಾಗಿದೆ. ಈ ಪ್ರಕಾರ ಹಿಂದೆ ಹೇಳಿದ ವ್ಯಾಪ್ತಿಯೂ, ಪಕ್ಷಧರ್ಮತೆಯೂ ಇವುಗಳ ನಿಶ್ಚಯಕ್ಕಾಗಿ 'ವಿಕ್ಷೇಪಾದೇವ' ಎನ್ನುವಲ್ಲಿ ಏವ ಶಬ್ದವನ್ನು ಪ್ರಯೋಗ ಮಾಡಿರುವರು. ಇದಕ್ಕೆ ಪರಿಹಾರವಾಗಿ ಅಧಿಕರಣಾರ್ಥವನ್ನು ಗೂಢಾಭಿಸಂಧಿಯಾಗಿ 'ಇತಿ ಚೇತ್' ಇತ್ಯಾದಿಗಳಿಂದ ಹೇಳಿದರು ಹಿಂದಿನ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸರ್ವಾಂತರ್ಯಾಮಿತ್ವವು ಇಲ್ಲಿ ಹೇತುವೆಂದು ಹೇಳಲ್ಪಡುತ್ತದೆ ॥ ೧೫ ॥

ಹಾಗಾದರೆ, ಪಿಣ್ಯಾಕವನ್ನು (ಹಿಂಡಿಯನ್ನು) ಬೇಡಲಿಕ್ಕೆ ಬಂದವನ ಹತ್ತಿರ ಮತ್ತೊಬ್ಬನು ಕಾರಣಾಂತರದಿಂದ ನಿರ್ಬಂಧಿಸಿ ತೈಲವನು ಕೊಟು ಮುಂದೆ ಹೋಗಬೇಕೆಂದು ಹೇಳಿದೊಡನೆ ತೈಲದಾನವು ಹೇಗೆ ಆತನಿಗೆ ಪ್ರಸಕ್ತವಾಯಿತೋ ಹಾಗೆಯೇ ಇದು ಉಂಟಾಯಿತು. ಆದಿತ್ಯಾದಿ ನಿಯಾಮಕನಿಗೆ ಚಿತ್ತವಿಕ್ಷೇಪವು ಕೂಡುವುದರಿಂದ ರಮಣವು ಕೂಡುವುದಿಲ್ಲವೆಂದು ಹೇಳಿದಾಗ ಸರ್ವನಿಯಾಮಕತ್ವವು ಉಕ್ತವಾಯಿತು ಆದಕ್ಕಿಂತಲೂ ಅತಿಶಯವಾಗಿ ಮನಸ್ಸು ವ್ಯಾಕುಲವಾಗಿರುವುದರಿಂದ ರಮಣವು ಕೂಡುವುದಿಲ್ಲವೆಂದೇ ಆಯಿತು. ಎಂದರೆ— ಅಭಿಪ್ರಾಯವನ್ನು ಪ್ರಕಟೀಕರಿಸುತ್ತಾರೆ.

ಮೂ ॥ ಸ್ವಾ (ಅ)ತ್ಮನಾ ನಿಯತಂ ವಸ್ತು ಪ್ರತೀಪಂ ಹ್ಯಾತ್ಮನೋ ಭವೇತ್ ॥
ಸ್ವಾಧೀನ ಸತ್ತಾಶಕ್ತ್ಯಾದಿ ಕಥಮಾತ್ಮಪ್ರತೀಪಕಂ ॥ ೧೬ ॥

ಅ ॥ ಯತ್ ವಸ್ತು=ಯಾವ ವಸ್ತುವು, ಸ್ವಾತ್ಮನಾ=ದೇವದತ್ತನಿಂದ, ಅನಿಯತಂ= ನಿಯತವಲ್ಲವೋ ಅಂದರೆ. ದೇವದತ್ತನ ಅನಧೀನವಾದ ಸತ್ತಾ ಪ್ರತೀತಿ ಪ್ರವೃತ್ತಿಯುಳ್ಳದ್ದೋ, ಅದೇವೇ, ಆತ್ಮನಃ= ದೇವದತ್ತನಿಗೆ, ಪ್ರತೀಪಂ = ಚಿತ್ತವಿಕ್ಷೇಪಕವಾದುದು, ಭವೇತ್=ಆಗುವುದು. ಹಿ=ಹೀಗೆ ದೃಷ್ಟವಾಗಿದೆ. ಈ ಜಗತ್ತಾದರೂ, ಸ್ವಾಧೀನ ಸತ್ತಾಶಕ್ತ್ಯಾದಿ= ಈಶ್ವರಾಧೀನವಾದ ಸತ್ತಾ ಶಕ್ತಿ ಮೊದಲಾದುದುಳ್ಳದ್ದು. ತತ್=ಆ ಜಗತ್ತು, ಆತ್ಮಪ್ರತೀಪಕಂ= ಈಶ್ವರನಿಗೆ ಚಿತ್ತವಿಕ್ಷೇಪಕವಾದುದು, ಕಥಂ=ಹೇಗೆ ಆಗುವುದು. ಅಥವಾ, ವಸ್ತು=ಈ ಜಗತ್ತು, ಸ್ವಾತ್ಮನಾ = ಈಶ್ವರನಿಂದ, ಅನಿಯತಂ = ನಿಯತವಾಗದಿದ್ದಪಕ್ಷದಲ್ಲಿ, ಅಂದರೆ, ಈಶ್ವರಾಧೀನವಾದ ಸತ್ತಾದಿಗಳುಳ್ಳದ್ದು ಆಗದೆ ಹೋದಪಕ್ಷದಲ್ಲಿ, ಆವಾಗಲೇ, ಆತ್ಮನಃ = ಪರಮಾತ್ಮನಿಗೆ, ಪ್ರತೀಪಂ ಭವೇತ್ ಹಿ=ಚಿತ್ತವಿಕ್ಷೇಪಕವಾದದ್ದಾಗುವುದು. ಹೀಗೆ ಅಲ್ಲವಷ್ಟೆ! ಅಂತೂ ರಾಜಾದಿಗಳಂತೆಯೇ ನಿಯಾಮಕತ್ವಮಾತ್ರವು ಅಂತರ್ಯಾಮಿತ್ವವಲ್ಲ ಮತ್ತೆ ಸತ್ತಾ ಪ್ರತೀತಿ ಪ್ರವೃತ್ತಿಪ್ರದತ್ವವು ಅಂತರ್ಯಾಮಿತ್ವವೆಂದುಕ್ತವಾಯಿತು ॥

## ಸಾರಾಂಶ.

ತಾ ॥ ಸ. ರ. ವಿ.— ಇಚ್ಛಾಮಾತ್ರದಿಂದಲೇ ಸರ್ವ ಪ್ರಪಂಚವನ್ನೂ ನಿಯಮಿಸತಕ್ಕ ಶ್ರೀ ಹರಿಗೆ ಪ್ರಾಕೃತ ಪುರುಷರ ದೃಷ್ಟಾಂತವನ್ನು ಇಟ್ಟುಕೊಂಡು ದುಃಖಾದಿಗಳನ್ನು ಆಪಾದಿಸ ಕೂಡದು. ಯಾವ ವಸ್ತುವು ಯಾರ ಶಕ್ತಿಯಿಂದ ನಿಯಮಿತವಾಗುವುದಿಲ್ಲವೋ ಅದೇವೇ ಆತನಿಗೆ

ಚಿತ್ತಾದಿ ವಿಕ್ಷೇಪಕವಾಗಿ ದೃಷ್ಟವಾಗಿಯದೆ. ಆದಪ್ರಯುಕ್ತ ಆನಂದವನ್ನು ಅನುಭವಿಸು ವವನೆಂದು ಶ್ರುತನಾದ, ಸರ್ವ ನಿಯಾಮಕನಾದ ಅಕ್ಷಿಯಲ್ಲಿರುವ ಪುರುಷನು ದಿವ್ಯ ಜ್ಞಾನಕ್ಕೆ ಗೋಚರನಾದ ವಿಷ್ಣುವೇ ಎಂದು ಸಿದ್ಧವಾಯಿತು ॥ ೧೬ ॥ ಸೂ. ೧೮ ॥ ೧೯ ॥ ೨೦ ॥ ಅಧಿ. ೫ ॥

ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು.



## ಅದೃಶ್ಯತ್ವಾಧಿಕರಣವು.

ಈ ಅಧಿಕರಣದಲ್ಲಿ ಅಭಾವಾತ್ಮಕ ಲಿಂಗಕ್ಕೆ ಸಮನ್ವಯವನ್ನು ಮಾಡುತ್ತಾರೆ.

"ಓಂ ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ ಓಂ" ॥ ಸೂ ೨೧ ॥

'ಯತ್ತದದ್ರೇಶ್ಯಮಗ್ರಾಹ್ಯಂ' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಅದೃಶ್ಯತ್ವಾದಿ ಗುಣ ಗಳುಳ್ಳ ಅಕ್ಷರನು ಬ್ರಹ್ಮನೇ, ಚಿತ್ಪ್ರಕೃತಿ-ಅಚಿತ್ಪ್ರಕೃತಿ ವಿರಿಂಚ ರುದ್ರರಲ್ಲ. 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂದು ಪರವಿದ್ಯಾವಿಷಯತ್ವರೂಪವಾದ ಧರ್ಮವನ್ನು ಹೇಳಿರು ವುದರಿಂದ—

"ಓಂ ವಿಶೇಷಣ ಭೇದವ್ಯಪದೇಶಾಭ್ಯಾಂ ಚ ನೇತರೌ ಓಂ" ॥ ಸೂ. ೨೨ ॥

'ಯಃ ಸರ್ವಜ್ಞಃ' ಎಂದು ಸರ್ವಜ್ಞತ್ವ ವಿಶೇಷಣವಿದ್ದಪ್ರಯುಕ್ತವೂ ಪರತಃ ಪರತ್ವರೂಪವಿಶೇಷಣ ವಿದ್ದಪ್ರಯುಕ್ತವೂ ಜಡಪ್ರಕೃತಿಯು ಅದೃಶ್ಯತ್ವಾದಿಗುಣಗಳುಳ್ಳದ್ದು, ಅಕ್ಷರಶಬ್ದವಾಚ್ಯವಲ್ಲ. 'ತಸ್ಮಾದೇತದ್ಬ್ರಹ್ಮ' 'ಅನ್ಯಮೀಶಂ' ಎಂದೂ ವಿರಿಂಚರುದ್ರರಿಗೆ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನದ್ದೆಶೆಯಿಂದ ಭೇದವನ್ನು ಹೇಳಿರುವುದರಿಂದ ವಿರಿಂಚರುದ್ರರು ಅದೃಶ್ಯತ್ವಾದಿಗುಣ ಗಳುಳ್ಳವರು ಅಲ್ಲ.)

("ಓಂ ರೂಪೋಪನ್ಯಾಸಾಚ್ಚ ಓಂ") ॥ ಸೂ. ೨೩ ॥ ಅಧಿ ೬ ॥

('ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' ಎಂದು ರುಗ್ಮವರ್ಣವನ್ನು ಹೇಳಿರುವುದ ರಿಂದಲೂ ಅದೃಶ್ಯತ್ವಾದಿಗುಣಗಳುಳ್ಳವನು ಬ್ರಹ್ಮನೇ ॥)

ಈ ಅಧಿಕರಣದಲ್ಲಿ 'ಯತ್ತದದ್ರೇಶ್ಯಂ' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಅದೃಶ್ಯತ್ವಾದಿ ಧರ್ಮಗಳಿಗೆ ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಅವುಗಳಿಗೆ ಜನ್ಮಾಧಿಕರಣ ದಲ್ಲಿಯೂ ಅತ್ತೃತ್ವಾಧಿಕರಣದಲ್ಲಿಯೂ ಹೇಳಿದಪ್ರಕಾರ ಬ್ರಹ್ಮಸ್ವರೂಪತ್ವವು ಅಂಗೀಕೃತ ವಾಗಿದೆ. ಅದನ್ನು ಅಭ್ಯಧಿಕಾಶಂಕೆಯಿಂದ ಆಕ್ಷೇಪಿಸುತ್ತಾರೆ—

ಮೂ ॥ ಗುಣಕ್ರಿಯಾದಯೋ ಭಾವಾ ಯದಿ ಸ್ಯುರಭೇದಿನಃ ।
ಅಭೇದೋ ಭಾವಧರ್ಮಾಣಾಂ ಬ್ರಹ್ಮಣಾ ಯುಜ್ಯತೇ ಕಥಂ ॥
ನಾಭಾವೋ ಭಾವ ಇತಿ ಚ ವಿಶೇಷಃ ಪ್ರಾಯಶೋ ಭವೇತ್ ॥ ೧೭ ॥

ಅ || ಗುಣಕ್ರಿಯಾದಯಃ = ಆನಂದಾದಿ ಗುಣಗಳು ಸಂಹರಣಾದಿ ಕ್ರಿಯೆಗಳೂ, ಭಾವಾಃ=ಸರ್ವಗತತ್ವಾದಿ ಭಾವಗಳೂ, ಅಸ್ಮದಯಾದಿರೂಪಗಳೂ ಪುಚ್ಛಾದ್ಯವಯವಗಳೂ ಕೂಡ, ಯದಿ ಅಭೇದಿನಃ=ಭೇದವಿಲ್ಲದಿರುವವುಗಳೆಂದು ಅಂಗೀಕರಿಸಲ್ಪಟ್ಟರೆ ಆಗ, ಸ್ಯುವಾರ್=ಹಾಗೆಯೇ ಆಗಲಿ, ಅವುಗಳು ಭಾವಗಳಾಗಿರುವುದರಿಂದ ಭಾವಾಭಾವಗಳಿಗೆ ಐಕ್ಯವು ವಿರುದ್ಧವೆಂದು ಮೇಲೆ ಹೇಳುವ ಅನುಪಪತ್ತಿಯೂ ಇರುವುದಿಲ್ಲ. ಅನುಪಪತ್ಯಂತರಗಳು (ಅಂದರೆ ಅಭೇದವಿದ್ದರೆ ಗುಣಗುಣಿಭಾವಾದಿಗಳು ಕೂಡಲಾರವು, ಕ್ರಿಯೆಗಳು ಅನಿತ್ಯಗಳಾಗಿರುವುದರಿಂದ ಬ್ರಹ್ಮಾಭೇದವು ಕೂಡಲಾರದು, ಅಲ್ಪಸ್ಥಾನದಲ್ಲಿದ್ದವನಿಗೆ ಸರ್ವಗತತ್ವವು ಕೂಡಲಾರದು, ಅತಿಪ್ರಯತ್ನವಿದ್ದವನಿಗೆ ರಮಣವು ಕೂಡುವುದಿಲ್ಲ, ಒಬ್ಬನಿಗೆ ಅನೇಕತ್ವವು ಕೂಡುವುದಿಲ್ಲ, ಅವಯವಿಗೆ ಅವಯವತ್ವವು ಕೂಡುವುದಿಲ್ಲ, ಇದುಮೊದಲಾದುವುಗಳು ಪರಿಹೃತಗಳಾಗಿವೆ.) ಅಭಾವಧರ್ಮಾಣಾಂ = ಅದೃಶ್ಯತ್ವಮೊದಲಾದ ಧರ್ಮಗಳಿಗಾದರೂ, ಬ್ರಹ್ಮಣಾ=ಪರಬ್ರಹ್ಮನಿಂದ, ಅಭೇದಃ=ಐಕ್ಯವು, ಕಥಂ=ಹೇಗೆ, ಯುಜ್ಯತೇ=ಕೂಡುತ್ತದೆ. (ಅಂದರೆ ಅಭೇದವು ಕೂಡುವುದಿಲ್ಲ. ಅದೃಶ್ಯತ್ವಾದಿ ಧರ್ಮಗಳು ಅಭಾವಗಳು, ಬ್ರಹ್ಮನು ಭಾವರೂಪನು, ಭಾವಾಭಾವಗಳಿಗೆ ಐಕ್ಯವು ವಿರುದ್ಧವು.) (ಈ ಆಶಂಕೆಯನ್ನು ಪರಿಹರಿಸುತ್ತಾರೆ.) ಅಭಾವಃ=ಅನ್ಯೋನ್ಯಾಭಾವವು, ಭಾವ ಇತಿ ಚ=ಭಾವವೆನ್ನುವುದೂ ಇವುಗಳಿಗೆ, (ಲೋಕದಲ್ಲಿಯೂ)ವಿಶೇಷಃ=ಭೇದವು, ಪ್ರಾಯಶಃ=ಹೆಚ್ಚಾಗಿ, ನ ಭವೇತ್=ಆಗಲಾರದು.

ತಾ || ನ್ಯಾಯಸುಧಾ-(1) ದೃಶ್ಯದಿಂದ ಬೇರೆಯಾದುದು ಅದೃಶ್ಯವು ಅದರ ಧರ್ಮವು ಅದೃಶ್ಯತ್ವವು. ಅದೃಶ್ಯತ್ವಾದಿಶಬ್ದಗಳಿಂದ ದೃಶ್ಯಾದ್ಯನ್ಯೋನ್ಯಾಭಾವವು ಹೇಳಲ್ಪಡುತ್ತದೆ. ದೃಶ್ಯದ ಪ್ರಾಗಭಾವಾದಿಯು ಹೇಳಲ್ಪಡುವುದಿಲ್ಲ. (2) ದೃಶ್ಯಾದಿ ವಿರೋಧಿತ್ವರೂಪವಾದ ಅರ್ಥವಾಗಲಿ ಎಂದರೆ—ಸಹಾನವಸ್ಥಾನ, ವಧ್ಯಘಾತುಕಭಾವ, ಭಾವಾಭಾವರೂಪಗಳಾದ ವಿರೋಧಗಳು ಕೂಡುವುದಿಲ್ಲ. ಏಕೆಂದರೆ-ಬ್ರಹ್ಮನು ವ್ಯಾಪ್ತನಾಗಿರುವುದರಿಂದ, ದೃಶ್ಯಘಟಾದಿಗಳಿಂದ ಒಟ್ಟಿಗೇನೇ ಇರುತ್ತಾನೆ. ತಾನೂ ದೃಶ್ಯನಾಗಿರುವುದರಿಂದ ದೃಶ್ಯಘಾತುಕತ್ವವಿದ್ದರೆ ಸ್ವವ್ಯಾಘಾತಕತ್ವವು ಬರಬೇಕಾಗುವುದರಿಂದ ಕೂಡುವುದಿಲ್ಲ. ದೃಶ್ಯಬ್ರಹ್ಮರಿಬ್ಬರೂ ಭಾವಗಳೇ ಆಗಿರುತ್ತಾರೆ. ಆದುದರಿಂದ ಭಾವಾಭಾವರೂಪವಿರೋಧವಿಲ್ಲ. ತಾದಾತ್ಮ್ಯಾಭಾವರೂಪ ವಿರೋಧವು ಅನ್ಯೋನ್ಯಾಭಾವರೂಪವೇ. ತಥಾಚ ಅನ್ಯೋನ್ಯಾಭಾವಕ್ಕೂ, ಭಾವಕ್ಕೂ ಲೋಕದಲ್ಲಿಯೂ ಭೇದವಿಲ್ಲದಿರುವಾಗ ಅನ್ಯೋನ್ಯಾಭಾವದಿಂದ ಬ್ರಹ್ಮನಿಗೆ ಐಕ್ಯಹೇಳಿದರೆ ಸರ್ವಥಾನುಪಪತ್ತಿಯು ಬರಲಾರದು. ಬ್ರಹ್ಮನಲ್ಲಿ 'ತದಭಾವೋ ಹಿ' ಎಂದು ಮೇಲೆ ಹೇಳುವಪ್ರಯುಕ್ತ 'ಪ್ರಾಯಶಃ' ಎಂದು ಹೇಳಿದ್ದು. ಅಥವಾ ಅಭಾವಃ' ಎನ್ನುವುದರಿಂದ ನಾಲ್ಕುವಿಧವಾದ ಅಭಾವವೂ ಪ್ರಾಪ್ತವಾಗುವಾಗ ಅನ್ಯೋನ್ಯಾಭಾವವನ್ನು ಸ್ವೀಕರಿಸುವುದಕ್ಕಾಗಿ 'ಪ್ರಾಯಶಃ' ಎಂದು ಹೇಳಿದ್ದು. (3) ಅನ್ಯೋನ್ಯಾಭಾವವು ಪ್ರತಿ ವಸ್ತುಗಳಲ್ಲಿಯೂ ನಿಯತವಾಗಿರುವುದರಿಂದ ಪ್ರಾಗಭಾವಾದಿಗಳದ್ದೆಶೆಯಿಂದಲೂ ಹೆಚ್ಚು ಇರುವುದು. ನಿತ್ಯಾನಾದಿ ವಸ್ತುಗಳಿಗೆ ಪ್ರಾಗಭಾವಾದಿಗಳು ಇರುವುದಿಲ್ಲ. (4) ಹಾಗಾದರೆ, ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವಗಳೆಂದು ಪ್ರಭೇದವುಳ್ಳ ಸಂಸರ್ಗಾಭಾವವು ೧ ಧರ್ಮಿಯಿಂದ ಭಿನ್ನವೋ ಅಥವಾ ೨ ಅಭಿನ್ನವೋ ೧ನೇದ್ದು ಕೂಡಲಾರದು. ಬ್ರಹ್ಮನಲ್ಲಿರುವ ಅತ್ಯಂತಾಭಾವರೂಪವಾದ ಸಂಸರ್ಗಾಭಾವಕ್ಕೂ ಭೇದವು ಬರಬೇಕಾಗುವುದು. ತಥಾಚ 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಇತ್ಯಾದಿ ಶ್ರುತಿವಿರೋಧವು ಬರುವುದು. ಅತ್ಯಂತಾಭಾವರೂಪವಾದ ಸಂಸರ್ಗಾಭಾವವು ಬ್ರಹ್ಮನಲ್ಲಿ ಶ್ರುತವಾಗಲಿಲ್ಲವೆಂದು ಹೇಳಕೂಡದು. 'ಅಗೋತ್ರಂ ಅವರ್ಣಂ' ಇತ್ಯಾದಿ ಶ್ರುತಿಗಳಿಂದ ಗೋತ್ರಾದಿ ಸಂಸರ್ಗಾಭಾವವು ಪ್ರತೀತವಾಗಿದೆ.

೨ನೇ ಕಲ್ಪದಲ್ಲಿ (ಧರ್ಮಿಯಿಂದ ಅಭಿನ್ನವೆನ್ನುವ ಕಲ್ಪದಲ್ಲಿ) ಅನ್ಯೋನ್ಯಾಭಾವಕ್ಕೇನೇ ಧರ್ಮಿಸ್ವರೂಪತ್ವವನ್ನು ನಿಶ್ಚಯಿಸಿದರಿಂದ ಪ್ರಯೋಜನವೇನು? ತಥಾಚ, 'ಅಭಾವಃ' ಎಂದು ಸಾಮಾನ್ಯವಾಗಿಯೇ ಹೇಳಬೇಕಿತ್ತು. ಹೀಗಾದರೆ 'ಅದ್ರೇಶ್ಯಮಗ್ರಾಹ್ಯಮಗೋತ್ರಂ' ಇತ್ಯಾದಿ ಶ್ರುತಿಗಳಲ್ಲಿದ್ದ ಎಲ್ಲಾ ಪದಗಳ ವ್ಯಾಖ್ಯಾನವನ್ನೂ ಸೂತ್ರಕಾರರು ಮಾಡಿದಂತೆ ಆಗುತ್ತಿತ್ತು. ಅನ್ಯೋನ್ಯಾಭಾವವನ್ನು ಮಾತ್ರ ಹೇಳಿದರೆ ಅದರಿಂದ ಎಲ್ಲಾ ಪದಗಳ ವ್ಯಾಖ್ಯಾನವು ಸಿಗುವುದಿಲ್ಲ, ಎಂದು ಶಂಕಿಸಿದರೆ— ಪ್ರಾಗಭಾವಾದಿಗಳು ಧರ್ಮಿಯಿಂದ ಭಿನ್ನಗಳೇ. ಏಕೆಂದರೆ, ಧರ್ಮಿಗೆ ವಿನಾಶವಿದ್ದರೂ ಪ್ರಾಗಭಾವಾದಿಗಳಿಗೆ ವಿನಾಶವಿಲ್ಲ. ಯಾವ ಭೂತಲಾದಿಗಳಲ್ಲಿ ಘಟಪ್ರಾಗಭಾವಾದಿಗಳು ಇರುತ್ತವೋ, ಆ ಭೂತಲಾದಿಗಳಿಗೆ ಖನನಾದಿಗಳಿಂದ ವಿನಾಶವಿದ್ದಾಗ್ಯೂ ಘಟಪ್ರಾಗಭಾವಾದಿಗಳು ಇದ್ದೇ ಇರುತ್ತವೆ. ನಷ್ಟ ಭೂತಲಾದಿಗಳಿಗೆ ಅಭಾವಧರ್ಮಿತ್ವವು ಹೇಗೆಂದರೆ— ಪ್ರತಿಯೋಗಿತ್ವಾದಿಗಳಿಗೆ ಧರ್ಮಿಸತ್ತಾಸಾಪೇಕ್ಷಿತ್ವವು ಹೇಗೆ ಇಲ್ಲವೋ ಹಾಗೆಯೇ ಭೂತಲಾದಿರೂಪವಾದ ಧರ್ಮಿಗೆ ಸತ್ವವನ್ನು ಅಪೇಕ್ಷಿಸುವುದಿಲ್ಲ. ಮತ್ತೆ ಬೌದ್ಧವೇ. ಸಂಸರ್ಗಾಭಾವವು ಧರ್ಮಿಯುದ್ದೇಶೆಯಿಂದ ಭಿನ್ನವಾಗಿರುವ ಪ್ರಯುಕ್ತವೇ ಭಾಷ್ಯಕಾರರು ತತ್ವವಿವೇಕದಲ್ಲಿ (ಪು ೨೦೨) 'ದ್ವಿವಿಧಂ ಪರತಂತ್ರಂ ಚ ಭಾವೋಽಭಾವ ಇತೀರಿತಃ' ಎಂದು ಭಾವಪದಾರ್ಥದಂತೆ ಅಭಾವವೂ ತತ್ವಾಂತರವೆಂದು ಹೇಳಿ 'ಭಾವಾಭಾವಸ್ವರೂಪತ್ವಾನ್ನಾನ್ಯೋನ್ಯಾಭಾವತಾ ಪೃಥಕ್' ಎಂದು ಅನ್ಯೋನ್ಯಾಭಾವವು ಧರ್ಮಿಸ್ವರೂಪವೇ ಎಂದು ಸಮರ್ಥಿಸಿರುವರು. (5) ಹಾಗಾದರೆ, ಬ್ರಹ್ಮನಲ್ಲಿ ಶ್ರುತವಾದ ಗೋತ್ರಾದ್ಯತ್ಯಂತಾಭಾವರೂಪವಾದ ಸಂಸರ್ಗಾಭಾವಕ್ಕೂ, ಬ್ರಹ್ಮನದ್ದೆಶೆಯಿಂದ ಭೇದವು ಒರಬೇಕಾಗುವುದು. ಎಂದರೆ— ಸತ್ಯವೇ. ಗೋತ್ರಾದಿ ಸಂಸರ್ಗಾಭಾವವು ಬ್ರಹ್ಮಾತಿರಿಕ್ತವೆಂದು ಅಂಗೀಕರಿಸುತ್ತೇವೆ. ಉದಾ=ದಂಡೀ ದೇವದತ್ತಃ ಎನ್ನುವಲ್ಲಿ ದಂಡವು ದೇವದತ್ತನಿಗೆ ವಿಶೇಷಣವಾಗಿದೆ, ದೇವದತ್ತನಿಂದ ಭಿನ್ನವೂ ಆಗಿದೆ. ಹಾಗೆಯೇ ಗೋತ್ರಾದ್ಯಭಾವವು ಬ್ರಹ್ಮನಿಗೆ ವಿಶೇಷಣವು ಬ್ರಹ್ಮನಿಂದ ಭಿನ್ನವೂ ಆಗಿದೆ. 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎನ್ನುವ ಶ್ರುತಿವಿರೋಧವೂ ಇಲ್ಲ. ದಂಡಿತ್ವದಂತೆ ಅಭಾವವತ್ವವೇ ಧರ್ಮವು ಅಭಾವವಲ್ಲ. ಧರ್ಮಗಳಿಗೆ ಬ್ರಹ್ಮನಿಂದ ಅಭೇದವೇ. ಆನಂದಾದಿಗಳಲ್ಲಿಯೂ, ಆನಂದವು ಧರ್ಮವಲ್ಲ ಮತ್ತೆ ಆನಂದವತ್ವವೇ ಧರ್ಮವು ಎಂದು ಕಲ್ಪಿಸಬೇಕಾಗುವುದು ಎಂದು ಹೇಳಕೂಡದು. 'ಆನಂದೋ ಬ್ರಹ್ಮ' ಇತ್ಯಾದಿ ಶ್ರುತಿಗಳಿಂದ ತಾದಾತ್ಮ್ಯವೇ ಪ್ರಮಿತವಾಗಿರುವುದರಿಂದ ಆನಂದಕ್ಕೇನೇ ಧರ್ಮತ್ವವು ಆನಂದವು ಭಾವರೂಪವಾಗಿರುವುದರಿಂದ ಅದರಿಂದ ಬ್ರಹ್ಮನಿಗೆ ಅಭೇದ ಹೇಳಿದರೆ ಬಾಧಕವೂ ಇಲ್ಲ. ಆದಕಾರಣ ಅನ್ಯೋನ್ಯಾಭಾವವೇ ಬೇರೆಕಡೆಗಳಲ್ಲಿ ಧರ್ಮಿಸ್ವರೂಪವಾಗಿರುವುದರಿಂದ ಬ್ರಹ್ಮನಲ್ಲಿಯೂ, ಧರ್ಮಿಸ್ವರೂಪವೆಂದೇ ಅಂಗೀಕರಿಸತಕ್ಕುದು. ಗೋತ್ರಾದ್ಯಭಾವವತ್ವವು ಭಾವರೂಪವೇ ಆಗಿರುವುದರಿಂದ ಅದಕ್ಕೆ ಬ್ರಹ್ಮಸ್ವರೂಪತ್ವವನ್ನು ಇಟ್ಟುಕೊಂಡರೂ ಯಾವ ಅನುಪಪತ್ತಿಯೂ, ಇರುವುದಿಲ್ಲ. ॥ ೧೭ ॥

ಯಾವನು ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪವತ್ವವನ್ನೇ ಎಲ್ಲಿಯೂ ತಿಳಿಯುವುದಿಲ್ಲವೋ ಆತನನ್ನು ಕುರಿತು ಅಂಗೀಕರಿಸದಿರಲಿಕ್ಕೆ ಕಾರಣವೇನೆಂದು ಪ್ರಶ್ನಿಸಬೇಕು. ೧ ವಿರೋಧವಿದ್ದಪ್ರಯುಕ್ತವೋ, ೨ ಪ್ರಮಾಣವಿಲ್ಲದಿರುವುದರಿಂದಲೋ, ೩ ಬಾಧಕವಿದ್ದಪ್ರಯುಕ್ತವೋ, ೧ನೇ ಕಲ್ಪದಲ್ಲಿ ಅನ್ಯೋನ್ಯಾಭಾವಕ್ಕೆ ಧರ್ಮಿಯಿಂದ ವಿರೋಧವು ಹೇಗೆಂದು ಕೇಳಬೇಕು. ವಿಧಿನಿಷೇಧ ರೂಪತ್ವವಿದ್ದ ಪ್ರಯುಕ್ತ ಎಂದರೆ— ಅನ್ಯೋನ್ಯಾಭಾವಕ್ಕೂ, ಧರ್ಮಿಗೂ, ವಿಧಿನಿಷೇಧ ರೂಪತ್ವವೇ ಹೇಗೆ ಕೂಡುತ್ತದೆ? ಎಂದರೆ— ನಞಾಪ್ರಯೋಗ ಅಪ್ರಯೋಗ

ಗಳಿಂದ, ನಞಬೋಧ್ಯವಾದುದು ನಿಷೇಧರೂಪವು, ನಞ ಅಬೋಧ್ಯವಾದುದು ವಿಧಿರೂಪವು. ಎಂದರೆ—

ಮೂ || ಅತದ್ಭಾವೋಽನ್ಯತಾ ಚೇತಿ ನ ವಿಶೇಷೋಽಸ್ತಿ ಕಶ್ಚನ || ೧೮ ||
ದೋಷಾಭಾವೋ ಗುಣ ಇತಿ ಪ್ರಸಿದ್ಧೋ ಲೌಕಿಕೇಷ್ವಪಿ |
ಅದೃಶ್ಯತ್ವಾದಿಕಾಂಸ್ತಸ್ಮಾದ್ಗುಣಾನಾಹ ಸ್ವಯಂ ಪ್ರಭುಃ || ೧೯ ||

ಅ || ಅತದ್ಭಾವಃ=(ಪಟಕ್ಕೆ) ಅಘಟತ್ವವು, ಅನ್ಯತಾ ಚ=ಘಟದಿಂದ ಅನ್ಯತ್ವವೂ ಕೂಡ ಒಂದೇ. ಇತಿ=ಇವುಗಳಿಗೆ, ಕಶ್ಚನ=ಯಾವುದೊಂದೂ, ವಿಶೇಷಃ=ಪ್ರಭೇದವು, (ವೈಲಕ್ಷಣ್ಯವು) ನ=ಇಲ್ಲ. ('ಅಘಟ' ಎನ್ನುವುದಕ್ಕೂ 'ಘಟಾತ್ ಅನ್ಯಃ' ಎನ್ನುವುದಕ್ಕೂ ವಿಶೇಷವು ತೋರದಿರುವುದರಿಂದ ಎರಡಕ್ಕೂ ಅಭೇದವೇ. 'ಅಘಟಃ' ಎನ್ನುವಲ್ಲಿ ನಞಪ್ರಯೋಗ ವಿದೆ. 'ಘಟಾದನ್ಯಃ' ಎನ್ನುವಲ್ಲಿ ಇಲ್ಲ. ಆದಕಾರಣ ಎಲ್ಲಿ ನಞ ಬೋಧ್ಯತ್ವ, ಅಬೋಧ್ಯತ್ವಪ್ರಯುಕ್ತ ವಿಧಿ ನಿಷೇಧರೂಪತ್ವವಿದೆಯೋ ಅಲ್ಲಿ ಐಕ್ಯವಿಲ್ಲ ಎನ್ನುವ ವ್ಯಾಪ್ತಿಗೆ ಅಘಟತ್ವ ಘಟಾನ್ಯತ್ವ ಗಳಲ್ಲಿ ವಿರೋಧವಿಲ್ಲದಿರುವುದರಿಂದ ವ್ಯಭಿಚಾರವು) (ಸ್ಥಲಾಂತರದಲ್ಲಿ ವ್ಯಭಿಚಾರವನ್ನು ತೋರಿ ಸುತ್ತಾರೆ.) ದೋಷಾಭಾವಃ=ದೋಷಾಭಾವವು, ಗುಣ ಇತಿ=ಗುಣವೆಂತೆಂದು, ಲೌಕಿಕೇಷ್ವಪಿ= ಲೌಕಿಕ ವ್ಯವಹಾರಗಳಲ್ಲಿಯೂ ಕೂಡ, ಪ್ರಸಿದ್ಧಃ=ಪ್ರಸಿದ್ಧವಾಗಿದೆ. (ಅಂದರೆ ಆರೋಗ್ಯವು ಗುಣವು, ಅಕ್ರೌರ್ಯವು) (ಶಾಂತ್ಯಭಾವಾಭಾವವು) ಗುಣವು ಎಂದು ನಞ ಪ್ರಯೋಗ ವಿಷಯ ವಾದ ನಿಷೇಧವಾದ ರೋಗಾದ್ಯಭಾವಕ್ಕೆ ನಞ ಪ್ರಯೋಗಾವಿಷಯವಾದ ವಿಧಿರೂಪವಾದ ಗುಣ ತ್ವವು ಲೌಕಿಕ ವೈದಿಕ ವ್ಯವಹಾರಗಳಲ್ಲಿ ಪ್ರಸಿದ್ಧವಾಗಿದೆ. ಮತ್ತು ಅನೌದಾರ್ಯವು ದೋಷವು ಎಂದು ನಞ ಪ್ರಯೋಗ ವಿಷಯವಾದ ಗುಣಾಭಾವಕ್ಕೆ ನಞ ಪ್ರಯೋಗಾವಿಷಯ ವಿಧಿರೂಪ ವಾದ ದೋಷತ್ವವೂ ಪ್ರಸಿದ್ಧವಾಗಿದೆ. ಆದಪ್ರಯುಕ್ತವೂ ವ್ಯಭಿಚಾರವು.

(ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವ ಸಮರ್ಥನವು ಉತ್ಪ್ರೇಕ್ಷಾಮೂಲಕವಲ್ಲ. ಮತ್ತೆ ಸೂತ್ರಕಾರರಿಗೂ ಅಭಿಮತವೆಂದು ಸೂಚಿಸುವುದಕ್ಕಾಗಿ ಸೂತ್ರಕಾರರೂ ಈ ವ್ಯಭಿಚಾರ ವನ್ನೂ ಸೂಚಿಸಿರುತ್ತಾರೆನ್ನುತ್ತಾರೆ.) (ಯಾವಕಾರಣದ್ದೆಶೆಯಿಂದ ನಞಾನ ಪ್ರಯೋಗಾ ಪ್ರಯೋಗಗಳು ಅಭೇದಕ್ಕೆ ವಿರೋಧಗಳಾಗಿರುತ್ತವೋ) ತಸ್ಮಾತ್=ಆದಪ್ರಯುಕ್ತ, ಅದನ್ನೇ ಸೂಚಿಸುವುದಕ್ಕಾಗಿ, ಅದೃಶ್ಯತ್ವಾದಿಕಾನ್=ಅದೃಶ್ಯತ್ವ ಮೊದಲಾದ, ಗುಣಾನ್=ಗುಣ ಗಳನ್ನು, ಪ್ರಭುಃ=ಸೂತ್ರಕಾರರು, ಸ್ವಯಂ=ತಾನು, ಆಹ=ಹೇಳಿದರು.

ತಾ || (1) ಅದೃಶ್ಯತ್ವಾದಿ ಗುಣಕಃ ಎಂದು ಅದೃಶ್ಯತ್ವ ಮೊದಲಾದ ನಞ ವಾಚ್ಯಗಳಾ ದವುಗಳಿಗೂ ನಞ ವಾಚ್ಯವಾಗದಿರುವ ಗುಣಗಳಿಗೂ ಸೂತ್ರಕಾರರು ಐಕ್ಯವನ್ನು ಹೇಳಿರುವರು. ಇಲ್ಲವಾದರೆ 'ಅದೃಶ್ಯತ್ವಾದಿ' ಎಂದು ಹೇಳುತ್ತಿದ್ದರು. (2) ದೋಷಾಭಾವವು ಗುಣವು ಇತ್ಯಾದಿಗಳಲ್ಲಿ ವ್ಯಭಿಚಾರವನ್ನು ಹೇಳಿದರಿಂದ ಸಪ್ರತಿಯೋಗಿತ್ವ, ನಿಷ್ಪ್ರತಿಯೋಗಿತ್ವಗಳಿಂದ ವಿರೋಧವೂ ತಿರಸ್ಕೃತವಾಯಿತೆಂದು ತಿಳಿಯತಕ್ಕುದು. || ೧೮ || ೧೯ ||

ಹಾಗಾದರೆ ಹೀಗೆ ಭಾವಾಭಾವಗಳಿಗೆ ಐಕ್ಯವಿದ್ದರೆ ಭಾವಾಭಾವರೂಪವಾದ ವಿರೋಧವು ಎಲ್ಲಿಯೂ ಇಲ್ಲದೆ ಹೋಗಬೇಕಾಗುವುದು. ಇವುಗಳಿಗೆ ವಿರೋಧವಿಲ್ಲವಾದರೆ ವಿರೋಧ ವಾರ್ತೆಯೇ ಇಲ್ಲವೆಂದಾಗುವುದು. ಭಾವಾಭಾವಗಳಿಗೇನೇ ಸಾಕ್ಷಾದ್ವಿರೋಧವು. ತದ್ಭಾವಾ

ಭಾವಗಳಾದ ಘಟಜ್ಞಾನ, ಘಟಾಭಾವಜ್ಞಾನಗಳಿಗೆ ವಿರೋಧವು, ಎಂದರೆ— ೧ ಅವಿಶಿಷ್ಟಗಳಾದ ಭಾವಾಭಾವಗಳಿಗೆ ವಿರೋಧವನ್ನು ಅಂಗೀಕರಿಸಿ ವಿರೋಧವೇ ಇಲ್ಲವೆಂದಾಗಬೇಕಾಗುವುದೆಂದಾ ಪಾದಿಸುವುದೋ, ೨ ಅಥವಾ ಘಟಪ್ರತಿಯೋಗಿಕವಾದ ಅಭಾವ ಘಟ-ಇವುಗಳಿಗೆ ವಿರೋಧ ವನ್ನು ಅಂಗೀಕರಿಸಿ ವಿಶಿಷ್ಟಗಳಾದ ಭಾವಾಭಾವಗಳಿಗೆ ಐಕ್ಯವು ಬರುವುದಾದರೆ ಅವುಗಳಿಗೆ ವಿರೋದವೇ ಎಲ್ಲಿಯೂ ಇಲ್ಲದೆಹೋಗುವುದೆಂದಾಪಾದಿಸುವುದೋ, ೧ನೇ ಕಲ್ಪದಲ್ಲಿ ಇಷ್ಟವನ್ನೇ ಆಪಾದಿಸದಂತೆಯೇ ಆಯಿತೆನ್ನುತ್ತಾರೆ.

**ಮೂ || ಭಾವಾಭಾವವಿರೋಧೋಽಪಿ ನ ತು ಸರ್ವತ್ರ ವಿದ್ಯತೇ |**
**ತದಭಾವೋ ಹಿ ತದ್ಭಾವವಿರೋಧೀ ನ ತತೋಽಪರಃ || ೨೦ ||**

ಅ || ಭಾವಾಭಾವವಿರೋಧೋಽಪಿ = ಭಾವಾಭಾವಗಳಿಗೆ ವಿರೋಧವೂಕೂಡ, ಸರ್ವತ್ರ = ಎಲ್ಲಾ ಕಡೆಗಳಲ್ಲಿ, ನ ತು ವಿದ್ಯತೇ = ಇರುವುದಿಲ್ಲ. ಸರ್ವತ್ರ ಎನ್ನುವುದರಿಂದ ಸರ್ವತ್ರ ಅವಿಶಿಷ್ಟ ಗಳಾದ ಭಾವಾಭಾವಗಳಿಗೆ ವಿರೋಧವಿರುವುದಿಲ್ಲ ಎನ್ನುವ ಅವಿಶಿಷ್ಟತ್ವವನ್ನು ತೋರಿಸಿದರು. ಘಟ ಇದ್ದಲ್ಲಿಯೇ ಪಟಾಭಾವವು ದೃಷ್ಟವಾಗಿದೆ. (೨ ನೇದರಲ್ಲಿ ಆಪಾದಕವೇ ಸಿದ್ಧವಾಗಲಿಲ್ಲ ವೆನ್ನುವ ಅಭಿಪ್ರಾಯದಿಂದ ಅದರ ಸ್ವರೂಪವನ್ನು ಹೇಳುತ್ತಾರೆ). ತದಭಾವಃ = ಘಟ ಪ್ರತಿಯೋಗಿಕಾಭಾವವು ಘಟಸ್ವರೂಪದಿಂದ ವಿರೋಧಿಯಾದುದು. ತತಃ = ಅದರಿಂದ, ಅಪರಃ = ಘಟಪ್ರತಿಯೋಗಿಕವಾದ ಪಟ ಇದ್ದಲ್ಲಿರುವ ಅಭಾವವು, ತದ್ಭಾವವಿರೋಧೀ = ಪಟಸ್ವರೂಪದಿಂದ ವಿರೋಧಿಯಾದುದು, ನ = ಅಲ್ಲ, ಹಿ = ಇವೆರಡೂ ಅನುಭವಸಿದ್ಧವು.

ತಾ || ನ್ಯಾಯಸುಧಾ— ಅಭಾವಧರ್ಮಗಳಿಗೆ ಭೇದವೋ ಅಭೇದವೋ ಎನ್ನುವ ವಿಚಾರ ಮೊದಲಾದುದು ೨ನೇ ಅಧ್ಯಾಯದಲ್ಲಿ ಗುಣ ಗುಣಿಗಳಿಗೆ ಭೇದವೋ ಅಭೇದವೋ ಎಂದು ವಿಚಾರಮಾಡತಕ್ಕ 'ಉಭಯ ವ್ಯಪದೇಶಾತ್ತ್ವಹಿಕುಂಡಲವತ್' ಎನ್ನುವ ಭಕ್ತಿಪಾದೀ ಯಾಧಿಕರಣದಲ್ಲಿ ಸಂಗತವಾಗಿದೆ. ಆದಾಗ್ಯೂ ಅನ್ಯೋನ್ಯಾಭಾವವು ಧರ್ಮಿಯದ್ವೆಶೆಯಿಂದ ಬೇರೆಯೆಂದು ಹೇಳುವುದು ಅತ್ಯುತ್ಕೃಷ್ಟ ದೋಷವಾಗಿರುವುದರಿಂದ ಪ್ರತ್ಯೇಕವಾಗಿ ದೂಷಿಸಿ ಇರುವರು. || ೨೦ ||

(1) ಹಾಗಾದರೆ ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವ ವಿಷಯದಲ್ಲಿ ಪ್ರಮಾಣವಿಲ್ಲ ವೆನ್ನುವ ಎರಡನೇ ಪಕ್ಷವಾಗಲಿ, ಎಂದರೆ ಹೀಗೆ ಹೇಳಕೂಡದು. ಭೇದವು ವಸ್ತು ಸ್ವರೂಪ ವೆಂದು ಎಲ್ಲರೂ ಅಂಗೀಕರಿಸಿರುವರು ಇಲ್ಲವಾದರೆ ಭೇದಪರಂಪರೆಯಿಂದ ಅನವಸ್ಥಾ ಮೊದ ಲಾದ ದೋಷಗಳು ಪ್ರಸಕ್ತಗಳಾಗುವವು. (2) ಅಭಾವದಲ್ಲಿ ಭಾವಪ್ರತಿಯೋಗಿಕವಾದ ಭೇದವದೆ. ಅದು ಅತಿರಿಕ್ತವಲ್ಲ. ಏಕೆಂದರೆ— ಅಭಾವದಲ್ಲಿ ಸ್ವರೂಪಾತಿರಿಕ್ತವಾದ ಧರ್ಮ ವಿಲ್ಲ— ತಥಾಚ ಅಭಾವಕ್ಕೆ ಭಾವದ್ವೆಶೆಯಿಂದ ಭೇದವಿಲ್ಲವೆಂದು ಪ್ರಸಕ್ತವಾಗುವುದು. ಅಂತೂ ಭೇದಕ್ಕೆ ಅಭಾವಸ್ವರೂಪವನ್ನು ಅಂಗೀಕರಿಸಿ ಭಾವದ್ವೆಶೆಯಿಂದ ಭೇದವನ್ನು ಉಪಪಾದಿಸಬೇಕು. ಎಲ್ಲಾಕಡೆಗಳಲ್ಲಿಯೂ ಹೀಗೆ ಆಗಲಿ. (3) ಅಭಾವದಲ್ಲಿ ಭಾವಪ್ರತಿಯೋಗಿಕವಾದ ಭೇದ ವನ್ನು ಒಪ್ಪುತ್ತೇವೆ ಅದು ಧರ್ಮಿ ಸ್ವರೂಪವೇ. ಅದು ಅನ್ಯೋನ್ಯಾಭಾವವಲ್ಲ. ಅದು ಭೇದದ್ವೆಶೆಯಿಂದ ಅತಿರಿಕ್ತವಾಗಿದೆ ಎಂದರೆ— ಅನ್ಯೋನ್ಯಾಭಾವವೂ ಭೇದವೂ ಒಂದೆ. ಆದ ಪ್ರಯುಕ್ತ ಧರ್ಮಿ ಸ್ವರೂಪತ್ವವು ಹೇಗೆ ಬಾರದೆಹೋಗುವುದು? ಈ ವಿಷಯದಲ್ಲಿ ಪ್ರತ್ಯಕ್ಷವೇ ಪ್ರಮಾಣವು. (4) ಹಾಗಾದರೆ ೧ ಪೃಥಕ್ತ್ವ, ಅನ್ಯೋನ್ಯಾಭಾವ, ಸ್ವರೂಪ ಎಂದು

ಮೂರು ವಿಧವಾದ ಭೇದವನ್ನು ನಾವು ಅಂಗೀಕರಿಸಿರುತ್ತೇವೆ. ಅದರಲ್ಲಿ ದ್ರವ್ಯದಲ್ಲಿ ಮೂರು ವಿಧವಾದ ಭೇದವೂ ಕೂಡುತ್ತದೆ. ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಈ ಐದರಲ್ಲಿ ಆದರೂ ಎರಡೇ ವಿಧವು. ಪೃಥಕ್ತ್ವವು ಗುಣವಾಗಿರುವುದರಿಂದ ಅವುಗಳಲ್ಲಿ ಪೃಥಕ್ತ್ವವು ಕೂಡಲಾರದು (5) ಅಭಾವದಲ್ಲಿ ಆದರೂ ಸ್ವರೂಪ ರೂಪವಾದ ಭೇದವೇ. ಅಭಾವದಲ್ಲಿಯೂ ಇತರಾನ್ಯೋನ್ಯಾಭಾವರೂಪವಾದ ಭೇದವನ್ನು ಅಂಗೀಕರಿಸಿದರೆ ಅದೂ ಅಭಾವವಾಗಿರುವುದರಿಂದ ಅಲ್ಲಿಯೂ ಅನ್ಯೋನ್ಯಾಭಾವರೂಪವಾದ ಭೇದವನ್ನು ಅಂಗೀಕರಿಸ ಬೇಕಾಗುವುದು ಎಂದು ಪ್ರಸಕ್ತವಾಗುವುದರಿಂದ ಅನವಸ್ಥಾದೋಷವು ಪ್ರಸಕ್ತವಾಗುವುದು. ಆದಪ್ರಯುಕ್ತ ಅನ್ಯೋನ್ಯಾಭಾವವು ಭೇದರೂಪವಾದಾಗ್ಯೂ ಭೇದವು ಧರ್ಮಿಸ್ವರೂಪ ವಾದಾಗ್ಯೂ ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವವಿಲ್ಲ. ಅನ್ಯೋನ್ಯಾಭಾವವು ಸ್ವರೂಪ ಭೇದಾತಿರಿಕ್ತಭೇದವಾಗಿದೆ. ಎಂದಾಶಂಕಿಸಿದರೆ—

**ಮೂ || ಪೃಥಕ್ತ್ವಾಭಾವ ತದ್ರೂಪಾನ್ ಭೇದಾಂಸ್ತ್ರೀನ್ಕಲ್ಪಯಂತಿ ಚೇತ್ |**
**ಕಲ್ಪನಾಗೌರವಾದ್ಯಾಸ್ತು ದೋಷಾಸ್ತತ್ರ ವಿರೋಧಿನಃ || ೨೧ ||**
**ಪೃಥಕ್ತ್ವಾನ್ಯತ್ವಭೇದಾಸ್ತು ಪರ್ಯಾಯೇಣೈವ ಲೌಕಿಕೈಃ |**
**ವ್ಯವಹ್ರಿಯಂತೇ ಸತತಂ ವೈದಿಕೈರಪಿ ಸರ್ವಶಃ || ೨೨ ||**

ಅ || ಪೃಥಕ್ತ್ವಾಭಾವತದ್ರೂಪಾನ್ - ಪೃಥಕ್ತ್ವ=ಪೃಥಕ್ತ್ವವು, ಅಭಾವ=ಅನ್ಯೋನ್ಯಾಭಾವವು, ತದ್ರೂಪಾನ್=ಸಃ=ಧರ್ಮೀ, ರೂಪಂ=ಆತ್ಮಾ ಯಸ್ಯಾಸೌ ಎನ್ನುವ ವ್ಯುತ್ಪತ್ತಿಯಿಂದ ಸ್ವರೂಪಭೇದರೂಪಗಳಾದ, ತ್ರೀನ್=ಮೂರು ವಿಧಗಳಾದ, ಭೇದಾನ್=ಭೇದಗಳನ್ನು, ಕಲ್ಪಯಂತಿ ಚೇತ್ = ಕಲ್ಪಿಸುತ್ತಾರೆಂದಾದರೆ, ಕಲ್ಪನಾಗೌರವಾದ್ಯಾಃ = ಕಲ್ಪನಾಗೌರವವೇ ಮೊದಲಾದ, ದೋಷಾಃ=ದೃಷ್ಟಹಾನಿ ಅದೃಷ್ಟಕಲ್ಪನಾ ಎನ್ನುವ ದೋಷಗಳು, ತತ್ರ ತು= ಹಾಗೆ ಕಲ್ಪಿಸಿದರೆ, ವಿರೋಧಿನಃ=ವಿರೋಧಿಗಳಾಗುತ್ತವೆ. (ಪೃಥಕ್ತ್ವ ಅನ್ಯೋನ್ಯಾಭಾವ ಸ್ವರೂಪಭೇದ ಇವುಗಳಿಗೆ ಭೇದವನ್ನು ಅಂಗೀಕರಿಸಿದರೆ ಕಲ್ಪನಾಗೌರವಾದಿಗಳು ಹೇಗೆಂದರೆ) ಪೃಥಕ್ತ್ವಾನ್ಯತ್ವಭೇದಾಸ್ತು — ಪೃಥಕ್ತ್ವ = ಪೃಥಕ್ತ್ವವು, ಅನ್ಯತ್ವ = ಅನ್ಯೋನ್ಯಾಭಾವವು, ಭೇದಾಸ್ತು=ಸ್ವರೂಪಭೇದವು ಇವುಗಳು ಅಂದರೆ ೧ ಘಟಾತ್ ಪೃಥಕ್ ಪಟಃ=ಪಟವು ಘಟದ್ದೆಶೆಯಿಂದ ಬೇರೆಯೇ, ೨ ಘಟೋ ನ ಭವತಿ ಪಟಃ=ಪಟವು ಘಟವಾಗುವುದಿಲ್ಲ, ೩ ಪಟ ಏವ ಪಟವೇ ಎಂದು. ಸರ್ವಶಃ ಲೌಕಿಕೈಃ=ಎಲ್ಲಾ ಲೌಕಿಕರಿಂದಲೂ, ವೈದಿಕೈರಪಿ=ವೈದಿಕರಿಂದಲೂ ಕೂಡ, ಪರ್ಯಾಯೇಣೈವ=ಕ್ರಮದಿಂದಲೇ. ಸತತಂ=ಯಾವಾಗಲೂ, ವ್ಯವಹ್ರಿಯಂತೇ= ಭಿನ್ನವಾಕ್ಯವಾಗಿ ವ್ಯವಹರಿಸಲ್ಪಡುತ್ತವೆ. ಯಾವಾಗಲೂ ಒಂದೇ ವಾಕ್ಯನಿವೇಶದಿಂದ ವ್ಯವಹರಿಸಲ್ಪಡುವುದಿಲ್ಲ.

**ತಾ || ನ್ಯಾಯಸುಧಾ—** (1) ಘಟ-ಕಲಶ-ಕುಂಭ ವ್ಯವಹಾರಾದಿಗಳು ಪರ್ಯಾಯಗಳಾಗಿರುವುದರಿಂದ ಪೃಥುಬುಧ್ನೋದರಾಕಾರತ್ವರೂಪವಾದ ಒಂದೇ ಪ್ರವೃತ್ತಿನಿಮಿತ್ತದಿಂದ ಉಪಪತ್ತಿಯಾಗುವಾಗ ಘಟತ್ವ-ಕಲಶತ್ವ ಮೊದಲಾದ ಅನೇಕ ನಿಮಿತ್ತಗಳನ್ನು ಕಲ್ಪಿಸಿದರೆ ಹೇಗೆ ಕಲ್ಪನಾ ಗೌರವವೋ, ಹೇಗೆ ಘಟಾದಿ ವ್ಯವಹಾರಗಳನ್ನು ಕ್ರಮದಿಂದಲೇ ಮಾಡುವವರು ಅದರ ಕಾರಣವನ್ನು ಒಂದೇ ಎಂದು ನಿಶ್ಚಯಿಸಿರುವುದರಿಂದ ಕಾರಣವು ಮೂರು ಎಂದು ಅಂಗೀಕರಿಸಿದರೆ ದೃಷ್ಟಹಾನಿಯೂ ಅದೃಷ್ಟ ಕಲ್ಪನೆಯೂ ಬರುವುದೋ, ಹಾಗೆಯೇ ಪೃಥಕ್ತ್ವ

ಮೊದಲಾದ ವ್ಯವಹಾರಗಳೂ ಪರ್ಯಾಯಗಳಾಗಿರುವುದರಿಂದ ಒಂದಾದ ಸ್ವರೂಪಭೇದ ದಿಂದಲೇ ಉಪಪತ್ತಿಯಾಗುವಾಗ ಪೃಥಕ್ತ್ವ ಮೊದಲಾದ ಮೂರು ನಿಮಿತ್ತಗಳನ್ನು ಕಲ್ಪಿಸಿದರೆ ಕಲ್ಪನಾಗೌರವವು. ನಿಯಮವಾಗಿ ಪೃಥಕ್ ನ ಇತ್ಯಾದಿಗಳನ್ನು ಬೇರೆಬೇರೆ ವಾಕ್ಯಗಳಲ್ಲಿಯೇ ಸೇರಿಸಿ ಪ್ರಯೋಗಮಾಡುವುದರಿಂದ ಪೃಥಕ್ತ್ವಾದಿಗಳಿಗೆ ಐಕ್ಯವು ದೃಷ್ಟವಾಗಿರುವ ಪ್ರಯುಕ್ತ ಅದನ್ನು ಬಿಟ್ಟು ತ್ರಿತ್ವವನ್ನು ಕಲ್ಪಿಸಿದರೆ ದೃಷ್ಟಹಾನಿಯೂ, ಅದೃಷ್ಟಕಲ್ಪನೆಯೂ ಬರುವುದು. (2) ಘಟಾತ್ ಪಟಃ ಪೃಥಕ್, ಘಟಾದನ್ಯಃ, ಎಂದು ಏಕಕಾಲದಲ್ಲಿ ಪ್ರಯೋಗಿಸಲ್ಪಡುವುದಿಲ್ಲ. ಏಕೆಂದರೆ 'ಯತ್ರ ಪೃಥಕ್ತ್ವಂ ತತ್ರ ಅನ್ಯೋನ್ಯಾಭಾವಃ' ಎನ್ನುವ ವ್ಯಾಪ್ತಿಯು ಇದ್ದ ಪ್ರಯುಕ್ತ ವ್ಯಾಪ್ಯಭೂತವಾದ ಪೃಥಕ್ತ್ವವನ್ನು ಹೇಳಿದರಿಂದ ವ್ಯಾಪಕೀಭೂತವಾದ ಅನ್ಯೋನ್ಯಾಭಾವಾದಿಯೂ ಲಬ್ಧವಾಯಿತು. ಆದಪ್ರಯುಕ್ತವೇ ಸಹಪ್ರಯೋಗವಿಲ್ಲ. ಅಲ್ಲದೆ ಅನ್ಯೋನ್ಯಾಭಾವಕ್ಕೂ ಪೃಥಕ್ತ್ವಕ್ಕೂ ಐಕ್ಯವಿದ್ದಪ್ರಯುಕ್ತವಲ್ಲ ಎಂದು ಹೇಳಿದರೆ— ಘಟಾತ್ ಪೃಥಕ್ ಎಂದು ಹೇಳಿ ಘಟೋ ನ ಭವತಿ ಎನ್ನುವ ಪ್ರಯೋಗವು ಬೇಡ. 'ಘಟೋ ನ ಭವತಿ' ಎಂದು ಹೇಳಿ 'ಘಟಾತ್ ಪೃಥಕ್' ಎಂದು ಪ್ರಯೋಗವು ಏಕೆ ಆಗಲಾರದು? ಪೃಥಕ್ತ್ವವಿರುವಾಗ ಅನ್ಯೋನ್ಯಾಭಾವವು ನಿಯತವು. ಯತ್ರ ಪೃಥಕ್ತ್ವಂ ತತ್ರ ಅನ್ಯೋನ್ಯಾಭಾವಃ ಎಂದು. ತಥಾಚ 'ಘಟಾತ್ ಪೃಥಕ್' ಎಂದು ಹೇಳಿಕೊಂಡು ಆಮೇಲೆ ಘಟೋ ನ ಭವತಿ ಎನ್ನುವ ಪ್ರಯೋಗವು ಆಗದಿದ್ದರೂ 'ಘಟೋ ನ ಭವತಿ' ಎಂದು ಹೇಳಿಕೊಂಡು ಆಮೇಲೆ 'ಘಟಾತ್ ಪೃಥಕ್' ಎಂದು ಆಗುತ್ತದೆ. ಇಲ್ಲಿಯೂ ಹಿಂದೆ ಹೇಳಿದಪ್ರಕಾರ ಅನ್ಯೋನ್ಯಾಭಾವವು ಪೃಥಕ್ತ್ವದಿಂದ ವ್ಯಾಪ್ತವಾಗಿರುವಪ್ರಯುಕ್ತ ವ್ಯಾಪ್ಯಭೂತವಾದ ಅನ್ಯೋನ್ಯಾಭಾವವನ್ನು ಹೇಳಿದರೆ ವ್ಯಾಪಕೀಭೂತವಾದ ಪೃಥಕ್ತ್ವವೂ ಲಬ್ಧವಾಯಿತೆಂದು ಹೇಳಕೂಡದು. ಎಲ್ಲಿ ಅನ್ಯೋನ್ಯಾಭಾವವೋ ಅಲ್ಲಿ ಪೃಥಕ್ತ್ವವು ಎನ್ನುವ ವ್ಯಾಪ್ತಿಯು ಇಲ್ಲವೇಇಲ್ಲ, ಎಂದು ಪರರೇ ಹೇಳಿರುವರು (3) ಅವಿನಾಭೂತವಾದದ್ದು ಒಟ್ಟಿಗೆ ಹೇಳಲ್ಪಡುವುದಿಲ್ಲವೆನ್ನುವ ನಿಯಮವೇ ಇಲ್ಲ. ಏಕೆಂದರೆ—'ಪೃಥಿವ್ಯಪ್ ತೇಜೋ ವಾಯು ಮನಸಾಂ ಕ್ರಿಯಾವತ್ವ, ಮೂರ್ತತ್ವ, ಪರತ್ವ, ಅಪರತ್ವ, ವೇಗವತ್ವಾದೀನಿ ಅಂದರೆ ಪೃಥಿವೀತ್ವಾದಿಗಳಿಗೆ ಕ್ರಿಯಾವತ್ವಾದಿಗಳಿಂದ ಅವಿನಾಭೂತತ್ವ (ವ್ಯಾಪ್ತಿಯು) ಇದೆ. ಮತ್ತು ಕ್ರಿಯಾವತ್ವ ಮೂರ್ತತ್ವಾದಿಗಳಿಗೂ ವ್ಯಾಪ್ಯ ವ್ಯಾಪಕ ಭಾವವು ಇದ್ದರೂ ಸಹ ಪ್ರಯೋಗವು ಕಂಡದೆ ಎಂದು ಅವರ ಗ್ರಂಥದಲ್ಲಿಯೇ ವ್ಯವಹಾರವು ಕಾಣುತ್ತದೆ. (4) ಲೌಕಿಕರು (ಕೇವಲ ಪ್ರಯೋಜನದಲ್ಲಿ ಆಸಕ್ತರಾದವರು) ಅನೇಕಗಳ ಮಧ್ಯದಲ್ಲಿ ಒಂದರ ವ್ಯವಹಾರದಿಂದಲೇ ಅದರ ಪ್ರಯೋಜನವು ಸಿದ್ಧಿಸುವುದರಿಂದ 'ಘಟೋ ನ ಭವತಿ' ಎಂದು ಹೇಳಿ 'ಘಟಾತ್ ಪೃಥಕ್' ಎಂದು ವ್ಯವಹರಿಸುವುದಿಲ್ಲ ಎಂದರೆ ಹಾಗೆ ಹೇಳಕೂಡದು. ವೈದಿಕರೂ ಹೀಗೆಯೇ ವ್ಯವಹರಿಸುತ್ತಾರೆ. (5) ಮತ್ತು 'ಘಟಃ ಪಟಾತ್ ಪೃಥಕ್, ಪಟೋ ನಭವತಿ' ಎಂದು ಒಂದು ವಾಕ್ಯದಲ್ಲಿಯೇ ಎಲ್ಲಿಯಾದರೂ ಪ್ರಯೋಗವಿದ್ದಿದ್ದರೆ ಹಿಂದೆ ಹೇಳಿದ ರೀತಿಯಿಂದ ಪರ್ಯಾಯ ಪ್ರಯೋಗಕ್ಕೆ ಅವಿನಾಭಾವಾದಿ ನಿಮಿತ್ತಕತ್ವ ಕಲ್ಪನೆಯು ಕೂಡಬಹುದಿತ್ತು. ಹೀಗೆ ಸಹಪ್ರಯೋಗವಿಲ್ಲ. ಆದುದರಿಂದ ಈ ಕಲ್ಪನೆಯು ನಿರ್ಮೂಲವಾದದ್ದು ಹೇಗೆ ಕೂಡಬಹುದು? ಈ ಅಭಿಪ್ರಾಯದಿಂದ 'ಸತತಂ' 'ಸರ್ವಶಃ' ಎಂದೂ ಹೇಳಿರುವರು. ಅಂದರೆ, ಎಲ್ಲಿಯಾದರೂ ಅಪರ್ಯಾಯ ಪ್ರಯೋಗವಿದ್ದರೆ ಪರ್ಯಾಯ ಪ್ರಯೋಗಕ್ಕೆ ಅನ್ಯಥಾ ಕಲ್ಪನೆಯನ್ನು ಮಾಡಬೇಕು, ಹೀಗೆ ಇಲ್ಲವೇ ಇಲ್ಲ. ಮತ್ತೆ ಎಲ್ಲಾ ಕಡೆಗಳಲ್ಲಿಯೂ ಯಾವಾಗಲೂ ಪರ್ಯಾಯದಿಂದಲೇ ಪ್ರಯೋಗವಿದೆ ಎನ್ನುವ ಅಭಿಪ್ರಾಯವು ಸೂಚಿತವಾಯಿತು. ॥ ೨೧ ॥ ೨೨ ॥

ಕಲ್ಪನಾ ಗೌರವ ದೃಷ್ಟಹಾನಿ ಅದೃಷ್ಟ ಕಲ್ಪನೆಗಳು ಬರಲಿ. ಅದರಿಂದ ಪ್ರಕೃತವೇನಾಯಿತೆಂದರೆ- ೧ ಕಲ್ಪನಾ ಗೌರವಾದಿಗಳು ದೂಷಣವೇ ಆಗುವುದಿಲ್ಲವೋ, ೨ ಅಥವಾ ದೋಷವನ್ನು ತೋರಿಸಿಕೊಟ್ಟೇ ದೂಷಣವಾಗುವುದೋ, ೧ ನೇದ್ದನ್ನು ನಿರಾಕರಿಸುತ್ತಾರೆ.

ಮೂ ॥ ದೃಷ್ಟಹಾನಿರದೃಷ್ಟಸ್ಯ ಕಲ್ಪನೇತ್ಯೇವ ದೂಷಣಂ |
ಯದಾ ತದಧಿಕೋ ದೋಷೋ ವಿದ್ಯತೇ ಕೋ ನು ವಾದಿನಾಂ ॥೨೩॥

ಅ ॥ ದೃಷ್ಟಹಾನಿಃ=ಪ್ರಮಾಣ ಸಿದ್ಧವಾದುದನ್ನು ಬಿಡುವುದು, ಅದೃಷ್ಟಸ್ಯ ಕಲ್ಪನಾ=ಪ್ರಮಾಣ ಸಿದ್ಧವಾಗದೆ ಇದ್ದುದನ್ನು ಕಲ್ಪಿಸುವುದು, ಇತಿ=ಮೊದಲಾದ ಕಲ್ಪನಾ ಗೌರವವೂ, ದೂಷಣಮೇವ=ದೂಷಣವೇಸರಿ. ಏಕೆಂದರೆ-ಯದಾ=ಯಾವಕಾರಣದ್ದೆಶೆಯಿಂದ, ತದಧಿಕಃ=ಅದರಿಂದ ಅತಿರಿಕ್ತವಾದ (ಅದರಲ್ಲಿ ಪರ್ಯವಸಿತವಾಗದಿರುವ) ದೋಷಃ=ದೋಷವು, ವಾದಿನಾಂ=ವಾದಿಗಳಿಗೆ, ಕೋ ನು ವಿದ್ಯತೇ=ಯಾವುದಿದೆ?

ತಾ ॥ ನ್ಯಾಯಸುಧಾ— (1) ದೃಷ್ಟಹಾನ್ಯಾದಿಗಳು ದೂಷಣಗಳಲ್ಲವೆಂದಾದರೆ ಆಗ ಅಸಿದ್ಧ್ಯಾದಿಗಳೂ, ಹೇಗೆ ದೂಷಣವಾಗುವುದೆಂದು ಹೇಳಬೇಕು. ಪಕ್ಷಧರ್ಮತಾದ್ಯಂಗಗಳ ವೈಕಲ್ಯಕ್ಕೆ ಕಾರಣವಾಗಿರುವ ಪ್ರಯುಕ್ತ ಎಂದರೆ—ವಿಕಲಾಂಗವುಳ್ಳದ್ದಾದಾಗಿಯೂ ಏಕೆ ಸಾಧನವಾಗುವುದಿಲ್ಲ? ವಿಕಲಾಂಗವುಳ್ಳದ್ದೂ ಸಾಧನವಾಗುವುದಾದರೆ ಆಕಾಶಾದಿಗಳಿಗೆ ಅನಿತ್ಯತ್ವಾದಿಗಳನ್ನು ಆಪಾದಿಸಬಹುದು. ಅದು ಪ್ರಮಾಣ ವಿರುದ್ಧವೆಂದು ಹೇಳುವುದಾದರೆ ಆಗ ದೃಷ್ಟಹಾನ್ಯಾದಿಗಳಿಗೆ ದೋಷತ್ವವನ್ನು ಸ್ವೀಕರಿಸಿದಂತೆ ಆಯಿತು. (2) ಅಂಗವಿಕಲವಾದುದಕ್ಕೂ ಅನುಮಾನತ್ವವಿದ್ದರೆ 'ವಸ್ತುತ್ವಾತ್ತುರಗಃ ಶೃಂಗೀ' ಇತ್ಯಾದ್ಯನುಮಾನಗಳಿಂದ ಅಪ್ರಾಮಾಣಿಕಗಳಾದವುಗಳನೇಕಗಳು ಪ್ರಸಕ್ತಗಳಾಗುತ್ತವೆ. ಎಂದರೆ—ಇದೇ ಅದೃಷ್ಟ ಕಲ್ಪನೆಯು ಕಲ್ಪನಾ ಗೌರವವೂ ಆಗುತ್ತದೆ. (3) ವಿಕಲಾಂಗವೂ ಸಾಧನವೂ ಎನ್ನುವುದು ವ್ಯಾಹತವೆಂದರೆ—ವ್ಯಾಹತವು ಹೇಗೆ ಆಗುವುದು? ಸಕಲ ಅಂಗವುಳ್ಳದ್ದೇ ಸಾಧಕವೆಂದು ದೃಷ್ಟವಾಗಿದೆ. ವಿಕಲಾಂಗವುಳ್ಳದ್ದು ಸಾಧಕವೆಂದು ದೃಷ್ಟವಾಗಲಿಲ್ಲವೆಂದರೆ—ಇದು ದೃಷ್ಟಹಾನ್ಯಾದಿಯೇ ಆಯಿತು.

(4) ಅಸಿದ್ಧ್ಯಾದಿಗಳು ದೂಷಣವಾಗುವುದು ಬೇಡವೆಂದು ಹೇಳಿದರೆ ಆಗ ವಾದಿತ್ವವೇ ಇಲ್ಲವೆಂದಾಗುವುದು. ಏಕೆಂದರೆ—ವಾದಿಯು ಅಸಿದ್ಧ್ಯಾದಿದೋಷದಿಂದ ಪರಪಕ್ಷವನ್ನು ದೂಷಿಸಬೇಕು. ಅಸಿದ್ಧ್ಯಾದಿಗಳು ದೂಷಣವಲ್ಲವೆಂದಾದರೆ ದೂಷಣೋಪಾಯವೇ ಇಲ್ಲದಿರುವುದರಿಂದ ದೂಷಣೀಯವಾದ ಪಕ್ಷವೇ ಇಲ್ಲವೆಂದಾಯಿತು. ದೂಷ್ಯವಾದ ಪಕ್ಷವೇ ಇಲ್ಲದಿದ್ದಮೇಲೆ ಸಾಧ್ಯವೂ ಇಲ್ಲವೆಂದಾಗುವುದು. ಹೇಗೆಂದರೆ—ವಾದಿಯು ಸ್ವಪಕ್ಷವನ್ನು ಸಾಧಿಸಬೇಕು. ಯಾವುದಾದರೊಂದು ತನ್ನ ಪಕ್ಷಕ್ಕೆ ವಿರೋಧಿಯಾದ ಪಕ್ಷವಿದ್ದರೆ ಆಗ ಅದನ್ನು ಸಾಧಿಸಬೇಕು. ಹಿಂದೆ ಹೇಳಿದ ಪ್ರಕಾರ ದೂಷ್ಯವಾದ ಪಕ್ಷವೇ ಇಲ್ಲ. ತಥಾಚ ಸಾಧನೀಯವಾದ ಪಕ್ಷವೇ ಇಲ್ಲವೆಂದು ಪ್ರಾಪ್ತವಾಯಿತು, ತಥಾ ಚ ವಾದಿತ್ವವೇ ಕೂಡಲಾರದೆಂದು ಹೇಳಿದ್ದು ಯುಕ್ತವು. (5) ದೋಷೋನ್ನಾಯಕವಾಗಿ ದೂಷಣವಾಗುತ್ತದೋ ಎನ್ನುವ ಎರಡನೇದ್ದಕ್ಕೂ ಇದೇ ಉತ್ತರವು. ದೃಷ್ಟಹಾನಿಯು ಅದೃಷ್ಟಕಲ್ಪನೆಯು ಎನ್ನುವುದೇ ದೂಷಣವೂ ದೋಷಾಂತರಕ್ಕೆ ಉನ್ನಾಯಕವಾಗಿ ಅಲ್ಲ. ಯಾವಾಗ ದೃಷ್ಟಹಾನ್ಯಾದಿಗಳನ್ನು ಯಾವಾಗ ಉದ್ಭಾವನೆ ಮಾಡುತ್ತಾನೋ ಆಗ ಅದರಿಂದ ಏನಾಯಿತೆಂದರೆ— ಅದರಿಂದ ಹೆಚ್ಚಾದ, ಅದರಿಂದ ಉನ್ನೇಯವಾದ

ಯಾವದೋಷವನ್ನು ಹೇಳತಕ್ಕದ್ದಿದೆ? ಯಾವುದೂ ಇಲ್ಲ. ಯಾವುದನ್ನಾದರೂ ಹೇಳಿದರೂ ಅದು ದೃಷ್ಟಹಾನ್ಯಾದಿಗಳಲ್ಲಿಯೇ ಪರ್ಯವಸಿತವಾಗುತ್ತದೆ ॥ ೨೩ ॥

(1) ಬಾಧಕವಿದ್ದಪ್ರಯುಕ್ತ ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವವಿಲ್ಲ ಎಂದು ಮೊದಲು ವಿಕಲ್ಪಿಸಿದ ೩ನೇ ಪಕ್ಷವನ್ನು ವಿವರಿಸಿಕೊಂಡೇ ನಿರಾಕರಿಸುತ್ತಾರೆ. ಅನ್ಯೋನ್ಯಾಭಾವವು ಭಾವಸ್ವರೂಪವಾದರೆ ಧರ್ಮ-ಧರ್ಮಿಭಾವವು ಆ ಶಬ್ದಗಳಿಗೆ ಸಹ ಪ್ರಯೋಗವೂ ಬರಬೇಕಾಗುವುದು. ಕದಾಚಿತ್ ದೃಷ್ಟವಾದ ವಸ್ತುವಿನಲ್ಲಿ ಭೇದ ಕಾಣದಿರುವುದು ಇತ್ಯಾದಿಗಳು ಬಾರದೆ ಹೋಗುವುದು, (2) ಬಾಧಕವಿದ್ದಪ್ರಯುಕ್ತ ಎನ್ನುವ ೩ನೇ ಕಲ್ಪಕ್ಕೆ ಜನ್ಮಾಧಿಕರಣದಲ್ಲಿ ಹೇಳಿದ ಪರಿಹಾರವನ್ನೇ ಸ್ಮೃತಿಪಥಕ್ಕೆ ತರುತ್ತಾರೆ

**ಮೂ ॥ ಭಾವಾಭಾವಸ್ವರೂಪಾಸ್ತು ವಿಶೇಷಾ ಏವ ವಸ್ತುನಃ ।**
**ಅಭಿನ್ನಾ ಏವ ಸಂಗ್ರಾಹ್ಯಾ ವ್ಯವಹಾರಪ್ರಸಿದ್ಧಯೇ ॥ ೨೪ ॥**

ಅ ॥ ಭಾವಾಭಾವಸ್ವರೂಪಾಃ=ಭಾವಾಭಾವಸ್ವರೂಪವುಳ್ಳ ಅತ್ತೃತ್ವಾದಿಗಳೂ, ಅದೃಶ್ಯತ್ವಾದಿಗಳೂ ಕೂಡ, ಅಭಿನ್ನಾ ಏವ=ಯದ್ಯಪಿ ಬ್ರಹ್ಮನಿಂದ ಅಭಿನ್ನಗಳೇ— ಆದಾಗ್ಯೂ, ವ್ಯವಹಾರಪ್ರಸಿದ್ಧಯೇ=ಧರ್ಮ-ಧರ್ಮಿಮೊದಲಾದ ವ್ಯವಹಾರವು ಪ್ರಸಿದ್ಧಿಯಾಗುವುದಕ್ಕಾಗಿ, ವಸ್ತುನಃ=ಧರ್ಮಿಯುದ್ದೇಶಿಯಿಂದ, ವಿಶೇಷಾ ಏವ=ಅತಿಶಯಗಳಾಗಿಯೇ, ಸಂಗ್ರಾಹ್ಯಾಃ=ಸಂಗ್ರಹಿಸಿಕೊಳ್ಳಬೇಕು. (ಕೇವಲ ವಸ್ತುವಿನಿಂದ ನಿರ್ವಿಶೇಷಾಭಿನ್ನಗಳಲ್ಲ).

ತಾ ॥ **ನ್ಯಾಯಸುಧಾ**— (1) ಅತ್ತೃತ್ವಾದಿಗಳಿಗೂ ಅದೃಶ್ಯತ್ವಾದಿಗಳಿಗೂ ಬ್ರಹ್ಮಸ್ವರೂಪತ್ವವು ಶ್ರುತ್ಯಾದಿಗಳಲ್ಲಿ ಸಿದ್ಧವಾಗಿದೆ. ಧರ್ಮ-ಧರ್ಮ್ಯಾದಿವ್ಯವಹಾರವೂ ಪ್ರಮಿತವಾಗಿದೆ. ಎರಡರಲ್ಲಿ ಒಂದಕ್ಕೂ ಯುಕ್ತವಾದ ಬಾಧವು ಕೂಡುವುದಿಲ್ಲ. ಆದಪ್ರಯುಕ್ತ ಆ ಉಭಯಾನ್ಯಥಾನುಪಪತ್ತಿಯಿಂದ ಸವಿಶೇಷಾಭೇದವನ್ನು ಅಂಗೀಕರಿಸತಕ್ಕದ್ದು. ವಿಶೇಷವು 'ಭೇದವಿಲ್ಲದಿದ್ದರೂ ಭೇದಸಿಮಿತ್ತಕವಾದ ವ್ಯವಹಾರವನ್ನು ನಿರ್ವಹಿಸಿಕೊಡುತ್ತದೆ' ಎನ್ನುವುದು ಸ್ವರೂಪಗ್ರಾಹಕ ಪ್ರಮಾಣದಿಂದಲೇ ಸಿದ್ಧವಾಗುತ್ತದೆ ॥ ೨೪ ॥

(1) ಕೆಲವರು ಗುಣಕ್ರಿಯಾದಿಗಳಿಗೆ ದ್ರವ್ಯದಿಂದ ಅತ್ಯಂತ ಭೇದವನ್ನೂ, ಸಮವಾಯವನ್ನೂ ಅಂಗೀಕರಿಸಿ ವ್ಯವಹಾರಗಳನ್ನುಪಪಾದಿಸುತ್ತಾ 'ಏಕಧೈವಾನುದ್ರಷ್ಟವ್ಯಂ' 'ಏಕಮೇವಾದ್ವಿತೀಯಂ' 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಇತ್ಯಾದಿ ಗುಣ-ಗುಣ್ಯಾದಿಗಳಿಗೆ, ಅಭೇದಪ್ರತಿಪಾದಕ ಶ್ರುತಿಗಳಿಗೆ ಉಪಾಸನಾರ್ಥತ್ವವನ್ನಾಗಲೀ, ಧರ್ಮಗಳು ನಿತ್ಯಗಳು ಎನ್ನುವ ಅರ್ಥವನ್ನು ಹೇಳುವವು ಎಂದಾಗಲೀ ಹೇಳುತ್ತಾ ವಿಶೇಷವನ್ನು ಇಚ್ಛಿಸುವುದಿಲ್ಲ. (2) ಕೆಲವರು ಭೇದಾಭೇದಗಳಿಂದ ವ್ಯವಹಾರನಿರ್ವಾಹವನ್ನು ನೋಡುತ್ತಾ, ಕೇವಲ ಭೇದಪ್ರತಿಷೇಧವನ್ನೂ ಶ್ರುತ್ಯರ್ಥವನ್ನಾಗಿ ಹೇಳುತ್ತಾ ವಿಶೇಷವನ್ನು ಇಚ್ಛಿಸುವುದಿಲ್ಲ. (3) ಇನ್ನು ಕೆಲವರು ಬ್ರಹ್ಮನು ನಿರ್ವಿಶೇಷನೇ ಎಂದಂಗೀಕರಿಸಿ ಧರ್ಮಧರ್ಮ್ಯಾದಿ ವ್ಯವಹಾರಗಳೆಲ್ಲವೂ ಅವಿದ್ಯಾರೋಪನಿಮಿತ್ತಗಳೆಂದು ತಿಳಿಯುತ್ತಾ ವಿಶೇಷವನ್ನು ತಿರಸ್ಕರಿಸುತ್ತಾರೆ. ಅವುಗಳಲ್ಲಿ ಭೇದವಾದಿಯಿಂದಲೂ ಭೇದಾಭೇದವಾದಿಯಿಂದಲೂ ವಿಶೇಷವನ್ನು ಅಂಗೀಕಾರ ಮಾಡಿಸುತ್ತಾರೆ.

**ಮೂ ॥ ಯತ್ನೈಕಃ ಸಮವಾಯೋಽಪಿ ಭೇದಾಭೇದೌ ಚ ವಸ್ತುನಿ ।**
**ಅಂಗೀಕಾರ್ಯಾ ವಿಶೇಷೇಣ ಸ್ಥಾನೇಷು ವ್ಯವಹರ್ತೃಭಿಃ ॥ ೨೫ ॥**

ಅಖಂಡವಾದಿನೋಽಪಿ ಸ್ಯಾದ್ವಿಶೇಷೋಽನಿಚ್ಛತೋಽಪ್ಯಸೌ ।
ವ್ಯಾವೃತ್ತೇ ನಿರ್ವಿಶೇಷೇ ತು ಕಿಂ ವ್ಯಾವರ್ತ್ಯಬಹುತ್ವತಃ ॥ ೨೬ ॥

ಅ ॥ ಸ್ಥಾನೇಷು = ಸ್ವಶಾಸ್ತ್ರಪ್ರದೇಶಗಳಲ್ಲಿ, ಏಕಃ ಸಮವಾಯಃ ಇತಿ = ಒಂದು ಸಮವಾಯವೆಂದೂ, ವಸ್ತುನಿ = ಪದಾರ್ಥಗಳಲ್ಲಿ, ಭೇದಾಭೇದೌ ಇತಿ ಚ = ಭೇದಾಭೇದಗಳೆಂದೂ, ವ್ಯವಹರ್ತೃಭಿಃ = ವ್ಯವಹಾರ ಮಾಡುವವರಿಂದ, ಯಥಾ = ಹೇಗೆ, ತೇ = ಸಮವಾಯ ಭೇದಾಭೇದಗಳು, ವಿಶೇಷೇಣ = ವಿಶೇಷವುಳ್ಳವುಗಳಾಗಿ, ಅಂಗೀಕಾರ್ಯಾಃ = ಅಂಗೀಕಾರಾರ್ಹಗಳೋ (ತಥಾ = ಹಾಗೆಯೇ, ಭಾವಾಭಾವಸ್ವರೂಪಾಶ್ಚ = ಭಾವಾಭಾವಸ್ವರೂಪಗಳಾದ ಅತ್ತೃತ್ವಾದಿಗಳೂ ಅದೃಶ್ಯತ್ವಾದಿಗಳೂ ಕೂಡ, ವಿಶೇಷವುಳ್ಳವುಗಳಾಗಿ ಅಂಗೀಕಾರಾರ್ಹಗಳು.) (ಅಖಂಡವಾದಿಯಾದ ಮಾಯಾವಾದಿಯಿಂದಲೂ ವಿಶೇಷವನ್ನು ಅಂಗೀಕಾರ ಮಾಡಿಸುತ್ತಾರೆ) ಅಖಂಡವಾದಿನೋಽಪಿ = ನಿರ್ವಿಶೇಷ ಬ್ರಹ್ಮನನ್ನು ಹೇಳುವವನು, ಅನಿಚ್ಛತೋಽಪಿ = ವಿಶೇಷವನ್ನು ಇಚ್ಛಿಸದೆ ಇದ್ದವನಾದಾಗ್ಯೂ ಆತನಿಗ (ನ್ಯಾಯಪ್ರಾಪ್ತವಾಗಿರುವುದರಿಂದ) ಅಸೌ = ಪೂರ್ವದಲ್ಲಿ ಉಪಪಾದಿಸಲ್ಪಟ್ಟ, ವಿಶೇಷಃ = ವಿಶೇಷವು, ಸ್ಯಾತ್ = ಅಂಗೀಕಾರಾರ್ಹವೇ ಆಗುವುದು. (ಹಾಗೆಂದರೆ ಲಕ್ಷ್ಯವಾದ ಅರ್ಥಕ್ಕೆ ಭೇದವಿಲ್ಲವಾದರೂ ಬ್ರಹ್ಮನಲ್ಲಿ ಆರೋಪಿತಗಳಾದ ಅಸತ್ಯತ್ವ ಮೊದಲಾದ ಧರ್ಮಗಳು ವ್ಯಾವರ್ತ್ಯಗಳು ಹೆಚ್ಚಾಗಿದ್ದ ಪ್ರಯುಕ್ತ ಅವುಗಳನ್ನು ವ್ಯಾವರ್ತಿಸುವ ಪ್ರಯುಕ್ತ ಪದಗಳು ಸಾರ್ಥಕಗಳಾಗಬಹುದು ಎಂದರೆ) ವ್ಯಾವೃತ್ತೇ = ವ್ಯಾವೃತ್ತನಾದ ಬ್ರಹ್ಮನು, ನಿರ್ವಿಶೇಷೇ ತು = ಸತ್ಯಾದಿ ಪದಗಳಿಂದ ಪ್ರತಿಪಾದಿಸಲ್ಪಟ್ಟ ವ್ಯಾವರ್ತಕವಿಶೇಷಗಳು ಇಲ್ಲದವನೆಂದು ಅಂಗೀಕೃತನಾಗುತ್ತಿರಲು, ವ್ಯಾವರ್ತ್ಯಬಹುತ್ವತಃ = ವ್ಯಾವರ್ತ್ಯಗಳಾದ ಅಸತ್ಯತ್ವಾದಿಗಳಿಗೆ ಬಾಹುಲ್ಯವಿದ್ದ ಪ್ರಯುಕ್ತ, ಕಿಂ = ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲ.

ತಾ ॥ ನ್ಯಾಯಸುಧಾ—(1) ಧರ್ಮ-ಧರ್ಮಿಗಳಿಗೆ ಭೇದವನ್ನು ಹೇಳುವವರು 'ತತ್ತ್ವಂ ಭಾವೇನ' = ಹೇಗೆ ಒಂದೇ ಸತ್ತಾಜಾತಿಯು ಎಲ್ಲಾ ಕಡೆಗಳಲ್ಲಿಯೂ ಸತ್‌ಬುದ್ಧಿಯನ್ನು ಪ್ರವರ್ತಿಸಿ ಕೊಡುತ್ತದೋ, ಹಾಗೆಯೇ 'ಏಕ ಏವ ಸಮವಾಯಃ' ಎನ್ನುವುದು ಎಲ್ಲಾ ಕಡೆಗಳಲ್ಲಿಯೂ ಸಮವೇತಬುದ್ಧಿಯನ್ನು ಪ್ರವರ್ತಿಸಿಕೊಡುತ್ತದೆ, ಎನ್ನುವ ವೈಶೇಷಿಕಸೂತ್ರದ್ದೆಶೆಯಿಂದ ಒಂದೇ ಸಮವಾಯವೆಂದು ವ್ಯವಹರಿಸುತ್ತಾರೆ. ಆ ಸಮವಾಯದ ಏಕತ್ವವು ಸಮವಾಯದ್ದೆಶೆಯಿಂದ ೧ ಭಿನ್ನವೋ, ಅಥವಾ ೨ ಸಮವಾಯಸ್ವರೂಪವೋ, ೧ನೇದ್ದು ಕೂಡಲಾರದು. ಏಕೆಂದರೆ— ಸಮವಾಯದಲ್ಲಿ ದ್ರವ್ಯಗುಣಾದಿಗಳು ಕೂಡಲಾರವು. ೨ನೇ ಕಲ್ಪದಲ್ಲಿ 'ಏಕಃ ಸಮವಾಯಃ' ಇತ್ಯಾದಿ ಸಹಪ್ರಯೋಗವು ಹೇಗೆ ಕೂಡುತ್ತದೆ? 'ಸಮವಾಯಸ್ಯ ಏಕತ್ವಂ' ಎಂದು ಷಷ್ಠೀ ಪ್ರಯೋಗವ್ಯವಹಾರವಾಗಲೀ ಹೇಗೆ ಕೂಡುತ್ತದೆ.? ಸಮವಾಯಾತಿರಿಕ್ತವಾದ ಏಕತ್ವವು ಇಲ್ಲದಿರುವುದರಿಂದ ಷಷ್ಠೀಪ್ರಯೋಗವು ಘಟಸ್ಯ ಸ್ವರೂಪಂ ಎನ್ನುವುದರಂತೆ ಔಪಚಾರಿಕವು. ಎಂದರೆ ಷಷ್ಠೀಪ್ರಯೋಗಾದಿಗಳಿಗೆ ಔಪಚಾರಿಕತ್ವವನ್ನು ಆಶ್ರಯಿಸಿ ಸಮವಾಯಕ್ಕೂ ಏಕತ್ವಕ್ಕೂ ನಿರ್ವಿಶೇಷಾಭೇದವನ್ನು ಹೇಳಿದರಿಂದಲೇ ತದಭಿನ್ನವಾದ ಏಕತ್ವವೂ ಸಿದ್ಧವಾಗುವುದರಿಂದ ಸಮವಾಯಕ್ಕೆ ಏಕತ್ವವನ್ನು ಸಾಧಿಸುವುದಕ್ಕಾಗಿ 'ತತ್ತ್ವಂಭಾವೇನ' ಎನ್ನುವ ಸೂತ್ರನಿರ್ಮಾಣಪ್ರಯಾಸವೇ ವ್ಯರ್ಥವಾಗುವುದು. ಆದಪ್ರಯುಕ್ತ ಬೇರೆ ಗತಿಯಿಲ್ಲದಿರುವುದರಿಂದ ಸವಿಶೇಷಾಭೇದವನ್ನು ಅಂಗೀಕರಿಸಬೇಕು. ತಥಾಚ ಬ್ರಹ್ಮನಲ್ಲಿ ಶ್ರುತಿಗಳಿಗೆ ಅನ್ಯಪರತ್ವವನ್ನು ಪ್ರಕಲ್ಪಿಸಿ ಕೊನೆಗೆ ಆದರೂ ಅಂಗೀಕಾರ್ಯವಾದ ವಿಶೇಷದಿಂದಲೇ ಸರ್ವವೂ ಉಪಪನ್ನವಾಗುವಾಗ ಭೇದ ಸಮವಾಯ ಇವುಗಳನ್ನು ಕಲ್ಪಿಸಿದರಿಂದ ಏನು ಪ್ರಯೋಜನವು?

(2) ಸಮವಾಯ ಪ್ರತಿಯೋಗಿಕವಾದ ಭೇದಾಭಾವವು ಸಮವಾಯಕ್ಕೆ ಏಕತ್ವವು; ಎಂದರೆ— ಆದಾಗ್ಯೂ 'ಸಮವಾಯಸ್ಯ ಏಕತ್ವಂ' ಎನ್ನುವಲ್ಲಿ ಷಷ್ಠ್ಯರ್ಥವಾದ ಸಂಬಂಧವು ಪ್ರತ್ಯೇಕವಾಗಿ ಸಮವಾಯೈಕತ್ವರೂಪವಾದ ಸಂಬಂಧಿಯಿಂದ ಬೇರೆಯಾದ ಸಂಯೋಗಾದಿರೂಪವಾದುದು ಇಲ್ಲದಿರುವುದರಿಂದ ಸ್ವರೂಪವೆಂದೇ ಅಂಗೀಕರಿಸಬೇಕು. ಅಲ್ಲಿ ಭೇದಕಾರ್ಯವನ್ನು ನಿರ್ವಾಹ ಮಾಡುವುದಕ್ಕಾಗಿ ವಿಶೇಷವನ್ನು ಅಂಗೀಕರಿಸಲೇ ಬೇಕು. (3) ಸಮವಾಯ ಏಕತ್ವಗಳಿಗೆ ಸಂಬಂಧವೇ ಇಲ್ಲ ಎನ್ನುವ ಮೂರನೇಪಕ್ಷವೂ 'ಏಕಃ ಸಮವಾಯಃ' ಎಂದು ಸಂಬಂಧವ್ಯವ ಹಾರವು ಕೂಡದಿರುವುದರಿಂದ ಅಯುಕ್ತವು. ಸ್ವನಿರ್ವಾಹಕವೆಂದು ಹೇಳಿದರೆ ಪುನಃ ಸವಿಶೇ ಷತ್ವವನ್ನೇ ಅಂಗೀಕರಿಸಬೇಕಾಯಿತು. (4) ಹಾಗಾದರೆ ಸಮವಾಯಕ್ಕೇನೇ ವಿಚಿತ್ರ ಸ್ವಭಾವ ಇದೆ ಎಂದುಹೇಳಿದರೆ ಆಗ ಸವಿಶೇಷತ್ವವೇ ಪ್ರಾಪ್ತವಾಯಿತು. ಭೇದಾಭೇದವಾದಿಯಾದರೂ ಅವಶ್ಯವಾಗಿ ವಿಶೇಷವನ್ನು ಅಂಗೀಕರಿಸಬೇಕು. ಪರಸ್ಪರ ವಿರುದ್ಧಗಳಾದ ಭೇದಾಭೇದ ಗಳಿಗೆ ಏಕತ್ರ ಸಮಾವೇಶವು ವಿಶೇಷವಿಲ್ಲದೆ ಕೂಡಲಾರದು. (5) ಮತ್ತೂ ಭೇದಾಭೇದ ಗಳಲ್ಲಿಯೂ ವಸ್ತುವಿನಿಂದಲೂ ಪರಸ್ಪರವಾಗಿಯೂ ಭೇದಾಭೇದಾಂತರವನ್ನು ಅಂಗೀಕರಿಸಿದರೆ ಅನವಸ್ಥೆಯು. ಸ್ವನಿರ್ವಾಹಕವೆಂದು ಹೇಳಿದರೆ ವಿಶೇಷವನ್ನು ಅಂಗೀಕರಿಸಿದ ಹಾಗಾಯಿತು. ಭೇದಾಭೇದಗಳಿಗೆ ವಸ್ತುವಿನಿಂದ ಕೂಡಿಕೊಂಡು ಅತ್ಯಂತ ಭೇದವನ್ನು ಅಂಗೀಕರಿಸಿದರೆ ವಸ್ತುವಿನಲ್ಲಿ ಭೇದಾಭೇದಗಳುಎನ್ನುವ ವ್ಯವಹಾರವು ಕೂಡುವುದಿಲ್ಲ. ಏಕಂದರೆ—ವಸ್ತುವಿನಿಂದ ಭೇದಾಭೇದಗಳಿಗೆ ಸಂಬಂಧವಿರುವುದಿಲ್ಲ. ಅತ್ಯಂತಾಭೇದವಿದ್ದರೂ ಕೇವಲ ವಸ್ತುಸ್ವರೂಪ ವಾಗಿರುವುದರಿಂದ ವಸ್ತುವಿನಲ್ಲಿ ಭೇದಾಭೇದಗಳು ಎನ್ನುವ ಆಧಾರಾಧೇಯಭಾವವೂ ದ್ವಿವಚನವೂ ಅನುಪಪನ್ನವಾಗುವುದು. ಆದಪ್ರಯುಕ್ತ ಅದನ್ನು ನಿರ್ವಾಹ ಮಾಡುವುದಕ್ಕಾಗಿ ವಿಶೇಷವು ಅವಶ್ಯವಾಗಿ ಅಂಗೀಕರಣೀಯವಾಗಿರುವುದರಿಂದ ಆ ವಿಶೇಷದಿಂದಲೇ ಬ್ರಹ್ಮನಲ್ಲಿ ಎಲ್ಲವೂ ಉಪಪನ್ನವಾಗುವಾಗ ಭೇದಾಭೇದವನ್ನು ಅಂಗೀಕರಿಸಿರುವುದರಿಂದ ಏನು ಪ್ರಯೋಜನವು? (6) 'ಅಂಶಿನೋಂಶೈರಭೇದೋಽಯಮಂಶೇನ ತು ಭಿದಾಭಿದಾ' ಎಂದು ವೈಶೇಷಿಕಾ ಧಿಕರಣದಲ್ಲಿ ತಂತುಪಟಾದಿಗಳಲ್ಲಿ ಭೇದಾಭೇದವನ್ನು ಅಂಗೀಕರಿಸಬೇಕೆಂದು ಹೇಳುವೆವು. (7) ಅಖಂಡ ವಾದಿಯೂ ವಿಶೇಷವನ್ನು ಅಂಗೀಕರಿಸಬೇಕೆನ್ನುವುದು ವ್ಯಾಹತವು. ಅಖಂಡತ್ವ ವೆಂದರೆ ನಿರ್ವಿಶೇಷತ್ವವು, ಎಂದರೆ—'ಅನಿಷ್ಟತೋಽಪಿ' ಕೇವಲ ತನ್ನ ಅಂಗೀಕಾರದಿಂದ ಅಖಂಡ ವಾದಿತ್ವವಿದ್ದರೂ ನ್ಯಾಯಪ್ರಾಪ್ತವಾಗಿರುವುದರಿಂದ ವಿಶೇಷವನ್ನು ಅಂಗೀಕರಿಸಬೇಕು. (8) ಆದ ಪ್ರಯುಕ್ತ ಹಿಂದೆ ಹೇಳಿದಪ್ರಕಾರ ವಿಶೇಷವನ್ನು ಎಲ್ಲಾ ವಾದಿಗಳೂ ಅಂಗೀಕರಿಸಬೇಕಾಗುವುದ ರಿಂದ ಅದರ ಬಲದಿಂದ ಧರ್ಮ-ಧರ್ಮಿ ಎನ್ನುವ ವ್ಯವಹಾರವು ಕೂಡುವುದರಿಂದ ಅದೃಶ್ಯತ್ವಾದಿ ಗುಣಗಳಿಗೆ ಬ್ರಹ್ಮನಿಂದ ಐಕ್ಯವು ಯುಕ್ತವೆಂದು ಸಿದ್ಧವಾಯಿತು.

## ಸಾರಾಂಶ: —

**ಸ. ರ. ವಿ.**— (1) ವಿಧಿರೂಪವಾಗಿ ತೋರುವ ಗುಣಕ್ರಿಯಾ ಮೊದಲಾದ ಭಾವ ಧರ್ಮಗಳಿಗೆ ಬ್ರಹ್ಮನಿಂದ ಅಭೇದವು ಯುಕ್ತವಾಗಲಿ, ನಿಷೇಧರೂಪವಾಗಿ ತೋರುವ ಅದೃಶ್ಯ ತ್ವಾದಿಗಳಿಗೆ ಅಭೇದವು ಹೇಗೆ ಯುಕ್ತವಾಗಬಹುದು? ನಿಷೇಧಮುಖವೇದ್ಯವಾದುದಕ್ಕೆ ಭಾವ ರೂಪತ್ವವು ವಿರುದ್ಧವಾಗಿದೆ, ಎಂದರೆ— ಹೀಗೆ ಹೇಳಕೂಡದು. ನಿಷೇಧಮುಖವೇದ್ಯವಾದು ದೆಲ್ಲಾದಕ್ಕೂ ಅಭಾವತ್ವವೇ ಎನ್ನುವ ನಿಯಮವಿಲ್ಲವಷ್ಟೆ! ಆದಕಾರಣ ಇದು ಬೇರೆ ಎಂದು ಅನುಭೂತವಾದ ಅನ್ಯತ್ವವು ಭಾವರೂಪವಾದುದಾಗ್ಯೂ 'ತದಿದಂ ನ ಭವತಿ' ಎಂದು ನಿಷೇಧ

ಮುಖ ವೇದ್ಯವೆಂದು ದೃಷ್ಟವಾಗಿದೆ. ವಿಧಿನಿರೂಪ್ಯತ್ವವಿದ್ದಪ್ರಯುಕ್ತ ನಞಾರ್ಥತ್ವವಿಲ್ಲವೆಂದು ಹೇಳಕೂಡದು. ವಿಧಿನಿರೂಪ್ಯವಾದದ್ದಕ್ಕೂ ನಞಾರ್ಥತ್ವವು ದೃಷ್ಟವಾಗಿದೆ. ಬ್ರಾಹ್ಮಣನದ್ದೆಶೆಯಿಂದ ಅನ್ಯನೆಂದು ವಿವಕ್ಷಿಸಿಮಾಡಿಕೊಂಡು 'ಅಬ್ರಾಹ್ಮಣಃ' ಎನ್ನುವ ಪ್ರಯೋಗವು ಅರಾಗತ್ವಾದಿಗಳು ಪುರುಷರ ಗುಣಗಳೆಂದು ಪ್ರಸಿದ್ಧಗಳಾಗಿರುವುದರಿಂದ ನಿಷೇಧಮುಖವೇದ್ಯವಾದುದಕ್ಕೆ ಗುಣತ್ವವೂ ಯುಕ್ತವೇ. ಆದಪ್ರಯುಕ್ತವೇ ಸೂತ್ರಕಾರರು 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಎಂದು ಅದೃಶ್ಯತ್ವಾದಿಗಳಿಗೆ ಭಗವದ್ಗುಣತ್ವವನ್ನು ಹೇಳಿರುವರು. ಆದಪ್ರಯುಕ್ತ ಅವುಗಳಿಗೇನೇ ನಿಷೇಧಮುಖವೇದ್ಯತ್ವವು ವಿರುದ್ಧವಾಗಿದೆ. ಉದಾ=ಘಟವು ಘಟವಲ್ಲವೆನ್ನುವುದು ವಿರುದ್ಧವಾಗಿದೆ. ಪುನಃ ಘಟವು ಪಟವಲ್ಲವೆನ್ನುವುದು ವಿರುದ್ಧವಲ್ಲ. (2) ಪೃಥಕ್ತ್ವವೆನ್ನುವುದು ಗುಣರೂಪವಾದುದು ಬೇರೆ. ಅನ್ಯೋನ್ಯಾಭಾವವು ಬೇರೆ. ಪದಾರ್ಥಗಳ ಸ್ವರೂಪರೂಪವಾದ ಭೇದವು ಬೇರೆ. ಎಂದು ಯಾವುದೆಂದು ಹೇಳುತ್ತಾರೋ ಅವರನ್ನು ಕುರಿತು 'ಪೃಥಕ್ತ್ವಾನ್ಯತ್ವಭೇದಾಸ್ತು' ಎನ್ನುವುದರಿಂದ ಅವುಗಳು ಪರ್ಯಾಯಗಳೇ ಎಂದುಪಪಾದಿಸಿದರು. (3) ಹೇಗೆ 'ಏಕಃ ಸಮವಾಯಃ' ಎಂದು ಸಮವಾಯ ಏಕತ್ವಗಳಿಗೆ ಅಭೇದವಿದ್ದರೂ ವಿಶೇಷವದೆಯೋ, ಹೇಗೆ 'ಧರ್ಮಧರ್ಮಿಣೋಃ ಭೇದಾಭೇದಾ' ಎಂದು ಭೇದಾಭೇದಗಳಿಗೆ ಧರ್ಮಿಯಿಂದ ಅಭೇದವಿದ್ದರೂ ವಿಶೇಷವನ್ನು ಸಮವಾಯವಾದಿಯೂ, ಭೇದಾಭೇದವಾದಿಯೂ, ಅಂಗೀಕರಿಸತಕ್ಕದೋ, ಹಾಗೆಯೇ ಗುಣಕ್ರಿಯಾದಿಗಳಂತೆಯೇ ಅಭಾವಧರ್ಮಗಳಿಗೆ ಧರ್ಮಿಯಿಂದ ಅಭೇದವು ಸವಿಶೇಷವೆಂದೇ ಯುಕ್ತವು. ಇಲ್ಲವಾದರೆ ಶಬ್ದಗಳಿಗೆ ಪೌನರುಕ್ತ್ಯಾದಿಗಳು ಬರಬೇಕಾಗುವವು. ಆದಕಾರಣ ಸಮವಾಯಾದಿಗಳನ್ನು ಕಲ್ಪಿಸುವುದಕ್ಕಿಂತ ಮೊದಲು ಧರ್ಮ-ಧರ್ಮಿಗಳಿಗೆ ಸವಿಶೇಷಾಭೇದವನ್ನು ಅಂಗೀಕರಿಸುವುದು ಯುಕ್ತವು. ಹೀಗೆ ಕಲ್ಪಿಸಿದರೆ ಲಾಘವವಿದೆ. (4) ನಿರ್ವಿಶೇಷಪಕ್ಷವಾದರೂ ಅತ್ಯಯುಕ್ತವಾಗಿದೆ. ಹೇಗೆಂದರೆ— ಸತ್ಯಪದದಿಂದ ಅಸತ್ಯವ್ಯಾವೃತ್ತಿಯೆಂದು ಎಷ್ಟು ಅವಗತವಾಗುತ್ತದೋ ಅಷ್ಟೇ ೧ ಬ್ರಹ್ಮ ಜ್ಞಾನಾದಿ ವ್ಯಾವೃತ್ತವಾಗಿ ಹೇಳಲ್ಪಡುತ್ತದೋ, ೨ ಅದಕ್ಕಿಂತ ಅತಿಶಯಿತವಾದುದು ಹೇಳಲ್ಪಡುತ್ತದೋ, ೧ನೇ ಪಕ್ಷದಲ್ಲಿ ಸತ್ಯಸ್ವರೂಪದಿಂದಲೇ ಬ್ರಹ್ಮಸ್ವರೂಪವೂ ಅವಗತವಾಯಿತು. ಅದೇ ಜಿಜ್ಞಾಸಿತವಾಗಿದೆ. ಜ್ಞಾನಾದಿಪದಗಳಿಗೆ ವೈಯರ್ಥ್ಯವೂ ಬರುವುದು. ೨ನೇ ಕಲ್ಪದಲ್ಲಿ ಬ್ರಹ್ಮನಿಗೆ ನಿರ್ವಿಶೇಷತ್ವವು ಬಾರದೆ ಹೋಗುವುದು. ಆದಪ್ರಯುಕ್ತ ಶ್ರೀಪರಬ್ರಹ್ಮನು ಅದೃಶ್ಯತ್ವಾದಿ ಗುಣಗಳುಳ್ಳವನೆಂದು ಸಿದ್ಧವಾಯಿತು. ॥ ೨೫ ॥ ೨೬ ॥ ಸೂ. ॥ ೨೧ ॥ ೨೨ ॥ ೨೩ ॥ ಅಧಿ ॥ ೬ ॥

**ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು.**



# ವೈಶ್ವಾನರಾಧಿಕರಣವು.

ಪಾಚಕತ್ವಾದ್ಯನೇಕ ಲಿಂಗಗಳಿಂದ ಯುಕ್ತವಾದ ವೈಶ್ವಾನರ ನಾಮಕ್ಕೆ ಸಮನ್ವಯವನ್ನು ಮಾಡುತ್ತಾರೆ—

**"ಓಂ ವೈಶ್ವಾನರಃ ಸಾಧಾರಣ ಶಬ್ದ ವಿಶೇಷಾತ್"** ॥ ಸೂ. ೨೪ ॥

'ಆತ್ಮಾನಂ ವೈಶ್ವಾನರಮುಪಾಸ್ತೇ' 'ಅಯಮಗ್ನಿರ್ವೈಶ್ವಾನರಃ' ಇತ್ಯಾದಿಗಳಲ್ಲಿ ಶ್ರುತನಾದ ವೈಶ್ವಾನರನು ಬ್ರಹ್ಮನೇ; ಅಗ್ನಿಯಲ್ಲ. ಏಕೆಂದರೆ— ವೈಶ್ವಾನರಶಬ್ದವು ಅಗ್ನಿವಿಷ್ಣುಗಳಲ್ಲಿ ಸಾಧಾರಣವಾದಾಗ್ಯೂ ಆತ್ಮಪದದಿಂದ ವಿಶೇಷಣವಿದೆ.

('ಓಂ ಸ್ಮರ್ಯಮಾಣಮನುಮಾನಂ ಸ್ಯಾದಿತಿ ಓಂ') || ಸೂ. ೨೫ ||

ವಿಷ್ಣುವಿಗೆ 'ಅಹಂ ವೈಶ್ವಾನರೋ ಭೂತ್ವಾ' ಎನ್ನುವ ಸ್ಮೃತಿಯಲ್ಲಿ ಹೇಳಲ್ಪಟ್ಟ ವೈಶ್ವಾನರತ್ವವು ವೈಶ್ವಾನರ ವಿದ್ಯೆಯಲ್ಲಿಯೂ ವೈಶ್ವಾನರ ಶಬ್ದವಾಚ್ಯನು ವಿಷ್ಣುವೇ ಎನ್ನುವುದಕ್ಕೆ ಅನುಮಾಪಕವಾಗುತ್ತದೆ.

ಈ ಅಧಿಕರಣದಲ್ಲಿ ನಾಮಾತ್ಮಕ ಶಬ್ದವನ್ನು ಸಮನ್ವಯಮಾಡುವ ಪ್ರಯುಕ್ತ ಈ ಪಾದದಲ್ಲಿ ಅಂತರ್ಭಾವವು ಯುಕ್ತವಲ್ಲ. ಲಿಂಗಸಮನ್ವಯವೂ ಇಲ್ಲಿ ಸಿದ್ಧವಾಗುವುದರಿಂದ ಪೂರ್ವಪಾದದಲ್ಲಿಯೂ ಅಂತರ್ಭಾವವು ಯುಕ್ತವಲ್ಲ. ಅನ್ಯತ್ರ ಪ್ರಸಿದ್ಧಗಳಾದ ಶಬ್ದಗಳಿಗೆ ಸಮನ್ವಯಮಾಡುವ ಪ್ರಯುಕ್ತ ಎರಡು ಪಾದಗಳಲ್ಲಿಯೂ ಅಂತರ್ಭೂತವಾಗಲಿಲ್ಲವೆಂದು ಹೇಳಕೂಡದು. ಸಮನ್ವಯವೇ ಸಿದ್ಧಿಸದೆ ಹೋಗುವುದರಿಂದ ಹೇಳಲರ್ಹನಲ್ಲವೆಂದೂ ಹೇಳಕೂಡದು. ಆದಪ್ರಯುಕ್ತ ಅಂತರ್ಭಾವವು ಹೇಗೆ ಕೂಡುತ್ತದೆಂದರೆ— ಲಿಂಗಾಧಿಕಾ ಎನ್ನುವಲ್ಲಿ ಅಂತರ್ಭಾವವನ್ನು ಸಮರ್ಥನೆ ಮಾಡಿರುವರು. ಅಥವಾ ಎರಡು ಪಾದಗಳ ಅರ್ಥವಾಗಿರುವುದರಿಂದ ಒಂದರಲ್ಲಿ ಪ್ರವೇಶವು ಕೂಡದಿರುವುದರಿಂದ ಎರಡು ಪಾದಗಳ ಶೇಷವಿದು ಆದಪ್ರಯುಕ್ತವೇ ಎರಡು ಪಾದಗಳ ಅಂತ್ಯದಲ್ಲಿ ನಿಬಂಧನ ಮಾಡಿದ್ದಾರೆಂದು ತಿಳಿಸುವುದಕ್ಕಾಗಿ ಎರಡು ಪಾದಗಳ ಅರ್ಥವನ್ನು ಉಪಸಂಹಾರ ಮಾಡುತ್ತಾರೆ.—

ಮೂ || ಬಹುಲಿಂಗ ಸಮಾಯುಕ್ತೈರ್ಬಹುಭೀರೂಢ ನಾಮಭಿಃ |
ಪ್ರಸಿದ್ಧೈರನ್ಯಗತ್ವೇನ ವಾಚ್ಯಃ ಸಾಕ್ಷಾಜ್ಜನಾರ್ದನಃ |
ವೈಶ್ವಾನರಾದಯಃ ಶಬ್ದಾ ಅಪಿ ತದ್ವಾಚಿನಸ್ತತಃ || ೨೭ ||

ಅ || ಅನ್ಯಗತ್ವೇನ ಪ್ರಸಿದ್ಧೈಃ=ಇತರ ವಿಷಯಕಗಳಾಗಿ ಪ್ರಸಿದ್ಧಗಳಾದ, ಬಹುಲಿಂಗ ಸಮಾಯುಕ್ತೈಃ=ಅನೇಕಲಿಂಗಗಳಿಂದ ಕೂಡಿರುವ, ಬಹುಭಿಃ=ಅನೇಕ, ರೂಢನಾಮಭಿಃ=ರೂಢನಾಮಗಳಿಂದ, ಸಾಕ್ಷಾತ್ = ಮುಖ್ಯವೃತ್ತಿಯಿಂದ, ಜನಾರ್ದನಃ = ಶ್ರೀ ಹರಿಯು, ವಾಚ್ಯಃ=ಹೇಳಿಸಿಕೊಳ್ಳಲ್ಪಡುತ್ತಾನೆ, (ಈಗ ವೈಶ್ವಾನರಾಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ) ತತಃ=ಆದಪ್ರಯುಕ್ತ, ವೈಶ್ವಾನರಾದಯಃ=ವೈಶ್ವಾನರವೊದಲಾದ, ಶಬ್ದಾಃ=ಶಬ್ದಗಳು, ತದ್ವಾಚಿನೋಽಪಿ=ಪರಮೇಶ್ವರ ವಾಚಕಗಳೇ. || ೨೭ ||

"ಓಂ ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ಪುರುಷವಿಧಮಪಿ ಚೈನಮಧೀಯತೇ ಓಂ"
|| ಸೂ || ೨೬ ||

'ಅಯಮಗ್ನಿಃ ಇದು ಮೊದಲಾದ ಅಗ್ನಿಶಬ್ದಪ್ರತೀತಿಯಿಂದ' 'ವೈಶ್ವಾನರೇ ತದ್ಧುತಂ' 'ಹೃದಯಂ ಗಾರ್ಹಪತ್ಯಃ' ಇತ್ಯಾದಿಗಳಿಂದ ಹೋಮಾದ್ಯಾಧಾರತ್ವ ಗಾರ್ಹಪತ್ಯಾದ್ಯಂಗಕತ್ವ ಲಿಂಗಗಳಪ್ರತೀತಿಯಿಂದ 'ಯೋಽಯಮಂತಃ ಪುರುಷೇ' 'ಯೇನೇದಮನ್ನಂ ಪಚ್ಯತೇ' ಎಂದು ಒಳಗೆ

ಇದ್ದು ವಚನ ವ್ಯಾಪಾರವಮಾಡುವುದರಿಂದ ವೈಶ್ವಾನರನು ಬ್ರಹ್ಮನಲ್ಲವೆಂದರೆ— ಹಾಗೆಹೇಳ ಕೂಡದು ಏಕೆಂದರೆ— ಅಗ್ನ್ಯಾದಿ ನಾಮಲಿಂಗ ಕರ್ಮಗಳುಳ್ಳವನೆಂದು ಉಪಾಸನಕ್ಕಾಗಿ ಉಪದೇಶ ಮಾಡಿರುವುದರಿಂದ, ಮತ್ತು 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂದು ಉಪಕ್ರಮದಲ್ಲಿ ಹೇಳಲ್ಪಟ್ಟ ಆತ್ಮತ್ವಾದಿಗಳು ಕೂಡಲಾರವು. ಬ್ರಹ್ಮಪ್ರಕರಣವೂ ಆಗಿದೆ, ಮತ್ತು 'ಶೀರ್ಷ್ಣೋರ್ದ್ಯೌಃ ಸಮವರ್ತತ' ಇತ್ಯಾದಿಗಳಿಂದ ಪುರುಷಸೂಕ್ತದಲ್ಲಿ ಹೇಳಲ್ಪಟ್ಟ ಪುರುಷಾಕಾರನನ್ನೇ ಛಂದೋಗರು ಈತನನ್ನು 'ಮೂರ್ಧೈವ ಸುತೇಜಾಃ' ಇತ್ಯಾದಿಗಳಿಂದ ಅಧ್ಯಯನ ಮಾಡುತ್ತಾರೆ ಅಂತೂ ಪುರುಷಸೂಕ್ತ ಸಮಾಖ್ಯೆಯೂ ಇದೆ.

('ಓಂ ಅತ ಏವ ನ ದೇವತಾ ಭೂತಂ ಚ ಓಂ') ‖ ಸೂತ್ರ ೨೭ ‖

(ಆತ್ಮಬ್ರಹ್ಮಶಬ್ದಗಳಿದ್ದಪ್ರಯುಕ್ತವೇ ಅಗ್ನ್ಯಾಖ್ಯ ದೇವತೆಯೂ, ಜಠಾಗ್ನಿಯೂ ಕೂಡ 'ಯ ಸ್ತ್ವೇತಮೇವಂ' ಎನ್ನುವ ವೈಶ್ವಾನರವಿದ್ಯೆಯಲ್ಲಿರುವ ವೈಶ್ವಾನರಶಬ್ದವಾಚ್ಯವಾಗುವುದಿಲ್ಲ.)

('ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ') ‖ ಸೂತ್ರ ‖ ೨೮ ‖

(ಮುಖ್ಯವೃತ್ತಿಯಿಂದ ಬ್ರಹ್ಮನೇ ಅಗ್ನ್ಯಾದಿಶಬ್ದವಾಚ್ಯನಾದಾಗ್ಯೂ ಅಗ್ನಿದೇವತಾದಿಗಳ ವಿಷಯದಲ್ಲಿ ವ್ಯವಹಾರವಿರೋಧವಿಲ್ಲವೆಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ.)

('ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ') ‖ ಸೂತ್ರ ೨೯ ‖

(ವೈಶ್ವಾನರವಿದ್ಯೆಯಿಂದ ವಿಷ್ಣುವನ್ನು ಉಪಾಸನಾ ಮಾಡುವವರಿಗೆ ಅಗ್ನ್ಯಾದಿಗಳಲ್ಲಿಯೇ ವಿಷ್ಣುವಿಗೆ ಅಭಿವ್ಯಕ್ತಿಯಿದ್ದಪ್ರಯುಕ್ತ ಅಗ್ನ್ಯಾದಿ ಸೂಕ್ತನಿಯಮವೆಂದು ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.)

('ಓಂ ಅನುಸ್ಮೃತೇರ್ಬಾದರಿಃ ಓಂ') ‖ ಸೂತ್ರ ೩೦ ‖

(ಆಯಾಯ ಸೂಕ್ತಾದಿಗಳಿಂದ ಉಪಾಸಕರಿಗೆ ಅಗ್ನ್ಯಾದಿಗಳಲ್ಲಿಯೇ ಬ್ರಹ್ಮನ ಅನುಸ್ಮೃತಿ ಬರುವುದರಿಂದ ಸೂಕ್ತಾದಿಗಳ ವ್ಯವಸ್ಥೆಯೆಂದು ಬಾದರಾಯಣಾಚಾರ್ಯರು (ಶುಕಾಚಾರ್ಯರು) ತಿಳಿಯುತ್ತಾರೆ.)

('ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ') ‖ ಸೂ ೩೧ ‖

(ಅಗ್ನ್ಯಾದಿ ಸೂಕ್ತಾದಿಗಳಿಂದ ಉಪಾಸಕರಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದರಿಂದ ಸೂಕ್ತಾದಿಗಳ ನಿಯಮವೆಂದು ಜೈಮಿನ್ಯಾಚಾರ್ಯರು ಹೇಳಿರುತ್ತಾರೆ. 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂದು ಪ್ರಸಿದ್ಧವಾದ ಶ್ರುತಿಯು ಜೈಮಿನಿ ಮತವು ಹೇಗೋ ಹಾಗೆ ತೋರಿಸುತ್ತದೆ)

('ಓಂ ಆಮನಂತಿ ಚೈನಮಸ್ಮಿನ್ ಓಂ') ‖ ಸೂ. ೩೨ ‖

(ಈ ವಿಷ್ಣುವನ್ನು ಅಗ್ನ್ಯಾದಿಗಳಲ್ಲಿ ಇರತಕ್ಕವನನ್ನಾಗಿ 'ಯೋಗ್ನೌ ತಿಷ್ಠನ್' ಇತ್ಯಾದಿ ಶ್ರುತಿಗಳು ಹೇಳುತ್ತವೆ.)

ಹಾಗಾದರೆ ವೈಶ್ವಾನರನು ವಿಷ್ಣುವೆಂದು ನಿರ್ಧಾರಣವು ಹೇಗೆ ಆಗುವುದು? ವಕ್ಷಾಂತರ ದಲ್ಲಿಯೂ ಅಗ್ನ್ಯಾದಿ ಶಬ್ದಗಳೂ, ಹೋಮಾಧಿಕರಣತ್ವಾದಿ ಲಿಂಗಗಳೂ ಶ್ರುತಗಳಾಗಿವೆ ಎಂದರೆ—

**ಮೂ || ತಾನಿ ಲಿಂಗಾನಿ ತೇ ಶಬ್ದಾಃ ಅಪಿ ತದ್ಗಾ ಹಿ ಸರ್ವಶಃ |**
**ಬಹುಲಾಽಪ್ಯಜ್ಞರೂಢಿಸ್ತತ್ಪ್ರಾಜ್ಞರೂಢಿಂ ನ ಬಾಧತೇ || ೨೮ ||**

ಅ || ತಾನಿ ಲಿಂಗಾನಿ=ಆಯಾಯ ಪ್ರಕರಣಗಳಲ್ಲಿಂತಕ್ಕ ಪುರುಷವಿಧತ್ವಾದಿ ಲಿಂಗಗಳೂ, ತೇ ಶಬ್ದಾಃ = ಆಯಾಯ ಪ್ರಕರಣಗಳಲ್ಲಿರತಕ್ಕ ಶಬ್ದಗಳೂ, ಸರ್ವಶೋಽಪಿ = ಎಲ್ಲವೂ, ತದ್ಗಾಃ=ಪರಮೇಶ್ವರ ವಿಷಯಕಗಳೇ. ಹಿ=ಶ್ರುತ್ಯಾದಿ ಪ್ರಸಿದ್ಧವು. ಅಥವಾ ಯಾವ ಕಾರಣ ದ್ದೆಸೆಯಿಂದ ಪರಮೇಶ್ವರ ವಿಷಯಕಗಳೋ, ಆ ಕಾರಣದ್ದೆಸೆಯಿಂದ ಪರಮೇಶ್ವರ ವಾಚಕಗಳೇ. ಹಾಗಾದರೆ ಅಗ್ನ್ಯಾದಿ ಶಬ್ದಗಳು ಅನ್ಯತ್ರ ರೂಢಗಳಾಗಿರುವುದರಿಂದ ವಿಷ್ಣುಪರಗಳು ಹೇಗೆ ಆಗುವುವು? ವಿಷ್ಣುವಿನಲ್ಲಿಯೂ ರೂಢಿ ಇದೆಯೆಂದು ಹೇಳಕೂಡದು. ಅನ್ಯತ್ರ ರೂಢಿಯು ಹೆಚ್ಚು ಇದ್ದಪ್ರಯುಕ್ತ ಪ್ರಬಲವಾಯಿತು. ಆದುದರಿಂದ ಪರಮೇಶ್ವರನಲ್ಲಿ ರೂಢಿಯು ಅಲ ವಾಗಿರುವುದರಿಂದ ಅದನ್ನು ಬಾಧಿಸುತ್ತದೆನ್ನುವುದು ಕೂಡುತ್ತದೆ ಎಂದರೆ— ಅಜ್ಞರೂಢಿಃ= ಅಜ್ಞರ ರೂಢಿಯು, ಬಹುಲಾಪಿ=ಹೆಚ್ಚು ಇದ್ದಾಗ್ಯೂ, ತತ್=ಅಜ್ಞಪ್ರಾಜ್ಞರೂಢಿಯಾಗಿರುವುದ ರಿಂದಲೇ, ಪ್ರಾಜ್ಞರೂಢಿಂ=ಪ್ರಾಜ್ಞರ ರೂಢಿಯನ್ನು, ಆನಂದಮಯಾಧಿಕರಣಾಂತ್ಯದಲ್ಲಿ ಹೇಳಿದ ನ್ಯಾಯದಿಂದ, ನ ಬಾಧತೇ=ಬಾಧಿಸುವುದಿಲ್ಲ.

ಸ. ರ. ವಿ.— (1) "ಯಸ್ತ್ವೇತಮೇವ ಪ್ರಾದೇಶಮಾತ್ರಮಭಿವಿಮಾನಮಾ ತ್ಮಾನಂ ವೈಶ್ವಾನರಮುಪಾಸ್ತೇ"ಎನ್ನುವಲ್ಲಿ ಆತ್ಮಶಬ್ದಸಾಮಾನಾಧಿಕರಣ್ಯವಿದ್ದಪ್ರಯುಕ್ತವೂ ವಿಗತಮಾನತ್ವ (ಪರಿಮಾಣರಹಿತ್ಯ) ರೂಪಲಿಂಗದಿಂದಲೂ ವೈಶ್ವಾನರ ಶಬ್ದಕ್ಕೆ ವಿಷ್ಣುವೇ ಅರ್ಥವು 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂದು ಆತ್ಮನಿಗೇನೇ ಜಿಜ್ಞಾಸ್ಯತ್ವವು ಆರಬ್ಧವಾಗಿದೆ. (2)'ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಉರ ಏವ ವೇದಿರ್ಲೋಮಾನಿ ಬರ್ಹಿ ರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯ ಪಚನಃ ಆಸ್ಯಮಾಹವನೀಯ ಸ್ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ' ಇತ್ಯಾದಿವಾಕ್ಯಶೇಷದಲ್ಲಿ ಅಗ್ನಿ ಲಿಂಗವು ಶ್ರುತವಾಗಿರುವುದರಿಂದ ಪ್ರಸಿದ್ಧವಾದ ಅಗ್ನಿಯೇ ಹೇಳಿಸಿಕೊಳ್ಳಲ್ಪಡುತ್ತಾನೆ, ಎಂದು ಹೇಳಕೂಡದು. 'ಯಸ್ಮಾದ್ಯಜ್ಞಾಯತೇ ಚಾಂಗಾಲ್ಲೋಕ ವೇದಾದಿಕಂ ಹರೇಃ | ತನ್ನಾಮವಾಚ್ಯಮಂಗಂ ತದ್ಯಥಾ ಬ್ರಹ್ಮಾದಿಕಂ ಮುಖಂ' ಎನ್ನುವ ನಾರದೀಯ ವಚನ ದ್ದೆಸೆಯಿಂದ ಆಹವನೀಯಾದಿ ಶಬ್ದಗಳು ಶ್ರೀ ಹರಿಯ ಅಂಗಗಳನ್ನು ವಿಷಯೀಕರಿಸುತ್ತವೆ. ಮತ್ತು 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ' ಇತ್ಯಾದಿ ಗಳಿಂದ ಪುರುಷ ಸೂಕ್ತದಲ್ಲಿ ಹೇಳಲ್ಪಟ್ಟ ಶ್ರೀ ವಿಷ್ಣುವನ್ನೇ ಇಟ್ಟುಕೊಂಡಿರುತ್ತಾರೆ. ಆದಕಾರಣ ವೈಶ್ವಾನರ ಶಬ್ದವು ಅವಿದ್ವದ್ರೂಢಿಯಿಂದ ಅಗ್ನಿವಿಷಯಕವಾದಾಗ್ಯೂ ಬಲಿಷ್ಠವಾದ ವಿದ್ವದ್ರೂಢಿ ಯಿಂದಲೂ ವಿಶ್ವ (ಸರ್ವ) ನರಾಶ್ರಯಾತ್ಮರೂಪ ಯೋಗದಿಂದಲೂ ವಿಷ್ಣುವಿಷಯಕವೆಂದೇ ಯುಕ್ತವು. ಇದೇ ನ್ಯಾಯದಿಂದ ಶಾಖಾಂತರಗಳಲ್ಲಿ ಅರ್ಥಾಂತರ ವಿಷಯಕಗಳಾಗಿ ಪ್ರಸಿದ್ಧ ಗಳಾದ ಬಹುಲಿಂಗಗಳಿಂದ ಯುಕ್ತಗಳಾದ ಅನೇಕ ರೂಢನಾಮಗಳಿಂದ ನಾರಾಯಣನೇ ಹೇಳಿಸಿಕೊಳ್ಳಲ್ಪಡುತ್ತಾನೆಂದು ಸಿದ್ಧವಾಯಿತು. ಪಾದಾರ್ಥ, ಅಧ್ಯಾಯಾರ್ಥ ವ್ಯವಸ್ಥೆಯು

ಪ್ರಾಯಿಕವು, ಆದಪ್ರಯುಕ್ತ ಲಿಂಗಾತ್ಮಕ ಶಬ್ದ ಸಮನ್ವಯ ಮಾಡತಕ್ಕ ಪಾದದಲ್ಲಿ ಅನ್ಯತ್ರ ರೂಢವಾದ ವೈಶ್ವಾನರ ಮೊದಲಾದ ನಾಮಸಮನ್ವಯವನ್ನು ಬ್ರಹ್ಮನಲ್ಲಿ ಮಾಡಿದ್ದು ಯುಕ್ತವು.

ತಥಾಚ ೧ನೇ ಸರ್ವಗತತ್ವಾಧಿಕರಣದಲ್ಲಿ ವಿಷ್ಣುವಿಗೆ ಸರ್ವಶಕ್ತಿ ಪ್ರಬೋಧಕತ್ವವೂ, ಸರ್ವಗತನಿಗೂ ಅಲ್ಪಸ್ಥಾನದಲ್ಲಿ ಇರುವಿಕೆಯೂ, ೨ನೇ ಅತ್ತೃತ್ವಾಧಿಕರಣದಲ್ಲಿ ಅದನಕ್ರಿಯೆಯೂ ೩ನೇ ಗುಹಾಧಿಕರಣದಲ್ಲಿ ಸರ್ವಸಾರಭೋಕ್ತೃತ್ವವೂ, ಒಬ್ಬನಿಗೂ ಅನೇಕ ರೂಪತ್ವವೂ, ೪ನೇ ಅಂತರಾಧಿಕರಣದಲ್ಲಿ ಬ್ರಹ್ಮಾದಿಗಳಿಗೆ ಈಶನನ್ನುಹೊರತು ಸ್ವಾವರನೇತೃತ್ವವೂ ಕೂಡುವುದಿಲ್ಲವೆಂದೂ, ೫ನೇ ಅಂತರ್ಯಾಮ್ಯಧಿಕರಣದಲ್ಲಿ ಸರ್ವವೂ ಅವನಿಂದ ನಾಶ್ಯವಾಗುವುದರಿಂದ ಅಥವಾ ಅವನ ಆಧೀನವಾಗಿರುವುದರಿಂದ ಅವನ ಶರೀರವೆಂದೂ, ೬ನೇ ಅದೃಶ್ಯತ್ವಾಧಿಕರಣದಲ್ಲಿ ಗೋತ್ರಾದಿಗಳ ಅಭಾವಕ್ಕೆ ಈಶಾಖ್ಯ ಧರ್ಮಿಯುದ್ದೇಶೆಯಿಂದ ಭೇದವಿದ್ದರೂ ದೃಶ್ಯಾದ್ಯನ್ಯೋನ್ಯಾಭಾವವು ಅವರ ಸ್ವರೂಪರೆಂದೂ ಸಿದ್ಧವಾಯಿತು. ೭ನೇ ವೈಶ್ವಾನರಾಧಿಕರಣದಲ್ಲಿ ಸೂತ್ರಾದಿ ವ್ಯವಸ್ಥೆಯು ಇತ್ಯಾದಿಪ್ರಕಾರ ತಿಳಿಯತಕ್ಕದು.

॥ ವೈಶ್ವಾನರಾಧಿಕರಣವು ಸಮಾಪ್ತವಾಯಿತು. ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನು ವ್ಯಾಖ್ಯಾನೇ ಪ್ರಥಮಾಧ್ಯಾಯಸ್ಯ ದ್ವಿತೀಯಪಾದಃ॥

ಈಪ್ರಕಾರ ಶ್ರೀಮದಾನಂದತೀರ್ಥಾಚಾರ್ಯರು ಮಾಡಿದ ಬ್ರಹ್ಮ ಸೂತ್ರಾನು
ವ್ಯಾಖ್ಯಾನದಲ್ಲಿ ೧ನೇ ಅಧ್ಯಾಯದಲ್ಲಿ ಎರಡನೇ ಪಾದವು ಸಮಾಪ್ತವಾಯಿತು.

ಇತಿ ಶ್ರೀಮತ್ಪೂರ್ಣಪ್ರಮಿತಿ ಭಗವತ್ಪಾದ ಸುಕೃತೇ
ರನುವ್ಯಾಖ್ಯಾನಸ್ಯ ಪ್ರಗುಣ ಜಯತೀರ್ಥಾಖ್ಯ ಯತಿನಾ ।
ಕೃತಾಯಾಂ ಟೀಕಾಯಾಂ ವಿಷಮ ಪದವಾಕ್ಯಾರ್ಥ ವಿವೃತೌ
ದ್ವಿತೀಯಃ ಪಾದೋಽಯಂ ಪ್ರಥಮವಿಷಯೇ ಪರ್ಯವಸಿತಃ ॥

॥ ದ್ವಿತೀಯಃ ಪಾದಃ ಸಮಾಪ್ತಃ ॥

೧ನೇ ಅಧ್ಯಾಯದಲ್ಲಿ ೨ನೇ ಪಾದವು ಸಮಾಪ್ತವಾಯಿತು. ॥ ಶ್ರೀಃ ॥



# ಮೂರನೇ ಪಾದವು.



ಓಂ || ದುರಂತದುರಿತಧ್ವಾಂತವಿಪಾಟನಪಟೀಯಸೇ |
ಬಾದರಾಯಣಸಂಜ್ಞಾಯ ಪರಸ್ಮೈ ಮಹಸೇ ನಮಃ ||
ಭಾರತೀಶ ನಮಸ್ತುಭ್ಯಂ ರಾಮಪ್ರಿಯ ನಮೋಽಸ್ತು ತೇ |
ನಮಸ್ತೇ ದ್ರೌಪದೀಕಾಂತ ವ್ಯಾಸಶಿಷ್ಯ ನಮೋಽಸ್ತು ತೇ ||

ಪೂರ್ವಪಾದದಿಂದ ಭಿನ್ನವಾಕ್ಯತ್ವಾದಿಗಳು ಸಿದ್ಧಿಯಾಗುವುದಕ್ಕಾಗಿಯೂ ತನ್ನಲ್ಲಿ ಏಕವಾಕ್ಯತ್ವವು ಬರುವುದಕ್ಕಾಗಿಯೂ ೩ನೇ ಪಾದದಲ್ಲಿ ಪ್ರತಿಪಾದ್ಯವಾದ ಪೂರ್ವಪಾದದಲ್ಲಿ ಹೇಳದೆ ಇದ್ದ ೩ನೇ ಪಾದದಲ್ಲಿ ಹೆಚ್ಚಿಗೆ ಆಗಿ ಎಲ್ಲಾ ಅಧಿಕರಣಗಳಲ್ಲಿ ಪ್ರತಿಪಾದ್ಯವಾದ ಅರ್ಥವನ್ನು ತೋರಿಸುತ್ತಾರೆ.

ಮೂ || ಓಂ || ತತ್ರಾನ್ಯತ್ರ ಪ್ರ(ಚ)ಸಿದ್ಧಾನಾಂ ಲಿಂಗನಾಮ್ನಾಂ ಪುನರ್ಹರಿಃ|
ವಿಶೇಷಾನ್ಮುಖ್ಯತೋ ವೃತ್ತಿಂ ಸ್ವಸ್ಮಿನ್ನೇವಾತ್ರ ವಕ್ತ್ಯಜಃ || ೧ ||

ಅ || ಅಜಃ=ಉತ್ಪತ್ತಿಶೂನ್ಯರಾದ, ಹರಿಃ=ಸೂತ್ರಕಾರರು, ಅತ್ರ=ಈ ೩ನೇ ಪಾದದಲ್ಲಿ, ತತ್ರ=ಶ್ರೀಹರಿಯಲ್ಲಿಯೂ, ಅನ್ಯತ್ರ ಚ=ಇತರರಲ್ಲಿಯೂ, ಪ್ರಸಿದ್ಧಾನಾಂ=ಪ್ರಸಿದ್ಧಗಳಾದ, (ಆಪಾತತಃ = ಪ್ರತೀಯಮಾನಗಳಾದ) ಲಿಂಗನಾಮ್ನಾಂ=ದ್ಯುಭ್ವಾದ್ಯಾಯತನತ್ವಾದಿ ಲಿಂಗಗಳಿಗೂ, ಭೂಮಾದಿ ನಾಮಗಳಿಗೂ, ಪುನಃ=ಮತ್ತು, ವಿಶೇಷಾತ್=ವಿಶೇಷಾಕಾರವಾಗಿ, ಮುಖ್ಯತಃ = ಪರಮಮುಖ್ಯವಾಗಿಯೇ, ಸ್ವಸ್ಮಿನ್ನೇವ=ತನ್ನಲ್ಲಿಯೇ, (ಶ್ರೀ ಹರಿಯಲ್ಲಿಯೇ) ವೃತ್ತಿಂ=ಶಕ್ತಿಯನ್ನು, ವಕ್ತಿ=ಹೇಳುತ್ತಾರೆ,

ತಾ || ಯಾವ ಶಬ್ದಗಳು ಲೋಕದೃಷ್ಟಿಯಿಂದ ಬೇರೆಯವರಲ್ಲಿ ಶಕ್ತಿಯುಳ್ಳವುಗಳೋ, ಆ ಶಬ್ದಗಳಿಗೆ ವೇದವಾಕ್ಯಗಳಲ್ಲಿ ಅನ್ಯಪರತ್ವವು ಪ್ರಾಪ್ತವಾಗುವಾಗ ಅವುಗಳಿಗೆ ಶಕ್ತಿತಾತ್ಪರ್ಯಗಳಿಂದ ಶ್ರೀ ಹರಿಯೊಬ್ಬನಲ್ಲಿಯೇ ವಾಚಕತ್ವವನ್ನು ಹಿಂದಿನ ಎರಡು ಪಾದಗಳಿಂದ ಪ್ರತಿಪಾದಿಸಿದರು. ಈ ಪಾದದಲ್ಲಿ ಆದರೂ ಶ್ರೀ ಹರಿಯಲ್ಲಿಯೂ ಇತರರಲ್ಲಿಯೂ ಶಕ್ತಿಯುಳ್ಳವುಗಳೆಂದು ಲೋಕಪ್ರಸಿದ್ಧಗಳಾದ ಶಬ್ದಗಳಿಗೆ ಇತರರಲ್ಲಿ ತಾತ್ಪರ್ಯವುಂಟೆಂಬ ಪ್ರಾಪ್ತವಾಗುವಾಗ ಶ್ರೀಹರಿಯಲ್ಲಿಯೇ ಶಕ್ತಿತಾತ್ಪರ್ಯಗಳು ಪ್ರತಿಪಾದಿಸಲ್ಪಡುತ್ತವೆ || ೧ ||

## ದ್ಯುಭ್ವಾದ್ಯಾಯತನತ್ವಾಧಿಕರಣವು.

('ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ') || ಸೂತ್ರ ೧ ||

ಯಸ್ಮಿನ್ ದ್ಯೌಃ ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಶ್ರಯನು ಶ್ರೀ ವಿಷ್ಣುವೇ ಪ್ರಧಾನ; ವಾಯು ರುದ್ರ ಜೀವರಲ್ಲ. ಆ ಶ್ರುತಿಯಲ್ಲಿ 'ತಮೇವೈಕಂ ಜಾನಥ ಆತ್ಮಾನಂ' ಎಂದು ಆತ್ಮಶಬ್ದವು ಶ್ರುತವಾಗಿರುವುದರಿಂದ.

ಜಾಯಮಾನತ್ವರೂಪವಾದ ಲಿಂಗಬಲದಿಂದ ಆತ್ಮಶಬ್ದವು ಜೀವಪರವು ಏತಕ್ಕೆ ಆಗಲಾರ ದೆಂದರೆ—

('ಓಂ ಮುಕ್ತೋಪಸೃಪ್ಯವ್ಯಪದೇಶಾತ್ ಓಂ') ॥ ಸೂತ್ರ ೨ ॥

'ಅಮೃತಸ್ಯೈಷ ಸೇತುಃ' ಎಂದು ಮುಕ್ತರಿಗೆ ಮುಖ್ಯ ಪ್ರಾಪ್ಯನೆಂದು ಹೇಳಿರುವುದರಿಂದ ಆತ್ಮಶಬ್ದವು ಅಮುಖ್ಯವಲ್ಲ. ಆದಕಾರಣ ದ್ಯುಭ್ವಾದ್ಯಾಯತನನು ವಿಷ್ಣುವೇ.

ರುದ್ರಪ್ರಧಾನರಿಗೆ ದ್ಯುಭ್ವಾದ್ಯಾಯತನತ್ವವನ್ನು ನಿವಾರಿಸುವುದಕ್ಕಾಗಿ ಸೂತ್ರವು.

"ಓಂ ನಾನುಮಾನಮತಚ್ಛಬ್ದಾತ್ ಓಂ" ॥ ಸೂತ್ರ ೩ ॥

ದ್ಯುಭ್ವಾದ್ಯಾಶ್ರಯರು ಅನುಮಾನದಿಂದ ಸಿದ್ಧವಾದ ಪ್ರಾಮಾಣ್ಯವುಳ್ಳದ್ದೆಂದು ಪರಾಭಿಮತ ವಾದ ಪಾಶುಪತ ಸಾಂಖ್ಯ ಆಗಮಗಳಿಂದ ಸಿದ್ಧರಾದ ರುದ್ರ ಪ್ರಧಾನರು ಆಗಲಾರರು. ದ್ಯುಭ್ವಾದ್ಯಾಯತನ ಪ್ರಕರಣದಲ್ಲಿ ರುದ್ರಪ್ರಧಾನಾಸಾಧಾರಣಗಳಾದ ಶಬ್ದಗಳು ಇಲ್ಲದಿರುವ ಪ್ರಯುಕ್ತ—

('ಓಂ ಪ್ರಾಣಭೃಚ್ಚ ಓಂ') ॥ ಸೂ. ೪ ॥

ಜೀವ ವಾಯುಗಳು ದ್ಯುಭ್ವಾದ್ಯಾಶ್ರಯರಲ್ಲ. ಆತ್ಮಶಬ್ದವಿದ್ದಪ್ರಯುಕ್ತವೂ ಮುಕ್ತೋಪ ಸೃಪ್ಯತ್ವವನ್ನು ವ್ಯಪದೇಶಮಾಡಿದರಿಂದಲೂ, ಜೀವಾದಿ ವಾಚಕಶಬ್ದವಿಲ್ಲದಿರುವಪ್ರಯುಕ್ತವೂ

('ಓಂ ಭೇದವ್ಯಪದೇಶಾತ್ ಓಂ') ॥ ಸೂ. ೫ ॥

('ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ' ಎಂದು ಇಲ್ಲಿಯೇ ಜೀವಬ್ರಹ್ಮರಿಗೆ ಭೇದವನ್ನು ಹೇಳಿರುವುದರಿಂದ ಐಕ್ಯವಲ್ಲ)

('ಓಂ ಪ್ರಕರಣಾತ್ ಓಂ') ॥ ಸೂ. ೬ ॥

('ದ್ವೇ ವಿದ್ಯೇ ವೇದಿತವ್ಯೇ' ಎಂದು ಪರವಿದ್ಯಾವಿಷಯವಾದ ವಸ್ತುವನ್ನು ಆರಂಭಿಸಿ ಅಧ್ಯ ಯನ ಮಾಡಿರುವುದರಿಂದ, ಬ್ರಹ್ಮ ಪ್ರಕರಣವಾಗಿರುವಪ್ರಯುಕ್ತ 'ಜುಷ್ಟಂ ಯದಾ' ಎನ್ನುವ ಶ್ರುತಿಯಲ್ಲಿರತಕ್ಕ ಈಶಶಬ್ದವಾಚ್ಯನು ಬ್ರಹ್ಮನೇ; ರುದ್ರನಲ್ಲ.)

('ಓಂ ಸ್ಥಿತ್ಯದನಾಭ್ಯಾಂ ಚ ಓಂ') ॥ ಸೂ. ೭ ॥

('ದ್ವಾ ಸುಪರ್ಣಾ' ಎನ್ನುವ ಶ್ರುತಿಯಲ್ಲಿ ಕರ್ಮಫಲವನ್ನುಪಜೀವಿಸದೆ ಇರುವಿಕೆ, ಕರ್ಮ ಫಲೋಪಜೀವನವು ಇವುಗಳನ್ನು ಹೇಳಿದರಿಂದ ಜೀವಬ್ರಹ್ಮರಿಗೆ ಐಕ್ಯವಿಲ್ಲ.)

'ನಾನುಮಾನಮತಚ್ಛಬ್ದಾತ್' ಎನ್ನುವಲ್ಲಿದ್ದ ಅತಚ್ಛಬ್ದಾತ್ ಎನ್ನುವುದಕ್ಕೆ ತಚ್ಛಬ್ದಾಭಾ ವಾತ್=ರುದ್ರಾದಿವಾಚಕವಾದ ಶಬ್ದವಿಲ್ಲದಿರುವುದರಿಂದ ಎಂದು ಭಾಷ್ಯದಲ್ಲಿ ವ್ಯಾಖ್ಯಾತವಾಗಿದೆ. ಆ ವ್ಯಾಖ್ಯಾನವು ಯುಕ್ತವಲ್ಲವೆಂದು ತೋರುತ್ತದೆ. ಏಕೆಂದರೆ – ನಞಗೆ ಪ್ರಸಜ್ಯಪ್ರತಿಷೇಧ ರೂಪವಾದ ಅಭಾವಾರ್ಥತ್ವವಿದ್ದರೆ ಅದಕ್ಕೆ ಕ್ರಿಯಾಪೇಕ್ಷೆಯಿದ್ದಪ್ರಯುಕ್ತ ಪ್ರತಿಯೋಗಿ ಸಮರ್ಪಕವಾದ ತಚ್ಛಬ್ದದಿಂದ ಸಾಮರ್ಥ್ಯವಿಲ್ಲ. ಎಂದರೆ—

(೧) ಛಂದೋವತ್ಸೂತ್ರಾಣಿ ಭವಂತಿ=ಸೂತ್ರಗಳು ವೇದದಂತೆ ಆಗುತ್ತವೆಂದಾಗಲೀ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎನ್ನುವ ಜ್ಞಾಪಕದ್ದೆಶೆಯಿಂದ (ಪ್ರಸಜ್ಯಪ್ರತಿಷೇಧದಲ್ಲಿಯೂ ಸಮಾಸವಾಗುತ್ತದೆಂದು ತಿಳಿಸುವುದಕ್ಕಾಗಿ ಕಾರಕ ಪದವು.) ಸಾಮರ್ಥ್ಯವಿಲ್ಲದಿದ್ದರೂ ಕೆಲವು ಕಡೆ ಪ್ರಸಜ್ಯಪ್ರತಿಷೇಧಾರ್ಥಕವಾದ ನಞ ಇದ್ದದ್ದಾದರೆ ಸಮಾಸವಾಗುತ್ತದೆ ಎಂದಾಗಲೀ, (೩) ಅರ್ಥಾಭಾವೇ ಯದವ್ಯಯಂ ಎಂದು ಅವ್ಯಯೀಭಾವ ಸಮಾಸವು ಎಂದಾಗಲೀ ಸಮಾಧಾನ ಇಟ್ಟುಕೊಳ್ಳಬೇಕು. ಅಥವಾ ತೇಭ್ಯಃ ಅನ್ಯತ ಅತತ್=ಶಿವಾದಿಗಳದ್ದೆಶೆಯಿಂದ ಇತರನಾದವನು ಬ್ರಹ್ಮನು. ತಸ್ಯ ಶಬ್ದಃ= ಬ್ರಹ್ಮವಾಚಕವಾದ ಶಬ್ದವು ಅತಚ್ಛಬ್ದವು. ಅದರ ದ್ದೆಶೆಯಿಂದ, ಎಂದು ಅಭಿಪ್ರಾಯವುಳ್ಳವರಾಗಿ ಹೇಳುತ್ತಾರೆ.

ಮೂ ॥ ವಿಷ್ಣಾವೇವಾತ್ಮಶಬ್ದಸ್ಯ ರೂಢತ್ವಾನ್ನ ಶಿವಾದಿಕಾನ್ ।
ಶ್ರುತಿರ್ವಕ್ತಿ [ಅಖಿಲೇಶತ್ವಾದ್ಭೂಮಾ ವಿಷ್ಣುಃ ಸುಖಾಧಿಕಃ] ॥ ೩ ॥

ಅ ॥ ಆತ್ಮಶಬ್ದಸ್ಯ=ಆತ್ಮಶಬ್ದಕ್ಕೆ, ವಿಷ್ಣಾವೇವ=ಶ್ರೀವಿಷ್ಣುವಿನಲ್ಲಿಯೇ, ರೂಢತ್ವಾತ್= ಪ್ರಸಿದ್ಧತ್ವವಿದ್ದಪ್ರಯುಕ್ತ, ಅಂದರೆ ಆತ್ಮಶಬ್ದವು ಮಹಾರೂಢಿಯೋಗಗಳಿಂದ ವಿಷ್ಣುವಿನಲ್ಲಿಯೇ ಪ್ರವೃತ್ತವಾಗಿರುವುದರಿಂದ, ಶ್ರುತಿಃ=ಯಸ್ಮಿನ್ ದ್ಯೌಃ ಇತ್ಯಾದಿ ಶ್ರುತಿಯು. ಶಿವಾದಿಕಾನ್= ರುದ್ರಾದಿಗಳನ್ನು, ನ ವಕ್ತಿ=ಹೇಳುವುದಿಲ್ಲ

ತಾ ॥ ಸ. ರ. ವಿ— (1) ಆಥರ್ವಣೋಪನಿಷತ್ತಿನಲ್ಲಿ 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ತಮೇವೈಕಂ ಜಾನಥ ಆತ್ಮಾನಂ' ಎಂದು ದ್ಯುಭ್ವಾದಿಗಳಿಗೆ ಆಶ್ರಯನಾಗಿ ಹೇಳಲ್ಪಟ್ಟವನು 'ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ' ಎನ್ನುವ ವಾಕ್ಯಶೇಷದ್ದೆಶೆಯಿಂದಲೂ 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾವಿಶಾಂತಕಃ ಪ್ರಾಣೇಶ್ವರಃ ಕೃತ್ತಿವಾಸಾಃ' ಇತ್ಯಾದಿ ಶ್ರುತ್ಯಂತರದಿಂದಲೂ ರುದ್ರನಾಗಲು ಯೋಗ್ಯನಾಗಿರುತ್ತಾನೆ. (2) ಅಥವಾ 'ಸ ಏಷೋಂತರಶ್ಚರತೇ ಬಹುಧಾ ಜಾಯಮಾನಃ' ಎನ್ನುವ ಜೀವಲಿಂಗದ್ದೆಶೆಯಿಂದ ದ್ಯುಭ್ವಾದ್ಯಾಶ್ರಯನು ಜೀವನು, ಎಂದು ಆಶಂಕಿಸಿದರೆ 'ತಮೇವೈಕಂ ಜಾನಾಥ ಆತ್ಮಾನಂ' ಎಂದು ಆತ್ಮಶಬ್ದವಿದ್ದಪ್ರಯುಕ್ತ ಶ್ರೀ ವಿಷ್ಣುವೇ ದ್ಯುಭ್ವಾಶ್ರಯನು. "ಆತ್ಮಬ್ರಹ್ಮಾದಯಶ್ಶಬ್ದಾಸ್ತಮ್ಯತೇ ವಿಷ್ಣುಮವ್ಯಯಂ । ನ ಸಂಭವಂತಿ ಯಸ್ಮಾತ್ತೈರ್ನೈವಾಪ್ತಾ ಗುಣಪೂರ್ಣತಾ" ಎಂದು ಬ್ರಹ್ಮವೈವರ್ತದಲ್ಲಿ ಹೇಳಿದ ಪ್ರಕಾರ ಶ್ರೀ ವಿಷ್ಣುವಿಗೇನೇ ಆತ್ಮಶಬ್ದವು ಮುಖ್ಯವಾಗಿದೆ. 'ಅಮೃತಸ್ಯೈಷ ಸೇತುಃ' ಎನ್ನುವ ವಾಕ್ಯಶೇಷವು ವಿಷ್ಣುವಿಗೇನೇ ಯುಕ್ತವಾಗುವುದರಿಂದಲೂ, 'ಪ್ರೊತಾತ್ಮಾ ಪರಮಾತ್ಮಾ ಚ ಮುಕ್ತಾನಾಂ ಪರಮಾ ಗತಿಃ' । ಎಂದು ಭಾರತವಚನದಿಂದಲೂ, 'ವರಂ ವೃಣೀಷ್ವ ಭದ್ರಂತೇ ಋತೇ ಕೈವಲ್ಯಮದ್ಯ ನಃ । ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ' । ಎಂದು ಭಾಗವತವಾಕ್ಯದಿಂದಲೂ ಶ್ರೀ ಹರಿಯೇ ಮುಕ್ತಾಶ್ರಯನು. (3) ವಾಕ್ಯಶೇಷಾದಿಗಳಲ್ಲಿ ಈಶ ಮೊದಲಾದ ಶಬ್ದಗಳು ಇದ್ದ ಪ್ರಯುಕ್ತ ಶಿವನು ದ್ಯುಭ್ವಾದ್ಯಾಶ್ರಯನು ಎಂದು ಹೇಳಿದ್ದು ಅಯುಕ್ತವು. "ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನಃ । ಈಶಾನಾದೇವ ಚೇಶಾನೋ ಮಹಾದೇವೋ ಮಹತ್ವತಃ" ಎನ್ನುವ ಬ್ರಹ್ಮಾಂಡದಲ್ಲಿ ಈಶಾದಿಶಬ್ದಗಳು ಶ್ರೀ ವಿಷ್ಣುವಿನಲ್ಲಿಯೇ ಮುಖ್ಯಗಳೆಂದು ಉಪಪಾದಿಸಿರುವೆವು. (4) ಬಹುಧಾ ಜಾಯಮಾನಃ ಎಂದು ಜೀವಲಿಂಗವೆಂದು ಯಾವುದು ಉಕ್ತವಾಗಿಯದೋ, ಅದೂ "ಅಜಾಯಮಾನೋ ಬಹುಧಾ ವಿಜಾಯತೇ" ಎನ್ನುವ ಶ್ರುತಿಯು

ದ್ದೇಶೆಯಿಂದ ವಿಷ್ಣುವಿಗೇನೇ ಯುಕ್ತವಾಗುತ್ತದೆ. (5) ದ್ಯುಭ್ವಾದ್ಯಾಶ್ರಯನು ಜೀವನೆಂದಾದರೆ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ' | ಎನ್ನುವ ವಾಕ್ಯಶೇಷದಲ್ಲಿ ಜೀವೇಶರಿಗೆ ಭೇದನಿರ್ದೇಶವು ಕೂಡದೆ ಹೋಗುವುದು. ಆದಪ್ರಯುಕ್ತ ದ್ಯುಭ್ವಾದ್ಯಾಶ್ರಯನು ಶ್ರೀ ವಿಷ್ಣುವೇ ॥ ೨ ॥ ಸೂ. ೧. ೨. ೩. ೪. ೫. ೬. ೭. ॥ ಅಧಿ ॥ ೧ ॥

**ದ್ಯುಭ್ವಾದ್ಯಾಯತನತ್ವಾಧಿಕರಣವು ಸಮಾಪ್ತವಾಯಿತು.**

# ಭೂಮಾಧಿಕರಣವು

## "ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ" ॥ ಸೂ. ೮ ॥

'ಯೋ ವೈ ಭೂಮಾ ತತ್ಸುಖಂ' ಎಂದು ಹೇಳಲ್ಪಟ್ಟ ಭೂಮನು ಬ್ರಹ್ಮನೇ. ಪ್ರಾಣನಲ್ಲ. ಏಕೆಂದರೆ, ಸಮ್ಯಕ್ ಪ್ರಸೀದತಿ ಅನೇನ ಎನ್ನುವ ವ್ಯುತ್ಪತ್ತಿಯಿಂದ ಸಂಪ್ರಸಾದಃ ಪೂರ್ಣ ಸುಖವು, ಸಂಪ್ರಸಾದಾತ್ = ಪೂರ್ಣಸುಖರೂಪತ್ವವನ್ನು ಹೇಳಿರುವುದರಿಂದ, ಅಧ್ಯುಪದೇಶಾತ್ = ಪ್ರಾಣಾದಿಗಳಉದ್ದೇಶೆಯಿಂದ ಅತ್ಯುತ್ಕೃಷ್ಟನೆಂದು ವ್ಯಪದೇಶಮಾಡಿರುವುದರಿಂದ, ಅಂದರೆ ಸರ್ವೋತ್ತಮನೆಂದು ಹೇಳಿರುವುದರಿಂದ.

## ('ಓಂ ಧರ್ಮೋಪಪತ್ತೇಶ್ಚ ಓಂ') ॥ ಸೂ. ೯ ॥

'ಸ ಏವಾಧಸ್ತಾತ್' ಇತ್ಯಾದಿಗಳಿಂದ ಹೇಳಲ್ಪಟ್ಟ ಸರ್ವಗತತ್ವಾದಿ ಧರ್ಮಗಳು ಭೂಮನಲ್ಲಿಯೇ ಉಪಪನ್ನಗಳಾಗುವುದರಿಂದ ಭೂಮಶಬ್ದವಾಚ್ಯನು ವಿಷ್ಣುವೇ )

ಶಂಕರಾಚಾರ್ಯರು ಭೂಮಾ=ಭೂಮಶಬ್ದವಾಚ್ಯನು ಪರಮಾತ್ಮನು, ಏಕೆಂದರೆ— 'ಸಂಪ್ರಸೀದತಿ ಅಸ್ಮಿನ್ನಿತಿ' ಎನ್ನುವ ವ್ಯುತ್ಪತ್ತಿಯುದ್ದೇಶೆಯಿಂದ ಸಂಪ್ರಸಾದವೆಂದರೆ ಸುಪ್ತಿಯು. ಸುಪ್ತಿಕಾಲದಲ್ಲಿ ಜಾಗರೂಕನಾದ ಪ್ರಾಣನು ಸಂಪ್ರಸಾದ ಶಬ್ದದಿಂದ ಲಕ್ಷಿತನಾಗುತ್ತಾನೆ. ಆ ಪ್ರಾಣನದ್ದೇಶೆಯಿಂದ ಮೇಲೆ ಉಪದೇಶಮಾಡಿರುವುದರಿಂದ, ಎಂದು ವ್ಯಾಖ್ಯಾನಮಾಡಿರುವರು.

ರಾಮಾನುಜಾಚಾರ್ಯರು ಸಂಪ್ರಸಾದಾತ್=ಜೀವಾತ್ಮನದ್ದೇಶೆಯಿಂದ ಮೇಲೆ ಉಪದೇಶ ಮಾಡಿರುವುದರಿಂದ ಎಂದು ವ್ಯಾಖ್ಯಾನ ಮಾಡಿರುವರು.

ಶಂಕರಾಚಾರ್ಯರು, ರಾಮಾನುಜಾಚಾರ್ಯರು ಇವರೀರ್ವರು ಮಾಡಿದ ವ್ಯಾಖ್ಯಾನವೂ ಸರಿಯಲ್ಲ. ಏಕೆಂದರೆ— ಪ್ರಸಿದ್ಧಗಳಾದ ಪ್ರಾಣಾದಿಪದಗಳನ್ನು ಬಿಟ್ಟು ಅಪ್ರಸಿದ್ಧವಾದ ಸಂಪ್ರಸಾದ ಪದವನ್ನು ಸ್ವೀಕರಿಸಲಿಕ್ಕೆ ಕಾರಣವೇ ಇರುವುದಿಲ್ಲ. ಆದಕಾರಣ 'ಸಂಪ್ರಸಾದಾದಧ್ಯುಪದೇಶಾತ್' ಎನ್ನುವುದೊಂದೇ ಹೇತುವಲ್ಲ. 'ಸಂಪ್ರಸಾದಾತ್' ಎನ್ನುವುದು ಒಂದು ಹೇತುವು. ಅಧ್ಯುಪದೇಶಾತ್ ಎನ್ನುವುದೂ ಒಂದು ಹೇತುವು.

ಆ ಹೇತುವು ಇತರರಲ್ಲಿಯೂ ಕೂಡುವುದರಿಂದ ಪರಮಾತ್ಮಸಾಧಕವಾಗುವುದು ಹೇಗೆ ಎಂದರೆ—

**ಮೂ ॥ [ಶ್ರುತಿರ್ವಕ್ತಿ] ಅಖಿಲೇಶತ್ವಾದ್ಭೂಮಾ ವಿಷ್ಣುಃ ಸುಖಾಧಿಕಃ ॥ ೨ ॥**

ಅ ॥ ಅಖಿಲೇಶತ್ವಾತ್=ಎಲ್ಲರಿಗೂ ನಿಯಾಮಕನಾಗಿರುವುದರಿಂದ, ಸುಖಾಧಿಕಃ= ಸುಖಪೂರ್ಣನಾದ, ವಿಷ್ಣುಃ = ಶ್ರೀ ಪರಮಾತ್ಮನೇ, ಭೂಮಾ = ಭೂಮಶಬ್ದವಾಚ್ಯನು. ಅಂದರೆ ಅಧಿಶಬ್ದವು ಈಶ್ವರ ವಾಚಕವು. ತಥಾ ಚ ವಿಶೇಷವನ್ನು ಹೇಳದಿರುವುದರಿಂದ ಅಖಿಲೇಶ್ವರತ್ವವನ್ನೇ ಹೇಳಿದಂತೆಯೇ ಆಯಿತು. ನಾಮವಾಗಾದಿಗಳಲ್ಲಿ ಪೂರ್ವಪೂರ್ವದ ಆಧಿಪತ್ಯವನ್ನು ಮೇಲೆಮೇಲೆ ಹೇಳಿದ್ದಕ್ಕೆ ಹೇಳಿರುವುದರಿಂದ ಇದು ಅಸಿದ್ಧವಲ್ಲ. ಅಧ್ಯುಪದೇಶಾತ್ ಎನ್ನುವುದರ ಅರ್ಥವು 'ಅಖಿಲೇಶತ್ವಾತ್' ಎನ್ನುವುದು. ಹಾಗಾದರೆ ಸಂಪ್ರಸಾದಾತ್ ಎನ್ನುವುದು ಅನಾಕಾಂಕ್ಷಿತವಾಗಿರುವುದರಿಂದ ವ್ಯರ್ಥವಾಯಿತೆಂದು ಹೇಳಕೂಡದು. ಅದು ಪೂರ್ಣಸುಖತ್ವರೂಪವಾದ ಹೇತ್ವಂತರವನ್ನು ಹೇಳುತ್ತದೆ. ಅಂತೂ ಸಂಪ್ರಸಾದಾತ್ ಎನ್ನುವುದರ ಅರ್ಥವು 'ಸುಖಾಧಿಕಃ' ಎಂದು.

ತಾ ॥ ಸ. ರ. ವಿ — (1) 'ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ' ಎನ್ನುವಲ್ಲಿದ್ದ ಭೂಮಶಬ್ದವಾಚ್ಯನು ಪ್ರಾಣನಾಗಲಿಕ್ಕೆ ಯೋಗ್ಯನಾಗಿರುತ್ತಾನೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯಾದ್ಯುಪಕ್ರಮದಲ್ಲಿ 'ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್ ನೈವೇನಂ ಬ್ರೂಯುಃ ಪಿತೃಹಾಸೀತಿ ನ ಮಾತೃಹಾಸೀತಿ' ಎಂದು ಪ್ರಾಣಲಿಂಗವು ಶ್ರುತವಾಗಿರುವುದರಿಂದ, ಎಂದರೆ— 'ತತ್ಸುಖಂ' ಎಂದು ಸುಖಾತ್ಮಕತ್ವವನ್ನು ಉಪದೇಶಮಾಡಿರುವುದರಿಂದ ಭೂಮಶಬ್ದವಾಚ್ಯನು ಶ್ರೀ ವಿಷ್ಣುವೇ. 'ಏಷ ಹ್ಯೇವ ಪರಮಾನಂದಃ' ಇತ್ಯಾದಿಗಳಲ್ಲಿ ಮುಖ್ಯವಾದ ಸುಖವು ಶ್ರೀ ಹರಿಗೇನೇ ಪ್ರಸಿದ್ಧವು (2) ಮತ್ತು 'ಸ ಏವಾಧಸ್ತಾತ್ ಸ ಉಪರಿಷ್ಟಾತ್' ಇತ್ಯಾದಿ ವಾಕ್ಯಶೇಷದಲ್ಲಿ ಸರ್ವಗತತ್ವಾದಿ ವ್ಯಪದೇಶವು ಶ್ರೀವಿಷ್ಣುವಿನಲ್ಲಿಯೇ ಯುಕ್ತವು (3) 'ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ' ಎನ್ನುವ ಶ್ರುತಿಯುದ್ದೇಶಯಿಂದ ಪ್ರಾಣಲಿಂಗವೆಂದು ಹೇಳಿದ ಉತ್ಕ್ರಮಣವು ಶ್ರೀ ವಿಷ್ಣುವಿನಲ್ಲಿಯೂ ಯುಕ್ತವಾಗುತ್ತದೆ. ಆದಪ್ರಯುಕ್ತ 'ವಾಙ್ನಾಮ್ನೋ ಭೂಯಸೀ' ಎಂದಾರಂಭಿಸಿ ಒಬ್ಬೊಬ್ಬರಿಂದ ಒಬ್ಬೊಬ್ಬರು ಉತ್ತಮರೆಂದು ಹೇಳಿ ಸರ್ವೋತ್ತಮನೆಂದು ಶ್ರೀ ವಿಷ್ಣುವನ್ನು ಉಪದೇಶಮಾಡಿರುವುದರಿಂದ ಶ್ರೀ ವಿಷ್ಣುವೇ ಭೂಮಶಬ್ದ ವಾಚ್ಯನು. ॥ ೨ ॥ ಸೂ. ॥ ೮ ॥ ೯ ॥ ಅಧಿ ೨ ॥

ಭೂಮಾಧಿಕರಣವು ಸಮಾಪ್ತವಾಯಿತು.

## ಅಕ್ಷರಾಧಿಕರಣವು.

('ಓಂ ಅಕ್ಷರಮಂಬರಾಂತಧೃತೇಃ ಓಂ') ॥ ಸೂ. ೧೦ ॥

'ಏತದ್ವೈತದಕ್ಷರಂ ಗಾರ್ಗಿ' ಎಂದು ಹೇಳಲ್ಪಟ್ಟ ಅಕ್ಷರನು ಬ್ರಹ್ಮನೇ. ಶ್ರೀತತ್ವವಲ್ಲ, ಶ್ರುತಿಯಲ್ಲಿ ಆಕಾಶಾಖ್ಯವಾದ ಚಿತ್ಪ್ರಕೃತಿಯು ಸರ್ವಾಧಾರವೆಂದು ಹೇಳಿ 'ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ' ಎಂದು ಅಕ್ಷರನಿಗೆ ಆಕಾಶಾಧಾರತ್ವವು ಶ್ರುತವಾಗಿದೆ.

('ಓಂ ಸಾ ಚ ಪ್ರಶಾಸನಾತ್ ಓಂ') ॥ ಸೂ. ೧೧ ॥

ಅಂಬರಾಂತ ವಸ್ತುಗಳ ಧೃತಿಯು ಅಕ್ಷರನ ಆಜ್ಞಾಮಾತ್ರದಿಂದಲೇ ಆಗುತ್ತದೆಂದು 'ಏತಸ್ಯವಾ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

## "ಓಂ ಅನ್ಯಭಾವ ವ್ಯಾವೃತ್ತೇಶ್ಚ ಓಂ" ॥ ಸೂ. ೧೨ ॥

ಇತರವಸ್ತುಗಳ ಸ್ಥೌಲ್ಯಾದಿ ಧರ್ಮಗಳಿಗೆ 'ಅಸ್ಥೂಲಮನಣು' ಇತ್ಯಾದಿಗಳಿಂದ ಅಕ್ಷರನಲ್ಲಿ ವ್ಯಾವೃತ್ತಿಯನ್ನು ಹೇಳಿರುವ ಪ್ರಯುಕ್ತವೂ ಅಕ್ಷರ ಶಬ್ದವಾಚ್ಯನು ಬ್ರಹ್ಮನೇ.

ಅನ್ಯಭಾವ ವ್ಯಾವೃತ್ತೇಶ್ಚ ಎನ್ನುವ ಸೂತ್ರವು ಅಕ್ಷರನಿಗೆ ಬ್ರಹ್ಮತ್ವವನ್ನು ಉಪಪಾದಿಸುತ್ತಾ ಪ್ರಾಕೃತ ಸ್ಥೌಲ್ಯಾದಿ ರಾಹಿತ್ಯರೂಪವಾದ ಹೇತ್ವಂತರವನ್ನು ಹೇಳುತ್ತದೆಂದು ಭಾಷ್ಯದಲ್ಲಿ ವ್ಯಾಖ್ಯಾತವಾಗಿದೆ. ಆಕ್ಷೇಪನಿವರ್ತಕವಾಗಿಯೂ 'ಅತೋ ವಿರುದ್ಧವತ್' ಇತ್ಯಾದಿಗಳಿಂದ ವ್ಯಾಖ್ಯಾನಮಾಡುತ್ತಾರೆ. ಹೇಗೆಂದರೆ—ಈ ಅಕ್ಷರನು ಬ್ರಹ್ಮನಲ್ಲ. **ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಚ್ಛಾಯಮತಮೋಽವಾಯ್ವನಾಕಾಶಮಸಂಗಮರಸಮವಾಕ್ ಅಮನೋಽಚಕ್ಷುಷ್ಕಮಪ್ರಾಣಮಸುಖಮಮಾತ್ರಮನಂತರಮಬಾಹ್ಯಂ ನತದಶ್ನಾತಿ ಕಿಂಚನ'** ಎಂದು ಅಕ್ಷರನಿಗೆ ಅಸ್ಥೂಲತ್ವಾದಿಗಳು ಶ್ರುತಗಳಾಗಿವೆ. ಇದು ಬ್ರಹ್ಮನಿಗೆ ಕೂಡುವುದಿಲ್ಲ. ಅಸ್ಥೂಲಾದಿಯು ೧ ಸ್ಥೂಲಪರಿಮಾಣದಿಂದ ಭಿನ್ನಗಳಾದ ಅಣುತ್ವಾದಿಗಳನ್ನು ಹೇಳುತ್ತದೆಂದಾಗಲೀ, ೨ ಸ್ಥೂಲತ್ವಾದಿಗಳ ನಿವೃತ್ತಿಮಾತ್ರದಲ್ಲಿ ಪರ್ಯವಸಾನವು ಎಂದಾಗಲೀ ಹೇಳಬೇಕು ೧ನೇ ಕಲ್ಪದಲ್ಲಿ ಪರಸ್ಪರ ವಿರೋಧವು 'ಅಸ್ಥೂಲಂ' ಎನ್ನುವುದರಿಂದ ಅಣುಪರಿಮಾಣವನ್ನು ಹೇಳಬೇಕು. ಅನಣು ಎನ್ನುವುದರಿಂದ ಮಹತ್ವವನ್ನು ಹೇಳಬೇಕು. ಇವೆರಡೂ ಒಂದೇ ಕಡೆಯಲ್ಲಿ ಕೂಡಲಾರವು. ಇದೇರೀತಿಯಾಗಿ 'ಅಹ್ರಸ್ವಮ ದೀರ್ಘಂ' ಎನ್ನುವಲ್ಲಿಯೂ ವಿರೋಧವನ್ನು ತಿಳಿಯತಕ್ಕದು ೨ನೇಕಲ್ಪದಲ್ಲಿ ಆದರೂ ಬ್ರಹ್ಮನು ನಿಸ್ಸಭಾವನೆಂದಾಯಿತು. ತಥಾಚ ಸರ್ವತ್ರ ಪ್ರಸಿದ್ಧೋಪದೇಶಾಚ್ಚ 'ಅತ್ತಾ ಚರಾಚರ ಗ್ರಹಣಾತ್' ರೂಪೋಪನ್ಯಾಸಾಚ್ಚ ಎಂದು ಹೇಳಿದ ಸರ್ವಗತತ್ವಾದಿ ಧರ್ಮಗಳಿಂದ ವಿರೋಧವು ಬರುವುದು. ಎಂದರೆ—ಪ್ರಥಮಪಕ್ಷವನ್ನು ಅಂಗೀಕರಿಸಿ ಚ ಶಬ್ದಸೂಚಿತವಾದ ಪರಿಹಾರವನ್ನು ಹೇಳುತ್ತಾರೆ.

**ಮೂ ॥ ಅತೋ ವಿರುದ್ಧವದ್ಭಾತಮಪಿ ವ್ಯಾಖ್ಯಾಯ ತತ್ವತಃ ।**
**ಯೋಜನೀಯಂ ಹರೌ ವಾಕ್ಯಂ ವಿರುದ್ಧೈ (ವಿಶೇಷೈ) ರ್ಲಕ್ಷಣೈ**
**ರ್ಯತಂ ॥ ೩ ॥**

**ಬ್ರಹ್ಮೈವ ತಾನಿ ಲಿಂಗಾನಿ ತದನ್ಯತ್ರ ತ್ವಸಂತ್ಯಪಿ ।**
**ಅವಿರೋಧೇನ ಗೋವಿಂದೇ ಸಂತ್ಯಸ್ಥೂಲಾದಿಕಾನಿ ಚ ॥ ೪ ॥**

ಅ ॥ ಯತಃ = ಯಾವ ಕಾರಣದ್ದೆಸೆಯಿಂದ, ಬ್ರಹ್ಮ=ಪರಬ್ರಹ್ಮನು, ವಿರುದ್ಧೈಃ= ಪರಸ್ಪರ ವಿರುದ್ಧಗಳಾದ, (ವಿಶೇಷೈಃ=ವಿಶೇಷರೂಪಗಳಾದ,) ಲಕ್ಷಣೈಃ = ಲಕ್ಷಣಗಳಿಂದ, ಯುತಮೇವ=ಯುಕ್ತವೇ ಆಗಿಯದೋ, ಅತಃ=ಆದಕಾರಣ, ವಿರುದ್ಧವತ್=ಹಿಂದೆ ಹೇಳಿದ ಸ್ಥೂಲತ್ವಾದಿ ವಿಪರೀತವಾದುದು ಅಣುತ್ವಾದಿಗಳು, ಸ್ಥೂಲತ್ವಾದಿ ನಿವೃತ್ತಿಮಾತ್ರಪರವಾಮುದೂ ಎಂದು ಎರಡು ವಿಧಗಳಾದ ವಿರುದ್ಧಾರ್ಥಗಳನ್ನು ಪ್ರತಿಪಾದಿಸುವುದರಂತೆ, ಭಾತಮಪಿ = ಪ್ರತೀತವಾದಾಗ್ಯೂ, ವಾಕ್ಯಂ = ವಾಕ್ಯವನ್ನು, ತತ್ವತಃ = ಯಥಾರ್ಥವಾಗಿ, ವ್ಯಾಖ್ಯಾಯ= ವ್ಯಾಖ್ಯಾನಮಾಡಿ. ಹರೌ=ಶ್ರೀ ಪರಮಾತ್ಮನಲ್ಲಿ, ಯೋಜನೀಯಂ=ಕೂಡಿಸಲಿಕ್ಕೆ ಶಕ್ಯವಾಗಿದೆ.

ಅಥವಾ ಯಾವ ಕಾರಣದ್ದೆಸೆಯಿಂದ, ಆಕಾಶಾಂತ ವಸ್ತುಗಳ ಧಾರಣಾದಿಗಳಿಂದ ಅಕ್ಷರನಿಗೆ ವಿಷ್ಣುತ್ವವು ನಿಶ್ಚಿತವಾಗಿಯದೋ, ಆದಪ್ರಯುಕ್ತ ವಿರುದ್ಧದಂತೆ ತೋರಿದರೂ ವಾಕ್ಯವನ್ನು ಯಥಾರ್ಥವಾಗಿ ವ್ಯಾಖ್ಯಾನಮಾಡಿ ಶ್ರೀ ಹರಿಯಲ್ಲಿ ಯೋಜಿಸಬೇಕು. ಅಥವಾ ಯಾವ ಕಾರಣ ದ್ದೆಸೆಯಿಂದ ಸುಖಾಧಿಕನೋ ಆದಕಾರಣ ಭೂಮಶಬ್ದವಾಚ್ಯನು ವಿಷ್ಣುವು ಎಂದು 'ಅತಃ' ಎನ್ನುವುದಕ್ಕೆ ಪೂರ್ವ ಪದದಿಂದ ಅನ್ವಯುವು. (ಬ್ರಹ್ಮನು ವಿರುದ್ಧಲಕ್ಷಣಗಳಿಂದ ಯುಕ್ತನಾಗಿ ದ್ದಾನೆನ್ನುವುದು ಅಯುಕ್ತವು. ಮೇ ಮಾತಾ ವಂಧ್ಯಾ ಎನ್ನುವುದರಂತೆ ವ್ಯಾಹತವಾಗಿದೆ. ಅಣುತ್ವ-ಮಹತ್ವಾದಿಗಳು ವಿರುದ್ಧಗಳೆಂದಾದರೆ ಅವುಗಳಿಂದ ಕೂಡಿದ್ದು ಒಂದು ಹೇಗೆ ಆಗು ವುದು? ವಿರೋಧವು ಸಹಾನವಸ್ಥಾನರೂಪವಾಗಿದೆ. ಒಂದೇ ಅವುಗಳಿಂದ ಕೂಡಿರುವುದಾದರೆ ಅವುಗಳು ವಿರುದ್ಧಗಳು ಹೇಗೆ ಆಗುವುವು? ಸಹಾವಸ್ಥಾನವು ಅವಿರೋಧ ರೂಪವು ಎಂದಾ ಶಂಕಿಸಿ ಹಿಂದೆ ಹೇಳಿದ್ದನ್ನೇ ವಿವರಿಸುತ್ತಾರೆ) (ಬ್ರಹ್ಮನು ವಿರುದ್ಧಲಕ್ಷಣಗಳಿಂದ ಯುಕ್ತನಾಗಿ ದ್ದಾನೆ ಎನ್ನುವುದರಿಂದ ಇದು ನಮಗೆ ಅಭಿಪ್ರೇತವಾಗಿದೆ.) ತಾನಿ=ಆದಾವ, ಅಸ್ಥೂಲಾದಿ ಕಾನಿ ಚ=ಅಣುತ್ವ-ಮಹತ್ವ ಮೊದಲಾದ, ಲಿಂಗಾನಿ=ಲಿಂಗಗಳು, ತದನ್ಯತ್ರ ತು=ಆ ಬ್ರಹ್ಮನ ದ್ದೆಸೆಯಿಂದ ಇತರರಲ್ಲಿ, ಅಸಂತ್ಯಪಿ=ಇಲ್ಲದಿದ್ದರೂ. ಗೋವಿಂದೇ=ಶ್ರೀ ಹರಿಯಲ್ಲಿ, ಅವಿರೋ ಧೇನ=ವಿರೋಧವಿಲ್ಲದೇನೇ, (ಒಟ್ಟಿಗೇಸೇ) ಸಂತಿ=ಇರುತ್ತವೆ (ವಿರೋಧವನ್ನು ಅಂಗೀಕರಿಸಿ ಏಕತ್ರ ಅವಸ್ಥಿತಿಯನ್ನು ಹೇಳುವುದಲ್ಲ. ಆದುದರಿಂದ ವ್ಯಾಹತಿಯಿರುವುದಿಲ್ಲ.

ತಾ ॥ ನ್ಯಾಯಸುಧಾ — (1) ಅಕ್ಷರನು ಬ್ರಹ್ಮನೆಂದಾದರೆ 'ಅಸ್ಥೂಲಂ' ಇತ್ಯಾದಿ ವಾಕ್ಯಕ್ಕೆ ಅವಕಾಶವಿಲ್ಲವೆಂದು ಹೇಳಕೂಡದು. ಅಸ್ಥೂಲಾದಿ ಪದಗಳು ಸ್ಥೌಲ್ಯ ವಿಪರೀತಗಳಾದ ಅಣುತ್ವಾದಿಗಳನ್ನು ಹೇಳುತ್ತದೆನ್ನುವ ವ್ಯಾಖ್ಯಾನವನ್ನು ಅಂಗೀಕರಿಸಿರುವೆವು ಹೀಗೆ ಅಂಗೀಕರಿಸಿ ದರೆ ಪರಸ್ಪರ ವಿರೋಧವೆಂದು ಹೇಳಕೂಡದು, ವಿರುದ್ಧ ಧರ್ಮಗಳೂ ಬ್ರಹ್ಮನಲ್ಲಿ ಇರುತ್ತವೆನ್ನು ವುದು ಶ್ರುತ್ಯಾದಿ ಸಿದ್ಧವಾಗಿದೆ. (2) ಗೋವಿಂದೇ ಎನ್ನುವುದರಿಂದ "**ಪೀತಪ್ರಾಯಸ್ಯ ಜನನೀ ಸುತಸ್ಯ ರುಚಿರಂ ಸ್ಮಿತಂ । ಮುಖಂ ಲಾಲಯತೀ ರಾಜನ್ ಜೃಂಭತೋ ದದೃಶೇ ಇದಂ । ಖಂ ರೋದಸೀ**" ಇತ್ಯಾದಿ ಭಾಗವತದಲ್ಲಿ ಪ್ರಸಿದ್ಧವಾದ ಯಶೋದಾದೇವಿಯ ಪ್ರತ್ಯಕ್ಷವೂ, ಅರ್ಜುನಾದಿಗಳಿಗೆ ಆದ ವಿಶ್ವರೂಪಾದಿ ಗ್ರಾಹಕ ಪ್ರತ್ಯಕ್ಷವೂ ಈ ಅರ್ಥದಲ್ಲಿ ಪ್ರಮಾಣವೆಂದು ಸೂಚಿತವಾಯಿತು. (3) ಹಾಗಾದರೆ ಬ್ರಹ್ಮನಲ್ಲಿ ಅಣುತ್ವ-ಮಹತ್ವಾದಿಗಳನ್ನು ೧ ಪ್ರಮಾಣವಿಲ್ಲದಿರುವುದರಿಂದ ಅಂಗೀಕರಿಸಕೂಡದೋ? ೨ ವಿರೋಧವಿದ್ದಪ್ರಯುಕ್ತವೋ? ೧ನೇದ್ದು ಕೂಡಲಾರದು. ಏಕೆಂದರೆ— 'ಅಣೋರಣೀಯಾನ್' ಇತ್ಯಾದ್ಯಾಗಮವೂ, ಉಭಯ ಕಾರ್ಯದರ್ಶನಾನುಮಾನವು (ಅಂದರೆ, '**ಗೋಪಿಕೋಲೂಖಲೇ ದಾಮ್ನಾ ಬಬಂಧ ಪ್ರಾಕೃತಂ ಯಥಾ। ತದ್ದಾಮ ಬಧ್ಯಮಾನಸ್ಯ ಸ್ವಾರ್ಭಕಸ್ಯ ಕೃತಾಗಸಃ। ದ್ವ್ಯಂಗುಲೋ ನಮಭೂತ್**' ಯಶೋದಾದೇವಿಯು ಶ್ರೀ ಕೃಷ್ಣನನ್ನು ಉಜಿಡೆಯಲ್ಲಿ ಕಟ್ಟಲಿಕ್ಕೆ ಹಗ್ಗಗಳ ಸಮೂಹದಿಂದ ಉದ್ಯೋಗಮಾಡಿದರೂ ಆ ಹಗ್ಗವು ಎರಡು ಅಂಗುಲ ಕಮ್ಮಿಯಾಯಿತು. ಆದಕಾರಣ ಹಗ್ಗಗಳ ಸಮೂಹದಿಂದಲೂ ಕಟ್ಟಲ್ಪಡದಿರುವಿಕೆ ಎನ್ನುವ ಮಹತ್ವ ಕಾರ್ಯವೂ, ಅಂತ್ಯದಲ್ಲಿ ಚಿಕ್ಕ ಹಗ್ಗದಿಂದಲೇ ಕಟ್ಟಲ್ಪಡುವಿಕೆ ಎನ್ನುವ ಅಣುತ್ವ ಕಾರ್ಯವೂ ಇವೆರಡೂ ಸ್ವಕಾರಣೀಭೂತಗಳಾದ ಅಣುತ್ವ-ಮಹತ್ವಗಳೆನ್ನುವ ಎರಡು ಪರಿಮಾಣಗಳನ್ನು ಅನುಮೇಯಿಸಿ ಕೊಡುತ್ತದೆ. ತಥಾಚ ಅನೇಕ ದಾಮಗಳಿಂದಲೂ ಅಬದ್ಧತ್ವರೂಪಕಾರ್ಯವೂ ಅತ್ಯಲ್ಪ ಹಗ್ಗ ದಿಂದಲೂ ಬದ್ಧತ್ವರೂಪಕಾರ್ಯವೂ ಕಾಣುವುದರಿಂದ 'ವಿಷ್ಣುಃ ಅಣುಃ ಅಲ್ಪದಾಮಬದ್ಧತ್ವಾತ್

ವತ್ಸಾದಿವತ್=ಶ್ರೀ ಕೃಷ್ಣನು ಅಣುವಾಗಿದ್ದಾನೆ, ಅಲ್ಪವಾದ ಹಗ್ಗದಿಂದ ಕಟ್ಟಲ್ಪಟ್ಟಿರುವುದರಿಂದ ಕರು ಮೊದಲಾದವುಗಳಂತೆಯೇ' ವಿಷ್ಣುಃ ಮಹಾನ್ ಅನೇಕ ದಾಮಭಿರಪಿ ಅಬದ್ಧತ್ವಾತ್ ಪರ್ವತಾದಿವತ್=ಶ್ರೀ ವಿಷ್ಣುವು ಮಹಾಪರಿಮಾಣವುಳ್ಳವನು, ಅನೇಕ ಹಗ್ಗಗಳಿಂದಲೂ ಕಟ್ಟಲ್ಪಡದೆ ಇರುವುದರಿಂದ ಪರ್ವತಾದಿಗಳಂತೆಯೇ ಎನ್ನುವ ಅನುಮಾನವೂ,) ಉದಾಹೃತ ಪ್ರತ್ಯಕ್ಷವೂ ಆ ವಿಷಯದಲ್ಲಿ ಪ್ರಮಾಣವು. ೨ನೇ ಕಲ್ಪದಲ್ಲಿ (ವಿರೋಧವಿದ್ದಪ್ರಯುಕ್ತ ಎನ್ನುವ ಕಲ್ಪದಲ್ಲಿ) ವಿರೋಧವು ಪ್ರಮಾಣದಿಂದ ಎಂದು ಹೇಳಕೂಡದು. ಅಣುತ್ವ-ಮಹತ್ವಗಳಿಲ್ಲವೆಂದು ಹೇಳುವ ವಿಪರೀತ ಪ್ರಮಾಣವು ತೋರಿಬರುವುದಿಲ್ಲ. ಪರಸ್ಪರವಿರೋಧವೆಂದೂ ಹೇಳಕೂಡದು. ಪರಸ್ಪರ ವಿರೋಧವೇ ಸಿದ್ಧವಾಗಲಿಲ್ಲ ॥ ೪ ॥

ಈ ಪ್ರಕಾರ ಅಸ್ಥೂಲಾದಿಪದಗಳು ಅಣುತ್ವಾದಿಗಳನ್ನು ಹೇಳುತ್ತದೆನ್ನುವ ಪಕ್ಷವನ್ನು ಇಟ್ಟುಕೊಂಡು ಶ್ರುತಿಯು ಬ್ರಹ್ಮವಿಷಯಕವೆಂದು ಉಪಪಾದಿಸಿದರು. ಈಗ ಸ್ಥೂಲತ್ವಾದಿ ನಿವೃತ್ತಿಪರವೆಂದು ಇಟ್ಟುಕೊಂಡರೂ ದೋಷವಿಲ್ಲ ಎಂದಭಿಪ್ರಾಯದಿಂದ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ—

ಮೂ ॥ ಅನ್ಯವಸ್ತುಸ್ವಭಾವಾನಾಂ ಸ್ಥೌಲ್ಯಾದೀನಾಮಪಾಕೃತಿಂ ।
ನಾರಾಯಣೇ ಶ್ರುತಿರ್ವಕ್ತಿ ನ ತು ತಸ್ಯಾಸ್ವಭಾವತಾಂ ॥ ೫ ॥
ಸರ್ವಧರ್ಮಾ ಸರ್ವನಾಮಾ ಸರ್ವಕರ್ಮಾ ಗುಣಾಃ ಶ್ರುತಾಃ ।
ದೋಷಾಃ ಶ್ರುತಾಶ್ಚ ನೇತ್ಯಾದ್ಯಾಃ ಪ್ರಮಾಣಂ ಶ್ರುತಿರತ್ರ ಚ ॥ ೬ ॥

ಅ ॥ ಅನ್ಯವಸ್ತು ಸ್ವಭಾವಾನಾಂ = ಬ್ರಹ್ಮನದ್ದೆಸೆಯಿಂದ ಇತರಗಳಾದ ಯಾವ ಘಟಪಟಾದಿ ವಸ್ತುಗಳೋ ಅವುಗಳ ಸ್ವಭಾವಭೂತಗಳಾದ, ಸ್ಥೌಲ್ಯಾದೀನಾಂ=ಜಡಗಳೂ, ಪರತಂತ್ರಗಳೂ, ಕಾರ್ಯಗಳೂ, ವಿನಾಶವುಳ್ಳವುಗಳೂ ಅಣುತ್ವಾದಿಗಳಿಂದ ಕೂಡಿಕೊಂಡು ಒಟ್ಟಿಗೆ ಇಲ್ಲದಿರುವವುಗಳೂ ಆದ ಸ್ಥೂಲತ್ವಾದಿಗಳ, ಅಪಾಕೃತಿಂ=ಅಭಾವವನ್ನು, ನಾರಾಯಣೇ=ಶ್ರೀ ನಾರಾಯಣನಲ್ಲಿ, ಶ್ರುತಿಃ=ಅಸ್ಥೂಲಮನಣು ಇತ್ಯಾದಿ ಶ್ರುತಿಯು, ವಕ್ತಿ=ಹೇಳುತ್ತದೆ. ತಸ್ಯ=ಆ ನಾರಾಯಣನಿಗೆ, ಅಸ್ವಭಾವತಾಂ=ನಿಃಸ್ವಭಾವತ್ವವನ್ನು. ನ ತು ವಕ್ತಿ=ಹೇಳುವುದೇ ಇಲ್ಲವು. (ಆದಪ್ರಯುಕ್ತ ವಿರೋಧವಿಲ್ಲವು.) (ನಿಃಸ್ವಭಾವತ್ವವೇ ಅರ್ಥವೆಂದು ಏಕೆ ಆಗಲಾರದೆಂದರೆ—) ಸರ್ವಧರ್ಮಾ=ಎಲ್ಲಾ ಧರ್ಮಗಳುಳ್ಳವನು, ಸರ್ವನಾಮಾ=ಎಲ್ಲಾ ಕರ್ಮಗಳುಳ್ಳವನು, ಗುಣಾಃ ಶ್ರುತಾಃ = ಗುಣಗಳೇ ಶ್ರುತಗಳಾಗಿವೆ. ದೋಷಾಶ್ಚ = ದೋಷಗಳಾದರೂ ಶ್ರುತಾಃ ನ=ಶ್ರೀ ಹರಿಗೆ ಶ್ರುತಿಯಲ್ಲಿ ಪ್ರತಿಪಾದಿಸಲ್ಪಡಲಿಲ್ಲ, ಇತ್ಯಾದ್ಯಾಃ=ಇದೇ ಮೊದಲಾದ ಶ್ರುತಿಃ = ಶ್ರುತಿಯು, ಅತ್ರ = ಪರಮೇಶ್ವರನಿಗೆ ಧರ್ಮಗಳಿವೆ ಎನ್ನುವ ವಿಷಯದಲ್ಲಿಯೂ, ಪೂರ್ವೋಕ್ತ ಅಣುತ್ವ-ಮಹತ್ವಾದಿಗಳಲ್ಲಿಯೂ, ಪ್ರಮಾಣಂ=ಪ್ರಮಾಣವು.

ತಾ ॥ ಸ. ರ. ವಿ.— (1) ಅಸ್ಥೂಲಂ ಇತ್ಯಾದಿ ಶ್ರುತಿಯು ಶ್ರೀ ಹರಿಗೆ ಅವಯವ ಬಹುತ್ವಪ್ರಯುಕ್ತ ಮತ್ತು ಜಡಾದಿ ರೂಪಗಳಾದ ವಸ್ತ್ವಂತರಗಳಲ್ಲಿರತಕ್ಕ ಸ್ಥೌಲ್ಯಾದಿಗಳ ಅಭಾವವನ್ನೇ ಪ್ರತಿಪಾದಿಸುತ್ತದೆ. ಸ್ಥೌಲ್ಯಾದಿಧರ್ಮಗಳೇ ಇಲ್ಲವೆಂದು ಹೇಳುವುದಿಲ್ಲ. ಏಕೆಂದರೆ-ಶ್ರೀ ಹರಿಯಲ್ಲಿ ಯಾವ ಧರ್ಮಗಳೂ ಇಲ್ಲವೆಂದು ಹೇಳಿದರೆ 'ಸರ್ವಧರ್ಮಾ' 'ಅಣೋರಣೀಯಾನ್ ಮಹತೋ ಮಹೀಯಾನ್ ಇತ್ಯಾದಿ ಶ್ರುತಿ ವಿರೋಧವು ಬರುವುದು. (2)'ಯಸ್ಮಿನ್

**ವಿರುದ್ಧಗತಯೋಽಪ್ಯನಿಶಂ ಪತಂತಿ ತ್ವತ್ಪಾದಯೋರ್ವಿವಿಧಶಕ್ತ್ಯಯ ಆನುಪೂರ್ವ್ಯಾತ್** ಎನ್ನುವ ವಚನದ್ದೆಸೆಯಿಂದ ಅಣುತ್ವ-ಮಹತ್ವಗಳು ಏಕಕಾಲದಲ್ಲಿಯೇ ವಿಷ್ಣುವಿನಲ್ಲಿಯೇ ಕೂಡುತ್ತವೆ. (3) ಗೋವಿಂದನಿಗೆ ಇಂತಹ ಪ್ರಭಾವವು ಇದೆ ಎಂದು ಯಶೋದಾದೇವಿಗೆ ಪ್ರತ್ಯಕ್ಷವಾಗಿದೆ ಎಂದು 'ಪೀತಪ್ರಾಯಸ್ಯ ಜನನೀ' ಇತ್ಯಾದಿ ಭಾಗವತ ವಾಕ್ಯಗಳಿಂದ ತಿಳಿದುಬರುತ್ತದೆ. ಒಂದೇ ವಸ್ತುವಿನಲ್ಲಿ ಏಕಕಾಲದಲ್ಲಿ ವಿರೋಧವು ಪ್ರಾಕೃತ ಅಣುತ್ವ-ಮಹತ್ವಗಳಿಗೆ-ಆದ ಕಾರಣ ಪದಾರ್ಥಗಳಿಗೆ ವಿಚಿತ್ರ ಸ್ವಭಾವವಿದ್ದಪ್ರಯುಕ್ತ ಶ್ರೀ ಹರಿಯಲ್ಲಿ ಇರತಕ್ಕ ಅಪ್ರಾಕೃತ ಅಣುತ್ವ ಮಹತ್ವಗಳಿಗೆ ವಿರೋಧವನ್ನು ಆಶಂಕಿಸಕೂಡದು ॥ ೫ ॥ ೬ ॥ ಸೂ. ೧೦ ॥ ೧೧ ॥ ೧೨ ॥ ॥ ಅಧಿ. ೩ ॥

**ಅಕ್ಷರಾಧಿಕರಣವು ಸಮಾಪ್ತವಾಯಿತು.**

---

## ಸದಧಿಕರಣವು.

ಈ ಅಧಿಕರಣದಲ್ಲಿ 'ಸದೇವ ಸೌಮ್ಯ' ಇತ್ಯಾದಿ ಸೃಷ್ಟಿಸ್ಥಾನದಲ್ಲಿರುವ 'ಸತ್' ಎನ್ನುವ ನಾಮಸಮನ್ವಯವನ್ನು ಮಾಡುತ್ತಾರೆ.

*** (ಓಂ ಈಕ್ಷತಿಕರ್ಮವ್ಯಪದೇಶಾತ್ಸಃ ಓಂ)** ॥ ಸೂ. ೧೩ ॥

'ಸದೇವ ಸೌಮ್ಯ' ಎನ್ನುವ ಶ್ರುತಿಯಲ್ಲಿದ್ದ ಸತ್ ಶಬ್ದವಾಚ್ಯನು ವಿಷ್ಣುವೇ. ಜಡಪ್ರಕೃತಿಯಲ್ಲ. 'ತದೈಕ್ಷತ' ಎಂದು ಈಕ್ಷಣಾಖ್ಯವ್ಯಾಪಾರವನ್ನು ಹೇಳಿರುವುದರಿಂದ. ಅಥವಾ ಈಕ್ಷಣ ಸೃಷ್ಟಿಕ್ರಿಯೆಗಳನ್ನು ಹೇಳಿರುವುದರಿಂದ ॥ ೧೩ ॥ ಅಧಿ ೪ ॥

**ಸದಧಿಕರಣವು ಸಮಾಪ್ತವಾಯಿತು.**

---

## ದಹರಾಧಿಕರಣವು.

ಇಲ್ಲಿ ಹೃತ್ಪದ್ಮಸ್ಥತ್ವರೂಪಲಿಂಗಕ್ಕೆ ಸಮನ್ವಯವನ್ನು ಮಾಡುತ್ತಾರೆ—

**('ಓಂ ದಹರ ಉತ್ತರೇಭ್ಯಃ ಓಂ')** ॥ ಸೂ. ೧೪ ॥

**'ಉಭೇ ಅಸ್ಮಿನ್ ದ್ಯಾವಾಪೃಥಿವೀ'** ಇತ್ಯಾದಿಗಳಿಂದ ಹೇಳಲ್ಪಟ್ಟ ಸ್ವರ್ಗಭೂಮ್ಯಾದಿಗಳಿಗೆ **ಆಶ್ರಯನಾಗಿ** 'ದಹರಂ ಪುಂಡರೀಕಂ ವೇಶ್ಮ' ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಹೃತ್ಪದ್ಮದಲ್ಲಿದ್ದವನು ಪರಬ್ರಹ್ಮನೇ, ಜೀವಾದಿಗಳಲ್ಲ. 'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿ ಉತ್ತರವಾಕ್ಯದಲ್ಲಿ ಅಪಹತಪಾಪ್ಮತ್ವ ಮೊದಲಾದ ಗುಣಗಳು ಶ್ರುತಗಳಾಗಿರುವುದರಿಂದ.

---

* ಶ್ರೀಮದಾಚಾರ್ಯರು ಈ ಪಾದದಲ್ಲಿರುವ ಇನ್ನುಮೇಲಿನ ಸೂತ್ರಗಳನ್ನು ಭಾಷ್ಯದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನಮಾಡಿರುವುದರಿಂದ ಅನುವ್ಯಾಖ್ಯಾನದಲ್ಲಿ ಅದಕ್ಕಿಂತ ಹೆಚ್ಚು ಹೇಳತಕ್ಕ ವಿಶೇಷಾಂಶವಿಲ್ಲದಿರುವುದರಿಂದ ಪ್ರತಿಸೂತ್ರಗಳನ್ನು ಪ್ರತೀಕ ಗ್ರಹಣಮಾಡಿಕೊಂಡು ವ್ಯಾಖ್ಯಾನಮಾಡಲಿಲ್ಲ. ಎಲ್ಲಾ ಅಧಿಕರಣಗಳ ವಿಷಯ, ಪೂರ್ವಪಕ್ಷನ್ಯಾಯ, ಸಿದ್ಧಾಂತ ನ್ಯಾಯಗಳನ್ನು ಮಾತ್ರ ಹೇಳಿರುತ್ತಾರೆ. ಆದಕಾರಣ ಸೂತ್ರಾರ್ಥವನ್ನು ಹೇಳುವುದು ಅಗತ್ಯವಾದ ಪ್ರಯುಕ್ತ ಸಂಕ್ಷೇಪದಿಂದ ಸೂತ್ರಾರ್ಥವನ್ನು ಮಾತ್ರ ಹೇಳಿರುತ್ತೇವೆ.

('ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ') ॥ ಸೂ. ೧೫ ॥

ಸುಪ್ತಪ್ರಾಪ್ಯತ್ವರೂಪಲಿಂಗ, ಬ್ರಹ್ಮಶಬ್ದ ಇವುಗಳು ಇದ್ದಪ್ರಯುಕ್ತ ದಹರಸ್ಥನು ಬ್ರಹ್ಮನೇ. ಹೇಗೆ ಇವುಗಳು ಹೃತ್ಪದ್ಮಸ್ಥನಲ್ಲಿ ಇರುವವುಗಳೋ ಹಾಗೆಯೇ ಅರಣ್ಯ ಎನ್ನುವ ಅಮೃತ ಸಮುದ್ರಾಶ್ರಯವಾದ ಲೋಕವತ್ತ್ವರೂಪವಾದ ಲಿಂಗವೂ ಹೃತ್ಪದ್ಮಸ್ಥನಲ್ಲಿ ಇರುವುದಾಗಿ ದೃಷ್ಟವಾಗಿದೆ. ಈ ಲಿಂಗವು ವಿಷ್ಣುವಿನಲ್ಲಿಯೇ ಪ್ರಸಿದ್ಧವು. ಆದಪ್ರಯುಕ್ತವೂ ದಹರಸ್ಥನು ಬ್ರಹ್ಮನೇ.

('ಓಂ ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ಓಂ') ॥ ಸೂ. ೧೬ ॥

'ಯ ಆತ್ಮಾ ಸ ಸೇತುರ್ವಿಧೃತಿಃ' ಎಂದು ಸರ್ವಧಾರಕತ್ವರೂಪವಾದ ಲಿಂಗವು ಶ್ರುತವಾಗಿರುವುದರಿಂದಲೂ ದಹರಸ್ಥನು ಬ್ರಹ್ಮನೇ. ಹೃತ್ಪದ್ಮಸ್ಥನಲ್ಲಿರತಕ್ಕ ಅಪಹತಪಾಪ್ಮತ್ವಾದಿ ಮಹಿಮೆಯು ಈ ವಾಕ್ಯದಲ್ಲಿ ತೋರುವುದರಿಂದ ಈ ಲಿಂಗವು ಹೃತ್ಪದ್ಮಸ್ಥನಲ್ಲಿರುವುದ.

('ಓಂ ಪ್ರಸಿದ್ಧೇಶ್ಚ ಓಂ') ॥ ಸೂ. ೧೭ ॥

'ದಹರಂ ವಿಪಾಪ್ಮಂ' ಇತ್ಯಾದಿ ತೈತ್ತಿರೀಯದಲ್ಲಿ ವಿಷ್ಣುವಿಗೆ ಹೃತ್ಪದ್ಮಸ್ಥತ್ವವು ಪ್ರಸಿದ್ಧವಾಗಿರುವುದರಿಂದಲೂ ದಹರಸ್ಥನು ಬ್ರಹ್ಮನೇ.

('ಓಂ ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್ ಓಂ') ॥ ಸೂ. ೧೮ ॥

'ಪರಂ ಜ್ಯೋತಿರುಪಸಂಪದ್ಯ' ಎಂದು ಪ್ರಕೃತನಾದ ಜೀವನಿಗೆ 'ಏಷ ಆತ್ಮಾ' ಎನ್ನುವ ಏತತ್ ಶಬ್ದದಿಂದ ಪರಾಮರ್ಶವಾಡಿ ಆತ್ಮ ಎನ್ನುವ ಶಬ್ದದಿಂದ 'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿಗಳಿಂದ ಹೇಳಲ್ಪಟ್ಟ ಹೃತ್ಪದ್ಮದಲ್ಲಿರತಕ್ಕ ಆತ್ಮತ್ವವನ್ನು ವಿಧಾನಮಾಡಿರುವುದರಿಂದ ದಹರಸ್ಥನು ಜೀವನು ಎಂದರೆ ಹಾಗೆ ಹೇಳಕೂಡದು. ಹೃತ್ಪದ್ಮಸ್ಥನಲ್ಲಿ ಶ್ರುತಗಳಾದ ಅಪಹತಪಾಪ್ಮತ್ವಾದಿ ಧರ್ಮಗಳೂ 'ಏತದಮೃತಮಭಯಂ' ಎಂದು ಹೇಳಲ್ಪಟ್ಟ ಅಮೃತತ್ವಾದಿಗಳೂ ಜೀವನಲ್ಲಿ ಕೂಡಲಾರವು.

('ಓಂ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ಓಂ') ॥ ಸೂ. ೧೯ ॥

ಜೀವನಿಗೆ ಸತ್ಯಕಾಮತ್ವವನ್ನು ಪ್ರತಿಪಾದಿಸತಕ್ಕ 'ಸ ತತ್ರ ಪರ್ಯೇತಿ' ಇದುಮೊದಲಾದ ಮೇಲಿನ ವಾಕ್ಯಗಳಿಂದ ದಹರಸ್ಥನು ಜೀವನು ಎಂದರೆ, ಹಾಗೆ ಹೇಳಕೂಡದು. 'ಪರಂ ಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ' ಎಂದು ಹೇಳಿರುವುದರಿಂದ ಅಭಿವ್ಯಕ್ತವಾದ ಅಪಹತಪಾಪ್ಮತ್ವ ಮೊದಲಾದ ಸ್ವಧರ್ಮವುಳ್ಳ ಮುಕ್ತನೇ ಅಲ್ಲಿ ಹೇಳಿಸಿಕೊಳ್ಳಲ್ಪಡುತ್ತಾನೆ. ಮುಕ್ತನಿಗಾದರೂ ದೇಹಾಂತರ್ವರ್ತಿಯಾದ ಹೃತ್ಪದ್ಮಸ್ಥತ್ವವು ಕೂಡಲಾರದು. ಆದಕಾರಣ ಶ್ರೀಹರಿಯೇ ಹೃತ್ಪದ್ಮಸ್ಥನು.

('ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ') ॥ ಸೂ. ೨೦ ॥

'ಪರಂ ಜ್ಯೋತಿಃ' ಎಂದು ಹೇಳಲ್ಪಟ್ಟ ಜ್ಯೋತೀರೂಪನಾದ ಬ್ರಹ್ಮನ ವಿಷಯದಲ್ಲಿಯೇ 'ಏಷಃ' ಎಂದು ಪರಾಮರ್ಶವು, ಅಂದರೆ ಬ್ರಹ್ಮನನ್ನೇ ಪರಾಮರ್ಶಮಾಡಿಕೊಂಡು ಹೃತ್ಪದ್ಮಸ್ಥ ಆತ್ಮತ್ವವನ್ನು ವಿಧಾನಮಾಡಿದ್ದು.

(‘ಓಂ ಅಲ್ಪಶ್ರುತೇರಿತಿ ಚೇತ್ತದುಕ್ತಂ ಓಂ’) ॥ ಸೂ. ೨೧ ॥

‘ದಹರಂ ಪುಂಡರೀಕಂ’ ಇತ್ಯಾದಿಗಳಿಂದ ಅಲ್ಪವಾದ ಸ್ಥಾನವು ಶ್ರುತವಾಗಿರುವುದರಿಂದ ದಹರಸ್ಥನು ಬ್ರಹ್ಮನು ಅಲ್ಲ ಎಂದರೆ ಹಾಗೆ ಹೇಳಕೂಡದು. ಬ್ರಹ್ಮನೂ ಅಲ್ಪಸ್ಥಾನದಲ್ಲಿರತಕ್ಕವನೆಂದು ‘ನಿಚಾಯ್ಯತ್ವಾತ್’ ಇತ್ಯಾದಿಗಳಿಂದ ಹೇಳಿದ್ದೇವೆ ॥ ಸೂ. ॥ ೧೪ ॥ ೧೫ ॥ ೧೬ ॥ ೧೭ ॥ ॥ ೧೮ ॥ ೧೯ ॥ ೨೦ ॥ ೨೧ ॥ ಅಧಿ. ೫ ॥

**ದಹರಾಧಿಕರಣವು ಸಮಾಪ್ತವಾಯಿತು.**



## ಅನುಕೃತ್ಯಧಿಕರಣವು.

ಈ ಅಧಿಕರಣದಲ್ಲಿ ಜ್ಞಾನಕ್ಕಾಗಿ ಪ್ರಾರ್ಥಿತತ್ವರೂಪವಾದ ಆನುಕೂಲ್ಯದಿಂದ ಗೃಹ್ಯಮಾಣತ್ವಲಿಂಗಕ್ಕೆ ಸಮನ್ವಯಮಾಡುತ್ತಾರೆ—

(‘ಓಂ ಅನುಕೃತೇಸ್ತಸ್ಯ ಚ ಓಂ’) ॥ ಸೂ. ೨೨ ॥

‘ಕಥಂ ನು ತದ್ವಿಜಾನೀಯಾಂ’ ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಜ್ಞಾನಕ್ಕಾಗಿ ಪ್ರಾರ್ಥಿತವಾದ ವಸ್ತುವು ವಿಷ್ಣುವೇ. ಜ್ಞಾನಿಸುಖವಲ್ಲ. ‘ತಮೇವ ಭಾಂತಮನುಭಾತಿ ಸರ್ವಂ’ ಎನ್ನುವ ಶ್ರುತಿಯಲ್ಲಿ ಸೂರ್ಯಾದಿಗಳಿಗೆ ವಿಷ್ಣ್ವಧೀನವಾದ ಭಾನವು ಶ್ರುತವಾಗಿರುವುದರಿಂದ. ಮತ್ತು ‘ತಸ್ಯ ಭಾಸಾ ಸರ್ವಮಿದಂ ವಿಭಾತಿ’ ಎನ್ನುವಲ್ಲಿ ಸರ್ವವಸ್ತುವೂ ಶ್ರೀ ಹರಿಯಿಂದಲೇ ಪ್ರಕಾಶವನ್ನು ಹೊಂದುತ್ತದೆ ಎಂದೂ ಉಕ್ತವಾಗಿದೆ.

(‘ಓಂ ಅಪಿ ಸ್ಮರ್ಯತೇ ಓಂ’) ॥ ಸೂ. ೨೩ ॥

ಶ್ರೀ ಹರಿಯೇ ಸರ್ವಪ್ರಕಾಶಕನು, ಸೂರ್ಯಾದಿ ತೇಜೋನಿಯಾಮಕನು ಎನ್ನುವುದು ಶ್ರುತಿಯಲ್ಲಿ ಮಾತ್ರ ಹೇಳಲ್ಪಟ್ಟದ್ದಲ್ಲ. ಮತ್ತೆ ‘ಯದಾದಿತ್ಯಗತಂ ತೇಜಃ’ ‘ನ ತದ್ಭಾಸಯತೇ ಸೂರ್ಯಃ’ ಎನ್ನುವ ಸ್ಮೃತಿಯಿಂದಲೂ ಪ್ರತಿಪಾದಿಸಲ್ಪಟ್ಟದೆ ॥ ಸೂ. ೨೨ ॥ ೨೩ ॥ ಅಧಿ. ೬ ॥

**ಅನುಕೃತ್ಯಧಿಕರಣವು ಸಮಾಪ್ತವಾಯಿತು.**



## ವಾಮನಾಧಿಕರಣವು.

ಈ ಅಧಿಕರಣದಲ್ಲಿ ಈಶಾನನಾಮಕ್ಕೆ ಸಮನ್ವಯವನ್ನು ಮಾಡುತ್ತಾರೆ—

“ಓಂ ಶಬ್ದಾದೇವ ಪ್ರಮಿತಃ ಓಂ” ॥ ಸೂ. ೨೪ ॥

‘ಈಶಾನೋ ಭೂತಭವ್ಯಸ್ಯ’ ಎನ್ನುವ ಶ್ರುತಿಯಲ್ಲಿದ್ದ ಈಶಾನ ಶಬ್ದವಾಚ್ಯನು ವಿಷ್ಣುವೆಂದೇ ನಿಶ್ಚಿತನಾಗಿರುತ್ತಾನೆ. ‘ಮಧ್ಯೇ ವಾಮನಮಾಸೀನಂ’ ಎನ್ನುವ ವಾಮನಶ್ರುತಿಯಿದ್ದಪ್ರಯುಕ್ತವೇ.

(‘ಓಂ ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ಓಂ’) ॥ ಸೂ. ೨೫ ॥

ಹೃದಯದಲ್ಲಿರತಕ್ಕ ಅವಕಾಶವನ್ನು ಅಪೇಕ್ಷಿಸಿಯೇ ಪರಬ್ರಹ್ಮನು ಅಂಗುಷ್ಠಮಾತ್ರನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಸ್ವತಃ ಅಲ್ಲ. ಪಶ್ವಾದಿಗಳಿಗೆ ಅಂಗುಷ್ಠವಿಲ್ಲದಿದ್ದರೂ 'ಅಂಗುಷ್ಠ ಮಾತ್ರಃ' ಎಂದು ವಿದ್ಯೆಗೆ ಮನುಷ್ಯರು ಅಧಿಕಾರಿಗಳಾಗಿರುವುದರಿಂದ 'ಅಂಗುಷ್ಠಮಾತ್ರಃ ಪುರುಷಃ' ಎನ್ನುವುದು ಯುಕ್ತವು ॥ ೨೪ ॥ ೨೫ ॥ ಅಧಿ. ॥ ೭ ॥

**ಪ್ರಮಿತಾಧಿಕರಣವು ಸಮಾಪ್ತವಾಯಿತು.**



# ದೇವತಾಧಿಕರಣವು.

ಈ ಅಧಿಕರಣದಲ್ಲಿ ದೇವತೆಗಳಿಗೂ ವೇದವಿದ್ಯಾಧಿಕಾರವಿದೆ ಎಂದು ಸಮರ್ಥಿಸುತ್ತಾರೆ—

**('ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ')** ॥ ಸೂ. ೨೬ ॥

ಮನುಷ್ಯರಾಗಿ ಇದ್ದವರಿಗೆ ವಿದ್ಯಾಕರ್ಮಗಳಿಂದ ದೇವತ್ವಪ್ರಾಪ್ತಿಯಾದ ಮೇಲೆಯೂ ಅಂದರೆ, ದೇವತೆಗಳಿಗೂ ವೇದವಿದ್ಯಾಧಿಕಾರಕ್ಕೆ ಉಪಯುಕ್ತವಾದ ವಿಶಿಷ್ಟ ಬುದ್ಧ್ಯಾದಿಗಳು ಕೂಡುವಪ್ರಯುಕ್ತ ವೇದವಿದ್ಯೆಯಲ್ಲಿ ಅಧಿಕಾರವಿದೆ ಎಂದು ಬಾದರಾಯಣಾಚಾರ್ಯರು ಹೇಳುತ್ತಾರೆ—

**('ಓಂ ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್ ಓಂ')** ॥ ಸೂ. ೨೭ ॥

ಮನುಷ್ಯರಿಗೇನೇ ದೇವಾದಿ ಪದವು ಪ್ರಾಪ್ತಿಯಾಗುತ್ತದೆಂದು ಅಂಗೀಕರಿಸಿದರೆ ಅಂದರೆ— ದೇವಪದವು ಸಾದಿಯಾದರೆ ಇಂದ್ರಾದಿಪದವು ಪ್ರಾಪ್ತಿಯಾಗುವುದಕ್ಕಿಂತ ಮೊದಲು ಇಂದ್ರಾದಿ ದೇವತೆಗಳು ಇಲ್ಲದಿರುವುದರಿಂದ ಅವರನ್ನುದ್ದೇಶಿಸಿಕೊಂಡು ದ್ರವ್ಯತ್ಯಾಗವು ಕೂಡದಿರುವುದರಿಂದ ಯಜ್ಞಾದಿ ಕರ್ಮವಿಷಯದಲ್ಲಿ ವೈಯರ್ಥ್ಯವು ಬರುವುದು. ಎಂದರೆ— ಹೀಗೆ ಹೇಳಕೂಡದು. ಅನೇಕ ಯೋಗ್ಯ ಮನುಷ್ಯರಿಗೆ ಮೊದಲು ಮೊದಲು ದೇವತಾಪದವು ಪ್ರಾಪ್ತವಾಗಿದೆ ಎಂದು 'ಯಜ್ಞೇನ ಯಜ್ಞಂ' ಎನ್ನುವ ಶ್ರುತಿಯಲ್ಲಿ ದೃಷ್ಟವಾಗಿದೆ. ಅಂತೂ ಈ ದೇವತೆಯು ಇಲ್ಲವಾದರೂ ಆ ಪದವನ್ನು ಹೊಂದಿದ ಮತ್ತೊಬ್ಬ ದೇವತೆಯು ಇದ್ದಪ್ರಯುಕ್ತ ಕರ್ಮ ವಿರೋಧವಿಲ್ಲ.

**('ಓಂ ಶಬ್ದ ಇತಿ ಚೇನ್ನಾತಃ ಪ್ರಭವಾತ್ಪ್ರತ್ಯಕ್ಷಾನುಮಾನಾಭ್ಯಾಂ ಓಂ')** ॥ ಸೂ. ೨೮ ॥

ದೇವಪದವಿಗೆ ನಾಶಹೇಳಿದರೆ ನಿತ್ಯಭೂತವಾದ ವೇದರೂಪವಾದ ಶಬ್ದದಲ್ಲಿ ಅಪ್ರಾಮಾಣ್ಯರೂಪವಿರೋಧವು ಬರುವುದು. ಏಕೆಂದರೆ— ಆ ಮೇಲೆ ಇಂದ್ರಾದಿ ದೇವತೆಗಳು ಇಲ್ಲದಿರುವುದರಿಂದ ವಾಚ್ಯವಾದ ಅರ್ಥವಿಲ್ಲದಿರುವುದಕ್ಕೆ ಪ್ರಾಮಾಣ್ಯವು ಕೂಡಲಾರದು, ಎಂದರೆ ಹಾಗೆ ಹೇಳಕೂಡದು. 'ಧಾತಾ ಯಥಾಪೂರ್ವಮಕಲ್ಪಯತ್' 'ಯಥೈವ ನಿಯಮಃ ಕಾಲೇ' ಇದು ಮೊದಲಾದ ಶಬ್ದಗಳಿಂದ ಪ್ರವಾಹರೂಪದಿಂದ ದೇವತೆಗಳಿಗೆ ನಿತ್ಯತ್ವವಿದ್ದಪ್ರಯುಕ್ತ ದೋಷವಿಲ್ಲ. ಈ ಪ್ರಭವನಿಯಮವು ಮಹಾನುಭಾವರಿಗೆ ಪ್ರತ್ಯಕ್ಷದಿಂದಲೂ ಇತರರಿಗೆ 'ಉಪಂತನ ಕಾಲಃ ದೇವಾದಿಮಾನ್ ಅಪ್ರಲಯಕಾಲತ್ವಾತ್ ಸಂಪ್ರತಿಪನ್ನಕಾಲವತ್' ಮೇಲಿನ ಕಾಲವು

ದೇವಾದಿಗಳುಳ್ಳದ್ದು ಪ್ರಲಯಕಾಲವಾಗದಿರುವುದರಿಂದ ನಿಶ್ಚಿತಕಾಲದಂತೆ ಎನ್ನುವ ಅನುಮಾನ ದಿಂದಲೂ ಅವಗತವಾಗುತ್ತದೆ.

**('ಓಂ ಅತ ಏವ ಚ ನಿತ್ಯತ್ವಂ ಓಂ')** || ಸೂ. ೨೯ ||

ಶಬ್ದಗಳಿಗೆ ನಿತ್ಯತ್ವವಿದ್ದಪ್ರಯುಕ್ತವೇ ದೇವಪ್ರವಾಹಕ್ಕೂ ನಿತ್ಯತ್ವವನ್ನು ಅಂಗೀ ಕರಿಸತಕ್ಕದು.

**('ಓಂ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ')** || ಸೂ. ೩೦ ||

ಪ್ರಾಚೀನ ದೇವತೆಗಳಿಗೆ ಮುಕ್ತಿಯಾಗಿರುವುದರಿಂದ ಅವರು ತಂತಮ್ಮ ಪದವಿಗಳಲ್ಲಿ ಇಲ್ಲ ದಿದ್ದರೂ ಅವರಿಂದ ಇತರರಿಗೆ ಸಮಾನನಾಮರೂಪಗಳಿದ್ದಪ್ರಯುಕ್ತ ಸಮಾನಧರ್ಮಗಳಿದ್ದ ಪ್ರಯುಕ್ತವೂ ಅವರನ್ನು ಪ್ರತಿಪಾದಿಸತಕ್ಕ ಒಂದೇ ವಿಧವಾದ ವೇದಕ್ಕೆ ಅಪ್ರಾಮಾಣ್ಯಾಖ್ಯ ವಿರೋಧವಿಲ್ಲ. ಸಮಾನನಾಮರೂಪಗಳಿವೆ ಎನ್ನುವ ವಿಷಯದಲ್ಲಿ 'ಧಾತಾ ಯಥಾಪೂರ್ವಂ' ಎನ್ನುವ ಶ್ರುತಿಯೂ 'ಅನಾದಿನಿಧನಾ ನಿತ್ಯಾ' ಇತ್ಯಾದಿ ಸ್ಮೃತಿಯೂ ಇದೆ.

**('ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ')** || ಸೂ. ೩೧ ||

'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಮಧು ಜ್ಯೋತಿಷ್ಟೋ ಮಾದಿವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ—

**('ಓಂ ಜ್ಯೋತಿಷಿ ಭಾವಾಚ್ಚ ಓಂ')** || ಸೂ. ೩೨ ||

ದೇವತೆಗಳು ಸರ್ವಜ್ಞರಾಗಿರುವುದರಿಂದ ಮೋಕ್ಷಾರ್ಥ ವಿದ್ಯೆಗಳಲ್ಲಿಯೂ ವಿದ್ಯಾಸಾಧ್ಯ ವಾದ ಜ್ಞಾನವನ್ನು ಹೊಂದಿರುವುದರಿಂದ ಅರ್ಥಿತ್ವವು ಕೂಡದಿರುವಪ್ರಯುಕ್ತ ಅಧಿಕಾರವಿಲ್ಲ ವೆಂದು ತಿಳಿಯುತ್ತಾರೆ—

**"ಓಂ ಭಾವಂ ತು ಬಾದರಾಯಣೋಽಸ್ತಿ ಹಿ ಓಂ"** || ಸೂ. ೩೩ ||

ಯಾವ ಕಾರಣದಿಂದ ಮೋಕ್ಷರೂಪ ಫಲದಲ್ಲಿಯೂ ಮೋಕ್ಷಕ್ಕೆ ಕಾರಣವಾದ ಜ್ಞಾನ ದಲ್ಲಿಯೂ ಅತಿಶಯವಿದೆಯೋ, ಆದಕಾರಣ ಅತಿಶಯಕ್ಕಾಗಿ ದೇವತೆಗಳಿಗೆ ಮಧುವಿದ್ಯೆ ಮೊದ ಲಾದ ಸರ್ವವಿದ್ಯೆಗಳಲ್ಲಿ ಅಧಿಕಾರವಿದೆ ಎಂದು ತಿಳಿಯುತ್ತಾರೆ || ೨೬ || ೨೭ || ೨೮ || ೨೯ || || ೩೦ || ೩೧ || ೩೨ || ೩೩ || ಅಧಿ. ೮ ||

**ದೇವತಾಧಿಕರಣವು ಸಮಾಪ್ತವಾಯಿತು.**



# ಅಪಶೂದ್ರಾಧಿಕರಣವು.

ಈ ಅಧಿಕರಣದಲ್ಲಿ ಶೂದ್ರರಿಗೆ ವೇದವಿದ್ಯಾಧಿಕಾರವನ್ನು ನಿಷೇಧಿಸುತ್ತಾರೆ—

**('ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ಸೂಚ್ಯತೇ ಹಿ ಓಂ')** || ಸೂ. ೩೪ ||

ಪೌತ್ರಾಯಣನು ಶೋಕದಿಂದ ಬಂದವನಾದಪ್ರಯುಕ್ತ 'ಅಹ ಹಾರೇತ್ವಾ ಶೂದ್ರ' ಇತ್ಯಾದಿ ಶ್ರುತಿಗಳಲ್ಲಿ ಮುನಿಯಿಂದ ಶೂದ್ರನೆಂದು ಹೇಳಿಸಿಕೊಳ್ಳಲ್ಪಟ್ಟಿದ್ದಾನೆ. ರೂಢಿಯಿಂದ ಅಲ್ಲ. ಆದ ಕಾರಣ ಶೂದ್ರನಿಗೆ ಅಧಿಕಾರವಿಲ್ಲ 'ಕಮ್ವರ ಏನಂ' ಇತ್ಯಾದಿಗಳಿಂದ ಹಂಸಕೃತವಾದ ಅನಾದರವು ಶ್ರುತವಾಗಿರುವುದರಿಂದ ಈ ಪೌತ್ರಾಯಣನಿಗೆ ಶೋಕವು 'ಸಹ ಸಂಜಿಹಾನ ಏವ ಕ್ಷತ್ತಾರ ಮುವಾಚ' ಎಂದು ವ್ಯಗ್ರತ್ವವನ್ನು ಹೇಳಿರುವುದರಿಂದ ಸೂಚಿತವಾಗುತ್ತದೆ. ಇವನಿಗೆ ಶೋಕವು ತಿಳಿಯಲ್ಪಡುತ್ತದೆ.

('ಓಂ ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ಓಂ') ॥ ಸೂ. ೩೫ ॥

'ಅಯಮಶ್ವತರೀರಥಃ' ಎನ್ನುವ ಉತ್ತರವಾಕ್ಯದಲ್ಲಿ ಶ್ರುತವಾದ ಚಿತ್ರರಥಸಂಬಂಧಿತ್ವ ರೂಪಲಿಂಗದಿಂದ ಈ ಪೌತ್ರಾಯಣನು ಕ್ಷತ್ರಿಯನೆಂದು ಅವಗತವಾಗುವುದರಿಂದ ಈ ಪೌತ್ರಾಯಣನಲ್ಲಿ ರೈಕ್ವರು ಹೇಳಿದ ಶೂದ್ರ ಶಬ್ದವು ಶೂದ್ರತ್ವ ಜಾತಿಯನ್ನು ಹೇಳತಕ್ಕದಲ್ಲ. ಮತ್ತೆ ಶೋಕದಿಂದ ಬಂದವನಾದಪ್ರಯುಕ್ತ ಶೂದ್ರಶಬ್ದವು ಯೌಗಿಕವು. ಆದಕಾರಣ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ.

('ಓಂ ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ ಓಂ') ॥ ಸೂ. ೩೬ ॥

ಅಧ್ಯಯನಾಂಗವಾಗಿ 'ತಮಧ್ಯಾಪಯೀತ' ಎಂದು ಉಪನಯನಾಖ್ಯವಾದ ಸಂಸ್ಕಾರವನ್ನು ಪರಾಮರ್ಶೆಮಾಡಿದರಿಂದ, ಶೂದ್ರನಿಗಾದರೂ 'ನಾಗ್ನಿರ್ನ ಯಜ್ಞೋ ನ ಸಂಸ್ಕಾರಃ' ಎನ್ನುವ ಶ್ರುತಿಯಲ್ಲಿ ಸಂಸ್ಕಾರವೇ ಇಲ್ಲವೆಂದು ಹೇಳಿದರಿಂದಲೂ ಶೂದ್ರನಿಗೆ ವೇದ ವಿದ್ಯೆಯಲ್ಲಿ ಅಧಿಕಾರ ವಿಲ್ಲ.

('ಓಂತದಭಾವ ನಿರ್ಧಾರಣೇ ಚ ಪ್ರವೃತ್ತೇಃ ಓಂ') ॥ ಸೂ. ೩೭ ॥

ಗೌತಮನು ಸತ್ಯಕಾಮನಿಗೆ 'ನೈತದಬ್ರಾಹ್ಮಣೋ ವಿವಕ್ತುಮರ್ಹತಿ' ಎಂದು ಶೂದ್ರತ್ವಾಭಾವವನ್ನು ಸತ್ಯವಚನದಿಂದ ನಿಶ್ಚಯಮಾಡಿಕೊಂಡೇ ಉಪನಯನಾಖ್ಯಸಂಸಾರದಲ್ಲಿ ಪ್ರವೃತ್ತಿ ಮಾಡಿರುವುದರಿಂದ ಶೂದ್ರನಿಗೆ ಉಪನಯನಾಖ್ಯ ಸಂಸ್ಕಾರವಿಲ್ಲ.

('ಶ್ರವಣಾಧ್ಯಯನಾರ್ಥಪ್ರತಿಷೇಧಾತ್ಸ್ಮೃತೇಶ್ಚ ಓಂ') ॥ ಸೂ. ೩೮ ॥

ಶೂದ್ರನಿಗೆ ವೇದ ವಿದ್ಯೆಗಳಲ್ಲಿ ಅಧಿಕಾರವಿಲ್ಲ. ಏಕೆಂದರೆ—'ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಂ । ಅಧ್ಯಯನೇ ಜಿಹ್ವಾಚ್ಛೇದಃ । ಅರ್ಥಾವಧಾರಣೇ ಹೃದಯ ವಿದಾರಣಂ' ॥ ಶೂದ್ರರು ವೇದವಿದ್ಯೆಯನ್ನು ಕೇಳಿದರೆ ಕಾಯಿಸಿದ ಅರಗು, ಸೀಸಗಳಿಂದ ಅವರ ಕಿವಿಯನ್ನು ತುಂಬಿಸಬೇಕು, ಅಧ್ಯಯನಮಾಡಿದರೆ ನಾಲಿಗೆಯನ್ನು ಕೊಯಿಸಬೇಕು. ಅರ್ಥವನ್ನು ನಿಶ್ಚಯಮಾಡಿಕೊಂಡರೆ ಹೃದಯವನ್ನು ಶೀಳಿಸಬೇಕು ಎಂದು ನಿಷೇಧವೂ ಇದೆ. 'ನಾಗ್ನಿರ್ನಯಜ್ಞಃ ಶೂದ್ರಸ್ಯ' ಎಂದು ನಿಷೇಧಕ ಸ್ಮೃತಿಯೂ ಇದೆ ॥ ೩೪ ॥ ೩೫ ॥ ೩೬ ॥ ೩೭ ॥ ॥ ೩೮ ॥ ಅಧಿ. ೯ ॥

ಅಪಶೂದ್ರಾಧಿಕರಣವು ಸಮಾಪ್ತವಾಯಿತು.



## ಕಂಪನಾಧಿಕರಣವು.

('ಓಂ ಕಂಪನಾತ್ ಓಂ') ॥ ಸೂ. ೩೯ ॥

'ಮಹದ್ಭಯಂ ವಜ್ರಮುದ್ಯತಂ' ಎಂದು ಹೇಳಲ್ಪಟ್ಟ ವಜ್ರಶಬ್ದವಾಚ್ಯನು ಬ್ರಹ್ಮನೇ; ಇಂದ್ರಾಯುಧವಲ್ಲ. 'ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಂ' ಎನ್ನುವ ಶ್ರುತಿಯಲ್ಲಿ ಪ್ರಾಣ ಮೊದಲಾದ ಸರ್ವಜಗಚ್ಚೇಷ್ಟಕತ್ವರೂಪವಿಷ್ಣುಲಿಂಗವು ಶ್ರುತವಾಗಿರುವುದರಿಂದಲೂ ॥ ೩೯ ॥ ॥ ಅಧಿ. ೧೦ ॥

**ಕಂಪನಾಧಿಕರಣವು ಸಮಾಪ್ತವಾಯಿತು.**

## ಜ್ಯೋತಿರಧಿಕರಣವು.

('ಓಂ ಜ್ಯೋತಿರ್ದರ್ಶನಾತ್ ಓಂ') ॥ ಸೂ. ೪೦ ॥

'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎನ್ನುವಲ್ಲಿ ಹೇಳಲ್ಪಟ್ಟ ಜ್ಯೋತಿಶ್ಶಬ್ದವಾಚ್ಯನು ಬ್ರಹ್ಮನೇ, ಜೀವನಲ್ಲ. 'ವಿಷ್ಣುರೇವ ಜ್ಯೋತಿಃ' ಎನ್ನುವ ಚತುರ್ವೇದಶಿಖೆಯಲ್ಲಿ ಶ್ರೀ ಹರಿಗೇನೇ ಜ್ಯೋತಿಶ್ಶಬ್ದವಾಚ್ಯತ್ವವು ದೃಷ್ಟವಾಗಿದೆ ॥೪೦॥ ಅಧಿ. ೧೧ ॥

**ಜ್ಯೋತಿರಧಿಕರಣವು ಸಮಾಪ್ತವಾಯಿತ .**

## ಆಕಾಶಾಧಿಕರಣವು.

('ಓಂ ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ಓಂ') ॥ ಸೂ. ೪೧ ॥

'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶ ಶಬ್ದವಾಚ್ಯನು ವಿಷ್ಣುವೇ, ಅವ್ಯಾಕೃತಾಕಾಶವಲ್ಲ ನಾಮರೂಪ ರಾಹಿತ್ಯರೂಪವಾದ ವಿಲಕ್ಷಣಾರ್ಥತ್ವವನ್ನು ವ್ಯಪದೇಶಮಾಡಿದರಿಂದಲೂ ಬ್ರಹ್ಮತ್ವ- ಅಮೃತತ್ವಗಳನ್ನು ವ್ಯಪದೇಶ ಮಾಡಿದರಿಂದಲೂ ॥ ೪೧ ॥ ಅಧಿ. ॥ ೧೨ ॥

**ಆಕಾಶಾಧಿಕರಣವು ಸಮಾಪ್ತವಾಯಿತು.**

## ಸುಷುಪ್ತ್ಯಧಿಕರಣವು.

('ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ') ॥ ಸೂ. ೪೨ ॥

'ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ ಭವತಿ' ಎಂದು ಹೇಳಲ್ಪಟ್ಟ ಸ್ವಪ್ನಾದಿ ದ್ರಷ್ಟನು ಬ್ರಹ್ಮನೇ, ಜೀವನಲ್ಲ. ಏಕಂದರೆ— 'ಅನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ' ಎಂದು ಅಸಂಗತ್ವಲಿಂಗವಿದೆ. 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂದೂ 'ಪ್ರಾಜ್ಞೇನಾತ್ಮನಾನ್ವಾರೂಢಃ' ಎಂದೂ ಸುಷುಪ್ತ್ಯುತ್ಕ್ರಾಂತಿ ಪ್ರಕರಣಗಳಲ್ಲಿ ಜೀವೇಶರಿಗೆ ಭೇದವನ್ನು ವ್ಯಪದೇಶಮಾಡಿರುತ್ತದೆ ॥ ೪೨ ॥ ಅಧಿ. ॥ ೧೩ ॥

**ಸುಷುಪ್ತ್ಯಧಿಕರಣವು ಸಮಾಪ್ತವಾಯಿತು.**

## ಬ್ರಾಹ್ಮಣಾಧಿಕರಣವು

('ಓಂ ಪತ್ಯಾದಿಶಬ್ದೇಭ್ಯಃ ಓಂ') ॥ ಸೂ. ೪೩ ॥

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಾಹ್ಮಣ ಶಬ್ದ ವಾಚ್ಯನು ವಿಷ್ಣುವೇ, ವಿರಿಂಚನಲ್ಲ. "ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಾಧಿಪತಿಃ" ಇತ್ಯಾದಿ ಸರ್ವಾಧಿಪತಿತ್ವಾದಿಗಳನ್ನು ಹೇಳತಕ್ಕ ಶಬ್ದಗಳಿದ್ದಪ್ರಯುಕ್ತ ॥ ೪೩ ॥ ಅಧಿ ॥ ೧೪ ॥

**ಬ್ರಾಹ್ಮಣಾಧಿಕರಣವು ಸಮಾಪ್ತವಾಯಿತು.**

# ೧—೧೪. ಅಧಿಕರಣಗಳ ವಿಷಯಾದಿಗಳು

ಈ ಸೂತ್ರಗಳು ಭಾಷ್ಯದಲ್ಲಿಯೇ ಸ್ಪಷ್ಟಾರ್ಥಗಳಾಗಿರುವುದರಿಂದ ಇಲ್ಲಿ ಹೇಳತಕ್ಕ ವಿಶೇಷಾಂಶವಿಲ್ಲ 'ಸಗಮಾಖ್ಯವಿದ್ಯಾ ವ್ಯಾಖ್ಯಾಂ ಕರೋಮಿ' ಎಂದೂ ಪ್ರತಿಜ್ಞಾಮಾಡಿರುತ್ತಾರೆ. ಆದಪ್ರಯುಕ್ತ ಭಾಷ್ಯದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನವು, ಪುನಃ ವ್ಯಾಖ್ಯಾನಮಾಡುತ್ತೇನೆನ್ನುವ ಪ್ರತಿಜ್ಞೆಯು ಇವೆರಡು ಸಿದ್ಧಿಯಾಗುವುದಕ್ಕಾಗಿ ಅಥವಾ ಸ್ಪಷ್ಟಾರ್ಥವಾಗಿರುವುದರಿಂದ ಅವಕ್ತವ್ಯತ್ವವು ಪ್ರತಿಜ್ಞಾತತ್ವ ಇವೆರಡು ಸಿದ್ಧಿಯಾಗುವುದಕ್ಕಾಗಿ ಪೂರ್ವೋತ್ತರಪಕ್ಷಯುಕ್ತಿಗಳನ್ನು ಹೇಳೋಣಮಾತ್ರದಿಂದಲೇ ಎಲ್ಲಾ ಅಧಿಕರಣಗಳನ್ನೂ ವ್ಯಾಖ್ಯಾನಮಾಡಿದಂತೆಯೇ ಆಯಿತೆಂದು ತಿಳಿಯುತ್ತಾ ಶ್ರೀಮದಾಚಾರ್ಯರು ಈ ಪಾದದಲ್ಲಿರತಕ್ಕ ಅಧಿಕರಣಗಳ ವಿಷಯ ಪೂರ್ವಪಕ್ಷ ನ್ಯಾಯ ಸಿದ್ಧಾಂತನ್ಯಾಯಗಳನ್ನು ಸಂಗ್ರಹಿಸಿ ತೋರಿಸುತ್ತಾರೆ—

**ಮೂ ॥ ಲಿಂಗಂ ಸಾಧಾರಣಂ ಶಬ್ದೌ ಸ್ಥಾನಂ ಲಿಂಗಮನುಗ್ರಹಃ ।**
**ಪುನಃ ಶಬ್ದಾಃ ಲಿಂಗಶಬ್ದೌ ವಿಚಾರ್ಯಾ ದ್ವಿಸ್ಥಿತಾ ಇಹ ॥ ೭ ॥**

ಅ ॥ ಸಾಧಾರಣಂ=ರುದ್ರ, ವಾಯು, ಪ್ರಕೃತಿ, ಜೀವ, ವಿಷ್ಣುಗಳಲ್ಲಿ ಸಾಧಾರಣವಾದ, ಲಿಂಗಂ=ದ್ಯುಭ್ವಾದ್ಯಾಯತನತ್ವರೂಪವಾದ ಲಿಂಗವೂ, ಶಬ್ದೌ=ಪ್ರಾಣ-ವಿಷ್ಣುಗಳಲ್ಲಿ ಸಾಧಾರಣವಾದ ಭೂಮಶಬ್ದವು, ವಿಷ್ಣು ಚೇತನ ಪ್ರಕೃತಿಗಳಲ್ಲಿ ಸಾಧಾರಣವಾದ ಅಕ್ಷರಶಬ್ದವು ಇವುಗಳು, ಸ್ಥಾನಂ=ವಿಷ್ಣು ಪ್ರಕೃತಿಗಳಲ್ಲಿ ಸಾಧಾರಣವಾದ ಸೃಷ್ಟಿಸ್ಥಾನವು (ಅಂದರೆ, ಸೃಷ್ಟ್ಯರ್ಥವಾಗಿ ಪ್ರಲಯಕಾಲದಲ್ಲಿ ಇರುವಿಕೆಯು, ಅಥವಾ ಸೃಷ್ಟಿಕಾರಣವಿಷಯವಾದ ಪ್ರಕರಣಸಮುದಾಯವು) ಲಿಂಗಂ=ವಿಷ್ಣು-ಆಕಾಶ-ಜೀವರಲ್ಲಿ ಸಾಧಾರಣವಾದ ಹೃತ್ಪದ್ಮಸ್ಥಿತತ್ವರೂಪವಾದ ಲಿಂಗವು, ಅನುಗ್ರಹಃ=ಜ್ಞಾನಿಸುಖ ವಿಷ್ಣು ಇವರಲ್ಲಿ ಸಾಧಾರಣವಾದ ಆನುಕೂಲ್ಯದಿಂದ ಗ್ರಹಣವು, ಪುನಃ=ಮತ್ತು, ಶಬ್ದಾಃ = ಈಶಾನಶಬ್ದ ವಜ್ರಶಬ್ದ ಜ್ಯೋತಿಶ್ಶಬ್ದ ಆಕಾಶಶಬ್ದ ಇವುಗಳು, ಲಿಂಗಶಬ್ದೌ=ಸ್ವಪ್ನಾದಿ ದರ್ಶನರೂಪವಾದ ಲಿಂಗ, ಬ್ರಾಹ್ಮಣಶಬ್ದ ಇವುಗಳು, ಇತಿ=ಈಪ್ರಕಾರ ಇಹ=ಈ ಮೂರನೇ ಪಾದದ ಅಧಿಕರಣಗಳಲ್ಲಿ, ದ್ವಿಸ್ಥಿತಾಃ=ಎರಡರಲ್ಲಿ ಇರುವ, (ಉಭಯ ಸಾಧಾರಣಗಳಾದ, ಅಂದರೆ ಅನೇಕಗಳಲ್ಲಿ ಇರತಕ್ಕ ಧರ್ಮಗಳು) ವಿಚಾರ್ಯಾಃ = ವಿಚಾರಾರ್ಹಗಳು

ತಾ ॥ (1) 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎನ್ನುವ ಪ್ರಥಮಾಧಿಕರಣದಲ್ಲಿ ದ್ಯುಭ್ವಾದ್ಯಾಯತನತ್ವರೂಪವಾದ ಸಾಧಾರಣವಾದ ಲಿಂಗವನ್ನು ವಿಚಾರಮಾಡತಕ್ಕದೆಂದು ಉಕ್ತವಾಯಿತು. ಆ ಲಿಂಗವು ಯಾವುದು? ಎಲ್ಲಿ ಸಾಧಾರಣವಾದುದು, ಹೇಗೆ ಸಾಧಾರಣವಾಗು

ವುದು? ಅನೇಕರಲ್ಲಿ ಸಾಧಾರಣವಾಗಿರುವುದಾದರೆ ಕೇವಲ ಶ್ರೀಹರಿಯ ವಿಷಯಕವು ಆಗುವುದು. ಹೇಗೆ ಎಂದರೆ ೧ "ಪ್ರಾಣಾನಾಂ ಗ್ರಂಥಿರಸಿ ರುದ್ರೋ ವೈ ಲೋಕಾಯತನಂ" ಎಲೋ ರುದ್ರನೇ ಇಂದ್ರಿಯಗಳಿಗೆ ಆಶ್ರಯನಾಗಿರುತ್ತಿ. ರುದ್ರನೇ ಸರ್ವಲೋಕಗಳಿಗೂ ಆಧಾರನು. ಇತ್ಯಾದಿ ವಾಕ್ಯಗಳದ್ದೆಶೆಯಿಂದ ಈ ಲಿಂಗವು ರುದ್ರನಲ್ಲಿರತಕ್ಕುದೆಂದು ಪ್ರತೀತವಾಗುತ್ತದೆ. ೨ "ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ" ಎಲೋ ಗೌತಮನೇ ಸರ್ವಜಗದಾಶ್ರಯನಾದ ವಾಯು ವಿನಿಂದ ಈ ಲೋಕವೂ ಪರಲೋಕವೂ ಎಲ್ಲಾ ಭೂತಗಳೂ ಸಂಗತಗಳಾಗಿಯೇ ಅಂದರೆ, ಅವನನ್ನು ಆಶ್ರಯಿಸಿಯೇ ಇರುತ್ತವೆ, ಇತ್ಯಾದಿ ಶ್ರುತಿಗಳದ್ದೆಶೆಯಿಂದ ವಾಯುವಿನಲ್ಲಿ ಇರತಕ್ಕು ದೆಂದು ತಿಳಿಯುತ್ತದೆ ೩ "ಸರ್ವೇ ವಾ ಏತೇ ಪ್ರಾಣಾಶ್ಚ ಪ್ರಾಣಿನಶ್ಚ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚಾಲೋಕಾಶ್ಚಾಲೋಕಿನಶ್ಚ ವಿಷ್ಣಾವೇವ ಓತಾಶ್ಚ ಪ್ರೋ ತಾಶ್ಚ ಭವಂತಿ" ಈ ಎಲ್ಲಾ ಇಂದ್ರಿಯಗಳೂ, ಜೀವರೂ, ದೇವತೆಗಳೂ, ಸ್ವರ್ಗಲೋಕದಲ್ಲಿರುವ ಕಲ್ಪತರು ಮೊದಲಾದ, ವಸ್ತುಗಳೂ ಭೂರಾದಿ ಲೋಕಗಳೂ, ಅಭಿಮಾನಿಗಳೂ, ಭೂರಾದಿ ಲೋಕಗಳದ್ದೆಶೆಯಿಂದ ಇತರಗಳಾದ ವೈಕುಂಠಾದಿಲೋಕಗಳೂ, ಅದರಲ್ಲಿರತಕ್ಕ ಮುಕ್ತರೂ ಎಲ್ಲರೂ ಶ್ರೀ ಹರಿಯಲ್ಲಿಯೇ ಆಶ್ರಿತರಾಗಿರುತ್ತಾರೆ. ಇತ್ಯಾದಿ ವಿಷ್ಣುವಿಷಯಕವಾಕ್ಯಗಳದ್ದೆಶೆ ಯಿಂದ ದ್ಯುಭ್ವಾದ್ಯಾಯತನತ್ವವು ನ್ಯಾಯಾನುಸಂಧಾನರಹಿತರಾದವರ ಮತದಿಂದ ರುದ್ರ ವಾಯು ಪ್ರಕೃತಿ ಜೀವ ವಿಷ್ಣು ಇವರಲ್ಲಿ ಸಾಧಾರಣವಾದ ಲಿಂಗವು. (2) 'ಭೂಮಾಸಂಪ್ರ ಸಾದಾದಧ್ಯುಪದೇಶಾತ್' ಎನ್ನುವ ಭೂಮಾಧಿಕರಣದಲ್ಲಿ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂದುಪಕ್ರಮಿಸಿ ಭೂಮನನ್ನು ಹೇಳಿರುವುದರಿಂದ ಭೂಮಶಬ್ದವು ಪ್ರಾಣವಿಷಯಕ ವಾಗಿಯೂ, 'ವಿಷ್ಣುರ್ವೈ ದೇವೇಭ್ಯೋ ಭೂಯಾನ್ ತಸ್ಮಾದ್ಭೂಯಾನ್ನಾಮ' 'ಪೂರ್ಣಮದಃ ಪೂರ್ಣಮಿದಂ' ಇತ್ಯಾದಿ ಶ್ರುತ್ಯಂತರ ಸಮಾಖ್ಯೆಯಿಂದ ವಿಷ್ಣುವಿಷಯಕವಾಗಿಯೂ ತೋರುವು ದರಿಂದ ಭೂಮಶಬ್ದವು ಅಜ್ಞರ (ನ್ಯಾಯಾನುಸಂಧಾನರಹಿತರಾದವರ) ಮತದಿಂದ ವಾಯು ವಿಷ್ಣುಗಳಲ್ಲಿ ಸಾಧಾರಣವಾದುದು ವಿಚಾರ್ಯವು (3) 'ಅಕ್ಷರಮಂಬರಾಂತಧೃತೇಃ' ಎನ್ನುವ ಅಕ್ಷರಾಧಿಕರಣದಲ್ಲಿ ಅವಿನಾಶಿತ್ವವು ಅಕ್ಷರಶಬ್ದಪ್ರವೃತ್ತಿನಿಮಿತ್ತವಾಗಿರುವುದರಿಂದಲೂ ಅಕ್ಷರ ಶಬ್ದವು ಅದರಲ್ಲಿ ಪ್ರಸಿದ್ಧವಾಗಿರುವುದರಿಂದಲೂ ಶ್ರೀ ವಿಷ್ಣುವಿಗೂ, ಚೇತನಪ್ರಕೃತಿಗೂ ಅವಿನಾಶಿ ತ್ವವು ಸಮಾನವಾಗಿರುವುದರಿಂದ ಅವರಿಬ್ಬರಲ್ಲಿ ಅಕ್ಷರಶಬ್ದವು ಸಾಧಾರಣವಾಗಿದೆ. (4) 'ಈಕ್ಷತಿ ಕರ್ಮವ್ಯಪದೇಶಾತ್ಸಃ' ಎನ್ನುವ ಸದಧಿಕರಣದಲ್ಲಿ ವಿಷ್ಣುವಿಗೂ ಪ್ರಕೃತಿಗೂ ಇಬ್ಬರಿಗೂ ಕಾರಣತ್ವವು ಸಮಾನವಾಗಿರುವುದರಿಂದ ವಿಷ್ಣುಪ್ರಕೃತಿಗಳಲ್ಲಿ ಸಾಧಾರಣವಾದ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಸೃಷ್ಟಿಸ್ಥಾನವು (ಸೃಷ್ಟ್ಯರ್ಥವಾಗಿ ಪ್ರಲಯಕಾಲದಲ್ಲಿರು ವಿಕೆಯು) ಅಥವಾ ಸೃಷ್ಟಿಕಾರಣವಿಷಯವಾದ ಪ್ರಕರಣಸಮುದಾಯವು ವಿಚಾರ್ಯವು. (5) 'ದಹರ ಉತ್ತರೇಭ್ಯಃ' ಎನ್ನುವ ದಹರಾಧಿಕರಣದಲ್ಲಿ ಹೃತ್ಪದ್ಮಸ್ಥಿತತ್ವರೂಪವಾದ ವಿಷ್ಣು ಆಕಾಶ ಜೀವರಲ್ಲಿ ಸಾಧಾರಣವಾದ ಲಿಂಗವು ವಿಚಾರ್ಯವು (6) ಅನುಕೃತೇಸ್ತಸ್ಯ ಚ ಎನ್ನುವ ಅನುಕೃತ್ಯಧಿಕರಣದಲ್ಲಿ ಜ್ಞಾನಿಸುಖ ವಿಷ್ಣು ಇವರಲ್ಲಿ ಸಾಧಾರಣವಾದ ಅನುಗ್ರಹವು. ಅಂದರೆ 'ಕಥಂ ನು ತದ್ವಿಜಾನೀಯಾಂ' ಯಾವ ಉಪಾಯದಿಂದ ನಾನು ತಿಳಿಯುವೆನು ಎಂದು ಜ್ಞಾನಕ್ಕಾಗಿ ಪ್ರಾರ್ಥಿತತ್ವರೂಪವಾದ ಆನುಕೂಲ್ಯದಿಂದ (ಅಭಿಲಷಿತಜ್ಞಾನತ್ವದಿಂದ ಗೃಹ್ಯ ಮಾಣತ್ವರೂಪವಾದ ಲಿಂಗವು ಜ್ಞಾನಿಸುಖವಿಷಯಕವೋ ಅಥವಾ ವಿಷ್ಣುವಿಷಯಕವೋ ಎಂದು ವಿಚಾರ್ಯವು. (7) 'ಶಬ್ದಾದೇವ ಪ್ರಮಿತಃ' ಎನ್ನುವ ವಾಮನಾಧಿಕರಣದಲ್ಲಿ ಈಶಾನಶಬ್ದವೂ

(10) 'ಕಂಪನಾತ್ ಎನ್ನುವ' ಕಂಪನಾಧಿಕರಣದಲ್ಲಿ ವಜ್ರಶಬ್ದವೂ (11) ಜ್ಯೋತಿರ್ದರ್ಶನಾತ್ ಎನ್ನುವ ಜ್ಯೋತಿರಧಿಕರಣದಲ್ಲಿ ಜ್ಯೋತಿಶ್ಶಬ್ದವೂ (12) ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್ ಎನ್ನುವ ಆಕಾಶಾಧಿಕರಣದಲ್ಲಿ ಆಕಾಶಶಬ್ದವೂ ಇವುಗಳು ವಿಚಾರ್ಯಗಳು. (8-9) ದೇವತಾಧಿಕರಣ ಅಪಶೂದ್ರಾಧಿಕರಣಗಳಿಗೆ ಸಮನ್ವಯವಿಷಯುಕತ್ವವು ಇಲ್ಲವೆಂದು ತಿಳಿಸುವುದಕ್ಕೋಸ್ಕರ ಆ ಅಧಿಕರಣಗಳ ವಿಷಯಗಳನ್ನು ಮೂಲದಲ್ಲಿ ತೋರಿಸಲಿಲ್ಲ. ಆದ ಪ್ರಯುಕ್ತವೇ ಪೂರ್ವೋತ್ತರಪಕ್ಷಗಳ ನ್ಯಾಯಗಳನ್ನು ಹೇಳಲಿಲ್ಲ ಈ ಅಧಿಕರಣಗಳಲ್ಲಿ ವೇದವಿದ್ಯಾಧಿಕಾರವು ದೇವತೆಗಳಿಗೆ ಉಂಟೆಂದು ದೇವತಾಧಿಕರಣದಲ್ಲಿಯೂ ಶೂದ್ರರಿಗೆ ವೇದ ವಿದ್ಯಾಧಿಕಾರವಿಲ್ಲವೆಂದು ಅಪಶೂದ್ರಾಧಿಕರಣದಲ್ಲಿಯೂ ವಿಷಯವೆಂದು ತಿಳಿಯತಕ್ಕದ್ದು. (13) 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎನ್ನುವ ಸುಷುಪ್ತ್ಯಧಿಕರಣದಲ್ಲಿ ವಿಷ್ಣುಜೀವರಲ್ಲಿ ಸಾಧಾರಣವಾದ ಸ್ವಪ್ನಾದಿ ದರ್ಶನರೂಪವಾದ ಲಿಂಗವು ಜೀವನಿಗೋ ವಿಷ್ಣುವಿಗೋ ಎಂದು ವಿಚಾರಮಾಡತಕ್ಕದು. (14) ಪತ್ಯಾದಿ ಶಬ್ದೇಭ್ಯಃ ಎನ್ನುವ ಬ್ರಾಹ್ಮಣಾಧಿಕರಣದಲ್ಲಿ ನಿತ್ಯ ಮಹಿಮತ್ವ ಲಿಂಗದಿಂದಲೂ 'ಅಜಃ' ಎನ್ನುವ ಶ್ರುತಿಯಿಂದಲೂ ವಿಷ್ಣು ವಿರಿಂಚರಲ್ಲಿ ಸಾಧಾರಣ ವಾದ ಬ್ರಾಹ್ಮಣಶಬ್ದವು ವಿಚಾರ್ಯವು ಈ ಪ್ರಕಾರ ಈ ಅಧಿಕರಣಗಳಲ್ಲಿ ಎರಡುಎರಡರಲ್ಲಿರುವ (ಉಭಯಸಾಧಾರಣಗಳಾದ) ಲಿಂಗಾದಿಗಳು ವಿಚಾರ್ಯಗಳು ॥ ೭ ॥

ಉಭಯತ್ರ ಪ್ರಸಿದ್ಧಗಳಾದ ನಾಮಾತ್ಮಕ ಲಿಂಗಾತ್ಮಕ ಶಬ್ದಗಳಿಗೆ ಸಮನ್ವಯವನ್ನು ಮಾಡುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ. ಆದರೆ ಈ ಪಾದದಲ್ಲಿರತಕ್ಕ ಎಲ್ಲಾ ಅಧಿಕರಣಗಳನ್ನು ವ್ಯಾಖ್ಯಾನ ಮಾಡದಿರುವುದರಿಂದ 'ವ್ಯಾಖ್ಯಾಂ ಕರೋಮ್ಯಸ್ಯಪಿ' ಎನ್ನುವ ಪ್ರತಿಜ್ಞೆಯು ನಿಷ್ಫಲವಾಗುವುದು ಎಂದರೆ ಪೂರ್ವೋತ್ತರ ಪಕ್ಷಗಳ ಯುಕ್ತಿಗಳನ್ನು ಹೇಳಿದ ರಿಂದಲೇ ಎಲ್ಲಾ ಅಧಿಕರಣಗಳನ್ನು ವ್ಯಾಖ್ಯಾನ ಮಾಡಿದಂತೆಯೇ ಆಯಿತೆಂದು ತಿಳಿಯುತ್ತಾ ಶ್ರೀಮದಾಚಾರ್ಯರು ಈ ಪಾದದಲ್ಲಿರತಕ್ಕ ಅಧಿಕರಣಗಳ ಪೂರ್ವಪಕ್ಷನ್ಯಾಯಗಳನ್ನು ಸಂಗ್ರಹಿಸಿ ಹೇಳುತ್ತಾರೆ

**ಮೂ ॥ ಬಾಹುಲ್ಯಂ ಲಿಂಗಶಬ್ದಾನಾಮನುಕ್ತಿಶ್ಚ ವಿರುದ್ಧತಾ ।**
**ಅದೃಷ್ಟಿರನ್ವಯಾಭಾವೋ ವಿಪರೀತಶ್ರುತಿಭ್ರಮಃ ॥ ೮ ॥**
**ಲಿಂಗಾವಕಾಶರಾಹಿತ್ಯಭ್ರಮಃ ಸ್ಯಾದ್ದೃಗ್ದ್ವಯಂ ತಥಾ ।**
**ಬಹುತಾದ್ಯುಕ್ತ್ಯಮುಕ್ತಸ್ಯ ವಿರೋಧೋಽರ್ಥಾಂತ್ತಥಾ ಗತಿಃ ।**
**ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ॥ ೯ ॥**

ಅ ॥ (೧) ಲಿಂಗಶಬ್ದಾನಾಂ = ದ್ಯುಪೃಥಿವ್ಯಾದ್ಯಾಶ್ರಯತ್ವಾದಿ ಲಿಂಗಗಳಿಗೆ ಅಥವಾ ಲಿಂಗ ಪ್ರತಿಪಾದಕ ಶಬ್ದಗಳಿಗೆ (ರುದ್ರಾದಿವಿಷಯುಕತ್ವವಿದೆ ಎನ್ನುವಲ್ಲಿ ಶ್ರುತ್ಯಂತರದಲ್ಲಿ 'ಅಂತಕಃ ಕೃತ್ತಿವಾಸಾಃ ಪಿನಾಕೀ' ಎಂದು ಹೇಳಿದ ಲಿಂಗವೂ ರುದ್ರಾದಿಶಬ್ದವೂ ಇವುಗಳಿಗೆ, ಬಾಹುಲ್ಯಂ=ಆಧಿಕ್ಯವು (ಹೇತುವು) (೨) ಅನುಕ್ತಿಶ್ಚ=(ಪ್ರಾಣನದ್ದೇಶೆಯಿಂದ ಮತ್ತೊಬ್ಬ ಶ್ರೇಷ್ಠನನ್ನು ಹೇಳದಿರುವಿಕೆಯು, (೩) ವಿರುದ್ಧತಾ=('ನ ತದಶ್ನಾತಿ ಕಿಂಚನ' ಎಂದು ಹೇಳಿದ ಅನಶನಕ್ಕೆ ಸರ್ವಾತ್ತೃತ್ವದಿಂದ) ವಿರೋಧವು (೪) ಅದೃಷ್ಟಿಃ=(ಅತ್ಯಂತ ಭಿನ್ನನಾದ ಶ್ರೀ ವಿಷ್ಣುವಿಗೆ ಪ್ರಪಂಚರೂಪದಿಂದ ಪರಿಣಾಮವು) ಕಾಣದಿರುವಿಕೆಯು, (೫) ಅನ್ವಯಾಭಾವಃ= ('ತಸ್ಮಿನ್ ಯದಂತಃ' ಎನ್ನುವ ವಾಕ್ಯದಿಂದ 'ಯಾವಾನ್ವಾ ಅಯಮಾಕಾಶಃ' ಎನ್ನುವ

ವಾಕ್ಯಕ್ಕೆ) ಅನ್ವಯವಿಲ್ಲದಿರುವಿಕೆಯು. (೮) ವಿಪರೀತಶ್ರುತಿಭ್ರಮಃ=('ತದೇತದಿತಿ ಮನ್ಯಂತೇ' ಎನ್ನುವಲ್ಲಿ ತತ್ ಏತತ್ ಶಬ್ದಗಳಿಂದಲೂ 'ಕಥಂ ನು ತದ್ವಿಜಾನೀಯಾಂ' ಎನ್ನುವಲ್ಲಿ ತತ್‌ಶಬ್ದ ದಿಂದಲೂ 'ತೇಷಾಂ ಸುಖಂ ಶಾಶ್ವತಂ' ಎಂದು ಹೇಳಿದ ಜ್ಞಾನಿಸುಖವನ್ನೇ ಇಟ್ಟುಕೊಳ್ಳಬೇಕು. 'ಏಕೋ ವಶೀ ಇತ್ಯಾದಿಗಳಿಂದ ಪ್ರಕೃತನಾದ ಆತ್ಮನನ್ನು ಇಟ್ಟುಕೊಳ್ಳುವುದಲ್ಲ' ಎಂದು) ವಿಪರೀತಶ್ರುತಿಯೇ (ಪೂರ್ವಪಕ್ಷಯುಕ್ತಿಯು.) ಪೂರ್ವಪಕ್ಷಕಾರನ ಗ್ರಹಿಕೆಯು ಭ್ರಾಂತಿಯು. (೯) ಲಿಂಗಾವಕಾಶರಾಹಿತ್ಯಭ್ರಮಃ='ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವಾದಿ ಲಿಂಗಗಳಿಗೆ ಪ್ರಾಣನಿಂದ ಇತರನಾದ ವಿಷ್ಣುವಿನಲ್ಲಿ ಅವಕಾಶವಿಲ್ಲನೆಂದು ಪೂರ್ವಪಕ್ಷಯುಕ್ತಿಯು. ಈ ಪೂರ್ವಪಕ್ಷಿಯ ಗ್ರಹಿಕೆಯು ಭ್ರಮವು. (೧೦) ದ್ವಯಂ=ವಜ್ರಶಬ್ದವೂ ಉದ್ಯತತ್ವಲಿಂಗವೂ ಇವೆರಡು, ತಾದೃಕ್=ಇಂದ್ರಾಯುಧದಿಂದ ಇತರನಾದ ಪರಮಾತ್ಮನಲ್ಲಿ ಅವಕಾಶ ಇಲ್ಲದಿರುವುದು. (೧೧) ತಥಾ=ಹಾಗೆಯೇ, ಬಹು ತಾದೃಕ್ತ್ವಂ=ಆದಿತ್ಯಾದಿ ಜ್ಯೋತಿಷ್ಟ್ವವೂ ಉಭಯಲೋಕಸಂಚರಣವೂ 'ಆದಿತ್ಯೇನೈವಾಯಂ ಜ್ಯೋತಿಷಾ' ಎನ್ನುವ ಅವಧಾರಣವು ಇತ್ಯಾದ್ಯನೇಕ ಜೀವಲಿಂಗಗಳಿಗೆ ಜೀವನಿಂದ ಇತರನಾದ ಪರಮಾತ್ಮನಲ್ಲಿ ಅವಕಾಶವಿಲ್ಲವು. (೧೨) ಉಕ್ತಸ್ಯ ವಿರೋಧಃ=ವೈ ನಾಮ ಎನ್ನುವ ಪ್ರಸಿದ್ಧಿ ಯನ್ನು ತೋರಿಸಿಕೊಡುವ ಎರಡು ನಿಪಾತಗಳಿಂದ ಕೂಡಿಕೊಂಡ ಶ್ರುತಿಯಲ್ಲಿ ಪ್ರಯುಕ್ತವಾದ ಆಕಾಶಶಬ್ದಾರ್ಥಕ್ಕೆ (ರೂಢಿಯನ್ನು ಬಿಟ್ಟು ವಿಷ್ಣುರೂಪವಾದ ಯೌಗಿಕವಾದ ಅರ್ಥವನ್ನು ಸ್ವೀಕರಿಸಿದರೆ) ವಿರೋಧವು. (೧೩) ಅರ್ಥಾತ್ ತಥಾ ಗತಿಃ=ಜೀವೇಶ್ವರರಿಗೆ ಅಭೇದವಿದ್ದರೆ ಈಶ್ವರನನ್ನು ಹೇಳಿದರೂ ಅರ್ಥಾತ್ ಜೀವನೇ ಹೇಳಲ್ಪಡುತ್ತಾನೆ. ಈ ಪ್ರಕಾರವಾದ ಅರ್ಥ ದೃಷ್ಟಿಯಿಂದ ಹಾಗೆ ತಿಳಿಯುತ್ತದೆ. ಅಥವಾ ಅರ್ಥಾತ್=ಅಸಂಗತ್ವ ಸ್ವಪ್ನಾದಿದ್ರಷ್ಟೃತ್ವರೂಪ ಗಳಾದ ಎರಡು ವಿಶೇಷಣಗಳಿಗೆ ಸಾಮಾನಾಧಿಕರಣ್ಯವು ಅನ್ಯಥಾನುಪಪನ್ನವಾಗಿ ತಥಾ= ಜೀವೇಶ್ವರರಿಗೆ ಭೇದವಿಲ್ಲವೆಂದು, ಗತಿಃ ತಿಳಿಯುತ್ತದೆ. (೧೪) ಅರ್ಥಾತ್ ತಥಾಗತಿಃ= ಬ್ರಾಹ್ಮಣಶಬ್ದವು ಪಾಪಾದ್ಯಲೇಪರೂಪಲಿಂಗ ಇವುಗಳಿಗೆ ಚತುರ್ಮುಖನಿಂದ ಕೂಡಿಕೊಂಡು ಪರಮಾತ್ಮನಿಗೆ ಅಭೇದವಿಲ್ಲದೆ ಅವಕಾಶವಿಲ್ಲ ಎನ್ನುವ ಅರ್ಥದೃಷ್ಟಿಯಿಂದ ಅಭೇದವು ಪ್ರಾಪ್ತ ವಾಗುತ್ತದೆ. ಇತಿ ಸಮಸ್ತಮೇತತ್=ಈ ಪ್ರಕಾರವಾಗಿ ಇವೆಲ್ಲವೂ ಸಮಾನವು. ಅಂದರೆ— ಪೂರ್ವಾಧಿಕರಣದಂತೆ ಇಲ್ಲಿಯೂ ಶ್ರುತ್ಯುಕ್ತಗಳಾದ ಲಿಂಗಶಬ್ದಗಳ ಸಾಮಾನಾಧಿಕರಣ್ಯಕ್ಕೆ ಆಕ್ಷೇಪಕತ್ವವೂ ವಿರಿಂಚರೂಪ ಜೀವೇಶ್ವರಾಭೇದಕ್ಕೆ ಆಕ್ಷೇಪ್ಯತ್ವವೂ ವಿರಿಂಚನೇ ಎನ್ನುವ ನಿರ್ಬಂಧಕ್ಕೆ ಕಾರಣವಿರುವಿಕೆಯೂ ಇವೆಲ್ಲವೂ ಸಮಾನವೇ ಆಗಿದೆ. ಅಥವಾ ಇತಿ ಸಮಸ್ತ ಮೇತತ್=ಈ ಪ್ರಕಾರ 'ಉಕ್ತಸ್ಯ ವಿರೋಧಃ' ಇತ್ಯಾದಿಗಳನ್ನಾರಂಭಿಸಿ 'ಬಾಹುಲ್ಯಂ ಲಿಂಗ ಶಬ್ದಾನಾಂ' ಎನ್ನುವ ಪರ್ಯಂತ ಹನ್ನೆರಡು ನ್ಯಾಯ (ಯುಕ್ತಿ)ಗಳು. ಅತ್ರ=ಈ ಅಧಿಕರಣ ದಲ್ಲಿರತಕ್ಕ, ಪೂರ್ವಪಕ್ಷಗಳಲ್ಲಿ, ಯುಕ್ತಯಃ=ನ್ಯಾಯಗಳು.

ತಾ || (1) ೧ನೇ ದ್ಯುಭ್ವಾದ್ಯಾಯತನತ್ವಾಧಿಕರಣದಲ್ಲಿ ಯಸ್ಮಿನ್ ದ್ಯೌಃ ಎನ್ನುವ ವಾಕ್ಯದಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವವು ಶ್ರೀ ವಿಷ್ಣುವಿಗೋ, ರುದ್ರಾದಿಗಳಿಗೋ ಎಂದು ವಿಷ್ಣು ರುದ್ರ ವಾಯ್ವಾದಿಪ್ರಾಪಕವಾದ ಶ್ರುತಿಯಿಂದ ಸಂಶಯವು ಬರಲು ರುದ್ರಾದಿಗಳಿಗೇನೇ ಎಂದು ಪೂರ್ವಪಕ್ಷವು, ವಿಷ್ಣುವಿಗೇನೇ ಎಂದು ಸಿದ್ಧಾಂತವು, '**ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ** ಇತ್ಯಾದಿ ವಿಷಯವಾಕ್ಯದಲ್ಲಿ ಪ್ರತಿಪಾದಿತಗಳಾದ ದ್ಯುಪೃಥಿವ್ಯಾ ದ್ಯಾಶ್ರಯತ್ವಾದಿ ಲಿಂಗಗಳು ರುದ್ರಾದಿಗಳಲ್ಲಿ ಇರತಕ್ಕುದು ಎನ್ನುವ ಪೂರ್ವಪಕ್ಷದಲ್ಲಿ **'ಪ್ರಾಣಾನಾಂ ಗ್ರಂಥಿರಸಿ, ರುದ್ರೋಮಾವಿಶಾಂತಕಃ ಪ್ರಾಣೇಶ್ವರಃ ಕೃತ್ತಿವಾಸಾಃ**

ಪಿನಾಕೀ ಮನೋ ವೈ ರುದ್ರಃ ಓತಂ ಚ ಪ್ರೋತಂ ಚ ರುದ್ರೋ ನಾವಲೋಕಾಧಾರಃ' ಇತ್ಯಾದಿ ಶ್ರುತ್ಯಂತರಗಳಲ್ಲಿ 'ಅಂತಕಃ ಕೃತ್ತಿವಾಸಾಃ ಪಿನಾಕೀ' ಎಂದು ಹೇಳಲ್ಪಟ್ಟ ಲಿಂಗಗಳೂ ರುದ್ರಮೊದಲಾದ ಶಬ್ದಗಳ ಬಾಹುಲ್ಯವೂ ಹೇತುವೆಂದು ಇಟ್ಟುಕೊಳ್ಳಬೇಕು. ತಥಾ ಚ 'ಪ್ರಾಣಾನಾಂ ಗ್ರಂಥಿರಸಿ' ಇತ್ಯಾದಿವಾಕ್ಯೋಕ್ತಂ ಪ್ರಾಣಾಧಾರತ್ವಂ ರುದ್ರಾದಿನಿಷ್ಠಂ ರುದ್ರಾದ್ಯಸಾಧಾರಣಾಂತಕತ್ವಾದಿ ಲಿಂಗಶಬ್ದಸಮಭಿವ್ಯಾಹಾರಾತ್= 'ಪ್ರಾಣಾನಾಂ ಗ್ರಂಥಿರಸಿ' ಇದು ಮೊದಲಾದ ವಾಕ್ಯಗಳಲ್ಲಿ ಹೇಳಲ್ಪಟ್ಟ ಪ್ರಾಣಾಧಾರತ್ವವು ರುದ್ರಾದಿಗಳಲ್ಲಿರತಕ್ಕದ್ದು, ರುದ್ರಾದ್ಯಸಾಧಾರಣವಾದ ಅಂತಕತ್ವಾದಿಲಿಂಗ ರುದ್ರಾದಿ ಶಬ್ದಗಳ ಸಮಭಿವ್ಯಾಹಾರದ್ದೆಸೆಯಿಂದ, ಅಂತೂ ಅದರ ಸಮಾಖ್ಯೆಯಿಂದ 'ಯಸ್ಮಿನ್ ದ್ಯೌಃ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ದ್ಯುಭ್ವಾಧಾರತ್ವವೂ ರುದ್ರಾದಿಗಳಲ್ಲಿರತಕ್ಕುದೇ. ಹೀಗೆಯೇ ವಾಯ್ವಾದಿ ಶ್ರುತಿಲಿಂಗಗಳ ಬಾಹುಲ್ಯದಿಂದ ದ್ಯುಭ್ವಾದ್ಯಾಧಾರತ್ವವು ವಾಯ್ವಾದಿಗಳಲ್ಲಿ ಇರತಕ್ಕದ್ದೆಂದು ನ್ಯಾಯವಿವರಣದಲ್ಲಿ ಹೇಳಿದ ರೀತಿಯಿಂದ ತಿಳಿಯತಕ್ಕದು. (2) ೨ನೇ ಭೂಮಾಧಿಕರಣದಲ್ಲಿ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂದು ಹೇಳಿ 'ಯೋ ವೈ ಭೂಮಾ ತತ್ಸುಖಂ' ಎಂದು ಹೇಳಿದ ಭೂಮನು 'ಪ್ರಾಣೋ ವಾ ಆಶಾಯಾ ಭೂಯಾನ್' ಎಂದು ಉಪಕ್ರಮ 'ವಿಷ್ಣುರ್ವೈ ದೇವೇಭ್ಯೋ ಭೂಯಾನ್ ತಸ್ಮಾದ್ಭೂಯಾನ್ನಾಮ' ಎನ್ನುವ ಸಮಾಖ್ಯಾಶ್ರುತಿ ಇವುಗಳಿಂದ ಮುಖ್ಯ ವಾಯುವೋ, ವಿಷ್ಣುವೋ ಎಂದು ಸಂದೇಹವು ಹುಟ್ಟಲು ನಾಮವಾಗಾದಿಗಳ ತಾರತಮ್ಯವನ್ನು ಆಶಾ (ಭಾರತೀ) ಪರ್ಯಂತ ಹೇಳಿ 'ಪ್ರಾಣೋ ವಾ ಆಶಾಯಾ ಭೂಯಾನ್' ಭಾರತಿಯುದ್ದೆಶೆಯಿಂದ ಪ್ರಾಣನು ಶ್ರೇಷ್ಠನು ಎಂದು ಹೇಳಿ, ಪ್ರಾಣನದ್ದೆಶೆಯಿಂದ ಮತ್ತೊಬ್ಬ ಶ್ರೇಷ್ಠನನ್ನು ಹೇಳದಿರುವುದರಿಂದ ಮುಖ್ಯ ವಾಯುವೇ ಎಂದು ಪೂರ್ವಪಕ್ಷವು. ವಿಷ್ಣುವೆಂದು ಸಿದ್ಧಾಂತವು. ಅಂತೂ ಪ್ರಾಣನದ್ದೆಶೆಯಿಂದ ಶ್ರೇಷ್ಠನೊಬ್ಬನನ್ನು ಹೇಳದಿರುವುದೇ ಅನುಕ್ತಿಯೆನ್ನುವ ಪೂರ್ವಪಕ್ಷಯುಕ್ತಿಯು. (3) ೩ನೇ ಅಕ್ಷರಾಧಿಕರಣದಲ್ಲಿ 'ತದ್ವಾ ಏತದಕ್ಷರಂ ಗಾರ್ಗಿ' ಎಂದು ಹೇಳಲ್ಪಟ್ಟ ಅಕ್ಷರವು - ಈ ಅಕ್ಷರಶಬ್ದಪ್ರವೃತ್ತಿನಿಮಿತ್ತವಾದ ಅವಿನಾಶಿತ್ವವು ಚೇತನಪ್ರಕೃತಿ ವಿಷ್ಣು ಇಬ್ಬರಲ್ಲಿಯೂ ಸಮಾನವಾಗಿರುವುದರಿಂದ ಚೇತನಪ್ರಕೃತಿಯೋ ವಿಷ್ಣುವೋ ಎಂದು ಸಂದೇಹವು ಬರಲು ಚೇತನಪ್ರಕೃತಿಯೇ ಎಂದು ಪೂರ್ವಪಕ್ಷವು - ವಿಷ್ಣುವೇ ಎಂದು ಸಿದ್ಧಾಂತವು. ಹೇಗೆಂದರೆ— ಈ ಅಕ್ಷರನಿಗೆ ವಿಷ್ಣುತ್ವವಿದ್ದರೆ ಈ ಅಕ್ಷರನಿಗೇನೇ 'ನ ತದಶ್ನಾತಿ ಕಿಂಚನ' ಎಂದು ಹೇಳಿದ ಅನಶನಕ್ಕೆ 'ಅತ್ತಾ ಚರಾಚರಗ್ರಹಣಾತ್' ಎಂದು ವಿಷ್ಣುವಿಗೆ ಸರ್ವಾತ್ತೃತ್ವವನ್ನು ಹೇಳಿರುವುದರಿಂದ ವಿರೋಧವು ಬರುವುದೆನ್ನುವುದೇ ವಿರುದ್ಧತಾ ಎನ್ನುವ ಪೂರ್ವಪಕ್ಷಯುಕ್ತಿಯು. ಆದಕಾರಣ ಚೇತನಪ್ರಕೃತಿಯೇ ಎಂದು ಪೂರ್ವಪಕ್ಷವು. (4) ೪ನೇ ಸದಧಿಕರಣದಲ್ಲಿ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಸೃಷ್ಟಿಸ್ಥಾನದಲ್ಲಿರತಕ್ಕ ಸತ್ ಶಬ್ದವಾಚ್ಯವಾದುದು ಕಾರಣತ್ವವು ಎರಡರಲ್ಲಿಯೂ ಸಮಾನವಾಗಿರುವುದರಿಂದ ಪ್ರಧಾನವೋ (ಜಡಪ್ರಕೃತಿಯೋ) ವಿಷ್ಣುವೋ ಎಂದು ಸಂದೇಹವು ಬರಲು ಪ್ರಧಾನವೇ ಎಂದು ಪೂರ್ವಪಕ್ಷವು. ಏಕೆಂದರೆ—'ಬಹು ಸ್ಯಾಂ ಪ್ರಜಾಯೇಯ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಪಂಚರೂಪವಾಗಿ ಪರಿಣಾಮವು ಪ್ರಪಂಚದಿಂದ ಅತ್ಯಂತ ಭಿನ್ನನೆಂದು ಪ್ರಮಿತನಾದ ನಿರ್ವಿಕಾರನಾದ ವಿಷ್ಣುವಿಗೆ ಕಾಣಲಿಲ್ಲ. ಅಥವಾ ವಿಕಾರಿ ಕಾರಣದಿಂದ ಭಿನ್ನನಾದ ವಿಷ್ಣುವಿಗೆ ಪ್ರಪಂಚರೂಪದಿಂದ ಪರಿಣಾಮವು ಕೂಡುವುದಿಲ್ಲ. ಆದಪ್ರಯುಕ್ತ ವಿಷ್ಣುವೆನ್ನುವ ಪಕ್ಷವು ಕೂಡದಿರುವುದರಿಂದ ಪ್ರಧಾನದಲ್ಲಿ ಹಿಂದೆ ಹೇಳಿದ ದೋಷಗಳು ಬಾರದಿರುವುದರಿಂದ ಪ್ರಧಾನವೇ ಸತ್ ಶಬ್ದದಿಂದ ವಾಚ್ಯವೆಂದು ಪೂರ್ವಪಕ್ಷವು. ಇಲ್ಲಿ ವಿಷ್ಣುವಿಗೆ ಪ್ರಪಂಚರೂಪದಿಂದ ಪರಿಣಾಮ ಕಾಣದಿರುವಿಕೆ ಎನ್ನುವ

ಅದೃಷ್ಟಿಯೇ ಪೂರ್ವಪಕ್ಷಯುಕ್ತಿಯು. (5)೫ನೇ ದಹರಾಧಿಕರಣದಲ್ಲಿ 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ' ಇದುಮೊದಲಾದ ವಾಕ್ಯಗಳಲ್ಲಿ ಹೇಳಲ್ಪಟ್ಟ ಹೃತ್ಪದ್ಮಸ್ಥತ್ವವು ಆಕಾಶಕ್ಕೋ, ವಿಷ್ಣುವಿಗೋ ಎಂದು ಸಂಶಯವು ಹುಟ್ಟಲು, ಆಕಾಶಕ್ಕೇನೇ ಎಂದು ಪೂರ್ವಪಕ್ಷವು. ಏಕೆಂದರೆ— 'ದಹರೋಽಸ್ಮಿನ್ನಂತರ ಆಕಾಶಃ ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ' ಎಂದು ಅನ್ವೇಷ್ಟವ್ಯ (ಹುಡುಕಲಿಕ್ಕೆ ಅರ್ಹ)ವೆಂದು ಹೇಳಲ್ಪಟ್ಟ ದಹರಾಕಾಶಸ್ಥ ವಸ್ತುವು ಶ್ರೀ ವಿಷ್ಣುವೆಂದು ಅಂಗೀಕರಿಸಿದರೆ 'ತಸ್ಮಿನ್ ಯದಂತಃ' ಎನ್ನುವುದಕ್ಕೆ ಸಮಾನಾರ್ಥಕವಾದ 'ಕಿಂ ತದತ್ರ ವಿದ್ಯತೇ' ಎನ್ನುವ ಪ್ರಶ್ನೆಗೆ 'ಬ್ರಹ್ಮವಿದ್ಯತೇ' ಬ್ರಹ್ಮನು ಇದ್ದಾನೆ ಎನ್ನುವ ಪರಿಹಾರವಾಕ್ಯವನ್ನು ಹೊರತು 'ತಾವಾನೇಷೋಽಂತರ್ಹೃದಯ ಆಕಾಶಃ' ಎಂದು ಹೇಳಿದ ಪರಿಹಾರವಾಕ್ಯಕ್ಕೆ ಅನ್ವಯವಿರುವುದಿಲ್ಲವೆನ್ನುವ ಅನ್ವಯಾಭಾವವೇ ಪೂರ್ವಪಕ್ಷಯುಕ್ತಿಯು. ತಥಾಹಿ ವಿಷ್ಣುವೆಂದು ಇಟ್ಟುಕೊಂಡರೆ ಅನ್ವಯವು ಕೂಡುವುದಿಲ್ಲ. ಆಕಾಶವೆಂದು ಇಟ್ಟುಕೊಂಡರೆ ಅನ್ವಯವು ಕೂಡುವುದರಿಂದ ಆಕಾಶವೇ ಹೃತ್ಪದ್ಮದಲ್ಲಿ ಇರತಕ್ಕದೆಂದು ಪೂರ್ವಪಕ್ಷವು (6)೬ನೇಅನುಕೃತ್ಯಧಿಕರಣದಲ್ಲಿ 'ಕಥಂ ನು ತದ್ವಿಜಾನೀಯಾಂ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಆನುಕೂಲ್ಯದಿಂದ ಗೃಹ್ಯಮಾಣತ್ವವು, ಸುಖಶಬ್ದವು ಜ್ಞಾನಿಸುಖ ವಿಷ್ಣು ಇಬ್ಬರಲ್ಲಿ ಸಾಧಾರಣವಾಗಿರುವುದರಿಂದ ಜ್ಞಾನಿಸುಖಕ್ಕೋ, ವಿಷ್ಣುವಿಗೋ ಎಂದು ಸಂಶಯವು ಹುಟ್ಟಲು ಜ್ಞಾನಿಸುಖಕ್ಕೇನೇ ಎಂದು ಪೂರ್ವಪಕ್ಷವು. ಏಕೆಂದರೆ— 'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ' ಎನ್ನುವಲ್ಲಿ ತತ್ ಏತತ್ ಶಬ್ದಗಳಿಂದ 'ಕಥಂ ನು ತದ್ವಿಜಾನೀಯಾಂ' ಎನ್ನುವಲ್ಲಿ ತತ್ ಶಬ್ದದಿಂದಲೂ 'ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ' ॥ ಎಂದು ಹೇಳಿದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಿಕೊಳ್ಳಬೇಕು. 'ಏಕೋ ವಶೀ' ಇತ್ಯಾದಿಗಳಿಂದ ಪ್ರಕೃತನಾದ ಆತ್ಮನನ್ನು ಪರಾಮರ್ಶ ಮಾಡಕೂಡದು. ಹೀಗೆ ವಿಪರೀತ ಶ್ರುತಿಯೇ ಪೂರ್ವಪಕ್ಷಯುಕ್ತಿಯು. ಪೂರ್ವಪಕ್ಷಿಯ ಗ್ರಹಿಕೆಗೆ ಭ್ರಮತ್ವವಿದ್ದುದರಿಂದ ಎರಡು ಕಡೆಗಳಲ್ಲಿಯೂ ಭ್ರಮಪದಪ್ರಯೋಗವು. (7) ೭ನೇ ವಾಮನಾಧಿಕರಣದಲ್ಲಿ 'ಈಶಾನೋ ಭೂತಭವ್ಯಸ್ಯ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಈಶಾನನು ಮುಖ್ಯವಾಯುವೋ, ವಿಷ್ಣುವೋ ಎಂದು ಪ್ರೇರಕತ್ವವು ಸಮಾನವಾಗಿರುವುದರಿಂದ ಸಂಶಯವು ಬರಲು ಮುಖ್ಯ ವಾಯುವೇ ಎಂದು ಪೂರ್ವಪಕ್ಷವು. ಹೇಗೆಂದರೆ— 'ಈಶಾನೋ ಭೂತಭವ್ಯಸ್ಯ' ಎನ್ನುವ ವಿಷಯವಾಕ್ಯದ ಶೇಷರೂಪವಾದ 'ಊರ್ಧ್ವಂ ಪ್ರಾಣಮುನ್ನಯತಿ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವ, ಮಧ್ಯಮತ್ವ, ಸರ್ವದೇವೋಪಾಸ್ಯತ್ವ ಲಿಂಗಗಳು 'ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ಪೃಥಗೇವ ಸನ್ನಿಧತ್ತೇ' 'ಯೋಽಯಂ ಮಧ್ಯಮಃ ಪ್ರಾಣಃ' 'ಕುವಿದಂಗ ನಮಸಾ' ಇತ್ಯಾದಿ ವಾಕ್ಯಾನುಸಾರವಾಗಿ ಮುಖ್ಯಪ್ರಾಣನದ್ದೆಶೆಯಿಂದ ಭಿನ್ನನಾದ ವಿಷ್ಣುವಿನಲ್ಲಿ ಅವಕಾಶವನ್ನು ಹೊಂದಲಾರವು ಎಂದು ಪೂರ್ವಪಕ್ಷಯುಕ್ತಿಯು. ಹಿಂದಿನಂತೆ ಪೂರ್ವಪಕ್ಷಿಯ ಗ್ರಹಿಕೆಗೆ ಭ್ರಮತ್ವವಿದ್ದುದರಿಂದ 'ಲಿಂಗಾವಕಾಶರಾಹಿತ್ಯಭ್ರಮಃ' ಎಂದು ಭ್ರಮಪದಪ್ರಯೋಗವು. ಅಂತೂ ಮುಖ್ಯಪ್ರಾಣನದ್ದೆಶೆಯಿಂದ ಬೇರೆಯವರಲ್ಲಿ ಅವಕಾಶವಿಲ್ಲದಿರುವ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳ ಸಮುದಾಯದ್ದೆಶೆಯಿಂದ ಈಶಾನನು ಮುಖ್ಯ ವಾಯುವೇ ಎಂದು ಪೂರ್ವಪಕ್ಷವು. ಇಲ್ಲಿ ಲಿಂಗಾವಕಾಶರಾಹಿತ್ಯವೇ ಯುಕ್ತಿಯು. (10) ೧೦ನೇ ಕಂಪನಾಧಿಕರಣದಲ್ಲಿ 'ಮಹದ್ಭಯಂ ವಜ್ರಮುದ್ಯತಂ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ವಜ್ರವು ಇಂದ್ರಾಯುಧವೋ ಅಥವಾ

ವಿಷ್ಣುವೋ ಎಂದು ಪ್ರಸಿದ್ಧಿ ಲಿಂಗಗಳದ್ದೆಶೆಯಿಂದ ಸಂಶಯುವು ಬರಲು, ಇಂದ್ರಾಯುಧದ್ದೆಶೆ
ಯಿಂದ ಭಿನ್ನನಾದ ವಿಷ್ಣುವಿನಲ್ಲಿ ಅವಕಾಶವಿಲ್ಲದಿರುವ ಶ್ರುತಿಲಿಂಗಗಳದ್ದೆಶೆಯಿಂದ ವಜ್ರಶಬ್ದ
ವಾಚ್ಯವಾದುದು ಇಂದ್ರಾಯುಧವೇ ಪರಮಾತ್ಮನಲ್ಲಿ ವಜ್ರಶ್ರುತಿಗೂ ಉದ್ಯತತ್ವ ಲಿಂಗಕ್ಕೂ
ಅವಕಾಶವಿಲ್ಲವೆನ್ನುವ ತಾದೃಗ್ದ್ವಯವೇ ಪೂರ್ವಪಕ್ಷಯುಕ್ತಿಯು.(11)೧೧ನೇ ಜ್ಯೋತಿರಧಿಕರಣ
ದಲ್ಲಿ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ' ಎನ್ನುವ ವಾಕ್ಯ
ದಲ್ಲಿ ಹೇಳಲ್ಪಟ್ಟ ಜ್ಯೋತಿಸ್ಸು ಜೀವನೋ ಅಥವಾ ವಿಷ್ಣುವೋ ಎಂದು ಜ್ಞಾನರೂಪತ್ವವು ಸಮಾನ
ವಾಗಿರುವುದರಿಂದ ಸಂಶಯುವು ಬರಲು ಜೀವನೇ ಎಂದು ಪೂರ್ವಪಕ್ಷವು. ಹೇಗೆಂದರೆ—
'ಕಿಂ ಜ್ಯೋತಿರಯಂ ಪುರುಷಃ ಇತ್ಯಾದಿತ್ಯಜ್ಯೋತಿಃ' ಎಂದು ಹೇಳಲ್ಪಟ್ಟ ಆದಿತ್ಯಾದಿ
ಜ್ಯೋತಿಷ್ಟ್ವವು 'ಸ ಸಮಾನಃ ಸನ್ನುಭೌ ಲೋಕಾವನು ಸಂಚರತಿ' ಎನ್ನುವುದರಿಂದ
ಉಭಯುಲೋಕಸಂಚರಣವು 'ಆದಿತ್ಯೇನೈವಾಯಂ ಜ್ಯೋತಿಷಾಸ್ತೇ' ಎನ್ನುವ ಅವಧಾರಣವು
ಇತ್ಯಾದಿ ಜೀವಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶವಿಲ್ಲವೆನ್ನುವ ಬಹುತಾದೃಕ್ತ್ವವೇ ಪೂರ್ವ
ಪಕ್ಷಯುಕ್ತಿಯು. ಅಂತೂ ಜೀವನದ್ದೆಶೆಯಿಂದ ಇತರನಾದ ಶ್ರೀ ವಿಷ್ಣುವಿನಲ್ಲಿ ಅವಕಾಶವಿಲ್ಲ
ದಿರುವ ಅನೇಕ ಲಿಂಗಗಳದ್ದೆಶೆಯಿಂದ ಜೀವನೇ ಈ ಜ್ಯೋತಿಶ್ಶಬ್ದವಾಚ್ಯನೆಂದು ಪೂರ್ವಪಕ್ಷವು.
(12) ೧೨ನೇ ಆಕಾಶಾಧಿಕರಣದಲ್ಲಿ 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವ
ಹಿತಾ' ಎನ್ನುವ ವಾಕ್ಯದಲ್ಲಿ ಹೇಳಲ್ಪಟ್ಟ ಆಕಾಶವು ಭೂತಾಕಾಶವೋ ವಿಷ್ಣುವೋ, ಎಂದು
ಸಂಶಯುವು ಬರಲು ಭೂತಾಕಾಶವೇ ಎಂದು ಪೂರ್ವಪಕ್ಷವು. ಹೇಗೆಂದರೆ— ವೈ ನಾಮ
ಎನ್ನುವ ನಿಪಾತಗಳೆರಡು ಆಕಾಶಶಬ್ದಾರ್ಥಕ್ಕೆ ಪ್ರಸಿದ್ಧಿಯನ್ನು ತೋರಿಸಿಕೊಡುತ್ತದೆ.
ಭೂತಾಕಾಶದಲ್ಲಿದ್ದ ರೂಢಿಯನ್ನು ಬಿಟ್ಟು 'ಆಕಾಶಸ್ತಲ್ಲಿಂಗಾತ್' ಎನ್ನುವಲ್ಲಿ ಹೇಳಿದ ವಿಷ್ಣು
ರೂಪವಾದ ಯೌಗಿಕಾರ್ಥವನ್ನು ಸ್ವೀಕಾರಮಾಡಿದರೆ 'ವೈ ನಾಮ' ಎನ್ನುವ ಎರಡು ನಿಪಾತ
ಗಳಿಂದ ವಿರೋಧವು ಬರುವುದೆನ್ನುವ 'ಉಕ್ತಸ್ಯ ವಿರೋಧಃ' ಎಂದು ಹೇಳಿದ್ದೇ ಪೂರ್ವಪಕ್ಷ
ಯುಕ್ತಿಯು.(13)೧೩ನೇ ಸುಷುಪ್ತ್ಯಧಿಕರಣದಲ್ಲಿ'ಸ ಯತ್ತತ್ರ ಕಿಂಚಿತ್ಪಶ್ಯತ್ಯನನ್ವಾಗತಸ್ತೇನ
ಭವತಿ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಪ್ನಾದಿದ್ರಷ್ಟೃತ್ವವು ಜೀವನಿಗೋ ವಿಷ್ಣುವಿಗೋ
ಎಂದು ಲೋಕಪ್ರಸಿದ್ಧಿ ಅಸಂಗತ್ವ ಲಿಂಗಗಳದ್ದೆಶೆಯಿಂದ ಸಂದೇಹವು ಬರಲು ಜೀವನಿಗೇನೇ
ಎಂದು ಪೂರ್ವಪಕ್ಷವು. ಹೇಗೆಂದರೆ— ಅಸಂಗತ್ವಲಿಂಗಬಲದಿಂದ ಶ್ರುತಿಯಲ್ಲಿ ಹೇಳಲ್ಪಟ್ಟ
ಸ್ವಪ್ನಾದಿದ್ರಷ್ಟೃತ್ವವು ಈಶ್ವರನಿಗೆ ಎಂದು ಹೇಳಕೂಡದು. ಏಕೆಂದರೆ, ಜೀವೇಶ್ವರರಿಗೆ ಅಭೇದ
ವಿದ್ದಪ್ರಯುಕ್ತ ಚೈತನ್ಯರೂಪವಾದ ಅರ್ಥವನ್ನು ವಿವಕ್ಷಾಮಾಡಿಕೊಂಡು ಅಸಂಗತ್ವಲಿಂಗದಿಂದ
'ಅಸಂಗೋ ಹ್ಯಯಂ ಪುರುಷಃ' ಎನ್ನುವ ಶ್ರುತಿಯಲ್ಲಿ ಜೀವನೇ ಹೇಳಿಸಿಕೊಳ್ಳಲ್ಪಡುತ್ತಾನೆಂದು
'ಅರ್ಥಾತ್ತಥಾಗತಿಃ' ಎನ್ನುವುದೇ ಇಲ್ಲಿಯೂ ಪೂರ್ವಪಕ್ಷಯುಕ್ತಿಯು. ಅಂತೂ ಲೋಕ
ಪ್ರಸಿದ್ಧಿಯಿಂದ 'ಸ ಯತ್ತತ್ರ ಕಿಂಚಿತ್ಪಶ್ಯತಿ' ಎನ್ನುವಲ್ಲಿಯೂ ಜೀವನೇ ಸ್ವಪ್ನಾದಿದ್ರಷ್ಟನೆಂದು ಹೇಳ
ಲ್ಪಡುತ್ತಾನೆಂದು ತಿಳಿಯುತ್ತದೆ (14) ೧೪ನೇ ಬ್ರಾಹ್ಮಣಾಧಿಕರಣದಲ್ಲಿ 'ಏಷ ನಿತ್ಯೋ ಮಹಿಮಾ
ಬ್ರಾಹ್ಮಣಸ್ಯ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಾಹ್ಮಣನು ವಿರಿಂಚನೋ, ವಿಷ್ಣುವೋ ಎಂದು
ಅಜಶ್ರುತಿ ನಿತ್ಯಮಹಿಮತ್ವಲಿಂಗಗಳಿಂದ ಸಂದೇಹವು ಬರಲು ವಿರಿಂಚನೇ ಎಂದು ಪೂರ್ವಪಕ್ಷವು.
ಬ್ರಾಹ್ಮಣಶಬ್ದವು 'ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ
ಕರ್ಮಣಾ ಕನೀಯಾನ್' ಎಂದು ಪಾಪಾದ್ಯಲೇಪಲಿಂಗವೂ ಒಬ್ಬನಲ್ಲಿಯೇ ಇರುತ್ತದೆಂದು
ತೋರುತ್ತದೆ. ವಿಷ್ಣು-ವಿರಿಂಚರ ಮಧ್ಯದಲ್ಲಿ ಒಬ್ಬನನ್ನು ಇಟ್ಟುಕೊಂಡರೆ ಕೂಡದಿರುವುದರಿಂದ
ಚತುರ್ಮುಖನಿಗೆ ಪರಮಾತ್ಮನಿಂದ ಅಭೇದವಿಲ್ಲದೆ ಶಬ್ದಲಿಂಗಗಳಿಗೆ ಅವಕಾಶವಿಲ್ಲದಿರುವುದ

ರಿಂದ ಅರ್ಥಾತ್ ಅದು ಅನ್ಯಥಾನುಪಪನ್ನವಾಗಿ ಅಭೇದವು ಪ್ರಾಪ್ತವಾಗುತ್ತದೆ. ಎಂದು ಹಿಂದೆ ಹೇಳಿದ 'ಅರ್ಥಾತ್ತಥಾಗತಿಃ' ಎನ್ನುವುದೇ ಇಲ್ಲಿಯೂ ಪೂರ್ವಪಕ್ಷಯುಕ್ತಿಯು ॥ ೮ ॥ ೯ ॥

**ಮೂ ॥ ತಾ ಏವ ಬಲವತ್ಯಸ್ತು ಗತ್ಯಂತರ ವಿವರ್ಜಿತಾಃ ।**
**ಸಿದ್ಧಾಂತಯುಕ್ತಯೋ ಜ್ಞೇಯಾಃ ದೃಶ್ಯಂತೇ ತಾಶ್ಚ ಸರ್ವಶಃ ॥ ೧೦ ॥**

ಅ ॥ ತಾ ಏವ='ಬಾಹುಲ್ಯಂ ಲಿಂಗಶಬ್ದಾನಾಂ' ಇತ್ಯಾದಿಗಳಲ್ಲಿ ಹೇಳಲ್ಪಟ್ಟವುಗಳೇ, ಬಲವತ್ಯಸ್ತು=ಪ್ರಬಲಗಳಾದ, ಗತ್ಯಂತರ ವಿವರ್ಜಿತಾಃ = ಬೇರೆಗತಿ (ಅವಕಾಶ)ಯಿಲ್ಲದಿರುವ, ಸಿದ್ಧಾಂತಯುಕ್ತಯಃ=ಸಿದ್ಧಾಂತನ್ಯಾಯವಾಗಿ ಹೇಳಲ್ಪಟ್ಟವುಗಳು, ಜ್ಞೇಯಾಃ = ತಿಳಿಯಲ್ಪಡ ಬೇಕು. ತಾಶ್ಚ ಸರ್ವಶಃ=ಅವುಗಳೆಲ್ಲವೂ, ದೃಶ್ಯಂತೇ=ಕಾಣಲ್ಪಡುತ್ತವೆ.

ತಾ ॥ (1) ಬಾಹುಲ್ಯಂ ಲಿಂಗಶಬ್ದಾನಾಂ='ಪ್ರಾಣಾನಾಂ ಗ್ರಂಥಿರಸಿ ರುದ್ರ' ಇದು ಮೊದಲಾದ ಲಿಂಗಶಬ್ದಗಳಿಗೇನೇ, ರುಗ್ದ್ರಾವಣಾದಿಕರ್ತೃತ್ವರೂಪವಾದ ರುದ್ರಶಬ್ದ ಪ್ರವೃತ್ತಿ ನಿಮಿತ್ತವು ಶ್ರೀ ವಿಷ್ಣುವಿನಲ್ಲಿಯೇ ಮುಖ್ಯವಾಗಿರುವುದರಿಂದ ವಿಷ್ಣುವಿನಲ್ಲಿ ಮುಖ್ಯ ವೃತ್ತಿಯು ಪ್ರಬಲವು. ಆತ್ಮಶಬ್ದ, ಮುಕ್ತೋಪಸೃಪ್ಯತ್ವಾದಿಗಳು ಸುತರಾಂ ಪ್ರಬಲಗಳು. ಅಂತೂ ಬಲಿಷ್ಠ ಗಳಾದ ಉಕ್ತಿಲಿಂಗಗಳ ಪ್ರಾಬಲ್ಯದಿಂದ ವಿಷ್ಣುವೇ ದ್ಯುಭ್ವಾದ್ಯಾಯತನನೆಂದು ಸಿದ್ಧಾಂತವು. (2) ಅನುಕ್ತಿಶ್ಚ=ವಿಷ್ಣುವಿನದ್ದೆಸೆಯಿಂದ ಪ್ರಾಣನಿಗೆ ಶ್ರೇಷ್ಠತ್ವವನ್ನು ಹೇಳಲಿಲ್ಲ. ಮತ್ತು "ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ" ಎಂದು ಪ್ರಾಣನದ್ದೆಸೆಯಿಂದ ವಿಷ್ಣುವಿಗೆ ಶ್ರೇಷ್ಠತ್ವವನ್ನು ಹೇಳಿರುತ್ತದೆ. ಆದಪ್ರಯುಕ್ತ ಪೂರ್ಣಸುಖವನ್ನು ಹೇಳಿರುವುದರಿಂದಲೂ, ಸರ್ವೋತ್ತಮತ್ವವನ್ನು ಹೇಳಿರುವುದರಿಂದಲೂ ಭೂಮಶಬ್ದವಾಚ್ಯನು ಶ್ರೀ ವಿಷ್ಣುವೇ ಎಂದು ಸಿದ್ಧಾಂತವು. (3) ವಿರುದ್ಧತಾ="ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾ ಚಕ್ಷತೇ ಆಕಾಶ ಏವ ತದೋತಂ ಚ ಪ್ರೋತಂ ಚ" ಎಂದು ಆಕಾಶಾಖ್ಯ ಪ್ರಕೃತಿಗೆ ಸರ್ವಾಧಾರತ್ವವನ್ನು ಹೇಳಿ "ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ" ಎನ್ನುವ ಶ್ರುತಿಯಿಂದ ಅಕ್ಷರನಿಗೆ ಹೇಳಲ್ಪಡತಕ್ಕ ಸರ್ವಾಧಾರವಾದ ಪ್ರಕೃತ್ಯಾಧಾರ ತ್ವವು ವಿಷ್ಣುವ್ಯತಿರಿಕ್ತವಾದ ಶ್ರೀತತ್ವಕ್ಕೆ ವಿರುದ್ಧವು. 'ಪತಿಂ ವಿಶ್ವಸ್ಯಾತ್ಮೇಶ್ವರಂ'=ಎಲ್ಲಾ ಲೋಕ ಗಳನ್ನು ರಕ್ಷಿಸುವುದರಿಂದ ಸರ್ವ ಲೋಕಾಧಾರನು, ಲಕ್ಷ್ಮ್ಯಾದಿ ಸಕಲ ಚೇತನರಿಗೂ ನಿಯಾ ಮಕನಾಗಿರುವುದರಿಂದ ಆಧಾರನು. 'ವಿಶ್ವಾತ್ಮಾನಂ ಪರಾಯಣಂ' ಇತ್ಯಾದಿ ಶ್ರುತಿಗಳದ್ದೆಸೆ ಯಿಂದ ವಿಷ್ಣುವಿಗೆ ಸರ್ವಾಶ್ರಯತ್ವವು ಸಿದ್ಧಿಸುತ್ತದೆ. ಅನಶನೋಕ್ತಿಯಾದರೂ ಉಪಜೀವಿಸಿ ಕೊಂಡಿರುವುದಿಲ್ಲ ಎನ್ನುವ ಅರ್ಥದಿಂದಲೇ ಸಾವಕಾಶವಾಗುತ್ತದೆ. ಅಂತೂ ವಿಷ್ಣುವ್ಯತಿರಿಕ್ತಗೆ ಸರ್ವಾಧಾರವಾದ ಪ್ರಕೃತಿಯ ಆಧಾರತ್ವವು ವಿರುದ್ಧವಾಗಿರುವುದರಿಂದ ವಿಷ್ಣುವೇ ಅಕ್ಷರಶಬ್ದ ವಾಚ್ಯನೆಂದು ಸಿದ್ಧಾಂತವು. (4) ಅದೃಷ್ಟಿಃ=ಅಚೇತನಕ್ಕೆ ಈಕ್ಷಣವು ಕಾಣುವುದಿಲ್ಲ. 'ಬಹುಃ ಸ್ಯಾಂ ಪ್ರಜಾಯೇಯ' ಎನ್ನುವ ಬಹುಭಾವ ಶ್ರುತಿಯಾದರೂ ಪರಿಣಾಮವಿಲ್ಲದೆ ಆಯಾಯ ವಸ್ತುಗಳಿಗೆ ನಿಯಾಮಕನಾಗಿ ಸ್ವರೂಪಗಳಿಗೆ ಬಾಹುಲ್ಯವಿದೆ ಎನ್ನುವ ಅರ್ಥದಿಂದಲೇ ಯುಕ್ತ ವಾಗುತ್ತದೆ. ಮತ್ತು ಚೇತನಕ್ಕೆ ವಿಕಾರವು ಕೂಡುವುದಿಲ್ಲ. ಸಿದ್ಧಾಂತಯುಕ್ತಿಯು, ನಿರವ ಕಾಶವೂ ಆಗಿದೆ. ಏವಂಚ ಪ್ರಧಾನವು ಜಡವಾಗಿರುವುದರಿಂದ ಈಕ್ಷಣವು ಕೂಡದಿರುವ ಪ್ರಯುಕ್ತವೂ,ವಿಷ್ಣುವಿಗೆ ಈಕ್ಷಣವು ಕೂಡುವ ಪ್ರಯುಕ್ತವೂ ವಿಷ್ಣುವೇ ಸತ್ ಶಬ್ದವಾಚ್ಯನೆಂದು ಸಿದ್ಧಾಂತವು. (5) ಅನ್ವಯಾಭಾವಃ= (೧) ಆಕಾಶವು ಎನ್ನುವ ಪಕ್ಷದಲ್ಲಿಯೇ ಅನ್ವಯವಿಲ್ಲ.

ಹೇಗೆಂದರೆ— ದಹರಾಕಾಶದಲ್ಲಿದ್ದುದನ್ನು ಉಪಾಸನಮಾಡಬೇಕೆಂದು ಹೇಳಿದರೆ 'ಕಿಂ ತದತ್ರ ವಿದ್ಯತೇ' ಎಂದು ಪ್ರಶ್ನೆಮಾಡುವಾಗ 'ಯಾವಾನ್ವಾ ಅಯಮಾಕಾಶಃ' ಎನ್ನುವುದಕ್ಕೆ ಅನ್ವಯವು ಕಾಣುವುದಿಲ್ಲ. ದಹರಾಕಾಶದಲ್ಲಿರತಕ್ಕ ವ್ಯಾಪ್ತಾಕಾಶವನ್ನು ಹುಡುಕಬೇಕೆನ್ನುವುದು ಕೂಡ ಲಾರದು. ದಹರಾಕಾಶದಲ್ಲಿ ವ್ಯಾಪ್ತಾಕಾಶವಿಲ್ಲ. ದಹರಾಕಾಶದಲ್ಲಿ ವ್ಯಾಪ್ತಾಕಾಶವಿದೆ ಎನ್ನುವುದು ಕೂಡುವುದೂ ಇಲ್ಲ. ದಹರಾಕಾಶವನ್ನೇ ವಿಶೇಷಣವನ್ನಾಗಿ ಇಟ್ಟುಕೊಂಡು 'ಉಭೇ ಅಸ್ಮಿನ್' ಇತ್ಯಾದಿಗಳಿಂದ ಪರಿಹಾರವು ಎನ್ನುವುದೂ ಯುಕ್ತವಲ್ಲ. ದಹರವು ವ್ಯಾಪ್ತವಾಗಿರುವುದರಿಂದ ವಿಶೇಷಣವೂ ಕೂಡಲಾರದು. ಪೃಥಿವ್ಯಾದಿಗಳು ಮುಖ್ಯವಾಗಿ ಉಪಾಸ್ಯಗಳೂ ಅಲ್ಲವು. (೨) ವಿಷ್ಣುಪಕ್ಷದಲ್ಲಿ ಆದರೂ ಯಾವ ಪರಮಾತ್ಮನನ್ನು ಹುಡುಕಬೇಕೋ ಅವನು ಹೃದಯದ ಒಳಗೆ 'ಯಾವಾನ್ವಾ ಅಯಮಾಕಾಶಃ ತಾವಾನಾಕಾಶಃ'=ಬಹಿಸ್ಥಿತನಾದ ಪರಮಾತ್ಮನು ಎಂತಹ ಗುಣಗಳುಳ್ಳವನೋ, ಎಂತಹ ಪರಿಮಾಣವುಳ್ಳವನೋ, ಅಂತಹ ಗುಣಗಳುಳ್ಳವನೇ, ಅಂತಹ ಪರಿಮಾಣವುಳ್ಳವನೇ. ಅವನ ಒಳಗೆ ದ್ಯಾವಾಪೃಥಿವ್ಯಭಿಮಾನಿದೇವತೆಗಳು ಆಶ್ರಿತರಾಗಿರುತ್ತಾರೆ. ಅಂತಹ ಶ್ರೀ ಹರಿಯು ಪಾಪಾತ್ಯಂತಾಭಾವವುಳ್ಳವನು. ತಥಾ ಚ ಆಕಾಶಪಕ್ಷದಲ್ಲಿಯೇ ಅನ್ವಯ ವಿಲ್ಲದಿರುವಪ್ರಯುಕ್ತವೂ, ವಿಷ್ಣುಪಕ್ಷದಲ್ಲಿ ಅನ್ವಯವು ಕೂಡುವಪ್ರಯುಕ್ತವೂ ವಿಷ್ಣುವೇ ಹೃತ್ಪದ್ಮ ಸ್ಥನೆಂದು ಸಿದ್ಧಾಂತವು. (6) ವಿಪರೀತ ಶ್ರುತಿಭ್ರಮಃ=ಯಾರ ಜ್ಞಾನದಿಂದ ಶಾಶ್ವತವಾದಸುಖವೋ ಅವನು ಶ್ರೀ ಹರಿಯು. ಯಾವ ಬ್ರಹ್ಮನನ್ನು ಅನಿರ್ದೇಶ್ಯವಾದ ಸುಖವೆನ್ನುತ್ತಾರೆ, ಆ ಅನಿರ್ದೇಶ್ಯ ಸುಖವನ್ನು ಪರಮಾತ್ಮನ ಸ್ವರೂಪವೆನ್ನುತ್ತಾರೆ. ಆದಕಾರಣ 'ತದೇತದಿತಿ ಮನ್ಯಂತೇ' ಎನ್ನುವ ಶ್ರುತಿಯು ಹಿಂದೆ ಹೇಳಿದ ಪ್ರಕಾರ ವಿಷ್ಣುವಿಷಯಕವಾಗಿರುವುದರಿಂದ ಪೂರ್ವಪಕ್ಷಕ್ಕೆ ಬಾಧಕ ರೂಪವೇ. ಪೂರ್ವವಾದದಲ್ಲಿ ಹೇಳಿದ ಯೋಜನೆಯಾದರೂ ಭ್ರಮಮೂಲಕವೇ ಆದಪ್ರಯುಕ್ತ ಆನುಕೂಲ್ಯದಿಂದ ಗೃಹ್ಯಮಾಣತ್ವವು ವಿಷ್ಣುವಿಗೇನೇ ಎಂದು ಸಿದ್ಧಾಂತವು (7) ಲಿಂಗಾವಕಾಶ ರಾಹಿತ್ಯಭ್ರಮಃ=ಪ್ರಾಣ ವ್ಯವಸ್ಥಾಪಕತ್ವ ಮೊದಲಾದ ಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶವು ಇದ್ದೇ ಇದೆ. ಅವಕಾಶವಿಲ್ಲವೆನ್ನುವ ಜ್ಞಾನವು ಭ್ರಮವೇ. ವಾಮನ ಶ್ರುತಿಗೇನೇ ವಿಷ್ಣುವಿನಿಂದ ಇತರ ರಾದವರಲ್ಲಿ ಅವಕಾಶವಿಲ್ಲ. ಆದಪ್ರಯುಕ್ತ ಈಶಾನ ಶಬ್ದದಿಂದ ಹೇಳಲ್ಪಟ್ಟವನು ಶ್ರೀ ವಿಷ್ಣುವೇ ಎಂದು ಸಿದ್ಧಾಂತವು. (10) ತಾದೃಕ್ ದ್ವಯಂ='ವರ್ಜನಾತ್ ವಜ್ರಮುಚ್ಯತೇ' ಎನ್ನುವ ವಾಕ್ಯಬಲದಿಂದ ವಜ್ರ ಶಬ್ದಕ್ಕೂ, ಉದ್ಯಮಿತ್ವರೂಪವಾದ ಉದ್ಯತತ್ವಕ್ಕೂ ಶ್ರೀ ವಿಷ್ಣುವಿ ನಲ್ಲಿಯೇ ಅವಕಾಶವು. ಇತರರಲ್ಲಿ ಅವಕಾಶವಿಲ್ಲವು. ಏವಂಚ ನಿರವಕಾಶವಾದ ವಜ್ರಶಬ್ದ-ಉದ್ಯ ತತ್ವಲಿಂಗ ಇವುಗಳಿಂದ ವಜ್ರಶಬ್ದವಾಚ್ಯನು ಶ್ರೀ ವಿಷ್ಣುವೇ ಎಂದು ಸಿದ್ಧಾಂತವು. (11) ಬಹುತಾ ದೃಕ್ತ್ವಂ='ಕಿಂ ಜ್ಯೋತಿರಯಂ ಪುರುಷಃ' ಎಂದು ಹೇಳಲ್ಪಟ್ಟವನು ಸಂಸಾರಿಯು. 'ಆತ್ಮೈ ವಾಸ್ಯ ಜ್ಯೋತಿಃ' ಎನ್ನುವ ವಾಕ್ಯದಲ್ಲಿದ್ದ ಆತ್ಮಶಬ್ದದಿಂದ ಹೇಳಲ್ಪಟ್ಟವನು ವಿಷ್ಣುವೇ. 'ಅಯಂ ಪುರುಷಃ' ಎನ್ನುವಲ್ಲಿ ಹೇಳಲ್ಪಟ್ಟವನು ಸಂಸಾರಿಯಾದುದರಿಂದ ಆದಿತ್ಯಾದಿ ಜ್ಯೋತಿಷ್ಟ್ವವು ಸಂಸಾರಿಗೇನೇ. ಬಾಹ್ಯ ಜ್ಯೋತಿಸ್ಸುಗಳ ಮಧ್ಯದಲ್ಲಿ ಆದಿತ್ಯನಿಗೆ ಪ್ರಾಧಾನ್ಯವಿದ್ದುದರಿಂದ 'ಆದಿತ್ಯೇ ನೈವ' ಎನ್ನುವ ಅವಧಾರಣವು ಯುಕ್ತವಾಗುತ್ತದೆ. ಜೀವನನ್ನು ಹಿಡಿದುಕೊಂಡು ಲೋಕಸಂಚಾರ ವಾದರೂ ಶ್ರೀ ಹರಿಗೇನೇ ಸ್ವಾತಂತ್ರ್ಯವಿದ್ದುದರಿಂದ ದುಃಖವಿಲ್ಲದೇನೇ ಕೂಡುತ್ತದೆ. ಅಂತೂ ಲೋಕಸಂಚರಣ ಮೊದಲಾದ ಅನೇಕ ಲಿಂಗಗಳಿಗೆ ವಿಷ್ಣುವಿನಿಂದ ಇತರರಲ್ಲಿ ಅವಕಾಶವಿಲ್ಲದಿರು ವುದರಿಂದ ವಿಷ್ಣುವೇ ಜ್ಯೋತಿಶ್ಶಬ್ದವಾಚ್ಯನೆಂದು ಸಿದ್ಧಾಂತವು. (12) ಉಕ್ತಸ್ಯ ವಿರೋಧಃ=ವೈ ನಾಮ ಎನ್ನುವ ಎರಡು ನಿಪಾತಗಳು ಶ್ರೀ ಹರಿಯು ನಾಮರೂಪಗಳನ್ನು ನಿರ್ವಹಿಸುತ್ತಾನೆನ್ನು ವಲ್ಲಿ ಲೋಕಪ್ರಸಿದ್ಧಿಯಿಲ್ಲದಿದ್ದರೂ 'ಏಕೋದಾಧಾರ ಭುವನಾನಿ ವಿಶ್ವಾ' ಇದುಮೊದಲಾದ

ಶ್ರುತಿಗಳ ಪ್ರಸಿದ್ಧಿಯು ಹೆಚ್ಚು ಉಂಟೆಂದು ತೋರಿಸುತ್ತದೆ. ಪ್ರಸಿದ್ಧಾಕಾಶವನ್ನು ಇಟ್ಟುಕೊಂಡರೆ 'ತೇ ಯದಂತರಾ ತದ್ಬ್ರಹ್ಮ' ಎಂದು ಹೇಳಿದ ಅನಾಮ ರೂಪತ್ವಕ್ಕೆ ವಿರೋಧವು. ಅಂದರೆ, ನಾಮ ರೂಪಗಳಿಲ್ಲವೆಂದು ಹೇಳಿದ್ದು ವಿರುದ್ಧವಾಗುವುದು. ಬ್ರಹ್ಮಶಬ್ದ ವಿರೋಧವೂ ಬರುವುದು. ಏವಂಚ ನಾಮರೂಪಗಳಿವೆಂದು ಹೇಳಲ್ಪಟ್ಟ ಪ್ರಸಿದ್ಧಾಕಾಶಕ್ಕೆ ನಾಮರೂಪಗಳು ಇಲ್ಲವೆನ್ನುವುದು ವಿರುದ್ಧವಾಗಿರುವುದರಿಂದ ವಿಷ್ಣುವೆಂದು ಇಟ್ಟುಕೊಂಡರೆ "ಅನಾಮಾ ಸೋಽಪ್ರಸಿದ್ಧತ್ವಾದ ರೂಪೋ ಭೂತವರ್ಜನಾತ್ । ವಿರುದ್ಧಧರ್ಮರೂಪೋಽಸಾವೈಶ್ವರ್ಯಾತ್ಪುರುಷೋತ್ತಮಃ" ಎಂದು ಹೇಳಿದಪ್ರಕಾರ ವಿರೋಧವು ಇಲ್ಲದಿರುವುದರಿಂದ ವಿಷ್ಣುವೇ ಆಕಾಶ ಪದ ವಾಚ್ಯನೆಂದು ಸಿದ್ಧಾಂತವು. (13) ಅರ್ಥಾತ್ತಥಾಗತಿಃ=ಸುಷುಪ್ತ್ಯುತ್ಕ್ರಾಂತಿಪ್ರಕರಣಗಳಲ್ಲಿ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ 'ಪ್ರಾಜ್ಞೇನಾತ್ಮನಾಽನ್ವಾರೂಢಃ' ಎಂದು ಜೀವೇಶರಿಗೆ ಭೇದವನ್ನು ಹೇಳಿರುವುದರಿಂದಲೂ ಅಸಂಗತ್ವವು, ಸ್ವಪ್ನಾದಿ ದ್ರಷ್ಟೃತ್ವವೂ ಈಶ್ವರನಿಗೇನೇ ಆಗುವುದರಿಂದಲೂ ಅನ್ಯಥಾನುಪಪತ್ತಿಯು ಇಲ್ಲದಿರುವುದರಿಂದ ಜೀವೇಶರಿಗೆ ಅಭೇದವೇ ಇಲ್ಲದಿರುವುದರಿಂದ ಭೇದವೇ ಇರುತ್ತದೆ. ಅಸಂಗತ್ವವು ಜೀವನಿಗೆ ಕೂಡುವುದೇ ಇಲ್ಲವು. ಸ್ವಪ್ನಾದಿ ದ್ರಷ್ಟೃತ್ವವು ಈಶ್ವರನು ಸರ್ವಜ್ಞನಾಗಿರುವುದರಿಂದಲೂ ಸ್ವಾಪ್ನಪದಾರ್ಥಗಳು ಸತ್ಯಗಳಾಗಿರುವುದರಿಂದಲೂ ಸ್ವಪ್ನಾದಿ ದ್ರಷ್ಟೃತ್ವವು ಮುಖ್ಯವಾಗಿ ಪರಮಾತ್ಮನಲ್ಲಿಯೇ ಕೂಡುತ್ತದೆ. (14) ಅರ್ಥಾತ್ತಥಾಗತಿಃ= ಬ್ರಹ್ಮಣಾ ವೇದದಿಂದ, ಗಮ್ಯತೇ=ತಿಳಿಯಲ್ಪಡುತ್ತಾನೆ ಎನ್ನುವ ವ್ಯುತ್ಪತ್ತಿಯಿಂದ ಬ್ರಾಹ್ಮಣ ಶಬ್ದವು ವಿಷ್ಣುವಿನಲ್ಲಿಯೇ ಕೂಡುತ್ತದೆ. ಆದಪ್ರಯುಕ್ತ ಅಜ ಶಬ್ದವೂ 'ಕೇನಾಪಿ ನ ಜಾಯತೇ'= ಯಾರಿಂದಲೂ ಹುಟ್ಟುವುದಿಲ್ಲವೆನ್ನುವ ವ್ಯುತ್ಪತ್ತಿಯಿಂದ ವಿಷ್ಣುವಿನಲ್ಲಿಯೇ ಮುಖ್ಯವು. ಈ ವಾಕ್ಯದಲ್ಲಿ ಹೇಳಲ್ಪಟ್ಟ ಬ್ರಾಹ್ಮಣ ಶಬ್ದವಾಚ್ಯನು ವಿರಿಂಚನೆಂದಾದರೆ, ಪಾಪಾಲೇಪಾದಿ ಲಿಂಗವಿರೋಧವೂ ಪತ್ಯಾದಿ ಶಬ್ದಗಳಿಂದ ವಿರೋಧವೂ ಬರುತ್ತದೆ. (೧) "ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃ ಪರಂ ಹಿ ಮಾಂ" ಎನ್ನುವ ವಚನದಿಂದ ವಿರಿಂಚನಿಗೆ ಕರ್ಮಫಲವಿಲ್ಲವೆನ್ನುವುದು ಕೂಡದಿರುವುದರಿಂದ ನಿತ್ಯ ಮುಕ್ತನಾದ ಪರಮಾತ್ಮನಿಂದ ಭೇದವೇ ಯುಕ್ತವು. (೨) ಯಾವ ಕಾರಣದಿಂದ ಬ್ರಾಹ್ಮಣ ಅಜ ಶಬ್ದಗಳಿಗೆ ರೂಢಿಯಿಂದ ಚತುರ್ಮುಖ ಪರತ್ವವನ್ನು ಇಟ್ಟುಕೊಂಡರೆ 'ಸರ್ವಸ್ಯ ವಶೀ' 'ಸರ್ವಸ್ಯೇಶಾನಃ' 'ಸರ್ವಸ್ಯಾಧಿಪತಿಃ' ಇದು ಮೊದಲಾದ ವಚನವು ವಿರುದ್ಧವಾಗುತ್ತದೋ, ಆದಪ್ರಯುಕ್ತ ಹಿಂದೆ ಹೇಳಿದ ಯೋಗದಿಂದ ಆ ಶಬ್ದಗಳಿಗೆ ವಿಷ್ಣುಪರತ್ವವೇ ಯುಕ್ತವು. 'ವಿಶ್ವೋ ಹಿರಣ್ಯಗರ್ಭಃ' ಇದುಮೊದಲಾದ ಭೇದಪ್ರತಿಪಾದಕ ಶ್ರುತಿಗಳು ಹೆಚ್ಚು ಇರುವುದರಿಂದ ವಿಷ್ಣು-ವಿರಿಂಚರಿಗೆ ಭೇದವೇ. ಯಾವ ಕಾರಣದಿಂದ ಹಿಂದೆ ಹೇಳಿದ ಪ್ರಕಾರ ವಿಷ್ಣು-ವಿರಿಂಚರಿಗೆ ಅಭೇದವಿಲ್ಲವೋ ಆದಕಾರಣ ಪಾಪಾದ್ಯಲೇಪ ನಿತ್ಯ ಮಹಿಮತ್ವಾದಿಲಿಂಗವೂ, ಪತ್ಯಾದಿ ಶಬ್ದವೂ ಚತುರ್ಮುಖನಲ್ಲಿ ವಿಷ್ಣು-ವಿರಿಂಚರಿಗೆ ಅಭೇದವಿದ ಪ್ರಯುಕ್ತ ಸಾವಕಾಶವೆಂದು ಹೇಳಕೂಡದು. ಇತಿ = ಹಿಂದೆ ಹೇಳಿದಪ್ರಕಾರ, ಏತತ್ = ಪೂರ್ವಾಧಿಕರಣದಲ್ಲಿ ಹೇಳಿದ್ದು, ಸಮಸ್ತಂ=ಎಲ್ಲವು. ಎಂದು ಸಿದ್ಧಾಂತಯುಕ್ತಿಗಳು ॥ ೧೦ ॥

ಸೂತ್ರದಲ್ಲಿ ಸೂಚಿತಗಳಾದ ಸಿದ್ಧಾಂತನ್ಯಾಯಗಳನ್ನು ಹೇಳಿ ಕಂಠತಃ ಸೂತ್ರದಲ್ಲಿಯೇ ಹೇಳಲ್ಪಟ್ಟ ಸಿದ್ಧಾಂತನ್ಯಾಯಗಳನ್ನೂ ಹೇಳುತ್ತಾರೆ—

**ಮೂ ॥ ಮುಕ್ತೋಪಸೃಪ್ಯತಾ ಪ್ರಾಣಾದಾಧಿಕ್ಯಂ ಸರ್ವತಸ್ತಥಾ ॥ ೧೧ ॥**
**ವೈಲಕ್ಷಣ್ಯಂ ಸ್ವಭಾವಸ್ಯ ಪ್ರೇಕ್ಷಾಪೂರ್ವಕ್ರಿಯಾ ತಥಾ ॥**
**ಅರಸ್ಯ ಣ್ಯಸ್ಯ ಚೇಶತ್ವಂ ಸೂರ್ಯಾದ್ಯನುಕೃತಿಸ್ತಥಾ ॥ ೧೨ ॥**

ವಾಮನಾಖ್ಯಾ ಸರ್ವಕಂಪಸ್ತಚ್ಛಬ್ದಾನನ್ಯಸಿದ್ಧತಾ ।
ಅನಾಮರೂಪತಾ ಭೇದಸ್ಯೋಪಜೀವ್ಯಪ್ರಮಾಣತಾ ।
ಸರ್ವೈಶ್ವರ್ಯಾದಿಕಾದ್ಯಾಸ್ತಾಃ ವೇದೇಶೇನ ಪ್ರದರ್ಶಿತಾಃ ॥ ೧೩ ॥

ಅ ॥ ಮುಕ್ತೋಪಸೃಪ್ಯತಾ='ಮುಕ್ತೋಪಸೃಪ್ಯವ್ಯಪದೇಶಾತ್' ಎನ್ನುವ ೨ನೇ ಸೂತ್ರದಿಂದ, 'ಅಮೃತಸ್ಯೈಷ ಸೇತುಃ' ಎನ್ನುವ ಶ್ರುತಿಯಲ್ಲಿ ವಿಷ್ಣುವಿಗೆ ಹೇಳಿದ ಮುಕ್ತಪ್ರಾಪ್ಯತ್ವವೂ, ಪ್ರಾಣಾತ್ ಸರ್ವತಶ್ಚ ಆಧಿಕ್ಯಂ='ಭೂಮಾ ಸಂಪ್ರಸಾದಾದಧ್ಯುಪದೇಶಾತ್' ಎನ್ನುವ ೮ನೇ ಸೂತ್ರದಿಂದ ಪ್ರಾಣನದ್ದೆಶೆಯಿಂದಲೂ, ಸರ್ವವಸ್ತುಗಳಿಂದಲೂ ಉತ್ತಮತ್ವವೂ, (ಸರ್ವೋತ್ತಮತ್ವವೂ) ತಥಾ=ಹಾಗೆಯೇ, ಸ್ವಭಾವಸ್ಯ ಸರ್ವತಃ ವೈಲಕ್ಷಣ್ಯಂ=ಅನ್ಯಭಾವವ್ಯಾವೃತ್ತೇಶ್ಚ ಎನ್ನುವ ೧೨ನೇ ಸೂತ್ರದಿಂದ ಶ್ರೀ ಹರಿಗೆ ಅನ್ಯವಸ್ತುಗಳಲ್ಲಿರುವ ಸ್ಥೌಲ್ಯಾದಿ ಧರ್ಮಗಳದ್ದೆಶೆಯಿಂದ ವೈಲಕ್ಷಣ್ಯವು ಅಂದರೆ, ಪ್ರಾಕೃತ ಸ್ಥೌಲ್ಯಾದಿರಾಹಿತ್ಯವು ಅಥವಾ ಇತರ ಎಲ್ಲಾ ವಸ್ತುಗಳ ಸ್ಥೌಲ್ಯಾದಿಧರ್ಮಗಳಿಗೆ 'ಅಸ್ಥೂಲಮನಣು' ಇತ್ಯಾದಿ ಶ್ರುತಿಗಳಿಂದ ಶ್ರೀ ಹರಿಯಲ್ಲಿ ವ್ಯಾವೃತ್ತಿಯೂ, ತಥಾ=ಹಾಗೆಯೇ, 'ಅಕ್ಷರಮಂಬರಾಂತಧೃತೇಃ' ಎನ್ನುವ ೧೦ನೇ ಸೂತ್ರದಿಂದ ಆಕಾಶಾಂತಪ್ರಪಂಚಧಾರಕತ್ವಾದಿಗಳೂ, ಪ್ರೇಕ್ಷಾಪೂರ್ವಕ್ರಿಯಾ='ಈಕ್ಷತಿಕರ್ಮವ್ಯಪದೇಶಾತ್ಸಃ' ಎನ್ನುವ ೧೩ನೇ ಸೂತ್ರದಿಂದ ಈಕ್ಷಣಾಖ್ಯವ್ಯಾಪಾರವು ಅಥವಾ ಈಕ್ಷಣ ಸೃಷ್ಟಿ ಕ್ರಿಯೆಗಳು, ತಥಾ=ಹಾಗೆಯೇ 'ದಹರ ಉತ್ತರೇಭ್ಯಃ' ಎನ್ನುವ ೧೪ನೇ ಸೂತ್ರದಿಂದ ಅಪಹತಪಾಪ್ಮತ್ವಾದಿಗಳೂ(ಪಾಪಾದಿಗಳ ಅತ್ಯಂತಾಭಾವವೂ)ಅರಣ್ಯಣ್ಯಸ್ಯ ಚೇಶತ್ವಂ='ಗತಿ ಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ' ಎನ್ನುವ ೧೫ನೇ ಸೂತ್ರದಿಂದ 'ಅರಣ್ಯ' ಎನ್ನುವ ಅಮೃತ ಸಮುದ್ರಗಳಿಗೆ ನಿಯಾಮಕತ್ವವು, ಸೂರ್ಯಾದ್ಯನುಕೃತಿಃ='ಅನುಕೃತೇಸ್ತಸ್ಯ ಚ' ಎನ್ನುವ ೨೨ನೇ ಸೂತ್ರದಿಂದ 'ತಮೇವ ಭಾಂತಮನುಭಾತಿ ಸರ್ವಂ' ಎನ್ನುವ ಶ್ರುತಿಯಲ್ಲಿ ಪ್ರಕಾಶಕ್ಕೆ ಆಶ್ರಯರಾದ ಸೂರ್ಯಾದಿಗಳ ಭಾನಕ್ಕೆ ಪ್ರಯೋಜಕವಾದ ಪ್ರಕಾಶಾಶ್ರಯತ್ವವೂ, ತಥಾ=ಹಾಗೆಯೇ, ಸರ್ವಪ್ರಕಾಶಕತ್ವವೂ, ವಾಮನಾಖ್ಯಾ='ಶಬ್ದಾದೇವ ಪ್ರಮಿತಃ' ಎನ್ನುವ ೨೪ನೇ ಸೂತ್ರದಿಂದ ವಾಮನ ಎನ್ನುವ ನಾಮಧೇಯವು, ಸರ್ವಕಂಪಃ=ಕಂಪನಾತ್ ಎನ್ನುವ ೩೯ನೇ ಸೂತ್ರದಿಂದ 'ಜಗತ್ಸರ್ವಂ ಪ್ರಾಣ ಏಜತಿ' ಎನ್ನುವ ಶ್ರುತಿಯಲ್ಲಿ ಪ್ರಾಣಾದಿಸರ್ವಜಗಚ್ಚೇಷ್ಟಕತ್ವವೂ, ತಚ್ಛಬ್ದಾನನ್ಯಸಿದ್ಧತಾ='ಜ್ಯೋತಿರ್ದರ್ಶನಾತ್' ಎನ್ನುವ ೪೦ನೇ ಸೂತ್ರದಿಂದ 'ವಿಷ್ಣುರೇವ ಜ್ಯೋತಿಃ' ಎನ್ನುವ ಚತುರ್ವೇದ ಶಿಖೆಯಲ್ಲಿ ಆ ಜ್ಯೋತಿರಾದಿ ಶಬ್ದಗಳಿಗೆ ಅನ್ಯತ್ರ ಸಿದ್ಧತ್ವವಿಲ್ಲದಿರುವುದೂ, ಜ್ಯೋತಿರಾದಿ ಶಬ್ದಗಳು ಅನ್ಯತ್ರ ಕೂಡಲಾರವು. ಅನಾಮರೂಪತಾ='ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎನ್ನುವ ೪೧ನೇ ಸೂತ್ರದಿಂದ ನಾಮರೂಪರಾಹಿತ್ಯವೂ (ನಾಮಾತ್ಮಕ ರೂಪಾತ್ಮಕ ಪ್ರಪಂಚದ್ದೆಶೆಯಿಂದ ಭೇದವೂ), ಭೇದಸ್ಯಾಪಿ ಉಪಜೀವ್ಯಪ್ರಮಾಣತಾ='ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎನ್ನುವ ೪೨ನೇ ಸೂತ್ರದಿಂದ ಭೇದಕ್ಕೆ ಉಪಜೀವ್ಯವಾದ ಪ್ರಮಾಣವಿರುವಿಕೆಯೂ ಅಂದರೆ, ಭೇದವು ಉಪಜೀವ್ಯಪ್ರಮಾಣವುಳ್ಳದ್ದೆಂದೂ, ಸರ್ವೈಶ್ವರ್ಯಾದಿಕಾದ್ಯಾಃ='ಪತ್ಯಾದಿಶಬ್ದೇಭ್ಯಃ' ಎನ್ನುವ ೪೩ನೇ ಸೂತ್ರದಿಂದ ಸರ್ವೈಶ್ವರ್ಯ ಸರ್ವಾಧಿಪತ್ಯ ಮೊದಲಾದವುಗಳು ಹೀಗೆ, ತಾಃ=ಸಿದ್ಧಾಂತಯುಕ್ತಿಗಳು, ವೇದೇಶೇನ=ವೇದನಿಯಾಮಕರಾದ ವೇದವ್ಯಾಸರಿಂದ, ಪ್ರದರ್ಶಿತಾಃ=ತೋರಿಸಲ್ಪಟ್ಟವೆ ॥ ೧೧ ॥ ೧೨ ॥ ೧೩ ॥

(1) ಹಾಗಾದರೆ, ಈ ಪಾದದಲ್ಲಿ ೧೪ ಅಧಿಕರಣಗಳೆಂದು ಭಾಷ್ಯದಿಂದ ತಿಳಿಯುತ್ತವೆ. ವಿಷಯಗಳೂ, ಪೂರ್ವಪಕ್ಷನ್ಯಾಯಗಳೂ, ಸಿದ್ಧಾಂತನ್ಯಾಯಗಳೂ (೧೨) ಹನ್ನೆರಡೇ ಹೇಳ

ಲ್ಪಟ್ಟಿವೆ. ವಿಷಯಾದಿಗಳಿಲ್ಲದೆ ಅಧಿಕರಣವು ಕೂಡಲಾರದು. ಆದಕಾರಣ ಇದು ಹೇಗೆ ಕೂಡುತ್ತದೆಂದರೆ— "ತದುಪರ್ಯಪಿ ಬಾದರಾಯಣಃ ಸಂಭವಾತ್" ಸೂ. ॥ ೨೬ ॥ "ಶುಗಸ್ಯ ತದನಾದರ ಶ್ರವಣಾತ್ತದಾದ್ರವಣಾತ್ಸೂಚ್ಯತೇ ಹಿ" ಸೂ.॥೩೪॥ ಎನ್ನುವ ದೇವತಾಧಿಕರಣವು ಅಪಶೂದ್ರಾಧಿಕರಣ ಈ ಎರಡು ಅಧಿಕರಣಗಳು ಸಮನ್ವಯವನ್ನು ಸಮರ್ಥನಮಾಡತಕ್ಕವುಗಳಲ್ಲ. ಮತ್ತೆ ದೇವತಾಧಿಕರಣವು ದೇವಾದಿಗಳಿಗೆ ವೇದವಿದ್ಯಾಧಿಕಾರವನ್ನು ಸಮರ್ಥಿಸಲಿಕ್ಕೆ ಉಪಯುಕ್ತವಾದುದು. ಅಪಶೂದ್ರಾಧಿಕರಣವು ತ್ರೈವರ್ಣಿಕವ್ಯತಿರಿಕ್ತರಿಗೆ ವೇದವಿದ್ಯಾಧಿಕಾರವಿಲ್ಲವೆಂದು ಸಮರ್ಥಿಸಲಿಕ್ಕೆ ಉಪಯುಕ್ತವಾದುದು. ಹೀಗೆ ತಿಳಿಸುವುದಕ್ಕೆ ಈ ಎರಡು ಅಧಿಕರಣಗಳ ವಿಷಯಾದಿಗಳನ್ನು ಹೇಳಲಿಲ್ಲ. (2) ಹಾಗಾದರೆ, ಸಂಗತಿಯೇ ಇಲ್ಲದಿರುವುದರಿಂದ ಈ ಎರಡು ಅಧಿಕರಣಗಳನ್ನು ಇಲ್ಲಿ ಹೇಳಕೂಡದು. ಏಕೆಂದರೆ-—ಅಂತರ್ಭಾವರೂಪವಾದುದು, ಆನಂತರ್ಯರೂಪವಾದುದು ಎಂದು ಸಂಗತಿಯು ಎರಡು ವಿಧವು. ಅವುಗಳಲ್ಲಿ ಸಮನ್ವಯಮಾಡತಕ್ಕ ಪ್ರಥಮಾಧ್ಯಾಯದಲ್ಲಿ ಇವುಗಳಿಗೆ ಅಂತರ್ಭಾವವು ಕೂಡುವುದಿಲ್ಲ. ಅಧ್ಯಾಯದಲ್ಲಿಯೇ ಅಂತರ್ಭೂತವಾಗದಿದ್ದಮೇಲೆ ಪಾದದಲ್ಲಿ ಸುತರಾಂ ಅಂತರ್ಭೂತವಾಗಲಾರದು. ಪ್ರಸಂಗ ಉಪೋದ್ಘಾತ ಅವಸರ ಇತ್ಯಾದಿರೂಪವಾದ ಆನಂತರ್ಯ ಸಂಗತಿಯೂ ಕೂಡುವುದಿಲ್ಲ. ಆದಪ್ರಯುಕ್ತ ಈ ಅಧಿಕರಣಗಳೆರಡು ಈ ಪಾದದಲ್ಲಿ ಅವಕಾಶವನ್ನು ಹೊಂದಲಾರವು, ಎಂದರೆ—

**ಮೂ ॥ ಅಧಿಕಾರಶ್ಚ ತದ್ಧಾನಿಃ ಪ್ರಸಂಗಾದೇವ ಚಿಂತಿತೌ ॥ ೧೪ ॥**

ಅ ॥ (ಅಂತರ್ಭಾವರೂಪವಾದ ಸಂಗತಿಯು ಇಲ್ಲವಾದರೂ) ಅಧಿಕಾರಃ=ದೇವತೆಗಳಿಗೆ ವೇದವಿದ್ಯಾಧಿಕಾರವು, ತದ್ಧಾನಿಃ=ಶೂದ್ರಾದಿಗಳಿಗೆ ವೇದವಿದ್ಯಾಧಿಕಾರಾಭಾವವೂ (ಇತಿ ಇಮೌ ವಿಷಯೌ=ಎಂಬುವ ಈ ವಿಷಯಗಳು, ಈ ಪಾದದಲ್ಲಿ) ಪ್ರಸಂಗಾದೇವ= (ಸ್ಮೃತವಾದುದಕ್ಕೆ ಉಪೇಕ್ಷಾ ಅನರ್ಹತ್ವರೂಪವಾದ) ಪ್ರಸಂಗ ಸಂಗತಿಯಿಂದಲೇ, ಚಿಂತಿತೌ=ವಿಚಾರಿತಗಳಾದುವು ॥ ೧೪ ॥

ದೇವತೆಗಳಿಗೆ ವೇದವಿದ್ಯಾಧಿಕಾರವನ್ನು ಆಕ್ಷೇಪಿಸುವುದಕ್ಕಾಗಿ ಎರಡು ಸೂತ್ರಗಳು.

**"ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ" ॥ಸೂ.೩೧॥**

'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಮಧುವಿದ್ಯಾ ಜ್ಯೋತಿಷ್ಟೋಮಾದಿ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ಮೋಕ್ಷೇತರವಾದ ವಸುಪದವೇ ಮೊದಲಾದ ಫಲವುಳ್ಳ ವಿದ್ಯೆಗಳಲ್ಲಿ ಯೋಗ್ಯರಿಗೆ ವಸುತ್ವಾದಿ ಫಲಗಳು ಸಿಕ್ಕಿರುವುದರಿಂದಲೂ, ಅಯೋಗ್ಯರಿಗೆ ಕಾಮ್ಯವೇ ಆಗದಿರುವುದರಿಂದ ಅರ್ಥಿತವೇ ಕೂಡಲಾರದು. ಆದಕಾರಣ ಅಧಿಕಾರವಿಲ್ಲ.

ಮೋಕ್ಷಾರ್ಥ ವಿದ್ಯೆಗಳಲ್ಲಿ ಅಧಿಕಾರವಿರಬಹುದಷ್ಟೆ! ಎಂದರೆ—

**"ಓಂ ಜ್ಯೋತಿಷಿ ಭಾವಾಚ್ಚ ಓಂ" ॥ ಸೂ. ೩೨ ॥**

ದೇವತೆಗಳು ಸರ್ವಜ್ಞರಾಗಿರುವುದರಿಂದ ಮೋಕ್ಷಾರ್ಥವಿದ್ಯೆಗಳಲ್ಲಿಯೂ ಅದರಿಂದ ಸಾಧ್ಯವಾದ ಜ್ಞಾನವನ್ನು ಹೊಂದಿರುವುದರಿಂದ, ಅರ್ಥಿತ್ವವು ಕೂಡದಿರುವುದರಿಂದ ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ—

ದೇವತೆಗಳು ವೈದಿಕೋಪಾಸನಾದಿಗಳಲ್ಲಿ ಅಧಿಕಾರಿಗಳಲ್ಲ. ಅವರನ್ನು ಕುರಿತು ವೈದಿಕ ವಿಧಿಯೇ ಇಲ್ಲವು. ಏಕೆಂದರೆ—ಅದರಿಂದ ಸಾಧ್ಯವಾಗತಕ್ಕ ಫಲವನ್ನು ಇಚ್ಛಿಸುವವನು ಅಲ್ಲಿ ನಿಯುಕ್ತನಾಗುತ್ತಾನೆ. ಸರ್ವೋಪಾಸನಾದಿ ಫಲದಲ್ಲಿ ದೇವತೆಗಳಿಗೆ ಇಚ್ಛೆಯೇ ಕೂಡುವುದಿಲ್ಲ. ದೇವತಾಪದವನ್ನು ಇವರು ಹೊಂದಿರುವುದರಿಂದ ಮಧುವಿದ್ಯಾದಿಗಳ ಉಪಾಸನೆಯಲ್ಲಿಯೂ ಅಧಿಕಾರವಿಲ್ಲ. ಸರ್ವಜ್ಞರಾಗಿರುವುದರಿಂದ ಉಪಾಸನಾಸಾಧ್ಯವಾದ ಜ್ಞಾನವೂ ನಿತ್ಯಸಿದ್ಧವಾಗಿದೆ. ಏವಂ ಚ ಅವಾಂತರಫಲವೂ ಪರಮಪ್ರಯೋಜನವಾದ ಪದಾದಿಗಳನ್ನು ಹೊಂದಿರುವುದರಿಂದ ವಿಧಿಯು ಕೂಡದಿರುವುದರಿಂದಲೂ, ಜೈಮಿನಿಯ ವಚನದಿಂದಲೂ ದೇವತೆಗಳಿಗೆ ಅಧಿಕಾರವಿಲ್ಲ ವೆಂದು ಪ್ರಾಪ್ತವಾಗುವಾಗ ಅದನ್ನು ನಿಷೇಧಿಸುವುದಕ್ಕಾಗಿ ಸೂತ್ರವು.

"ಓಂ ಭಾವಂ ತು ಬಾದರಾಯಣೋಽಸ್ತಿ ಹಿ ಓಂ" ॥ ಸೂ. ೩೩ ॥

ದೇವತೆಗಳಿಗೆ ಮಧು ಮೊದಲಾದ ಎಲ್ಲಾ ವಿದ್ಯೆಗಳಲ್ಲಿಯೂ ಅಧಿಕಾರವಿದೆ ಎಂದು ವೇದವ್ಯಾಸರು ತಿಳಿಯುತ್ತಾರೆ. ಏಕೆಂದರೆ— ಮೋಕ್ಷರೂಪ ಫಲದಲ್ಲಿಯೂ ಅದಕ್ಕೆ ಕಾರಣ ವಾದ ಜ್ಞಾನದಲ್ಲಿಯೂ ಅತಿಶಯವಿದೆ.

ಅದರಲ್ಲಿ ಪೂರ್ವಪಕ್ಷಿಯು ಉದಾಹರಿಸಿದ ಜೈಮಿನಿಯ ವಚನಕ್ಕೆ ಪರಿಹಾರವಿಲ್ಲ. ಶ್ರೀ ವೇದವ್ಯಾಸರ ಮತಕ್ಕೆ ವಿರುದ್ಧವಾಗಿರುವುದರಿಂದ ಅಪ್ರಮಾಣವೆಂದೇ ತಿಳಿಯಬೇಕೋ ಎಂದರೆ ಹಾಗೆ ಹೇಳಕೂಡದು. ವಿಷಯಗಳು ಬೇರೆ ಬೇರೆಯಾಗಿರುವುದರಿಂದ ವಿರೋಧವಿಲ್ಲವೆನ್ನುತ್ತಾರೆ.

ಮೂ ॥ ತತ್ಫಲಾಯ ವಿಧಿಃ ಸಿದ್ಧೇ ಚೋಪಾಸಾಯಾ ನಿರಾಕೃತಃ ।
ಯತೋ ಜೈಮಿನಿನಾಽನ್ಯಾರ್ಥಮಸಿದ್ಧೇಽರ್ಥೇ ವಿಧಿಸ್ತಥಾ ॥ ೧೫ ॥
ವಿದ್ಯಾಧಿರಾಜಸ್ಯ ಮತಮವಿರೋಧಸ್ತತಸ್ತಯೋಃ ॥
ಮೋಕ್ಷೇ ಫಲವಿಶೇಷೋಽಸ್ತಿ ನ ಚ ಸರ್ವಂ ಪ್ರಕಾಶತೇ ॥ ೧೬ ॥
ಸರ್ವದಾ ತೇನ ದೇವಾನಾಮಪಿ ಯುಕ್ತಾ ಹ್ಯುಪಾಸನಾ ।
ನಿತ್ಯಂ ವೃದ್ಧಿಕ್ಷಯೋಪೇತಂ ವಿಷ್ಣೋಃ ಪೂರ್ಣಂ ತು ವೇದನಂ ॥ ೧೭ ॥
ಸ್ಪಷ್ಟಾತಿಸ್ಪಷ್ಟವಿಶದಂ ಬ್ರಹ್ಮಣೋಽಶೇಷವಸ್ತುಗಂ ।
ಅನ್ಯೇಷಾಂ ಕ್ರಮಶೋ ಜ್ಞಾನಂ ಮಿತವಸ್ತುಗತಂ ಸದಾ ॥ ೧೮ ॥
ಇತ್ಯಾದಯೋ ವಿಶೇಷಾಸ್ತು ಸದಾ ವಿದ್ಯಾಪತೇರ್ಹೃದಿ ।
ಜೈಮಿನ್ಯಾದ್ಯಾಸ್ತು ಸಾಮಾನ್ಯವೇತ್ತೃತ್ವಾತ್ತತ್ತಥಾಽವದನ್ ॥ ೧೯ ॥
ವಿದ್ಯೇಶಮತಮೇತಸ್ಮಾನ್ನೈವ ಸದ್ಭಿರ್ವಿರುಧ್ಯತೇ ॥ ೨೦ ॥ ಅಧಿ. ೮ ॥

ಅ ॥ ಯತಃ = ಯಾವಕಾರಣದ್ದೆಶೆಯಿಂದ, ಜೈಮಿನಿನಾ = ಜೈಮಿನಿ ಋಷಿಯಿಂದ, ತತ್ಫಲಾಯ='ವಸೂನಾಮೇವೈಕೋ ಭೂತ್ವಾ ಅಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ' ಇತ್ಯಾದಿಶ್ರುತಿಸಿದ್ಧವಾದ ವಸುಪದಪ್ರಾಪ್ತಿಯೇ ಮೊದಲಾದ ಫಲಕ್ಕೋಸ್ಕರ, ಸಿದ್ಧೇ=ಜ್ಞಾತವಾದ ಬ್ರಹ್ಮಸ್ವರೂಪವಿಷಯದಲ್ಲಿ, ಉಪಾಸಾಯಾಃ=ಉಪಾಸನೆಯ, ವಿಧಿಶ್ಚ= ವಿಧಿಯಾದರೂ, ನಿರಾಕೃತಃ=ನಿರಾಕರಿಸಲ್ಪಟ್ಟಿದೆ. ತಥಾ=ಹಾಗೆಯೇ, ವಿದ್ಯಾಧಿರಾಜಸ್ಯ= ವೇದವ್ಯಾಸರಿಗೆ, ಅನ್ಯಾರ್ಥಂ=ಇತರ ಫಲಕ್ಕೋಸ್ಕರ (ಮೋಕ್ಷದಲ್ಲಿ ಸುಖವಿಶೇಷಕ್ಕೋಸ್ಕರ),

ಅಸಿದ್ಧೇ ಅರ್ಥೇ=ಅಜ್ಞಾತವಾದ ಬ್ರಹ್ಮನ ಗುಣಗಳ ಸಮೂಹವಿಷಯದಲ್ಲಿ, ಉಪಾಸಾಯಾಃ= ಉಪಾಸನೆಗೆ, ವಿಧಿಃ=ವಿಧಿಯು, ಸ್ಯಾತ್=ಆಗುವುದು, ಇತಿ=ಈ ಪ್ರಕಾರ, ಮತಂ=ಸಮ್ಮತವಾಗಿದೆ. ತತಃ=ಆದಪ್ರಯುಕ್ತ, ತಯೋಃ=ಆ ಮತಗಳಿಗೆ, ಅವಿರೋಧಃ=ವಿರೋಧವಿಲ್ಲವು. (ಹಾಗಾದರೆ ಇತರ ಫಲವು ಯಾವುದು? ಸರ್ವಜ್ಞರಿಗೂ ಅಸಿದ್ಧವಾದ ಅರ್ಥವು ಹೇಗೆ? ದೇವತೆಗಳಿಗೂ ಉಪಾಸನಾವಿಧಿಯು ಹೇಗೆ ಕೂಡುವುದು ಎಂದರೆ—) ಮೋಕ್ಷೇ = ಮುಕ್ತಿಯಲ್ಲಿ, ಫಲವಿಶೇಷಃ = ಫಲವಿಶೇಷವು, ಅಸ್ತಿ=ಇದೆ. ಹಿ = ಯಾವ ಕಾರಣದಿಂದ, ಸರ್ವಂ=ಸರ್ವ ಗುಣಗಳ ಸಮುದಾಯವು, ಸರ್ವದಾ=ಯಾವಾಗಲೂ, ನ ಚ ಪ್ರಕಾಶತೇ= ಪ್ರಕಾಶಿಸುವುದಿಲ್ಲ. ಯಚ್ಚ=ಯಾವುದು, ಪ್ರಕಾಶತೇ = ಪ್ರಕಾಶಿಸುತ್ತದೋ, ತತ್=ಅದು, ಸರ್ವದಾ=ಯಾವಾಗಲೂ, ನ=ಅಲ್ಲ, ತೇನ=ಅಪ್ರಕಾಶಿತಗಳಾದ ಭಗವಂತನ ಗುಣವಿಶೇಷಗಳ ಪ್ರಕಾಶಕ್ಕಾಗಿಯೂ, ಕದಾಚಿತ್ ಪ್ರಕಾಶಿತವಾಗಿ ತಿರೋಹಿತವಾದುದಕ್ಕೆ ಪುನಃ ಪ್ರಕಾಶಕ್ಕೋಸ್ಕರ, ಅಥವಾ ಮುಕ್ತಿಯಲ್ಲಿ ಸುಖವಿಶೇಷಕ್ಕೋಸ್ಕರ, ಅಪ್ರಕಾಶಿತ ಗುಣಗಳ ಪ್ರಕಾಶಕ್ಕೋಸ್ಕರ, ದೇವಾನಾಮಪಿ=ದೇವತೆಗಳಿಗೂ, ಉಪಾಸನಾ = ಉಪಾಸನೆಯು, ಯುಕ್ತಾ=ಯೋಗ್ಯವೇ. (ಹಾಗಾದರೆ ಸರ್ವಜ್ಞರಿಗೆ ಸರ್ವವು ತೋರುವುದಿಲ್ಲವೆನ್ನುವುದು ವಿರುದ್ಧವು ಎಂದು ಹೇಳಕೂಡದು. ಪರಮೇಶ್ವರನಾದ ಶ್ರೀ ಹರಿಯಿಂದ ವ್ಯತಿರಿಕ್ತರಾದವರಿಗೆ ಸರ್ವಜ್ಞತ್ವವೇ ಸಿದ್ಧವಾಗಲಿಲ್ಲವೆನ್ನುತ್ತಾರೆ) ನಿತ್ಯಂ=ಸನಾತನವಾದುದು ಅಥವಾ ನಿರಂತರದಲ್ಲಿಯೂ, ವೃದ್ಧಿಕ್ಷಯಾಪೇತಂ=ವೃದ್ಧಿಹ್ರಾಸಗಳಿಲ್ಲದಿರುವುದು, ಪೂರ್ಣಂ=ಅಶೇಷಾರ್ಥವಿಷಯಕವಾದುದು, ಸ್ಪಷ್ಟಾತಿಸ್ಪಷ್ಟವಿಶದಂ = ನಿರತಿಶಯಸ್ಪಷ್ಟವಾದುದು, ಇಂತಹ ವೇದನಂ = ಜ್ಞಾನವು, ವಿಷ್ಣೋಃಸ್ತು= ವಿಷ್ಣುವಿಗೇನೇ. ಬ್ರಹ್ಮಣಃ ತು=ಹಿರಣ್ಯಗರ್ಭನಿಗಾದರೂ, ಅಶೇಷವಸ್ತುಗಂ=ಪರಬ್ರಹ್ಮಾತಿರಿಕ್ತವಾದ ಅಶೇಷವಸ್ತು ವಿಷಯಕವಾದುದು ಜ್ಞಾನವು. ಅನ್ಯೇಷಾಂ = ಇತರರಿಗೆ, ಕ್ರಮಶಃ= ಕ್ರಮವಾಗಿ, ಜ್ಞಾನಂ=ಜ್ಞಾನವು, ಸದಾ=ಯಾವಾಗಲೂ, ಮಿತವಸ್ತುಗತಂ=ಪರಮೇಶ್ವರಾತಿರಿಕ್ತವಾದ ಕತಿಪಯಾರ್ಥವಿಷಯಕವಾದುದು, ಇತ್ಯಾದಯಃ = ಇದುಮೊದಲಾದ, ವಿಶೇಷಾಸ್ತು=ವಿಶೇಷಗಳಾದರೂ, ಸದಾ=ಯಾವಾಗಲೂ, ವಿದ್ಯಾಪತೇಃ ತು=ವೇದವ್ಯಾಸರಿಗೇನೇ, ಹೃದಿ=ಮನಸ್ಸಿನಲ್ಲಿ, (ಇರುತ್ತವೆ.) (ತಸ್ಮಾತ್ = ಮುಖ್ಯವಾಗಿ ಸರ್ವವನ್ನು ತಿಳಿದವರಾದ ಕಾರಣ, ಅಸೌ=ಈ ವ್ಯಾಸರು, ವಿಶದವಾಗಿ ಹೇಳಿದರು.) ಜೈಮಿನ್ಯಾದ್ಯಾಸ್ತು = ಜೈಮಿನ್ಯಾದಿಗಳಾದರೂ, ಸಾಮಾನ್ಯವೇತ್ತೃತ್ವಾತ್=ಸಾಮಾನ್ಯವಾಗಿ ತಿಳಿದವರಾದುದರಿಂದ, ತತ್=ದೇವತೆಗಳಿಗೆ ಅಧಿಕಾರವಿಲ್ಲವೆನ್ನುವುದನ್ನು, ತಥಾ = ಸಂಮುಗ್ಧವಾಗಿ, ಅವದನ್ = ಹೇಳಿದರು. ಏತಸ್ಮಾತ್=ಈ ಕಾರಣದಿಂದ, ವಿದ್ಯೇಶಮತಂ=ವೇದವ್ಯಾಸರ ಸಿದ್ಧಾಂತವು ಸದ್ಭಿಃ=ಜೈಮಿನ್ಯಾದಿಗಳಿಂದ, ನೈವ ವಿರುಧ್ಯತೇ=ನಿಷೇಧಿಸಲ್ಪಡುವುದಿಲ್ಲ.

ತಾ || ನ್ಯಾಯಸುಧಾ— (೧) ಜೈಮಿನಿ ಋಷಿಯ ಮತಕ್ಕೂ, ವೇದವ್ಯಾಸರ ಮತಕ್ಕೂ ವಿರೋಧವಿಲ್ಲವೆನ್ನುವುದು ಅಯುಕ್ತವು. ಏಕೆಂದರೆ— ಜೈಮಿನಿಯು ಶ್ರುತಫಲಾದಿಗಳಿಂದ ಅತಿರಿಕ್ತವಾದ ಫಲಾದಿಗಳು ವಿದ್ಯೆಗಳಿಗೆ ಉಂಟೆಂದು ತಿಳಿದರೆ ಅಧಿಕಾರವಿಲ್ಲವೆಂದು ಹೇಗೆ ಹೇಳಿಯಾರು? (೨) ಇಲ್ಲವೆಂದು ತಿಳಿದರೆ ವಿರೋಧವಿಲ್ಲದಿರುವುದು ಹೇಗೆ ಎಂದರೆ—ಹಾಗೆ ಹೇಳಕೂಡದು. ಪೂಜ್ಯರಾದ ಸೂತ್ರಕಾರರು ಅಶೇಷವಿಶೇಷಗಳನ್ನು ತಿಳಿದವರಾದುದರಿಂದ ಸ್ಪಷ್ಟವಾದದ್ದು ಅವರ ವಚನವು. ಜೈಮಿನಿಯಾದರೂ ಸಾಮಾನ್ಯವಾಗಿ ತಿಳಿದವನು, ಫಲಾಂತರಾದಿಗಳನ್ನು ತಿಳಿಯದಿರುವುದರಿಂದ ನಿರಾಕರಿಸಲಿಲ್ಲ. ಯಥಾಶ್ರುತವಾಗಿ ಅಂಗೀಕರಿಸಿ ಅಧಿಕಾರವಿಲ್ಲವೆಂದು ಹೇಳಿರುವುದರಿಂದ ವಿರೋಧವಿಲ್ಲ.

## ಸಾರಾಂಶಃ —

ಸ. ರ. ವಿ— (1) 'ಅಸಾವಾದಿತ್ಯೋ ದೇವಮಧು ಸ ಯ ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾ ಅಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ' ಇತ್ಯಾದಿ ಶ್ರುತಿಗಳಲ್ಲಿ ಮಧುವಿದ್ಯೆಗೆ ವಸ್ವಾದಿಪದವು ಫಲವೆಂದು ಶ್ರುತವಾಗುತ್ತದೆ. ವಸ್ವಾದಿಪದವನ್ನು ಹೊಂದಿರುವಪ್ರಯುಕ್ತ ಮಧುವಿದ್ಯೆಯಲ್ಲಿ ಅವರಿಗೆ ಅಧಿಕಾರವಿಲ್ಲವೆಂದು ಹೇಳಕೂಡದು. ಮೋಕ್ಷದಲ್ಲಿ ಅತಿಶಯಸುಖಕ್ಕಾಗಿ ಮಧುವಿದ್ಯೆಯಲ್ಲಿಯೂ ಅಧಿಕಾರವು ಕೂಡಬಹುದು. 'ಯಾವತ್ಸೇವಾ ಪರೇ ತತ್ವೇ ತಾವತ್ಸುಖವಿಶೇಷತಾ' ಎಂದು ಸ್ಕಾಂದವಚನವು. ಸರ್ವಜ್ಞರಾಗಿರುವುದರಿಂದ ಪರಮಾತ್ಮನ ತತ್ವವನ್ನು ತಿಳಿದ ದೇವತೆಗಳಿಗೆ 'ಸ ಆತ್ಮೇತಿ ವಿದ್ಯಾತ್' ಇತ್ಯಾದಿ ವಿಧಿಗಳಿಗೆ ವೈಯರ್ಥ್ಯವೆನ್ನಕೂಡದು. ಸಂಪೂರ್ಣವಾಗಿ ಭಗವತ್ತತ್ವಜ್ಞಾನವಿದೆ ಎನ್ನುವಲ್ಲಿ ಪ್ರಮಾಣವಿಲ್ಲ. 'ಸಹ್ಯೈವ ಸಂತಂ ನ ವಿಜಾನಂತಿ ದೇವಾಃ' ಇತ್ಯಾದಿ ಶ್ರುತಿಗಳಿಂದ ಭಗವದಂಶವನ್ನು ತಿಳಿದವರಾದಾಗ್ಯೂ ಕದಾಚಿತ್ ಅವರಿಗೆ ವಿಸ್ಮರಣವು ಕೂಡಬಹುದು. ಆದಪ್ರಯುಕ್ತ ದೇವತೆಗಳಿಗೂ 'ಆತ್ಮಾನಮೇವ ಲೋಕಮುಪಾಸೀತ' ಇದು ಮೊದಲಾದ ಉಪಾಸನಾವಿಧಿಗಳು ಕೂಡಬಹುದು. (2) ಯಾವ ಕಾರಣದಿಂದ ವಿಷ್ಣುವಿಗೇನೇ ಪರಿಪೂರ್ಣಜ್ಞಾನವು, ಬ್ರಹ್ಮನನ್ನು ಆರಂಭಿಸಿ ಇತರ ದೇವತೆಗಳಿಗಾದರೂ ಕ್ರಮದಿಂದ ಜ್ಞಾನವು ಹ್ರಸಿತವಾಗಿದೆ ಆದಪ್ರಯುಕ್ತ ದೇವತೆಗಳಿಗೆ ಶ್ರವಣಮನನಾದಿಗಳು ಯುಕ್ತವೇ ಆಗಿರುತ್ತವೆ. ಆದುದರಿಂದ ಪುರುಷರಲ್ಲಿ ಜ್ಞಾನಗಳಿಗೆ ತರತಮಭಾವವಿದ್ದಪ್ರಯುಕ್ತ ವೇದವ್ಯಾಸ ಜೈಮಿನಿ ಮತಗಳಿಗೆ ತಾರತಮ್ಯವ್ಯವಸ್ಥೆಯೂ ಕೂಡುತ್ತದೆ. ವಿರೋಧವೂ ಇಲ್ಲ.

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ
ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ ॥

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ನಿರ್ಮಿಸಿರುವ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ
ಒಂದನೇ ಅಧ್ಯಾಯದಲ್ಲಿ ಮೂರನೇ ಪಾದವು ಸಮಾಪ್ತವಾಯಿತು ॥ ೧ ॥ ೩ ॥



|| ಶ್ರೀಃ ||

# ನಾಲ್ಕನೇ ಪಾದವು.



ಓಂ || ಪರಂ ಪರಸ್ಮಾತ್ಪ್ರಕೃತೇರನಾದಿ
ಮೇಕಂ ನಿವಿಷ್ಟಂ ಬಹುಧಾ ಗುಹಾಯಾಂ |
ಸರ್ವಾಲಯಂ ಸರ್ವ ಚರಾಚರಸ್ಥಂ
ನಮಾಮಿ ವಿಷ್ಣುಂ ಜಗದೇಕನಾಥಂ ||

**ದೇವಚೂಡಾಮಣಿಂ ಪೂರ್ಣಬೋಧಂ ಕೃಷ್ಣಪಾದಾರವಿಂದೈಕದಾಸಂ |**
**ಚಿತ್ತಚಿಂತಾಮಣಿಂ ಪೂರ್ಣರೂಪಂ ನಂದಯಾನೋ ವಯಂ ನಂದತೀರ್ಥಂ ||**

ಈ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧಗಳಾದ ದುಃಖಿ ಬದ್ಧ ಅವರ ಇತ್ಯಾದಿ ಶಬ್ದಗಳಿಗೆ ಸಮನ್ವಯವನ್ನು ಪ್ರತಿಪಾದಿಸುತ್ತಾರೆ—

**('ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತ ಗೃಹೀತೇರ್ದರ್ಶಯತಿ ಚ ಓಂ') || ಸೂ. ೧ ||**

('ಅವ್ಯಕ್ತಾತ್ಪುರುಷಃ ಪರಃ' 'ಜೀವಾ ಏವ ತು ದುಃಖಿನಃ' ಎನ್ನುವಲ್ಲಿ ಹೇಳಲ್ಪಟ್ಟ ಅವ್ಯಕ್ತ ಜೀವ ಬದ್ಧಾದಿ ಶಬ್ದಗಳಿಂದ) ಆನುಮಾನ್ನಿಕಮಪಿ=ಅನುಮಾನದಿಂದ ಗಮ್ಯಮಾನ ಪ್ರಧಾನಾದಿಗಳೇ, ಏಕೇಷಾಂ = ಕೆಲವರ ಶಾಖೆಗಳಲ್ಲಿ ಹೇಳಿಸಿಕೊಳ್ಳಲ್ಪಡುತ್ತವೆ. ಇತಿ ಚೇನ್ನ=ಎಂದರೆ, ಹೀಗೆ ಹೇಳಕೂಡದು. 'ಅವ್ಯಕ್ತಮಚಲಂ ಶಾಂತಂ' ಎನ್ನುವ ಶ್ರುತಿಯೂ, 'ಅವ್ಯಕ್ತೋಽಕ್ಷರ ಉಚ್ಯತೇ' ಎನ್ನುವ ಸ್ಮೃತಿಯೂ ಹಾಗೆಯೇ 'ಅನೇನ ಜೀವೇನಾತ್ಮನಾ' ಎನ್ನುವ ಶ್ರುತಿಯೂ, 'ಜೀವೋ ವಿನಿಯಿತಾ ಸಾಕ್ಷೀ' ಎನ್ನುವ ಸ್ಮೃತಿಯೂ, 'ಅವ್ಯಕ್ತಾದಿ ಶಬ್ದವಾಚ್ಯನು ಬ್ರಹ್ಮನೆಂದು ಯಾವ ಕಾರಣದಿಂದ ತೋರಿಸುತ್ತದೋ ಆದಕಾರಣ ಅವ್ಯಕ್ತಾದಿ ಶಬ್ದವಾಚ್ಯನು ಪರಮ ಮುಖ್ಯವೃತ್ತಿಯಿಂದ ಬ್ರಹ್ಮನೇ, ಪ್ರಧಾನಾದಿಗಳಲ್ಲ. (ವಿಷ್ಣುವೇ ಅವ್ಯಕ್ತಾದಿ ಶಬ್ದಗಳಿಂದ ಹೇಳಿಸಿಕೊಳ್ಳಲ್ಪಡುವುದಾದರೆ ಪ್ರಧಾನಾದಿಗಳಲ್ಲಿ ವ್ಯವಹಾರವು ಹೇಗೆ ಕೂಡುತ್ತದೆಂದರೆ—)'ಅವ್ಯಕ್ತಾದಿ ಶಬ್ದಗಳಿಂದ ವಾಚ್ಯನಾದ ಶ್ರೀ ಹರಿಯ ಸಂಬಂಧದಿಂದಲೇ ಪ್ರಧಾನಾದಿಗಳಲ್ಲಿ ಅವ್ಯಕ್ತಾದಿ ಶಬ್ದಗಳ ವ್ಯವಹಾರವು. ಜೀವರ ಶರೀರವು ಹೇಗೆ ಜೀವಾಧೀನವೋ ಹಾಗೆಯೇ ಪ್ರಧಾನಾದಿಗಳೂ ಪರಬ್ರಹ್ಮನ ಅಧೀನಗಳು || ೧ ||

ಶ್ರೌತಸ್ಮಾರ್ತಪ್ರಯೋಗವಿದ್ದರೂ ಅವ್ಯಕ್ತಾದಿ ಶಬ್ದಗಳು ವಿಷ್ಣುವಿನಲ್ಲಿ ಹೇಗೆ ಮುಖ್ಯಗಳೆಂದರೆ—

**('ಓಂ ಸೂಕ್ಷ್ಮಂ ತು ತದರ್ಹತ್ವಾತ್ ಓಂ') || ಸೂ. ೨ ||**

ಸೂಕ್ಷ್ಮವಾದ ವಸ್ತುವೇ ಅವ್ಯಕ್ತಶಬ್ದವಾಚ್ಯವು. ಸೂಕ್ಷ್ಮವಾದ ವಸ್ತುವಿಗೇನೇ ಅವ್ಯಕ್ತತ್ವವು ಯೋಗ್ಯವಾಗಿರುವುದರಿಂದ. ಅಂದರೆ ಸೂಕ್ಷ್ಮವಾದ ವಸ್ತುವೇ ಅವ್ಯಕ್ತಶಬ್ದ ಪ್ರವೃತ್ತಿನಿಮಿತ್ತವಾದ

ಅವ್ಯಕ್ತತ್ವಕ್ಕೆ ಅರ್ಹವಾಗಿರುವುದರಿಂದ ಅವ್ಯಕ್ತಶಬ್ದವಾಚ್ಯನು ಬ್ರಹ್ಮನೇ. 'ಯತ್ತತ್ಸೂಕ್ಷ್ಮಂ ಪರಮಂ ವೇದಿತವ್ಯಂ' ಇತ್ಯಾದಿ ಶ್ರುತಿಗಳದ್ವೆಸೆಯಿಂದ ಅತಿ ಸೂಕ್ಷ್ಮವಾದುದು ಅವ್ಯಕ್ತ ಶಬ್ದ ಮುಖ್ಯಾರ್ಥವು ॥ ೨ ॥

ಇಲ್ಲಿ "**ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ**" ಎನ್ನುವ ವಾಕ್ಯವನ್ನು ಉದಾಹರಿಸಿ ಅವ್ಯಕ್ತಶಬ್ದವಾಚ್ಯನು ಪರಬ್ರಹ್ಮನೇ ಎಂದು ಉಪಪಾದಿಸಿರುವರು. ಆ ವಿಷಯದಲ್ಲಿ ಪೂರ್ವಪಕ್ಷಿಯು ಅವ್ಯಕ್ತಶಬ್ಯವಾಚ್ಯನು ಪರಬ್ರಹ್ಮನೆಂದಾದರೆ ಆಗ ಪರಬ್ರಹ್ಮನಿಗೆ ಪುರುಷನಿಂದ ಅವರತ್ವವು (ನಿಕೃಷ್ಟತ್ವವು) ಬರಬೇಕಾಗುವುದು. ಸರ್ವ ಶ್ರುತಿ ಸ್ಮೃತ್ಯಾದಿಗಳ ವಿರೋಧವು ಬರುವುದರಿಂದ ಅದು ಯುಕ್ತವಲ್ಲವೆಂದಾಶಂಕಿಸಿದರೆ ಅದನ್ನು ಪರಿಹರಿಸುವುದಕ್ಕಾಗಿ ಸೂತ್ರವು.

**"ಓಂ ತದಧೀನತ್ವಾದರ್ಥವತ್ ಓಂ"** ॥ ಸೂ. ೩ ॥

ಅವರತ್ವಾಕ್ಷೇಪಕವಾದ ಅವಧಿತ್ವಾದಿಗಳನ್ನು ಹೇಳತಕ್ಕ ಪಂಚಮ್ಯಾದಿ ಶಬ್ದಗಳ ಸಮುದಾಯವು ಪರಬ್ರಹ್ಮನಲ್ಲಿ ಅರ್ಥವುಳ್ಳದ್ದು, ವ್ಯರ್ಥವಲ್ಲ. ಅವರತ್ವ ದುಃಖಿತ್ವಾದಿಧರ್ಮಗಳು ಬ್ರಹ್ಮನ ಅಧೀನಗಳಾಗಿರುವುದರಿಂದ ಅಂದರೆ, ಬ್ರಹ್ಮನಲ್ಲಿ ಅವರತ್ವಾದಿಗಳು ಇಲ್ಲದಿದ್ದರೂ ಅನ್ಯರಲ್ಲಿರತಕ್ಕ ಅವರತ್ವಾದಿಗಳು ಶ್ರೀ ಹರಿಯ ಅಧೀನಗಳಾಗಿರುವುದರಿಂದ ಅವರತ್ವಾದಿ ವಾಚಕ ಶಬ್ದವು ಶ್ರೀ ಹರಿಯಲ್ಲಿದೆ ॥ ೩ ॥

**('ಓಂ ಜ್ಞೇಯತ್ವಾವಚನಾಚ್ಚ ಓಂ')** ॥ ಸೂ ೪ ॥

ಅವ್ಯಕ್ತಾದಿ ಶಬ್ದಗಳಿಂದ ಮುಖ್ಯ ವಾಚ್ಯನಾದವನು ಬ್ರಹ್ಮನೇ. ಪ್ರಧಾನ ಮೊದಲಾದುದಲ್ಲ. 'ತಮೇವೈಕಂ ಜಾನಥಾತ್ಮನಂ' ಎಂದು ಮೋಕ್ಷಕ್ಕಾಗಿ ಬ್ರಹ್ಮನಿಗೇನೇ ಚೆನ್ನಾಗಿ ಜ್ಞೇಯತ್ವವನ್ನು ಪ್ರತಿಪಾದಿಸಿರುವುದರಿಂದಲೂ, 'ಅನ್ಯಾಃ ವಾಚೋ ವಿಮುಂಚಥ' ಎಂದು ಪ್ರಧಾನಾದಿಗಳಿಗೆ ಅಜ್ಞೇಯತ್ವವನ್ನು ಪ್ರತಿಪಾದಿಸಿರುವುದರಿಂದಲೂ, ॥ ೪ ॥

**('ಓಂ ವದತೀತಿ ಚೇನ್ನ ಪ್ರಾಜ್ಞೋ ಹಿ ಓಂ')** ॥ ಸೂ. ೫ ॥

**'ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ'** ಎನ್ನುವ ಉತ್ತರವಾಕ್ಯವು ಪ್ರಧಾನಕ್ಕೂ ಮುಮುಕ್ಷುಜ್ಞೇಯತ್ವವನ್ನು ಹೇಳುತ್ತದೆ, ಎಂದು ಹೇಳಕೂಡದು. ಏಕೆಂದರೆ— ಉತ್ತರವಾಕ್ಯದಲ್ಲಿ ಪ್ರಾಜ್ಞರೂಪಿಯಾದ ಪರಮಾತ್ಮನೇ ಮೋಕ್ಷಕ್ಕಾಗಿ ಜ್ಞೇಯನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ ॥ ೫ ॥

**('ಓಂ ಪ್ರಕರಣಾತ್ ಓಂ')** ॥ ಸೂ. ೬ ॥

**'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ'** ಎನ್ನುವಲ್ಲಿ ವಿಷ್ಣು ಪದವು ಪ್ರಾಪ್ತಿಯಾಗುತ್ತದೆಂದು ಹೇಳಿರುವುದರಿಂದ ನಿರ್ಣೀತವಾದ ಪ್ರಕರಣದಿಂದ ಉತ್ತರವಾಕ್ಯದಲ್ಲಿ ಪ್ರಾಜ್ಞರೂಪಿಯಾದ ಶ್ರೀ ಹರಿಯೇ ಹೇಳಿಸಿಕೊಳ್ಳಲ್ಪಡುತ್ತಾನೆ ॥ ೬ ॥

**('ಓಂ ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ ಓಂ')** ॥ ಸೂ. ೭ ॥

'ಮಹತಃ ಪರಂ ಧ್ರುವಂ' ಎನ್ನುವಲ್ಲಿ ಶ್ರೀ ಹರಿಯೇ ಹೇಳಿಸಿಕೊಳ್ಳಲ್ಪಡುತ್ತಾನೆ. ಏಕೆಂದರೆ— ಪಿತೃಸೌಮನಸ್ಯ, ಸ್ವರ್ಗ್ಯಾಗ್ನಿ, ಪರಮಾತ್ಮ— ಈ ಮೂವರ ವಿಷಯಕವಾದ

ಪ್ರಶ್ನೆಯೇ ಕ್ರಮವಾಗಿ ನಚಿಕೇತಋಷಿಯಿಂದ ಮಾಡಲ್ಪಟ್ಟಿತು. ಯಮನಿಂದ ಉತ್ತರವೂ ಕೊಡಲ್ಪಟ್ಟಿತು. ಅಂದರೆ— ೧ **'ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾತ್ ವೀತಮನ್ಯುಃ'** (ಕಾಠ ಉ. ಪು. ೨೬) ಎಂದು ಪಿತೃಸೌಮನಸ್ಯ ಪ್ರಶ್ನೆಯು; **'ಯಥಾ ಪುರಸ್ತಾದ್ಭವಿತಾ ಪ್ರತೀತಃ'** (ಪು. ೨೭) ಎಂದು ಉತ್ತರವು; ೨ **'ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ'** (ಪು. ೨೮)ಎಂದು ಸ್ವರ್ಗ್ಯಾಗ್ನಿ ಪ್ರಶ್ನೆಯು;**'ಪ್ರ ತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್'** (ಪು. ೨೮) ಎಂದು ಉತ್ತರವು; (೩)**'ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ'** (ಪು. ೩೧) ಇತ್ಯಾದಿ ಪರಮಾತ್ಮನ ಪ್ರಶ್ನೆಯು, **'ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ'** (ಪು. ೩೧) ಎಂದು ಉತ್ತರವು ॥ ೭ ॥

## ('ಓಂ ಮಹದ್ವಚ್ಚ ಓಂ') ॥ ಸೂ. ೮ ॥

ಮಹಚ್ಛಬ್ದವು ಮಹತ್ತತ್ವದಲ್ಲಿ ಪ್ರಸಿದ್ಧವಾದಾಗ್ಯೂ 'ಮಹಾಂತಂ ವಿಭುಮಾತ್ಮಾನಂ' ಇತ್ಯಾದಿಗಳಲ್ಲಿ ಮಹತ್ವರೂಪಪ್ರವೃತ್ತಿ ನಿಮಿತ್ತವಿದ್ದುದರಿಂದ ವಿಷ್ಣುವಿನಲ್ಲಿಯೇ ಮುಖ್ಯವೋ, ಹಾಗೆಯೇ ಅವ್ಯಕ್ತಮೊದಲಾದ ಶಬ್ದವೂ ಬೇರೆಕಡೆ ಪ್ರಸಿದ್ಧವಾಗಿರುವುದರಿಂದ ಬ್ರಹ್ಮನಲ್ಲಿ ಪ್ರಸಿದ್ಧವಾಗದೆ ಇದ್ದಾಗ್ಯೂ ನಿಮಿತ್ತಾತಿಶಯದಿಂದ ಬ್ರಹ್ಮನಲ್ಲಿಯೇ ಮುಖ್ಯವಾಗಿದೆ ॥ ೮ ॥

## ('ಓಂ ಚಮಸವದವಿಶೇಷಾತ್ ಓಂ') ॥ ಸೂ. ೯ ॥

ಚಮಸಶಬ್ದವು ಯಜ್ಞಪಾತ್ರದಲ್ಲಿ ಪ್ರಸಿದ್ಧವಾದಾಗ್ಯೂ **'ಇದಂ ತಚ್ಛಿರಃ ಏಷ ಹ್ಯರ್ವಾಗ್ಬಿಲಃ ಚಮಸಃ ಊರ್ಧ್ವಬುಧ್ನಃ'** ಎನ್ನುವ ಶ್ರುತಿಯುದ್ದೇಶೆಯಿಂದ ಶಿರೋವಾಚಕವೋ ಹಾಗೆಯೇ ಅವ್ಯಕ್ತಾದಿ ಶಬ್ದವೂ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎನ್ನುವ ಶ್ರುತಿಯ ಬಲದಿಂದ ಬ್ರಹ್ಮವಾಚಕವೇ. ಬ್ರಹ್ಮನಲ್ಲಿಯೇ ಮುಖ್ಯವು. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎನ್ನುವ ಶ್ರುತಿಗೆ 'ಇದಂ ತಚ್ಛಿರಃ' ಎನ್ನುವ ಶ್ರುತಿಯಿಂದ ವಿಶೇಷವಿಲ್ಲ. ಇದೂ ಅನುಶಾಸನರೂಪವಾಗಿದೆ ॥ ೯ ॥

ಈಗ 'ತದಧೀನತ್ವಾದರ್ಥವತ್' ಎನ್ನುವ ಸೂತ್ರಾರ್ಥವನ್ನು ವಿವರಿಸುತ್ತಾರೆ—

**ಸ. ರ. ವಿ**— (1) 'ತತ್ತು ಸಮನ್ವಯಾತ್' ಎನ್ನುವುದರಿಂದ ಎಲ್ಲಾ ವೇದಗಳಲ್ಲಿರತಕ್ಕ ವಾಕ್ಯ ಪದ ವರ್ಣಗಳಿಗೆ ಸಮನ್ವಯವನ್ನು ಬ್ರಹ್ಮನಲ್ಲಿ ಪ್ರತಿಜ್ಞಾಮಾಡಿರುವರು. ಅದರಲ್ಲಿ ಹಿಂದಿನ ಪಾದಗಳಿಂದ ಜಗತ್ಕರ್ತೃತ್ವ ಮೊದಲಾದ ಕಲ್ಯಾಣ ಗುಣಗಳನ್ನು ಪ್ರತಿಪಾದಿಸುವ ವಾಕ್ಯಗಳಿಗೆ ಅನ್ಯಪರತ್ವವನ್ನು ನಿಷೇಧಿಸಿ ವಿಷ್ಣುಪರತ್ವವನ್ನು ಪ್ರತಿಪಾದಿಸಿರುವರು. ಈ ಪಾದದಲ್ಲಿ ಸರ್ವಥಾ ಶ್ರೀಹರಿಯನ್ನು ಪ್ರತಿಪಾದಿಸಲಿಕ್ಕೆ ಅಯೋಗ್ಯಗಳೆಂದು ತೋರುವ ಪದವರ್ಣಾದಿಗಳಿಗೆ ವಿಷ್ಣುಪರತ್ವವನ್ನು ತೋರಿಸುತ್ತಾರೆ. ಈ ಪ್ರಥಮಾಧಿಕರಣದಲ್ಲಿ ದುಃಖಿ ಬದ್ಧ ಮೊದಲಾದ ಶಬ್ದಗಳಿಗೆ ಬ್ರಹ್ಮಪರತ್ವವನ್ನು ತೋರಿಸುತ್ತಾರೆ—

**ಮೂ ॥ ದುಃಖಿಬದ್ಧಾವರಾದ್ಯಾಸ್ತು ತದಧೀನತ್ವಹೇತುತಃ ।**
**ಶಬ್ದಾಃ ಬ್ರಹ್ಮಣಿ ವರ್ತಂತೇ ರಾಜ್ಞಿ ಯದ್ವತ್ಪರಾಜಯಃ ॥ ೧ ॥**

**ಅ ॥** ರಾಜ್ಞಿ=ಅರಸನಲ್ಲಿ, ಯದ್ವತ್=ಹೇಗೆ, ಪರಾಜಯಃ=ಪರಾಜಯವೋ, ಅಂದರೆ— ಭೃತ್ಯಾದಿಗಳು ರಾಜನ ಅಧೀನರಾಗಿರುವುದರಿಂದ ಭೃತ್ಯರು ಪರಾಜಿತರಾಗಲು ರಾಜಾ ಪರಾಜಿತಃ=

ರಾಜನು ಪರಾಜಿತನಾದನೆಂದು ಹೇಳಿಸಿಕೊಳ್ಳಲ್ಪಡುತ್ತಾನೋ,ಅಂತೂ ಭೃತ್ಯಸಮವೇತವಾದ ಪರಾಜಯವು ರಾಜನ ಅಧೀನವಾಗಿರುವುದರಿಂದ ಹೇಗೆ ರಾಜನಲ್ಲಿ ಪರಾಜಯನಿಮಿತ್ತಕವಾದ ಪರಾಜಯಿಯಾ ಭದ್ರಸೇನಃ=ಭದ್ರಸೇನನು ಪರಾಜಯವುಳ್ಳವನೆನ್ನುವ ಶಬ್ದವು ಇದೆಯೋ ಹಾಗೆಯೇ, ದುಃಖಿಬದ್ಧಾವರಾದ್ಯಾಃ = ದುಃಖಿ ಬದ್ಧ ಅವರ ಮೊದಲಾದ, ಶಬ್ದಾಸ್ತು = ಶಬ್ದಗಳಾದರೂ, ತದಧೀನತ್ವಹೇತುತಃ = ಅವರತ್ವಾದಿಗಳುಳ್ಳ ಪ್ರಧಾನಾದಿಗಳಿಗೆ ಶ್ರೀ ಹರಿಯ ಅಧೀನತ್ವವಿದ್ದ ಪ್ರಯುಕ್ತ, ಬ್ರಹ್ಮಣಿ=ಪರಬ್ರಹ್ಮನಲ್ಲಿ, ವರ್ತಂತೇ=ಇರುತ್ತವೆ. ಅಂದರೆ, ಧನವು ಪೆಟ್ಟಿಗೆಯಲ್ಲಿದ್ದರೂ ಧನಸ್ವಾಮಿಯು 'ಧನೀ' ಎನ್ನುವ ಶಬ್ದದಿಂದ ಹೇಗೆ ಹೇಳಿಸಿಕೊಳ್ಳಲ್ಪಡುತ್ತಾನೋ, ಹಾಗೆಯೇ ದುಃಖಾದಿಗಳುಳ್ಳ ಜೀವರಿಗೆ ಶ್ರೀ ಹರಿಯೇ ಸ್ವಾಮಿಯಾಗಿರುವುದರಿಂದ ದುಃಖೀ ಬದ್ಧಃ ಅವರಃ ಇದೇ ಮೊದಲಾದ ಶಬ್ದಗಳಿಂದ ಹೇಳಿಸಿಕೊಳ್ಳಲ್ಪಡುತ್ತಾನೆ.

**ತಾ ||** **ನ್ಯಾಯಸುಧಾ—** (1) ಯಾವ ವಾಕ್ಯದಲ್ಲಿ ಸರ್ವೇಶ್ವರತ್ವಕ್ಕೆ ವಿರೋಧಿಯಾದ ದುಃಖಿತ್ವಾದಿಗಳು ತೋರುತ್ತವೋ ಆ ಎಲ್ಲಾ ವಾಕ್ಯಗಳಿಗೂ (ಅಂದರೆ, 'ಜೀವಾ ಏವ ತು ದುಃಖಿನಃ' 'ಯೋನಿಮನ್ಯೇ ಪ್ರಪದ್ಯಂತೇ' ಇತ್ಯಾದಿಗಳಿಗೆ) ಈ ಅಧಿಕರಣದಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. (2) ದುಃಖ್ಯಾದಿ ಶಬ್ದಗಳಿಗೆ ಬ್ರಹ್ಮಪರತ್ವವಿದ್ದರೂ ಬ್ರಹ್ಮನಿಗೆ ದುಃಖಿತ್ವಾದಿಗಳು ಪ್ರಾಪ್ತಗಳಾಗುವುದಿಲ್ಲ. ಏಕೆಂದರೆ— ದುಃಖಿಮೊದಲಾದ ಶಬ್ದಗಳ ಸಾಮರ್ಥ್ಯದಿಂದಲೇ ದುಃಖಿತ್ವಾದಿಗಳ ಪ್ರಾಪ್ತಿಯು. ಅಂತೂ ಪ್ರಮಾಣವಿರೋಧವನ್ನು ಹೇಳಬೇಕು. ದುಃಖ್ಯಾದಿ ಶಬ್ದವು ದುಃಖಾದಿಸಮವಾಯವನ್ನು ಹೇಳುವುದಲ್ಲ. ಮತ್ತೆ 'ತದಸ್ಯಾಸ್ತ್ಯಸ್ಮಿನ್ನಿತಿಮತುಪ್' ಎನ್ನುವುದರಿಂದ ಸಂಬಂಧವನ್ನು ಮಾತ್ರ ಹೇಳುತ್ತದೆ. ಸಂಬಂಧವು ಸಮವಾಯದಂತೆ ಸ್ವಾಮಿತ್ವವೂ (ನಿಯಾಮಕತ್ವವೂ) ಆಗುತ್ತದೆ. 'ನಿರಸ್ತೋ ನಿರವದ್ಯಃ' ದುಃಖಮೊದಲಾದ ಅನಿಷ್ಟಗಳು ಇಲ್ಲದಿರುವವನು, ಅಜ್ಞಾನ ಪಾರತಂತ್ರ್ಯ ಮೊದಲಾದ ದೋಷಲೇಶರಹಿತನು, ಇದುಮೊದಲಾದ ನಿರವಕಾಶ ಶ್ರುತಿಗಳ ಬಲದಿಂದ ಶ್ರೀ ಹರಿಯಲ್ಲಿ ದುಃಖಾದಿಗಳು ಸರ್ವಥಾ ಇಲ್ಲವೆಂದು ತಿಳಿಯುತ್ತವೆ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಲ್ಲಾ ನಾಮಗಳೂ ಶ್ರೀ ಹರಿಯನ್ನೇ ಪರಮಮುಖ್ಯವೃತ್ತಿಯಿಂದ ಹೇಳುತ್ತವೆ, ಇತ್ಯಾದಿ ನಿರವಕಾಶಶ್ರುತಿಗಳ ಬಲದಿಂದ ದುಃಖಿಮೊದಲಾದ ಎಲ್ಲಾ ಶಬ್ದಗಳಿಂದ ವಾಚ್ಯನೆಂದೂ ತಿಳಿದುಬರುತ್ತದೆ. ಈ ಎರಡು ಶ್ರುತಿಗಳನ್ನು ಅನುಸರಿಸಿ ದುಃಖಾದಿಗಳು ಶ್ರೀ ಹರಿಯಲ್ಲಿ ಸರ್ವಥಾ ಇಲ್ಲದಿದ್ದರೂ ಜೀವರಲ್ಲಿರುವ ದುಃಖಾದಿಗಳಿಗೆ ಶ್ರೀ ಹರಿಯೇ ಸ್ವಾಮಿಯಾಗಿರುವುದರಿಂದ ದುಃಖ್ಯಾದಿಶಬ್ದವಾಚ್ಯನೆಂದು ಒಪ್ಪಿದರೆ ಯಾವ ಅನುಪಪತ್ತಿಯೂ ಇರುವುದಿಲ್ಲ. ಹೀಗೆ ಅವರಃ ಇತ್ಯಾದಿ ಶಬ್ದಗಳಲ್ಲಿಯೂ 'ಅವರಯತೀತಿ ಅವರಃ' ಎನ್ನುವ ವ್ಯುತ್ಪತ್ತಿಯಿಂದ ಅವರಾದಿ ಶಬ್ದವಾಚ್ಯತ್ವವಿದೆ ಎಂದು ತಿಳಿಯತಕ್ಕದು ॥ ೧ ॥

ಹಿಂದೆ ಹೇಳಿದ್ದನ್ನೇ ವಿವರಿಸುತ್ತಾರೆ—

**ಮೂ ॥ ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದಪ್ರವೃತ್ತೇರ್ಹಿ ಕಾರಣಂ ।**
**ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್ ಕುತೋ ರಾಜ್ಞಿ ಜಯೋಽನ್ಯಥಾ ॥ ೨ ॥**

ಅ ॥ ಸ್ವಾತಂತ್ರ್ಯಂ=ದುಃಖಿತ್ವಾದಿ ಧರ್ಮಾಪಾದಕತ್ವವೂ, ತದ್ಗತತ್ವಂ ಚ=ದುಃಖಿತ್ವಾದಿ ಧರ್ಮಾಧಿಕರಣತ್ವವೂ,ಶಬ್ದಪ್ರವೃತ್ತೇಃ ಕಾರಣಂ ಹಿ=ದುಃಖಿಮೊದಲಾದ ಶಬ್ದಪ್ರವೃತ್ತಿಗೆ ನಿಮಿತ್ತವು, ತತ್ರ=ಸ್ವಾತಂತ್ರ್ಯ ತದ್ಗತತ್ವಗಳ ಮಧ್ಯದಲ್ಲಿ, ಸ್ವಾತಂತ್ರ್ಯಂ=ಸ್ವಾತಂತ್ರ್ಯವೇ,ಮುಖ್ಯಂ ಸ್ಯಾತ್=.

ಮುಖ್ಯವಾಗಿ ಶಬ್ದಪ್ರವೃತ್ತಿನಿಮಿತ್ತವಾಗುವುದು. ತದ್ಗತತ್ವವು ಮುಖ್ಯವಾಗಿ ಅಲ್ಲ. ಅನ್ಯಥಾ= ಸ್ವಾತಂತ್ರ್ಯವು ಶಬ್ದಪ್ರವೃತ್ತಿಗೆ ಕಾರಣವಾಗದಿದ್ದರೆ, ರಾಜ್ಞಿ=ಅರಸನಲ್ಲಿ, ಜಯಃ=ಜಯನಿಮಿತ್ತಕವಾದ ಜಯಿಶಬ್ದವು, ಕುತಃ=ಯಾವ ಕಾರಣದಿಂದ.

**ತಾ ॥ ಸ. ರ. ವಿ—** (1) ದುಃಖಿತ್ವಾದಿಧರ್ಮಾಪಾದಕತ್ವವೂ, ದುಃಖಿತ್ವಾದಿಧರ್ಮಾಧಿಕರಣತ್ವವೂ ದುಃಖಿಮೊದಲಾದ ಶಬ್ದಗಳ ಪ್ರವೃತ್ತಿಗೆ ಕಾರಣವು. ಅವುಗಳಲ್ಲಿ ಜೀವರಿಗೆ ದುಃಖಿತ್ವಾದಿಧರ್ಮಗಳನ್ನು ಆಪಾದಿಸುವುದರಿಂದ ಶ್ರೀಹರಿಗೆ ದುಃಖಿಮೊದಲಾದ ಶಬ್ದವಾಚ್ಯತ್ವವು ಕೂಡುತ್ತದೆ. ಈ ವಿಷಯವು **"ಸ ಬದ್ಧಃ ಸ ದುಃಖೀ ಸ ಬಂಧಯತೀತಿ ಸ ದುಃಖಯತೀತಿ ಸ ಜೀವಃ ಸ ಪ್ರಕೃತಿಃ ಸ ಜೀವಯತೀತಿ ಸ ಪ್ರಕರೋತೀತಿ ಸೋಽವರಃ ಸೋಽನಿತ್ಯಃ ಸೋಽವರಯತೀತಿ ಸೋಽನಿತ್ಯಯತೀತಿ"** ಎಂದು ವೈಷ್ಣವಶ್ರುತಿಯಲ್ಲಿ ಹೇಳಲ್ಪಟ್ಟದೆ. (2) ಹೇಗೆ ರಾಜನು ಜಗದೀಶನಾದ ಶ್ರೀ ಹರಿಯಕ್ಕಿಂತ ಅತ್ಯಲ್ಪ ಸ್ವಾಮಿಯಾದಾಗ್ಯೂ, ಭೃತ್ಯರು ಶತ್ರುಗಳನ್ನು ಜಯಿಸಿದೊಡನೆಯೇ 'ರಾಜಾ ಜಯಿ' ಎಂದು ಹೇಳಿಸಿಕೊಳ್ಳಲ್ಪಡುತ್ತಾನೋ, ಆ ಜಯಿಶಬ್ದವನ್ನು ರಾಜನಲ್ಲಿಯೇ ಎಲ್ಲರೂ ಪ್ರಯೋಗಿಸುವುದರಿಂದ ಆತನಲ್ಲಿಯೇ ಮುಖ್ಯವು. ಭೃತ್ಯನಲ್ಲಿಯಾದರೂ ಹೆಚ್ಚು ಪ್ರಯೋಗವಿಲ್ಲ. ಹೀಗೆಯೇ ಬದ್ಧಾದಿಶಬ್ದಗಳೂ ವಿಷ್ಣುವಿನಲ್ಲಿಯೇ ಮುಖ್ಯಗಳು.

**ನ್ಯಾಯಸುಧಾ—** (1) ಯಾವ ಕಾರಣದಿಂದ ಜೀವನಲ್ಲಿ ಪ್ರವೃತ್ತಿನಿಮಿತ್ತಗಳಾದ ದುಃಖಾದಿಗಳ ಸಮವಾಯ ಇದ್ದಂತೆಯೇ ದುಃಖಾದಿಗಳ ಸ್ವಾತಂತ್ರ್ಯವೂ ಪರರಲ್ಲಿದ್ದದ್ದು ದುಃಖಿ ಮೊದಲಾದ ಶಬ್ದಪ್ರವೃತ್ತಿಗೆ ಕಾರಣವು. 'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್' ಎನ್ನುವ ಅನುಶಾಸನವೂ 'ರಾಜಾ ಪರಾಜಯಿ' ಎನ್ನುವ ಪ್ರಯೋಗವೂ ದುಃಖಾಧಿಕರಣನಲ್ಲಿಯೂ, ದುಃಖಸ್ವಾಮಿಯಲ್ಲಿಯೂ ಸಮಾನವಾಗಿದೆ. ಆದಪ್ರಯುಕ್ತ ದುಃಖಿಮೊದಲಾದ ಶಬ್ದಗಳೂ 'ನಿರನಿಷ್ಟೋ ನಿರವದ್ಯಃ' 'ನಾಮಾನಿ ಸರ್ವಾಣಿ' ಎನ್ನುವ ಎರಡು ಶ್ರುತಿಗಳ ಅನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯ ಬಲದಿಂದ ಪ್ರವೃತ್ತಿನಿಮಿತ್ತಕ್ಕೆ ಸ್ವಾಮಿಯಾದಪ್ರಯುಕ್ತವೇ ಶ್ರೀ ಹರಿಯಲ್ಲಿ ಇರುತ್ತವೆ. (2) ಸ್ವಾತಂತ್ರ್ಯವೂ ಶಬ್ದಪ್ರವೃತ್ತಿನಿಮಿತ್ತವಾಗಲಿ, ಆದರೆ ಪ್ರಯೋಗವು ಹೆಚ್ಚು ಇಲ್ಲದಿರುವುದರಿಂದ ಅಮುಖ್ಯವೇ. ಪ್ರಯೋಗವು ಹೆಚ್ಚು ಇದ್ದಪ್ರಯುಕ್ತ ಜೀವಾದಿಗಳಲ್ಲಿ ಇರತಕ್ಕದ್ದೇ ಮುಖ್ಯವು. ತಥಾಚ ದುಃಖಿಮೊದಲಾದ ಶಬ್ದಗಳು ಜೀವಾದಿಗಳಲ್ಲಿಯೇ ಮುಖ್ಯಗಳಾಗಿರುವುದರಿಂದ, ಬ್ರಹ್ಮನಲ್ಲಿ ಅಮುಖ್ಯವಾಗಿರುವುದರಿಂದ 'ತತ್ತು ಸಮನ್ವಯಾತ್' ಎನ್ನುವುದು ಅಯುಕ್ತವೆಂದರೆ ಸ್ವಾತಂತ್ರ್ಯವೇ ಮುಖ್ಯವಾಗಿ ಶಬ್ದಪ್ರವೃತ್ತಿನಿಮಿತ್ತವಾಗುವುದು. ತದ್ಗತತ್ವವು ಮುಖ್ಯವಲ್ಲ. (3) ಸ್ವಾತಂತ್ರ್ಯವು ಶಬ್ದಪ್ರವೃತ್ತಿಕಾರಣವಾಗದಿದ್ದರೆ ಅರಮನೆಯಲ್ಲಿಯೇ ಕುಳಿತಿರುವ ರಾಜನಲ್ಲಿ ಜಯನಿಮಿತ್ತಕವಾದ ಜಯಿಶಬ್ದವು ಬಾರದೆ ಹೋಗುವುದು. ಅಂದರೆ ಜಯವು ರಾಜನಲ್ಲಿ ಇಲ್ಲದಿರುವುದರಿಂದ ಸ್ವಾತಂತ್ರ್ಯವೂ ಕೂಡ ಶಬ್ದಪ್ರವೃತ್ತಿನಿಮಿತ್ತವಾಗದಿದ್ದರೆ ಆಗ ನಿಮಿತ್ತವೇ ಇಲ್ಲದಿರುವುದರಿಂದ ರಾಜನಲ್ಲಿ ಜಯಿಶಬ್ದಪ್ರವೃತ್ತಿಯು ಬಾರದೆ ಹೋಗುವುದು. ಜಯಿಶಬ್ದಪ್ರವೃತ್ತಿಯಿದೆ. ಆದಕಾರಣ ಸ್ವಾತಂತ್ರ್ಯವೂ ಕೂಡ ಕಾರಣವೆಂದಂಗೀಕರಿಸತಕ್ಕದ್ದು. (4) ಲಾಕ್ಷಣಿಕ ಪ್ರಯೋಗವೆಂದು ಹೇಳಕೂಡದು. ದುಃಖಾಶ್ರಯನಲ್ಲಿ ಇದ್ದಂತೆಯೇ ದುಃಖಸ್ವಾಮಿಯಲ್ಲಿಯೂ 'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್' ಎನ್ನುವ ಸೂತ್ರದಲ್ಲಿ ಅಸ್ಮಿನ್ ಎನ್ನುವುದರಂತೆ 'ಅಸ್ಯಾಪಿ' ಎಂದು ಹೇಳಿದ ಸ್ವಾಮಿತ್ವರೂಪನಿಮಿತ್ತವು ಸಮಾನವಾಗಿದೆ. ಇಲ್ಲವಾದರೆ ಸ್ವಾಮಿಯಲ್ಲಿಯೇ ಮುಖ್ಯಪ್ರಯೋಗವು. ಆಶ್ರಯದಲ್ಲಿ ಲಾಕ್ಷಣಿಕವೆಂದು ವೈಪರೀತ್ಯವೂ ಬರಬೇಕಾಗುವುದು ॥ ೨ ॥

ಸ್ವಾತಂತ್ರ್ಯಕ್ಕೆ ಮುಖ್ಯಕಾರಣತ್ವವನ್ನು ಉಪಪಾದಿಸುತ್ತಾರೆ—

**ಮೂ ॥ ನ ಹಿ ಭೃತ್ಯಸ್ಯ ವಿಜಯಿಶಬ್ದಸ್ತಾವತ್ಪ್ರಯುಜ್ಯತೇ ।**
**ಯಾವದ್ರಾಜ್ಞ್ಯನ್ಯಗತ್ವೇಽಪಿ ಸ್ವಾತಂತ್ರ್ಯಾಭಾಸಮಾತ್ರತಃ ॥ ೩ ॥**

**ಅ ॥** ಹಿ=ಯಾವ ಕಾರಣದಿಂದ, ಅನ್ಯಗತ್ವೇಽಪಿ=ಜಯವು ಭೃತ್ಯರಲ್ಲಿರತಕ್ಕದಾಗ್ಯೂ, ಸ್ವಾತಂತ್ರ್ಯಾಭಾಸಮಾತ್ರತಃ = ಆ ಜಯವನ್ನು ಕುರಿತು ಸ್ವಾತಂತ್ರ್ಯಾಭಾಸಮಾತ್ರದಿಂದ, ರಾಜ್ಞಿ=ಅರಸನಲ್ಲಿ, ವಿಜಯಿಶಬ್ದಃ = ವಿಜಯವುಳ್ಳವನೆನ್ನುವ ಶಬ್ದವು, ಯಾವತ್ = ಎಷ್ಟು, ಪ್ರಯುಜ್ಯತೇ = ಪ್ರಯೋಗಿಸಲ್ಪಡುತ್ತದೋ, ತಾವತ್ = ಅಷ್ಟು, ಭೃತ್ಯಸ್ಯ=ಜಯಾಧಿಕರಣನಾದಾಗ್ಯೂ ಭೃತ್ಯನ ಸಂಬಂಧಿಯಾಗಿ, ನ ಪ್ರಯುಜ್ಯತೇ = ಪ್ರಯೋಗಿಸಲ್ಪಡುವುದಿಲ್ಲವೋ, ಆದಪ್ರಯುಕ್ತ (ಅಲ್ಲಿ ಸ್ವಾತಂತ್ರ್ಯವು ಮುಖ್ಯವಾಗುವುದು.)

**ತಾ ॥ ಸ. ರ.** ವಿ— ಹೇಗೆ ಜಗದೀಶನಾದ ಶ್ರೀ ಹರಿಯಿಂದ ಅತ್ಯಲ್ಪ ಸ್ವಾಮಿಯಾದಾಗ್ಯೂ ರಾಜನು 'ಜಯಿ' ಎಂದು ಹೇಳಲ್ಪಡುತ್ತಾನೆ. ಭೃತ್ಯರು ಜಯಿಸಿದಾಗ್ಯೂ ಆ ಜಯಿಶಬ್ದವು ಬಹುಶಃ ಪ್ರಯುಕ್ತವಾಗುವುದರಿಂದ ರಾಜನಲ್ಲಿಯೇ ಮುಖ್ಯವು. ಹೀಗೆಯೇ ಬದ್ಧಾದಿಶಬ್ದಗಳೂ ಪರಮಸ್ವಾಮಿಯಾದ ಶ್ರೀ ಹರಿಯಲ್ಲಿ ಸುತರಾಂ ಮುಖ್ಯವು.

**ನ್ಯಾಯಸುಧಾ—** (1) ಕೇವಲ ಸ್ವಾತಂತ್ರ್ಯಾಭಾಸದಿಂದಲೇ ರಾಜನಲ್ಲಿ ವಿಜಯಿಶಬ್ದವನ್ನು ಪ್ರಯೋಗಿಸುವಾಗ ಅನುಪಚರಿತ ಸ್ವಾತಂತ್ರ್ಯವುಳ್ಳ ಪರಮಾತ್ಮನಲ್ಲಿ ಪ್ರಯೋಗವು ಸುತರಾಂ ಯುಕ್ತವೆಂದು ತಿಳಿಸುವುದಕ್ಕಾಗಿ ಸ್ವಾತಂತ್ರ್ಯಾತ್ ಎಂದು ಹೇಳುವುದನ್ನು ಬಿಟ್ಟು 'ಸ್ವಾತಂತ್ರ್ಯಾಭಾಸಮಾತ್ರತಃ' ಎಂದು ಹೇಳಿರುತ್ತಾರೆ. (2) ಭೃತ್ಯನ ಜ್ಞಾನವಿಲ್ಲದಿರುವ ಪ್ರಯುಕ್ತ ರಾಜನಲ್ಲಿ ಪ್ರಯೋಗಪ್ರಾಚುರ್ಯವೆಂದರೆ ಹಾಗೆ ಹೇಳಕೂಡದು. ಭೃತ್ಯನ ಜ್ಞಾನವಿದ್ದರೂ 'ರಾಜಾ ಜಯೀ' ಎಂದೇ ಪ್ರಯೋಗವಿರುವುದು. (3) ಹಾಗಾದರೆ ಪ್ರಯೋಗಗಳ ಪ್ರಾಚುರ್ಯವು ಮುಖ್ಯತ್ವಕ್ಕೆ ಕಾರಣವಲ್ಲ. ತಿಳಿಯಲ್ಪಡದಿರುವ ಮುಖ್ಯಾರ್ಥವುಳ್ಳ ಮ್ಲೇಂಛರು ಪ್ರಿಯಂಗುವಿನಲ್ಲಿ ಪ್ರಯೋಗಿಸತಕ್ಕ ಯವ ಮೊದಲಾದ ಶಬ್ದಗಳು, ನಿರೂಢ ಲಾಕ್ಷಣಿಕ ಶಬ್ದಗಳೂ ಗೌಣಶಬ್ದಗಳೂ ಇವುಗಳ ಪ್ರಯೋಗಗಳಲ್ಲಿಯೂ ಪ್ರಯೋಗಪ್ರಾಚುರ್ಯವು ದೃಷ್ಟವಾಗಿದೆ, ಎಂದರೆ—ಅಹುದು. ಪ್ರಯೋಗಗಳು ಹೆಚ್ಚು ಇರುವುದರಿಂದ ತದ್ಗತತ್ವವೇ (ಅದರಲ್ಲಿರುವುದೇ) ಮುಖ್ಯವು. ಸ್ವಾತಂತ್ರ್ಯವಾದರೂ ಪ್ರಯೋಗಗಳು ಕಮ್ಮಿಯಿದ್ದಪ್ರಯುಕ್ತ ಅಮುಖ್ಯವೆಂದು ಪರರು ಪ್ರಶ್ನೆಮಾಡಲು 'ನಹಿ ಭೃತ್ಯಸ್ಯ' ಎನ್ನುವ ಶ್ಲೋಕದಿಂದ ಪ್ರಯೋಗಪ್ರಾಚುರ್ಯಾಭಾವಕ್ಕೆ ಅಸಿದ್ಧಿಯು ಹೇಳಲ್ಪಡುತ್ತದೆ. ಪ್ರಯೋಗಪ್ರಾಚುರ್ಯದಿಂದ ಮುಖ್ಯತ್ವವನ್ನು ಸಾಧಿಸುವುದಿಲ್ಲ. (4) ಯದ್ಯಪಿ ಇಲ್ಲಿ ಪ್ರಯೋಗಪ್ರಾಚುರ್ಯಕ್ಕೆ ಮುಖ್ಯಾಜ್ಞಾನವೇ ನಿಮಿತ್ತವು. ಅಜ್ಞಾನವೇ ನಿಮಿತ್ತವಾಗಿವುಳ್ಳ ಪ್ರಯೋಗಮೂಲಕತ್ವವು, ಭ್ರಾಂತಿಮೂಲಕತ್ವವು ಇತ್ಯಾದಿಗಳಿಂದ ಅನ್ಯಥಾಸಿದ್ಧಿಯನ್ನಾಗಲೀ ವ್ಯಭಿಚಾರವನ್ನಾಗಲೀ ಹೇಳಲಿಕ್ಕೆ ಶಕ್ಯವಾಗುತ್ತದೆ. ಆದಾಗ್ಯೂ 'ಜಗದ್ವಾಚಿತ್ವಾತ್' ಎನ್ನುವ ಸೂತ್ರದಲ್ಲಿ ಹೇಳಿದಪ್ರಕಾರ ಶಬ್ದಗಳಿಗೆ ಜಗತ್ತಿನಲ್ಲಿಯೇ ವ್ಯುತ್ಪತ್ತಿಯು. ಅಂತೂ ಜಗತ್ತಿನಲ್ಲಿ ಪ್ರಸಿದ್ಧಿಯು ಸರ್ವಶಬ್ದಗಳಿಗೂ ಮುಖ್ಯಾರ್ಥನಾದ ಶ್ರೀ ಹರಿಯ ಜ್ಞಾನವಿಲ್ಲದಿರುವಪ್ರಯುಕ್ತ ಎಂದು ಶಿಷ್ಯರಿಗೇನೇ ತಿಳಿಯಲು ಶಕ್ಯವಾಗುತ್ತದೆ. ಆದಕಾರಣ ಅಸಿದ್ಧಿಯನ್ನೇ ಹೇಳಿದ್ದು. (5) ಹಾಗಾದರೆ ಮುಖ್ಯತ್ವವು ಹೇಗೆ ಸಿದ್ಧವಾಗುತ್ತದೆಂದರೆ— 'ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್' ಎನ್ನುವುದು ದುಃಖಿಮೊದಲಾದ ಶಬ್ದಗಳ ಪ್ರವೃತ್ತಿ

ನಿಮಿತ್ತವೆಂದು ಹೇಳಲ್ಪಟ್ಟಿದೆ. ಯಾವುದು ಯಾರ ಅಧೀನವಾದ ಸತ್ತಾ ಪ್ರತೀತಿ ಪ್ರವೃತ್ತಿಗಳುಳ್ಳದ್ದೋ ಅದೇ ಯಥೇಷ್ಟವಾದ ವಿನಿಯೋಗಕ್ಕೆ ಯೋಗ್ಯವಾಗಿರುವುದರಿಂದ ಮುಖ್ಯವಾಗಿ ಅಧೀನವಾಗುತ್ತದೆ. ಯಾವುದರಲ್ಲಿ ಯಾವುದು ಸಂಬದ್ಧವಾಗಿಯದೋ ಅದು ಯಥೇಷ್ಟ ವಿನಿಯೋಗಕ್ಕೆ ಅಯೋಗ್ಯವಾಗಿರುವುದರಿಂದ ಮುಖ್ಯವಾಗಿ ಆಗುವುದಿಲ್ಲ. ಜೀವನಿಂದ ದುಃಖಾದಿಗಳನ್ನು ಬಿಡಲಿಕ್ಕೂ, ಸ್ವೀಕರಿನಲಿಕ್ಕೂ ಶಕ್ಯವಾಗುವುದಿಲ್ಲ. ಆದಪ್ರಯುಕ್ತ ಯಥೇಷ್ಟ ವಿನಿಯೋಗಕರ್ತೃತ್ವರೂಪವಾದ ಸ್ವಾತಂತ್ರ್ಯವೇ ಮುಖ್ಯವಾಗುವುದು. (6) ಅಥವಾ ಅಭಿಧಾನ ವೃತ್ತಿಯಲ್ಲಿಯೇ 'ಸ್ವಾತಂತ್ರ್ಯ' ತದ್ಗತತ್ವಗಳಿಗೆ ಮುಖ್ಯಾಮುಖ್ಯತ್ವವನ್ನು ನಿರ್ಧರಿಸುವಾಗ ಸ್ವಾತಂತ್ರ್ಯವು ಮುಖ್ಯವೆಂದು ಪ್ರತಿಜ್ಞಾತವಾಯಿತು. ಇಲ್ಲಿ ಪ್ರಯೋಗಪ್ರಾಚುರ್ಯಕ್ಕೆ ಹೇತುತ್ವವನ್ನು ಹೇಳಿದರೆ ಯಾವ ದೋಷವೂ ಇಲ್ಲ. ಅಂದರೆ ಅಭಿಧಾವೃತ್ತಿಯಲ್ಲಿ ಎಲ್ಲಿ ಯಾವುದಕ್ಕೆ ಪ್ರಯೋಗಪ್ರಾಚುರ್ಯವಿದೆಯೋ, ಅದು ಅಲ್ಲಿ ಮುಖ್ಯವೆಂದು ವಿವಕ್ಷಿತವಾಗಿದೆ. ಯಾವುದು ಯಾವಶಬ್ದವಾಚ್ಯವಾಗಿ ಪ್ರಚುರಪ್ರಯೋಗದಲ್ಲಿ ವಿಷಯವಾಗುತ್ತದೋ ಅದು ಆ ಶಬ್ದ ವಾಚ್ಯಗಳಲ್ಲಿ ಮುಖ್ಯವೆಂದು ವ್ಯಾಪ್ತಿಯು ಸಿಗುವುದರಿಂದ ಹಿಂದಿನ ವ್ಯಭಿಚಾರವಿಲ್ಲ. ಹೇತುವೇ ಇಲ್ಲದಿರುವುದರಿಂದ ಅಜ್ಞಾತ ಮುಖ್ಯ ಲಾಕ್ಷಣಿಕಾದಿಗಳಲ್ಲಿ ವ್ಯಭಿಚಾರವೂ ಇಲ್ಲ ॥ ೩ ॥

**ಸ. ರ.** ವಿ— ಹೇಗೆ ಭೃತ್ಯನು ಜಯಿಸಿದಾಗ ರಾಜನು ಜಯವುಳ್ಳವನೆಂದು ಹೇಳಿಸಿಕೊಳ್ಳಲ್ಪಡುತ್ತಾನೋ, ಹಾಗೆಯೇ ಭೃತ್ಯನಿಗೆ ಬಂಧ (ಕಾರಾಗೃಹವಾಸ) ಮರಣಾದಿಗಳು ಆದಾಗ ರಾಜನು ಬದ್ಧನಾದನು, ಮೃತನಾದನು ಇತ್ಯಾದಿಪ್ರಕಾರ ಏತಕ್ಕೆ ಪ್ರಯೋಗಿಸಲ್ಪಡುವುದಿಲ್ಲವೆಂದರೆ—

**ನ್ಯಾಯಸುಧಾ**— (1) ಸ್ವಾಮ್ಯವು ಪ್ರವೃತ್ತಿನಿಮಿತ್ತವಾದರೆ ಆಗ ಭೃತ್ಯನು ಬದ್ಧನಾಗಲು 'ರಾಜಾ ಬದ್ಧಃ' ಎಂದೂ ಮೃತನಾಗಲು 'ರಾಜಾ ಮೃತಃ' ಎಂದೂ ಪ್ರಯೋಗವು ಬರಬೇಕಾಗುವುದು. ಹೀಗೆ ಪ್ರಯೋಗವು ಇರುವುದಿಲ್ಲ. ಅದರಿಂದ ಸ್ವಾಮ್ಯವು ಪ್ರವೃತ್ತಿ ನಿಮಿತ್ತವಲ್ಲವೆಂದು ತಿಳಿಯುತ್ತೇವೆ. ಪ್ರಯೋಗವಿದ್ದರೇನೇ ನಿಮಿತ್ತವನ್ನು ಹುಡುಕುವುದು. ನಿಮಿತ್ತವದೆಯೆಂದು ಪ್ರಯೋಗವಿಲ್ಲ, ಎಂದು ಹೇಳಕೂಡದು. ಈ ನ್ಯಾಯವು ಅಮುಖ್ಯ ಪ್ರಯೋಗವಿಷಯವಾಗಿದೆ. ನಿಮಿತ್ತವು ಸಾಮಗ್ರಿಯಲ್ಲ. ಮತ್ತೆ ಸಾಮಗ್ರಿಯ ಏಕದೇಶವು. ಮುಖ್ಯಪ್ರಯೋಗದಲ್ಲಿಯಾದರೂ ನಿಮಿತ್ತವೇ ಸಾಮಗ್ರಿಯು, ಎಂದು ಹೇಳಿದರೆ— ಭೃತ್ಯನು ಬದ್ಧನಾಗಲು 'ರಾಜಾ ಬದ್ಧಃ' ಎಂದು ಪ್ರಯೋಗವು ಬರಬೇಕಾಗುವುದು ಎಂದು ಆಪಾದಿಸಲ್ಪಡತಕ್ಕ ಪ್ರಯೋಗವೆಂಪರೆ (೧) ಶಬ್ದಶಕ್ತಿಯೋ? (೨) ಉಚ್ಚಾರಣವೋ? ೧ನೇದ್ದು ಕೂಡಲಾರದು. ರಾಜನಲ್ಲಿ ಬದ್ಧ ಮೊದಲಾದ ಶಬ್ದಶಕ್ತಿಯಿದ್ದಪ್ರಯುಕ್ತ 'ರಾಜಾ ಬದ್ಧಃ' ಇದು ಮೊದಲಾದ ಪ್ರಯೋಗಗಳು ಬರಬೇಕಾಗುವವು ಎನ್ನುವ ಅತಿಪ್ರಸಂಗವು ಇಷ್ಟವಾಗಿದೆ. ಪ್ರಯೋಗವಿಲ್ಲದಕಾರಣ ಸ್ವಾಮ್ಯವು ಪ್ರವೃತ್ತಿನಿಮಿತ್ತವಲ್ಲ ಎಂದು ವಿಪರ್ಯಯಪರ್ಯವಸಾನ ಮಾಡಿದರೆ ಶಬ್ದಶಕ್ತಿರೂಪವಾದ ಪ್ರಯೋಗವಿದ್ದಪ್ರಯುಕ್ತ ಅಸಿದ್ಧಿಯು. (೨) ಪ್ರಯೋಗವೆಂದರೆ ಉಚ್ಚಾರಣವೆಂದು ಹೇಳಿದರೆ ಅನ್ಯಥಾಸಿದ್ಧಿಯನ್ನು ಹೇಳುತ್ತಾರೆ.

**ಮೂ ॥ ಭೃತ್ಯಬಂಧಾದಿಕಂ ರಾಜ್ಞಿ ರಾಜ್ಞೋ ಬಂಧಾದಿಯೋಗ್ಯತಃ ।**
**ಕಾರಣಂ ಸಂಶಯಸ್ಯ ಸ್ಯಾದಿತಿ ನೈವ ಪ್ರಯುಜ್ಯತೇ ॥ ೪ ॥**

**ಅ** ॥ ರಾಜ್ಞಃ=ಅರಸನಿಗೂ, ಬಂಧಾದಿಯೋಗ್ಯತಃ=ಬಂಧಾದಿಯೋಗ್ಯತೆಯಿದ್ದಪ್ರಯುಕ್ತ, ರಾಜ್ಞಃ= ರಾಜಾಧೀನವಾದ, ಭೃತ್ಯಬಂಧಾದಿಕಂ = ಭೃತ್ಯನ ಬಂಧವೇ ಮೊದಲಾದುದನ್ನು,

(ವಿವಕ್ಷಾಮಾಡಿಕೊಂಡು) ರಾಜ್ಞಿ=ಅರಸನಲ್ಲಿ, 'ರಾಜಾ ಬದ್ಧಃ ಮೃತಃ' ಇತ್ಯಾದಿ ವಾಕ್ಯವು, ನ ಪ್ರಯುಜ್ಯತೇ=ಪ್ರಯೋಗಿಸಲ್ಪಡುವುದಿಲ್ಲ. (ಏಕೆಂದರೆ ಆ ಪ್ರಯೋಗವು) ಸಂಶಯಸ್ಯ= ಸಂದೇಹಕ್ಕೆ, ಕಾರಣಂ=ಹೇತುವು, ಸ್ಯಾತ್=ಆಗುವುದು, ಇತ್ಯೇವ=ಈ ಅಭಿಪ್ರಾಯದಿಂದಲೇ, ಸ್ವಾತಂತ್ರ್ಯಕ್ಕೆ ಕಾರಣತ್ವವಿಲ್ಲದಿರುವಪ್ರಯುಕ್ತವಲ್ಲ.

ತಾ || **ಸ. ರ. ವಿ**— ಪ್ರಯೋಗವಿದ್ದರೆ ನಿಮಿತ್ತವನ್ನು ಹುಡುಕುವುದು. ನಿಮಿತ್ತ ವಡೆಯೊಂದು ಪ್ರಯೋಗವಿಲ್ಲ. ಸಿಂಹದ ಗುಣವಿದ್ದಪ್ರಯುಕ್ತ 'ಸಿಂಹೋ ದೇವದತ್ತಃ' ಎಂದು ಸಿಂಹಶಬ್ದವು ದೇವದತ್ತನಲ್ಲಿ ಪ್ರಯುಕ್ತವಾಯಿತು ಎಂದಿಷ್ಟರಿಂದ ವೃಕ(ಚೆನ್ನಿನಾಯಿ)ದಲ್ಲಿಯೂ ಪ್ರಯುಕ್ತವಾಗಲಿ ಎಂದಾಪಾದನವು ಕೂಡುವುದಿಲ್ಲ.

**ನ್ಯಾಯಸುಧಾ**— (1) ಸ್ವಾತಂತ್ರ್ಯವು ಶಬ್ದಪ್ರವೃತ್ತಿನಿಮಿತ್ತವು ಆಗಿಯೇ ಆಗುತ್ತದೆ. ಪ್ರತಿಬಂಧಕವಿದ್ದಪ್ರಯುಕ್ತ ಪ್ರಯೋಗವಿಲ್ಲ. 'ರಾಜಾ ಬದ್ಧಃ ಮೃತಃ' ಎಂದು ಪ್ರಯೋಗಮಾಡಿ ದರೆ ಭೃತ್ಯನನಿಗೆ ಸಂಶಯವು ಬರುವುದು. ಹೇಗೆಂದರೆ—ರಾಜಾಧೀನನಾದ ಭೃತ್ಯನಿಗೆ ಬಂಧಮರ ಣಾದಿಗಳು ಆದಪ್ರಯುಕ್ತ ಹೀಗೆ ಹೇಳುವುದೋ, ರಾಜನಿಗೆ ಬಂಧನಾದಿಗಳು ಆದಪ್ರಯುಕ್ತ ಹೀಗೆ ಹೇಳುವುದೋ ಎಂದು ಆಕಾಂಕ್ಷಾ ಸನ್ನಿಧಿ ಯೋಗ್ಯತೆಗಳು ರಾಜನ ಬದ್ಧತ್ವವನ್ನೂ, ಭೃತ್ಯನ ಬದ್ಧತ್ವವನ್ನೂ, ವಿವಕ್ಷಾಮಾಡಿಕೊಂಡು ಮಾಡಲ್ಪಡತಕ್ಕ ಎರಡು ಪ್ರಯೋಗಗಳಲ್ಲಿಯೂ ಇದ್ದ ಪ್ರಯುಕ್ತ ಎರಡು ಅರ್ಥಗಳ ಪ್ರತೀತಿಯೂ ಬರುತ್ತದೆ. ಸಂಶಯವು ಬರಬಾರದೆಂದೇ ನಿವೃತ್ತವಾದ ಪ್ರಯೋಗವು ಸ್ವಾತಂತ್ರ್ಯಕ್ಕೆ ಅಕಾರಣತ್ವವನ್ನು ತಿಳಿಸಿಕೊಡುವುದಿಲ್ಲ. ಮಣಿ ಮಂತ್ರಾದಿಗಳಿಂದ ಅಗ್ನಿಯು ಪ್ರತಿಬದ್ಧವಾಗಿ ಸುಡದಿದ್ದರೆ ದಾಹಕಾರಣವಲ್ಲವೆಂದು ಅಲ್ಲವಷ್ಟೆ ||೪||

ಸಂಶಯ ಕಾರಣತ್ವ ಮಾತ್ರವು ಪ್ರಯೋಗಕ್ಕೆ ಪ್ರತಿಬಂಧಕವಲ್ಲ. ವ್ಯಾಖ್ಯಾನದಿಂದ ಸಂಶಯವು ನಿವೃತ್ತವಾಗಬಹುದು. 'ವ್ಯಾಖ್ಯಾನತೋ ವಿಶೇಷಪ್ರತಿಪತ್ತಿರ್ನಹಿ ಸಂದೇಹಾದ ಲಕ್ಷಣಂ' ವ್ಯಾಖ್ಯಾನದಿಂದ ವಿಶೇಷಜ್ಞಾನವು ಬರುತ್ತದೆ, ಸಂಶಯದಿಂದ ಜ್ಞಾಪಕವಲ್ಲವೆಂದಲ್ಲ, ಎಂದು ಮಹಾಭಾಷ್ಯದಲ್ಲಿ ಹೇಳಿರುತ್ತದೆ. ಇಲ್ಲವಾದರೆ 'ರಾಜಾ ಜಯಿ' ಎಂದೂ ಪ್ರಯೋಗವು ಬಾರದೆಹೋಗುವುದು. ಅಲ್ಲಿಯೂ ಹಿಂದೆ ಹೇಳಿದಪ್ರಕಾರ (ಅಂದರೆ ರಾಜಾಧೀನನಾದ ಭೃತ್ಯನಿಗೆ ಜಯವಾದಪ್ರಯುಕ್ತ ಹೀಗೆ ಹೇಳುವುದೋ, ರಾಜನಿಗೇನೇ ಜಯವಾದಪ್ರಯುಕ್ತ ಹೀಗೆ ಹೇಳುವುದೋ ಎಂದು) ಸಂಶಯವು ಬರುವುದು, ಎಂದರೆ—

**ಮೂ || ಅಮಂಗಲತ್ವಾಚ್ಛಬ್ದಾನಾಂ ರಾಜ್ಞೋ ಯೋಗಾದಮಂಗಲೇ ।**
**ಅಪ್ರಿಯತ್ವಾತ್ತು ಶಬ್ದಸ್ಯ ಸ್ಯಾತ್ಪ್ರಯೋಗನಿವರ್ತನಂ || ೫ ||**

ಅ || ರಾಜ್ಞಃ=ಅರಸನಿಗೆ, ಅಮಂಗಲೇ = ಬಂಧನಾದಿರೂಪವಾದ ಅಮಂಗಲದಲ್ಲಿ, ಯೋಗಾತ್=ಯೋಗ್ಯತೆಯಿದ್ದಪ್ರಯುಕ್ತ, (ಆಕಾಂಕ್ಷಾದಿಗಳು ಸ್ಫುಟವಾಗಿರುವಪ್ರಯುಕ್ತವು,) ಶಬ್ದಾನಾಂ=ರಾಜಾಬದ್ಧಃ ಇತ್ಯಾದಿ ಪದಗಳಿಗೆ, ಅಮಂಗಲತ್ವಾತ್=ಪಾಕ್ಷಿಕವಾಗಿ ರಾಜಬಂಧ ಮೊದಲಾದ ಅಮಂಗಲ ಪ್ರತೀತಿಜನಕತ್ವವು ಕೂಡುವ ಪ್ರಯುಕ್ತವೂ, ಅಪ್ರಿಯತ್ವಾತ್ತು = ರಾಜನಿಗೆ ಅಮಂಗಲವನ್ನು ಹೇಳುವುದು ರಾಜನಿಗೂ, ಅವನ ಸಂಬಂಧಿಯಾದ ರಾಜಪುರುಷ ನಿಗೂ ಅಪ್ರೀತಿಗೆ ಕಾರಣವಾಗಿರುವಪ್ರಯುಕ್ತವೇ, ಶಬ್ದಸ್ಯ=ಶಬ್ದಗಳ, ಪ್ರಯೋಗನಿವರ್ತನಂ= ಪ್ರಯೋಗದ ನಿವೃತ್ತಿಯು, ಸ್ಯಾತ್=ಆಗುವುದು,

ತಾ ॥ ನ್ಯಾಯಸುಧಾ— (1) ಕೇವಲ ಸಂಶಯವು ಬರುವುದರಿಂದ ಪ್ರಯೋಗವಿಲ್ಲವೆಂದಲ್ಲ. ಮತ್ತೆ ಸಂಶಯನಿಮಿತ್ತಕವಾದ ಅಪ್ರೀತಿಯಿಂದುಂಟಾಗುವ ಅನರ್ಥಬರುತ್ತದೆ ಎನ್ನುವ ಸಂಶಯದಿಂದಲೇ. ಸ್ವಾತಂತ್ರ್ಯವು ಕಾರಣವಲ್ಲವೆನ್ನುವ ಅಭಿಪ್ರಾಯದಿಂದಲ್ಲ. ಹಾಗಾದರೆ, ರಾಜನು ಪರಾಜಯವುಳ್ಳವನು ಎಂದೂ ಪ್ರಯೋಗಿಸದೆ ಇರಬೇಕಾಗುವುದು, ಎಂದರೆ— ಭೃತ್ಯನಿಂದಲೇ ರಾಜನಿಗೆ ಜಯವೂ, ಪರಾಜಯವೂ ಎಂದು ಪ್ರಸಿದ್ಧಿಯಿರುವುದರಿಂದ ಸಂಶಯವು ಹುಟ್ಟುವುದಿಲ್ಲ ॥ ೫ ॥

ಸ. ರ. ವಿ— ರಾಜನಲ್ಲಿ ಹೇಗೆ ಬದ್ಧಮೊದಲಾದ ಶಬ್ದಗಳಿಗೆ ಪ್ರಯೋಗವಿಲ್ಲವೋ, ಹಾಗೆಯೇ ವಿಷ್ಣುವಿನಲ್ಲಿಯೂ ಬದ್ಧಾದಿ ಶಬ್ದಗಳಿಗೆ ಪ್ರಯೋಗವಿಲ್ಲವೆಂದು ಏತಕ್ಕೆ ಆಗಲಾರದೆಂದರೆ—

**ಮೂ ॥ ಗುಣಾಸ್ತು ತಾದೃಶಾ ಯತ್ರ ಪ್ರಯುಜ್ಯಂತೇಽಖಿಲಾ ಅಪಿ ।**
**ಪೂಜ್ಯೇಷ್ವೇವ ವಿಶೇಷೇಣ ಸ್ವಾತಂತ್ರ್ಯಂ ಮುಖ್ಯ ಕಾರಣಂ ॥ ೬ ॥**

ಅ ॥ ತಾದೃಶಾಃ=ಸ್ವಾಮ್ಯವೇ ನಿಮಿತ್ತವಾಗಿಉಳ್ಳ ಶಬ್ದಗಳು, ಯತ್ರ=ಯಾವ ಪಕ್ಷದಲ್ಲಿ, ಗುಣಾಃ=ಶುಭವನ್ನು ಹೇಳುತ್ತವೋ, ಪಾಕ್ಷಿಕವಾಗಿಯೂ ಅಮಂಗಲವನ್ನು ತಿಳಿಸಿಕೊಡುವುದೇ ಇಲ್ಲವೋ, ತತ್ರ=ಆ ಪಕ್ಷದಲ್ಲಿ, ಅಖಿಲಾ ಅಪಿ=ಎಲ್ಲಾ ಶಬ್ದಗಳೂ, ಪ್ರಯುಜ್ಯಂತೇ=ಪ್ರಯೋಗಿಸಲ್ಪಡುತ್ತವೆ. (ಉದಾ =ರಾಜನಿಂದ ಜಯಿಸಲ್ಪಟ್ಟಿತು ಇತ್ಯಾದಿಗಳು.) (ಸ್ವಾಮ್ಯನಿಮಿತ್ತಕತ್ವದಿಂದ ವಿಶೇಷವಿಲ್ಲದಿದ್ದರೂ ಶುಭವನ್ನು ಹೇಳುವವುಗಳಿಗೇನೇ ಪ್ರಾಪ್ತಿಯಿದೆ. ಅಶುಭವನ್ನು ಹೇಳುವವುಗಳಿಗೆ ಪ್ರಾಪ್ತಿಯಿಲ್ಲ. ಅವುಗಳು ವಿಲಕ್ಷಣಕಾರಣದಿಂದ ಹುಟ್ಟುವವುಗಳೆನ್ನುವ ವಿಮರ್ಶದಿಂದ ಅನರ್ಥಶಂಕೆಯೇ ಪ್ರಯೋಗಾಭಾವಕ್ಕೆ ಕಾರಣವು. ಸ್ವಾತಂತ್ರ್ಯವು ನಿಮಿತ್ತವಲ್ಲವೆಂದು ನಿಶ್ಚಿತವಾಗುವುದಿಲ್ಲ. ನಿಮಿತ್ತವಿದ್ದರೆ ಪ್ರಯೋಗವಾಗುತ್ತದೆನ್ನುವ ನಿಯಮವಿಲ್ಲ. ಅನಂತಶಬ್ದಗಳಿಗೆ ವ್ಯಾಕರಣಕಾರರು ಲಕ್ಷಣಗಳನ್ನು ಹೇಳಿರುತ್ತಾರೆ. ಆದರೆ ಅವುಗಳಿಗೆ (ಅಂದರೆ, 'ಅತಿತ್ವಾಕಂ ಅತಿತ್ವಯಾಂ ಅತಿಮಾಕಂ ಅತಿಮಯಾಂ ವಚಂತಿ' ಇತ್ಯಾದಿಗಳಿಗೆ) ಪ್ರಯೋಗವು ಕಾಣುವುದಿಲ್ಲ. ಆದಕಾರಣ ಹಿಂದೆ ಹೇಳಿದಪ್ರಕಾರ ಸ್ವಾತಂತ್ರ್ಯವು ಶಬ್ದಪ್ರವೃತ್ತಿಗೆ ಕಾರಣವೆನ್ನುವುದೂ ಮುಖ್ಯವೆನ್ನುವುದೂ ಸಿದ್ಧವಾಯಿತೆನ್ನುತ್ತಾರೆ.) ಯಾವ ಕಾರಣದಿಂದ ಪೂಜ್ಯೇಷು=ನಿಯಾಮಕರಾದ ರಾಜರಲ್ಲಿ ಜಯಿಮೊದಲಾದ ಶಬ್ದಗಳು, ಪ್ರಯುಜ್ಯಂತೇ=ಪ್ರಯೋಗಿಸಲ್ಪಡುತ್ತವೋ, (ಅದರಿಂದ) ಸ್ವಾತಂತ್ರ್ಯಂ=ಸ್ವಾತಂತ್ರ್ಯವು, ಮುಖ್ಯಕಾರಣಂ=ಶಬ್ದಪ್ರವೃತ್ತಿಗೆ ಕಾರಣವೆಂದು ತಿಳಿಯುತ್ತದೆ. ಯತಃ=ಯಾವ ಕಾರಣದ್ವೆಶೆಯಿಂದ, ಪೂಜ್ಯೇಷ್ವೇವ=ಪೂಜ್ಯರಲ್ಲಿಯೇ, ವಿಶೇಷೇಣ=ಪ್ರಾಚುರ್ಯದಿಂದ, ಪ್ರಯುಜ್ಯಂತೇ=ಪ್ರಯೋಗಿಸಲ್ಪಡುತ್ತವೆ. ಭೃತ್ಯರಲ್ಲಿ ಪ್ರಯೋಗಿಸಲ್ಪಡುವುದಿಲ್ಲ. (ಅದರಿಂದ) ಸ್ವಾತಂತ್ರ್ಯಂ=ಸ್ವಾತಂತ್ರ್ಯವು, ಮುಖ್ಯಕಾರಣಂ=ತದ್ಗತತ್ವದ್ವೆಶೆಯಿಂದಲೂ ಮುಖ್ಯಕಾರಣವೆಂದು (ನಿಶ್ಚಿತವಾಗುತ್ತದೆ.) ॥ ೬ ॥

**ಮೂ ॥ ಅ(ತ)ತೋ ದೋಷಾತಿದೂರತ್ವಾತ್ಸಂಶಯಸ್ಯಾಪ್ಯಸಂಭವಾತ್ ।**
**ದೋಷಾಣಾಂ ವಿಷ್ಣುಗತ್ವಸ್ಯ ಪ್ರಾಜ್ಞಬುದ್ಧಿವ್ಯಪೇಕ್ಷಯಾ ।**
**ಸ್ವಾತಂತ್ರ್ಯಾರ್ಥಮಭಿಪ್ರೇತ್ಯ ದೋಷಶಬ್ದಾಶ್ಚ ವಿಷ್ಣುವಿ ॥ ೭ ॥**

ಅ ॥ (ಯಾವ ಕಾರಣದಿಂದ, ಸ್ವಾತಂತ್ರ್ಯವು ಕಾರಣವೂ ಮುಖ್ಯವೂ ಆಗಿಯದೋ,) ಅ(ತ)ತಃ=ಆದಪ್ರಯುಕ್ತ, ದೋಷಾತಿದೂರತ್ವಾತ್ = 'ನಿರನಿಷ್ಟೋ ನಿರವದ್ಯಃ' ಇತ್ಯಾದಿಶ್ರುತಿ

ಗಳದ್ದೆಶೆಯಿಂದ ಶ್ರೀ ಹರಿಯು ದೋಷಗಳಿಂದ ಅತಿದೂರನೆಂದು ನಿಶ್ಚಯವಾಗುವುದರಿಂದ, ಪ್ರಾಜ್ಞಬುದ್ಧಿವ್ಯಪೇಕ್ಷಯಾ=ಪ್ರಾಜ್ಞರ ಬುದ್ಧಿಯನ್ನು ಅಪೇಕ್ಷಿಸಿ, ದೋಷಾಣಾಂ=ದೋಷಗಳಿಗೆ, ವಿಷ್ಣುಗತ್ವಸ್ಯ = ವಿಷ್ಣುನಲ್ಲಿರುವಿಕೆಯು ಅಂದರೆ, ಅದಕ್ಕೆ ವಿಷಯವಾದ, ಸಂಶಯಸ್ಯಾಪಿ= ಸಂಶಯಕ್ಕೂ ಕೂಡ, ಅಸಂಭವಾತ್=ಕೂಡದಿರುವುದರಿಂದ, ಸ್ವಾತಂತ್ರ್ಯಾರ್ಥಂ=ಸ್ವಾತಂತ್ರ್ಯ ರೂಪವಾದ ಅರ್ಥವನ್ನು, ಅಭಿಪ್ರೇತ್ಯ=ಅಭಿಪ್ರಾಯಮಾಡಿಕೊಂಡು, ದೋಷಶಬ್ದಾಶ್ಚ=ದುಃಖಿ ಬದ್ಧ ಅವರ ಮೊದಲಾದ ದೋಷಶಬ್ದಗಳೂ ಕೂಡ, ವಿಷ್ಣವಿ=ವಿಷ್ಣುವಿನಲ್ಲಿ, ('ಜೀವಾ ಏವ ತು ದುಃಖಿನಃ' ಇತ್ಯಾದಿಗಳಲ್ಲಿ) ಪ್ರಯುಜ್ಯಂತೇ=ಪ್ರಯೋಗಿಸಲ್ಪಡುತ್ತವೆ.

ತಾ || **ನ್ಯಾಯಸುಧಾ**— 'ನಿರ್ದುಃಖಃ ನಿರನಿಷ್ಟಃ ನಿರವದ್ಯಃ' ಇತ್ಯಾದಿಶ್ರುತಿಗಳಿದ್ದ ಪ್ರಯುಕ್ತ ವಿಷ್ಣುವಿನಲ್ಲಿ ಬದ್ಧ ಮೊದಲಾದ ಶಬ್ದಗಳ ಪ್ರಯೋಗದಿಂದಲೂ ಬಂಧಾದಿ ಶಂಕೆಯು ಬರಲಾರದು. ಬಹು ಭೋಜನವು ಲೋಕದಲ್ಲಿ ನಿಂದಿತವಿಷಯವಾದಾಗ್ಯೂ ಸರ್ವೋತ್ತಮನಾದ ವಿಷ್ಣುವಿನಲ್ಲಿ ಗುಣವಾಚಕವಾಗಿದೆ. ಹೀಗೆಯೇ ಬಂಧಾದಿಗಳಿಗೆ ನಿಯಾಮಕನಾದ ವಿಷ್ಣುವಿ ನಲ್ಲಿಯೇ ಬದ್ಧಾದಿ ಶಬ್ದವು ಮಂಗಲರೂಪವೆಂದು "**ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೇಜಸೌ**" ಇತ್ಯಾದಿಗಳಲ್ಲಿ ಶ್ರುತವಾಗಿದೆ || ೭ ||

ಈ ವಿಷಯದಲ್ಲಿ ಶ್ರುತಿಸಮ್ಮತಿಯನ್ನು ಹೇಳುತ್ತಾರೆ—

**ಮೂ || ವಾಸುದೇವಶ್ರುತಿಶ್ಚಾಹ ನೈವ ವಿಷ್ಣಾವಮಂಗಲಂ || ೮ ||**
**ಮಂಗಲಾಮಂಗಲೇಽನ್ಯತ್ರ ತತೋ ನಾಮಂಗಲಂ ವದೇತ್ |**
**ಸ್ವಾತಂತ್ರ್ಯಾಪೇಕ್ಷಯಾ ವಿಷ್ಣೌ ದೋಷೋ ನಾಮಂಗಲೋಕ್ತಿತಃ ||೯||**

ಅ || ಯತಃ = ಯಾವ ಕಾರಣದ್ದೆಶೆಯಿಂದ, ವಿಷ್ಣೌ=ವಿಷ್ಣುವಿನಲ್ಲಿ, ಅಮಂಗಲಂ= ದುಃಖಾದಿಗಳು, ನೈವ=ಇಲ್ಲವೇ ಇಲ್ಲವೋ, ತತಃ=ಆದಕಾರಣ, ಯೋಗ್ಯತೆಯೇ ಇಲ್ಲದಿರುವುದ ರಿಂದ ಅರ್ಥಾಂತರಪ್ರತೀತಿಯಿಲ್ಲದಿರುವಪ್ರಯುಕ್ತ, ಸ್ವಾತಂತ್ರ್ಯಾಪೇಕ್ಷಯಾ=ಸ್ವಾತಂತ್ರ್ಯವನ್ನು ಅಪೇಕ್ಷಿಸಿಕೊಂಡು, ವಿಷ್ಣೌ = ವಿಷ್ಣುವಿನಲ್ಲಿ, ಅಮಂಗಲೋಕ್ತಿತಃ = ಅಮಂಗಲವಚನದಿಂದ, ದೋಷಃ=ಅನರ್ಥವು, ನ=ಇಲ್ಲ. (ಆದಕಾರಣ ದುಃಖಿಮೊದಲಾದ ಶಬ್ದಗಳೂ ಕೂಡ ವಿಷ್ಣುವಿ ನಲ್ಲಿ ವೇದದಲ್ಲಿ ಪ್ರಯೋಗಿಸಲ್ಪಡುತ್ತವೆ.) ಅನ್ಯತ್ರ ತು=ರಾಜಾದಿಗಳಲ್ಲಿ ಆದರೂ, ಯತಃ= ಯಾವ ಕಾರಣದಿಂದ, ಮಂಗಲಾಮಂಗಲೇ=ಮಂಗಲ ಅಮಂಗಲಗಳು, (ಸುಖದುಃಖಗಳು) (ಕೂಡುತ್ತವೋ, ಆದಕಾರಣ ಯೋಗ್ಯತೆಯು ಕೂಡುವುದರಿಂದ ಅರ್ಥಾಂತರವು ತೋರುವುದ ರಿಂದ ಪಕ್ಷೇ ಅನರ್ಥವು ಬರಬಹುದು ಎನ್ನುವ ಸಂಶಯದಿಂದ) ಅಮಂಗಲಂ = ರಾಜನು ಬದ್ಧ ನಾದನು ಇದುಮೊದಲಾದ ಅಮಂಗಲವಾಚಕವಾದುದನ್ನು, ನ ವದೇತ್=ಹೇಳಬಾರದು ||೮||೯||

ಒಂದೇ ಶಬ್ದವು ಕೆಲವುಕಡೆ ದೋಷಗಳನ್ನು ತಿಳಿಸಿಕೊಡುವುದರಿಂದ ಅನರ್ಥಕ್ಕೆ ಕಾರಣ ವಾಗುತ್ತದೆ. ಕೆಲವುಕಡೆ ಅನರ್ಥಕ್ಕೆ ಕಾರಣವಾಗುವುದಿಲ್ಲವೆಂಬುದನ್ನು ದೃಷ್ಟಾಂತದಿಂದ ತಿಳಿಸಿಕೊಡುತ್ತಾರೆ—

**ಮೂ || ಬಹುಭುಕ್ತ್ವಂ ಯಥಾ ದೋಷೋ ನೃಷು ನೈವ ಹರೌ ಕ್ವಚಿತ್ |**
**ಏವಂ ದುಃಖ್ಯಾದಿಶಬ್ದಾಶ್ಚ ಸ್ವಾತಂತ್ರ್ಯಾಪೇಕ್ಷಯೋದಿತಾಃ || ೧೦ ||**

**ನೈವ ದೋಷಾ ಹರೌ ತದ್ಗಬುದ್ಧ್ಯೋಕ್ತಾ ದೋಷಕಾರಿಣಃ ||**
**ತಸ್ಮಾತ್ತೇ ದೋಷಶಬ್ದಾಶ್ಚ ತತ್ರೈವ ಗುಣವಾಚಕಾಃ || ೧೧ ||**

**ಅ** || ಯಥಾ=ಹೇಗೆ, ನೃಷು = ಮನುಷ್ಯರಲ್ಲಿ, ಬಹುಭುಕ್ತ್ವಂ=ಬಹುಭೋಜನವು, ದೋಷಃ=ದೋಷವು. ಹರೌ=ಶ್ರೀಪರಮಾತ್ಮನಲ್ಲಿ, ಕ್ವಚಿತ್=ಸ್ವಲ್ಪವು, ದೋಷಃ=ದೋಷವು, ನೈವ=ಅಲ್ಲವೇಅಲ್ಲ. ಇತಿ=ಹೀಗೆ, ವಾಸುದೇವಶ್ರುತಿಶ್ಚ=ಪೂರ್ವೋದಾಹೃತವಾದ ವಾಸುದೇವ ಶ್ರುತಿಯು, ಆಹ=ಹೇಳುತ್ತದೆ. (ರಾಜನಲ್ಲಿ ಬದ್ಧ ಮೃತ ಮೊದಲಾದ ಶಬ್ದಪ್ರಯೋಗಗಳು ಹೇಗೆ ದೋಷಹೇತುಗಳೋ, ಹೀಗೆ,) ಹರೌ=ಶ್ರೀಹರಿಯಲ್ಲಿ, ಬದ್ಧಮೃತಾದಿಶಬ್ದಗಳು, ಸ್ವಾತಂತ್ರ್ಯಾಪೇಕ್ಷಯಾ = ಸ್ವಾತಂತ್ರ್ಯವನ್ನು ಅಪೇಕ್ಷಿಸಿ ಪ್ರಯೋಗಿಸಲ್ಪಡುವುದಾದರೆ, ದೋಷಾಃ=ದೋಷಹೇತುಗಳು, ನೈವ=ಆಗುವುದೇ ಇಲ್ಲ.(ಅಥವಾ ಬಹುಭುಕ್ತ್ವಂ ಇತ್ಯಾದಿಗಳು ಎರಡು ದೃಷ್ಟಾಂತಗಳು) ಯಥಾ=ಹೇಗೆ, ಬಹುಭುಕ್ತ್ವಂ=ಬಹುಭೋಜನವು, ನೃಷು=ಮನುಷ್ಯರಲ್ಲಿ, ದೋಷಃ=ದೋಷವೋ, ತಥಾ=ಹಾಗೆ, ರಾಜ್ಞಿ=ರಾಜನಲ್ಲಿ, (ಬದ್ಧಾದಿ ಶಬ್ದಪ್ರಯೋಗವು ದೋಷವು,) ಹರೌ=ಶ್ರೀಹರಿಯಲ್ಲಿ, ಕ್ವಚಿತ್=ಸ್ವಲ್ಪವೂ, ಯಥಾ=ಹೇಗೆ, ದೋಷಃ= ದೋಷವು, ನ=ಅಲ್ಲವೋ, ಏವಂ=ಹೀಗೆ, ದುಃಖ್ಯಾದಿಶಬ್ದಾಶ್ಚ=ದುಃಖಿಮೊದಲಾದ ಶಬ್ದಗಳೂ ಕೂಡ, ಹರೌ=ಶ್ರೀಹರಿಯಲ್ಲಿ, ಸ್ವಾತಂತ್ರ್ಯಾಪೇಕ್ಷಯಾ = ಸ್ವಾತಂತ್ರ್ಯವನ್ನು ಅಪೇಕ್ಷಿಸಿ ಕೊಂಡು, ಉದಿತಾಃ=ಹೇಳಲ್ಪಟ್ಟರೆ, ದೋಷಾಃ=ದೋಷಹೇತುಗಳು, ನೈವ=ಆಗುವುದೇ ಇಲ್ಲ. (ಹಾಗಾದರೆ 'ಅಸನ್ನೇವ ಸ ಭವತಿ' ಇತ್ಯಾದಿಗಳಲ್ಲಿ ಶ್ರೀಹರಿಗೆ ದುಃಖಿತ್ವಾದಿ ವೇದನವು ಅನರ್ಥಕ್ಕೆ ಕಾರಣವೆಂದು ಹೇಳಲ್ಪಡುತ್ತದೆ. ಅದು ಹೇಗೆ ಕೂಡುತ್ತದೆ ಎಂದರೆ) ತದ್ಗಬುಧ್ಯಾ= ದುಃಖಾದಿಗಳು ಶ್ರೀಹರಿಯಲ್ಲಿಯೇ ಇರುತ್ತವೆನ್ನುವ ವಿವಕ್ಷೆಯಿಂದ, ಉಕ್ತಾಃ=ಹೇಳಲ್ಪಟ್ಟವು ಗಳು, ದೋಷಕಾರಿಣಃ=ದೋಷವನ್ನು ಮಾಡುತ್ತವೆ. ತಸ್ಮಾತ್=ಆದಕಾರಣ, ತೇ=ಆ, ದೋಷಶಬ್ದಾಶ್ಚ=ದೋಷಪ್ರತಿಪಾದಕಶಬ್ದಗಳೆಲ್ಲವೂ, ತತ್ರ=ಆ ವಿಷ್ಣುವಿನಲ್ಲಿ, ಗುಣವಾಚಕಾ ಏವ=ದುಃಖಾದಿ ಸ್ವಾತಂತ್ರ್ಯರೂಪ ಗುಣಪ್ರತಿಪಾದಕಗಳೇ.

**ತಾ || ನ್ಯಾಯಸುಧಾ**.–ದೇವದತ್ತನು ಬಹುಭೋಜನವುಳ್ಳವನೆಂದು ಹೇಳಿದರೆ 'ಅಸ್ವರ್ಗ್ಯಂ ಚಾತಿಭೋಜನಂ' ಎನ್ನುವ ಸ್ಮೃತಿಯಿಂದ ಬಹುಭೋಗವುಳ್ಳವನೆಂದೂ ನಿಂದ್ಯನೆಂದೂ ತೋರುತ್ತದೆ. ಬಹುಭುಕ್ತ್ವ ನಿಂದ್ಯತ್ವಗಳೆರಡೂ ದೇವದತ್ತನಲ್ಲಿ ಕೂಡುವುದರಿಂದ ಯೋಗ್ಯಗಳೇ ಆಗಿವೆ. ಆದಪ್ರಯುಕ್ತವೇ ದೇವದತ್ತನಿಂದ ಹೆದರಿದವನು ಹೀಗೆ ಪ್ರಯೋಗಿಸುವುದಿಲ್ಲ. ಪರಮೇಶ್ವರನಲ್ಲಿ ಆದರೂ ಸಂಸಾರಧರ್ಮಗಳು ಸರ್ವಥಾ ಕೂಡದಿರುವುದರಿಂದ ದೋಷವಿಲ್ಲ. ಮತ್ತೆ ಸರ್ವಸಂಹರ್ತೃತ್ವಾದಿಗಳೇ ತೋರುವುದರಿಂದ ಶ್ರೀಹರಿಯಲ್ಲಿ ಅವುಗಳಿಗೇನೇ ಪ್ರಯೋಗವು. ಆದಕಾರಣ ಅವ್ಯಕ್ತಾದಿಶಬ್ದವಾಚ್ಯನು ಪರಮಾತ್ಮನೆಂದು ಸಿದ್ಧವಾಯಿತು || ೧೦ || ೧೧ || ಸೂ || ೧ || ೨ || ೩ || ೪ || ೫ || ೬ || ೭ || ೮ || ೯ || ಅಧಿ. ೧ ||

**ಆನುಮಾನಿಕಾಧಿಕರಣವು ಸಮಾಪ್ತವಾಯಿತು.**



# ಜ್ಯೋತಿರುಪಕ್ರಮಾಧಿಕರಣವು

## ॥ ' ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ ' ॥

॥ ಸೂ ॥ ೧೦ ॥

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎನ್ನುವಲ್ಲಿ ಹೇಳಲ್ಪಟ್ಟ ಜ್ಯೋತಿರಾದಿ ಶಬ್ದ ವಾಚ್ಯನು ಪರಮ ಮುಖ್ಯವೃತ್ತಿಯಿಂದ ಬ್ರಹ್ಮನೇ, ಕರ್ಮಾದಿಗಳಲ್ಲ. ಏಕೆಂದರೆ—ಆ ಬ್ರಹ್ಮನನ್ನು 'ಏಷ ಇಮಂ ಲೋಕಮಭ್ಯಾರ್ಚತ್' ಎಂದುಪಕ್ರಮಿಸಿಯೇ ಸರ್ವಶಬ್ದವಾಚ್ಯನೆಂದು 'ತಾ ವಾ ಏತಾಃ ಸರ್ವಾ ಋಚಃ' ಇತ್ಯಾದಿಗಳಿಂದ ಅಧ್ಯಯನ ಮಾಡುತ್ತಾರೆ.

**(' ಓಂ ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ಓಂ ')** ॥ ಸೂ. ೧೧ ॥

'ಅಸಾವಾದಿತ್ಯೋ ದೇವಮಧು ' ಇತ್ಯಾದಿಗಳಿಂದ ಶ್ರೀ ಹರಿಯ ಉಪಾಸನೆಯನ್ನು ಉಪದೇಶಿಸಿದಾಗ್ಯೂ ಜೇನುತುಪ್ಪಮೊದಲಾದುವುಗಳಲ್ಲಿ ವ್ಯವಹಾರವಿರೋಧವು ಹೇಗೆ ಇಲ್ಲವೋ, ಹಾಗೆಯೇ ಲೋಕಸಿದ್ಧವಾದ ರೂಢ್ಯಾದಿವೃತ್ತಿಕ್ಲಪ್ತಿಯನ್ನು ಅಂಗೀಕರಿಸಿಯೇ ಮಹಾಯೋಗ ವೃತ್ತಿಯನ್ನು ವ್ಯುತ್ಪಾದಿಸಿ ಸರ್ವಶಬ್ದವಾಚ್ಯನೆಂದು 'ತಾವಾ ಏತಾಃ' ಇತ್ಯಾದಿಗಳಿಂದ ಉಪದೇಶವು. ಸರ್ವಶಬ್ದವಾಚ್ಯನೆನ್ನುವ ಉಪಾಸನೆಯು ' ಪ್ರಾಣಋಚ ಇತ್ಯೇವ ವಿದ್ಯಾತ್ ' ಇತ್ಯಾದಿಗಳಲ್ಲಿ ಉಪದೇಶವಿದ್ದಪ್ರಯುಕ್ತ ವಿರೋಧವಿಲ್ಲ. ಸಾಧಕಮಾತ್ರವಿರುವುದಲ್ಲ; ಕರ್ಮಾದ್ಯನುಷ್ಠಾನವು ಕೂಡದೆಹೋಗಬೇಕಾಗುವುದೆನ್ನುವ ವಿರೋಧವೂ ಇಲ್ಲ. ಅಂತೂ ಜ್ಯೋತಿರಾದಿ ಶಬ್ದಗಳಿಗೆ ಉಪಾಸನೆಗೋಸ್ಕರ ಭಗವತ್ಪರತ್ವವಿದ್ದಾಗ್ಯೂ ಕರ್ಮಕ್ರಮಾದಿ ಪರತ್ವವೂ ಇದೆ.

**ನ್ಯಾಯಸುಧಾ—** (1) 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇದುಮೊದಲಾದ ಕರ್ಮಕಾಂಡದಲ್ಲಿರತಕ್ಕ ವಾಕ್ಯದಲ್ಲಿ ಈ ವಾಕ್ಯವು ಬ್ರಹ್ಮನಲ್ಲಿ ಶಕ್ತಿತಾತ್ಪರ್ಯವುಳ್ಳದ್ದು ಆಗುತ್ತದೋ ಇಲ್ಲವೋ ಎಂದು ಸಂದೇಹವು. ಶಕ್ತಿತಾತ್ಪರ್ಯವುಳ್ಳದ್ದು ಆಗುವುದಿಲ್ಲವೆಂದು ಪೂರ್ವಪಕ್ಷವು. ಏಕೆಂದರೆ— ಬ್ರಹ್ಮನು ೧ ವಾಕ್ಯಾರ್ಥನೋ ೨ ಪದಾರ್ಥನೋ, ೧ನೇದ್ದು (ಬ್ರಹ್ಮನು ವಾಕ್ಯಾರ್ಥನೆನ್ನುವುದು) ಕೂಡ ಲಾರದು. ಏಕೆಂದರೆ— ಜ್ಯೋತಿಷ್ಟೋಮವು ಇಷ್ಟಸಾಧನವು ಇತ್ಯಾದಿಗಳು ಈ ವಾಕ್ಯಾರ್ಥವು. ೨ನೇದ್ದು (ಬ್ರಹ್ಮನು ಪದಾರ್ಥನೆನ್ನುವುದು) ಕೂಡಲಾರದು. ಹೇಗೆಂದರೆ— ಈ ವಸಂತಾದಿ ಪದಗಳು ರೂಢಿಯಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತವೋ, ಯೋಗದಿಂದಲೋ, ರೂಢಿಯಿಂದ ಎನ್ನುವ ಕಲ್ಪದಲ್ಲಿಯೂ ಆ ಪದಗಳು (೧) ಪ್ರಸಿದ್ಧ ವಸಂತಕಾಲಾದ್ಯಭೇದವು ಬ್ರಹ್ಮನಲ್ಲಿ ಇರುವು ದರಿಂದ ಬ್ರಹ್ಮನಲ್ಲಿ ರೂಢಗಳೆಂದು ಹೇಳುತ್ತೀರೋ, ಅಥವಾ (೨) ಆ ಪದಗಳಿಗೆ ಬ್ರಹ್ಮನು ವಸಂತಾದಿಗಳ ಸ್ವರೂಪನಾಗದೇನೇ ಪ್ರತ್ಯೇಕವಾಗಿಯೇ ಅಲ್ಲಿ ರೂಢಿಯೆಂದು ಆಶ್ರಯಿಸು ತ್ತೀರೋ, ೧ನೇದ್ದು ಕೂಡಲಾರದು. ಏಕೆಂದರೆ, ಅವುಗಳಿಗೆ ಜಡತ್ವ ಅನಿತ್ಯತ್ವಾದಿಗಳು ಇದ್ದ ಪ್ರಯುಕ್ತ ಬ್ರಹ್ಮನಿಗೂ ಅಂತಹ ದೂಷಣವು ಬರಬೇಕಾಗುವುದು. ೨ನೇದ್ದು ಕೂಡಲಾರದು. ಅಂದರೆ, ಆ ಪದಗಳಿಗೆ ಬ್ರಹ್ಮನು ವಸಂತಾದಿಗಳ ಸ್ವರೂಪವಾಗದೇನೇ ಪ್ರತ್ಯೇಕವಾಗಿಯೇ ಅಲ್ಲಿ ರೂಢಿಯೆಂದು ಆಶ್ರಯಿಸುತ್ತೇವೆಂದು ಹೇಳಕೂಡದು. ಅನೇಕಾರ್ಥಗಳನ್ನು ಸ್ವೀಕರಿಸುವುದು ಅನ್ಯಾಯವಾಗಿದೆ. ಈಶ್ವರನಲ್ಲಿ ವಸಂತಾದಿಶಬ್ದಗಳಿಗೆ ರೂಢಿಯಿದೆ ಎನ್ನುವಲ್ಲಿ ಪ್ರಮಾಣವಿಲ್ಲ.

ರೂಢಿಯಿಂದ ಸಮನ್ವಯವನ್ನು ಆಶ್ರಯಿಸಿದರೆ ಗುಣಪೂರ್ಣತ್ವವು ಸಿದ್ಧಿಸದೆ ಇರುವುದರಿಂದ ಪ್ರಯೋಜನವಿರುವುದಿಲ್ಲ. ಯೋಗವೃತ್ತಿಯಿಂದ ಸಮನ್ವಯವೆಂದು ಹೇಳುತ್ತೇವೆಂದು ಹೇಳ ಕೂಡದು ಯೋಗವು ರೂಢಿಯಕ್ಕಿಂತ ಅಮುಖ್ಯವಾಗಿರುವುದರಿಂದ ಮುಖ್ಯಾರ್ಥತ್ವವು ಸಿದ್ಧಿಸ ಲಾರದು. ಮತ್ತು ಯೋಗವನ್ನು ಹೇಳುವುದಾದರೆ ಪೂರ್ವೋತ್ತರವದ ವಿಭಾಗವನ್ನು ಒಪ್ಪಬೇಕು. ಪೂರ್ವೋತ್ತರ ಪದಗಳಿಗೆ ಈಶ್ವರಪರತ್ವವಿದ್ದರೆ ಯೋಗವು ಕೂಡಲಾರದು. ಇಲ್ಲದಿದ್ದರೆ ಸರ್ವ ಶಬ್ದಸಮನ್ವಯವು ಕೂಡಲಾರದು. ತಥಾಚ ಯೋಗವೂ ಕೂಡುವುದಿಲ್ಲ. ಮತ್ತು ಎಲ್ಲಾ ಪದ ಗಳಿಗೆ ಬ್ರಹ್ಮಪರತ್ವವಿದ್ದರೆ ವಿಭಕ್ತಿವೈಯರ್ಥ್ಯವು. ಜ್ಯೋತಿಷ್ಟೋಮಾದಿ ಶಬ್ದಗಳೂ ಭಗತ್ಪರ ಗಳಾದರೆ ಜ್ಯೋತಿಷ್ಟೋಮಾದಿ ಕರ್ಮಾನುಷ್ಠಾನವೂ ಕೂಡಲಾರದು. ಆದಕಾರಣ ಸಮನ್ವಯ ಸೂತ್ರವು ಅಯುಕ್ತವು. ಎಂದರೆ—

(3) ಈ ವಿಷಯದಲ್ಲಿ ಸಮಾಧಾನವನ್ನು ಹೇಳುವೆವು. ಬ್ರಹ್ಮಸಲ್ಲಿ ೧ ವಾಕ್ಯಕ್ಕೆ ಅನ್ವಯವೋ, ಪದಗಳಿಗೋ ಎಂದು ಯಾವುದು ಉಕ್ತವಾಗಿಯದೋ ಆ ವಿಷಯದಲ್ಲಿ ಪದಗಳಿಗೆ ಎಂದು ಹೇಳುವೆವು. ಯೋಗವು ಇದ್ದಪ್ರಯುಕ್ತ ವೃತ್ತಿಯೇ ಕೂಡುವುದಿಲ್ಲವೆನ್ನುವುದು ಅಯುಕ್ತವು ಎನ್ನುವ ಅಭಿಪ್ರಾಯದಿಂದ ಜ್ಯೋತಿರಾದಿಶಬ್ದಗಳಿಗೆ ನಿರ್ವಚನಮಾಡುತ್ತಾರೆ—

ಮೂ ॥ ಜಾತಮೋತಂ ಹರೌ ಯಸ್ಮಾಜ್ಜ್ಯೋತಿಃಷಃ ಪ್ರಾಣರೂಪತಃ ।
ಆಯಃ ಜೇತಶ್ಚಾಯಜೇತೋ ಮಸಂತಿಷ್ಠ ಮಸಂಸ್ತುತಃ ॥ ೧೨ ॥
ವಿಗತಚ್ಛಾದನತ್ವಾತ್ತು ಗಚ್ಛಭೂತಕ್ಷರಂಕರಃ ।
ಭುಂಕ್ತ್ವೇತ್ಯುಕ್ತೋ ಹರಿರ್ಹುತಂ ಚ ಹುತಮಸ್ಮಿನ್ ಜಗದ್ಯತಃ ॥೧೩॥
ಸ್ಫುಟತ್ವಾತ್ ಸ್ಫಡಿತಿ ಪ್ರೋಕ್ತಃ ಕವ ರಕ್ಷಣ ಇತ್ಯತಃ ।
ಕವಚಂ ವರ್ತತೇ ಯಸ್ಮಾತ್ ಷಡ್ಗುಣತ್ವೇನ ಸರ್ವದಾ ॥ ೧೪ ॥
ವಷಟ್ ತದ್ಗತ್ವತಸ್ತೇಷಾಂ ವೌಷಡಿತ್ಯೇವ ಕಥ್ಯತೇ ।
ಸ್ವೀಯಂ ಸ್ವೀಕುರುತೇ ಯಸ್ಮಾತ್ಸ್ವಾಹೇತ್ಯುಕ್ತೋ ಜನಾರ್ದನಃ ॥೧೫॥
ನಮಂತ್ಯಸ್ಮಿನ್ ಗುಣಾ ಯಸ್ಮಾನ್ನಮ ಇತ್ಯೇವ ಕಥ್ಯತೇ ।
ಇತ್ಯಶೇಷಕ್ರಿಯಾ ನಾಮ ಶಬ್ದೈರೇಕೋ ಜನಾರ್ದನಃ ॥ ೧೬ ॥
ಉಚ್ಯತೇ ಮುಖ್ಯತೋ ಯಸ್ಮಾತ್ಪದವರ್ಣಸ್ವರಾತ್ಮ(ದಿ)ಭಿಃ ।
ತಸ್ಮಾದನಂತಗುಣತಾ ಶ್ರುತಿತಾತ್ಪರ್ಯತೋಽಸ್ಯ ಹಿ ॥ ೧೭ ॥

ಅ ॥ ಯಸ್ಮಾತ್=ಯಾವ ಕಾರಣದ್ದೆಸೆಯಿಂದ, ಜಾತಂ=ಹುಟ್ಟಿದ ಜಗತ್ತು, ಹರೌ= ಶ್ರೀ ವಿಷ್ಣುವಿನಲ್ಲಿ, ಓತಂ=ಪ್ರವಿಷ್ಟವಾಗಿಯದೋ, (ಆದಪ್ರಯುಕ್ತ, ಶ್ರೀ ಹರಿಯು) ಜ್ಯೋತಿಃ= (ಜಃ ಓತಿಃ ಯಸ್ಮಿನ್ ಸಃ ಎನ್ನುವ ವ್ಯುತ್ಪತ್ತಿಯಿಂದ) ಜ್ಯೋತಿಶ್ಶಬ್ದವಾಚ್ಯನು. ಪ್ರಾಣರೂಪತಃ= ಚೇಷ್ಟಕರೂಪನಾದಪ್ರಯುಕ್ತ, ಷಃ=('ಷಕಾರಃ ಪ್ರಾಣ ಆತ್ಮಾ' ಎನ್ನುವ ಶ್ರುತಿಯಿಂದ) ಷಃ ಎನ್ನಿಸುತ್ತಾನೆ. (ತಥಾಚ 'ಜ್ಯೋತಿಶ್ಚಾಸೌಷಶ್ಚ ಜ್ಯೋತಿಷಃ' ತತ್ಸಂಬುದ್ಧಿಃ ಜ್ಯೋತಿಷ. ಜಗದಾಶ್ರಯನೂ ಚೇಷ್ಟಕರೂಪನೂ ಆದವನೇ) (ಯಸ್ಮಾತ್=ಯಾವ ಕಾರಣದ್ದೆಸೆಯಿಂದ,) ಆ=ಚೆನ್ನಾಗಿ, ಸರ್ವ ಪ್ರದೇಶಗಳಲ್ಲಿಯೂ, ಯಜೇತಃ ಯಜ = ಯಜ್ಞಾಖ್ಯಕರ್ಮದಿಂದ, ಯಾಜಕ ಪುರುಷನಿಂದಾಗಲೀ, ಇತಃ=ಪ್ರಾಪಿಸಲ್ಪಟ್ಟವನೋ, ಚ=ಆದಕಾರಣ, ಆಯಜೇತಃ=

ಸಕಲಯಜ್ಞಗಳನ್ನು ಭೋಗಿಸತಕ್ಕವನು ಯಾಗಮಾಡತಕ್ಕವರಿಂದ ಜ್ಞಾನದ್ವಾರಾ ಪ್ರಾಪ್ಯನು. (ಅದರಸಂಬುದ್ಧಿಯು ಆಯಜೇತ ಎಂದು.) ವಸನ್=(ವಸತೀತಿ ವಸನ್ ಎನ್ನುವ ವ್ಯುತ್ಪತ್ತಿಯಿಂದ) ಸರ್ವತ್ರ ವಾಸಮಾಡಿಕೊಂಡು ಇದ್ದವನೋ, ತತಃ=ವ್ಯಾಪ್ತನೋ, ಆದಪ್ರಯುಕ್ತ, ವಸಂತಿಃ ಚ=(ವಸತೀತಿ ವಸಃ, ತನೋತೀತಿ ತಿಃ 'ವರ್ಣಾಗಮೋ ವರ್ಣವಿಪರ್ಯಯಶ್ಚ' ಎನ್ನುವ ಪ್ರಮಾಣದಿಂದ ಪೂರ್ವಪದಕ್ಕೆ ನಕಾರಾಗಮವು. ವಸಂಶ್ಚಾಸೌ ತಿಶ್ಚ ಎನ್ನುವ ವ್ಯುತ್ಪತ್ತಿಯಿಂದ) 'ವಸಂತಿ' ಎನ್ನಿಸುತ್ತಾನೆ. (ಅವನ ಸಂಭೋದನೆಯು) ವಸಂತೇ=ಸರ್ವತ್ರ ವ್ಯಾಪ್ತನಾಗಿರುವವನೇ. ತಥಾಚ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎನ್ನುವುದು ಈಶ್ವರಪರವು) ವಿಗತಚ್ಛಾದನತ್ವಾತ್ತು=ಹೋಗಲ್ಪಟ್ಟ ಅವಿದ್ಯಾದಿಗಳುಳ್ಳವನಾದಪ್ರಯುಕ್ತ, ಗಚ್ಛ=(ಗಂ=ಹೋಗಲ್ಪಟ್ಟ, ಛಂ = ಆವರಣವಾದ ಅವಿದ್ಯಾದಿಗಳು, ಯಸ್ಮಾತ್ = ಯಾರದ್ದೆಶೆಯಿಂದ ಎನ್ನುವ ವ್ಯುತ್ಪತ್ತಿಯಿಂದ ಶ್ರೀ ಹರಿಯು 'ಗಚ್ಛಃ' ಎನ್ನಿಸುತ್ತಾನೆ. ಗಮ್ಲುಗತೌ ಛದಿರಾವರಣೆ ಅಥವಾ ಛಪಸಂವರಣೆ ಇವುಗಳಿಂದ ಡ ಪ್ರತ್ಯಯವು.) ಅವಿದ್ಯಾದಿಗಳ ಅಂತ್ಯತಾಭಾವವುಳ್ಳವನೇ. ('ಇಂದ್ರಾಗಚ್ಛ' ಇತ್ಯಾದಿಗಳ ವ್ಯಾಖ್ಯಾನವೆಂದು ತಿಳಿಯತಕ್ಕದು.) ಭೂತಕ್ಷಯಂಕರಃ= ಪ್ರಾಣಿಗಳ ನಾಶವನ್ನು ಮಾಡುವ, ಹರಿಃ=ಶ್ರೀವಿಷ್ಣುವು, ಭುಂಕ್ಷ್ವೇತ್ಯುಕ್ತಃ=ಭುಂಕ್ಷ್ವವೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಅಂದರೆ ಭೂತಶಬ್ದಕ್ಕೆ ಭೂಶಬ್ದವು ಆದೇಶವು. ಅದಕ್ಕೆ ಮಕಾರಾಗಮವು ಮತ್ತು ಹ್ರಸ್ವವು. ಕ್ಷಿಕ್ಷಯೇ ಎನ್ನುವುದರಿಂದ ಡ್ವಪ್ರತ್ಯಯವು. ಇಕಾರಕ್ಕೆ ಲೋಪವು. ಅಂತೂ ಭುಂಕ್ಷ್ವಭುಂಕ್ಷ್ವ=ಸರ್ವ ಪ್ರಾಣಿಗಳನ್ನು ಸಂಹರಿಸುವವನೇ, ಯತಃ= ಯಾವಕಾರಣದ್ದೆಶೆಯಿಂದ, ಅಸ್ಮಿನ್=ವಿಷ್ಣುವಿನಲ್ಲಿ, ಜಗತ್=ಪ್ರಪಂಚವು, ಹುತಂ=ತನ್ನಿಂದಲೇ ಪ್ರಲಯಾದಿಕಾಲದಲ್ಲಿ ಹೋಮಿಸಲ್ಪಡುತ್ತದೋ, ಅತಃ=ಆದಕಾರಣ, ಹರಿಃ=ಶ್ರೀವಿಷ್ಣುವು, ಹುಂಚ=(ಹು ದಾನಾದಾನಯೋಃ ಎನ್ನುವುದರಿಂದ ಅಧಿಕರಣಾರ್ಥದಲ್ಲಿ ಮ ಪ್ರತ್ಯಯ ಮಾಡಿದರೆ ಹುಂ ಎನ್ನುವ ರೂಪವು) ಹುಂ ಎನ್ನಿಸುತ್ತಾನೆ. ಅಂದರೆ ಸರ್ವಜಗನ್ನಾಶಕನು, ಸ್ಫುಟತ್ವಾತ್= ತನ್ನನ್ನು ಕುರಿತು ವ್ಯಕ್ತನಾದಪ್ರಯುಕ್ತ, ಅಥವಾ ಅಸಂಕುಚಿತವಾದ ವ್ಯಾಪಾರವುಳ್ಳವನಾದ ಪ್ರಯುಕ್ತ ಫಟ್ ಇತಿ=ಫಟ್ ಎಂದು, ಪ್ರೋಕ್ತಃ=ಹೇಳಿಸಿಕೊಳ್ಳಲ್ಪಡುತ್ತಾನೆ. (ಅಂದರೆ 'ಸ್ಫುಟವಿಕಸನೆ' ಎನ್ನುವ ಧಾತುವಿನದ್ದೆಶೆಯಿಂದ ಕರ್ತ್ರರ್ಥದಲ್ಲಿ ಕ್ವಿಪ್‌ಪ್ರತ್ಯಯವು.) ಸಕಾರಕ್ಕೆ ಲೋಪವು. ಉಕಾರಕ್ಕೆ ಅಕಾರವು. ಕವಂಕ್ಷಣೇ ಇತ್ಯತಃ=ರಕ್ಷಣಾರ್ಥಕವಾದ ಕವ ಧಾತುವಿನದ್ದೆಶೆಯಿಂದ ಅಚ್ ಪ್ರತ್ಯಯಮಾಡಿದರೆ) ಕವಚಂ=ಕವತೀತಿ ಕವಚಂ ಎನ್ನುವ ವ್ಯುತ್ಪತ್ತಿಯಿಂದ ಸರ್ವರಕ್ಷಕನಾದಪ್ರಯುಕ್ತ ಕವಚನೆನ್ನಿಸುತ್ತಾನೆ. ಯಸ್ಮಾತ್=ಯಾವಕಾರಣದ್ದೆಶೆಯಿಂದ, ಸರ್ವದಾ=ಯಾವಾಗಲೂ, ಷಡ್ಗುಣತ್ವೇನ=ಆರು ಗುಣಗಳು ಇರುವತನದಿಂದ, ವರ್ತತೇ=ಇರುತ್ತಾನೋ, ಆದಪ್ರಯುಕ್ತ, ವಷಟ್ = ವಷಟ್ ಎನ್ನಿಸುತ್ತಾನೆ. ತಥಾಚ ವರ್ತತೇ ಇತಿ ವಃ=ಸರ್ವದಾ ಇರುವವನು, ಷಡ್ಗುಣಾತ್ಮಕತ್ವಾತ್=ಐಶ್ವರ್ಯ-ವೀರ್ಯ-ಯಶಸ್ಸು-ಶ್ರೀ-ಜ್ಞಾನ-ವೈರಾಗ್ಯ-ಎನ್ನುವ ಆರು ಗುಣಗಳ ಸ್ವರೂಪನಾದುದರಿಂದ ಷಟ್ ಎನ್ನಿಸುತ್ತಾನೆ. ವಶ್ಚಾಸೌ ಷಟ್‌ಚ=ಸರ್ವದಾ ಇರುವವನೂ ಷಡ್ಗುಣಸ್ವರೂಪನೂ ಆದವನು.) ತೇಷಾಂ=ಆ ಗುಣಗಳಿಗೆ, ತದ್ಗತ್ವತಃ=ವಿಷ್ಣುವೃತ್ತಿತ್ವವಿದ್ದಪ್ರಯುಕ್ತ, ವೌಷಟ್ ಇತ್ಯೇವ= ವೌಷಟ್ ಎಂದೇ, ಕಥ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. (ಅಂದರೆ **'ಅಕಯುಪ್ರವಿಸಂಭೂಮಸಖಹಾ ವಿಷ್ಣುವಾಚಕಾಃ'**ಎನ್ನುವ ವಚನದಿಂದ 'ವಿಃ' ಎಂದರೆ ವಿಷ್ಣುವು. ವೌ=ವಿಷ್ಣುವಿನಲ್ಲಿ ಇರತಕ್ಕ, ಷಟ್=ಆರುಗುಣಗಳು, ವೌಷಟ್ ಎನ್ನಿಸುತ್ತಾವೆ. ಶ್ರೀಹರಿಯಲ್ಲಿರತಕ್ಕ ಗುಣಗಳು ಶ್ರೀಹರಿಯ ಸ್ವರೂಪಗಳಾಗಿರುವುದರಿಂದ ವೌಷಟ್ ಎನ್ನುವುದೂ ಭಗವಂತನ ನಾಮಧೇಯವೇ.)

ಯಸ್ಮಾತ್=ಯಾವಕಾರಣದ್ದೆಶೆಯಿಂದ, ಜನಾರ್ದನಃ=ಶ್ರೀ ಹರಿಯು, ಸ್ವೀಯಂ=ಸ್ವಾಭಾವಿಕವಾಗಿ ತನ್ನದೇ ಆದ ಹವಿಸ್ಸು ಮೊದಲಾದುದನ್ನು ಇತರರಿಗೆ ಭ್ರಾಂತಿಯಿಂದ ಸ್ವತ್ವವಿಲ್ಲವೆಂದು ಪ್ರತೀತವಾದುದನ್ನು, ಸ್ವೀಕುರುತೇ=ಸ್ವೀಕರಿಸುತ್ತಾನೋ, ಆದಪ್ರಯುಕ್ತ, ಸ್ವಾಹೇತ್ಯುಕ್ತಃ='ಸ್ವಾಹಾ' ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ. (ಅಂದರೆ ಆಙ್ ಪೂರ್ವಕವಾದ ಹೃಞ್ ಹರಣೇ ಅಥವಾ ಓಹಾಕ್ ತ್ಯಾಗೇ ಎನ್ನುವ ಧಾತುವಿನದ್ದೆಶೆಯಿಂದ ಡಪ್ರತ್ಯಯ ಮಾಡಿ ಅಕಾರಕ್ಕೆ ಲೋಪ ಮಾಡಿದರೆ ಆಹ್ ಅ, ಆಹ ಎಂದಾಗುತ್ತದೆ. ಸ್ವೀಕಾರವೆಂದರ್ಥವು. ಸ್ವಂ=ಸ್ವಾಭಾವಿಕವಾಗಿ ಸ್ವಕೀಯವಾದ ಹವಿರಾದಿಗಳನ್ನು ಸ್ವೀಕರಿಸುವಪ್ರಯುಕ್ತ 'ಸ್ವಾಹಃ' ಎನ್ನಿಸುತ್ತಾನೆ. ಸ್ವಾಹಶ್ಚಾಸಾಅಶ್ಚ ಸ್ವಾಹಾಃ ಅದರ ಸಂಬುದ್ಧಿಯು ಸ್ವಾಹಾ ಎಂಬ.) ಯಸ್ಮಾತ್=ಯಾವಕಾರಣದ್ದೆಶೆಯಿಂದ, ಅಸ್ಮಿನ್=ಈ ಹರಿಯಲ್ಲಿ, ಗುಣಾಃ=ಗುಣಗಳು, ನಮಂತಿ=ಪ್ರಹ್ವೀಭೂತಗಳಾಗಿವೆಯೋ, ಆದಕಾರಣ, 'ನಮಃ' ಇತ್ಯೇವ=ನಮಃ ಎಂದೇ, ಕಥ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. ಅಥವಾ ಅಸ್ಮಿನ್=ಈ ಪರಮೇಶ್ವರವಿಷಯದಲ್ಲಿ, ಗುಣಾಃ=ಅಪ್ರಧಾನರಾದ ಬ್ರಹ್ಮಾದಿಗಳು, ನಮಂತಿ=ಪ್ರಹ್ವೀಭೂತರಾಗುತ್ತಾರೆ. ಆದಕಾರಣ ನಮಃ=ನಮಃ ಎಂದೇ ಹೇಳಿಸಿಕೊಳ್ಳಲ್ಪಡುತ್ತಾನೆ. (ಅಂದರೆ ನಮ್ ಪ್ರಹ್ವತ್ವೇ ಶಬ್ದೇಚ ಎನ್ನುವುದರಿಂದ ಅಸುನ್ ಪ್ರತ್ಯಯ ಮಾಡಿದರೆ ನಮಃ ಎಂದು ರೂಪವು ಆಗುತ್ತದೆ.) ಇತಿ=ಹಿಂದೆಹೇಳಿದ ಪ್ರಕಾರ, ಯಸ್ಮಾತ್=ಯಾವಕಾರಣದ್ದೆಶೆಯಿಂದ, ಪದವರ್ಣಸ್ವರಾತ್ಮ(ದಿ)ಭಿಃ=ಪದ-ವರ್ಣ-ಸ್ವರ-ಸ್ವರೂಪಗಳು ಮಾತ್ರ ಅಲ್ಲ. ಮತ್ತೆ ಉದಾತ್ತಾದಿ ಸ್ವರ ಸ್ವರೂಪಗಳೂ ಅಥ, ಅಶೇಷಕ್ರಿಯಾನಾಮಶಬ್ದೈಃ, ಅಶೇಷ=ಎಲ್ಲಾ, ಕ್ರಿಯಾನಾಮ ಶಬ್ದೈಃ=ಆಖ್ಯಾತ ಪದಗಳಿಂದಲೂ, ಸುಬಂತ ಶಬ್ದಗಳಿಂದಲೂ, ಏಕಃ=ನಿರ್ಭಿನ್ನನಾದ, ಜನಾರ್ದನಃ=ಶ್ರೀ ಹರಿಯು, ಮುಖ್ಯತಃ=ಯೋಗವೃತ್ತಿಯಿಂದ, ಉಚ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೋ, ತಸ್ಮಾತ್ = ಆದಕಾರಣ, ಶ್ರುತಿತಾತ್ಪರ್ಯತಃ = ಸರ್ವಶ್ರುತಿ ತಾತ್ಪರ್ಯವನ್ನು ಅನುಸರಿಸಿ, ಅಸ್ಯ=ಈ ಶ್ರೀ ಹರಿಗೇನೇ, ಅನಂತಗುಣತಾ=ಅನಂತಗುಣಗಳು ಇರುತ್ತವೆ ಎನ್ನುವುದು, ಹಿ=ಪರ್ಯಾಯಗಳಾಗದಿರುವುದರಿಂದ, ಸಿದ್ಧ್ಯತಿ=ಸಿದ್ಧಿಸುತ್ತದೆ.

ತಾ ॥ **ನ್ಯಾಯಸುಧಾ**— (1) ನಿರ್ವಚನವನ್ನು ಮಾಡಲಿಕ್ಕೆ ಬರುತ್ತದೆ ಎಂದಿಷ್ಟರಿಂದ ಮಾತ್ರ ಪರಮೇಶ್ವರನು ಅನಂತಗುಣಗಳುಳ್ಳವನೆಂಬ ವೇದದಿಂದ ಸಿದ್ಧಿಸಲಾರನು. ನಿರ್ವಚನವು ವ್ಯಾಖ್ಯಾತೃಗಳ ಬುದ್ಧಿಯ ಅನುಸಾರವಾಗಿ ಅರ್ಥಾಂತರದಲ್ಲಿ ಬೇರೆ ರೀತಿಯಾಗಿಯೂ ಕೂಡ ಬಹುದು. ಇಲ್ಲವಾದರೆ ಕುಷ್ಠದೇಹವುಳ್ಳವನು ಶೋಧಿಸುತ್ತಾನೆ ಎನ್ನುವ ಅಭಿಪ್ರಾಯದಿಂದ ಪ್ರಯುಕ್ತವಾದ 'ಶ್ವೇತೋ ಧಾವತಿ' ಎನ್ನುವ ವಾಕ್ಯಕ್ಕೆ 'ಶ್ವಾ ಇತಃ ಧಾವತಿ' ಎಂದು ಮಾಡಿಕೊಂಡು ಇಲ್ಲಿಂದ ನಾರಮೇಯವು (ನಾಯಿಯು) ಶೀಘ್ರವಾಗಿ ಓಡುತ್ತದೆ ಎಂದೂ ಅಭಿಪ್ರಾಯವು ಬರಬೇಕಾಗುವುದು. ಎಂದರೆ— 'ಶ್ರುತಿತಾತ್ಪರ್ಯತಃ' ಎಂಬ ಅಂದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಿಗೆ ಹಿಂದೆ ಮಾಡಿದ ನಿರ್ವಚನದಿಂದ ಪರಮೇಶ್ವರನ ಗುಣಗಳಲ್ಲಿ ತಾತ್ಪರ್ಯವಿಲ್ಲದಿದ್ದರೆ ಹೀಗಾಗಬಹುದಿತ್ತು. ತಾತ್ಪರ್ಯವಿದೆ ಎಂದು 'ಕಃ ಛಂದಸಾಂ ಯೋಗಮಾವೇದ ಧೀರಃ' ಇತ್ಯಾದಿಗಳಿಂದ ಉಪಪಾದಿಸುವೆವು ॥ ೧೨ ॥ ೧೩ ॥ ೧೪ ॥ ೧೫ ॥ ೧೬ ॥ ೧೭ ॥

ಯೋಗವೃತ್ತಿಯನ್ನು ಅಂಗೀಕರಿಸಿದ್ದಕ್ಕೆ ಪ್ರಯೋಜನಾಂತರವನ್ನು ಹೇಳುತ್ತಾರೆ—

**ಮೂ ॥ ವಿಜ್ಞಾನಾರ್ಥತ್ವತಃ ಸರ್ವಶಬ್ದಾನಾಂ ನಾಸ್ತಿ ದೂಷಣಂ ।**
**ಅಂಗೀಕೃತೇಽಪಿ ನೈವಾಸ್ತಿ ದೋಷೋ ವಾಕ್ಯಸಮನ್ವಯೇ ।**
**ತದರ್ಥತ್ವೇನ ಕರ್ಮಾದೇಃ ಸಂಭವಾದಲ್ಪಬಾಧಯೋ ॥ ೧೮ ॥**

ಅ || ಸರ್ವಶಬ್ದಾನಾಂ = ವೇದದಲ್ಲಿರುವ ಎಲ್ಲಾ ಶಬ್ದಗಳಿಗೆ, ವಿಜ್ಞಾನಾರ್ಥತ್ವತಃ= ಹಿಂದೆ ಹೇಳಿದಪ್ರಕಾರ ಯೋಗವೃತ್ತಿಯಿಂದ ಅನಂತಾನಂತಗುಣಗಳಿಂದ ಯುಕ್ತನಾದ ಪರಮೇಶ್ವರವಿಷಯಕ ಜ್ಞಾನವನ್ನುಂಟುಮಾಡುತ್ತವೆಂದು ಅಂಗೀಕರಿಸಿರುವುದರಿಂದ, ದೂಷಣಂ = ವಸಂತಾದಿರೂಪವಾಗಿ ರೂಢ್ಯಂಗೀಕಾರಪ್ರಯುಕ್ತವಾದ ಅನಿತ್ಯತ್ವಾದಿ ದೂಷಣವು ಯಾವುದು ಹೇಳಲ್ಪಟ್ಟದೋ, ಅದು, ನಾಸ್ತಿ=ಇಲ್ಲ.) ಇದರಿಂದ 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ' ಎನ್ನುವ ಸೂತ್ರ (೧೦) ತಾತ್ಪರ್ಯವನ್ನು ಹೇಳಿದಂತೆ ಆಯಿತು. ಈ ಪ್ರಕಾರ ಕರ್ಮಕಾಂಡದಲ್ಲಿರತಕ್ಕ ಎಲ್ಲಾ ಪದಗಳಿಗೂ ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಪಾದಿಸಿ ಸಮನ್ವಯ ಸೂತ್ರದ ಅನುಪಪತ್ತಿಯನ್ನು ಪರಿಹರಿಸಿದರು. ಈಗ ವಾಕ್ಯಾನ್ವಯಪಕ್ಷವನ್ನು ಅಂಗೀಕರಿಸಿಯೂ ಅನುಪಪತ್ತಿಯನ್ನು ಪರಿಹರಿಸುತ್ತಾರೆ.) ವಾಕ್ಯಸಮನ್ವಯೇ = ವಾಕ್ಯಸಮನ್ವಯವು, (ಪ್ರತ್ಯೇಕ ಪ್ರತ್ಯೇಕ ಅರ್ಥಗಳಲ್ಲಿ ವಾಚಕವಾಗಿರುವ ವಾಕ್ಯಕ್ಕೆ ಕೊನೇಗೆ ಭಗವತ್ಪರತ್ವವು ವಾಕ್ಯಾನ್ವಯವು) ಅಂಗೀಕೃತೇऽಪಿ = ಬ್ರಹ್ಮನಲ್ಲಿ 'ವಸಂತೇ' ಇತ್ಯಾದಿ ವಾಕ್ಯಗಳಿಗೆ ಸಮನ್ವಯವು ಅಂಗೀಕರಿಸಲ್ಪಟ್ಟರೂ, ಅಂದರೆ, ಸಮನ್ವಯವನ್ನು ಅಂಗೀಕರಿಸಿರುವಪ್ರಯುಕ್ತವೂ, ದೋಷಃ=ಸಮನ್ವಯ ಸೂತ್ರಾನುಪಪತ್ತಿಯು, ನೈವಾಸ್ತಿ = ಇಲ್ಲವೇ ಇಲ್ಲ. (ಇದರಿಂದ 'ವಾಕ್ಯಾನ್ವಯಾತ್' ಎನ್ನುವ ೨೦ನೇ ಸೂತ್ರದ ತಾತ್ಪರ್ಯವು ಉಕ್ತವಾಯಿತು.) (ಹಾಗಾದರೆ ಕರ್ಮಕಾಂಡಗತ ಆಗಮಗಳು ಸಾಂಗಕರ್ಮಪರಗಳೆಂದು ತಿಳಿದುಬರುವುದರಿಂದ ವಾಕ್ಯಗಳಿಗೆ ಬ್ರಹ್ಮನಲ್ಲಿ ಸಮನ್ವಯವು ಕೂಡುವುದಿಲ್ಲವೆಂದು ಉಕ್ತವಾಗಿದೆ ಎಂದರೆ) ಅಲ್ಪಬುದ್ಧಯೇ=ಅಲ್ಪಬುದ್ಧಿಗಳ, ಕರ್ಮಾದೇಃ= ಕರ್ಮಾದಿಗಳಿಗೆ, ತದರ್ಥತ್ವೇನ=ಬ್ರಹ್ಮವಿಜ್ಞಾನಾರ್ಥತ್ವದಿಂದ, ಸಂಭವಾತ್=ಕೂಡುವುದರಿಂದ, (ವಾಕ್ಯಾನ್ವಯಾನುಪಪತ್ತಿಯು ಇರುವುದಿಲ್ಲ.)

ತಾ || **ನ್ಯಾಯಸುಧಾ**— (1) 'ಖಾದಿರೋ ಯೂಪೋ ಭವತಿ, ಯೂಪಂ ಛಿನತ್ತಿ, ಯೂಪಂ ತಕ್ಷತಿ, ಯೂಪಮಷ್ಟಾಶ್ರೀಕರೋತಿ' ಇತ್ಯಾದಿ ಯೂಪವಾಕ್ಯಗಳೂ, 'ವಸಂತೇ ಬ್ರಾಹ್ಮಣೋಗ್ನೀನಾದಧೀತ' ಇತ್ಯಾದಿ ಆಹವನೀಯಾದಿ ವಾಕ್ಯಗಳೂ ಫಲವು ಶ್ರುತವಾಗದಿರುವುದರಿಂದಲೂ ಅಧ್ಯಾಹಾರಕಲ್ಪಕವಾದುದು ಇಲ್ಲದಿರುವುದರಿಂದಲೂ ಫಲವತ್ತಾದ ಕರ್ಮ ಸನ್ನಿಧಿಯು ಪ್ರತಿಬಂಧವಿದ್ದುದರಿಂದಲೂ ಅವ್ವರಲ್ಲಿ ಮಾತ್ರ ಪರ್ಯವಸಿತಗಳಾಗುವುದಿಲ್ಲ. ಮತ್ತೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎನ್ನುವ ವಾಕ್ಯದಿಂದ ತಿಳಿಯಲ್ಪಟ್ಟ ಜ್ಯೋತಿಷ್ಟೋಮವು ಇಷ್ಟಸಾಧನವು ಎಂದು ಪ್ರತಿಪಾದಿಸುವವುಗಳೋ, ಹಾಗೆಯೇ ಎಲ್ಲಾ ಕರ್ಮಕಾಂಡವೂ ಅಲ್ಪ-ಅಸ್ಥಿರ ಫಲವುಳ್ಳ ಕರ್ಮಮಾತ್ರದಲ್ಲಿ ಪರ್ಯವಸಿತವಾಗುವುದಿಲ್ಲ. ಮತ್ತೆ ಕರ್ಮಾದಿಗಳೂ ಬ್ರಹ್ಮಜ್ಞಾನಕ್ಕಾಗಿ ಉಪಯುಕ್ತವಾಗಿರುವುದರಿಂದ ಬ್ರಹ್ಮಜ್ಞಾನಕ್ಕಾಗಿಯೇ. **'ವಿವಿದಿಷಂತಿ ಯಜ್ಞೇನ ದಾನೇನ ತಪಸಾ ನಾಶಕೇನ'** ಯಾಗದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಅನಶನವ್ರತದಿಂದಲೂ ತಿಳಿಯಲಿಚ್ಛಿಸುತ್ತಾರೆ, ಎಂದು ಶ್ರುತಿಯು ಕರ್ಮಗಳಿಗೆ ಜ್ಞಾನಾರ್ಥತ್ವವನ್ನು ಹೇಳುತ್ತದೆ. (2) ಹಾಗಾದರೆ, ಕರ್ಮಕಾಂಡದಲ್ಲಿರುವ ಪ್ರತಿಪದಗಳಿಗೂ ಬ್ರಹ್ಮನಲ್ಲಿ ಹೇಳಿದ ಸಮನ್ವಯವು ಯುಕ್ತವಲ್ಲವಾದರೆ ಹೇಳಬಾರದಿತ್ತು. ಯುಕ್ತವಾಗಿದ್ದರೆ ವಾಕ್ಯಾನ್ವಯವನ್ನು ಅಂಗೀಕರಿಸಿದರಿಂದ ಪ್ರಯೋಜನವೇನು? ಎಂದರೆ, ಅಲ್ಪಬುದ್ಧಯೇ=ಅಲ್ಪ ಬುದ್ಧಿಗಳಿಗೆ ವಾಕ್ಯಾನ್ವಯವು. ಈ ವಿಷಯವನ್ನು 'ಅನ್ವಯಃ ಸರ್ವಶಬ್ದಾನಾಂ' ಇತ್ಯಾದಿಗಳಿಂದ ವಿವರಿಸುವರು. ಇದರಿಂದ ಸಮಾಕರ್ಷಾಧಿಕರಣದಲ್ಲಿರತಕ್ಕ 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನ ವ್ಯಾಖ್ಯಾನಾಭ್ಯಾಮಪಿ ಚೈವಮೇಕೇ' (ಸೂ.೧೮)'ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ'(ಸೂ ೨೧)

'ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ' (ಸೂ. ೨೨) 'ಅವಸ್ಥಿತೇರಿತಿ ಕಾಶಕೃತ್ಸ್ನಃ' (ಸೂ. ೨೩) ಎನ್ನುವ ೪ ಸೂತ್ರಗಳ ತಾತ್ಪರ್ಯವು ಉಕ್ತವಾಯಿತು ॥ ೧೮ ॥

ಹಾಗಾದರೆ, ಅಲ್ಪಬುದ್ಧಿಗಳಿಗೂ ಪ್ರತಿಪದಗಳ ಅನ್ವಯವೇ ಬ್ರಹ್ಮಜ್ಞಾನಕ್ಕೆ ಕಾರಣವಾಗುವುದರಿಂದ ವಾಕ್ಯಾನ್ವಯದಿಂದ ಏನು ಪ್ರಯೋಜನವು ಎಂದರೆ—

**ಮೂ ॥ ಕಃ ಛಂದಸಾಂ ಯೋಗಮಿತಿ ಶ್ರುತೇರ್ಯೋಗಾರ್ಥತತ್ತ್ವವಿತ್ ।**
**ಬ್ರಹ್ಮೈಕೋ ನೈವ ಚಾನ್ಯೋಽಸ್ತಿ ಕ ಇತ್ಯಸ್ಯೋಭಯಾರ್ಥತಃ॥೧೯॥**

**ಅ** ॥ ಕಃ ಛಂದಸಾಂ ಯೋಗಮಿತಿಶ್ರುತೇಃ='ಕಃ ಛಂದಸಾಂ ಯೋಗಮಾವೇದ ಧೀರಃ' ಎನ್ನುವ ಶ್ರುತಿಯುದ್ದೇಶೆಯಿಂದ ವೈದಿಕಪದಗಳ ಯೋಗವೃತ್ತಿಯನ್ನು ಅಲ್ಪಬುದ್ಧಿಗಳಿಗೆ ತಿಳಿಯಲು ಅಸಾಧ್ಯವೆಂದು ತಿಳಿದುಬರುವುದರಿಂದ ವಾಕ್ಯಾನ್ವಯವನ್ನು ವ್ಯುತ್ಪಾದಿಸಿದ್ದು ಯುಕ್ತವು. (ಹಾಗಾದರೆ, ಯೋಗವೃತ್ತಿಯಿಂದ ಪ್ರತಿಪದಗಳಿಗೆ ಸಮನ್ವಯವನ್ನು ವ್ಯುತ್ಪಾದಿಸಬೇಕಾಗಿಲ್ಲ. ಕೋ ಧೀರಃ=ಯಾವ ಪಂಡಿತನು, ಛಂದಸಾಂ=ವೇದಗಳಿಗೆ, ಯೋಗಂ=ಬ್ರಹ್ಮನಲ್ಲಿ ಯೋಗವೃತ್ತಿಯನ್ನು, ಆವೇದ=ಚೆನ್ನಾಗಿ ತಿಳಿದಾನು? ಯಾವನೂ ತಿಳಿಯಲಾರನೆಂದು ಅಧಿಕಾರಿಗಳೇ ಇಲ್ಲವೆಂದು ಶ್ರುತವಾಗುತ್ತದೆ. ಕಿವುಡರ ಹತ್ತಿರ ಗಾಯಕನು ಗಾನಮಾಡುವುದಿಲ್ಲವಷ್ಟೇ ಎಂದರೆ—) ಯೋಗಾರ್ಥತತ್ತ್ವವಿತ್=ಯೋಗ=ಅವಯವಶಕ್ತಿಯ, ಅರ್ಥ = ಅಭಿಪ್ರಾಯದ, ತತ್ತ್ವ=ಯಾಥಾರ್ಥ್ಯವನ್ನು, ವಿತ್=ತಿಳಿದವನು, ಏಕಃ=ಒಬ್ಬ, ಬ್ರಹ್ಮಾ= ಚತುರ್ಮುಖನು. ಅನ್ಯಃ=ಮತ್ತೊಬ್ಬನು, ನೈವ ಚಾಸ್ತಿ = ಇಲ್ಲವೇ ಇಲ್ಲ. ಕಃ ಇತ್ಯಸ್ಯ = ಕಃ ಎನ್ನುವುದಕ್ಕೆ, ಉಭಯಾರ್ಥತಃ = ಎರಡು ಅರ್ಥಗಳು ಇದ್ದಪ್ರಯುಕ್ತ, (ಹೀಗೆ ಕಃ ಛಂದಸಾಂ ಎನ್ನುವ ಶ್ರುತಿಯ ಅರ್ಥವು.)

**ತಾ ॥ ನ್ಯಾಯಸುಧಾ**— (1) 'ಪ್ರಜಾಪತಿರ್ವೈಕಃ' ಎನ್ನುವ ಶ್ರುತಿಯುದ್ದೇಶೆಯಿಂದ, 'ಕ' ಶಬ್ದಕ್ಕೆ ಬ್ರಹ್ಮನು ಎಂದರ್ಥವು. ಮತ್ತು ಕ ಶಬ್ದಕ್ಕೆ ಆಕ್ಷೇಪಾರ್ಥವೂ ಇದೆ. ಅಂತೂ ಕಃ ಎನ್ನುವುದಕ್ಕೆ ಹೀಗೆ ಎರಡು ಅರ್ಥಗಳು ಇದ್ದಪ್ರಯುಕ್ತ ಬ್ರಹ್ಮನು ಎಂದರ್ಥವಾದರೆ ಬ್ರಹ್ಮನಿಗೆ ಯೋಗವೃತ್ತಿಜ್ಞಾನದಲ್ಲಿ ಸಾಮರ್ಥ್ಯವನ್ನು ಹೇಳಿದರಿಂದ ಅಧಿಕಾರಿಗಳು ಇಲ್ಲವೆನ್ನುವುದು ನಿರಸ್ತವಾಯಿತು. ಆಕ್ಷೇಪವೆನ್ನುವ ಅರ್ಥವನ್ನು ಇಟ್ಟುಕೊಂಡರೆ ಚತುರ್ಮುಖನಿಂದ ಇತರರಿಗೆ ಅಧಿಕಾರವಿಲ್ಲವೆಂದು ಹೇಳಿದರಿಂದ ವಾಕ್ಯಾನ್ವಯವೆಂದು ಅಂಗೀಕರಿಸಿದ್ದು ಯುಕ್ತವು. (2) ಹಾಗಾದರೆ, ಒಂದಾವರ್ತಿ ಹೇಳಲ್ಪಟ್ಟ ಕ ಶಬ್ದಕ್ಕೆ ಎರಡು ಅರ್ಥಗಳು (ಬ್ರಹ್ಮಾರ್ಥತ್ವವೂ ಆಕ್ಷೇಪಾರ್ಥತ್ವವೂ) ಹೇಗೆ ಕೂಡುತ್ತವೆ? ಎಂದರೆ— ಕ ಶಬ್ದವನ್ನು ಆವೃತ್ತಿಮಾಡಿಕೊಳ್ಳಬೇಕು. ಅಥವಾ ಒಂದಾವರ್ತಿ ಉಚ್ಚರಿತವಾದುದು ಅನೇಕಾರ್ಥಕ್ಕೆ ಉಪಕಾರಕವಾದ ತಂತ್ರವು, ಅದರ ಅನೇಕೋಪಕಾರಕತ್ವರೂಪವಾದ ಧರ್ಮದಿಂದ ದೋಷವಿಲ್ಲವೆಂದು ಇಟ್ಟುಕೊಳ್ಳಬೇಕು. 'ಏತಮೇವ ತಥಾನಂತಂ' ಇತ್ಯಾದಿ ಮೇಲೆ ಹೇಳುವ ಪ್ರಕಾರ ಬ್ರಹ್ಮನಲ್ಲಿ ಎಲ್ಲಾ ಶಬ್ದಗಳಿಗೆ ಯೋಗಾದಿವೃತ್ತಿಯನ್ನು 'ಅನ್ವಯಃ ಸರ್ವಶಬ್ದಾನಾಂ' ಎನ್ನುವ ವಕ್ಷ್ಯಮಾಣ ನ್ಯಾಯದಿಂದ ಎಲ್ಲರೂ ಅಧಿಕಾರಿಗಳಲ್ಲವೆಂದು ತಿಳಿದುಬರುವುದರಿಂದ ಈ ಉಭಯಾನ್ಯಥಾನುಪಪತ್ತಿಯೇ ಈ ಶ್ರುತಿಗೆ ಎರಡು ಅರ್ಥಗಳು ಎನ್ನುವಲ್ಲಿ ಪ್ರಮಾಣವು ॥ ೧೯ ॥

ಬ್ರಹ್ಮನೊಬ್ಬನೇ ಯೋಗವೃತ್ತಿಯಿಂದ ಪದಗಳ ವಾಚ್ಯ ವಾಚಕ ಸಂಬಂಧವನ್ನು ತಿಳಿದಿದ್ದರೆ ಆಗ **'ಏಕಸ್ಯ ಪ್ರತಿಭಾತಂ ತು ಕೃತಕಾನ್ನವಿಶಿಷ್ಯತೇ'** ಎನ್ನುವ ನ್ಯಾಯದಿಂದ ಶಬ್ದಾರ್ಥ

ಸಂಬಂಧವು ಕೃತಕವೆಂದಾಯಿತು. ತಥಾಚ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ' ಎಂದು ಜೈಮಿನ್ಯಾಚಾರ್ಯರು ಹೇಳಿದ ಶಬ್ದಗಳಿಗೆ ಅರ್ಥಗಳಿಂದ ನಿತ್ಯಸಂಬಂಧವನ್ನು ಬಿಟ್ಟಂತೆಯೇ ಆಗುವುದೆಂದರೆ—

**ಮೂ ॥ ತಸ್ಯಾಪಿ ಪೂರ್ವಸಿದ್ಧಸ್ಯ ಜ್ಞಾನಮೇವೇತಿ ನಿಶ್ಚಯಾತ್ ।**
**ನಿತ್ಯಯೋಗೋಽಪಿ ಶಬ್ದಾನಾಮರ್ಥೈರ್ನೈವ ನಿಷಿಧ್ಯತೇ ॥ ೨೦ ॥**

ಅ ॥ (ಯದ್ಯಪಿ ಬ್ರಹ್ಮನೊಬ್ಬನೇ ಚೆನ್ನಾಗಿ ತಿಳಿದವನು. ಆದಾಗ್ಯೂ) ತಸ್ಯ ಪೂರ್ವಸಿದ್ಧಸ್ಯಾಪಿ=ಮೊದಲು ಇದ್ದುದೇ ಮತ್ತು ಮೊದಲು ತಿಳಿಯಲ್ಪಟ್ಟದ್ದೇ ಆದ ಶಬ್ದಾರ್ಥಸಂಬಂಧದ, ಜ್ಞಾನಮೇವ=ಯಥಾರ್ಥಜ್ಞಾನವೇ ಆಗುತ್ತದೆ. ಕೇವಲ ಉತ್ಪ್ರೇಕ್ಷೆಯಲ್ಲ, ಇತಿ=ಇಂತಹ ಅರ್ಥವು, ನಿಶ್ಚಯಾತ್=ಶ್ರುತ್ಯಾದಿಗಳಿಂದ ನಿಶ್ಚಯವಾಗುವುದರಿಂದ, (ಜೈಮಿನ್ಯಾಚಾರ್ಯರು ಹೇಳಿದ) ಅರ್ಥೈಃ=ಅರ್ಥಗಳಿಂದ, ಶಬ್ದಾನಾಂ=ಶಬ್ದಗಳಿಗೆ, ನಿತ್ಯಯೋಗಃ ಅಪಿ=ನಿತ್ಯಸಂಬಂಧವಾದರೂ, (ಅಸ್ಮಾಭಿಃ=ನಮ್ಮಿಂದ.) ನೈವ ನಿಷಿಧ್ಯತೇ=ಬಿಡಲ್ಪಡುವುದೇ ಇಲ್ಲವು.

**ತಾ ॥ ನ್ಯಾಯಸುಧಾ**— (1) ಬ್ರಹ್ಮನಿಗೆ ಶಬ್ದಾರ್ಥಸಂಬಂಧ ಜ್ಞಾನವು ಉತ್ಪ್ರೇಕ್ಷಾರೂಪವಾಗಿದ್ದರೆ ಶಬ್ದಾರ್ಥಸಂಬಂಧವು ಕೃತಕವಾಗಬೇಕಾಗುವುದು ಎನ್ನುವ ದೋಷವು ಬರುವುದು, ಆ ಜ್ಞಾನವು ಉತ್ಪ್ರೇಕ್ಷಾರೂಪವೇ ಅಲ್ಲ. ಮತ್ತೆ ಪೂರ್ವಜನ್ಮದಲ್ಲಿ ತಿಳಿದಿದ್ದ ಸ್ವತಃ ಸಿದ್ಧವೇ ಆದ ಸ್ವಾಭಾವಿಕವಾದ ಶಬ್ದಾರ್ಥಸಂಬಂಧವನ್ನು ಈ ಜನ್ಮದಲ್ಲಿ ಮಲಗಿದ್ದವನು ಎಚ್ಚತ್ತಸಂತೆ ಈಶ್ವರನ ಅನುಗ್ರಹದಿಂದ ತಿಳಿಯುತ್ತಾನೆ. (2) ಹಾಗೆ ಶ್ರುತಿಯಿದೆ. **'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ'** ಎನ್ನುವ ಶ್ರುತಿಯಲ್ಲಿ ಬ್ರಹ್ಮನು ಹುಟ್ಟಿದೊಡನೆಯೇ ಆತನಿಗೆ ವೇದಾರ್ಥವನ್ನು ಈಶ್ವರನು ಉಪದೇಶಿಸಿದನೆಂದು ತೋರುತ್ತದೆ. ಆದಕಾರಣ ಆತನಿಗೆ ವೇದಾರ್ಥಜ್ಞಾನವು ಉತ್ಪ್ರೇಕ್ಷಾಮೂಲಕವಲ್ಲ. ಮತ್ತೆ ಸುಪ್ತಪ್ರಬುದ್ಧ ನ್ಯಾಯದಿಂದ ಮೊದಲು ಇದ್ದುದೇ ಎಂದು ಸಿದ್ಧವಾಗುತ್ತದೆ. (3) ಮತ್ತು ಏಕದೇಶದಲ್ಲಿ **'ತದ್ಧೈತತ್ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇ । ಅಹಂ ಮನುರಭವಂ ಸೂರ್ಯಶ್ಚ'** ಇತ್ಯಾದಿಗಳಿಂದ ವಾಮದೇವಮೊದಲಾದ ಪುರುಷಾಂತರರ ಜ್ಞಾನಸಂವಾದದಿಂದಲೂ ಹಿಂದೆ ಹೇಳಿದಪ್ರಕಾರ ತಿಳಿಯತಕ್ಕದ್ದು, (4) **'ಜನ್ಮಾಂತರೇ ಶ್ರುತಾಸ್ತಾಸ್ತು ವಾಸುದೇವಪ್ರಸಾದತಃ । ಮುನೀನಾಂ ಪ್ರತಿಭಾಸ್ಯಂತಿ ಭಾಗೇನೈವ ನ ಸರ್ವಶಃ'** ಇತ್ಯಾದಿ ಸ್ಮೃತಿಯು. ಇದರಿಂದ ಬ್ರಹ್ಮನಿಗೆ ಸರ್ವಶಬ್ದಗಳ ಯೋಗಾರ್ಥಜ್ಞಾನವಿದೆ. ವಾಮದೇವಾದಿಗಳಿಗೆ ಏಕದೇಶದಲ್ಲಿ ಯೋಗಾರ್ಥಜ್ಞಾನವಿದೆ. ಆದಕಾರಣ ಅನೇಕಾಧಿಕಾರಿಗಳೆಂದು ಲಬ್ಧವಾಯಿತು ॥

**ಸಾರಾಂಶಃ—**

**ಸ. ರ ವಿ**— (1) ಸಹಸ್ರನಾಮಗಳಂತೆಯೇ ಜ್ಯೋತಿರಾದಿ ಪ್ರತಿಪದಗಳೂ ವಿಷ್ಣುವಾಚಕಗಳೆಂದು ತಿಳಿಯತಕ್ಕದ್ದು. ಹೀಗೆ ಅನೇಕ ಕರ್ಮ ಮತ್ತು ಕರ್ಮಾಂಗಗಳನ್ನು ಹೇಳುವವುಗಳೆಂದು ಪ್ರಸಿದ್ಧಗಳಾದ ಮತ್ತು ಪುನರುಕ್ತಗಳಾಗದಿರುವ ಗುಣವಾಚಕಗಳಾದ ಪದಗಳಿಂದ ಶ್ರೀ ಹರಿಯು ಹೇಳಲ್ಪಡುವುದರಿಂದ ಅನಂತಾನಂತ ಗುಣಗಳುಳ್ಳವನೆಂದು ಶ್ರುತಿಸಿದ್ಧವಾಯಿತು. (2) ಹಿಂದೆ ಹೇಳಿದ ಯೋಗಬಲದಿಂದ ಜ್ಯೋತಿಷ್ಟೋಮಾದಿ ಶಬ್ದಗಳೆಲ್ಲವೂ

ಶ್ರೀ ಹರಿಯ ಗುಣಗಳನ್ನೇ ತಿಳಿಸಿಕೊಡುತ್ತವೆ. ಪ್ರಸಿದ್ಧ ಯಾಗಾದಿರೂಪಗಳಾದ ಜಡ ಅನಿತ್ಯ ವಸ್ತುಸ್ವರೂಪತ್ವವನ್ನು ಶ್ರೀಹರಿಗೆ ತಿಳಿಸಿಕೊಡುವುದಿಲ್ಲ. (3) ಎಲ್ಲಾ ಪದಗಳಿಗೆ ಶ್ರೀ ಹರಿಯಲ್ಲಿ ಚೆನ್ನಾಗಿ ಸಮನ್ವಯವನ್ನು ತಿಳಿಯಲಿಕ್ಕೆ ಅಸಮರ್ಥರಾದ ಅಲ್ಪಾಧಿಕಾರಿಗಳಿಗೆ ವೇದದಲ್ಲಿರತಕ್ಕ ವಾಕ್ಯಸಮನ್ವಯವು. (4) '**ವಿವಿದಿಷಂತಿ ಯಜ್ಞೇನ ದಾನೇನ ತಪಸಾ ನಾಶಕೇನ**' ಇತ್ಯಾದಿ ಶ್ರುತಿಗಳಿಂದಲೂ '**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ**' ಇತ್ಯಾದಿ ಸ್ಮೃತಿಗಳಿಂದಲೂ ಕರ್ಮಾದಿಗಳಿಂದ ಅಂತಃಕರಣಶುದ್ಧಿಯಾಗಿ ಪರಮಾತ್ಮನ ಜ್ಞಾನವನ್ನು ಸಾಧಿಸಲಿಕ್ಕೆ ಶಕ್ಯವಾಗಿದೆ. (5) ಹಾಗಾದರೆ ಎಲ್ಲಾ ವೇದಗಳ ಪ್ರತಿಪದಗಳಿಗೂ ಶ್ರೀ ಹರಿಯಲ್ಲಿ ಸಮನ್ವಯವು ಅಧಿಕಾರಿಗಳೇ ಇಲ್ಲದಿರುವುದರಿಂದ ಅಸಂಭಾವಿತವೆಂದರೆ—ವೇದಗಳ ಪ್ರತಿಪದಗಳಿಗೆ ಶ್ರೀ ಹರಿಯಲ್ಲಿ ಯೋಗವೃತ್ತಿಯನ್ನು ಚೆನ್ನಾಗಿ ಬ್ರಹ್ಮನೊಬ್ಬನೇ ತಿಳಿದಿದ್ದಾನೆ. ಅವನು ಹೊರತು ಬೇರೆ ಯಾವನು ತಿಳಿದಿದ್ದಾನೆ? ಯಾವನೂ ತಿಳಿಯಲಿಲ್ಲ. ಆದಪ್ರಯುಕ್ತವೇ ಇತರರಿಗೆ ಪ್ರತಿಪದಗಳ ಸಮನ್ವಯದಲ್ಲಿಯೂ ಸ್ವಲ್ಪ ಅಧಿಕಾರವಿದೆ ಎಂದು ಸಿದ್ಧವಾಯಿತು. (6) ಹಾಗಾದರೆ, ಎಲ್ಲಾ ಪದ ಪದಾರ್ಥಗಳ ಸಂಬಂಧವನ್ನು ಬ್ರಹ್ಮನೊಬ್ಬನೇ ತಿಳಿದಿದ್ದಾನೆಂದಾದರೆ— ಕೃತಕವಾಗಬೇಕಾಗುವುದು ಎಂದಾಶಂಕಿಸಿದರೆ—ಬ್ರಹ್ಮನೂಕೂಡ ಮೊದಲಿನ ಮಹಾಕಲ್ಪದಲ್ಲಿ ಸಿದ್ಧವೇ ಆದ ಶಬ್ದಾರ್ಥಸಂಬಂಧವನ್ನು ಭಗವದ್ದತ್ತವಾದ ಜ್ಞಾನದಿಂದ ಜಗತ್ತಿನ ಆದಿಯಲ್ಲಿ ನೋಡುತ್ತಾನೆ. 'ಯೋ ಬ್ರಹ್ಮಾಣಂ ವಿದಧಾತಿ' ಎನ್ನುವ ಶ್ರುತಿಯೂ ಇದೆ, 'ತೇನೇ ಬ್ರಹ್ಮ ಹೃದಾಯ ಆದಿಕವಯೇ ಎನ್ನುವ ಸ್ಮೃತಿಯೂ ಇದೆ. (7) ಬ್ರಹ್ಮದೃಷ್ಟಗಳಾದ ವೇದಗಳಿಗೆ ಏಕದೇಶಗಳಲ್ಲಿ 'ತದ್ಧೈತತ್ಪಶ್ಯನ್ ಋಷಿಃ ವಾಮದೇವಃ ಪ್ರತಿವೇದೇ' ಇತ್ಯಾದಿಗಳಲ್ಲಿ ಜ್ಞಾನಿಗಳಾದ ವಾಮದೇವಾದಿಗಳ ದಿವ್ಯ ದರ್ಶನದ ಸಂವಾದವೂ ತೋರುತ್ತದೆ. (8) ಹೇಗೆ ಮನುಷ್ಯಾದಿಗಳ ಜ್ಞಾನಕ್ಕಿಂತ ಹೆಚ್ಚು ಜ್ಞಾನವು ಋಷ್ಯಾದಿಗಳಲ್ಲಿ ತೋರುತ್ತದೋ, ಹಾಗೆಯೇ ಬ್ರಹ್ಮನಿಗೂ ಯುಕ್ತವೇ. ಆದಪ್ರಯುಕ್ತವೇ ಬ್ರಹ್ಮನಿಗೆ ಮೊದಲಿನ ಮಹಾಕಲ್ಪದಲ್ಲಿ ಸಿದ್ಧವಾದ ಎಲ್ಲಾ ಪದ ಪದಾರ್ಥಗಳ ಸಂಬಂಧಜ್ಞಾನವೂ ಜಾತಿಸ್ಮೃತಿಯೂ ಯುಕ್ತವೇ. (9) ಶಬ್ದಗಳಾದರೂ ನಿತ್ಯಗಳೇ, ಪ್ರತ್ಯುಚ್ಚಾರಣದಲ್ಲಿ ಹುಟ್ಟಿದವುಗಳಲ್ಲ. 'ಏಷ ಏವಾಯಂ ಗೋ ಶಬ್ದಃ' ಇತ್ಯಾದಿ ಪ್ರತ್ಯಭಿಜ್ಞಾವಿರೋಧವೂ ಬರುವುದು. ಉಚ್ಚಾರಣವಿಶೇಷದಿಂದ ಶಬ್ದವಿಶೇಷಗಳಿಗೆ ಅಭಿವ್ಯಕ್ತಿಯಾಗುತ್ತದೆ. ಅರ್ಥಗಳೂ ನಿರ್ವಿಕಾರಗಳಾಗಿ ನಿತ್ಯಗಳಾಗಿವೆ. (10) ಜಗತ್ತಿಗೆ ಸೃಷ್ಟಿಪ್ರಳಯಗಳಿವೆ. ಆದರೂ ಪ್ರವಾಹರೂಪದಿಂದ ನಿತ್ಯವು. 'ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ' 'ಸೂರ್ಯಾಚಂದ್ರಮಸೌ ಧಾತಾ' ಇತ್ಯಾದಿ ಶ್ರುತಿಯು ಇದೆ. ಆದಕಾರಣ ಶಬ್ದಾರ್ಥಸಂಬಂಧವು ನಿತ್ಯವೇ; '**ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ । ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ । ವೇದಶಬ್ದೇಭ್ಯ ಏವಾದೌ ನಿರ್ಮಮೇ ಸಮಹೇಶ್ವರಃ**' ಎಂದು ಸ್ಮೃತಿಯು. ಜೈಮಿನ್ಯಾಚಾರ್ಯರೂ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ' ಎಂದು ಹೇಳಿರುವರು. ಯಾರಾದರೂ ಸಂಕೇತಮಾಡಿದ್ದೆಂದಾದರೆ ಶಬ್ದಗಳಿಗೆ ಹಾಗೆಯೇ ಪ್ರಸಿದ್ಧಿಯಿರಬೇಕಿತ್ತು. ಆದಪ್ರಯುಕ್ತ ಶಬ್ದಗಳಿಗೆ ಅರ್ಥಜ್ಞಾನಾನುಕೂಲಶಕ್ತಿಯು ಸ್ವಾಭಾವಿಕವೇ ॥ ೨೦ ॥ ಸೂ ೧೦ ॥ ॥ ೧೧ ॥ ಅಧಿ ॥ ೨ ॥

**ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು.**



## ನಸಂಖ್ಯೋಪಸಂಗ್ರಹಾಧಿಕರಣವು.

ಈ ಅಧಿಕರಣದಲ್ಲಿ ಬಹುತ್ವವಾಚಕಗಳಾದ ಶಬ್ದಗಳಿಗೆ ಸಮನ್ವಯವನ್ನು ಮಾಡುತ್ತಾರೆ.

**('ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ಓಂ')**
|| ಸೂ. ೧೨ ||

('ಯಸ್ಮಿನ್ ಪಂಚ ಪಂಚ ಜನಾಃ' ಎನ್ನುವ ಶ್ರುತಿಯಲ್ಲಿರುವ ಪಂಚಜನಶಬ್ದವಾಚ್ಯವಾದವುಗಳು ವಿಷ್ಣುರೂಪಗಳೇ. ಪ್ರಾಣ-ಚಕ್ಷುಸ್ಸು ಶ್ರೋತ್ರ-ಮನಸ್ಸುಗಳಲ್ಲ. ಹೀಗೆ ಪಂಚಜನ ಮೊದಲಾದ ಶಬ್ದಗಳಿಂದ ವಾಚ್ಯನಾದವನಾದ್ದರಿಂದ ಬಹುತ್ವಸಂಖ್ಯೆಯನ್ನು ಸ್ವೀಕರಿಸಿದರೂ ವಿರೋಧವಿಲ್ಲ. ಏಕೆಂದರೆ—ಶ್ರೀ ಹರಿಗೆ ಅನೇಕ ರೂಪಗಳಿವೆ. ಶರೀರನಿಯಾಮಕವಾದ ರೂಪಕ್ಕಿಂತ ಆಕಾಶಾದಿಗಳಿಗೆ ನಿಯಾಮಕಗಳಾದ ರೂಪಗಳು ಭಿನ್ನಗಳೂ ಆಗಿವೆ. ಶ್ರೀ ಹರಿಯು ಒಬ್ಬನೇ ಆದಾಗ್ಯೂ ವಿಶೇಷಬಲದಿಂದ ಎಲ್ಲವೂ ಉಪಪನ್ನವಾಗುತ್ತದೆ) || ೧೨ ||

**('ಓಂ ಪ್ರಾಣಾದಯೋ ವಾಕ್ಯಶೇಷಾತ್ ಓಂ') ಸೂ. || ೧೩ ||**

(ಪ್ರಾಣ-ಚಕ್ಷುಃ-ಶ್ರೋತ್ರ-ಅನ್ನ-ಮನಶ್ಶಬ್ದವಾಚ್ಯವಾದವುಗಳು ಪ್ರಾಣಾದಿ ಐವರಿಗೆ ಪ್ರಾಣತ್ವಾದಿಗಳನ್ನು ಕೊಡತಕ್ಕ ಭಗವದ್ರೂಪವಿಶೇಷಗಳೇ. 'ಪ್ರಾಣಸ್ಯ ಪ್ರಾಣಂ' ಇತ್ಯಾದಿ ಶಿಷ್ಟ ವಾಕ್ಯದಿಂದ || ೧೩ ||)

**('ಓಂ ಜ್ಯೋತಿಷೈಕೇಷಾಮಸತ್ಯನ್ನೇ ಓಂ') ಸೂ. || ೧೪ ||**

('ಅನ್ನಸ್ಯಾನ್ನಂ' ಎನ್ನುವ ವಾಕ್ಯವು ಕಾಣ್ವರ ಪಾಠದಲ್ಲಿ ಇಲ್ಲದಿದ್ದರೂ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂದು ಪೂರ್ವವಾಕ್ಯದಲ್ಲಿ ಹೇಳಿದ ಜ್ಯೋತಿಸ್ಸಿನಿಂದ ಕೂಡಿಕೊಂಡು ಪಂಚತ್ವವನ್ನು (ಐದು ಆಗುತ್ತದೆಂದು) ತಿಳಿಯತಕ್ಕದು || ೧೪ || ಅಧಿ. || ೩ ||)

**ನ ಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು.**

---

## ಕಾರಣತ್ವೇನಚಾಕಾಶಾಧಿಕರಣವು.

ಈ ಅಧಿಕರಣದಲ್ಲಿ ಅವಾಂತರಕಾರಣತ್ವರೂಪವಾದ ಲಿಂಗಕ್ಕೆ ಅಥವಾ ಅವಾಂತರಕಾರಣವಾದ ಆಕಾಶಾದಿ ನಾಮಕ್ಕೆ ಸಮನ್ವಯವನ್ನು ಮಾಡುತ್ತಾರೆ.

**" ಓಂ ಕಾರಣತ್ವೇನಚಾಕಾಶಾದಿಷು**
**ಯಥಾವ್ಯಪದಿಷ್ಟೋಕ್ತೇಃ ಓಂ" || ಸೂ. ೧೫ || ಅಧಿ. ೪ ||**

ಶ್ರೀಹರಿಯು ಸರ್ವಕ್ಕೂ ಮೂಲಕಾರಣನಾದ್ದರಿಂದ ಕೇವಲ ಮೂಲಕಾರಣವಾಚಕವಾದ ಆತ್ಮಶಬ್ದ ವಾಚ್ಯನು ಮಾತ್ರನಲ್ಲ. ಮತ್ತೆ 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿಗಳಲ್ಲಿ ಕಾರಣವು ಕಾರ್ಯವು ಎಂದು ಹೇಳಲ್ಪಟ್ಟ ಆಕಾಶ ಮೊದಲಾದ ಶಬ್ದವಾಚ್ಯನಾದವನು ಪರಮ ಮುಖ್ಯ ವೃತ್ತಿಯಿಂದ ಬ್ರಹ್ಮನೇ. ಭೂತಾಕಾಶಾದಿಗಳಲ್ಲ. ಆಕಾಶಾದಿಗಳಲ್ಲಿ ನಿಯಾಮಕನಾಗಿ

ಇದ್ದಪ್ರಯುಕ್ತ ಕಾರ್ಯಕಾರಣ ಭಾವವಿರೋಧವಿಲ್ಲವು. ಅಂದರೆ, ಆಕಾಶಾದಿಗಳು ಹುಟ್ಟುವಾಗ ತದಂತರ್ಗತನಾದ ಶ್ರೀಹರಿಗೂ ಅಭಿವ್ಯಕ್ತಿಯಾಗುವುದರಿಂದ ಕಾರ್ಯತ್ವವು. ವಾಯ್ವಾದಿಗಳಲ್ಲಿರ ತಕ್ಕ ರೂಪಗಳ ವ್ಯಕ್ತಿಗೆ ಹೇತುವಾಗಿರುವುದರಿಂದ ಕಾರಣತ್ವವೂ ಯುಕ್ತವಾಗುತ್ತದೆ. 'ಸ ಯೋಽತೋಽಶ್ರುತಃ' ಇತ್ಯಾದಿಗಳಲ್ಲಿ ಯಾವ ಪ್ರಕಾರದಿಂದ ನಿರ್ದಿಷ್ಟನಾಗಿದ್ದಾನೋ ಆ ಪ್ರಕಾರವೇ 'ಯಮಾಕಾಶೋ ನ ವೇದ' ಎನ್ನುವ ಶ್ರುತಿಯಿಂದ ಹೇಳಲ್ಪಟ್ಟ ಬ್ರಹ್ಮನು 'ಯ ಆಕಾಶೇ ತಿಷ್ಠನ್ ಯೋ ವಾಯೌ ತಿಷ್ಠನ್' ಇತ್ಯಾದಿ ಶ್ರುತಿಗಳಿಂದ ಆಕಾಶಾದಿಗಳಲ್ಲಿ ಇದ್ದಾನೆಂದು ಹೇಳಿಸಿಕೊಳ್ಳಲ್ಪಟ್ಟಿದ್ದಾನೆ. ॥ ಸೂ. ೧೫ ॥ ಅಧಿ. ೪ ॥

ಕಾರಣತ್ವೇನಚಾಕಾಶಾಧಿಕರಣವು ಸಮಾಪ್ತವಾಯಿತು.



## ಸಮಾಕರ್ಷಾಧಿಕರಣವು.

### " ಓಂ ಸಮಾಕರ್ಷಾತ್ ಓಂ " ॥ ಸೂ. ೧೬ ॥

ಎಲ್ಲಾ ಲೌಕಿಕ ವೈದಿಕ ಶಬ್ದವಾಚ್ಯನು ವಿಷ್ಣುವೇ. ಎಲ್ಲಾ ಶಬ್ದಗಳನ್ನು ಬ್ರಹ್ಮನ ಸಕಾಶ ದಿಂದ ಜಗತ್ತಿನಲ್ಲಿ ಚೆನ್ನಾಗಿ ತಿಳಿದುಕೊಂಡು ರೂಢವಾಗಿ ಅವುಗಳಿಗೆ ಸಂಕೇತಮಾಡಿರುವುದರಿಂದ ವ್ಯವಹಾರಕ್ಕೆ ಲೋಪವಿಲ್ಲ. ವಾಚಕತ್ವ ಸಾಮ್ಯವೂ ಇರುವುದಿಲ್ಲ ॥ ೧೬ ॥

### (' ಓಂ ಜಗದ್ವಾಚಿತ್ವಾತ್ ಓಂ ') ॥ ಸೂ. ೧೭ ॥

ಅಜ್ಞ ಜನರು ಎಲ್ಲಾ ಶಬ್ದಗಳನ್ನೂ ಜಗತ್ತಿನಲ್ಲಿಯೇ ವ್ಯವಹಾರ ಮಾಡುವಪ್ರಯುಕ್ತ ಜಗತ್ತನ್ನೇ ಹೇಳುತ್ತವೆ ಎನ್ನುವ ಜ್ಞಾನವಿದ್ದಪ್ರಯುಕ್ತ ಜಗತ್ತಿನಲ್ಲಿಯೇ ಪ್ರಸಿದ್ಧಿಯು ಯುಕ್ತ ವಾಗುತ್ತದೆ ॥ ೧೭ ॥

### (' ಓಂ ಜೀವಮುಖ್ಯಪ್ರಾಣಲಿಂಗಾದಿತಿಚೇತ್ತದ್ವ್ಯಾಖ್ಯಾತಂ ಓಂ') ॥ ಸೂ. ೧೮ ॥

ಎಲ್ಲವೂ ಶ್ರೀ ಹರಿಯ ಅಧೀನವಾಗಿರುವುದರಿಂದ ಶಬ್ದಗಳ ಸಮುದಾಯವು ಶ್ರೀ ಹರಿ ಯಲ್ಲಿಯೇ ಅರ್ಥವುಳ್ಳದ್ದು, (ಶ್ರೀ ಹರಿಯನ್ನೇ ಹೇಳುತ್ತದೆ.) ಎನ್ನುವುದು ಯುಕ್ತವಲ್ಲ. " **ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ" "ವಾಯುನ್ಯೈವ ಹಿ ಸರ್ವೇ ಲೋಕಾ ನೇನೀಯಂತೇ"** ಎಂದು. ಎಲ್ಲಾ ವಸ್ತುಗಳು ಜೀವ ಮುಖ್ಯಪ್ರಾಣರ ಅಧೀನಗಳೆಂದೂ ಶ್ರುತಗಳಾಗಿರುವುದರಿಂದ ಜೀವ-ಮುಖ್ಯಪ್ರಾಣರಿಗೂ ಮುಖ್ಯವಾಚ್ಯತ್ವವು ಬರಬೇಕಾಗುವುದು ಎಂದು ಹೇಳಕೂಡದು. ಏಕೆಂದರೆ— ಆ ಲಿಂಗವು ಅಂತರ್ಯಾಮಿ ಸಂಬಂಧಿಯಾದುದೆಂದು ವ್ಯಾಖ್ಯಾತವಾಗಿದೆ ॥ ೧೮ ॥

### (' ಓಂ ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವ ಮೇಕೇ ಓಂ ') ॥ ಸೂತ್ರ ೧೯ ॥

ವೈದಿಕಶಬ್ದಗಳಿಗೆ ಪರಮಾತ್ಮನಿಂದ ತಿಳಿದುಕೊಂಡು ಕರ್ಮದೇವತಾದಿಜಗದ್ವಾಚಕತ್ವವು ಮುಮುಕ್ಷುಗಳಿಗೆ ಬ್ರಹ್ಮಜ್ಞಾನಬರುವುದಕ್ಕಾಗಿಯೇ. ಏಕೆಂದರೆ— **'ಕಸ್ಮಿನ್ನು ಭಗವೋ**

**ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' 'ಕಥಂ ನು ಭಗವಃ ಸ ಆದೇಶೋ ಭವತಿ'** ಎಂದೂ ಕ್ರಮವಾಗಿ ಶೌನಕ ಶ್ವೇತಕೇತು ಇವರು ಮಾಡಿದ ಪ್ರಶ್ನೆಗಳಿಗೆ **'ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ' 'ಯಥಾ ಸೌಮ್ಯೈಕೇನ'** ಎಂದು ಅಂಗಿರ ಉದ್ದಾಲಕರ ವ್ಯಾಖ್ಯಾನಗಳಿಂದ ಪರವಿದ್ಯಾವಿಷಯಕ ಬ್ರಹ್ಮಜ್ಞಾನದಿಂದ ಸರ್ವಜ್ಞಾನವು ಸಫಲವಾಗುತ್ತದೆ ಎಂದು ತಿಳಿದುಬರುತ್ತದೆ. ಋಗ್ವೇದಿಗಳು 'ಕರ್ಮಾದಿಗಳು ಬ್ರಹ್ಮಜ್ಞಾನಕ್ಕೆ ಉಪಯುಕ್ತಗಳೆಂದು' **'ಯಸ್ತಂ ನ ವೇದ ಕಿಮೃಚಾ ಕರಿಷ್ಯತಿ'** ಎಂದು ಸ್ಪಷ್ಟವಾಗಿಯೂ ಹೇಳುತ್ತಾರೆ. ಆದಪ್ರಯುಕ್ತವೇ ಜೈಮಿನ್ಯಾಚಾರ್ಯರು ತಿಳಿಯುತ್ತಾರೆ.) ॥ ೧೯ ॥

**('ಓಂ ವಾಕ್ಯಾನ್ವಯಾತ್ ಓಂ')** ॥ ಸೂ. ೨೦ ॥

(ವಾಕ್ಯಾನ್ವಯನಿಮಿತ್ತದಿಂದ ಜ್ಯೋತಿಷ್ಟೋಮ ಮೊದಲಾದ ಎಲ್ಲಾ ವೈದಿಕಶಬ್ದಗಳಿಗೆ ಜಗದ್ವಾಚಿತ್ವವನ್ನು ತಿಳಿಯತಕ್ಕದು.) ॥ ೨೦ ॥

**('ಓಂ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ಓಂ')** ॥ ಸೂ. ೨೧ ॥

(ವೈದಿಕಶಬ್ದಗಳಿಗೆ ಜಗದ್ವಾಚಿತ್ವವು 'ನಾನ್ಯಃ ಪಂಥಾಃ ಅಯನಾಯ' ಎಂದು ಅನ್ಯಮಾರ್ಗನಿಷೇಧಪೂರ್ವಕವಾಗಿ ಬ್ರಹ್ಮಜ್ಞಾನವು ಮೋಕ್ಷಸಾಧಕವೆನ್ನುವ ಪ್ರತಿಜ್ಞಾತವಾದ ಅರ್ಥನಿಶ್ಚಯವನ್ನು ಹುಟ್ಟಿಸುವುದಾಗಿ ಬ್ರಹ್ಮಜ್ಞಾನಕ್ಕೆ ಉಪಯುಕ್ತವಾಗುತ್ತದೆಂದು ಆಶ್ಮರಥ್ಯಾಚಾರ್ಯರು ತಿಳಿಯುತ್ತಾರೆ.) ॥ ೨೧ ॥

**('ಓಂ ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ ಓಂ')** ॥ ಸೂ. ೨೨ ॥

(ಶಬ್ದಗಳಿಗೆ ಜಗದ್ವಾಚಿತ್ವವು ಬ್ರಹ್ಮಜ್ಞಾನಕ್ಕಾಗಿ; ಏಕೆಂದರೆ—ಜ್ಞಾನದಿಂದ ಮೋಕ್ಷವನ್ನು ಇಚ್ಛಿಸುವವನಿಗೆ ಜ್ಞಾನಕ್ಕೆ ಕಾರಣಗಳಾದ ಕರ್ಮಾದಿಗಳು ಆವಶ್ಯಕಗಳಾಗಿವೆ, ಎಂದು ಔಡುಲೋಮಿ ಆಚಾರ್ಯರು ತಿಳಿಯುತ್ತಾರೆ.) ॥ ೨೨ ॥

**('ಓಂ ಅವಸ್ಥಿತೇರಿತಿ ಕಾಶಕೃತ್ಸ್ನಃ ಓಂ')** ॥ ಸೂ. ೨೩ ॥

(ಕರ್ಮದೇವತಾದಿ ಜಗತ್ತು ಬ್ರಹ್ಮನಲ್ಲಿ ಇದೆ. ಅಂದರೆ, 'ಏಷ ಸೇತುರ್ವಿಧಾರಣಃ' ಇತ್ಯಾದಿಗಳಿಂದ ಸರ್ವಾಧಾರತ್ವಾದಿ ಪ್ರಕಾರಕವಾದ ಬ್ರಹ್ಮಜ್ಞಾನ ಹುಟ್ಟಲಿಕ್ಕೆ ಆಧೇಯರೂಪವಾದ ಕರ್ಮಾದಿ ಜಗದ್ವಾಚಿತ್ವವು ಯುಕ್ತವೆಂದು ಕಾಶಕೃತ್ಸ್ನಾಚಾರ್ಯರು ತಿಳಿಯುತ್ತಾರೆ.) ॥ ಸೂ. ೨೩ ॥ ಅಧಿ. ೫ ॥

**ಸಮಾಕರ್ಷಾಧಿಕರಣವು ಸಮಾಪ್ತವಾಯಿತು.**



# ಪ್ರಕೃತ್ಯಧಿಕರಣವು.

## "ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ"

॥ ಸೂ. ೨೪ ॥ ಅಧಿ. ೬ ॥

ಶ್ರೀ ಹರಿಯು ಪುಲ್ಲಿಂಗಶಬ್ದವಾಚ್ಯನು ಮಾತ್ರನಲ್ಲ. ಮತ್ತೆ 'ಸೈಷಾ ಪ್ರಕೃತಿರವಿಕೃತಿಃ' ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಸ್ತ್ರೀಲಿಂಗಪ್ರಕೃತ್ಯಾದಿ ಶಬ್ದವಾಚ್ಯನೂ ಆಗಿರುತ್ತಾನೆ. **"ಹಂತೈಷ**

**ಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ"** ಎನ್ನುವ ಪ್ರತಿಜ್ಞಾ. **"ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿವಿಶಂತಿ ಏವಮೇವೈತಾನಿ ನಾಮಾನಿ"** ಎನ್ನುವ ದೃಷ್ಟಾಂತವು, ಇವುಗಳ ಆನುಕೂಲ್ಯವು ಸಿದ್ಧಿಯಾಗುವುದಕ್ಕಾಗಿ. ಇಲ್ಲವಾದರೆ ಪ್ರತಿಜ್ಞಾದೃಷ್ಟಾಂತಗಳು ಅನುಪಪನ್ನಗಳಾಗುವುವು ॥ ೨೪ ॥

**('ಓಂ ಅಭಿಧ್ಯೋಪದೇಶಾಚ್ಚ ಓಂ')** ಸೂ. ॥ ೨೫ ॥

('ಮಾಯಾಂ ತು ಪ್ರಕೃತಿಂ ವಿದ್ಯಾತ್' ಎನ್ನುವ ಶ್ರುತಿಯಲ್ಲಿ ಈಶ್ವರೇಚ್ಛೆಯು ಪ್ರಕೃತಿಶಬ್ದ ವಾಚ್ಯವೆಂದು ಉಪದೇಶ ಮಾಡಿರುವುದರಿಂದಲೂ ಇಚ್ಛಾಸ್ವರೂಪನಾದ ಶ್ರೀ ಹರಿಯು ಪ್ರಕೃತಿ ಶಬ್ದವಾಚ್ಯನು) ॥ ೨೫ ॥

**('ಓಂ ಸಾಕ್ಷಾಚ್ಚೋಭಯಾಮ್ನಾನಾತ್ ಓಂ')** ॥ ಸೂ. ೨೬ ॥

('ನಾಮಾನಿ ಸರ್ವಾಣಿ' ಎನ್ನುವ ಸಾಮಾನ್ಯ ನ್ಯಾಯವನ್ನು ಬಿಟ್ಟು ಇಚ್ಛೆಯನ್ನು ದ್ವಾರೀ ಕರಿಸದೇನೇ ಸ್ತ್ರೀ ಶಬ್ದವಾಚ್ಯತ್ವ-ಪುರುಷಶಬ್ದವಾಚ್ಯತ್ವ ಎರಡನ್ನೂ 'ಏಷ ಸ್ತ್ರ್ಯೇಷ ಪುರುಷಃ' ಎನ್ನುವ ಶ್ರುತಿಯಲ್ಲಿ ಹೇಳಿರುವುದರಿಂದ ಪ್ರಕೃತ್ಯಾದಿ ಶಬ್ದವಾಚ್ಯನು ಶ್ರೀ ಹರಿಯೇ.) ॥ ೨೬ ॥

**('ಓಂ ಆತ್ಮಕೃತೇಃ ಪರಿಣಾಮಾತ್ ಓಂ')** ॥ ಸೂ. ೨೭ ॥

(ಮೂಲಪ್ರಕೃತಿಗೆ ಪರಿಣಾಮವನ್ನು ಮಾಡಿ ಪರಿಣತ ವಸ್ತುಗಳಲ್ಲಿ ಇರುವುದಕ್ಕಾಗಿ ತಾನೂ ಅನೇಕ ರೂಪಗಳನ್ನು ಮಾಡಿಕೊಳ್ಳುವಪ್ರಯುಕ್ತ ಪ್ರಕೃತಿಶಬ್ದವಾಚ್ಯನು ಶ್ರೀಹರಿಯೇ.) ॥೨೭॥

**('ಓಂ ಯೋನಿಶ್ಚ ಹಿ ಗೀಯತೇ ಓಂ')** ॥ ಸೂ. ೨೮ ॥

**('ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ'** ಎನ್ನುವ ಶ್ರುತಿಯಲ್ಲಿ ಬ್ರಹ್ಮನು ತನ್ನ ಶರೀರದಿಂದಲೇ ಅಪತ್ಯೋತ್ಪಾದಕನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಆದಪ್ರಯುಕ್ತ ಪ್ರಕೃತ್ಯಾದಿ ಶಬ್ದವಾಚ್ಯನು ಬ್ರಹ್ಮನೇ.) ॥ ೨೮ ॥ ಅಧಿ. ೬ ॥

**ಪ್ರಕೃತ್ಯಧಿಕರಣವು ಸಮಾಪ್ತವಾಯಿತು.**



# ಏತೇನ ಸರ್ವೇ ವ್ಯಾಖ್ಯಾತಾಧಿಕರಣವು.

## "ಓಂ ಏತೇನ ಸರ್ವೇ ವ್ಯಾಖ್ಯಾತಾಃ ವ್ಯಾಖ್ಯಾತಾಃ ಓಂ"

॥ ಸೂತ್ರ ೨೯ ॥ ಅಧಿ. ೭ ॥

ತದಧೀನತ್ವ ಮೊದಲಾದ ಹಿಂದೆ ಹೇಳಿದ ಹೇತುಗಳ ಸಮುದಾಯದಿಂದ ಶೂನ್ಯ ಅಸತ್ ಮೊದಲಾದ ಶಬ್ದಗಳೂ ಕೂಡ ಬ್ರಹ್ಮಪ್ರತಿಪಾದಕಗಳೆಂದು ನಿರ್ಣಯಿಸಲ್ಪಟ್ಟವು ॥ ೨೯ ॥ ಅಧಿ. ೭॥

**ಏತೇನ ಸರ್ವೇ ವ್ಯಾಖ್ಯಾತಾಧಿಕರಣವು ಸಮಾಪ್ತವಾಯಿತು.**



ಈಗ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುವರೋಧಾತ್' 'ಏತೇನ ಸರ್ವೇ ವ್ಯಾಖ್ಯಾತಾಃ ವ್ಯಾಖ್ಯಾತಾಃ' ಎನ್ನುವ ೬-೭ ಅಧಿಕರಣಗಳ ತಾತ್ಪರ್ಯವನ್ನು ಸಂಕ್ಷೇಪದಿಂದ ಹೇಳುತ್ತಾರೆ—

**ಮೂ ॥ ಸ್ತ್ರೀಶಬ್ದಾಶ್ಚ ನಿಷೇಧಾರ್ಥಾಃ ಸರ್ವೇಽಪಿ ಬ್ರಹ್ಮವಾಚಕಾಃ ॥ ೨೧ ॥**

ಅ ॥ ಸ್ತ್ರೀಶಬ್ದಾಃ = ಸ್ತ್ರೀಲಿಂಗವುಳ್ಳ (ಸ್ತ್ರೀಯರಲ್ಲಿರುವ ಅಸಾಧಾರಣಧರ್ಮವೇ ನಿಮಿತ್ತವಾಗಿವುಳ್ಳ) ಪ್ರಕೃತ್ಯಾದಿ ಶಬ್ದಗಳು, ನಿಷೇಧಾರ್ಥಾಶ್ಚ=ನಿಷೇಧವು ಅಂದರೆ, ಅಭಾವವು, ಮತ್ತು ನಿಷಿಧ್ಯತೇ ಇತಿ ನಿಷೇಧಃ = ಅಸತ್ ಅಂದರೆ ಅಭಾವ, ಅಸತ್ ಎನ್ನುವ ಈ ಎರಡು ಅರ್ಥಗಳುಳ್ಳ, ತಥಾಚ ನಿಷೇಧಮುಖವೇದ್ಯತ್ವ ನಿಃಸ್ವರೂಪತ್ವಾದಿಗಳಿಂದ ಅಸದಾದಿಗಳಲ್ಲಿಯೇ ಪ್ರಸಿದ್ಧಗಳಾದ ಅಸತ್ ಶೂನ್ಯ ಮೊದಲಾದ, ಸರ್ವೇಽಪಿ=ಎಲ್ಲಾ ಶಬ್ದಗಳೂ ಕೂಡ, ಬ್ರಹ್ಮವಾಚಕಾಃ= ಪರಬ್ರಹ್ಮಪ್ರತಿಪಾದಕಗಳು ॥ ೨೧ ॥ ಅಧಿ. ೬ ॥ ೭ ॥

ಶ್ರೀಮದಾಚಾರ್ಯರು ಈ ಪಾದದಲ್ಲಿರುವ ಎಲ್ಲಾ ಸೂತ್ರಗಳನ್ನು ವ್ಯಾಖ್ಯಾನಮಾಡಲಿಲ್ಲ. ಆದಪ್ರಯುಕ್ತ 'ಪರಮಾಖ್ಯವಿದ್ಯಾವ್ಯಾಖ್ಯಾಂ ಕರೋಮಿ' ಎನ್ನುವ ಪ್ರತಿಜ್ಞೆಯು ವ್ಯಾಹತವಾಗುವುದು, ಎಂದಾಶಂಕಿಸಿದರೆ— ವಿಷಯಾದಿಗಳನ್ನು ಹೇಳೋಣದರಿಂದಲೇ ವ್ಯಾಖ್ಯಾನ ಮಾಡಿದಂತೆಯೇ ಆಯಿತೆಂದು ತಿಳಿಯುತ್ತಾ ಈ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ವಿಷಯ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ಹೇಳುತ್ತಾರೆ.

ಈಗ ಅಧಿಕರಣಗಳ ಉಪಾಧಿ (ಸಮನ್ವೇತವ್ಯ ಶಬ್ದತಾವಚ್ಛೇದಕೀಭೂತಧರ್ಮ)ಗಳನ್ನು ಹೇಳುತ್ತಾರೆ—

**ಮೂ ॥ ವಿರೋಧಿ ಸರ್ವ ಬಾಹುಲ್ಯ ಕಾರಣಸ್ತ್ರೀ ನಿಷೇಧಿನಾಂ ।**
**ಪೃಥಕ್ ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥ ೨೨ ॥**

ಅ ॥ ವಿರೋಧಿಸರ್ವಬಾಹುಲ್ಯಕಾರಣಸ್ತ್ರೀ ನಿಷೇದಿನಾಂ=(ವಿರೋಧಿನಶ್ಚ ಸರ್ವೇ ಚ ಬಾಹುಲ್ಯಾಶ್ಚ ಕಾರಣಾಶ್ಚ ಸ್ತ್ರಿಯಶ್ಚ ನಿಷೇಧಿನಶ್ಚ ಎನ್ನುವ ವ್ಯುತ್ಪತ್ತಿಯಿಂದ) (೧) ವಿರೋಧಿ= (೧ನೇ ಅಧಿಕರಣದಲ್ಲಿ) ಪರಮೈಶ್ವರ್ಯಕ್ಕೆ ವಿರೋಧಿಯಾದ ಅರ್ಥವುಳ್ಳ ದುಃಖಿ ಬದ್ಧ ಅವರ ಮೊದಲಾದ ಶಬ್ದಗಳೂ, (೨) ಸರ್ವ=(೨ನೇ ಜ್ಯೋತಿರುಪಕ್ರಮಾಧಿಕರಣದಲ್ಲಿ) ಉಕ್ತ ವಕ್ಷ್ಯಮಾಣವ್ಯತಿರಿಕ್ತಗಳಾದ ಎಲ್ಲಾ ಶಬ್ದಗಳೂ, (ಅಂದರೆ, ಮೊದಲು ಅವರಾದಿಶಬ್ದಗಳಿಗೂ ಮೇಲೆ ಪಂಚಜನಾದಿಶಬ್ದಗಳಿಗೂ ಯಾವ ವಾಕ್ಯರೂಪದಿಂದ ವಿಚಾರಾರ್ಹತೆಯೋ ಆ ವಾಕ್ಯರೂಪದಿಂದ ೨ನೇ ಜ್ಯೋತಿರ್ನಯದಲ್ಲಿ ವಿಚಾರಾರ್ಹತೆಯಲ್ಲ, ಮತ್ತೆ ಪದ-ವರ್ಣ-ಸ್ವರಾದಿರೂಪದಿಂದಲೇ ವಿಚಾರಾರ್ಹತೆಯು, ಹೀಗೆ ಉಕ್ತ ವಕ್ಷ್ಯಮಾಣಪ್ರಕಾರಗಳಿಂದ ಅತಿರಿಕ್ತಪ್ರಕಾರವುಳ್ಳ ಸರ್ವಶಬ್ದತ್ವವು ಉಪಾಧಿಯು. ಹೀಗೆ ಇಟ್ಟುಕೊಳ್ಳದಿದ್ದರೆ ಉಕ್ತ ವಕ್ಷ್ಯಮಾಣಾತಿರಿಕ್ತ ಸರ್ವವಿಷಯತ್ವವು ಎಲ್ಲಾ ಅಧಿಕರಣಗಳಲ್ಲಿಯೂ ಸಾಧಾರಣವಾಗಿರುವುದರಿಂದ ಪ್ರತ್ಯೇಕ ಹೇಳಿದ್ದು ಕೂಡದೆ ಹೋಗುವುದು. (೩) ಬಾಹುಲ್ಯ=(೩ನೇ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ) ಪಂಚ ಪಂಚಜನಾಃ=ಇತ್ಯಾದಿ ಬಾಹುಲ್ಯ ವಿಶಿಷ್ಟ ಅರ್ಥಗಳನ್ನು ಹೇಳುವ ಶಬ್ದಗಳೂ, (೪) ಕಾರಣ= (೪ನೇ ಕಾರಣತ್ವೇನಚಾಕಾಶಾಧಿಕರಣದಲ್ಲಿ) ಅವಾಂತರಕಾರಣ (ಕಾರ್ಯವಾಗಿದ್ದು ಕಾರಣ) ವನ್ನು ಹೇಳುವ 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿಗಳೂ, (೬) ಸ್ತ್ರೀ=(೬ನೇ ಪ್ರಕೃತ್ಯಧಿಕರಣದಲ್ಲಿ) ಸ್ತ್ರೀಲಿಂಗಗಳಾದ ಪ್ರಕೃತ್ಯಾದಿ ಶಬ್ದಗಳೂ, (೭) ನಿಷೇಧಿನಾಂ=(೭ನೇ ಏತೇನಾಧಿ

ಕರಣದಲ್ಲಿ) ನಿಷೇಧವೇ ವಾಚ್ಯಾರ್ಥವಾಗಿವುಳ್ಳ ಶೂನ್ಯ ಅಸತ್ ಮೊದಲಾದ ಶಬ್ದಗಳಿಗೆ, ಅಥವಾ 'ವಿರೋಧಿ ಚ ಸರ್ವಂ ಚ ಬಾಹುಲ್ಯಂ ಚ ಕಾರಣಂ ಚ ಸ್ತ್ರೀ ಚ ನಿಷೇಧಶ್ಚ' 'ವಿರೋಧಿ ಸರ್ವಬಾಹುಲ್ಯಕಾರಣಸ್ತ್ರೀ ನಿಷೇಧಾಃ' ಎಂದು ದ್ವಂದ್ವಸಮಾಸಮಾಡಿ ಆ ಮೇಲೆ 'ವಿರೋಧ್ಯಾದಯಃ ನಿಷೇಧಾಂತಾಃ ಅರ್ಥಾಃ ಯೇಷಾಂ ಶಬ್ದಾನಾಂ' ಎನ್ನುವ ವ್ಯುತ್ಪತ್ತಿಯಿಂದ ವಿರೋಧಿ ಮೊದಲಾದ ನಿಷೇಧಪರ್ಯಂತ ಅರ್ಥವುಳ್ಳ ಶಬ್ದಗಳು, ಆ ಶಬ್ದಗಳಿಗೆ, ಏತಾನಿ=ಈ ಪಾದದಲ್ಲಿರತಕ್ಕ, ಸರ್ವಶಃ ಸ್ಥಾನಾನಿ=ಎಲ್ಲಾ ಅಧಿಕರಣಗಳು, ಪೃಥಕ್=ಪ್ರತ್ಯೇಕವಾಗಿ, ಸಮನ್ವಯಾರ್ಥಾನಿ=ಸಮನ್ವಯವೇ ಪ್ರಯೋಜನವಾಗಿವುಳ್ಳವುಗಳು.

ತಾ || (1) ಈ ಪಾದದಲ್ಲಿ ೭ ಅಧಿಕರಣಗಳೆಂದು ಭಾಷ್ಯಟೀಕೆಯಲ್ಲಿ ತೋರುತ್ತವೆ. ಆದಪ್ರಯುಕ್ತ ಆರು ಉಪಾಧಿಗಳೆಂದು ಇಲ್ಲಿ ಹೇಳಲು ಕಾರಣವೇನೆಂದರೆ— 'ಸಮಾಕರ್ಷಾತ್' ಇದುಮೊದಲಾದ ೮ ಸೂತ್ರಗಳು ಕಾರಣತ್ವೇನ ಎನ್ನುವ ೪ನೇ ಅಧಿಕರಣದ ಶೇಷಗಳೆಂದು ಅಂಗೀಕರಿಸಿದರೆ ಆಗ ಈ ಪಾದದಲ್ಲಿ ಆರೇ ಅಧಿಕರಣಗಳು, ಆರು ಉಪಾಧಿಗಳು ಎನ್ನುವ ವಚನವೂ ಯುಕ್ತವೇ. 'ಸಮಾಕರ್ಷಾತ್' ಇದುಮೊದಲಾದುದು ೮ ಸೂತ್ರಗಳು ಪ್ರತ್ಯೇಕ ಅಧಿಕರಣವೆಂದು ಹೇಳುವುದಾದರೆ ಆಗ ಅಧಿಕರಣಗಳು (೭) ಏಳು. ಆಗ 'ಸಮಾಕರ್ಷಾತ್' ಎನ್ನುವ ೫ನೇ ಅಧಿಕರಣದ ಉಪಾಧಿಯನ್ನು ಏತಕ್ಕೆ ಹೇಳಲಿಲ್ಲವೆಂದರೆ—೨ನೇ ಅಧಿಕರಣದಂತೆ ೫ನೇ ಅಧಿಕರಣಕ್ಕೂ ಸರ್ವಶಬ್ದಗಳೂ ವಿಷಯಗಳಾಗಿರುವುದರಿಂದ ಆ ೨ನೇ ಅಧಿಕರಣದ ಉಪಾಧಿಯುದ್ದೇಶೆಯಿಂದ ೫ನೇ ಅಧಿಕರಣದಲ್ಲಿ ಪ್ರತ್ಯೇಕ ಉಪಾಧಿಯಿಲ್ಲದಿರುವುದರಿಂದ ಪ್ರತ್ಯೇಕ ಹೇಳಲಿಲ್ಲ. ಅಂತೂ 'ಸರ್ವ' ಎನ್ನುವುದರಿಂದಲೇ ಸಮಾಕರ್ಷಾಧಿಕರಣಾರ್ಥವೂ ಸಂಗೃಹೀತವಾಯಿತು. ಸಮಾಕರ್ಷಾಧಿಕರಣವು ಲೋಕದಲ್ಲಿ ರೂಢ್ಯಾದಿಗಳೇ ಕೂಡಲಾರವು ಎನ್ನುವ ಆಕ್ಷೇಪವು ಬಂದರೆ ಶ್ರೀ ಹರಿಯಲ್ಲಿ ಅಧಿಕವಾದ ವೃತ್ತಿಯು, ಲೋಕದಲ್ಲಿ ಹೀನವಾದ ವೃತ್ತಿಯು ಎನ್ನುವ ಪರಿಹಾರಕ್ಕಾಗಿ ಅವಶ್ಯಕವು. (2) ಪೂರ್ವಪಕ್ಷಸಿದ್ಧಾಂತ ನ್ಯಾಯಭೇದದಿಂದ ೨ನೇ ಅಧಿಕರಣಕ್ಕೂ, ೫ನೇ ಅಧಿಕರಣಕ್ಕೂ ಭೇದವು || ೨೨ ||

**ಮೂ || ಸರ್ವಮಾನೈರ್ವಿರೋಧಶ್ಚ ವ್ಯುತ್ಪತ್ತೇರಸ್ಯಶಕ್ಯತಾ ।**
**ಪರಸ್ಪರವಿರೋಧಶ್ಚ ವಿರೋಧಃ ಕಾರ್ಯತದ್ವತೋಃ || ೨೩ ||**
**ಸ್ತ್ರೀಲಿಂಗತ್ವಂ ನಿಷೇಧಶ್ಚ ಪೂರ್ವಪಕ್ಷೇಷು ಯುಕ್ತಯಃ ||**
**ದೋಷಾತ್ಯಸ್ಪೃಷ್ಟಿನಿಯಮಃ ಶಬ್ದಾರ್ಥಾನೇಕತಾ ತಥಾ || ೨೪ ||**
**ಬಹುರೂಪತ್ವಮೀಶಸ್ಯ ವ್ಯಕ್ತ್ಯವ್ಯಕ್ತಿ ವಿಶೇಷಿತಾ ||**
**ಉತ್ಪಾದನಂ ಸ್ವದೇಹಾಚ್ಚ ದುರ್ಜನಾವ್ಯಕ್ತತಾ ತಥಾ ||**
**ಇತ್ಯಾದಿ ಯುಕ್ತಯಃ ಸಾಕ್ಷಾತ್ಸಿದ್ಧಾಂತಸ್ಥಾಪಿಕಾ ಇಹ || ೨೫ ||**

ಅ || (1) ೧ನೇ ಆನುಮಾನಿಕಾಧಿಕರಣದಲ್ಲಿ ಸರ್ವಮಾನೈಃ=ಎಲ್ಲಾ ಪ್ರಮಾಣಗಳಿಂದ, ವಿರೋಧಃ ಚ=ವಿರೋಧವು ಎಂದು ಪೂರ್ವಪಕ್ಷದ ಯುಕ್ತಿಯು. ದೋಷಾತ್ಯಸ್ಪೃಷ್ಟಿನಿಯಮಃ= ನಿಯಮವಾಗಿ ದೋಷಗಳ ಸಂಪರ್ಕವೇ ಇಲ್ಲದವನೆಂದು (ವಿಷ್ಣುವಿನಲ್ಲಿ ದೋಷಾಯೋಗ್ಯತ್ವವು.) ಸಿದ್ಧಾಂತ ಯುಕ್ತಿಯು. ಅಂದರೆ ಅವ್ಯಕ್ತ ಜೀವಮೊದಲಾದ ಶಬ್ದಗಳಿಗೆ ಮುಖ್ಯಾರ್ಥನು ಬ್ರಹ್ಮನಲ್ಲ. ಅವ್ಯಕ್ತಾದಿಶಬ್ದಗಳಿಗೆ ಪ್ರಧಾನಾದಿಗಳಲ್ಲಿಯೇ ಪ್ರಸಿದ್ಧಿಯಿರುವುದು. 'ಅವ್ಯಕ್ತಾತ್ಪುರುಷಃ ಪರಃ' ಎನ್ನುವಲ್ಲಿ ಪಂಚಮೀ ವಿಭಕ್ತಿಯಿಂದ ಅವ್ಯಕ್ತದಲ್ಲಿ ಅವರತ್ವವೂ 'ಜೀವಾ ಏವ ತು ದುಃಖಿನಃ'

ಇತ್ಯಾದಿಗಳಲ್ಲಿ ಜೀವನಲ್ಲಿ ಶ್ರುತವಾದ ದುಃಖಿತ್ವಾದಿಗಳೂ ಬ್ರಹ್ಮನಲ್ಲಿ ಸರ್ವಪ್ರಮಾಣಗಳಿಂದ ವಿರುದ್ಧಗಳಾಗಿವೆ. ಆದಪ್ರಯುಕ್ತ ವಿಷ್ಣುವಿಗೆ ಅವ್ಯಕ್ತಾದಿ ಶಬ್ದವಾಚ್ಯತ್ವವಿದ್ದರೆ ಅವರತ್ವಾದಿಗಳು ಪ್ರಾಪ್ತಗಳಾಗುವಾಗ ಎಲ್ಲಾ ಪ್ರಮಾಣಗಳಿಂದಲೂ ವಿರೋಧಬರುವುದರಿಂದ ಪ್ರಧಾನಾದಿಗಳೇ ಅವ್ಯಕ್ತಾದಿಶಬ್ದಗಳಿಂದ ವಾಚ್ಯಗಳಾಗುತ್ತವೆಂದು ಪೂರ್ವಪಕ್ಷ ಬಂದರೆ— ಶ್ರೀ ವಿಷ್ಣುವಿಗೆ ದೋಷಸಂಸರ್ಗಾಭಾವವಡೆ ಎನ್ನುವ ನಿಯಮವಿದ್ದುದರಿಂದ ಅವ್ಯಕ್ತಾದಿಗಳಿಗೆ ನಿಯಾಮಕ ನಾಗಿರುವುದರಿಂದ ಆತನು ಅವ್ಯಕ್ತಾದಿಶಬ್ದವಾಚ್ಯನೆಂದು ಸಿದ್ಧಾಂತವು. ಅವರತ್ವಾದಿಗಳು (೧) ಪರರಲ್ಲಿರತಕ್ಕ ಅವರತ್ವಾದಿ ಧರ್ಮನಿಯಂತೃತ್ವವು, (೨) ಅವರಾದಿ ವಸ್ತುಗಳ ತಾದಾತ್ಮ್ಯವು ಹೀಗೆ ಎರಡು ವಿಧವು. 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಗಳಿಂದ ಶ್ರೀ ವಿಷ್ಣುವಿಗೆ ಆಯಾಯ ದೋಷಗಳ ತಾದಾತ್ಮ್ಯ ಅತ್ಯಂತಸ್ಪರ್ಶವು ನಿಯತವಾಗಿರುವುದರಿಂದಲೂ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎನ್ನುವ ಶ್ರುತಿಯ ಬಲದಿಂದಲೂ ಪರರಲ್ಲಿರುವ ಅವರತ್ವಾದಿ ಧರ್ಮನಿಯಂತೃತ್ವವೇ ಅವರತ್ವಾದಿ ಶಬ್ದಪ್ರವೃತ್ತಿನಿಮಿತ್ತವೆಂದು ಇಟ್ಟುಕೊಳ್ಳತಕ್ಕದು. 'ನಿರ ನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಯೂ, 'ನಾಮಾನಿ ಸರ್ವಾಣಿ' ಎನ್ನುವ ಶ್ರುತಿಯೂ ಈ ಎರಡು ಶ್ರುತಿಗಳೂ ನಿರವಕಾಶಗಳಾಗಿವೆ. ಅನ್ಯರಲ್ಲಿರತಕ್ಕ ಮಾರಕತ್ವಾದಿಗಳಿಗೆ ನಿಯಾಮಕ ರಾಗಿರುವುದರಿಂದ ಯಮಾದಿಗಳಿಗೆ ಮೃತ್ಯು ಮೊದಲಾದ ಶಬ್ದವಾಚ್ಯತ್ವವು ಪ್ರಸಿದ್ಧವಾಗಿದೆ. ಮತ್ತು 'ಸ ಬದ್ಧಃ ಸಃ ದುಃಖೀ ಸ ಬಂಧಯತಿ ಸ ದುಃಖಯತಿ' ಇತ್ಯಾದಿಶ್ರುತಿಗಳಲ್ಲಿ ಬದ್ಧಾದಿ ಶಬ್ದಗಳಿಗೆ ವಿಷ್ಣುವಿನಲ್ಲಿ ಕರ್ತೃವ್ಯುತ್ಪತ್ತಿಯೂ ಪ್ರಸಿದ್ಧವಾಗಿದೆ. ಮೃತ್ಯುಮೊದಲಾದ ಶಬ್ದಗಳಿಗೆ ಔಪಚಾರಿಕತ್ವಕಲ್ಪನೆಯು ಕ್ಲಿಷ್ಟವಾಗಿದೆ. ಪ್ರಮಾಣವೂ ಇಲ್ಲ. ಆದಕಾರಣ ಅವ್ಯಕ್ತಾದಿಶಬ್ದ ಗಳಿಗೆ ಬ್ರಹ್ಮವಿಷಯಕತ್ವವನ್ನು ಅಂಗೀಕರಿಸಿದರೆ ಸರ್ವಪ್ರಮಾಣಗಳಿಂದಲೂ ವಿರೋಧವಿಲ್ಲ.

(2) (೨ನೇ ಜ್ಯೋತಿರುಪಕ್ರಮಾಧಿಕರಣದಲ್ಲಿ) ವ್ಯುತ್ಪತ್ತೇರಪಿ = ಅವಯವಶಃ ಅರ್ಥ ಕಥನಕ್ಕೂ, ಅಶಕ್ಯತಾ=ಅಶಕ್ಯತ್ವವಿದೆ, (ಎಂದು ಪೂರ್ವಪಕ್ಷಯುಕ್ತಿಯು) ತಥಾ=ಹಾಗೆ, ಶಬ್ದಾರ್ಥಾನೇಕತಾ=ಶಬ್ದಾರ್ಥಗಳಿಗೆ, ಅನೇಕತ್ವವಿದೆ, (ಎಂದು ಸಿದ್ಧಾಂತಯುಕ್ತಿಯು) ಅಂದರೆ, ಎಲ್ಲಾ ಶಬ್ದಗಳಿಗೆ ಬ್ರಹ್ಮಪರತ್ವವಿದ್ದರೆ ಜ್ಯೋತಿಷ್ಟೋಮ ಮೊದಲಾದ ಶಬ್ದಗಳಲ್ಲಿ 'ಜ್ಯೋತಿಷಾಂ ಸ್ತೋಮಃ' ಎಂದು ವಿಗ್ರಹವಾದರೆ ಶ್ರೀ ಹರಿಯ ನಾಮಗಳಿಗೆ ಆವೃತ್ತಿಮಾತ್ರವೆಂದು ಪ್ರಸಕ್ತ ವಾಗುವುದರಿಂದ ವ್ಯುತ್ಪತ್ತಿಯೂ ಅಶಕ್ಯವಾಯಿತು. ಆದಕಾರಣ ಜ್ಯೋತಿಷ್ಟೋಮಾದಿಶಬ್ದಗಳಿಗೆ ಕರ್ಮಾದಿವಾಚಕತ್ವವೇ ಎಂದು ಪೂರ್ವಪಕ್ಷ ಬಂದರೆ— ಶಬ್ದಾರ್ಥಗಳಿಗೆ ಬಾಹುಲ್ಯವಿದ್ದ ಪ್ರಯುಕ್ತ ಜ್ಯೋತಿರಾದಿಶಬ್ದಗಳಿಗೆ ಲೋಕದಲ್ಲಿ ರೂಢ್ಯಾದಿವೃತ್ತಿಯನ್ನು ಅಂಗೀಕರಿಸಿ, ಶ್ರೀ ಹರಿಯಲ್ಲಿ ರೂಢಿಪೂರ್ವಕವಾಗಿ ಮಹಾಯೋಗವೃತ್ತಿಯಿಂದ ಶಬ್ದಗಳಿಗೆ ಪ್ರವೃತ್ತಿಯನ್ನು ಅಂಗೀಕರಿಸಿರುವುದರಿಂದ 'ಜ್ಯೋತಿಷಾಂ ಸ್ತೋಮಃ' ಇತ್ಯಾದಿ ಸರ್ವಶಬ್ದಗಳಿಗೆ ವ್ಯುತ್ಪತ್ತಿಯು ಕೂಡುವುದರಿಂದ ಬ್ರಹ್ಮನೇ ಜ್ಯೋತಿಷ್ಟೋಮಾದಿ ಶಬ್ದವಾಚ್ಯನು ಎಂದು ಸಿದ್ಧಾಂತವು.

(3) ೩ನೇ ನಸಂಖ್ಯೋಪಸಂಗ್ರಹಾಧಿಕರಣದಲ್ಲಿ ಪರಸ್ಪರವಿರೋಧಃ = ಪರಸ್ಪರವಾಗಿ ವಿರೋಧವು ಅಂದರೆ, ಒಬ್ಬನಲ್ಲಿಯೇ ಆಧಾರತ್ವ-ಆಧೇಯತ್ವಗಳೂ, ಏಕತ್ವ-ಬಹುತ್ವಗಳೂ, ಈಶನು ಸರ್ವಾಧಾರನಾದುದರಿಂದ ಈಶತ್ವ-ಆಧೇಯತ್ವಗಳಿಗೂ, ಪರಸ್ಪರವಿರೋಧವು. (ಇದು ಪೂರ್ವಪಕ್ಷ ಯುಕ್ತಿಯು.) ಈಶಸ್ಯ = ಶ್ರೀಹರಿಗೆ, ಬಹುರೂಪತ್ವಂ = ಅನೇಕರೂಪಗಳಿರು ವಿಕೆಯು, ಇದು ಸಿದ್ಧಾಂತಯುಕ್ತಿಯು. ಅಂದರೆ ಪಂಚಜನಾದಿ ಶಬ್ದಗಳು ವಿಷ್ಣುವಾಚಕ ಗಳಾದರೆ ಆಧಾರತ್ವ ಆಧೇಯತ್ವಾದಿಗಳು ಒಬ್ಬನಲ್ಲಿ ಪರಸ್ಪರ ವಿರುದ್ಧಗಳಾಗಿರುವುದರಿಂದ

ವಿಷ್ಣುವಿಗೆ ಪಂಚಜನಾದಿ ಶಬ್ದವಾಚ್ಯತ್ವವಿಲ್ಲವೆಂದು ಪೂರ್ವಪಕ್ಷ ಬಂದರೆ— ಶ್ರೀ ಹರಿಗೆ ಅನೇಕಾನೇಕರೂಪಗಳಿರುವುದರಿಂದ ಆತನೊಬ್ಬನಿಗೇನೇ ಅಧಿಕರಣತ್ವ-ಆಧೇಯತ್ವಾದಿಗಳು ಕೂಡುತ್ತವೆ. ಆದುದರಿಂದ ವಿರೋಧವೇ ಪ್ರಸಕ್ತವಾಗದಿರುವುದರಿಂದ ವಿಷ್ಣುವಿಗೇನೇ ಪಂಚಜನಾದಿ ಶಬ್ದವಾಚ್ಯತ್ವವು. (4) (೪ನೇ ಕಾರಣತ್ವೇನಚಾಕಾಶಾಧಿಕರಣದಲ್ಲಿ) ಕಾರ್ಯ ತದ್ವತೋಃ=ಕಾರ್ಯಕಾರಣಗಳಿಗೆ, ವಿರೋಧಃ=ವಿರೋಧವು, ಅಂದರೆ ಒಬ್ಬನಿಗೇನೇ ಕಾರ್ಯ ಕಾರಣಭಾವವು ಕೂಡುವುದಿಲ್ಲ. (ಇದೇ ಪೂರ್ವಪಕ್ಷಯುಕ್ತಿಯು.) ವ್ಯಕ್ತ್ಯವ್ಯಕ್ತಿವಿಶೇಷಿತಾ= ಅಭಿವ್ಯಕ್ತಿ ಅನಭಿವ್ಯಕ್ತಿಗಳ ವಿಶೇಷವೇ (ಸಿದ್ಧಾಂತಯುಕ್ತಿಯು.) ತಥಾಚ ವಿಷ್ಣುವಿಗೆ ಆಕಾಶ ವಾಯುಮೊದಲಾದ ಶಬ್ದಗಳಿಂದ ವಾಚ್ಯತ್ವವಿದ್ದರೆ ಕಾರಣತ್ವವು ಪ್ರಾಪ್ತವಾಗುತ್ತದೆ; ಕಾರ್ಯ ಕಾರಣಗಳಿಗೆ ಏಕತ್ವವು ವಿರುದ್ಧವಾಗಿರುವುದರಿಂದ ಭೂತಾಕಾಶಮೊದಲಾದುದೇ ಆಕಾಶಾದಿ ಶಬ್ದವಾಚ್ಯವು ಎಂದು ಪೂರ್ವಪಕ್ಷ ಬಂದರೆ—ಆಕಾಶಾದಿಗಳಲ್ಲಿರತಕ್ಕ ಪರಮಾತ್ಮನಿಗೆ ವ್ಯಕ್ತಿ-ಅವ್ಯಕ್ತಿವಿಶೇಷವಿದ್ದುದರಿಂದ ಅದನ್ನು ಅಪೇಕ್ಷಿಸಿ ಕಾರ್ಯಕಾರಣಭಾವವು ಕೂಡುವುದರಿಂದ ವಿಷ್ಣುವೇ ಆಕಾಶಾದಿಶಬ್ದವಾಚ್ಯನು. ಹೀಗೆ ಸಿದ್ಧಾಂತವು. ಅಂದರೆ ಆಕಾಶವಾಯು ಮೊದಲಾದವುಗಳಲ್ಲಿ ಅಂತರ್ಗತನಾಗಿ ಇದ್ದುದರಿಂದ ಅಭಿವ್ಯಕ್ತವಾದ ಭಗವದ್ರೂಪದಿಂದ ವಾಯು ಅಗ್ನ್ಯಾದಿಗಳಲ್ಲಿರತಕ್ಕ ರೂಪಾಂತರಗಳಿಗೆ ಅಭಿವ್ಯಕ್ತಿಯಾಗುವುದರಿಂದ ವ್ಯಂಗ್ಯವ್ಯಂಜಕ ಭಾವರೂಪವಾದ ಕಾರ್ಯಕಾರಣಭಾವವು ಶ್ರೀ ಹರಿಗೆ ಬಹುರೂಪವಿದ್ದುದರಿಂದ ಉಪಪನ್ನ ವಾಗುತ್ತದೆ. ಅಂತೂ ತನ್ನ ಅಭಿವ್ಯಕ್ತಿಯನ್ನು ಅಪೇಕ್ಷಿಸಿ ಕಾರ್ಯತ್ವವು. ಇತರಗಳಿಗೆ ಅಭಿವ್ಯಕ್ತಿ ಯನ್ನು ಮಾಡುವುದರಿಂದ ಕಾರಣತ್ವವು. (5) (೭ನೇ ಪ್ರಕೃತ್ಯಧಿಕರಣದಲ್ಲಿ) ಸ್ತ್ರೀಲಿಂಗತ್ವಂ= ಸ್ತ್ರೀಲಿಂಗತ್ವವು ಪೂರ್ವಪಕ್ಷಯುಕ್ತಿಯು. ಸ್ವದೇಹಾತ್=ತನ್ನ ಶರೀರದಿಂದ, ಉತ್ಪಾದನಂ= ಹುಟ್ಟಿಸುವಿಕೆಯು, (ಸಿದ್ಧಾಂತಯುಕ್ತಿಯು.) ಅಂದರೆ—'ಏಷಾ ಹ್ಯೇವ ಪ್ರಕೃತಿರವಿಕೃತಿಃ' ಇತ್ಯಾದಿವಾಕ್ಯಗಳಲ್ಲಿರತಕ್ಕ ಪ್ರಕೃತ್ಯಾದಿಶಬ್ದವಾಚ್ಯನು ವಿಷ್ಣುವಲ್ಲ. ಆ ಶಬ್ದಗಳು ಬೇರೆ ಯವರಲ್ಲಿ(ಪ್ರಧಾನಾದಿಗಳಲ್ಲಿ) ಪ್ರಸಿದ್ಧಗಳಾಗಿವೆ. ಸ್ತ್ರೀಲಿಂಗಗಳೂ ಆಗಿವೆ. ಶ್ರೀ ಹರಿಯಲ್ಲಿ ಸ್ತ್ರೀತ್ವವು ಕೂಡಲಾರದು. 'ನೈನಂ ವಾಚಾ ಸ್ತ್ರಿಯಂ ಬ್ರುವನ್' ಎಂದು ಸ್ತ್ರೀತ್ವವನ್ನು ನಿಷೇಧ ಮಾಡಿರುವುದರಿಂದ ನಾರಾಯಣೀತ್ಯಾದಿ ರೂಪವಿಶೇಷವನ್ನು ಅಪೇಕ್ಷಿಸಿ ಸ್ತ್ರೀತ್ವವೆಂದೂ ಹೇಳ ಕೂಡದು. ಆದುದರಿಂದ ಪ್ರಧಾನಾದಿಗಳೇ ಪ್ರಕೃತ್ಯಾದಿ ಶಬ್ದವಾಚ್ಯಗಳು. ವಿಷ್ಣುವಲ್ಲ ಎಂದು ಪೂರ್ವಪಕ್ಷಬಂದರೆ— **'ಸ್ವದೇಹಾತ್ಪ್ರಾಣಿನಾಂ ಸೂತಿಹೇತುತ್ವಂ ಸ್ತ್ರೀತ್ವಮುಚ್ಯತೇ । ತಚ್ಚಾಸ್ತಿ ಬ್ರಹ್ಮಣಸ್ತಸ್ಮಾತ್ ಸ್ತ್ರೀಶಬ್ದಾಸ್ತಸ್ಯ ವಾಚಕಾಃ'** ಈಶ್ವರನು ಪ್ರಲಯಕಾಲದಲ್ಲಿ ತನ್ನ ಹೊಟ್ಟೆಯಲ್ಲಿ ಕೂಡ್ರಿಸಿದ ಚತುರ್ಮುಖಮೊದಲಾದ ಪ್ರಾಣಿಗಳ ಸಮೂಹವನ್ನು ತನ್ನ ಶರೀರದಿಂದಲೇ ಸ್ಥೂಲ ಶರೀರದಿಂದ ವಿಶಿಷ್ಟವಾದುದನ್ನಾಗಿ ಹುಟ್ಟಿಸುತ್ತಾನೆ. ಆದಕಾರಣ ತನ್ನ ಶರೀರದಿಂದ ಪ್ರಾಣಿಗಳ ಉತ್ಪತ್ತಿಕಾರಣತ್ವವೇ ಸ್ತ್ರೀತ್ವವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಅದು ಬ್ರಹ್ಮನಿಗೂ ಇದೆ. ಆದುದರಿಂದ ಸ್ತ್ರೀಶಬ್ದಗಳೂ ವಿಷ್ಣುವಿಗೇನೇ ವಾಚಕಗಳಾಗುತ್ತವೆ. **'ಸ್ವದೇಹಾದಿಚ್ಛಯಾ ವಿಶ್ವಂ ಭುಕ್ತಪೂರ್ವಂ ಜನಾರ್ದನಃ । ಸಸರ್ಜ ಮಾತಾಪಿತೃವ ದೂರ್ಣನಾಭಿವದೇವ ಚ'** ಶ್ರೀಹರಿಯು ಮೊದಲು ಭೋಗಿಸಿದ ಜಗತ್ತನ್ನು ತನ್ನ ಶರೀರದಿಂದ ಇಚ್ಛೆಯಿಂದಲೇ ತಂದೆತಾಯಿಗಳಂತೆಯಾಗಲೀ ಜಾಡರ ಹುಳದಂತೆಯಾಗಲೀ ಸೃಷ್ಟಿಸಿದನು, ಇತ್ಯಾದಿಗಳಿಂದ ಸಿದ್ಧವಾಗಿದೆ—ಅದೇವೇ ಇಲ್ಲಿ ಸ್ತ್ರೀತ್ವವು. **'ಸೂತಿರವ್ಯವಧಾನೇನ ಸ್ತ್ರೀತ್ವ ಮಾಹುರ್ಮನೀಷಿಣಃ'** ವ್ಯವಧಾನವಿಲ್ಲದೆ ಉತ್ಪಾದಕತ್ವವೇ ಸ್ತ್ರೀತ್ವವೆಂದು ಜ್ಞಾನಿಗಳು ಹೇಳುವರು. ಆದಕಾರಣ ಸ್ತ್ರೀಶಬ್ದಗಳೂಕೂಡ ಬ್ರಹ್ಮನಲ್ಲಿ ಮುಖ್ಯಗಳೇ ಆಗಿವೆ. 'ಏಷ ಸ್ತ್ರ್ಯೇಷ

ಪುರುಷಃ' ಎನ್ನುವ ಶ್ರುತಿಯಲ್ಲಿ ಸಾಕ್ಷಾತ್ತಾಗಿಯೇ ಇಚ್ಛಾದ್ವಾರವನ್ನು ಹೊರತು ಪ್ರಕೃತಿಪುರುಷ ಶಬ್ದವಾಚ್ಯತ್ವವನ್ನು ಹೇಳಿರುತ್ತದೆ. (6) ಒನೇ ಏತೇನ ಸರ್ವೇ ವ್ಯಾಖ್ಯಾತಾಧಿಕರಣವಲ್ಲಿ, ನಿಷೇಧಶ್ಚ=ನಿಷೇಧವಾದರೂ, (ಪೂರ್ವಪಕ್ಷಯುಕ್ತಿಯು). ಈಪ್ರಕಾರ, ಪೂರ್ವಪಕ್ಷೇಷು= ಪೂರ್ವಪಕ್ಷಗಳಲ್ಲಿ, ಯುಕ್ತಯಃ=ಯುಕ್ತಿಗಳು, ತಿಳಿಯಲ್ಪಡಬೇಕು. ತಥಾ=ಹಾಗೆ, ದುರ್ಜನಾ ವ್ಯಕ್ತತಾ=ಕೆಟ್ಟಜನರಿಗೆ ವ್ಯಕ್ತತ್ವವಿಲ್ಲದಿರುವಿಕೆಯು, ಇತ್ಯಾದಿ ಯುಕ್ತಯಃ=ಇದುಮೊದಲಾದ ಯುಕ್ತಿಗಳು, ಇಹ = ಈ ಪಾದದಲ್ಲಿ, ಸಾಕ್ಷಾತ್=ಮುಖ್ಯವಾಗಿ, ಸಿದ್ಧಾಂತಸ್ಥಾಪಿಕಾಃ= ಸಿದ್ಧಾಂತಾರ್ಥವನ್ನು ಸ್ಥಾಪಿಸಿಕೊಡತಕ್ಕವುಗಳು. ಅಂದರೆ— ಅವ್ಯವಧಾನದಿಂದ ಉತ್ಪತ್ತಿ ಕಾರಣತ್ವರೂಪವಾದ ಪ್ರಕೃತಿತ್ವವು ಹಿಂದೆಹೇಳಿದಪ್ರಕಾರ ಬ್ರಹ್ಮನಲ್ಲಿ ಯುಕ್ತವಾಗಬಹುದು. ಏಕೆಂದರೆ ರೂಪಹಾನಿಯಾಗುವುದಿಲ್ಲ. ಆದರೂ ನಿಷೇಧ್ಯತ್ವಾದಿರೂಪವಾದ ಅಸತ್ವಾದಿಗಳು ಬ್ರಹ್ಮನಲ್ಲಿ ಸರ್ವಥಾ ಕೂಡಲಾರವು. ರೂಪಕ್ಕೇನೇ ಹಾನಿಯು ಬರುವುದು ಆದಪ್ರಯುಕ್ತ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ವಾಕ್ಯಗಳಲ್ಲಿರುವ ಅಸತ್‌ಶೂನ್ಯಮೊದಲಾದ ಶಬ್ದ ಗಳಿಂದ ವಿಷ್ಣುವು ವಾಚ್ಯನಾಗುವುದಿಲ್ಲ. ಹಾಗಾದರೆ, ಅಸತ್ವವು ಶ್ರೀ ಹರಿಯಲ್ಲಿ ಇಲ್ಲದಿದ್ದರೂ ಶ್ರೀಹರಿಯ ಅಧೀನವಾಗಿರುವುದರಿಂದ ಅಸತ್ ಶಬ್ದವಾಚ್ಯತ್ವವು ಬರಬಹುದೆಂದು ಹೇಳಕೂಡದು. ಅಸತ್ತು ನಿಃಸ್ವರೂಪವಾಗಿರುವುದರಿಂದ ನಿಯಮನವೇ ಕೂಡಲಾರದು. ಆದಕಾರಣ ಈಶಾಧೀನತ್ವವೇ ಕೂಡಲಾರದು. ಆದಪ್ರಯುಕ್ತ ಶ್ರೀ ಹರಿಗೆ ಅಸದಾದಿ ಶಬ್ದವಾಚ್ಯತ್ವವಿಲ್ಲ ವೆಂದು ಪೂರ್ವಪಕ್ಷ ಬಂದರೆ—ಪ್ರಸಿದ್ಧಗಳಾದ ಶೂನ್ಯತ್ವ ಅಸತ್ವ ಮೊದಲಾದವುಗಳು ಶ್ರೀ ಹರಿಯಲ್ಲಿ ಇಲ್ಲದಿದ್ದರೂ 'ಶಮೂನಂ ಕುರುತೇ' ಇತ್ಯಾದಿ ಭಾಷ್ಯದಲ್ಲಿ ಹೇಳಿದ ನಿಮಿತ್ತವೂ, ಇಲ್ಲಿ ಹೇಳಿದ ದುರ್ಜನಾಽವ್ಯಕ್ತತ್ವರೂಪ ನಿಮಿತ್ತವೂ, ಶ್ರೀ ಹರಿಯಲ್ಲಿ ಇದ್ದಪ್ರಯುಕ್ತವೂ, ಪ್ರಸಿದ್ಧ ಗಳಾದ ಅಸದಾದಿಗಳಿಗೂ ಈಶಾಧೀನತ್ವವಿದ್ದಪ್ರಯುಕ್ತವೂ ಶೂನ್ಯ ಅಸದಾದಿ ಶಬ್ದಗಳು ಶ್ರೀ ಹರಿಯಲ್ಲಿ ಇರುತ್ತವೆ. ಶಶವಿಷಾಣಗಳದ್ದೂ ಅತ್ಯಂತಾಭಾವಪ್ರತಿಯೋಗಿತ್ವವು ಈಶ್ವರನ ಅಧೀನವು ॥ ೨೩ ॥ ೨೪ ॥ ೨೫ ॥

## "ಓಂ ಸಮಾಕರ್ಷಾತ್ ಓಂ" ॥ ಸೂ. ೧೬ ॥

**ಸ. ರ.** ಪಿ.— ಹಾಗಾದರೆ ಅನ್ಯತ್ರ ಪ್ರಸಿದ್ಧಗಳಾದ ಶಬ್ದಗಳಿಗೆ ಶ್ರೀ ಹರಿಯಲ್ಲಿ ಸಾಕ್ಷಾತ್ತಾಗಿಯೇ ಸಮನ್ವಯವನ್ನು ಪ್ರತಿಪಾದಿಸುವುದಕ್ಕಾಗಿ ಈ ಪಾದವು ಆರಬ್ಧವಾಗಿದೆ. ಆದ ಕಾರಣ ಈ ಪಾದದಲ್ಲಿ ಕೆಲವು ವಾಕ್ಯಗಳಿಗೆ ಕರ್ಮವನ್ನು ಪ್ರತಿಪಾದಿಸುತ್ತಾ ಶ್ರೀ ಹರಿಯಲ್ಲಿ ಸಮನ್ವಯವನ್ನು 'ಅನ್ಯಾರ್ಥಂ ತು ಜೈಮಿನಿಃ' ಇತ್ಯಾದಿ ಸೂತ್ರಸಂದರ್ಭದಿಂದ ಯಾವುದಕ್ಕಾಗಿ ಅಭ್ಯನುಜ್ಞಾಮಾಡಿದ್ದು, ಎಂದಾಶಂಕಿಸಿದರೆ—

**ನ್ಯಾಯಸುಧಾ—** (1) ಹಿಂದೆ ಹೇಳಿದ ಪ್ರಕಾರ 'ಆನುಮಾನಿಕಮಪ್ಯೇಕೇಷಾಂ' ಇದು ಮೊದಲಾದ ಸೂತ್ರಗಳನ್ನು ಸಂಕ್ಷೇಪದಿಂದ ವ್ಯಾಖ್ಯಾನಮಾಡಿ ಸಿಂಹಾವಲೋಕನ ನ್ಯಾಯದಿಂದ ಸಮಾಕರ್ಷಾಧಿಕರಣವನ್ನೂ, ಜ್ಯೋತಿರಧಿಕರಣವನ್ನೂ ಕೂಡ 'ಅನ್ವಯಃ ಸರ್ವ ಶಬ್ದಾನಾಂ' ಇತ್ಯಾದಿಗಳಿಂದ ಸ್ವಲ್ಪ ವಿವರಿಸುತ್ತಾರೆ. ಹೇಗೆಂದರೆ— ಸಮಾಕರ್ಷಾಧಿಕರಣದಲ್ಲಿ ಪ್ರತಿಪಾದಿಸ ಲ್ಪಡತಕ್ಕ ವಾಕ್ಯಾನ್ವಯವು ಸೂತ್ರಕಾರರಿಗೆ ೧ ಇಷ್ಟವೋ, ೨ ಇಷ್ಟವಲ್ಲವೋ, (೧ನೇ) ವಾಕ್ಯಾ ನ್ವಯವು ಇಷ್ಟವೆನ್ನುವಕಲ್ಪದಲ್ಲಿ ಹಿಂದೆ ಹೇಳಿದ ಪ್ರತಿಪದಾನ್ವಯವು ಯುಕ್ತವೋ, ಯುಕ್ತ ವಲ್ಲವೋ, ಯುಕ್ತವಲ್ಲವೆನ್ನುವ ಕಲ್ಪದಲ್ಲಿ ಪ್ರತಿಪದಾನ್ವಯವು ಹೇಳಬಾರದಿತ್ತು, ಪ್ರತಿಪದಾನ್ವಯವು ಯುಕ್ತವಾಗಿದ್ದರೆ ಮುಖ್ಯವಾದ ಪ್ರತಿಪದಾನ್ವಯವು ಇರುವಾಗ ವಾಕ್ಯಾನ್ವಯವು ವ್ಯರ್ಥವಾಗು

ವುದು (2) ಮತ್ತೂ ವಾಕ್ಯಾನ್ವಯವು ತನ್ನ ಮತವಾದರೆ 'ಅನ್ಯಾರ್ಥಂ ತು ಜೈಮಿನಿಃ' ಇತ್ಯಾದಿ ಸೂತ್ರಗಳಲ್ಲಿ ಜೈಮಿನ್ಯಾದಿಗಳನ್ನು ಗ್ರಹಣಮಾಡಿದ್ದು ವ್ಯರ್ಥವಾಗುವುದು. (೩)ಮತ್ತು ಪ್ರತಿಜ್ಞಾ ಸಿದ್ಧೇರ್ಲಿಂಗಮಾಶ್ಮರಥ್ಯಃ" ॥ ಸೂ. ॥ ೨೧ ॥ ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡು ಲೋಮಿಃ" ಸೂ. ॥ ೨೨ ॥ "ಅವಸ್ಥಿತೇರಿತಿ ಕಾಶಕೃತ್ಸ್ನಃ" ಸೂ. ॥ ೨೩ ॥ ಎಂದು ವಾಕ್ಯಾನ್ವಯವು (೩) ಮೂರು ಪ್ರಕಾರವೆಂದು ಹೇಳಲ್ಪಟ್ಟಿದೆ. ಅಂದರೆ— ೧ ಅಲ್ಪ, ಅಸ್ಥಿರ ಫಲ ಮೊದಲಾದವುಗಳ ಪರಿಕರದಿಂದ ಕೂಡಿದ ಕರ್ಮದೇವತಾಕಾಂಡವು ಕರ್ಮದೇವತಾದಿ ಗಳಲ್ಲಿ ವೈರಾಗ್ಯವನ್ನು ಹುಟ್ಟಿಸುತ್ತಾ ಬ್ರಹ್ಮಜ್ಞಾನಕ್ಕೆ ಉಪಯುಕ್ತವಾಗುವುದು. ೨ ಕರ್ಮ ದೇವತಾಕಾಂಡವು ಮುಮುಕ್ಷುವಿಗ ಜ್ಞಾನ ಕಾರಣವಾದ ಕರ್ಮವನ್ನು ಮಾಡಿಸುತ್ತದೆ. ೩ ಸರ್ವಾಧಾರತ್ವವೇ ಪ್ರಕಾರವಾಗಿವುಳ್ಳ ಬ್ರಹ್ಮಜ್ಞಾನದಲ್ಲಿ ಪ್ರಕಾರಭೂತವಾದ ಆಧೇಯವಾದ ಕರ್ಮದೇವತಾದಿಗಳನ್ನು ಅರ್ಪಿಸುತ್ತದೆ. ಈ ರೀತಿ ಮೂರು ಪ್ರಕಾರದಿಂದ ಬ್ರಹ್ಮನಲ್ಲಿ ಅನ್ವ ಯಿಸಿರುತ್ತದೆ ಎಂದು ಹೇಳಿರುವುದರಿಂದ ವಾಕ್ಯಾನ್ವಯವು ಮೂರುಪ್ರಕಾರವು. ಆ ಮೂರು ವಿಧಗಳಿಗೆ ಪರಸ್ಪರ ವಿರೋಧವಿಲ್ಲವಾದರೆ ಜೈಮಿನ್ಯಾದಿಗಳ ಮತಗಳಿಗೆ ಭೇದವಿಲ್ಲವೆಂದಾಗುವುದು. ಪರಸ್ಪರ ವಿರೋಧವಿದ್ದರೆ ಸೂತ್ರಕಾರರಿಗೆ ಇಷ್ಟವು ಹೇಗೆ ಆಗುವುದು? ಇನ್ನು ಸೂತ್ರಕಾರರಿಗೆ ವಾಕ್ಯಾನ್ವಯವು ಇಷ್ಟವಾಗದಿದ್ದರೆ ಆಗ ನಿರಾಕರಣಸೂತ್ರವು ಆವಶ್ಯಕವು. ನಿರಾಕರಣ ಸೂತ್ರ ವಿಲ್ಲ. ಆದಕಾರಣ ಇದು ಹೇಗೆ ಕೂಡುತ್ತದೆಂದರೆ—

**ಮೂ ॥ ಅನ್ವಯಃ ಸರ್ವಶಬ್ದಾನಾಮಶಕ್ಯೋ ಜ್ಞಾತುಮಂಜಸಾ ॥ ೨೬ ॥**
**ಇತಿ ಯಲ್ಲೋಕವೈಮುಖ್ಯಂ ಜೈಮಿನ್ಯಾದಿಮತಂ ವದನ್ ॥**
**ವಿದ್ಯಾಧಿನಾಥೋ ಭಗವಾನಪಾಚಕ್ರೇ ಸ್ವಯಂ ಪ್ರಭುಃ ॥ ೨೭ ॥**
**ಸ್ವಶಿಷ್ಯಾಣಾಂ ಪ್ರಸಿಧ್ಯರ್ಥಂ ಮತಮಾತ್ಮೀಯಮಂಶತಃ ।**
**ವಿಜ್ಞಾತಂ ತೈರ್ಜಗಾದಾತ್ರ ತಾರತಮ್ಯಂ ನೃಣಾಂ ವದನ್ ॥ ೨೮ ॥**
**॥ ಅಧಿ. ೫ ॥**

ಅ ॥ ಸರ್ವಶಬ್ದಾನಾಂ = ಎಲ್ಲಾ ಶಬ್ದಗಳಿಗೆ, ಅಂಜಸಾ = ಚೆನ್ನಾಗಿ, (ಬ್ರಹ್ಮನಲ್ಲಿ) ಅನ್ವಯಃ=ಮುಖ್ಯವೃತ್ತಿಯಿಂದ ಸಂಬಂಧವು, ಜ್ಞಾತುಂ=ತಿಳಿಯಲಿಕ್ಕೆ, ಅಶಕ್ಯಃ=ಅಸಮರ್ಥ ವಾಗುತ್ತದೆ. ಇತಿ=ಈ ಪ್ರಕಾರ, ಲೋಕವೈಮುಖ್ಯಂ=ಲೋಕ=ಮಂದಜನರಿಗೆ, ವೈಮುಖ್ಯಂ= ಮೋಕ್ಷಮಾರ್ಗ ವೈಮುಖ್ಯವನ್ನು, ಪ್ರಭುಃ=ಸರ್ವಸಮರ್ಥರಾದ, ಭಗವಾನ್=ಪೂಜ್ಯರಾದ, ವಿದ್ಯಾಧಿನಾಥಃ=ವೇದವ್ಯಾಸರು, ತಾವೇ, ಜೈಮಿನ್ಯಾದಿಮತಂ = ಇದು ಜೈಮಿನ್ಯಾದಿಗಳ ಮತ ವೆಂದು, ವದನ್=ಹೇಳುತ್ತಾ, (ವಾಕ್ಯಾನ್ವಯವನ್ನು ತೋರಿಸಿ) ಅಪಾಚಕ್ರೇ=ನಿರಾಕರಿಸಿದರು, ಸ್ವಶಿಷ್ಯಾಣಾಂ=ಜೈಮಿನಿಮೊದಲಾದ ತಮ್ಮಶಿಷ್ಯರಿಗೆ, ಪ್ರಸಿಧ್ಯರ್ಥಂ=ಪ್ರಸಿದ್ಧಿ ಬರುವುದಕ್ಕೋಸ್ಕರ, ಆತ್ಮೀಯಂ=ತನ್ನದೇ ಆದ, ಮತಂ=ಮತವು, ಅಂಶತಃ=ಏಕದೇಶದಿಂದ, ತೈಃ = ಜೈಮಿನ್ಯಾದಿ ಗಳಿಂದ, ವಿಜ್ಞಾತಮಿತಿ = ತಿಳಿಯಲ್ಪಟ್ಟದೆ ಎಂದು, ಅತ್ರ=ಇಲ್ಲಿ, ನೃಣಾಂ = ಮನುಷ್ಯರಿಗೆ, ತಾರತಮ್ಯಂ=ನೀಚೋಚ್ಚಭಾವವನ್ನು, ವದನ್=ಹೇಳುತ್ತಾ, ಜಗಾದ=ಹೇಳಿದರು.

**ತಾ ॥ ನ್ಯಾಯಸುಧಾ**—(1) ಪ್ರತಿಪದಗಳಿಗೆ ಅನ್ವಯವನ್ನು ಹೇಳಿದರೆ ಮಂದಾಧಿಕಾರಿ ಗಳಿಗೆ ಮೋಕ್ಷಮಾರ್ಗವೇ ಇಲ್ಲವೆಂದಾಗುವುದು. 'ಕಃ ಛಂದಸಾಂ ಯೋಗಮಾವೇದ ಧೀರಃ' ಎನ್ನುವ ಶ್ರುತಿಯಿಂದ ಎಲ್ಲಾ ಶಬ್ದಗಳಿಗೆ ಬ್ರಹ್ಮನಲ್ಲಿ ಮುಖ್ಯವೃತ್ತಿಯಿಂದ ಅನ್ವಯವನ್ನು

ತಿಳಿಯಲು ಸಾಧ್ಯವಿಲ್ಲ. ಪ್ರತಿಪದಗಳ ಸಮನ್ವಯಜ್ಞಾನವಿಲ್ಲದೆ ಮೋಕ್ಷವು ಆಗಲಿಕ್ಕಿಲ್ಲ. ಆಕಾಶ ಭಕ್ಷಣಾದಿಗಳಲ್ಲಿ ಪ್ರವೃತ್ತಿಯು ಕಾಣದಿರುವುದರಿಂದ ಅಶಕ್ಯವಾದ ಕಾರ್ಯದಲ್ಲಿ ಪ್ರವೃತ್ತಿಯು ಯುಕ್ತವಾಗಲಾರದು. **'ವ್ಯಸನಾನಿ ದುರಂತಾನಿ ಸಮವ್ಯಯಫಲಾನಿ ಚ । ಅಶಕ್ಯಾನಿ ಚ ವಸ್ತೂನಿ ನಾರಭೇತ ವಿಚಕ್ಷಣಃ'** ತಿಳಿದವನು ಅತಿವ್ಯಸನಪ್ರದಗಳನ್ನೂ, ವ್ಯಯಕ್ಕೆ ಸಮವಾದ ಫಲವುಳ್ಳವುಗಳನ್ನೂ, ಅಶಕ್ಯವಸ್ತುಗಳನ್ನೂ, ಆರಂಭಿಸಕೂಡದು, ಎಂದು ಪ್ರಾಜ್ಞರು ಹೇಳುವರು. ಆದಕಾರಣ ಅಶಕ್ಯಸಾಧನವುಳ್ಳ ಈ ಮೋಕ್ಷಮಾರ್ಗವು ಬೇಡ. ಶಕ್ಯಸಾಧನವುಳ್ಳ ಧರ್ಮಾದಿಗಳಿಗೋಸ್ಕರವೇ ಪ್ರವೃತ್ತಿಮಾಡುವೆವು. ಹೀಗೆ ಅಜ್ಞರಿಗೆ ಮುಕ್ತಿ ಮಾರ್ಗವೈಮುಖ್ಯವನ್ನು ಸೂತ್ರಕಾರರು ತಾನೇ ಇದು ಜೈಮಿನ್ಯಾದಿಗಳ ಮತವೆಂದು ಹೇಳುತ್ತಾ ವಾಕ್ಯಾನ್ವಯವನ್ನು ತೋರಿಸಿ ನಿರಾಕರಿಸಿದರು. ವಾಕ್ಯಾನ್ವಯವು ಇಷ್ಟವೇ. ಆದಕಾರಣ ನಿರಾಕರಣಮಾಡತಕ್ಕ ಸೂತ್ರವಿಲ್ಲದಿರುವುದು ದೋಷಾಧಾಯಕವಾಗುವುದಿಲ್ಲ. ಪ್ರತಿಪದಾನ್ವಯವೂ ಯುಕ್ತವೇ. ಅದನ್ನು ವ್ಯುತ್ಪಾದಿಸಿದ್ದೂ ಯುಕ್ತವೇ. ಮುಖ್ಯವಾದ ಪದಸಮನ್ವಯವಿದ್ದರೂ ಪ್ರತಿಪದಗಳ ಸಮನ್ವಯದಲ್ಲಿ ಸಾಮರ್ಥ್ಯವಿಲ್ಲದೆ ಮೋಕ್ಷಮಾರ್ಗದಿಂದ ವಿಮುಖರಾದ ಮಂದಾಧಿಕಾರಿಗಳಾದ ಮನುಷ್ಯರಿಗೆ ಉಪಾಯಾಂತರವನ್ನು ತೋರಿಸಿಕೊಟ್ಟು ವಿಶ್ವಾಸಹುಟ್ಟಿಸ ವುದಕ್ಕಾಗಿ ವಾಕ್ಯಾನ್ವಯವನ್ನು ಹೇಳಿದ್ದು ಯುಕ್ತವಾಗುತ್ತದೆ. (2) ಹಾಗಾದರೆ ಜೈಮಿನ್ಯಾದಿಗಳನ್ನು ಗ್ರಹಣಮಾಡಿದ್ದು ವ್ಯರ್ಥವೆಂದರೆ— ಇಲ್ಲಿ ಜೈಮಿನ್ಯಾದಿಗಳನ್ನು ಗ್ರಹಣಮಾಡಿದರಿಂದ ಈ ಮತವು ಜೈಮಿನ್ಯಾದಿಗಳದ್ದೇ ಎಂದು ಹೇಳುವುದಿಲ್ಲ. ಮತ್ತ ವೇದವ್ಯಾಸರದ್ದೇ ಮತವನ್ನು ಏಕದೇಶದಿಂದ ಜೈಮಿನ್ಯಾದಿಗಳು ತಿಳಿದಿರುವರು. 'ಗುರುಣಾ ಶ್ಲಾಘಿತಾ ಹಿ ಶಿಷ್ಯಾಃ ಲೋಕೇ ಖ್ಯಾತಿಂ ಲಭಂತೇ' ಶಿಷ್ಯರು ಗುರುವಿನಿಂದ ಶ್ಲಾಘಿತರಾದರೆ ಲೋಕದಲ್ಲಿ ಖ್ಯಾತಿಯನ್ನು ಹೊಂದುತ್ತಾರೆ. ಆದುದರಿಂದ ಜೈಮಿನ್ಯಾದಿಗಳಿಗೆ ಖ್ಯಾತಿಯು ಬರುವುದಕ್ಕಾಗಿ ಜೈಮಿನ್ಯಾದಿಗಳನ್ನು ಪರಿಗ್ರಹಿಸಿದ್ದು. (3) ಹಾಗಾದರೆ, ವಾಕ್ಯಾನ್ವಯದಲ್ಲಿ ಪರಸ್ಪರ ವಿರುದ್ಧಗಳಾದ ಮೂರು ಪ್ರಕಾರಗಳು ಸೂತ್ರಕಾರರಿಗೆ ಇಷ್ಟಗಳು ಹೇಗೆ ಆಗುವವು? ಎಂದರೆ— ಅಲ್ಪಾಧಿಕಾರಿಗಳಾದ ಮನುಷ್ಯರಿಗೆ ಅಮುಮುಕ್ಷಾ (ಮೋಕ್ಷೇಚ್ಛೆಯಿಲ್ಲದಿರುವಿಕೆ) ಮುಮುಕ್ಷಾ=(ಮೋಕ್ಷೇಚ್ಛೆಯು) ಜ್ಞಾನಿತ್ವಾವಸ್ಥೆ, ಇಂತಹ ಅವಸ್ಥಾತಾರತಮ್ಯವನ್ನು ವ್ಯವಸ್ಥಾಮಾಡಿಯೇ ಮತಭೇದವು. ಪರಸ್ಪರ ವಿರೋಧದಿಂದಲ್ಲ. ೧ ಅಮುಮುಕ್ಷಾವಸ್ಥೆಯಿಂದ ಕೂಡಿರುವ ಮಂದಾಧಿಕಾರಿಗಳಿಗೆ ೧ನೇ ಮತವು. ೨ ಮುಮುಕ್ಷಾವಸ್ಥೆಯಿಂದ ಕೂಡಿರುವ ಮಂದಾಧಿಕಾರಿಗಳಿಗೆ ೨ನೇ ಮತವು. ೩ ಜ್ಞಾನಿತ್ವಾವಸ್ಥೆಯುಳ್ಳ ಅಧಿಕಾರಿಗೆ ೩ನೇ ಮತವು. ಹೀಗೆ ಅಮುಮುಕ್ಷಾ, ಮುಮುಕ್ಷಾ, ಜ್ಞಾನಿತ್ವರೂಪ ಅವಸ್ಥಾತ್ರಯದಲ್ಲಿ ಮೇಲೆ ಮೇಲೆ ಹೇಳಿದ್ದು ಅಧಿಕವು ॥ ೨೬ ॥ ೨೭ ॥ ೨೮ ॥ ಅಧಿ. ೫ ॥

## ‥ ಓಂ ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ಓಂ"

॥ ಸೂ. ॥ ೧೦ ॥

(1) ಜ್ಯೋತಿರಧಿಕರಣದಲ್ಲಿ ಯೋಗವೃತ್ತಿಯಿಂದ ಪರಮೇಶ್ವರನಲ್ಲಿ ಎಲ್ಲಾ ಶಬ್ದಗಳಿಗೂ ಸಮನ್ವಯವನ್ನು ಹೇಳಿರುವರು. ಇದು ಕೂಡಲಾರದು. ಪ್ರಕೃತ್ಯಾದಿಗಳಿಗೆ ಅನ್ಯಪರತ್ವವಿಲ್ಲವಾದರೆ ನಿರ್ವಚನವೇ ಕೂಡಲಾರದು. ಏಕೆಂದರೆ— ಜಾತ ಮೊದಲಾದ ಪದಗಳು ಅನ್ಯಪರಗಳು ಎಂದಂಗೀಕರಿಸದಿದ್ದರೆ 'ಜಾತಂ ಓತಂ ಯಸ್ಮಿನ್' ಎನ್ನುವ ವ್ಯುತ್ಪತ್ತಿಯು ಕೂಡುವುದಿಲ್ಲ. ಪ್ರಕೃತ್ಯಾದಿಗಳು ಅನ್ಯಪರಗಳೆಂದು ಇಟ್ಟುಕೊಂಡರೆ ಸರ್ವಶಬ್ದಗಳೂ ಭಗವದ್ವಾಚಕಗಳೆನ್ನುವ ಪಕ್ಷವು ಕೂಡುವುದಿಲ್ಲ. (2) ಮತ್ತು 'ವಸಂತೇ ವಸಂತೇ

ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳು ಭಗವತ್ಪರಗಳಾದರೆ ಕರ್ಮಾನುಷ್ಠಾನಲೋಪವೂ ಲೋಕವ್ಯವಹಾರವಿಲೋಪವೂ ಬರಬೇಕಾಗುವುದೆಂದು ಹೇಳಿರುತ್ತೇವೆಂದರೆ—

**ಮೂ ॥ ತೇಷು ತೇಷು ಪದಾರ್ಥೇಷು ರೂಢಿರಂಗೀಕೃತಾ ಯತಃ ।**
**ಪ್ರಯೋಜನಬಹುತ್ವೇನ ತಸ್ಯ ತಸ್ಯಾವಿರೋಧತಃ ।**
**ಉಪದೇಶಾದಿಸಾಮರ್ಥ್ಯಾದ್ವಿಷ್ಣೌ ಶಕ್ತಿಶ್ಚ ಗೃಹ್ಯತೇ ॥ ೨೯ ॥**

ಅ ॥ ಪ್ರಯೋಜನಬಹುತ್ವೇನ=ವ್ಯುತ್ಪತ್ತಿಯು ಕೂಡುವುದು, ಕರ್ಮಾನುಷ್ಠಾನವು ಕೂಡುವುದು, ಲೋಕವ್ಯವಹಾರಕ್ಕೆ ಬಾಧಕವಿಲ್ಲದಿರುವುದು—ಈ ಪ್ರಕಾರ ಪ್ರಯೋಜನಗಳ ಬಾಹುಲ್ಯದಿಂದ, ತೇಷು ತೇಷು ಪದಾರ್ಥೇಷು=ಆಯಾಯ ಶಬ್ದಗಳಿಂದ ವಾಚ್ಯಗಳೆಂದು ಪ್ರಸಿದ್ಧಗಳಾದ ಅರ್ಥಗಳಲ್ಲಿ ಆಯಾಯ ಶಬ್ದಗಳಿಗೆ, ಯತಃ=ಯಾವ ಕಾರಣದಿಂದ, ರೂಢಿಃ=ರೂಢಿಯು, (ಶಕ್ತಿಲಕ್ಷಣಾದಿವೃತ್ತಿಯು), ಅಂಗೀಕೃತಾ=ಅಂಗೀಕರಿಸಲ್ಪಟ್ಟದೋ, ತಸ್ಯ ತಸ್ಯ ಅವಿರೋಧತಃ=ಆಯಾಯ ಅರ್ಥವನ್ನು ಬಿಡದೆ, ಉಪದೇಶಾದಿಸಾಮರ್ಥ್ಯಾತ್ = ಉಪದೇಶ ಲಿಂಗ ಪ್ರಕರಣಾದಿಗಳ ಸಾಮರ್ಥ್ಯದಿಂದ (ಎಲ್ಲಾ ಶಬ್ದಗಳಿಗೂ) ವಿಷ್ಣೌ ಚ=ಶ್ರೀ ಪರಮಾತ್ಮನಲ್ಲಿಯೂ ಕೂಡ, ಶಕ್ತಿಃ=ಶಕ್ತಿಯು, ಗೃಹ್ಯತೇ=ಸ್ವೀಕರಿಸಲ್ಪಡುತ್ತದೆ.

**ತಾ ॥ ನ್ಯಾಯಸುಧಾ—** (1) ಯದ್ಯಪಿ ಎಲ್ಲಾ ಶಬ್ದಗಳೂ ಭಗವಂತನನ್ನೇ ಹೇಳತಕ್ಕವುಗಳಾದಾಗ್ಯೂ ಪ್ರಸಿದ್ಧಗಳಾದ ಅರ್ಥಾಂತರಗಳನ್ನು ಹೇಳುತ್ತವೆಂದೇ ಸ್ವೀಕಾರ ಮಾಡಿರುವೆವು. ಆದಕಾರಣ, ಜ್ಯೋತಿರಾದಿ ಶಬ್ದಗಳಿಗೆ ಜ್ಯೋತಿಷ್ಟೋಮಮೊದಲಾದ ಅರ್ಥಗಳಿವೆ ಎಂದಂಗೀಕರಿಸುವುದರಿಂದ ಕರ್ಮಾನುಷ್ಠಾನಕ್ಕೂ ಲೋಕವ್ಯವಹಾರಗಳಿಗೂ ವಿಲೋಪವಿಲ್ಲ. ಜೋತಿಶ್ಶಬ್ದಕ್ಕೆ 'ಜಾತಂ ಓತಂ ಯಸ್ಮಿನ್' ಎಂದು ಅವಯವವೃತ್ತಿಯಿಂದ ಪರಮೇಶ್ವರನಲ್ಲಿ ವೃತ್ತಿಯಿರುವಾಗ ಜಾತಾದಿಪದಗಳು ಅನ್ಯಪರಗಳೆಂದು ಅಂಗೀಕರಿಸುತ್ತೇವೆ. ಆದಕಾರಣ ವ್ಯುತ್ಪತ್ತಿಗೆ ಅನುಪಪತ್ತಿಯು ಇಲ್ಲ. ಪುನಃ ಜಾತ ಎನ್ನುವುದರ ಅವಯವಕ್ಕೂ ಅನ್ಯಪರತ್ವವನ್ನು ಇಟ್ಟುಕೊಂಡು ಪರಮೇಶ್ವರನಲ್ಲಿ ಜಾತಪದಕ್ಕೆ ವ್ಯುತ್ಪತ್ತಿಯು ಕೂಡುತ್ತದೆಂದಿಷ್ಟೇ ಹೇಳಬೇಕಿತ್ತು. ಅಂದರೆ ಇತರರಲ್ಲಿ ರೂಢ್ಯಾದಿವೃತ್ತಿಯನ್ನು ಅಂಗೀಕರಿಸಿದರೆ 'ಪ್ರಯೋಜನಬಹುತ್ವೇನ' ಎಂದು ಯಾವುದು ನಿಯಾಮಕವು ಹೇಳಲ್ಪಟ್ಟದೋ, ವಿಷ್ಣುವಿನಲ್ಲಿ ಶಕ್ತಿಯನ್ನು ಅಂಗೀಕರಿಸಿದರೆ 'ಉಪದೇಶಾದಿ ಸಾಮರ್ಥ್ಯಾತ್' ಎಂದು ಯಾವುದು ನಿಯಾಮಕವು ಹೇಳಲ್ಪಟ್ಟದೋ ಅವೆರಡೂ ವ್ಯರ್ಥವು. ಎಂದರೆ—ಆದಾಗ್ಯೂ ಶಬ್ದಗಳಿಗೆ ಈಶ್ವರ ಈಶ್ವರೇತರರೂಪ ಅನೇಕಾರ್ಥತ್ವವಿದ್ದರೆ ಹಿಂದೆ ಹೇಳಿದ್ದು ಕೂಡಬಹುದಿತ್ತು. ಅನೇಕಾರ್ಥತ್ವವೇ ಹೇಗೆ ಕೂಡುತ್ತದೆನ್ನುವ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಇದನ್ನು ಹೇಳಿದ್ದೆಂದು ತಿಳಿಯತಕ್ಕದು. ಹೇಗೆಂದರೆ—ಹಿಂದೆ ಹೇಳಿದ ಪ್ರಯೋಜನಗಳು ಸಿದ್ಧಿಯಾಗುವುದಕ್ಕಾಗಿ ಜ್ಯೋತಿರಾದಿ ಶಬ್ದಗಳು ಪದಾರ್ಥಾಂತರಗಳನ್ನು ಹೇಳುತ್ತವೆಂದಂಗೀಕರಿಸತಕ್ಕದು. ಸರ್ವಶಬ್ದಗಳೂ ಪರಮೇಶ್ವರವಾಚಕಗಳೆನ್ನುವುದು **'ನಾಮಾನಿ ಸರ್ವಾಣಿ ಯಮಾವಿಶಂತಿ' 'ತಾ ವಾ ಏತಾಃ ಸರ್ವಾ ಋಚಃ'** ಇತ್ಯಾದಿಗಳ ಉಪದೇಶಬಲದಿಂದಲೂ, ಶ್ರುತಿಲಿಂಗಾದಿಗಳ ಸಾಮರ್ಥ್ಯದಿಂದಲೂ ಆಯಾಯ ಶಬ್ದಗಳಿಗೆ ಅವಶ್ಯವಾಗಿ ಅಂಗೀಕರಿಸಬೇಕಾಗಿರುವುದರಿಂದ ಹಿಂದೆ ಹೇಳಿದ ನಿಯಾಮಕದ್ವಯವು ಯುಕ್ತವೇ. (2) 'ತೇಷು ತೇಷು ಪದಾರ್ಥೇಷು' ಇತ್ಯಾದಿ ಸಾರ್ಧಶ್ಲೋಕದಿಂದ 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎನ್ನುವ ಸೂತ್ರದ ತಾತ್ಪರ್ಯವನ್ನು ಹೇಳಿದಂತೆಯೇ ಆಯಿತು ॥ ೨೯ ॥

ಎಲ್ಲಾ ಶಬ್ದಗಳಿಗೂ ಈಶ್ವರ ಈಶ್ವರೇತರರರೂಪವಾದ ಅರ್ಥ ಹೀಗೆ ಎರಡು ಅರ್ಥಗಳಿದ್ದರೆ 'ವಿಶ್ವಸ್ಮಾದಿಂದ್ರ ಉತ್ತರಃ' 'ಅಸದೇವೇದಮಗ್ರ ಆಸೀತ್' ಇತ್ಯಾದಿಗಳಲ್ಲಿ ಈಶ್ವರ ಈಶ್ವರೇತರರಿಗೆ ಸರ್ವೋತ್ತಮತ್ವಾದಿಗಳು ವಿರುದ್ಧಗಳಾಗಿರುವವು ಯುಕ್ತ ಇಲ್ಲಿ ಎರಡು ಅರ್ಥಗಳು ಕೂಡದಿರುವುದರಿಂದ ಉಭಯಾರ್ಥತ್ವವು ಹೇಗೆ ಕೂಡುತ್ತದೆ? ಎಂದರೆ—ಪದಗಳಿಗೆ ಎರಡು ಅರ್ಥಗಳಿದ್ದರೂ ಎಲ್ಲಿ ವಿರೋಧವಿದೆಯೋ ಅಲ್ಲಿ ಒಂದೇ ಅರ್ಥದಲ್ಲಿ ತಾತ್ಪರ್ಯವನ್ನು ಅಂಗೀಕರಿಸತಕ್ಕದು; ಎಂದರೆ— ಅಲ್ಲಿಯೂ ಯಾವುದನ್ನು ಸ್ವೀಕರಿಸತಕ್ಕದು ಯಾವುದನ್ನು ಬಿಡಬೇಕೆಂದು ತಿಳಿಯುವುದಿಲ್ಲ, ಎಂದರೆ—

**ಮೂ ॥ ತಥಾಪ್ಯೇತದ್ವಿರೋಧೇ ತು ತದ್ವಾಚಿತ್ವಮಪೋದ್ಯತೇ ।**
**ಅವಿರೋಧೇ ತು ಬಹ್ವರ್ಥಾಃ ಏತನ್ಮೂಲತಯಾ ಮತಾಃ ॥ ೩೦ ॥**

ಅ ॥ (ಯದ್ಯಪಿ ಶಬ್ದಗಳು ಉಭಯಾರ್ಥಕಗಳೆಂದು ಸಾಮಾನ್ಯವಾಗಿ ಹೇಳಿದ್ದು.) ತಥಾಪಿ=ಆದಾಗ್ಯೂ, ಏತದ್ವಿರೋಧೇ ತು=ಪರಮೇಶ್ವರಪರತ್ವವಿರೋಧವಿದ್ದರೆ, ತದ್ವಾಚಿತ್ವಂ=ಅನ್ಯಪರತ್ವವು, ಅಪೋದ್ಯತೇ=ಬಿಡಲ್ಪಡುತ್ತದೆ. ತು=ವಿಶೇಷವದೆ. (ಉಭಯಪರತ್ವವು ವಿರುದ್ಧವೆಂದು ಪರರೇ ಹೇಳಿರುವರು. ಎರಡರಲ್ಲಿ ಒಂದನ್ನು ಬಿಡಬೇಕಾದರೆ ಪರಮೇಶ್ವರನನ್ನು ಬಿಡುವುದು ಯುಕ್ತವಲ್ಲ. ನಿಶ್ಚಿತತಾತ್ಪರ್ಯವುಳ್ಳ ಬೇರೆ ವಾಕ್ಯದಿಂದ ವಿರೋಧವು ಬರುವುದು. ಆದಕಾರಣ ಪರಿಶೇಷತಃ ವಿಷ್ಣುವಿನಿಂದ ಇತರಾರ್ಥವನ್ನು ಬಿಡುವುದೇ ಯೋಗ್ಯವು.) (ಹಾಗಾದರೆ 'ಕಲ್ಪನೋಪದೇಶಾತ್' ಇತ್ಯಾದಿಗಳಿಂದ ಸರ್ವಶಬ್ದಗಳೂ ವಿಷ್ಣು ಇತರಜಗತ್ ಹೀಗೆ ಉಭಯಪರಗಳಾಗುತ್ತವೆಂದು ಹೇಳಿದವು ಯುಕ್ತ ವಿರೋಧವು ಪ್ರಾಪ್ತವಾಯಿತೆಂದು ಹೇಳಕೂಡದು. ಅಪವಾದವಿಲ್ಲವಾದರೆ ಮಾತ್ರ ಹಾಗೆ ಸ್ವೀಕರಿಸಬೇಕೆನ್ನುತ್ತಾರೆ.) ಅವಿರೋಧೇ ತು=ಪರಮೇಶ್ವರಪರತ್ವವಿರೋಧವಿಲ್ಲವಾದರೇನೇ, ಬಹ್ವರ್ಥಾಃ=ಅನೇಕಾರ್ಥಗಳು, ಏತನ್ಮೂಲತಯಾ=ಪರಮೇಶ್ವರರೂಪಅರ್ಥವೇ ಮುಖ್ಯಾರ್ಥವಾಗಿವುಳ್ಳತನದಿಂದ(ಜ್ಞಾಪಿತಗಳಾಗಿ)ಮತಾಃ=ಆಯಾಯ ಸೂತ್ರಗಳಲ್ಲಿ ಅಭಿಮತಗಳಾಗಿವೆ. (ಮುಖ್ಯವಾದ ಅರ್ಥಾಂತರವಿಲ್ಲವೆಂದು ತೋರಿಸುವುದಕ್ಕಾಗಿ ಅವಧಾರಣಾರ್ಥಕವಾದ ತು ಶಬ್ದವು. ಬೇರೆ ಅರ್ಥಗಳೇ ಇಲ್ಲವೆಂದಲ್ಲ) ॥ ೩೦ ॥

ಹಾಗಾದರೆ ಪುರಂದರಾದಿಗಳಲ್ಲಿಯೂ ಇಂದ್ರಮೊದಲಾದ ಶಬ್ದಗಳು ರೂಢಿಯೋಗಗಳಿಂದ ಪ್ರವೃತ್ತಗಳಾಗುತ್ತವೆ. ರೂಢಿಯೋಗಗಳಾದರೂ ಮುಖ್ಯವೃತ್ತಿಗಳೆನ್ನಿಸುತ್ತವೆ. ಆದಕಾರಣ ಅಕ್ಷ ಮೊದಲಾದ ಶಬ್ದಗಳಂತೆಯೇ ಇಂದ್ರ ಮೊದಲಾದ ಶಬ್ದಗಳಿಗೂ ವಿಷ್ಣು ಶಚೀಪತಿಗಳೆನ್ನುವ ಎರಡು ಅರ್ಥಗಳೂ ಮುಖ್ಯವಾಚ್ಯಗಳೆಂದೇ ಯುಕ್ತವು. ಕೇವಲ ವಿಷ್ಣುರೂಪ ಅರ್ಥಮಾತ್ರವಲ್ಲ, ಎಂದರೆ—

**ಮೂ ॥ ಇತೋ ಹಿ ರೂಢತಾಽನ್ಯೇಷಾಮುಪಜೀವ್ಯತ್ವಮತ್ರ ಹಿ ।**
**ತತ್ಸಿದ್ಧಿಸ್ತದಪೇಕ್ಷಾ ಚ ಸಾಪೇಕ್ಷಾ ಚ ಹರೀಚ್ಛಯಾ ॥ ೩೧ ॥**

ಅ ॥ (೧) ಅನ್ಯೇಷಾಂ=ಪುರಂದರಾದಿಗಳಿಗೂ, ರೂಢತಾ=ಇಂದ್ರಾದಿಶಬ್ದಗಳ ರೂಢಿವಿಷಯತ್ವವಿದೆ ಎನ್ನುವುದು, (ಸತ್ಯವೇ. ಆದಾಗ್ಯೂ ಆ ರೂಢಿವಿಷಯತ್ವವು) ಹಿ = ಯಾವ ಕಾರಣದಿಂದ, ಇತಃ=ಈ ಪರಮಾತ್ಮನಿಂದಲೇ ಆಗುವುದೋ, ಹಿ = ಯಾವ ಕಾರಣದಿಂದ, ಅತ್ರ=ಈ ಯೋಗವಿಷಯತ್ವದಲ್ಲಿ, (ಶ್ರೀ ಹರಿಗೇನೇ) ಉಪಜೀವ್ಯತ್ವಂ=(ಯಾವುದಿಲ್ಲದೆ ಯಾವುದಕ್ಕೆ ಪ್ರವೃತ್ತ್ಯಾದಿಗಳು ಆಗುವುದಿಲ್ಲವೋ ಅದು ಅದಕ್ಕೆ ಉಪಜೀವ್ಯವು.) ಉಪಜೀವ್ಯತ್ವವಿರು

ವುದೋ, (ಆದಕಾರಣ ಶ್ರೀ ಹರಿಯೇ ಮುಖ್ಯಾರ್ಥನು. ಪುರಂದರಾದಿಗಳಲ್ಲ.) (೨) (ಹೀಗಾದರೆ ಈಶ್ವರನಿಗೂ ಅಮುಖ್ಯತ್ವವು ಪ್ರಸಕ್ತವಾಯಿತು. ಅರ್ಥಾಂತರವನ್ನು ಅಪೇಕ್ಷಿಸಿಯೇ ಈಶ್ವರನಲ್ಲಿ ಶಬ್ದಪ್ರವೃತ್ತಿಯು. ಹೇಗೆಂದರೆ— 'ಜ್ಯೋತಿಷ' ಎನ್ನುವಲ್ಲಿ ಜಾತಮೊದಲಾದ ಶಬ್ದಗಳಿಗೆ ಬೇರೆ ಅರ್ಥವನ್ನು ಇಟ್ಟುಕೊಳ್ಳದೆ ಜ್ಯೋತಿಷ ಇತ್ಯಾದಿಗಳಿಗೆ ಶ್ರೀ ಹರಿಯಲ್ಲಿ ಪ್ರವೃತ್ತಿಯು ಕೂಡ ಲಾರದು ಎಂದರೆ— ಈ ದೋಷವು ಬರುವುದಿಲ್ಲ. ಏಕೆಂದರೆ) ತತ್ಸಿದ್ಧಿಃ ಶ್ರೇಷ್ಠೇ=ಸರ್ವೋತ್ತಮನಾದ ಶ್ರೀ ಹರಿಯಲ್ಲಿ ಆಯಾಯ ಶಬ್ದಗಳ ಪ್ರವೃತ್ತಿಪ್ರತೀತಿಯೇ, ತದಪೇಕ್ಷಾ = ಅರ್ಥಾಂತರವನ್ನು ಅಪೇಕ್ಷಿಸಿಕೊಂಡು ಇರುವುದು. (ಪ್ರವೃತ್ತಿಯಲ್ಲ. ಘಟದ ರೂಪವು ದೀಪವಿದ್ದರೆ ತೋರುವುದೆಂ ದಷ್ಟರಿಂದ ದೀಪದ ಅಧೀನವಾಗಲಾರದು. ಹೇಗೆ ಬೇರೆಕಡೆ ಶಬ್ದಪ್ರವೃತ್ತಿಯೇ ಆಗಬೇಕಾದರೆ ಶ್ರೀ ಹರಿಯ ಅಪೇಕ್ಷೆಯಿದೆಯೋ ಹೀಗೆ ಶ್ರೀ ಹರಿಯಲ್ಲಿ ಇರಬೇಕಾದರೆ ಯಾವುದೊಂದು ಇತರಾ ಪೇಕ್ಷೆಯೂ ಇರುವುದಿಲ್ಲ.) ಮತ್ತು ಸಾ ಚ ಅಪೇಕ್ಷಾ = ಯಾವುದು ಶ್ರೀ ಹರಿಯಲ್ಲಿ ಶಬ್ದವೃತ್ತಿ ಇರಬೇಕಾದರೆ ಅರ್ಥಾಂತರಾಪೇಕ್ಷೆಯಿದೆಯೋ ಅದೂ ಕೂಡ, ಹರೀಚ್ಛಯಾ=ಶ್ರೀ ಹರಿಯ ಇಚ್ಛೆಯಿಂದಲೇ ಆಗುತ್ತದೆ.

ತಾ ॥ (1) ಸ್ವಾಭಾವಿಕವಾಗಿಯೇ ನಿರವಧಿಕ ಐಶ್ವರ್ಯಾದಿಗಳುಳ್ಳ ಶ್ರೀ ಹರಿಯಲ್ಲಿಯೇ ಇಂದ್ರಾದಿಶಬ್ದಗಳಿಗೆ ಯೋಗರೂಢಿಗಳು. ಶ್ರೀ ಹರಿಯ ಸನ್ನಿಧಾನದಿಂದಲೇ ಶ್ರೀ ಹರಿಯ ಅಧೀನ ವಾದ ಪ್ರವೃತ್ತಿನಿಮಿತ್ತತ್ವವಿದ್ದುದರಿಂದಲೇ ಪುರಂದರಾದಿಗಳಲ್ಲಿ ಯೋಗರೂಢಿಗಳು. ಇದು ಪ್ರಸಿದ್ಧವೂ ಆಗಿದೆ. ಯಾವುದು ಯಾವುದರ ಸನ್ನಿಧಾನದಿಂದ ಯಾವ ಶಬ್ದದಿಂದ ಪ್ರತಿಪಾದ್ಯವೋ ಅದು ಅಮುಖ್ಯವು. ಮತ್ತೊಂದು ಮುಖ್ಯವು. ಉದಾ=ದಗ್ಧೃಶಬ್ದಕ್ಕೆ ಕಾಯಿಸಿದ ಕಬ್ಬಿಣವು ಅಮುಖ್ಯವು. ಅಗ್ನಿಯು ಮುಖ್ಯವು. ಅಕ್ಷಮೊದಲಾದ ಶಬ್ದಾರ್ಥಗಳಿಗೆ ಇತರಾಪೇಕ್ಷೆಯಿಲ್ಲ. ಆದಕಾರಣ ವೈಷಮ್ಯವು. (2) ಶ್ರೀಹರಿಯಲ್ಲಿ ಶಬ್ದಗಳ ವೃತ್ತಿಯು ಇರಬೇಕಾದರೆ ಅರ್ಥಾಂತರದ ಅಪೇಕ್ಷೆಯಿದ್ದರೂ ಅದಕ್ಕೆ ಶ್ರೀ ಹರಿಯ ಇಚ್ಛೆಯೇ ಕಾರಣವು. ಮತ್ತೊಬ್ಬನ ಅಧೀನವಲ್ಲ. ಆದಕಾರಣ ಅದಕ್ಕೆ ಅಮುಖ್ಯಾರ್ಥತ್ವವು ಪ್ರಾಪ್ತವಾಗುವುದಿಲ್ಲ. ಏಕೆಂದರೆ— ತನ್ನ ಇಚ್ಛೆ ಯಿಂದಲೇ ಪ್ರಕೃತ್ಯಾದಿಗಳನ್ನುಪಾದಾನೀಕರಿಸಿಕೊಂಡು ಸೃಷ್ಟಿಸತಕ್ಕ ಶ್ರೀ ಹರಿಯ ಸೃಷ್ಟಿಯು ಪರಾಧೀನವಲ್ಲವಷ್ಟೆ! ದೃಢಾಂಗನಾದ ಪುರುಷನು ತನ್ನ ಇಚ್ಛೆಯಿಂದಲೇ ಕ್ರೀಡಾರ್ಥವಾಗಿ ಕೋಲನ್ನು ಹಿಡಿದುಕೊಂಡು ಹೋದರೆ ಅವನ ಗಮನವು ಕೋಲಿನ ಅಧೀನವೆಂದು ಹೇಳುವು ದಿಲ್ಲವಷ್ಟೆ? ॥ ೩೧ ॥

ಹೀಗೆ ಶ್ರೀ ಹರಿಯ ಸನ್ನಿಧಾನಾದಿಗಳಿಂದಲೇ ಶಬ್ದಗಳಿಗೆ ಬೇರೆಕಡೆ ವೃತ್ತಿ ಇರುವುದಾದರೆ ಕಬ್ಬಿಣಗೋಲದಲ್ಲಿ ದಗ್ಧೃಶಬ್ದವು ಹೇಗೆ ಲಾಕ್ಷಣಿಕವೋ ಹಾಗೆಯೇ ಲೋಕದಲ್ಲಿ ಎಲ್ಲಾ ಶಬ್ದ ಗಳೂ ಲಾಕ್ಷಣಿಕಗಳೇ ಆಗಬೇಕಾಗುವವು. ಹಾಗಾದರೆ ಗಂಗಾ ಎನ್ನುವ ಶಬ್ದಬೋಧ್ಯವಾದ ಗಂಗಾ ಎನ್ನುವುದಕ್ಕೂ ತೀರ ಎನ್ನುವುದಕ್ಕೂ, ವಿಶೇಷವಿಲ್ಲವೆಂದಾಗಬೇಕಾಗುವುದು. ಈಕ್ಷತ್ಯಧಿ ಕರಣದಲ್ಲಿ ತೀರಾದಿ ಪದಗಳಿಂದ ವಾಚ್ಯಗಳಾದ ತೀರಾದಿಗಳಿಗೇನೇ ಗಂಗಾದಿ ಪದಗಳಿಂದ ಲಕ್ಷ್ಯತ್ವವು ದೃಷ್ಟವಾಗಿದೆ. ಯಾವುದೊಂದು ಪದದಿಂದಲೂ ವಾಚ್ಯವಾಗದಿದ್ದಕ್ಕೆ ಲಕ್ಷ್ಯತ್ವವು ಎಲ್ಲಿಯೂ ದೃಷ್ಟವಾಗಲಿಲ್ಲ, ಎಂದು ಹೇಳಿದ ಅರ್ಥವು 'ಎಲ್ಲಾ ಶಬ್ದರಾಶಿಗಳೂ ಮುಖ್ಯವೃತ್ತಿ ಯಿಂದ ವಿಷ್ಣುವನ್ನೇ ಹೇಳತಕ್ಕವುಗಳು, ಲೋಕದಲ್ಲಿ ವಾಚಕಪದಗಳೇ ಇಲ್ಲದಿರುವುದರಿಂದ ಕೇವಲ ಲಕ್ಷಣಾವೃತ್ತಿಯೆಂದಂಗೀಕರಿಸಿದರೆ' ಅಯುಕ್ತವಾಗಬೇಕಾಗುವುದು ಎಂಬುವ ಆಶಂಕೆ ಯನ್ನು ಪರಿಹರಿಸುತ್ತಾ 'ಏತನ್ಮೂಲತಯಾ' ಇತ್ಯಾದಿಗಳಿಂದ ಹೇಳಿದ ಅರ್ಥವನ್ನು ಉಪ ಸಂಹಾರಮಾಡುತ್ತಾರೆ—

**ಮೂ || ತಸ್ಮಾತ್ಪರಮಮುಖ್ಯತ್ವಂ ವಿಷ್ಣಾವನ್ಯತ್ರ ಮುಖ್ಯತಾ |**
**ಉಪಲಕ್ಷಣಾ ಚ ಗೌಣೀ ಚ ತಿಸ್ರಃ ಶಬ್ದಸ್ಯ ವೃತ್ತಯಃ || ೩೨ ||**

ಅ || ತಸ್ಮಾತ್=ಕಬ್ಬಿಣಗೋಲದಲ್ಲಿ ದಗ್ಧೃಶಬ್ದವು ಲಾಕ್ಷಣಿಕವಾದ ಹಾಗೆ ಇಂದ್ರ ಮೊದಲಾದ ಶಬ್ದಗಳು ಪುರಂದರಾದಿಗಳಲ್ಲಿ ಲಾಕ್ಷಣಿಕಗಳು ಅಲ್ಲ. ರೂಢಿಯು ಕೋಶಾದಿ ಗಳಿಂದ ಸಿದ್ಧವಾಗಿದೆ. ಪರಮೈಶ್ವರ್ಯಾದಿರೂಪವಾದ ಯೋಗಾರ್ಥವೂ ಇದೆ. ಆದಕಾರಣ, ವಿಷ್ಣೌ=ಶ್ರೀ ನಾರಾಯಣನಲ್ಲಿ, ಪರಮಮುಖ್ಯತ್ವಂ=ಪರಮಮುಖ್ಯವೃತ್ತಿಯು. ಅನ್ಯತ್ರ=ಇತರ ರಲ್ಲಿ, ಮುಖ್ಯತಾ=ಮುಖ್ಯವೃತ್ತಿಯು, ಉಪಲಕ್ಷಣಾ ಚ=ಲಕ್ಷಣಾವೃತ್ತಿಯು, ಗೌಣೀ ಚ= ಗೌಣೀವೃತ್ತಿಯು ಹೀಗೆ, ತಿಸ್ರಃ=ಮೂರು, ಶಬ್ದಸ್ಯ=ಶಬ್ದದ, ವೃತ್ತಯಃ=ವೃತ್ತಿಗಳು.

ತಾ || (1) ಮುಖ್ಯಾರ್ಥವೇ ಪರಮಮುಖ್ಯಾರ್ಥ (ಮುಖ್ಯ) ಮುಖ್ಯಾರ್ಥ (ಅಮುಖ್ಯ) ಎಂದು ಎರಡುವಿಧವು. ಅದರಲ್ಲಿ ಪರಮೇಶ್ವರನಲ್ಲಿರುವ ರೂಢಿಯೋಗಗಳು ಪರಾಧೀನಗಳೂ ಅಲ್ಲ, ಪೂರ್ಣಗಳೂ ಆಗಿವೆ. ಆದಪ್ರಯುಕ್ತ ಪರಮಮುಖ್ಯವು. (2) ಪುರಂದ ರಾದಿಗಳಲ್ಲಿರತಕ್ಕ ರೂಢಿ ಯೋಗಗಳು ಶ್ರೀ ಹರಿಯ ಅಧೀನಗಳೂ, ಅಲ್ಪಗಳೂ ಆಗಿವೆ. ಆದಕಾರಣ ಈ ಮುಖ್ಯವೃತ್ತಿಯೇ ಪರಮಾತ್ಮನಲ್ಲಿರುವ ಪರಮ ಮುಖ್ಯವೃತ್ತಿಯಿಂದ ಹೀನವಾ ಗಿರುವಪ್ರಯುಕ್ತ ಅಮುಖ್ಯವೃತ್ತಿಯೆಂದು ಹೇಳಿದ್ದಾಗಿರುತ್ತದೆ. ಮುಖ್ಯಾರ್ಥಸಂಬಂಧವನ್ನು ನಿಮಿತ್ತೀಕರಿಸಿಕೊಂಡಿರುವ ವೃತ್ತಿಯು ಲಕ್ಷಣಾವೃತ್ತಿಯು. ಮುಖ್ಯಾರ್ಥಸಾದೃಶ್ಯವನ್ನು ನಿಮಿತ್ತೀಕರಿಸಿಕೊಂಡಿರುವ ವೃತ್ತಿಯು ಗೌಣೀವೃತ್ತಿಯು || ೩೨ ||

ಪರಮಮುಖ್ಯಾದಿ ವೃತ್ತಿಗಳಿಗೆ ಲಕ್ಷಣಗಳನ್ನು ಹೇಳುತ್ತಾರೆ.—

**ಮೂ || ಪ್ರವೃತ್ತಿಹೇತೋರ್ಬಾಹುಲ್ಯಂ ಜ್ಞೇಯಂ ಪರಮಮುಖ್ಯತಾ || ೩೩ ||**
**ತತ್ರ ಪ್ರಯೋಗಬಾಹುಲ್ಯಂ ಯದಿ ತತ್ಪರತಾ ಕಿಮು |**
**ಉಭಯಂ ದೃಶ್ಯತೇ ವಿಷ್ಣೌ ಶಬ್ದಾನಾಮಪಿ ಸರ್ವಶಃ ||**
**ಪ್ರಯೋಗಮಾತ್ರಬಾಹುಲ್ಯಂ ರೂಢಿರಿತ್ಯಭಿಧೀಯತೇ || ೩೪ ||**

ಅ || (ಮಹಾಯೋಗ, ಮಹಾಯೋಗರೂಢಿ ಎಂದು ಪರಮಮುಖ್ಯವೃತ್ತಿಯು ಎರಡು ವಿಧವು. ಈಗ ಮಹಾಯೋಗಸ್ವರೂಪವನ್ನು ಹೇಳುತ್ತಾರೆ.) ಪ್ರವೃತ್ತಿಹೇತೋಃ=ನಿರ್ವಚನದಿಂದ (ಅವಯುವಶಕ್ತಿಯಿಂದ) ಲಭ್ಯವಾದ ಅರ್ಥಕ್ಕೆ, ಬಾಹುಲ್ಯಂ=ನಿರವಧಿಕತ್ವವು, ಪರಮ ಮುಖ್ಯತಾ=ಮಹಾಯೋಗವೃತ್ತಿಯೆಂದು, ಜ್ಞೇಯಂ = ತಿಳಿಯಲ್ಪಡಬೇಕು. (ಮಹಾಯೋಗ ರೂಢಿಸ್ವರೂಪವನ್ನು ಹೇಳುತ್ತಾರೆ.) ತತ್ರ=ಯಾವ ಅರ್ಥದಲ್ಲಿ ಅವಯುವಶಕ್ತಿಲಭ್ಯವಾದ ಅರ್ಥಕ್ಕೆ ನಿರವಧಿಕತ್ವವಿದೆಯೋ, ಅದೇ ಅರ್ಥ (ವಿಷಯ) ದಲ್ಲಿ, ಯದಿ ಪ್ರಯೋಗಬಾಹುಲ್ಯಂ= ರೂಢ್ಯನುಮಾಪಕವಾದ ಪ್ರಯೋಗಕ್ಕೂ ಅತ್ಯಾಧಿಕ್ಯವಿದ್ದರೆ, ಆಗ, ತತ್ಪರತಾ ಕಿಮು? ಆ ವೃತ್ತಿಗೆ, ಪರಮಮುಖ್ಯತ್ವವು ಏನು ಹೇಳತಕ್ಕದ್ದು? ಅಂದರೆ ಆ ವೃತ್ತಿಯು ಮಹಾಯೋಗ ರೂಢಿವೃತ್ತಿಯೆಂದು ತಿಳಿಯತಕ್ಕದ್ದು. ಸರ್ವಶೋಽಪಿ ಶಬ್ದಾನಾಂ=ಎಲ್ಲಾ ಶಬ್ದಗಳಿಗೂ, ವಿಷ್ಣೌ=ಶ್ರೀ ಹರಿಯಲ್ಲಿ, ಉಭಯಂ=ಮಹಾಯೋಗ, ಮಹಾಯೋಗರೂಢಿ ಎನ್ನುವ ಎರಡು ವೃತ್ತಿಗಳೂ ಅಥವಾ ಪ್ರವೃತ್ತಿಹೇತುಬಾಹುಲ್ಯವು—ಪ್ರಯೋಗಬಾಹುಲ್ಯವು ಇವೆರಡೂ, ದೃಶ್ಯತೇ= ಪ್ರಮಾಣಗಳಿಂದ ಕಾಣಲ್ಪಡುತ್ತದೆ. ಅಂದರೆ ಪ್ರಮಾಣಗಳಿಗೆ ವಿಷಯವಾಗುತ್ತವೆ. ಪ್ರಯೋಗ

ಮಾತ್ರಬಾಹುಲ್ಯಂ=ಯಾವ ಅರ್ಥದಲ್ಲಿ ಯಾವ ಶಬ್ದದ ಪ್ರಯೋಗಮಾತ್ರಕ್ಕೆ ಆಧಿಕ್ಯವಿದೆಯೋ ಅಂದರೆ ಪ್ರಯೋಗಬಾಹುಲ್ಯಜ್ಞಾಪ್ಯ ಅಖಂಡವೃತ್ತಿಯೋ ಆ ಅರ್ಥದಲ್ಲಿ ಆ ಶಬ್ದದ ವೃತ್ತಿಯು, ರೂಢಿರಿತಿ=ರೂಢಿಯೆಂತೆಂದು, ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತದೆ.

**ತಾ || ನ್ಯಾಯಸುಧಾ—** (1) ಪರಮಮುಖ್ಯವೃತ್ತಿಯು ಮಹಾಯೋಗ, ಮಹಾಯೋಗರೂಢಿ ಎಂದು ಎರಡು ವಿಧವು. (2) ಹಾಗಾದರೆ, ಲೋಕದಲ್ಲಿ ಯೋಗ, ರೂಢಿ, ಯೋಗರೂಢಿ ಎಂದು ಮೂರು ಮುಖ್ಯವೃತ್ತಿಗಳು ಇದ್ದಂತೆಯೇ ಶ್ರೀ ಹರಿಯಲ್ಲಿಯೂ ಮಹಾಯೋಗ, ಮಹಾರೂಢಿ, ಮಹಾಯೋಗರೂಢಿ ಎಂದು ಮೂರು ಪ್ರಕಾರಗಳನ್ನು ಏಕೆ ಹೇಳಲಿಲ್ಲವೆಂದರೆ— 'ಸಾ ಯೋಗಾದೇವ ಲಭ್ಯತೇ' ಎಂದು ಆನಂದಮಯಾಧಿಕರಣದ ಅಂತ್ಯದಲ್ಲಿ ಶ್ರೀ ಹರಿಯಲ್ಲಿ ಯೋಗವಿಲ್ಲದೆ ವಿದ್ವದ್ರೂಢಿಯು ಇಲ್ಲವೆಂದು ಹೇಳಿರುವುದರಿಂದ ಶ್ರೀ ಹರಿಯಲ್ಲಿ ಮಹಾರೂಢಿ ಎನ್ನುವ ವೃತ್ತಿಯು ಇರುವುದಿಲ್ಲ. ವೃತ್ತಿಯೆಂದರೆ- ಶಬ್ದಕ್ಕೆ ಅರ್ಥಪ್ರತಿಪಾದಕತ್ವವು, (3) ಮಹಾಯೋಗವು, ೧ ಪ್ರವೃತ್ತಿನಿಮಿತ್ತವನ್ನು ಕುರಿತು ಸ್ವಾತಂತ್ರ್ಯರೂಪವಾದುದು. ೨ ನಿರ್ವಚನಲಭ್ಯವಾದ ನಿರವಧಿಕಪ್ರವೃತ್ತಿನಿಮಿತ್ತಾಶ್ರಯತ್ವರೂಪವಾದುದು ಎಂದು ಎರಡು ವಿಧವು. ಅವುಗಳಲ್ಲಿ ಆಶ್ರಯತ್ವರೂಪವಾದ ಮಹಾಯೋಗಸ್ವರೂಪವನ್ನು 'ಪ್ರವೃತ್ತಿಹೇತೋರ್ಬಾಹುಲ್ಯಂ' ಎನ್ನುವ ಮೂಲದಿಂದ ಹೇಳಿದರು— (4) ಯದ್ಯಪಿ 'ಇತೋ ಹಿ ರೂಢತಾನ್ಯೇಷಾಂ, ಎನ್ನುವುದರಿಂದ ಪ್ರಕೃತವಾಗಿರುವುದರಿಂದ ಪ್ರವೃತ್ತಿನಿಮಿತ್ತವನ್ನು ಕುರಿತು ಸ್ವಾತಂತ್ರ್ಯರೂಪವಾದ ಮಹಾಯೋಗವನ್ನು ಹೇಳಬೇಕಿತ್ತು. ಆದಾಗ್ಯೂ ನಿರವಧಿಕ ತದಾಶ್ರಯತ್ವರೂಪವಾದ ಮಹಾಯೋಗದಿಂದಲೇ (ನಿರವಧಿಕತ್ವ ಸ್ವಾತಂತ್ರ್ಯ ಇವುಗಳಲ್ಲಿ ಒಂದರಿಂದಲೇ) ವಿಷ್ಣುವೇ ಶಬ್ದಾರ್ಥನು, ಇತರರಲ್ಲ, ಎಂದು ಇತರರಿಗೆ ವ್ಯವಚ್ಛೇದವು ಸಿಗುತ್ತದೆ. ಲಕ್ಷಣ ಪದಗಳಿಗೆ ವ್ಯಾವೃತ್ತಿಮಾತ್ರವು ಪ್ರಯೋಜನವಾಗಿರುವುದರಿಂದ ಸ್ವಾತಂತ್ರ್ಯರೂಪವಾದ ಮಹಾಯೋಗವನ್ನು ಹೇಳಲಿಲ್ಲ. (5) ತಥಾಚ ನಿರವಧಿಕವಾದ ಅಥವಾ ಸ್ವತಂತ್ರವಾದ ಅವಯುವಶಕ್ತಿಲಭ್ಯವಾದ ಅರ್ಥವನ್ನು ಅಪೇಕ್ಷಿಸಿ ಶಬ್ದಗಳಿಗೆ ಯಾವುದು ಅರ್ಥಪ್ರತಿಪಾದಕತ್ವವಿದೆಯೋ ಅಂತಹ ವೃತ್ತಿಯು (ಅರ್ಥಪ್ರತಿಪಾದಕತ್ವವು) ಮಹಾಯೋಗರೂಪವಾದ ಪರಮಮುಖ್ಯವೃತ್ತಿಯೆಂದು ತಿಳಿಯತಕ್ಕುದು. (6) 'ತತ್ರ ಪ್ರಯೋಗಬಾಹುಲ್ಯಂ' ಎನ್ನುವ ಮೂಲದಿಂದ ಮಹಾಯೋಗರೂಢಿಸ್ವರೂಪವನ್ನು ಹೇಳಿದರು. ಇಲ್ಲಿ ನಿರವಧಿಕವಾದ ನಿರ್ವಚನಲಭ್ಯವಾದ ಅವಯುವಾರ್ಥವುಳ್ಳ ಯಾವ ಅರ್ಥದಲ್ಲಿ ಯಾವ ಶಬ್ದಕ್ಕೆ ಪ್ರಯೋಗಬಾಹುಲ್ಯವಿದೆಯೋ ಆ ಶಬ್ದಕ್ಕೆ ಆ ಅರ್ಥದಲ್ಲಿ ಮಹಾಯೋಗರೂಢಿರೂಪವಾದ ಪರಮಮುಖ್ಯವೃತ್ತಿಯು ಎಂದಿಷ್ಟೇ ಹೇಳಬೇಕಿತ್ತು, 'ತತ್ಪರತಾ ಕಿಮು' ಎಂದು ಕೈಮುತ್ಯವನ್ನು ಹೇಳಿದ್ದು ಮಹಾಯೋಗರೂಢಿ ಎನ್ನುವ ಪರಮಮುಖ್ಯವೃತ್ತಿಯೇ ಇಲ್ಲವೆನ್ನುವ ಶಂಕಾವನ್ನು ನಿರಾಕರಿಸುವುದಕ್ಕಾಗಿ. (7) ಎಲ್ಲಾ ಶಬ್ದಗಳಿಗೂ ಶ್ರೀ ವಿಷ್ಣುವಿನಲ್ಲಿ ಮಹಾಯೋಗ, ಮಹಾಯೋಗರೂಢಿ ಎನ್ನುವ ಎರಡು ವೃತ್ತಿಗಳೂ ಪ್ರಮಾಣಗಳಿಗೆ ವಿಷಯುಗಳಾಗುವುದರಿಂದ ಪರಮಮುಖ್ಯವೃತ್ತಿಯೇ. ಆದರೆ ನಾರಾಯಣ ಮೊದಲಾದ ಶಬ್ದಗಳಿಗೆ ಮಹಾಯೋಗರೂಢಿಯು. ಇಂದ್ರ ರುದ್ರಾದಿಶಬ್ದಗಳಿಗೆ ಮಹಾಯೋಗವು. (8) ಹಾಗಾದರೆ, ಶ್ರೀ ಹರಿಯಲ್ಲಿ ಹೇಳಿದ ಮಹಾಯೋಗ, ಮಹಾಯೋಗರೂಢಿ ಎನ್ನುವ ಎರಡು ವೃತ್ತಿಗಳು ಲೋಕಕ್ಲಪ್ತಗಳಾದ ಯೋಗ, ಯೋಗರೂಢಿಗಳೆಂದೇ ಏಕೆ ಆಗಲಾರವು? ಎಂದರೆ- ೧ ನಿರವಧಿಕ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿಕೊಂಡಿದ್ದು ಅತಿಬಹುಲಪ್ರಯೋಗವಿಲ್ಲದಿರುವಿಕೆಯು ಮಹಾಯೋಗವೃತ್ತಿಯು. ಅಂತಹ ಮಹಾಯೋಗಸಾಪೇಕ್ಷವಾದ ಅಖಂಡವೃತ್ತಿಯು ಮಹಾಯೋಗರೂಢಿಯು. ಆದಕಾರಣ ಲೋಕಕ್ಲಪ್ತಗಳಾದ ಯೋಗ ಯೋಗರೂಢಿಗಳಿಂದ

ಭೇದಕವಾದ ಲಕ್ಷಣವನ್ನು 'ಪ್ರವೃತ್ತಿಹೇತೋಃ' ಇತ್ಯಾದಿಗಳಿಂದ ಹೇಳಿದರು. (9) ಶಕ್ತಿಯಿಂದ ಅರ್ಥವನ್ನು ಪ್ರತಿಪಾದಿಸುವುದು ಮುಖ್ಯವೃತ್ತಿಯು. ಆ ಲೌಕಿಕ ಮುಖ್ಯವೃತ್ತಿಯು ೧ ಯೋಗ ೨ ರೂಢಿ ೩ ಯೋಗರೂಢಿ ಎಂದು ಮೂರು ವಿಧವು. ೧ ಅವಯುವಶಕ್ತಿಯಿಂದ ಲಭ್ಯವಾದ ಅರ್ಥವನ್ನು ಅಪೇಕ್ಷಿಸಿ ಅರ್ಥವನ್ನು ಪ್ರತಿಪಾದಿಸುವಿಕೆಯು ಯೋಗವು. ಅಥವಾ ಅವಯುವಶಕ್ತಿ ಸಾಪೇಕ್ಷವಾದ ವೃತ್ತಿಯು ಯೋಗವು. ಉದಾ='ಕುಂಭಕಾರಃ' ಮಡಿಕೆ ಮಾಡುವವನು, ಇತ್ಯಾದಿಗಳನ್ನು ಶಿಷ್ಯರೇ ಊಹಿಸಿಕೊಳ್ಳಬೇಕೆನ್ನುವ ಅಭಿಪ್ರಾಯದಿಂದ 'ಪ್ರಯೋಗಮಾತ್ರ ಬಾಹುಲ್ಯಂ' ಎನ್ನುವುದರಿಂದ ರೂಢಿಸ್ವರೂಪವನ್ನು ಹೇಳಿದರು. ತಥಾಚ, ಅವಯುವಾರ್ಥ, ಮುಖ್ಯಾರ್ಥ, ಸಾದೃಶ್ಯ, ಮುಖ್ಯಾರ್ಥಸಂಬಂಧಾನಪೇಕ್ಷವಾದ ಪ್ರಯೋಗಬಾಹುಲ್ಯವು ರೂಢಿಯೆಂದು ಹೇಳಿದಂತೆ ಆಯಿತು. (10) ಎಲ್ಲಾ ಶಬ್ದಗಳೂ ಯೌಗಿಕಗಳೇ, ರೂಢ ವಾದುದು ಇಲ್ಲವೆಂದು ಶಾಕಟಾಯನನು ಹೇಳುತ್ತಾನೆ. ಘಟಪಟ ಮೊದಲಾದ ಶಬ್ದಗಳು ರೂಢಗಳಾಗಿಯೇ ಇರುವುದರಿಂದ ಅದು ಅಯುಕ್ತವು. (11) ಅವಯುವಶಕ್ತಿಲಭ್ಯವಾದ ಅರ್ಥ ವನ್ನು ಅಪೇಕ್ಷಿಸಿಕೊಂಡು ಇದ್ದು ಎಲ್ಲಿ ಹೆಚ್ಚು ಪ್ರಯೋಗವಿದೆಯೋ ಅಲ್ಲಿ ಯೋಗರೂಢಿಯು. ಅಥವಾ ಅವಯುವಶಕ್ತಿಯನ್ನು ಅಪೇಕ್ಷಿಸಿಕೊಂಡು ಇರತಕ್ಕ ಸಮುದಾಯಶಕ್ತಿಯಿಂದ ಅರ್ಥ ಪ್ರತಿಪಾದಕತ್ವವು ಯೋಗರೂಢಿಯು. ಉದಾ='ಪಂಕಜ'=ಕಮಲವು. (12) ವಿರೋಧ ವಿದ್ದುದರಿಂದಲೂ ಫಲವಿಲ್ಲದಿರುವುದರಿಂದಲೂ ಯೋಗರೂಢಿ ಎನ್ನುವುದೇ ಅಯುಕ್ತವೆಂದು ಕೆಲವರು ಅನ್ನುತ್ತಾರೆ. ಹೇಗೆಂದರೆ— (೧) ಅವಯುವಾರ್ಥವನ್ನು ಅಪೇಕ್ಷಿಸಿ ಅರ್ಥಪ್ರತಿಪಾದ ಕತ್ವವು ಯೋಗವು. ಅವಯುವಾರ್ಥವನ್ನು ಅಪೇಕ್ಷಿಸದೆ ಅರ್ಥಪ್ರತಿಪಾದಕತ್ವವು ರೂಢಿಯು. ವಿರುದ್ಧಗಳಾದ ಇವುಗಳು ಒಂದು ಕಡೆ ಕೂಡಲಾರವು. (೨) ಪಂಕಜಾದಿ ಶಬ್ದಗಳು ಕೇವಲ ರೂಢಿಯಿಂದಲಾಗಲೀ, ಕೇವಲ ಯೋಗದಿಂದಲಾಗಲೀ ಉಪಪನ್ನಗಳಾಗುವುದರಿಂದ ಯೋಗ ರೂಢಿಯನ್ನು ಅಂಗೀಕರಿಸಿದರೆ ಯಾವ ಪ್ರಯೋಜನವೂ ಇಲ್ಲ, ಎಂದು ಕೆಲವರು ಅನ್ನುತ್ತಾರೆ. ಅದು ಅಯುಕ್ತವು. ಯೋಗರೂಢಿಗಳ ಸಮಾಹಾರವು ಯೋಗರೂಢಿಯೆಂದು ಹೇಳುವುದಿಲ್ಲ. ಹಾಗೆ ಹೇಳಿದ್ದರೆ ವಿರೋಧವು ಬರುತ್ತಿತ್ತು. ಮತ್ತೆ ಪ್ರಯೋಗಗಳ ಪ್ರಾಚುರ್ಯದಿಂದ ಲಕ್ಷಣಾ ಮಾತ್ರದಿಂದ ರೂಢಲಕ್ಷಣಾ ಎನ್ನುವುದು ಭಿನ್ನವೋ, ಗೌಣೀಮಾತ್ರದಿಂದ ರೂಢಗೌಣೀ ಎನ್ನು ವುದು ಭಿನ್ನವೋ, ಹಾಗೆಯೇ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿಕೊಂಡು ಇರತಕ್ಕ ಕೇವಲ ರೂಢಿಯಿಂದಲೂ, ಪ್ರಯೋಗಪ್ರಾಚುರ್ಯದಿಂದ ಕೇವಲ ಯೋಗದಿಂದಲೂ ಭಿನ್ನವಾದ ಮೂರನೇದ್ದಾದ ಯೋಗರೂಢಿ ಎನ್ನುವ ವೃತ್ತಿಯನ್ನು ಅಂಗೀಕರಿಸತಕ್ಕದೇ. ವಸ್ತುತಸ್ತು ಇವುಗಳಿಗೆ ವಿರೋಧವೇ ಇಲ್ಲ. ಹೇಗೆಂದರೆ— ಪಂಕಜಶಬ್ದದಲ್ಲಿ ಪಂಕಜನಿಕರ್ತೃತ್ವ ಪದ್ಮತ್ವ ರೂಪ ಭಿನ್ನಧರ್ಮಗಳಿಂದ ನಿಯತಗಳಾದ ಯೋಗರೂಢಿಗಳಿಗೇನೇ ಸಮಾಹಾರವು ಕೂಡುತ್ತದೆ. ಆದಕಾರಣ ಯೋಗರೂಢಿಸಮಾಹಾರರೂಪವಾದ ಯೋಗರೂಢಿಯನ್ನು ಅವಶ್ಯವಾಗಿ ಅಂಗೀ ಕರಿಸಲೇ ಬೇಕು ॥ ೩೩ ॥ ೩೪ ॥

ಹೀಗೆ ಅವ್ಯವಹಿತವಾದ (ಮುಖ್ಯಾರ್ಥವ್ಯವಧಾನವಿಲ್ಲದೇನೇ ಅರ್ಥಜ್ಞಾನಕ್ಕೆ ಉಪಾಯ ಭೂತವಾದ) ಅಭಿಧಾ, ವಾಚಕತ್ವ ಮೊದಲಾದಶಬ್ದಗಳಿಂದ ವೇದ್ಯವಾದ ಮುಖ್ಯವೃತ್ತಿ (ಅರ್ಥ ಪ್ರತಿಪಾದಕತ್ವ) ಯನ್ನು ನಿರೂಪಿಸಿ ಈಗ ವ್ಯವಹಿತವಾದ (ಮುಖ್ಯಾರ್ಥವ್ಯವಧಾನದಿಂದ ಅರ್ಥ ಜ್ಞಾನಕ್ಕೆ ಕಾರಣಭೂತವಾದ) ಗೌಣೀ, ಲಕ್ಷಣಾ, ಎನ್ನುವ ಅಮುಖ್ಯವೃತ್ತಿಯನ್ನು ನಿರೂ ಪಿಸುತ್ತಾರೆ—

**ಮೂ ॥ ಪ್ರಯೋಗಯುಕ್ತಸಾದೃಶ್ಯಂ ಸಂಬಂಧೋ ವಾಪ್ಯಮುಖ್ಯತಃ ।**
**ವೃತ್ತಿಹೇತುರಿತಿ ಜ್ಞೇಯಃ ಪೂರ್ವಾಯೋಗೇ ಪರಗ್ರಹಃ ॥ ೩೫ ॥**

**ಅ ॥** ಪ್ರಯೋಗಯುಕ್ತಸಾದೃಶ್ಯಂ=ಶಕ್ತಿಯುಕ್ತವಾದುದರ ಸಾದೃಶ್ಯವು, ಸಂಬಂಧೋ-ವಾಪಿ=ಶಕ್ತಿಯುಕ್ತವಾದ ಅಂದರೆ, ಶಕ್ತಿಗೆ ವಿಷಯುವಾದ ಮುಖ್ಯಾರ್ಥದಿಂದ ಸಂಬಂಧವಾಗಲೀ ಕೂಡ, ಅಮುಖ್ಯತಃ=ಅಮುಖ್ಯವಾದ, ವೃತ್ತಿಹೇತುರಿತಿ=ಗೌಣೀವೃತ್ತಿಗೂ ಲಕ್ಷಣಾವೃತ್ತಿಗೂ ಹೇತುವೆಂದು, ಜ್ಞೇಯಃ=ತಿಳಿಯಲ್ಪಡತಕ್ಕದು. ಪೂರ್ವಾಯೋಗೇ=ಮುಖ್ಯಾರ್ಥವು ಕೂಡದಿರುವಾಗಲೂ, ಪ್ರಯೋಜನ ಇರುವಾಗಲೂ, ಪರಗ್ರಹಃ=ಅಮುಖ್ಯಾರ್ಥಗ್ರಹಣವು.

**ತಾ ॥ ನ್ಯಾಯಸುಧಾ—** (1) **"ಯಸ್ಯ ಶಬ್ದಸ್ಯ ಯತ್ರಾರ್ಥೇ ಪ್ರಯೋಗಃ (ಸಾಮರ್ಥ್ಯಂ) ತಸ್ಯ ಪ್ರವೃತ್ತಿನಿಮಿತ್ತಾತಿರಿಕ್ತಂ ತತ್ಸಾದೃಶ್ಯಂ ನಿಮಿತ್ತೀಕೃತ್ಯ ಅನ್ಯತ್ರ ವೃತ್ತಿರ್ಗೌಣೀ"**=ಯಾವ ಶಬ್ದಕ್ಕೆ ಯಾವ ಅರ್ಥದಲ್ಲಿ ಶಕ್ತಿಯದೆಯೋ, ಆ ಶಬ್ದಕ್ಕೆ ಪ್ರವೃತ್ತಿ ನಿಮಿತ್ತವಾದ ಸಿಂಹತ್ವಾದಿಗಳಿಂದ ಅತಿರಿಕ್ತವಾದ ಮುಖ್ಯಾರ್ಥ ಸಾದೃಶ್ಯವನ್ನು ನಿಮಿತ್ತೀಕರಿಸಿಕೊಂಡು ಸಾಮರ್ಥ್ಯವಿಷಯುವದಾರ್ಥದ್ವೇಶೆಯಿಂದ ಅನ್ಯಾರ್ಥಪ್ರತಿಪಾದಕತ್ವವು ಗೌಣೀವೃತ್ತಿಯು. ತಥಾಚ ಯಾವ ಶಬ್ದಕ್ಕೆ ಯಾವುದು ಶಕ್ಯಾರ್ಥವೋ; ಆ ಶಬ್ದಕ್ಕೆ ಶಕ್ಯಾರ್ಥ ಸಾದೃಶ್ಯನಿಮಿತ್ತವಾದ ವೃತ್ತಿಯು ಗೌಣೀವೃತ್ತಿಯು. ಈ ಗೌಣೀವೃತ್ತಿಯು ರೂಢ-ಅರೂಢ ಎನ್ನುವ ಭೇದದಿಂದ ಎರಡು ವಿಧವು. ಅವುಗಳಲ್ಲಿ (೧) ಪ್ರಸಿದ್ಧ ಗೋವಿನಂತೆ ಇರತಕ್ಕ ಮೃಣ್ಮಯವಾದ ಗೋವು ಮೃದ್ಗವಕವೆನ್ನಿಸುತ್ತದೆ. ಮೃದ್ಗವಕಾದಿಗಳಲ್ಲಿ ಗವಾದಿ ಶಬ್ದಗಳ ಪ್ರಯೋಗವು ರೂಢ ಗೌಣೀ ಎನ್ನಿಸುತ್ತದೆ. (೨) ಗೌಃ ವಾಹೀಕಃ=ವಾಹೀಕವೆನ್ನುವ ದೇಶವಿಶೇಷದಲ್ಲಿದ್ದ ಪುರುಷನು ನಾಗರಿಕನಲ್ಲವೆಂದು ತಾತ್ಪರ್ಯವು. ಇಲ್ಲಿ ಅನಾಗರಿಕ ಪುರುಷನಲ್ಲಿ ಗೋ ಶಬ್ದಕ್ಕೆ ಅರೂಢ ಗೌಣೀವೃತ್ತಿಯು. ಅಂತೂ ಸದೃಶಗುಣಾಶ್ರಯತ್ವವನ್ನು ನಿಮಿತ್ತೀಕರಿಸಿಕೊಂಡ ಪರಾರ್ಥದಲ್ಲಿ ಇರುವುದು ಗೌಣೀವೃತ್ತಿಯೆನ್ನಿಸುತ್ತದೆ ಎಂದುಕ್ತವಾಯಿತು. (2) ಮುಖ್ಯಾರ್ಥ ಸಂಬಂಧವನ್ನು ನಿಮಿತ್ತೀಕರಿಸಿಕೊಂಡು ಅರ್ಥಪ್ರತಿಪಾದಕತ್ವವು ಲಕ್ಷಣಾ ಎನ್ನಿಸುತ್ತದೆ. ಇದೂ ಕೂಡ ರೂಢಲಕ್ಷಣಾ, ಅರೂಢಲಕ್ಷಣಾ ಎಂದು ಎರಡು ವಿಧವು. ೧ನೇದ್ದು ರಾಜಾ ಅಯಂ ಗಚ್ಛತಿ= ಸಪರಿವಾರನಾದ ರಾಜನು ಹೋಗುವಾಗ 'ರಾಜಾ ಅಯಂ ಗಚ್ಛತಿ' ಎಂದು ಬಹುಲ ಪ್ರಯೋಗವಿದೆ. ರಾಜಾರಾಜಸಮೂಹದಲ್ಲಿ ರಾಜಶಬ್ದಕ್ಕೆ ರೂಢಲಕ್ಷಣಾ, ಅಥವಾ ಗರ್ವದಿಂದ ಮಾರ್ಗದಲ್ಲಿ ಭಿಕ್ಷುಕನು ಹೋಗುತ್ತಿರುವಾಗ 'ರಾಜಾ ಅಯಂ ಗಚ್ಛತಿ' ಎಂದು ಲೌಕಿಕ ಪ್ರಯೋಗದಿಂದ ರೂಢಲಕ್ಷಣಾ. (೨) ಗಂಗಾಯಾಂ ಘೋಷಃ=ಗಂಗಾತೀರದಲ್ಲಿ ಶಬರರ ಮನೆಯು ಎನ್ನುವುದು ಅರೂಢಲಕ್ಷಣಾ ಎನ್ನಿಸುತ್ತದೆ. (3) ವ್ಯಂಜನವೆನ್ನುವ ಇನ್ನೊಂದು ವೃತ್ತಿಯಿದೆ ಅಂದರೆ— 'ಅಸ್ತಂಗತಃ ಸವಿತಾ' ಎಂದು ಹೇಳಿದರೆ ಬ್ರಾಹ್ಮಣನಿಗೆ ಸಂಧ್ಯಾವಂದನೆಯನ್ನು ಮಾಡಬೇಕೆಂದೂ, ಮಾರ್ಗದಲ್ಲಿ ಹೋಗುತ್ತಿರುವವನಿಗೆ ಮುಂದಕ್ಕೆ ಹೋಗಬಾರದೆಂದೂ, ಅರ್ಥವು ತೋರುತ್ತದೆ. ಅಂತಹ ಅರ್ಥಗಳ ಪ್ರತೀತಿಗೆ ಕಾರಣವಾದದ್ದು ವ್ಯಂಜನಾವೃತ್ತಿಯು, ಎನ್ನುವ ಇನ್ನೊಂದು ವೃತ್ತಿಯಿದೆ ಎಂದು ಹೇಳಕೂಡದು. ಅದು ಅನುಮಾನವಾಗಿರುವುದರಿಂದ ಶಬ್ದಶಕ್ತಿಯಾಗಲಾರದು. 'ವಚನಲಿಂಗಕಾನುಮಾ ಹಿ ಸಾ' ಅರ್ಥಾಂತರಜ್ಞಾನವು ವಚನರೂಪವಾದ ಲಿಂಗದಿಂದ ಹುಟ್ಟಿರುವ ಅನುಮಿತಿರೂಪವಾದುದು, ಎಂದು **ಪ್ರಮಾಣನಿರ್ಣಯ** (ಪು. ೪೭೮) ದಲ್ಲಿ ಹೇಳಿರುವರು. (4) ತಾತ್ಪರ್ಯ ವೃತ್ತಿಯಾದರೂ ಅತಿರಿಕ್ತವಲ್ಲವೆಂದು **"ವಾಚಕತ್ವಂ ಹಿ ತಾತ್ಪರ್ಯಂ ಯದರ್ಥಮಖಿಲಾ ರವಾಃ"** ಎಂದು ಜ್ಞಾನಪಾದದಲ್ಲಿ ಆಚಾರ್ಯರೇ ಹೇಳಿರುವರು.

(5) ಹಾಗಾದರೆ, ಮುಖ್ಯಾರ್ಥಾನುಪಪತ್ತಿಯನ್ನೂ, ಮುಖ್ಯಾರ್ಥ ಸಾದೃಶ್ಯವನ್ನೂ, ಪ್ರಯೋಜನವನ್ನೂ ಅಪೇಕ್ಷಿಸಿಕೊಂಡು ಗೌಣೀವೃತ್ತಿಯು ಪ್ರವೃತ್ತವಾಗುತ್ತದೆ. ಮುಖ್ಯಾರ್ಥಾನುಪಪತ್ತಿ, ಮುಖ್ಯಾರ್ಥಸಂಬಂಧ ಪ್ರಯೋಜನಗಳನ್ನು ಅಪೇಕ್ಷಿಸಿ ಲಕ್ಷಣಾವೃತ್ತಿಯು. ಕಾವ್ಯ ಪ್ರಕಾಶದಲ್ಲಿ ಅಮುಖ್ಯವೃತ್ತಿಯಲ್ಲಿ ೧ ಮುಖ್ಯಾರ್ಥಬಾದ, ೨ ಮುಖ್ಯಾರ್ಥಸಂಬಂಧ, ೩ ಪ್ರಯೋಜನ ರೂಪಗಳಾದ ಮೂರು ಹೇತುಗಳು-ಲಕ್ಷಣಾಬೀಜವೆಂದು ಹೇಳಲ್ಪಟ್ಟದೆ. "**ಮುಖ್ಯಾರ್ಥ ಬಾಧೇ ತದ್ಯೋಗೇ ರೂಢಿತೋಽಥ ಪ್ರಯೋಜನಾತ್ । ಅನ್ಯಾರ್ಥೋ ಲಕ್ಷ್ಯತೇ ಯತ್ಸಾ ಲಕ್ಷಣಾರೋಪಿತಾ ಕ್ರಿಯಾ**" = ಮುಖ್ಯಾರ್ಥಕ್ಕೆ ಬಾಧ ಬಂದರೂ, ಮುಖ್ಯಾರ್ಥಸಂಬಂಧವಿದ್ದರೂ ರೂಢಿಯಿಂದಲಾಗಲೀ, (ಮಂಚಾಃ ಕ್ರೋಶಂತಿ ಇತ್ಯಾದಿಗಳಲ್ಲಿ) ಪ್ರಯೋಜನದಿಂದಲಾಗಲೀ, (ಗಂಗಾಯಾಂ ಘೋಷಃ ಇತ್ಯಾದಿಗಳಲ್ಲಿ ಪಾವಿತ್ರ್ಯಸಾಮೀಪ್ಯಾದಿ ಜ್ಞಾಪನವು ಪ್ರಯೋಜನವು) ಯಾವ ವ್ಯಾಪಾರದ್ದೆಶೆಯಿಂದ ಅಮುಖ್ಯಾರ್ಥವು ತಿಳಿಯಲ್ಪಡುತ್ತದೋ, ಆ ಆರೋಪಿತವಾದ ಶಬ್ದ ವ್ಯಾಪಾರವು ಲಕ್ಷಣಾ ಎನ್ನಿಸುತ್ತದೆ. (6) ಅರ್ಥದಲ್ಲಿ ಇರತಕ್ಕ ವ್ಯಾಪಾರವೇ ಲಕ್ಷಣಾ ಎನ್ನಿಸುತ್ತದೆ ಎನ್ನುವುದು ಸತ್ಯವೇ. ಆದಾಗ್ಯೂ ವಾಚ್ಯಗತವಾದ ವ್ಯಾಪಾರವು ವಾಚಕವಾದ ಶಬ್ದದಲ್ಲಿ ಆರೋಪಿತವಾಗುತ್ತದೆ, ಆದಕಾರಣ ಶಬ್ದವು ಲಾಕ್ಷಣಿಕವೆಂದು ವ್ಯವಹರಿಸಲ್ಪಡುತ್ತದೆ. ಹೀಗೆ ಮೂರು ಹೇತುಗಳನ್ನು ಹೇಳಿರುವುದರಿಂದ ಸಾದೃಶ್ಯ ಸಂಬಂಧ ಎನ್ನುವ ಎರಡನ್ನೇ ಹೇಳಲು ಕಾರಣವೇನೆಂದರೆ— ಮುಖ್ಯಾರ್ಥಾನುಪಪತ್ತಿಯು ಅಮುಖ್ಯಾರ್ಥಪ್ರತಿಪಾದಕತ್ವ ರೂಪವಾದ ಶಬ್ದ ವ್ಯಾಪಾರಕ್ಕೆ ಕಾರಣವಲ್ಲ. ಅಮುಖ್ಯವೃತ್ತಿಯುಳ್ಳ ಶಬ್ದವನ್ನು ಉಚ್ಚಾರಣ ಮಾಡಿದಮೇಲೆ ಅನುಪಪತ್ತಿಯು ಕಾಣುವುದರಿಂದ ಅದು ಅಮುಖ್ಯವೃತ್ತಿಗೆ ಕಾರಣವಾಗಲಾರದು. ಮತ್ತೆ ಮುಖ್ಯಾರ್ಥವು ಕೂಡುವುದಿಲ್ಲವೆಂದು ಕಾಣುವುದೇ ಅಮುಖ್ಯಾರ್ಥವನ್ನು ಗ್ರಹಿಸಲಿಕ್ಕೆ ಕಾರಣವು. ಅಮುಖ್ಯಾರ್ಥವನ್ನು ಗ್ರಹಿಸಲಿಕ್ಕೆ ಕಾರಣವಿದ್ದಪ್ರಯುಕ್ತವೇ ತೀರಾದಿಗಳನ್ನು ಬೋಧಿಸಲಿಕ್ಕಾಗಿ ತೀರಾದಿ ಶಬ್ದಗಳ ಆವಶ್ಯಕತೆಯು ಇಲ್ಲ. ಪ್ರಯೋಗಿಸತಕ್ಕವನು ಪ್ರಯೋಗಕ್ಕಾಗಿಯೂ ಅಪೇಕ್ಷಿಸುವುದಿಲ್ಲ. ಮತ್ತೆ ತಿಳಿಯುವವನೇ ಈ ಸಂಬಂಧದಿಂದ ಗಂಗಾದಿ ಪದವು ತೀರಾದಿಗಳನ್ನು ಬೋಧಿಸುತ್ತದೆ ಎನ್ನುವ ಅಭಿಪ್ರಾಯದಿಂದಲೇ ಪ್ರಯೋಗಿಸುತ್ತಾನೆ. ಹೇಗೆಂದರೆ— ಶಬ್ದವು ವ್ಯುತ್ಪತ್ತಿಯನ್ನು ಅನುಸರಿಸಿ ಮುಖ್ಯವಾದ ಅರ್ಥವನ್ನೇ ಪ್ರಥಮದಲ್ಲಿ ಬುದ್ಧಿಗೆ ವಿಷಯವನ್ನಾಗಿ ಮಾಡುತ್ತದೆ. ತಿಳಿಯುತಕ್ಕವನು ಆ ಅರ್ಥವನ್ನು ತತ್ಕ್ಷಣದಲ್ಲಿಯೇ ಬಿಡಲಿಕ್ಕೆ ಉತ್ಸಾಹಪಡುವುದಿಲ್ಲ. ಆದಕಾರಣ ಅದಕ್ಕಾಗಿಯೇ ಅನುಪಪತ್ತಿಯನ್ನು ಅಪೇಕ್ಷಿಸುತ್ತಾನೆ. ಆದುದರಿಂದ ವೃತ್ತಿ ಕಾರಣವನ್ನು ಚಿಂತಿಸುವಾಗ ಇದನ್ನು ಹೇಳಕೂಡದು. ೨ ಪ್ರಯೋಜನವೂ ಕೂಡ ಅಮುಖ್ಯಾರ್ಥ ಪ್ರತಿಪಾದನರೂಪವಾದ ಶಬ್ದವ್ಯಾಪಾರದಲ್ಲಿ ಕಾರಣವಲ್ಲ. ಮತ್ತೆ ಮುಖ್ಯವಾದ ಶಬ್ದ ಪ್ರಯೋಗವು ನಮ್ಮ ಅಧೀನವಾಗಿರುವಾಗ ಅಮುಖ್ಯವಾದುದನ್ನು ಏಕೆ ಪ್ರಯೋಗಮಾಡುವೆವು ಎಂದು ಹೇಳುವವನೂ, ತಿಳಿಯುವವನೂ ಪ್ರಯೋಜನವನ್ನು ಅನುಸಂಧಾನಮಾಡಿಕೊಳ್ಳುತ್ತಾನೆ. ಆದ ಕಾರಣ ಇಲ್ಲಿ ವೃತ್ತಿ ಚಿಂತೆಯಲ್ಲಿ ಹೇಳಕೂಡದು ಎಂದು. (7) ಯೋಗವು ರೂಢಿಯಿಂದ ದುರ್ಬಲವಾಗಿರುವುದರಿಂದ ಶ್ರೀ ಹರಿಗೆ ಮುಖ್ಯಾರ್ಥತ್ವವಿಲ್ಲವೆಂದು ಹೇಳಿದ್ದು ಅಯುಕ್ತವು. ಕೇವಲ ಅವಿದ್ವದ್ರೂಢಿಯಿಂದ ಮಹಾಯೋಗವು ಪ್ರಬಲವು. ವಿದ್ವದ್ರೂಢಿಯಿಂದ ಕೂಡಿರುವ ಯೋಗವು ಸುತರಾಂ ಪ್ರಬಲವು ॥ ೩೫ ॥

'ಉಭಯಂ ದೃಶ್ಯತೇ ವಿಷ್ಣೌ' ಎನ್ನುವಲ್ಲಿ ಮಹಾಯೋಗ, ಮಹಾಯೋಗರೂಢಿಗಳೆನ್ನುವ ಎರಡು ವೃತ್ತಿಗಳು ಶ್ರೀ ಹರಿಯಲ್ಲಿವೆ ಎಂದು ಯಾವುದು ಉಕ್ತವಾಗಿಯದೋ, ಮಹಾಯೋಗವು ಅಜ್ಞರೂಢಿಯಕ್ಕಿಂತ ಪ್ರಬಲವೆಂದೂ ಯಾವುದು ಸೂಚಿತವಾಗಿಯದೋಅದನ್ನುಪಪಾದಿಸುತ್ತಾರೆ-

ಮೂ ॥ ಏತಮೇವ ತಥಾ ಸಂತಂ ಶತರ್ಚೀತ್ಯಾದಿ ನಾಮಭಿಃ ॥ ೩೬ ॥
ಆಚಕ್ಷತ ಇತಿ ಹ್ಯತ್ರ ಸಂತಮಿತ್ಯವಧಾರಣಾತ್ (ಣಾ) ॥
ಯೋಗಸ್ಯ ರೂಢೇಃ ಪ್ರಾಬಲ್ಯಂ ವಿದ್ವದ್ರೂಢಿಂ ಚ ತತ್ರಗಾಂ ।
ಬಹುಶೋ ದರ್ಶಯತ್ಯಂಜಸಾತ್ಪರ್ಯಾತ್ಸನಿರುಕ್ತಿಕಂ ॥ ೩೭ ॥

ಅ ॥ [' ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಏತಮೇವ ಸಂತಂ ಸ ಯದಿದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂ ಚ ತಸ್ಮಾನ್ಮಾಧ್ಯಮಾ ಸ್ತನ್ಮಾಧ್ಯಮಾ ಇತ್ಯಾಚಕ್ಷತ ಏತಮೇವ ಸಂತಂ ' ಇದುಮೊದಲಾದ (ಐತ.ಉ.ಪ್ರ.೩೯೦) ಶ್ರುತಿಯು ಏತಮೇವ=ಶ್ರೀ ಪರಮಾತ್ಮನನ್ನೇ, ತಥಾ ಸಂತಂ=ಯಾವ ಕಾರಣದಿಂದ ನೂರು ವರ್ಷಗಳಲ್ಲಿ ಪ್ರವೇಶಿಸಿದನೋ, ಪುರುಷರಲ್ಲಿ ೧೦೦ ವರ್ಷಪರ್ಯಂತವಾಗಿ ಇದ್ದನೋ ಆದಕಾರಣ ಶತರ್ಚಿಮೊದಲಾದ ನಾಮಗಳ ಅರ್ಥವುಳ್ಳವನನ್ನಾಗಿ. ಶತರ್ಚೀತ್ಯಾದಿ ನಾಮಭಿಃ=ಶತರ್ಚಿ ಎನ್ನುವುದೇ ಮೊದಲಾದ ನಾಮಗಳಿಂದ, ಅಂದರೆ ಅವುಗಳಿಂದ ವಾಚ್ಯನನ್ನಾಗಿ, ಅಥವಾ ' ಶತಂ ಅರ್ಚಂತಿ ' ಎನ್ನುವ ವ್ಯುತ್ಪತ್ತಿಯಿಂದ ಶತರ್ಚಿನಾಮಕ ಬಹುರೂಪಗಳುಳ್ಳವನನ್ನಾಗಿ, ಆಚಕ್ಷತೇ=(ವಿದ್ವಾಂಸರು) ಹೇಳುತ್ತಾರೆ. ಇತಿ= ಹೀಗೆ, ಹಿ = ಯಾವ ಕಾರಣದಿಂದ, ಅತ್ರ=ಇಲ್ಲಿ, ಸಂತಮಿತಿ=ಸಂತಂ ಎನ್ನುವ ಪದದಿಂದಲೂ, ಅವಧಾರಣಾತ್= ಏತಮೇವ ಎನ್ನುವ ಅವಧಾರಣದಿಂದಲೂ, ರೂಢೇಃ=ಲೌಕಿಕರೂಢಿಯುದ್ದೇಶಿಯಿಂದ, ಯೋಗಸ್ಯ= ಭಗವದ್ವಿಷಯಕವಾದ ಯೋಗಕ್ಕೆ, ಪ್ರಾಬಲ್ಯಂ=ಪ್ರಬಲತನವನ್ನೂ, ವಿದ್ವದ್ರೂಢಿಂ ಚ=ವಿದ್ವದ್ರೂಢಿಯನ್ನೂ ಕೂಡ, ತತ್ರ ಗಾಂ=ಪರಮೇಶ್ವರವಿಷಯಕವನ್ನಾಗಿ, ಬಹುಶಃ=ಅತ್ಯಂತವಾಗಿ ಅನೇಕಾವರ್ತಿ, ಅಂಜಃ=ಚೆನ್ನಾಗಿ, ತಾತ್ಪರ್ಯಾತ್=ತಾತ್ಪರ್ಯಪೂರ್ವಕವಾಗಿಯೇ,(ಪ್ರಾಸಂಗಿಕವಾಗಿ ಅಲ್ಲ). ಸನಿರುಕ್ತಿಕಂ=ಯೋಗವೃತ್ತಿಸಹಿತವಾಗಿ, ದರ್ಶಯತಿ=ತೋರಿಸುತ್ತದೋ, (ಆದಕಾರಣ ಹೇಳಿದ್ದು ಯುಕ್ತವು.) ಅವಧಾರಣಾ ಎಂದು ಪಾಠ ಇಟ್ಟುಕೊಂಡರೆ ಸಂತಂ ಎನ್ನುವ ಪದವೂ, ಏತಮೇವ ಎನ್ನುವ ಅವಧಾರಣೆಯೂ ತೋರಿಸುತ್ತದೆ. ಎಂದರ್ಥವು.

ತಾ ॥ ನ್ಯಾಯಸುಧಾ— (1) ' ಆಚಕ್ಷತೇ ' ಎಂದು ವಿದ್ವಾಂಸರ ಪ್ರಯೋಗ ಬಾಹುಲ್ಯವನ್ನು ಹೇಳಿರುವುದರಿಂದ ಶತರ್ಚ್ಯಾದಿ ಶಬ್ದೋಪಲಕ್ಷಿತಗಳಾದ ಎಲ್ಲಾ ಶಬ್ದಗಳಿಗೂ ವಿದ್ವದ್ರೂಢಿಯನ್ನು ತೋರಿಸಿದಂತೆಯೇ ಆಯಿತು. (2) ' ತಥಾ ಸಂತಂ ' ಎಂದು ಹೇಳಿರುವುದರಿಂದ ಶ್ರೀಹರಿಯು ಮುಖ್ಯಾರ್ಥನೇ, ಲಾಕ್ಷಣಿಕನಲ್ಲವೆಂದುಕ್ತವಾಯಿತು. (3) ' ಏತಮೇವ ' ಎನ್ನುವ ಅವಧಾರಣದಿಂದ ಇತರರಿಗೆ ಶತರ್ಚ್ಯಾದಿಶಬ್ದ ಮುಖ್ಯಾರ್ಥತ್ವವನ್ನು ನಿಷೇಧಿಸಿದಂತೆಯೇ ಆಯಿತು. ಸರ್ವಥಾ ಇತರರಿಗೆ ಮುಖ್ಯಾರ್ಥತ್ವವಿಲ್ಲವೆಂದು ಅಲ್ಲ. ಹಾಗಾದರೆ ಲೋಕ ವ್ಯವಹಾರಾದಿಗಳೇ ಇಲ್ಲದೆಹೋಗಬೇಕಾಗುವವು. ಆದಕಾರಣ ಶ್ರೀ ಹರಿಯಂತೆ ಇತರರಿಗೆ ಪರಮಮುಖ್ಯವೃತ್ತಿಯಿಂದ ವಾಚ್ಯತ್ವವಿಲ್ಲ. ಎಂದು ತಿಳಿಯುತ್ತದೆ. (4) ತಥಾಚ ರೂಢಾರ್ಥಗಳದ್ದೇಶಿಯಿಂದ ಯೌಗಿಕಾರ್ಥಕ್ಕೆ ಆಧಿಕ್ಯವನ್ನು ಹೇಳಿದಾಗ ಯೌಗಿಕಾರ್ಥವಿಷಯಕವಾದ ಮಹಾಯೋಗಕ್ಕೆ ಲೌಕಿಕರೂಢಿಯಿಂದ ಪ್ರಾಬಲ್ಯವು ಸಿದ್ಧವಾಯಿತು ॥ ೩೬ ॥ ೩೭ ॥

ಬೇರೆ ವಾಕ್ಯಗಳಿಂದಲೂ ಶ್ರೀ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನುಪಪಾದಿಸುತ್ತಾರೆ.

ಮೂ ॥ ಅ ಇತಿ ಬ್ರಹ್ಮ ಕಥಿತಂ ತದ್ವ್ಯಾಖ್ಯಾನಾತ್ಮತಾ ತಥಾ ॥ ೩೮ ॥
ಶಬ್ದಾನಾಮಪಿ ಸರ್ವೇಷಾಂ ನಾಮವಿಕ್ಕೃತಕೃತ್ಯತಾ ।

**ವಿಷ್ಣುನಾಮಾರ್ಥರೂಪತ್ವಂ ಸಂಹಿತಾದೇರಥಾಬ್ರವೀತ್ ॥ ೩೯ ॥**
**ಣಕಾರಂ ಚ ಷಕಾರಂ ಚ ಬಲಚೇಷ್ಟಾತ್ಮಕಂ ವದನ್ ।**
**ತಜ್ಜ್ಞಾನಪೂರ್ವಕತ್ವೇನ ಸಂಹಿತಾಧ್ಯಯನಂ ತಥಾ ॥ ೪೦ ॥**
**ಉಪಸರ್ಗತ್ವತೋ ವೇಸ್ತು ತಾಚ್ಛೀಲ್ಯಾರ್ಥಾದುನಸ್ತಥಾ ।**
**ಣಕಾರಶ್ಚ ಷಕಾರಶ್ಚ ನಾಮರೂಪತಯಾ ಮತೌ ॥ ೪೧ ॥**
**ತಸ್ಮಾತ್ಸಮನ್ವಯೋ ವಿಷ್ಣೌ ಸ್ವರವರ್ಣಪದಾತ್ಮನಃ ।**
**ಅಪಿ ವೇದಸ್ಯ ಕಿಮುತ ವಾಕ್ಯರೂಪೇಣ ಸಂಗತಿಃ ॥ ೪೨ ॥**

ಅ ॥ ಅ ಇತಿ ಬ್ರಹ್ಮ ಕಥಿತಂ='ಅಃ ಇತಿ ಬ್ರಹ್ಮ' ಎನ್ನುವ ಶ್ರುತಿಯಲ್ಲಿ, ಅಕಾರವು ಬ್ರಹ್ಮವಾಚಕವೆಂದು ಹೇಳಲ್ಪಟ್ಟದೆ. ತಥಾ=ಹಾಗೆಯೇ, ('ಅಕಾರೋ ವೈ ಸರ್ವಾ ವಾಕ್' ಎನ್ನುವ ಶ್ರುತಿಯಲ್ಲಿ) ಸರ್ವೇಷಾಮಪಿ ಶಬ್ದಾನಾಂ=ಎಲ್ಲಾ ಶಬ್ದಗಳಿಗೂ, ತದ್ವ್ಯಾಖ್ಯಾನಾ-ತ್ಮತಾ=ಅಕಾರದ ವ್ಯಾಖ್ಯಾನರೂಪತ್ವವೂ, (ಹೇಳಲ್ಪಟ್ಟದೆ.) ನಾಮವಿತ್ಕೃತಕೃತ್ಯತಾ=ನಾಮ ಮಾತ್ರವನ್ನು ತಿಳಿದವನಿಗೂ, ಮುಕ್ತತ್ವವೂ (ಹೇಳಲ್ಪಟ್ಟದೆ) ಅಥ=ಮತ್ತು, ಸಂಹಿತಾದೇಃ= ಎಲ್ಲಾ ವೈದಿಕಸಂಹಿತೆಗಳಿಗೂ ಪೂರ್ವೋತ್ತರ ವರ್ಣಗಳಿಗೂ, ವಿಷ್ಣುನಾಮಾರ್ಥರೂಪತ್ವಂ= ವಿಷ್ಣುನಾಮಾರ್ಥಪ್ರತಿಪಾದಕತ್ವವನ್ನು, ಅಬ್ರವೀತ್=(ವೇದವು) ಹೇಳಿತು. (ತಥಾಚ ಸರ್ವ ವರ್ಣಗಳೂ ಎಲ್ಲಾ ಸಂಹಿತೆಗಳೂ ಶ್ರೀಹರಿಯನ್ನೇ ಪ್ರತಿಪಾದಿಸುತ್ತವೆಂದು ತಿಳಿಯುತ್ತದೆ.) (ಎಲ್ಲಿ ಹೇಳಿಯದೆಂದರೆ—ಆ ವಾಕ್ಯವನ್ನು ಅರ್ಥತಃ ಪಠನಮಾಡುತ್ತಾರೆ.) ಣಕಾರಂ ಚ ಷಕಾರಂ ಚ=ಣಕಾರವನ್ನೂ ಷಕಾರವನ್ನೂ ಕೂಡ, ಬಲಚೇಷ್ಟಾತ್ಮಕಂ=ಶ್ರೀಹರಿಗೆ ಬಲ ಚೇಷ್ಟೆಗಳನ್ನು ಪ್ರತಿಪಾದಿಸತಕ್ಕವುಗಳನ್ನಾಗಿ, ವದನ್=ಹೇಳತಕ್ಕ ಐತರೇಯವಾಕ್ಯವು, ತಜ್ಜ್ಞಾನಪೂರ್ವಕ ತ್ವೇನ=ವಿಷ್ಣುನಾಮಗಳ ಸಮಾನಾರ್ಥತಾಜ್ಞಾನಪೂರ್ವಕವಾಗಿ, ಸಂಹಿತಾಧ್ಯಯನಂ=ಎಲ್ಲಾ ಸಂಹಿತೆಗಳ ಅಧ್ಯಯನವನ್ನೂ, (ಹೇಳಿತು.) (ಹಾಗಾದರೆ, ಇಲ್ಲಿ ಎಲ್ಲಾ ವೇದಗಳಲ್ಲಿರತಕ್ಕ ಪೂರ್ವೋತ್ತರ ವರ್ಣಸಂಹಿತೆಗಳು ಣಕಾರ-ಷಕಾರಾರ್ಥಗಳನ್ನು ಪ್ರತಿಪಾದಿಸುತ್ತವೆ. ವಿಷ್ಣು ನಾಮಾರ್ಥವನ್ನು ಹೇಳುವುದಿಲ್ಲ. ಣಕಾರ-ಷಕಾರಗಳೇ ವಿಷ್ಣುನಾಮಗಳಲ್ಲ. ಎಂದರೆ—) (ವಿಷ್ಣು ನಾಮದಲ್ಲಿ ಬೇರೆ ವರ್ಣಗಳೂ ಇರುತ್ತವೆನ್ನುವುದು ಸತ್ಯವೇ. ಆದಾಗ್ಯೂ) ವೇಸ್ತು=ವಿ ಎನ್ನುವು ದಕ್ಕೆ, ಉಪಸರ್ಗತ್ವತಃ=ಉಪಸರ್ಗತ್ವವಿದ್ದುದರಿಂದ, (ಉತ್ತರಪದಾರ್ಥವನ್ನು ವಿಶೇಷಿಸುವುದ ರಿಂದ,) ತಥಾ=ಹಾಗೆಯೇ, ಉನಃ=ಉನ್‌ಪ್ರತ್ಯಯಕ್ಕೆ, ತಾಚ್ಛೀಲ್ಯಾರ್ಥತ್ವಾತ್=ತಾಚ್ಛೀಲ್ಯ ರೂಪ ಅರ್ಥವಿದ್ದುದರಿಂದ ಉಪಸರ್ಜನತ್ವವನ್ನು ತಿಳಿಯತಕ್ಕ ವೇದಕ್ಕೆ, ಣಕಾರಶ್ಚ=ಣಕಾ ರವೂ, ಷಕಾರಶ್ಚ=ಷಕಾರವೂ ಕೂಡ, ಇವು ಎರಡೇ ಪ್ರಧಾನಗಳಾಗಿ, ನಾಮರೂಪತಯಾ= ವಿಷ್ಣುನಾಮಗಳ ಸ್ವರೂಪಗಳಾಗಿ, ಮತೌ = ಸಮ್ಮತಗಳು. ತಸ್ಮಾತ್=ಆದಕಾರಣ, ಸ್ವರ ವರ್ಣ ಪದಾತ್ಮನಃ = ಸ್ವರ ವರ್ಣ ಪದಸ್ವರೂಪಗಳಾದ ಶಬ್ದಗಳಿಗೆ, ವಿಷ್ಣೌ=ಶ್ರೀಹರಿಯಲ್ಲಿ, ಸಮನ್ವಯಃ=ಸಮನ್ವಯವು ಪ್ರಮಾಣಸಿದ್ಧವು. ಆದಕಾರಣ ವೇದಸ್ಯ=ವೇಧಕ್ಕೆ, ವಾಕ್ಯರೂಪೇ ಣಾಪಿ=ವಾಕ್ಯರೂಪದಿಂದಲೂ, ಸಂಗತಿಃ=ಸಂಗತಿಯು, ಕಿಮುತ=ಏನು ಹೇಳತಕ್ಕುದಿದೆ?

ತಾ ॥ **ನ್ಯಾಯಸುಧಾ—** (1) **"ವಿವೃತಾವಪಿ ಸರ್ಗಃ ಸ್ಯಾತ್ ಸಂಹಿತಾಯಾಂ ಚ ಯತ್ರ ಹಿ । ಸಮಾನೋತ್ತಮಹೀನತ್ವಮುಚ್ಯತೇ ವಸ್ತುನೋಽಂಜಸಾ"** ಎಂದು ಐತರೇಯ ಭಾಷ್ಯದಲ್ಲಿ ಹೇಳಿದಪ್ರಕಾರ ಸಮಾನಿಕನೂ, ಉತ್ತಮನೂ ಇಲ್ಲವೆನ್ನುವ ಅರ್ಥವನ್ನು ತೋರಿಸುವುದಕ್ಕಾಗಿ 'ಅ ಇತಿ' ಎಂದು ಹೇಳುವುದನ್ನು ಬಿಟ್ಟು 'ಅಃ ಇತಿ ಬ್ರಹ್ಮ' ಎಂದು ವಿಸರ್ಗ

ಸಹಿತವಾಗಿ ಹೇಳಿರುವರು. ಶ್ರುತಿಗೆ ಐಕ್ಯಪರತ್ವವಿದ್ದರೆ ಅಬ್ರಹ್ಮ ಎಂದೇ ಪೂರ್ತಿಯಾಗುವುದರಿಂದ 'ಅ ಇತಿ ಬ್ರಹ್ಮ' ಎಂದು ಇತಿಕರಣವು ವ್ಯರ್ಥವಾಗುವುದು. (2) 'ಅಕಾರೋ ವೈ ಸರ್ವಾ ವಾಕ್' ಎನ್ನುವಲ್ಲಿ ಅಕಾರಕ್ಕೂ ಸರ್ವವಚನಗಳಿಗೂ ಸಾಕ್ಷಾತ್ ಐಕ್ಯವು ಪ್ರತ್ಯಕ್ಷಮೊದಲಾದ ಪ್ರಮಾಣಗಳಿಂದ ವಿರುದ್ಧವಾಗಿರುವುದರಿಂದ ಸರ್ವಶಬ್ದ.ಳೂ ಅಕಾರಕ್ಕೆ ವ್ಯಾಖ್ಯಾನವೆಂದು ಲಕ್ಷಣಾಶ್ರಯಣವು ಆವಶ್ಯಕವಾಗಿದೆ. ವ್ಯಾಖ್ಯಾನ ವ್ಯಾಖ್ಯೇಯಗಳಿಗೆ ವಿಷಯಗಳು ಬೇರೆ ಬೇರೆ ಎನ್ನುವುದೂ ಯುಕ್ತವಲ್ಲ. ಆದಕಾರಣ ಈ ಎರಡು ವಾಕ್ಯಗಳನ್ನು ಪರ್ಯಾಲೋಚಿಸುವಾಗ ಶ್ರೀ ಪರಬ್ರಹ್ಮನು ಸರ್ವಶಬ್ದವಾಚ್ಯನೆಂದು ಸಿದ್ಧನಾಗುತ್ತಾನೆ. (3) ಮತ್ತು **'ಯದ್ವಾಚ ಓಮಿತಿ .ಯಚ್ಚ ನೇತಿ ಯಚ್ಚಾಸ್ಯಾಃ ಕ್ರೂರಂ ಯದುಚೋಲ್ಬಣಿಷ್ಣು ತದ್ವಿಯುಹ್ಯ ಕವಯೋಽನ್ವವಿಂದನ್ನಾಮಾಯತ್ತಾ ಸಮತೃಪ್ಯಂಛ್ಛ್ರುತೇಽಧಿ'** ಎನ್ನುವ ಐತರೇಯ ಶ್ರುತಿಯಲ್ಲಿ ವಾಕ್‌ಸಮೂಹದ ಮಧ್ಯದಲ್ಲಿ ಯಾವುದು? 'ಓಂ' ಎನ್ನುವ ಪದವು ಅಂಗೀಕಾರ ವಾಚಕವಾಗಿಯದೋ, ಯಾವುದು 'ನ' ಎನ್ನುವ ಪದವು ಪ್ರತಿಷೇಧಾರ್ಥಕವಾಗಿಯದೋ, ಯಾವುದು ಈ ವಾಕ್ ಸಮೂಹಗಳ ಮಧ್ಯದಲ್ಲಿ ಅರ್ಥತಃ ಕಠಿಣವಾಗಿಯದೋ, ಯಾವುದು ಶಬ್ದದಿಂದ ಕಠಿಣವಾಗಿಯದೋ, ತಥಾಚ ವೇದದಲ್ಲಿರುವ ಎಲ್ಲಾ ಪದಗಳ ಸಮೂಹವನ್ನು ಚೆನ್ನಾಗಿ ವಿಚಾರಮಾಡಿ ವಿವೇಕಿಗಳು ನಾಮಗಳಿಂದ ಪ್ರಕಾಶ್ಯಗಳಾಗಿರುವುದರಿಂದ ನಾಮಾಧೀನಗಳಾದ ಆಯಾಯ ಶಬ್ದಗಳ ಪ್ರವೃತ್ತಿನಿಮಿತ್ತಗಳನ್ನು ತಿಳಿದರು. ಆ ಜ್ಞಾನವು ಪರಿಪಕ್ವವಾಗುತ್ತಿರಲು ಆ ಮೇಲೆ ಮುಕ್ತರಾದರು, ಹೀಗೆ ನಾಮವನ್ನು ಮಾತ್ರ ತಿಳಿದವರಿಗೆ ಮುಕ್ತಿಯಾಗುತ್ತದೆಂದು ಹೇಳಿಯದೆ. 'ತಮೇವಂ ವಿದ್ವಾನ್' ಎಂಬ ಶ್ರೀ ಹರಿಯ ಜ್ಞಾನದಿಂದಲೇ ಮುಕ್ತಿಯು ಶ್ರುತವಾಗಿದೆ. ಅವೆರಡೂ ಅನ್ಯಥಾನುಪಪನ್ನಗಳಾಗಿ ಎಲ್ಲಾ ವೈದಿಕನಾಮಗಳೂ ಶ್ರೀಹರಿಯನ್ನೇ ಪ್ರತಿಪಾದಿಸುತ್ತವೆಂದು ತಿಳಿಯುತ್ತದೆ. (4) ಮತ್ತು ಎಲ್ಲಾ ವೈದಿಕ ಸಂಧಿಗಳೂ ಪೂರ್ವೋತ್ತರ ವರ್ಣಗಳೂ ವಿಷ್ಣುನಾಮಾರ್ಥಗಳನ್ನೇ ಪ್ರತಿಪಾದಿಸುತ್ತವೆಂದು ವೇದವು ಸಾರುತ್ತಿದೆ. ಅದರಿಂದ ಎಲ್ಲಾ ವರ್ಣಗಳೂ ಎಲ್ಲಾ ಸಂಹಿತೆಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ತಿಳಿಯುತ್ತದೆ. (5) ಎಲ್ಲಿ ಹೇಳಿರುತ್ತದೆ ಎಂದರೆ— 'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ' ಎಂದು ವಿಷ್ಣು ನಾಮದಲ್ಲಿರತಕ್ಕ ಣಕಾರ ಷಕಾರಗಳು ಶ್ರೀ ಹರಿಗೆ ಬಲ, ಚೇಷ್ಟೆ (ವ್ಯಾಪಾರವಿಶೇಷ) ಗಳನ್ನು ಪ್ರತಿಪಾದಿಸುತ್ತವೆಂದು ಹೇಳತಕ್ಕ ಐತರೇಯ ವಾಕ್ಯವು 'ಣಕಾರೋ ಬಲಂ' ಇತ್ಯಾದಿ ವಾಕ್ಯಗಳದ್ದೆಶೆಯಿಂದ ಮೇಲೆ 'ಸಯೋ ಹೈತೌ ಣಕಾರ-ಷಕಾರಾವನುಸಂಹಿತಮೃಚೋ ವೇದ' ಅಂದರೆ, ಋಕ್ಕುಗಳ ಸರ್ವಸಂಹಿತೆಗಳಲ್ಲಿ ಣಕಾರ-ಷಕಾರಗಳನ್ನು ಯಾವನು ತಿಳಿಯುತ್ತಾನೋ, ಅಂದರೆ, ಣಕಾರ-ಷಕಾರ ಅವುಗಳ ಸಂಹಿತೆಗಳಿಂದ ಪ್ರತಿಪಾದ್ಯವಾದುದು ಯಾವುದು ಅರ್ಥವೋ ಆ ಅರ್ಥವೇ ಎಲ್ಲಾ ಕಡೆಗಳಲ್ಲಿಯೂ ಪೂರ್ವೋತ್ತರವರ್ಣ, ಅವುಗಳ ಸಂಧಿಗಳಿಂದ ಪ್ರತಿಪಾದಿಸಲ್ಪಡುತ್ತದೆಂದು ಯಾವನು ತಿಳಿಯುತ್ತಾನೋ, ಹೀಗೆ ವಿಷ್ಣುನಾಮಗಳ ಸಮಾನಅರ್ಥವುಳ್ಳದ್ದೆಂದು ಜ್ಞಾನಪೂರ್ವಕವಾಗಿ ಎಲ್ಲಾ ಸಂಹಿತೆಗಳ ಅಧ್ಯಯನವನ್ನು ವೇದವು ಹೇಳಿರುತ್ತದೆ. (6) ತಥಾಚ ಮೊದಲು ಎಲ್ಲಾ ಶಬ್ದಗಳಿಗೂ ಪ್ರತಿಪದಸಮನ್ವಯವನ್ನೂ ವಾಕ್ಯಾನ್ವಯವನ್ನೂ ವಿಷ್ಣುವಿನಲ್ಲಿ ಹೇಳಿರುತ್ತಾರೆ. ಅವುಗಳನ್ನೇ ಈಗ ಈ ಶ್ರುತಿಗಳಿಂದ ಸಾಧಿಸಿರುತ್ತಾರೆ ॥ ೩೮ ॥ ೩೯ ॥ ೪೦ ॥ ೪೧ ॥ ೪೨ ॥

ಇಷ್ಟರವರೇಗೆ ಈ ಎರಡು ವಾಕ್ಯಗಳನ್ನು ಪರ್ಯಾಲೋಚಿಸಿ 'ಅನ್ಯಥಾನುಪಪತ್ತಿಯಿಂದ' 'ಉಪಸರ್ಗತ್ವತೋ ವೇಸ್ತು' ಇತಾದಿಗಳಲ್ಲಿ ಹೇಳಿದ ಉಪಪತ್ತಿ ಸಾಪೇಕ್ಷಗಳಾದ ಶ್ರುತಿಗಳನ್ನು ಶ್ರೀ ಹರಿಯು ಸರ್ವಶಬ್ದವಾಚ್ಯನೆನ್ನುವ ವಿಷಯದಲ್ಲಿ ಉದಾಹರಿಸಿದರು. ಈಗ ಸ್ಪಷ್ಟವಾಗಿ ಪದ ಸಮನ್ವಯವನ್ನೂ ವಾಕ್ಯಸಮನ್ವಯವನ್ನೂ ಹೇಳತಕ್ಕ ಶ್ರುತಿಗಳನ್ನು ಉದಾಹರಿಸುತ್ತಾರೆ—

ಮೂ ॥ ಘೋಷಾಃ ಸರ್ವೇಽಪಿ ವೇದಾಶ್ಚ ಸರ್ವೇ ವೇದಾಶ್ಚ ಯತ್ಪದಂ ।
ಇಂದ್ರಂ ಮಿತ್ರಂ ಯಮಿಂದ್ರಂ ಚ ಪ್ರಥಮಃ ಸಂಸ್ಕೃತಿಸ್ತಥಾ ॥ ೪೩ ॥
ನಾಮಧಾಃ ಸರ್ವದೇವಾನಾಮೇಕ ಇತ್ಯಾದಿಕಾ ಶ್ರುತಿಃ ।
ಪ್ರಮಾಣಮುಕ್ತವಿಷಯೇ ತದೇವೋಕ್ತಮುಪಕ್ರಮಾತ್ ॥
ಇತಿ ಸ್ವಯಂ ಭಗವತಾ ಬ್ರುವತಾಽಶೇಷಮನ್ವಯಂ ॥ ೪೪ ॥

ಅ ॥ (೧) ಘೋಷಾಃ ಸರ್ವೇಽಪಿ ವೇದಾಶ್ಚ='**ತಾ ವಾ ಏತಾಸ್ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣಏವ**' (ಐತ. ಉ. ಪು.೪೦೦) ಆ ಈ ಎಲ್ಲಾ ಋಕ್ಕುಗಳಿಗೆ ಪ್ರಾಣನೇ (ವಿಷ್ಣುವೇ) ಪ್ರತಿಪಾದ್ಯನು. ಎಲ್ಲಾ ವೇದಗಳಿಗೂ ಪ್ರಾಣನೇ ಪ್ರತಿಪಾದ್ಯನು. ಋಕ್ಪ್ರತಿಪಾದ್ಯನೆಂದು ಏನು ಹೇಳತಕ್ಕದು? ಸಮುದ್ರಾದಿ ಘೋಷಗಳಿಗೂ ಮಂತ್ರಶಾಸ್ತ್ರಪ್ರಸಿದ್ಧವಾದ ನಾದರೂಪವಾದ ವರ್ಣಗಳ ಅಭಿವ್ಯಕ್ತಿದ್ವಾರಾ ಪ್ರಾಣನೇ ಪ್ರತಿಪಾದ್ಯನು. ಸರ್ವವೇದಪ್ರತಿಪಾದ್ಯನೆಂದು ಏನು ಹೇಳತಕ್ಕದ್ದು, ಎನ್ನುವ ಶ್ರುತಿಯು, (೨) ಸರ್ವೇ ವೇದಾಶ್ಚ ಯತ್ಪದಂ='**ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ । ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮಿ**' (ಕಾ. ಪು. ೪೮) ಸಮಸ್ತ ವೇದಗಳು ಯಾರ ಸ್ವರೂಪವನ್ನು ಪ್ರತಿಪಾದಿಸುತ್ತವೆ (ಅದನ್ನು ಹೇಳುವೆನೆಂದು ಉಪಕ್ರಮಿಸಿ 'ತದ್ವಿಷ್ಣೋಃ ಪರಮಂ ಪದಂ' ಎಂದು ಕಾಠಕದಲ್ಲಿ (ಪು. ೫೮) ಶ್ರುತವಾಗಿರುವುದರಿಂದ ಶ್ರೀ ವಿಷ್ಣುವೇ ಸರ್ವ ವೇದ ಪ್ರತಿಪಾದ್ಯನೆಂದು ಸಿದ್ಧಿಸುತ್ತಾನೆ. (೩) ಇಂದ್ರಂ ಮಿತ್ರಂ='**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ**' (ಋಗ್ವೇದ ಅಷ್ಟ. ೨ ಅಧ್ಯಾ. ೩ ವ.೨೨) '(ಜ್ಞಾನಿಗಳು ಒಬ್ಬ ಶ್ರೀಹರಿಯನ್ನು)ಇಂದ್ರ ಮಿತ್ರಾದಿ ಶಬ್ದವಾಚ್ಯನನ್ನಾಗಿ (ಹೇಳುತ್ತಾರೆ. ಈ ವಾಕ್ಯವು ವಾಮನ ಸೂಕ್ತದಲ್ಲಿರತಕ್ಕದಾದಪ್ರಯುಕ್ತ ವಿಷ್ಣುಪರವೆಂದು ಸಿದ್ಧಿಸುತ್ತದೆ.) (೪) ಯಮಿಂದ್ರಂಚ='**ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುಃ ಯಮು ಸತ್ಯಮಾಹುಃ**' ಯಾವ ಶ್ರೀಹರಿಯನ್ನು ಇಂದ್ರಾದಿ ಶಬ್ದವಾಚ್ಯನನ್ನಾಗಿ ಹೇಳುತ್ತಾರೆ (೫) ತಥಾ=ಹಾಗೆಯೇ, ಪ್ರಥಮಃ ಸಂಸ್ಕೃತಿಃ='**ಯೋ ದೇವಾನಾಂ ದೇವತಮಸ್ತಪೋಜಾಸ್ತಸ್ಮೈತ್ವಾತೇಭ್ಯಸ್ತ್ರಾಸ ಪ್ರಥಮಃ ಸಂಸ್ಕೃತಿರ್ವಿಶ್ವಕರ್ಮಾ ಸ ಪ್ರಥಮೋ ಮಿತ್ರೋ ವರುಣೋಽಗ್ನಿಃ' ಸ ಪ್ರಥಮೋ ಬೃಹಸ್ಪತಿಶ್ಚಿಕಿತ್ವಾಂಸ್ತಸ್ಮಾ ಇಂದ್ರಾಯ ಸುತಮಾಜುಹೋಮಿ'**=ಅಂದರೆ ಸರ್ವೋತ್ತಮನು ಸರ್ವಜಗತ್ಕರ್ತನು, (೬)ನಾಮಧಾಃಸರ್ವದೇವಾನಾಮೇಕಃ=**ಯೋ ದೇವಾನಾಂನಾಮಧಾ ಏಕ ಏವ**=(ಋ. ಅಷ್ಟ.೮ ಅಧ್ಯಾ. ೩ ವ. ೧೬) ಯಾವ ಶ್ರೀಹರಿಯೊಬ್ಬನೇ ಎಲ್ಲಾ ದೇವತೆಗಳ ನಾಮಧಾರಕನೋ, ಇತ್ಯಾದಿಕಾ ಶ್ರುತಿಃ= ಇದೇ ಮೊದಲಾಗಿವುಳ್ಳ '**ನಾಮಾನಿ ಸರ್ವಾಣಿ ಯಮಾವಿಶಂತಿ**'ಇತ್ಯಾದಿ ಶ್ರುತಿಯು, ಉಕ್ತ ವಿಷಯೇ=ಪದಸಮನ್ವಯವಿಷಯದಲ್ಲಿಯೂ, ವಾಕ್ಯಸಮನ್ವಯವಿಷಯದಲ್ಲಿಯೂ ಪ್ರಮಾಣಂ= ಪ್ರಮಾಣವು. (ಇಂದ್ರಾದಿ ನಾಮಗಳಿಗೆ ಪರಮೇಶ್ವರಪರತ್ವವಿದ್ದರೆ 'ಇಂದ್ರಸ್ಯ ನು ವೀರ್ಯಾಣಿ' ಇತ್ಯಾದಿ ವಾಕ್ಯಗಳಿಗೆ ವಿಷ್ಣುಪರತ್ವವು ಸಿದ್ಧಿಸುವುದು.) (ಹಾಗಾದರೆ ಈ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವೇ ಕಾಣದಿರುವುದರಿಂದ ಸೂತ್ರಸಿದ್ಧವಾಗದೆ ಇರುವ ಈ ಅರ್ಥವನ್ನು ಏತಕ್ಕೆ ಹೇಳಿದ್ದೆಂದರೆ)ತದೇವ=ಅದೇ, ಉಪಕ್ರಮಾತ್'ಏಷ ಇಮಂಲೋಕಮಭ್ಯಾರ್ಚತ್' ಎಂದುಪಕ್ರಮಿಸಿ,

ಅಶೇಷಂ=ಎಲ್ಲ, ಅನ್ವಯಂ=ಅನ್ವಯವನ್ನು, ಬ್ರುವತಾ=ಹೇಳತಕ್ಕ, ಭಗವತಾ=ಶ್ರೀ ವೇದ ವ್ಯಾಸರಿಂದ, ಇತಿ=ತಾವಾ ಏತಾಃ=ಇತ್ಯಾದಿ, ಸ್ವಯಂ=ತನ್ನಿಂದಲೇ, ಉಕ್ತಂ=ಹೇಳಲ್ಪಟ್ಟಿದೆ.

**ತಾ ||  ನ್ಯಾಯಸುಧಾ—** (1) ಪದಸಮನ್ವಯವೂ, ವಾಕ್ಯಸಮನ್ವಯವೂ ಸೂತ್ರದಲ್ಲಿ ಹೇಳದೆ ಇದ್ದುದಲ್ಲ. "**ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ**" ಎನ್ನುವ ಸೂತ್ರದಲ್ಲಿ ಹೇಳಲ್ಪಟ್ಟದ್ದೇ ಆಗಿರುತ್ತದೆ. ಇಲ್ಲಿ 'ಜ್ಯೋತಿಃ' ಎಂದು ಸೂತ್ರಪ್ರತೀಕಗ್ರಹಣ ಮಾಡುವುದನ್ನು ಬಿಟ್ಟು 'ಉಪಕ್ರಮಾತ್' ಎಂದು ಹೇಳಿರುವುದರಿಂದ 'ಜ್ಯೋತಿರುಪಕ್ರಮಾ' ಎಂದು ಪರಕೀಯ ಸೂತ್ರಪಾಠವು ಅಪಪಾಠವೇ ಎಂದು ಸಿದ್ಧವಾಯಿತು. (2) ಅಥವಾ ಜ್ಯೋತಿಃ ಎಂದು ಮಾತ್ರ ಗ್ರಹಣಮಾಡಿರುವುದರಿಂದ ಎಲ್ಲಾ ಶಬ್ದಗಳಿಗೂ ಸಮನ್ವಯ ಪ್ರತಿಪಾದನವೆಂದು ಹೇಗೆ ಆಗುತ್ತದೆಂದರೆ— ಜ್ಯೋತಿಃ ಶಬ್ದವು ಉಪಲಕ್ಷಕವು. ಹೇಗೆ ಉಪಲಕ್ಷಕವೆಂದರೆ— 'ಏಷ ಇಮಂ ಲೋಕಮಭ್ಯಾರ್ಚತ್' ಎಂದುಪಕ್ರಮಿಸಿ 'ತಾವಾ ಏತಾಃ ಸರ್ವಾ ಋಚಃ' ಇತ್ಯಾದಿಗಳನ್ನು ಕೆಲವರು ಹೇಳುವರು. ಇಲ್ಲಿ ಜ್ಯೋತಿಶ್ಶಬ್ದಕ್ಕೆಮಾತ್ರ ಸಮನ್ವಯವು ವಿವಕ್ಷಿತವಾಗಿದ್ದರೆ ಆಗ ಅದನ್ನುಮಾತ್ರ ಉಪಪಾದಿಸುವುದನ್ನು ಏನಾದರೂ ಹೇಳಬೇಕಿತ್ತು. ಸರ್ವಶಬ್ದವಾಚ್ಯತ್ವವನ್ನುಪಪಾದಿಸತಕ್ಕುದನ್ನು ತೆಗೆದುಕೊಂಡದ್ದು ಹೇಗೆ ಉಪಯುಕ್ತವಾಗುವುದು? ವಿಶೇಷವಿಷಯಕವಾದ ಪ್ರಮಾಣವಿರುವುದಿಲ್ಲ. ಆದ ಕಾರಣ ಸರ್ವವಿಷಯಕವಾದ ಪ್ರಮಾಣವನ್ನು ಹೇಳಿದ ಸೂತ್ರಕಾರರಿಗೆ ಜ್ಯೋತಿಃಶ್ಶಬ್ದವು ಲಾಕ್ಷಣಿಕವೆಂದು ವಿವಕ್ಷಿತವಾಗಿದೆ ಎಂದು ತಿಳಿಯುತ್ತದೆ. (3) ಮತ್ತು 'ತತ್ತು ಸಮನ್ವಯಾತ್' ಎನ್ನುವುದರಿಂದ ಬ್ರಹ್ಮನಲ್ಲಿ ಎಲ್ಲಾ ಶಬ್ದಗಳಿಗೂ ಸಮನ್ವಯವು ಪ್ರತಿಜ್ಞಾತವಾಗಿದೆ. ಕೆಲವು ಶಬ್ದಗಳಿಗೆ ಮಾತ್ರ ಸಮನ್ವಯವು ಪ್ರತಿಜ್ಞಾತವಲ್ಲ ಎಂದುಪಪಾದಿತವಾಗಿದೆ. ಅದನ್ನು ವಿವರಿಸುವುದಕ್ಕಾಗಿಯೇ ಅಧ್ಯಾಯಶೇಷವು ಪ್ರವೃತ್ತವಾಗಿದೆ ಎಂದು '**ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ | ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ಶಾಸ್ತ್ರಮೂಲಂ ಯತಸ್ತತಃ || ಅನ್ವಯಃ ಸರ್ವಶಬ್ದಾನಾಂ ಗುಣಸರ್ವಸ್ವವೇದಕಃ**' | (ಪು.೩೬೯) ಎನ್ನುವುದರಿಂದಲೂ '**ಏವಂ ಶಾಸ್ತ್ರಾವಗಮ್ಯತ್ವೇ ವಿಭಾಗೇನ ಸಮನ್ವಯಂ**' ಇತ್ಯಾದಿಗಳಿಂದಲೂ ಆನಂದಮಯಾಧಿಕರಣದಲ್ಲಿ ಹೇಳಿರುತ್ತಾರೆ. ಅದರಲ್ಲಿ ಆನಂದಮಯ ಮೊದಲಾದ ಅಧಿಕರಣಗಳಿಂದ ಆ ಪ್ರಕರಣದಲ್ಲಿದ್ದ ಶಬ್ದಸಮನ್ವಯವು ಪ್ರತಿಪಾದಿತವಾಗಿದೆ. ಈ ಪಾದದಲ್ಲಿ ಪರಮೈಶ್ವರ್ಯವಿರೋಧ್ಯರ್ಥಕ ದುಃಖಿ ಮೊದಲಾದ ಶಬ್ದಗಳ ಸಮನ್ವಯವು ಹಿಂದಿನ ಅಧಿಕರಣಗಳಲ್ಲಿ ಪ್ರತಿಪಾದಿತವಾಗಿದೆ. ತಥಾಚ ಕರ್ಮಕ್ರಮಾದಿಗಳನ್ನು ಹೇಳತಕ್ಕ ಶಬ್ದಗಳ ಸಮನ್ವಯವನ್ನು ಹೇಳಬೇಕು, ಅವಶಿಷ್ಟವಾದ ಅಧಿಕರಣವು ಇದು. ಹೀಗೆ ಪರಿಶೇಷಪ್ರಮಾಣಗಳಿಂದ ಕರ್ಮಕ್ರಮಾದ್ಯಭಿಧಾಯಕ ಶಬ್ದಗಳನ್ನು ಸಮನ್ವಯಮಾಡುವುದಕ್ಕಾಗಿಯೇ ಈ ಅಧಿಕರಣವೆಂದು ತಿಳಿಯುತ್ತದೆ. (4) ಅಥವಾ ಸರ್ವಶಬ್ದಗಳ ಸಮನ್ವಯವು ಪ್ರತಿಜ್ಞಾತವಾಗಿದೆ ಎಂದಾಗಲಿ. ಆದಾಗ್ಯೂ ಅದನ್ನು ಪ್ರತಿಪಾದಿಸುವುದಕ್ಕಾಗಿ 'ಜಾತವೇತಂ ಹರೌ' ಇತ್ಯಾದಿಗಳಿಂದ ಯಾವ ನ್ಯಾಯವು ಹೇಳಲ್ಪಟ್ಟದೋ ಅದು ಸೂತ್ರಿತವಾಗಲಿಲ್ಲವೆಂದರೆ 'ಏಷ ಇಮಂ ಲೋಕಮಭ್ಯಾರ್ಚತ್' ಎಂದು ಉಪಕ್ರಮ ವಾಕ್ಯವನ್ನು ತೆಗೆದುಕೊಂಡು 'ತಥಾ ಹ್ಯಧೀಯತ ಏಕೇ' ಎಂದು ಹೇಳತಕ್ಕ ಸೂತ್ರಕಾರರು ಸರ್ವಶಬ್ದವಾಚ್ಯತ್ವವನ್ನೇ ಹೇಳಿರುತ್ತಾರೆ || ೪೩ || ೪೪ ||

(1) ಹೀಗೆ 'ವಿರೋಧಿಸರ್ವಬಾಹುಲ್ಯ' ಇತ್ಯಾದಿಗಳಿಂದ ಸಂಕ್ಷೇಪವಾಗಿಯೂ, 'ಅನ್ವಯಃ ಸರ್ವಶಬ್ದಾನಾಂ' ಎನ್ನುವುದರಿಂದ ವಿಸ್ತರವಾಗಿಯೂ 'ಆನುಮಾನಿಕಂ' ಇತ್ಯಾದಿ ಸೂತ್ರಗಳನ್ನು ವ್ಯಾಖ್ಯಾನಮಾಡಿ ಪರರು ಮಾಡಿದ ವ್ಯಾಖ್ಯಾನಗಳನ್ನು ತಿರಸ್ಕರಿಸುತ್ತಾರೆ—

(2) 'ಈಕ್ಷತೇರ್ನಾಶಬ್ದಂ' ಎನ್ನುವುದರಿಂದ ಪ್ರಧಾನವು ಶಬ್ದಬೋಧ್ಯನಲ್ಲವೆಂದು ಹೇಳಿದ್ದು ಅಸಿದ್ಧವು. ಏಕೆಂದರೆ, ಕೆಲವು ಶಾಖೆಗಳಲ್ಲಿ ಪ್ರಧಾನವನ್ನು ಪ್ರತಿಪಾದಿಸತಕ್ಕ ಶಬ್ದಗಳೂ ಶ್ರುತಗಳಾಗಿವೆ. ಅದನ್ನು ನಿರಾಕರಿಸದೆ ಇರುವ ತನಕ ಬ್ರಹ್ಮನು ಸಕಲ ಜಗತ್ಕಾರಣನು ಎನ್ನುವ ವಾದವು ಸ್ಥಿರವಾಗುವುದಿಲ್ಲ. ಆದುದರಿಂದ ಪ್ರಧಾನವು ಶಬ್ದಬೋಧ್ಯವಲ್ಲವೆಂದು ಪ್ರತಿಪಾದಿಸುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ ಎಂದು ಈ ಪಾದಪ್ರತಿಪಾದ್ಯವಾದ ಪ್ರಮೇಯವನ್ನು ಬೇರೆ ರೀತಿಯಾಗಿ ಅದ್ವೈತಿಗಳು ವರ್ಣಿಸುತ್ತಾರೆ. ಅದನ್ನು ನಿರಾಕರಿಸುತ್ತಾರೆ—

**ಮೂ ॥ ನ ಶಬ್ದವಾಚ್ಯತೈವಾತ್ರ ಪ್ರಧಾನಸ್ಯ ನಿಷಿಧ್ಯತೇ ।**
**ಸರ್ವವೇದೇತಿಹಾಸೇಷು ಪುರಾಣೇಷು ಚ ಸಂಗ್ರಹಾತ್ ॥ ೪೫ ॥**

ಅ ॥ ಸರ್ವವೇದೇತಿಹಾಸೇಷು = ಎಲ್ಲಾ ವೇದಗಳಲ್ಲಿಯೂ ಇತಿಹಾಸಗಳಲ್ಲಿಯೂ, ಪುರಾಣೇಷು ಚ=ಪುರಾಣಗಳಲ್ಲಿಯೂ, ಸಂಗ್ರಹಾತ್ = ಪ್ರಧಾನಕ್ಕೆ ಸಂಗ್ರಹವಿದ್ದುದರಿಂದ, ಅತ್ರ ಏವ=ಈ ಪ್ರಥಮಾಧ್ಯಾಯದಲ್ಲಿಯೇ, ಪ್ರಧಾನಸ್ಯ=ಪ್ರಧಾನಕ್ಕೆ, ಶಬ್ದವಾಚ್ಯತಾ=ಶಬ್ದವಾಚ್ಯತ್ವವು, ನಿಷಿಧ್ಯತೇ ಇತಿ=ನಿಷೇಧಿಸಲ್ಪಡುತ್ತದೆ ಎನ್ನುವುದು, ನ=ಕೂಡುವುದಿಲ್ಲ.

**ತಾ ॥ ನ್ಯಾಯಸುಧಾ—** (1) ಒಂದನೇ ಅಧ್ಯಾಯದಲ್ಲಿ ಪ್ರಧಾನಕ್ಕೆ ಶಬ್ದವಾಚ್ಯತ್ವವು ನಿಷೇಧಿಸಲ್ಪಡುತ್ತದೆ ಎನ್ನುವುದು ಕೂಡುವುದಿಲ್ಲ. ಹಾಗಾದರೆ ಸಮನ್ವಯಾಧ್ಯಾಯದಲ್ಲಿ ಅಂತರ್ಭಾವವೇ ಕೂಡದಿರುವುದರಿಂದ ಈ ಪಾದದಲ್ಲಿ ಸಂಗತಿಯೇ ಇಲ್ಲವೆಂದಾಗಬೇಕಾಗುವುದು. (2) ಹಾಗಾದರೆ ಸಮನ್ವಯವನ್ನು ಸ್ಥಿರಪಡಿಸುವುದಕ್ಕಾಗಿ ಪ್ರಧಾನವು ಶಬ್ದಬೋಧ್ಯವಲ್ಲವೆಂದು ಪಪಾದಿಸುವುದರಿಂದ ಅಸಂಗತಿಯಿಲ್ಲವೆಂದು ಹೇಳಕೂಡದು. ಹಾಗಾದರೆ, ಅವಿರೋಧಾಧ್ಯಾಯದಲ್ಲಿ ಅಂತರ್ಭಾವವು ಬರಬೇಕಾಗುವುದು. ಇಲ್ಲವಾದರೆ ಎರಡನೇ ಅಧ್ಯಾಯದ ಅರ್ಥವು ಸಮನ್ವಯವನ್ನು ಸ್ಥಿರಪಡಿಸುವುದಕ್ಕಾಗಿಯೇ ಇರುವುದರಿಂದ ಅದನ್ನೂ ಇಲ್ಲಿಯೇ ಹೇಳಬೇಕಾಗುವುದು. ವಿಶೇಷವಿಲ್ಲದಿರುವುದರಿಂದ ಕೇವಲ ಶಬ್ದವಾಚ್ಯತ್ವವೇ ನಿಷೇಧಿಸಲ್ಪಡುತ್ತದೆನ್ನುವುದು ಕೂಡುವುದಿಲ್ಲ. (3) ಮತ್ತು ಈ ಪಾದದಲ್ಲಿ (೧) ಜಗತ್ಕಾರಣವನ್ನು ಹೇಳತಕ್ಕ ಶಬ್ದಗಳಿಂದ ವಾಚ್ಯತ್ವವು ಪ್ರಧಾನಕ್ಕೆ ನಿಷೇಧಿಸಲ್ಪಡುತ್ತದೋ, (೨) ಶಬ್ದವಾಚ್ಯತ್ವವೇ ನಿಷೇಧಿಸಲ್ಪಡುತ್ತದೋ? ೧ನೇದ್ದು ಕೂಡಲಾರದು. ಏಕೆಂದರೆ ಇಲ್ಲಿ ಉದಾಹೃತಗಳಾದ 'ಮಹತಃ ಪರಮವ್ಯಕ್ತಂ' 'ಯಸ್ಮಿನ್ ಪಂಚ ಪಂಚಜನಾಃ' ಇತ್ಯಾದಿ ವಾಕ್ಯಗಳಲ್ಲಿ ಪ್ರಧಾನಕ್ಕೆ ಜಗತ್ಕಾರಣತ್ವವೇ ಶ್ರುತವಾಗಲಿಲ್ಲ. (೨) ಎರಡನೇದ್ದು ಅಂದರೆ ಪ್ರಧಾನಕ್ಕೆ ಇಲ್ಲಿ ಶಬ್ದವಾಚ್ಯತ್ವವೇ ನಿಷೇಧಿಸಲ್ಪಡುತ್ತದೆ ಎನ್ನುವುದೂ ಕೂಡುವುದಿಲ್ಲ. ಏಕೆಂದರೆ, ಪ್ರಕೃತದಲ್ಲಿ ಉಪಯೋಗವಿಲ್ಲ. ಹೇಗೆಂದರೆ-ಪ್ರಧಾನವು ಶಬ್ದಬೋಧ್ಯವಾಗುವುದಾದರೆ ಅದರ ಸ್ವರೂಪಮಾತ್ರ ಸಿದ್ಧಿಸುತ್ತದೆ. ಸ್ವರೂಪಸಿದ್ಧಿಮಾತ್ರ ಆಗುವುದರಿಂದ ಯಾವುದೂ ಲಕ್ಷಣಕ್ಕೆ ಹಾನಿಯಿರುವುದಿಲ್ಲ. ನಮ್ಮಂತೆಯೇ ಪರರು ಸರ್ವಶಬ್ದ ಸಮನ್ವಯವನ್ನು ಪ್ರತಿಜ್ಞಾ ಮಾಡಲಿಲ್ಲ. ಪ್ರಧಾನವನ್ನು ನಿಷೇಧಿಸಿ ಬ್ರಹ್ಮನು ಕಾರಣನೆಂದೂ ಹೇಳಲಿಲ್ಲ. ಆದಕಾರಣ ನಮ್ಮ ರೀತಿಯಾಗಿ ಉಪಯೋಗವೂ ಇಲ್ಲ. ಅಂತೂ ಬ್ರಹ್ಮನು ಕಾರಣನೆಂದು ಹೇಳದೆ ಪ್ರಧಾನಕ್ಕೆ ಶಬ್ದವಾಚ್ಯತ್ವವೇ ನಿಷೇಧಿಸಲ್ಪಡುತ್ತದೆ ಎನ್ನುವುದೂ ಯುಕ್ತವಲ್ಲ. (4) ಮತ್ತು ಈಕ್ಷತ್ಯಧಿಕರಣಾನಂತರದಲ್ಲಿಯೇ ಪ್ರಧಾನಕ್ಕೆ ಶಬ್ದವಾಚ್ಯತ್ವವನ್ನು ನಿಷೇಧಿಸಬೇಕಿತ್ತು. ೧. ೨. ೩. ಈ ಪಾದಗಳಲ್ಲಿ ಹೇಳದೆ ವ್ಯವಧಾನದಿಂದ ಇಲ್ಲಿ ನಿಷೇಧಿಸಲಿಕ್ಕೆ ಕಾರಣವನ್ನೇ ನಿರೂಪಣ ಮಾಡದಿರುವುದರಿಂದ ಇಲ್ಲಿ ನಿಷೇಧಿಸಿದ್ದು ಕೂಡಲಾರದು. (5) ಮತ್ತು ಪಾದಪ್ರತಿಪಾದ್ಯವಾದ ಅರ್ಥವು ಪಾದದಲ್ಲಿದ್ದ ಎಲ್ಲಾ ಸೂತ್ರಗಳಿಂದ ಪ್ರತಿಪಾದ್ಯವಾಗ

ಬೇಕು. ಈ ಪಾದದಲ್ಲಿ ಎಲ್ಲಾ ಸೂತ್ರಗಳಲ್ಲಿಯೂ ಪ್ರಧಾನಕ್ಕೆ ಶಬ್ದವಾಚ್ಯತ್ವವೇ ನಿಷೇಧಿಸಲ್ಪಡುತ್ತದೆ ಎನ್ನುವ ನಿಯಮವಿಲ್ಲ. ಏಕೆಂದರೆ 'ಕಾರಣತ್ವೇನ ಚಾಕಾಶಾದಿಷು' ಇತ್ಯಾದ್ಯಧಿಕರಣಗಳಲ್ಲಿ ಪ್ರಧಾನಕ್ಕೆ ಶಬ್ದವಾಚ್ಯತ್ವವನ್ನು ನಿಷೇಧಿಸಲಿಲ್ಲ. ಆದುದರಿಂದ ಪ್ರಧಾನವು ಶಬ್ದಬೋಧ್ಯವಲ್ಲವೆನ್ನುವುದು ಈ ಪಾದಾರ್ಥವಾಗಲಾರದು.

(6) ಹೀಗೆ ಸಾಮಾನ್ಯವಾಗಿ ಪಾದಾರ್ಥವನ್ನು ನಿರಾಕರಿಸಿ ಈಗ ಪ್ರಥಮಾಧಿಕರಣದ ಪರಕೀಯ ವ್ಯಾಖ್ಯಾನವನ್ನು ಇದರಿಂದಲೇ ನಿರಾಕರಿಸುತ್ತಾರೆ. ಹೇಗೆಂದರೆ— 'ಆನುಮಾನಿಕಂ' ಇತ್ಯಾದಿ ಸೂತ್ರವನ್ನು ಪರರು ಹೀಗೆ ವ್ಯಾಖ್ಯಾನಮಾಡಿರುತ್ತಾರೆ. ಅನುಮಾನನಿರೂಪಿತವಾದ ಪ್ರಧಾನವೂ ಕೂಡ ಕೆಲವು ಶಾಖೆಗಳಲ್ಲಿ ಶಬ್ದಪ್ರತಿಪಾದ್ಯವಾಗಿ ಉಪಲಬ್ಧವಾಗುತ್ತದೆ. ಕಾಠಕದಲ್ಲಿ **'ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ'** ಎಂದು ಹೇಳಲ್ಪಟ್ಟದೆ. ಅದರಲ್ಲಿ ಮಹತ್ ಅವ್ಯಕ್ತ ಪುರುಷಪದಗಳು ಯಾವ ನಾಮವುಳ್ಳವುಗಳಾಗಿ, ಯಾವ ಕ್ರಮವುಳ್ಳವುಗಳಾಗಿ, ಸಾಂಖ್ಯ ಸ್ಮೃತಿಪ್ರಸಿದ್ಧಗಳಾಗಿವೆಯೋ ಅವುಗಳನ್ನೇ ಇಲ್ಲಿ ಇಟ್ಟುಕೊಳ್ಳಬೇಕು. ಅವ್ಯಕ್ತವೆನ್ನುವ ಶಬ್ದದಿಂದ ರೂಢಿಯೋಗಗಳಿಂದ ಅಂದರೆ, (ಸಾಂಖ್ಯಸ್ಮೃತಿಪ್ರಸಿದ್ಧಿಯಿಂದ ರೂಢಿಯು, 'ನ ವ್ಯಕ್ತಮವ್ಯಕ್ತಂ' ಎಂದು ವ್ಯುತ್ಪತ್ತಿಯು ಕೂಡುವುದರಿಂದ ಯೋಗವು. ಇವುಗಳಿಂದ) ಪ್ರಧಾನವು ಪ್ರತಿಪಾದ್ಯವಾಗುತ್ತದೆ. ಹೀಗೆ ಅದು ಶಬ್ದಬೋಧ್ಯವಾಗುವುದರಿಂದ ಅಶಾಬ್ದತ್ವವು ಅಯುಕ್ತವೆಂದರೆ ಹೀಗೆ ಹೇಳಕೂಡದು. ಈ ಕಾಠಕವಾಕ್ಯವು ಪ್ರಧಾನಪರವಲ್ಲ. ಹೀಗೆ ಮಾಯಾವಾದಿಗಳು ವ್ಯಾಖ್ಯಾನಮಾಡಿರುವರು. (7) ಇಲ್ಲಿ ಪ್ರಧಾನವು ೧ ಕಾಠಕದಲ್ಲಿರತಕ್ಕ ಅವ್ಯಕ್ತಶಬ್ದದಿಂದ ವಾಚ್ಯವೇ ಆಗುವುದಿಲ್ಲವೆಂದು ನಿಷೇಧಿಸುತ್ತೀರೋ, ? ೨ ಅಥವಾ ಎಲ್ಲಿಯೂ ಯಾವ ಶಬ್ದದಿಂದಲೂ ವಾಚ್ಯವೇ ಆಗುವುದಿಲ್ಲವೆನ್ನುತ್ತೀರೋ? ೧ನೇದ್ದು ಕೂಡುವುದಿಲ್ಲ. ಕಾಠಕವಾಕ್ಯದಲ್ಲಿ ಪ್ರಧಾನಕ್ಕೆ ಅವ್ಯಕ್ತಶಬ್ದದಿಂದ ವಾಚ್ಯತ್ವವೇ ನಿಷೇಧಿಸಲ್ಪಡುತ್ತದೆ ಎನ್ನುವುದು ಕೂಡುವುದಿಲ್ಲ. ಅವ್ಯಕ್ತ ಶಬ್ದದಿಂದ ಮಾತ್ರ ವಾಚ್ಯತ್ವವನ್ನು ನಿಷೇಧಿಸಿರುವುದರಿಂದ ಅಶಾಬ್ದತ್ವವು ಸಿದ್ಧಿಸುವುದಿಲ್ಲ. ಅದು ಹೊರತಾದ ಶಬ್ದಾಂತರದಿಂದಲೂ ವಾಚ್ಯವಾಗಬಹುದು. ೨ ಎಲ್ಲಿಯೂ ಯಾವ ಶಬ್ದದಿಂದಲೂ ಹೇಳಲ್ಪಡುವುದಿಲ್ಲವೆನ್ನುವ ೨ನೇ ಕಲ್ಪದಲ್ಲಿಯೂ ಪರಮಮುಖ್ಯವೃತ್ತಿಯಿಂದ ಹೇಳಿಸಿಕೊಳ್ಳಲ್ಪಡುವುದಿಲ್ಲವೆನ್ನುವುದು ಇಷ್ಟವೇ. ಸರ್ವಥಾ ಶಬ್ದವಾಚ್ಯತ್ವವೇ ನಿಷೇಧಿಸಲ್ಪಡುತ್ತದೆ ಎನ್ನುವುದು ಕೂಡುವುದಿಲ್ಲ. ಎಲ್ಲಾ ವೇದ ಮೊದಲಾದವುಗಳಲ್ಲಿ ಪ್ರಧಾನವನ್ನು ಪ್ರತಿಪಾದಿಸಿರುತ್ತಾರೆ. (8) ವೇದದಲ್ಲಿ **'ವಿಕಾರಜನನೀಮಜ್ಞಾಮಷ್ಟರೂಪಾಮಜಾಂ ಧ್ರುವಾಂ। ಧ್ಯಾಯತೇ ಧ್ಯಾಸಿತಾ ತೇನ ತನ್ಯತೇ ಪ್ರೇರ್ಯತೇ ಪುನಃ'** ॥ ಇತ್ಯಾದಿಪ್ರಕಾರ ಆಥರ್ವಣಿಕರು (೩೨ ಉಪನಿಷನ್ಮಧ್ಯದಲ್ಲಿರುವ ಆಥರ್ವಣೋಪನಿಷತ್ತನ್ನು ಅಧ್ಯಯನಮಾಡುವವರು) ಪಠನಮಾಡುತ್ತಾರೆ ॥ ೪೫ ॥

ತ್ರಿಗುಣತ್ವಾದಿ ಲಕ್ಷಣಗಳಿಂದೊಡಗೂಡಿದ ಪ್ರಧಾನವನ್ನು ಪ್ರತಿಪಾದಿಸುವ ಇತಿಹಾಸ ವಾಕ್ಯವನ್ನು ಹೇಳುತ್ತಾರೆ—

**ಮೂ ॥ ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ॥ ೪೬ ॥**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥**
**(ಗೀತಾ ಅಧ್ಯಾ. ೧೪. ಶ್ಲೋ. ೫.)**
**ಇತ್ಯಾದಿವಾಕ್ಯರೂಪೇಣ ಯತ್ರಾರ್ಥೋ ನಾನ್ಯ ಇಷ್ಯತೇ ॥ ೪೭ ॥**

**ತೇಜೋಽಬನ್ನಾತ್ಮಕಂ ವಾಽಪಿ ಯದ್ಯುಪಾದಾನಮಿಷ್ಯತೇ ।**
**ಅನಾದ್ಯೇವಾಪರಾಧಃ ಕಃ ಪ್ರಧಾನಮಿತಿ ಚೋದಿತೇ ॥ ೪೮ ॥**

ಅ ॥ ಪ್ರಕೃತಿಸಂಭವಾಃ=ತ್ರಿಗುಣಾತ್ಮಕವಾದ ಜಡಪ್ರಕೃತಿಯುದ್ದೆಶೆಯಿಂದ ಹುಟ್ಟಿರುವ ಅಂದರೆ, ಪ್ರಕೃತಿಯ ಅಂಶಭೂತಗಳಾದ, ಸತ್ವಂ ರಜಃ ತಮಃ ಇತಿ ಗುಣಾಃ=ಸತ್ವಗುಣ-ರಜೋಗುಣ-ತಮೋಗುಣ ಎನ್ನುವ ಗುಣಗಳು, ಹಾಗೆಯೇ ಚಿತ್ಪ್ರಕೃತಿಯುದ್ದೆಶೆಯಿಂದ ಸೃಷ್ಟಿ ಕಾಲದಲ್ಲಿ ವಿಭಜ್ಯಮಾನಗಳಾದ ಸತ್ವ-ರಜ-ಸ್ತಮಃ ಶಬ್ದಿತಗಳಾದ ಶ್ರೀ ಭೂ ದುರ್ಗಾಖ್ಯಗಳಾದ ಗುಣಗಳು ಮೂರು ಗುಣಗಳಿಗೆ ಅಭಿಮಾನಿಯರಾದ ಮೂರು ದೇವಿಯರೂ, ಹೇ ಮಹಾ ಬಾಹೋ=ಎಲೋ ಅರ್ಜುನನೇ, ದೇಹೇ=ಶರೀರದಲ್ಲಿರತಕ್ಕ, ಅವ್ಯಯಂ=ಸ್ವರೂಪತಃ ನಾಶ ವಿಲ್ಲದಿರುವ, ದೇಹಿನಂ=ಜೀವರ ಸಮುದಾಯವನ್ನು, ನಿಬಧ್ನಂತಿ = ಕಟ್ಟುತ್ತವೆ. (ಅಂದರೆ, ಸತ್ವಾಭಿಮಾನಿನಿಯಾದ ಶ್ರೀ ದೇವಿಯು ದೇವತೆಗಳನ್ನು ಬಂಧಿಸತಕ್ಕವಳು. ರಜೋಽಭಿಮಾನಿನಿ ಯಾದ ಭೂದೇವಿಯು ಮನುಷ್ಯರನ್ನು ಬಂಧಿಸತಕ್ಕವಳು, ತಮೋಽಭಿಮಾನಿನಿಯಾದ ದುರ್ಗಾ ದೇವಿಯು ದೈತ್ಯರನ್ನು ಬಂಧಿಸತಕ್ಕವಳು, ಇಂತಹ ವಿಶೇಷವನ್ನು ತಿಳಿಯಬೇಕು.) ಇತ್ಯಾದಿ ವಾಕ್ಯರೂಪೇಣ = ಇದುಮೊದಲಾದ **'ಭೂಮಿರಾಪೋಽನಲೋವಾಯುಃ ಖಂ ಮನೋ ಬುದ್ಧಿರೇವ ಚ'** (ಗೀ. ಅಧ್ಯಾ. ೭ ಶ್ಲೋ. ೪) ಇತ್ಯಾದಿ ವಾಕ್ಯಗಳಿಂದ ಪ್ರತಿಪಾದಿಸಲ್ಪಡತಕ್ಕ ತ್ರಿಗುಣತ್ವಾದಿರೂಪದಿಂದ ಯುಕ್ತವಾದ ಪ್ರಧಾನಕ್ಕೆ ಸಂಗ್ರಹವಿರುವುದರಿಂದ. ಯತ್ರ=ಯಾವ ವಾಕ್ಯದಲ್ಲಿ, ಯದಿ=ಯಾವ ಪಕ್ಷದಲ್ಲಿ, ಅನ್ಯಃ ಅರ್ಥಃ=ಅವ್ಯಕ್ತ ಶಬ್ದಕ್ಕೆ ಪರಬ್ರಹ್ಮರೂಪವಾದ ಬೇರೆ ಅರ್ಥವು, ನೇಷ್ಯತೇ=ಅಂಗೀಕರಿಸಲ್ಪಡುವುದಿಲ್ಲವೋ, ಅಪಿ ತು=ಮತ್ತೆ, ತೇಜೋಬನ್ನಾ ತ್ಮಕಂ=ತೇಜಸ್ಸು ಜಲ ಪೃಥಿವ್ಯಾತ್ಮಕವಾದ, ಉಪಾದಾನಂ=ಶರೀರ ಮೂಲೋಪಾದಾನವಾದ, ಅನಾದ್ಯೇವ=ಅನಾದಿಭೂತ ಸೂಕ್ಷ್ಮವೇ, ಇಷ್ಯತೇ=ಅಂಗೀಕರಿಸಲ್ಪಡುತ್ತದೋ, (ಹಾಗಾದರೆ) ಪ್ರಧಾನಮಿತಿ=ಅವ್ಯಕ್ತಶಬ್ದವಾಚ್ಯವಾದುದು ಪ್ರಧಾನವೆಂದು, ಚೋದಿತೇ = ಹೇಳಿದಪಕ್ಷದಲ್ಲಿ, ಕಃ ಅಪರಾಧಃ=ಯಾವ ದೋಷವಿದೆ?

**ತಾ ॥ ನ್ಯಾಯಸುಧಾ—** (1) 'ಅವ್ಯಕ್ತಾತ್ಪುರುಷಃ ಪರಃ' ಎಂದು ಅವ್ಯಕ್ತ ಶಬ್ದ ವಾಚ್ಯವಾದುದು ಪ್ರಧಾನವಲ್ಲವಾದರೆ ಅವ್ಯಕ್ತಶಬ್ದವಾಚ್ಯವಾದುದನ್ನು ಹೇಳಬೇಕು ಎಂದರೆ— **ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ"** (ಕಾಠ. ಉ. ಪು. ೫೭) ಎಂದು ಹೇಳಿದ ಪ್ರಕಾರ ಅವ್ಯಕ್ತಶಬ್ದದಿಂದ ಶರೀರವು ಹೇಳಲ್ಪಡುತ್ತದೆ. (2) ಯದ್ಯಪಿ ಈ ಶರೀರವು ವ್ಯಕ್ತವಾದುದು ಆದಾಗ್ಯೂ ಈ ಶರೀರಕ್ಕೆ ಮೂಲಭೂತವಾದ ಉಪಾದಾನ ಕಾರಣವಾದ ಪೃಥಿ ವ್ಯಪ್‌ತೇಜೋರೂಪವಾದ ಭೂತಸೂಕ್ಷ್ಮವು ಅವ್ಯಕ್ತವು. ಅನಾದಿಯಾದ ಆ ಸೂಕ್ಷ್ಮವು ಅವ್ಯಕ್ತ ವಾಗಲು ಯೋಗ್ಯವಾಗಿದೆ. (3) ಕಾರಣವಾದ ಭೂತಸೂಕ್ಷ್ಮವು ಅವ್ಯಕ್ತವಾದರೆ ಕಾರ್ಯ ವಾದ ಶರೀರಕ್ಕೆ ಅವ್ಯಕ್ತತ್ವವು ಹೇಗೆಂದರೆ—'ಗೋಭಿಃ ಶ್ರೀಣೀತ ಮತ್ಸರಂ' ಎನ್ನುವ ಋಕ್ಕಿನಲ್ಲಿ ಗೋವಿನ ಕಾರ್ಯಗಳಾದ ಕ್ಷೀರಗಳಿಂದ ಸೋಮರಸವನ್ನು ಮಿಶ್ರೀಕರಿಸತಕ್ಕುದು ಎಂದು ಗೋ ಕಾರ್ಯವಾದ ಕ್ಷೀರದಲ್ಲಿ ಹೇಗೆ ಕಾರಣವನ್ನು ಹೇಳುವ ಗೋ ಪದಕ್ಕೆ ಪ್ರಯೋಗವಿದೆಯೋ ಹಾಗೆಯೇ ಪೃಥಿವಿ-ಅಪ್-ತೇಜಸ್ಸು ಎನ್ನುವ ಅವ್ಯಕ್ತದ ಕಾರ್ಯವಾದ ಶರೀರದಲ್ಲಿ ಅವ್ಯಕ್ತಶಬ್ದ ಪ್ರಯೋಗವು ಕೂಡುತ್ತದೆ. 'ಅಂತೂ ಮಹತಃ ಪರಮವ್ಯಕ್ತಂ' ಎನ್ನುವ ಶ್ರುತಿಯಲ್ಲಿದ್ದ ಅವ್ಯಕ್ತ ಶಬ್ದದಿಂದ ಪ್ರಧಾನವು ಹೇಳಿಸಿಕೊಳ್ಳಲ್ಪಡುವುದಿಲ್ಲ. ಮತ್ತೆ ಶರೀರವೇ ಹೇಳಿಸಿಕೊಳ್ಳಲ್ಪಡು ತ್ತದೆ ಎಂದರೆ— ಈ ವಿಷಯದಲ್ಲಿ ನಾವು ಹೇಗೆ ಕೇಳುವೆವು, ಈ ಶ್ರುತಿಯಲ್ಲಿ ಅವ್ಯಕ್ತಶಬ್ದದಿಂದ

ಶರೀರವೇ ಹೇಳಿಸಿಕೊಳ್ಳಲ್ಪಡುತ್ತದೆ. ಅವ್ಯಕ್ತ ಶಬ್ದವು ಅಲ್ಲಿ ಅಮುಖ್ಯವು, ಶರೀರಕ್ಕೆ ಮೂಲೋಪಾದಾನವಾದ ಪೃಥಿವ್ಯಪ್ತೇಜೋವಾಯುರೂಪವಾದ,ಅನಾದಿಯಾದ ಭೂತಸೂಕ್ಷ್ಮವು ಅವ್ಯಕ್ತವಾಗಿದೆ ಎಂದೋ, (೨) ಅಥವಾ ಭೂತಸೂಕ್ಷ್ಮವೇ ಅವ್ಯಕ್ತಶಬ್ದವಾಚ್ಯವು. ಶರೀರಶಬ್ದವು ಭೂತಸೂಕ್ಷ್ಮದಲ್ಲಿ ಔಪಚಾರಿಕವು. ಶರೀರವು ಭೂತಸೂಕ್ಷ್ಮದ ಕಾರ್ಯವಾಗಿದೆ ಎಂದೋ, ಈ ಎರಡು ಕಲ್ಪಗಳಲ್ಲಿಯೂ 'ಯತ್ರಾರ್ಥೋ ನಾನ್ಯದಿಷ್ಯತೇ' ಎನ್ನುವುದರಿಂದ ದೋಷವನ್ನು ಹೇಳಿದರು. (4) (೧) ಮುಖ್ಯವಾಗಿ ಅವ್ಯಕ್ತಶಬ್ದವಾಚ್ಯವಾದ ಭೂತಸೂಕ್ಷ್ಮದ ಕಾರ್ಯವಾಗಿ, ಅಮುಖ್ಯವಾಗಿ, ಅವ್ಯಕ್ತಶಬ್ದಪ್ರತಿಪಾದ್ಯವು ಶರೀರವೇ ಎನ್ನುವ ಪ್ರಥಮ ಪಕ್ಷದಲ್ಲಿ ಅವ್ಯಕ್ತಶಬ್ದ ಮುಖ್ಯವಾಚ್ಯವಾದುದು ಶರೀರ ಕಾರಣವಾದ ಭೂತಸೂಕ್ಷ್ಮವು ಪ್ರಕೃತ ಅವ್ಯಕ್ತಶಬ್ದದಿಂದ ವಿವಕ್ಷಿಸಲ್ಪಡದಿದ್ದರೂ ಸ್ವರೂಪತಃ ಅಂಗೀಕೃತವಾಗಿದೆ. (೨) ಭೂತಸೂಕ್ಷ್ಮವೇ ಅವ್ಯಕ್ತಶಬ್ದವಾಚ್ಯವು ಎನ್ನುವ ಎರಡನೇ ಕಲ್ಪದಲ್ಲಿ ಅವ್ಯಕ್ತಶಬ್ದವಾಚ್ಯವಾಗಿದೆ ಎಂದು ಒಪ್ಪಿದಹಾಗಾಯಿತು. ಅಂದರೆ-ಅವ್ಯಕ್ತ ಶಬ್ದಕ್ಕೆ ಬ್ರಹ್ಮನೆನ್ನುವ ಅರ್ಥವನ್ನು ಸರ್ವಥಾ ನೀನು (ಮಾಯಾವಾದಿಯು) ಹೇಳುವುದಿಲ್ಲ. ಮತ್ತೆ ಅವ್ಯಕ್ತಶಬ್ದವು ಭೂತಸೂಕ್ಷ್ಮಕಾರ್ಯವಾದ ಶರೀರವನ್ನಾಗಲೀ, ಭೂತಸೂಕ್ಷ್ಮವನ್ನಾಗಲೀ ಹೇಳುತ್ತದೆ. ಸಾಂಖ್ಯನು ಪ್ರಧಾನವಾಚಕವೆನ್ನುತ್ತಾನೆ. ಅವ್ಯಕ್ತವು ಕಾರಣವೆಂದಭಿಪ್ರೇತವಾದರೆ ಆಗ ಹಿಂದಿನ ಎರಡು ಪಕ್ಷಗಳೂ (ಮಾಯಾವಾದಿ, ಸಾಂಖ್ಯ ಇವರೀರ್ವರ ಪಕ್ಷಗಳೂ) ಬ್ರಹ್ಮನೇ ಕಾರಣನೆನ್ನುವ ವಾದಕ್ಕೆ ಪ್ರತಿಪಕ್ಷಗಳೇ ಆಗುತ್ತವೆ. ಹೀಗೆ ಇರಲು ಶರೀರವೆಂದಂಗೀಕರಿಸಿ ಪ್ರಧಾನವನ್ನು ನಿರಾಕರಿಸುವುದು ವ್ಯರ್ಥವೇ. ಅವ್ಯಕ್ತವು ಕಾರಣವೆಂದು ವಿವಕ್ಷಾಮಾಡದಿದ್ದರೆ ಎರಡು ಪಕ್ಷಗಳೂ ಬ್ರಹ್ಮನೇ ಕಾರಣನೆನ್ನುವ ವಾದಕ್ಕೆ ವಿರುದ್ಧಗಳಾಗದಿರುವುದರಿಂದ ಒಂದನ್ನು ಸ್ವೀಕಾರಮಾಡಿ, ಒಂದನ್ನು ನಿರಾಕರಿಸುವುದಕ್ಕೆ ಪ್ರಯೋಜನವಿಲ್ಲ. ಅಸಂಗತವೂ ಆಗಿರುತ್ತವೆ. (5) ಅಥವಾ ಅನಾದಿಯಾದ, ಉಪಾದಾನಕಾರಣವಾದ, ಜಡಭೂತವಾದ ಭೂತಸೂಕ್ಷ್ಮವನ್ನು ಅವ್ಯಕ್ತಶಬ್ದವಾಚ್ಯವೆಂದಂಗೀಕರಿಸಿದರೆ ಪ್ರಧಾನವಲ್ಲವೆನ್ನುವ ವಚನವು ವ್ಯರ್ಥವಾಯಿತು. ಪ್ರಧಾನಕ್ಕೆ ಅದೇ ಲಕ್ಷಣವು. ಅಂದರೆ, ಅನಾದಿತ್ವ ಉಪಾದಾನತ್ವ-ಜಡತ್ವ-ಭೂತಸೂಕ್ಷ್ಮತ್ವರೂಪಗಳಾದ ಹಿಂದೆ ಹೇಳಿದ ಲಕ್ಷಣಗಳಿಂದಲೇ ಯುಕ್ತವಾಗಿದೆ. ಸಾಂಖ್ಯನು ಪ್ರಧಾನವು ಇಂತಹ ಲಕ್ಷಣಗಳಿಂದ ಯುಕ್ತವಾದುದೆನ್ನುತ್ತಾನೆ. ನೀನಾದರೂ (ಮಾಯಾವಾದಿಯಾದರೂ) ಪೃಥಿವ್ಯಪ್ತೇಜಸ್ಸುಗಳೇ ಈ ಲಕ್ಷಣಗಳಿಂದೊಡಗೂಡಿದವುಗಳು ಎನ್ನುತ್ತಿ ಎಂದು ನಾಮದಲ್ಲಿಯೇ ವಿವಾದವು. ಅರ್ಥದಲ್ಲಿ ವಿವಾದವಿಲ್ಲ. (6) ಹಾಗಾದರೆ, 'ಅನಾದ್ಯೇವಾಪರಾಧಃ ಕಃ ಪ್ರಧಾನಮಿತಿ ಚೋದಿತೇ' ಎನ್ನುವ ನಿಮ್ಮ ದೂಷಣವನ್ನೇ ಸೂತ್ರಕಾರರು ಆಶಂಕಿಸಿಕೊಂಡು 'ತದಧೀನತ್ವಾದರ್ಥವತ್' ಎನ್ನುವಲ್ಲಿ ಪರಿಹರಿಸುತ್ತಾರೆ. ನಾವು ಸ್ವತಂತ್ರವಾದ ಪೃಥಿವ್ಯಪ್ತೇಜೋರೂಪವಾದ ಸ್ವತಂತ್ರಕಾರಣವನ್ನು ಅಂಗೀಕರಿಸಿದ ಪಕ್ಷದಲ್ಲಿ 'ಅನಾದ್ಯೇವ' ಎಂದು ನೀವು ಹೇಳಿದ ದೂಷಣವನ್ನು ಅಂಗೀಕರಿಸಬಹುದಿತ್ತು. ಹೀಗೆ ಅಲ್ಲ. ಆ ಪ್ರಧಾನವೂ ಬ್ರಹ್ಮನ ಅಧೀನವೆಂದು ನಾವು ಅಂಗೀಕರಿಸಿರುವೆವು, ಸಾಂಖ್ಯನಾದರೂ ಹೀಗೆ ಅಂಗೀಕರಿಸಲಿಲ್ಲ. ಆದಕಾರಣ ಸ್ವತಂತ್ರವಾದ ಪ್ರಧಾನವೇ ಕಾರಣವು ಎನ್ನುವ ವಾದಕ್ಕೆ ಸ್ವತಂತ್ರನಾದ ಬ್ರಹ್ಮನೇ ಕಾರಣನು ಎನ್ನುವ ವಾದದಿಂದ ವಿರೋಧವಿರುವುದರಿಂದ ಅವಶ್ಯವಾಗಿ ಇದನ್ನು ದೂಷಿಸಬೇಕು. (7) ಹಾಗಾದರೆ, ಕಾರಣನೆಂದಂಗೀಕೃತನಾದ ಬ್ರಹ್ಮನಿಂದಲೇ ಸರ್ವವೂ ಉಪಪನ್ನವಾಗುವಾಗ ಬ್ರಹ್ಮಾಧೀನಗಳಾದ ಪೃಥಿವ್ಯಪ್ತೇಜಸ್ಸುಗಳನ್ನು ಅಂಗೀಕರಿಸುವುದು ಏತಕ್ಕೆ ಎಂದರೆ, ಬ್ರಹ್ಮಾಧೀನವಾದ ಪೃಥಿವ್ಯಪ್ತೇಜೋರೂಪವಾದ ಕಾರಣವನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. ಪೃಥಿವ್ಯಪ್ತೇಜೋರೂಪವಾದ ಕಾರಣವಿಲ್ಲದೆ ಬ್ರಹ್ಮನಿಗೆ ಜಗತ್ಕಾರಣತ್ವವೇ ಕೂಡುವುದಿಲ್ಲ.

ಅಂದರೆ, ಬ್ರಹ್ಮನಿಗೆ ಜಗತ್ತನ್ನು ಸೃಷ್ಟಿಸಬೇಕಾದರೆ ಉಪಾದಾನಕಾರಣವು ಆವಶ್ಯಕವೇ, ಎಂದು ಮಾಯಾವಾದಿಗಳು ಸಾಂಖ್ಯನನ್ನು ನಿರಾಕರಿಸಿದರೆ — ನಾವು (ಸಿದ್ಧಾಂತಿಗಳು) ಹೀಗೆ ಸಮಾಧಾನಹೇಳುತ್ತೇವೆ. ಹೀಗೆ ಸಾಂಖ್ಯನನ್ನು ನಿರಾಕರಿಸಿದುದರಿಂದ ಏನು ಹೇಳಿದಂತೆ ಆಯಿತು? ಪ್ರಧಾನವಿವೆ ಎನ್ನುವುದು ನಿಶ್ಚಿತವೇ. ಪ್ರಧಾನದ ಧರ್ಮಗಳಾದ ಸ್ವಾತಂತ್ರ್ಯಾದಿಗಳಲ್ಲಿ ಮಾತ್ರ ವಿವಾದವು. ಹೀಗಾದರೆ ಸಾಂಖ್ಯನು ಪ್ರಧಾನವು ಸ್ವತಂತ್ರವೆಂದು ಹೇಳಬೇಕಿತ್ತು. ಮಾಯಾವಾದಿಯು ಪ್ರಧಾನಕ್ಕೆ ಪಾರತಂತ್ರ್ಯಾದಿಗಳನ್ನು ವ್ಯುತ್ಪಾದಿಸಬೇಕು. ಅವ್ಯಕ್ತಾದಿಶಬ್ದಗಳಿಗೆ ಪ್ರಧಾನಪರತ್ವವನ್ನು ನಿರಾಕರಿಸುವ ಪ್ರಯತ್ನದಿಂದ ಏನು ಪ್ರಯೋಜನವು? 'ಅವ್ಯಕ್ತಾತ್' ಎನ್ನುವ ವಾಕ್ಯದಲ್ಲಿ ಪ್ರಧಾನಕ್ಕೆ ಸ್ವಾತಂತ್ರ್ಯಾದಿಗಳು ತೋರುವುದೇ ಇಲ್ಲವು. ಮತ್ತೆ 'ಅವ್ಯಕ್ತಾತ್ಪುರುಷಃ ಪರಃ' ಎಂದು ಅವ್ಯಕ್ತಕ್ಕೆ ಪುರುಷಾಧೀನತ್ವವೇ ತೋರುತ್ತದೆ. ಅಂತೂ ನಿರ್ದಲವಾದ ಪೂರ್ವಪಕ್ಷವೇ ಕೂಡುವುದಿಲ್ಲ. ಈ ಅಭಿಪ್ರಾಯದಿಂದಲೇ ಪ್ರಧಾನವು ಇಲ್ಲಿ ಹೇಳಲ್ಪಡುತ್ತದೆಂದು ಹೇಳಿದರೆ ಏನು ದೋಷವಿದೆ ಎಂದು ಉಕ್ತವಾಯಿತು? ಮತ್ತೆ ಸ್ವತಂತ್ರವೆಂದು ಹೇಳಿದರೆ ಮಾತ್ರ ದೋಷವಿದೆ. ಹಾಗೆ ಈ ವಾಕ್ಯದಲ್ಲಿ ಹೇಳಲ್ಪಡುವುದಿಲ್ಲ ॥ ೪೬ ॥ ೪೭ ॥ ೪೮ ॥

(1) 'ಚಮಸವದವಿಶೇಷಾತ್' ಇದುಮೊದಲಾದ ಅಧಿಕರಣಗಳೂ ಪ್ರಧಾನವು ಶಬ್ದಬೋಧ್ಯವಲ್ಲವೆಂದು ಪ್ರತಿಪಾದಿಸುತ್ತವೆ ಎಂದು ಕೆಲವರು ವ್ಯಾಖ್ಯಾನ ಮಾಡುತ್ತಾರೆ. ಹೇಗೆಂದರೆ- **'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ। ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ'**(ಶ್ವೇತಾಶ್ವತರೋಪನಿಷತ್ತು ಅಧ್ಯಾ.೪)ಎನ್ನುವ ಮಂತ್ರದಲ್ಲಿ ಪ್ರಧಾನವನ್ನು ಪ್ರತಿಪಾದಿಸುವುದರಿಂದ ಪ್ರಧಾನವು ಶಬ್ದಾಬೋಧ್ಯವು ಹೇಗೆ ಆಗುವುದು ಎಂದಾಶಂಕಿಸಿ 'ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ಎನ್ನುವ ಮಂತ್ರದಲ್ಲಿ ಸ್ವತಂತ್ರವಾಗಿ ಈ ಚಮಸಕ್ಕೆ ಇದು ನಾಮಧೇಯವು ಎಂದು ನಿರೂಪಿಸಲಿಕ್ಕೆ ಧರ್ಮವಿಶೇಷನಿರ್ಧಾರಕವಾದ ವಿಶೇಷವು ಶ್ರುತವಾಗದಿರುವುದರಿಂದ ಹೇಗೆ ಶಕ್ಯವಾಗುವುದಿಲ್ಲವೋ, ಊರ್ಧ್ವಬುಧ್ನತ್ವಾದಿಗಳು ಎಲ್ಲಾ ಕಡೆಗಳಲ್ಲಿಯೂ ಹೇಗೂ ಯೋಜಿಸಲಿಕ್ಕೆ ಶಕ್ಯಗಳಾಗುವವು. ಅದೇಪ್ರಕಾರ 'ಅಜಾಮೇಕಾಂ' ಎನ್ನುವ ಶ್ರುತಿಯಲ್ಲಿಯೂ ನಿರ್ಧಾರಕವಿಶೇಷವಿಲ್ಲದಿರುವುದರಿಂದ ಪ್ರಧಾನವೇ ಪ್ರತಿಪಾದ್ಯವೆಂದು ನಿರ್ಧರಿಸಲಿಕ್ಕೆ ಶಕ್ಯವಾಗುವುದಿಲ್ಲವೆಂದು ಅದ್ವೈತಿಗಳು ಸಮಾಧಾನವನ್ನು ಹೇಳಿರುವರು. ಇದು ಅಯುಕ್ತವು. **'ಗೌರನಾದ್ಯಂತವತೀ ಸಾ ಜನಿತ್ರೀ ಭೂತಭಾವಿನೀ। ಸಿತಾ ಸಿತಾ ಚ ರಕ್ತಾ ಚ ಸರ್ವಕಾಮದುಘಾ ವಿಭೋಃ'** ಇದುಮೊದಲಾದ ಶ್ರುತಿಗಳ ಸಮಾಖ್ಯೆಯಿಂದ 'ಅಜಾಮೇಕಾಂ' ಇತ್ಯಾದಿ ವಾಕ್ಯಪ್ರತಿಪಾದ್ಯವಾದ ಅಜಾ ಶಬ್ದವಾಚ್ಯವಾದುದು ಪ್ರಧಾನವೆಂದು ನಿರ್ಣಯವು ಆಗಬಹುದು. ಮತ್ತು ಇಲ್ಲಿ ಅಜಾ ಶಬ್ದವು ರೂಢಾರ್ಥವಾಗಿರುವುದರಿಂದ ಅಜಾ ಶಬ್ದದಿಂದ ಹೆಣ್ಣು ಆಡನ್ನು ಸ್ವೀಕರಿಸಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ, ಅಧ್ಯಾತ್ಮವಿದ್ಯಾಪ್ರಕರಣವಾಗಿದೆ. ಅಜಾ ಶಬ್ದದಿಂದ ಪರಬ್ರಹ್ಮನನ್ನು ಸ್ವೀಕರಿಸಲಿಕ್ಕೂ ಸಾಧ್ಯವಿಲ್ಲ. ಬ್ರಹ್ಮನು ನಿರ್ಗುಣನಾಗಿರುವುದರಿಂದ ಲೋಹಿತಾದಿರೂಪಗಳಿವೆ ಎನ್ನುವುದೂ ಕೂಡಲಾರದು. ಜುಷಮಾಣಪದದಿಂದಲೂ, ಭುಕ್ತಭೋಗಪದದಿಂದಲೂ ಹೇಳಲ್ಪಟ್ಟ ಭೋಗ್ಯತ್ವವೂ ಕೂಡುವುದಿಲ್ಲ. ಭೋಗ್ಯತ್ವವು ಕೂಡದಿರುವುದರಿಂದಲೇ ಜೀವನೂ ಅಜಶಬ್ದದಿಂದ ವಾಚ್ಯನೆಂದು ಸ್ವೀಕರಿಸಲಿಕ್ಕೆ ಯೋಗ್ಯನಲ್ಲ. ಭೋಕ್ತನೆಂದು ಜುಷಮಾಣಃ ಎನ್ನುವ ಪದದಿಂದ ಪ್ರತ್ಯೇಕವಾಗಿ ಜೀವನನ್ನು ಹೇಳಿಯದೆ. ಬೇರೆ ಯಾವುದೊಂದೂ ಅಚೇತನವು ಅಜಾಶಬ್ದವಾಚ್ಯವೆನ್ನುವುದೂ ಕೂಡಲಾರದು. ಆದಕಾರಣ ಪ್ರಕೃತಿಯೇ ಉತ್ಪತ್ತಿಯಿಲ್ಲದಿರುವುದರಿಂದ ಅಜಾಶಬ್ದವಾಚ್ಯವು. ಸತ್ವ-ರಜ-ಸ್ತಮೋಗುಣರೂಪವಾಗಿರುವುದರಿಂದ **ಲೋಹಿತ-**

ಶುಕ್ಲ-ಕೃಷ್ಣ ರೂಪಗಳೂ ಕೂಡಬಹುದು. ರಜೋಗುಣಮೊದಲಾದವುಗಳಿಗೆ ಲೋಹಿತಾದಿ ರೂಪಗಳಿವೆ ಎನ್ನುವುದು ಆಗಮಗಳಲ್ಲಿ ಪ್ರಸಿದ್ಧವೂ ಆಗಿದೆ. ಜೀವನೂ ಪ್ರಕೃತಿಸಂಬದ್ಧನಾಗಿ ಸಂಸಾರದಲ್ಲಿರುತ್ತಾನೆ. ಪ್ರಕೃತಿಸಂಬಂಧವನ್ನು ಬಿಟ್ಟವನು ಮುಕ್ತನಾಗುತ್ತಾನೆನ್ನುವುದು ಸುಪ್ರಸಿದ್ಧವಾಗಿದೆ. ಹೀಗೆ ಅಲ್ಲವಾದರೆ ಮಂತ್ರಕ್ಕೆ ವಿಷಯುವೇ ಇಲ್ಲವೆಂದಾಗಬೇಕಾಗುವುದು.

(2) ಹೀಗೆ ಸಿದ್ಧಾಂತಿಗಳು ಹೇಳಿದರೆ, ಅದ್ವೈತಿಗಳು ಈ ಮಂತ್ರಕ್ಕೆ ನಿರ್ವಿಷಯತ್ವವು ಬರುವುದಿಲ್ಲವೆನ್ನುತ್ತಾರೆ. ಏಕೆಂದರೆ— ಸೂತ್ರಕಾರರೇ 'ಜ್ಯೋತಿರುಪಕ್ರಮಾ' ಎಂದು ಹೇಳಿರುವರು. ಅಂದರೆ, ಈ ಮಂತ್ರದಲ್ಲಿ ಪ್ರತಿಪಾದಿಸಲ್ಪಟ್ಟ ಅಜಾಶಬ್ದವಾಚ್ಯವಾದುದು ಜ್ಯೋತಿರುಪಕ್ರಮಾ=ತೇಜಸ್ಸು ಜಲ ಪೃಥಿವೀರೂಪವಾದುದು. **'ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯ'** ಎಂದು ತೇಜಸ್ಸು-ಜಲ-ಪೃಥಿವಿಗಳನ್ನು ಲೋಹಿತಾದಿ ರೂಪಗಳುಳ್ಳವುಗಳನ್ನಾಗಿ ಕೆಲವು ಶಾಖಿಗಳು ಹೇಳುತ್ತಾರೆ. ಅದರ ಸಮಾಖ್ಯೆಯಿಂದ ಈ ಮಂತ್ರದಲ್ಲಿಯೂ ಅಜಾ ಶಬ್ದವಾಚ್ಯವಾದುದು ಪೃಥಿವ್ಯಪ್ತೇಜೋರೂಪವಾದುದೇ ಎಂದೇ ತಿಳಿಯತಕ್ಕದು. ಜರಾಯುಜ-ಅಂಡಜ-ಸ್ವೇದಜ-ಉದ್ಭಿಜ್ಜರೂಪಗಳಾದ ನಾಲ್ಕು ವಿಧ ಪ್ರಾಣಿಗಳ ಸಮೂಹಕ್ಕೆ ಉಪಾದಾನಭೂತವಾಗಿರುವುದರಿಂದ ಅಜಾ ಶಬ್ದವಾಚ್ಯವಾದುದಕ್ಕೆ ಅನೇಕ ಪ್ರಜೋತ್ಪಾದಕತ್ವವೂ ಜಡವಾಗಿರುವುದರಿಂದ ಭೋಗ್ಯತ್ವವೂ ಕೂಡ ಕೂಡುತ್ತದೆ ಎಂದು ಮಾಯಾವಾದಿಗಳು ಹೇಳುತ್ತಾರೆ. ಈ ವಿಷಯದಲ್ಲಿ ದೂಷಣವನ್ನು ಹೇಳುತ್ತಾರೆ.—

**ಮೂ ॥ ಅಜಾಮೇಕಾಮಿತಿ ಪ್ರಾಹ ಶ್ರುತಿರೇತಾಂ ಯದಾ ತದಾ ।**
**ಕೋ ದೋಷಃ ಸರ್ವಥೈವಾಸ್ತಿ ಪರಿಣಾಮಿ ಜಡಂ ಯದಿ ॥ ೪೯ ॥**

**ಅ ॥** ಯದಿ=ಯಾವಪಕ್ಷದಲ್ಲಿ, ಈ ಮಂತ್ರದಲ್ಲಿ, ಪರಿಣಾಮಿ ಜಡಂ=ತೇಜಸ್ಸು ಜಲ ಪೃಥಿವೀರೂಪವಾದುದು ಪ್ರತಿಪಾದ್ಯವೆಂದು ಅಂಗೀಕರಿಸಲ್ಪಡುತ್ತದೋ, ಹಾಗಾದರೆ, ಅಜಾಮೇಕಾಮಿತಿ ಶ್ರುತಿಃ ='ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಎನ್ನುವ ಶ್ರುತಿಯು, ಏತಾಂ=ಪ್ರಕೃತಿಯುನ್ನು, ಪ್ರಾಹ ಇತಿ ಯದಾ=ಹೇಳುತ್ತದೆ ಎನ್ನುವ ಪಕ್ಷವಾದರೆ, ತದಾ=ಆವಾಗ, ಸರ್ವಥೈವ=ಅಪರಿಹಾರ್ಯವೇ ಆದ, ಕೋ ದೋಷಃ=ಯಾವದೋಷವು, ಅಸ್ತಿ=ಇದೆ, (ಯಾವುದೂ ಇಲ್ಲ). ಎಲ್ಲಾ ದೋಷಗಳೂ ನಮ್ಮಿಂದ ಪರಿಹರಿಸಲಿಕ್ಕೆ ಶಕ್ಯಗಳೇ ಆಗಿವೆ.

**ತಾ ॥ ನ್ಯಾಯಸುಧಾ**—(1) ಈ ವಾಕ್ಯದಲ್ಲಿ ಅಜಾಶಬ್ದವಾಚ್ಯವಾದುದು ಜಗತ್ಕಾರಣವೆಂದು ತೋರುತ್ತದೆ. ಅಜಾ ಶಬ್ದವಾಚ್ಯವಾದುದನ್ನು ಬ್ರಹ್ಮವಾದಿಯು ಬ್ರಹ್ಮನೆಂದು ಸಮರ್ಥಿಸಬೇಕು. ತೇಜೋಬನ್ನರೂಪವೆಂದು ಸಮರ್ಥಿಸಿದರೆ ಪ್ರಧಾನರೂಪವೆಂದೂ ಏಕೆ ಅಂಗೀಕರಿಸಬಾರದು? (2) ಪ್ರಧಾನರೂಪವೆಂದಂಗೀಕರಿಸಿದರೆ ಕಾರಣತ್ವರೂಪ ಬ್ರಹ್ಮಲಕ್ಷಣಕ್ಕೆ ಪ್ರಧಾನದಲ್ಲಿ ಅತಿವ್ಯಾಪ್ತಿಯು ಬರಬಹುದು ಎಂದರೆ ಅಜಾಶಬ್ದವಾಚ್ಯವಾದುದಕ್ಕೆ ತೇಜೋಬನ್ನಾತ್ಮಕತ್ವಪಕ್ಷದಲ್ಲಿಯೂ ಅತಿವ್ಯಾಪ್ತಿಯು ಸಮವೇ ಆಗಿದೆ. (3) ಹಾಗಾದರೆ ತೇಜೋಬನ್ನಗಳೂ ಪರಮೇಶ್ವರನ ಅಧೀನಗಳು. ಸ್ವತಂತ್ರವಾಗಿ ಜಗತ್ಕಾರಣತ್ವವೇ ಬ್ರಹ್ಮಲಕ್ಷಣವೆಂದು ವಿವಕ್ಷಿತವಾಗಿರುವ ಪ್ರಯುಕ್ತ ಆ ಲಕ್ಷಣವು ತೇಜೋಬನ್ನಗಳಲ್ಲಿ ಇಲ್ಲದಿರುವುದರಿಂದ ಅತಿವ್ಯಾಪ್ತಿ ಇಲ್ಲವೆಂದರೆ ಹೀಗೆಯೇ ಪ್ರಧಾನಪಕ್ಷದಲ್ಲಿಯೂ ಅತಿವ್ಯಾಪ್ತಿಯು ಪರಿಹರಿಸಲಿಕ್ಕೆ ಶಕ್ಯವೇ ಆಗಿದೆ.

ಮಂತ್ರವು ಪ್ರಕೃತಿಪರವಾಗುವುದಿಲ್ಲವೆನ್ನುವುದು ಅಯುಕ್ತವು. ಮತ್ತೆ ಮಂತ್ರವು ಪ್ರಕೃತಿಪರವಾಗುತ್ತದೆಂದು ಅಂಗೀಕರಿಸಿಕೊಂಡೇ **'ಯೋ ಯೋನಿಮಧಿತಿಷ್ಠತ್ಯೇಕಃ'** (ಶ್ವೇತಾಶ್ವತರೋಪನಿಷತ್ತು ಅಧ್ಯಾ. ೫) ಯಾವ ಸ್ವತಂತ್ರನಾದ ಒಬ್ಬ ಶ್ರೀ ಹರಿಯೇ ಕಾರ್ಯೋಪಾದಾನವಾದ ಪ್ರಕೃತಿಯನ್ನು ಅಧೀನೀಕರಿಸಿಕೊಂಡು ಇರುತ್ತಾನೋ, ಇದು ಮೊದಲಾದ ವಾಕ್ಯಗಳ ಸಾಮರ್ಥ್ಯದಿಂದ ಪ್ರಧಾನಕ್ಕೆ ಈಶ್ವರಾಧೀನತ್ವವನ್ನೇ ಉಪಪಾದಿಸಬೇಕು. (4) ಮತ್ತು ತೇಜೋಬನ್ನಗಳಲ್ಲಿ ಆದರೂ ಅಜಾಶಬ್ದವು ರೂಢವಲ್ಲ 'ತತ್ತೇಜೋಽಸೃಜತ' ಎನ್ನುವ ಶ್ರುತಿಯುದ್ದೇಶಯಿಂದ ತೇಜಸ್ಸಿಗೂ 'ತದಪೋಽಸೃಜತ' ಎನ್ನುವ ಶ್ರುತಿಯುದ್ದೇಶಯಿಂದ ಜಲಗಳಿಗೂ, 'ತಾ ಆಪೋಽನ್ನಮಸೃಜಂತ' ಎನ್ನುವ ಶ್ರುತಿಯುದ್ದೇಶಯಿಂದ ಅನ್ನಶಬ್ದವಾಚ್ಯವಾದ ಪೃಥಿವಿಗೂ ಉತ್ಪತ್ತಿಯು ಶ್ರುತವಾಗಿರುವುದರಿಂದ ಅಜಾ ಶಬ್ದದಿಂದ ಹೇಳಲ್ಪಟ್ಟ ಅನುತ್ಪತ್ತಿಯೇ ಕೂಡಲಾರದು. ಆದಕಾರಣ ಯೌಗಿಕವೂ ಅಲ್ಲ. ತೇಜೋಽಬನ್ನಗಳಲ್ಲಿ ಸ್ತ್ರೀಲಿಂಗತ್ವವೂ ಕೂಡಲಾರದು, ಏಕವಚನವೂ ಕೂಡಲಾರದು. (5) ಹಾಗಾದರೆ **'ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್'** ಎಂದು ಮೂರರನ್ನು ಮಿಶ್ರೀಕರಿಸಿರುವುದರಿಂದ ಏಕವಚನವು ಯುಕ್ತವಾಗಬಹುದೆಂದರೆ ಮಿಶ್ರೀಕರಿಸಿದಾಗ್ಯೂ ಐಕ್ಯವಿಲ್ಲದಿರುವುದರಿಂದ ಪ್ರತ್ಯೇಕವಾಗಿ ತ್ರಿವೃತ್ಕರಣವು ಶ್ರುತವಾಗಿರುವುದರಿಂದ ತ್ರಿವೃತ್ಕೃತ ಸಮುದಾಯಗಳೂ ಮೂರು ಇದ್ದಪ್ರಯುಕ್ತ ಏಕವಚನವು ಅಯುಕ್ತವೇ. (6)ಹಾಗಾದರೆ ತೇಜೋಬನ್ನಗಳಿಗೆ ಉಪಾದಾನಭೂತವಾದ ಜಡವಾದ ಅನಾದಿ ದ್ರವ್ಯವು ಒಂದು ಇದೆ, ಅದರ ಕಾರ್ಯವಾಗಿರುವುದರಿಂದ ತೇಜೋಬನ್ನಗಳಲ್ಲಿ ಅಜಾ ಶಬ್ದವು ಔಪಚಾರಿಕವು. ಆದುದರಿಂದ ಅಜಾದಿಶಬ್ದಗಳು ಕೂಡಬಹುದೆಂದು ತಿಳಿಯುವುದಾದರೆ ಹಾಗಾದರೆ,ಪ್ರಧಾನವೇ ಅಜಾ ಶಬ್ದಪ್ರತಿಪಾದ್ಯವಾಗಲಿ, ಶಬ್ದಗಳಿಗೆ ಮುಖ್ಯಾರ್ಥತ್ವವೇ ಕೂಡುತ್ತದೆ. (7) ಹಾಗೆಯೇ ಒಡಂಬಡುತ್ತೇನೆಂದರೆ—ಪ್ರಕೃತಿಯೇ ಇಲ್ಲಿ ಪ್ರತಿಪಾದ್ಯವೆಂದು ಹೇಳತಕ್ಕ ಪೂರ್ವಪಕ್ಷಿಯು ಏನು ಅಪರಾಧ ಮಾಡಿರುವನು? ಎಂದರೆ, ತೇಜೋಬನ್ನಗಳನ್ನು ಕುರಿತು ಉಪಾದಾನಕಾರಣತ್ವ-ಜಡತ್ವ-ಅನಾದಿದ್ರವ್ಯತ್ವರೂಪವಾದುದು ಯಾವುದು ಪ್ರಧಾನಲಕ್ಷಣವೋ ಆ ಲಕ್ಷಣದಿಂದ ಯುಕ್ತವಾದುದು ಪ್ರಕೃತಿಯೇ. ಉಪಾದಾನಭೂತವಾದುದು ಅನಾದಿದ್ರವ್ಯವು ಪ್ರಕೃತಿಯೆಂದು ನಾನು ಹೆಸರು ಹೇಳುವುದಿಲ್ಲವೆಂದರೆ ನಾಮಮಾತ್ರದಲ್ಲಿ ವಿವಾದವು ಯುಕ್ತವಾಗಲಾರದು. ಈ ಅಭಿಪ್ರಾಯದಿಂದಲೇ'ಅಜಾಮೇಕಾಂ' ಎಂದು ಹೇಳಿರುವರು. (8) ಹಾಗಾದರೆ 'ಕಲ್ಪನೋಪದೇಶಾತ್' ಎನ್ನುವುದರಿಂದ ಇದಕ್ಕೆ ಉತ್ತರವು ಉಕ್ತವಾಗಿದೆ. ಹೇಗೆಂದರೆ, ಮಧುವಿದ್ಯಾದಿಗಳಲ್ಲಿ ಆದಿತ್ಯನೇ ಮಧು ಇತ್ಯಾದಿಪ್ರಕಾರ ಹೇಗೆ ಕಲ್ಪಿಸುವಿರೋ, ಹೀಗೆಯೇ ಇಲ್ಲಿಯೂ ಪೃಥಿವ್ಯಪ್ತೇಜಸ್ಸುಗಳು ಅಜಾದಿ ಶಬ್ದವಾಚ್ಯಗಳೆಂದು ಕಲ್ಪಿಸಿರುವುದರಿಂದ ವಿರೋಧವಿಲ್ಲವೆಂದರೆ— ಇದೂ ಅಯುಕ್ತವು. ಏಕೆಂದರೆ, ಕಲ್ಪನೆಗೆ ಪ್ರಯೋಜನವಿಲ್ಲವು.

(9) ರಾಮಾನುಜಾಚಾರ್ಯರು 'ಜ್ಯೋತಿರುಪಕ್ರಮಾ' ಎನ್ನುವ ಸೂತ್ರವನ್ನು ಪ್ರಕೃತಿಯು ಬ್ರಹ್ಮನೇ ಕಾರಣವಾಗಿವುಳ್ಳದ್ದು, ಸ್ವತಂತ್ರವಲ್ಲ, ಎಂದು ಅನ್ಯಥಾ ವ್ಯಾಖ್ಯಾನಮಾಡಿರುತ್ತಾರೆ. ಅವರಿಗೆ ಚಮಸಸೂತ್ರವು ವ್ಯರ್ಥವು. ಇದರಿಂದಲೇ ಚರಿತಾರ್ಥವಾಗುತ್ತದೆ. (10) ಮತ್ತು 'ತದಧೀನತ್ವಾತ್' ಎನ್ನುವುದರಿಂದಲೇ ಪ್ರಧಾನವು ಬ್ರಹ್ಮನ ಅಧೀನವೆಂದು ಪ್ರತಿಪಾದಿತವಾಗಿದೆ. ಮತ್ತು 'ರಚನಾನುಪಪತ್ತೇಃ' ಎನ್ನುವುದನ್ನಾರಂಭಿಸಿ 'ವಿಪ್ರತಿಷೇಧಾಚ್ಚ' ಎನ್ನುವತನಕ ಸಾಂಖ್ಯಮತನಿರಾಕರಣಪರವಾದ ಪ್ರಕರಣದಲ್ಲಿ ಈ ವಿಷಯವನ್ನು ಹೇಳಬೇಕಾದದ್ದು ॥ ೪೯ ॥

ಈ ಶ್ರುತಿಯು ಪ್ರಧಾನ, ಪ್ರತಿಪಾದಕವಾದಾಗ್ಯೂ ದೋಷವಿಲ್ಲವೆಂದು ಹೇಳಿದ್ದು ಅಯುಕ್ತವು. 'ತತ್ತು ಸಮನ್ವಯಾತ್' ಎನ್ನುವ ಅವಧಾರಣಾರ್ಥಕವಾದ ತು ಶಬ್ದವು

ಕೂಡಲಾರದು ಎಂದರೆ— ಹೀಗೆ ಹೇಳಕೂಡದು. ಪೃಥಿವ್ಯಪ್ತೇಜಃಪರತ್ವವಿದ್ದರೂ ಆ ದೋಷವು ಹೊರಟುಹೋಗಲಾರದು. ಪರರ ಮತದಲ್ಲಿ ಹೀಗೆ ದೋಷವಿರಲಿ. ನಿಮ್ಮ ಮತದಲ್ಲಿ ಹೇಗೆ ದೋಷವಿಲ್ಲವೆಂದರೆ—

**ಮೂ ॥ ಅಸ್ಮಾಕಂ ಪರಮುಖ್ಯಾರ್ಥೋ ಭಗವಾನೇಕ ಏವ ತು ।**
**ಮುಖ್ಯಮಾತ್ರತಯಾ ರೂಢಂ ಸರ್ವಮಭ್ಯುಪಗಮ್ಯತೇ ॥**
**ಸರ್ವೇಷಾಮಪಿ ಶಬ್ದಾನಾಂ ಗೌಣಾ(ಣ್ಯಾ)ದ್ಯಂ ತದಯೋಗತಃ॥೫೦॥**

ಅ ॥ ಅಸ್ಮಾಕಂ ತು=ನಮ್ಮ ಮತದಲ್ಲಿ ಆದರೂ, (ತತ್ತು ಸಮನ್ವಯಾತ್ ಎನ್ನುವ ಅವಧಾರಣಕ್ಕೆ ಹೀಗೆ ಅರ್ಥವು.) ಸರ್ವೇಷಾಮಪಿ ಶಬ್ದಾನಾಂ=ಎಲ್ಲಾ ಶಬ್ದಗಳಿಗೂ, ಭಗವಾನೇಕ ಏವ=ಶ್ರೀ ಹರಿಯೊಬ್ಬನೇ, ಪರಮುಖ್ಯಾರ್ಥಃ = ಪರಮಮುಖ್ಯವೃತ್ತಿಯಿಂದ ವಾಚ್ಯಾರ್ಥನು. ಬೇರೆ ಯಾರೂ ಅಲ್ಲವು. ಆದಕಾರಣ) ರೂಢಂ ಸರ್ವಂ=ಯಾವ ಶಬ್ದಕ್ಕೆ ಯಾವುದು ಅರ್ಥವೆಂದು ಪ್ರಸಿದ್ಧವಾಗಿಯದೋ ಅದೆಲ್ಲವೂ, ಮುಖ್ಯಮಾತ್ರತಯಾ = ಮುಖ್ಯಾರ್ಥಮಾತ್ರವೆಂದು, ಅಭ್ಯುಪಗಮ್ಯತೇ=ಅಂಗೀಕರಿಸಲ್ಪಡುತ್ತದೆ. ತದಯೋಗತಃ=ಮುಖ್ಯಾರ್ಥವು ಕೂಡದೆ ಇದ್ದರೆ, ಗೌಣಾ (ಣ್ಯಾ)ದ್ಯಂ=ಗೌಣ್ಯಾದಿ ವೃತ್ತಿಲಭ್ಯವಾದ ಅರ್ಥವೂ (ಅಂಗೀಕೃತವಾಗುತ್ತದೆ.) (ಅಂತೂ ಅಜಾದಿ ಶಬ್ದಗಳು ಪರಮಮುಖ್ಯವೃತ್ತಿಯಿಂದ ಪರಬ್ರಹ್ಮಪ್ರತಿಪಾದಕಗಳು. ಮುಖ್ಯವೃತ್ತಿಮಾತ್ರದಿಂದ ಪ್ರಧಾನಕ್ಕೂ ಪ್ರತಿಪಾದಕಗಳು ಎಂದಂಗೀಕರಿಸಿದರೆ ಯಾವ ಅನುಪಪತ್ತಿಯೂ ಇರುವುದಿಲ್ಲ ॥ ೫೦ ॥

ಹಾಗಾದರೆ ತತ್ತು ಸಮನ್ವಯಾತ್ ಎನ್ನುವ ಸೂತ್ರದಲ್ಲಿರುವ ಅವಧಾರಣವು ಪರಮಮುಖ್ಯರೂಪವಾದ ಅರ್ಥಾಂತರದ ವ್ಯಾವೃತ್ತಿಗಾಗಿ ಏತಕ್ಕೆ ವ್ಯಾಖ್ಯಾನಮಾಡುವುದು. ಇತರ ವಾಚ್ಯಾರ್ಥವಿಲ್ಲವೆಂದೇ ಏಕೆ ವ್ಯಾಖ್ಯಾನ ಮಾಡಬಾರದು. ಕರ್ಮದೇವತಾದಿ ವಸ್ತ್ವಂತರಕ್ಕೆ ಲೋಪಬರಬಾರದು, ಪ್ರಧಾನಾದಿ ವ್ಯವಹಾರಕ್ಕೂ ಲೋಪಬರಬಾರದು ಇತ್ಯಾದಿರೂಪವಾದ ಪ್ರಯೋಜನವು ಅನುಪಪನ್ನವಾಗುತ್ತದೆಂದೂ ಹೇಳಕೂಡದು. ಅಮುಖ್ಯವೃತ್ತಿಯಿಂದ ಸಂಕೇತಮಾತ್ರದಿಂದಾಗಲೀ ಅದು ಕೂಡಬಹುದು ಎಂದು ಹೇಳಕೂಡದು. ಸೂತ್ರಕಾರರೇ ಗ್ರಂಥಾಂತರದಲ್ಲಿ ವೈದಿಕಶಬ್ದಗಳಿಗೆ ಹಿಂದೆ ಹೇಳಿದ ಅನೇಕಾರ್ಥಗಳನ್ನು ಅಂಗೀಕರಿಸುತಾರೆನ್ನುತ್ತಾರೆ.

**ಮೂ ॥ ಅರ್ಥದ್ವಯಮಭಿಪ್ರೇತ್ಯ ಪ್ರವೃತ್ತೇ ಹರಿರುಕ್ತವಾನ್ ॥ ೫೧ ॥**
**ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯಮುತ್ತಮಂ ।**
**ಯೋಗಾನಾಂ ಪರಮಾಂ (ಮಾ) ಸಿದ್ಧಿಂ ಪರಮಂ ತೇ ಪದಂ ವಿದುಃ॥**
**॥ ೫೨ ॥ (ಜಿತಂತೇಸ್ತೋತ್ರ, ಅಧ್ಯಾ. ೪. ಶ್ಲೋಕ ೭ )**

ಅ ॥ ಅರ್ಥದ್ವಯಂ=ಪರಮ ಮುಖ್ಯಾರ್ಥ ಮುಖ್ಯಾರ್ಥಗಳೆನ್ನುವ ಎರಡು ಅರ್ಥಗಳನ್ನು, ಅಭಿಪ್ರೇತ್ಯ=ಅಭಿಪ್ರಾಯಪಟ್ಟು, ಹರಿಃ=ಶ್ರೀವೇದವ್ಯಾಸರು, ಪ್ರವೃತ್ತೇ=ಪ್ರವೃತ್ತ ಎನ್ನುವ ಗ್ರಂಥದಲ್ಲಿ, ಉಕ್ತವಾನ್=ಹೇಳಿದರು. ವಚಸಾಂ=ವೈದಿಕ ವಚನಗಳಿಗೆ, ಉತ್ತಮಂ ವಾಚ್ಯಂ=ಮುಖ್ಯವೃತ್ತಿಯಿಂದ ಪ್ರತಿಪಾದ್ಯನು, (ಅದಕ್ಕಿಂತ ಬೇರೆಯಾದವುಗಳು ಅಮುಖ್ಯವಾಚ್ಯಗಳು, ಏಕೆಂದರೆ) ಯೋಗಾನಾಂ=ಯೋಗವೃತ್ತಿಗಳಲ್ಲಿ, ಪರಮಾಂ ಸಿದ್ಧಿಂ=ಮುಖ್ಯಸಿದ್ಧಿಯುಳ್ಳವನು, (ಮುಖ್ಯವಿಷಯನು) (ಇಂದ್ರಾದಿಗಳು ಅಮುಖ್ಯವಿಷಯರು) ಕಾರ್ಯಾಣಾಂ=

ಮಹದಾದಿ ಕಾರ್ಯಗಳಿಗೆ, ಪೂರ್ವಂ ಕಾರಣಂ = ಮುಖ್ಯಕಾರಣನು, (ಪ್ರಕೃತ್ಯಾದಿಗಳು ಅಮುಖ್ಯ ಕಾರಣಗಳು) ಇಂತಹ, ತೇ=ನಿನ್ನ, ಪದಂ=ಸ್ವರೂಪವನ್ನು, ತೇ=ಆ ಜ್ಞಾನಿಗಳು, ಪರಮಂ=ಸರ್ವೋತ್ಕೃಷ್ಟವನ್ನಾಗಿ, ವಿದುಃ=ತಿಳಿಯುತ್ತಾರೆ.

**ತಾ** || ಯದ್ಯಪಿ ರೂಢಿಯು ಶೀಘ್ರವಾಗಿ ಅರ್ಥವನ್ನು ತಿಳಿಸಿಕೊಡುವುದರಿಂದಲೇ ಬಲಿಷ್ಠವಾದುದು. ಆದಾಗ್ಯೂ ವಿಶೇಷಜ್ಞಾನಕ್ಕೆ ಕಾರಣವಾಗಿರುವುದರಿಂದ ಯೋಗವೇ ಬಲಿಷ್ಠವು. ಈ ಅಭಿಪ್ರಾಯದಿಂದ ಅದನ್ನೇ ಹೇಳಿರುತ್ತಾರೆ. ಆ ಪ್ರವೃತ್ತಿಗ್ರಂಥದಲ್ಲಿ ಕಂಠತಃ ಎರಡು ಅರ್ಥಗಳನ್ನು ಹೇಳದೆ ಇದ್ದರೂ 'ಉತ್ತಮಂ ವಾಚ್ಯಂ' ಎನ್ನುವ ವಿಶೇಷಣದಿಂದ ವಾಚ್ಯವಾದ ಅರ್ಥಾಂತರವಿದೆ ಎಂದು ತಿಳಿಯುತ್ತದೆ || ೫೧ || ೫೨ ||

ವೈದಿಕ ಶಬ್ದಗಳಿಗೆ ಹಿಂದೆ ಹೇಳಿದ ಎರಡು ಅರ್ಥಗಳಿವೆ ಎನ್ನುವಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ.

**ಮೂ || ಇತಿ ಬುದ್ಧೌ ಸಮಾರೋಹಾದುಭಯೋರ್ಯೋಗರೂಢಯೋಃ |**
**ತ್ಯಾಗೇ ಚ ಕಾರಣಾಭಾವಾದುಭಯಾರ್ಥತ್ವಮಿಷ್ಯತೇ || ೫೩ ||**

**ಅ** || ಇತಿ=ಹೀಗೆ, ಯೋಗರೂಢಯೋಃ=ಯೋಗವೃತ್ತಿವಿಷಯನಾದ ಪರಮೇಶ್ವರನು, ರೂಢವಾದ ಅಂದರೆ, ಪ್ರಸಿದ್ಧವಾದ ಪ್ರಕೃತ್ಯಾದಿಗಳೂ, ಉಭಯೋಃ = ಈ ಅರ್ಥಗಳಿಗೂ, ಬುದ್ಧೌ=ಬುದ್ಧಿಯಲ್ಲಿ, ಸಮಾರೋಹಾತ್=ಚೆನ್ನಾಗಿ ಆರೋಹವಿರುವುದರಿಂದಲೂ, ತ್ಯಾಗೇ ಚ= ಎರಡು ಅರ್ಥಗಳ ಪರಿತ್ಯಾಗ ವಿಷಯದಲ್ಲಿ, ಕಾರಣಾಭಾವಾತ್=ಕಾರಣವಿಲ್ಲದಿರುವುದರಿಂದಲೂ, ಉಭಯಾರ್ಥತ್ವಂ=ಎರಡು ಅರ್ಥಗಳಿವೆ ಎನ್ನುವುದು, ಇಷ್ಯತೇ=ಅಂಗೀಕರಿಸಲ್ಪಡುತ್ತದೆ.

**ತಾ || ನ್ಯಾಯಸುಧಾ**— (1) ಪದ ಪದಾರ್ಥಗಳಿಗೆ ವಾಚ್ಯ ವಾಚಕಭಾವ ಸಂಬಂಧವನ್ನು ತಿಳಿದಿರುವ ಮತ್ತು ಉಪಕ್ರಮಾದಿ ನ್ಯಾಯಗಳನ್ನು ತಿಳಿದಿರುವವನಿಗೆ, ಅಜಾ ಮೊದಲಾದ ಶಬ್ದಗಳನ್ನು ಕೇಳಿದವನಿಗೆ ಬ್ರಹ್ಮನ ಜ್ಞಾನವು ಬಂದಹಾಗೆ ಪ್ರಧಾನದ ಜ್ಞಾನವೂ ಬರುತ್ತದೆ. ಜ್ಞಾನಗಳಿಗೆ ಸ್ವತಏವ ಪ್ರಾಮಾಣ್ಯವು. ಅಪ್ರಾಮಾಣ್ಯವಾದರೂ ಬಾಧಕಾಧೀನವು ಎಂದು ಪ್ರಥಮ ಸೂತ್ರದಲ್ಲಿ (ಜಿಜ್ಞಾಸಾ ಸೂತ್ರದಲ್ಲಿ)' **ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತಏವಾಗಮಸ್ಯ ಹಿ**' (ಪು. ೧೭) ಇತ್ಯಾದಿ ಗ್ರಂಥಗಳಿಂದ ಉಪಪಾದಿಸಲ್ಪಟ್ಟಿದೆ. ಎರಡು ಅರ್ಥಗಳನ್ನು ಅಂಗೀಕರಿಸಿದರೆ ಬಾಧಕವು ಇಲ್ಲವು. ಆದುದರಿಂದ ಅಪವಾದವಿಲ್ಲದಿರುವ ಪ್ರತೀತಿಯ ಬಲದಿಂದ ಎಲ್ಲಾ ಶಬ್ದಗಳಿಗೂ ಎರಡು ಅರ್ಥಗಳನ್ನು ಅಂಗೀಕರಿಸತಕ್ಕುದು || ೫೩ ||

ಇದನ್ನೇ ವಿವರಿಸುತ್ತಾರೆ.—

**ಮೂ || ವಿಪರೀತಪ್ರಮಾಭಾವೇ ಪೂರ್ವಾರೋಹಸ್ತು ಕಾರಣಂ |**
**ಸಾ ಭವೇದ್ಯತ್ರ ಸ ವ್ಯರ್ಥಃ ಪೂರ್ವಾರೋಹೋ ಭ್ರಮೋ ಯಥಾ ||**
**ಅತೋ ಜಗದುಪಾದಾನಂ ಪ್ರಧಾನಂ ವಕ್ತಿ ಸಾ ಶ್ರುತಿಃ || ೫೪ ||**

**ಅ** || ವಿಪರೀತ ಪ್ರಮಾಭಾವೇ=ವಿಪರೀತವಾದ ಪ್ರಮಾಣವಿಲ್ಲದಿದ್ದರೆ (ಪಾತ್ರದಿಂದ ನೀರನ್ನು ತಾ ಇತ್ಯಾದಿಗಳಲ್ಲಿ), ಪೂರ್ವಾರೋಹಸ್ತು=ಪೂರ್ವದಲ್ಲಿ ಆರೂಢವಾದ ಅರ್ಥವು ಸ್ವೀಕಾರಕ್ಕೆ, ಕಾರಣಂ=ಕಾರಣವು. ಅಥವಾ ವ್ಯವಹಾರಕಾರಣವು. ಸಾ=ಆ ವಿಪರೀತಪ್ರಮೆಯು, ಯತ್ರ=

ಎಲ್ಲಿ, ಭವೇತ್=ಆಗುವುದೋ, ಸಃ=ಸ್ವೀಕಾರಕ್ಕೆ ಕಾರಣವೆಂದು ಹೇಳಲ್ಪಟ್ಟಾಗ್ಯೂ, ಪೂರ್ವಾರೋಹಃ=ಪೂರ್ವದಲ್ಲಿ ಆರೂಢವಾದುದು, ಭ್ರಮೋ ಯಥಾ=ಪ್ರಸಿದ್ಧ ಶುಕ್ತಿರಜತಾದಿಗಳ ವಿಪರ್ಯಯದಂತೆ, ವ್ಯರ್ಥಃ=ವ್ಯರ್ಥವು. (ಸ್ವೀಕಾರಕಾರಣವಾಗುವುದಿಲ್ಲ). ಅತಃ=ಆದಕಾರಣ, ಸಾ ಶ್ರುತಿಃ='ಅಜಾಮೇಕಾಂ' ಇತ್ಯಾದಿ ಶ್ರುತಿಯು, ಜಗದುಪಾದಾನಂ=ಜಗತ್ತಿಗೆ ಉಪಾದಾನ ಕಾರಣವಾದ, ಪ್ರಧಾನಂ=ಪ್ರಕೃತಿಯನ್ನು, ವಕ್ತಿ=ಹೇಳುತ್ತದೆ.

ತಾ || **ನ. ಚ. ವಿ — ಸ. ರ. ವಿ.** ಎಲ್ಲಾ ಶ್ರುತಿಗಳೂ ಮಹಾಯೋಗವೃತ್ತಿಯಿಂದ ವಿಷ್ಣುವನ್ನು ಪ್ರತಿಪಾದಿಸತಕ್ಕವುಗಳಾದಾಗ್ಯೂ ಕೆಲವುಕಡೆ ರೂಢಿಯಿಂದ ಪ್ರಧಾನವೂ ತೋರುವುದರಿಂದ ಅಜಾದಿಶಬ್ದಗಳಿಂದ ಬಾಧಕಪ್ರಮಾಣವಿಲ್ಲದಿರುವಪ್ರಯುಕ್ತ 'ಅಜಾಮೇಕಾಂ' ಎನ್ನುವ ಶ್ರುತಿಯು ಪ್ರಧಾನವನ್ನು ಪ್ರತಿಪಾದಿಸುತ್ತದೆ ಎನ್ನುವುದೇ ಯುಕ್ತವು.

**ನ್ಯಾಯಸುಧಾ—** (1) **'ಅಜಾದಿಪದಾನಿ ದ್ವ್ಯರ್ಥಾನಿ ಬಾಧಕವಿಧುರಾಯಾಂ ಬುದ್ಧೌ ತಥಾ ರೂಢತ್ವಾತ್ ಯತ್ ಯದ್ಬಾಧಕವಿಧುರಾಯಾಂ ಬುದ್ಧೌ ದ್ವ್ಯರ್ಥತಯಾ ಪ್ರತೀಯತೇ ತತ್ತಥಾ ದ್ವ್ಯರ್ಥಮೇವ ಯಥಾ ಸ್ತಂಭಕುಂಭೌ'** ಸಮೂಹಾಲಂಬನಜ್ಞಾನದಲ್ಲಿ ಸ್ತಂಭಕುಂಭಗಳು ಸಾಕ್ಷಾತ್ಕರೋಮಿ ಎಂದು ಅನುವ್ಯವಸಾಯರೂಪವಾದ ನಿರ್ಬಾಧಬುದ್ಧಿಯಲ್ಲಿ ಪ್ರತೀಯಮಾನಗಳಾಗಿವೆ. ಹಾಗೆಯೇ ಸ್ತಂಭ ಕುಂಭರೂಪಗಳಾದ ಎರಡು ಅರ್ಥಗಳನ್ನೂ ವಿಷಯೀಕರಿಸಿಕೊಂಡಿವೆ. ಹಾಗೆಯೇ ಅಜಾದಿಪದಗಳೂ ನಿರ್ಬಾಧಬುದ್ಧಿವಿಷಯಕಗಳಾಗಿ ತೋರುವುದರಿಂದ ಎರಡು ಅರ್ಥಗಳನ್ನು ಹೇಳುತ್ತವೆ. ಹೀಗೆ ನಾಮಾನ್ಯ ವ್ಯಾಪ್ತಿಮೂಲಕವಾದ ಅನುಮಾನವು. (2) ಹೀಗೆಯೇ, 'ಯತ್ ದ್ವ್ಯರ್ಥಂ ನ ಭವತಿ ತತ್ ದ್ವ್ಯರ್ಥತಯಾ ನಿರ್ಬಾಧಬುದ್ಧಿವಿಷಯೋ ನ ಯಥಾ ಭ್ರಮಃ' 'ಇದಂ ರಜತಂ' ಎನ್ನುವ ಭ್ರಮವು ಶುಕ್ತಿಮಾತ್ರವಿಷಯಕವಾಗಿರುವುದರಿಂದ ಎರಡು ಅರ್ಥಗಳುಳ್ಳದ್ದಲ್ಲ, 'ಇದಂ ರಜತಂ' ಎಂದು ಜ್ಞಾನವುಳ್ಳವನು ನಾನು ಎನ್ನುವ ಅನುವ್ಯವಸಾಯರೂಪವಾದ ನಿರ್ಬಾಧಬುದ್ಧಿಯು ಎರಡು ಅರ್ಥಗಳುಳ್ಳದ್ದಾಗಿ ತೋರದಿರುವುದರಿಂದ ದ್ವ್ಯರ್ಥವಾಗಿ ನಿರ್ಬಾಧಬುದ್ಧಿವಿಷಯವಲ್ಲ. ಹೀಗೆ ಈ ಶ್ಲೋಕದಿಂದ ಅನ್ವಯವ್ಯಾಪ್ತಿ, ವ್ಯತಿರೇಕವ್ಯಾಪ್ತಿಗಳನ್ನು ಇಟ್ಟುಕೊಳ್ಳತಕ್ಕದು. (3) ಹಾಗಾದರೆ, ಈ ಮಂತ್ರದಲ್ಲಿ ಅಜಾಶಬ್ದ ವಾಚ್ಯವಾದುದು ಜಗತ್ಕಾರಣವೆಂದು ಹೇಳಿರುತ್ತದೆ. ಆ ಜಗತ್ಕಾರಣತ್ವವು ಬ್ರಹ್ಮನ ಲಕ್ಷಣವೆಂದು ಹೇಳಿಯದೆ. ಆದಕಾರಣ ಈ ಬಾಧಕದಿಂದ ಬುದ್ಧಿಯಲ್ಲಿ ಆರೂಢವಾದುದಾಗ್ಯೂ ಪ್ರಧಾನವನ್ನು ಬಿಟ್ಟುಬಿಡಬೇಕು, ಎಂದರೆ, ಹೀಗೆ ಹೇಳಕೂಡದು. ನಿಮಿತ್ತಕಾರಣತ್ವಮಾತ್ರವು ಬ್ರಹ್ಮನ ಲಕ್ಷಣವು. ಆದುದರಿಂದ ಪ್ರಧಾನದಲ್ಲಿ ಜಗದುಪಾದಾನಕಾರಣತ್ವವು ಇದ್ದುದರಿಂದ ಅಜಾವಾಕ್ಯದಲ್ಲಿ ಶ್ರುತವಾದ ಕಾರಣತ್ವವು ಉಪಾದಾನಕಾರಣತ್ವರೂಪವೆಂದೇ ಯುಕ್ತವು. ಅಂದರೆ, ಈ ವಾಕ್ಯವು ಪ್ರಧಾನಪರವೆನ್ನುವುದು ಉಪಪನ್ನವಾಗುತ್ತದೆ || ೫೪ || ೧ || ೪ || ೧ ||

**ನ್ಯಾಯಸುಧಾ—** (1) 'ನ ಸಂಖ್ಯೋಪಸಂಗ್ರಹಾದಪಿ' ಎನ್ನುವ ಅಧಿಕರಣವೂ ಕೂಡ ಪ್ರಧಾನಕ್ಕೆ ಶಬ್ದಬೋಧ್ಯತ್ವವಿಲ್ಲವೆಂದು ಪ್ರತಿಪಾದಿಸುತ್ತದೆ, ಎಂದು ವ್ಯಾಖ್ಯಾನಮಾಡುವರು. ಹೇಗೆಂದರೆ-**"ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ । ತಮೇವ ಮನ್ಯಮಾತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಂ"** || (ಬೃ. ಉ. ೬. ೪. ೧೭) ಎನ್ನುವ ಮಂತ್ರದಲ್ಲಿ 'ಪಂಚ ಪಂಚ' ಎಂದು ಎರಡಾವರ್ತಿ ಪಂಚ ಶಬ್ದವು ದೃಷ್ಟವಾಗಿರುವುದರಿಂದ ಪಂಚ ಸಂಖ್ಯೆಯೇ ವಿಷಯವಾಗಿವುಳ್ಳ, ಮತ್ತೊಂದು ಪಂಚಸಂಖ್ಯೆಯು ಶ್ರುತವಾಗುತ್ತದೆ. ಆದಪ್ರಯುಕ್ತವೇ ಐದು ಐದಲಿ (೨೫) ಇಪ್ಪತ್ತೈದು ಎಂದಾಗುತ್ತದೆ. ತಥಾಚ ಶ್ರುತಿಪ್ರಸಿದ್ಧವಾದ ೨೫ ಸಂಖ್ಯೆಯಿಂದ

**“ಮೂಲಪ್ರಕೃತಿರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಃ ಸಪ್ತ । ಷೋಡಶಕಸ್ತು ವಿಕಾರೋ ನ ಪ್ರಕೃತಿರ್ನ ವಿಕೃತಿಃ ಪುರುಷಃ”** ॥ ಎನ್ನುವ ಸಾಂಖ್ಯಸ್ಮೃತಿಪ್ರಸಿದ್ಧಗಳಾದ ೨೫ ತತ್ವಗಳನ್ನು ಸಂಗ್ರಹಿಸಿರುವುದರಿಂದ ಪ್ರಧಾನಾದಿಗಳಿಗೆ ಶಬ್ದಪ್ರತಿಪಾದ್ಯತ್ವವು ಪ್ರಾಪ್ತವಾಗುತ್ತದೆ, ಎಂದಾಶಂಕಿಸಿದರೆ— ‘ಪಂಚ ಪಂಚ’ ಎಂದು ೨೫ ಸಂಖ್ಯೆಗಳಿಂದ ಸಂಗ್ರಹಿಸಿರುವುದರಿಂದಲೂ ಪ್ರಧಾನಾದಿಗಳಿಗೆ ಶಬ್ದಪ್ರತಿಪಾದ್ಯತ್ವವಿದೆ ಎನ್ನುವ ಆಶೆಯು ಮಾಡಕೂಡದು. ಐದೈದಕ್ಕೆ ಸಂಗ್ರಾಹಕವಾದ ಸಾಧಾರಣ ಧರ್ಮವಿಲ್ಲದಿರುವುದರಿಂದ. ಅಂದರೆ— ಈ ಇಪ್ಪತ್ತೈದು ತತ್ವಗಳು ಬೇರೆ ಬೇರೆ ಧರ್ಮವುಳ್ಳವುಗಳಾಗಿವೆ. ಇವುಗಳಿಗೆ ‘ಪಂಚಜನಾಃ ಪಂಚ’ ಎಂದು ಹೇಳುವಾಗ ಕಾದಿವರ್ಗಗಳ ಐದರಂತೆ ಪಂಚಜನರ ವರ್ಗ ಪಂಚಕವೂ ತೋರುತ್ತದೆ. ಆ ಐದು ವರ್ಗಗಳಲ್ಲಿ ಕಾದಿವರ್ಗಗಳಲ್ಲಿ ಕಂಠ್ಯತ್ವ-ತಾಲವ್ಯತ್ವ-ಮೂರ್ಧನ್ಯತ್ವ-ದಂತ್ಯತ್ವ-ಓಷ್ಠ್ಯತ್ವಗಳು ಇದ್ದಂತೆಯೇ ಐದೈದಕ್ಕೆ ಸಂಗ್ರಾಹಕಗಳಾದ ಐದು ಸಾಧಾರಣ ಧರ್ಮಗಳು ಇಲ್ಲ. ಆದಕಾರಣ ೨೫ ತತ್ವಗಳನ್ನು ಐದು ಐದು ಎಂದು ಪಂಚತ್ವಸಂಖ್ಯೆಯಿಂದ ಗ್ರಹಣಮಾಡಲಿಕ್ಕೆ ಕಾರಣವಿಲ್ಲ. ಎಲ್ಲಿಯೂ ಆದರೂ ಒಂದುಕಡೆ ನಿಯಾಮಕಧರ್ಮವಿಲ್ಲದೆ ನಾನಾಭೂತಗಳಲ್ಲಿ ದ್ವಿತ್ವಾದಿಸಂಖ್ಯೆಗಳು ಪ್ರವಿಷ್ಟಗಳಾಗುವುದಿಲ್ಲ. (ಅಂದರೆ ಹೇಗೆ ‘ವಿಧಿಪ್ರಾಣನಾಥೌ’ ಇತ್ಯಾದಿ ತಾರತಮ್ಯಪ್ರಕರಣದಲ್ಲಿಯೂ, ಲೋಕದಲ್ಲಿ ‘ಏತೌ ದ್ವೌ’ ‘ಇಮೇ ತ್ರಯಃ’ ಎಂದೂ ದ್ವಿತ್ವಾದಿ ಸಂಖ್ಯೆಯು ಸಾಮ್ಯಾದಿ ನಿಮಿತ್ತವಿಲ್ಲದೆ ದೃಷ್ಟವಾಗಲಿಲ್ಲವೋ ಹಾಗೆಯೇ ಪಂಚತ್ವಾದಿಸಂಖ್ಯೆಯೂ ಐದೈದಕ್ಕೆ ಸಂಗ್ರಾಹಕಗಳಾದ ಧರ್ಮವಿಶೇಷಗಳಿಲ್ಲದೆ ನಿವಿಷ್ಟವಾಗುವುದಿಲ್ಲ.) (2) ಮತ್ತು ಸಾಂಖ್ಯಸಿದ್ಧಾಂತದಲ್ಲಿ ಹೇಳಿದ (೨೫) ಇಪ್ಪತ್ತೈದೇ ತತ್ವಗಳು ಇಲ್ಲಿ ತೋರುವುದಲ್ಲ. ‘ಯಸ್ಮಿನ್’ ಎಂದು ನಿರ್ದಿಷ್ಟನಾದ ಆತ್ಮನೂ ‘ಆಕಾಶಶ್ಚ’ ಎಂದು ನಿರ್ದಿಷ್ಟವಾದ ಆಕಾಶವೂ ಹೆಚ್ಚು ತೋರುತ್ತದೆ. ಆತ್ಮನಿಗೂ ಆಕಾಶಕ್ಕೂ ಇಪ್ಪತ್ತೈದರಲ್ಲಿ ಅಂತರ್ಭಾವವಿದ್ದರೆ ‘ಯಸ್ಮಿನ್’ ಎಂದು ಆತ್ಮನನ್ನು ಅಧಿಕರಣವಾಗಿ ಹೇಳಿದ್ದೂ ಆಕಾಶವನ್ನು ಪ್ರತ್ಯೇಕ ಹೇಳಿದ್ದೂ ಕೂಡಲಾರದು. ಆದುದರಿಂದ ಸಾಂಖ್ಯಪ್ರಸಿದ್ಧ ತತ್ವಗಳನ್ನು ಪ್ರತ್ಯಭಿಜ್ಞೆಮಾಡದಿರುವುದರಿಂದ ಪ್ರಧಾನಾದಿಗಳಿಗೆ ಶಬ್ದಬೋಧ್ಯತ್ವವಿಲ್ಲವೆಂದು ಅದ್ವೈತಿಗಳು ಹೇಳುತ್ತಾರೆ.

(3) ಇಲ್ಲಿ ಸಿದ್ಧಾಂತಿಗಳು ಹೀಗೆ ಹೇಳಬೇಕು. (೧) ೨೫ ತತ್ವಗಳು ಇವೆ ಎನ್ನುವ ಪ್ರಕ್ರಿಯೆಯು ಸರ್ವಥಾ ಅಪ್ರಾಮಾಣಿಕವು ಎಂದಭಿಪ್ರಾಯವೋ (೨) ಅಥವಾ ಈ ವಾಕ್ಯವು ೨೫ ತತ್ವಗಳನ್ನು ಹೇಳುವುದಿಲ್ಲವೆಂದೋ, ಎರಡು ಪಕ್ಷಗಳೂ ಅನುಪಪನ್ನಗಳೆನ್ನುತ್ತಾರೆ—

**ಮೂ ॥ ಯತ್ತತ್ತ್ರಿಗುಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ ॥ ೫೫ ॥**
**ಪ್ರಧಾನಂ ಪ್ರಕೃತಿಂ ಪ್ರಾಹುರವಿಶೇಷಂ ವಿಶೇಷವತ್ ।**
**ಪಂಚಭಿಃಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ॥ ೫೬ ॥**
**ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ ।**
**(ಭಾ. ಸ್ಕಂ. ೩. ಅಧ್ಯಾ. ೨೬. ಶ್ಲೋ೧೧. ೧೨.)**
**ಇತಿ ಭಾಗವತೇ ಪ್ರಾಹ ವಿದ್ಯಾಧೀಶಃ ಸ್ವಯಂ ಪ್ರಭುಃ ॥ ೫೭ ॥**

ಅ ॥ ಯತ್=ಯಾವುದು, ತ್ರಿಗುಣಂ=ಸತ್ವ-ರಜ-ಸ್ತಮೋಗುಣಗಳುಳ್ಳದ್ದು, ಅವ್ಯಕ್ತಂ= ವ್ಯಕ್ತವಲ್ಲದಿರುವುದು, ನಿತ್ಯಂ=ನಿತ್ಯವಾದುದು, ಸದಸದಾತ್ಮಕಂ=ಸ್ಥೂಲ ಸೂಕ್ಷ್ಮರೂಪವಾದುದು, ಅಥವಾ ಕಾರ್ಯಕಾರಣಾತ್ಮಕವಾದುದು, ಅವಿಶೇಷಂ=ವಿಶೇಷವಿಲ್ಲದಿರುವುದು. ಅಂದರೆ ತಾನು

ಮತ್ತೊಂದರ ವಿಕಾರವಾಗುವುದಿಲ್ಲ. ವಿಶೇಷವತ್=ವಿಶೇಷವುಳ್ಳದ್ದು, ತತ್=ಅಂತಹುದನ್ನು, ಅವಿಶೇಷಂ=ಅವಿಶೇಷತ್ವದಿಂದ, ಅಂದರೆ ಅಕಾರ್ಯವಾಗಿರುವುದರಿಂದ, ಪ್ರಧಾನಂ=ಪ್ರಧಾನವನ್ನಾಗಿಯೂ, ವಿಶೇಷವತ್= ವಿಶೇಷವತ್ವದಿಂದ, ಅಂದರೆ ಕಾರ್ಯವಾಗಿರುವುದರಿಂದ, ಪ್ರಕೃತಿಂ=ಪ್ರಕೃತಿಯನ್ನಾಗಿಯೂ, ಪ್ರಾಹುಃ=ಹೇಳುತ್ತಾರೆ. (ವಿಶೇಷವತ್=ವಿಶೇಷವುಳ್ಳದ್ದು ಹೇಗೆಂದರೆ) ಪಂಚಭಿಃ = ಪೃಥಿವೀ-ಅಪ್-ತೇಜಸ್ಸು ವಾಯು-ಆಕಾಶ ಎನ್ನುವ ಐದು ಮಹಾಭೂತಗಳಿಂದ, ಪಂಚಭಿಃ=ಐದು ತನ್ಮಾತ್ರೆಗಳಿಂದ (ರೂಪ-ರಸ-ಗಂಧ-ಸ್ಪರ್ಶ-ಶಬ್ದಗಳಿಂದ) ಚತುರ್ಭಿಃ=ಮಹತ್ತತ್ವ-ಅಹಂಕಾರತತ್ವ ಮನಸ್ತತ್ವ-ಬುದ್ಧಿತತ್ವ ಈ ನಾಲ್ಕರಿಂದ, ತಥಾ=ಹಾಗೆ, ದಶಭಿಃ=ವಿಕಾರಭೂತಗಳಾದ ೨೦ ಇಂದ್ರಿಯಗಳಿಂದ, (ಬುದ್ಧೀಂದ್ರಿಯಗಳು ಚಕ್ಷುಸ್ಸು-ಶ್ರೋತ್ರ-ಘ್ರಾಣ-ರಸನ-ತ್ವಕ್ ಹೀಗೆ ೫ ಕರ್ಮೇಂದ್ರಿಯಗಳು ವಾಕ್-ಪಾಣಿ-ಪಾದ-ಪಾಯು-ಉಪಸ್ಥ ಹೀಗೆ ೫ಕೂಡಿ ೧೦ ಇವುಗಳಿಂದ) ಬ್ರಹ್ಮ=ಪೂರಿತವಾದ, ಏತತ್=ಈ, ಚತುರ್ವಿಂಶತಿಕಂ ಗಣಂ= ಈ ಇಪ್ಪತ್ತನಾಲ್ಕು ತತ್ವಸಮೂಹವನ್ನು, ಪ್ರಾಧಾನಿಕಂ=ಪ್ರಧಾನಕಾರ್ಯವನ್ನಾಗಿ, ವಿದುಃ= ತಿಳಿಯುತ್ತಾರೆ. ಇತಿ=ಹೀಗೆ, ವಿದ್ಯಾಧೀಶಃ=ವಿದ್ಯೆಗಳಿಗೆ ನಿಯಾಮಕರಾದ, ಪ್ರಭುಃ= ವೇದವ್ಯಾಸರು, ಸ್ವಯಂ=ತಾನೇ, ಭಾಗವತೇ=ಭಾಗವತದಲ್ಲಿ, ಪ್ರಾಹ=ಹೇಳಿದರು.

**ತಾ ॥ ನ್ಯಾಯಸುಧಾ—** (1) ಸೂತ್ರಕಾರರು ಗ್ರಂಥಾಂತರದಲ್ಲಿ (೨೫) ಇಪ್ಪತ್ತೈದು ತತ್ವಗಳನ್ನು ಪ್ರತಿಪಾದಿಸಿರುವುದರಿಂದ ೨೫ ತತ್ವಗಳು ಎನ್ನುವ ಪ್ರಕ್ರಿಯೆಯೇ ಅಪ್ರಾಮಾಣಿಕವು ಎನ್ನುವ ೧ನೇ ಕಲ್ಪವು ಅಯುಕ್ತವು. ಹಾಗಾದರೆ ಇದು ಕಪಿಲದೇವಹೂತಿಯರ ಸಂವಾದಾನುವಾದವು; ಆದಕಾರಣ ಸೂತ್ರಕಾರರಿಗೆ ಈ ವಚನಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವು. ಎಂದರೆ- ೧ ಪ್ರಮಿತವಾದುದಕ್ಕೆ ಅನುವಾದವೋ, ೨ ಕಲ್ಪಿತವಾದುದಕ್ಕೆ ಅನುವಾದವೋ, ೧ನೇ ಕಲ್ಪದಲ್ಲಿ ಆ ಪ್ರಮಾಣಗಳಿಂದಲೇ ೨೫ ತತ್ವಗಳ ಸಿದ್ಧಿಯಾಗುತ್ತದೆ. ೨ನೇದ್ದೂ (ಕಲ್ಪಿತಕ್ಕೆ ಅನುವಾದವೆಂದೂ) ವ್ಯರ್ಥವಾದುದರಿಂದ ಕೂಡಲಾರದು. ದೂಷಿಸುವುದಕ್ಕಾಗಿ ಅನುವಾದವೆಂದೂ ಹೇಳಕೂಡದು. ಅಲ್ಲಿ ದೂಷಣವೇ ಮಾಡಲಿಲ್ಲ. ಇಲ್ಲಿ ದೂಷಿಸುತ್ತೇನೆಂದರೆ— ಗ್ರಂಥಾಂತರದಲ್ಲಿ ಅನುವಾದವು, ಗ್ರಂಥಾಂತರದಲ್ಲಿ ದೂಷಣವು ಎನ್ನುವುದು ಕೂಡಲಾರದು. (2) ಹಿಂದೆಹೇಳಿದ ಎರಡನೇ ಕಲ್ಪವು ಅಂದರೆ ಈ ವಾಕ್ಯವು ೨೫ ತತ್ವಪ್ರತಿಪಾದಕವಾಗುವುದಿಲ್ಲವೆನ್ನುವ ಪಕ್ಷವೂ ಸರಿಯಲ್ಲ. ಈ ಪಕ್ಷದಲ್ಲಿ ವಿರೋಧವೇ ಇಲ್ಲವು. (3) ನಾನಾಭಾವಾತ್ ಎಂದು ಯಾವುದು ಉಕ್ತವಾಗಿದೆಯೋ ಅದು ಅಯುಕ್ತವು. ಸೂತ್ರಕಾರರಿಗೂ ಸಂಗ್ರಾಹಕಧರ್ಮವಿಲ್ಲದಿರುವುದರಿಂದ 'ಪಂಚಭಿಃ ಪಂಚಭಿಃ' ಇದು ಮೊದಲಾದ ಭಾಗವತೋಕ್ತಿಯು ಕೂಡದೆ ಹೋಗಬೇಕಾಗುವುದು. (4) ಹಾಗಾದರೆ ಭೂತತ್ವ, ತನ್ಮಾತ್ರತ್ವ, ಇಂದ್ರಿಯತ್ವಾದಿಗಳು, ಸಂಗ್ರಾಹಕ ದರ್ಮಗಳು ಇವೆ ಎಂದರೆ—ಹಾಗಾದರೆ ಹಾಗೆಯೇ ಭೂತತ್ವ, ತನ್ಮಾತ್ರತ್ವ, ಜ್ಞಾನೇಂದ್ರಿಯತ್ವ, ಕರ್ಮೇಂದ್ರಿಯತ್ವ ಹೇಳಿದ ಇಪ್ಪತ್ತರಿಂದ ಅನ್ಯತ್ವಗಳೆನ್ನುವ ಸಂಗ್ರಾಹಕ ಧರ್ಮಗಳೂ ಕೂಡ ಶ್ರುತಿಯಲ್ಲಿಯೂ ಇರುತ್ತವೆ ಎನ್ನುವುದು ಸಮಾನವೇ. ಅಂದರೆ—'ಪಂಚ ಪಂಚ ಜನಾಃ' ಎನ್ನುವ ಶ್ರುತಿಯಲ್ಲಿಯೂ ಪೃಥಿವ್ಯಾದಿಗಳಲ್ಲಿ ಭೂತತ್ವವೂ, ಶಬ್ದಾದಿಗಳಲ್ಲಿ ತನ್ಮಾತ್ರತ್ವವೂ, ಘ್ರಾಣಾದಿಗಳಲ್ಲಿ ಬಾಹ್ಯಜ್ಞಾನೇಂದ್ರಿಯತ್ವವೂ ವಾಗಾದಿಗಳಲ್ಲಿ ಕರ್ಮೇಂದ್ರಿಯತ್ವವೂ, ಮಹದಹಂಕಾರ ಮನಃಪ್ರಕೃತಿಪುರುಷರಲ್ಲಿ ಹೇಳಿದ ೨೦ರಿಂದ ಅನ್ಯತ್ವವೂ ಕೂಡುವುದರಿಂದ ಸೂತ್ರದಲ್ಲಿದ್ದ ನಾನಾಭಾವಾತ್ ಎನ್ನುವ ಹೇತುವು ಅಸಿದ್ಧವು. ಮಧ್ಯದಲ್ಲಿ ಸಂಗ್ರಾಹಕ ಪ್ರಮಾಣವಿಲ್ಲದೆ, ಸಂಖ್ಯಾನಿವೇಶವಿಲ್ಲವೆನ್ನುವ ನಿಯಮವಿಲ್ಲವು. **'ಪಂಚ ಸಪ್ತ ಚ ವರ್ಷಾಣಿ ನ ವವರ್ಷ ಶತಕ್ರತುಃ'**=ದೇವೇಂದ್ರನು ೫. ೭. ಅಂತೂ ೧೨ ವರ್ಷ ಮಳೆ ಸುರಿಸಲಿಲ್ಲ. **'ವ್ರತಮೇತದನುಷ್ಠೇಯಂ ವರ್ಷಾಣಿ ನವ ಪಂಚ ಚ'**=

೯. ೫. ಅಂತೂ ೧೪ ವರ್ಷಗಳಲ್ಲಿ ಈ ವ್ರತವನ್ನು ಮಾಡಬೇಕು, ಇತ್ಯಾದಿಗಳಲ್ಲಿ ೫. ೭. ಇವುಗಳಿಗೂ, ೯. ೫. ಇವುಗಳಿಗೂ ಸಂಗ್ರಾಹಕಧರ್ಮವಿಶೇಷವಿಲ್ಲವಾದರೂ ಅವಾಂತರ ಸಂಖ್ಯೆಗಳನ್ನು ನಿವೇಶಮಾಡಿರುವುದರಿಂದ ವ್ಯಭಿಚಾರವು ಬರುವುದು. (5) ಅತಿರೇಕಾಚ್ಚ ಎಂದು ಯಾವುಥು ಉಕ್ತವಾಗಿಯದೋ, ಅದೂ ಅಯುಕ್ತವು. ಪಾತಂಜಲರು ಈಶ್ವರನನ್ನೂ ಅಂಗೀಕರಿಸಿರುವರು. ತಥಾಚ ಜೀವನು ೨೫ ತತ್ವಗಳಲ್ಲಿ ಸೇರಿದಾಗ್ಯೂ ಜೀವನಿಂದ ಇತರನಾದ ಈಶ್ವರನಿಗೆ ಯಸ್ಮಿನ್ ಎನ್ನುವ ಅಧಿಕರಣತ್ವ ವಚನವು ಕೂಡುತ್ತದೆ. 'ಆಕಾಶಶ್ಚ ಪ್ರತಿಷ್ಠಿತಃ' ಎನ್ನುವುದು ಆಕಾಶ ಮೊದಲಾದ, ಪಂಚ ಪಂಚ ಜನಾಃ=೨೫ ಜನರು ಯಾರಲ್ಲಿ ಆಶ್ರಿತರಾಗಿರುತ್ತಾರೋ ಎಂದು ವ್ಯಾಖ್ಯಾನವು ಉಪಪನ್ನವಾಗುತ್ತದೆ. (6) ಮತ್ತು ೧ ಈ ವಾಕ್ಯವನ್ನು ೨೫ ತತ್ವಗಳು ಸಿದ್ಧಿಯಾಗುವುದಕ್ಕಾಗಿ ಸಾಂಖ್ಯನು ತನ್ನ ಶಾಸ್ತ್ರದಲ್ಲಿ ಹೇಳಿದರಿಂದ ಆಶಂಕಿಸಿಕೊಂಡದ್ದೋ, ೨ ಸಂಭಾವನಾವಿಷಯಕವಾಗಿರುವುದರಿಂದ ಆಶಂಕಿಸಿಕೊಂಡದ್ದೋ, ಎರಡೂ ಕೂಡುವುದಿಲ್ಲ. 'ಪಂಚ ಪಂಚ ಜನಾಃ' ಎನ್ನುವುದು (೨೫) ಇಪ್ಪತ್ತೈದು ಎನ್ನುವುದನ್ನು ತಿಳಿಸಿಕೊಡುವುದಿಲ್ಲ; 'ಪಂಚ ಜನಾಃ' ಎನ್ನುವುದು ಸಮಾಸವಾದರೆ 'ಪಂಚ ಎನ್ನುವ ೧ನೇ ಪಂಚ ಶಬ್ದವು 'ಪಂಚ ಜನಾಃ' ಎನ್ನುವಲ್ಲಿದ್ದ ಪಂಚ ಶಬ್ದದಿಂದ ಸಂಬಂಧವನ್ನು ಹೊಂದುವುದಿಲ್ಲ. ವಿಶೇಷಣವಾದ ೧ನೇ ಪಂಚ ಶಬ್ದಕ್ಕೆ ಉಪಸರ್ಜನವಾದ ೨ನೇ ಪಂಚಶಬ್ದದಿಂದ (ಸಮಾಸದಲ್ಲಿ ಗುಣಭೂತವಾದ ಪಂಚ ಶಬ್ದದಿಂದ) ಸಂಬಂಧವು ಕೂಡಲಾರದು. ೧ನೇ ಪಂಚಶಬ್ದವು ಜನ ಶಬ್ದದಿಂದಲೂ ಸಂಬಂಧವನ್ನು ಹೊಂದುವುದಿಲ್ಲ. ಏಕೆಂದರೆ— ಪಂಚಜನರು ಎಷ್ಟುಮಂದಿ ಎಂದು ಆಕಾಂಕ್ಷೆಯು ಹುಟ್ಟದಿರುವುದರಿಂದ ವಿಶೇಷಣಭೂತವಾದ ೧ನೇ ಪಂಚ ಶಬ್ದಕ್ಕೆ ಜನಶಬ್ದದಿಂದ ಸಂಬಂಧವು ಕೂಡಲಾರದು. (7) ಪಂಚ ಜನಾಃ ಎನ್ನುವುದು ಸಮಾಸವಲ್ಲ. ಪ್ರತ್ಯೇಕ ಪದವೆಂದಂಗೀಕರಿಸಿದರೂ ೧ನೇ ಪಂಚಶಬ್ದಕ್ಕೆ ೨ನೇ ಪಂಚಶಬ್ದದಿಂದ ಸಂಬಂಧವೂ ಕೂಡಲಾರದು. ಎರಡು ಪಂಚ ಶಬ್ದಗಳೂ ಪಂಚತ್ವಸಂಖ್ಯೆಯುಳ್ಳ ವಸ್ತುಗಳನ್ನು ಹೇಳತಕ್ಕವುಗಳಾದುದರಿಂದ ಒಂದೇ ಅರ್ಥವುಳ್ಳವುಗಳಾದಪ್ರಯುಕ್ತ ಪರಸ್ಪರವಾಗಿ ವಿಶೇಷಣ ವಿಶೇಷ್ಯಭಾವವು ಕೂಡಲಾರದು. ಜನ ಶಬ್ದದಿಂದಲೂ ಸಂಬಂಧವು ಕೂಡಲಾರದು. ಜನರು ಎಷ್ಟು ಮಂದಿ ಎಂದಾಕಾಂಕ್ಷೆಯು ಹುಟ್ಟಲು ಪಂಚ ಎನ್ನುವ ವಚನದಿಂದ ಆಕಾಂಕ್ಷೆಯು ಪೂರ್ಣವಾಗಿರುವುದರಿಂದ ಪಂಚಜನರು ಪುನಃ ಎಷ್ಟು ಮಂದಿ ಎಂದು ಆಕಾಂಕ್ಷೆಯು ಹುಟ್ಟದಿರುವುದರಿಂದ ಎರಡನೇ ಪಂಚ ಎನ್ನುವ ವಿಶೇಷಣಕ್ಕೆ ಆಕಾಂಕ್ಷೆಯೇ ಇಲ್ಲದಿರುವುದರಿಂದ ವೈಯರ್ಥ್ಯವು. ಪಂಚಜನರು ಎಷ್ಟುಮಂದಿ ಎಂದು ಕಥಂಚಿತ್ ಆಕಾಂಕ್ಷೆಯು ಬಂದರೂ ಮತ್ತೊಂದು ಪಂಚ ಎಂದು ಹೇಳಿದರೆ ಐದು, ಮತ್ತೊಂದು ಐದು ಅಂತೂ ಹತ್ತು (೧೦) ಎಂದೇ ಜ್ಞಾನವು ಬರುತ್ತದೆ. (8) ಹಾಗಾದರೆ ಪಂಚಜನಾಃ ಎನ್ನುವುದು ಸಮಾಹಾರದ್ವಿಗುಸಮಾಸವು. ಅದಕ್ಕೆ ಪಂಚ ಎನ್ನುವುದು ವಿಶೇಷಣವಾದರೆ ೨೫ ಇಪ್ಪತ್ತೈದು ಎಂದಾಗುತ್ತದೆ, ಎಂದರೆ ಹೀಗೆ ಹೇಳಕೂಡದು. ಹಾಗಿದ್ದರೆ ಪಂಚಜನಾಃ ಎಂದು ಪುಲ್ಲಿಂಗವು ಕೂಡದೆ ಹೋಗುವುದು. ಅಂದರೆ **'ಅಕಾರಾಂತೋತ್ತರಪದೋ ದ್ವಿಗುಃ ಸಮಾಹಾರೇ ಸ್ತ್ರಿಯಾಮಿಷ್ಟಃ'** ಎನ್ನುವ ವಾರ್ತಿಕದಿಂದ 'ಪಂಚಾನಾಂ ಫಲಾನಾಂ ಸಮಾಹಾರಃ ಪಂಚಫಲೀ' ಎಂದು ಆದ ಹಾಗೆಯೇ 'ಪಂಚಾನಾಂ ಜನಾನಾಂ ಸಮಾಹಾರಃ ಪಂಚಜನೀ' ಎಂದಾಗಬೇಕಿದ್ದಿತು. ಅಂತೂ ಬಹುವಚನದಲ್ಲಿ ಪಂಚಜನ್ಯಃ ಎಂದಾಗಬೇಕಿದ್ದಿತು. ಪಂಚ ಜನಾಃ ಎನ್ನುವ ಪುಲ್ಲಿಂಗವು ಅನುಪಪನ್ನವೇ ॥ ೫೫ ॥ ೫೬ ॥ ೫೭ ॥ ೧ ॥ ೪ ॥ ೩ ॥

'ಕಾರಣತ್ವೇನ ಚಾಕಾಶಾದಿಷು' ಇತ್ಯಾದಿ ಸೂತ್ರಗಳ ಅಪವ್ಯಾಖ್ಯಾನದಲ್ಲಿ (ಮಾಯಾವಾದಿಗಳ ವ್ಯಾಖ್ಯಾನದಲ್ಲಿ)· **ಅಧ್ಯಾಯಸಂಗತೇಃಪಾದಸಂಗತೇರಪ್ಯಭಾವತಃ । ಪೂರ್ವಪಕ್ಷಾ**

**ನುತ್ಪತ್ತೇಶ್ಚ ಸಿದ್ಧಾಂತಸ್ಯಾಪ್ಯಯೋಗತಃ**=ಅಧ್ಯಾಯ ಸಂಗತಿಯೂ ಪಾದಸಂಗತಿಯೂ ಇಲ್ಲ, ಪೂರ್ವಪಕ್ಷವೂ ಹುಟ್ಟುವುದಿಲ್ಲ, ಸಿದ್ಧಾಂತವೂ ಕೂಡುವುದಿಲ್ಲ. ಇತ್ಯಾದಿ ಚಂದ್ರಿಕಾದಲ್ಲಿ ಹೇಳಿದ ರೀತಿಯಾಗಿ ದೂಷಣಗಳು ಅತಿಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ದೂಷಿಸಲಿಲ್ಲ.
॥ ಅಧಿ. ॥ ॥ ೪ ॥ ೫ ॥

**ನ್ಯಾಯಸುಧಾ**—(1) ಪರಬ್ರಹ್ಮನು ಜಗತ್ತಿಗ **ಉಪಾದಾನಕಾರಣನು** ಎಂದು ಪ್ರತಿಪಾದಿಸುವುದಕ್ಕಾಗಿ 'ಪ್ರಕೃತಿಶ್ಚ' ಎನ್ನುವ ಪ್ರಕೃತ್ಯಧಿಕರಣವು ಎಂದು ಮಾಯಾವಾದಿಗಳು ವ್ಯಾಖ್ಯಾನ ಮಾಡುತ್ತಾರೆ. ಹೇಗೆಂದರೆ—'ಜನ್ಮಾದ್ಯಸ್ಯ ಯತಃ' ಎನ್ನುವಲ್ಲಿ ಬ್ರಹ್ಮನು ಜಗತ್ಕಾರಣನೆಂದು ಹೇಳಲ್ಪಟ್ಟಿರುತ್ತಾನೆ. ಆ ವಿಷಯದಲ್ಲಿ ಬ್ರಹ್ಮನು ಉಪಾದಾನ ಕಾರಣನೋ ನಿಮಿತ್ತ ಕಾರಣನೋ ಎಂದು ಸಂಶಯವು. 'ಸ ಈಕ್ಷಾಂಚಕ್ರೇ, ಸ ಪ್ರಾಣಮಸೃಜತ' ಎಂದು ಈಕ್ಷಾಪೂರ್ವಕವಾಗಿ ಕರ್ತೃತ್ವವು ಶ್ರುತವಾಗಿರುವುದರಿಂದ ನಿಮಿತ್ತಕಾರಣನೆಂದೇ ಪೂರ್ವಪಕ್ಷವು ಪ್ರಾಪ್ತವಾದರೆ ಅದ್ವೈತಿಗಳು ಸಮಾಧಾನವನ್ನು ಹೇಳುವರು. ಹೇಗೆಂದರೆ—

(2) **ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್**=ಬ್ರಹ್ಮನು ಕೇವಲ ನಿಮಿತ್ತ ಕಾರಣನೇ ಅಲ್ಲವು. ಮತ್ತೆ ಪ್ರಕೃತಿಃ=ಉಪಾದಾನಕಾರಣನೂ ಆಗಿರುತ್ತಾನೆ. ೧ ಪ್ರತಿಜ್ಞಾ ೨ ದೃಷ್ಟಾಂತಗಳ ಅನುಸರಣದಿಂದ; ಅಂದರೆ ೧ 'ಯೇನಾಶ್ರುತಂ ಶ್ರುತಂ ಭವತಿ' ಎಂದು ಬ್ರಹ್ಮಜ್ಞಾನದಿಂದ ಸರ್ವ ವಿಜ್ಞಾನವು ಪ್ರತಿಜ್ಞಾತವಾಗಿದೆ. ಅದು ಬ್ರಹ್ಮನಿಗೆ ಜಗದುಪಾದಾನಕಾರಣತ್ವ ವಿದ್ದರೇನೇ ಉಪಪನ್ನವಾಗುತ್ತದೆ. ಕಾರ್ಯಕ್ಕೆ ಉಪಾದಾನಕಾರಣದಿಂದ ಅಭೇದವು. ನಿಮಿತ್ತ ಕಾರಣದಿಂದ ಅಭೇದವಿಲ್ಲ. ಆದುದರಿಂದ ಉಪಾದಾನಭೂತನಾದ ಬ್ರಹ್ಮನ ಜ್ಞಾನದಿಂದ ಬ್ರಹ್ಮಾಭಿನ್ನವಾದ ಜಗತ್ತಿನ ಜ್ಞಾನವು ಆಗುತ್ತದೆಂದು ಹೇಳಿದ್ದು ಕೂಡುತ್ತದೆ. ೨ ದೃಷ್ಟಾಂತವು 'ಯಥಾ ಸೌಮ್ಯೈಕೇನ ಮೃತ್ಪಿಂಡೇನ' ಇದು ಮೊದಲಾದ ಉಪಾದಾನವಿಷಯಗಳು ಹೇಳಲ್ಪಟ್ಟವೆ. **'ಯತೋ ವಾ ಇಮಾನಿ ಭೂತಾನಿ ಜಾಯಂತೇ'** ಎನ್ನುವಲ್ಲಿದ್ದ ಯತಃ ಎನ್ನುವ ಪಂಚಮಿಯು ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ತಿಳಿಸಿಕೊಡುತ್ತದೆ. (3) **'ಅಭಿಧ್ಯೋಪದೇಶಾಚ್ಚ'='ಸೋಽಕಾಮಯತ। ಬಹು ಸ್ಯಾಂ'** ಎಂದು ಇಚ್ಛಾಪೂರ್ವಕವಾಗಿ ಬಹು ಪದಾರ್ಥರೂಪವಾಗಿ ಪರಿಣಾಮವನ್ನು ಹೇಳಿರುವುದರಿಂದಲೂ ಶ್ರೀ ಪರಬ್ರಹ್ಮನಿಗೆ ನಿಮಿತ್ತ ಕಾರಣತ್ವವೂ ಉಪಾದಾನಕಾರಣತ್ವವೂ ತಿಳಿಯಲ್ಪಡುತ್ತದೆ. ಅಂದರೆ ಇಚ್ಛಾಪೂರ್ವಕವಾಗಿ ಸ್ವತಂತ್ರಪ್ರವೃತ್ತಿಯನ್ನು ಹೇಳಿರುವುದರಿಂದ ನಿಮಿತ್ತಕಾರಣತ್ವವೂ ತನಗೆ ಬಹುಭವನವನ್ನು ಹೇಳಿರುವುದರಿಂದ ಕಾರ್ಯಕಾರಣಗಳಿಗೆ ಅಭೇದವನ್ನು ಸೂಚಿಸಿರುವುದರಿಂದ ಉಪಾದಾನಕಾರಣತ್ವವೂ ತಿಳಿಯಲ್ಪಡುತ್ತದೆ. (4) **ಸಾಕ್ಷಾಚ್ಚೋಭಯಾಮ್ನಾನಾತ್='ಸರ್ವಾಣಿ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತಿ'** ಎಂದು ಸಾಕ್ಷಾತ್ ಬ್ರಹ್ಮನೇ ಉಪಾದಾನಕಾರಣನೆಂದು ಇಟ್ಟುಕೊಂಡು ಉತ್ಪತ್ತಿ-ಪ್ರಲಯಗಳೆರಡನ್ನು ಹೇಳಿಯದೆ. ಯಾವುದು ಯಾರದ್ದೆಶೆಯಿಂದ ಹುಟ್ಟುತ್ತದೋ ಯಾರಲ್ಲಿ ಲೀನವಾಗುತ್ತದೋ ಅದು ಅದಕ್ಕೆ ಉಪಾದಾನಕಾರಣವೆಂದು ಪ್ರಸಿದ್ಧವು. ಉಪಾದಾನದಿಂದ ಬೇರೆಕಡೆ ಕಾರ್ಯಕ್ಕೆ ಲಯವೂ ದೃಷ್ಟವಾಗಲಿಲ್ಲ. (5) **'ಆತ್ಮಕೃತೇಃ ಪರಿಣಾಮಾತ್'='ತದಾತ್ಮಾನಂಸ್ವಯಮಕುರುತ'** ಎಂದು ಆತ್ಮನಿಗೆ ಕರ್ಮತ್ವವು ಶ್ರುತವಾಗಿರುವುದರಿಂದ ಬ್ರಹ್ಮನು ಉಪಾದಾನ ಕಾರಣನು. ಕರ್ತೃತ್ವವು ಶ್ರುತವಾಗಿರುವುದರಿಂದ ನಿಮಿತ್ತಕಾರಣನು. (6) **'ಯೋನಿಶ್ಚ ಹಿ ಗೀಯತೇ'='ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ'** ಎಂದು ಬ್ರಹ್ಮನು ಉಪಾದಾನ

ಕಾರಣನೆಂದು ಪ್ರತಿಪಾದಿತನಾಗಿರುತ್ತಾನೆ. ಆದುದರಿಂದಲೂ ಬ್ರಹ್ಮನು ಉಪಾದಾನಕಾರಣನು ಎಂದರೆ— ಈ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ—

**ಮೂ ॥ ನ ಚ ಪ್ರಕೃತಿಶಬ್ದೇನ ಬ್ರಹ್ಮೋಪಾದಾನಮುಚ್ಯತೇ ।**
**ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ ॥ ೫೮ ॥**
**ಸದೈಕರೂಪವಿಜ್ಞಾನಬಲ ಆನಂದರೂಪಕಃ ।**
**ನಿರ್ವಿಕಾರೋಽಕ್ಷರಃ ಶುದ್ಧೋ ನಿರಾತಂಕೋಽಜರೋಽಮರಃ ॥೫೯॥**
**ಅವಿಶ್ವೋ ವಿಶ್ವಕರ್ತಾಽಜೋ ಯಃ ಪರಃ ಸೋಽಭಿಧೀಯತೇ ॥**
**ನಿರ್ವಿಕಾರಮನೌಪಮ್ಯಂ ಸದೈಕರಸಮಕ್ಷಯಂ ॥ ೬೦ ॥**
**ಬ್ರಹ್ಮೇತಿ ಪರಮಾತ್ಮೇತಿ ಯಂ ವಿದುರ್ವೈದಿಕಾ ಜನಾಃ ।**
**ಇತಿ ಶ್ರುತಿಪುರಾಣೋಕ್ತ್ಯಾ ನ ವಿಕಾರೀ ಜನಾರ್ದನಃ ॥ ೬೧ ॥**

ಅ ॥ ಪ್ರಕೃತಿಶಬ್ದೇನ = ಪ್ರಕೃತಿ ಎನ್ನುವ ಶಬ್ದದಿಂದ, ಬ್ರಹ್ಮ=ಪರಬ್ರಹ್ಮನು, ಉಪಾದಾನಂ=ಉಪಾದಾನಕಾರಣನೆಂದು, ನ ಚ ಉಚ್ಯತೇ = ಹೇಳಿಸಿಕೊಳ್ಳಲ್ಪಡುವುದಿಲ್ಲ. ಹರಿಃ= ಶ್ರೀ ಪರಮಾತ್ಮನು, ಸದಾ=ಯಾವಾಗಲೂ, ಅವಿಕಾರಃ = ಸೃಷ್ಟಿಕಾಲದಲ್ಲಿಯೂ ಪರಿಣಾಮ ರಹಿತನು, ಸದಾ=ಯಾವಾಗಲೂ, ಶುದ್ಧಃ=ಜಡಾಮಿಶ್ರನು, ನಿತ್ಯಃ = ಉತ್ಪತ್ತಿವಿನಾಶಗಳಿಲ್ಲದಿರುವವನು, ಸದಾ=ಯಾವಾಗಲೂ, ಮುಕ್ತಿದಶೆಯಲ್ಲಿಯೂ, ಆತ್ಮಾ=ಸ್ವಾಮಿಯು, ಸದೈಕರೂಪವಿಜ್ಞಾನಬಲಃ = ಯಾವಾಗಲೂ ನಿರ್ವಿಕಾರಗಳಾದ ವಿಜ್ಞಾನಬಲಗಳುಳ್ಳವನು, ಆನಂದರೂಪಕಃ = ಆನಂದಸ್ವರೂಪನು, ನಿರ್ವಿಕಾರಃ=ಯಾವ ವಿಕಾರವೂ ಇಲ್ಲದವನು, ಅಕ್ಷರಃ= ಅವಿನಾಶಿಯು, ಶುದ್ಧಃ=ಜಡಾಮಿಶ್ರನು, ನಿರಾತಂಕಃ=ನಿರ್ಭಯನು, ಅಜರಃ=ಮುಪ್ಪು ಇಲ್ಲದವನು, ಅಮರಃ=ಮರಣವಿಲ್ಲದವನು, ಅವಿಶ್ವಃ=ಪ್ರಪಂಚಭಿನ್ನನು, ಅಂದರೆ, ಪ್ರಪಂಚರೂಪದಿಂದ ಪರಿಣಾಮವಿಲ್ಲದವನು, ವಿಶ್ವಕರ್ತಾ= ಸರ್ವಜಗತ್ಕರ್ತನು, ಅಜಃ=ಉತ್ಪತ್ತಿಯಿಲ್ಲದವನು, ಯಃ=ಯಾವನೋ, ಸಃ=ಆತನು, ಪರಃ= ಸರ್ವೋತ್ತಮನೆಂದೂ, ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. ನಿರ್ವಿಕಾರಂ=ನಿರ್ವಿಕಾರನು, ಅನೌಪಮ್ಯಂ=ಉಪಮಾವಿಷಯನಲ್ಲ, ಸದೈಕರಸಂ= ಯಾವಾಗಲೂ ಸ್ವಗತಭೇದವರ್ಜಿತನು, ಅಥವಾ ಪ್ರಧಾನ=ಆನಂದಸ್ವರೂಪನು, ಅಕ್ಷಯಂ= ನಾಶರಹಿತನೂ ಆದ, ಯಂ=ಯಾರನ್ನು, ವೈದಿಕಾಃ ಜನಾಃ=ವೈದಿಕಜನರು, ಬ್ರಹ್ಮೇತಿ= ಪರಬ್ರಹ್ಮನೆಂದೂ, ವಿದುಃ=ತಿಳಿಯುತ್ತಾರೋ, ಇತಿ=ಈ ಪ್ರಕಾರವಾದ, ಶ್ರುತಿಪುರಾಣೋಕ್ತ್ಯಾ= ಶ್ರುತಿಪುರಾಣಗಳ ವಚನದಿಂದ, ಜನಾರ್ದನಃ=ಶ್ರೀ ಹರಿಯು, ನ ವಿಕಾರೀ=ವಿಕಾರವುಳ್ಳವನು ಅಲ್ಲವೆಂದು, (ಗಮ್ಯತೇ=ತಿಳಿಯಲ್ಪಡುತ್ತಾನೆ.)

ತಾ ॥ ಸ. ರ. ವಿ— (1) ವಿಕಾರಿತ್ವವೇ ಉಪಾದಾನಕಾರಣತ್ವವು. ಬ್ರಹ್ಮನಿಗೆ ವಿಕಾರವೇ ಇಲ್ಲದಿರುವುದರಿಂದ ಉಪಾದಾನತ್ವವಿಲ್ಲ. ಬ್ರಹ್ಮನ ಧರ್ಮಗಳಾದ ಶಕ್ತ್ಯಾದಿಗಳಿಗೂ ನಿರ್ವಿಕಾರತ್ವವು ಶ್ರುತವಾಗಿರುವುದರಿಂದ ಉಪಾದಾನಕಾರಣತ್ವವಿಲ್ಲ. (2) ವಿಕಾರವು ಎರಡು ವಿಧವು. (೧) ಪೂರ್ವಾವಸ್ಥೆಯನ್ನು ಸಂಕೋಚಮಾಡಿ ಅನ್ಯಾಧೀನವಾದ ಅವಸ್ಥಾಂತರ ವಿಶೇಷವು, ಉದಾ– ಸುವರ್ಣಕ್ಕೆ ಕುಂಡಲಾದ್ಯಾಕಾರವು. (೨) ಮತ್ತೊಂದು ಅತ್ಯಂತವಾಗಿ ಪೂರ್ವಾವಸ್ಥೆಯು ಹೋಗಿ ಅವಸ್ಥಾಂತರಭಾವವು. ಉದಾ— ಕ್ಷೀರಕ್ಕೆ ದಧ್ಯಾಕ್ಯಾರವು. ಈ ಎರಡು ವಿಧವಾದ

ವಿಕಾರವೂ ಬ್ರಹ್ಮನಿಗೆ ಕೂಡಲಾರದು. ಏಕೆಂದರೆ— ಬ್ರಹ್ಮನು ಸರ್ವಥಾ ಅನ್ಯಾಧೀನನಲ್ಲ. ಪೂರ್ಣವಾದ (ಹೋಗದಿರುವ) ಸಾರ್ವಜ್ಞಾದ್ಯವಸ್ಥೆಯುಳ್ಳವನು.

**ನ್ಯಾಯಸುಧಾ**— (1) ಪ್ರಕೃತಿಶಬ್ದದಿಂದ ಬ್ರಹ್ಮನು ಉಪಾದಾನಕಾರಣನೆಂದು ಏಕೆ ಹೇಳಿಸಿಕೊಳ್ಳಲ್ಪಡುವುದಿಲ್ಲವೆಂದರೆ— ಇತರ ಪ್ರಮಾಣಗಳಿಂದ ಅವಿರುದ್ಧವಾದ ಸೂತ್ರಾರ್ಥವನ್ನೇ ಹೇಳಬೇಕು. ಬ್ರಹ್ಮನು ಉಪಾದಾನಕಾರಣನೆನ್ನುವುದು ಶ್ರುತ್ಯಾದಿಗಳಿಂದ ವಿರುದ್ಧವಾಗಿದೆ. ಪರಿಣಾಮಿಕಾರಣವು ಉಪಾದಾನವೆನ್ನಿಸುತ್ತದೆ. ಉದಾ— ಘಟಕ್ಕೆ ಮಣ್ಣು. ರುಚಕಾ (ಕಂಠ ಭೂಷಣಾ)ದಿಗಳಿಗೆ ಸುವರ್ಣಮೊದಲಾದುದು. ಬ್ರಹ್ಮನಿಗಾದರೂ ರೂಪಾಂತರಾಪತ್ತಿರೂಪವಾದ, ವಿಕಾರರೂಪವಾದ ಪರಿಣಾಮವು ಶ್ರುತ್ಯಾದಿಗಳಲ್ಲಿ ನಿಷಿದ್ಧವಾಗಿದೆ. (2) ವಿಕಾರವು ೧ ಧರ್ಮಿಗೆ, ಧರ್ಮಕ್ಕೆ ಎಂದು ಎರಡು ವಿಧವು. ೧ ಮೃದಾದಿರೂಪವಾದ ಧರ್ಮಿಗೆ ಘಟಾದ್ಯಾಪತ್ತಿಯು. ೨ ಧರ್ಮಕ್ಕೆ, ಬದರಾದಿ ಫಲಗಳಲ್ಲಿ ಶ್ಯಾಮತ್ವ-ರಕ್ತತ್ವಾದಿಗಳು. ಅವುಗಳಲ್ಲಿ 'ಅವಿಕಾರಃ ಸದಾ ಶುದ್ಧಃ' ಎನ್ನುವುದು ಧರ್ಮಿವಿಕಾರವನ್ನು ನಿಷೇಧಿಸುತ್ತದೆ. 'ಸದೈಕರೂಪ' ಎನ್ನುವುದು ಧರ್ಮವಿಕಾರವನ್ನು ನಿಷೇಧಿಸುತ್ತದೆ ॥ ೫೮ ॥ ೫೯ ॥ ೬೦ ॥ ೬೧ ॥

**ನ. ಚ. ವಿ**— ವಿಕಾರಭೇದಗಳನ್ನು ಹೇಳುತ್ತಾರೆ.

**ನ್ಯಾಯಸುಧಾ**— ಬ್ರಹ್ಮನಿಗೆ ವಿಕಾರಿತ್ವವು ಯುಕ್ತಿವಿರುದ್ಧವೂ ಆಗಿದೆ ಎಂದು ಹೇಳುವುದಕ್ಕಾಗಿ ವಿಕಾರಪ್ರಭೇದಗಳನ್ನು ಹೇಳುತ್ತಾರೆ—

**ಮೂ ॥ ಪರಾಧೀನವಿಶೇಷಾಪ್ತಿರನಿವರ್ತ್ಯೋಽ(ರ್ತ್ಯ)ನ್ಯಥಾಭವಃ ।**
**ಕ್ಷೀರಾದಿವದ್ವಿಕಾರಃ ಸ್ಯಾನ್ನೈವ ಸ ಸ್ಯಾದ್ಧರೇಃ ಕ್ವಚಿತ್ ॥ ೬೨ ॥**

ಅ ॥ ಪರಾಧೀನವಿಶೇಷಾಪ್ತಿಃ=ಪರಾಧೀನವಾದ ವಿಶೇಷಪ್ರಾಪ್ತಿರೂಪವಾದುದು, ವಿಶೇಷ ಪರಿವೃತ್ತಿರೂಪವಾದುದು, ಅನಿವರ್ತ್ಯಃ = ಅನಿವರ್ತ್ಯವಾದುದು, ಅನ್ಯಥಾಭವಃ = ನಿವರ್ತ್ಯವಾದುದು. ಕ್ಷೀರಾದಿವತ್=ಕ್ಷೀರಾದಿಗಳಂತೆಯೇ, ವಿಕಾರಃ=ವಿಕಾರವು, ಸ್ಯಾತ್=ಆಗುವುದು. ಸಃ=ಆ ವಿಕಾರವು, ಹರೇಃ=ಶ್ರೀ ಪರಮಾತ್ಮನಿಗೆ, ಕ್ವಚಿತ್=ಎಲ್ಲಿಯೂ, ನೈವ ಸ್ಯಾತ್= ಆಗಲಿಕ್ಕೇನೇ ಇಲ್ಲ.

**ತಾ ॥ ನ. ಚ. ವಿ**— (1) ವಿಶೇಷಾಪ್ತಿಯು ಎರಡು ವಿಧವು. ೧ನೇದ್ದು ಪರಿಣಾಮವಿಲ್ಲದೇನೇ ವಿಶೇಷಪ್ರಾಪ್ತಿರೂಪವಾದುದು. ಉದಾ—ಚೇತನರಿಗೆ ದೇಹಾಭಿಮಾನಾದಿಗಳು. ಹಿರಣ್ಯಾದಿಗಳಿಗೆ ಕುಂಡಲಾದಿಭಾವವು. ೨ನೇದ್ದು ಅನಿವರ್ತ್ಯಾನ್ಯಥಾಭವವೂ ಪರಿಣಾಮರೂಪ ಭಾವವಿಕಾರವು. ಉದಾ-ಕ್ಷೀರಕ್ಕೆ ದಧಿಭಾವವು. ಅನಿವರ್ತ್ಯಾನ್ಯಥಾಭವಕ್ಕೆ ಪರಾಧೀನವಿಶೇಷಾಪ್ತಿರೂಪತ್ವವಿದ್ದರೂ ಕುರುಪಾಂಡವನ್ಯಾಯದಿಂದ ಭೇದೋಕ್ತಿಯು ಯುಕ್ತವಾಗುತ್ತದೆ.

**ನ್ಯಾಯಸುಧಾ**— (1) ವಿಕಾರವು ಎರಡು ವಿಧವು. ೧ ವಿಶೇಷಾಪ್ತಿಯು. ೨ ವಿಶೇಷ ಪರಿವೃತ್ತಿಯೆಂದು. ಅದರಲ್ಲಿ ೧ ವಿಶೇಷಾಪ್ತಿಯೆಂದರೆ ಧರ್ಮಿಗೆ ಪರಿವೃತ್ತಿಯಿಲ್ಲದೆ (ಇದ್ದಹಾಗೆಯೇ ಇದ್ದು) ಧರ್ಮಮಾತ್ರಕ್ಕೆ ಪರಿವೃತ್ತಿಯು. ೨ ವಿಶೇಷಪರಿವೃತ್ತಿಯೆಂದರೆ ಧರ್ಮಿಸ್ವರೂಪಕ್ಕೇನೇ ಪರಿಣಾಮವು. ಈ ಎರಡುವಿಧವೂ ಪರಾಧೀನವಾಗುತ್ತದೆ. (2) ಪುನಃ ಪ್ರತಿಯೊಂದೂ ಎರಡು ಎರಡು ವಿಧವು. ೧ ಅನಿವರ್ತ್ಯವು. ೨ ನಿವರ್ತ್ಯವೆಂದು ಸ್ಫುಟವಾಗಿರುವುದರಿಂದ ಒಂದೊಂದು ಪ್ರಕಾರವನ್ನು ಹೇಳಲಿಲ್ಲ. (3) ಕ್ಷೀರಾದಿವತ್ ಎನ್ನುವುದು ನಾಲ್ಕಕ್ಕೂ ಉದಾಹರಣೆಯು.

ಕ್ಷೀರಾದಿಗಳಿಗೆ ದಧಿತ್ವಾದಿಗಳ ಪ್ರಾಪ್ತಿಯು. ೧ ಅನಿವರ್ತ್ಯವಿಶೇಷಾಪ್ತಿಗೆ ಉದಾ=ಶ್ಯಾಮ ಫಲಕ್ಕೆ ಪೀತತ್ವಪ್ರಾಪ್ತಿಯು. ೨ ನಿವರ್ತ್ಯವಿಶೇಷಾಪ್ತಿಗೆ, ಉದಾ=ಕುಂಡಲಾದ್ಯಾಕಾರವುಳ್ಳ ಸುವರ್ಣಕ್ಕೆ ಕಟಕಾದಿತ್ವಪ್ರಾಪ್ತಿಯು. ೩ ಅನಿವರ್ತ್ಯವಿಶೇಷಪರಿವೃತ್ತಿಗೆ, ಉದಾ— ಕ್ಷೀರಕ್ಕೆ ದಧಿ ಭಾವವು. ೪ ನಿವರ್ತ್ಯಧರ್ಮಿ ಪರಿವೃತ್ತಿಗೆ, ಉದಾ= ತಾಮ್ರಕ್ಕೆ ರಜತತ್ವವು. (4) ವಿಕಾರವು ಇಂತಹುದೆಂದಾದರೆ ಪ್ರಕೃತ ಏನಾಯಿತೆಂದರೆ— ಶ್ರೀಹರಿಯಲ್ಲಿ ಸರ್ವಥಾ ಇಂತಹ ವಿಕಾರ ವಿಲ್ಲವು. (5) ಎಲ್ಲಾ ವಿಕಾರವು ಪರಾಧೀನವಾಗುತ್ತದೆ. ಜಡಗಳಲ್ಲಿ ಪರಾಧೀನವಾದ ವಿಕಾರ ವಿರಲಿ. ಚೇತನನಾದ ಬ್ರಹ್ಮನಾದರೂ 'ತದಾತ್ಮಾನಂ ಸ್ವಯಮಕುರುತ' ಇತ್ಯಾದಿ ಶ್ರುತಿಗಳ ದ್ದೇಶಿಯಿಂದ ತನ್ನ ಇಚ್ಛೆಯಿಂದಲೇ ಜಗದಾಕಾರವಾಗಿ ವಿಕಾರವನ್ನು ಹೊಂದುತ್ತಾನೆ. ಎಂದರೆ, ಹಾಗೆ ಹೇಳಕೂಡದು. ಪ್ರೇಕ್ಷಾವುಳ್ಳ ಬ್ರಹ್ಮನಿಗೆ ಅನೇಕವಿಧಗಳಾದ ಅನರ್ಥರೂಪಗಳಾದ ಪ್ರಪಂಚರೂಪಗಳನ್ನು ಹೊಂದಲು ಇಚ್ಛೆಯೇ ಕೂಡಲಾರದು. ಉನ್ಮತ್ತರು ಸಹ ತಮಗೆ ಅನರ್ಥ ರೂಪತ್ವವನ್ನು ಇಚ್ಛಿಸಲಾರರು. ಪ್ರೇಕ್ಷಾವುಳ್ಳವರು ಸುತರಾಂ ಇಚ್ಛಿಸಲಾರರು. (6) ಮತ್ತು ಬ್ರಹ್ಮನಿಗೆ ಅನರ್ಥವಿಲ್ಲವಾದರೆ ಯಾರಿಗೆ ಅನರ್ಥವು? ಜೀವನಿಗೆ ಎಂದರೆ—ಜೀವನು ಬ್ರಹ್ಮನಿಂದ ಭಿನ್ನನೋ, ೨ ಅಭಿನ್ನನೋ, ೧ ಭಿನ್ನನೆಂದು ಹೇಳಕೂಡದು. ಅಪಸಿದ್ಧಾಂತವು. ೨ ಅಭಿನ್ನ ನೆಂದಾದರೆ ಬ್ರಹ್ಮನಿಗೂ ಅನರ್ಥವು ಬರಬೇಕಾಗುವುದು. ೩ ಭಿನ್ನಾಭಿನ್ನನೆಂದೂ ಹೇಳಕೂಡದು. ಅಭೇದಾಂಶದಿಂದ ಬ್ರಹ್ಮನಿಗೆ ಅನರ್ಥವು ತಪ್ಪಲಾರದು. ಮತ್ತು 'ಅತ ಏವ ಚೋಪಮಾ' ಎನ್ನುವಲ್ಲಿ ಈ ಪಕ್ಷವನ್ನು ಸೂತ್ರಕಾರರು ನಿರಾಕರಿಸುವರು. (7) ತಥಾಚ ಬ್ರಹ್ಮನಿಗೆ ಸರ್ವಥಾ ವಿಕಾರಿತ್ವವು ಕೂಡಲಾರದು. ಮತ್ತು ಯಾವರೀತಿಯಾಗಿಯೂ ಬ್ರಹ್ಮನಿಗೆ ಪ್ರಪಂಚ ಸ್ವರೂಪತ್ವವನ್ನು ತಿಳಿಯಕೂಡದು. ಪ್ರಪಂಚಾಕಾರತ್ವವು ಅನಿತ್ಯವೆಂದು ಇಟ್ಟುಕೊಂಡರೆ ಪ್ರಲಯಶ್ರುತಿಗೆ ವ್ಯಾಕೋಪವು ಬರುವುದು. ನಿಷ್ಪ್ರಪಂಚ ಬ್ರಹ್ಮಭಾವಾಪತ್ತಿರೂಪವಾದ ಮೋಕ್ಷವೂ ಇಲ್ಲವೆಂದಾಗುವುದು. (8) ಸ್ವರೂಪಪ್ರಚ್ಯುತಿ(ನಾಶ)ಯಿಂದ ಪ್ರಪಂಚರೂಪತ್ವವು ಯುಕ್ತವೆಂದು ಹೇಳಕೂಡದು. ಸ್ಥಿತಿಸಮಯದಲ್ಲಿ ಬ್ರಹ್ಮನು ಇಲ್ಲವೆಂದಾಗುವುದರಿಂದ ಬ್ರಹ್ಮ ಜ್ಞಾನವು ನಿರಾಲಂಬನವಾಗುವುದು. ಪ್ರಪಂಚರೂಪತ್ವವು ಅನಿವರ್ತ್ಯವಾದರೆ ಯಾವಾಗಲೂ ಬ್ರಹ್ಮನಿಗೆ ಸ್ಥಿತಿಯೇ ಕೂಡಲಾರದು ॥ ೬೨ ॥

ಈ ವಿಷಯದಲ್ಲಿ ರಾಮಾನುಜಾಚಾರ್ಯರು ಕುರುಡನನ್ನು ಅನುಸರಿಸಿಹೋಗುವ ಕುರುಡ ನಂತೆ 'ಪ್ರಕೃತಿಶ್ಚ' ಇತ್ಯಾದಿ ಸೂತ್ರಗಳನ್ನು 'ಬ್ರಹ್ಮನು ಜಗತ್ತಿಗೆ ನಿಮಿತ್ತಕಾರಣನು' ಎಂದು ಪ್ರತಿಪಾದಿಸುತ್ತವೆಂದು ವ್ಯಾಖ್ಯಾನಮಾಡಿ ಹಿಂದೆ ನಾವು ಹೇಳಿದ ದೂಷಣಗಳಿಂದ ಹೆದರಿ ಸೂತ್ರಕ್ಕೆ ತಾತ್ಪರ್ಯವನ್ನು ಹೇಳಿರುತ್ತಾರೆ. ಪರಮಸೂಕ್ಷ್ಮವಾದ ಅಚಿದ್ರೂಪವಾದ ಪ್ರಧಾನವೇ ಶರೀರವಾಗಿವುಳ್ಳವನು ಬ್ರಹ್ಮನು. ಈ ವಿಷಯವು 'ಯೋಽವ್ಯಕ್ತೇ ತಿಷ್ಠನ್ ಯಸ್ಯಾವ್ಯಕ್ತಂ ಶರೀರಂ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ಅಂತೂ ಬ್ರಹ್ಮಾಧಿಷ್ಠಿತವಾದ ಬ್ರಹ್ಮನಿಯಮ್ಯ ವಾದ ಪ್ರಧಾನವು ಜಗತ್ತಿಗೆ ಉಪಾದಾನಕಾರಣವಾಗಿರುವುದರಿಂದ ಬ್ರಹ್ಮನೇ ಜಗತ್ತಿಗೆ ಉಪಾದಾನ ಕಾರಣನೆಂದು ಅಂಗೀಕರಿಸುತ್ತೇವೆ. ಅಂದರೆ ಜಗತ್ತಿಗೆ ಉಪಾದಾನಕಾರಣವಾದ ಪ್ರಧಾನಾ ಧಿಷ್ಠಾತೃತ್ವವೇ ಬ್ರಹ್ಮನಿಗೆ ಉಪಾದಾನಕಾರಣತ್ವವು. ಜಗದ್ರೂಪವಾಗಿ ವಿಕಾರವಿರುವುದಲ್ಲ. ಆದ ಪ್ರಯುಕ್ತ ಹಿಂದಿನ ದೋಷವಿಲ್ಲವೆಂದು ತಾತ್ಪರ್ಯ ಹೇಳಿದರೆ—

**ಮೂ ॥ ಅಪಾದಾನತ್ವಮೇವಾಸ್ಯ ಯದ್ಯುಪಾದಾನತೇಷ್ಯತೇ ।**
**ಅಂಗೀಕೃತಂ ತತ್ಪಿತೃವನ್ನ ತು ವಿಶ್ವಾತ್ಮನಾ ಭವಃ ॥ ೬೩ ॥**

**ಅ ||** ಪಿತೃವತ್=ಪುತ್ರೋತ್ಪತ್ತಿಯಲ್ಲಿ ತಂದೆಯಂತೆ, ಜಗದುತ್ಪತ್ತಿಯಲ್ಲಿ, ಅಸ್ಯ=ಈ ಬ್ರಹ್ಮನಿಗೆ, ಅಪಾದಾನತ್ವಮೇವ=ಅಪಾಯಾವಧಿತ್ವರೂಪವಾದ ಅಪಾದಾನತ್ವವೇ, ಉಪಾದಾನತಾ=ಉಪಾದಾನತ್ವವು, ಇಷ್ಯತೇ ಯದಿ=ಇಷ್ಟವಾದರೆ, (ಸರ್ವಥಾ ನಿರ್ವಿಕಾರನಾದ ಬ್ರಹ್ಮನಿಗೆ ವಿಕಾರಿಯಾದ ಪಧಾನವೇ ಶರೀರವಾಗಿದ್ದು, ಪ್ರಧಾನಕ್ಕೆ ಅಧಿಷ್ಠಾತನು ಆಗಿರುವುದರಿಂದ ಉಪಾದಾನತ್ವವನ್ನು ಹೇಳಿದ್ದು). ತತ್=ಅಂತಹ ಉಪಾದಾನತ್ವವು, ಅಂಗೀಕೃತಮೇವ=ಬ್ರಹ್ಮನಿಗೆ ನಮ್ಮಿಂದ ಅಂಗೀಕೃತವೇ ಆಗಿದೆ. (ಈ ವಿಷಯದಲ್ಲಿ ನಮಗೆ ದ್ವೇಷವಿಲ್ಲವು). (ಬ್ರಹ್ಮನಿಗೆ ಉಪಾದಾನತ್ವವನ್ನು ಅಂಗೀಕರಿಸುವುದಾದರೆ ನಿರಾಕರಣವು, ಹೇಗೆ ಯುಕ್ತವಾಗಬಹುದೆಂದರೆ) ವಿಶ್ವಾತ್ಮನಾ ಭವಃ=(ಶುದ್ಧ ಚೈತನ್ಯನೇ ಆದ ಬ್ರಹ್ಮನಿಗೆ ಭಾಸ್ಕರಾದಿಗಳಿಂದ ಅಂಗೀಕೃತವಾದ) ಜಗದ್ರೂಪದಿಂದ ಉತ್ಪತ್ತಿಯು (ಪರಿಣಾಮವು), ನ ತು=ನಮ್ಮಿಂದ ಅಂಗೀಕರಿಸಲ್ಪಡುವುದಿಲ್ಲ. (ಆದಕಾರಣ ಬ್ರಹ್ಮನಿಗೆ ಉಪಾದಾನತ್ವವು ಕೂಡುವುದಿಲ್ಲವೆಂದು ಹೇಳಿದ್ದು ಯುಕ್ತವೇ).

**ತಾ || ನ್ಯಾಯಸುಧಾ—** (1) ಯದ್ಯಪಿ ರಾಮಾನುಜಾಚಾರ್ಯರು ಹೇಳಿದ ಜಗದುಪಾದಾನ ಪ್ರಧಾನಾಧಿಷ್ಠಾತೃತ್ವರೂಪವಾದ ಉಪಾದಾನಕಾರಣತ್ವವು ಬ್ರಹ್ಮನಿಗೆ ಲಕ್ಷಣ ಹೇಳಿದ್ದು ನಮಗೆ ವಿರೋಧಿಯಲ್ಲ. ಆದರೂ ಈ ಅರ್ಥವು ಈ ಸೂತ್ರಪ್ರತಿಪಾದ್ಯವಾದುದಲ್ಲ. ಇಂತಹ ಗೌಣಉಪಾದಾನತ್ವವನ್ನು ಹೇಳಿದ್ದಕ್ಕೆ ಪ್ರಯೋಜನವಿರುವುದಿಲ್ಲ. (2) ನುತ್ತು ಉಪಾದಾನನಿಯಾಮಕನಲ್ಲಿ ಉಪಾದಾನವೆನ್ನುವ ವ್ಯವಹಾರವೂ ಲೋಕದಲ್ಲಿ ಇರುವುದಿಲ್ಲ. ಲೋಕವ್ಯವಹಾರಾನುಸಾರವಾಗಿ ಪರೀಕ್ಷಕರು ಲಕ್ಷಣಗಳನ್ನು ಹೇಳಬೇಕು. ತನ್ನ ಅಭಿಪ್ರಾಯಾನುಸಾರವಾಗಿ ಲೋಕವ್ಯವಹಾರವನ್ನು ನಿಯಮಿಸತಕ್ಕುದಲ್ಲ. ಲೋಕದಲ್ಲಿ ವಿಕಾರವುಳ್ಳದ್ದನ್ನೇ ಉಪಾದಾನವೆನ್ನುತ್ತಾರೆ. ಉಪಾದಾನನಿಯಾಮಕನನ್ನು ಉಪಾದಾನನೆಂದು ಹೇಳುವುದಿಲ್ಲ. ಆದುದರಿಂದ ಈ ಸೂತ್ರಕ್ಕೆ ಹೀಗೆ ರಾಮಾನುಜಾಚಾರ್ಯರು ತಾತ್ಪರ್ಯಹೇಳಿದ್ದು ಸರಿಯಲ್ಲ || ೬೩ ||

ಬ್ರಹ್ಮಪರಿಣಾಮವಾದಿಯು ಪಿತೃವತ್ ಎಂದು ಹೇಳಿದ ದೃಷ್ಟಾಂತವನ್ನು ಸಹಿಸಲಾರದೆ 'ತಂದೆಯು ಮಗನಿಗೆ ಉಪಾದಾನಕಾರಣನೇ' ಆದಕಾರಣ ಈ ದೃಷ್ಟಾಂತವೇ ಯುಕ್ತವಲ್ಲವೆಂದು ಹೇಳಿದರೆ ಸಮಾಧಾನವನ್ನು ಹೇಳುತ್ತಾರೆ—

**ಮೂ || ನ ಚೋರ್ಣನಾಭಿಜನಿತೃಮಾತೄಣಾಂ ಚ ವಿಕಾರಿತಾ ।**
**ಚೇತನತ್ವಾತ್ತದನ್ನಂ ಹಿ ಕಾರ್ಯರೂಪತಯಾ ಭವೇತ್ || ೬೪ ||**

**ಅ ||** ಊರ್ಣನಾಭಿಜನಿತೃಮಾತೄಣಾಂ ಚ=ಜೇಡರ ಹುಳವು ತಂದೆಯು ತಾಯಿಯು ಇವರಿಗಾದರೂ, ವಿಕಾರಿತಾ = ವಿಕಾರಿಕಾರಣತ್ವವು, ನ ಚ=ಇಲ್ಲವೇ ಇಲ್ಲ. ಚೇತನತ್ವಾತ್=ಚೇತನತ್ವವಿದ್ದಪ್ರಯುಕ್ತ, ತದನ್ನಂ ಹಿ=ಆ ಊರ್ಣನಾಭ್ಯಾದಿಗಳಿಂದ, ಉಪಭುಕ್ತವಾದ ಅನ್ನವು (ಆ ಅನ್ನಪರಿಣತಗಳಾದ ಆ ಶರೀರಧಾತುಗಳು) ಕಾರ್ಯರೂಪತಯಾ = ತಂತುಮೊದಲಾದ ಕಾರ್ಯರೂಪದಿಂದ, ಭವೇತ್=ಪರಿಣತವಾಗುತ್ತದೆ.

**ತಾ || ನ್ಯಾಯಸುಧಾ—** (1) 'ಜನಿತಾ ಮಂತ್ರೇ' ಎನ್ನುವ ಸೂತ್ರದಿಂದ ಜನಿತೃಶಬ್ದವನ್ನು ಪ್ರಯೋಗಿಸಿದವರು ತನ್ನ ಗ್ರಂಥವು ಮಂತ್ರತುಲ್ಯವೆಂದು ತೋರಿಸಿದರು. (2) ಬ್ರಹ್ಮನು ಜಗತ್ಕಾರಣನು ಎನ್ನುವಲ್ಲಿ 'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ' ಎನ್ನುವ ಶ್ರುತಿಯು ಪ್ರಮಾಣವು. ಊರ್ಣನಾಭ್ಯಾದಿ ದೃಷ್ಟಾಂತವನ್ನು ತೆಗೆದುಕೊಂಡುದರಿಂದ 'ಪಿತಾಽಹಮಸ್ಯ

ಜಗತೊ ಮಾತಾ' ಎನ್ನುವಲ್ಲಿ ಉಪಾದಾನಕಾರಣತ್ವವೇ ವಿವಕ್ಷಿತವಾಗಿದೆ. ಊರ್ಣನಾಭ್ಯಾದಿಗಳು ತಂತ್ವಾದಿಗಳಿಗೆ ಉಪಾದಾನಕಾರಣಗಳಾಗಿವೆ, ಎಂದು ಯಾವುದು ಬ್ರಹ್ಮಪರಿಣಾಮಿವಾದಿಯು ಹೇಳಿರುವನೋ ಅದೂ ಕೂಡ ಪ್ರಕೃತವಾಗಿರುವುದರಿಂದ ಪಿತೃಶಬ್ದವನ್ನು ಮಾತ್ರ ಸ್ವೀಕರಿಸಬೇಕಾಗಿದ್ದರೂ ಊರ್ಣನಾಭಿ ಮಾತೃ ಶಬ್ದಗಳನ್ನು ಸ್ವೀಕರಿಸಿದುದರಿಂದ ನಿರಾಕೃತವಾಯಿತು. ಅಂತೂ ಬ್ರಹ್ಮನು ವಿಕಾರಿಕಾರಣನಲ್ಲ. ನಿಮಿತ್ತಕಾರಣನೇ. (3) ಇಲ್ಲಿ ಪಿತ್ರಾದಿಗಳಿಗೂ ಪುತ್ರಾದಿಗಳಿಗೂ ಚೇತನಾಚೇತನಸಮಾಹಾರರೂಪತ್ವವಿದ್ದುದರಿಂದ ನಾಲ್ಕು ಪಕ್ಷಗಳು ಕೂಡುತ್ತವೆ. ೧ ಪಿತೃಮೊದಲಾದ ಚೇತನರು ಪುತ್ರಮೊದಲಾದ ಚೇತನರಿಗೆ ಉಪಾದಾನಕಾರಣರು. ೨ ಅಥವಾ ಪುತ್ರಮೊದಲಾದ ಅಚೇತನರಿಗೆ ಉಪಾದಾನಕಾರಣರು. ೩ ಪಿತೃಮೊದಲಾದ ಅಚೇತನರು ಪುತ್ರಾದಿ ಚೇತನರಿಗೆ ಉಪಾದಾನಕಾರಣರು. ೪ ಅಥವಾ ಪುತ್ರಾದ್ಯಚೇತನ ›ಗೆ ಉಪಾದಾನಕಾರಣರು. ಹೀಗೆ (೪) ನಾಲ್ಕು ಪಕ್ಷಗಳು. ಅವುಗಳಲ್ಲಿ ಪ್ರಾಥಮಿಕ ಮೂರು ಕ್ಷಗಳು ಕೂಡುವುದಿಲ್ಲವೆನ್ನುವಲ್ಲಿ 'ಚೇತನತ್ವಾತ್' ಎನ್ನುವುದು ಹೇತುವು. ೧ನೇ ಪಕ್ಷದಲ್ಲಿ ಇಬ್ಬರೂ ಚೇತನರು. ಮೇಲಿನ ಎರಡು ಪಕ್ಷಗಳಲ್ಲಿ ಒಬ್ಬೊಬ್ಬರು ಚೇತನರು. ೪ನೇ ಪಕ್ಷವನ್ನು 'ತದನ್ನಂ ಹಿ' ಎನ್ನುವುದರಿಂದ ಅಂಗೀಕರಿಸಿದರು. (4) ಪಿತ್ರಾದಿದೃಷ್ಟಾಂತಗಳಿಗೆ ಇದು ನಿಷ್ಕೃಷ್ಟವಾದ ಅರ್ಥವು. ಯಾವುದು ಪಿತ್ರಾದಿಗಳಿಂದ ಉಪಭುಕ್ತವಾದ ಅನ್ನವೋ ಅದು ಶರೀರಭೂತವಾದುದು ಪುತ್ರಾದಿಗಳಲ್ಲಿರತಕ್ಕ ಅಚೇತನಾಂಶಕ್ಕೆ ಉಪಾದಾನಕಾರಣವಾಗುತ್ತದೆ. ಪಕ್ಷಾಂತರಗಳು ಕೂಡಲಾರವು. ಇದು ನಮಗೆ ಅನಿಷ್ಟವಲ್ಲ. ಮಹಾಪ್ರಲಯಕಾಲದಲ್ಲಿ ಪರಮೇಶ್ವರನಿಂದ ನಿಗೀರ್ಣವಾದ ಮಹದಾದಿ ಕಾರ್ಯವು ಶ್ರೀಹರಿಯ ಶರೀರದಂತೆ ಅವನ ಅಧೀನದಲ್ಲಿರುವ ಮುಖ್ಯಶರೀರವಲ್ಲದಿರುವ ಕುತ್ಸಿತವಾದ ಪ್ರಕೃತಿ ಎನ್ನುವ ವ್ಯವಹಾರವಿಷಯತ್ವವನ್ನು ಹೊಂದುತ್ತದೆ. ಅಂತಹ ಪ್ರಧಾನವೇ ಮಹದಾದಿ ಕಾರ್ಯಗಳಿಗೆ ಉಪಾದಾನಕಾರಣವಾಗುತ್ತದೆ ಎಂದಂಗೀಕರಿಸುವೆವು ॥ ೬೪ ॥

ಹೀಗೆ ಶ್ರುತಿ, ಪುರಾಣ ಯುಕ್ತಿಗಳಿಂದ ಬ್ರಹ್ಮನು ನಿರ್ವಿಕಾರನೆಂದು ತಿಳಿದುಬರುವುದರಿಂದ ಜಗತ್ತಿಗೆ ಉಪಾದಾನಕಾರಣನಾಗಲಾರನು. ಮತ್ತೆ ನಿಮಿತ್ತಕಾರಣನೇ ಎಂದುಕ್ತವಾಗಿದೆ. ಈಗ ಶ್ರುತಿ-ಸ್ಮೃತಿ-ಪುರಾಣ ಯುಕ್ತಿಗಳಿಂದ ನಿಮಿತ್ತಕಾರಣನೆಂದು ಉಕ್ತವಾಗಿರುವುದರಿಂದ ಉಪಾದಾನ ಕಾರಣನಲ್ಲವೆಂದು ಹೇಳುತ್ತಾರೆ—

**ಮೂ ॥ ಅಪಾದಾನತಯಾ ವಿಶ್ವಕರ್ತೃತ್ವಂ ಬುದ್ಧಿಪೂರ್ವಕಂ ।**
**ಉಕ್ತಂ ಬಾಲ್ಲವಶಾಖಾಯಾಂ ಬ್ರಹ್ಮತರ್ಕೇ ಚ ಸಾದರಂ ॥ ೬೫ ॥**

**ಅ ॥** ಅಪಾದಾನತಯಾ = (ಶ್ರೀಹರಿಯು ಕುಲಾಲಾದಿಗಳಂತೆ ಬಾಹ್ಯರೂಪದಿಂದಲೇ ಕರ್ತನಲ್ಲ. ಮತ್ತೆ) ಪ್ರಧಾನಾದ್ಯಂತರ್ನಿಯಾಮಕನಾಗಿ ತನ್ನ ಶರೀರರೂಪಕವಾದ, ಪ್ರಧಾನ ಕಾರ್ಯಭೂತವಾದ ಮಹದಾದಿ ಕಾರ್ಯಗಳ ವಿಶೇಷಾವಧಿಯಾಗಿ, ಬುದ್ಧಿಪೂರ್ವಕಂ=ಅಶೇಷ ವಿಶೇಷ ಜ್ಞಾನಪೂರ್ವಕವಾಗಿ, ವಿಶ್ವಕರ್ತೃತ್ವಂ= ಸರ್ವ ಜಗತ್ಕರ್ತೃತ್ವವು, ಭಾಲ್ಲವಶಾಖಾಯಾಂ= ಭಾಲ್ಲವ ಶಾಖೆಯಲ್ಲಿಯೂ, ಬ್ರಹ್ಮತರ್ಕೇ ಚ=ಬ್ರಹ್ಮತರ್ಕದಲ್ಲಿಯೂ, ಸಾದರಂ=ಆದರಪೂರ್ವಕವಾಗಿ, ಉಕ್ತಂ=ಹೇಳಲ್ಪಟ್ಟದೆ.

**ತಾ ॥** ಸಕಲ ಕಾರ್ಯಕ್ರಿಯಾಕಾರಕಫಲವಿಷಯಕ ಬುದ್ಧ್ಯಾದಿಗಳುಳ್ಳ ಶ್ರೀಹರಿಯು, ಕುಲಾಲನಂತೆ ಅನಂತರ್ಯಾಮಿಯಾಗಿರತಕ್ಕ ರೂಪದಿಂದ ಪರಿಣಾಮವನ್ನು ಮಾಡಿಸುತ್ತಾ, ಪ್ರಧಾ

ನಾದ್ಯಂತರ್ಗತರೂಪದಿಂದ ಪ್ರಧಾನಾದಿಗಳಿಗೆ ಪರಿಣಾಮಾದಿ ಶಕ್ತಿಗಳನ್ನು ಪ್ರೇರಿಸುತ್ತಾ ತನಗೆ ಮುಖ್ಯಶರೀರವಾಗದಿರುವ ಕುತ್ಸಿತ ಶರೀರರೂಪವಾದ ಪ್ರಧಾನಮೊದಲಾದ ಪರಿಣಾಮಭೂತಗಳಾದ ಮಹದಾದಿ ಕಾರ್ಯಗಳು ಹೊರಡುವುದರಲ್ಲಿ ಆಂತರರೂಪದಿಂದ ಅವಧಿಯಾಗುತ್ತಾನೆ ॥ ॥ ೬೫ ॥

ಆ ಎರಡು ವಾಕ್ಯಗಳನ್ನೇ ಕ್ರಮದಿಂದ ಹೇಳುತ್ತಾರೆ. —

ಮೂ ॥ ಇಚ್ಛಾಮಾತ್ರಾತ್ಪ್ರಭೋಃ ಸೃಷ್ಟಿರವಿಕಾರಸ್ಯ ಸರ್ವದಾ ।
ಸ್ವಭಾವೋಽಯಮನಂತಸ್ಯ ರಜೋ ಯೇನಾಭವಜ್ಜಗತ್ ॥ ೬೬ ॥
ಸ್ವದೇಹಾದಿಚ್ಛಯಾ ವಿಶ್ವಂ ಭುಕ್ತಪೂರ್ವಂ ಜನಾರ್ದನಃ ।
ಸಸರ್ಜ ಮಾತಾಪಿತೃವದೂರ್ಣನಾಭಿವದೇವ ವಾ ॥ ೬೭ ॥
ಪ್ರಧಾನಂ ಪರಿಣಾಮ್ಯೇಶೋ ನಿರ್ವಿಕಾರಃ ಸ್ವಯಂ ಸದಾ ।
ನ ಚೇತನವಿಕಾರಃ ಸ್ಯಾದ್ಯತ್ರ ಕ್ವಾಪಿ ಹ್ಯಚೇತನಂ ॥ ೬೮ ॥
ನಾಚೇತನವಿಕಾರೋಽಪಿ ಚೇತನಃ ಸ್ಯಾತ್ಕದಾಚನ ।
ನ ಚಾನ್ಯಸ್ಯಾನ್ಯರೂಪತ್ವಂ ವಿಕೃತತ್ವೇಽಪಿ ದೃಶ್ಯತೇ ॥ ೬೯ ॥
ನ ಕ್ಷೀರಾದನ್ಯಥಾ (ತಾ) ದಧ್ನಃ ಕೇನಚಿದ್ದೃಶ್ಯತೇ ಕ್ವಚಿತ್ ।
ಸರ್ವಜ್ಞಾದ್ಬ್ರಹ್ಮಣೋಽನ್ಯತ್ವಂ ಜಗತೋ ಹ್ಯನುಭೂಯತೇ॥ ೭೦ ॥

ಅ ॥ ಸರ್ವದಾ=ಯಾವಾಗಲೂ, ಅವಿಕಾರಸ್ಯ=ನಿರ್ವಿಕಾರನಾದ, ಪ್ರಭೋಃ=ಸರ್ವಸಮರ್ಥನಾದ ಶ್ರೀಹರಿಯ, ಇಚ್ಛಾಮಾತ್ರಾತ್=ಕೇವಲ ಇಚ್ಛೆಯಿಂದಲೇ, (ಪರಿಣಾಮಿ ಕಾರಣದಿಂದಲ್ಲ) ಸೃಷ್ಟಿಃ=ಸೃಷ್ಟಿಯು. ಅಯಂ=ಈ ಸೃಷ್ಟಿಯು, ಅನಂತಸ್ಯ=ಶ್ರೀಹರಿಯ, ಸ್ವಭಾವಃ=ಸ್ವಭಾವವು. ಯೇನ=ಯಾವ ಶ್ರೀಹರಿಯಿಂದ ಪ್ರೇರಿತವಾಗಿಯೇ, ರಜಃ=ರಜಃಶಬ್ದೋಪಲಕ್ಷಿತವಾದ ಸತ್ವರಜಸ್ತಮೋಗುಣಾತ್ಮಕವಾದ ಪ್ರಧಾನವು, ಜಗತ್=ಜಗದ್ರೂಪವಾಗಿ ಪರಿಣತವಾದುದು, ಅಭವತ್=ಆಯಿತು. ಸ್ವಯಂ=ತಾನು, ಸದಾ=ಯಾವಾಗಲೂ, ನಿರ್ವಿಕಾರಃ=ವಿಕಾರವಿಲ್ಲದಿರುವ, ಈಶಃ=ಸರ್ವಸ್ವಾಮಿಯಾದ, ಜನಾರ್ದನಃ=ಶ್ರೀಹರಿಯು, ಪ್ರಧಾನಂ=ಪ್ರಕೃತಿಯನ್ನು, ಪರಿಣಾಮ್ಯ=ಪರಿಣತವಾದುದನ್ನಾಗಿ ಮಾಡಿ, ಸ್ವದೇಹಾತ್=ಸಚ್ಚಿದಾನಂದಾತ್ಮಕವಾದ ಅವಧಿಭೂತವಾದ ದೇಹದ್ದೆಶೆಯಿಂದ, ಅಥವಾ ಉಪಾದಾನಕಾರಣವಾದ ಪ್ರಧಾನದ್ದೆಶೆಯಿಂದ, ಇಚ್ಛಯಾ=ಇಚ್ಛೆಯಿಂದ, ಭುಕ್ತಪೂರ್ವಂ=ಪೂರ್ವಕಲ್ಪದಲ್ಲಿ ಭುಕ್ತವಾದ (ಸಂಹೃತವಾದ) ವಸ್ತುವಿನಿಂದ ಸದೃಶವಾದ, ಅಥವಾ ಸೂಕ್ಷ್ಮಾವಸ್ಥೆಯೇ ಉಪಾದಾನಕಾರಣವಾಗಿವುಳ್ಳ, ಅಂದರೆ ಪೂರ್ವಕಲ್ಪದಲ್ಲಿ ಸಂಹೃತಗಳಾದುವುಗಳು ಯಾವವು ಉಪಚಯಭಾಗವು ಹೋದಮೇಲೆ ಸೂಕ್ಷ್ಮರೂಪವಾಗಿ ಶ್ರೀಹರಿಯ ಉದರದಲ್ಲಿ ಇರತಕ್ಕವುಗಳೋ, ಅವುಗಳೇ ಉಪಾದಾನಕಾರಣವಾಗಿವುಳ್ಳ, ವಿಶ್ವಂ=ಜಗತ್ತನ್ನು, ಮಾತಾಪಿತೃವತ್=ತಾಯಿತಂದೆಯುವರಂತೆ, ಊರ್ಣನಾಭಿವದೇವ ವಾ=ಜಾಡರ ಹುಳದಂತೆಯೇ ಆಗಲೀ, ಸಸರ್ಜ=ಸೃಷ್ಟಿಮಾಡಿದನು. (೨ನೇ ಅನುಮಾನದಲ್ಲಿ ವ್ಯಾಪ್ತಿಯನ್ನುಪಪಾದಿಸುತ್ತಾರೆ.) ಯತ್ರ ಕ್ವಾಪಿ=ಯಾವ ದೇಶದಲ್ಲಿ ಆಗಲೀ ಯಾವ ಕಾಲದಲ್ಲಿ ಆಗಲೀ, ಅಚೇತನಂ=ಅಚೇತನವು, ಚೇತನವಿಕಾರಃ=ಚೇತನವಿಕಾರವು, ನ ಸ್ಯಾತ್ ಹಿ=ಆಗಲಾರದಷ್ಟೆ. (೩ನೇ ಅನುಮಾನದಲ್ಲಿ ವ್ಯಾಪ್ತಿಯನ್ನುಪಪಾದಿಸುತ್ತಾರೆ) ಕದಾಚನ=ಯಾವಾಗಲೂ, ಚೇತನಃ=ಚೇತನವು, ಅಚೇತನವಿಕಾರೋಽಪಿ=ಅಚೇತನವಿಕಾರವೂಕೂಡ, ನ ಸ್ಯಾತ್=ಆಗಲಾರದು.

(ಇದೇ ರೀತಿಯಾಗಿ ಚೇತನವೂಕೂಡ ಚೇತನವಿಕಾರವಾಗಿ ಉಪಲಬ್ಧವಾಗಲಿಲ್ಲವೆಂದು ೧ನೇ ಅನುಮಾನದಲ್ಲಿಯೂ ವ್ಯಾಪ್ತಿಯನ್ನುಪಪಾದಿಸಬೇಕು.) (ಅನುಮಾನಾಂತರವನ್ನು ಹೇಳುವುದಕ್ಕೆ ಅನ್ವಯವ್ಯಾಪ್ತಿನಿಶ್ಚಯವಾಗುವುದಕ್ಕಾಗಿ ವ್ಯತಿರೇಕವ್ಯಾಪ್ತಿಯನ್ನು ಹೇಳುತ್ತಾರೆ). ವಿಕೃತತ್ವೇಽಪಿ = ವಿಕೃತ್ಯವಸ್ಥೆಯಲ್ಲಿಯೂ, ಅನ್ಯಸ್ಯ = ಒಂದು ವಸ್ತುವಿಗೆ, ಅನ್ಯರೂಪತ್ವಂ = ಅನ್ಯವಿಕಾರತ್ವವು, ನ ಚ ದೃಶ್ಯತೇ = ಕಾಣಲ್ಪಡುವುದೇ ಇಲ್ಲವು. ಅಂದರೆ ವಿಕಾರ-ವಿಕಾರಿಗಳು ಪರಸ್ಪರವಾಗಿ ಭಿನ್ನಗಳಾಗಿ ಎಲ್ಲಿಯೂ ಉಪಲಬ್ಧಗಳಾಗಲೇ ಇಲ್ಲವು. (ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ). ಕ್ಷೀರಾತ್ = ಕ್ಷೀರದ್ವೆಶಿಯಿಂದ, ಅಂದರೆ ಯಾವ ಕ್ಷೀರದ ವಿಕಾರವು ಯಾವ ದಧಿಯಾಗುತ್ತದೋ ಆ ಕ್ಷೀರದ್ವೆಶಿಯಿಂದ, ದಧ್ನಃ = ಆ ದಧಿಗೆ, ಅನ್ಯತಾ = ಭಿನ್ನತ್ವವು, ಕೇನಚಿತ್ = ಯಾರಿಂದಲೂ, ಕ್ವಚಿತ್ = ಎಲ್ಲಿಯೂ, ನ ದೃಶ್ಯತೇ = ಕಾಣಿಸಿಕೊಳ್ಳಲ್ಪಡುವುದಿಲ್ಲ. ಹೀಗೆ ಭೇದದರ್ಶನವಿದ್ದುದರಿಂದ ವಿಕಾರ-ವಿಕಾರಿ ಭಾವವು ಇಲ್ಲದಿರುವುದರಿಂದ ವ್ಯಾಪ್ತಿಯು ಸಿದ್ಧವಾಯಿತು. ಹಿ = ಯಾವ ಕಾರಣ ದಿಂದ, ಜಗತಃ = ಪ್ರಪಂಚಕ್ಕೆ, ಸರ್ವಜ್ಞಾತ್ = ಸರ್ವಜ್ಞನಾದ, ಬ್ರಹ್ಮಣಃ = ಪರಬ್ರಹ್ಮಸದ್ವೆಶಿ ಯಿಂದ, ಅನ್ಯತ್ವಂ = ಭೇದವು, ಅನುಭೂಯತೇ = ಅನುಭವಿಸಲ್ಪಡುತ್ತದೋ (ಆದಕಾರಣ ಪರಬ್ರಹ್ಮ ಜಗತ್ತುಗಳಿಗೆ ವಿಕಾರ ವಿಕಾರಿ ಭಾವವು ಇರುವುದಿಲ್ಲ.)

**ತಾ || ಸ. ರ. ವಿ.** — ಜಗತ್ತು ಬ್ರಹ್ಮನ ವಿಕಾರವಾಗಿದ್ದರೆ ನಿತ್ಯಸರ್ವಜ್ಞತ್ವಾದಿಲಕ್ಷಣ ಗಳುಳ್ಳ ಬ್ರಹ್ಮನದ್ವೆಶಿಯಿಂದ ಭಿನ್ನವಾಗಿ ಕಾಣಲ್ಪಡದೆ ಹೋಗುವುದು. ಕ್ಷೀರಕ್ಕೆ ವಿಕೃತಾವಸ್ಥೆ ಯಲ್ಲಿ ಇದು ಹಾಲು, ಇದು ಮೊಸರು ಎಂದು ಪ್ರತ್ಯೇಕ ಭೇದವು ಕಾಣುವುದಿಲ್ಲ.

**ನ್ಯಾಯಸುಧಾ** - (1) ಮೊದಲು 'ಚೇತನತ್ವಾತ್ತದನ್ನಂ ಹಿ' ಎನ್ನುವಲ್ಲಿದ್ದ 'ಚೇತನ ತ್ವಾತ್' ಎನ್ನುವುದರಿಂದ ಮೂರು ಅನುಮಾನಗಳು ಸೂಚಿತಗಳಾದುವು. (೧) 'ಪಿತಾ ಪುತ್ರೌ ನೋಪಾದಾನೋಪಾದೇಯಭೂತೌ ಚೇತನತ್ವಾತ್ ದೇವದತ್ತ ಯಜ್ಞದತ್ತವತ್' ತಂದೆ ಮಗ ಇವರಿಬ್ಬರು ಉಪಾದಾನ-ಉಪಾದೇಯಭೂತರಲ್ಲ ಚೇತನರಾಗಿರುವುದರಿಂದ, ದೇವದತ್ತ ಯಜ್ಞ ದತ್ತರಂತೆ, (೨) 'ಪುತ್ರಾದ್ಯಚೇತನಃ ನ ಪಿತ್ರಾದಿ ಚೇತನೋಪಾದಾನಕಃ ಅಚೇತನತ್ವಾತ್ ಘಟ ವತ್' ಪುತ್ರಮೊದಲಾದ ಅಚೇತನವು ಪಿತ್ರಾದಿಚೇತನವೇ ಉಪಾದಾನಕಾರಣವಾಗಿವುಳ್ಳದ್ದು, ಅಲ್ಲ, ಅಚೇತನವಾಗಿರುವುದರಿಂದ, ಘಟದಂತೆಯೇ. (೩) 'ಪುತ್ರಾದಿಚೇತನಃ ನ ಪಿತ್ರಾದ್ಯ ಚೇತನೋಪಾದಾನಕಃ ಚೇತನತ್ವಾತ್ ಬ್ರಹ್ಮಾದಿವತ್' ಪುತ್ರಮೊದಲಾದ ಚೇತನರು ಪಿತೃಮೊದ ಲಾದ ಅಚೇತನವೇ ಉಪಾದಾನಕಾರಣವಾಗಿವುಳ್ಳವರು ಅಲ್ಲ, ಚೇತನರಾಗಿರುವುದರಿಂದ ಬ್ರಹ್ಮಾದಿ ಗಳಂತೆಯೇ. ಈ ಅನುಮಾನಗಳಲ್ಲಿ ಪಕ್ಷಧರ್ಮತ್ವವು (ಹೇತು ಪಕ್ಷದಲ್ಲಿದೆ ಎನ್ನುವುದು) ನಿಶ್ಚಿತ ವಾಗಿದೆ. (2) ೨ನೇ ಅನುಮಾನದಲ್ಲಿ ವ್ಯಾಪ್ತಿಯನ್ನು 'ನ ಚೇತನವಿಕಾರಃ ಸ್ಯಾತ್' ಎನ್ನುವುದ ರಿಂದ ಉಪಪಾದಿಸುತ್ತಾರೆ. ಯಾವ ದೇಶದಲ್ಲಿ ಆಗಲೀ ಯಾವ ಕಾಲದಲ್ಲಿ ಆಗಲೀ ಅಚೇತನವು ಚೇತನವಿಕಾರವಾಗಿ ದೃಷ್ಟವಾಗಿದ್ದರೆ ಆಗ ಈ ವ್ಯಾಪ್ತಿಗೆ ಭಂಗವು ಬರುತ್ತಿತ್ತು. ಹೀಗೆ ಇಲ್ಲವೇ ಇಲ್ಲ. ಮಹದಾದಿ ಜಗತ್ತು ಬ್ರಹ್ಮನ ಕಾರ್ಯವಾಗಿ ಉಪಲಬ್ಧವಾಗಿದೆ ಎಂದರೆ ಹಾಗೆ ಹೇಳ ಕೂಡದು ಈಗಲೂ ಸಿದ್ಧವಾಗಲಿಲ್ಲ. ಹಿಂದೆ ಹೇಳಿದ, ಇನ್ನುಮುಂದೆ ಹೇಳುವ ಪ್ರಮಾಣಗಳಿಂದ ನಿರಾಕೃತವಾಗಿದೆ. (3) ೩ನೇ ಅನುಮಾನದಲ್ಲಿ 'ನಾಚೇತನವಿಕಾರೋಽಪಿ' ಎನ್ನುವುದರಿಂದ ವ್ಯಾಪ್ತಿಯನ್ನುಪಪಾದಿಸಿದರು. ಅಂದರೆ, ಯಾವ ದೇಶದಲ್ಲಿ ಆಗಲೀ ಯಾವ ಕಾಲದಲ್ಲಿ ಆಗಲೀ ಚೇತನವು ಅಚೇತನವಿಕಾರವಾಗಿ ದೃಷ್ಟವಾಗಿದ್ದರೆ ಆಗ ಈ ವ್ಯಾಪ್ತಿಗೆ ಭಂಗವು ಬರುತ್ತಿತ್ತು. ಹೀಗೆ ಇಲ್ಲವೇಇಲ್ಲ. (4) ಹೀಗೆಯೇ ೧ನೇ ಅನುಮಾನದಲ್ಲಿಯೂ, ಯಾವ ದೇಶದಲ್ಲಿಯೂ,

ಯಾವ ಕಾಲದಲ್ಲಿಯೂ, ಚೇತನವಿಕಾರವಾದ ಚೇತನವು ಉಪಲಬ್ಧವಾಗಲೇ ಇಲ್ಲ ಎಂದು ವ್ಯಾಪ್ತಿಯನ್ನುಪಪಾದಿಸಬೇಕು. (5) ಅಥವಾ 'ಮಹದಾದಿಕಂ ನ ಚೇತನವಿಕಾರಃ ಅಚೇತನತ್ವಾತ್ ಘಟವತ್' ಮಹತ್ತತ್ವಮೊದಲಾದುದು ಚೇತನವಿಕಾರವಲ್ಲ; ಅಚೇತನವಾಗಿರುವುದರಿಂದ ಘಟದಂತೆಯೇ ಎನ್ನುವ ಯುಕ್ತ್ಯಂತರದಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನೆನ್ನುವುದು ವಿರುದ್ಧವೂ ಆಗಿದೆ ಎಂದು ಮನಸ್ಸಿನಲ್ಲಿಟ್ಟುಕೊಂಡು ಈ ಅನುಮಾನದಲ್ಲಿಯೂ ವ್ಯಾಪ್ತಿಯನ್ನು 'ನ ಚೇತನವಿಕಾರಃ ಸ್ಯಾತ್' ಎನ್ನುವುದರಿಂದ ಉಪಪಾದಿಸುತ್ತಾರೆ. (6) 'ಚೇತನವಾದ ಜಗತ್ತು ಚೇತನವಿಕಾರವೆಂದು ಹೇಳಿದರೆ ಏನು ದೋಷವು ಬರುವುದೆಂದರೆ ಹೀಗಾದರೆ ಚೇತನವೂ ಅಚೇತನವಿಕಾರವಾಗಬೇಕಾಗುವುದು. ಹೀಗೆ ಇಲ್ಲವೇ ಇಲ್ಲವೆಂದರು 'ನಾಚೇತನವಿಕಾರೋಽಪಿ' ಎನ್ನುವುದರಿಂದ. ಅಂದರೆ, ಮಹತ್ತತ್ವ ಮೊದಲಾದುದು ಬ್ರಹ್ಮನ ವಿಕಾರವಾಗಿದ್ದರೆ ಆಗ ಬ್ರಹ್ಮ ಸ್ವರೂಪದ ಅನುಗಮನವುಳ್ಳದ್ದು ಆಗಬೇಕಾಗುವುದು. ಕಾರ್ಯದಲ್ಲಿ ಕಾರಣಸ್ವರೂಪದ ಅನು ಗಮನವು ದೃಷ್ಟವಾಗಿದೆ. ಘಟ ಮೊದಲಾದುವುಗಳು ಮಣ್ಣಿನ ವಿಕಾರಗಳು ಮೃತ್ತಿಕೆಯ ಅನುಗಮನ (ಅದರಲ್ಲಿರುವ ಧರ್ಮ)ವುಳ್ಳವುಗಳಾಗಿ ದೃಷ್ಟಗಳಾಗಿವೆ. ಇದು ಹೀಗೆ ಇಲ್ಲವು. ಆದಕಾರಣ ಮಹತ್ತತ್ವಮೊದಲಾದುದು ಬ್ರಹ್ಮನ ವಿಕಾರವಲ್ಲ. ಪುನಃ ಕಾರಣಸ್ವರೂಪದ ಅನು ಗಮನವನ್ನು ಹೊರತು ವಿಕಾರಿ-ವಿಕಾರಭಾವವನ್ನು ಅಂಗೀಕರಿಸಿದರೆ ಆಗ ಚೇತನವನ್ನು ಅಚೇತನ ವಿಕಾರವೆಂದು ಏಕೆ ಅಂಗೀಕರಿಸಕೂಡದು? ಪರರು ಹೀಗೆ ಅಂಗೀಕರಿಸಲೇ ಇಲ್ಲವು. ಚೇತನಕ್ಕೆ ಅಚೇತನವು ಉಪಾದಾನವಾಗಿದ್ದರೆ 'ಏಕಃ ಆತ್ಮನಃ ಶರೀರೇ ಭಾವಾತ್' ಎನ್ನುವಲ್ಲಿ ಚೇತನವುಳ್ಳ ಈ ಶರೀರವು ನಾಲ್ಕು ಭೂತಗಳ ಪರಿಣಾಮವೇ ಎಂದು ಹೇಳತಕ್ಕ ಚಾರ್ವಾಕನಿಗೆ ಭೂತಗಳಲ್ಲಿ (ಕಾರಣವಾದ ಅಚೇತನದಲ್ಲಿ) ಇಲ್ಲದಿರುವ ಚೈತನ್ಯವು ಕಾರ್ಯದಲ್ಲಿ (ಅಚೇತನಕಾರ್ಯವಾದ ಚೇತನದಲ್ಲಿ) ಹೇಗೆ ಬರುವುದು? ಎನ್ನುವ ಪರರ ಪರಿಹಾರವೂ ವ್ಯಾಹತವಾಗುವುದು. ಪುನಃ ಚಾರ್ವಾಕನು ಕ್ರಮುಕ, ಪರ್ಣ, ಚೂರ್ಣ ಮೊದಲಾದ ಮದಜನಕ ದ್ರವ್ಯದಲ್ಲಿ ಪ್ರತ್ಯೇಕ ಮದ ಜನಕತ್ವವಿಲ್ಲವಾದರೂ ಸಮುದಾಯದಲ್ಲಿ ಮದಜನಕತ್ವವಿದ್ದಂತೆಯೇ ಪ್ರತ್ಯೇಕವಾಗಿ ಭೂತ ಗಳಲ್ಲಿ ಚೈತನ್ಯವಿಲ್ಲದಿದ್ದರೂ ಸಮುದಿತಗಳಲ್ಲಿ ಚೈತನ್ಯವು ಕೂಡಬಹುದು ಎಂದು ಶಂಕಿಸಿದರೆ ಪರರು ಮದಿರೋಪಾದಾನದಲ್ಲಿಯೂ ಸೂಕ್ಷ್ಮರೂಪವಾದ ಮದಶಕ್ತಿಯನ್ನು ವ್ಯುತ್ಪಾದಿಸಿದ್ದೂ ವ್ಯಾಹತವಾಗುವುದು. ಅಂದರೆ, ಮದಿರಾದ್ರವ್ಯದ ಉಪಾದಾನದಲ್ಲಿದ್ದಂತೆಯೇ ಪ್ರಕೃತ ಭೂತ ಗಳಲ್ಲಿ ಸೂಕ್ಷ್ಮರೂಪದಿಂದಲೂ ಚೈತನ್ಯವಿಲ್ಲ. ಆದಕಾರಣ ಕಾರಣದಲ್ಲಿ ಅವಿದ್ಯಮಾನವಾದ ಸ್ವಭಾವವು ಕಾರ್ಯದಲ್ಲಿ ಕೂಡದಿರುವುದರಿಂದ ಚೇತನಕ್ಕೆ ಅಚೇತನವು ಉಪಾದಾನವೆಂದು ಯಾವುದು ನಿಮಗೆ ಅಭಿಪ್ರೇತವಾಗಿಯದೋ ಅದು ವ್ಯಾಹತವಾಗುವುದು. (7) 'ಅಥವಾ ಬ್ರಹ್ಮ ಜಗತೀ ನ ಉಪಾದಾನೋಪಾದೇಯಭಾವವತೀ ವಿಲಕ್ಷಣತ್ವಾತ್ ದೇವದತ್ತ ಘಟವತ್'=ಬ್ರಹ್ಮ ಜಗತ್ತುಗಳು ಉಪಾದಾನೋಪಾದೇಯಭಾವವುಳ್ಳವುಗಳಲ್ಲ, ಚೇತನಾಚೇತನರೂಪ ವೈಲಕ್ಷಣ್ಯ ವುಳ್ಳವುಗಳಾದಪ್ರಯುಕ್ತ, ದೇವದತ್ತ ಘಟಗಳಂತೆಯೇ. ಆದುದರಿಂದ ಪರಭಾಷ್ಯದಲ್ಲಿ 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎನ್ನುವಲ್ಲಿ ಬ್ರಹ್ಮ ಜಗತ್ತುಗಳಿಗೆ ವಿಲಕ್ಷಣತ್ವರೂಪ ವಾದ ಹೇತುವಿನಿಂದ ಉಪಾದಾನೋಪಾದೇಯಭಾವವಿಲ್ಲವೆಂದು ಪೂರ್ವಪಕ್ಷಮಾಡಿಕೊಂಡು 'ದೃಶ್ಯತೇತು' ಎನ್ನುವುದರಿಂದ ಯಾವುದು ಸಿದ್ಧಾಂತವಾಗಿದೆಯೋ ಅದೂಕೂಡ ನಿರಸ್ತ ವಾಯಿತು. (8) ಚೇತನರೆಂದು ಪ್ರಸಿದ್ಧರಾದ ಪುರುಷಾದಿಗಳಿಂದಲೂ ವಿಲಕ್ಷಣಗಳಾದ ಕೇಶ ನಖಾದಿಗಳಿಗೆ ಉತ್ಪತ್ತಿಯಾಗುತ್ತದೆ. ಅಚೇತನಗಳೆಂದು ಪ್ರಸಿದ್ಧಗಳಾದ ಗೋಮಯಾದಿಗಳ ದ್ವೆಶಿಯಿಂದ, ವೃಶ್ಚಿಕಾದಿಗಳಿಗೆ ಉತ್ಪತ್ತಿಯಾಗುತ್ತದೆಂದು ಯಾವುದು ಪರರು ಹೇಳಿರುವರೋ?

ಅನೂ ಅಯುಕ್ತವು. ಕೇಶ, ನಖಾದಿಗಳಿಗೆ ಅಚೇತನವಾದ ಶರೀರದಿಂದಲೇ ಉತ್ಪತ್ತಿಯಾಗುತ್ತದೆ. ಗೋಮಯದಿಂದ ವೃಶ್ಚಿಕಶರೀರಕ್ಕೇನೇ ಉತ್ಪತಿಯು ಎನ್ನುವ ಅಭಿಪ್ರಾಯದಿಂದಲೂ 'ನ ಚೇತನ ವಿಕಾರಃ ಸ್ಯಾತ್' ಎನ್ನುವ ಮೂಲವನ್ನು ಯೋಜಿಸಿಕೊಳ್ಳತಕ್ಕದ್ದು. (9) 'ಸರ್ವಜ್ಞಾದ್ಬ್ರಹ್ಮಣೋಽನ್ಯತ್ವಂ' ಎನ್ನುವ ಮೂಲದಿಂದ ಈ ಅನುಮಾನವು ಉಕ್ತವಾಯಿತು. (೧) 'ಜಗದ್ಬ್ರಹ್ಮವಿಕಾರೋ ನ ಭವತಿ ತತೋಽನ್ಯತ್ವೇನೋಪಲಭ್ಯಮಾನತ್ವಾತ್' ಯೋ ಯತೋಽನ್ಯತ್ವೇನೋಪಲಭ್ಯತೇ ಸೋಽಸೌ ನ ತದ್ವಿಕಾರಃ ಯಥಾ ಘಟಃ ಪಟಸ್ಯ. ಯಶ್ಚಯದ್ವಿಕಾರಃ ನಾಸೌ ತತೋಽನ್ಯತ್ವೇನೋಪಲಭ್ಯತೇ ಯಥಾ ದಧಿಕ್ಷೀರಾತ್' = ಪ್ರಪಂಚವು ಬ್ರಹ್ಮನ ವಿಕಾರವಾಗುವುದಿಲ್ಲ, ಬ್ರಹ್ಮನದ್ದೆಶೆಯಿಂದ ಬೇರೆಯಾಗಿ ತೋರುವುದರಿಂದ, ಯಾವುದು ಯಾವುದರದ್ದೆಶೆ [illegible] ಬೇರೆಯಾಗಿ ತೋರುತ್ತದೋ ಅದು ಅದರ ವಿಕಾರವಲ್ಲ, ಘಟವು ಪಟದ ವಿಕಾರವಲ್ಲ. ಯಾವುದು ಯಾವುದರ ವಿಕಾರವೋ ಇದು ಅದರದ್ದೆಶೆಯಿಂದ ಬೇರೆಯಾಗಿ ತೋರುವುದಿಲ್ಲ. ಉದಾ=ದಧಿಯು ಕ್ಷೀರದ್ದೆಶೆಯಿಂದ ಬೇರೆಯಾಗಿ ತೋರುವುದಿಲ್ಲ. (10) ಅಥವಾ ಜಗದ್ಬ್ರಹ್ಮಣೀ ನ ಅನ್ಯೋನ್ಯ ವಿಕಾರ ವಿಕಾರಿಣೀ ಅನ್ಯೋನ್ಯಮನ್ಯತ್ವೇನೋಪಲಭ್ಯಮಾನತ್ವಾತ್ ಘಟಪಟವತ್=ಜಗತ್ತು ಬ್ರಹ್ಮ ಇವರಿಬ್ಬರು ಪರಸ್ಪರವಾಗಿ ವಿಕಾರವುಳ್ಳವರಲ್ಲ, ಪರಸ್ಪರವಾಗಿ ಬೇರೆಯಾಗಿ ತೋರುವುದರಿಂದ, ಘಟಪಟಗಳಂತೆಯೇ 'ಯಃ ಸರ್ವಜ್ಞಃ ಸರ್ವವಿತ್' ಎನ್ನುವ ಶ್ರುತಿಯದ್ದೆಶೆಯಿಂದ ಬ್ರಹ್ಮನಿಗೆ ಸರ್ವಜ್ಞತ್ವವು ಶ್ರುತವಾಗಿರುವುದರಿಂದ ಈ ಹೇತುವು ಅಸಿದ್ಧವಲ್ಲ ॥ ॥ ೬೬ ॥ ೬೭ ॥ ೬೮ ॥ ೬೯ ॥ ೭೦ ॥

(1) ಹಾಗಾದರೆ ವಿಕಾರ-ವಿಕಾರಿಗಳಿಗೆ ಭೇದಾಭೇದಗಳನ್ನು ಅಂಗೀಕರಿಸಿರುವುದರಿಂದ ಹಿಂದಿನ ಹೇತುವು ಹೇಗೆ ಕೂಡುತ್ತದೆ? (ಅಂದರೆ, ವಿಕಾರ-ವಿಕಾರಿಭಾವವಿದ್ದರೂ ಅನ್ಯೋನ್ಯವಾಗಿ ಅನ್ಯತ್ವೇನ ಉಪಲಂಭವು ಕೂಡುತ್ತದೆ. ಅಂತೂ ಭೇದವನ್ನು ಅಂಗೀಕರಿಸಿರುವುದರಿಂದ ಹೇತುವು ಉಪಪನ್ನವಾಗುತ್ತದೆ. ಅಭೇದವನ್ನು ಅಂಗೀಕರಿಸಿರುವುದರಿಂದ ಸಾಧ್ಯಾಭಾವವೂ ಉಪಪನ್ನವಾಗುತ್ತದೆ). ಎಂದರೆ, ಹಾಗೆ ಹೇಳಕೂಡದು. 'ಭೇದೇನೈವೋಪಲಭ್ಯಮಾನತ್ವಾತ್' ಎನ್ನುವುದೇ ಹೇತುವು. ಹಾಗಾದರೆ ದೃಷ್ಟಾಂತದಲ್ಲಿ ಸಾಧನ ವೈಕಲ್ಯವು. ಹೇಗೆಂದರೆ, ಎಲ್ಲಾ ಕಡೆಗಳಲ್ಲಿಯೂ ಪರಿಣಾಮವಾದಿಯಾದ ನಾನು ಭೇದಾಭೇದಗಳಿಂದ ಸಾಂಕರ್ಯವನ್ನು ಅಂಗೀಕರಿಸಿರುವೆನು. ಅಂದರೆ, ಘಟವು ಘಟಸ್ವರೂಪದಿಂದ ಅತ್ಯಂತಾಭಿನ್ನವಾಗಿದೆ, ಪಟಾದಿಗಳಿಂದ ಭಿನ್ನಾಭಿನ್ನವಾಗಿದೆ. ಹೀಗೆ ಘಟ-ಪಟಸ್ವರೂಪಗಳಿಗೆ ಸಾಂಕರ್ಯವು ಅಂಗೀಕೃತವಾಗಿದೆ, ಎಂದು ಹೇಳಿದರೆ—(೧)ನೀನು ಅಂಗೀಕಾರ ಮಾತ್ರ ಮಾಡಿರುವುದರಿಂದ(೧)ಘಟ-ಪಟಗಳಿಗೆ ಅಭೇದವೋ, (೨) ಅಥವಾ ಹಾಗೆ ಪ್ರತ್ಯಕ್ಷ ಸಿದ್ಧವಾಗಿರುವುದರಿಂದ ಅಭೇದವೋ? ೧ನೇದ್ದು ಅಯುಕ್ತವು. ನಾನು ಭೇದವನ್ನು ಅಂಗೀಕರಿಸಿರುವುದರಿಂದ ಶುದ್ಧ ಭೇದವನ್ನೇ ಇಟ್ಟುಕೊಳ್ಳಬಹುದು. ೨ನೇದ್ದು ಕೂಡಲಾರದು. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವೇ ಆಗಲಿಲ್ಲ. (2) ಅಭೇದಾನುಪಲಂಭವಾಗಲೀ ಹೇತುವೆಂದು ವಿವಕ್ಷಿತವಾಗಿದೆ. ಹಾಗಾದರೆ, 'ಜಗತ್ ಬ್ರಹ್ಮಣಾ ಅಭಿನ್ನಂ ಸತ್ವಾತ್ ಬ್ರಹ್ಮವತ್' ಎನ್ನುವ ಅನುಮಾನದಿಂದ ಅಭೇದವು ಸಿದ್ಧವಾಗುವುದರಿಂದ ಈ ಹೇತುವು ಸಿದ್ಧವಾಗಲಿಲ್ಲ. ಎಂದರೆ, ಹಾಗೆ ಹೇಳಕೂಡದು. 'ಖರ್ವಂ ಸ್ವರ್ಣೇನಾಭಿನ್ನಂ ಸತ್ವಾತ್ ಸ್ವರ್ಣವತ್' ಎನ್ನುವ ಅನುಮಾನದಿಂದ ಆಭಾಸಸಮಾನ ಯೋಗಕ್ಷೇಮವಾಗಿದೆ ಎನ್ನುತ್ತಾರೆ.

**ಮೂ ॥ ಅಭೇದಃ ಸತ್ವಮಾತ್ರೇಣ ಸ್ಯಾತ್ಖರ್ವ ಸ್ವರ್ಣಯೋರಪಿ ॥ ೭೧ ॥**

ಅ ॥ ಸತ್ವಮಾತ್ರೇಣ=ಸತ್ತಾ ಮಾತ್ರದಿಂದ, (ಜಗದ್ಬ್ರಹ್ಮಣೋಃ=ಜಗತ್ತು ಬ್ರಹ್ಮರಿಗೆ,) ಅಭೇದಃ=ಅಭೇದವು, (ಭೇದಾಭಾವವು) (ಸಾಧ್ಯೇತ ಯದಿ=ಸಾಧಿಸಲ್ಪಡುವುದಾದರೆ,) ಖರ್ವ

ಸ್ವರ್ಣಯೋರಪಿ, ಖರ್ವ = ಕಬ್ಬಿಣವು, ಅಥವಾ ಖರ್ಪರವು, ಸ್ವರ್ಣಯೋರಪಿ = ಸುವರ್ಣವೂ, ಇವುಗಳಿಗೂ, ಅಭೇದಃ = ಅಭೇದವು, ಸ್ಯಾತ್ = ಬರಬೇಕಾಗುವುದು.

**ತಾ ||** **ಸ. ರ. ವಿ.**— ಜಗತ್ತು ಬ್ರಹ್ಮ ಇವರಿಗೆ ಅಸ್ತಿತ್ವ ಮೊದಲಾದ ಸಾಧರ್ಮ್ಯದಿಂದ ವಿಕಾರ ವಿಕಾರಿಭಾವವನ್ನು ಹೇಳುವುದಾದರೆ ಲೋಕದಲ್ಲಿ ಲೋಹ, ಸುವರ್ಣಗಳಿಗೂ ವಿಕಾರ ವಿಕಾರಿಭಾವವು ಬರಬೇಕಾಗುವುದು. ಮತ್ತು ಜಗದಾಕಾರದಿಂದ ಪರಿಣತನಾದ ಬ್ರಹ್ಮನಿಗೆ ಜಗನ್ನಾಶಾದಿಗಳಿಂದ ನಾಶಾದಿಗಳು ಬರುವುದರಿಂದ ನಿತ್ಯತ್ವಾದಿ ಶ್ರುತಿಗಳಿಗೆ ವ್ಯಾಕೋಪವು ಬರುವುದು.

**ನ್ಯಾಯಸುಧಾ**— (1) ಖರ್ವಂ ಸ್ವರ್ಣಾದ್ಭಿದ್ಯತೇ ಸ್ವರ್ಣಸ್ವರೂಪಾನುಗಮಶೂನ್ಯ**ತ್ವಾತ್** ಘಟವತ್ = ಲೋಹವು ಸುವರ್ಣದಿಂದ ಭಿನ್ನವಾಗಿದೆ, ಸುವರ್ಣದಲ್ಲಿರತಕ್ಕ ಸುವರ್ಣತ್ವಾದಿ ಧರ್ಮಾನುಗತಿಯಿಲ್ಲದಿರುವುದರಿಂದ ಘಟದಂತೆಯೇ, ಎನ್ನುವ ಅನುಮಾನ ವಿರೋಧವು ಎಂದರೆ— 'ಜಗತ್ ಬ್ರಹ್ಮಣಃ ಅತ್ಯಂತಂ ಭಿದ್ಯತೇ ತತ್ಸ್ವರೂಪಾನುಗತಿಶೂನ್ಯತ್ವಾತ್' ಜಗತ್ತು ಬ್ರಹ್ಮನದ್ವೇಶಯಿಂದ ಅತ್ಯಂತ ಭಿನ್ನವಾಗಿದೆ ಬ್ರಹ್ಮಸ್ವರೂಪದ ಅನುಗಮನವಿಲ್ಲದಿರುವುದರಿಂದ, ಎಂದು ನಿನ್ನ ಅನುಮಾನಕ್ಕೂ ಪ್ರಮಾಣ ವಿರೋಧವು ಎಂದು ಸಮಾಧಾನವು ಸಮಾನವೇ ಆಗಿದೆ. (2) ಅತ್ಯಂತ ಭೇದವನ್ನು ನಾಸು ಎಲ್ಲಿಯೂ ಅಂಗೀಕರಿಸದಿರುವುದರಿಂದ ಅಪ್ರಸಿದ್ಧವಿಶೇಷಣವೆಂದರೆ— ಹಾಗೆ ಹೇಳಕೂಡದು. ಮೋಕ್ಷವೇ ಇಲ್ಲವೆಂದಾಗಬೇಕಾಗುವುದು. ಹೇಗೆಂದರೆ— ಭಾಸ್ಕರ ಮತದಲ್ಲಿ ಮೋಕ್ಷವು ಜ್ಞಾನಕರ್ಮಸಮುಚ್ಚಯ ಸಾಧ್ಯವಾಗಿರುವುದರಿಂದ ಜ್ಞಾನದಿಂದಲೂ, ನಿವೃತ್ತಕರ್ಮದಿಂದಲೂ ಮೋಕ್ಷವನ್ನು ಅಂಗೀಕರಿಸಬೇಕು. ಆ ಜ್ಞಾನವೂ, ಅಜ್ಞಾನವೂ ಆಗುತ್ತದೆ. ನಿವೃತ್ತ ಕರ್ಮವು, ಪ್ರವೃತ್ತ ಕರ್ಮವೂ ಆಗುತ್ತದೆ. ಆದಕಾರಣ ಮೋಕ್ಷಸಾಧನವು ಹೇಗೆ ಆಗುವುದು? (3) ಹೀಗೆಯೇ ಮೋಕ್ಷವೂ ಸಂಸಾರದಿಂದ ಅಭಿನ್ನವಾಗಿರುವುದರಿಂದ ಮೋಕ್ಷವೇ ಇಲ್ಲವೆಂದಾಗಬೇಕಾಗುವುದು. ಮೋಕ್ಷಸಂಸಾರಗಳಿಗೆ ಅಭೇದವಿದ್ದರೂ ಮೋಕ್ಷತ್ವವಿದ್ದಪ್ರಯುಕ್ತ ಮೋಕ್ಷತ್ವರೂಪದಿಂದ ಇಷ್ಟವಾಗಿದ್ದರೆ ಸಂಸಾರವೂ ಇಷ್ಟವಾಗಬೇಕಾಗುವುದು. ಮೋಕ್ಷಾತ್ಮಕತ್ವವಿದ್ದುದರಿಂದ— (4) ಅಭೇದವು ಕಾಣಲ್ಪಡದಿರುವುದರಿಂದ ಅರ್ಥಕ್ರಿಯೆಗಳಲ್ಲಿ ಉಪಯುಕ್ತವಾಗುವುದಿಲ್ಲವೆಂದರೆ— ನಿರ್ವಾಹವಿಲ್ಲದಿರುವುದರಿಂದಲೇ ಅಭೇದವನ್ನು ಅಂಗೀಕರಿಸಬೇಕಾಗುವುದು.

(5) ಬ್ರಹ್ಮಸ್ವರೂಪಾನುಗತಿಯಿಲ್ಲದಿರುವುದರಿಂದ ಈ ಪ್ರಪಂಚವು ಬ್ರಹ್ಮಪರಿಣಾಮವಲ್ಲವೆಂದು ಹೇಳಲ್ಪಟ್ಟಿದೆ. ಅದರಲ್ಲಿ ೧ ಸರ್ವಸ್ವರೂಪಗಳ ಅನುಗತಿಶೂನ್ಯತ್ವವು ಅಭಿಪ್ರೇತವಾಗಿದೆಯೋ, ೨ ಕಿಂಚಿತ್ ಅನುಗತಿಶೂನ್ಯತ್ವವು ಅಭಿಪ್ರೇತವಾಗಿದೆಯೋ, ೧ನೇದ್ದು ಕೂಡಲಾರದು. ಸರ್ವಾನುಗತಿಯಿಲ್ಲವಾದರೂ ಘಟಾದಿಗಳಿಗೆ ಮೃದಾದಿವಿಕಾರತ್ವವು ದೃಷ್ಟವಾಗಿದೆ. ೨ನೇದ್ದೂ ಕೂಡಲಾರದು. ಸತ್ವವು ಎಲ್ಲಾ ಕಡೆಗಳಲ್ಲಿಯೂ ಅನುಗತವಾಗಿರುವುದರಿಂದ ವಿಕಾರ-ವಿಕಾರಿಭಾವವು ಉಪಪನ್ನವಾಗಬಹುದು ಎಂದರೆ— ಜಗದ್ಬ್ರಹ್ಮರಿಗೆ, ಅಭೇದಃ = ವಿಕಾರ-ವಿಕಾರಿಭಾವವು ಸಾಧಿಸಲ್ಪಡುವುದಾದರೆ ಲೋಹಸುವರ್ಣಗಳಿಗೂ ವಿಕಾರ-ವಿಕಾರಿಭಾವವು ಬರಬೇಕಾಗುವುದು. (6) ಹಾಗಾದರೆ, ಸುವರ್ಣಸತ್ವವು ಲೋಹದಲ್ಲಿ ಅನುಗತವಲ್ಲ. ಆದಕಾರಣ ಈ ಪ್ರಸಂಗವು ಹೇಗೆ ಕೂಡುತ್ತದೆ? ಎಂದರೆ— ಆಕಾಶಾದಿಗಳಲ್ಲಿ ಬ್ರಹ್ಮಸತ್ವವಿದೆಯೋ ಏನು? ಹೌದು ಎಂದು ಹೇಳಕೂಡದು. ಪ್ರಮಾಣವೇ ಇಲ್ಲವು. 'ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ' ಇದುಮೊದಲಾದ ಶ್ರುತಿಗಳಪ್ಪೇಶೆಯಿಂದ ಪ್ರಾಣಸತ್ಯತ್ವವು ಬ್ರಹ್ಮನ ಅಧೀನವೆನ್ನುವ ಅರ್ಥವು

ಯುಕ್ತವಾಗುತ್ತದೆ. ಬ್ರಹ್ಮನಲ್ಲಿರುನ ಸಾಮಾನ್ಯಸತ್ವವು ಆಕಾಶಾದಿಗಳಲ್ಲಿ ಅನುಗತವಾಗಿದೆ ಎಂದರೆ ಲೋಹದಲ್ಲಿಯೂ ಸುವರ್ಣಸತ್ವವು ಏಕೆ ಅನುಗತವಾಗಲಾರದು? (7) ಮತ್ತು 'ಅವಿಕಾರಃ ಸದಾ ಶುದ್ಧಃ' ಇದುಮೊದಲಾದ ಆಗಮಗಳಿಂದಲೂ ಚೇತನತ್ವಾದ್ಯನುಮಾನ ಗಳಿಂದಲೂ ಬ್ರಹ್ಮನು ನಿರ್ವಿಕಾರನೆಂದು ಸಿದ್ಧನಾಗಲು ಅಪ್ರಚ್ಯುತಸ್ವರೂಪವುಳ್ಳ ಬ್ರಹ್ಮನೇ ಜಗತ್ತಿಗೆ ಉಪಾದಾನಕಾರಣನೆಂದು ಯಾವನು ತಿಳಿಯುವನೋ ಆತನನ್ನು ಕುರಿತು **ಈ** ಪ್ರಸಂಗ ವಿಪರ್ಯಯಗಳು ಅಂದರೆ, **'ಅಭೇದಃ ಸತ್ವಮಾತ್ರೇಣ ಸ್ಯಾತ್ಸ್ವರ್ಣಸ್ವರ್ಣಯೋರಪಿ'** ಎನ್ನುವ ವಾಕ್ಯದಲ್ಲಿ ಹೇಳಲ್ಪಟ್ಟ ಜಗದ್ಬ್ರಹ್ಮರಿಗೆ ಸತ್ತಾಮಾತ್ರದಿಂದ ವಿಕಾರ-ವಿಕಾರಿಭಾವವು ಆದರೆ, ಲೋಹಸುವರ್ಣಗಳಿಗೂ ವಿಕಾರ ವಿಕಾರಿಭಾವವು ಬರಬೇಕಾಗುವುದು ಎಂದಾಪಾದಾನ ರೂಪವಾದ ಪ್ರಸಂಗವೂ, ಹೀಗೆ ಅಲ್ಲವು, ಜಗದ್ಬ್ರಹ್ಮರು ವಿಕಾರ-ವಿಕಾರಿಭಾವವುಳ್ಳವರಲ್ಲ ಎನ್ನುವ ವಿಪರ್ಯಯವೂ ಹೇಳಲ್ಪಟ್ಟಪ್ರಯುಕ್ತ ವ್ಯಭಿಚಾರ ಅಸಿದ್ಧಿ ಮೊದಲಾದ ವಿರೋಧವಿಲ್ಲವು. **(8)ಈ** ಪ್ರಸಂಗವಿಪರ್ಯಯಗಳನ್ನು ಹೇಳಿರುವುದರಿಂದ ಜಗತ್ಪ್ರಧಾನಗಳಿಗೆ ಸತ್ತಾಮಾತ್ರದಿಂದ ವಿಕಾರ-ವಿಕಾರಿ ಭಾವವು ಆದರೆ ಲೋಹಸುವರ್ಣಗಳಿಗೂ ವಿಕಾರವಿಕಾರಿ ಭಾವವು ಬರಬೇಕಾಗುವುದು ಎಂದಾಪಾದಾನರೂಪವಾದ ದೋಷವು ಸಮಾನವೆಂದು ನಿರಸ್ತವಾಯಿತು. ಹೇಗೆಂದರೆ, ಪ್ರಚ್ಯುತ ಸ್ವರೂಪವುಳ್ಳ ಪ್ರಧಾನವೇ ಜಗದ್ರೂಪವಾಗಿ ಪರಿಣತವಾಗುತ್ತದೆಂದಂಗೀಕೃತವಾಗಿದೆ ॥ ೭ ॥

**ಸ. ರ. ವಿ** — ಕ್ಷೀರದಂತೆ ಬ್ರಹ್ಮನು ಸಂಪೂರ್ಣವಾಗಿ ಪರಿಣಾಮವನ್ನು ಹೊಂದುವುದಿಲ್ಲ. ಮತ್ತೆ ಭಾಗದಿಂದಲೇ ಪರಿಣಾಮವನ್ನು ಹೊಂದುತ್ತಾನೆ. ಆದಕಾರಣ ಹಿಂದಿನ ದೋಷ ವಿಲ್ಲವೆಂದರೆ —

ಬ್ರಹ್ಮನು ೧ ಅನಂತ ಆನಂದಚಿದ್ರೂಪನು, ೨ ಸದ್ರೂಪನು, ಹೀಗೆ ಎರಡು ರೂಪಗಳುಳ್ಳ ವನು. ಅವುಗಳಲ್ಲಿ ೧ನೇ ರೂಪದಿಂದ ನಿಮಿತ್ತಕಾರಣನು. ೨ನೇ ರೂಪದಿಂದ ಉಪಾದಾನ ಕಾರಣನು. ಆದಕಾರಣ ಹಿಂದಿನ ದೋಷವಿಲ್ಲ. ಹೇಗೆಂದರೆ— ನಿರ್ವಿಕಾರತ್ವವನ್ನು ಹೇಳುವ ಶ್ರುತಿಯು ಚಿದಾನಂದಾತ್ಮಕನಾದ ಬ್ರಹ್ಮವಿಷಯಕವಾಗಿರುವುದರಿಂದ ಆ ರೂಪದಿಂದ ವಿಕಾರ ವಿಲ್ಲದಿರುವಪ್ರಯುಕ್ತ ವಿಕಾರವು ಕೂಡಲಾರದು ಎಂಬುವ ದೋಷವು ಬರುವುದಿಲ್ಲ. ನಿಮಿತ್ತ ಕಾರಣನಾದ ಚಿಚ್ಛಕ್ತಿಯುಳ್ಳ ರೂಪದಿಂದ ಪ್ರಕೃತಿ ಪ್ರಧಾನ ಮೊದಲಾದ ನಾಮಧೇಯವುಳ್ಳ ಸಚ್ಛಕ್ತಿಯುಳ್ಳ ಬ್ರಹ್ಮನು ಜಗದ್ರೂಪನಾಗಿ ಪರಿಣತನಾಗುತ್ತಾನೆ ಎಂದಂಗೀಕರಿಸಿದರೆ ಚೇತನ ನಾದುದರಿಂದ ಅಚೇತನರೂಪವಾಗಿ ವಿಕಾರವನ್ನು ಹೊಂದುವುದಿಲ್ಲವೆನ್ನುವ ಯುಕ್ತಿವಿರೋಧವಿಲ್ಲ. ಚಿದ್ರೂಪದಿಂದ ಬ್ರಹ್ಮನು ಜಗತ್ತಿಗೆ ನಿಮಿತ್ತಕಾರಣನೇ ಆಗಿದ್ದು ಸದ್ರೂಪದಿಂದಲೇ ಜಗತ್ತಿಗೆ ಉಪಾದಾನಕಾರಣನಾಗಿರುವುದರಿಂದ ಜಗತ್ತಿನಲ್ಲಿ ಚೈತನ್ಯಮೊದಲಾದ ಬ್ರಹ್ಮಧರ್ಮಗಳ ಅನು ಗತಿಯು ಬರಬೇಕಾಗುವುದು ಎನ್ನುವ ದೋಷವಿಲ್ಲ. ಸತ್ವದ ಅನುಗಮವು ಇದ್ದೇ ಇದೆ. ಜಗತ್ತಿನಿಂದ ಬ್ರಹ್ಮನಿಗೆ ಅನ್ಯತ್ವದರ್ಶನವೂ ವಿರುದ್ಧವಾಗುವುದಿಲ್ಲ. ಜಗತ್ತಿಗೆ ಯಾವ ಸರ್ವಜ್ಞ ನಿಂದ ಭೇದವು ಉಪಲಬ್ಧವಾಗುತ್ತದೋ ಆ ಬ್ರಹ್ಮರೂಪವು ನಿಮಿತ್ತಕಾರಣವೇ. ಉಪಾದಾನ ಕಾರಣವಲ್ಲ. ಯಾವ ಸದ್ರೂಪವು ಉಪಾದಾನಕಾರಣವೋ ಅದರದ್ವೆಶೆಯಿಂದ ಜಗತ್ತು ಭಿನ್ನ ವಾಗಿ ಉಪಲಬ್ಧವಾಗುವುದಿಲ್ಲ. ಎಂದಾಶಂಕಿಸಿದರೆ—

**ಮೂ ॥ ಭಾಗೇನ ಪರಿಣಾಮಶ್ಚೇದ್ಭಾಗಯೋರ್ಭೇದ ಏವ ಹಿ ।**

**ಯೋ ಭಾಗೋ ನ ವಿಕಾರೀ ಸ್ಯಾತ್ಸ ಏವಾಸ್ಯಾಕ್ಷವಿಾಶ್ವರಃ ॥ ೬೨ ॥**

ಅ || ಭಾಗೇನ=ಬ್ರಹ್ಮನ ಸದ್ಭಾಗದಿಂದ, ಪರಿಣಾಮಃ ಚೇತ್=ಬ್ರಹ್ಮನಿಗೆ ಚಿದ್ರೂಪವಾಗಿ ಪರಿಣಾಮವೆಂದಂಗೀಕರಿಸಿದರೆ, (ಚಿದ್ಭಾಗದಿಂದ ನಿರ್ವಿಕಾರತ್ವವು ಅಂಗೀಕರಿಸಲ್ಪಟ್ಟರೆ,) ಭಾಗಯೋಃ=ಎರಡು ಭಾಗಗಳಿಗೆ, ಭೇದ ಏವ=ಭೇದವೇ (ಅಂಗೀಕರಿಸತಕ್ಕದ್ದು.) ಯಃ ಭಾಗಃ=ಯಾವ ಭಾಗವು, (ರೂಪವು) ವಿಕಾರೀ ನ ಸ್ಯಾತ್=ವಿಕಾರವುಳ್ಳದ್ದು ಆಗುವುದಿಲ್ಲವೋ, ಸ ಏವ=ಆ ಭಾಗವೇ, ಅಸ್ಮಾಕಂ=ನಮಗೆ, ಈಶ್ವರಃ=ಬ್ರಹ್ಮವು.

ತಾ || ಸ. ರ. ವಿ — ಪರಿಣಾಮವನ್ನು ಹೊಂದುವ, ಹೊಂದದಿರುವ ಭಾಗಗಳಲ್ಲಿ ಅಭೇದವು ವಿರುದ್ಧವಾಗಿರುವುದರಿಂದ ಭೇದವೇ ಯುಕ್ತವು. ಅವುಗಳಲ್ಲಿ ಅಪರಿಣಾಮಿಭಾಗವೇ ಈಶ್ವರನು. ಪರಿಣಾಮಿಭಾಗವು ಪ್ರಧಾನವೆಂದು ಹೇಳಿದರೆ ನಮಗೆ ಬಾಧಕವಿಲ್ಲ.

ನ್ಯಾಯಸುಧಾ— (1) ಬ್ರಹ್ಮನ ಸದ್ಭಾಗದಿಂದ ಪರಿಣಾಮವು, ಚಿದ್ಭಾಗದಿಂದ ನಿರ್ವಿಕಾರತ್ವವೆಂದು ಅಂಗೀಕರಿಸಿದರೆ ಆ ಭಾಗಗಳಿಗೆ ೧ ಅಭೇದವೋ, ೨ ಭೇದಾಭೇದವೋ ಎಂದು ಹೇಳಬೇಕು. ಅವುಗಳಲ್ಲಿ ೧ ಅಭೇದವೆಂದು ಹೇಳಕೂಡದು. ಏಕೆಂದರೆ, ಎರಡು ಭಾಗಗಳಿಗೂ ಪರಿಣಾಮಾದಿಗಳು ಪ್ರಾಪ್ತಗಳಾಗುವುದರಿಂದ ಎರಡು ಭಾಗಗಳೆನ್ನುವ ಕಲ್ಪನೆಯೇ ವ್ಯರ್ಥವಾಗುವುದು. ೨ ಭೇದಾಭೇದವೆಂದೂ ಹೇಳಕೂಡದು. ಅಭೇದದಿಂದ ಸಾಂಕರ್ಯವು ಬರಬೇಕಾಗುವುದು. ಭೇದವು ಅಭೇದಕಾರ್ಯವನ್ನು ತಡೆಯುತ್ತದೆ ಎಂದರೆ, ಹಾಗಾದರೆ, ಅಪ್ರಯೋಜಕವಾದ ಅಭೇದದಿಂದ ಏನು ಪ್ರಯೋಜನವು? ಆದುದರಿಂದ ಭಾಗಗಳಿಗೆ ಅತ್ಯಂತಭೇದವನ್ನೇ ಅಂಗೀಕರಿಸಬೇಕು. (2) ಅದರಿಂದ ಪ್ರಕೃತವೇನಾಯಿತೆಂದರೆ— ಎರಡು ವಸ್ತುಗಳು ಪರಸ್ಪರವಾಗಿ ಅತ್ಯಂತಭಿನ್ನಗಳು. ಅವುಗಳಲ್ಲಿ ಒಂದು ವಸ್ತುವು ನಿರ್ವಿಕಾರವಾದುದು ಜಗತ್ತಿಗೆ ನಿಮಿತ್ತಕಾರಣವೇ. ಮತ್ತೊಂದು ವಸ್ತುವು ಪರಿಣಾಮಿಯಾದುದು ಜಗತ್ತಿಗೆ ಉಪಾದಾನಕಾರಣವೇ ಎಂದಂಗೀಕರಿಸಿದರೆ ಈಶ್ವರನು ಕೇವಲ ನಿಮಿತ್ತಕಾರಣನೆಂದು ಹೇಳುವ ನಮಗೆ ವಿವಾದವೇ ಇಲ್ಲವು. ಏಕೆಂದರೆ, ನಾವು ನಿರ್ವಿಕಾರನಾಗಿ ಜಗತ್ತಿಗೆ ನಿಮಿತ್ತಕಾರಣನಾದವನು ಈಶ್ವರನೆಂದೂ, ಪರಿಣಾಮಿಯಾಗಿ ಜಗತ್ತಿಗೆ ಉಪಾದಾನಕಾರಣವಾದುದು ಪ್ರಧಾನವೆಂದೂ ಸ್ವೀಕರಿಸಿರುವೆವು. (3) ಮತ್ತು ಬ್ರಹ್ಮನು ನಿಮಿತ್ತಕಾರಣನೇ ಎಂದು ಪೂರ್ವಪಕ್ಷ ಬರಲು ನಿಮಿತ್ತಕಾರಣನು ಮಾತ್ರನಲ್ಲ, ಉಪಾದಾನಕಾರಣನೂ ಆಗಿರುತ್ತಾನೆಂದು ಸಮರ್ಥಿಸುವುದಕ್ಕಾಗಿ 'ಪ್ರಕೃತಿಶ್ಚ' ಇತ್ಯಾದಿ ಸೂತ್ರಗಳು ನಿಮ್ಮ ಮತದಲ್ಲಿ ಪ್ರವೃತ್ತಗಳಾಗಿವೆ. ನೀವೂ ಕೂಡ ಹೇಳಿದಪ್ರಕಾರ ನಿಮಿತ್ತಕಾರಣ ಉಪಾದಾನ ಕಾರಣಗಳಿಗೆ ಭೇದವನ್ನೇ ಅಂಗೀಕರಿಸಿದರೆ ಆಗ ವಿವಾದವಿಷಯವೇ ಇಲ್ಲದಿರುವುದರಿಂದ ಈ ಸೂತ್ರಗಳಿಗೆ ಆರಂಭವೇ ಕೂಡದೆ ಹೋಗುವುದು. (4) ಪರಮತರೀತಿಯಾಗಿ 'ಯೋ ಭಾಗಃ' ಎಂದು ಹೇಳಿದ್ದು. ತಮ್ಮ ಮತರೀತಿಯಾಗಿ 'ಯತ್ ವಸ್ತು' ಎಂದು ತಿಳಿಯತಕ್ಕದು. ಭಾಗಿಯಿಲ್ಲದೆ ಭಾಗವು ಕೂಡಲಾರದು. ವಿಕಾರಿ ಅವಿಕಾರಿಗಳಿಗೆ ಯಾವುದೊಂದು ಭಾಗವೂ ಇರುವುದಿಲ್ಲ || ೬೨ ||

ಸ. ರ. ವಿ. — ಹಾಗಾದರೆ, ಸರ್ವಭಾಗಗಳ ಸಮೂಹವೇ ಬ್ರಹ್ಮನು. ಒಂದು ಭಾಗವು ಬ್ರಹ್ಮವಲ್ಲವೆಂದರೆ—

ನ್ಯಾಯಸುಧಾ— (1) ಹಾಗಾದರೆ, ಚಿದಾದಿರೂಪದಿಂದ ಬ್ರಹ್ಮನು ನಿಮಿತ್ತಕಾರಣನು. ಸದ್ರೂಪದಿಂದ ಉಪಾದಾನಕಾರಣನೂ ಆಗುತ್ತಾನೆ, ಹೀಗೆ ಅಂಗೀಕರಿಸಿರುವುದರಿಂದ ವಿವಾದವಿಷಯವು ಸಿದ್ಧಿಸುತ್ತದೆ. ನಿಮಿತ್ತೋಪಾದಾನಕಾರಣಗಳಿಗೆ ಭೇದವನ್ನು ಹೇಳುವವನು ನಿಮಿತ್ತಕಾರಣನೇ ಬ್ರಹ್ಮನು ಎಂದಂಗೀಕರಿಸುವನು. ನಾನಾದರೂ ಸತ್-ಅನಂತ-ಆನಂದ-ಚಿತ್

10

(ಚೈತನ್ಯ)ಗಳ ಸಮುದಾಯವೇ ಬ್ರಹ್ಮನು ಎನ್ನುತ್ತೇನೆ. ಆದಪ್ರಯುಕ್ತ ಸತ್-ಅನಂತ-ಆನಂದ ಚೈತನ್ಯಗಳ ಸಮುದಾಯಕ್ಕೆ ಬ್ರಹ್ಮತ್ವವನ್ನು ಸಮರ್ಥಿಸುವುದಕ್ಕೋಸ್ಕರ ಪ್ರಕೃತ್ಯಧಿಕರಣಾರಂಭವು ಆವಶ್ಯಕವು ಎಂದರೆ ಬ್ರಹ್ಮತ್ವವೆಂದರೆ ಎಂತಹುದು? ೧ ಬ್ರಹ್ಮನೆನ್ನುವ ನಾಮವಿರುವಿಕೆಯೋ, ೨ ಜಗತ್ಕಾರಣತ್ವಾದಿಲಕ್ಷಣವಿರುವಿಕೆಯೋ! ಇವುಗಳಲ್ಲಿ ೧ನೇದ್ದನ್ನು ದೂಷಿಸುತ್ತಾರೆ-

**ಮೂ ॥ ಭಿನ್ನಾನಾಂ ಸಮುದಾಯಸ್ಯ ನಾಮ ಬ್ರಹ್ಮೇತಿ ಚೇದ್ಭವೇತ್ ।**
**ಬ್ರಹ್ಮೋಪಾದಾನತಾ ನ ಸ್ಯಾತ್ತದಾ ವಿಶ್ವಸ್ಯ ಹಿಂ ಕ್ವಚಿತ್ ॥ ೭೩ ॥**

ಅ ॥ ಭಿನ್ನಾನಾಂ=ಭಿನ್ನಗಳಾದ ಭಾಗಗಳ, (ಸತ್-ಚಿತ್-ಆನಂದಾದಿಗಳ) ಸಮುದಾಯಸ್ಯ=ಸಮೂಹಕ್ಕೆ, ಬ್ರಹ್ಮೇತಿ ನಾಮ = ಬ್ರಹ್ಮ ಎನ್ನುವ ನಾಮಧೇಯವು, ಭವೇಚ್ಚೇತ್= ಇರುವುದಾದರೆ, ಇರಲಿ. ತದಾ=ಆಗ, ವಿಶ್ವಸ್ಯ=ಜಗತ್ತಿಗೆ, ಕ್ವಚಿತ್=ಯಾವ ಪಕ್ಷದಲ್ಲಿಯೂ, ಬ್ರಹ್ಮೋಪಾದಾನತಾ = ಬ್ರಹ್ಮನು ಉಪಾದಾನಕಾರಣನೆನ್ನುವುದು, ನ ಸ್ಯಾತ್ = ಕೂಡದೆ ಹೋಗುವುದು. ಅಂದರೆ, ಭಿನ್ನಗಳಾದ ಸದಾದಿಗಳ ಸಮುದಾಯಕ್ಕೆ ಬ್ರಹ್ಮನೆನ್ನುವ ನಾಮವು ಆಗುವುದು. ಒಂದೊಂದು ಭಾಗಕ್ಕೆ ನಾಮಧೇಯವಲ್ಲವೆಂದರೂ ಆಗ ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನೂ ನಿಮಿತ್ತಕಾರಣನೂ ಎನ್ನುವುದೂ ಆಗದೆ ಹೋಗುವುದು.

**ತಾ ॥ ನ್ಯಾಯಸುಧಾ** — (1) ಯಾವುದು ಜಗತ್ತಿಗೆ ನಿಮಿತ್ತಕಾರಣವೋ ಅದೇ ಉಪಾದಾನಕಾರಣವಲ್ಲ ಎನ್ನುವ ಅರ್ಥದಲ್ಲಿ ವಿವಾದವು ಇಲ್ಲವಾದರೆ ಆಗ ಪ್ರಕೃತ್ಯಧಿಕರಣವನ್ನು ಆರಂಭಿಸಬೇಕಾಗಿಯೇ ಇಲ್ಲ. ಜಗತ್ಕಾರಣತ್ವಾದಿರೂಪವಾದ ಅರ್ಥವನ್ನು ಬಿಟ್ಟು ಕೇವಲ ನಾಮಮಾತ್ರದಲ್ಲಿ ಪರರಿಗೆ ವಿವಾದವಿರುವುದಿಲ್ಲ. ವಿವಾದವಿದ್ದರೂ ಶಬ್ದದಲ್ಲಿ ವಿವಾದವು ಪ್ರಾಪ್ತವಾಗುವಾಗ ಬ್ರಹ್ಮವೆನ್ನುವ ಶಬ್ದವು ಸಮುದಾಯದಲ್ಲಿ ಸಾಧುವೆಂದು ಶಬ್ದಮಾತ್ರ ವಿಚಾರವನ್ನು ಶಬ್ದಶಾಸ್ತ್ರದಲ್ಲಿಯೇ ಮಾಡತಕ್ಕದು. ಪ್ರಮೇಯವನ್ನು ವ್ಯುತ್ಪಾದಿಸತಕ್ಕ ಅರ್ಥಶಾಸ್ತ್ರದಲ್ಲಿ ಶಬ್ದಮಾತ್ರ ವಿಚಾರವನ್ನು ಮಾಡಕೂಡದು. (2) ಬ್ರಹ್ಮತ್ವವೆಂದರೆ ಜಗತ್ಕಾರಣತ್ವಾದಿ ರೂಪವಾದುದು ಎನ್ನುವ ೨ನೇ ಕಲ್ಪದಲ್ಲಿಯೂ ೧ ಪರಸ್ಪರ ಭಿನ್ನಗಳಾದ ಸಚ್ಚಿತ್ ಆನಂದಾದಿಗಳು ಪ್ರತ್ಯೇಕ ಬ್ರಹ್ಮಗಳೋ, ೨ ಅಥವಾ ಅವುಗಳು ಬ್ರಹ್ಮಗಳಲ್ಲ, ಮತ್ತೆ ಸಚ್ಚಿದಾನಂದಾದಿಗಳ ಸಮುದಾಯವೇ ಬ್ರಹ್ಮವು. ಎಂದೋ? ೧ನೇದ್ದೂ ಕೂಡಲಾರದು. 'ಏಕಮೇವಾದ್ವಿತೀಯಂ' ಇದುಮೊದಲಾದ ಶ್ರುತಿಗಳಿಂದ ವಿರೋಧವು ಬರುತ್ತದೆ. ೨ನೇದರಲ್ಲಿಯೂ ಬ್ರಹ್ಮವೆಂದಂಗೀಕರಿಸಲ್ಪಟ್ಟದ್ದು ಸಚ್ಚಿದಾನಂದಾದಿಗಳ ಸಮುದಾಯವೆಂದರೆ— ಸದಾದಿಗಳೇ ಉಪಾದಾನಕಾರಣವಾಗಿ ಉಳ್ಳ ದ್ರವ್ಯಾಂತರವೋ, ಸತ್ ಅನಂತ, ಆನಂದ ಚೈತನ್ಯಗಳಲ್ಲಿ ಅನುಗತವಾದ ಬಹುತ್ವರೂಪಸಂಖ್ಯೆಯೋ, ಸದಾದಿಗಳ ಸಂಬಂಧವೋ? ಈ ವಿಕಲ್ಪಿತಗಳಾದ ಮೂರು ಪಕ್ಷಗಳನ್ನು ಅಂಗೀಕರಿಸಿದರೂ ಯಾವ ಪಕ್ಷದಲ್ಲಿಯೂ ಬ್ರಹ್ಮನಿಗೆ ಉಪಾದಾನಕಾರಣತ್ವವು ಕೂಡಲಾರದು. ಹೇಗೆಂದರೆ— ಹಿಂದೆ ಹೇಳಿದ ಮೂರು ಪಕ್ಷಗಳಲ್ಲಿಯೂ ನೀವು ಬ್ರಹ್ಮಶಬ್ದಾರ್ಥವನ್ನು ಕುರಿತು ಉಪಾದಾನಕಾರಣವೆಂದು ಸ್ವೀಕರಿಸಲ್ಪಟ್ಟದ್ದು ಸದಾದಿಗಳು. ಅವುಗಳಲ್ಲಿ ಸದಂಶವೇ ಜಗತ್ತಿಗೆ ಉಪಾದಾನಕಾರಣವೆನ್ನುವ ೧ನೇ ಪಕ್ಷದಲ್ಲಿ ಬ್ರಹ್ಮನನ್ನು ಕುರಿತು ಉಪಾದಾನಕಾರಣವಾದ ಸದಂಶಕ್ಕೂ, ೨ನೇ, ೩ನೇ ಪಕ್ಷಗಳಲ್ಲಿ ಬ್ರಹ್ಮಶಬ್ದಾರ್ಥಭೂತಗಳಾದ ಸಂಖ್ಯಾಸಂಯೋಗರೂಪ ಗುಣಗಳನ್ನು ಕುರಿತು ಧರ್ಮಿಭೂತವಾದ ಸದಂಶಕ್ಕೇನೇ ಪ್ರಪಂಚದ ಉಪಾದಾನಕಾರಣತ್ವವು ಪ್ರಾಪ್ತವಾಯಿತು. ಬ್ರಹ್ಮನಿಗೆ ಉಪಾದಾನಕಾರಣತ್ವವೂ ಬ್ರಹ್ಮನಿಗೆ ಸ್ಥಿತಿಕರ್ತೃತ್ವವೂ,ಲಯಕರ್ತೃತ್ವವೂ ಪ್ರಾಪ್ತವಾಗಲಿಲ್ಲ. (3) ಹಾಗಾದರೆ ಬ್ರಹ್ಮನನ್ನು ಕುರಿತು ಉಪಾದಾನ ಕಾರಣವಾದುದು

ಯಾವುದು 'ಸತ್' ಬ್ರಹ್ಮರೂಪಗುಣವನ್ನು ಕುರಿತು ಗುಣಭೂತವಾದುದು ಯಾವುದು 'ಸತ್' (ಸತ್ವವೋ)ಅದರಲ್ಲಿರತಕ್ಕ ಜಗದುಪಾದಾನತ್ವಶಕ್ತಿಯು ಸತ್ತಿನಕಾರ್ಯವಾದ,ದ್ರವ್ಯಭೂತವಾದ, ಗುಣಭೂತವಾದ ಬ್ರಹ್ಮನಲ್ಲಿಯೂ ಇದ್ದೇಇದೆ. ಕಾರಣ ಶಕ್ತಿಯು ಕಾರ್ಯದಲ್ಲಿ ನಿಯತವು. ಆದ ಕಾರಣ ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನೆನ್ನುವುದು ಯುಕ್ತವೇ ಎಂದರೆ— ಉಪಾದಾನ ಗುಣಿಯಲ್ಲಿರತಕ್ಕ ಶಕ್ತಿಗಳು ಕಾರ್ಯದ್ರವ್ಯದಲ್ಲಿ ಆಗಲೀ, ಗುಣದಲ್ಲಿ ಆಗಲೀ ಕೂಡಲಾರವು. ಏಕೆಂದರೆ—ಕಾರಣದಲ್ಲಿದ್ದ ಶಕ್ತಿಯು ಕಾರ್ಯದಲ್ಲಿದೆ ಎಂದು ನಿಯಮವಿಲ್ಲ. ಕಾರಣಭೂತವಾದ ಸತ್ತಿನಲ್ಲಿ ಕಾರ್ಯದ್ರವ್ಯಭೂತವಾದ ಬ್ರಹ್ಮೋಪಾದಾನತ್ವವೂ, ಬ್ರಹ್ಮರೂಪಗುಣವನ್ನು ಕುರಿತು ಗುಣಿತ್ವವೂ ಇದ್ದುದರಿಂದ ಆ ಉಪಾದಾನತ್ವ ಗುಣಿತ್ವಗಳು ಕಾರ್ಯದ್ರವ್ಯಭೂತವಾದ ಬ್ರಹ್ಮ ನಲ್ಲಿಯೂ, ಗುಣಭೂತನಾದ ಬ್ರಹ್ಮನಲ್ಲಿಯೂ ಇಲ್ಲದಿರುವುದರಿಂದ ವ್ಯಭಿಚಾರವು. (4) ಅಥವಾ ಬ್ರಹ್ಮನು ಕಾರ್ಯನಾಗಿರುವುದರಿಂದಲೂ, ಗುಣನಾಗಿರುವುದರಿಂದಲೂ ಜಗತ್ತಿಗೆ ಉಪಾದಾನ ಕಾರಣನು ಆಗಲಾರನು ॥ ೭೩ ॥

(1) ಹಿಂದೆ ಹೇಳಿದ್ದೆಲ್ಲಾ ಆಗಬಹುದಿತ್ತು. ಆದರೆ **'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಆತ್ಮನ ಆಕಾಶಃ ಸಂಭೂತಃ' 'ಜನ್ಮಾದ್ಯಸ್ಯ ಯತಃ'** ಇತ್ಯಾದಿ ಶ್ರುತಿಸೂತ್ರಗಳಿಂದ ವಿರೋಧವಿದ್ದುದರಿಂದ 'ಚೇತನತ್ವಾತ್ತದನ್ನಂ ಹಿ' ಇತ್ಯಾದಿಗಳಿಂದ ಹೇಳಲ್ಪಟ್ಟ ಅನುಮಾನಗಳ ಸಮೂಹವು ಬಾಧಿತವಾಯಿತು, 'ಜನಿಕರ್ತುಃ ಪ್ರಕೃತಿಃ' ಎನ್ನುವುದ ರಿಂದ ಉಪಾದಾನರೂಪವಾದ ಪ್ರಕೃತಿಯಲ್ಲಿ, ಅಪಾದಾನ ಸಂಜ್ಞೆಯು ಬರುವಾಗ 'ಅಪಾದಾನೇ ಪಂಚಮೀ' ಎನ್ನುವ ಸೂತ್ರದಿಂದ ಪಂಚಮಿಯು ವಿಹಿತವಾಗಿದೆ. ಉದಾ=ಶೃಂಗ (ಕೋಡು) ದಿಂದ ಶರ(ತೃಣವಿಶೇಷ)ವು ಹುಟ್ಟುತ್ತದೆ. ಗೋಮಯದಿಂದ ವೃಶ್ಚಿಕವು ಹುಟ್ಟುತ್ತದೆ. ಇಲ್ಲಿ ಉಪಾದಾನೋಪಾದೇಯಭಾವವು ಪ್ರಸಿದ್ಧವೂ ಆಗಿದೆ. ಆದಕಾರಣ ಬಾಧಿತವು ಎಂದರೆ— ಇದು ಅಯುಕ್ತವು. ಹೇಗೆಂದರೆ, ಪಂಚಮೀ ವಿಭಕ್ತಿಯ ಸಾಮರ್ಥ್ಯದಿಂದ ಉಪಾದಾನತ್ವವನ್ನು ಸಾಧಿಸಬೇಕಷ್ಟೆ! ಆದರೆ ಈ ಸೂತ್ರವು ಪಂಚಮೀ ವಿಧಾಯಕವಲ್ಲ. ಕಥಂಚಿತ್ ಪಂಚಮೀ ವಿಧಾಯಕತ್ವವು ಕೂಡಿದಾಗ್ಯೂ ಉಪಾದಾನಾರ್ಥದಲ್ಲಿ ಪಂಚಮೀವಿಧಾಯಕವಲ್ಲ. (2) ಹಾಗಾ ದರೆ ಪರಂಪರಯಾ ಪಂಚಮೀ ವಿಭಕ್ತಿಯನ್ನು ವಿಧಿಸುತ್ತದೆ. ಹೇಗೆಂದರೆ—'ಅಪಾದಾನೇ ಪಂಚ ಮೀ' ಎನ್ನುವುದರಿಂದ ಅಪಾದಾನಾರ್ಥದಲ್ಲಿ ಪಂಚಮೀವಿಭಕ್ತಿಯು ವಿಹಿತವಾಗಿದೆ. 'ಜನಿಕರ್ತುಃ ಪ್ರಕೃತಿಃ' ಎನ್ನುವ ಸೂತ್ರದಿಂದ ಉಪಾದಾನವೆಂದರೆ— ಅಪಾದಾನವಿಶೇಷವು. ಆದಕಾರಣ ಅಪಾದಾನದಲ್ಲಿ ವಿಹಿತವಾದ ಪಂಚಮಿಯು ಉಪಾದಾನಾರ್ಥದಲ್ಲಿಯೂ ಆಗುವುದು. ಉಪಾದಾನ ವೆಂದರೆ, ಅಪಾದಾನವಿಶೇಷವಾಗಿದ್ದರೂ ಅಪಾದಾನ ಸಾಮಾನ್ಯದಲ್ಲಿ ವಿಹಿತವಾದ 'ಯತೋ ವಾ' ಇತ್ಯಾದಿ ಪಂಚಮಿಯಿಂದ ಕಥಿತವಾದ ಅಪಾದಾನಕ್ಕೆ ನಿಯಮವಾಗಿ ಅಪಾದಾನವಿಶೇಷವಾದ ಉಪಾದಾನತ್ವಸಿದ್ಧಿಯು ಹೇಗೆ ಎಂದು ಹೇಳಕೂಡದು. 'ಜಾಯಂತೇ' ಇತ್ಯಾದಿ ಉತ್ಪತ್ತಿ ವಾಚಕ ವಾದ ಪದವನ್ನು ಕೇಳಿ 'ಜನಿಕರ್ತುಃ' ಎನ್ನುವ ವಿಶೇಷ ಸೂತ್ರದಲ್ಲಿ ಹೇಳಲ್ಪಟ್ಟ ಅಪಾದಾನ ವಿಶೇಷವನ್ನೇ ಸ್ವೀಕರಿಸಬೇಕೆಂದರೆ—

**ಮೂ ॥ ಶೃಂಗಾಚ್ಛರೋऽವಿಲೋಮಭ್ಯೋ ದೂರ್ವಾ ಗೋಮಯತಸ್ತಥಾ ।**
**ವೃಶ್ಚಿಕಶ್ಚೇತ್ಯೇವಮಾದ್ಯೇಷ್ವಪಾದಾನತ್ವಮಿಷ್ಯತೇ ॥ ೭೪ ॥**

ಅ ॥ ಶೃಂಗಾತ್=ಕೋಡುವಿನದ್ದೆಸೆಯಿಂದ, ಶರಃ=ತೃಣವಿಶೇಷವು,(ಕೇತಕಿಯು ಮುಂಡ ಗೆಯು)ತಥಾ=ಹಾಗೆ,ಅವಿಲೋಮಭ್ಯಃ=ಮೇಷರೋಮಗಳದ್ದೆಸೆಯಿಂದ,ದೂರ್ವಾ=ಗರಿಕೆಹುಲ್ಲು,

ತಥಾ=ಹಾಗೆಯೇ, ಗೋಮಯತಃ=ಗೋಮಯದ್ದೆಶೆಯಿಂದ, ವೃಶ್ಚಿಕಶ್ಚ=ಚೇಳು, (ಜಾಯಂತೇ= ಹುಟ್ಟುತ್ತವೆ.) ಇತಿ=ಹೀಗೆ, ಏವಮಾದ್ಯೇಷು=ಇದೇ ಮೊದಲಾಗಿವುಳ್ಳ ಉದಾಹರಣಗಳಲ್ಲಿ, (ಪಾಣಿನಿಸೂತ್ರದಲ್ಲಿಯೂ,) ಅಪಾದಾನತ್ವಂ = ಶೃಂಗಾದಿಗಳಿಗೆ ಶರಾದಿಗಳನ್ನು ಕುರಿತು ಅಪಾದಾನತ್ವವು, ಇಷ್ಯತೇ=ಪಂಚಮ್ಯರ್ಥವಾಗಿ ಅಂಗೀಕರಿಸಲ್ಪಡುತ್ತದೆ. (ಉಪಾದಾನತ್ವವಲ್ಲ.)

**ತಾ ॥ ನ್ಯಾಯಸುಧಾ**— (1) ಈ ಪಾಣಿನಿಸೂತ್ರಕ್ಕೂ ಆ ಉದಾಹರಣೆಗಳಿಗೂ ಪರರು ಹೇಳಿದ ಅರ್ಥವಾಗಿದ್ದರೆ ಹೀಗೆ ಆಗಬಹುದಿತ್ತು. ಪರರು ಹೇಳಿದ ಅರ್ಥವಲ್ಲ. ಮತ್ತೆ 'ಜನಿಕರ್ತುಃ ಪ್ರಕೃತಿಃ' ಎನ್ನುವುದಕ್ಕೆ ಹೀಗೆ ಅರ್ಥವು. ಹುಟ್ಟತಕ್ಕದ್ದಕ್ಕೆ ಯಾವುದು ಪ್ರಕೃತಿಯೋ, ಅಂದರೆ, ಉಪಾದಾನಸಂಸೃಷ್ಟವಾದ, ಅಪಾಯದಲ್ಲಿ (ಹೊರಡತಕ್ಕ ವಸ್ತುವಿನ ವಿಶ್ಲೇಷದಲ್ಲಿ) ಅವಧಿಭೂತವಾದ ಯಾವುದು ದ್ರವ್ಯವೋ, ಆ ಹುಟ್ಟತಕ್ಕ ವಸ್ತುವಿಗೆ ಕಾರಣಭೂತವಾದುದು ಅಪಾದಾನವೆನ್ನಿಸುತ್ತದೆ. ಉದಾಹರಣಗಳಲ್ಲಿಯೂ ಶೃಂಗಾದಿಗಳಿಗೆ ಶರಾದಿಗಳನ್ನು ಕುರಿತು ಅಪಾಯಾವಧಿತ್ವವೇ ಪಂಚಮೀವಿಭಕ್ತಿಪ್ರತಿಪಾದ್ಯವು ॥ ೭೪ ॥

ಇದನ್ನೇ ವಿಸ್ತರಿಸುತ್ತಾರೆ—

**ಮೂ ॥ ಉಪಾದಾನೈಕದೇಶತ್ವಂ ಯದ್ಯಪ್ಯತ್ರ ಪ್ರದೃಶ್ಯತೇ ।**
**ಅಪ್ಯಪಾದಾನತೈವಾತ್ರ ದೃಷ್ಟಾಂತೋ ಬ್ರಹ್ಮಣೋ ಭವೇತ್ ॥**
**ನ ಹ್ಯುಪಾದಾನತೈವಾತ್ರ ಬಾಹ್ಯಾವಯವಗೌರವಾತ್ ॥ ೭೫ ॥**

**ಅ ॥** ಯದ್ಯಪಿ ಅತ್ರ=ಈ ಶೃಂಗಾದಿಗಳಲ್ಲಿ, ಉಪಾದಾನೈಕದೇಶತ್ವಂ=ಶರಾದ್ಯುಪಾದಾನಭೂತವಾದ ಏಕದೇಶವಿದೆ ಎನ್ನುವುದು, ಪ್ರದೃಶ್ಯತೇ=ತೋರುತ್ತದೆ. (ತಥಾಪಿ=ಆದಾಗ್ಯೂ) ಅತ್ರ=ಇಲ್ಲಿ, ಅಪಾದಾನತೈವ = ಅಪಾಯಾವಧಿತ್ವರೂಪವಾದ ಅಪಾದಾನತ್ವವೇ, ಬ್ರಹ್ಮಣಃ= ಬ್ರಹ್ಮನಿಗೆ, ದೃಷ್ಟಾಂತಃ ಭವೇತ್ = ಪಂಚಮ್ಯರ್ಥವಿಷಯದಲ್ಲಿ ಉದಾಹರಣವಾಗುವುದು. (ಉಪಾದಾನತ್ವವಲ್ಲ.) ಅತ್ರ=ಶೃಂಗಾದಿಗಳಲ್ಲಿ, ಉಪಾದಾನತೈವ=ಉಪಾದಾನತ್ವವೆ ಎಂದು, ನ ಹಿ=ಹೇಳಕೂಡದು. ಹಿ=ಯಾವ ಕಾರಣದಿಂದ, ಅಪರಿಣತಭಾಗವುಳ್ಳ ಶರಾಂಕುರಾದಿಗಳು ಅತ್ಯಂತ ಭಿನ್ನಗಳೆಂದು ಪ್ರಮಿತಗಳಾಗಿವೆ. ಇಲ್ಲವಾದರೆ ಇದಕ್ಕೆ ಇದು ಉಪಾದಾನಕಾರಣವು. ಇದು ಉಪಾದಾನಕಾರಣವಲ್ಲ ಎನ್ನುವ ವ್ಯವಸ್ಥೆಯು ಕೂಡುವುದಿಲ್ಲವೆಂದು ಪ್ರಸಿದ್ಧವು. (ಹಾಗಾದರೆ 'ಶೃಂಗಾತ್' ಎಂದು ಪ್ರಯೋಗವು ಹೇಗೆ ಕೂಡುತ್ತದೆಂದರೆ) ಬಾಹ್ಯಾವಯವಗೌರವಾತ್= ಶರಾಕಾರವಾಗಿ ಪರಿಣತಗಳಾದವುಗಳಿಂದ ಇತರಗಳಾದ ಯಾವುವು ಅವಧಿಭೂತಗಳಾದ ಅವಯವಗಳೋ ಅವುಗಳಿಗೆ ಬಹುತ್ವವಿದ್ದುದರಿಂದ.

**ತಾ ॥ ನ್ಯಾಯಸುಧಾ**— (1) ಶೃಂಗಾದಿಗಳು ಏಕದೇಶದಿಂದ ಶರಾದಿಗಳಿಗೆ ಉಪಾದಾನಕಾರಣವು. ಏಕದೇಶದಿಂದ ಅಪಾಯಾವಧಿಯಾಗಿ ಶರಜನನರೂಪಕ್ರಿಯೆಗೆ ಹೇತುವಾಗುತ್ತದೆ. ಅಪಾಯಾವಧಿಭೂತವಾದ ಶೃಂಗೈಕದೇಶವು ಇಲ್ಲವಾದರೆ ಏಕದೇಶಾಂತರವಾದ ಶೃಂಗಸಾರಭಾಗಕ್ಕೆ ಉಪಾದಾನತ್ವವೇ ಕೂಡಲಾರದು. ಯದ್ಯಪಿ ಮುದ್ಗಮಾಷಾದಿಗಳು ತುಷಮಧ್ಯದಲ್ಲಿರತಕ್ಕ ಅಂಶದಿಂದಲೇ ಅಂಕುರಕ್ಕೆ ಉಪಾದಾನಕಾರಣಗಳು. ಆದಾಗ್ಯೂ ತುಷವಿಕಲಗಳಾದ ಅಂಶಗಳು ಅಂಕುರವನ್ನು ಹುಟ್ಟಿಸುವುದಿಲ್ಲ. ಅದರಲ್ಲಿ ತುಷರೂಪ ಅವಧಿಭಾಗವೇ ಅಪಾದಾನವೂ, ಪಂಚಮೀವಿಭಕ್ತಿವಾಚ್ಯವೂ ಆಗಿದೆ. ಆ ದೃಷ್ಟಾಂತದಿಂದ ಬ್ರಹ್ಮನಿಗೂ ಪಂಚಮೀವಿಭಕ್ತಿಯ ಬಲದಿಂದ ಉಪಾದಾನಪ್ರಧಾನಸಂಸೃಷ್ಟವಾದ ಅವಧಿತ್ವವೇ ಆಗುತ್ತದೆ. ಉಪಾದಾನತ್ವವಲ್ಲ. (2) ಹಾಗಾದರೆ— "**ತತೋಽಭವನ್ಮಹತ್ತತ್ವಮವ್ಯಕ್ತಾತ್ಕಾಲಚೋದಿತಾತ್ ।**

**ಮಹತ್ತತ್ತ್ವಾದ್ವಿಕುರ್ವಾಣಾದಹಂತತ್ತ್ವಮಜಾಯತ"** || ಪ್ರಕೃತಿಯದ್ವೆಶೆಯಿಂದ ಮಹತ್ತತ್ತ್ವ, ಮಹತ್ತತ್ತ್ವದ್ವೆಶೆಯಿಂದ ಅಹಂಕಾರತತ್ತ್ವವು ಇತ್ಯಾದಿ ಪ್ರಯೋಗವು ಹೇಗೆ ಕೂಡುತ್ತದೆ? ಅಲ್ಲಿಯೂ ಪರಿಣತಭಾಗದಲ್ಲಿ ಸಂಸೃಷ್ಟವಾದ ಅಪರಿಣತಭಾಗದ ಅವಧಿಭೂತವಾದುದು ಪಂಚಮೀ ವಿಷಯವೆನ್ನುತ್ತೇವೆ. ಎಲ್ಲಿ ಸರ್ವಾಂಶಕ್ಕೂ ಪರಿಣಾಮವಿದೆಯೋ ಅಲ್ಲಿ ಹೇಗೆ? ಅಲ್ಲಿ ಪಂಚಮೀ ವಿಭಕ್ತಿಯನ್ನು ಪ್ರಯೋಗಿಸಲಿಕ್ಕೇನೇ ಕೂಡದು. ಕ್ಷೀರದ್ವೆಶೆಯಿಂದ ದಧಿಯು ಹುಟ್ಟಿತೆಂದು ಪ್ರಯೋಗಿಸುವುದಿಲ್ಲ. ಮತ್ತೆ ಕ್ಷೀರವೇ ದಧಿಯು ಆಯಿತೆನ್ನುತ್ತಾರೆ. ಎಲ್ಲಿಯಾದರೂ ಕ್ಷೀರದ್ವೆಶೆಯಿಂದ ದಧಿಯು ಹುಟ್ಟಿತೆಂದು ಪ್ರಯೋಗವಿದ್ದರೆ ಅದು ಗೌಣವೆಂದಾಗಲೀ 'ಜನಿಕರ್ತುಃ ಪ್ರಕೃತಿಃ' ಎನ್ನುವ ಸೂತ್ರದಲ್ಲಿ ಪ್ರಕೃತಿಯೇ ಉಪಾದಾನವೆನ್ನಿಸುತ್ತದೆ ಎನ್ನುವ ಅರ್ಥಾಂತರ ಕಲ್ಪನಾ ಮೂಲಕವೆಂದಾಗಲೀ ಇಟ್ಟುಕೊಳ್ಳಬೇಕು. (3) ಹಾಗಾದರೆ, ಶೃಂಗವೇ ಶರಕ್ಕೆ ಉಪಾದಾನ ಕಾರಣವು. ಕೆಲವು ಅವಯವಗಳು ಉಪಾದಾನಕಾರಣವು. ಕೆಲವು ಅವಧಿಗಳು ಎನ್ನುವ ವಿಭಾಗವಿಲ್ಲ. ಹಾಗಾದರೆ, ಅವಯವಗಳಿಗೆ ಶೃಂಗತ್ವವಿಲ್ಲದಿರುವುದರಿಂದ 'ಶೃಂಗಾತ್ ಶರೋ ಜಾಯತೇ' ಎನ್ನುವ ಪ್ರಯೋಗವು ಕೂಡಲಾರದು. ಪಂಚಮೀವಿಭಕ್ತಿಯು ಉಪಾದಾನದಲ್ಲಿ ಆಗಲೀ ಅವಧಿಯಲ್ಲಿ ಆಗಲೀ ಇದೆ ಎಂದಾದರೂ 'ಶೃಂಗಾವಯವಾತ್' ಎಂದೇ ಹೇಳಬೇಕಿತ್ತು. ಹಾಗಾದರೆ, ಅವಧಿತ್ವವೇ ಆಗಲೀ ಎಂದು ಹೇಳಕೂಡದು. ಉಪಾದಾನಕಾರಣವಿಲ್ಲದೇನೇ ಹುಟ್ಟಬೇಕಾಗುವುದು. ಆದುದರಿಂದ ಶೃಂಗವೇ ಉಪಾದಾನಕಾರಣವಾಗಿರುವುದರಿಂದ ಅಲ್ಲಿ ಪಂಚಮೀ ವಿಭಕ್ತಿಯು ಶ್ರುತವಾಗಿರುವುದರಿಂದ 'ಉಪಾದಾನೇ ಪಂಚಮೀ' ಎಂದು ಹೇಳಬೇಕು. ಎಂದರೆ— ಶೃಂಗಾದಿಗಳಲ್ಲಿ ಉಪಾದಾನಕಾರಣತ್ವವೇ ಇದೆ ಎಂದು ಹೇಳಕೂಡದು. (4) ಹಾಗಾದರೆ, 'ಶೃಂಗಾತ್' ಎಂದು ಪ್ರಯೋಗವು ಹೇಗೆ ಕೂಡುತ್ತದೆಂದರೆ— ಕೆಲವು ಅವಯವಗಳು ಪರಿಣತಗಳಾಗುತ್ತಿರಲು ಹೆಚ್ಚು ಅವಶಿಷ್ಟಗಳಾಗಿರುವುದರಿಂದ ಕೆಲವು ತಂತುಗಳ ನಾಶವಾಗುವಾಗ ಖಂಡಪಟವು ಹುಟ್ಟುವಂತೆ, ಖಂಡವಾದ ಶೃಂಗಾಂತರದ ಉತ್ಪತ್ತಿಯಿಂದಾಗಲೀ ಶೃಂಗ ಎನ್ನುವ ಬುದ್ಧಿಮಾತ್ರದ ಉತ್ಪತ್ತಿಯಿಂದಾಗಲೀ ಶೃಂಗಶಬ್ದವು ಉಪಪನ್ನವಾಗುತ್ತದೆ. (5) ಸೂತ್ರಾದಿಗಳಿಗೆ ಅರ್ಥಾಂತರವನ್ನು ಕಲ್ಪಿಸಿದ್ದು ಏಕೆಂದರೆ, ಉಪಾದಾನ-ಅಪಾದಾನ ಶಬ್ದಾರ್ಥಗಳಿಗೆ ಪರಸ್ಪರ ವಿರೋಧವಿದ್ದುದರಿಂದ ಉಪಾದಾನಕ್ಕೆ ಅಪಾದಾನವಿಶೇಷತ್ವವು ಕೂಡದಿರುವಪ್ರಯುಕ್ತ. ಹೇಗೆಂದರೆ— 'ಉಪಾದೀಯತೇ ಕಾರ್ಯಂ ಅನೇನ ಸ್ವರೂಪತಯಾ ಸ್ವೀಕ್ರಿಯತೇ' ಕಾರ್ಯವು ಇದರಿಂದ ಸ್ವರೂಪವೆಂದು ಸ್ವೀಕರಿಸಲ್ಪಡುತ್ತದೆ. ಆದಕಾರಣ ಉಪಾದಾನವು. 'ಅಪಾದೀಯತೇ ಪರಿತ್ಯಜ್ಯತೇ ಅನೇನ' ಇದರಿಂದ ಬಿಡಲ್ಪಡುವುದರಿಂದ ಅಪಾದಾನವೆನ್ನಿಸುತ್ತದೆ. ಹೀಗೆ ಸ್ಪಷ್ಟವಾಗಿ ವಿರೋಧವು. ಹೀಗೆಯೇ ಮಹಾಭಾಷ್ಯಕಾರರಾದ ಪತಂಜಲಿ ಮಹಾಮುನಿಗಳೂ ಇದೇ ರೀತಿಯಾಗಿ ಸೂತ್ರಾರ್ಥವನ್ನು ಸೂಚಿಸಿರುವರು.

(6) ಅಥವಾ ಜಗತ್ತು ಬ್ರಹ್ಮನ ವಿಕಾರವಲ್ಲ; ಬ್ರಹ್ಮನದ್ವೆಶೆಯಿಂದ ಭಿನ್ನವಾಗಿ ತೋರುವುದರಿಂದ ಎಂದು ಯಾವುದು ಹೇಳಲ್ಪಟ್ಟದೋ ಅದು ಅಯುಕ್ತವು. ಶರಾದಿಗಳಲ್ಲಿ ವ್ಯಭಿಚಾರವು. ಶರಾದಿಗಳು ಶೃಂಗಾದಿಗಳೇ ಉಪಾದಾನಕಾರಣವಾಗಿವುಳ್ಳವುಗಳು, ಶೃಂಗಾದಿಗಳದ್ವೆಶೆಯಿಂದ ಬೇರೆಯಾಗಿ ತೋರುತ್ತವೆ, ಎಂದರೆ ಗೂಢಾಭಿಸಂಧಿಯಾಗಿ ಹೇಳುತ್ತಾರೆ. 'ಶೃಂಗಾತ್ ಶರಃ' ಇದುಮೊದಲಾದ ಸ್ಥಳಗಳಲ್ಲಿ ಶರಾದಿಗಳನ್ನು ಕುರಿತು ಶೃಂಗಾದಿಗಳಿಗೂ ಅಪಾಯಾವಧಿತ್ವರೂಪವಾದ ಅಪಾದಾನತ್ವವೇ ಇಚ್ಛಿಸಲ್ಪಡುತ್ತದೆ. ಉಪಾದಾನತ್ವವಲ್ಲ. ಆದಕಾರಣ ವಿಪಕ್ಷವಾಗದಿರುವುದರಿಂದ ಭಿನ್ನವಾಗಿ ತೋರುವುದು ಅಲ್ಲಿ ಸಾಧ್ಯವನ್ನು ವ್ಯಭಿಚರಿಸುವುದಿಲ್ಲ. (7) ಶೃಂಗಾದಿಗಳು ಶರಾದಿಗಳಿಗೆ ಉಪಾದಾನಕಾರಣವಲ್ಲವೆಂದು ಹೇಗೆ ಹೇಳುವುದು? ಹಾಗಿದ್ದರೆ

ಬೇರೆ ಉಪಾದಾನಕಾರಣವೇ ಇಲ್ಲದಿರುವುದರಿಂದ ಶರಾದಿಗಳು ಉಪಾದಾನಕಾರಣವಿಲ್ಲದೇನೇ ಹುಟ್ಟಬೇಕಾಗುವುದು ಎಂದಾಶಂಕಾಬಂದರೆ— ಶೃಂಗಾದಿಗಳಿಗೆ ಅಪಾದಾನತ್ವವಿದ್ದರೂ ಶರಾದಿಗಳಿಗೆ ಉಪಾದಾನವಿಲ್ಲದೇನೇ ಉತ್ಪತ್ತಿಯಾಗಬೇಕಾದೀತು ಎಂದು ಹೇಳಲಾಗುವುದಿಲ್ಲ. ಕೆಲವು ಶೃಂಗಾದ್ಯವಯವಗಳು ಶರಾದಿಗಳಿಗೆ ಉಪಾದಾನಕಾರಣಗಳೆನ್ನುತ್ತೇವೆ. ಹಿಂದೆ ಹೇಳಿದಪ್ರಕಾರ ವ್ಯಭಿಚಾರವಿದೆ ಎಂದು ಹೇಳಕೂಡದು. (8) ಯದ್ಯಪಿ ಇಲ್ಲಿ ಶೃಂಗಾದಿಗಳಲ್ಲಿ ಶರಾದ್ಯುಪಾದಾನಗಳ ಏಕದೇಶತ್ವವಿದೆ ಎಂದು ತೋರುತ್ತದೆ. ಆದಾಗ್ಯೂ ಇಲ್ಲಿ ಶೃಂಗಾದಿಗಳಲ್ಲಿ ಯಾವ ಏಕದೇಶಕ್ಕೆ ಹಿಂದೆ ಹೇಳಿದ ಅಪಾದಾನತ್ವವಿದೆಯೋ, ಅದೇ ಬ್ರಹ್ಮನಿಗೆ ದೃಷ್ಟಾಂತವಾಗುವುದು. ಅಪಾದಾನವಾದ ಶೃಂಗಾದಿಗಳದ್ದೆಶೆಯಿಂದಲೇ ಶರಾದಿಗಳಿಗೆ ಭೇದವು ತೋರುವುದು. ಉಪಾದಾನಭಾಗದಿಂದ ಅಲ್ಲ. ಅದರಿಂದ ಭೇದವು ತೋರುವುದಿಲ್ಲ. ಅಂದರೆ, ಕೆಲವು ಶೃಂಗಾದಿಗಳ ಅವಯುವಗಳು ಶರಾದಿಗಳಿಗೆ ಉಪಾದಾನಭೂತಗಳು. ಕೆಲವು ನಿಮಿತ್ತಭೂತಗಳು. ಅವುಗಳಲ್ಲಿ ಯಾವುವು ನಿಮಿತ್ತಕಾರಣಗಳೋ ಅವುಗಳು ಸಪಕ್ಷಗಳಲ್ಲಿ ಪ್ರವಿಷ್ಟಗಳಾಗಿರುವುದರಿಂದ ಅವುಗಳಲ್ಲಿ ಹೇತುವಿದ್ದರೂ ವ್ಯಭಿಚಾರವಿಲ್ಲ. ಯಾವುದು ಉಪಾದಾನಭೂತಗಳೋ ಅವುಗಳು ವಿಪಕ್ಷಗಳಲ್ಲಿ ಪ್ರವಿಷ್ಟಗಳಾದಾಗ್ಯೂ ಅವುಗಳಲ್ಲಿ ಹೇತುವೇ ಇರುವುದಿಲ್ಲ. ಆದಕಾರಣ ವ್ಯಭಿಚಾರವಿಲ್ಲ,

(9) ಯಾವನು ಔದ್ಧತ್ಯದಿಂದ ಇಲ್ಲಿ ಅಪಾದಾನತ್ವವಿಲ್ಲ, ಮತ್ತೆ ಕೇವಲ ಉಪಾದಾನತ್ವವೇ ವ್ಯಭಿಚಾರವಿದ್ದೇ ಇದೆ ಎಂದು ಹೇಳುವನೋ, ಅವನ ಹತ್ತಿರ ಹೀಗೆ ಪ್ರಶ್ನಿಸಬೇಕು. (೧) ಅವಿನಷ್ಟವಾದ ಶೃಂಗಾವಯುವಿಯು ಉಪಾದಾನವೆಂದು ಅಭಿಪ್ರಾಯವೋ? (೨) ಅಥವಾ ಶೃಂಗವು ನಷ್ಟವಾಗದೇನೇ ಶೃಂಗಾವಯುವಗಳೆಲ್ಲವೂ ಉಪಾದಾನವೆಂದು ಅಭಿಪ್ರಾಯವೋ? (೩) ಅಥವಾ ಶೃಂಗವೂ ನಷ್ಟವಾಗುತ್ತಿರಲು ಶೃಂಗಾವಯುವಗಳೆಲ್ಲವೂ ಉಪಾದಾನವೆಂದು ಅಭಿಪ್ರಾಯವೋ? ೧ನೇದ್ದು ಕೂಡಲಾರದು. ಈ ಶೃಂಗದಲ್ಲಿ ಉಪಾದಾನತ್ವವೇ ಇಲ್ಲ. ಹಾಗಿದ್ದರೆ ಸುವರ್ಣದಂತೆಯೇ ಶರದಲ್ಲಿ ಶೃಂಗವೂ ತೋರಬೇಕಾಗುವುದು ಎಂದು ಪ್ರಸಿದ್ಧವು. ೨ನೇದ್ದೂ ಕೂಡಲಾರದು. ಅವಿನಷ್ಟ ಶೃಂಗಗಳುಳ್ಳ ಎಲ್ಲಾ ಶೃಂಗಾವಯುವಗಳಲ್ಲಿ ಶರಾದ್ಯುಪಾದಾನತ್ವವೆನ್ನುವುದೇ ಯುಕ್ತವಲ್ಲ. ಹಾಗಿದ್ದರೆ ಶೃಂಗಶರಗಳಿಗೆ ಸಮಾನದೇಶತ್ವವು ಅಂದರೆ, ಶೃಂಗವು ಯಾವ ದೇಶದಲ್ಲಿದೆಯೋ ಅಷ್ಟು ದೇಶದಲ್ಲಿ ಶರವೂ ಇರಬೇಕಾಗುವುದು ಎಂದು ಹಿ ಶಬ್ದದಿಂದ ಸೂಚಿಸಿದರು. ೩ನೇದ್ದೂ ಕೂಡಲಾರದು. ಎಲ್ಲಾ ಶೃಂಗಾವಯುವಗಳಲ್ಲಿಯೂ, ಶೃಂಗನಾಶವಾದಮೇಲೆ ಶರಾದ್ಯುಪಾದಾನತ್ವವೆನ್ನುವುದೇ ಯುಕ್ತವಾಗುವುದಿಲ್ಲ. ಆದಕಾರಣ ವ್ಯಭಿಚಾರವಿಲ್ಲವೆಂದು ಪ್ರಸಿದ್ಧವು. (10) ಏಕೆ ಕೂಡುವುದಿಲ್ಲವೆಂದರೆ— ಕಾರ್ಯದಿಂದ ಬಾಹ್ಯಗಳಾದ, ಅಪರಿಣತಗಳಾದ ಅವಯುವಗಳು ತೋರುತ್ತವೆ. ಅಪರಿಣತವಾದುದೂ ಉಪಾದಾನಕಾರಣವಾಗುವುದಾದರೆ ಅತಿಪ್ರಸಂಗವು ॥ ೭೫ ॥

'ಭೇದೇನೋಪಲಭ್ಯಮಾನತ್ವಾತ್' ಎನ್ನುವುದಕ್ಕೆ ಇಲ್ಲಿ ವ್ಯಭಿಚಾರವು ಬೇಡ. ಆದಾಗ್ಯೂ ಚೇತನವು ಅಚೇತನವಿಕಾರವಾಗುವುದಿಲ್ಲವೆಂದು ಯಾವುದು ಹೇಳಲ್ಪಟ್ಟದೋ ಇದರಲ್ಲಿ ಅಚೇತನವಾದ ಗೋಮಯುದ್ದೆಶೆಯಿಂದ ಚೇತನಗಳಾದ ವೃಶ್ಚಿಕಾದಿಗಳು ಹುಟ್ಟುವಪ್ರಯುಕ್ತ ವ್ಯಭಿಚಾರವು ಎಂದರೆ—

**ಮೂ॥ ನ ಚಾಚೇತನತಸ್ತತ್ರ ಚೇತನಸ್ಯ ಸಮುದ್ಭವಃ ।**
**ಉಪಾದಾನತಯಾ ಕಿಂತಹ್ಯುಪಾದಾನಂ ಹ್ಯಚೇತನಂ ।**
**ಕಾರ್ಯದೇಹಗತಸ್ಯಾಸ್ಯ ಚೇತನಸ್ಯ ಪ್ರದೃಶ್ಯತೇ ॥ ೭೬ ॥**

ಅ ॥ ತತ್ರ = ಗೋಮಯಾದಿಗಳಪ್ಪೇಕ್ಷೆಯಿಂದ ವೃಶ್ಚಿಕಾದಿಗಳ ಉತ್ಪತ್ತಿ ವಿಷಯದಲ್ಲಿ, ಅಚೇತನತಃ=ಅಚೇತನಪ್ಪೇಕ್ಷೆಯಿಂದ, ಚೇತನಸ್ಯ=ಚೇತನರಿಗೆ, ಸಮುದ್ಭವಃ=ಉತ್ಪತ್ತಿಯು, ನ ಚ=ಇಲ್ಲವೇ ಇಲ್ಲ. (ಅಚೇತನದ್ವೇಕ್ಷೆಯಿಂದ ಚೇತನರಿಗೆ ಉತ್ಪತ್ತಿಯಿಲ್ಲವಾದರೆ ಗೋಮಯುದ್ವೇಕ್ಷೆಯಿಂದ ವೃಶ್ಚಿಕವು ಹುಟ್ಟುತ್ತದೆ ಇತ್ಯಾದಿ ವ್ಯವಹಾರವಿರೋಧವೆಂದರೆ—) ಉಪಾದಾನತಯಾ= ಉಪಾದಾನರೂಪದಿಂದ (ಉತ್ಪತ್ತಿಯಿಲ್ಲ ಅಂದರೆ— ನಾವು ಕಾರಣತ್ವಮಾತ್ರವನ್ನು ನಿಷೇಧಿಸುವುದಲ್ಲ. ಹಾಗಾದರೆ, ವ್ಯವಹಾರವಿರೋಧವು ಬರುವುದು. ಮತ್ತೆ ಉಪಾದಾನಕಾರಣತ್ವವನ್ನು ಮಾತ್ರ ನಿಷೇಧಿಸುವೆವು.) ಕಿಂ ತರ್ಹಿ = ಗೋಮಯಾದಿಗಳು ವೃಶ್ಚಿಕಾದಿಗಳಿಗೆ ಉಪಾದಾನಕಾರಣಗಳಾಗದಿದ್ದರೆ ಎಂತಹ ಕಾರಣವು ಹೇಗೆ ವ್ಯವಹಾರವು ಉಪಪನ್ನವಾಗುವುದು ಎಂದರೆ— ಅಚೇತನಂ = ಅಚೇತನವು, ಅಪಾದಾನಂ = ಅಪಾದಾನವು, ಅಸ್ಯ=ವೃಶ್ಚಿಕಾದಿ ಶಬ್ದವಾಚ್ಯವಾದ, ಕಾರ್ಯದೇಹಗತಸ್ಯ=ಗೋಮಯಾದಿಗಳೇ ಉಪಾದಾನವಾಗಿರುವ ಶರೀರದಲ್ಲಿರತಕ್ಕ, ಚೇತನಸ್ಯ=ಚೇತನರಿಗೆ, ಪ್ರದೃಶ್ಯತೇ=ಕಾಣಲ್ಪಡುತ್ತದಷ್ಟೇ.

ತಾ ॥ (1) ವೃಶ್ಚಿಕ ಮೊದಲಾದ ಶಬ್ದಗಳಿಂದ ಶರೀರವೂ ಚೇತನವೂ ಹೇಳಲ್ಪಡುತ್ತದೆ ಅದರಲ್ಲಿ ಗೋಮಯಾದ್ಯಚೇತನವು ಅಚೇತನವಾದ ಶರೀರವು ಹುಟ್ಟಲಿಕ್ಕೆ ಏಕದೇಶದಿಂದ ಉಪಾದಾನಕಾರಣವು. ಏಕದೇಶದಿಂದ ಅಪಾದಾನವೂ ಆಗುತ್ತದೆ. ಚೇತನವಾದರೂ ಪ್ರಾದುರ್ಭಾವರೂಪವಾದ ಉತ್ಪತ್ತಿಯಲ್ಲಿ ನಿಮಿತ್ತವೇ. ದೇಹಕ್ಕೆ ಕಾರಣವಾಗಿರುವುದರಿಂದ ದೇಹದಲ್ಲಿಯೇ ಚೇತನನಿಗೆ ಪ್ರಾದುರ್ಭಾವವು. ಅಪಗಮನದಲ್ಲಿಯಾದರೂ ಅವಧಿಯಾಗಿ ಅಪಾದಾನವೇ. ಆದ ಕಾರಣ ಹಿಂದೆ ಹೇಳಿದ ನಿಯಮಕ್ಕೆ ಭಂಗವಿಲ್ಲ ॥ ೭೬ ॥

ಹೀಗೆ ಪರಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗುವುದಿಲ್ಲವೆನ್ನುವಲ್ಲಿ ಪ್ರಮಾಣಗಳನ್ನು ಹೇಳಿ ಪರರು ಉಪನ್ಯಾಸಮಾಡಿದ ಪ್ರಮಾಣಗಳನ್ನು ನಿರಾಕರಿಸುತ್ತಾ 'ಪರಿಣಾಮಾತ್' ಎನ್ನುವ ಸೂತ್ರಾರ್ಥವಾಗಿ ಹೇಳಿದ ಶ್ರುತಿಯನ್ನು ನಿರಾಕರಿಸುತ್ತಾರೆ—

**ಮೂ ॥ ಸಚ್ಚ ತ್ಯಚ್ಚಾಭವದಿತಿ ನಾಸ್ಯ ವಿಶ್ವತ್ವಮುಚ್ಯತೇ ।**
**ತತ್ಸೃಷ್ಟ್ವೇತಿ ಗಿರೈವಾಸ್ಯ ಪೂರ್ವಂ ನಿಶ್ವಸ್ಯ ಸಿದ್ಧಿತಃ ॥ ೭೭ ॥**

ಅ ॥ ಸಚ್ಚತ್ಯಚ್ಚಾಭವದಿತಿ="**ಸಚ್ಚ ತ್ಯಚ್ಚಾಭವತ್ । ನಿರುಕ್ತಂಚಾನಿರುಕ್ತಂ ಚ । ನಿಲಯನಂಚಾನಿಲಯನಂ ಚ । ವಿಜ್ಞಾನಂಚಾವಿಜ್ಞಾನಂ ಚ । ಸತ್ಯಂಚಾನೃತಂ ಚ ಸತ್ಯಮಭವತ್**" ॥ (ತೈ. ಉ. ಪು. ೧೩೫) ಎನ್ನುವ ಶ್ರುತಿಯಲ್ಲಿ, ಅಸ್ಯ=ಈ ಬ್ರಹ್ಮನಿಗೆ, ವಿಶ್ವತ್ವಂ=ಸತ್ ತ್ಯದಾದಿಶಬ್ದಗಳಿಂದ ವಾಚ್ಯವಾದ ಮೂರ್ತ-ಅಮೂರ್ತರಾಶಿದ್ವಯಾತ್ಮಕವಾದ ವಿಶ್ವಭಾವವು, ಉಚ್ಯತೇ ಇತಿ ನ=ಹೇಳಲ್ಪಡುತ್ತದೆಂಬು ಅಲ್ಲವು. ಏಕೆಂದರೆ— ತತ್ಸೃಷ್ಟ್ವೇತಿ ಗಿರಾ="**ಸ ಇದಂ ಸರ್ವಮಸೃಜತ । ತತ್ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನುಪ್ರವಿಶ್ಯ । ಸಚ್ಚ ತ್ಯಚ್ಚಾಭವತ್**" ॥ (ತೈ. ಉ. ಪು. ೧೩೫) ಎನ್ನುವ ವಚನದಿಂದ, ಪೂರ್ವಮೇವ=ಬ್ರಹ್ಮನಿಗೆ ಸದಾದಿಗಳ ಭವನದಿಂದ ಮೊದಲೇ, ಅಸ್ಯ ವಿಶ್ವಸ್ಯ ಸಿದ್ಧಿತಃ=ಈ ಮೂರ್ತಾಮೂರ್ತರೂಪ ಜಗತ್ತಿನ ಉತ್ಪತ್ತಿಯು ತಿಳಿದುಬರುವುದರಿಂದ.

ತಾ ॥ (1) ಈ ಸತ್‌ತ್ಯದಾದಿಭವನವು ಪ್ರಪಂಚರೂಪವಾದ ಉತ್ಪತ್ತಿಯಲ್ಲ. ಜಗತ್ತು ಹುಟ್ಟಿದಮೇಲೆ ಆಗತಕ್ಕದಾದಪ್ರಯುಕ್ತ. ಅಥವಾ 'ವಿಶ್ವಂ ಸತ್ತ್ಯದಾದಿಶಬ್ದಾರ್ಥತಯಾ ಅತ್ರ ನ ವಿವಕ್ಷಿತಂ ತದ್ಭವನಾತ್ಪೂರ್ವಕಾಲೀನೋತ್ಪತ್ತಿಕತ್ವಾತ್ ಭೋಜನವತ್' ಜಗತ್ತು ಸತ್

ತ್ಯದ್ ಮೊದಲಾದ ಶಬ್ದಾರ್ಥವೆಂದು ಇಲ್ಲಿ ವಿವಕ್ಷಿತವಾಗಲಿಲ್ಲ, ಸತ್‌ತ್ಯದಾದಿಗಳ ಭವನಕ್ಕಿಂತ ಮೊದಲು ಹುಟ್ಟಿರುವಪ್ರಯುಕ್ತ, ಭೋಜನದಂತೆ ಅಂದರೆ, 'ಭುಕ್ತ್ವಾ ಚರತಿ' ಎಂದು ಹೇಳಿದ ಚರಣಪೂರ್ವಕಾಲೀನ ಭೋಜನವು ಹೇಗೆ ಚರಣವಲ್ಲವೋ ಹಾಗೆ-ಇತ್ಯಾದ್ಯನುಮಾನಗಳನ್ನು ಇಟ್ಟುಕೊಳ್ಳಬೇಕು ॥ ೭೭ ॥

ಹಾಗಾದರೆ, ಶ್ರುತ್ಯರ್ಥವು ಯಾವುದೆಂದರೆ—

**ಮೂ ॥ ಸತ್ತ್ವಾತ್ತತೇರ್ವೈದಿಕತ್ವಾತ್ ಸಮ್ಯಗ್ವಕ್ತುಮಶಕ್ಯತಃ ॥ ೭೮ ॥**
**ಆಶ್ರಯತ್ವಾತ್ಸ್ವಾಶ್ರಯತ್ವಾಜ್ಞಾನತ್ವಾದ್ದುರ್ವಿದತ್ವತಃ ।**
**ಸತ್ತತೇರ್ಯಾತನಾಚ್ಚೈವ ಹ್ಯಪ್ರಾಪ್ಯ (ಪ್ತ)ತ್ವಾಚ್ಚ ದುರ್ಜನೈಃ ॥೭೯॥**
**ನಿತ್ಯಸಾಧುಗುಣವ್ಯಾಪ್ತಿ ಯಂತೃರೂಪತ್ವತಃ ಸದಾ ।**
**ಜಗದ್ಗತೇನ ರೂಪೇಣ ಬ್ರಹ್ಮೈವ ಹಿ ತಥೋಚ್ಯತೇ ॥ ೮೦ ॥**

ಅ ॥ ಬ್ರಹ್ಮೈವ=ಪರಬ್ರಹ್ಮನೇ, (ಜಗದ್ರೂಪವಾಗಿ ಪರಿಣಾಮವಿಲ್ಲದೆ ಸತ್ವಮೊದಲಾದ ಧರ್ಮಗಳ ಯೋಗದಿಂದ) ತಥಾ=ಹಾಗೆ, ಸತ್ ತ್ಯದ್ ಮೊದಲಾದ ಶಬ್ದಗಳಿಂದ, ಉಚ್ಯತೇ= ಹೇಳಿಸಿಕೊಳ್ಳಲ್ಪಡುತ್ತಾನೆ. ಅಂದರೆ— ಸತ್ವಾತ್=ಸರ್ವೋತ್ತಮತ್ವವಿದ್ದುದರಿಂದ, ಸತ್=ಸತ್ ಎಂದೂ, ತತೇಃ=ಸರ್ವತ್ರ ವ್ಯಾಪ್ತಿಯಿದ್ದುದರಿಂದ, ತ್ಯತ್=ತ್ಯತ್ ಎಂದೂ, ವೈದಿಕತ್ವಾತ್= ವೇದೈಕಸಮಧಿಗಮ್ಯನಾಗಿರುವುದರಿಂದ, ನಿರುಕ್ತಂ=ನಿರುಕ್ತನೆಂದೂ, (ನಿಶ್ಚಯವಾಗಿ ಹೇಳಿಸಿ ಕೊಳ್ಳಲ್ಪಟ್ಟವನು, ವೇದ ಹೊರತು ಬೇರೆ ಯಾವುದರಿಂದಲೂ ಬ್ರಹ್ಮನು ನಿಶ್ಚಯವಾಗಿ ಹೇಳಿಸಿ ಕೊಳ್ಳಲಿಕ್ಕೆ ಶಕ್ಯನಾಗುವುದಿಲ್ಲ.) ಸಮ್ಯಕ್ = ಚೆನ್ನಾಗಿ, ವಕ್ತುಂ=ಹೇಳಲಿಕ್ಕೆ, ಅಶಕ್ಯತಃ= ಶಕ್ಯನಾಗದಿರುವುದರಿಂದ,ಅನಿರುಕ್ತಂ=ಅನಿರುಕ್ತನೆಂದೂ,(ನಿಶ್ಚಯವಾಗಿ ಹೇಳಲ್ಪಡದಿರುವವನು) ಆಶ್ರಯತ್ವಾತ್ = ಜಗದಾಶ್ರಯನಾಗಿರುವುದರಿಂದ, ನಿಲಯನಂ = 'ನಿಶ್ಚಿತಂ ಅಯಂತೇ (ಪ್ರವರ್ತಂತೇ) ಅಸ್ಮಿನ್' ನಿಶ್ಚಯವಾಗಿ ಇವನಲ್ಲಿ ಪ್ರವೃತ್ತಿಮಾಡುವುದರಿಂದ ಎನ್ನುವ ವ್ಯುತ್ಪತ್ತಿ ಯಿಂದ ನಿಲಯನನೆಂದೂ, ಸ್ವಾಶ್ರಯತ್ವಾತ್=ತಾನೇ ಆಶ್ರಯನಾಗಿರುವುದರಿಂದ, ಅಂದರೆ, ತನಗೆ ಮತ್ತೊಬ್ಬ ಆಶ್ರಯನಿಲ್ಲದಿರುವುದರಿಂದ, ಅನಿಲಯನಂ = (ತಾನು ಹೊರತು ಮತ್ತೊಬ್ಬ ಆಶ್ರಯನಿಲ್ಲ ಎನ್ನುವ ವ್ಯುತ್ಪತ್ತಿಯಿಂದ) ಅನಿಲಯನನೆಂದೂ, ಜ್ಞಾನತ್ವಾತ್=ವಿಶೇಷಜ್ಞಾನರೂಪ ನಾಗಿರುವುದರಿಂದ, ವಿಜ್ಞಾನಂ=ವಿಜ್ಞಾನನೆಂದೂ, ದುರ್ವಿದತ್ವತಃ = ದುರ್ಜ್ಞೇಯನಾಗಿರುವುದ ರಿಂದ, ಅವಿಜ್ಞಾನಂ='ನ ವಿದ್ಯತೇ ವಿಜ್ಞಾನಂ ಸಕಲವಿಶೇಷಾವಗಾಹಿ ಜೀವಜ್ಞಾನಂ ಯದ್ವಿಷಯೇ' ರಮಾದಿಚೇತನರು ಈಶ್ವರವಿಷಯಕ ಎಲ್ಲಾ ವಿಶೇಷಗಳನ್ನು ತಿಳಿಯುವುದಿಲ್ಲ ಎನ್ನುವ ವ್ಯುತ್ಪತ್ತಿ ಯಿಂದ ಅವಿಜ್ಞಾನನೆಂದೂ, ಸತ್ತತೇಃ=ಚೆನ್ನಾಗಿ ವ್ಯಾಪ್ತಿಯಿರುವುದರಿಂದ, ಯಾತನಾಚ್ಚೈವ= ಪ್ರಯತ್ನಕ್ಕೆ ಕಾರಣನಾಗಿರುವುದರಿಂದಲೂ, ಸತ್ಯಂ = ಸತ್=ಸಮೀಚೀನವಾದ, ತ್= ವ್ಯಾಪ್ತಿಯು, ಯಸ್ಯ=ಯಾರಿಗೋ, ಸ ತತ್ ಚಾಸೌ ಯಂ ಚ=ಚೆನ್ನಾಗಿ ವ್ಯಾಪ್ತನು, ಪ್ರಯತ್ನ ವನ್ನು ಮಾಡಿಸುವವನು ಎನ್ನುವ ವ್ಯುತ್ಪತ್ತಿಯಿಂದ ಸತ್ಯನೆಂದೂ, ದುರ್ಜನೈಃ=ದುರ್ಜನರಿಂದ, ಅಪ್ರಾಪ್ಯ(ಪ್ತ)ತ್ವಾಚ್ಚ=ಹೊಂದಲರ್ಹನಾಗದಿರುವುದರಿಂದಲೇ, ಅನೃತಂ=ಅನೃತನೆನ್ನಿಸುತ್ತಾನೆ. ಮಿಥ್ಯೆಯಾದಪ್ರಯುಕ್ತ ಅನೃತನೆಂದಲ್ಲ. ಹಿ=ಪ್ರಸಿದ್ಧವು. ಸದಾ = ಯಾವಾಗಲೂ, ನಿತ್ಯ ಸಾಧುಗುಣವ್ಯಾಪ್ತಿಯಂತೃರೂಪತ್ವತಃ=ನಿರಂತರದಲ್ಲಿಯೂ ಸಾಧುಗುಣಗಳಿಂದ ವ್ಯಾಪ್ತಿಯೂ ನಿಯಾಮಕರೂಪವೂ ಇದ್ದುದರಿಂದಲೂ, ಸತ್ಯಂ=ಸತ್ಯನೆನ್ನಿಸುತ್ತಾನೆ. ಅಂದರೆ, ಭಕ್ತರಲ್ಲಿ ಸಾಧುಗುಣಗಳ ಬಾಹುಲ್ಯವನ್ನು ಪ್ರೇರಿಸುವುದರಿಂದ ಸತ್ಯನೆನ್ನಿಸುತ್ತಾನೆ. ಜಗದ್ಗತೇನ ರೂಪೇಣ=

ಆಯಾಯ ವಸ್ತುಗಳಲ್ಲಿರತಕ್ಕ ರೂಪದಿಂದಲೇ, ಬ್ರಹ್ಮೈವ=ಪರಬ್ರಹ್ಮನೇ, ತಥಾ=ಸದಾದಿಶಬ್ದ ವಾಚ್ಯನೆಂದು, ಉಚ್ಯತೇ = ಹೇಳಿಸಿಕೊಳ್ಳಲ್ಪಡುತ್ತಾನೆ. ತಥಾಚ ಮೂರ್ತಾಮೂರ್ತ ಜಗತ್ತು ಗಳಲ್ಲಿ ಇರತಕ್ಕ ರೂಪದಿಂದ ಬ್ರಹ್ಮನು ಸದಾದಿಶಬ್ದವಾಚ್ಯನು. ಪರಮೇಶ್ವರನ ಸನ್ನಿಧಾನ ದಿಂದಲೇ ಮೂರ್ತಾಮೂರ್ತಾದಿಗಳಿಗೂ ಸದಾದಿಶಬ್ದವಾಚ್ಯತ್ವವೂ ಕೂಡುತ್ತದೆ ॥ ೮೦ ॥

ಸಚ್ಚ ತ್ಯಚ್ಚಾಭವತ್=ಬ್ರಹ್ಮನು ಸದ್ರೂಪನೂ, ತ್ಯದ್ರೂಪನೂ ಆದನು ಎನ್ನುವಲ್ಲಿ ಸದಾದಿ ಶಬ್ದವಾಚ್ಯಗಳಾದ ಸತ್ವಾದಿ ಧರ್ಮಗಳು ಅನಾದಿಗಳಾಗಿರುವುದರಿಂದ 'ಅಭವತ್' ಎನ್ನುವ ಪ್ರಯೋಗವು ಹೇಗೆ ಸಂಗತವಾಗುತ್ತದೆ ಎಂದರೆ—

**ಮೂ ॥ ವ್ಯಕ್ತಿರುಕ್ತಗುಣಾನಾಂ ಹಿ ಪುರುಷಾಪೇಕ್ಷಯಾ ನೃಣಾಂ(ಭಿಃ) ।**
**ಭವೇದಭವದಿತ್ಯಾದ್ಯಃ ಪ್ರ (ತ್ಯಸ್ಮಾತ್ತು) ಯೋಗಶ್ಚಾತ್ರ ಯುಜ್ಯತೇ ॥ ೮೧ ॥**

ಅ ॥ ಉಕ್ತಗುಣಾನಾಂ = ಸದಾದಿಶಬ್ದದಿಂದ ಹೇಳಲ್ಪಟ್ಟ ಧರ್ಮಗಳ, ವ್ಯಕ್ತಿಃ=ಪ್ರತೀ ತಿಯು, ನೃಣಾಂ (ಭಿಃ)=ಮನುಷ್ಯರಿಗೆ, (ಉಪದೇಷ್ಟೃ ಪುರುಷರಿಂದ) ಪುರುಷಾಪೇಕ್ಷಯಾ= ಉಪದೇಷ್ಟೃಪುರುಷರನ್ನಪೇಕ್ಷಿಸಿ ಅಥವಾ (ಶ್ರೋತೃಗಳ ಬುದ್ಧಿಯನ್ನಪೇಕ್ಷಿಸಿ) ಹಿ=ಯಾವ ಕಾರಣದಿಂದ, ಭವೇತ್=ಆಗುವುದೋ, ಅಸ್ಮಾತ್=ಈ ಕಾರಣದಿಂದ, ಅತ್ರ ಚ=ನಿತ್ಯಗುಣ ಗಳುಳ್ಳ ಬ್ರಹ್ಮನಲ್ಲಿಯೂ, ಅಭವತ್ ಇತಿ=ಸದಾದಿಯು ಆಯಿತು ಎನ್ನುವ, ಪ್ರಯೋಗಃ= ಪ್ರಯೋಗವು, ಯುಜ್ಯತೇ=ಯುಕ್ತವಾಗುತ್ತದೆ.

ತಾ ॥ ನ್ಯಾಯಸುಧಾ—ಬ್ರಹ್ಮನು ಮೂರ್ತಾಮೂರ್ತಾತ್ಮಕ ಜಗತ್ತನ್ನು ಸೃಷ್ಟಿ ಮಾಡಿ ಆ ಜಗತ್ಪ್ರೇರಕನಾಗಿ ನಾನಾರೂಪಗಳಿಂದ ಆ ಜಗತ್ತನ್ನೇ ಪ್ರವೇಶಮಾಡಿ ಸೃಷ್ಟಿಯಾಗುವುದ ಕ್ಕಿಂತ ಮೊದಲು ಉಪದೇಶಮಾಡತಕ್ಕವರೂ, ಉಪದೇಶ ತೆಗೆದುಕೊಳ್ಳುವವರೂ ಶರೀರ ಇಂದ್ರಿಯವುಳ್ಳವರೂ ಇಲ್ಲದಿರುವುದರಿಂದ ಅಪ್ರತೀತವಾದ ಗುಣಗಳುಳ್ಳವನು ಸೃಷ್ಟಿಯಾದ ಮೇಲೆ ಉಪದೇಷ್ಟೃಗಳಿಗೂ ಉಪದೇಶ್ಯರಿಗೂ ಶರೀರ ಇಂದ್ರಿಯಗಳು ಇರುವುದರಿಂದ ಪ್ರತೀತ ಸತ್ವಾದಿ ಗುಣಗಳುಳ್ಳವನು ಆದನು ॥ ೮೧ ॥

ಬ್ರಹ್ಮಪರಿಣಾಮಪಕ್ಷ ನಿರಾಕರಣವನ್ನುಪಸಂಹಾರಮಾಡುತ್ತಾರೆ—

**ಮೂ ॥ ತಸ್ಮಾದಶೇಷಕರ್ತೈಕೋ ನಿರ್ವಿಕಾರೋ ರಮಾಪತಿಃ ।**
**ಶಬ್ದೈಃ ಪ್ರಕೃತಿರಿತ್ಯಾದ್ಯೈಃ ಸ್ತ್ರೀಲಿಂಗೈರಭಿಧೀಯತೇ ॥ ೮೨ ॥**

ಅ ॥ ತಸ್ಮಾತ್=ಆದಕಾರಣ, ನಿರ್ವಿಕಾರಃ=ವಿಕಾರವಿಲ್ಲದಿರುವ, ರಮಾಪತಿಃ ಏಕಃ= ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನೊಬ್ಬನೇ, ಅಶೇಷಕರ್ತಾ = ಸರ್ವಜಗತ್ಕರ್ತನು. (ಆದ ಕಾರಣ ಬ್ರಹ್ಮನು ಉಪಾದಾನಕಾರಣನೆನ್ನುವುದು ಪ್ರಕೃತ್ಯಧಿಕರಣದ ಅರ್ಥವಲ್ಲ) ಮತ್ತೆ, ಪ್ರಕೃತಿರಿತ್ಯಾದ್ಯೈಃ=ಪ್ರಕೃತಿಯೆನ್ನುವ ಶಬ್ದವೇ ಮೊದಲಾದ, ಸ್ತ್ರೀಲಿಂಗೈಃ=ಸ್ತ್ರೀಲಿಂಗಗಳಾದ, ಶಬ್ದೈಃ=ಶಬ್ದಗಳಿಂದ, ಏಕಃ=ಶ್ರೀ ಹರಿಯೊಬ್ಬನೇ, ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. (ಸ್ತ್ರೀಲಿಂಗಶಬ್ದಸಮನ್ವಯವೇ ಪ್ರಕೃತ್ಯಧಿಕರಣ ಪ್ರತಿಪಾದ್ಯವಾದ ಅರ್ಥವು. ಬ್ರಹ್ಮೋಪಾದಾ ನತ್ವರೂಪವಾದ ಅರ್ಥವು ಪ್ರಕೃತ್ಯಧಿಕರಣಾರ್ಥವಲ್ಲ. ಅಂತೂ ತನ್ನ ವ್ಯಾಖ್ಯಾನವು ದೃಢವಾಗು ವುದಕ್ಕಾಗಿ ಅಪವ್ಯಾಖ್ಯಾನ ನಿರಾಕರಣವು) ॥ ೮೨ ॥

ಸ. ರ. ವಿ— 'ಸೋऽಕಾಮಯತ । ಬಹು ಸ್ಯಾಂ ಪ್ರಜಾಯೇಯ । ಸಚ್ಚ ತ್ಯಚ್ಚಾಭವತ್' ಇತ್ಯಾದಿ ವಾಕ್ಯೋಪಕ್ರಮದಲ್ಲಿ ಶ್ರೀ ಹರಿಗೆ ಶ್ರೂಯಮಾಣವಾದ ಬಹುಭಾವವೂ ವಿಕಾರಿತ್ವವಿಲ್ಲದೇನೇ ನಿಯಾಮಕ ಬಹುರೂಪವಿದ್ದುದರಿಂದಲೇ ಕೂಡುತ್ತದೆ. ಎನ್ನುತ್ತಾರೆ—

**ಮೂ ॥ ಬಹು ಸ್ಯಾಮಿತಿ ತಸ್ಯೈವ ಹ್ಯುಕ್ತಮಾರ್ಗೇಣ ಯುಜ್ಯತೇ ।**
**ತತ್ತದ್ಗತೇನ ರೂಪೇಣ ತದರ್ಥಂ ಹ್ಯಸೃಜಜ್ಜಗತ್ ॥ ೮೩ ॥**

**ಅ ॥** ತಸ್ಯೈವ=ಆ ನಿರ್ವಿಕಾರನಾದ ಶ್ರೀ ಹರಿಗೇನೇ, ಬಹುಸ್ಯಾಮಿತಿ = 'ಬಹುಸ್ಯಾಂ ಪ್ರಜಾಯೇಯ' ಎನ್ನುವುದರಿಂದ ಸಿದ್ಧವಾದ ಬಹುಭವನವು, ಉಕ್ತಮಾರ್ಗೇಣ=ಹಿಂದೆ ಹೇಳಿದ ಮಾರ್ಗದಿಂದ, ಅಂದರೆ— ತತ್ತದ್ಗತೇನ ರೂಪೇಣ=ಆಯಾಯ ವಸ್ತುಗಳಲ್ಲಿರತಕ್ಕ ರೂಪದಿಂದ, ಯುಜ್ಯತೇ=ಯುಕ್ತವಾಗುತ್ತದೆ. ಅಂದರೆ, (ಆಯಾಯ ಅನಂತಾನಂತಪದಾರ್ಥಪ್ರೇರಕಗಳಾದ ಅನಂತ ರೂಪಗಳಿಂದ ಬಹುರೂಪಿಯಾಗುವೆನು, ಎಂಬುದು 'ಸೋऽಕಾಮಯತ' ಎನ್ನುವ ಶ್ರುತಿಯ ಅರ್ಥವು.) (ಹೀಗಾದರೆ, 'ಸ ಇದಂ ಸರ್ವಮಸೃಜತ' ಎನ್ನುವ ಸೃಷ್ಟಿಪ್ರತಿಪಾದಕವಾದ ಉತ್ತರ ವಾಕ್ಯವು ಅಸಂಗತವಾಗಬೇಕಾಗುವುದು. ಒಂದು ಉದ್ದೇಶದಿಂದ ಸಂಕಲ್ಪಮಾಡಿ ಮತ್ತೊಂದನ್ನು ಹೇಳುವುದು ಕೂಡಲಾರದು. ಅಂದರೆ, ನಿಯಾಮಕಬಹುರೂಪವುಳ್ಳವನು ಆಗುವೆನು ಎನ್ನುವ ಸಂಕಲ್ಪವನ್ನು ಹೇಳಿ ಸೃಷ್ಟಿಕ್ರಿಯೆಯನ್ನು ಹೇಳುವುದು ಕೂಡಲಾರದು. ಏಕೆಂದರೆ— ಈಶ್ವರನು ಅಸ್ವತಂತ್ರನಾಗಲೀ, ಅಸತ್ಯಕಾಮನಾಗಲೀ ಅಲ್ಲವಷ್ಟೆ ಎಂದರೆ—) ತದರ್ಥಂ=(ಆಯಾಯ ಪದಾರ್ಥಗಳಿಗೆ ನಿಯಾಮಕಗಳಾದ ಬಹುರೂಪಗಳುಳ್ಳವನಾಗುವೆನೆಂದು ಇಚ್ಛಿಸಿದಮೇಲೆ ನಿಯಾಮಕತ್ವಕ್ಕೆ ನಿಯಮ್ಯಾಪೇಕ್ಷೆಯಿದ್ದುದರಿಂದ) ನಿಯಾಮಕಬಹುರೂಪಗಳನ್ನು ಹೊಂದುವುದಕ್ಕಾಗಿ, ಜಗತ್=ನಿಯಮ್ಯವಾದ ಜಗತ್ತನ್ನು, ಅಸೃಜತ್=ಸೃಷ್ಟಿಮಾಡಿದನು. (ಆ ಮೇಲೆ ನಿಯಾಮಕಬಹುರೂಪವುಳ್ಳವನಾಗಿ ಅದನ್ನೇ ಪ್ರವೇಶಮಾಡಿದನು, ಎಂದು ವಾಕ್ಯಯೋಜನೆಯು ಕೂಡುವುದರಿಂದ ಅಸಂಗತಿಯಿಲ್ಲ.)

**ತಾ ॥ ಸ. ರ. ವಿ—** ಅನೇಕ ರೂಪಗಳಿಂದ ಆಯಾಯ ಪದಾರ್ಥಗಳಲ್ಲಿ ಪ್ರವೇಶಿಸಿ ಕ್ರೀಡಿಸುವುದಕ್ಕಾಗಿ ಶ್ರೀ ಹರಿಯು ಜಗತ್ತನ್ನು ಸೃಷ್ಟಿಸಿದನು. ಆದಕಾರಣ ಶ್ರೀ ಹರಿಯು ಜಗದಾಕಾರದಿಂದ ಪರಿಣಾಮವನ್ನು ಹೊಂದುವುದಿಲ್ಲವೆಂದು ಸಿದ್ಧವಾಯಿತು.

**ನ್ಯಾಯಸುಧಾ**—(1) 'ಬಹುಸ್ಯಾಂ' ಎನ್ನುವುದಕ್ಕೆ ಸ್ವರೂಪಬಾಹುಲ್ಯರೂಪವ್ಯಾಖ್ಯಾನದಿಂದಲೇ 'ತದಾತ್ಮಾನಂ ಸ್ವಯಮಕುರುತ' ಎನ್ನುವ ಶ್ರುತಿಯು ನಿಯಾಮಕಸ್ವರೂಪಗಳಿಗೆ ಬಾಹುಲ್ಯ ಅಭಿಪ್ರಾಯವುಳ್ಳದ್ದು ಎಂದು ವ್ಯಾಖ್ಯಾತವಾಯಿತು. (2) 'ಸಾಕ್ಷಾಚ್ಚೋಭಯಾಮ್ನಾನಾತ್' ಎನ್ನುವ ಸೂತ್ರದಲ್ಲಿ ಕರ್ತೃತ್ವ ಉಪಾದಾನಕಾರಣತ್ವಗಳೆರಡನ್ನು ಹೇಳಿದ್ದೇನೆನ್ನುವುದೂ ಊರ್ಣನಾಭಿದೃಷ್ಟಾಂತದಿಂದಲೇ ನಿರಸ್ತವಾಯಿತು. (3) 'ಯೋನಿಶ್ಚ ಹಿ ಗೀಯತೇ' ಎನ್ನುವ ಸೂತ್ರಾರ್ಥವರ್ಣನವೂ ಊರ್ಣನಾಭಿದೃಷ್ಟಾಂತದಿಂದಲೇ ನಿರಸ್ತವಾಯಿತು. ಆದಕಾರಣ ವಕ್ತವ್ಯಾಂಶವನ್ನು ಎಲ್ಲವನ್ನು ಹೇಳಿದ ಹಾಗೆ ಆಗಿರುವುದರಿಂದ ಉಪಸಂಹಾರವು ಯುಕ್ತವೇ ॥ ೮೩ ॥

ಹೀಗೆ ಬ್ರಹ್ಮಪರಿಣಾಮವಾದವನ್ನು ನಿರಾಕರಿಸಿ ಈಗ ಬ್ರಹ್ಮವಿವರ್ತವಾದವನ್ನು ದೂಷಿಸುವುದಕ್ಕಾಗಿ ಅನುವಾದಮಾಡುತ್ತಾರೆ—

**ಮೂ ॥ ಯಚ್ಚಾವಿಕೃತಮೇವೈಕಂ (ತತ್) ಬ್ರಹ್ಮ ವಿಶ್ವಾತ್ಮನಾ ಮೃಷಾ ।**
**ದೃಶ್ಯತೇ ಮಂದದೃಷ್ಟ್ಯೈವ ಸ ಸರ್ಗ ಇತಿ ಕಥ್ಯತೇ ॥ ೮೪ ॥**

**ಸಾ ಮಂದದೃಷ್ಟಿಸ್ತಸ್ಯೈವ ಬ್ರಹ್ಮಣಃ ಕಿಂ ತತೋಽನ್ಯಗಾ ।**
**ಬ್ರಹ್ಮಣಶ್ಚೇತ್ಕ್ವ ಸಾರ್ವಜ್ಞ್ಯಮನ್ಯಗಾ ಚೇತ್ಸ್ವತೋಽನ್ಯತಾ ॥ ೮೫ ॥**

ಅ ॥ ಏಕಂ=ಅದ್ವಿತೀಯವೂ, ನಿರವಯವವೂ ಆದ, (ತತ್=ಆ,) ಅವಿಕೃತಮೇವ=ವಿಕಾರವನ್ನು ಹೊಂದದೇನೇ ಇರುವ, ಬ್ರಹ್ಮ=ಪರಬ್ರಹ್ಮನು, ವಿಶ್ವಾತ್ಮನಾ=ಜಗದ್ರೂಪದಿಂದ, ವೃಷಾ=ಅನಿರ್ವಚನೀಯವಾಗಿಯೇ, ಮಂದದೃಷ್ಟ್ಯೈವ=ಅಲ್ಪವಾದ ಜ್ಞಾನವು ಯಾವ ಮಾಯೆಯಿಂದ ಆಗುತ್ತದೋ, ಆ ಮಾಯೆಯಿಂದ, ಅಥವಾ ಮಂದವಾದ ದೃಷ್ಟಿಯಿಂದ ಅಂದರೆ, ಭ್ರಾಂತಿಯಿಂದಲೇ, ದೃಶ್ಯತೇ ಇತಿ ಯತ್ = ಕಾಣಿಸಿಕೊಳ್ಳಲ್ಪಡುತ್ತಾನೆನ್ನುವುದು ಯಾವುದೋ, ಸಃ=ಅದು, ಸರ್ಗ ಇತಿ=ಸರ್ಗ ಎಂತೆಂದು, ಕಥ್ಯತೇ=ಹೇಳಿಸಿಕೊಳ್ಳಲ್ಪಡುತ್ತದೆ. ಹೀಗೆ, ಕಥ್ಯತೇ=ಬ್ರಹ್ಮವಿವರ್ತವಾದಿಯಿಂದ ಯಾವುದು ಹೇಳಿಸಿಕೊಳ್ಳಲ್ಪಡುತ್ತದೋ, ಅದಕ್ಕೆ ದೂಷಣವು ಹೇಳಲ್ಪಡುತ್ತದೆ. ಅಥವಾ ವಿವರ್ತವಾದಿಯಿಂದ ಯಾವುದು ಹೇಳಲ್ಪಡುತ್ತದೋ ಅದು ಯುಕ್ತವಲ್ಲ. (ಏಕೆಂದರೆ—) ಸಾ=ಆದಾವ, ಅಂದರೆ, ಅಸತ್ಯಾನೇಕಪದಾರ್ಥಜ್ಞಾನರೂಪವಿವರ್ತದಿಂದಲಾಗಲೀ ಅಸತ್ಯಾನೇಕ ಪದಾರ್ಥ, ಅವುಗಳ ಪ್ರತೀತಿ, ಇವುಗಳ ಉಪಾದಾನ ಕಾರಣತ್ವದಿಂದಲಾಗಲೀ ಹೇಳಲ್ಪಟ್ಟದ್ದು, ಅಂತೂ ಒಬ್ಬ ಬ್ರಹ್ಮನದ್ದು ಜ್ಞಾನಾನಂದಾದಿರೂಪವಾದುದು ಯಾವುದು ತತ್ವವೋ ಅದನ್ನು ಬಿಡದೆ ಯಥಾಸ್ಥಿತರೂಪಕ್ಕಿಂತ ವಿಪರೀತಗಳಾದ ಅಸತ್ಯಗಳಾದ ಯಾವುದು ಅನೇಕ ತೇಜೋಽಬನ್ನಾದಿರೂಪಗಳೋ ಅವುಗಳ ಪ್ರತೀತಿಯು ವಿವರ್ತವು ಆ ರೂಪದಿಂದಲಾಗಲೀ ವಿವರ್ತೋಪಾದಾನತ್ವದಿಂದಲಾಗಲೀ ಹೇಳಲ್ಪಟ್ಟದ್ದು, ಮಂದದೃಷ್ಟಿಃ = ಮಾಯೆಯು ಅಥವಾ ಭ್ರಾಂತಿಯು, ತಸ್ಯೈವ ಬ್ರಹ್ಮಣಃ ಕಿಂ = ಆ ಬ್ರಹ್ಮನಿಗೇನೋ, ಏನು? ತತಃ=ಆ ಬ್ರಹ್ಮನದ್ವೆಶೆಯಿಂದ, ಅನ್ಯಗಾ = ಇತರರಲ್ಲಿರತಕ್ಕನೋ ಏನು? ಬ್ರಹ್ಮಣಃ ಚೇತ್=ಆ ಭ್ರಾಂತಿಯು ಬ್ರಹ್ಮನಿಗೇನೇ ಎಂದಾದರೆ, ಸಾರ್ವಜ್ಞ್ಯಂ = ಸರ್ವಜ್ಞತ್ವವು, ಕ್ವ = ಎಲ್ಲಿ? ಅನ್ಯಗಾಚೇತ್=ಇತರರಾದ ಜೀವರಲ್ಲಿರತಕ್ಕದು ಎಂದಾದರೆ, ಸ್ವತಃ ಅನ್ಯತಾ = ಸ್ವಭಾವತಃ ಜೀವೇಶರಿಗೆ ಭೇದವು.

**ತಾ ॥ ಸ. ರ. ವಿ.—** ಭ್ರಾಂತಿಯಿಂದ ಬ್ರಹ್ಮನಲ್ಲಿ ಜಗದಾರೋಪವೆಂದಾದರೆ, ಈ ಭ್ರಾಂತಿಯು ಯಾರಿಗೆ? ೧ ಬ್ರಹ್ಮನಿಗೋ, ೨ ಜೀವನಿಗೋ? ೧ನೇದ್ದು ಕೂಡಲಾರದು. ಸರ್ವಜ್ಞತ್ವ ಶ್ರುತಿವಿರೋಧವು. ಅಜ್ಞಾನವೇ ನಿಮಿತ್ತವಾಗಿವುಳ್ಳ ಭ್ರಾಂತಿಯು ಸರ್ವಜ್ಞನಿಗೆ ಕೂಡಲಾರದು. ೨ನೇದ್ದೂ ಕೂಡಲಾರದು. ಸ್ವಾಭಾವಿಕವಾಗಿ ಬ್ರಹ್ಮನಿಂದ ಜೀವನು ಭಿನ್ನನಿದ್ದಾನೆಂದು ಒಪ್ಪಿದರೆ ಅದ್ವೈತಕ್ಕೆ ಭಂಗವು ಬರಬೇಕಾಗುವುದು.

**ನ್ಯಾಯಸುಧಾ—** (1) 'ಪ್ರಕೃತಿಶ್ಚ' ಇತ್ಯಾದಿ ಸೂತ್ರಗಳಿಂದ ಹಿಂದೆ ಹೇಳಿದಪ್ರಕಾರ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಉಪಾದಾನತ್ವವೆಂದರೆ ಪರಿಣಾಮಿಯಾಗಿ ಕಾರಣನೆಂದಲ್ಲ. ಮತ್ತೆ ಅವಿದ್ಯಾಪರಿಣಾಮವಾದ ಮಿಥ್ಯಾಭೂತವಾದ ಜಗತ್ತಿನ ಭ್ರಮೆಗೆ ಅಧಿಷ್ಠಾನವಾಗುವಿಕೆಯೇ ವಿವರ್ತೋಪಾದಾನಕಾರಣತ್ವವು. (2) ಆಶ್ರಯವನ್ನು ನಿರೂಪಿಸಲಿಕ್ಕೆ ಬರುವುದಿಲ್ಲ. ಇತ್ಯಾದಿಗಳಿಂದ ಮಂದದೃಷ್ಟಿಯನ್ನು ನಿರಾಕರಿಸಿದಾಗ ಇವೆಲ್ಲವೂ ನಿರಾಕೃತವಾಗುವವು.

(3) ಏಕಜೀವವಾದಿಗಳು ಪರಬ್ರಹ್ಮನೇ ತನ್ನ ಅವಿದ್ಯೆಯಿಂದ ಸ್ವಪ್ನಾದಿಗಳಂತೆಯೇ ಜಗದಾಕಾರನಾಗಿ ತನ್ನ ಭ್ರಾಂತಿವಿಷಯನಾಗುತ್ತಾನೆಂದು ತಿಳಿಯುತ್ತಾರೆ. (4) ಇತರರು ಬಿಂಬಸ್ಥಾನೀಯನಾದ ಬ್ರಹ್ಮನು ಮಾಯಾ (ಪರರಿಗೆ ವ್ಯಾಮೋಹಮಾಡುವಿಕೆ) ಸಹಕೃತನಾಗಿ

ಕಾರಣನು. ಜೀವರು ಪ್ರತಿಒಬ್ಬರೂ ಅವಿದ್ಯಾ(ತನ್ನ ಆಶ್ರಯಕ್ಕೆ ವ್ಯಾಮೋಹವನ್ನು ಮಾಡುವಿಕೆ) ಸಂಬದ್ಧರು, ಎಂದು ಇತರರು ತಿಳಿಯುತ್ತಾರೆ. (5) ಅಜ್ಞಾನವು ಮಾಯಾ ಅವಿದ್ಯಾಭೇದದಿಂದ ಎರಡು ವಿಧವೆಂದು ತಿಳಿಯುವರು. ಮಾಯಾರೂಪವಾದ ಅಜ್ಞಾನದಲ್ಲಿ ಪ್ರತಿಬಿಂಬಿತನಾದ ಬ್ರಹ್ಮನು ಜಗತ್ಕಾರಣನು. ವಿಶುದ್ಧ (ಪ್ರತಿಬಿಂಬಿತನಾಗದಿರುವ) ಬ್ರಹ್ಮನು ಮುಕ್ತಿಗೆ ಆಶ್ರಯನು. ಜೀವರು ಅವಿದ್ಯಾ ಸಂಬದ್ಧರು ಹೀಗೆ ಕೆಲವರು ತಿಳಿಯುತ್ತಾರೆ. (6) ದೃಷ್ಟಿ ಸೃಷ್ಟಿ ಮತದವರು 'ಜೀವರೇ ತಮ್ಮ ಅಜ್ಞಾನದಿಂದ ಪ್ರತ್ಯೇಕವಾಗಿ ಪ್ರಪಂಚಾಕಾರದಿಂದ ಬ್ರಹ್ಮವಿಷಯಕ ಭ್ರಾಂತಿಯುಳ್ಳವರಾಗುತ್ತಾರೆ. ಸಾದೃಶ್ಯದಿಂದ ನೀನು ನೋಡಿದ ಘಟವೂ ನಾನು ನೋಡಿದ ಘಟವೂ ಒಂದೇ ಎಂದು ಪ್ರಪಂಚಕ್ಕೆ ಏಕತ್ವಪ್ರತೀತಿಯು. ಸರ್ವ ಜೀವರಲ್ಲಿ ಅನುಗತವಾದುದು ಯಾವುದು ಬ್ರಹ್ಮಚೈತನ್ಯವೋ ಆ ಸ್ವರೂಪವನ್ನು ಅಪೇಕ್ಷಿಸಿ ಬ್ರಹ್ಮನು ಜಗತ್ಕಾರಣನು ಎನ್ನುತ್ತಾರೆ. ಇವುಗಳಲ್ಲಿ ಅವಾಂತರಭೇದಗಳನ್ನು ಅಂದರೆ 'ಬ್ರಹ್ಮಣಃ' ಎನ್ನುವಲ್ಲಿ ವಿವರ್ತಾಧಿಷ್ಠಾನಭೂತನಾದ ಚಿದ್ರೂಪನಾದ ಶುದ್ಧ ಬ್ರಹ್ಮನಿಗೋ, ಸಾರ್ವಜ್ಞಾದಿಗಳಿಂದ ಕೂಡಿದ ಬಿಂಬಭೂತನಾದ ಬ್ರಹ್ಮನಿಗೋ, ಹಾಗೆಯೇ 'ಮಂದದೃಷ್ಟಿಃ' ಎನ್ನುವಲ್ಲಿ ಮಾಯೆಯೋ, ಅವಿದ್ಯೆಯೋ? ಇದುಮೊದಲಾದ ಅವಾಂತರ ಭೇದಗಳನ್ನು ವಿವಕ್ಷಾ ಮಾಡಿಕೊಳ್ಳದೆ ಎರಡು ಪ್ರಕಾರವೇ ವಿಕಲ್ಪ ಮಾಡಿದ್ದಾರೆ. (7) 'ಜೀವಗಾ' ಎಂದು ಹೇಳದೆ 'ತತೋಽನ್ಯಗಾ' ಎಂದು ಹೇಳಿರುವುದರಿಂದ ಆ ಜೀವನು (೧) ಬ್ರಹ್ಮನಿಂದ ಭಿನ್ನನೋ (೨) ಅಭಿನ್ನನೋ ಎಂದು ವಿಕಲ್ಪವು ಸೂಚಿತವಾಯಿತು. (8) ಬ್ರಹ್ಮನಿಗೇನೇ ವಿಶ್ವಭ್ರಾಂತಿಯಾದರೆ ಆಗ ಭ್ರಾಂತಿಗೆ ವಿಶೇಷಾಜ್ಞಾನವೇ ಕಾರಣವಾಗಿರುವುದರಿಂದ ಅಜ್ಞಾನವನ್ನು ಬ್ರಹ್ಮನಿಗೆ ಅಂಗೀಕರಿಸಬೇಕಾಯಿತು. ತಥಾಚ ಸಾರ್ವಜ್ಞವು ಇಲ್ಲದೆಹೋಗುವುದು. ಬ್ರಹ್ಮನಲ್ಲಿ ಸಾರ್ವಜ್ಞವು ಇಲ್ಲವೆಂದಾದರೆ ಆ ಸಾರ್ವಜ್ಞವು ಎಲ್ಲಿರುವುದು? ಜೀವನಲ್ಲಿದೆ ಎಂದು ಹೇಳಕೂಡದು ಅನುಭವ ವಿರೋಧವು. ಜಡದಲ್ಲಿ ಎಂದೂ ಹೇಳಕೂಡದು. ಜ್ಞಾನಮಾತ್ರವೇ ಕೂಡಲಾರದು. ತಥಾಚ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳಿಗೆ ವೈಯರ್ಥ್ಯವು ಬರುವುದು. (9) ಬ್ರಹ್ಮವ್ಯತಿರಿಕ್ತವಾದ ಜೀವಾಶ್ರಯವಾದ ವಿಶ್ವಭ್ರಾಂತಿಯನ್ನು ಅಂಗೀಕರಿಸಿದರೆ ಆಗ ಭ್ರಾಂತ್ಯಾಶ್ರಯಕ್ಕೆ ಭ್ರಾಂತಿಕಲ್ಪಿತತ್ವವು ಕೂಡದಿರುವುದರಿಂದ ಜೀವಬ್ರಹ್ಮರಿಗೆ ಭೇದವು ಸ್ವಾಭಾವಿಕವೆಂದೇ ಪ್ರಾಪ್ತವಾಯಿತು. ಅಂತೂ ಅಪಸಿದ್ಧಾಂತವು ॥ ೮೪ ॥ ೮೫ ॥

ಹಾಗಾದರೆ ಜೀವಬ್ರಹ್ಮಭೇದವು ವಾಸ್ತವವಾಗಲಿ. ಅನಾತ್ಮಪ್ರಪಂಚವು ಬ್ರಹ್ಮನಲ್ಲಿ ಭ್ರಾಂತಿಕಲ್ಪಿತವಾಗಿರಲಿ, ಎಂದರೆ—

**ಮೂ ॥ ನಾದೇಹಯೋಗಿನೋ ದೃಷ್ಟಿರಿತಿ ತತ್ಕಾರಣಂ ಸ್ವತಃ ।**
**ದೇಹಿನಃ ಕಾರಣಯುತಾಃ ದೇಹಾಶ್ಚ ಯದಿ ನ ಭ್ರಮಾತ್ ॥ ೮೬ ॥**
**ಕಿಂ ಭ್ರಾಂತಿಕಲ್ಪಿತಂ ತತ್ರ ಭೇದೋಽಪಿ ಭ್ರಮಜೋ ಯದಿ ।**
**ಭ್ರಾಂತೇರಜ್ಞಾನಮೂಲತ್ವಾತ್ತಸ್ಯ ಭೇದವ್ಯಪೇಕ್ಷಯಾ ।**
**ನಾಜ್ಞಾನಕಲ್ಪಕಂ ಕಿಂಚಿದನ್ಯೋನ್ಯಾಶ್ರಯತಾ ಯತಃ ॥ ೮೭ ॥**

ಅ ॥ (ಯದ್ಯಪಿ ಹೀಗೆ ಮಾಯಾವಾದಿಗಳು ತಿಳಿಯುವುದಿಲ್ಲ. ಆದಾಗ್ಯೂ ಸೂತ್ರಾರ್ಥವನ್ನು ನಿರಾಕರಿಸುವುದಕ್ಕಾಗಿ ಪ್ರವೃತ್ತಿ ಮಾಡಿದವರಿಗೆ ಅದರಲ್ಲಿಯೇ ಅನುಪಪತ್ತಿಯನ್ನು ವ್ಯುತ್ಪಾದಿಸುವುದು ಯೋಗ್ಯವು.) ಅದೇಹಯೋಗಿನಃ=(ಬ್ರಹ್ಮವ್ಯತಿರಿಕ್ತವಾದ ಜೀವರಿಗೆ ಮಾತ್ರ

ಅಕಲ್ಪಿತತ್ವವಲ್ಲ. ಮತ್ತೆ) ದೇಹಸಂಬಂಧವಿಲ್ಲದವನಿಗೆ, (ಇಂದ್ರಿಯಗಳೇ ಇಲ್ಲದಿರುವುದರಿಂದ) ದೃಷ್ಟಿಃ=ಪದಾರ್ಥದರ್ಶನವು, ನೇತಿ=ಆಗುವದಿಲ್ಲವೆನ್ನುವ ಕಾರಣದಿಂದ, ತತ್ಕಾರಣಂ=ಆರೋಪ ಕಾರಣವಾದ ಇಂದ್ರಿಯವೂ ಇಂದ್ರಿಯಾಶ್ರಯವಾದ ಶರೀರವೂ ಕೂಡ, ಸ್ವತಃ = ಕಲ್ಪನೆ ಇಲ್ಲದೇನೇ ಉಂಟೆಂದಂಗೀಕರಿಸಬೇಕು. ಈ ಪ್ರಪಂಚವು ಸುಖಾದಿಯಂತೆಯಾಗಲೀ ರಜತಾದಿ ಗಳಂತೆಯಾಗಲೀ ಸಾಕ್ಷಿಮಾತ್ರ ಸಿದ್ಧವೆಂದು ಪರರು ತಿಳಿಯುವುದಿಲ್ಲವಷ್ಟೇ. ದೇಹೇಂದ್ರಿಯಾದಿ ಗಳೂ ಹುಟ್ಟುವುದರಿಂದ ದೋಷಕಾರಣವಾದ ಕಾಮಾದಿಯೂ ಸ್ವತಃ ಅಂದರೆ ಕಲ್ಪನಾ ಇಲ್ಲದೇನೇ ಇದೆಯೆಂದಂಗೀಕರಿಸಬೇಕು.)

(ಬ್ರಹ್ಮವ್ಯತಿರಿಕ್ತರಾದ ಜೀವರಿಗೂ ಸಕಾರಣಗಳಾದ ಜೀವ-ದೇಹ-ಇಂದ್ರಿಯಗಳಿಗೂ ಅಭ್ರಾಂತಿಕಲ್ಪಿತತ್ವವಿರಲಿ. ಏಕೆಂದರೆ, ಜೀವರು ದ್ರಷ್ಟೃಗಳಾಗಿರುವುದರಿಂದಲೂ ಇಂದ್ರಿಯಗಳು ದರ್ಶನಕ್ಕೆ ಮುಖ್ಯಕಾರಣಗಳಾಗಿರುವುದರಿಂದಲೂ, ಶರೀರವು ಇಂದ್ರಿಯಕ್ಕೆ ಆಶ್ರಯವಾಗಿರು ವುದರಿಂದಲೂ, ಕಾರಣಗಳು ದೇಹೇಂದ್ರಿಯಗಳಿಗೆ ಕಾರಣವಾಗಿರುವುದರಿಂದಲೂ ಭ್ರಾಂತಿಯಿಂದ ಮೊದಲೇ ಇದ್ದುದರಿಂದ ತದ್ವ್ಯತಿರಿಕ್ತವಾದ ಪ್ರಪಂಚವು ಭ್ರಾಂತಿಕಲ್ಪಿತವಾಗಲಿ ಎಂದರೆ—) ಕಾರಣಯುತಾಃ=ಜ್ಞಾನಕಾರಣಗಳಾದ ಇಂದ್ರಿಯಗಳಿಂದ ಕೂಡಿದ, ದೇಹಿನಃ=ಜೀವರು, ಕಾರಣಯುತಾಃ=ದೇಹೇಂದ್ರಿಯಕಾರಣಗಳಿಂದ ಕೂಡಿದ, ದೇಹಾಶ್ಚ ಶರೀರಗಳೂಕೂಡ, ಯದಿ=ಯಾವ ಪಕ್ಷದಲ್ಲಿ, ಭ್ರಮಾತ್ ನ=ಭ್ರಮಸಿದ್ಧಗಳು ಅಲ್ಲವೋ? ತತ್ರ=ಹಾಗಾದರೆ, ಪ್ರಪಂಚದಲ್ಲಿ ಆಗಲೀ, ಬ್ರಹ್ಮನಲ್ಲಿ ಆಗಲೀ, ಭ್ರಾಂತಿಕಲ್ಪಿತಂ=ಭ್ರಾಂತಿಸಿದ್ಧವಾದುದು, ಕಿಂ= ಯಾವುದು? (ಅಂದರೆ ಅನಂತ ಜೀವರು ಸಕಾರಣಕ ದೇಹೇಂದ್ರಿಯಗಳೂ ಇವುಗಳಿಂದ ಅತಿರಿಕ್ತ ವಾದ ಪ್ರಪಂಚವೇ ಇಲ್ಲವು. ವಿಷಯಗಳೂ ದೇಹೇಂದ್ರಿಯಗಳ ನಿರ್ವಾಹೋಪಯುಕ್ತಗಳು.) ತಥಾಚ ಕೇವಲ ಅಪಸಿದ್ಧಾಂತಮಾತ್ರವಲ್ಲ. ಮತ್ತು 'ಪ್ರಕೃತಿಶ್ಚ' ಇತ್ಯಾದಿ ಸೂತ್ರಗಳಿಗೆ ಸರ್ವವೂ ಸತ್ಯವಾಗಿರುವುದರಿಂದ ಮಿಥ್ಯೆಯೆಂದು ಪ್ರತಿಪಾದಿಸಲಿಕ್ಕೆ ಯೋಗ್ಯವಾದ ವಸ್ತುವೇ ಇಲ್ಲದಿರುವುದರಿಂದ ವಿಷಯಗಳೂ ಇಲ್ಲವೆಂದಾಗಬೇಕಾಗುವುವು. (ಹಾಗಾದರೆ 'ಅನ್ಯಗಾ ಚೇತ್ಸ್ವತೋಽನ್ಯತಾ' ಎಂದು ಹೇಳಿದ್ದು ಅಯುಕ್ತವು. ಜೀವಬ್ರಹ್ಮಭೇದವೂ ಭ್ರಾಂತಿಸಿದ್ಧವು. ಭ್ರಾಂತಿಸಿದ್ಧವಾದ ಬ್ರಹ್ಮಭೇದವುಳ್ಳ ಜೀವನಿಗೆ ಬಾಹ್ಯಾಧ್ಯಾತ್ಮಿಕ ಅರ್ಥವಿಷಯಕ ಭ್ರಮವೆಂದು ಹೇಳುತ್ತೇವೆಂದರೆ—) ಭೇದೋಽಪಿ=ಪ್ರಪಂಚಮಾತ್ರವಲ್ಲ ಮತ್ತೆ ಜೀವಬ್ರಹ್ಮರ ಭೇದವೂ, ಯದಿ ಭ್ರಮಜಃ=ಭ್ರಾಂತಿಸಿದ್ಧವೆಂದಂಗೀಕರಿಸಲ್ಪಡುವುದಾದರೆ, ತದಾ ಅನ್ಯೋನ್ಯಾಶ್ರಯತಾ=ಚಕ್ರಕಾ ಶ್ರಯವು. (ಹೇಗೆಂದರೆ) ಭ್ರಾಂತೇಃ = ಜೀವಬ್ರಹ್ಮರ ಭೇದಹೇತುಭೂತವಾದ ಭ್ರಾಂತಿಗೆ, ಅಜ್ಞಾನಮೂಲತ್ವಾತ್ = ಭಾವರೂಪ ಅಜ್ಞಾನವೇ ಕಾರಣವಾಗಿರುವುದರಿಂದ, ತಸ್ಯ = ಆ ಅಜ್ಞಾನಕ್ಕೆ, ಭೇದವ್ಯಪೇಕ್ಷಯಾ=ಭೇದಸಾಪೇಕ್ಷತ್ವವಿದ್ದುದರಿಂದ, ಯತಃ=ಯಾವ ಕಾರಣ ದ್ದೆಶೆಯಿಂದ, ಬ್ರಹ್ಮವ್ಯತಿರಿಕ್ತನಾದ ಜೀವನು ಹೊರತು, ಅಜ್ಞಾನಕಲ್ಪಕಂ ಕಿಂಚಿತ್ ನ= ಅಜ್ಞಾನಕಲ್ಪಕವಾದುದು ಯಾವುದೊಂದೂ ಇರುವುದಿಲ್ಲ.

**ತಾ || ನ್ಯಾಯಸುಧಾ—** (1) ಯಾವ ಭ್ರಾಂತಿಯಿಂದ ಜೀವಬ್ರಹ್ಮರ ಭೇದವು ಸಿದ್ಧ ವಾಗಿಯದೋ ಆ ಭ್ರಾಂತಿಯು ಅಜ್ಞಾನಸಾಪೇಕ್ಷಿತವಾಗಿಯದೆ. ಭ್ರಾಂತಿಯ ಸ್ವರೂಪವೂ ವಿಷಯವೂ ಅಜ್ಞಾನಕಾರ್ಯವು. ಯದ್ಯಪಿ ಭೇದವಿಷಯಕ ಭ್ರಾಂತಿಯು ಸಾಕ್ಷಿಚೈತನ್ಯವು. ಆದಾಗ್ಯೂ ಅಸಂಗವಾದ ಅದಕ್ಕೆ ಆರೋಪಿತ ಅರ್ಥಸಂಸೃಷ್ಟಸ್ವರೂಪತ್ವವು ಅಜ್ಞಾನವಿಲ್ಲದೆ ಕೂಡಲಾರದು. ಆ ಅಜ್ಞಾನಕ್ಕೆ ಭೇದದ ಅಪೇಕ್ಷೆಯಿದೆ. ಆ ಅಜ್ಞಾನವು ಅನಾದಿಯಾದಾಗ್ಯೂ

ಭ್ರಾಂತಿಕಲ್ಪಿತವು. ಅನಾದಿಯಾದ ಅಜ್ಞಾನವು ಭ್ರಾಂತಿಕಲ್ಪಿತವಾಗದಿದ್ದರೆ ಸತ್ಯವಾಗಬೇಕಾಗುವುದು. ಭ್ರಾಂತಿಯು ಜೀವಾಶ್ರಿತವು. ಭೇದಕಲ್ಪನೆಯಿಲ್ಲದೆ ಜೀವನೇ ಇರಲಾರನು. ಅವಿದ್ಯಾರೋಪವು ಬ್ರಹ್ಮನಲ್ಲಿಯೇ ಎನ್ನುವುದು ಯುಕ್ತವಲ್ಲ. ಅವಿದ್ಯಾರೋಪವ್ಯತಿರಿಕ್ತವಾದ ಅಜ್ಞಾನಕಾರ್ಯವಾದ ಜೀವೇಶ್ವರಭೇದ ಮೊದಲಾದ ಎಲ್ಲಾ ಭ್ರಮಗಳೂ ಕೂಡ ಬ್ರಹ್ಮನನ್ನೇ ಆಶ್ರಯಿಸಿಕೊಂಡಿವೆ ಎನ್ನುವುದು ಕೂಡುತ್ತಿರಲು ಅವಿದ್ಯಾರೋಪವು ಬ್ರಹ್ಮನಲ್ಲಿ ಅವಿದ್ಯೇತರಾರೋಪವು ಜೀವನಲ್ಲಿ ಎನ್ನುವ ಅರ್ಧಜರತೀಯವು ಕೂಡಲ ರದು. ಆದಕಾರಣ ಭ್ರಮ-ಅಜ್ಞಾನ-ಜೀವಭೇದ ಇವುಗಳಿಗೆ ಪರಸ್ಪರಾಪೇಕ್ಷೆಯಿದ್ದುದರಿಂದ ಚಕ್ರಕಾಶ್ರಯವು. ಅಂದರೆ, ಜೀವೇಶ್ವರಭೇದವು ಸಿದ್ಧವಾದರೆ ಭ್ರಾಂತಿಯಿಂದ ಭಿನ್ನನಾದ ಜೀವನಲ್ಲಿ ಅಜ್ಞಾನವು ಸಿದ್ಧವಾಗುತ್ತದೆ. ಅಜ್ಞಾನವು ಸಿದ್ಧವಾದರೆ ಅಜ್ಞಾನಕಾರ್ಯವಾದ . ಭ್ರಾಂತಿಯು ಸಿದ್ಧವಾಗುತ್ತದೆ. ಅಜ್ಞಾನಕಾರ್ಯ ಭ್ರಾಂತಿಯು ಸಿದ್ಧವಾದರೆ ಭ್ರಾಂತಿಕಲ್ಪಿತಜೀವೇಶ್ವರ ಭೇದವು ಸಿದ್ಧವಾಗುತ್ತದೆ. ಆ ಭೇದವು ಸಿದ್ಧವಾದರೆ ಪುನಃ ಅಜ್ಞಾನವು ಸಿದ್ಧವಾಗುತ್ತದೆ, ಇತ್ಯಾದಿಪ್ರಕಾರ ಚಕ್ರಕಾಶ್ರಯವು. (2) ಅಥವಾ ಭೇದವು ಭ್ರಾಂತಿಕಲ್ಪಿತವಾದರೆ ಭ್ರಾಂತಿಗೆ ಭೇದದ ಅಪೇಕ್ಷೆಯಿದ್ದುದರಿಂದ ಅನ್ಯೋನ್ಯಾಶ್ರಯವು. ಭ್ರಮವು ಸಿದ್ಧವಾದರೆ ಭ್ರಮಕಲ್ಪಿತವಾದ ಭೇದವು ಸಿದ್ಧವಾಗುತ್ತದೆ. ಭೇದವು ಸಿದ್ಧವಾದರೆ ಭಿನ್ನನಾದ ಜೀವನಿಗೆ ಭ್ರಾಂತಿಯು ಸಿದ್ಧವಾಗುತ್ತದೆ. (3) ಇದರಿಂದ ಜೀವಾಜ್ಞಾನಪಕ್ಷವೂ ನಿರಾಕರಿಸಲ್ಪಟ್ಟಿತು. ಅಜ್ಞಾನವು ಸಿದ್ಧವಾದರೆ ಅಜ್ಞಾನಾಧೀನನಾದ ಜೀವನು ಸಿದ್ಧನಾಗುತ್ತಾನೆ. ಜೀವನು ಸಿದ್ಧನಾದರೆ ಜೀವಾಶ್ರಿತಾಜ್ಞಾನವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯಾದಿ ದೋಷಗಳು ಬಂದೇ ಬರುತ್ತವೆ ॥ ೮೬ ॥ ೮೭ ॥

(1) 'ನಾದೇಹಯೋಗಿನಃ' ಇದು ಮೊದಲಾದ ಗ್ರಂಥಗಳಿಂದ ಯಾವುದು ಹೇಳಲ್ಪಟ್ಟದೋ, ಅದು ಅಯುಕ್ತವು. ಏಕೆಂದರೆ— ಶರೀರಾದಿಗಳೂ ಕೂಡ ಭ್ರಾಂತಿಕಲ್ಪಿತಗಳು. ಆ ದೇಹಾದಿಗಳ ಭ್ರಮಕ್ಕೂ ಮೊದಲು ಇರುವ ದೇಹವೇ ಕಾರಣವಾಗಿರುವುದರಿಂದ ಕಾರಣವಲ್ಲವೆಂದೂ ಹೇಳಕೂಡದು. ಈ ಆರೋಪ ಪರಂಪರೆಯು ಅನಾದಿಯಾದದ್ದರಿಂದ ಯುಕ್ತ ಅನವಸ್ಥೆಯೂ ಇಲ್ಲ; ಎಂದರೆ ಹೀಗೆ ಹೇಳಕೂಡದು. ಆದಿಸರ್ಗದಲ್ಲಿ ದೇಹಾದಿಗಳ ದರ್ಶನವೇ ಕೂಡದೆ ಹೋಗಬೇಕಾಗುವುದು. ಈ ದೇಹಾದಿಗಳು ಸಾಕ್ಷಿಮಾತ್ರಸಿದ್ಧಗಳಲ್ಲವೆಂದು ಹಿಂದೆ ಹೇಳಿಯದೆ. (2) ಮತ್ತು ಮೊದಲುಮೊದಲಿನ ದೇಹಾದಿಗಳೂಕೂಡ ಭ್ರಾಂತಿಸಿದ್ಧಗಳೆಂದು ಪ್ರಮಿತಗಳಾಗಿದ್ದರೆ ಹಿಂದೆ ಹೇಳಿದ ರೀತಿಯಿಂದ ಈ ಅನವಸ್ಥಾ ಪರಿಹಾರವು ಕೂಡಬಹುದಿತ್ತು. ಈ ಭ್ರಾಂತಿ ಪರಂಪರೆಯಲ್ಲಿಯೇ ಪ್ರಮಾಣವಿಲ್ಲ. (3) ಹಾಗಾದರೆ 'ನೇಹ ನಾನಾಸ್ತಿ ಕಿಂಚನ' ಇದು ಮೊದಲಾದ ಶ್ರುತಿಗಳು ಪ್ರಮಾಣಗಳಾಗಿದ್ದುದರಿಂದ ಹೇಗೆ ಪ್ರಮಾಣವಿಲ್ಲದಿರುವುದು? ಎಂದರೆ—

**ಮೂ ॥ ಭ್ರಮತ್ವೇ ತ್ವಿಯಮುಕ್ತಿಶ್ಚ ತದಂತಃಪತನಾನ್ನ ಹಿ ।**
**ವ್ಯಾವಹಾರಿಕತಾ ಚಾಸ್ಯ ಸ್ಯಾದಬಾಧ್ಯತ್ವ ಏವ ಹಿ ॥ ೮೮ ॥**

ಅ॥ ಭ್ರಮತ್ವೇ=ಆಕಾಶಮೊದಲಾದ ಪ್ರಪಂಚಕ್ಕೆ ಭ್ರಾಂತಿಸಿದ್ಧತ್ವವಿದ್ದರೆ, ಇಯಮುಕ್ತಿಶ್ಚ= 'ನೇಹ ನಾನಾ' ಎನ್ನುವ ವಾಕ್ಯವೂ, ತದಂತಃಪತನಾತ್=ಆ ಆಕಾಶಾದಿಪ್ರಪಂಚಗಳಲ್ಲಿಯೇ ಸೇರಿರುವುದರಿಂದ, ನ ಹಿ=ಸತ್ಯವಲ್ಲ. ಮಿಥ್ಯೆಯೇಆಗಬೇಕು. (ಹಾಗಾದರೆ ಈ ಎಲ್ಲಾ ಪ್ರಪಂಚವೂ ಭ್ರಾಂತಿಸಿದ್ಧವಾದಾಗ್ಯೂ ವ್ಯಾವಹಾರಿಕವು ಆಗಿಯೇ ಆಗುತ್ತದೆ. ಆದುದರಿಂದ ಪ್ರಪಂಚದಲ್ಲಿಯೇ ಸೇರಿರುವ ಶ್ರುತಿಯೂ ವ್ಯಾವಹಾರಿಕವಾಗಿರುವುದರಿಂದ ಅರ್ಥಜ್ಞಾನಕ್ಕೆ ಕಾರಣವಾಗ

ಬಹುದೆಂದರೆ) (ಪ್ರಪಂಚವು ವ್ಯಾವಹಾರಿಕವೆಂದು ಅಂಗೀಕರಿಸಲಿಕ್ಕೆ ಶಕ್ಯವಾಗಿದ್ದರೆ ಹೇಗೂ ಆಗಬಹುದಿತ್ತು ಹೀಗೆ ಇಲ್ಲ. ಏಕೆಂದರೆ) ಅಸ್ಯ=ಈ ಪ್ರಪಂಚಕ್ಕೆ, ವ್ಯಾವಹಾರಿಕತಾ ಚ= ವ್ಯಾವಹಾರಿಕತ್ವವಾದರೂ, ಅಬಾಧ್ಯತ್ವ ಏವ=ಬಾಧ್ಯತ್ವವಿಲ್ಲವಾದರೇನೇ, ಸ್ಯಾತ್=ಬರುವುದು, ಹಿ=ಪ್ರಸಿದ್ಧವು.

**ತಾ ॥ ನ್ಯಾಯಸುಧಾ**— (1) ಯುಕ್ತ್ಯವಿರುದ್ಧವಾದ ವೇದಾರ್ಥವೇ ಗ್ರಾಹ್ಯವಾಗುವುದು. ಇಲ್ಲವಾದರೆ '**ಅಂಧೋ ಮಣಿಮವಿಂದತ್' ತಮನಂಗುಲಿರಾವಯತ್. ಅಗ್ರೀವಃ ಪ್ರತ್ಯಮುಂಚತ । ತಮಜಿಹ್ವೋಽಸಶ್ಚತ ।** ಕುರುಡನು ಮಣಿಯನ್ನು ತಿಳಿದನು, ಬೆರಳು ಇಲ್ಲದವನು ಆ ಮಣಿಯನ್ನು ಪೋಣಿಸಿದನು. ಕೊರಳು ಇಲ್ಲದವನು ಅದನ್ನು ಧರಿಸಿದನು. ಅದನ್ನು ನಾಲಿಗೆ ಇಲ್ಲದವನು ರುಚಿನೋಡಿದನು. ಇತ್ಯಾದಿ ವೇದಗಳ ಆಪಾತಾರ್ಥವನ್ನೂ ಒಪ್ಪಬೇಕಾಗುವುದು. ವಿಚಾರ ಶಾಸ್ತ್ರಕ್ಕೆ ಆರಂಭವೇ ಇಲ್ಲದೆಹೋಗಬೇಕಾಗುವುದು. (2) 'ನೇಹನಾನಾ' ಇತ್ಯಾದಿ ವಾಕ್ಯವು ಯುಕ್ತಿವಿರುದ್ಧವೂ ಆಗಿದೆ. ಹೇಗೆಂದರೆ— ಆಕಾಶ ಮೊದಲಾದ ಪ್ರಪಂಚಗಳೆಲ್ಲವೂ ಭ್ರಮಸಿದ್ಧಗಳೆಂದಾದರೆ ಆಗ ಈ ಶ್ರುತಿಯೂ ಪ್ರಪಂಚದಲ್ಲಿಯೇ ಸೇರಿರುವುದರಿಂದ ಭ್ರಾಂತಿಸಿದ್ಧವಾಗಬೇಕಾಗುವುದು. ಭ್ರಾಂತ್ಯಾರೋಪಿತವಾದುದು ಅಸತ್ಯವೇ, ಆದಕಾರಣ ಶ್ರುತಿಯೂ ಅಸತ್ಯ (ಮಿಥ್ಯೆ) ವಾದುದರಿಂದ ಅರ್ಥಜ್ಞಾನಕ್ಕೆ ಕಾರಣವಾಗದೆ ಹೋಗಬೇಕಾಗುವುದು. (3) ಭ್ರಮ ಶಬ್ದವು ಭ್ರಾಂತಿವಿಷಯವಾದ ಅರ್ಥದಲ್ಲಿಯೂ, ಭ್ರಾಂತ್ಯಾತ್ಮಕ ಜ್ಞಾನದಲ್ಲಿಯೂ ಪರಮತ ರೀತಿಯಾಗಿ ಪ್ರಸಿದ್ಧವಾಗಿರುವುದರಿಂದ ಭ್ರಮಸಿದ್ಧತ್ವೇ ಎಂದು ಹೇಳದೆ ಭ್ರಮತ್ವೇ ಎಂದು ಹೇಳಿರುವರು. (4) ಪ್ರಪಂಚವು ವ್ಯಾವಹಾರಿಕವೆಂದಂಗೀಕರಿಸಲ್ಪಡುವುದಾದರೆ ಅಬಾಧ್ಯವೆಂದಂಗೀಕರಿಸಬೇಕಾಗುವುದು. ಹಾಗೆ ನೀನು ಅಂಗೀಕರಿಸುವುದಿಲ್ಲ ಆದಕಾರಣ ವ್ಯಾವಹಾರಿಕವೇಂದೂ ಅಂಗೀಕರಿಸಲಿಕ್ಕೆ ಯೋಗ್ಯವಲ್ಲ. ಸತ್ಯತ್ವವನ್ನು ಅಂಗೀಕರಿಸಬೇಕಾಗುವುದೆಂದಾಪಾದನಮಾಡಿದರೆ ಇಷ್ಟವನ್ನೇ ಆಪಾದಿಸಿದಂತೆ ಆಗುವುದು. ಪರರೂ ಕಥಂಚಿತ್ಸತ್ಯತ್ವವನ್ನು (ಸತ್ ಎಂದು ವ್ಯವಹಾರಮಾತ್ರವಿರುವಿಕೆ. ಅಥವಾ ಮಾಯಿಕ ಸತ್ಯತ್ವವನ್ನು) ಅಂಗೀಕರಿಸಿರುವರು. ಆದುದರಿಂದ ಅಬಾಧ್ಯತ್ವಏವ ಎಂದು ಹೇಳಿದ್ದು ॥ ೮೮ ॥

ಹಾಗಾದರೆ ಶುಕ್ತಿರಜತಾದಿಗಳು ಬಾಧ್ಯಗಳಾದಾಗ್ಯೂ ಅವುಗಳು ಅಭಿಜ್ಞಾ ಅಭಿವದನರೂಪ ವ್ಯವಹಾರವಿಷಯುಗಳಾಗಿರುವುದರಿಂದ 'ಯತ್ರ ಯತ್ರ ವ್ಯವಹಾರವಿಷಯತ್ವರೂಪ ವ್ಯಾವಹಾರಿಕತ್ವಂ ತತ್ರ ತತ್ರ ಅಬಾಧ್ಯತ್ವಂ' ಎನ್ನುವ ತರ್ಕಕ್ಕೆ ವ್ಯಾಪ್ತಿಯಿಲ್ಲವೆಂದರೆ—

**ಮೂ " ಬಾಧ್ಯಂ ನಾರ್ಥಕ್ರಿಯಾಕಾರಿ ನ ಚ ಸ್ವಪ್ನೋಽಪಿ ನೋ ಮೃಷಾ ।**
**ವಾಸನಾಜನಿತತ್ವೇನ ತಸ್ಯಾಪ್ಯಂಗೀಕೃತತ್ವತಃ ॥ ೮೯ ॥**

**ಅ ॥** ಬಾಧ್ಯಂ=ಬಾಧ್ಯ (ನಿಷೇಧ್ಯ) ಗಳಾದ ಶುಕ್ತಿರಜತಾದಿಗಳು (ಅಭಿಜ್ಞಾದಿ ವ್ಯವಹಾರಗಳಿಗೆ ವಿಷಯುಗಳೆನ್ನುವುದು ಸತ್ಯವೇ. ಆದಾಗ್ಯೂ) ಅರ್ಥಕ್ರಿಯಾಕಾರಿ ನ=ಅರ್ಥಕ್ರಿಯಾಕಾರಿ ಅಲ್ಲ. ಅಂದರೆ ಅರ್ಥಕ್ರಿಯೆಗೆ ಉಪಯುಕ್ತವಲ್ಲ. ಏಕೆಂದರೆ ಆ ಶುಕ್ತಿರಜತಾದಿಗಳಿಂದ ರಜತೋಚಿತಗಳಾದ ವಲಯ ಮುಕುಟ ಇತ್ಯಾದ್ಯರ್ಥಕ್ರಿಯೆಗಳು ದೃಷ್ಟಗಳಾಗಲಿಲ್ಲ. ಅರ್ಥಕ್ರಿಯಾಕಾರಿತ್ವರೂಪ ವ್ಯಾವಹಾರಿಕತ್ವವು ಇಲ್ಲಿ ಅಭಿಪ್ರೇತವು. ಅಭಿಜ್ಞಾದಿ ವಿಷಯತ್ವವಲ್ಲ. ಆದುದರಿಂದ ತರ್ಕಕ್ಕೆ ವ್ಯಾಪ್ತಿವೈಕಲ್ಯವಿಲ್ಲ.) ಹಾಗಾದರೆ ಅಸತ್ಯಗಳಾದ ಸ್ವಪ್ನಕಾಲದಲ್ಲಿ ಆಗತಕ್ಕ ಸ್ತ್ರೀಸಂಭೋಗಾದಿಗಳಿಂದ ಚರಮ ಧಾತು ವಿಸರ್ಗಮೊದಲಾದ ಅರ್ಥಕ್ರಿಯೆಗಳು

ದೃಷ್ಟಗಳಾಗಿರುವುದರಿಂದ ತರ್ಕಕ್ಕೆ ವ್ಯಾಪ್ತಿಯಿಲ್ಲವೆಂದರೆ) ಸ್ವಪ್ನೇಽಪಿ = ಸ್ವಪ್ನಕಾಲದಲ್ಲಿ ತೋರುವ ಅರ್ಥವೂ, ನಃ=ನಮ್ಮ (ಬಾದರಾಯಣೀಯರ) ಮತದಲ್ಲಿ, ಮೃಷಾ=ಮಿಥ್ಯೆಯು, ನ ಚ=ಅಲ್ಲವೇ ಅಲ್ಲ. ತಥಾಚ ನನ್ನ ರೀತಿಯಿಂದ ವ್ಯಾಪ್ತಿಗೆ ಭಂಗಬರಲಿ, ನಾನು ಮಿಥ್ಯೆಯೆಂದು ಹೇಳುತ್ತೇನೆಂದರೆ ವ್ಯಾಸರ ಮತವನ್ನು ಅನುಸರಿಸಿಕೊಂಡು ಇರುವ ನಿಮಗೂ ಹಾಗೆ ಅಂಗೀಕರಿಸಲಿಕ್ಕೆ ಶಕ್ಯವೇ ಆಗಲಾರದು.) ವೇದವ್ಯಾಸರ ಮತದಲ್ಲಿ ಸ್ವಾಪ್ನಾರ್ಥವು ಏಕೆ ಮಿಥ್ಯೆಯಾಗುವುದಿಲ್ಲವೆಂದರೆ) ವಾಸನಾಜನಿತತ್ವೇನ='ಮಾಯಾಮಾತ್ರಂತು' ಎಂದು ಹೇಳತಕ್ಕ ಸೂತ್ರಕಾರರಿಂದ) ಅನಾದಿಯಾದ ಸಂಸ್ಕಾರದಿಂದ ಹುಟ್ಟಲ್ಪಟ್ಟದ್ದೆಂದು, ತಸ್ಯಾಪಿ=ಸ್ವಾಪ್ನಾರ್ಥಕ್ಕೂ, ಅಂಗೀಕೃತತ್ವತಃ=ಅಂಗೀಕರಿಸಲ್ಪಟ್ಟರುವುದರಿಂದ ಸ್ವಾಪ್ನಾರ್ಥವು ಮಿಥ್ಯೆಯೆಂದಭಿಮತವಲ್ಲವೆಂದು ತಿಳಿಯಲ್ಪಡುತ್ತದೆ ॥ ೮೯ ॥

ಮತ್ತು ಸೂತ್ರಕಾರರ ಸಿದ್ಧಾಂತವು ಶ್ರುತ್ಯನುಸಾರಿಯಾಗುವುದಷ್ಟೆ. ಶ್ರುತಿಯಾದರೂ ಸ್ವಾಪ್ನಾರ್ಥಕ್ಕೆ ಕರ್ತನನ್ನು ಹೇಳುವುದರಿಂದ ಶ್ರುತಿಗೆ ಸ್ವಾಪ್ನಾರ್ಥಸತ್ಯತ್ವವೇ ಅಭಿಪ್ರೇತವಾಗಿರುವುದರಿಂದ ಮಿಥ್ಯಾತ್ವವು ಸೂತ್ರಕಾರರಿಗೆ ಅಭಿಪ್ರೇತವೇ ಅಲ್ಲವೆನ್ನುತ್ತಾರೆ—

**ಮೂ ॥ ಸ ಹಿ ಕರ್ತೇತಿ ವಾಕ್ಯೋಕ್ತ್ಯಾ ಜಾಗ್ರತ್ವನಿತಿ ಹಿ ಭ್ರಮಃ ॥ ೯೦ ॥**
**ಸರ್ಪಭ್ರಮಾದಾವಪಿ ಹಿ ಜ್ಞಾನಮಸ್ತ್ಯೇವ ತಾದೃಶಂ ।**
**ತದೇವಾರ್ಥಕ್ರಿಯಾಕಾರಿ ತತ್ಸದೇವಾರ್ಥಕಾರಕಂ ॥ ೯೧ ॥**

'ಅ ॥ ಸ ಹಿ ಕರ್ತಾ' ಇತಿ ವಾಕ್ಯೋಕ್ತ್ಯಾ=ಶ್ರೀ ಹರಿಯೇ ಸ್ವಾಪ್ನಾರ್ಥಕರ್ತನು ಎನ್ನುವ ವಾಕ್ಯದ್ದೆಶೆಯಿಂದ (ಶ್ರೀ ಹರಿಯು ಸ್ವಾಪ್ನಾರ್ಥಕರ್ತನೆಂದು ಹೇಳಿರುವುದರಿಂದ ಸೂತ್ರಕಾರರಿಗೆ ಮಿಥ್ಯಾತ್ವವು ಅಭಿಪ್ರೇತವಲ್ಲ. ಸ್ವಾಪ್ನಾರ್ಥಕ್ಕೆ ಸತ್ಯತ್ವವೇ ಇಷ್ಟವಾಗಿದೆ.) (ಹಾಗಾದರೆ 'ಮಾಯಾಮಾತ್ರಂ' ಎಂದು ಸೂತ್ರಕಾರರೇ ಸ್ವಾಪ್ನಾರ್ಥಕ್ಕೆ ಮಿಥ್ಯಾತ್ವವನ್ನು ಹೇಳಿರುವುದರಿಂದ ಸ್ವಾಪ್ನಾರ್ಥವು ಏಕೆ ಮಿಥ್ಯೆಯಲ್ಲವೆಂದರೆ—'ಮಾಯಾಮಾತ್ರಂ' ಎನ್ನುವುದಕ್ಕೆ ಸ್ವಾಪ್ನಾರ್ಥಕ್ಕೆ ಮಿಥ್ಯಾತ್ವವೆಂದಭಿಪ್ರೇತವಲ್ಲ. ಮತ್ತೆ) ತಸ್ಯ=ಮಾಯಾಮಾತ್ರಂ ಎನ್ನುವ ಸೂತ್ರಕ್ಕೆ, ವಾಸನಾಜನಿತತ್ವೇನ=ಸಂಸ್ಕಾರದಿಂದ ಹುಟ್ಟದ್ದೆಂದು, ಅಂಗೀಕೃತತ್ವತಃ=ಅಂಗೀಕರಿಸಲ್ಪಟ್ಟರುವುದರಿಂದ, ಅಂದರೆ ಆ ಸೂತ್ರವು ಸ್ವಾಪ್ನಾರ್ಥವು ಅನಾದಿಸಂಸ್ಕಾರದಿಂದ ಹುಟ್ಟದ್ದೆಂದು ಪ್ರತಿಪಾದಿಸುತ್ತದೆಂದಂಗೀಕರಿಸಿರುವುದರಿಂದ, ಸ ಹಿ ಕರ್ತೇತಿ ವಾಕ್ಯೋಕ್ತ್ಯಾ=ಮೇಲೆ ಹೇಳುವ ಯುಕ್ತಿಯಿಂದ ಮಾತ್ರ ಸ್ವಾಪ್ನ ಮಿಥ್ಯಾತ್ವವು ಸೂತ್ರಾರ್ಥವಲ್ಲವೆಂದಲ್ಲ. ಮತ್ತೆ ಸ ಹಿ ಕರ್ತಾ ಎನ್ನುವ ವಾಕ್ಯದಿಂದಲೂ 'ಮಾಯಾಮಾತ್ರಂ' ಎನ್ನುವ ಸೂತ್ರವು ಸತ್ಯತ್ವಪ್ರತಿಪಾದಕವೆಂದೇ ಅಂಗೀಕರಿಸಬೇಕು. (ಅಥವಾ ಸ್ವಾಪ್ನಾರ್ಥವು ಅನಾದಿನಿತ್ಯವಲ್ಲ. ಮೇಲೆ ಕಾಣದಿರುವುದರಿಂದ ಉಪಾದಾನನಿಮಿತ್ತಕಾರಣಗಳನ್ನು ನಿರೂಪಿಸದೆ ಇರುವುದರಿಂದ ಉತ್ಪತ್ತಿವಿನಾಶವುಳ್ಳವುಗಳೂ ಅಲ್ಲ. ಬೇರೆ ಪ್ರಕಾರಗಳು ಕೂಡಲಾರವು. ಆದವ್ರಯುಕ್ತ ಸ್ವಾಪ್ನಾರ್ಥವು ಮಿಥ್ಯೆ ಏಕೆ ಅಲ್ಲವೆಂದರೆ) ವಾಸನಾಜನಿತತ್ವೇನ = ಅನಾದಿಯಾದ ಸಂಸ್ಕಾರದಿಂದ ಹುಟ್ಟರುವುದರಿಂದ ಉಪಾದಾನಕಾರಣವಿಲ್ಲವೆಂದಲ್ಲ. ಸಂಸ್ಕಾರವೇ ಉಪಾದಾನಕಾರಣವು. ಆದುದರಿಂದ ಸತ್ಯವೇ. (ಹೀಗೆ ಉಪಾದಾನಕಾರಣವನ್ನು ನಿರೂಪಿಸಿ ನಿಮಿತ್ತಕಾರಣವನ್ನುಪಪಾದಿಸುತ್ತಾರೆ.) ಸ ಹಿ ಕರ್ತೇತಿ ವಾಕ್ಯೋಕ್ತ್ಯಾ='ಸಂಧ್ಯಂ ತೃತೀಯಂ ಸ್ವಪ್ನಸ್ಥಾನಂ' ಎಂದುಪಕ್ರಮಿಸಿ 'ಅಥ ವೇಶಾಂತಾಃ ಪುಷ್ಕರಿಣ್ಯಃ ಸೃಜತೇ ಸ ಹಿ ಕರ್ತಾ' ಎನ್ನುವ ವಾಕ್ಯದಿಂದ ಈಶ್ವರನು ನಿಮಿತ್ತಕಾರಣನೆಂದು

ತಿಳಿಯಲ್ಪಡುತ್ತಾನೆ. (ಹಾಗಾದರೆ 'ಸ್ವಪ್ನಮಾಯಾ ಸರೂಪೇತಿ ಸೃಷ್ಟಿಃ' ಇತ್ಯಾದಿಗಳಲ್ಲಿ ಸ್ವಾಪ್ನಾರ್ಥಕ್ಕೆ ಭ್ರಾಂತಿತ್ವೋಕ್ತಿಯು ಹೇಗೆ ಕೂಡುತ್ತದೆಂದರೆ—) ಜಾಗ್ರತ್ತ್ವಮಿತಿ = ನಾನು ಜಾಗರೂಕನಾಗಿರುತ್ತೇನೆಂದು ನೋಡತಕ್ಕವನಿಗೆ ಯಾವುದು ಜಾಗರೂಕತನವೋ, ಯಾವುದು ಈ ಪದಾರ್ಥಗಳಿಗೆ ಜಾಗರೂಕಾವಸ್ಥೆಯಲ್ಲಿ ಕಂಡ ಪದಾರ್ಥಗಳಿಂದ ಐಕ್ಯವೋ, ಅಥವಾ ಬಾಹ್ಯವ್ಯದಾದಿಜನ್ಯತ್ವವೋ ಇದೇ ಮೊದಲಾದ ಪ್ರತಿಭಾಸವು, ಭ್ರಮಃ=ಭ್ರಾಂತಿಯು, ಹಿ= ಬಾಧ್ಯವಾಗಿರುವುದರಿಂದ. (ಹಿಂದೆ ಹೇಳಿದ ಶ್ರುತ್ಯಾದಿವಚನಗಳು ಅದನ್ನು ಅನುಸರಿಸಿಯೇ ಇರುವವುಗಳು.) (ಹಾಗಾದರೆ ಹಗ್ಗವನ್ನು ನೋಡಿ ಹಾವು ಎಂದು ಭ್ರಾಂತಿಬಂದರೆ ಅಸತ್ಯವಾದ ಹಾವಿಗೂ ಸರ್ಪೋಚಿತವಾದ ಭಯಕಂಪಮೊದಲಾದ ಅರ್ಥಕ್ರಿಯಾಕಾರಿತ್ವವು ಕಂಡದೆ. ಹಾಗೆಯೇ ಹಾವನ್ನು ನೋಡಿ ಪುಷ್ಪಮಾಲಿಕೆಯೆಂದು ಭ್ರಮವು ಬಂದರೆ ಸಂತೋಷಕಾರಿತ್ವವು ಕಂಡದೆ. ಆದಕಾರಣ ತರ್ಕಕ್ಕೆ ವ್ಯಾಪ್ತಿಯಿಲ್ಲವೆಂದರೆ) ಸರ್ಪಭ್ರಮಾದಾವಪಿ=ಹಗ್ಗದಲ್ಲಿ ಹಾವು ಎನ್ನುವ ಭ್ರಾಂತಿಯು ಇತ್ಯಾದಿಗಳಲ್ಲಿಯೂ, ತಾದೃಶಂ=ಸತ್ಯಸರ್ಪೋಲ್ಲೇಖಿಯಾದ ಜ್ಞಾನವು ಎಂತಹುದೋ ಅಂತಹ ಅಂದರೆ, ವಿಷಯಸಂಬಂಧವನ್ನಪೇಕ್ಷಿಸದೆ ಸ್ವಾಭಾವಿಕವಾಗಿಯೇ ಅಸರ್ಪ ಜ್ಞಾನದಿಂದ ವ್ಯಾವೃತ್ತವಾದ, ಜ್ಞಾನಂ=ಜ್ಞಾನವು, ಅಸ್ತ್ಯೇವ=ಉಂಟೇ ಉಂಟು. ಹಿ=ಸರ್ಪ ಜ್ಞಾನವು ಬರಲಿಲ್ಲವೆಂದು ಬಾಧಕಜ್ಞಾನವು ಇಲ್ಲದಿರುವುದರಿಂದಲೂ ಸರ್ಪಜ್ಞಾನವು ಇತ್ತು ಎಂದು ಅನುಭವವಿದ್ದುದರಿಂದಲೂ ಸರ್ಪಜ್ಞಾನವು ಸತ್ಯವೆನ್ನುವುದು ಪ್ರಸಿದ್ಧವು. ತದೇವ=ಆ ಜ್ಞಾನವೇ, ಅರ್ಥಕ್ರಿಯಾಕಾರಿ=ಭಯಕಂಪಾದಿರೂಪ ಅರ್ಥಕ್ರಿಯೆಗಳಿಗೆ ಉಪಯುಕ್ತವಾದುದು. ಕೇವಲ ಸರ್ಪಾದಿಗಳಲ್ಲ. ತತ್=ಆ ಜ್ಞಾನವು, ಸದೇವ=ಇದ್ದುದಾಗಿಯೇ, ಅರ್ಥಕಾರಕಂ = ಭಯ ಕಂಪಾದಿಗಳನ್ನು ಮಾಡುವುದು.

**ತಾ ||** (1) ಸರ್ಪಾದಿಗಳು ಇದ್ದರೂ ಜ್ಞಾನವಿಲ್ಲವಾದರೆ ಭಯಕಂಪಾದಿಗಳು ಹುಟ್ಟ ಲಾರವು. ಜ್ಞಾನವಿದ್ದರೇನೇ ಭಯಕಂಪಾದಿಗಳು ಹುಟ್ಟುವುದರಿಂದ ಭಯಕಂಪಾದಿಗಳು ಜ್ಞಾನ ಕಾರ್ಯವೇ. ಸರ್ಪಕಾರ್ಯವಲ್ಲ. ಸರ್ಪಕಾರ್ಯವಾದರೂ ಅಭಿಸರ್ಪಣ (ಹರಿಯುವಿಕೆ) ದಂಶನ (ಕಚ್ಚುವಿಕೆ) ಮೊದಲಾದುದು, ಮರಣವಾದರೂ ಧಾತುವ್ಯಾಕುಲತಾನಿಮಿತ್ತಕವು. ಆ ಧಾತುವ್ಯಾಕುಲತೆಯು ವಿಷದ್ರವ್ಯದಿಂದಲೆಂಬಂತೆ ಭಯಾದಿಗಳಿಂದಲೂ ಆಗುವುದು. ಆದ ಕಾರಣ ನಿಷೇಧ್ಯಗಳಾದಾಗ್ಯೂ ಸರ್ಪಾದಿಗಳು ಅರ್ಥಕ್ರಿಯೆಗಳಿಗೆ ಉಪಯುಕ್ತವಲ್ಲ. **ತಥಾಚ** ಎಲ್ಲಿ ಅರ್ಥಕ್ರಿಯಾಕಾರಿತ್ವವು ನಿಶ್ಚಿತವಾಗಿಯದೋ, ಅಲ್ಲಿ ಮಿಥ್ಯಾತ್ವವಿಲ್ಲ. ಎಲ್ಲಿ ಮಿಥ್ಯಾತ್ವ ಇದೆಯೋ ಅಲ್ಲಿ ಅರ್ಥಕ್ರಿಯಾಕಾರಿತ್ವವಿಲ್ಲ. ಹೀಗೆ ತರ್ಕಕ್ಕೆ ಮೂಲಭೂತವಾದ ವ್ಯಾಪ್ತಿಗೆ ಎಲ್ಲಿಯೂ ಭಂಗವಿಲ್ಲ || ೯೦ || ೯೧ ||

ಹಾಗಾದರೆ, ಅರ್ಥಕ್ರಿಯಾಕಾರಿತ್ವವು ಹೇಗೆ ಮಿಥ್ಯಾಭೂತವಾದ ವಿಪಕ್ಷದಲ್ಲಿಲ್ಲವೋ ಹಾಗೆಯೇ ಸಪಕ್ಷನಾದ, ಸತ್ಯನಾದ ಬ್ರಹ್ಮನಲ್ಲಿಯೂ ಇಲ್ಲದಿರುವುದರಿಂದ ಅಸಾಧಾರಣವಾಯಿತು. ಸತ್ಯವಾದ ಜ್ಞಾನಕ್ಕೆ ಅರ್ಥಕ್ರಿಯೆಯು ಉಕ್ತವಾಗಿದೆ ಎಂದನ್ನಕೂಡದು. ಆ ಜ್ಞಾನವೂ ಪ್ರಪಂಚದಲ್ಲಿಯೇ ಸೇರಿರುವುದರಿಂದ ವಿಪ್ರತಿಪನ್ನವಾಗಿದೆ, ಎಂದರೆ—

**ಮೂ || ಬ್ರಹ್ಮ ತ್ವರ್ಥಕ್ರಿಯಾಕಾರಿ ಪರತಃ ಸ್ವತ ಏವ ವಾ |**
**ಅಂಗೀಕೃತಂ ಹಿ ತೇನೈವ ಪರತಸ್ತ್ವೇ ನ ಚ ಪ್ರಮಾ || ೯೨ ||**

**ಅ ||** ತೇನೈವ=ಮಾಯಾವಾದಿಯಿಂದಲೇ, ಬ್ರಹ್ಮ ತು=ಬ್ರಹ್ಮನಾದರೂ, ಅರ್ಥಕ್ರಿಯಾ ಕಾರಿ=ಪ್ರಪಂಚದಿಂದಲೂ ಅತಿಶಯವಾಗಿ ಅರ್ಥಕ್ರಿಯೆಗಳಿಗೆ ಉಪಯುಕ್ತವೆಂದು, ಅಂಗೀಕೃತಂ

ಹಿ=ಅಂಗೀಕರಿಸಲ್ಪಟ್ಟದಷ್ಟೆ! (ಜನ್ಮಾದಿಸೂತ್ರದಲ್ಲಿ ಜಗತ್ಕಾರಣನೆಂದು ಬ್ರಹ್ಮನು ಹೇಳಲ್ಪಟ್ಟಿದ್ದಾನೆ. ಆದುದರಿಂದ ಸಪಕ್ಷಭೂತನಾದ ಬ್ರಹ್ಮನಲ್ಲಿಯೂ ಅರ್ಥಕ್ರಿಯಾಕಾರಿತ್ವವು ಕಂಡದ್ರಿಂದ ಅಸಾಧಾರಣ್ಯವನ್ನು ತಿಳಿಯಕೂಡದು. ಹಾಗಾದರೆ, ನಾನು ಅಂಗೀಕರಿಸತಕ್ಕ ಬ್ರಹ್ಮನ ಅರ್ಥಕ್ರಿಯಾಕಾರಿತ್ವವು ಸ್ವಾಭಾವಿಕವಲ್ಲ. ಮತ್ತೆ ಪರತ ಏವ=ಮಾಯೆಯಲ್ಲಿ ಆ ಅರ್ಥಕ್ರಿಯಾಕಾರಿತ್ವವು ಆಶ್ರಿತವಾದುದು. ಆದಕಾರಣ ಆಪಾದಕಕ್ಕೆ ಸಪಕ್ಷದಲ್ಲಿ ಪ್ರವೇಶವು ಹೇಗೆಂದರೆ) ಬ್ರಹ್ಮನಿಗೆ ಅರ್ಥಕ್ರಿಯಾಕಾರಿತ್ವವು, ಅಂಗೀಕೃತಂ=ಅಂಗೀಕೃತವಾಯಿತು. ಅದು, ಸ್ವತಃ=ಸ್ವಾಭಾವಿಕವಾಗಿ ತನ್ನಿಂದಲೇ, ಪರತೋ ವಾ=ಮತ್ತೊಂದರಿಂದಲೇ ಎಂದಾಗಲೀ, ಆಗಲಿ, (ಪ್ರಕೃತಾನುಪಯುಕ್ತವಾದ ಇದರಿಂದ ಏನು ಪ್ರಯೋಜನವು? ಸ್ವತಃ ಅರ್ಥಕ್ರಿಯಾಕಾರಿತ್ವವು ಆಪಾದಕವೆಂದು ನಾವು ಹೇಳಲಿಲ್ಲ. ಪರರೂ ಹೇಳಲಿಲ್ಲ.) (ಬ್ರಹ್ಮನಿಗೆ ಅರ್ಥಕ್ರಿಯಾಕಾರಿತ್ವವು ಬರಬಹುದು. ಪರತಃ ಎನ್ನುವುದಕ್ಕೆ ದಾರುಯಂತ್ರದಂತೆಯೇ (ಹಗ್ಗದಿಂದ ಕೊಣಿಸಲ್ಪಡತಕ್ಕ ಮರದ ಗೊಂಬೆಯಂತೆ) ಪರಾಧೀನವೆಂದರ್ಥವಲ್ಲ. ಕುಲಾಲನಂತೆ ಪ್ರಯೋಜನಾದಿಗಳನ್ನು ಅಪೇಕ್ಷಿಸಿಕೊಂಡು ಇರತಕ್ಕದು ಎಂದೂ ಅರ್ಥವಲ್ಲ. ಮತ್ತೆ ಗಗನದಲ್ಲಿ ಮಾಲಿನ್ಯವಿದ್ದಂತೆಯೇ ನಿಷ್ಕ್ರಿಯನೇ ಆದ ಬ್ರಹ್ಮನಲ್ಲಿ ಮಾಯೆಯ ಸಂಬಂಧದಿಂದ ಅರ್ಥಕ್ರಿಯೆಯು ತೋರುವುದು ಎಂದರ್ಥವು. ಇಂತಹ ಮಾಯಿಕವಾದ ಅರ್ಥಕ್ರಿಯಾಕಾರಿತ್ವದಿಂದ ಆಪಾದಕವಾದ ಅರ್ಥಕ್ರಿಯಾಕಾರಿತ್ವಕ್ಕೆ ಸಪಕ್ಷದಲ್ಲಿ ಪ್ರವೇಶವಾಗುವುದಿಲ್ಲವೆಂದರೆ)ಪರತಸ್ತ್ವೇ=ಬ್ರಹ್ಮನ ಅರ್ಥಕ್ರಿಯಾಕಾರಿತ್ವಕ್ಕೆ, ಮಾಯಿಕತ್ವವಿಷಯದಲ್ಲಿ, ಪ್ರಮಾ=ಪ್ರಮಾಣವು, ನ ಚ=ಅಲ್ಲವೇ ಅಲ್ಲ.

**ತಾ ॥ ನ್ಯಾಯಸುಧಾ**— (1) ಬ್ರಹ್ಮನ ಜಗನ್ನಿರ್ಮಾಣ ಮೊದಲಾದ ಅರ್ಥಕ್ರಿಯೆಯು ೧ ಪ್ರತೀತವಾಗಿಯದೋ, ೨ ಪ್ರತೀತವಾಗಲಿಲ್ಲವೋ, ೨ ಪ್ರತೀತವಾಗದಿದ್ದರೆ ಲಕ್ಷಣವಾಗಿ ಹೇಳಲ್ಪಟ್ಟದ್ದೂ ಹೇಗೆ ಸಂಗತವಾಗುತ್ತದೆ? ಯಾವ ಲಕ್ಷಣಕ್ಕೆ ಮಾಯಿಕತ್ವವನ್ನು ಅಂಗೀಕರಿಸುವಿರಿ? (2) ಪ್ರತೀತವಾಗಿದೆ ಎನ್ನುವ ಪಕ್ಷದಲ್ಲಿಯೂ ಪ್ರತ್ಯಕ್ಷ ಅನುಮಾನಗಳಿಂದ ಜಗನ್ನಿರ್ಮಾಣಾದ್ಯರ್ಥಕ್ರಿಯೆಯು ಪ್ರತೀತವಾಗುವುದಿಲ್ಲ. ಪರಬ್ರಹ್ಮನ ಜಗನ್ನಿರ್ಮಾಣಾದ್ಯರ್ಥಕ್ರಿಯೆಗಳು ಪ್ರತ್ಯಕ್ಷ ಅನುಮಾನಗಳಿಗೆ ವಿಷಯಗಳಾಗುವುದಿಲ್ಲ. ಆದುದರಿಂದ ಶ್ರುತಿಯಿಂದಲೇ ಪ್ರತೀತವಾಗುತ್ತದೆಂದು ಹೇಳಬೇಕು. ಆದುದರಿಂದ ಮಾಯಿಕವಲ್ಲ. (3) ಶ್ರುತಿಪ್ರತೀತವಾದುದೆಲ್ಲವೂ ಬಾಧಕವಿಲ್ಲವಾದರೆ ಸತ್ಯವೇ. ಬ್ರಹ್ಮನ ಅರ್ಥಕ್ರಿಯೆಯು ಮಾಯಿಕವೆನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಬಾಧಕವಿರುವುದಿಲ್ಲ. ಬಾಧಕವು ಇಲ್ಲದಿರುವಮಾತ್ರದಿಂದ ಶ್ರುತಿಯು ಸತ್ಯಾರ್ಥಪ್ರತಿಪಾದಕವು ಹೇಗೆ ಆಗುವುದೆಂದರೆ— ಪ್ರಾಮಾಣ್ಯಕ್ಕೆ ಸ್ವತಸ್ತ್ವವಿರುವುದು. ಪ್ರಾಮಾಣ್ಯಕ್ಕೆ ಪರಸ್ತ್ವ (ಮಾಯಿಕತ್ವ) ವಿದ್ದರೆ ಅನವಸ್ಥಾದೋಷವು ಬರುವುದರಿಂದ ಪ್ರಾಮಾಣ್ಯವು ನಿಶ್ಚಿತವಾಗದೆ ಹೋಗಬೇಕಾಗುವುದು. 'ನಿಷ್ಕಲಂ'(ಷೋಡಶಕಲಾತ್ಮಕ ದೇಹಶೂನ್ಯನು) 'ನಿಷ್ಕ್ರಿಯಂ ಶಾಂತಂ' ಇತ್ಯಾದಿ ಶ್ರುತಿಗಳು ಬಾಧಕಗಳು ಇವೆ ಎಂದರೆ— ಶ್ರುತಿಯ ಬಲದಿಂದ ಅರ್ಥಕ್ರಿಯೆಗೆ ಮಾಯಿಕತ್ವವನ್ನು ಸ್ವೀಕರಿಸಿದರೆ ಸೃಷ್ಟಿಪ್ರತಿಪಾದಕವಾದ 'ಸ ಇದಂ ಸರ್ವಮಸೃಜತ' ಇತ್ಯಾದಿ ಶ್ರುತಿಯು ಪ್ರಮಾಣವಾಗದೆ ಹೋಗುವುದು. ಪ್ರತಿಪಾದಿತವಾದ ಅರ್ಥಗಳ ಮಿಥ್ಯಾತ್ವವೇ ಅಪ್ರಾಮಾಣ್ಯವು. (4) ಮತ್ತು ವಿಶೇಷವಿಲ್ಲದಿರುವುದರಿಂದ 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಇತ್ಯಾದಿ ಶ್ರುತಿಯು. ಈ ಶ್ರುತಿಯ ವಿರೋಧದಿಂದ ಮಾಯಿಕತ್ವ ವಿಷಯದಲ್ಲಿ ಪ್ರಮಾಣವಲ್ಲವೆಂದು ಏತಕ್ಕೆ ಆಗಲಾರದು? ॥ ೯೨ ॥

ಹಾಗಾದರೆ ಅಬಾಧ್ಯವಾದುದೇ ಅರ್ಥಕ್ರಿಯಾಕಾರಿಯಾಗಲಿ, ಜಗತ್ತನ್ನಾದರೂ ಅಬಾಧ್ಯವೆಂದಂಗೀಕರಿಸುತ್ತೇನೆ. ಸಂಪೂರ್ಣ ಅಬಾಧ್ಯತ್ವವಿಲ್ಲವಾದರೂ ಬ್ರಹ್ಮಾತ್ಮೈಕ್ಯಜ್ಞಾನದಿಂದ

ಮೊದಲು ಅಬಾಧ್ಯವಾಗಿದೆ. ಆದಕಾರಣ ಪ್ರಪಂಚದಲ್ಲಿ ಸೇರಿದ ಶ್ರುತಿಯೂ ಕೂಡ ಅಮುಖ್ಯ ಸತ್ಯವಾಗಿರುವುದರಿಂದ ಸಾಧಕವಾಗಿರುವುದೆಂದರೆ —

**ಮೂ ॥ ಅಮುಖ್ಯಸತ್ಯಮಾನಸ್ಯ ಸಾಧಕತ್ವೇ ಸದಾವಯೋಃ ।**
**ನ ಹಿ ಸಂಪ್ರತಿಪತ್ತಿಃ ಸ್ಯಾದತಸ್ತಿಷ್ಠತು ಸಾ ಪ್ರಮಾ ॥ ೯೩ ॥**

**ಅ ॥** ಅಮುಖ್ಯಸತ್ಯಮಾನಸ್ಯ = ಅಮುಖ್ಯಾಬಾಧ್ಯವಾದ ಅರ್ಥವುಳ್ಳ ಪ್ರಮಾಣಕ್ಕೆ, ಸಾಧಕತ್ವೇ=ಸಾಧಕತ್ವ ವಿಷಯದಲ್ಲಿ, ಸದಾ=ಯಾವಾಗಲೂ, ಆವಯೋಃ=ನಮ್ಮಿಬ್ಬರಿಗೆ, ಸಂಪ್ರತಿಪತ್ತಿಃ=ಸಮ್ಮತಿಯು, ನ ಹಿ ಸ್ಯಾತ್=ಆಗಲಾರದಷ್ಟೆ. ಅತಃ=ಆದಕಾರಣ, ಸಾ ಪ್ರಮಾ=ಬ್ರಹ್ಮಜ್ಞಾನಬಾಧ್ಯಾರ್ಥಕ ಪ್ರಮಾಣವು, ತಿಷ್ಠತು=ಇರಲಿ. (ಹೇಳಬಾರದು.) ಅಥವಾ ಯಾವಕಾರಣದ್ವೆಶೆಯಿಂದ, ಸಾ=ಆ ಶ್ರುತಿಯು, ಅಪ್ರಮಾ=ಅಪ್ರಮಾಣವೋ, ಆದಕಾರಣ, ತಿಷ್ಠತು=ಇರಲಿ, (ಹೇಳಬಾರದು).

**ತಾ ॥** (1) ಪ್ರಪಂಚಮಿಥ್ಯಾತ್ವವೇ 'ನೇಹನಾನಾ' ಎನ್ನುವ ಶ್ರುತ್ಯರ್ಥವು. ಮಿಥ್ಯಾತ್ವವು ಸೋಪಾಧಿಕವಾಗಿರುವುದರಿಂದ ಬ್ರಹ್ಮಸ್ವರೂಪವಲ್ಲ. ಆದುದರಿಂದ ಮಿಥ್ಯಾತ್ವಕ್ಕೆ ಬಾಧ್ಯತ್ವವು ಆವಶ್ಯಕವಾಗಿದೆ. ಬಾಧ್ಯಾರ್ಥಕವು ಅಪ್ರಮಾಣವೆಂದು ಪ್ರಸಿದ್ಧವೇ ಆಗಿದೆ ॥ ೯೩ ॥

ಹೀಗೆ ಸ್ವರೂಪವೂ ವಿಷಯವೂ ಅಸತ್ಯವಾಗಿರುವುದರಿಂದ ಸಾಧಕವಾಗಿದೆ ಎನ್ನುವಲ್ಲಿ ವಿಪ್ರತಿಪನ್ನವಾದ ಶ್ರುತಿಯಿರಲಿ, ಆದಾಗ್ಯೂ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಸಾಧಿಸುವುದಕ್ಕಾಗಿ ಶ್ರುತ್ಯುಪನ್ಯಾಸವನ್ನು ಏಕೆ ಮಾಡಕೂಡದೆಂದರೆ —

**ಮೂ ॥ ನ ಹಿ ವಿಪ್ರತಿಪನ್ನೇನ ಶಕ್ಯಂ ಸಾಧಯಿತುಂ ಕ್ವಚಿತ್ ।**
**ಸಾಧಕತ್ವಂ ತು ಸತ್ಯಸ್ಯ ಸಾಕ್ಷಿಣೋ ಹ್ಯಾವಯೋರ್ದ್ವಯೋಃ ।**
**ಸಮ್ಯಕ್ ಸಂಪ್ರತಿಪನ್ನಂ ತನ್ನ ವಿವರ್ತಮತಂ ಭವೇತ್ ॥ ೯೪ ॥**

**ಅ ॥** ವಿಪ್ರತಿಪನ್ನೇನ=ವಿವಾದ ವಿಷಯೀಭೂತವಾದ ಪ್ರಮಾಣದಿಂದ, ಕ್ವಚಿತ್= ಎಲ್ಲಿಯೂ, ಸಾಧಯಿತುಂ=ಸಾಧಿಸಲಿಕ್ಕೆ, ನ ಹಿ ಶಕ್ಯಂ=ಆಗಲಾರದಷ್ಟೆ. ಸತ್ಯಸ್ಯ=ಸತ್ಯವಾದ, ಸಾಕ್ಷಿಣಸ್ತು = ಸಾಕ್ಷಿಗಾದರೂ, ಸಾಧಕತ್ವಂ = ಸಾಧಕತ್ವವು, ಆವಯೋರ್ದ್ವಯೋಃ ಹಿ = ನಮ್ಮಿಬ್ಬರಿಗೂ, ಸಮ್ಯಕ್=ಚನ್ನಾಗಿ, ಸಂಪ್ರತಿಪನ್ನಂ=ನಿಶ್ಚಿತವಾಗಿದೆ. ತತ್=ಆ ಸಾಕ್ಷಿಯಿಂದ, ವಿವರ್ತಮತಂ=ಜಗತ್ತು ಆರೋಪಿತವೆನ್ನುವ ಮತವು, ನ ಭವೇತ್=ಆಗಲಾರದು. (ಆ ಮತವನ್ನು ನಿರಾಕರಿಸುವೆವು.)

**ತಾ ॥ ನ್ಯಾಯಸುಧಾ**— (1) ಪ್ರಮಾಣವು ಸತ್ಯವೋ ಅಸತ್ಯವೋ ಎನ್ನುವ ವಿಚಾರ ವಿರಲಿ, ಪ್ರಮಾಣದಿಂದಲೇ ಪ್ರಮೇಯವು ಸಿದ್ಧಿಸುವುದು. ಇಲ್ಲವಾದರೆ ನಿಮಗೂ ಪ್ರಪಂಚಕ್ಕೆ ಮಿಥ್ಯಾತ್ವವನ್ನು ನಿರಾಕರಿಸುವ ವಿಷಯದಲ್ಲಿಯೂ ಪ್ರಪಂಚಕ್ಕೆ ಸತ್ಯತ್ವವನ್ನು ಸಾಧಿಸುವವಿಷಯ ದಲ್ಲಿಯೂ ಪ್ರಮಾಣವೇ ಇಲ್ಲದಿರುವುದರಿಂದ ಕಥೆಯೇ ಇಲ್ಲವೆಂದಾಗಬೇಕಾಗುವುದು. (2) ನೀವು ಉಪನ್ಯಾಸಮಾಡುವ ಪ್ರಮಾಣವು ೧ ಸತ್ಯವಾಗಲೀ, ೨ ಅಸತ್ಯವಾಗಲೀ ಆಗುವುದು. ನನ್ನನ್ನು ಕುರಿತು ಸತ್ಯವನ್ನು ಹೇಳಲಿಕ್ಕೆ ಯೋಗ್ಯವಲ್ಲ. ನಾನು ಸತ್ಯಕ್ಕೆ ಸಾಧಕತ್ವವನ್ನುಅಂಗೀಕರಿಸಲಿಲ್ಲ. ಯಾವುದು ಸತ್ಯವೋ ಅಲ್ಲಿ ಕ್ರಿಯಾವೇಶವು (ಕ್ರಿಯಾನಿಷ್ಪತ್ತಿಗೆ ಅನುಕೂಲವಾದ ವ್ಯಾಪಾರವು)

ಇರುವುದಿಲ್ಲ. ಎಲ್ಲಿ ಕ್ರಿಯಾವೇಶವಿದೆಯೋ ಅದು ಸತ್ಯವಲ್ಲ. ಸತ್ಯವಾದ ಸಾಕ್ಷಿಗೆ ಸಾಧಕತ್ವವನ್ನು ನೀನು ಅಂಗೀಕರಿಸಿರುತ್ತೀ ಎಂದು ಹೇಳಕೂಡದು. ಕಥಂಚಿತ್ ಸುಖಾದಿಗಳಲ್ಲಿ ಉಪನ್ಯಾಸ ಮಾಡಲಿಕ್ಕೆ ಶಕ್ಯವಾಗಿದ್ದರೂ ಬಾಹ್ಯಪ್ರಪಂಚದಲ್ಲಿ ಸಾಕ್ಷಿಗೆ ಸಾಧಕತ್ವವು ಕೂಡಲಾರದು. ಈ ಪ್ರಪಂಚವು ಪ್ರತ್ಯಕ್ಷಾದಿ ಪ್ರಮಾಣಗಳಿಂದುಂಟಾದ ಮನೋವೃತ್ತಿವಿಷಯವು. ರೂಪಾದಿ ಬಾಹ್ಯಪ್ರಪಂಚಗಳಿಗೂ ಸಾಕ್ಷಾತ್ ಸಾಕ್ಷಿವೇದ್ಯತ್ವವಿದ್ದರೆ ಅಂಧ-ಬಧಿರಾದಿಗಳು ಇಲ್ಲವೆಂದಾಗ ಬೇಕಾಗುವುದು. ಬಾಹ್ಯಪ್ರಪಂಚವೇ ಈಗ ಪ್ರಕೃತವಾಗಿದೆ. (3) ನೀವು ಅಂಗೀಕರಿಸದಿರುವುದ ರಿಂದ ಅಸತ್ಯವೂ ಅಲ್ಲ. ಎಂದರೆ—ಎಲ್ಲಾ ವಸ್ತುಗಳೂ ಜ್ಞಾತಗಳಾಗಿ ಆಗಲೀ ಅಜ್ಞಾತಗಳಾಗಿ ಆಗಲೀ ಸಾಕ್ಷಿಚೈತನ್ಯಕ್ಕೆ ವಿಷಯುವೇ ಸರಿ. ಆ ಸಾಕ್ಷಿಯಿಂದಲೇ ಪ್ರಪಂಚವು ಮಿಥ್ಯಾಭೂತವು ಎನ್ನುವ ಮತವನ್ನು ನಿರಾಕರಿಸುವೆವು. ಸಾಕ್ಷಿಯಿಂದಲೇ ಜಗತ್ಸತ್ಯತ್ವವನ್ನು ಸಾಧಿಸುವೆವು ॥ ೯೪ ॥

ಯಾವುದೊಂದೂ ಪ್ರಮಾಣಪ್ರಮೇಯಾದಿ ವ್ಯವಸ್ಥೆಯನ್ನು ನಾನು ಅಂಗೀಕರಿಸಲಿಲ್ಲ. ಮತ್ತೆ ಪರರೀತಿಯಿಂದಲೇ ಎಲ್ಲವೂ ಹೇಳಲ್ಪಟ್ಟದು. ಆದಕಾರಣ ಏನೂ ಅಂಗೀಕರಿಸದಿರುವ ನನ್ನ ಹತ್ತಿರ ಸಾಕ್ಷಿಗೆ ಸಾಧಕವನ್ನು ನೀನು ಅಂಗೀಕರಿಸಿರುತ್ತಿ ಎಂದು ಹೇಗೆ ಹೇಳುವುದು ಎಂದರೆ—

**ಮೂ ॥ ಯದಿ ನಾಂಗೀಕೃತಂ ಕಿಂಚಿದನಂಗೀಕೃತತಾಽಪಿ ಹಿ ।**
**ನಾಂಗೀಕೃತೇತಿ ಮೂಕಃ ಸ್ಯಾದಿತಿ ನಾಸ್ಮದ್ವಿವಾದಿತಾ ॥ ೯೫ ॥**

ಅ ॥ ಕಿಂಚಿತ್=ಯಾವುದೊಂದೂ, (ಮಯಾ=ನನ್ನಿಂದ,) ನಾಂಗೀಕೃತಂ=ಅಂಗೀ ಕರಿಸಲ್ಪಡಲಿಲ್ಲ ಎಂದು, ಯದಿ=ಯಾವಪಕ್ಷದಲ್ಲಿ, (ಮತ್ತೊಬ್ಬನು ಹೇಳಿದರೆ, ಆಗ ಹೇಳಬೇಕು. ಸರ್ವಥಾ ತಾನು ಅಂಗೀಕರಿಸಲಿಲ್ಲವೆನ್ನುವುದನ್ನು ನೀನು ಅಂಗೀಕರಿಸಿದ್ದಿಯೋ ಇಲ್ಲವೋ, ೧ನೇ ಕಲ್ಪದಲ್ಲಿ ಯಾವುದೂ ಅಂಗೀಕೃತವಾಗಲಿಲ್ಲವೆನ್ನುವ ಪಕ್ಷಕ್ಕೆ ಹಾನಿಯು ಬರುವುದರಿಂದ ತನಗೆ) ಅನಂಗೀಕೃತತಾಽಪಿ = ಅನಂಗೀಕಾರಿತ್ವವೂ, ನಾಂಗೀಕೃತಾ=ಅಂಗೀಕರಿಸಲ್ಪಡಲಿಲ್ಲ, ಇತಿ=ಈ ಕಾರಣದಿಂದ, (೨ನೇ ಪಕ್ಷವನ್ನಂಗೀಕರಿಸಬೇಕು.) ಇತಿ = ಹೀಗೆ, ಮೂಕಃ = ಮೂಕನು, ಸ್ಯಾತ್=ಆಗುವನು. (ಅಂಗೀಕರಿಸಿದರೂ ಅಂಗೀಕರಿಸದೆ ಇದ್ದರೂ ಇವುಗಳಲ್ಲಿ ಉದಾಸೀನ ನಾದವನಿಗೆ ಸತ್ತವನಂತೆ ವಾಕ್ಪ್ರವೃತ್ತಿಯೇ ಕೂಡಲಾರದು. ಅಂತೂ ಮೌನವನ್ನೇ ಹೊಂದಿದವನಿಗೆ ಅಸ್ಮದ್ವಿವಾದಿತಾ=ನಮಗೆ ಪ್ರತಿವಾದಿತ್ವವೇ, ನ=ಕೂಡಲಾರದು ॥ ೯೫ ॥

ಹೀಗೆ ಯುಕ್ತಿಯಿಂದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳತಕ್ಕವನನ್ನು ತಿರಸ್ಕರಿಸಿ ಯುಕ್ತಿ ಯಿಂದ ಸಾಧಿಸಲ್ಪಟ್ಟ ಅರ್ಥಕ್ರಿಯಾಕಾರಿತ್ವರೂಪವಾದ ಸತ್ಯತ್ವವನ್ನು ಶ್ರುತಿಗಳಿಂದಲೂ ಸಾಧಿ ಸುತ್ತಾರೆ—

**ಮೂ ॥ ವಿಶ್ವಂ ಸತ್ಯಂ ಯಚ್ಚಿಕೇತ ಪ್ರಭೂನ್ನಸ್ಯ ಯಥಾರ್ಥತಃ ।**
**ಇತ್ಯಾದಿಶ್ರುತಯಃ ಸರ್ವಾ ವಿಶ್ವಸತ್ಯತ್ವವಾಚಿ(ಚ)ಕಾಃ ॥ ೯೬ ॥**

ಅ ॥ ೧ ವಿಶ್ವಂ ಸತ್ಯಂ= **ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನಪ್ರಮಿ ನಂತಿ ವ್ರತಂ ವಾಂ**=(ಋ. ಅಷ್ಟ. ೨. ಅಧ್ಯಾ. ೭ ವ. ೩.) ಮಘವನ್ ಶಬ್ದವಾಚ್ಯಗಳಾದ ಇಂದ್ರ-ಬೃಹಸ್ಪತಿ ನಾಮಕ ಭಗವದ್ರೂಪಗಳೇ, ನೀವು ರಕ್ಷಿಸತಕ್ಕದು ಯಾವುದು ಪ್ರಪಂಚವೋ ಅದು ಸತ್ಯವೇ. ಸರ್ವಥಾ ಅನಿರ್ವಚನೀಯವಲ್ಲ. ನಿಮ್ಮ ಯಾವ ವಿಶ್ವಪಾಲನಾದಿವ್ರತವನ್ನು ಅಭಿಮಾನಿ ಗಳಾದದೇವತೆಗಳೂ ತಿಳಿಯುತ್ತಾರೋ, ಅದೂ ಸತ್ಯವೇ. ಅಂತೂ ಇಂದ್ರಾದಿನಾಮಕನಾದ ಶ್ರೀ

ಹರಿಯು ಸತ್ಯಭೂತಜಗತ್ತಿಗೆ ಸ್ವಾಮಿಯು ಎಂದುಕ್ತವಾಯಿತು. (೨) ಯಚ್ಚಿಕೇತ= **ಯಚ್ಚಿಕೇತ ಸತ್ಯಮಿತ್ತನ್ನಮೋಘಂ ವಸುಸ್ಪಾರ್ಹಮುತ ಜೇತೋತ ದಾತಾ**(ಋ. ಅಷ್ಟ.೮ ಅಧ್ಯಾ.೧. ವ.೨೭)(ಶ್ರೀಹರಿಯು ಯಾವುದನ್ನು ಸೃಷ್ಟಿಮಾಡಿದನೋ ಅದು ಯಥಾರ್ಥವೇ,ಅದು ಮಿಥ್ಯೆಯಲ್ಲ. ಸ್ಪೃಹಣೀಯವಾದ ದ್ರವ್ಯವನ್ನು ಬಲ್ಯಾದಿಗಳಿಂದ ಗೆದ್ದು ಇಂದ್ರಾದಿಗಳಿಗೆ ಕೊಟ್ಟವನು. (೨) ವೃಘಾನ್ನಸ್ಯ= **ಪ್ರಘಾನ್ನಸ್ಯ ಮಹತೋ ಮಹಾನಿ ಸತ್ಯಾಸತ್ಯಸ್ಯ ಕರಣಾನಿ ವೋಚಂ'** (ಋ. ಅಷ್ಟ. ೨. ಅಧ್ಯಾ ೬. ವ. ೧೫) ಸರ್ವೋತ್ತಮನಾದ, ಸರ್ವ ಸೃಷ್ಟಿಕರ್ತನಾದ ಈ ವಿಷ್ಣು ವಿನ ಪಾರಮಾರ್ಥಿಕಗಳಾದ ಸೃಷ್ಟ್ಯಾದಿ ಕರ್ಮಗಳನ್ನು ಸತ್ಯಗಳನ್ನಾಗಿಯೇ ಹೇಳುವೆನು. (೪) ಯಥಾರ್ಥತಃ = **ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ್ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ** = (ಈಶಾವಾಸ್ಯ. ಪು. ೧೦) ಸರ್ವಜ್ಞನೂ, ಸರ್ವರ ಮನಃಪ್ರೇರಕನೂ, ಸರ್ವ ಸಂಹಾರಕನೂ ಆದ ಶ್ರೀ ಹರಿಯು ಮಹದಾದಿ ತತ್ವಗಳನ್ನು ಸರ್ವಥಾ ಯಥಾರ್ಥಗಳನ್ನಾಗಿಯೇ ಇರುವವುಗಳನ್ನಾಗಿ ಸೃಷ್ಟಿಸಿದನು. ಇತ್ಯಾದಿ ಶ್ರುತಯಃ ಸರ್ವಾಃ = ಇದೇಮೊದಲಾದ ಎಲ್ಲಾ ಶ್ರುತಿಗಳು, ವಿಶ್ವಸತ್ಯತ್ವವಾಚಿ (ಚ) ಕಾಃ=ಜಗತ್ತಿಗೆ ಸತ್ಯತ್ವವನ್ನು ಪ್ರತಿಪಾದಿಸುವವುಗಳು. (ಮತ್ತು ಜಗತ್ ಸತ್ಯಂ ಅರ್ಥಕ್ರಿಯಾಕಾರಿತ್ವಾತ್ ಘಟವತ್=ಎನ್ನುವ ಅನುಮಾನವೂ ಜಗತ್ತಿಗೆ ಸತ್ಯತ್ವವನ್ನು ಸಾಧಿಸುತ್ತದೆ)॥ ೯೬ ॥

ಹೀಗೆ ಆಗಮ ಅನುಮಾನಗಳಿಂದ ಜಗತ್ಸತ್ಯತ್ವವು ಸಿದ್ಧವಾಗಲು ಈಗ ಪ್ರತ್ಯಕ್ಷವನ್ನೂ ಹೇಳುತ್ತಾರೆ—

**ಮೂ ॥ ಸತ್ಯತ್ವಂ ಗಗನಾದೇಶ್ಚ ಸಾಕ್ಷಿಪ್ರತ್ಯಕ್ಷಸಾಧಿತಂ ।**
**ಸಾಕ್ಷಿಸಿದ್ಧಸ್ಯ ನ ಕ್ವಾಪಿ ಬಾಧ್ಯತ್ವಂ ತದದೋಷತಃ ॥ ೯೭ ॥**

ಅ ॥ ಗಗನಾದೇಶ್ಚ = (ಆಂತರವಾದ ಸುಖಾದಿಗಳಿಗೆ ಮಾತ್ರ ಸತ್ಯತ್ವವಲ್ಲ. ಮತ್ತೆ ಬಾಹ್ಯಗಳಾದ) ಗಗನಾದಿಗಳಿಗೂ ಕೂಡ, ಸತ್ಯತ್ವಂ=ಯಾಥಾರ್ಥ್ಯವು, ಸಾಕ್ಷಿಪ್ರತ್ಯಕ್ಷಸಾಧಿತಂ= ಸಾಕ್ಷಿ (ಜೀವಸ್ವರೂಪವಾದ ಇಂದ್ರಿಯ)ರೂಪವಾದ ಪ್ರತ್ಯಕ್ಷಪ್ರಮಾಣದಿಂದ ಸಾಧಿಸಲ್ಪಟ್ಟದೆ. ಕ್ವಾಪಿ= ಯಾವಕಾಲದಲ್ಲಿಯೂ, ತದದೋಷತಃ=ಆ ಸಾಕ್ಷಿಗೆ ದೋಷವಿಲ್ಲದಿರುವುದರಿಂದ, ಸಾಕ್ಷಿಸಿದ್ಧಸ್ಯ=ಸಾಕ್ಷಿ ಪ್ರತ್ಯಕ್ಷದಿಂದ ನಿಶ್ಚಿತವಾದುದಕ್ಕೆ, ಬಾಧ್ಯತ್ವಂ=ಬಾಧಿಸಲ್ಪಡುವಿಕೆಯು, ನ= ಇಲ್ಲವು.

ತಾ ॥ **ನ್ಯಾಯಸುಧಾ**— (1) ಗಗನಕಾಲ ದಿಕ್ ದಿಗ್ವಿಶೇಷಗಳಾದ ಪ್ರಾಚ್ಯಾದಿಗಳು ಮುಖ್ಯವಾಗಿ ಸಾಕ್ಷಿಸಿದ್ಧ ಸತ್ಯತ್ವವುಳ್ಳವುಗಳು. ಸ್ತಂಭ-ಕುಂಭಾದಿಗಳಾದರೂ, ಸ್ತಂಭಾದಿಗ್ರಾಹಕ ಪ್ರತ್ಯಕ್ಷಾದಿಪ್ರಾಮಾಣ್ಯ ವ್ಯವಸ್ಥಾಪನದ್ವಾರಾ ಸಾಕ್ಷಿಸಿದ್ಧ ಸತ್ಯತ್ವವುಳ್ಳವುಗಳು ಹೀಗೆ ತಿಳಿಸುವುದಕ್ಕಾಗಿಯೇ 'ಗಗನಾದೇಃ' ಎನ್ನುವಲ್ಲಿ ಆದಿಪದವನ್ನು ಹೇಳಿರುವರು. (2) ಸಾಕ್ಷಿಯು ಪ್ರಮಾಣವೇ ಅಲ್ಲ. ಪ್ರಮಾಣವಾದರೆ ಮೂರೇ ಪ್ರಮಾಣಗಳು ಎಂದು ಹೇಳಿದ್ದಕ್ಕೆ ಭಂಗಬರುವುದರಿಂದ ವಿಶ್ವಸತ್ಯತ್ವವು ಪ್ರಮಿತವಲ್ಲವೆನ್ನುವ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಸಾಕ್ಷಿಪ್ರತ್ಯಕ್ಷ' ಎಂದು ಹೇಳಿದ್ದು. ಅಂದರೆ,ಸಾಕ್ಷಿಯು ಪ್ರತ್ಯಕ್ಷದಲ್ಲಿಯೇ ಸೇರಿದ್ದು ಬೇರೊಂದು ಪ್ರಮಾಣವಲ್ಲ. 'ಪ್ರತ್ಯಕ್ಷಸಾಧಿತಂ' ಎಂದು ಇಷ್ಟೇ ಹೇಳಿದರೆ ಅತೀಂದ್ರಿಯಾರ್ಥಗಳಿಗೆ ಸತ್ಯತ್ವವಿದೆ ಎನ್ನುವಲ್ಲಿ ಪ್ರಮಾಣವನ್ನು ಹೇಳಿದಂತೆ ಆಗಲಿಲ್ಲ, ಸಾಕ್ಷೀಂದ್ರಿಯವಿಲ್ಲದೆ ಕೇವಲ ಬಾಹ್ಯ ಪ್ರತ್ಯಕ್ಷದಿಂದ ಇಂದ್ರಿಯ ವಿಷಯಗಳಾದ ವಸ್ತುಗಳಿಗೂ ಸತ್ಯತ್ವವು ಸಿದ್ಧಿಸುವುದಿಲ್ಲ. ಆದಕಾರಣ 'ಸಾಕ್ಷಿಪ್ರತ್ಯಕ್ಷ' ಎಂದು ಹೇಳಿರುವರು. (3) ಉಭಯವಾದಿಗಳಿಗೂ, ಸಂಪ್ರತಿಪನ್ನವಾದ ಪ್ರಮಾಣವು ನಮ್ಮ ಪಕ್ಷದಲ್ಲಿದೆ

ಎಂದು ಇಷ್ಟು ಹೇಳಿದರೆ ಸತ್ಯತ್ವರೂಪಾರ್ಥವು ಲಬ್ಧವಾಯಿತಲ್ಲದೆ ಸಾಧಿತವಾಗಲಿಲ್ಲ. ಅದನ್ನು ಪಪಾದಿಸುವುದಕ್ಕೋಸ್ಕರ 'ಸಾಧಿತಂ' ಎಂದು ಹೇಳಿರುವರು. (4) ಕೆಲವರು 'ಇಹ ವಿಹಂಗಮಃ ಪತತಿ' ಇಲ್ಲಿ ಪಕ್ಷಿಯು ಹಾರುತ್ತದೆ ಎನ್ನುವ ಚಕ್ಷುರ್ವ್ಯಾಪಾರಾನಂತರದಲ್ಲಿ ತೋರುವುದರಿಂದ ಆಕಾಶಾದಿಗಳು ಚಕ್ಷುರಿಂದ್ರಿಯಕ್ಕೆ ಗೋಚರಗಳು ಎನ್ನುತ್ತಾರೆ. ಅದಯುಕ್ತವು. ಆಕಾಶಃ ನ ಚಾಕ್ಷುಷಃ ರೂಪರಹಿತದ್ರವ್ಯತ್ವಾತ್ ಆತ್ಮಪವನವತ್=ಆತ್ಮವಾಯುಗಳಂತೆ ರೂಪರಹಿತವಾದ ದ್ರವ್ಯವಾಗಿರುವುದರಿಂದ ಆಕಾಶವು ಚಕ್ಷುರಿಂದ್ರಿಯಕ್ಕೆ ಗೋಚರವಲ್ಲ. ಅಂತೂ ಚಾಕ್ಷುಷ ಸಾಮಗ್ರಿಯೇ ಇರುವುದಿಲ್ಲ. ಸಾಕ್ಷಿಸಿದ್ಧಗಳಾದ ಆಕಾಶಾದಿಗಳ ಸಂಬಂಧದಿಂದ 'ಇಹ ವಿಹಂಗಮಃ ಪತಿತಿ' ಎನ್ನುವ ಪ್ರತೀತಿಯು ಕೂಡುತ್ತದೆ. (5) ಕೆಲವರು ಆಲೋಕ ಮಂಡಲವನ್ನು ಆಶ್ರಯಿಸಿ ಈ ಪ್ರತೀತಿಯು ಕೂಡುತ್ತದೆನ್ನುತ್ತಾರೆ. ಅದೂ ಅಯುಕ್ತವು. 'ಇಹಾಲೋಕಃ' ಎಂದೂ ಪ್ರತ್ಯಯವು ಉಂಟು. (6) ಹಾಗಾದರೆ ಅನುಮಾನ ವೇದ್ಯವಾದ ಆಕಾಶವು ಈ ಪ್ರತೀತಿ ವಿಷಯವಾಗಲಿ ಎಂದು ಹೇಳಕೂಡದು. ಆಕಾಶಸಾಧಕವಾದ ಲಿಂಗವೇ ಇಲ್ಲ. ಹಾಗಾದರೆ, ಶಬ್ದವು ಪ್ರತ್ಯಕ್ಷಸಿದ್ಧವು. (೧) ಸ ಚ ಶಬ್ದಃ ಗುಣಃ ಸಾಮಾನ್ಯವತ್ವೇಸತಿ ಅಸ್ಮದಾದಿ ಬಾಹ್ಯೈಕೇಂದ್ರಿಯಗ್ರಾಹ್ಯತ್ವಾತ್ ರೂಪವತ್=ಶಬ್ದವು, ಗುಣವು ಸಾಮಾನ್ಯವಿದ್ದು ಅಸ್ಮದಾದಿಗಳ ಬಾಹ್ಯವಾದ ಒಂದು ಇಂದ್ರಿಯಕ್ಕೆ ವಿಷಯವಾಗಿರುವುದರಿಂದ, ರೂಪದಂತೆಯೇ. ಗುಣವಾಗಿರುವುದರಿಂದ ದ್ರವ್ಯಾಶ್ರಿತತ್ವವು ಸಿದ್ಧವಾಗಲು (೨) 'ಶಬ್ದಃ ನ ಸ್ಪರ್ಶವದ್ವಿಶೇಷಗುಣಃ ಪ್ರತ್ಯಕ್ಷತ್ವೇ ಸತಿ ಅಕಾರಣಗುಣಪೂರ್ವಕತ್ವಾತ್ ಅಯಾವದ್ದ್ರವ್ಯಭಾವಿತ್ವಾತ್ ಸುಖಾದಿವತ್=ಶಬ್ದವು ಸ್ಪರ್ಶವುಳ್ಳ ಪೃಥಿವೀ-ಜಲ-ತೇಜಸ್ಸು-ವಾಯು ಇವುಗಳ ವಿಶೇಷಗುಣವಲ್ಲ, ಪ್ರತ್ಯಕ್ಷವಾಗಿದ್ದು ಕಾರಣ ಗುಣಪೂರ್ವಕವಾಗದಿರುವುದರಿಂದ ಯಾವದ್ದ್ರವ್ಯಭಾವಿಯಾಗದಿರುವುದರಿಂದ, ಸುಖಾದಿಗಳಂತೆಯೇ. (೩) ಶಬ್ದಃ ನಾಪ್ಯಾತ್ಮಗುಣಃ ಬಾಹ್ಯೇಂದ್ರಿಯಗ್ರಾಹ್ಯತ್ವಾತ್ ಆತ್ಮಾಂತರಗ್ರಾಹ್ಯತ್ವಾತ್ ಆತ್ಮನ್ಯಸಮವಾಯಾತ್ ಅಹಂಕಾರೇಣ ವಿಭಕ್ತಸ್ಯ ಗ್ರಹಣಾತ್ ರೂಪಾದಿವತ್=ಶಬ್ದವು ಆತ್ಮನ ಗುಣವೂ ಅಲ್ಲ. ಬಾಹ್ಯೇಂದ್ರಿಯ(ಶ್ರೋತ್ರ)ಕ್ಕೆ ಪ್ರತ್ಯಕ್ಷವಾಗುವುದರಿಂದ ಮತ್ತೊಬ್ಬ ಆತ್ಮನಿಂದ ಗ್ರಾಹ್ಯವಾಗಿರುವುದರಿಂದ, ಆತ್ಮನಲ್ಲಿ ಸಮವಾಯ ಸಂಬಂಧದಿಂದ ಇಲ್ಲದಿರುವಪ್ರಯುಕ್ತ, ಅಹಂ ಸುಖೀ ಇತ್ಯಾದಿಗಳಂತೆಯೇ ಅಹಮರ್ಥದ ಸಂಬಂದವು ಇಲ್ಲದಿರುವುದರಿಂದ ಅಹಮರ್ಥದ ಸಂಬಂಧವಿಲ್ಲದಿರುವುದನ್ನು ಗ್ರಹಿಸುವುದರಿಂದ ರೂಪಾದಿಗಳಂತೆಯೇ. (೪) ಶಬ್ದಃ ನ ದಿಕ್ಕಾಲ ಮನಸಾಂ ಗುಣಃ ಪ್ರತ್ಯಕ್ಷತ್ವಾತ್ ವಿಶೇಷಗುಣತ್ವಾಚ್ಚ=ಶಬ್ದವು ದಿಕ್-ಕಾಲ-ಮನಸ್ಸು ಇವುಗಳ ಗುಣವಲ್ಲ. ಪ್ರತ್ಯಕ್ಷವಾಗಿರುವುದರಿಂದಲೂ, ವಿಶೇಷಗುಣವಾಗಿರುವುದರಿಂದಲೂ ಹೀಗೆ ಪ್ರಸಕ್ತಗಳಾದ ಪೃಥಿವೀಮೊದಲಾದ ಎಂಟು ದ್ರವ್ಯಗಳನ್ನು ಆಶ್ರಯಿಸಿಕೊಂಡಿಲ್ಲವೆಂದು ಸಿದ್ಧವಾಗಲು ಪರಿಶೇಷ ಪ್ರಮಾಣದಿಂದ ಈ ಎಂಟರಿಂದ ಅತಿರಿಕ್ತವಾದ ಆಕಾಶಾಖ್ಯದ್ರವ್ಯವು ಸಿದ್ಧಿಸುತ್ತದೆ. (7) ತಥಾಚ ಶಬ್ದಃ ಅಷ್ಟದ್ರವ್ಯಾತಿರಿಕ್ತದ್ರವ್ಯಾಶ್ರಿತಃ ತದ್ವೃತ್ತೌ ಬಾಧಕೋಪಪನ್ನತ್ವೇ ಸತಿ ಗುಣತ್ವಾತ್ ರೂಪವತ್=ಶಬ್ದವು ಪೃಥಿವೀ ಮೊದಲಾದ ಎಂಟು ದ್ರವ್ಯಗಳಿಂದ ಅತಿರಿಕ್ತವಾದ ಆಕಾಶಾಖ್ಯವಾದ ದ್ರವ್ಯವನ್ನು ಆಶ್ರಯಿಸಿಕೊಂಡಿದೆ, ಅವುಗಳಲ್ಲಿ ಇರಲಿಕ್ಕೆ ಬಾಧಕವಿದ್ದು ಗುಣವಾಗಿರುವುದರಿಂದ ರೂಪದಂತೆಯೇ, ಹೀಗೆ ಅನುಮಾನದಿಂದ ಆಕಾಶವು ಸಿದ್ಧಿಸುತ್ತದೆಂದರೆ— ಹಾಗೆ ಹೇಳಕೂಡದು. ಏಕೆಂದರೆ— ಜಾತಿಯಿಂದಲೇ (ಸ್ವಾಭಾವಿಕವಾಗಿಯೇ) ಕಿವುಡರಾದವರಿಗೆ ಆಕಾಶಾದಿಗಳ ಪ್ರತೀತಿಯೇ ಬಾರದೆ ಹೋಗಬೇಕಾಗುವುದು. ಅಂತೂ 'ಇಹ ಆಲೋಕಃ ನಾಸ್ತಿ' ಇಲ್ಲಿ ಪ್ರಕಾಶವಿಲ್ಲವೆನ್ನುವ ಪ್ರತೀತಿಯು ಬಾರದೆಹೋಗಬೇಕಾಗುವುದು. (8) ಮತ್ತು ವರ್ಣರೂಪವಾದ ಶಬ್ದವನ್ನು ಇಟ್ಟುಕೊಂಡರೆ ಅದಕ್ಕೆ ಗುಣತ್ವವೇ ಸಿದ್ಧವಾಗಲಿಲ್ಲ. ಧ್ವನ್ಯಾತ್ಮಕವಾದ

ಶಬ್ದವನ್ನು ಇಟ್ಟುಕೊಂಡರೆ ಆಶ್ರಯವಾದ ದ್ರವ್ಯವು ಸಿದ್ಧವಾದಾಗ್ಯೂ ಆಕಾಶವು ಸಿದ್ಧಿಸುವುದಿಲ್ಲ. ಪೃಥಿವ್ಯಾದಿಗಳ ಗುಣವೆಂದೇ ಕೂಡಬಹುದು. ಮತ್ತು ಸ್ಪರ್ಶವುಳ್ಳವುಗಳ ವಿಶೇಷಗುಣವೆಂದು ಇಟ್ಟುಕೊಂಡರೂ, ಶ್ರೋತ್ರೇಂದ್ರಿಯವು ವಾಯುವೀಯವೆಂದು ಇಟ್ಟುಕೊಂಡರೂ ಯಾವ ಬಾಧಕವೂ ಇಲ್ಲ. (9) ಮತ್ತು ಶಬ್ದವು ಆತ್ಮಗುಣವೆಂದೇ ಏಕೆ ಆಗಲಾರದು? ಧರ್ಮಾದಿಗಳು ಪ್ರತ್ಯಕ್ಷಗಳಾಗದಿದ್ದರೂ ಸುಖಾದಿಗಳು ಪ್ರತ್ಯಕ್ಷವಾಗುವಂತೆ ಶಬ್ದಕ್ಕೆ ಬಾಹ್ಯೇಂದ್ರಿಯಪ್ರತ್ಯಕ್ಷತ್ವವು ಕೂಡಬಹುದು. ಇತ್ಯಾದಿ ಅನೇಕ ದೋಷಗಳು ಬರುವುದರಿಂದ ಶಬ್ದವು ಪೃಥಿವ್ಯಾದಿಗಳನ್ನು ಆಶ್ರಯಿಸಿಕೊಂಡಿಲ್ಲವೆಂದು ಹೇಳಿದ ಪರಿಶೇಷವು ಕೂಡುವುದಿಲ್ಲ. (10) ಪರಿಶೇಷಾನುಮಾನವು ಎಂಟು ದ್ರವ್ಯಗಳಿಂದ ಅತಿರಿಕ್ತವಾದ ದ್ರವ್ಯವು ಅಪ್ರಸಿದ್ಧವಾಗಿರುವುದರಿಂದ ಅಪ್ರಸಿದ್ಧವಿಶೇಷಣವುಳ್ಳದ್ದು. ಪ್ರಸಿದ್ಧಿಯಿದ್ದರೆ ಅನುಮಾನವು ವ್ಯರ್ಥವೂ ಆದಕಾರಣ ಅನುಮಾನದಿಂದ ಆಕಾಶಾಖ್ಯದ್ರವ್ಯವು ಸಿದ್ಧಿಸುವುದಿಲ್ಲ.

(11) ಅಥವಾ ಅನುಮಾನದಿಂದ ಶಬ್ದಗುಣಕವಾದ ಆಕಾಶವು ಸಿದ್ಧಿಸಲಿ, ಆದಾಗ್ಯೂ ಅವ್ಯಾಕೃತಾಕಾಶಸಿದ್ಧಿಯು ಸಾಕ್ಷಿಯಿಂದಲೇ ಸರ್ವಥಾ ಅವ್ಯಾಕೃತಾಕಾಶವನ್ನು ಸಾಧಿಸತಕ್ಕ ಲಿಂಗವೇ ಇಲ್ಲ. ಆಕಾಶವು, ೧ ಭೂತಾಕಾಶವು ೨ ಅವ್ಯಾಕೃತಾಕಾಶವು ಹೀಗೆ ಎರಡುವಿಧವದೆ ಎಂದು ವಿಯದಧಿಕರಣದಲ್ಲಿ ಹೇಳುವೆವು. (12) ಹುಟ್ಟುವಾಗಲೇ ಕಿವುಡರಾದವರಿಗೂ ಆಕಾಶವು ತೋರುವುದರಿಂದ ಆಕಾಶವಿಷಯದಲ್ಲಿ ಆಗಮವೂ ಪ್ರಮಾಣವಲ್ಲ. ಆದಪ್ರಯುಕ್ತ ಆಕಾಶವು ಸಾಕ್ಷಿಪ್ರತ್ಯಕ್ಷದಿಂದಲೇ ಸಿದ್ಧವಾಗುವುದು. (13) ಆಕಾಶಭಾಗಗಳೇ ದಿಕ್ಕುಗಳು; ದ್ರವ್ಯಾಂತರವಲ್ಲ. ಆದುದರಿಂದ ದಿಕ್ಕುಗಳೂ ಸಾಕ್ಷಿಸಿದ್ಧಗಳೇ. ಹೀಗೆಯೇ ಕಾಲಪ್ರಕೃತಿಗಳೂ ಸಾಕ್ಷಿಸಿದ್ಧಗಳು. (14) ಹಾಗಾದರೆ ಆಕಾಶಾದಿಗಳು ಸಾಕ್ಷಿಸಿದ್ಧಗಳಾಗಲಿ. ಅಷ್ಟರಿಂದ ಅವುಗಳಿಗೆ ಕಾಲತ್ರಯದಲ್ಲಿಯೂ ಬಾಧವಿಲ್ಲದಿರುವ ಎನ್ನುವ ಸತ್ವವು ಸಿದ್ಧಿಸುವುದಿಲ್ಲ. ಶುಕ್ತಿರಜತಾದಿಗಳು ಪ್ರತೀತಗಳಾದಾಗ್ಯೂ ಅವುಗಳಿಗೆ ಬಾಧವು ದೃಷ್ಟವಾಗಿದೆ ಎಂದರೆ— ಸಾಕ್ಷಿಗೆ ದೋಷವಿಲ್ಲದಿರುವುದರಿಂದ ಸಾಕ್ಷಿಸಿದ್ಧವಾದುದಕ್ಕೆ ಯಾವಕಾಲದಲ್ಲಿಯೂ ಬಾಧ್ಯತ್ವವಿಲ್ಲ. ಅಂದರೆ ಜ್ಞಾನಗಳ ಪ್ರಾಮಾಣ್ಯವು ಕಾರಣದಲ್ಲಿರತಕ್ಕ ಸಹಜಶಕ್ತಿಯಿಂದಲೇ ಲಬ್ಧವಾದುದು. ಅಪ್ರಾಮಾಣ್ಯವಾದರೂ ಜ್ಞಾನೋತ್ಪಾದಕಗಳಲ್ಲಿ ದೋಷಾಹಿತವಾದ ಆಗಂತುಕ ಶಕ್ತಿಯು ಬಲದಿಂದ ಹುಟ್ಟುವುದು. ಸಾಕ್ಷಿಜ್ಞಾನವು ಅನಾದಿಯಾಗಿರುವುದರಿಂದ ದೋಷದಿಂದ ಹುಟ್ಟತಕ್ಕುದು ಅಲ್ಲ. ಕಾರಣವಿಲ್ಲದೇನೇ ಅಯಥಾರ್ಥವಾಗುವುದಾದರೆ ಮುಕ್ತ್ಯವಸ್ಥಾಕಾಲಿಕ ಸಾಕ್ಷಿಗೂ ದೋಷಜನ್ಯತ್ವವು ಬರಬೇಕಾಗುವುದು. ಅವಿದ್ಯಾದೋಷಸಂಸರ್ಗದಿಂದ ಸಾಕ್ಷಿಗೆ ಕಾಲತ್ರಯಬಾಧ್ಯತ್ವರೂಪವಾದ ಸತ್ಯತ್ವವು ತೋರುತ್ತದೆ ಎಂದು ಹೇಳಕೂಡದು. ನಿಮ್ಮ ಮತದಲ್ಲಿ ಅವಿದ್ಯಾಸಂಬಂಧವೇ ಅನುಪಪನ್ನವೆಂದು **'ನಿರ್ವಿಶೇಷೇ ಸ್ವಯಂ ಭಾತೇ ಕಿಮಜ್ಞಾನಾವೃತಂ ಭವೇತ್'** ಇತ್ಯಾದಿಗಳಿಂದಲೂ **'ಸಾ ಮಂದದೃಷ್ಟಿಸ್ತಸ್ಯೈವ ಬ್ರಹ್ಮಣಃ ಕಿಂ ತತೋಽನ್ಯಗಾ'** ಇತ್ಯಾದಿಗಳಿಂದಲೂ ಪ್ರತಿಪಾದಿತವಾಗಿದೆ. ನಾವಾದರೂ ಅವಿದ್ಯೆಯು ಜೀವಸ್ವರೂಪಭೂತವಾದ ಆನಂದಾದಿ ಪ್ರಕಾಶಗಳ ಪ್ರತಿಬಂಧರೂಪವಾದ ಆವರಣವೆಂದಂಗೀಕರಿಸಿರುವೆವು ॥ ೯೭ ॥

(1) ಹಾಗಾದರೆ ಗಗನಾದಿಸ್ವರೂಪವು ಸಾಕ್ಷಿಪ್ರತ್ಯಕ್ಷಸಿದ್ಧವು. ಗಗನಾದಿಗಳಿಗೆ ಕಾಲತ್ರಯಾಬಾಧ್ಯತ್ವವಾದರೂ ಸಾಕ್ಷಿನಿಷ್ಠವಾದುದು ಯಾವುದುಪ್ರಾಮಾಣ್ಯವೋ ಅದನ್ನು ಗ್ರಹಿಸತಕ್ಕ ಪ್ರಮಾಣಾಂತರದಿಂದಲೇ ಆಗುವುದು ಎಂದು ಪ್ರಾಪ್ತವಾಯಿತು. ಅಬಾಧ್ಯವಿಷಯತ್ವವೇ ಪ್ರಾಮಾಣ್ಯವು. ಅಂತೂ 'ಸತ್ಯತ್ವಂ ಗಗನಾದೇಶ್ಚ' ಎಂದು ಹೇಳಿದ್ದು ಅಯುಕ್ತವೆಂದರೆ

(2) ಅಥವಾ ಗಗನಾದಿಗಳ ಸ್ವರೂಪವು ಸಾಕ್ಷಿಸಿದ್ಧವು. ಗಗನಾದಿಗಳಿಗೆ ಕಾಲತ್ರಯದಲ್ಲಿ ಅಬಾಧ್ಯತ್ವವಾದರೂ ಸಾಕ್ಷಿನಿಷ್ಠಪ್ರಾಮಾಣ್ಯಗ್ರಹಣದ್ವಾರಾ ಸಿದ್ಧಿಸುತ್ತದೆಂದು ಉಕ್ತವಾಗಿದೆ. ಈಗ ಸಾಕ್ಷೀಂದ್ರಿಯವು ಕಾಲತ್ರಯದಲ್ಲಿರತಕ್ಕ ಅಬಾಧ್ಯಾರ್ಥವನ್ನು ವಿಷಯೀಕರಿಸುತ್ತದೆಂದು '**ಅತೀತಾನಾಗತೌ ಕಾಲಾವಪಿ ನಾಸಾಕ್ಷಿಗೋಚರೌ**' ಇತ್ಯಾದಿಗಳಿಂದ ಹೇಳುವಪ್ರಯುಕ್ತ ಸರ್ವಕಾಲದಲ್ಲಿಯೂ ಬಾಧವಿಲ್ಲವೆಂದೇ ಗಗನಾದಿಗಳನ್ನು ವಿಷಯೀಕರಿಸುತ್ತದೆನ್ನುತ್ತಾರೆ—

**ಮೂ ॥ ಸರ್ವಕಾಲೇಷ್ವಬಾಧ್ಯತ್ವಂ ಸಾಕ್ಷಿಣೈವ ಪ್ರತೀಯತೇ ।**
**ಕಾಲೋ ಹಿ ಸಾಕ್ಷಿಪ್ರತ್ಯಕ್ಷಃ ಸುಷುಪ್ತೌ ಚ ಪ್ರತೀತಿತಃ ॥ ೯೮ ॥**

ಅ ॥ ಸರ್ವಕಾಲೇಷು = ಎಲ್ಲಾ ಕಾಲಗಳಲ್ಲಿಯೂ, ಅಬಾಧ್ಯತ್ವಂ = ಗಗನಾದಿಗಳಿಗೆ ಅಬಾಧ್ಯತ್ವವು, ಸಾಕ್ಷಿಣೈವ = ಜೀವಸ್ವರೂಪಭೂತವಾದ ಇಂದ್ರಿಯದಿಂದಲೇ, ಪ್ರತೀಯತೇ= ತೋರುತ್ತದೆ. (ಕಾಲವೇ ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ. ಸರ್ವಕಾಲಗಳಲ್ಲಿಯೂ ಅಬಾಧ್ಯತ್ವವು ಸಾಕ್ಷಿಗೆ ಹೇಗೆ ತೋರುವುದೆಂದರೆ) ಸುಷುಪ್ತೌ ಚ= ಸುಷುಪ್ತಿಕಾಲದಲ್ಲಿ ಆದರೂ, ಪ್ರತೀತಿತಃ=ತೋರುವುದರಿಂದ, ಕಾಲಃ=ಕಾಲವು, ಸಾಕ್ಷಿಪ್ರತ್ಯಕ್ಷವಿಷಯವು.

**ತಾ ॥ ನ್ಯಾಯಸುಧಾ—** (1) ಸಾಕ್ಷೀಂದ್ರಿಯವೇ ಸಾಕ್ಷಿನಿಷ್ಠವಾದ ಪ್ರಾಮಾಣ್ಯ ಗ್ರಾಹಕವೆಂದು '**ಯದಿ ಸಾಕ್ಷೀ ಸ್ವಯಂಭಾತೋ ನ ಮಾನಂ ಕೇನ ಗಮ್ಯತೇ । ಅಕ್ಷಜಾದೇಶ್ಚ ಮಾನತ್ವಮನವಸ್ಥಾನ್ಯಥಾ ಭವೇತ್**' ಇತ್ಯಾದಿಗಳಿಂದ ಹೇಳುವರು. (2) ಸುಷುಪ್ತಿಕಾಲದಲ್ಲಿ ಇಂದ್ರಿಯಗಳು ಉಪರತಗಳಾಗಿರುವುದರಿಂದ ಬಾಹ್ಯ-ಪ್ರತ್ಯಕ್ಷ ಅನುಮಾನ-ಆಗಮಗಳಿಗೆ ಆಗ ಪ್ರವೃತ್ತಿಯಿಲ್ಲ. ಆವಾಗಲೂ ಕಾಲಕ್ಕೆ ಪ್ರತೀತಿಯಿದೆ. ಹೇಗೆಂದರೆ 'ಏತಾವಂತಂ ಕಾಲಂ ಸುಖಮಹಮಸ್ವಾಪ್ಸಂ' ಇಷ್ಟುಕಾಲತನಕ ನಾನು ಸುಖವಾಗಿ ಮಲಗಿದೆನು ಎಂದು ಸುಷುಪ್ತಿಯಿಂದ ಎಚ್ಚತ್ತವನಿಗೆ ಪರಾಮರ್ಶವು ದೃಷ್ಟವಾಗಿದೆ. ಅನುಭೂತವಾಗದಿರುವುದಕ್ಕೆ ಪರಾಮರ್ಶವು ಕೂಡಲಾರದು. ಆದಕಾರಣ ಪರಿಶೇಷಪ್ರಮಾಣದಿಂದ ಕಾಲವು ಸಾಕ್ಷಿವೇದ್ಯವೆಂದೇ ತಿಳಿಯುತ್ತದೆ. (3) ತಥಾ ಚ ಕಾಲಃ ಬಾಹ್ಯಪ್ರತ್ಯಕ್ಷಾದ್ಯತಿರಿಕ್ತಪ್ರಮಾಣವೇದ್ಯಃ ಅಸತ್ಸ್ವಪಿ ತೇಷು ಪ್ರತೀಯಮಾನತ್ವಾತ್ ಯದ್ಯಸ್ಮಿನ್ನಸತಿ ಪ್ರತೀಯತೇ ತತ್ತತೋಽತಿರಿಕ್ತ ಪ್ರಮಾಣವೇದ್ಯಂ ಯಥಾಽಸತಿ ಚಕ್ಷುಷಿ ಪ್ರತೀಯಮಾನಃ ಗಂಧಃ ತದತಿರಿಕ್ತಘ್ರಾಣವೇದ್ಯಃ= ಕಾಲವು ಬಾಹ್ಯಪ್ರತ್ಯಕ್ಷಾದಿಗಳಿಂದ ಅತಿರಿಕ್ತವಾದ ಪ್ರಮಾಣಗಳಿಂದ ತಿಳಿಯಲ್ಪಡುತ್ತದೆ. ಬಾಹ್ಯಪ್ರತ್ಯಕ್ಷಾದಿಗಳು ಇಲ್ಲದಿದ್ದರೂ ಕಾಲವು ತೋರುವುದರಿಂದ ಯಾವುದು ಇಲ್ಲದಿರುವಾಗ ಯಾವುದು ತೋರುತ್ತದೋ ಅದು ಅದರಿಂದ ಅತಿರಿಕ್ತವಾದ ಪ್ರಮಾಣದಿಂದ ತಿಳಿಯಲ್ಪಡುತ್ತದೆ. ಉದಾ=ಚಕ್ಷುಸ್ಸು ಇಲ್ಲದಿರುವಾಗ ತೋರತಕ್ಕ ಗಂಧವು ಚಕ್ಷುಸ್ಸಿನಿಂದ ಇತರವಾದ ಘ್ರಾಣೇಂದ್ರಿಯದಿಂದ ವೇದ್ಯವಾಗುತ್ತದೆ ॥ ೯೮ ॥

ಹಾಗಾದರೆ ಸುಷುಪ್ತಿಕಾಲದಲ್ಲಿ ಅನುಭೂತವಾದುದಕ್ಕೆ ಇದು ಪರಾಮರ್ಶವಾಗಿದ್ದರೆ ಇದು ಹೀಗಾಗುತ್ತಿತ್ತು. ಅದಕ್ಕೆ ಪರಾಮರ್ಶವಲ್ಲ. ಮತ್ತೆ ಆವಾಗಲೇ ಅತೀತವಾದ ಸುಷುಪ್ತಿಕಾಲವನ್ನು ಅನುಭವಿಸಿ ಸುಷುಪ್ತಿಕಾಲದಲ್ಲಿದ್ದ ದುಃಖಾಭಾವವು ಅನುಮಿತವಾಗುತ್ತದೆಂದರೆ—

**ಮೂ ॥ ಅತೀತಾನಾಗತೌ ಕಾಲಾವಪಿ ನಾಸಾಕ್ಷಿಗೋಚರೌ ॥ ೯೯ ॥**
**ಪಕ್ಷೀಕರ್ತುಮಶಕ್ಯತ್ವಾನ್ನಾನುಮಾ ತತ್ರ ವರ್ತತೇ ।**
**ತದೇತದಿತಿ ಸರ್ವಂ ಚ ದೃಶ್ಯಂ ವಾ ಸ್ಮೃತಿಗೋಚರಂ ॥ ೧೦೦ ॥**

**ಸಾಕ್ಷಿಸಿದ್ಧೇನ ಕಾಲೇನ ಖಚಿತಂ ಹ್ಯೇವ ವರ್ತತೇ ।**
**ತಸ್ಮಾನ್ನ ತಂ ವಿನಾ ಕಿಂಚಿತ್ಸ್ಮರ್ತುಂ ದ್ರಷ್ಟುಮಥಾಪಿ ವಾ ॥ ೧೦೧ ॥**
**ಶಕ್ಯಂ ತನ್ನಿತ್ಯಸಿದ್ಧೇರ್ಹಿ ನಾನುಮಾಽವಸರೋ ಭವೇತ್ ॥**
**ಅತೋಽದೋಷಪ್ರತೀತಸ್ಯ ಸತ್ಯತ್ವಂ ಸಾಕ್ಷಿಣಾ ಮತಂ ॥ ೧೦೨ ॥**

**ಅ** ॥ ಅತೀತಾನಾಗತೌ ಕಾಲೌ ಅಪಿ = ಭೂತಭವಿಷ್ಯತ್ಕಾಲಗಳೂ ಕೂಡ, ಅಸಾಕ್ಷಿಗೋಚರೌ ನ = ಸಾಕ್ಷೀತರಪ್ರಮಾಣವೇ ವಿಷಯವಾಗಿವುಳ್ಳವುಗಳಲ್ಲ. (ಅಂದರೆ ನಿದ್ರೆಯಿಂದ ಎಚ್ಚತ್ತವನಿಗೆ ೧ ಸಾಕ್ಷಿಯಿಂದ ಅತೀತಕಾಲದ ಅನುಭವವನ್ನು ಅಂಗೀಕರಿಸಿ ಸುಖಪರಾಮರ್ಶವನ್ನು ನಿರಾಕರಿಸುವುದೋ? ೨ ಪ್ರಮಾಣಾಂತರದಿಂದಲೋ? ೧ನೇ ಕಲ್ಪದಲ್ಲಿ ನಮ್ಮ ಇಷ್ಟವು ಸಿದ್ಧವಾಯಿತು. ಪರರೂ ಕೂಡ ಕಾಲವು ಸಾಕ್ಷಿವೇದ್ಯವೆಂದೇ ಅಂಗೀಕರಿಸಿದ ಹಾಗೆ ಆಯಿತು. ೨ನೇ ಕಲ್ಪದಲ್ಲಿ ಅಂದರೆ ಪ್ರಮಾಣಾಂತರದಿಂದ ಎಂದರೆ ಭೂತಭವಿಷ್ಯತ್ಕಾಲಗಳೂ ಕೂಡ ಸಾಕ್ಷೀತರಪ್ರಮಾಣವಿಷಯಗಳಲ್ಲ. ಅಥವಾ ಸುಷುಪ್ತಿಕಾಲದಲ್ಲಿರತಕ್ಕ ಪ್ರತೀತಿಯ ಬಲದಿಂದ ವರ್ತಮಾನ ಕಾಲವು ಸಾಕ್ಷಿವೇದ್ಯವಾಗಲಿ, ಭೂತಭವಿಷ್ಯತ್ಕಾಲಗಳಾದರೂ ಸಾಕ್ಷೀಂದ್ರಿಯವೇದ್ಯಗಳಾಗದಿರುವುದರಿಂದ ಕಾಲತ್ರಯದಲ್ಲಿಯೂ ಬಾಧಾಭಾವವು ಸಾಕ್ಷೀಂದ್ರಿಯದಿಂದ ಜಗತ್ತಿಗೆ ಹೇಗೆ ಸಿದ್ಧಿಸುವುದೆಂದರೆ) ಅತೀತಾನಾಗತೌ ಕಾಲೌ = ಭೂತಭವಿಷ್ಯತ್ಕಾಲಗಳೂ, ಅಪಿ = ನ ಕ್ಷಿಪ್ರತ್ಯಕ್ಷಗಳೂ ಕೂಡ, ನಾಸಾಕ್ಷಿಗೋಚರೌ = ಸಾಕ್ಷೀತರಪ್ರಮಾಣಾಗೋಚರಗಳು. (ಅಂದರೆ ಅತೀತಾನಾಗತ ಕಾಲಗಳೂ ಪ್ರತೀತಗಳೇ ಆಗಿವೆ. ಆದ ಕಾರಣ ಸಾಕ್ಷಿಗೆ ಗೋಚರಗಳಾಗಿವೆ.) (ಅದು ಹೇಗೆ ಕೂಡುತ್ತದೆಂದು ಹೇಳಕೂಡದು. ರೂಪವಿಲ್ಲದಿರುವ ದ್ರವ್ಯವಾಗಿರುವುದರಿಂದ ಚಾಕ್ಷುಷಸಾಮಗ್ರಿಯು ಇಲ್ಲದಿರುವ ಪ್ರಯುಕ್ತ ಕಾಲವುಪ್ರತ್ಯಕ್ಷವೇದ್ಯವಲ್ಲವೆಂದು ಹೇಳಲ್ಪಟ್ಟದೆ. ೨ ಸ್ವಾಭಾವಿಕವಾದ ಕಿವುಡರಿಗೂ ತೋರುವುದರಿಂದ ಕಾಲವು ಆಗಮವೇದ್ಯವೂ ಅಲ್ಲ. ೩ ಅನುಮಾನವೂ ಕಾಲವನ್ನೇ ಪಕ್ಷವನ್ನಾಗಿ ಇಟ್ಟುಕೊಂಡು ಪ್ರವೃತ್ತವಾಗುತ್ತದೋ, ಬೇರೆ ಯಾವುದನ್ನಾದರೂ ಪಕ್ಷವನ್ನಾಗಿ ಇಟ್ಟುಕೊಂಡು ಪ್ರವೃತ್ತವಾಗುತ್ತದೋ, ೧ನೇದಕ್ಕೆ ಕಾಲವನ್ನೇ ಪಕ್ಷೀಕರಿಸಿ ಪ್ರವೃತ್ತವಾಗುತ್ತದೆನ್ನುವುದು ಕೂಡಲಾರದೆನ್ನುತ್ತಾರೆ.)(ಕಾಲವು ಅಸಿದ್ಧವಾದರೆ ಆಶ್ರಯಾಸಿದ್ಧಿಯು, ಸಿದ್ಧವಾದರೆ ಸಿದ್ಧಸಾಧನವು, ಆದುದರಿಂದ) ಪಕ್ಷೀಕರ್ತುಂ = ಪಕ್ಷೀಕರಿಸಲಿಕ್ಕೆ, ಅಶಕ್ಯತ್ವಾತ್ = ಅಶಕ್ಯವಾಗಿರುವುದರಿಂದ (೨ನೇದಕ್ಕೂ ಇದೇವೇ ಉತ್ತರವು.) ಪಕ್ಷೀಕರ್ತುಂ. ಅತಕ್ಯತ್ವಾತ್ = ಕಾಲಜ್ಞಾನವಿಲ್ಲದೆ ಪಕ್ಷವನ್ನಾಗಿ ಮಾಡಲಿಕ್ಕೆ ಶಕ್ಯವಾಗದಿರುವುದರಿಂದಲೂ ವ್ಯಾಪ್ತಿಸ್ಮರಣ ಪಕ್ಷಧರ್ಮತಾ ಜ್ಞಾನಗಳು ಕೂಡದಿರುವುದರಿಂದ, ತತ್ರ = ಆ ಕಾಲವಿಷಯದಲ್ಲಿ, ಅನುಮಾ = ಅನುಮಾನವು, ನ ವರ್ತತೇ = ಇರುವುದಿಲ್ಲ. ಹಿ = ಯಾವ ಕಾರಣದಿಂದ, ತದಿತಿ ಸ್ಮೃತಿಗೋಚರಂ = ಅದು ಎಂದು ಸ್ಮೃತಿಗೆ ವಿಷಯವಾದುದು, ಏತದಿತಿ ದೃಶ್ಯಂ ವಾ = ಅತಿ ಸಮೀಪದಲ್ಲಿದ್ದ ಇದು ಎಂದು ಕಾಣತಕ್ಕ, ಸರ್ವಂ ಚ = ಎಲ್ಲವೂ, ಸಾಕ್ಷಿಸಿದ್ಧೇನ ಕಾಲೇನ = ಸಾಕ್ಷಿಪ್ರತ್ಯಕ್ಷದಿಂದ ಸಿದ್ಧವಾದ ಕಾಲದಿಂದ, ಖಚಿತಮೇವ = ಸಂಬದ್ಧವಾಗಿಯೇ, ವರ್ತತೇ = ಇರುತ್ತದೆ. ತಸ್ಮಾತ್ = ಆದಕಾರಣ, ತಂ ವಿನಾ = ಕಾಲಪ್ರತೀತಿಯಿಲ್ಲದೆ, ಕಿಂಚಿತ್ = ವ್ಯಾಪ್ತ್ಯಾದಿಗಳನ್ನು, ಸ್ಮರ್ತುಂ ವಾ = ಸ್ಮರಿಸುವುದಕ್ಕಾಗಿ ಆಗಲಿ, ಅಥಾಪಿ = ಆದಾಗ್ಯೂ, ದ್ರಷ್ಟುಮಪಿ ವಾ = ಧರ್ಮಿ ಮೊದಲಾದುದನ್ನು ನೋಡುವುದಕ್ಕಾಗಿ ಆಗಲೀ, ನ ಶಕ್ಯಂ = ಶಕ್ಯವಲ್ಲ. ತನ್ನಿತ್ಯಸಿದ್ಧೇರ್ಹಿ = ಕಾಲಕ್ಕೆ ನಿತ್ಯದಲ್ಲಿಯೂ ಸಿದ್ಧಿಯಿದ್ದುದರಿಂದ ಅಂದರೆ ವ್ಯಾಪ್ತ್ಯಾದಿಗಳನ್ನು ಗ್ರಹಿಸುವ ಕಾಲದಲ್ಲಿಯೇ ಸಾಕ್ಷಿಯಿಂದ ಸಿದ್ಧವಾಗಿರುವುದರಿಂದ ಅನುಮಾವಸರಃ = ಕಾಲಾನು

ಮಾನಕ್ಕೆ ಅವಕಾಶವು, ನ ಭವೇತ್=ಆಗಲಾರದು. (ಆಕಾಶ ಮೊದಲಾದ ಎಲ್ಲಾ ಜಗತ್ತುಗಳಿಗೆ ಕಾಲತ್ರಯದಲ್ಲಿ ಅಬಾಧ್ಯತ್ವವು ಸಾಕ್ಷಿಸಿದ್ಧವು ಎಂದು ಹೇಳಿದ ಅರ್ಥವನ್ನು ಉಪಸಂಹಾರ ಮಾಡುತ್ತಾ ವಿವರಿಸುತ್ತಾರೆ.) ಅತಃ=ಆದಕಾರಣ, ಅದೋಷಪ್ರತೀತಸ್ಯ=ಯಾವ ಜ್ಞಾನಕ್ಕೆ ದೋಷವು ಕಾರಣವಲ್ಲವೋ ಆ ಜ್ಞಾನದಿಂದ ವಿಷಯೀಕೃತಗಳಾದ ಅಥವಾ ಪ್ರತ್ಯಕ್ಷಾದಿಗಳಿಂದ ತಿಳಿಯಲ್ಪಟ್ಟ ಆಕಾಶ ಮೊದಲಾದ ಪ್ರಪಂಚಗಳಿಗೆ, ಸತ್ಯತ್ವಂ=ತ್ರೈಕಾಲಿಕಾಬಾಧ್ಯತ್ವವು, ಸಾಕ್ಷಿಣಾ=ಸಾಕ್ಷಿಯಿಂದ, ಮತಂ=ಪ್ರಾಮಾಣ್ಯಗ್ರಹಣಾದಿಗಳಿಂದ ಸಿದ್ಧವಾಗಿದೆ.

**ತಾ || ಸ. ರ. ವಿ.**— (1) ಚಕ್ಷುರಾದಿ ಇಂದ್ರಿಯಗಳಲ್ಲಿ ಇದ್ದಂತೆಯೇ ಕಾದಾಚಿತ್ಕವಾದ ಕಾಚಮೊದಲಾದ ದೋಷವು ಸಾಕ್ಷಿಯಲ್ಲಿ ಕೂಡುವುದೇ ಇಲ್ಲವು. ಆದುದರಿಂದ ಕೇವಲ ಸಾಕ್ಷಿವೇದ್ಯವಾದುದಕ್ಕೆ ಮಿಥ್ಯಾತ್ವವನ್ನು ಹೇಳಲಿಕ್ಕೆ ಶಕ್ಯವಾಗುವುದಿಲ್ಲ. ಎಲ್ಲಾ ವಸ್ತುಗಳಿಗೂ ಸಾರ್ವಕಾಲಿಕಾಬಾಧ್ಯತ್ವವು ಕೇವಲ ಸಾಕ್ಷಿವೇದ್ಯವಷ್ಟೆ! ಹೇಗೆಂದರೆ— ಕಾಲವಾದರೂ ಕೇವಲ ಸಾಕ್ಷಿವೇದ್ಯವು. ಎಲ್ಲಾ ಇಂದ್ರಿಯಗಳ ವ್ಯಾಪಾರಕ್ಕೆ ಉಪರತಿಬರುವಾಗ ಸುಷುಪ್ತಿಕಾಲದಲ್ಲಿಯೂ ಕಾಲವು ತೋರುವುದರಿಂದ ಅನುಮೇಯವಲ್ಲ. ಕಾಲವು ಸುಷುಪ್ತಿಕಾಲದಲ್ಲಿ ತೋರದಿದ್ದರೆ 'ಏತಾವಂತಂ ಕಾಲಂ ಸುಖಮಹಮಸ್ವಾಪ್ಸಂ' ಇಷ್ಟುಕಾಲತನಕ ನಾನು ಸುಖವಾಗಿ ಮಲಗಿರುವೆನು ಎಂದು ಉತ್ತರಕಾಲಿಕವಾದ ಸ್ಮೃತಿಯು ಬಾರದೆ ಹೋಗುವುದು. ಅನುಭೂತವಾಗದಿರುವುದು ಸ್ಮೃತವಾಗಲಾರದು. (2) ಕಾಲವಿಷಯದಲ್ಲಿ ಅನುಮಾನವೇ ಪ್ರಮಾಣವು ಎಂದು ಹೇಳಕೂಡದು. ಕಾಲಸಾಧಕವಾದ ಹೇತುವೇ ಇರುವುದಿಲ್ಲ. ಯೌಗಪದ್ಯಾದಿ ಪ್ರತ್ಯಯವು ಲಿಂಗವೆಂದೂ ಹೇಳಕೂಡದು. ಆ ಪ್ರತ್ಯಯದಲ್ಲಿಯೂ ಕಾಲವೇ ವಿಷಯವು. ಪ್ರತ್ಯಕ್ಷವಿಷಯವಾದುದೂ ಪ್ರತ್ಯಕ್ಷವಾಗದಿರುವುದಾದರೆ ಘಟವೂ ಪ್ರತ್ಯಕ್ಷವಾಗದೆ ಇರಬೇಕಾಗುವುದು. (3) 'ಏತದಸ್ತಿ' ಎನ್ನುವ ಪ್ರತ್ಯಕ್ಷ-ಪ್ರತೀತಿಯಲ್ಲಿ ಸತ್ವವು ವಿಶೇಷಣವಾಗಿ ಕಾಲವು ತೋರುತ್ತದೆ. ಭೂತಭವಿಷ್ಯತ್ಕಾಲಗಳಿಗೆ ಪ್ರತ್ಯಕ್ಷತ್ವವಿಲ್ಲವಾದರೆ ಸಾಧ್ಯಸಾಧನಗಳಿಗೆ ವ್ಯಾಪ್ತಿಗ್ರಹಣವೇ ಇಲ್ಲದಿರುವುದರಿಂದ ಅನುಮಾನಕ್ಕೇನೇ ಉಚ್ಛೇದವು ಬರಬೇಕಾಗುವುದು. ಏಕೆಂದರೆ, ಭೂತಭವಿಷ್ಯದ್ವರ್ತಮಾನಧೂಮಗಳಿಗೆ ಅಗ್ನಿಯಿಂದ ವ್ಯಾಪ್ತಿಯನ್ನು ಪ್ರತ್ಯಕ್ಷದಿಂದ ನಿಶ್ಚಯಿಸಿಕೊಂಡವನಿಗೇನೇ ಧೂಮಜ್ಞಾನದಿಂದ ಅಗ್ನಿಜ್ಞಾನವು ಹುಟ್ಟುತ್ತದೆ. ಇಲ್ಲವಾದರೆ ಹುಟ್ಟಲಾರದು. ಆದಕಾರಣ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಪ್ರತ್ಯಕ್ಷದಿಂದ ಜಗತ್ತಿಗೆ ಅಬಾಧ್ಯತ್ವಜ್ಞಾನವು ಯುಕ್ತವು.

**ಸ. ಚ. ವಿ.**— (1) ಜಗತ್ತಿಗೆ ಸತ್ಯತ್ವವನ್ನು ಗ್ರಹಿಸತಕ್ಕ ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವನ್ನು ಗ್ರಹಿಸತಕ್ಕ ಸಾಕ್ಷಿಯಿಂದಲೇ ಜಗತ್ತಿಗೆ ಸರ್ವಕಾಲಗಳಲ್ಲಿಯೂ ಅಬಾಧ್ಯತ್ವವು ತೋರುತ್ತದೆ. ಸುಷುಪ್ತಿಕಾಲದಲ್ಲಿ ಎಲ್ಲಾ ಇಂದ್ರಿಯಗಳಿಗೂ ಉಪರತಿಯಾಗಿರುವುದರಿಂದ ಪ್ರತ್ಯಕ್ಷಾದಿಗಳಿಗೆ ಪ್ರವೃತ್ತಿಯಾಗದಿದ್ದರೂ ಕಾಲವು ತೋರುವುದರಿಂದ 'ಇಯಂತಂ ಕಾಲಂ ಸುಖಮಹಮಸ್ವಾಪ್ಸಂ' ಎಂದು ಎಚ್ಚತ್ತವನಿಗೆ ಪರಾಮರ್ಶವಿರುವುದರಿಂದ ಸುಷುಪ್ತಿಕಾಲದಲ್ಲಿಯೂ ಕಾಲಾನುಭವವು ಇದೆ ಎಂದು ತಿಳಿಯುತ್ತದೆ. (2) ಹಾಗಾದರೆ, 'ಶ್ವಃ ಚರಿಷ್ಯಾಮಿ' ನಾಳೆ ಸಂಚರಿಸುವೆನು ಎನ್ನುವಲ್ಲಿ ಉತ್ತರಕಾಲವನ್ನು ತೆಗೆದುಕೊಂಡಂತೆಯೇ ಈ ಪರಾಮರ್ಶವು ಅನುಭೂತವಿಷಯಕವಲ್ಲ. ಮತ್ತೆ ಅನುಮಾನರೂಪವು. 'ವಿಮತಃ ಕಾಲಾಂತರವಾನ್ ಕಾಲತ್ವಾತ್ ಸಂಪ್ರತಿಪನ್ನ ಕಾಲವತ್' ಎಂದಾಶಂಕಿಸಿದರೆ— ಈ ಪಕ್ಷೀಕ್ರಿಯಮಾಣವಾದ ಕಾಲವು ೧ ಸಾಮಾನ್ಯರೂಪವೋ, ೨ ವಿಶಿಷ್ಟರೂಪವೋ? ೧ ಸಾಮಾನ್ಯರೂಪವಾದರೆ ಪೂರ್ವೋತ್ತರ

ಕಾಲಗಳೂ ಪಕ್ಷದಲ್ಲಿಯೇ ಸೇರಿರುವುದರಿಂದ ಸಾಧ್ಯಧರ್ಮದಲ್ಲಿಯೇ ಅಂತರ್ಭೂತವಾಗುವುದರಿಂದ ಅದರಿಂದ ವಿಶಿಷ್ಟನಾದ ಧರ್ಮಿಯಾದ ಬ್ರಹ್ಮನೇ ಪಕ್ಷನಾದಪ್ರಯುಕ್ತ ಪಕ್ಷೀಕರಿಸಲಿಕ್ಕೆ ಅಶಕ್ಯವಾಯಿತು. ೨ ವರ್ತಮಾನಾಖ್ಯವಾದ ವಿಶಿಷ್ಟರೂಪವಾದ ಕಾಲವೇ ಪಕ್ಷೀಕೃತವಾಗುತ್ತದೆಂದರೆ— ವರ್ತಮಾನ ಎನ್ನುವ ಪದದಿಂದ ಯಾವುದಕ್ಕೆ ನಿರಾಸವು? ಅತೀತಾನಾಗತಕಾಲಗಳಿಗೆ ನಿರಾಸವೆಂದರೆ— ಅವುಗಳು ವ್ಯವಚ್ಛೇದ್ಯಗಳಾಗಿರುವುದರಿಂದ ಅನುಮಿತಿಯಿಂದ ಮೊದಲೇ ಜ್ಞಾತವಾಗಿರುವುದರಿಂದ ಪಕ್ಷೀಕರಿಸಲಿಕ್ಕೆ ಅಶಕ್ಯವಾಯಿತು, (3) ಯೌಗಪದ್ಯ, ಅಯೋಗಪದ್ಯ ಚಿರ ಕ್ಷಿಪ್ರಪ್ರತ್ಯಯವು ಕಾಲಾನುಮಾನದಲ್ಲಿ ಲಿಂಗವೆಂದು ಹೇಳಕೂಡದು. ಅನುಮೇಯವಾದ ಕಾಲವೇ ಅಲ್ಲಿ ವಿಶೇಷವಾಗಿ ತೋರುವುದರಿಂದ ಸಾಧ್ಯವಿಲ್ಲದಿರುವುದರಿಂದ ಪಕ್ಷೀಕರಿಸಲಿಕ್ಕೆ ಅಶಕ್ಯವಾಯಿತು. 'ತತ್' ಎಂದರೆ— ತತ್ಕಾಲವಿಶಿಷ್ಟವಾಗಿ ಸ್ಮೃತಿಗೆ ವಿಷಯವಾದುದು. 'ಕಿಂ ತತ್' ಎಂದರೆ ಭೂತಭವಿಷ್ಯತ್ಕಾಲವಿಶಿಷ್ಟವಾಗಿ ಪ್ರಮಾಣಾಂತರವಾದ ದೃಶ್ಯವು. ಏತತ್= ವರ್ತಮಾನಕಾಲವಿಶಿಷ್ಟವಾಗಿ ದೃಶ್ಯವಾದುದು. ಸಾಕ್ಷಿಸಿದ್ಧವಾದ ಕಾಲವನ್ನು ಹೊರತು ಯಾವುದಾದರೂ ಭೂತವಸ್ತುವನ್ನಾಗಲೀ, ಭವಿಷ್ಯದ್ವಸ್ತುವನ್ನಾಗಲೀ, ವರ್ತಮಾನವಸ್ತುವನ್ನಾಗಲೀ ನೋಡಲಿಕ್ಕೂ ಸ್ಮರಿಸಲಿಕ್ಕೂ ಶಕ್ಯವಲ್ಲ. ಹೀಗೆ ಸಾಧ್ಯಸಾಧನಗಳಿಗೆ ಭೂತ-ಭವಿಷ್ಯತ್ ವರ್ತಮಾನಗಳಿಂದ ವ್ಯಾಪ್ತಿಯೂ ಸ್ಮರಿಸಲಿಕ್ಕೂ, ನೋಡಲಿಕ್ಕೂ ಶಕ್ಯವಲ್ಲ. ಹೀಗೆ ಕಾಲಕ್ಕೆ ವ್ಯಾಪ್ತಿಯನ್ನು ಗ್ರಹಿಸಿರುವುದರಿಂದ ಮೊದಲೂ ನಿತ್ಯಸಿದ್ಧವಾಗಿರುವುದರಿಂದ ಕಾಲವಿಲ್ಲದೆ ಅಭಾವಮೂಲವಾದ ಅನುಮಾನಕ್ಕೆ ಅವಕಾಶವಿರುವುದಿಲ್ಲ. (4) ಆದುದರಿಂದ ಅನುಮಾನಕ್ಕೆ ಅವಸರವಿಲ್ಲದಿರುವುದರಿಂದ, ಕಾಲವು ಸಾಕ್ಷಿಸಿದ್ಧವಾಗಿರುವುದರಿಂದ ಆಕಾಶಾದಿಗಳಿಗೆ ಕಾಲಸಂಬದ್ಧವಾದ ಸಾಕ್ಷಿಯಿಂದಲೇ ಪ್ರತೀತಿಯಿದ್ದಪ್ರಯುಕ್ತ ಕಾಲತ್ರಯವನ್ನು ಗ್ರಹಿಸತಕ್ಕ ಸಾಕ್ಷಿಯಿಂದಲೇ ನಿರ್ದೋಷಪ್ರಮಾಣದಿಂದ ಜ್ಞಾತವಾದ ಆಕಾಶಾದಿಗೆ ಶಾಶ್ವತಿಕವಾದ, ಬಾಧಾಭಾವರೂಪವಾದ ಸತ್ಯತ್ವವು ಸಮ್ಮತವು. ದೋಷಯುಕ್ತವಾದ ಪ್ರಮಾಣದಿಂದ ಪ್ರತೀತವಾದ ಶುಕ್ತಿರಜತಾದಿಗಳಿಗೆ ಸತ್ಯತ್ವವು ಸಮ್ಮತವಲ್ಲ.

**ನ್ಯಾಯಸುಧಾ**— (1) ವ್ಯಾಪ್ತ್ಯನುಭವವಿರುವ ಪುರುಷನಿಗೆ ಅನುಭವಿಸಲ್ಪಡತಕ್ಕ ಧರ್ಮಿಯಲ್ಲಿ ವ್ಯಾಪ್ಯಧರ್ಮದ ಅನುಭವದಿಂದಲಾಗಲೀ, ಸ್ಮರ್ಯಮಾಣವಾದ ಧರ್ಮಿಯಲ್ಲಿ ವ್ಯಾಪ್ಯಧರ್ಮದ ಸ್ಮರಣದಿಂದಾಗಲೀ, ಮೊದಲು ಅನುಭೂತವಾದ ವ್ಯಾಪ್ತಿಯನ್ನು ಸ್ಮರಿಸತಕ್ಕವನಿಗೆ ವ್ಯಾಪ್ತವಾದ ಅಗ್ನ್ಯಾದಿಗಳಿಗೆ ಪಕ್ಷವಾದ ಪರ್ವತಾದಿಗಳಲ್ಲಿ ಅನುಸಂಧಾನವೇ ಅನುಮಾನವು. ಅದು ಸಂಬಂಧಜ್ಞಾನರೂಪವಾದ ಅನುಮಿತಿಗೆ ಮುಖ್ಯ ಕಾರಣವು. ಸ್ಮರಣ ಅನುಭವರೂಪಗಳಾದ ಎಲ್ಲಾ ಪ್ರತೀತಿಗಳು ಕಾಲವನ್ನು ಬಿಟ್ಟು ಅರ್ಥವನ್ನು ಮಾತ್ರ ವಿಷಯೀಕರಿಸುವುದಲ್ಲ. ಮತ್ತೆ ಕಾಲಸಂಬದ್ಧವಾದ ಅರ್ಥವನ್ನೇ ವಿಷಯೀಕರಿಸುತ್ತವೆ. 'ತದೇವ ತತ್ ವಸ್ತು' ತತ್ ಎನ್ನುವುದರಿಂದ ಸ್ಮೃತಿಯು ಹುಟ್ಟುತ್ತದೆ. ಪೂರ್ವಕಾಲಸಂಬಂಧಿಯಾದುದು. ಅಂದರೆ, ಮುಂಚಿನಕಾಲದಲ್ಲಿ ಕಂಡದ್ದು ಹೀಗೆಯೇ ಅನುಭವವೂ ಕೂಡ ಅಂದರೆ, 'ಏತತ್' ಎಂದು ಅತಿಸಮೀಪದಲ್ಲಿದ್ದ ಪ್ರತ್ಯಕ್ಷವಾದ ವಸ್ತುವಿಷಯಕಜ್ಞಾನವು ಚಕ್ಷುರಾದಿಗಳಿಂದಲೇ ಹುಟ್ಟುವುದು ಅನುಮಾನಾದಿಗಳಿಂದ ಹುಟ್ಟಿದ ಅನುಭವವೂ ಕೂಡ ಅಭೂತ್=ಅತೀತಕಾಲದಲ್ಲಿ ಇರುತ್ತಿತ್ತು ಎಂದಾಗಲೀ, ಭವತಿ=ವರ್ತಮಾನಕಾಲದಲ್ಲಿ ಇರುತ್ತದೆ ಎಂದಾಗಲೀ, ಭವಿಷ್ಯತಿ=ಮುಂದಕ್ಕೆ ಆಗುವುದು ಎಂದಾಗಲೀ ಹುಟ್ಟುವುದು. 'ಏತತ್ ತತ್' ಇತ್ಯಾದಿಗಳು ವರ್ತಮಾನಕಾಲ ಭೂತಕಾಲ ಮೊದಲಾದವುಗಳ ಸಂಬಂಧಿಯೇ ಆದುದು. ಸಂಬಂಧಿಯಾಗದೆ ಇದ್ದುದು ಯಾವುದೂ ಇಲ್ಲ. ಇದು ಸರ್ವರಿಗೂ ಅನುಭವಸಿದ್ಧವಾಗಿರುವುದರಿಂದ ಅಪಲಾಪಮಾಡಕೂಡದು. (2)

ಹೀಗೆ ಏತತ್ ಎನ್ನುವ ಪ್ರತೀತಿಯಲ್ಲಿ ಕಾಲವು ಪ್ರತೀತವಾಗುತ್ತದೆಂದಂಗೀಕರಿಸಿದರೆ ಕಾಲವು ಕಣ್ಣಿಗೆ ತೋರಬೇಕಾಗುವುದು, ಇತ್ಯಾದಿಪ್ರಕಾರ ಆಪಾದಿಸಕೂಡದು. ಏಕೆಂದರೆ, ಸಾಕ್ಷಿಸಿದ್ಧವಾದ ಕಾಲರೂಪವಾದ ಯಾವುದು ವಿಶೇಷಣವೋ ಅದರಿಂದ ಯುಕ್ತವಾದ ಜ್ಞಾನವು 'ಸುರಭಿ ಚಂದನಂ' ಅಗರುಗಂಧವು ಅತಿಪರಿಮಳವು, ಎನ್ನುವುದರಂತೆ ಚಕ್ಷುರಿಂದ್ರಿಯದಿಂದಲೇ ಹುಟ್ಟುವುದು. ತಥಾಚ ವ್ಯಾಪ್ತ್ಯಾದಿವಿಷಯಕಗಳಾದ ಪ್ರತೀತಿಗಳೂ ಕೂಡ ಕಾಲಸಂಬಂಧವಿಲ್ಲದಿರುವ ತನ್ನ ಅರ್ಥವನ್ನು ವಿಷಯೀಕರಿಸಲಿಕ್ಕೆ ಶಕ್ತಗಳಾಗುವುದಿಲ್ಲ. ಆ ಪ್ರತೀತಿಗಳೂ 'ಇದಂ ತತ್' ಇತ್ಯಾದಿ ರೀತಿಯಾಗಿಯೇ ತೋರುತ್ತವೆ. ಆದುದರಿಂದ ವ್ಯಾಪ್ತ್ಯಾದಿಗಳನ್ನು ಗ್ರಹಿಸುವ ಕಾಲದಲ್ಲಿಯೇ ಕಾಲವು ಸಾಕ್ಷಿಸಿದ್ಧವಾಗಿರುವುದರಿಂದ ಕಾಲಾನುಮಾನಕ್ಕೆ ಅವಕಾಶವಿರುವುದಿಲ್ಲ. ನಿಶ್ಚಿತವಾಗದಿರುವ ಅರ್ಥದಲ್ಲಿಯೇ ನ್ಯಾಯಕ್ಕೆ ಅವಕಾಶವು. ನಿಶ್ಚಿತವಿಷಯವುಳ್ಳ ಅನುಮಾನವಾದರೂ ಸಿದ್ಧಾರ್ಥವನ್ನೇ ಸಾಧಿಸುವುದರಿಂದ ಪರರ ಮತದಲ್ಲಿ ಆಶ್ರಯಾಸಿದ್ಧವು ನಮ್ಮ ಮತದಲ್ಲಿ ಆದರೂ 'ಸಿದ್ಧಸಾಧಕಃ ಅಸಂಗತಃ' ಎಂದು ಹೇಳಿರುವುದರಿಂದ ವಿರೋಧ ಅಸಂಗತಿರೂಪ ಅರ್ಥದೋಷಗಳ ಮಧ್ಯದಲ್ಲಿ ಅಸಂಗತಿರೂಪ ದೋಷದಲ್ಲಿ ಅಂತರ್ಭಾವವನ್ನು ಹೊಂದುವುದರಿಂದ ಅಸಂಗತ್ಯಾಖ್ಯದೋಷವುಳ್ಳದ್ದು.

(3) ಹೀಗೆ ಕಾಲವಿಷಯಕಗಳಾದ ಎಲ್ಲಾ ಅನುಮಾನಗಳನ್ನು ಸಾಮಾನ್ಯಾಕಾರವಾಗಿ ನಿರಾಕರಿಸಿ ವಿಶೇಷಾಕಾರವಾಗಿಯೂ 'ತದೇತದಿತಿ ಸರ್ವಂ ಚ' ಎನ್ನುವ ಮೂಲದಿಂದಲೇ ನಿರಾಕರಿಸಿದರು. ಹೇಗೆಂದರೆ— 'ಕಾಲಃ ಪರಾಪರವ್ಯತಿಕರ ಯೌಗಪದ್ಯಾಯೌಗಪದ್ಯಚಿರಕ್ಷಿಪ್ರ ಪ್ರತ್ಯಯಲಿಂಗಃ' ಎಂದು ತಾರ್ಕಿಕರ ಭಾಷ್ಯವು. ಅಂದರೆ, ವೃದ್ಧನಲ್ಲಿ 'ಅಯಂ ಪರಃ' ಎನ್ನುವ ಪ್ರತ್ಯಯವೂ, ತರುಣನಲ್ಲಿ 'ಅಯಂ ಅಪರಃ' ಎನ್ನುವ ಪ್ರತ್ಯಯವೂ, ಹಾಗೆಯೇ 'ಯುಗಪತ್ ಆಗತೌ' ಏಕಕಾಲದಲ್ಲಿ ಬಂದವರು, 'ಅಯುಗಪತ್ ಆಗತೌ' 'ಚಿರೇಣ ಆಗತಃ' 'ಕ್ಷಿಪ್ರಮಾಗತಃ' ಎಂದು. ಈ ಆರು ಪ್ರತ್ಯಯಗಳು ಕಾಲಕ್ಕೆ ಲಿಂಗಗಳು. ವೃದ್ಧಾದಿಗಳ ವಿಷಯದಲ್ಲಿ ಹುಟ್ಟುವ ಈ ಪ್ರತ್ಯಯಗಳಿಗೆ ಕಾಲವಲ್ಲದೆ ವಿಷಯಗಳೇ ಇರುವುದಿಲ್ಲ. ಈ ಪರಾಪರ ಪ್ರತ್ಯಯಗಳಿಗೆ ಸ್ಥವಿರಾದಿ ಪಿಂಡರೂಪವಾದುದು ಯಾವುದು ದ್ರವ್ಯವೋ ಅದರಲ್ಲಿರತಕ್ಕ ಗುಣಕರ್ಮಾದಿಗಳು ವಿಷಯವಲ್ಲ. ದ್ರವ್ಯಮೊದಲಾದವುಗಳ ಪ್ರತ್ಯಯಕ್ಕಿಂತ ವಿಲಕ್ಷಣವಾಗಿರುವುದರಿಂದ. ಅಂತೂ ಕಾಲವು ಅನುಮಾನಗಮ್ಯವೆಂದು ತಾರ್ಕಿಕರು ಹೇಳುತ್ತಾರೆ. ಇದು ಅಯುಕ್ತವು. ಹೇಗೆಂದರೆ— ತದಿತಿ=ಪರವು ಎಂತೆಂಬ, ಏತದಿತಿ = ಅಪರ ಎಂತೆಂಬ, ದೃಶ್ಯಂ ವಾ ಸ್ಮೃತಿಗೋಚರಂ ಸರ್ವಂ=ಪ್ರತೀಯಮಾನವಾದುದೆಲ್ಲವೂ, ಸಾಕ್ಷಿಸಿದ್ಧೇನ ಕಾಲೇನ=ಸಾಕ್ಷಿಸಿದ್ಧವಾದ ಕಾಲದಿಂದ, ಖಚಿತಮೇವ=ಸಂಬದ್ಧವಾಗಿಯೇ, ವರ್ತತೇ=ಇರುತ್ತದೆ. ತಸ್ಮಾತ್=ಆದಕಾರಣ, ತನ್ನಿತ್ಯಸಿದ್ಧೇಃ=ಅನುಮಾನಕ್ಕಿಂತ ಮೊದಲೇ ಆ ಕಾಲವು ಸಾಕ್ಷಿಯಿಂದ ಸಿದ್ಧವಾಗಿರುವುದರಿಂದ, ಅನುಮಾನಸರಃ=ಅನುಮಾನಕ್ಕೆ ಅವಕಾಶವು, ನ ಭವೇತ್=ಆಗಲಾರದು. 'ತಸ್ಮಾತ್' ಎನ್ನುವುದಕ್ಕೇನೇ, 'ನ ತಾವಿನಾ' ಎನ್ನುವುದು ವಿವರಣವು. (4) ತಥಾಚ ಪರಾಪರಾದಿವಿಷಯಕಪ್ರತ್ಯಯಗಳಾದರೂ ಕಾಲವಿಶಿಷ್ಟಗಳಾದ ಪಿಂಡವಿಷಯಕಗಳು ಅಂದರೆ, ೧ ಪರತ್ವವೆಂದರೆ, ಬಹುಕಾಲೀನತ್ವವು. ೨ ಅಪರತ್ವವು ಅಲ್ಪಕಾಲೀನತ್ವವು. ೩ ಯೌಗಪದ್ಯವು ಏಕಕಾಲೀನತ್ವವು. ೪ ಅಯೌಗಪದ್ಯವು ಅನೇಕಕಾಲಿಕತ್ವವು. ೫ ಚಿರತ್ವವು ದೀರ್ಘಕಾಲಿಕತ್ವವು. ೬ ಕ್ಷಿಪ್ರತ್ವವು ಅದೀರ್ಘಕಾಲಿಕತ್ವವು ಎಂದು ಪರರು ತಮ್ಮ ಗ್ರಂಥದಲ್ಲಿ ಹೇಳಿರುವರು. ಅಂತೂ ದ್ರವ್ಯಾದಿ ಪ್ರತ್ಯಯವಿಲಕ್ಷಣತ್ವಾತ್ ಎನ್ನುವ ಲಿಂಗಜ್ಞಾನ ಬರುವಾಗಲೇ ಲಿಂಗಿಯಾದ ಕಾಲದ ಜ್ಞಾನವು ಬರುವುದರಿಂದ ಆ ಹೇತುವಿನಿಂದ ಕಾಲಾನುಮಾನವು ಹೇಗೆ ಕೂಡುತ್ತದೆ? ದಂಡಿಯ ಜ್ಞಾನದಿಂದ ದಂಡವು

ಅನುಮಿತವಾಗುವುದಿಲ್ಲವಷ್ಟೆ.(5)ಹಾಗಾದರೆ, 'ಪರಾಪರಾದಿಪ್ರತ್ಯಯಷಟ್ಕಂ ವಿಶೇಷಣಜ್ಞಾನಪೂರ್ವಕಂ ವಿಶಿಷ್ಟಜ್ಞಾನತ್ವಾತ್' = ಪರಾಪರಾದಿ ಆರು ಪ್ರತ್ಯಯಗಳು ವಿಶಿಷ್ಟಜ್ಞಾನವಾಗಿರುವುದರಿಂದ ವಿಶೇಷಜ್ಞಾನವೇ ಪೂರ್ವವಾಗಿವುಳ್ಳದ್ದು. ಇಲ್ಲಿ ವಿಶೇಷಣವು ಕಾಲಾತಿರಿಕ್ತವಾದುದು ಇಲ್ಲ, ಕಾಲವೇ ಎಂದನುಮೇಯಿನುತ್ತೇವೆಂದರೆ ಹಾಗಾದರೆ ಇದು ಕಾಲಾನುಮಾನವಲ್ಲ. ಮತ್ತೆ ಜ್ಞಾನಾನುಮಾನವು. ಅದಾದರೂ ಸಾಕ್ಷಿಸಿದ್ಧವಾದ ಕಾಲವಿಶಿಷ್ಟವಾದ ಪ್ರತ್ಯಯವನ್ನು ಅಂಗೀಕರಿಸಿರುವುದರಿಂದ ಸಿದ್ಧಸಾಧನವು. (೬) ಹಾಗಾದರೆ ವಲೀ (ಜೋತಾಡತಕ್ಕ ಚರ್ಮವಿರುವಿಕೆ) ಪಲಿತ (ಬಿಳಿ ಕೇಶವಿರುವಿಕೆ) ಯೌವನಾವಸ್ಥೆ ಇತ್ಯಾದಿಗಳಿಂದ ಅವುಗಳಿಗೆ ಕಾರಣವಾಗಿ ಕಾಲಸಂಬಂಧವು ಅನುಮಿತವಾಗುತ್ತಿರಲು ಆರು ಲಿಂಗಗಳನ್ನು ಹೇಳತಕ್ಕ ವರದ ಭಾಷ್ಯವು ವ್ಯರ್ಥವಾಗಬೇಕಾಗುವುದೆಂದರೆ ಸ್ವಾರ್ಥಾನುಮಾನದಿಂದ ತನಗೆ ಕಾಲಸಂಬಂಧಜ್ಞಾನವು ಬಂದರೂ ಯಾವನು ಕಾಲಸಂಬಂಧದಲ್ಲಿ ವಿಪ್ರತಿಪನ್ನನಾಗುತ್ತಾನೋ ಅಂತಹ ವಾದಿಯನ್ನು ಕುರಿತು (೧) 'ಪರತ್ವಾದಿ ಪ್ರತ್ಯಯಾಃ ಕಿಂಚಿನ್ನಿಮಿತ್ತಕಾಃ ಕಾರ್ಯತ್ವಾತ್ ಘಟವತ್' ಹೀಗೆ ಕಾರ್ಯತ್ವಾದಿ ಹೇತುಗಳಿಂದ ಪರಾಪರಾದಿ ಪ್ರತ್ಯಯಗಳಿಗೆ ನಿಮಿತ್ತವಾದ ಯಾವುದಾದರೊಂದು ವಸ್ತುವನ್ನು ಅನುಮೇಯಿಸುವುದಕ್ಕಾಗಿ ಆರು ಪರಾರ್ಥಾನುಮಾನಗಳನ್ನು ತೋರಿಸತಕ್ಕದು 'ಪರಾಪರವ್ಯತಿರೇಕ' ಇತ್ಯಾದಿ ಭಾಷ್ಯವು (ಪರಿಶೇಷತಃ ಕಾಲಸಂಬಂಧವೇ ಸಿದ್ಧಿಸುವುದು.) ಎಂದರೆ— ಹೀಗೆ ಹೇಳಕೂಡದು. ಶರೀರಾವಸ್ಥೆಯಿಂದ ಶರೀರಕ್ಕೆ ಕಾಲದಿಂದಲೇ ಸಂಬಂಧವು ಅನುಮಿತವಾಗುತ್ತದೋ? ಯಾವುದಾದರೊಂದು ದ್ರವ್ಯಸಂಬಂಧವು ಅನುಮಿತವಾಗುತ್ತದೊ? ೧ನೇ ಕಲ್ಪದಲ್ಲಿ (ಕಾಲದಿಂದಲೇ ಸಂಬಂಧವು ಅನುಮಿತವಾಗುವುದಾದರೆ) ಶರೀರಾವಸ್ಥೆಯಿಂದ ಕಾಲಸಂಬಂಧಾನುಮಾನದಿಂದ ಮೊದಲು ಕಾಲವು ಸಿದ್ಧವಾಗಿಯದೋ, ಇಲ್ಲವೊ? ಸಿದ್ಧವಾಗಿದ್ದರೆ ಅನುಮಾನದಿಂದ ಮೊದಲೇ ನಿತ್ಯವಾದ ಸಾಕ್ಷಿಯಿಂದ ಕಾಲವು ಸಿದ್ಧವಾಗಿಯದೆ. ತಥಾಚ ಅಂತಹ ಕಾಲಸಂಬಂಧವು ಪಕ್ಷೀಭೂತವಾದ ಶರೀರದಲ್ಲಿ ಸಿದ್ಧವಾಗಿರುವುದರಿಂದ ಅನುಮಾನಕ್ಕೆ ಅವಕಾಶವಿಲ್ಲ. ಕಾಲವು ಸಿದ್ಧವಾಗದಿದ್ದರೆ ಕಾಲಸಂಬಂಧವೂ ಅಪ್ರಸಿದ್ಧವಾಗಿರುವುದರಿಂದ ಅಪ್ರಸಿದ್ಧವಿಶೇಷಣವುಳ್ಳದ್ದುದುದರಿಂದ ಅನುಮಾನಕ್ಕೆ ಅವಕಾಶವಿರುವುದಿಲ್ಲ. (7) ಮತ್ತು ವಲೀಪಲಿತಾದಿ ಶರೀರಾವಸ್ಥೆಗಳಿಗೆ ಕಾರಣವಾಗಿ ಕಾಲವನ್ನು ಅನುಮೇಯಿಸುವುದಾದರೆ ಆ ಕಾಲಸಂಬಂಧವು ನಿತ್ಯದಲ್ಲಿಯೂ ಯಾವಾಗಲೂ ವಲೀಪಲಿತಾದಿಗಳು ಇಲ್ಲದಿರುವಾಗಲೂ ಸಿದ್ಧಿಸುವುದರಿಂದ (ಅಂತೂ ಯೌವನಾವಸ್ಥೆಯಲ್ಲಿ ವ್ಯಭಿಚಾರವಿದ್ದುದರಿಂದ ಕಾರಣತ್ವವು ಬಾಧಿತವು.) ನಿತ್ಯವಾದ ಪರಮಾಣುವಿನಲ್ಲಿಯೂ ಕಾಲಸಂಬಂಧವಿದ್ದರೂ ವಲೀಪಲಿತಾದಿಗಳು ಇಲ್ಲದಿರುವುದರಿಂದ ಅನ್ವಯವ್ಯಭಿಚಾರವಿದ್ದುದರಿಂದ ಇಲ್ಲಿಯೂ ಕಾರಣತ್ವವು ಬಾಧಿತವಾಯಿತು. ಆದಕಾರಣ ಅನುಮಾನಕ್ಕೆ ಅವಕಾಶವಿರುವುದಿಲ್ಲ. (೮) ಹಾಗಾದರೆ, ವಲೀಪಲಿತಾದಿ ಶರೀರಾವಸ್ಥೆಗೆ ಕಾರಣವಾಗಿ ಕೇವಲ ಕಾಲಸಂಬಂಧವು ಅನುಮಿತವಾಗುವುದಿಲ್ಲ. ಮತ್ತೆ ಶರೀರಾವಸ್ಥೆಗೆ ಕಾರಣವಾಗಿ ಬಹುಕಾಲಸಂಬಂಧವೇ ಅನುಮಿತವಾಗುತ್ತದೆ ಎಂದು ಹೇಳಕೂಡದು. ೧ ಕಾಲಕ್ಕೆ ಬಹುತ್ವವು ಪರಮಾಣುಗಳಂತೆ ಏಕಕಾಲದಲ್ಲಿ ಮೇಲನ ರೂಪವೋ, ೨ ಅಥವಾ ಕ್ರಿಯೆಗಳಂತೆಯೇ ಪೂರ್ವಾಪರಭಾವಿತ್ವದಿಂದ ಬಹುತ್ವವೋ ಅಂದರೆ, ಕ್ರಿಯೆಗಳು ಮೂರು ಕ್ಷಣದಲ್ಲಿರುವುದರಿಂದ ಪರಮಾಣುಗಳಂತೆ ಮೇಲನವೇ ಕೂಡದಿರುವುದರಿಂದ ಪೂರ್ವಾಪರೀಭಾವದಿಂದಲೇ ಬಹುತ್ವವು. ಅಂತೂ ಪೂರ್ವಕ್ರಿಯೆಗಳಿಗೆ ನಾಶವಾಗಿ ಕ್ರಿಯಾಂತರಗಳ ಉತ್ಪತ್ತಿಯೇ ಬಹುತ್ವವು. ಹೀಗೆ ೧ನೇದ್ದೂ ಕೂಡಲಾರದು. ಬಹುಕಾಲಸಂಬಂಧರೂಪವಾದ ವಲೀಪಲಿತಾದಿ ಶರೀರಾವಸ್ಥಾಕಾರಣತ್ವವು ನಿತ್ಯವಾದ ಪರಮಾಣ್ವಾದಿಗಳಲ್ಲಿಯೂ ಸಿದ್ಧವಾಗಿರುವುದರಿಂದ ಅನ್ವಯವ್ಯಭಿಚಾರಬರುವುದರಿಂದ ನಿಯಮವು ಯುಕ್ತವಲ್ಲ. ಕಾರಣತ್ವವು ಬಾಧಿತವಾಯಿತು. ೨ನೇದ್ದೂ ಕೂಡಲಾರದು.

ಕಾಲವು ನಿತ್ಯವಾಗಿರುವುದರಿಂದ ಕ್ರಿಯೆಗಳಂತೆಯೇ ಪೂರ್ವಾಪರೀಭಾವದಿಂದ ಬಹುತ್ವವು ಕೂಡದಿರುವುದರಿಂದ ಅದನ್ನು ಸಾಧಿಸಿದರೆ ಬಾಧವು. (9) ವಲೀಪಲಿತಾದಿ ಶರೀರಾವಸ್ಥೆಯಿಂದ ಶರೀರಕ್ಕೆ ಯತ್ಕಿಂಚಿತ್ ದ್ರವ್ಯಸಂಬಂಧವು ಅನುಮಿತವಾಗುತ್ತದೋ ಎನ್ನುವ ಮೊದಲು ವಿಕಲ್ಪಿಸಿದ ೨ನೇ ಪಕ್ಷವೂ ಕೂಡುವುದಿಲ್ಲ. ಪೃಥಿವ್ಯಾದಿರೂಪವಾದ ಯತ್ಕಿಂಚಿದ್ದ್ರವ್ಯಸಂಬಂಧವು ಶರೀರದಲ್ಲಿ ನಿತ್ಯದಲ್ಲಿಯೂ ಸಿದ್ಧವಾಗಿರುವುದರಿಂದ ಸಿದ್ಧಸಾಧನವು. (10) ಹಾಗಾದರೆ, ಶರೀರಾವಸ್ಥೆಯಿಂದ ಯತ್ಕಿಂಚಿತ್ ದ್ರವ್ಯಸಂಬಂಧವು ಅನುಮಿತವಾಗುತ್ತಿರಲು ಆ ದ್ರವ್ಯವು ಕಾಲಹೊರತು ಬೇರೆ ಯಾವುದೂ ಆಗುವುದಿಲ್ಲ. ಆದಕಾರಣ ಪರಿಶೇಷದಿಂದ ಕಾಲವೆಂದೇ ಅಂಗೀಕರಿಸಬೇಕು. ಎಂದೂ ಹೇಳಕೂಡದು. ಪರಿಶೇಷವನ್ನು ಮಾಡಿ ಆ ದ್ರವ್ಯವು ಕಾಲವೇ ಎನ್ನುವ ಅವಧಾರಣವು ಕೂಡುವುದಿಲ್ಲ. ಅಂತೂ ಪರಿಶೇಷವೇ ಅನುಪಪನ್ನವು.

(11) ವೈಶೇಷಿಕರು ಹೀಗೆ ಈ ಸೂತ್ರಕ್ಕೆ ವ್ಯಾಖ್ಯಾನಮಾಡುತ್ತಾರೆ. ಯಾರು ಹುಟ್ಟಿದ ಮೇಲೆ ಸೂರ್ಯಮಂಡಲದಲ್ಲಿರತಕ್ಕ ಗಮನಕ್ರಿಯೆಗಳು ಹೆಚ್ಚು ದಾಟಿರುತ್ತವೋ ಅವುಗಳ ಇರುವಿಕೆಯೇ ಪಿಂಡದಲ್ಲಿ ಪರತ್ವವು. ಕಮ್ಮಿಯಾದರೆ ಅಪರತ್ವವು. ಇತ್ಯಾದಿ ಪ್ರಕಾರ ಪರತ್ವಾಪರತ್ವಾದಿಗಳನ್ನು ನಿರೂಪಿಸಿ ಕಾಲಸಾಧಕವಾದ ಅನುಮಾನವನ್ನು ಹೇಳಿರುವರು. ಹೇಗೆಂದರೆ-'ತರಣಿ ಪರಿಸ್ಪಂದಾಹಿ ಪದಾರ್ಥನಾರ್ಥೇ ವಿಶಿಷ್ಟಪ್ರತ್ಯಯೋತ್ಪತ್ತೌ ಪ್ರತ್ಯಾಸತ್ತಿಮಪೇಕ್ಷಂತೇ, ಸ್ವರಸತೋಽಪ್ರತ್ಯಾಸನ್ನತ್ವೇ ಸತಿ ವಿಶಿಷ್ಟವ್ಯವಹಾರಜನಕತ್ವಾತ್ ಚಂದನಸೌರಭವತ್ = ಸೂರ್ಯಕ್ರಿಯೆಗಳು ಪದಾರ್ಥಸಮೂಹವೇ ವಿಶೇಷ್ಯವಾಗಿವುಳ್ಳ, ತಾನೇ ವಿಶೇಷಣವಾಗಿವುಳ್ಳ ವಿಶಿಷ್ಟಪ್ರತ್ಯಯವು ಹುಟ್ಟುವ ವಿಷಯದಲ್ಲಿ ಸಾಕ್ಷಾತ್ಪರಂಪರಾಸಾಧಾರಣವಾದ ಸಂಬಂಧಮಾತ್ರವನ್ನು ಅಪೇಕ್ಷಿಸುತ್ತವೆ. ಸ್ವಾಭಾವಿಕವಾಗಿ ಸಂಯೋಗಾದಿ ಸಂಬಂಧವಿಶಿಷ್ಟವಾಗಿ ಇಲ್ಲದೆ ಇದ್ದು ವಿಶಿಷ್ಟವ್ಯವಹಾರವನ್ನು ಹುಟ್ಟಿಸುವುದರಿಂದ ಚಂದನಸೌರಭದಂತೆ. ಆದಕಾರಣ ಪಿಂಡಕ್ಕೂ ಸೂರ್ಯಕ್ರಿಯೆಗೂ ಸ್ವಸಂಯುಕ್ತ ಸಂಯೋಗಿ ಸಮವಾಯ (ಸ್ವ=ಪಿಂಡ, ಸ್ವಸಂಯುಕ್ತ=ಕಾಲ, ಸಂಯೋಗ=ಸೂರ್ಯ, ತತ್ಸಮವಾಯ=ಕ್ರಿಯೆ) ರೂಪವಾದ ಪರಂಪರಾಸಂಬಂಧದಲ್ಲಿ ಯಾವ ದ್ರವ್ಯವು ನಿಮಿತ್ತಕಾರಣವೋ ಅದು ಕಾಲವು. ಇದೂ ಅಯುಕ್ತವು. ಘಟಶೂನ್ಯಂ ಭೂತಲಂ' ಇತ್ಯಾದಿಗಳಂತೆಯೇ ಸ್ವರೂಪಸಂಬಂಧದಿಂದಲೇ ವಿಶಿಷ್ಟ ಪ್ರತ್ಯಯವು ಕೂಡಬಹುದು. ಈ ಅಭಿಪ್ರಾಯದಿಂದಲೂ ತನ್ನಿತ್ಯಸಿದ್ಧೇಃ ಇತ್ಯಾದಿ ಮೂಲವು. ಆ ವಿಶಿಷ್ಟ ಪ್ರತ್ಯಯಗಳು ದ್ರವ್ಯಾಂತರವನ್ನು ಕಲ್ಪಿಸದೇನೇ ಸ್ವಭಾವದಿಂದಲೇ ಸಿದ್ಧಿಸುವುದರಿಂದ ದ್ರವ್ಯಾಂತರಾನುಮಾನಕ್ಕೆ ಅವಕಾಶವು ಬರಲಾರದು. ಹೀಗೆ ಸ್ವಭಾವಸಂಬಂಧವನ್ನು ಹೇಳಿದರಿಂದ ಸ್ವರಸತಃ ಅಪ್ರತ್ಯಾಸನ್ನತ್ವೇ ಸತಿ' ಎನ್ನುವ ವಿಶೇಷಣಕ್ಕೆ ಅಸಿದ್ಧಿಯು. ವಿಶಿಷ್ಟವ್ಯವಹಾರಜನಕತ್ವಂ ಎಂದು ಇಷ್ಟು ಮಾತ್ರ ಹೇಳಿದರೆ ಭೂತಲದಲ್ಲಿ ಇರುವ ಘಟಾಭಾವಾದಿಗಳಲ್ಲಿ ವ್ಯಭಿಚಾರವು. (12) ಅಥವಾ ವಿಶಿಷ್ಟಪ್ರತ್ಯಯವು ನಿಯತವಾದ ಪೃಥಿವ್ಯಾದಿಗಳಿಂದಲೇ ಸಿದ್ಧಿಸುವುದರಿಂದ ಅಪ್ರಸಿದ್ಧ ದ್ರವ್ಯದಲ್ಲಿ (ಕಾಲದಲ್ಲಿ) ಅನುಮಾನಕ್ಕೆ ಅವಕಾಶವಿರುವುದಿಲ್ಲ. (13) ಇನ್ನು ಕೆಲವರು ಅನುಮಾನಾಂತರಗಳಿಂದ ಕಾಲವನ್ನು ಸಾಧಿಸುವರು. ಅವೆಲ್ಲವೂ ಅಯುಕ್ತವು. ಕಾಲವು ಸಾಕ್ಷಿಸಿದ್ಧವು. ಸರ್ವಥಾ ಅನುಮಾನಕ್ಕೆ ಅವಕಾಶವಿರುವುದಿಲ್ಲ.

(14) ಆಕಾಶಕಾಲ * ದಿಕ್ ಆತ್ಮ ಮನಸ್ಸುಗಳು ಸುಖದುಃಖಾದಿಗಳೂ ಸಾಕ್ಷಾತ್ ಸಾಕ್ಷಿಸಿದ್ಧಗಳಾಗಿವೆ. ಬೇರೆ ಎಲ್ಲಾ ಪದಾರ್ಥಗಳೂ ಯಥಾಯೋಗ್ಯವಾಗಿ ಇಂದ್ರಿಯ

* ಯದ್ಯಪಿ ಸಿದ್ಧಾಂತದಲ್ಲಿ ಅವ್ಯಾಕೃತಾಕಾಶ ವ್ಯತಿರಿಕ್ತವಾದ ದಿಕ್ಕು ಇಲ್ಲ. ಆದಾಗ್ಯೂ ಇಲ್ಲಿ ಆಕಾಶಭಾಗಗಳೇ ದಿಕ್ ಶಬ್ದದಿಂದ ಅಭಿಮತಗಳು.

ಲಿಂಗಶಬ್ದಗಳಿಂದ ತಿಳಿಯಲ್ಪಡುತ್ತವೆ. ಜ್ಞಾನವಾದರೂ ಭಾವಾಭಾವರೂಪವಾದ ಸ್ವವಿಷಯ ವನ್ನು ಸತ್ ಎಂದೇ ವಿಷಯೀಕರಿಸುತ್ತದೆ. ಅಸತ್ತೆಂದು ವಿಷಯೀಕರಿಸುವುದಿಲ್ಲ. ಉದಾಸೀನ ರೂಪದಿಂದಲೂ ವಿಷಯೀಕರಿಸುವುದಿಲ್ಲ. (15) ಜ್ಞಾನವಿಷಯುವನ್ನು ಸತ್ತಾಗಿಯೇ ವಿಷಯೀ ಕರಿಸುತ್ತದೆ ಎಂದು ಹೇಳುವುದಾದರೆ 'ಘಟಃ ಅಸ್ತಿ' 'ಘಟಃ ನಾಸ್ತಿ' ಎಂದು ಜ್ಞಾನವು ಹುಟ್ಟದೆ ಹೋಗಬೇಕಾಗುವುದು. ಏಕೆಂದರೆ ಘಟಃ ಅಸ್ತಿ ಎನ್ನುವಲ್ಲಿ ಘಟಃ ಎನ್ನುವುದರಿಂದಲೇ ಘಟ ಸತ್ವವು (ಇರುವಿಕೆಯು) ಪ್ರಾಪ್ತವಾಗುವುದರಿಂದ ಪುನಃ 'ಅಸ್ತಿ' ಎಂದು ಹೇಳಿದರೆ ಪೌನರುಕ್ತ್ಯವು. 'ಘಟಃ ನಾಸ್ತಿ' ಎನ್ನುವಲ್ಲಿ 'ಘಟಃ' ಎನ್ನುವ ಪದದಿಂದ ಘಟವು ಇದೆ ಎಂದು ಹೇಳಿರುವುದರಿಂದ 'ನಾಸ್ತಿ' ಎಂದು ಘಟಸತ್ವವನ್ನು ನಿಷೇಧಿಸಿದರೆ ವ್ಯಾಹತಿಯು, ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ 'ಘಟಃ' ಎನ್ನುವುದರಿಂದಲೇ ತ್ರೈಕಾಲಿಕನಿಷೇಧಾಪ್ರತಿಯೋಗಿತ್ವರೂಪವಾದ ಸತ್ವವು ಲಭಿಸಿದರೂ ದೇಶಕಾಲವಿಶೇಷಸಂಬಂಧವು ಲಭಿಸುವುದರಿಂದ ಅದಕ್ಕಾಗಿ 'ಅಸ್ತಿ' 'ಆಸೀತ್' ಇತ್ಯಾದಿ ಪ್ರಯೋಗವು. ಆದಪ್ರಯುಕ್ತ ಪೌನರುಕ್ತ್ಯವಿಲ್ಲ. (16) ಕೆಲವುಕಡೆ, 'ಘಟಃ' ಎಂದಿಷ್ಟೇ ಹೇಳಿದರೆ 'ನಾಸ್ತಿ ಕಿಂ' ಇಲ್ಲವ್ರೋ ಏನು? ಎಂದು ವಿಪರೀತಾಕಾಂಕ್ಷೆಯೂ ಕದಾಚಿತ್ ಹುಟ್ಟುವುದ ರಿಂದ ಅದನ್ನು ನಿರಾಕರಿಸುವುದಕ್ಕಾಗಿ 'ಅಸ್ತಿ' ಇತ್ಯಾದಿ ವಚನವು. (17) ಕೆಲವುಕಡೆ ವ್ಯಾಖ್ಯಾನ ವ್ಯಾಖ್ಯೇಯಭಾವರೂಪವಾಗಿದೆ. (1೮) 'ಘಟಃ ನಾಸ್ತಿ'ಎನ್ನುವಲ್ಲಿ ಘಟಪದದಿಂದ ಘಟಸತ್ವವು ಮಾತ್ರ ಸಿಗಿದರೂ 'ನಾಸ್ತಿ' ಎನ್ನುವುದರಿಂದ ಘಟಕ್ಕೆ ದೇಶಕಾಲವಿಶೇಷಸಂಬಂಧವೇ ನಿಷೇಧಿಸ ಲ್ಪಡುತ್ತದೆ. ತಥಾಚ ದೇಶಾಂತರದಲ್ಲಿಯೂ ಕಾಲಾಂತರದಲ್ಲಿಯೂ ಸತ್ತಾದ ಘಟವೂ ಇಲ್ಲಿ ಈಗ ಇಲ್ಲ ಎನ್ನುವ ಅರ್ಥವು ಸಿಗುತ್ತದೆ. ಆದುದರಿಂದ ವಿರೋಧವಿಲ್ಲ. ಅಲ್ಲದೆ ಸತ್ತಾದುದು ಸಕಲ ದೇಶಕಾಲಗಳಲ್ಲಿಯೂ ಸತ್ತಾಗಬೇಕು ಎನ್ನುವ ನಿಯಾಮಕವಿಲ್ಲ. (19) ಜ್ಞಾನ ದಲ್ಲಿರತಕ್ಕ ಯಥಾವಸ್ಥಿತ ಭಾವಾಭಾವರೂಪವಾದ ಜ್ಞೇಯ ವಿಷಯಿಕಾರಿತ್ವರೂಪವಾದ ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಗೃಹೀತವಾಗುತ್ತದೆ. ಜ್ಞಾನಗ್ರಾಹಕವು ಸಾಕ್ಷೀಂದ್ರಿಯವೆಂದೇ ವಾದಿ-ಪ್ರತಿವಾದಿಗಳಿಬ್ಬರಿಗೂ ಸಮ್ಮತವು. ತಥಾಚ ಸಾಕ್ಷಿಯು ಜ್ಞಾನ ಪ್ರಾಮಾಣ್ಯವನ್ನು ಗ್ರಹಿಸುವಾಗ ಜ್ಞಾನವಿಷಯಗಳಾದ ಎಲ್ಲಾ ಪ್ರಪಂಚಗಳಿಗೂ ತ್ರೈಕಾಲಿಕಾ ಬಾಧ್ಯತ್ವರೂಪವಾದ ಸತ್ಯತ್ವವನ್ನೇ ಗ್ರಹಿಸುತ್ತದೆ. (20) ಹಾಗಾದರೆ ಜ್ಞಾನಸ್ವರೂಪವನ್ನು ಗ್ರಹಿಸತಕ್ಕ ಸಾಕ್ಷಿಯು ಜ್ಞಾನಪ್ರಾಮಾಣ್ಯವನ್ನೂ ಗ್ರಹಿಸುತ್ತಾ ಪ್ರಪಂಚಸತ್ಯತ್ವವನ್ನು ನಿಶ್ಚಯಿ ಸುವುದಾದರೆ ಶುಕ್ತಿರಜತಾದಿ ಜ್ಞಾನಸ್ವರೂಪವನ್ನು ಸಾಕ್ಷಿಯೇ ಗ್ರಹಿಸುವುದರಿಂದ ಆ ಜ್ಞಾನಕ್ಕೂ ಪ್ರಾಮಾಣ್ಯವನ್ನು ಗ್ರಹಿಸುತ್ತಾ ಶುಕ್ತಿರಜತಾದಿಗಳನ್ನು ಸತ್ಯಗಳನ್ನಾಗಿಯೇ ವ್ಯವಸ್ಥೆ ಮಾಡ ಬೇಕಾಗುವುದು. ಎಂದರೆ— ಸಾಕ್ಷಿಯು ಜ್ಞಾನವನ್ನು ಗ್ರಹಿಸುವಾಗ ಇದು ಪ್ರಮಾಣವೇ ಎಂದು ಗ್ರಹಿಸುವುದಿಲ್ಲ. ಮತ್ತೆ ನಿರ್ದೋಷವಾದರೆ ಪ್ರಮಾಣವು. ದೋಷವಿದ್ದರೆ ಅಪ್ರಮಾಣವು ಎಂದು ವ್ಯವಸ್ಥೆಯಿಂದ ಗ್ರಹಿಸುತ್ತದೆ. (21) ಯಾವಾಗ ಪುರುಷನಿಗೆ ಆಕಾಂಕ್ಷಾ ಇದ್ದಪ್ರಯುಕ್ತ ಪ್ರಾಮಾಣ್ಯವು ನಿರ್ಧರಿಸಲಿಕ್ಕೆ ಇಷ್ಟವಾಗಿಯದೋ, ಆಗ ಸಜಾತೀಯ ಸಂವಾದವಿರುವಿಕೆ, ವಿಜಾತೀಯ ವಿಸಂವಾದವಿಲ್ಲದಿರುವಿಕೆ ಎನ್ನುವ ಪರೀಕ್ಷೆಯಿಂದ ದೋಷವಿಲ್ಲವೆಂದು ನಿಶ್ಚಯಿಸಿ ಪ್ರಾಮಾಣ್ಯವನ್ನು ನಿಶ್ಚಯಿಸುತ್ತಾನೆ. ದೋಷವು ಕಂಡರೆ ಅಪ್ರಾಮಾಣ್ಯವನ್ನು ನಿಶ್ಚಯಿಸುತ್ತಾನೆ. ಪ್ರಪಂಚಜ್ಞಾನದಿಂದ ಪ್ರಯತ್ನದಿಂದ ಹುಡುಕಿದರೂ ದೋಷವನ್ನು ಕಾಣದೆ ಪ್ರಾಮಾಣ್ಯವನ್ನೇ ನಿಶ್ಚಯಿಸಿರುವುದರಿಂದ ಪ್ರಪಂಚಸತ್ಯತ್ವವು ಸಾಕ್ಷಿಸಿದ್ಧವು. ಹೀಗೆಯೇ ಶುಕ್ತಿರಜತಾದಿಗಳಿಗೂ ದೋಷವನ್ನು ಕಾಣದೆ ಪ್ರಾಮಾಣ್ಯವನ್ನೇ ನಿಶ್ಚಯಿಸುತ್ತಾನೆನ್ನುವುದು ಅಲ್ಲ. ದೋಷವು ಪ್ರತೀತ ವಾಗದಿರುವಾಗಲೂ ಪ್ರಾಮಾಣ್ಯವು ನಿಶ್ಚಿತವಾಗುವುದಿಲ್ಲ. ದೋಷವು ಪ್ರತೀತವಾದರೆ ಅಪ್ರಾ

ಮಾಣ್ಯವು ನಿಶ್ಚಿತವಾಗುತ್ತದೆ. (22) ಹಾಗಾದರೆ ಶುಕ್ತಿರಜತಾದಿ ಜ್ಞಾನಗಳಿಗೂ ಪ್ರಾಮಾಣ್ಯವು ನಿಶ್ಚಿತವೇ ಆಗುತ್ತದೆ. ಇಲ್ಲವಾದರೆ ನಿಃಶಂಕವಾಗಿ ಪ್ರವೃತ್ತಿಯು ಹೇಗೆ ಕೂಡುತ್ತದೆ ಎಂದರೆ— ಸತ್ಯವೇ. ಈ ಪ್ರವೃತ್ತಿಕಾರಣವಾದ ಅವಧಾರಣವು ಸಾಕ್ಷಿರೂಪವಾದದ್ದಲ್ಲ. ಮತ್ತೆ ಮಾನಸ ನಿಶ್ಚಯಜ್ಞಾನರೂಪವು ಎಂದು **'ಯತ್ಕ್ವಚಿದ್ವ್ಯಭಿಚಾರಿ ಸ್ಯಾದ್ದರ್ಶನಂ ಮಾನಸಂ ಹಿ ತತ್'** ಇತ್ಯಾದಿಗಳಲ್ಲಿ ಹೇಳುವೆವು. ಮನಸ್ಸಿಗಾದರೂ ದೋಷಸಂಪರ್ಕವು ಕೂಡುವುದರಿಂದ ಅಷ್ಟರಿಂದ ಪ್ರಾಮಾಣ್ಯವು ಸಿದ್ಧಿಸಲಾರದು ॥ ೯೯ ॥ ೧೦೦ ॥ ೧೦೧ ॥ ೧೦೨ ॥

(1) ಹಾಗಾದರೆ ದೋಷವಿಲ್ಲವೆಂದು ನಿಶ್ಚಯಿಸುವುದಕ್ಕಾಗಿ ಪರೀಕ್ಷಾಸಹಕೃತವಾದ ಸಾಕ್ಷಿಯು ಜ್ಞಾನಪ್ರಾಮಾಣ್ಯವನ್ನು ವಿಷಯೀಕರಿಸುವುದಾದರೆ ಆಗ ಅನವಸ್ಥೆಯು ಬರುವುದು. ಪರೀಕ್ಷೆಯು (ಯುಕ್ತವೋ ಅಯುಕ್ತವೋ ಎನ್ನುವ ವಿಚಾರವೂ) ತಾನು ಪ್ರಮಾಣವೆಂದು ನಿಶ್ಚಯಿಸಲ್ಪಟ್ಟದ್ದಾಗಿ ಮತ್ತೊಂದರ ಪ್ರಾಮಾಣ್ಯನಿಶ್ಚಯಕ್ಕೆ ಉಪಯುಕ್ತವಾದ ದೋಷಾಭಾವವನ್ನು ನಿಶ್ಚಯಿಸುವುದಕ್ಕಾಗಿ ಆವಶ್ಯಕವು. ತಾನು ಪ್ರಮಾಣವೆಂದು ನಿಶ್ಚಿತವಾಗದಿದ್ದರೆ ಪರಪ್ರಾಮಾಣ್ಯನಿರ್ಧಾರಣದಲ್ಲಿ ಸಮರ್ಥವಾಗಲಾರದು, ತಥಾಚ ಅಲ್ಲಿಯೂ ಪರೀಕ್ಷಾಂತರವನ್ನು ಅನುಸರಿಸಬೇಕು. (2) ಮತ್ತು ಸಾಕ್ಷಿಗೂ ತನ್ನ ಪ್ರಾಮಾಣ್ಯವೇ ನಿಶ್ಚಿತವಾಗದಿದ್ದರೆ ಸ್ವಯಂ ದುರ್ಬಲವಾದುದಕ್ಕೆ ಮತ್ತೊಂದರ ಪ್ರಾಮಾಣ್ಯವನ್ನೂ ನಿಶ್ಚಯಿಸುವ ಸಾಮರ್ಥ್ಯವಿಲ್ಲ. ಹೀಗೆ ಸಾಕ್ಷಿಯ ಪ್ರಾಮಾಣ್ಯವನ್ನು ನಿಶ್ಚಯಿಸುದಕ್ಕಾಗಿ ಪರೀಕ್ಷಾಂತರವನ್ನು ಅಪೇಕ್ಷಿಸಬೇಕು. ಗ್ರಾಹಕಾಂತರವನ್ನು ಅಪೇಕ್ಷಿಸಬೇಕು, ಹೀಗೆ ಅನವಸ್ಥೆಯೇ ಎಂದಾಶಂಕಿಸಿದರೆ —

**ಮೂ ॥ ಪರೀಕ್ಷಾದೇಶ್ಚ ಸತ್ಯತ್ವಂ ತೇನ ಹ್ಯೇವ ಮತಂ ಭವೇತ್ ॥ ೧೦೩ ॥**

ಅ ॥ ಪರೀಕ್ಷಾದೇಶ್ಚ=ಪರೀಕ್ಷಾ, ಸಾಕ್ಷೀ, ಇವುಗಳಿಗೆ ಆದರೂ, ಸತ್ಯತ್ವಂ=ಯಾಥಾರ್ಥ್ಯವು, ತೇನೈವ=ಕೇವಲ ಸಾಕ್ಷಿಯಿಂದಲೇ (ಪರೀಕ್ಷಾಸಹಕೃತವಾದ ಸಾಕ್ಷಿಯಿಂದ ಅಲ್ಲ.) ಮತಂ=ಸಿದ್ಧವು, ಭವೇತ್= ಆಗುವುದು. ಹಿ=ಈ ಅರ್ಥವು ಅನುಭವಸಿದ್ಧವು. ಅಥವಾ ಆದಕಾರಣ ಅನವಸ್ಥಾದೋಷವಿಲ್ಲ.

**ತಾ ॥ ಸ. ರ. ವಿ**— (1) ಪ್ರಪಂಚಕ್ಕೆ ಅಬಾಧ್ಯತ್ವವು ಸಾಕ್ಷಿಪ್ರತ್ಯಕ್ಷದಿಂದ ಗೃಹೀತವಾಗುವುದಾದರೆ ರಜ್ಜುಸರ್ಪಕ್ಕೂ (ಹಗ್ಗದಲ್ಲಿ ಆರೋಪಿತವಾದ ಹಾವಿಗೂ) **ತ್ರೈಕಾಲಿಕಾ**ಬಾಧ್ಯತ್ವವು ಏಕೆ ಗೃಹೀತವಾಗಬಾರದು, ಎಂದು ಹೇಳಕೂಡದು. ಪರೀಕ್ಷೆಯಿಂದ ನಿರ್ದೋಷವೆಂದು ನಿಶ್ಚಿತವಾಗಿದ್ದ ಜ್ಞಾನವಿಷಯವಾದುದನ್ನೇ ಸಾಕ್ಷಿಯು ತ್ರೈಕಾಲಿಕಾಬಾಧ್ಯವೆಂದು ನಿಶ್ಚಯಿಸುತ್ತದೆಂದು ನಿಯಮವು. ಪರೀಕ್ಷೆಗೆ ಸಮೀಚೀನತ್ವವನ್ನು ಸಾಕ್ಷಿಯು ಪರೀಕ್ಷಾ ಇಲ್ಲದೇನೇ ಗ್ರಹಿಸುತ್ತದೆ. ಹೀಗಾದರೆ ವಸ್ತುಗಳ ಯಾಥಾರ್ಥ್ಯವನ್ನೂ ಸಾಕ್ಷಿಯು ಪರೀಕ್ಷಾ ಇಲ್ಲದೇನೇ ಗ್ರಹಿಸಬಹುದೆಂದು ಹೇಳಲು ಶಕ್ಯವಾಗುವುದಿಲ್ಲ. ದೀಪವಿಲ್ಲದೇನೇ ದೀಪವು ತಿಳಿಯಲ್ಪಡುವುದಾದರೆ ಘಟವೂ ದೀಪವಿಲ್ಲದೇನೇ ತಿಳಿಯಲ್ಪಡಲಿ ಎಂದು ಹೇಳಲು ಶಕ್ಯವಾಗುವುದಿಲ್ಲ.

**ನ್ಯಾಯಸುಧಾ**— (1)ದೋಷಗಳು ಇಲ್ಲವೆಂದು ನಿಶ್ಚಯಿಸುವುದಕ್ಕಾಗಿ ಯುಕ್ತ್ಯನುಸಂಧಾನವು ಪರೀಕ್ಷೆಯು. ಸಂದಿಗ್ಧವಾದ ಅರ್ಥವು ಯುಕ್ತಿವಿಷಯವು ಸ್ಥಾಣುತ್ವ-ಪುರುಷತ್ವರೂಪವಾದ ಉಭಯಕೋಟಿಪ್ರಾಪಕವಾದುದು ಇದ್ದರೇನೇ ಸಂಶಯವು ಹುಟ್ಟುತ್ತದೆ. ಪ್ರಪಂಚ ಎಲ್ಲಿ ಎಲ್ಲಿ ದೋಷಗಳು ಇರಬಹುದೆನ್ನುವ ಸಂಭಾವನೆಯಿಂದ ಸಂಶಯವು ಹುಟ್ಟುತ್ತದೋ ಅಲ್ಲಿಯೆ ಪರೀಕ್ಷಾಪೇಕ್ಷೆಯು. ಬೇರೆಕಡೆ ಅಲ್ಲ. ಸಾಕ್ಷಿಸಿದ್ಧಾರ್ಥದಲ್ಲಿ ಸಂಶಯಕ್ಕೆ ಪ್ರಾಪ್ತಿಯೇ

ಇಲ್ಲದಿರುವುದರಿಂದ ಎಲ್ಲಾ ಕಡೆಗಳಲ್ಲಿ ದೋಷಸಂಶಯವು ಇಲ್ಲವು. ಆದಕಾರಣ ಪರೀಕ್ಷಾನವಸ್ಥೆ ಇಲ್ಲ. ಹೇಗೆಂದರೆ—ತೃಷಿತನಾದವನು ಮುಂಭಾಗದಲ್ಲಿ ಸರೋವರವಿದೆ ಎನ್ನುವ ವಾಕ್ಯವನ್ನು ಕೇಳಿದರೆ ಆಗ ಆತನಿಗೆ ಸಂಶಯವು ಹುಟ್ಟುತ್ತದೆ. ಪುರುಷರ ವಾಕ್ಯಗಳಲ್ಲಿ ಯಾಥಾರ್ಥ್ಯವೂ ಅಯಾಥಾರ್ಥ್ಯವೂ ಎರಡೂ ಲೋಕದಲ್ಲಿ ದೃಷ್ಟವಾಗಿರುವುದರಿಂದ ಈ ವಾಕ್ಯವು ಭ್ರಾಂತ್ಯಾದಿ ಮೂಲಕವೋ ಅಲ್ಲವೋ ಎಂದು. ಆದುದರಿಂದಲೇ ಅರ್ಥವಿಶೇಷದಲ್ಲಿ ಸಂಶಯಗ್ರಸ್ತನಾಗಿ ರೂಪವಿಶೇಷಾ (ಶುಕ್ಲರೂಪಾ) ದಿಗಳಿಂದ ಇದು ಪಾನೀಯವೆಂದು ಅನುಮೇಯಿಸುತ್ತಾನೆ. ಅಲ್ಲಿಯೂ ಇದು ನಿರ್ದೋಷವಾದ ಉಪಪತ್ತಿಯೋ, ಅಥವಾ ಆಭಾಸವೋ ಎಂದು ಸಂಶಯವು ಹುಟ್ಟುತ್ತದೆ. ವ್ಯಾಪ್ತ್ಯಾದಿಗಳನ್ನು ಗ್ರಹಿಸುವವರಿಗೆ ಯಾಥಾರ್ಥ್ಯವಿದ್ದರೆ ಇದು ಸದನುಮಾನವು ಆಗುವುದು. ಇಲ್ಲವಾದರೆ ಆಭಾಸವಾಗುವುದು. ಸಮೀಪಿಸಿದವನಾದಾಗ್ಯೂ ಜಲಪಾನಾನಂತರ ದಲ್ಲಿ ರಸವಿಶೇಷದಿಂದ ಅನುಮೇಯಿಸಿದರೂ ಇದು ಸದನುಮಾನವೋ ಆಭಾಸವೋ ಎಂದು ಹಿಂದೆ ಹೇಳಿದಪ್ರಕಾರ ಸಂಶಯಪಡುತ್ತಾನೆ. ನೀರನ್ನು ಕುಡಿದ ಮೇಲೆ ಪಿಪಾಸಾದಿನಿಮಿತ್ತವಾದ ದುಃಖಾಭಾವವನ್ನೂ ಸುಖವನ್ನೂ ಅನುಭವಿಸುತ್ತಾ ಅಲ್ಲಿ ಸಂಶಯಗ್ರಸ್ತನಾಗುವುದಿಲ್ಲ. ಸಾಕ್ಷಿ ಸಿದ್ಧಗಳಾದ ಸುಖ-ದುಃಖಾದ್ಯಭಾವಗಳಲ್ಲಿ ಯಾವಾಗಲೂ ಸಂಶಯಾದಿಗಳು ಕಾಣಲಾರವು. ಯಾವುದು ಪ್ರತೀತವಾದ ಶುಕ್ತಿರಜತಮೊದಲಾದುದೋ ಅದು ಮಿಥ್ಯೆಯು. ಯಾವುದು ಪ್ರತೀತ ಗಳಾದ ಘಟಾದಿಗಳೋ ಅವು ಸತ್ಯವು. ಸುಖಾದಿಗಳು ಪ್ರತೀತಗಳಾಗಿವೆ. ಆದಕಾರಣ ಅವುಗಳು ಸತ್ಯವೋ ಮಿಥ್ಯೆಯೋ ಎಂದು ಸಂಶಯವು ಪ್ರತೀತತ್ವರೂಪ ಸಾಧಾರಣಧರ್ಮದಿಂದ ಬರುವುದು, ಎಂದು ಹೇಳಕೂಡದು. ಪ್ರತೀತಿವಿಶೇಷವಾದ ಸಾಕ್ಷಿಯಲ್ಲಿರತಕ್ಕ ನಿತ್ಯಜ್ಞಾನತ್ವರೂಪವಾದ ನಿಶ್ಚಾಯಕವಿದೆ. ತಥಾಚ ಸುಖಾದಿಗಳು ಸಾಕ್ಷಿಗೆ ತೋರತಕ್ಕವುಗಳಾದುದರಿಂದ ನಿತ್ಯಜ್ಞಾನ ರೂಪ ಸಾಕ್ಷಿಸಿದ್ಧವಾಗಿರುವಪ್ರಯುಕ್ತ ಯಾವಾಗಲೂ ಸಂಶಯವು ಬರಲಾರದು. ಸಾಕ್ಷಿಯಲ್ಲಿ ನಿತ್ಯಜ್ಞಾನತ್ವರೂಪವೈಲಕ್ಷಣ್ಯವಿದೆ. ಇಲ್ಲವಾದರೆ ನಿಶ್ಚಾಯಕವಿದ್ದರೂ ಪ್ರತೀತತ್ವಮಾತ್ರದಿಂದಲೇ ಸಂಶಯವು ಬರುವುದಾದರೆ ಸಂಶಯಕ್ಕೆ ನಾಶವೇ ಇಲ್ಲದಿರುವುದರಿಂದ ಸುಖಾದಿಗಳು ಸತ್ಯ ಗಳೆನ್ನುವ ವ್ಯವಹಾರವು ಇಲ್ಲವೆಂದಾಗಬೇಕಾಗುವುದು. ಸಂಶಯವು ಇಲ್ಲವಾದರೆ ಪರೀಕ್ಷೆಯೂ ಬೇಕಾಗಿಲ್ಲ. ಅನವಸ್ಥೆಯೂ ಇಲ್ಲ. ಸಾಕ್ಷಿಯಿಂದ ಸಂಶಯವು ಹುಟ್ಟದಿರುವುದರಿಂದಲೇ ಸಾಕ್ಷಿಗೆ ಪ್ರಾಮಾಣ್ಯವು ನಿಶ್ಚಿತವಾಗೋಣ ಪರೀಕ್ಷಾನವಸ್ಥೆಯೂ ಪರಿಹೃತವಾಯಿತು. (2) ಸಾಕ್ಷಿಯು ಸ್ವಪ್ರಕಾಶವಾಗಿರುವುದರಿಂದ ತನ್ನ ಪ್ರಾಮಾಣ್ಯವನ್ನು ಗ್ರಹಿಸುವಪ್ರಯುಕ್ತ ಗ್ರಾಹಕಾನ ವಸ್ಥೆಯೂ ಇರುವುದಿಲ್ಲ. ಸಾಕ್ಷಿಗೆ ಪ್ರಾಮಾಣ್ಯಗ್ರಾಹಕತ್ವವಿಷಯದಲ್ಲಿ ಇಷ್ಟುಮಾತ್ರವಿಶೇಷವು. ಇಂದ್ರಿಯ ಲಿಂಗ ಶಬ್ದಗಳಿಂದ ಹುಟ್ಟಿರುವ ಜ್ಞಾನಗಳಲ್ಲಿ ಅನಾದಿಯಾದ ಸಂಸಾರದಲ್ಲಿ ಯಾಥಾರ್ಥ್ಯ ಅಯಾಥಾರ್ಥ್ಯರೂಪವಾದ ಎರಡು ಗತಿಯನ್ನು ಅನುಸಂಧಾನಮಾಡತಕ್ಕ ಸಾಕ್ಷಿಯು ತಕ್ಷಣವೇ ಇದು ಪ್ರಮಾಣವೆಂದು ನಿಶ್ಚಯಿಸಲಿಕ್ಕೆ ಶಕ್ಯವಾಗುವುದಿಲ್ಲ. ಮತ್ತೆ ದೋಷಾಭಾವವನ್ನು ನಿಶ್ಚಯಿಸಿಯೇ. ದೋಷಾಭಾವವನ್ನು ತಾನೇ ನಿಶ್ಚಯಿಸಲಿಕ್ಕೆ ಸಮರ್ಥ ವಾಗಲಾರದು. ಮತ್ತೆ ಪರೀಕ್ಷಾಸಹಕೃತವಾದ ಸಾಕ್ಷಿಯೇ; ಇಂದ್ರಿಯಲಿಂಗಶಬ್ದಗಳಿಂದ ಹುಟ್ಟುವ ಪರೀಕ್ಷೆಯಲ್ಲಿ ಸಾಕ್ಷಾತ್ ಸ್ವವಿಷಯಗಳಾದ ಸುಖಾದಿಗಳ ಜ್ಞಾನವು ಬರುವತನಕ ಪರೀಕ್ಷಾಂತರವು (ಸಜಾತೀಯ ಜ್ಞಾನಾಂತರ ಸಂವಾದಿರೂಪವಾದುದು.) ಆವಶ್ಯಕವು. ಪರೀಕ್ಷೆಯು ದೋಷಶಂಕಾರೂಪವಾದ ಬುದ್ಧಿದೋಷನಿರಾಸಕ್ಕೆ ಮಾತ್ರ ಕಾರಣವು. ಸಾಕ್ಷಿಯು ಜ್ಞಾನಸ್ವರೂಪವನ್ನೂ ಪ್ರಾಮಾಣ್ಯವನ್ನೂ ವಿಷಯೀಕರಿಸಲಿಕ್ಕೆ ತನ್ನ ಮಹಿಮೆಯಿಂದಲೇ ಸಮರ್ಥವಾಗುತ್ತದೆ. ಆ ಸಾಕ್ಷಿಗಾದರೂ ಮನಸ್ಸಿನಿಂದ ಹುಟ್ಟಿರತಕ್ಕ ಅಪ್ರಾಮಾಣ್ಯಶಂಕಾ

ರೂಪವಾದ ದೋಷಸಂಶಯದಿಂದ ಪ್ರಾಮಾಣ್ಯಗ್ರಹಣಶಕ್ತಿಯು ಪ್ರತಿಬದ್ಧವಾಗುತ್ತದೆ. ಆದುದರಿಂದ ವ್ಯವಸ್ಥೆಯಿಂದಲೇ ಗ್ರಹಿಸುತ್ತದೆ. ನಿಶ್ಚಯವಾಗುವುದಿಲ್ಲ. ಪರೀಕ್ಷೆಯಿಂದ ದೋಷಶಂಕಾರೂಪವಾದ ಪ್ರತಿಬಂಧವು ಹೋಗುತ್ತಿರಲು ತನ್ನ ಶಕ್ತಿಯಿಂದಲೇ ಪ್ರಾಮಾಣ್ಯವನ್ನು ನಿಶ್ಚಯಿಸುತ್ತದೆ. (3) ಹಾಗಾದರೆ, ಈ ವ್ಯುತ್ಪಾದನವು (ಅಂದರೆ, ಸಾಕ್ಷಿಯು ಜ್ಞಾನಸ್ವರೂಪವನ್ನೂ ಅಪ್ರಾಮಾಣ್ಯವನ್ನೂ ತನ್ನ ಮಹಿಮೆಯಿಂದಲೇ ವಿಷಯೀಕರಿಸಲಿಕ್ಕೆ ಶಕ್ತವಾಗಿದೆ. ಪ್ರಾಮಾಣ್ಯಶಂಕಾರೂಪವಾದ ದೋಷದಿಂದ ಆ ಶಕ್ತಿಯು ಪ್ರತಿಬದ್ಧವಾಗುತ್ತದೆ. ಆ ಮೇಲೆ ವಿಸಂವಾದರೂಪಪರೀಕ್ಷೆಯಿಂದ ಪ್ರಾಮಾಣ್ಯಶಂಕಾರೂಪವಾದ ಪ್ರತಿಬಂಧವು ಹೋಗುತ್ತಿರಲು ತನ್ನ ಶಕ್ತಿಯಿಂದಲೇ ಅಪ್ರಾಮಾಣ್ಯವನ್ನು ನಿಶ್ಚಯಿಸುತ್ತದೆ ಎನ್ನುವುದು) ಅಪ್ರಾಮಾಣ್ಯದಲ್ಲಿಯೂ ಸಮವಾಗಿರುವುದರಿಂದ ಅಪ್ರಾಮಾಣ್ಯವೂ ಸ್ವತಃ ಗೃಹೀತವಾಗಲಿ ಎಂದು ಹೇಳಕೂಡದು. ವೈಷಮ್ಯವಿದೆ. ಪ್ರಾಮಾಣ್ಯವು ನಿಶ್ಚಿತವಾದರೂ ಪರೀಕ್ಷೆಗೆ ಅಪ್ರಾಮಾಣ್ಯಶಂಕಾರೂಪವಾದ ಪ್ರತಿಬಂಧಕವಿಲ್ಲವೆಂದು ಮಾತ್ರ ನಿಶ್ಚಯಿಸಲಿಕ್ಕೆ ಶಕ್ಯವಾಗುತ್ತದೆ. ಅಪ್ರಾಮಾಣ್ಯಶಂಕೆಯಿಲ್ಲದಿರುವ ಸುಖಾದಿ ಪ್ರಾಮಾಣ್ಯಗ್ರಹಣದಲ್ಲಿ ಪರೀಕ್ಷಾಪೇಕ್ಷೆಯಿಲ್ಲ. ಪ್ರಾಮಾಣ್ಯಗ್ರಹಣದಲ್ಲಿ ಪರೀಕ್ಷೆಗೆ ಕಾರಣತ್ವವಿದ್ದರೆ ಸುಖಾದಿ ಜ್ಞಾನಪ್ರಾಮಾಣ್ಯಗ್ರಹಣದಲ್ಲಿಯೂ ಪರೀಕ್ಷಾಪೇಕ್ಷೆಯು ಇರಬೇಕಾಗುವುದು. ಅಂತೂ ಅನವಸ್ಥೆಯು. ಅಂದರೆ, ಸಾಕ್ಷಿಸಿದ್ಧಸುಖಾದಿಗಳನ್ನು ಇಟ್ಟುಕೊಂಡು ಪರೀಕ್ಷಾನವಸ್ಥೆಯನ್ನು ಪರಿಹರಿಸಬೇಕು. ಅಲ್ಲಿಯೂ ಮತ್ತೊಂದು ಪರೀಕ್ಷೆಯ ಅಪೇಕ್ಷೆಯಿದ್ದರೆ ಆಗ ಅದನ್ನು ಪರಿಹರಿಸಲಿಕ್ಕೆ ಉಪಾಯವಿಲ್ಲದಿರುವುದರಿಂದ ಅನವಸ್ಥೆಯು ಬಂದೇ ಬರುತ್ತದೆ. ಆದುದರಿಂದ ಸಾಕ್ಷಿಗೇನೇ ಜ್ಞಾನಗ್ರಾಹಕಗ್ರಾಹ್ಯತ್ವರೂಪವಾದ ಸ್ವತಃ ಪ್ರಾಮಾಣ್ಯವು. ಇತರಗಳಿಗೆ ಪರತಃ (ಪರೀಕ್ಷಾಪೇಕ್ಷೆಯುಳ್ಳ) ಪ್ರಾಮಾಣ್ಯವೆಂದಂಗೀಕರಿಸಿದರೂ ಯಾವ ವಿರೋಧವೂ ಇಲ್ಲ ॥ ೧೦೩ ॥

**ಸ. ರ. ವಿ—** ಜಗತ್ತಿಗೆ ತ್ರೈಕಾಲಿಕಾಬಾಧ್ಯತ್ವವು ಸಾಕ್ಷಿಯಿಂದ ನಿಶ್ಚಿತವಾಗಿದೆ ಎಂದಂಗೀಕರಿಸದಿದ್ದರೆ ಬಾಧಕವನ್ನು ಹೇಳುತ್ತಾರೆ.

**ನ್ಯಾಯಸುಧಾ**—ಹಾಗಾದರೆ, ಸಾಕ್ಷಿಯು ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವನ್ನು ವಿಷಯೀಕರಿಸಿದರೂ ಕೆಲವು ಕಾಲದಲ್ಲಿ ಕೆಲವು ಪುರುಷರಿಗೆ ಮಾತ್ರ ಬಾಧಜ್ಞಾನಬರುವುದಿಲ್ಲವೆಂದೇ. ಪುನಃ ಸಾಕ್ಷಿಯು ಯಾವಾಗಲೂ ಎಲ್ಲಿಯೂ ಯಾವುದರಿಂದಲೂ ಸ್ವಾರ್ಥಕ್ಕೆ ಬಾಧವು ಇಲ್ಲವೆಂದು ಗ್ರಹಿಸುವುದಿಲ್ಲ. ಆದಕಾರಣ ಸಾಕ್ಷಿಯಿಂದ ಸತ್ಯತ್ವವು (ಸರ್ವಥಾ ಬಾಧವಿಲ್ಲದಿರುವಿಕೆಯು) ಜಗತ್ತಿಗೆ ಹೇಗೆ ಸಿದ್ಧಿಸುವುದು ಎಂದರೆ—

**ಮೂ ॥ ಅನ್ಯಥಾ ಶ್ರುತಿಯುಕ್ತ್ಯಾದಿ ಪ್ರಮಾಣೈಶ್ಚ ಸಹೈವ ತು ।**
**ಅಕಸ್ಮಾದ್ವಿನಿವೃತ್ತಿಶ್ಚ ಕಿಂ ವಿಶ್ವಸ್ಯ ನ ಶಂಕ್ಯತೇ ।**
**ಇತಃ ಪೂರ್ವಂ ತಥಾ ಭಾವಾದ್ಯದಿ ನೋ ಸಂಸ್ಮೃತೇರ್ಗತಿಃ ॥ ೧೦೪ ॥**
**ಸಾಕ್ಷ್ಯನುಮಾದಿತಶ್ಚೇತ್ಸ್ಯಾತ್ತತ್ಪ್ರಮಾಣ್ಯಂ ಚ ಸಾಕ್ಷಿತಃ ।**
**ತತ್ಪ್ರಮಾಣ್ಯಂ ಯಥಾ ಸಾಕ್ಷೀ ಸ್ಥಾಪಯತ್ಯೇವಮೇವ ಹಿ ॥ ೧೦೫ ॥**
**ಸರ್ವಕಾಲೇಷ್ವಪಿ ಸ್ಥೈರ್ಯಮಾದ್ವ್ಯಭಿಚಾರಮಪೋಹ್ಯ ಚ ।**
**ಏವಮುಕ್ಷಜಮಾನತ್ವಸಿದ್ಧಾಂ ವಿಶ್ವಸ್ಯ ಸತ್ಯತಾಂ ।**
**ಕಿಮಿತಿ ಸ್ಥಾಪಯೇನ್ನಾಯಂ ನಿರ್ದೋಷಜ್ಞಾನಶಕ್ತಿತಃ ॥ ೧೦೬ ॥**

ಅ ॥ ಅನ್ಯಥಾ=ಸಾಕ್ಷಿಯು ಸರ್ವಥಾ ಬಾಧರಾಹಿತ್ಯರೂಪವಾದ ಪ್ರಾಮಾಣ್ಯವನ್ನು ಗ್ರಹಿಸದಿದ್ದರೆ, ಶ್ರುತಿಯುಕ್ತ್ಯಾದಿಪ್ರಮಾಣೈಶ್ಚ = ಶ್ರುತಿಯುಕ್ತಿಮೊದಲಾದ ಪ್ರಮಾಣಗಳಿಂದ, ಸಹೈವ=ಕೂಡಿಕೊಂಡೇ, ವಿಶ್ವಸ್ಯ ತು = ಪೂರ್ಣನಾದ ಬ್ರಹ್ಮನಿಗೂ, ಪ್ರಪಂಚದಂತೆ, ಅಕಸ್ಮಾತ್=ನಿಷ್ಕಾರಣವಾಗಿ ಬಾಧಕವಿಲ್ಲದೆ, ನಿವರ್ತಕವಿಲ್ಲದೆ, ವಿನಿವೃತ್ತಿಶ್ಚ=ನಿವೃತ್ತಿಯು, ಕಿಂ=ಯಾವ ಕಾರಣದಿಂದ, ನ ಶಂಕ್ಯತೇ=ಶಂಕಿಸಲ್ಪಡುವುದಿಲ್ಲ. ಇತಃಪೂರ್ವಂ=ಇದಕ್ಕಿಂತಮೊದಲು, ತಥಾಽಭಾವಾತ್=ನಿವೃತ್ತಿಯಾಗದಿರುವುದರಿಂದ, ಯದಿ=ಯಾವ ಪಕ್ಷದಲ್ಲಿ (ಬ್ರಹ್ಮನಿಗೆ ನಿವೃತ್ತಿಯು), ನ ಶಂಕ್ಯತೇ = ಶಂಕಿಸಲ್ಪಡುವುದಿಲ್ಲವೋ, (ತರ್ಹಿ=ಹಾಗಾದರೆ,) ಸಂಸೃತೇಃ=ಸಂಸ್ಕಾರಕ್ಕೆ, ಗತಿಃ=ನಿವೃತ್ತಿಯು, ನೋ ಸ್ಯಾತ್=ಆಗದೇಹೋಗುವುದು. ವಾಕ್ಯಾನುಮಾದಿತಃ ಸ್ಯಾತ್ ಚೇತ್=ಬ್ರಹ್ಮನಿಗೂ ನಿವೃತ್ತಿಯಾಗಲಿ ಎನ್ನುವ ಆಶಂಕೆಯನ್ನು ಆಪಾದಿಸಿದಾಗ ಪರನು ವಾಕ್ಯ ಅನುಮಾನಾದಿಗಳಿಂದ ನಿವೃತ್ತಿಯಾಗುವುದಿಲ್ಲವೆನ್ನುವ ನಿಶ್ಚಯವು ಬರುವುದು ಎಂದು ಹೇಳಿದರೆ, ಅಥವಾ ಅಕಸ್ಮಾತ್ತಾಗಿ ಉತ್ತರಕ್ಷಣದಲ್ಲಿಯೇ ಪ್ರಪಂಚಕ್ಕೆ ಲಯವಾಗಲಿ ಎನ್ನುವ ಶಂಕೆಯನ್ನು ಆಪಾದಿಸಿದರೆ ವಾಕ್ಯಾನುಮಾನಾದಿಗಳ ಬಲದಿಂದ ಪರಮೇಶ್ವರನ ಇಚ್ಛಾದಿಗಳಿಂದಲೇ ನಿಶ್ಚಯವಾಗುವುದು ಎಂದು ತಿಳಿದರೆ, ಅಥವಾ ವಾಕ್ಯಾನುಮಾನಾದಿಗಳಿಂದ ಸಂಸಾರಕ್ಕೆ ನಿವೃತ್ತಿಯು ಆಗುವುದು ಎಂದು ಹೇಳಿದರೆ, ಆಗ, ತತ್ಪ್ರಾಮಾಣ್ಯಂ=ಆ ವಾಕ್ಯಾದಿಗಳ ಪ್ರಾಮಾಣ್ಯವು, (ಯಾವುದರಿಂದ ನಿಶ್ಚಿತವಾಗುತ್ತದೆಂದು ಹೇಳಬೇಕು. ಸಾಕ್ಷೀತರದಿಂದ ಎಂದಂಗೀಕರಿಸಿದರೆ ಜ್ಞಾನವು ಸಾಕ್ಷಿವೇದ್ಯವಾಗಿರುವುದರಿಂದ ಪ್ರಾಮಾಣ್ಯಕ್ಕೆ ಪರತನ್ತ್ರ್ಯವು ಬರಬೇಕಾಗುವುದಾದಕಾರಣ) ಸಾಕ್ಷಿತಶ್ಚ=ಸಾಕ್ಷಿಯಿಂದಲೇ ಎಂದು ಹೇಳಬೇಕು. (ಸಾಕ್ಷಿಯು ಬ್ರಹ್ಮನಿಗೆ ಸತ್ಯತ್ವವನ್ನು ಪ್ರತಿಪಾದಿಸುವ ವಾಕ್ಯಾದಿಗಳ ಪ್ರಾಮಾಣ್ಯವನ್ನು ೧ ತಾತ್ಕಾಲಿಕವನ್ನೇ ಗೃಹಿಸುತ್ತದೋ, ೨ ಅಥವಾ ಆತ್ಯಂತಿಕವನ್ನು ಗೃಹಿಸುತ್ತದೋ? ೧ನೇ ಕಲ್ಪದಲ್ಲಿ ತಾತ್ಕಾಲಿಕ ಪ್ರಾಮಾಣ್ಯದಿಂದ ಬ್ರಹ್ಮನಿಗೆ ಅಬಾಧ್ಯತ್ವಾದಿಗಳು ಸಿದ್ಧಿಸುವುದಿಲ್ಲ. ಹಿಂದಿನ ಶಂಕೆಯು ನಿವೃತ್ತವಾಗುವುದಿಲ್ಲ. ಆತ್ಯಂತಿಕ ಪ್ರಾಮಾಣ್ಯವನ್ನು ಗೃಹಿಸುವುದಾದರೆ) ತತ್ಪ್ರಾಮಾಣ್ಯಂ = ಬ್ರಹ್ಮಸತ್ಯತ್ವಾದಿ ಪ್ರತಿಪಾದಕ ವಾಕ್ಯಾದಿಗಳಿಗೆ ಪ್ರಾಮಾಣ್ಯವನ್ನು, ಯಥಾ=ಹೇಗೆ, ಸಾಕ್ಷೀ = ಸಾಕ್ಷೀಂದ್ರಿಯವು, ಸ್ಥಾಪಯತಿ=ವರ್ತಮಾನಕಾಲದಲ್ಲಿರತಕ್ಕುದನ್ನಾಗಿ ಗ್ರಹಿಸುತ್ತದೋ, ಏವಮೇವ=ಹೀಗೆಯೇ, ಸರ್ವಕಾಲೇಷ್ವಪಿ=ಎಲ್ಲಾ ಕಾಲಗಳಲ್ಲಿಯೂ, ಸ್ಥೈರ್ಯಾತ್=ಶಾಶ್ವತವಾಗಿಯೇ, ವ್ಯಭಿಚಾರಂ=ಬಾಧಕವನ್ನು, ಅಪೋಹ್ಯ ಚ=ನಿರಾಕರಿಸಿಯೇ, ಸ್ಥಾಪಯತಿ=ಗ್ರಹಿಸುತ್ತದೆ. ಅಂದರೆ, ಸರ್ವಕಾಲಗಳಲ್ಲಿಯೂ ಇದು ಹೀಗೆಯೇ ಸರಿ. ಯಾವಾಗಲೂ ವಿಷಯಾಪಹಾರರೂಪವಾದ ಬಾಧವನ್ನು ಹೊಂದುವುದಿಲ್ಲ ಎಂದು ವ್ಯಭಿಚಾರವನ್ನು ಬಿಟ್ಟು ಅದರಿಂದಲೇ ಸ್ಥಿರವಾಗಿ ಗ್ರಹಿಸುತ್ತದೆ. ಹಿ=ಪ್ರಸಿದ್ಧವು. ಏವಂ=ಹೀಗೆ, ಅಕ್ಷಜಮಾನತ್ವಸಿದ್ಧಾಂ=ಸಾಕ್ಷಿಸಿದ್ಧವಾದ ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದ, ವಿಶ್ವಸ್ಯ=ಜಗತ್ತಿಗೆ, ಸತ್ಯತಾಂ=ಯಾಥಾರ್ಥ್ಯವನ್ನು, ಅಯಂ=ಸಾಕ್ಷಿಯು, ನಿರ್ದೋಷಜ್ಞಾನಶಕ್ತಿತಃ = ನಿರ್ದೋಷವಾದ ಜ್ಞಾನರೂಪತ್ವಶಕ್ತಿಯಿಂದ, ಕಿಮಿತಿ = ಯಾವ ಕಾರಣದಿಂದ, ನ ಸ್ಥಾಪಯೇತ್=ಸ್ಥಾಪಿಸಲಾರದು.

**ತಾ ॥ ಸ. ರ.** ವಿ— ಇದಕ್ಕಿಂತ ಮೊದಲು ಜಗತ್ಪ್ರವಾಹವು ನಿವೃತ್ತವಾಗದಿರುವುದರಿಂದ ಉತ್ತರಕಾಲದಲ್ಲಿಯೂ ನಿವೃತ್ತವಾಗುವುದಿಲ್ಲವೆಂದಂಗೀಕರಿಸಿದರೆ ಅದರಿಂದಲೇ ಅನಾದಿಯಾದ ಸಂಸಾರಕ್ಕೂ ನಿವೃತ್ತಿಯಾಗದೆ ಹೋಗಲಿ. 'ತರತಿ ಶೋಕಮಾತ್ಮವಿತ್' ಎನ್ನುವ ಶ್ರುತಿಯಿಂದಲೂ, 'ಸಂಸಾರಬಂಧೋ ನಿವರ್ತಿತುಂ ಯೋಗ್ಯಃ ಬಂಧತ್ವಾತ್ ಶೃಂಖಲಾಬಂಧವತ್' ಸಂಸಾರಬಂಧವಾದರೂ ನಿವೃತ್ತಿಯನ್ನು ಹೊಂದಲಿಕ್ಕೆ ಯೋಗ್ಯವು, ಬಂಧವಾಗಿರುವುದ

ರಿಂದ ಶೃಂಖಲಾಬಂಧದಂತೆ, ಎನ್ನುವ ಅನುಮಾನದಿಂದಲೂ ಸಂಸಾರನಿವೃತ್ತಿಯು ಸಿದ್ಧಿಸುವು ದೆಂದರೆ ಶ್ರುತಿಯಿಂದ ಅನುಮಾನಪ್ರಾಮಾಣ್ಯವು ಹೇಗೆ ಸಿದ್ಧವಾಗುವುದು? ಪ್ರಮಾಣಾಂತರದಿಂದ ಸಿದ್ಧವಾಗುವುದಾದರೆ ಅದರ ಪ್ರಾಮಾಣ್ಯವೂ ಮತ್ತೊಂದು ಪ್ರಮಾಣದಿಂದ ಹೀಗೆ ಅನವಸ್ಥೆಯು ಬರುವುದು. ಆದುದರಿಂದ ಸ್ವಪ್ರಕಾಶರೂಪವಾದ ಸಾಕ್ಷಿಯಿಂದಲೇ ಈ ಶ್ರುತಿಗೂ ಅನುಮಾನ ಗಳಿಗೂ ಪ್ರಾಮಾಣ್ಯವೆಂದಂಗೀಕರಿಸಬೇಕು. ಹೀಗಾದರೆ ಸಾಕ್ಷಿಯು ಹೇಗೆ ಪ್ರಾಮಾಣ್ಯವನ್ನು ಈಗ ಇರುವುದನ್ನಾಗಿಯೇ ಸ್ಥಾಪಿಸುತ್ತದೋ, ಹಾಗೆಯೇ ಕಾಲಾಂತರಗಳಲ್ಲಿಯೂ ಸ್ಥಾಪಿಸುತ್ತದೆ. ಇದೇಪ್ರಕಾರ ಸಾಕ್ಷಿಯು ಪ್ರತ್ಯಕ್ಷಮೊದಲಾದ ಪ್ರಮಾಣಗಳಿಂದ ಸಿದ್ಧವಾದ ಜಗತ್ಸತ್ಯತ್ವವನ್ನು ತ್ರೈಕಾಲಿಕಾಬಾಧ್ಯವನ್ನಾಗಿ ಸ್ಥಾಪಿಸುತ್ತದೆಂದು ಅಂಗೀಕರಿಸಿದರೆ ಯಾವ ದೋಷವಿದೆ? ಆದುದ ರಿಂದ ಪ್ರಪಂಚಕ್ಕೆ ತ್ರೈಕಾಲಿಕಾಬಾಧ್ಯತ್ವವನ್ನು ಗ್ರಹಿಸತಕ್ಕ ಸಾಕ್ಷಿಪ್ರತ್ಯಕ್ಷದಿಂದ ವಿರೋಧವಿದ್ದುದ ರಿಂದ ಮುಂದೆ ಬರುವ ಬಾಧಕವನ್ನು ವಿಷಯೀಕರಿಸಿಕೊಂಡಿರುವ ಅನುಮಾನಾದಿಗಳು ಹುಟ್ಟಲಿ ಕ್ಕೇನೇ ಸಮರ್ಥಗಳಾಗುವುದಿಲ್ಲ.

**ಸ. ಚ. ವಿ.**— (1) ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುವುದಿಲ್ಲವೆಂದಂಗೀಕರಿಸಿದರೆ ಜ್ಞಾನ ಹೊರತು ಆತ್ಮಾದಿರೂಪ ಜಗತ್ತಿಗೆ ಇದಕ್ಕಿಂತ ಮೊದಲು ನಿವೃತ್ತಿಯಾಗದಿರುವುದರಿಂದ ಮುಂದಕ್ಕೂ ನಿವೃತ್ತಿಯು ಶಂಕಿಸಲ್ಪಡದಿದ್ದರೆ ಸಂಸಾರಕ್ಕೆ ನಿತ್ಯತ್ವವು ಬರಬೇಕಾಗುವುದು. (2) ೧ 'ಬ್ರಹ್ಮವಿದಾಪ್ನೋತಿ ಪರಂ' ಎಂದು ವಾಕ್ಯವು. (ಶ್ರುತಿಯು) ೨ 'ವಿಮತಂ ದುಃಖಾ ದಿಕಂ ಜ್ಞಾನನಿವರ್ತ್ಯಂ ಅಜ್ಞಾನಕಾರ್ಯತ್ವಾತ್ ರಜ್ಜುಸರ್ಪವತ್' = ವಿವಾದವಿಷಯವಾದ ದುಃಖ ಮೊದಲಾದುದು ಜ್ಞಾನದಿಂದ ನಾಶ್ಯವು, ಅಜ್ಞಾನಕಾರ್ಯವಾಗಿರುವುದರಿಂದ ಹಗ್ಗದಲ್ಲಿ ಹಾವು ಎನ್ನುವ ಭ್ರಮದಂತೆ' ಎಂದನುಮಾನವು. ೩ (ಆದಿಶಬ್ದದಿಂದ) 'ಮಹತಾಂ ಸಂಸಾರಬಂಧಃ ನಿವರ್ತ್ಯೋ ಭವಿತುಮರ್ಹತಿ ಬಂಧತ್ವಾತ್ ಶೃಂಖಲಾಬಂಧವತ್' = ಜ್ಞಾನಿಗಳ ಸಂಸಾರಬಂಧವು ನಾಶ್ಯವಾಗಲು ಯೋಗ್ಯವಾಗಿದೆ, ಬಂಧವಾಗಿರುವುದರಿಂದ ಶೃಂಖಲಾದಿಗಳ ಬಂಧದಂತೆ. ೪ ಯೋಗಿಗಳ ಪ್ರತ್ಯಕ್ಷವು. ಇವುಗಳು ಸಂಸಾರಬಂಧಕ್ಕೆ ನಿವೃತ್ತಿಯಿದೆ ಎನ್ನುವಲ್ಲಿ ಪ್ರಮಾಣವು. ಆ ವಾಕ್ಯಾದಿಗಳ ಪ್ರಾಮಾಣ್ಯವನ್ನು ಸಾಕ್ಷಿಪ್ರಮಾಣದಂತೆ ಅಂಗೀಕರಿಸಬೇಕು.

**ನ್ಯಾಯಸುಧಾ**— (1) ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸದೆ ಇರುವುದಾದರೆ ಬ್ರಹ್ಮನಿಗೂ ಪ್ರಪಂಚದಂತೆ ನಿವೃತ್ತಿಯನ್ನು ಏಕೆ ಶಂಕಿಸಬಾರದು? (2) ಹಾಗಾದರೆ 'ಸತ್ಯಂ ಜ್ಞಾನಂ' 'ತತ್ಸತ್ಯಂ' ಇತ್ಯಾದಿ ಶ್ರುತಿಗಳಿಂದಲೂ, ಬ್ರಹ್ಮ ನ ನಿವೃತ್ತಿಮತ್ ಅಜ್ಞಾನತತ್ಕಾರ್ಯಾ ತಿರಿಕ್ತತ್ವಾತ್ = ಬ್ರಹ್ಮನು ನಿವೃತ್ತಿಯುಳ್ಳವನು ಅಲ್ಲ, ಅಜ್ಞಾನ ಅಜ್ಞಾನಕಾರ್ಯಗಳಿಂದ ಅತಿರಿಕ್ತ ನಾಗಿರುವುದರಿಂದ ಇದುಮೊದಲಾದ ಅನುಮಾನಗಳಿಂದಲೂ ಅಧಿಷ್ಠಾನವಿರಹಿತವಾದ,ಅಸಾಕ್ಷಿಕ ವಾದ, (ಅದೃಷ್ಟಕವಾದ) ಭ್ರಾಂತಿಯೂ ಅವಧಿರಹಿತವಾದ ಬಾಧವೂ ಕಾಣದಿರುವುದರಿಂದ, ಪ್ರಪಂಚಾರೋಪಬಾಧ ಇತ್ಯಾದಿಗಳು ಅನ್ಯಥಾನುಪಪನ್ನಗಳಾಗಿ ಬ್ರಹ್ಮನಿಗೆ ಸತ್ಯತ್ವವನ್ನೇ ತಿಳಿಸಿ ಕೊಡುವುದರಿಂದ, (ಅಂದರೆ 'ಅತ್ರ ಇದಂ ನಾಸ್ತಿ' ಎಂದು ಬಾಧವು ಅವಧಿಸಹಿತವಾಗಿಯೇ ದೃಷ್ಟವಾಗಿದೆ. 'ಇದಂ ನಾಸ್ತಿ' ಎಂದು ಅವಧಿರಹಿತವಾದುದು ದೃಷ್ಟವಾಗಲಿಲ್ಲ. ಅಂತೂ ಭ್ರಮಾಧಿಷ್ಠಾನನಾಗಿಯೂ ಭ್ರಮಸಾಕ್ಷಿಯಾಗಿಯೂ ನಿಷೇಧರೂಪವಾದ ಬಾಧಾವಧಿಯಾಗಿಯೂ ಆತ್ಮನು ಸಿದ್ಧನಾಗುತ್ತಾನೆ. ತಥಾಚ ಅಧಿಷ್ಠಾನ ದ್ರಷ್ಟೃಗಳು ಇಲ್ಲದಿರುವುದರಿಂದ ಆರೋಪವು ಕೂಡುವುದಿಲ್ಲ. ಅವಧಿಯು ಇಲ್ಲದಿರುವುದರಿಂದ ಬಾಧವು ಕೂಡುವುದಿಲ್ಲ.) ಬ್ರಹ್ಮನು ನಾಶ ವುಳ್ಳವನಲ್ಲ ಎಂದರೆ—ಈ ಶ್ರುತ್ಯಾದಿ ಪ್ರಮಾಣಗಳಿಗೂ ಪ್ರತ್ಯಕ್ಷಾದಿಗಳಂತೆಯೇ ನಿವೃತ್ತಿಯು

ಶಂಕಿಸಲ್ಪಡಲಿ. (3) ಅಂದರೆ, ಪ್ರಪಂಚವಿಷಯಕಗಳಾದ ಪ್ರತ್ಯಕ್ಷಾದಿಪ್ರಮಾಣಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸುವುದಿಲ್ಲ. ಮತ್ತೆ ತಾತ್ಕಾಲಿಕ ಪ್ರಾಮಾಣ್ಯವನ್ನೇ ಗ್ರಹಿಸುತ್ತದೆ ಎಂದು ಹೇಳುವವನ ಹತ್ತಿರ ಕೇಳಬೇಕು. ಸಾಕ್ಷಿಗೆ ಆತ್ಯಂತಿಕಪ್ರಾಮಾಣ್ಯವನ್ನು ಗ್ರಹಿಸುವುದರಲ್ಲಿ ೧ ಶಕ್ತಿಯು ಇದೆಯೋ, ೨ ಇಲ್ಲವೋ, ೧ ಶಕ್ತಿಯಿದ್ದರೆ ಪ್ರಪಂಚವಿಷಯಕಗಳಾದ ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವನ್ನು ಆತ್ಯಂತಿಕವಾಗಿ ಹೇಗೆ ಗ್ರಹಿಸಲಾರದು? ೨ ಶಕ್ತಿಯಿಲ್ಲವಾದರೆ ಬ್ರಹ್ಮನಿಗೆ ಸತ್ಯತ್ವವನ್ನು ಪ್ರತಿಪಾದಿಸುವ ಶ್ರುತ್ಯಾದಿಗಳಿಗೂ ಆತ್ಯಂತಿಕವಾಗಿ ಪ್ರಾಮಾಣ್ಯವನ್ನು ಗ್ರಹಿಸದೆಹೋಗುವುದು. ತಥಾಚ ಬ್ರಹ್ಮನಿಗೆ ಅಬಾಧ್ಯತ್ವವೂ ಆತ್ಯಂತಿಕವಾಗಿ ಸಿದ್ಧಿಸದೆ ಹೋಗುವುದು. ತಥಾಚ ಬ್ರಹ್ಮನಿಗೆ ಆತ್ಯಂತಿಕ ಅಬಾಧ್ಯತ್ವವನ್ನು ಸಾಧಿಸುವ, ಮತ್ತು ತಾತ್ಕಾಲಿಕ ಬಾಧ್ಯತ್ವವನ್ನು ಬಾಧಿಸುವ ಪ್ರಮಾಣವು ಇಲ್ಲದಿರುವುದರಿಂದ ಬ್ರಹ್ಮನಿಗೂ ಬಾಧವನ್ನು ಶಂಕಿಸಬೇಕಾಗುವುದು. ಏವಂಚ ಬಾಧ್ಯನಾದ ಬ್ರಹ್ಮನ ಜ್ಞಾನವೂ ಬಾಧ್ಯಾರ್ಥವಿಷಯಕವಾಗಿರುವುದರಿಂದ ತತ್ವಜ್ಞಾನವು ಆಗದೆಹೋಗಬೇಕಾಗುವುದು. ಅದಕ್ಕಾಗಿ ಪ್ರಯತ್ನವೂ ಇಲ್ಲದೆಹೋಗುವುದು. (4) ಹಾಗಾದರೆ ಶ್ರುತ್ಯಾದಿಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುವುದರಲ್ಲಿ ಸಾಕ್ಷಿಗೆ ಶಕ್ತಿಯಿದೆ. ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವನ್ನು ಗ್ರಹಿಸುವುದರಲ್ಲಿ ಸಾಕ್ಷಿಗೆ ಶಕ್ತಿಯಿಲ್ಲವೆಂದು ಹೇಳಿದರೆ ಆಗ ನಿಯಾಮಕವನ್ನು ಹೇಳಬೇಕು. ಹೀಗೆ ಕೇಳಬೇಕು.

(5) ಹಾಗಾದರೆ ಬ್ರಹ್ಮನು ಬಾಧಕ್ಕೆ ಅರ್ಹನೆಂದಾದರೆ ಇಷ್ಟು ಕಾಲದಿಂದ ಏಕೆ ನಿವೃತ್ತನಾಗಲಿಲ್ಲ? ಆದಪ್ರಯುಕ್ತ ಇದಕ್ಕಿಂತ ಮೊದಲು ಇಷ್ಟರವರೇಗೆ ಬಾಧವು ಬಾರದಿರುವುದರಿಂದ ಇನ್ನು ಮುಂದಕ್ಕೂ ಬಾಧವನ್ನು ಶಂಕಿಸಕೂಡದು ಎಂದು ಹೇಳಕೂಡದು. ಸಾಕ್ಷಿಗ್ರಾಹ್ಯ ಪ್ರಾಮಾಣ್ಯವುಳ್ಳ ಈ ಉಪಪತ್ತಿಗೂ ಆತ್ಯಂತಿಕ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ. ಸಾಕ್ಷಿಗೃಹೀತ ಪ್ರಾಮಾಣ್ಯವುಳ್ಳ ಈ ಯುಕ್ತಿಗೂ, ಆತ್ಯಂತಿಕ ಪ್ರಾಮಾಣ್ಯವನ್ನು ಅಂಗೀಕರಿಸಿ, ನೀನು ಹೇಳಿದ ಅರ್ಥವನ್ನು ಸಾಧಿಸುತ್ತದೆಂದು ಹೇಳಿದರೆ ಪ್ರಪಂಚ ವಿಷಯಕ (ಗ್ರಾಹಿ) ಪ್ರತ್ಯಕ್ಷಾದಿಗಳ ಪ್ರಾಮಾಣ್ಯವೂ ಸಾಕ್ಷಿಯಿಂದಲೇ ಗ್ರಹೀತವಾಗಿರುದರಿಂದ ಆ ಪ್ರತ್ಯಕ್ಷಾದಿಗಳಿಗೂ, ಆತ್ಯಂತಿಕಪ್ರಾಮಾಣ್ಯವನ್ನೂ ನಿವಾರಿಸಲಾಗುವುದಿಲ್ಲ. ಅಂತೂ ಅವುಗಳು ಸ್ವಾರ್ಥಸಾಧಕವಾಗಲಿ, ಬ್ರಹ್ಮನಿಗೆ ಅಬಾಧ್ಯತ್ವವನ್ನು ಸಾಧಿಸುವ 'ಇತಃ ಪೂರ್ವಂ' ಎನ್ನುವ ಯುಕ್ತಿಗೂ, ಪ್ರಪಂಚವನ್ನು ಗ್ರಹಿಸುವ ಪ್ರತ್ಯಕ್ಷಾದಿಗಳಿಗೂ, ಸಾಕ್ಷಿಗೃಹೀತ ಪ್ರಾಮಾಣ್ಯವು ಎರಡರಲ್ಲಿಯೂ ಸಮಾನವಾಗಿದ್ದರೂ, ಬ್ರಹ್ಮಸಂಬಂಧಿ ಉಪಪತ್ತಿಗೇನೇ ಆತ್ಯಂತಿಕ ಪ್ರಾಮಾಣ್ಯವು ಪ್ರತ್ಯಕ್ಷಾದಿಗಳಿಗಾದರೂ ಪ್ರಾಮಾಣ್ಯವಿಲ್ಲ ಎನ್ನುವ ವಿಷಯದಲ್ಲಿ ವ್ಯವಸ್ಥಾಪಕ ಪ್ರಮಾಣವಿಲ್ಲ. (6) ಮತ್ತು ಇದಕ್ಕಿಂತ ಮೊದಲು ನಿವೃತ್ತಿಯಾಗದಿರುವುದರಿಂದ ಬ್ರಹ್ಮನಿಗೆ ನಿವೃತ್ತಿಯನ್ನು ಶಂಕಿಸದಿದ್ದರೆ ಸಂಸಾರಕ್ಕೂ ನಿವೃತ್ತಿಯಾಗದೆ ಹೋಗಲಿ. ಅಂದರೆ, 'ಇತಃ ಪೂರ್ವಂ ಅನಿವೃತ್ತತ್ವಾತ್' ಎನ್ನುವುದು ಬ್ರಹ್ಮನಿಗೆ ನಿವೃತ್ತಿಯಿಲ್ಲ ಎನ್ನುವಲ್ಲಿ ೧ ಸಂಭಾವನೆಯೋ? ೨ ಅಥವಾ ಅನುಮಾನವೋ? ೧ನೇದ್ದು ಕೂಡಲಾರದು. ಸಂಭಾವನೆಯು ಸಂಶಯರೂಪವಾಗಿರುವುದರಿಂದ 'ಅಕಸ್ಮಾದ್ವಿನಿವೃತ್ತಿಃ' ಎಂದು ಹೇಳಿದ ಶಂಕೆಯನ್ನು ನಿವಾರಿಸಲಿಕ್ಕೆ ಸಮರ್ಥವಲ್ಲ. ೨ನೇದ್ದು ಕೂಡಲಾರದು. ಹಾಗಾದರೆ ಅವಿದ್ಯೆಗೂ ನಿವೃತ್ತಿಯಿಲ್ಲವೆಂದಾಗಬೇಕಾಗುವುದು. ಇದಕ್ಕಿಂತ ಮೊದಲು ಮೂಲಾವಿದ್ಯೆಯು ನಿವೃತ್ತವಾಗಲಿಲ್ಲವಷ್ಟೆ. ಅವಿದ್ಯೆಯು ಇದಕ್ಕಿಂತ ಮೊದಲು ನಿವೃತ್ತವಾಗದಿದ್ದರೂ ನಿವೃತ್ತಿಯನ್ನಂಗೀಕರಿಸಿದರೆ ಅವಿದ್ಯೆಯಲ್ಲಿಯೇ 'ಇತಃ ಪೂರ್ವಂ ತಥಾಭಾವಾತ್' ಎನ್ನುವ ಹೇತುವಿಗೆ ವ್ಯಭಿಚಾರ ಬರುವುದು. (7) ಮತ್ತು ಶುಕ್ತಿರಜತ ಮೊದಲಾ

ದುದು ಮೊದಲು ನಿವೃತ್ತವಾಗದಿರುವುದೇ ನಿವೃತ್ತವಾಗುತ್ತದೆ. ನಿವೃತ್ತವಾದುದಕ್ಕೆ ನಿವೃತ್ತಿಯು ಕೂಡಲಾರದು. ಆದುದರಿಂದ ವಿರೋಧವು.

(8) 'ಅನ್ಯಥಾ ಶ್ರುತಿಯುಕ್ತ್ಯಾದಿ' ಎನ್ನುವ ಮೂಲ ವಾಕ್ಯಕ್ಕೆ ರೀತ್ಯಂತರದಿಂದ ವ್ಯಾಖ್ಯಾನವು. ಸಾಕ್ಷಿಯು ಪ್ರಪಂಚಗ್ರಾಹಕ ಪ್ರತ್ಯಕ್ಷಾದಿಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸದಿದ್ದರೆ ಆಕಾಶಾದಿರೂಪಪ್ರಪಂಚಕ್ಕೂ, ಉತ್ತರ ಕ್ಷಣದಲ್ಲಿಯೇ ವಿನಾಶವನ್ನು ಏಕೆ ಶಂಕಿಸುವುದಿಲ್ಲ? ತಥಾಚ ಎಲ್ಲಾ ಪ್ರವೃತ್ತಿಗಳಿಗೂ ನಾಶವು ಬರುವುದು. (9) ಹಾಗಾದರೆ '**ಯತ್ಪ್ರಯಂತ್ಯಭಿಸಂವಿಶಂತಿ**' '**ಯಮುಷ್ಯೇತಿ ಭುವನಂ ಸಾಂಪರಾಯೇ**' '**ತಸ್ಯಾಭಿಧ್ಯಾನಾದ್ಯೋಜನಾತ್ತತ್ವಭಾವಾತ್**' ಇತ್ಯಾದಿ ಶ್ರುತಿಯು, '**ಯತೋ ಜಗತ್ಸ್ಥಾನನಿರೋಧಸಂಭವಃ**' '**ಪ್ರಕೃತಿಸ್ಸೂದರರೂಪೇಣ ಸರ್ವಮಾವೃತ್ಯ ತಿಷ್ಠತಿ । ಪ್ರಲಯೋಽತೋಲಯಂ ಪ್ರಾಹುಃ ಸರ್ವತಃ ಸಂಪ್ಲುತೋದಕಂ**' ಎಂದು ಸ್ಮೃತಿಯು, '**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ**' ಇತ್ಯಾದಿಗಳು ಇತಿಹಾಸವು, '**ಸ್ರಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿರೀಶ್ವರಃ**' ಇತ್ಯಾದಿ ಪುರಾಣಗಳು ಈಶ್ವರೇಚ್ಛೆಯಿಂದಲೇ ಪ್ರಪಂಚನಾಶವನ್ನು ಪ್ರತಿಪಾದಿಸುತ್ತವೆ. 'ವಿಶ್ವವಿನಾಶಃ ನ ನಿರ್ಹೇತುಕಃ ವಿನಾಶಿತ್ವಾತ್ ಪಟವಿನಾಶವತ್' ಜಗನ್ನಾಶವು ನಿಷ್ಕಾರಣವಲ್ಲ, ವಿನಾಶವಾಗಿರುವುದರಿಂದ ಪಟವಿನಾಶದಂತೆ ಎನ್ನುವ ಅನುಮಾನವೂ ಕೂಡ ಪ್ರತಿಪಾದಿಸುತ್ತದೆ. ಆದಕಾರಣ 'ಇತಃ ಪೂರ್ವಂ ತಥಾಭಾವಾತ್' ಎಂದು ಹೇಗೆ ಶಂಕಿಸುವುದು ಎಂದರೆ ಶ್ರುತ್ಯಾದಿ ಪ್ರಮಾಣಗಳಿಗೂ ನಾಶವೇ. ಅಂದರೆ ಆತ್ಯಂತಿಕ ಪ್ರಾಮಾಣ್ಯವಿಲ್ಲ. ಶ್ರುತ್ಯಾದಿಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುವುದರಲ್ಲಿ ಸಾಕ್ಷಿಗೆ ಶಕ್ತಿಯಿದೆಯೋ, ಇಲ್ಲವೋ? ಇದ್ದರೆ ಪ್ರಪಂಚ ವಿಷಯಕಗಳಾದ ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವನ್ನು ಹೇಗೆ ಗ್ರಹಿಸಲಾರದು. ಇಲ್ಲವಾದರೆ ಈಶ್ವರೇಚ್ಛೆಯಿಂದ ಜಗನ್ನಾಶವು ಎಂದು ಬೋಧಿಸುವ ಶ್ರುತ್ಯಾದಿಗಳಿಗೂ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸಲಾರದು. ಇತ್ಯಾದಿ ಹಿಂದೆ ಹೇಳಿದ ಪ್ರಕಾರ ತಿಳಿಯತಕ್ಕದು. (10) ಹಾಗಾದರೆ ಇದಕ್ಕಿಂತ ಮೊದಲು ಪ್ರಪಂಚನಾಶವು ಯಾವ ಕಾರಣದಿಂದ ಆಗಲಿಲ್ಲ. ಆದಕಾರಣ ಮೇಲೆಯೂ ಹೇಗೆ ಶಂಕಿಸುವುದೆಂದರೆ— 'ಇತಃ ಪೂರ್ವಂ' ಎಂದು. ಅಂದರೆ, (೧) ಇಲ್ಲಿ ಯಾವುದು ಮೊದಲು ಆಗಲಿಲ್ಲವೋ ಅದು ಮೇಲೆಯೂ ಆಗುವುದಿಲ್ಲ ಎಂದು ವ್ಯಾಪ್ತಿಯೋ, (೨) ಅಥವಾ ಯಾವುದು ಮೊದಲು ನಿಷ್ಕಾರಣವಾಗಿ ವಿನಷ್ಟವಾಗಲಿಲ್ಲವೋ, ಅದು ಮೇಲೆಯೂ, ವಿನಾಶವುಳ್ಳದ್ದಲ್ಲ ಎಂದೋ? (೩) ಅಥವಾ ಯಾವುದು ನಿಷ್ಕಾರಣವೋ ಅದು ಆಗುವುದಿಲ್ಲ ಎಂದು ವ್ಯಾಪ್ತಿಯೋ? ೧ನೇದ್ದು ಕೂಡಲಾರದು. ಅವಿದ್ಯೆಗೆ ನಿವೃತ್ತಿಯಿಲ್ಲವೆಂದಾಗಬೇಕಾಗುವುದು. ೨ನೇದ್ದೂ ಕೂಡಲಾರದು. ಸಂಸಾರಕ್ಕೆ (ವಿದ್ಯೆಗೆ) ನಿವೃತ್ತಿಯಿಲ್ಲವೆಂದಾಗಬೇಕಾಗುವುದು. ಹೇಗೆಂದರೆ— ವಿದ್ಯೆಯು ಸಂಸಾರ ನಿವೃತ್ತಿಗೆ ಕಾರಣವು, ಸರ್ವ ಪ್ರಪಂಚವೂ, ಅವಿದ್ಯಾಕಾರ್ಯವಾಗಿರುವುದರಿಂದ ಪ್ರಪಂಚದಲ್ಲಿ ಸೇರಿದ ವಿದ್ಯೆಯೂ, ಅವಿದ್ಯಾ ಕಾರ್ಯವಾಗಿರುವ ಪ್ರಯುಕ್ತ ವಿದ್ಯೆಯೂ ಸಂಸಾರವೇ. ಎಲ್ಲಾ ಅವಿದ್ಯಾದಿಗಳಿಗೂ, ತಾನೇ ವಿದ್ಯೆಯು ನಿವರ್ತಕವು. ಆ ವಿದ್ಯೆಗೆ ನಿವರ್ತಕವಾದುದು ಯಾವುದೊಂದೂ ಇರುವುದಿಲ್ಲ. ತಥಾಚ ನಿಷ್ಕಾರಣವಾಗಿ ಯಾವುದು ವಿನಷ್ಟವಾಗುವುದಿಲ್ಲವೋ, ಅದು ಮೇಲೆಯೂ, ವಿನಾಶವುಳ್ಳದ್ದಲ್ಲ ಎಂದು ಹೇಳಿದ ವ್ಯಾಪ್ತಿಗೆ 'ಅಕಸ್ಮಾತ್ ಕಿಮಪಿ ನ ನಿವರ್ತತೇ' ಎಂದಂಗೀಕರಿಸಿದರೆ ವಿದ್ಯೆಗೂ ನಿವೃತ್ತಿಯೇ ಇಲ್ಲ. ಅಂತೂ ವಿದ್ಯಾ ನಾಶದಲ್ಲಿ ವ್ಯಭಿಚಾರವು. (11) ಹಾಗಾದರೆ ವಿದ್ಯೆಯು ಎಲ್ಲಾ ಅವಿದ್ಯಾಕಾರ್ಯಗಳ ವಿರೋಧಿಯಾಗಿರುವುದರಿಂದ, ಅವಿದ್ಯಾನಿವರ್ತಕವಾಗಿರುವುದರಿಂದ, ವಿದ್ಯೆಯೂ ಜಗತ್ತಿನಲ್ಲಿಯೇ

ಸೇರಿರುವುದರಿಂದ ಅವಿದ್ಯಾಕಾರ್ಯವಾಗಿರುವ ವ್ರಯುಕ್ತ ವಿದ್ಯೆಯು ತಾನೇ ತನ್ನ ನಿವೃತ್ತಿಗೆ ಕಾರಣವು ಎಂದರೆ ಹಾಗೆ ಹೇಳಕೂಡದು. ಹೀಗಾದರೆ ಪ್ರಪಂಚವೂ ಕೂಡ ಆಕಸ್ಮಿಕವಾಗಿ ಉತ್ತರಕ್ಷಣದಲ್ಲಿಯೇ ತಾನೇ ನಿವೃತ್ತವಾಗುತ್ತದೆ ಎಂದು ಶಂಕೆಯು ಬರಬೇಕಾಗುವುದು. ಅಪ್ರಯೋಜಕವು. (12)ವಿದ್ಯಾಖ್ಯಸಂಸಾರದಂತೆ ಜಗತ್ತಿಗೂ ತನ್ನಷ್ಟಕ್ಕೇನೇ ನಾಶವು ಬರಲಿ ಎನ್ನುವ ಶಂಕೆಯು ಹುಟ್ಟುವವ್ರಯುಕ್ತವೇ ಇನೇ ಕಲ್ಪವು ಕೂಡುವುದಿಲ್ಲ. (13) ಈ ಅರ್ಥವನ್ನೇ 'ವಾಕ್ಯಾನುವಾದಿತಃ' ಇತ್ಯಾದಿಗಳಿಂದ ವಿವರಿಸಿದರು. (14) ಅಥವಾ ವಿದ್ಯೆಗೆ ನಿವೃತ್ತಿಯಿಲ್ಲವೆಂದು ಹೇಳಿದ್ದು ಅಯುಕ್ತವು. ಸಂಸಾರ ನಿವೃತ್ತಿಯು ಶ್ರುತ್ಯಾದಿ ಸಿದ್ಧವಾಗಿದೆ. 'ಶ್ರುತ್ಯಾದ್ಯಸಿದ್ಧನಿವೃತ್ತಿಮತ್ವೇ ಸತಿ ಪ್ರಾಗನಿವೃತ್ತತ್ವಾತ್' = ಶ್ರುತ್ಯಾದಿಗಳಿಂದ ಅಸಿದ್ಧವಾದ ನಿವೃತ್ತಿಯಿದ್ದು ಮೊದಲು ನಿವೃತ್ತವಾಗದಿರುವುದರಿಂದ ಎಂದು ಬ್ರಹ್ಮನಿಗೆ ನಿವೃತ್ತಿಯಿಲ್ಲ ಎಂದು ಸಾಧಿಸುವ ಹೇತುವಿಗೆ ವಿಶೇಷಣ ಕೊಡುತ್ತೇವೆಂದರೆ— 'ವಾಕ್ಯಾನುವಾದಿತಃ' ಎನ್ನುವ ಮೂಲದಿಂದಲೇ ಸಮಾಧಾನ ಹೇಳಿದರು.

(15) ಸಾಕ್ಷಿಯು ಬ್ರಹ್ಮಾದಿವಿಷಯಕ ವಾಕ್ಯಾದಿಗಳ ಪ್ರಾಮಾಣ್ಯವನ್ನು ಆತ್ಯಂತಿಕವಾಗಿ ಗ್ರಹಿಸುತ್ತದೆ. ಆದುದರಿಂದಲೇ ವಾಕ್ಯವಿಷಯಾಭೂತರಾದ ಬ್ರಹ್ಮಾದಿಗಳನ್ನು ಎಲ್ಲಾ ಕಾಲಗಳಲ್ಲಿಯೂ, ಅತಿಶಯವಾಗಿ ಅಬಾಧ್ಯವಾಗಿಯೇ ವ್ಯವಸ್ಥಾ ಮಾಡುತ್ತದೆ. ಆತ್ಯಂತಿಕ ಪ್ರಾಮಾಣ್ಯವಿದ್ದರೆ ವಿಷಯವೂ, ಅಬಾಧ್ಯವಾಗುವುದು. (16) ಸಾಕ್ಷಿಯು 'ತತ್ಸತ್ಯಂ' ಇತ್ಯಾದಿ ಪ್ರಮಾಣಗಳ ಪ್ರಾಮಾಣ್ಯವನ್ನು ಆತ್ಯಂತಿಕವಾಗಿ ಗ್ರಹಿಸಿದರೆ ಪ್ರಮಾಣವಿಷಯರಾದ ಬ್ರಹ್ಮಾದಿಗಳಿಗೂ, ತ್ರೈಕಾಲಿಕಾಬಾಧ್ಯತ್ವವನ್ನು ವ್ಯವಸ್ಥಾ ಮಾಡಿದರೆ ಹಾಗೆಯೇ ಜಗದ್ವಿಷಯಕಗಳಾದ ಪ್ರತ್ಯಕ್ಷಾದಿ ಜ್ಞಾನಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುತ್ತಾ ಅದರಲ್ಲಿ ಅಂತರ್ಗತವಾದ ಪ್ರಪಂಚದ ಅಬಾಧ್ಯತ್ವವನ್ನು ವ್ಯವಸ್ಥಾ ಮಾಡಿಯೇ ಮಾಡುತ್ತದೆ ತ್ರಿಕಾಲಾಬಾಧ್ಯತ್ವಗ್ರಾಹಕತ್ವದಲ್ಲಿ ವಿಶೇಷವಿಲ್ಲ. (17)ಸಾಕ್ಷಿಯು 'ತತ್ಸತ್ಯಂ' ಇತ್ಯಾದಿಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಜಗದ್ವಿಷಯಕಗಳಾದ ಪ್ರತ್ಯಕ್ಷಾದಿಗಳಿಗಾದರೂ ತಾತ್ಕಾಲಿಕವೇ ಎಂದು ಏಕೆ ಆಗಲಾರದು ಎಂದರೆ— ಸಾಕ್ಷಿಗೆ ನಿರ್ದೋಷಜ್ಞಾನರೂಪತ್ವ ಶಕ್ತಿಯಿದ್ದುದರಿಂದ ಪ್ರಪಂಚಕ್ಕೆ ಸತ್ಯತ್ವವೂ ಸಿದ್ಧಿಸುತ್ತದೆ. ಇಲ್ಲವಾದರೆ ಬ್ರಹ್ಮಸತ್ಯತ್ವಾದಿಗಳೂ ಸಿದ್ಧಿಸದೆ ಹೋಗುವುದು. (18) 'ತತ್ಸತ್ಯಂ' ಇತ್ಯಾದಿ ಜ್ಞಾನಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಸಾಕ್ಷಿಯು ನಿಶ್ಚಯಿಸುತ್ತದೆ ಎನ್ನುವಲ್ಲಿ ಏನು ನಿಮಿತ್ತವು? ಜ್ಞಾನವನ್ನು ಗ್ರಹಿಸುತ್ತಾ ಸಾಕ್ಷಿಗೆ ನಿರ್ದೋಷತ್ವವಿರುವಾಗ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ಇದು ಸಾಕ್ಷಿಯ ಸ್ವಭಾವವು, ಎಂದರೆ, ಹಾಗಾದರೆ ಪ್ರತ್ಯಕ್ಷಾದಿಗಳಿಗೂ, ಪ್ರಾಮಾಣ್ಯವನ್ನು ಆತ್ಯಂತಿಕವಾಗಿ ಏಕೆ ಗ್ರಹಿಸುವುದಿಲ್ಲ? ಪ್ರತ್ಯಕ್ಷಾದಿ ಜ್ಞಾನಕ್ಕೂ, ನಿರ್ದೋಷಜ್ಞಾನರೂಪತ್ವಶಕ್ತಿಯು ಇದೆ. ಆದುದರಿಂದ ನಿರ್ದೋಷಜ್ಞಾನರೂಪ ಸಾಕ್ಷಿಯಿಂದಲೂ ಪ್ರತ್ಯಕ್ಷಾದಿಗಳಿಗ ಆತ್ಯಂತಿಕಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಆದುದರಿಂದ ಪ್ರಪಂಚಕ್ಕೆ ಸತ್ಯತ್ವವು ಸಿದ್ಧವಾಗುವುದಿಲ್ಲವೆಂದು ಹೇಳುವುದಾದರೆ 'ತತ್ಸತ್ಯಂ' ಇತ್ಯಾದಿ ಬ್ರಹ್ಮಸತ್ಯತ್ವಪ್ರತಿಪಾದಕ ವಾಕ್ಯಕ್ಕೂ ಸಾಕ್ಷಿಯು ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸದೆ ಹೋಗಬೇಕಾಗುವುದು. ಅಂತೂ ಬ್ರಹ್ಮನಿಗೂ ಅಬಾಧ್ಯತ್ವರೂಪವಾದ ಸತ್ಯತ್ವವು ಸಿದ್ಧವಾಗದೆ ಹೋಗಬೇಕಾಗುವುದು. ಬ್ರಹ್ಮ ಸತ್ಯತ್ವ ಪ್ರತಿಪಾದಕ ವಾಕ್ಯಗಳಿಗೆ ಮಾತ್ರ ಸಾಕ್ಷಿಯು ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ವಿಶ್ವಸತ್ಯತ್ವ ಗ್ರಾಹಕ ಪ್ರತ್ಯಕ್ಷಾದಿಗಳಿಗೆ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲವೆನ್ನುವಲ್ಲಿ ವಿಶೇಷ ವ್ಯವಸ್ಥಾಪಕವು ಇರುವುದಿಲ್ಲ ॥ ೧೦೪ ॥ ೧೦೫ ॥ ೧೦೬ ॥

(1) ಪ್ರತ್ಯಕ್ಷಾದಿ ಜ್ಞಾನವು ನಿರ್ದೋಷವಾಗಿದ್ದರೆ ಸಾಕ್ಷಿಯು ಅದಕ್ಕೆ ಆತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುತ್ತಿತ್ತು. ಹೀಗಲ್ಲ, ಆ ಪ್ರತ್ಯಕ್ಷಾದಿ ಜ್ಞಾನವು ಶುಕ್ತಿರಜತಾದಿ ಜ್ಞಾನದಂತೆ ಅವಿದ್ಯಾಕೃತ ಪ್ರಪಂಚವಿಷಯಕವಾಗಿದೆ. (2) ಅವಿದ್ಯೆಯು ಯಾವುದನ್ನು ಆಶ್ರಯಿಸಿದೆ? ಜೀವನನ್ನು ಆಶ್ರಯಿಸಿದೆ ಎಂದರೆ— ಜೀವಬ್ರಹ್ಮ ಭೇದವು ಸ್ವಾಭಾವಿಕವಾಗಬೇಕಾಗುವುದು. ಅಂತೂ ಅಪಸಿದ್ಧಾಂತವು ಎಂದು ಹಿಂದೆ ಹೇಳಿದ್ದು ಸರಿಯಲ್ಲ. ಜೀವಬ್ರಹ್ಮಭೇದವೂ ಆವಿದ್ಯಕವು. (3) ಹಾಗಾದರೆ ಭೇದಕ್ಕೆ ಅವಿದ್ಯಾಪೇಕ್ಷೆಯು, ಅವಿದ್ಯೆಗೆ ಜೀವಾಪೇಕ್ಷೆಯು ಜೀವನಿಗೆ ಭೇದಾಪೇಕ್ಷೆಯು. ಹೀಗೆ ಚಕ್ರಕಾಶ್ರಯವು. ಭಿನ್ನನಾದ ಜೀವನನ್ನು ಅಪೇಕ್ಷಿಸಿ ಅಜ್ಞಾನವು ಅಜ್ಞಾನಾಧೀನನು, ಬ್ರಹ್ಮ ಭಿನ್ನ ಜೀವನು. ಹೀಗೆ ಅನ್ಯೋನ್ಯಾಶ್ರಯವು, ಇತ್ಯಾದಿದೋಷಗಳು ಬರುತ್ತವೆಂದು ಹೇಳಕೂಡದು. ಪ್ರಪಂಚವು ಜೀವಾಜ್ಞಾನಕೃತವೆಂದು '**ಅನಾದಿಮಾಯಯಾ ಸುಪ್ತಃ ಯದಾ ಜೀವಃ**' ಇತ್ಯಾದಿ ಶ್ರುತಿಸಿದ್ಧವಾಗಿದೆ. ಪ್ರಮಿತವಾದ ಅರ್ಥದಲ್ಲಿ ತರ್ಕಗಳಿಗೆ ಅವಕಾಶವಿಲ್ಲ. ಜಗತ್ತು ಒಬ್ಬ ಜೀವನ ಅಜ್ಞಾನದಿಂದ ಮಾಡಲ್ಪಟ್ಟದ್ದೆಂದು ಅಂಗೀಕರಿಸಿರುವುದರಿಂದ ಕಲ್ಪ್ಯವಾದುದು ಇಲ್ಲವೆನ್ನುವ ದೋಷವೂ ಇಲ್ಲ. ಕಲ್ಪಕ ಒಬ್ಬ ಜೀವನಿಂದ ವ್ಯತಿರಿಕ್ತವಾದ ಜೀವ ಜಡ ಪ್ರಪಂಚಕ್ಕೆ ಕಲ್ಪ್ಯತ್ವವು ಉಪಪನ್ನವಾಗುತ್ತದೆ. ಜೀವನು ಒಬ್ಬನೇ ಎನ್ನುವ ವಾದವು ಮಾಯಾವಾದಿಗಳಿಗೆ ಮುಖ್ಯ ತಾತ್ಪರ್ಯವು. ಬಹುಜೀವವಾದವಾದರೂ ಮಂದರನ್ನು ಅಭಿಮುಖೀಕರಿಸುವುದಕ್ಕೋಸ್ಕರ ಹೇಳಿದ್ದು ಎಂದಾಶಂಕಿಸಿದರೆ—

**ಮೂ ॥ ಏಕಾಜ್ಞಾನಕೃತಂ ವಿಶ್ವಮಿತಿ ಯಚ್ಚೋಚ್ಯತೇ ಮೃಷಾ ॥ ೧೦೭ ॥**
**ಬಹುಜ್ಞಾನಕೃತಂ ವಿಶ್ವಮಿತಿ ತಸ್ಯೋತ್ತರಂ ಭವೇತ್ ।**
**ಪರಸ್ಯ ಸತ್ಯತಾಂ ಜಾನನ್ನಪಿ ಯಃ ಸ್ವಾತ್ಮತಸ್ಕರಃ ॥ ೧೦೮ ॥**
**ಪರೋ ನಾಸ್ತೀತಿ ವದತಿ ಕಿಮಿತ್ಯುನ್ಮತ್ತವದ್ಭವೇತ್ ।**
**ಪರಾಭಾವೇಪಿ (ಹಿ)ವಾಗ್ವ್ಯರ್ಥಾ ಯದಿ ನೈವೋಚ್ಯತೇ ತದಾ ।**
**ಕಥಾವೇತ್ರಾದಿಕಂ ತಸ್ಯ ತಸ್ಕರಸ್ಯೋತ್ತರಂ ವದೇತ್ ॥ ೧೦೯ ॥**

ಅ ॥ ವಿಶ್ವಂ=ಜಗತ್ತು, ಏಕಾಜ್ಞಾನಕೃತಂ=ಒಬ್ಬ ಜೀವನ ಅಜ್ಞಾನದಿಂದ ಮಾಡಲ್ಪಟ್ಟದ್ದು, ಇತಿ=ಹೀಗೆ, ಯಚ್ಚ=ಯಾವುದು, ಮೃಷಾ=ಪ್ರಮಾಣವಿಲ್ಲದೆ, ಬ್ರಹ್ಮವಿವರ್ತವಾದಿಗಳಿಂದ, ಉಚ್ಯತೇ=ಹೇಳಲ್ಪಟ್ಟದೋ, ತಸ್ಯ=ಆತನಿಗೆ, ವಿಶ್ವಂ = ಜಗತ್ತು, ಬಹುಜ್ಞಾನಕೃತಂ ಇತಿ=ಬ್ರಹ್ಮಾದಿ ಬಹುಜೀವರ ಜ್ಞಾನದಿಂದ ಸೃಷ್ಟಿಸಲ್ಪಟ್ಟದ್ದೆಂದು, ಉತ್ತರಂ=ಉತ್ತರವು, ಭವೇತ್=ಆಗುವುದು. ಯಃ=ಯಾವಾತನು, ಪರಸ್ಯ=ಪ್ರತಿವಾದ್ಯಾದಿಗಳಿಗೆ, ಸತ್ಯತಾಂ=ಸತ್ಯತ್ವವನ್ನು, ಜಾನನ್ನಪಿ=ತಿಳಿದವನಾದಾಗ್ಯೂ, ಪರಃ=ಮತ್ತೊಬ್ಬನು, ನಾಸ್ತೀತಿ = ಇಲ್ಲವೆಂದು, ವದತಿ=ಹೇಳುತ್ತಾನೋ, ಸಃ=ಆತನು, ಸ್ವಾತ್ಮತಸ್ಕರಃ=ತನ್ನ ಅನುಭವವನ್ನೇ ಅಪಲಾಪಮಾಡತಕ್ಕವನು.

**(ನ. ಚ. ವಿ.)** ಅಂದರೆ (ಇತರರಿಗೆ ಸತ್ಯತ್ವವನ್ನು ತಿಳಿದರೂ ಯಾರು ಇತರ ಜನರನ್ನು ವಂಚಿಸುತ್ತಾರೋ, ಪರರಿಗೆ ಸತ್ಯತ್ವವನ್ನು ಅನುವಾದ ಮಾಡಿದಾಗ್ಯೂ ತನ್ನನ್ನೇ ವಂಚಿಸಿಕೊಳ್ಳುತ್ತಾನೋ, ಆತನು ಮತ್ತೊಬ್ಬನು ಇಲ್ಲವೆಂದು ಇತರರಿಗೆ ಸತ್ಯತ್ವವನ್ನು ಅನುಭವಿಸದಿದ್ದರೆ) (ಅಥವಾ ಮತ್ತೊಬ್ಬನು ಪ್ರತಿವಾದಿ ಮೊದಲಾದ ಜೀವರನ್ನು ನೋಡುವುದಿಲ್ಲವೋ, ನೋಡಿದಾಗ್ಯೂ ಜೀವರು ಇಲ್ಲವೆಂದು ತಿಳಿದುಕೊಳ್ಳುತ್ತಾನೋ ಆಗ) ಕಿಮಿತಿ=ಯಾವುದಕ್ಕಾಗಿ, ಉನ್ಮತ್ತವತ್=ಹುಚ್ಚನಂತೆ, ವದೇತ್=ಹೇಳಿಯಾನು? (ಕಥೆಯಲ್ಲಿ ಪ್ರವೇಶಿಸಕೂಡದು.

ಶಾಸ್ತ್ರನಿರ್ಮಾಣವನ್ನಾಗಲೀ, ವ್ಯಾಖ್ಯಾನವನ್ನಾಗಲೀ ಮಾಡಕೂಡದು. ಇಲ್ಲವಾದರೆ ಹುಚ್ಚನಂತೆ ಇವನು ಲೌಕಿಕನೂ ಅಲ್ಲ, ಪರೀಕ್ಷಕನೂ ಅಲ್ಲ ಎಂದು ಉಪೇಕ್ಷಣೀಯನು ಆಗುವನು.) ಪರಾಭಾವೇಽಪಿ (ಹಿ)=ಮತ್ತೊಬ್ಬನು ಇಲ್ಲದಿದ್ದರೂ, ವಾಕ್=ವಚನವು, ವ್ಯರ್ಥಾ=ವ್ಯರ್ಥವು, ಅಂದರೆ ವಚನವು ಮತ್ತೊಬ್ಬನಿಗೆ ತಿಳಿಸುವುದಕ್ಕಾಗಿ ಉಪಯುಕ್ತವಾಗಿರುವುದರಿಂದ ಮತ್ತೊಬ್ಬನೇ ಇಲ್ಲದಿದ್ದರೆ ವಚನವೂ ವ್ಯರ್ಥವಾಗಿರುವುದರಿಂದ ವ್ಯರ್ಥವಾದ ವಚನವನ್ನು ಪ್ರಯೋಗಿಸಕೂಡದು. ಪ್ರಯೋಗಿಸತಕ್ಕವನು ಉನ್ಮತ್ತನು ಹೇಗೆ ಆಗಲಾರನು? (ಮತ್ತೊಬ್ಬನು ಇಲ್ಲವಾದರೆ ವಚನವು ಅನರ್ಥಕವೆನ್ನುವುದು ಸತ್ಯವೇ, ನಾನೂ ಏನೂ ಹೇಳುವುದಿಲ್ಲವೆಂದರೆ) ನೈವೋಚ್ಯತೇ ಯದಿ=ನನ್ನಿಂದ ಯಾವಾಗಲೂ ಯಾವುದೊಂದೂ ಹೇಳಲ್ಪಡುವುದೇ ಇಲ್ಲವೆಂದು ಹೇಳಲ್ಪಟ್ಟರೆ, ತದಾ=ಆಗ, ತಸ್ಯ ತಸ್ಕರಸ್ಯ=ತನ್ನ ಕ್ರಿಯೆಗೆ ವಿರೋಧಿಯೂ, ಎಲ್ಲಾ ಜನರೂ ತಿಳಿಯತಕ್ಕ ಅರ್ಥವನ್ನು ಅಪಲಾಪಮಾಡತಕ್ಕ ಆ ಕಳ್ಳನಿಗೆ, ಕಶಾವೇತ್ರಾದಿಕಂ=ಬಾರ್ಕೋಲು, ಬೆತ್ತ ಇತ್ಯಾದಿಗಳೇ, ಉತ್ತರಂ=ಉತ್ತರವನ್ನಾಗಿ, ವದೇತ್=ಹೇಳಬೇಕು.

**ತಾ ॥ ನ್ಯಾಯಸುಧಾ—** (1) ಜಗತ್ತು ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತವೆಂದು ಆಗಿದ್ದರೆ ಕಥಂಚಿತ್ ಇದು ಆಗಬಹುದಿತ್ತು. ಇದಲ್ಲ. ಪ್ರಮಾಣವೇ ಇಲ್ಲ. ಶ್ರುತ್ಯಾದಿಗಳನ್ನು ಸದ್ಯದಲ್ಲಿಯೇ ಚೆನ್ನಾಗಿ ವ್ಯಾಖ್ಯಾನಮಾಡುವೆನು. ಈಶ್ವರನು ಈಶ್ವರಪ್ರೇರಿತರಾದ ಬ್ರಹ್ಮಾದಿಗಳೂ, ಇವರ ಜ್ಞಾನ, ಇಚ್ಛಾ ಪ್ರಯತ್ನಗಳಿಂದ ಪ್ರಪಂಚವು ನಿರ್ಮಿಸಲ್ಪಟ್ಟಿದೆ ಎನ್ನುವಲ್ಲಿ ಶ್ರುತ್ಯಾದಿ ಪ್ರಮಾಣಗಳು ಇದ್ದುದರಿಂದ, ಶ್ರುತ್ಯಾದಿಪ್ರಮಾಣವಿರುದ್ಧವೂ ಆಗಿದೆ. (2) ಮತ್ತು ಜೀವ ಜಡಾತ್ಮಕವಾದ ಸಮಸ್ತ ಪ್ರಪಂಚವು ಒಬ್ಬ ಜೀವನ ಅಜ್ಞಾನದಿಂದಲೇ ಕಲ್ಪಿತವಾದುದು ಎಂದು ಹೇಳುವವನ ಹತ್ತಿರ ಪ್ರಶ್ನಿಸಬೇಕು. ಈ ಒಬ್ಬ ಜೀವನು ನೀನೋ? ೧ (ಸಂಕರಾಚಾರ್ಯರೋ?) ೨ ಅಥವಾ ಮತ್ತೊಬ್ಬನೋ? ೨ ಮತ್ತೊಬ್ಬನೆಂದಾದರೆ ಮತ್ತೊಬ್ಬನ ಅಜ್ಞಾನದಿಂದ ಕಲ್ಪಿತನಾದ ನಿನಗೆ (ಸಂಕರಾಚಾರ್ಯರಿಗೆ) ಬಂಧಮೋಕ್ಷಗಳು ಇಲ್ಲದಿರುವುದರಿಂದ ಪಾರಿವ್ರಾಜ್ಯಾದಿಗಳು ವ್ಯರ್ಥಗಳಾಗಬೇಕಾಗುವುವು. ೧ನೇ ಕಲ್ಪದಲ್ಲಿಯೂ ಪ್ರತಿವಾದಿ ಮೊದಲಾದ ಜೀವರನ್ನು ನೋಡುತ್ತಿಯೋ, ಇಲ್ಲವೋ? ನೋಡುತ್ತಿ ಎನ್ನುವ ಕಲ್ಪದಲ್ಲಿಯೂ ಇದ್ದಾರೆಂದು ನೋಡುತ್ತಿಯೋ, ಇಲ್ಲವೆಂದು ನೋಡುತ್ತಿಯೋ? ಇದ್ದಾರೆಂದು ನೋಡುವುದಾದರೆ ಪ್ರತಿವಾದ್ಯಾದಿಗಳಿಗೆ ಸತ್ಯತ್ವವನ್ನು ತಿಳಿದಾಗ್ಯೂ ಇಲ್ಲವೆಂದು ಹೇಳಿದರೆ ಆತನು ಸ್ವಾತ್ಮತಸ್ಕರನು. ಅಂದರೆ ತನ್ನಂತೆಯೇ ಮತ್ತೊಬ್ಬನನ್ನು ಸತ್ಯನೆಂದು ನೋಡುತ್ತಾ ನಾನು ಒಬ್ಬನೇ ಸತ್ಯನು, ಇತರ ಎಲ್ಲಾ ಜೀವಜಡಗಳು ತನ್ನ ಅಜ್ಞಾನಕಲ್ಪಿತಗಳು ಎನ್ನುವ ವಚನವು ತನ್ನ ಅನುಭವದಿಂದ ವಿರುದ್ಧವು. ಸಮಸ್ತ ಜಗತ್ತು ನಿನ್ನ (ಸಂಕರಾಚಾರ್ಯರ) ಅಜ್ಞಾನದಿಂದ ಕಲ್ಪಿತವೆನ್ನುವ ವಿಷಯದಲ್ಲಿ ಪ್ರಬಲ ಪ್ರಮಾಣವಿಲ್ಲ. ಪ್ರತ್ಯಕ್ಷಕ್ಕೆ ಬಾಧವು ಯಾವುದರಿಂದ ಬಂದೀತು. ಅಂತೂ ನಿಶ್ಚಯವಿಲ್ಲದಿರುವುದರಿಂದ ಮೋಕ್ಷಕ್ಕಾಗಿ ಪ್ರವೃತ್ತಿಯೂ ಇಲ್ಲದೆ ಹೋಗಬೇಕಾಗುವುದು. (3) ಪ್ರತಿವಾದಿ ಮೊದಲಾದ ಜೀವರು ಇಲ್ಲವೆಂದು ಅವರನ್ನು ನೋಡುತ್ತಿ ಎನ್ನುವುದು ೩ನೇ ಪಕ್ಷವೂ, ಪ್ರತಿವಾದಿ ಮೊದಲಾದ ಜೀವರನ್ನು ನೋಡುವುದಿಲ್ಲ ಎನ್ನುವ ೪ನೇ ಪಕ್ಷವೂ ಅಯುಕ್ತವು; ಅಂದರೆ—ಪರನು ಪ್ರತಿವಾದಿ ಮೊದಲಾದ ಜೀವರನ್ನು ನೋಡದೆ ಇದ್ದರೂ, ನೋಡಿದರೂ ಇಲ್ಲವೆಂದು ತಿಳಿದರೆ ಆಗ ಹುಚ್ಚನಂತೆ ಏಕೆ ಹೇಳಿಯಾನು? ಕಥೆಯಲ್ಲಿ ಪ್ರವೇಶಾದಿಗಳೇ ಬರಲಾರವು. (4) ಏಕೆ ಹೇಳಬಾರದು? ಹೇಳಿದವನು ಹುಚ್ಚನಂತೆ ಆಗುವುದು ಹೇಗೆ ಎಂದರೆ— ವಚನಗಳು ಪರಬೋಧನಕ್ಕೆ ಉಪಯುಕ್ತಗಳಾಗಿರುವುದರಿಂದ ಪರರೇ ಇಲ್ಲವಾದರೆ ವಚನಗಳು ವ್ಯರ್ಥಗಳಾಗಿರುವುದರಿಂದ ವ್ಯರ್ಥವಾದ ಮಾತನ್ನು ಹೇಳಬಾರದು. ಹೇಳದವನು ಹೇಗೆ ಉನ್ಮತ್ತನಾಗದೆ ಹೋಗುವನು? (5) ನಾನೂ ಯಾವಾಗಲೂ

ಯಾವುದನ್ನು ಹೇಳುವುದಿಲ್ಲ ಎಂದು ಹೇಳಿದರೆ ಆಗ ತನ್ನ ಕ್ರಿಯೆಗೆ ತಾನೇ ವಿರೋಧಿಯಾಗಿದ್ದು ಎಲ್ಲಾ ಜನರೂ ತಿಳಿದ ಅರ್ಥವನ್ನು ಅಪಲಾಪಮಾಡತಕ್ಕ ಆತನಿಗೆ ಕಳ್ಳನಂತೆ ದಂಡವೇ ಯೋಗ್ಯವು. ಪ್ರತ್ಯುತ್ತರವಿಲ್ಲ ॥ ೧೦೭ ॥ ೧೦೮ ॥ ೧೦೯ ॥

ಮೊದಲು ಜಗತ್ತಿಗೆ ಮಿಥ್ಯಾತ್ವವು ಸಿದ್ಧಿಯಾಗುವುದಕ್ಕಾಗಿ ಪರರು ಉದಾಹರಿಸಿರುವ ಶ್ರುತಿಗಳಿಗೆ ಬಾಹ್ಯ ಯುಕ್ತಿಗಳ ವಿರೋಧವನ್ನು ಪ್ರತಿಪಾದಿಸಿದರು. ಈಗ ಆಂತರಾನುಪಪತ್ತಿಯನ್ನು ತೋರಿಸುತ್ತಾ ಆ ಶ್ರುತಿಗಳಿಗೆ ಅವಿರುದ್ಧವಾದ ಅರ್ಥವನ್ನು ವ್ಯಾಖ್ಯಾನಮಾಡುವುದಕ್ಕಾಗಿ ಮೇಲಿನ ಗ್ರಂಥವು. ಅಥವಾ ಸರ್ವ ಶ್ರುತಿಸಾಧಾರಣವಾದ ಅನುಪಪತ್ತಿಯನ್ನು ಮೊದಲು ವಿಸ್ತರಿಸಿದರು. ಈಗ ಅಸಾಧಾರಣಾನುಪಪತ್ತಿಯನ್ನು ವ್ಯುತ್ಪಾದಿಸುತ್ತಾರೆ. ಅದರಲ್ಲಿ 'ಪ್ರಪಂಚೋ ಯದಿ ವಿದ್ಯೇತ' ಇತ್ಯಾದಿ ವಾಕ್ಯಗಳೆರಡನ್ನು ಪಠನಮಾಡಿ ಪರರಿಗೆ ಅಭಿಪ್ರೇತವಾದ ಅರ್ಥದಲ್ಲಿ ಅನುಪಪತ್ತಿಯನ್ನು ಹೇಳುತ್ತಾರೆ.—

ಮೂ ॥ ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ॥ ೧೧೦ ॥
ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ।
ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ॥ ೧೧೧ ॥
ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥
(ಮಾಂಡೂಕೋಪನಿಷತ್ತು ಖಂಡ ೨. ಮ. ೯-೧೦. ಪು.೩೧೭-೩೨೦.)
ಇತ್ಯತ್ರ ಯದಿ ಶಬ್ದೌ ಚ ನಿವರ್ತೇತೇತಿ ಚ ದ್ವಯಂ ॥ ೧೧೨ ॥
ವಿಶ್ವಸ್ಯ ಸತ್ಯತಾಮಾಹುರ್ವಿದ್ಯೇತೋತ್ಪತ್ತಿವೇವ ಚ ।
ವಿದೋತ್ಪತ್ತಾವಪಿ ಹ್ಯಸ್ಮಾದ್ಧಾತೋರುತ್ಪತ್ತಿರೇವ ಹಿ ॥ ೧೧೩ ॥
ನಿವೃತ್ತಿವ್ಯಾಪ್ತಿಯುಕ್ ಪ್ರಾಯಃ ಪ್ರಪಂಚೋ ಭೇದಪಂಚಕಃ ।
ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ ॥ ೧೧೪ ॥
ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ ।
ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ ॥ ೧೧೫ ॥
ಸೋಽಯಂ ಸತ್ಯೋ ಹ್ಯನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ ।
ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತಂ ॥ ೧೧೬ ॥
ಇತಿ ಶ್ರುತೇರ್ನಿರ್ಗತಂ ತ್ರಾತಂ ಮಾಯಾಖ್ಯಹರಿವಿದ್ಯಯಾ ।
ಉತ್ತಮೋಽರ್ಥೋ ಹರಿಸ್ತ್ವೇಕಃ ತದನ್ಯನ್ಮಧ್ಯಮಾಧಮಂ ॥ ೧೧೭ ॥

ಅ ॥ ಪ್ರಪಂಚಃ=ಭೇದಪಂಚಕವು, ಯದಿ ವಿದ್ಯೇತ=ಹುಟ್ಟುವುದಾದರೆ, ನಿವರ್ತೇತ=ನಾಶವಾಗುವುದು. ನ ಸಂಶಯಃ=ಸಂಶಯವಿಲ್ಲ. ಇದಂ ದ್ವೈತಂ=ಈ ಭೇದವು, ಮಾಯಾಮಾತ್ರಂ=ಹರಿಯ ಪ್ರಜ್ಞೆಯಿಂದ ಮಿತವೂ ರಕ್ಷಿತವೂ ಆಗಿದೆ. ಅದ್ವೈತಂ ಪರಮಾರ್ಥತಃ=ಸರ್ವೋತ್ತಮನಾದವನು ಶ್ರೀ ಹರಿಯೊಬ್ಬನೇ, ವಿಕಲ್ಪಃ=ವಿವಿಧಭೇದವು, ಕೇನಚಿತ್=ಯಾವುದರಿಂದಲಾದರೂ, ಅಜ್ಞಾನಾದಿಗಳಿಂದ, ಕಲ್ಪಿತಃ=ಕಲ್ಪಿತವಾಗಿದ್ದರೆ, ವಿನಿವರ್ತೇತ=ನಷ್ಟವಾಗುವುದು. ಉಪದೇಶಾತ್=ಶ್ರುತ್ಯಾದ್ಯನುಸಾರಿಯಾದ ಉಪದೇಶದಿಂದ, ಅಯಂ ವಾದಃ=ಭೇದಸತ್ಯತ್ವಾದಿವಿಷಯಕವಾದುದೇ ಸಜ್ಜನರ ವಾದವು. ದ್ವೈತಂ ನ ವಿದ್ಯತೇ = ಭೇದವು ಇಲ್ಲವೆನ್ನುವುದು,

ಅಜ್ಞಾತೇ=ತತ್ತ್ವವು ಅಜ್ಞಾತವಾದರೇನೇ ಆಗುತ್ತದೆ. ಇತ್ಯತ್ರ 'ಪ್ರಪಂಚೋ ಯದಿ ವಿದ್ಯೇತ' 'ವಿಕಲ್ಪೋ ವಿನಿವರ್ತೇತ' ಎನ್ನುವ, ಈ ಎರಡು ಶ್ಲೋಕಗಳಲ್ಲಿ, ಯದಿ ಶಬ್ದೌ ಚ = ಎರಡು 'ಯದಿ' ಶಬ್ದಗಳು, ನಿವರ್ತೇತೇತಿ ಚ ದ್ವಯಂ=ನಿವರ್ತೇತ ಎನ್ನುವ ಎರಡು ಲಿಙ್‌ಶಬ್ದಗಳೂ, ('ವಿದ್ಯೇತ' ಎನ್ನುವುದೂ, ಕೇನಚಿತ್ ಎನ್ನುವುದೂ) ವಿಶ್ವಸ್ಯ=ಜಗತ್ತಿಗೆ, ಸತ್ಯತಾಂ=ಯಾಥಾರ್ಥ್ಯವನ್ನೂ, (ಅನಾದಿತ್ವವನ್ನೂ ಕೂಡ) ಆಹುಃ=ಹೇಳುತ್ತವೆಂದು ತಿಳಿಸುತ್ತಾರೆ. (ಅಂತೂ ಆ ಶ್ರುತಿಗಳು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುತ್ತವೆಂದು ವ್ಯಾಖ್ಯಾನಮಾಡಿದರೆ ಯದಿಮೊದಲಾದ ಶಬ್ದಗಳು ಅನುಪಪನ್ನಗಳಾಗುವುವು.) ವಿದ್ಯೇತ=ವಿದ್ಯೇತ ಎನ್ನುವ ಶಬ್ದವು, ಉತ್ಪತ್ತಿಮೇವ= ಉತ್ಪತ್ತಿ ಎನ್ನುವ ಅರ್ಥವನ್ನೇ, (ಹೇಳುತ್ತದೆ. ಸತ್ವ (ಸ್ಥಿತಿ)ವೆನ್ನುವ ಅರ್ಥವನ್ನು ಹೇಳುವುದಿಲ್ಲ.) ಚ=ನಿವರ್ತೇತ ಎನ್ನುವ ಶಬ್ದವು ವಿನಾಶವೆನ್ನುವ ಅರ್ಥವನ್ನು ಹೇಳುತ್ತದೆ. ಬಾಧವೆನ್ನುವ ಅರ್ಥವನ್ನು ಹೇಳುವುದಿಲ್ಲ. ವಿದೋತ್ಪತ್ತೌ ಇತಿ ಅಸ್ಮಾದ್ಧಾತೋಃ = ವಿದವೆನ್ನುವ ಧಾತುವು, ಉತ್ಪತ್ತಿ (ಹುಟ್ಟುವಿಕೆ) ಎನ್ನುವ ಅರ್ಥದಲ್ಲಿದೆ ಎಂದು ಈ ಧಾತುವ್ಯಾಖ್ಯಾನದ್ದೆಶೆಯಿಂದ, ಉತ್ಪತ್ತಿರೇವ=(ವಿದ್ಯೇತ (ವಿದ=)ಎನ್ನುವ ಧಾತುವಿಗೆ) ಉತ್ಪತ್ತಿ (ಹುಟ್ಟುವಿಕೆ) ಎನ್ನುವ ಅರ್ಥವೇ ತಿಳಿಯತಕ್ಕದು. ಹಿ=ಮಂದರಿಗೆ ಈ ಧಾತುವ್ಯಾಖ್ಯಾನವು ಅಪ್ರಸಿದ್ಧವಾದಾಗ್ಯೂ ಬಹುಜ್ಞರಿಗೆ ಪ್ರಸಿದ್ಧವೇ ಆಗಿದೆ. ಉತ್ಪತ್ತಿರೇವ=ಉತ್ಪತ್ತಿಯೇ, ಪ್ರಾಯಃ=ಹೆಚ್ಚಾಗಿ, ನಿವೃತ್ತಿ ವ್ಯಾಪ್ತಿಯುಕ್ = ನಿವೃತ್ತಿಯಿಂದ (ನಾಶದಿಂದ) ವ್ಯಾಪ್ತಿಯುಕ್ತವಾದುದು. (ಅಂದರೆ ಇಲ್ಲಿ ಯಾದರೂ 'ಪ್ರಪಂಚೋ ಯದಿ ವಿದ್ಯೇತ ತರ್ಹಿ ನಿವರ್ತೇತ' ಎನ್ನುವಲ್ಲಿ ಯದಿ ಎನ್ನುವ ಶಬ್ದವೇ ಮೊದಲಾಗಿವುಳ್ಳವುಗಳ ಬಲದಿಂದ ಅನಿಷ್ಟಾಪಾದನರೂಪವಾದ ಪ್ರಸಂಗವೆಂದು ತಿಳಿಯಲ್ಪಡುತ್ತದೆ. ಪ್ರಸಂಗವು ವ್ಯಾಪ್ತಿಮೂಲಕವು. ಅಂತೂ ವಿದ್ಯೇತ ಎಂದು ಆಪಾದಕವಾಗಿ ಹೇಳಲ್ಪಟ್ಟ ಅರ್ಥಕ್ಕೆ 'ನಿವರ್ತೇತ' ಎಂದು ಆಪಾದ್ಯವಾಗಿ ಹೇಳಲ್ಪಟ್ಟ ನಿವೃತ್ತಿಯಿಂದ ವ್ಯಾಪ್ತಿಯು ಆವಶ್ಯಕವು. ಉತ್ಪತ್ತಿಯೇ ನಿವೃತ್ತಿಯಿಂದ ವ್ಯಾಪ್ತಿಯುಕ್ತವಾದುದು. ಸತ್ತೆಯು ಅಲ್ಲ. ಪ್ರಧ್ವಂಸಾಭಾವದಲ್ಲಿ ಉತ್ಪತ್ತಿಯಿದ್ದರೂ ನಿವೃತ್ತಿಯಿಲ್ಲದಿರುವುದರಿಂದ 'ಪ್ರಾಯಃ' ಎಂದು ಹೇಳಿರುವರು. ಅಂತೂ ಆಪಾದಕದಲ್ಲಿ 'ಭಾವತ್ವೇ ಸತಿ' ಎಂದು ವಿಶೇಷಣವನ್ನು ಇಟ್ಟುಕೊಳ್ಳಬೇಕು. ಭಾವಪದಾರ್ಥವಾಗಿದ್ದು ಎಲ್ಲಿ ಉತ್ಪತ್ತಿಯೋ ಅಲ್ಲಿ ನಿವೃತ್ತಿಯು.)

(ಹಾಗಾದರೆ ಹೀಗೆ ವ್ಯಾಖ್ಯಾನಮಾಡಿದರೂ ಉಪಪನ್ನವಾಗುವುದಿಲ್ಲ. ಏಕೆಂದರೆ ತರ್ಕಕ್ಕೆ ವ್ಯಾಪ್ತಿಯು ಹೇಗೆ ಆವಶ್ಯಕವೋ ಹಾಗೆಯೇ ವಿಪರ್ಯಯಪರ್ಯವಸಾನವೂ ಆವಶ್ಯಕವು. ಅಂತೂ ಪ್ರಪಂಚವು ಹುಟ್ಟಿದ್ದು ಎಂದಾದರೆ ನಷ್ಟವಾಗಬೇಕಾಗುವುದು. ನಷ್ಟವಾಗುವುದಿಲ್ಲ. ಆದುದರಿಂದ ಹುಟ್ಟುವುದಿಲ್ಲವೆಂದು ವಿಪರ್ಯಯಪರ್ಯವಸಾನ ಮಾಡಬೇಕು. ಇದಾದರೂ ಕೂಡಲಾರದು. ಭೂಮಿಮೊದಲಾದ ಪ್ರಪಂಚಕ್ಕೆ ಉತ್ಪತ್ತಿವಿನಾಶಗಳು ಪ್ರಮಾಣದೃಷ್ಟಗಳಾಗಿವೆ. ಆದುದರಿಂದಲೇ ತರ್ಕಕ್ಕೆ ಅಂಗಭೂತವಾದ ಆಪಾದ್ಯಕ್ಕೆ ಅನಿಷ್ಟತ್ವವೂ ಕೂಡುವುದಿಲ್ಲ. ಎಂದರೆ 'ಪ್ರಪಂಚ' ಎನ್ನುವ ಪದವನ್ನು ಬೇರೆ ರೀತಿಯಾಗಿ ವ್ಯಾಖ್ಯಾನಮಾಡುತ್ತಾರೆ.) ಪ್ರಪಂಚಃ=ಪ್ರಪಂಚ ಶಬ್ದವು, ಭೇದಪಂಚಕಃ=ಐದು ಭೇದಗಳ ಸಮೂಹವನ್ನು ಹೇಳುತ್ತದೆ. (ಅಂದರೆ ಈ ಪ್ರಪಂಚ ಶಬ್ದವು ವಿಶ್ವವಿಸ್ತಾರವನ್ನು ಹೇಳುವುದಿಲ್ಲ. ಆದುದರಿಂದಲೇ ಹಿಂದಿನ ದೋಷವು ಬರುವುದಿಲ್ಲ. ಮತ್ತೆ ಐದರ ವರ್ಗವು 'ಪಂಚ' ಎನ್ನಿಸುತ್ತದೆ. ಪಂಚಭೇದಜ್ಞಾನವು ಮೋಕ್ಷಕ್ಕೆ ಅಂಗಭೂತವಾಗಿರುವುದರಿಂದ ಪ್ರಕೃಷ್ಟ (ಉತ್ಕೃಷ್ಟ) ವಾದ ಭೇದಪಂಚಕವೇ ಪ್ರಪಂಚ ಎನ್ನಿಸುತ್ತದೆ. ಅದು ಜೀವ ಈಶ್ವರಪ್ರಕೃತ್ಯಾದಿ ನಿತ್ಯಸ್ವರೂಪಭೂತವಾದುದು ಅನಾದಿನಿತ್ಯವಾದುದೇ.) ಅಂದರೆ ೧ ಜೀವೇಶ್ವರಭೇದವು, ೨ಜೀವರಿಗೆ ಪರಸ್ಪರಭೇದವು, ೩ಪ್ರಕೃತ್ಯಾದಿ ನಿತ್ಯಜಡಗಳಿಗೂ ಈಶ್ವರನಿಗೂ

ಭೇದವು, ೪ ಪ್ರಕೃತ್ಯಾದಿರೂಪ ನಿತ್ಯಜಡಗಳಿಗೂ ಜೀವರಿಗೂ ಭೇದವು. ೫ ಪ್ರಕೃತಿವರ್ಣ ಮೊದಲಾದ ನಿತ್ಯಜಡಾದಿಗಳಿಗೆ ಪರಸ್ಪರಭೇದವು. ಹೀಗೆ ಐದು ಭೇದವೂ ಅನಾದಿನಿತ್ಯವಾದುದೇ. (ಸಮಾನಾರ್ಥಕವಾದ ಶ್ರುತಿಯುದ್ದೆಶೆಯಿಂದಲೂ ಇದೇ ಅರ್ಥವೆಂದು ಸಿದ್ಧವಾಗುತ್ತದೆ.) ಜೀವೇಶ್ವರಭಿದಾ ಚೈವ=ಜೀವೇಶ್ವರರ ಭೇದವು, ತಥಾ=ಹಾಗೆ, ಜಡೇಶ್ವರಭಿದಾ=ಜಡಗಳಿಗೂ ಈಶ್ವರನಿಗೂ ಭೇದವು, ಮಿಥಃ=ಪರಸ್ಪರವಾಗಿ, ಜೀವಭೇದಶ್ಚೈವ=ಜೀವರ ಭೇದವೂ, ತಥಾ=ಹಾಗೆಯೇ, ಜಡಜೀವಭಿದಾ=ಜಡಗಳಿಗೂ ಜೀವರಿಗೂ ಭೇದವು, ಮಿಥಶ್ಚ=ಪರಸ್ಪರವಾಗಿ, ಜಡಭೇದಃ=ಜಡಗಳಿಗೆ ಭೇದವು. (ಈ ಶ್ರುತಿಯಲ್ಲಿರತಕ್ಕ ಚ ಶಬ್ದಗಳು ಮೂರು, ತಥಾ ಶಬ್ದಗಳೆರಡು, ಪರಸ್ಪರ ಸಮುಚ್ಚಾಯಕಗಳು. ಏವಶಬ್ದಗಳೆರಡು ಅಭೇದಸಾಹಿತ್ಯನಿರಾಸಕ ಗಳು.) ಅಯಂ ಭೇದಪಂಚಕಃ=ಈ ಭೇದಗಳ ಐದು, ಪ್ರಪಂಚಃ=ಪ್ರಪಂಚಶಬ್ದವಾಚ್ಯವೆಂದು ('ಪ್ರಪಂಚೋ ಯದಿ ವಿದ್ಯೇತ' ಇತ್ಯಾದಿಗಳಲ್ಲಿ ಹೇಳಲ್ಪಟ್ಟಿದೆ.) ಸೋಽಯಂ=ಆ ಈ ಪ್ರಪಂಚವು, ಸತ್ಯಃ=ಯಥಾರ್ಥವು. ಹಿ= ಪ್ರಸಿದ್ಧವು. ಅನಾದಿಶ್ಚ=ಅನಾದಿಯೂ ಆಗಿದೆ. ಸಾದಿಶ್ಚೇತ್= (ಅನಾದಿತ್ವವನ್ನು ಅಂಗೀಕರಿಸದೆ) ಸಾದಿಯಾಗಿದ್ದರೆ, ನಾಶಂ=ನಾಶವನ್ನು, ಆಪ್ನುಯಾತ್= ಹೊಂದುವುದು. ತಸ್ಮಾತ್=ಆದುದರಿಂದ, ದ್ವೈತಂ=ಭೇದವು, ನ ವಿದ್ಯತೆ ಇತಿ=ಇಲ್ಲವೆನ್ನುವುದು. ಅಜ್ಞಾನಿನಾಂ=ಅಜ್ಞಾನಿಗಳ, ಮತಂ=ಮತವು, ('ಸೋಽಯಂ ಸತ್ಯೋ ಹ್ಯನಾದಿಶ್ಚ' ಇತ್ಯಾದಿ ಗಳಿಂದ 'ಪ್ರಪಂಚೋ ಯದಿ ವಿದ್ಯೇತ' ಎನ್ನುವಲ್ಲಿಯೂ, 'ಪ್ರಪಂಚಶಬ್ದಿತಃ ಭೇದಪಂಚಕಃ ಅನಾದಿಃ ಭವಿತುಮರ್ಹತಿ' 'ಸತ್ಯಃ ಭವಿತುಮರ್ಹತಿ' ಪ್ರಪಂಚಶಬ್ದವಾಚ್ಯಗಳಾದ ಐದು ಭೇದ ಗಳು ಅನಾದಿಯಾಗಲು ಯೋಗ್ಯವಾಗಿವೆ, ಸತ್ಯವಾಗಲು ಯೋಗ್ಯವಾಗಿವೆ, ಎಂದು ಎರಡು ಪ್ರತಿಜ್ಞೆಗಳನ್ನು ಇಟ್ಟುಕೊಳ್ಳಬೇಕು.) (ಇತರ ಶ್ರುತಿಗಳಿಂದ ವ್ಯಾಖ್ಯಾತವಾಗಿರುವುದರಿಂದ 'ಮಾಯಾಮಾತ್ರಂ' ಎನ್ನುವುದನ್ನು ವ್ಯಾಖ್ಯಾನಮಾಡುತ್ತಾರೆ.) ಇತಿ ಶ್ರುತೇಃ=ಈ ಶ್ರುತಿ ಯುದ್ದೆಶೆಯಿಂದ, (ಇದಂ ದ್ವೈತಂ=ಈ ಭೇದವು,) ಮಾಯಾಖ್ಯಹರಿವಿದ್ಯಯಾ=ಮಾಯಾ ಎನ್ನಿಸುವ ಶ್ರೀ ಹರಿಯ ವಿಜ್ಞಪ್ತಿಯಿಂದ, ಮಿತಂ=ಮಿತವೂ, ರಕ್ಷಿಸಲ್ಪಟ್ಟದ್ದೂ ಆಗಿದೆ. ಆದು ದರಿಂದ 'ಮಾಯಾಮಾತ್ರಂ' ಎನ್ನಿಸುತ್ತದೆ.) ('ಅದ್ವೈತಂ ಪರಮಾರ್ಥತಃ' ಎನ್ನುವುದನ್ನು ವ್ಯಾಖ್ಯಾನಮಾಡುತ್ತಾರೆ.) ಹಿ = ಯಾವ ಕಾರಣದ್ದೆಶೆಯಿಂದ, ತತ್=ಶ್ರೀಪರಮಾತ್ಮನದ್ದೆಶ ಯಿಂದ, ಅನ್ಯತ್=ಇತರವಾದುದು, ಮಧ್ಯಮಾಧಮಂ=ಶ್ರೀತತ್ವವು ಮಧ್ಯಮವು, ಬ್ರಹ್ಮಾದಿ ಗಳು ಅಧಮರು ಆಗಿರುತ್ತಾರೆ. ತತ್=ಆದಕಾರಣ, ಉತ್ತಮಃ ಅರ್ಥಃ=ಸರ್ವೋತ್ಕೃಷ್ಟ ವಾದ ವಸ್ತುವು, ಹರಿಃ ತು ಏಕಃ=ಶ್ರೀಹರಿಯೊಬ್ಬನೇ. 'ವಿಕಲ್ಪೋ ವಿನಿವರ್ತೇತ' ಎನ್ನುವುದು ಪ್ರಪಂಚಸತ್ಯತ್ವ ವಿಷಯದಲ್ಲಿ ಸ್ಪಷ್ಟವಾಗಿರುವುದರಿಂದ ಪ್ರತ್ಯೇಕ ವ್ಯಾಖ್ಯಾನಮಾಡಲಿಲ್ಲ.)

**ತಾ ॥ ಸ. ರ. ವಿ.—** (1) ಪ್ರಪಂಚವು ವಿದ್ಯೇತ=ಹುಟ್ಟುವುದಾದರೆ ಎಂದರ್ಥವು. ಇರತಕ್ಕುದು ಆದರೆ ಎಂದರ್ಥವಲ್ಲ. ಹಾಗಿದ್ದರೆ 'ಯದ್ವಿದ್ಯತೇ ತನ್ನಿವರ್ತತೇ'=ಯಾವುದು ಉಂಟೋ ಅದು ನಿವೃತ್ತವಾಗುತ್ತದೆ. ಎಂದು ವ್ಯಾಪ್ತಿಯಿಲ್ಲದಿರುವುದರಿಂದ 'ನಿವರ್ತೇತ' ನಾಶ ವಾಗಬೇಕಾಗುವುದು ಎನ್ನುವ ಪ್ರಸಂಜನವು ಅಯುಕ್ತವಾಗುವುದು. ಆದಕಾರಣ ವಿವಿಧ ಭೇದಾ ತ್ಮಕವಾದ ವಿಕಲ್ಪವು ಯಾವುದರಿಂದಲಾದರೂ ಕಲ್ಪಿತವಾಗಿದ್ದರೆ ನಷ್ಟವಾಗುವುದು, 'ಯತ್ ಧ್ವಂಸವ್ಯತಿರಿಕ್ತತ್ವೇ ಸತಿ ಉತ್ಪದ್ಯಮಾನಂ ವಸ್ತುತದ್ವಿನಾಶಿ' ಎಂದು ವ್ಯಾಪ್ತಿಯು. ಈ ಭೇದವು ವಿನಷ್ಟವಾಗುವುದಿಲ್ಲ. ಆದಕಾರಣ ಅನಾದಿಯೇ. (2) ಘಟಪಟಾದಿರೂಪ ಪ್ರಪಂಚಕ್ಕೆ ಉತ್ಪತ್ತಿ ವಿನಾಶಗಳು ಇರುವುದರಿಂದ ಅದು ಪ್ರಪಂಚಶಬ್ದದಿಂದ ವಿವಕ್ಷಿತವಲ್ಲ. ಮತ್ತೆ ಅನಾದಿ ನಿತ್ಯವಾದ ಐದು ಭೇದಗಳೇ ಇಲ್ಲಿ ಪ್ರಪಂಚಶಬ್ದದಿಂದ ವಿವಕ್ಷಿತವು.

ತಾ || ನ್ಯಾಯಸುಧಾ— (1) 'ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ । ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ' || (ಮಾ. ಉ. ಪು. ೩೧೬.) ಎನ್ನುವ ಪೂರ್ವಶ್ಲೋಕದಲ್ಲಿ ಪರಮೇಶ್ವರನ ಪ್ರಜ್ಞೆಯಿಂದ, ಆತನ ಇಚ್ಛೆಯಿಂದಾಗಲೀ, ಜೀವರ ಸಮುದಾಯಕ್ಕೆ ಪ್ರಕೃತ್ಯಾದಿ ಜಡಗಳಿಂದ ಆವೃತಜ್ಞಾನತ್ವರೂಪವಾದ ಸುಪ್ತತ್ವವೂ, ಆ ಶ್ರೀ ಹರಿಯ ಇಚ್ಛೆಯಿಂದಲೇ ಪರಮೇಶ್ವರಾದಿ ತತ್ವಗಳನ್ನು ವಿಷಯೀಕರಿಸುವ ಪರೋಕ್ಷಜ್ಞಾನರೂಪವಾದ ಪ್ರಬೋಧವನ್ನು ಹೇಳಿ ಅಪರೋಕ್ಷಜ್ಞಾನವೂ ಹೇಳಲ್ಪಟ್ಟಿತು. ಅದರಿಂದ ಜೀವೇಶ್ವರರಿಗೂ, ಜಡೇಶ್ವರರಿಗೂ, ಜೀವಜಡಗಳಿಗೂ ಭೇದಗಳು ಪ್ರತಿಪಾದಿಸಲ್ಪಟ್ಟವೆ. ಪ್ರಭುವಿನ ಇಚ್ಛೆಯಿಂದ ನಿಗಡಾದಿಗಳಿಂದ ಪುರುಷನು ಬದ್ಧನಾಗಲು ಅಥವಾ ಮುಕ್ತನಾಗಲು ಹಿಂದೆ ಹೇಳಿದ ಮೂರು ಭೇದಗಳು ತೋರುತ್ತವೆ. (2) ಮತ್ತು ಮೊದಲು 'ಪ್ರಭವಃ ಸರ್ವಭಾವಾನಾಂ' ಎಂದು ಭಾವಶಬ್ದದಿಂದ ಹೇಳಲ್ಪಟ್ಟ ಜೀವರಿಗೆ ಪರಸ್ಪರವಾಗಿ ಭೇದವೂ ಹೇಳಲ್ಪಟ್ಟದೆ. ಆದುದರಿಂದಲೇ ಆವರಣಗಳಾದ ಜಡಗಳಿಗೂ ಪರಸ್ಪರ ಭೇದವು ಅರ್ಥಾತ್ ಲಭಿಸುತ್ತದೆ. ಆ ಐದು ಭೇದಗಳಿಗೂ 'ಅನಾದಿಮಾಯಯಾ' 'ಅಜಮನಿದ್ರಂ' ಇದುಮೊದಲಾದ ವಿಶೇಷಣಸಾಮರ್ಥ್ಯಾದಿಗಳಿಂದ ಅನಾದಿತ್ವವೂ ಲಬ್ಧವಾಯಿತು. ತಥಾಚ ಈ ಐದು ಭೇದಗಳಿಗೆ ಸತ್ಯತ್ವವನ್ನೂ ಅನಾದಿತ್ವವನ್ನೂ ಉಪಪಾದಿಸುವುದಕ್ಕಾಗಿ 'ಪ್ರಪಂಚೋ ಯದಿ ವಿದ್ಯೇತ' ಇತ್ಯಾದಿ ಎರಡು ಶ್ಲೋಕಗಳು. ಅದರಲ್ಲಿ ವಿಪಕ್ಷದಲ್ಲಿ ಬಾಧಕವನ್ನು ತೋರಿಸಿ ಅನಾದಿತ್ವವನ್ನು 'ಪ್ರಪಂಚೋ ಯದಿ' ಎನ್ನುವುದರಿಂದ ಉಪಪಾದಿಸಿದರು. ಹೇಗೆಂದರೆ— (೧) ಜಡಜೀವರ ಭೇದವು ನಿವೃತ್ತಿಯಾಗುವುದಾದರೆ ಆಗ ಜೀವರಿಗೇನೇ ಜಡತ್ವವು ಪ್ರಾಪ್ತವಾಗುವುದರಿಂದ ಮೋಕ್ಷಶಾಸ್ತ್ರಕ್ಕೆ ವೈಯರ್ಥ್ಯವು. (೨) ಜಡೇಶ್ವರರ ಭೇದವು ನಷ್ಟವಾಗುವುದಾದರೆ ಆಗ ಈಶ್ವರನಿಗೆ ಜಡತ್ವವು ಪ್ರಾಪ್ತವಾಗುವುದರಿಂದ 'ಸತ್ಯಂ ಜ್ಞಾನಂ' ಇತ್ಯಾದಿ ಶಾಸ್ತ್ರಗಳಿಗೆ ವಿರುದ್ಧಾರ್ಥತ್ವವು ಬರಬೇಕಾಗುವುದು. (೩) ಜಡಗಳಿಗೆ ಪರಸ್ಪರ ಭೇದವು ನಷ್ಟವಾಗುವುದಾದರೆ ಆಗ ವಿದ್ಯೆಗೂ ಅವಿದ್ಯಾತ್ವವು ಬರಬೇಕಾಗುವುದರಿಂದ 'ತಮೇವಂ ವಿದ್ವಾನ್' ಇತ್ಯಾದಿ ಶಾಸ್ತ್ರಗಳಿಗೆ ವಿರುದ್ಧಾರ್ಥತ್ವವು ಬರಬೇಕಾಗುವುದು. (೪) ಜೀವರಿಗೆ ಪರಸ್ಪರ ಭೇದವು ನಷ್ಟವಾಗುವುದಾದರೆ ಆಗ ಪರಸ್ಪರವಾಗಿ ಐಕ್ಯವು ಬರಬೇಕಾಗುವುದರಿಂದ ಪರಸ್ಪರವಾಗಿ ಸುಖಾದ್ಯನುಸಂಧಾನಗಳು ಬರಬೇಕಾಗುವವು. (೫) ಜೀವೇಶ್ವರರ ಭೇದವು ನಷ್ಟವಾಗುವುದಾದರೆ ಆಗ ಈಶ್ವರನಿಗೆ ದುಃಖಾನುಭವವೂ, ಜೀವನಿಗೆ ಸಾರ್ವಜ್ಞಾದ್ಯನುಭವವೂ ಬರಬೇಕಾಗುವುದು. ಪ್ರಮಾಣವೇ ಇಲ್ಲದಿರುವುದರಿಂದ ಇಷ್ಟಾಪತ್ತಿಯೆಂದು ಹೇಳಕೂಡದು. ಯಥಾಯೋಗ್ಯವಾಗಿ ಶ್ರುತಿ ಅನುಭವರೂಪ ಪ್ರಮಾಣವಿರೋಧವಿದ್ದುದರಿಂದಲೂ ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆದ ಅರ್ಥವನ್ನು ಸ್ವೀಕರಿಸಬೇಕಾಗುವುದು ಇತ್ಯಾದಿ ರೂಪದಿಂದ ಅನಿಷ್ಟತ್ವವು. (3) ಹೀಗೆ ಐದು ಭೇದಗಳಿಗೆ ಅನಾದಿತ್ವವನ್ನು ಉಪಪಾದಿಸಿ ಸತ್ಯತ್ವವಿಷಯದಲ್ಲಿ 'ಮಾಯಾಮಾತ್ರಂ' ಎಂದು ಪ್ರಮಾಣವನ್ನು ಹೇಳಿದರು. ಯಾವ ಕಾರಣದಿಂದ ಈ (ಇದಂ ದ್ವೈತಂ=) ಪ್ರಪಂಚಶಬ್ದದಿಂದ ಹೇಳಲ್ಪಟ್ಟ ದ್ವೈತವು (ಭೇದವು) ಹಿಂದೆ ಹೇಳಿದಪ್ರಕಾರ, (ಮಾಯಾಮಾತ್ರಂ=) ಈಶ್ವರೇಚ್ಛೆಯಿಂದ ಮಿತವೂ ರಕ್ಷಿತವೂ ಆಗಿದೆಯೋ ಆದಕಾರಣ ಸತ್ಯವು. ಅವಿದ್ಯಮಾನವಾದುದು ಈಶ್ವರನ ಪ್ರಜ್ಞೆಗೆ ವಿಷಯವಾಗಲಾರದು. ಈಶ್ವರನಿಗೆ ಭ್ರಾಂತಿಯೂ ಬರಬೇಕಾಗುವುದು. ಅವಿದ್ಯಮಾನವಾದುದನ್ನು ಯಾರೂ ರಕ್ಷಿಸಲಾರರು. (4) ಹಾಗಾದರೆ 'ಅದ್ವೈತಃಸರ್ವಭಾವಾನಾಂ' ಇತ್ಯಾದಿಗಳು ಹೇಗೆ ಹೇಳಲ್ಪಟ್ಟವೆ, ಎಂದರೆ, ಅದ್ವೈತಂ ಪರಮಾರ್ಥತಃ=ಯಾವುದೊಂದು ಪರಮೇಶ್ವರನಿಗೆ ಅದ್ವೈತತ್ವವು ವಿಶೇಷಣವು ಹೇಳಲ್ಪಟ್ಟಿದೆಯೋ ಅದು

ಎರಡನೇ ವಸ್ತುವು ಇಲ್ಲವೆನ್ನುವ ಅಭಿಪ್ರಾಯದಿಂದ ಅಲ್ಲ. ಮತ್ತೆ ಸರ್ವೋತ್ತಮವಾದ ವಸ್ತುವು ಒಂದೇ ಎನ್ನುವ ಅಭಿಪ್ರಾಯದಿಂದ. ಅಂತೂ ಉತ್ತಮಾರ್ಥವಿಷಯಕವಾದುದು ಅಭೇದವು. (5) ಭೇದಸತ್ಯತ್ವವನ್ನು ಅಂಗೀಕರಿಸದಿದ್ದರೆ 'ವಿಕಲ್ಪೋ ವಿನಿವರ್ತೇತ' ಎನ್ನುವುದರಿಂದ ಬಾಧಕವನ್ನು ಹೇಳಿದರು. ಹೇಗೆಂದರೆ (ವಿಕಲ್ಪಃ=) ಪ್ರಕೃತವಾದ ಭೇದವು ಯಾವುದಾದರೂ ಅಜ್ಞಾನಾದಿಗಳಿಂದ ಕಲ್ಪಿತವಾಗಿದ್ದರೆ ಚಂದ್ರಭೇದದಂತೆ ನಿವೃತ್ತಿಯಾಗುವುದು. ಬಾಧಿಸಲ್ಪಡುವುದು; ಬಾಧಿಸಲ್ಪಡುವುದಿಲ್ಲ. ಆದಕಾರಣ ಕಲ್ಪಿತವಲ್ಲ. ಮತ್ತೆ ಸತ್ಯವೇ. (6) ಹೀಗೆ ಶ್ರುತ್ಯಾದ್ಯನುಸಾರಿಯಾದ ಉಪದೇಶದಿಂದ ಯಾವುದು ಭೇದಸತ್ಯತ್ವಾದಿವಿಷಯಕವೋ ಇದೇವೇ ಸಜ್ಜನರ ಮಾದವು. ದ್ವೈತವು ಇಲ್ಲವೆನ್ನುವುದು 'ತತ್ವವು ಅಜ್ಞಾತವು ಆದರೇನೇ' ಆಗುತ್ತದೆ. ಆದಕಾರಣ ದುರ್ವಾರವು ॥ ೧೧೦ ॥ ೧೧೧ ॥ ೧೧೨ ॥ ೧೧೩ ॥ ೧೧೪ ॥ ೧೧೫ ॥ ೧೧೬ ॥ ೧೧೭ ॥

**ಸ. ರ. ವಿ.**— ಈಗ ಪ್ರಪಂಚವು ಬ್ರಹ್ಮ ಮಿಥ್ಯಾಪರಿಣಾಮರೂಪವು ಎನ್ನುವಲ್ಲಿ ಪರರು ಉದಾಹರಿಸಿರುವ ಶ್ರುತಿಯನ್ನು ಬ್ರಹ್ಮನ ಜಗತ್ಪ್ರಧಾನ್ಯಾದಿಪರವೆಂದು ವ್ಯಾಖ್ಯಾನಮಾಡುತ್ತಾರೆ-

**ನ್ಯಾಯಸುಧಾ**— (1) ಈಗ ಪರಿಣಾಮವಾದಿಯೂ ವಿವರ್ತವಾದಿಯೂ 'ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್' ಎನ್ನುವ ಸೂತ್ರಾರ್ಥವಾಗಿ ಸ್ವೀಕರಿಸಿದ 'ಉತ ತಮಾದೇಶಮ ಪ್ರಾಕ್ಷ್ಯಃ' ಇದುಮೊದಲಾದ ಶ್ರುತಿಯನ್ನು ವ್ಯಾಖ್ಯಾನಮಾಡುತ್ತಾರೆ. ಅದರಲ್ಲಿ ಪರಿಣಾಮವಾದಿಯ ವ್ಯಾಖ್ಯಾನವು. '**ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ**' ಎನ್ನುವ ಶ್ರುತಿಯಿಂದ ಜಗತ್ತು ಬ್ರಹ್ಮನ ಪರಿಣಾಮವಾಗಿರುವುದರಿಂದ ಬ್ರಹ್ಮಭೇದವು ಜಗತ್ತಿಗೆ ಇದ್ದಪ್ರಯುಕ್ತ ಬ್ರಹ್ಮಜ್ಞಾನದಿಂದ ಸರ್ವವಿಜ್ಞಾನವು ಪ್ರತಿಜ್ಞಾತವಾಗಿದೆ. ಅದರಲ್ಲಿ ಸರ್ವವಸ್ತುಗಳಿಗೆ ಬ್ರಹ್ಮನು ಉಪಾದಾನಕಾರಣನೆಂದು ತಿಳಿಯದೆ ಇರುವ ಮತ್ತುಉಪಾದಾನೋಪಾದೇಯಗಳಿಗೂ ಭೇದವನ್ನು ತಿಳಿದಿರುವ ಶ್ವೇತಕೇತುವು ಒಂದು ವಸ್ತುವಿನ ಜ್ಞಾನದಿಂದ ಮತ್ತೊಂದರ ಜ್ಞಾನವು ಎಲ್ಲಿಯೂ ಕಾಣದಿರುವುದರಿಂದ 'ಕಥಂ ನು ಭಗವಃ ಸ ಆದೇಶೋ ಭವತಿ' ಎಂದು ಉದ್ದಾಲಕರ ಹತ್ತಿರ ಪ್ರಶ್ನಿಸಲು ಅವರು ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನಾಗಿರುವುದರಿಂದ ಜಗತ್ತಿಗೂ ಬ್ರಹ್ಮನಿಗೂ ಅಭೇದವೆಂದು ಉಪದೇಶಿಸುತ್ತಾ ಲೌಕಿಕಪ್ರತೀತಿಸಿದ್ಧವಾದ, 'ಕಾರಣದ್ವೇಶೆಯಿಂದ ಕಾರ್ಯಕ್ಕೆ ಐಕ್ಯವನ್ನು ಉಪಾದಾನಕಾರಣ ಜ್ಞಾನದಿಂದ ಉಪಾದೇಯಜ್ಞಾನಬರುವ ಕ್ರಮವನ್ನೂ ತೋರಿಸುತ್ತಾರೆ. (2) '**ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ । ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ । ಯಥಾ ಸೌಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್ । ವಾಚಾರಂಭಣಂ ವಿಕಾರೋ ನಾಮಧೇಯಂ ಲೋಹಮಣಿರಿತ್ಯೇವ ಸತ್ಯಂ ।' ಯಥಾ ಸೌಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್ । ವಾಚಾರಂಭಣಂ ವಿಕಾರೋ ನಾಮಧೇಯಂ ಕಾರ್ಷ್ಣಾಯಸಮಿತ್ಯೇವ ಸತ್ಯಂ'** । ಅಂದರೆ ಮೃತ್ಪಿಂಡ ಲೋಹಮಣಿ ನಖನಿಕೃಂತನ ಇವುಗಳ ಪರಿಣಾಮಗಳಾದ ಘಟ ಲೋಹಮಯ ಕಾರ್ಷ್ಣಾಯಸಗಳಿಗೆ ಮೃತ್ಪಿಂಡಾದಿಗಳಿಂದ ಅಭೇದವಿದ್ದಪ್ರಯುಕ್ತ ಮೃತ್ಪಿಂಡಾದಿಗಳ ಜ್ಞಾನದಿಂದ ಅವುಗಳು ತಿಳಿಯಲ್ಪಡುತ್ತವೋ. ಹೀಗೆ ಮೂರು ದೃಷ್ಟಾಂತಗಳು. (3) ಮೃತ್ಪಿಂಡಾದಿಗಳಿಂದ ಘಟಾದಿಗಳಿಗೆ ಅಭೇದವಿದ್ದರೆ ಘಟವು ಕಾರ್ಯವು ಹೇಗೆ ಆಗುವುದು? ಎಂದರೆ— ಘಟಾದಿಗಳು ಮೃತ್ಕಾರ್ಯಗಳಾದಾಗ್ಯೂ ಮೃತ್ತಿನಿಂದ ಅಭಿನ್ನವೆಂದು ಅಂಗೀಕರಿಸಬೇಕು. 'ಮೃದ್ಘಟಃ' ಎನ್ನುವ ಅಭೇದ

ವ್ಯವಹಾರರೂಪಕಾರ್ಯಸಿದ್ಧಿಗಾಗಿ, 'ವಾಚಾರಂಭಣಂ ವಿಕಾರೋ ನಾಮಧೇಯಂ' ಘಟವಟಾದಿ ವಿಕಾರವು, ಘಟ ಇತ್ಯಾದಿ ನಾಮಧೇಯವು ವಾಗಿಂದ್ರಿಯಜನ್ಯವ್ಯವಹಾರವನ್ನು ಹುಟ್ಟಿಸುತ್ತದೆ. ವಾಗಿಂದ್ರಿಯದಿಂದ ಹುಟ್ಟಿರುವ ಅಭೇದವ್ಯವಹಾರವಿಷಯವು ಯಾವುದರಿಂದ ಆಗುತ್ತದೋ, ಆದಕಾರಣ ಘಟವು ಮಣ್ಣಿನ ಕಾರ್ಯವಾಗಿದ್ದಾಗ್ಯೂ ಮಣ್ಣಿನಿಂದ ಅಭಿನ್ನವೆಂದು ಅವಶ್ಯವಾಗಿ ಅಂಗೀಕರಿಸತಕ್ಕದು. ತಥಾಚ (೧) 'ವಿಕಾರಃ ನಾಮಧೇಯಂ ಚೇತಿ ದ್ವಯಂ ಮೃದನನ್ಯತ್ ವಾಚಾಮೃತ್‌ಘಟಃ ಇತ್ಯಭೇದೇನ ವ್ಯವಹ್ರಿಯಮಾಣತ್ವಾತ್ ಅಭೇದೇನ ಚಕ್ಷುಷಾ ಜ್ಞಾಯಮಾನತ್ವಾತ್ ಯತ್ ಯದಭೇದೇನ ವ್ಯವಹ್ರಿಯತೇ ಜ್ಞಾಯತೇ ತತ್ ತದಭಿನ್ನಂ ಯಥಾ ಘಟೋ ಘಟೇನ' = ಘಟಾದಿ ವಿಕಾರವು ಘಟಾದಿನಾಮಧೇಯವೂ ಇವೆರಡೂ ಮಣ್ಣಿನಿಂದ ಅಭಿನ್ನವು,ವಚನದಿಂದ ಮಣ್ಣು ಘಟವು ಎಂದು ಅಭೇದದಿಂದ ವ್ಯವಹರಿಸಲ್ಪಡುವುದರಿಂದ, ಅಭಿನ್ನವೆಂದು ಚಕ್ಷುಸ್ಸಿನಿಂದ ತಿಳಿಯಲ್ಪಡುವುದರಿಂದ, ಯಾವುದು ಯಾವುದರಿಂದ ಅಭಿನ್ನವೆಂದು ವ್ಯವಹರಿಸಲ್ಪಡುತ್ತದೋ, ತಿಳಿಯಲ್ಪಡುತ್ತದೋ, ಅದು ಅದರಿಂದ ಅಭಿನ್ನವು. ಘಟವು ಘಟದಿಂದ ಅಭಿನ್ನವು. ಎಂದನುಮಾನವು. ಇವರ ಮತದಲ್ಲಿ ನಾಮಾತ್ಮಕಪ್ರಪಂಚವೂ, ಮಣ್ಣಿನ ಕಾರ್ಯವಾಗಿರುವುದರಿಂದ ಮಣ್ಣಿನಿಂದ ಅಭಿನ್ನವು. (4) ವಿಕಾರಃ ನಾಮಧೇಯಂ ಎಂದು ಎರಡು ಶಬ್ದಗಳನ್ನು ಹೇಳಿರುವುದರಿಂದ ವಾಚ್ಯಗಳಾದ ಅರ್ಥಗಳಿಗೂ, ವಾಚಕನಾಮಧೇಯಗಳಿಗೂ, ಪರಸ್ಪರವಾಗಿ ವಿಕಾರರೂಪವಾಚ್ಯ ನಾಮಧೇಯರೂಪ ವಾಚಕಸ್ವರೂಪಗಳಿಗೂ, ವಿಕಾರ ನಾಮಧೇಯಸ್ವರೂಪಗಳಿಗೂ ಭೇದವನ್ನು ಸ್ವೀಕರಿಸಬೇಕು. ಜಲಾಹರಣಾದಿರೂಪಕಾರ್ಯಭೇದವು ವ್ಯಪದೇಶಭೇದವು. ತಥಾಚ (೧) ಕಾರ್ಯಂ ಘಟಾದಿವಿಕಾರತನ್ನಾಮಧೇಯರೂಪಂ, ಮೃದಾದಿಕಾರಣಾದ್ಭಿನ್ನಂ, ಮೃತ್ ಘಟಃ ಇತ್ಯಾದಿ ಭಿನ್ನವ್ಯಪದೇಶವಿಷಯತ್ವಾತ್, ಯತ್ ಭಿನ್ನವ್ಯಪದೇಶವಿಷಯಃ ತದ್ಭಿನ್ನಂ ಯಥಾ ನಾಮಧೇಯವಿಕಾರೌ ಪರಸ್ಪರಂ' ಇತ್ಯಾದ್ಯನುಮಾನವು. ಈ ಹೇತುಗಳಿಂದ ಪರಸ್ಪರ ಭೇದವಿದ್ದರೆ ಅವುಗಳಿಂದಲೇ ಕಾರಣದಿಂದ ಕಾರ್ಯಕ್ಕೆ ಭೇದವು ಎನ್ನುವ ಪೂರ್ವಪಕ್ಷವನ್ನು ನಿಷೇಧಿಸುವುದಕ್ಕಾಗಿ ಹೇಳುತ್ತಾರೆ. ಮೃತ್ತಿಕೇತ್ಯೇವ ಸತ್ಯಂ ಎಂದು. ಯಾವ ಪ್ರಕಾರದಿಂದ ಎಂತಹ ಸತ್ವದಿಂದ ಮೃತ್ತಿಕೆಯು ಸತ್ತಾಗಿದೆಯೋ ಆಪ್ರಕಾರವಾಗಿಯೇ ಮೃಣ್ಮಯವು ಸತ್ಯವು. ಹೀಗೆ ಪರಿಣಾಮವಾದಿಗಳ ಅಭಿಪ್ರಾಯವು.

(5) ವಿವರ್ತವಾದಿಗಳು ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಒಂದು ವಸ್ತುವಿನ ಜ್ಞಾನದಿಂದ ಸರ್ವವಸ್ತುಗಳ ಜ್ಞಾನವೆಂದು ಪ್ರತಿಜ್ಞಾಮಾಡಿ ದೃಷ್ಟಾಂತವು ಯಾವುದು ಎಂದಾಕಾಂಕ್ಷಾ ಬಂದರೆ 'ಯಥಾ ಸೋಮ್ಯ' ಎಂದು ಹೇಳಿದ್ದು, ಅಂದರೆ ಒಂದು ಮೃತ್ಪಿಂಡವನ್ನು ಪಾರಮಾರ್ಥಿಕವಾಗಿ ಮಣ್ಣು ಎಂದು ತಿಳಿದರೆ ಎಲ್ಲಾ ಮೃಣ್ಮಯವಾದ ಘಟಾದಿಯು ಮೃತ್ಸ್ವರೂಪವಾಗಿರುವುದರಿಂದ ವಿಜ್ಞಾತವಾಗುವುದು. ಏಕೆಂದರೆ, ವಿಕಾರವಾದ ಘಟವು ಶರಾವವು ಉದಂಚನವು ಇವೆಲ್ಲವೂ ವಚನದಿಂದ ಮಾತ್ರ ಉಂಟೆಂದು ಆರಬ್ಧವಾಗುತ್ತದೆ. ವಾಸ್ತವಿಕವಾಗಿ ವಿಕಾರವೆನ್ನುವುದು ಯಾವುದೂ ಇಲ್ಲ. ನಾಮಮಾತ್ರವು ಇದು. ಅನೃತವು. ಮೃತ್ತಿಕಾ ಎನ್ನುವುದು ಮಾತ್ರ ಸತ್ಯವು. ಹೀಗೆ ಬ್ರಹ್ಮನಿಗೆ ಸತ್ಯತ್ವವಿಷಯದಲ್ಲಿಯೂ, ಇತರ ಎಲ್ಲಾ ವಸ್ತುಗಳಿಗೂ ಮಿಥ್ಯಾತ್ವ ವಿಷಯದಲ್ಲಿಯೂ, ದೃಷ್ಟಾಂತವು ಹೇಳಲ್ಪಟ್ಟಿದೆ —

## ಸಿದ್ಧಾಂತ:—

(6) ಅದರಲ್ಲಿ ಒಂದು ವಸ್ತುವಿನ ಜ್ಞಾನದಿಂದ ಸರ್ವವಸ್ತುಗಳ ಜ್ಞಾನಪ್ರತಿಜ್ಞೆಯು, ಮೃತ್ಪಿಂಡಾದಿ ದೃಷ್ಟಾಂತಗಳೂ ವಿಕಾರ ವಿವರ್ತಾಭಿಪ್ರಾಯವುಳ್ಳವುಗಳೆಂದು ವಾಕ್ಯದಿಂದ

ತೋರುವುದಿಲ್ಲ. ಮತ್ತೆ ವಾಚಾರಂಭಣಂ ಎನ್ನುವ ಉಪಪಾದಕ ವಾಕ್ಯದ ಬಲದಿಂದ ಎಂದು ಹೇಳಬೇಕು. ಆದುದರಿಂದ ಅದನ್ನೇ ಪ್ರಥಮತಃ ವ್ಯಾಖ್ಯಾನ ಮಾಡುತ್ತಾ ವಾಚಾರಂಭಣ ಶಬ್ದಾರ್ಥವನ್ನು ಹೇಳುತ್ತಾರೆ.

**ಮೂ ॥ ವಾಚಾರಬ್ಧಂ ತು ಸಾಂಕೇತ್ಯಂ ನಾಮ ಸ್ಯಾದ್ವಿಕೃತಂ ಬಹು ।**
**ನಿತ್ಯಂ ತು ನಾಮಧೇಯಂ ಯನ್ಮೃತ್ತಿಕೇತ್ಯಾದಿ ವೈದಿಕಂ ॥ ೧೧೮ ॥**
**ಪ್ರಾಧಾನ್ಯಾತ್ತತ್ಪರಿಜ್ಞಾನಾತ್ಪ್ರಾಕೃತೋ (ತಾ) ಜ್ಞೋಽಪಿ ಪೂರುಷಃ ।**
**ವಿದ್ವಾನಿತ್ಯುಚ್ಯತೇ ಸದ್ಭಿರೇವಂ ನಿತ್ಯಪರಾತ್ಮವಿತ್ ॥ ೧೧೯ ॥**

**ಅ ॥** ವಾಚಾರಂಭಣಂ=ವಾಚಯಾ ಆರಂಭಣಂ ಯಸ್ಯ ವಾಗಿಂದ್ರಿಯದಿಂದ ಯಾವುದಕ್ಕೆ ಉತ್ಪತ್ತಿಯೋ ಅದು, ವಾಚಾ = ವಾಗಿಂದ್ರಿಯದಿಂದ, ಆರಬ್ಧಂ=ಆರಂಭಿಸಲ್ಪಟ್ಟದ್ದು, ಅಂದರೆ ಸಾಂಕೇತ್ಯಂ ನಾಮ ಸ್ಯಾತ್=ವಾಚಾರಂಭಣ ಶಬ್ದದಿಂದ ಸಾಂಕೇತಿಕನಾಮವೇ ವಾಚ್ಯವಾಗುವುದು. (ವಿಕಾರಶಬ್ದಾರ್ಥವನ್ನು ಹೇಳುತ್ತಾರೆ.) ವಿಕೃತಂ=ವಿಕಾರವುಳ್ಳದ್ದು, ವಿಕ್ರಿಯತೇ ಇತಿ ವಿಕಾರಃ, ಕರ್ಮಾರ್ಥದಲ್ಲಿ ಘಞ್‌ಪ್ರತ್ಯಯವು.) ಬಹು=ಅನೇಕಪ್ರಕಾರವುಳ್ಳದ್ದು. (ವಿವಿಧಃ ಕಾರಃ=ಪ್ರಕಾರವು, ವಿಕಾರಃ ಎನ್ನುವ ವ್ಯುತ್ಪತ್ತಿಯಿಂದ ಬಹು ವಿಧವು ) (ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ ಎನ್ನುವುದರ ಅರ್ಥವನ್ನು ಹೇಳುತ್ತಾರೆ.) ಯತ್=ಯಾವುದು, ಮೃತ್ತಿಕೇತ್ಯಾದಿ=ಮೃತ್ತಿಕಾ ಲೋಹಮಣಿ ಮೊದಲಾದ, ವೈದಿಕಂ ನಾಮಧೇಯ=ಸಂಸ್ಕೃತ ನಾಮಧೇಯವೋ, ತತ್ತು=ಅದೇವೇ, ನಿತ್ಯಂ (ಸತ್ಯಂ) ನಿತ್ಯವು. ಪ್ರಾಧಾನ್ಯಾತ್=ಮುಖ್ಯತ್ವವಿದ್ದ ಪ್ರಯುಕ್ತ, ತತ್ಪರಿಜ್ಞಾನಾತ್=ಮುಖ್ಯವಾದ ಸಂಸ್ಕೃತಭಾಷೆಯ ಜ್ಞಾನದಿಂದ, ಪ್ರಾಕೃತಾಜ್ಞೋಽಪಿ=ಪ್ರಾಕೃತಭಾಷೆಯ ಜ್ಞಾನವಿಲ್ಲದವನಾದಾಗ್ಯೂ, ಪೂರುಷಃ=ಪುರುಷನು, ಸದ್ಭಿಃ=ಸಜ್ಜನರಿಂದ, ವಿದ್ವಾನಿತಿ=ವಿದ್ವಾಂಸನೆಂದು, ಉಚ್ಯತೇ=ಹೇಳಿಸಿಕೊಳ್ಳಲ್ಪಡುತ್ತಾನೆ. ಏವಂ=ಹೀಗೆಯೇ, ನಿತ್ಯಪರಾತ್ಮವಿತ್=ನಿತ್ಯನಾದ ಪರಮಾತ್ಮನನ್ನು ತಿಳಿದವನೂ ಹೇಳಿಸಿಕೊಳ್ಳಲ್ಪಡುತ್ತಾನೆ.

**ತಾ ॥ ಸ ರ. ವಿ.—** (1) ವೇದಾದಿಗಳಲ್ಲಿ ಪ್ರಯೋಗಿಸಲ್ಪಡುವುದರಿಂದ ಪ್ರಧಾನಭೂತಗಳಾದ ನಿತ್ಯನಾಮಧೇಯಗಳ ಪರಿಜ್ಞಾನದಿಂದ ಆಯಾಯ ದೇಶದಲ್ಲಿರತಕ್ಕ ಸಾಂಕೇತಿಕ ನಾಮಗಳ ಸಮೂಹವು ತಿಳಿಯಲ್ಪಡದೆ ಇದ್ದಾಗ್ಯೂ ತಿಳಿಯಲ್ಪಟ್ಟ ಹಾಗೆ ಎಂದು ವ್ಯಪದೇಶಿಸಲಿಕ್ಕೆ ಶಕ್ಯವಾಗುತ್ತದೆ. ಒಂದು ಗ್ರಾಮದಲ್ಲಿ ಪ್ರಧಾನ ಪುರುಷನ ಜ್ಞಾನದಿಂದ ಇಡೀ ಗ್ರಾಮವು ತಿಳಿಯಲ್ಪಟ್ಟಿತು ಎಂದು ವ್ಯವಹಾರವು ಕಾಣುತ್ತದೆ. ಹಾಗೆಯೇ ನಿತ್ಯ ಪ್ರಧಾನಭೂತನಾದ ಈಶ್ವರನ ಪರಿಜ್ಞಾನದಿಂದ ಅಪ್ರಧಾನವಾದ ಜಗತ್ತು ಜ್ಞಾತವಾಗುತ್ತದೆಂದು ಕೂಡುತ್ತದೆ.

**ನ್ಯಾಯಸುಧಾ:—** (1) ಸಾಂಕೇತಿಕ ನಾಮಧೇಯವು ಉತ್ಪತ್ತಿಯುಳ್ಳದ್ದು. ಆದುದರಿಂದಲೇ ಅನಿತ್ಯವು. ಪುರುಷೇಚ್ಛಾನುಸಾರವಾಗಿ ಅನೇಕವಿಧವಾಗಿರುವುದರಿಂದ, (2) ಮೃತ್ತಿಕೇತ್ಯಾದಿ ನಾಮಧೇಯವು ವೈದಿಕವಾಗಿರುವುದರಿಂದ ನಿತ್ಯವೂ, ಅನಾದಿಯೂ ಆಗಿದೆ. (3) 'ವಾಚಾರಂಭಣಂ ವಿಕಾರಃ' ಎಂದು ವಿಶೇಷ್ಯ ವಿಶೇಷಣಗಳಿಗೆ ನಪುಂಸಕ, ಪುಲ್ಲಿಂಗ ಎಂದು ಲಿಂಗಗಳು ವಿಷಯಗಳೆನ್ನುವ ದೋಷವಿಲ್ಲ. ನಾಮಧೇಯ ವಿಕಾರ ಶಬ್ದಗಳು ನಿಯತ ಲಿಂಗವುಳ್ಳವುಗಳು. ವಾಚಾರಂಭಣಂ ಎನ್ನುವ ಶಬ್ದವು 'ನಾಮಧೇಯಂ' ಎನ್ನುವುದಕ್ಕೆ ವಿಶೇಷಣವು. (4) ಅಥವಾ ವಾಗಿಂದ್ರಿಯದಿಂದ ಆರಂಭವುಳ್ಳ ನಾಮಧೇಯವು. ವಿಕಾರಃ=ಉತ್ಪತ್ತಿಯುಳ್ಳದ್ದು.

ಹೀಗೆ ವಾಗಿಂದ್ರಿಯದಿಂದ ನಾಮಗಳಿಗೆ ಆರಂಭವು ಅನೇಕಾಕಾರವು. ಅಂತೂ ವಿಕಾರಿಯಾಗಿರುವುದರಿಂದ ಉತ್ಪತ್ತಿವಿನಾಶವುಳ್ಳದ್ದು. ಹೀಗೆ ಇಟ್ಟುಕೊಂಡರೆ ಲಿಂಗವ್ಯತ್ಯಾಸದೋಷವೇ ಇಲ್ಲ. (4) ಕೃತಕವಾಗಿರುವುದರಿಂದಲೂ, ಅನಿತ್ಯವಾಗಿರುವುದರಿಂದಲೂ,ಪರರ ಅಪೇಕ್ಷೆಯಿದ್ದುದರಿಂದ ಸಾಂಕೇತಿಕನಾಮವು ಅಪ್ರಧಾನವು. ಅನಾದಿನಿತ್ಯವಾಗಿರುವುದರಿಂದ, ಪರರ ಅಪೇಕ್ಷೆಯಿಲ್ಲದಿರುವುದರಿಂದ ಸಂಸ್ಕೃತವು ಪ್ರಧಾನವು. ಅದರಲ್ಲಿ ಹೇಗೆ ಪ್ರಧಾನವಾಗಿರುವುದರಿಂದ ಸಂಸ್ಕೃತ ಜ್ಞಾನಮಾತ್ರದಿಂದ ಸಾಂಕೇತಿಕವೂ ಜ್ಞಾತವಾಗುತ್ತದೆ? ಅದರ ವಿದ್ವದ್ವ್ಯವಹಾರಗೋಚರತ್ವಾದಿ ಫಲವು ಆಗುತ್ತದೆ. ಹೀಗೆಯೇ ಅನಿತ್ಯತ್ವಾದಿಗಳಿಂದ ಅಪ್ರಧಾನವಾದ ದೇವತಾಕರ್ಮಾದಿಗಳಿಂದ ಮಿಶ್ರವಾದ ಎಲ್ಲಾ ಜಗಜ್ಜ್ಞಾನದಿಂದ ಯಾವುದು ಫಲವೋ ಅವೆಲ್ಲವೂ ನಿತ್ಯತ್ವಾದಿಗಳಿಂದ ಪ್ರಧಾನನಾದ ಶ್ರೀಪರಮಾತ್ಮನ ಜ್ಞಾನದಿಂದ ಲಭಿಸುತ್ತದೆ. ಆ ಫಲದಲ್ಲಿಯೇ ಸೇರುತ್ತದೆ ॥ ೧೧೮ ॥ ೧೧೯ ॥

ಹಾಗಾದರೆ ರೂಢಿಯೂ ಯೋಗವೂ ಇಲ್ಲದಿರುವುದರಿಂದ ಸತ್ಯಶಬ್ದಕ್ಕೆ ನಿತ್ಯವೆನ್ನುವ ಅರ್ಥವು ಹೇಗೆ ಕೂಡುತ್ತದೆಂದರೆ—ಯೋಗ ರೂಢಿಗಳನ್ನು ತೋರಿಸುತ್ತಾರೆ.

**ಮೂ ॥ ಸದಾತನಂ ಸತ್ಯಮಿತಿ ನಿತ್ಯಮೇವೋಚ್ಯತೇ ಬುಧೈಃ ।**
**ಪ್ರಯೋಗಶ್ಚೋತ್ತರತ್ರಾಸ್ತಿ ಜರಾ ಯದ್ಯೇನಮಾಪ್ನುಯಾತ್ ॥೧೨೦॥**
**ದೇಹಃ ಪ್ರಧ್ವಂಸತೇ ಚಾಯಂ ಕಿಂ ತತೋಽಸ್ಯಾತಿಶಿಷ್ಯತೇ ।**
**ಹನ್ಯತೇ ನ ವಧೇನಾಯಂ ಜರಯಾ ಚ ನ ಜೀರ್ಯತೇ ।**
**ಏತತ್ಸತ್ಯಂ ಬ್ರಹ್ಮಪುರಮಿತಿ ನಿತ್ಯತ್ವ ಏವ ಹಿ ॥ ೧೨೧ ॥**

ಅ । ಸದಾತನಂ=ಯಾವಾಗಲೂ ಇರುವುದು, ಸತ್ಯಮಿತಿ=ಸತ್ಯವು ಎನ್ನುವ ನಿರ್ವಚನದಿಂದ, ಸತ್ಯಮಿತಿ=ಸತ್ಯಂಎನ್ನುವ ಪದದಿಂದ, ನಿತ್ಯಂ=ನಿತ್ಯವಾದುದು, ಬುಧೈಃ=ಶಬ್ದನಿರ್ವಚನಾಭಿಜ್ಞರಾದ ವೈಯಾಕರಣರಿಂದ, ಉಚ್ಯತೇ ಏವ =(ಸದಾಶಬ್ದದಿಂದ ತ್ಯಪ್‌ಪ್ರತ್ಯಯ ಮಾಡಿದರೆ ಸದಾಶಬ್ದಕ್ಕೆ ಸಕಾರಾದೇಶಮಾಡಿದರೆ ಸತ್ಯವೆಂದಾಗುತ್ತದೆ ಎಂದು) ಪ್ರತಿಪಾದಿಸಲ್ಪಡುತ್ತದೆಯೇ ಸರಿ. (ಔಪಚಾರಿಕ ಪ್ರಯೋಗವಲ್ಲ.) ಉತ್ತರತ್ರ=ಎಂಟನೇ ಪ್ರಪಾಠಕದಲ್ಲಿ ಸತ್ಯಶಬ್ದಕ್ಕೆ ನಿತ್ಯತ್ವದಲ್ಲಿಯೇ, ಪ್ರಯೋಗಶ್ಚ = ಪ್ರಯೋಗವೂ ಕೂಡ, ಅಸ್ತಿ=ಇದೆ. (ಆ ಪ್ರಯೋಗವನ್ನೇ ತೋರಿಸುವುದಕ್ಕಾಗಿ, **'ಯದ್ಯೈನಂ ಜರಾವಾಪ್ನೋತಿ ಪ್ರಧ್ವಂಸತೇ ವಾ ಕಿಂತತೋಽಸ್ಯಾತಿ ಶಿಷ್ಯತೇ । ಇತಿ ಸ ಬ್ರೂಯಾತ್ ನಾಸ್ಯ ಜರಯೈತಜ್ಜೀರ್ಯತೇ ನ ವಧೇನಾಸ್ಯ ಹನ್ಯತೇ ಏತತ್ಸತ್ಯಂ ಬ್ರಹ್ಮಪುರಂ'** ॥ ಎನ್ನುವ ವಾಕ್ಯವನ್ನು ಅರ್ಥತಃ ಪಠನ ಮಾಡುತ್ತಾರೆ.) ಯದಿ=ಯಾವ ಪಕ್ಷದಲ್ಲಿ, ಏನಂ=ಈ ಶರೀರವನ್ನು, ಜರಾ = ಮುದಿತನವು, ಆಪ್ನುಯಾತ್=ಹೊಂದುವುದೋ, ಅಯಂ ದೇಹಃ=ಈ ಶರೀರವು, ಪ್ರಧ್ವಂಸತೇ ಚ=ನಷ್ಟವಾಗುತ್ತದೋ, ತತಃ = ಆಗ, ಅಸ್ಯ=ಈ ಶರೀರದಲ್ಲಿ ಅಂತರ್ಗತನಾದ ಪರಮಾತ್ಮನು, ಕಿಂ ಅತಿಶಿಷ್ಯತೇ= ಸುಡಲ್ಪಡತಕ್ಕ ಮನೆಯೊಳಗೆ ಇರತಕ್ಕ ಆಕಾಶದಂತೆಯೇ ನಷ್ಟವಾಗದೇನೇ ಇರುತ್ತಾನೋ? ಘಟಪಟಾದಿಗಳಂತೆಯೇ ನಷ್ಟನಾಗುತ್ತಾನೋ? (ಎಂದು ಪ್ರಶ್ನಿಸಿದಾಗ) ಅಸ್ಯ=ಈ ಶರೀರದ, ಜರಯಾ=ಮುದಿತನದಿಂದ, ಅಯಂ ಚ=ಈ ಪರಮಾತ್ಮನಾದರೂ, ನ ಜೀರ್ಯತೇ= ಮುದಿತನವನ್ನು ಹೊಂದುವುದಿಲ್ಲ. ಅಸ್ಯ=ಶರೀರದ, ವಧೇನ=ಸಂಹಾರದಿಂದ, ನ ಹನ್ಯತೇ= ಸಂಹರಿಸಲ್ಪಡುವುದಿಲ್ಲ. ಮತ್ತೆ, ಏತತ್ ಬ್ರಹ್ಮ=ಈ ಪರಬ್ರಹ್ಮನು, ಪುರಂ=ಪೂರ್ಣನಾದುದರಿಂದ ಪುರ ಎಂದು, (ಸತ್ಯಮಿತಿ=ನಿತ್ಯನೆಂದು ಪರಿಹಾರವು ಹೇಳಿಸಿಕೊಳ್ಳಲ್ಪಡುತ್ತದೆ.) ಇತಿ=ಹೀಗೆ,

ಪ್ರಯೋಗಶ್ಚ=ಪ್ರಯೋಗವು, ಅಸ್ತಿ=ಇದೆ. (ಇಲ್ಲಿಯೂ ಸತ್ಯಶಬ್ದಕ್ಕೆ ನಿತ್ಯವೆಂದು ಏಕೆ ಅರ್ಥ ಇಟ್ಟುಕೊಳ್ಳಬೇಕೆಂದರೆ) ನಿತ್ಯತ್ವಏವ = (ವಿನಾಶವು ಪ್ರಕೃತವಾಗಿರುವುದರಿಂದ) ಸತ್ಯಶಬ್ದಕ್ಕೆ ನಿತ್ಯವೆನ್ನುವ ಅರ್ಥವನ್ನು ಇಟ್ಟುಕೊಂಡರೇನೇ ಸಂಗತವಾಗುತ್ತದೆ. ಹಿ=ಅನೃತವು ಅಪ್ರಸ್ತುತ ವಾಗಿರುವುದರಿಂದ ಸತ್ಯವೆನ್ನುವ ಅರ್ಥವನ್ನು ಇಟ್ಟುಕೊಂಡರೆ ಅಸಂಗತಿಯು.

ತಾ || ಬ್ರಹ್ಮನಿಗೆ ಮುದಿತನವೂ ಹನನವೂ ಇಲ್ಲವೆನ್ನುವ ವಿಷಯದಲ್ಲಿ ಸತ್ಯತ್ವವು ಹೇತು ವಾಗಿ ಹೇಳಲ್ಪಡುತ್ತದೆಂದರೆ, ಹಾಗೆ ಹೇಳಕೂಡದು. ಅದ್ವೈತಿಗಳು ಬ್ರಹ್ಮನೊಬ್ಬನೇ ಸತ್ಯನು, ಬೇರೆ ಎಲ್ಲವೂ ಅಸತ್ಯವೆಂದಂಗೀಕರಿಸಿರುವರು. ಅಂದರೆ, 'ಬ್ರಹ್ಮ ಜರಾಮರಣಶೂನ್ಯಂ ಸತ್ಯ ತ್ವಾತ್' ಎನ್ನುವ ಅನುಮಾನದಲ್ಲಿ ಅನ್ವಯವ್ಯಾಪ್ತಿಯಿಲ್ಲ. ಯಾವುದು ಜರಾ-ಮರಣಾದಿಗಳಿಂದ ಕೂಡಿಯದೋ ಅದು ಸತ್ಯವಲ್ಲ ಎಂದು ವ್ಯತಿರೇಕವ್ಯಾಪ್ತಿಯೂ ಇಲ್ಲ. ನಮ್ಮ ರೀತಿಯಿಂದ ಶರೀರಾದಿಗಳಲ್ಲಿ ವ್ಯಭಿಚಾರವು. ಜರಾ-ಮರಣಾಭಾವರೂಪವಾದ ಸಾಧ್ಯದಿಂದ ಕೂಡಿರುವ ಶುಕ್ತಿರಜತಾದಿಗಳಲ್ಲಿ ಸತ್ಯತ್ವಹೇತುವು ಇಲ್ಲದಿರುವುದರಿಂದ ಅಸಾಧಾರಣವು. ಹೇಗೆಂದರೆ— ಜರಾದ್ಯುಪೇತಗಳಾದ ದೇಹಗಳು ಅಸತ್ಯಗಳೆಂದು ಸಿದ್ಧಗಳಾಗಲಿಲ್ಲ. ಅಸತ್ಯಗಳಾದ ಶುಕ್ತಿ ರಜತಾದಿಗಳಿಗೆ ಜರಾದಿಗಳು ಇಲ್ಲದಿರುವುದರಿಂದ ವ್ಯತಿರೇಕವ್ಯಾಪ್ತಿಯಿಲ್ಲ || ೧೨೦ || ೧೨೧ ||

ಹೀಗೆ ಸಿದ್ಧಾಂತರೀತಿಯಾಗಿ 'ವಾಚಾರಂಭಣಂ' ಇತ್ಯಾದಿ ವಾಕ್ಯವನ್ನು ವ್ಯಾಖ್ಯಾನ ಮಾಡಿ ವಿವರ್ತವಾದಿಗಳ ವ್ಯಾಖ್ಯಾನದಲ್ಲಿ ದೋಷವನ್ನು ಹೇಳುತ್ತಾರೆ—

**ಮೂ || ವಾಚಾರಂಭಣಮಿತ್ಯುಕ್ತೇ ಮಿಥ್ಯೇತ್ಯಶ್ರುತಕಲ್ಪನಂ ।**
**ಪುನರುಕ್ತಿರ್ನಾಮಧೇಯಮಿತೀತ್ಯಸ್ಯ ನಿರರ್ಥತಾ || ೧೨೨ ||**

ಅ || ವಾಚಾರಂಭಣಮಿತ್ಯುಕ್ತೇ='ವಾಚಾರಂಭಣಂ' ಎನ್ನುವ ಶಬ್ದವು, ಮಿಥ್ಯೇತಿ=ಮಿಥ್ಯೆ ಯೆಂದು ವ್ಯಾಖ್ಯಾನಮಾಡಲ್ಪಡುತ್ತಿರಲು, ಅಶ್ರುತಕಲ್ಪನಂ=ಅಶ್ರುತಕಲ್ಪನಾಖ್ಯ ದೋಷವು, ನಾಮಧೇಯಮಿತಿ = ನಾಮಧೇಯವೆನ್ನುವುದು, ಪುನರುಕ್ತಿಃ = ಪುನರುಕ್ತಿಯಾಯಿತು. ಇತೀ ತ್ಯಸ್ಯ='ಮೃತ್ತಿಕೇತ್ಯೇವ' ಎನ್ನುವಲ್ಲಿದ್ದ 'ಇತಿ' ಶಬ್ದಕ್ಕೆ, ನಿರರ್ಥತಾ=ನಿರರ್ಥಕತ್ವವು.

ತಾ || ನ್ಯಾಯಸುಧಾ— (1) (೧) ರೂಢಿಯನ್ನು ಆಶ್ರಯಿಸಿ 'ವಾಚಾರಂಭಣಂ' ಎನ್ನುವುದಕ್ಕೆ ಮಿಥ್ಯೆಯೆಂದು ವ್ಯಾಖ್ಯಾನಮಾಡುತ್ತೀರೋ; (೨) ಯೋಗವನ್ನು ಆಶ್ರಯಿಸಿಯೋ? ೧ನೇ ಕಲ್ಪದಲ್ಲಿ ರೂಢಿಜ್ಞಾಪಕವಾದ ಪ್ರಮಾಣವೇ ಇಲ್ಲದಿರುವುದರಿಂದ ಅಶ್ರುತಕಲ್ಪನವು. ೨ 'ಆರಭ್ಯತೇ ಇತಿ ಆರಂಭಣಂ' ಎಂದು ಯೋಗವನ್ನು ಆಶ್ರಯಿಸಿ ಮಿಥ್ಯೆಯೆಂದು ವ್ಯಾಖ್ಯಾನ ಮಾಡುವುದಾದರೆ, ಕೃದ್ಯೋಗವಿರುವಾಗ 'ಕರ್ತೃಕರ್ಮಣೋಃ ಕೃತಿ' ಎನ್ನುವುದರಿಂದ ಷಷ್ಠಿಯು ಪ್ರಾಪ್ತವಾಗುವಾಗ 'ವಾಚಾ ಆರಂಭಣಂ ಯಸ್ಯ' ಎಂದು ತೃತೀಯಾವಿಭಕ್ತಿಯನ್ನಂಗೀ ಕರಿಸಿದರೆ ಅಶ್ರುತಕಲ್ಪನವು. ಲ್ಯುಟ್‌ಪ್ರತ್ಯಯವನ್ನು ಕರ್ಮಾರ್ಥದಲ್ಲಿ ವಿಧಾನಮಾಡದಿರುವುದ ರಿಂದಲೂ ಅಶ್ರುತಕಲ್ಪನವೇ. ಈ ಕಲ್ಪದಲ್ಲಿಯೂ ಮಿಥ್ಯಾತ್ವವು ಸಿಗದಿರುವುದರಿಂದ ಅಶ್ರುತ ಕಲ್ಪನವು. ವಾಚಾರಭ್ಯತ್ವಮಾತ್ರದಿಂದ ಮಿಥ್ಯಾತ್ವವನ್ನು ಹೇಳುವುದಾದರೆ ಬ್ರಹ್ಮನಿಗೂ ಮಿಥ್ಯಾ ತ್ವವು ಬರಬೇಕಾಗುವುದು. (2) ಹಾಗಾದರೆ, ವಾಗಿಂದ್ರಿಯದಿಂದ ಕೇವಲ ಆರಂಭಿಸಲ್ಪಡುತ್ತದೆ. ವಿಕಾರವು ವಾಸ್ತವಿಕವಾಗಿ ಇಲ್ಲ ಎಂದು ವ್ಯಾಖ್ಯಾನಮಾಡಿದರೆ ಮಿಥ್ಯಾತ್ವವು ಲಭಿಸುತ್ತದೆಂದು ಹೇಳಕೂಡದು. ಏಕೆಂದರೆ, ಶ್ರುತಿಯಿಂದ ವಾಚಾರಂಭಣಂ ಎಂದಿಷ್ಟೇ ಹೇಳಿದರೆ ಕೇವಲ ಶಬ್ದ ಪ್ರಕ್ಷೇಪದಿಂದ ಮಿಥ್ಯೆಯೆಂದು ವ್ಯಾಖ್ಯಾನಮಾಡಿದರೆ ಅಶ್ರುತಕಲ್ಪನವೇ. (3) 'ನಾಮಧೇಯಂ'

ಎನ್ನುವುದನ್ನು ನಾಮಧೇಯಮಾತ್ರವು, ಅಂದರೆ ಅನೃತವು ಎಂದು ಪರರು ವ್ಯಾಖ್ಯಾನ ಮಾಡಿರುವರು. ಅದು 'ವಾಚಾರಂಭಣಂ' ಎನ್ನುವುದರಿಂದಲೇ ಗತಾರ್ಥವಾಗಿರುವುದರಿಂದ 'ನಾಮಧೇಯಂ' ಎನ್ನುವ ಶಬ್ದವು ಪುನರುಕ್ತಿಯೂ ಆಗುವುದು. (4) ವಿಕಾರವು ನಾಮಧೇಯವು ಎರಡೂ ವಾಚಾರಂಭಣಂ ಎನ್ನುವುದರ ವ್ಯಾಖ್ಯಾನವು. ಆದಾಗ್ಯೂ ವಿಕಾರ ಶಬ್ದದಿಂದಲೇ ವಾಚ್ಯವಾದ ಅರ್ಥಕ್ಕೂ ನಾಮಧೇಯಕ್ಕೂ ಗ್ರಹಣವು ಬರುವುದರಿಂದ ನಾಮಧೇಯಂ ಎಂದು ಪುನರುಕ್ತಿಯೇ. (5) ಮೃತ್ತಿಕೇಗೆ ಸತ್ಯತ್ವವು ಪರರಿಗೆ ವಿವಕ್ಷಿತವು. ಆಗ 'ಮೃತ್ತಿಕೈವ ಸತ್ಯಾ' ಎಂದು ಹೇಳಬೇಕಿತ್ತು. 'ಇತಿ' ಶಬ್ದವಾದರೂ ನಿರರ್ಥಕವೇ. ಇತಿ ಶಬ್ದವು ಕೆಲವುಕಡೆ ಪದಾರ್ಥ ವಿಪರ್ಯಾಸವನ್ನು ಮಾಡುತ್ತದೆ. ಕೆಲವುಕಡೆ ಹೇತ್ವರ್ಥದಲ್ಲಿದೆ. ಕೆಲವುಕಡೆ ಹೀಗೆ, ಆದಿ, ಪ್ರಕಾರ, ಪರಿಸಮಾಪ್ತಿ ಈ ಅರ್ಥಗಳಲ್ಲಿದೆ. ಇವುಗಳಲ್ಲಿ ಯಾವುದೊಂದು ಅರ್ಥವೂ ಇಲ್ಲಿ ಉಪಪನ್ನವಾಗುವುದಿಲ್ಲ. (6) ನಮ್ಮ ಮತದಲ್ಲಿ ಆದರೂ 'ಶಬ್ದಾದರ್ಥೇ ಸಂಪ್ರತ್ಯಯಃ' ಎಂದು ಮೃತ್ತಿಕೆ ಎನ್ನುವ ಅರ್ಥವು ಪ್ರಾಪ್ತವಾದರೆ ಅದನ್ನೂ ಪರಿಹರಿಸಿ ಶಬ್ದಸ್ವರೂಪವನ್ನು ತೆಗೆದುಕೊಳ್ಳುವುದಕ್ಕಾಗಿ ಇತಿ ಶಬ್ದವು. (7) ಪರಿಣಾಮವಾದಿಗೂ (ಕೃದ್ಯೋಗವಿರುವಾಗ ತೃತೀಯಯನ್ನು ಅಂಗೀಕರಿಸಿರುವುದರಿಂದ ಕರ್ಮಾರ್ಥದಲ್ಲಿ ಲ್ಯುಟ್ ಪ್ರತ್ಯಯವನ್ನು ವ್ಯಾಖ್ಯಾನಮಾಡಿರುವುದರಿಂದ) 'ವಾಚಾರಂಭಣಂ ವಿಕಾರಃ ನಾಮಧೇಯಂ' ಇವುಗಳಿಗೆ ಅನ್ವಯವು ಇಲ್ಲದಿರುವುದರಿಂದ ಮಾತ್ರಾದಿ ಪದಾಂತರಾಧ್ಯಾಹಾರವು ಇಷ್ಟವಾಗಿರುವುದರಿಂದ ಅಶ್ರುತಕಲ್ಪನವು. ನಾಮಧೇಯಕ್ಕೂ ವಿಕಾರ ಗ್ರಹಣದಿಂದಲೇ ಗ್ರಹಣವು ಬರುವುದರಿಂದ ಪುನರುಕ್ತಿಯು. ಇತಿ ಶಬ್ದಕ್ಕೆ ನಿರರ್ಥಕತ್ವವು. ಇತ್ಯಾದ್ಯನೇಕ ದೋಷಗಳು ಬರುತ್ತವೆ ॥ ೧೨೨ ॥

ಈಗ 'ಯಥಾ ಸೋಮ್ಯ' ಇದುಮೊದಲಾದ ದೃಷ್ಟಾಂತ ವಾಕ್ಯಗಳನ್ನು ತಮ್ಮ ಮತ ಪ್ರಕಾರ ವ್ಯಾಖ್ಯಾನಮಾಡಿ ಪರಕೀಯ ವ್ಯಾಖ್ಯಾನದಲ್ಲಿ ದೋಷವನ್ನು ಹೇಳುತ್ತಾರೆ—

**ಮೂ ॥ ಏಕಃ ಪಿಂಡೋ ಮಣಿಶ್ಚೇತಿ ಪದವೈಯರ್ಥ್ಯಮೇವ ಚ ॥ ೧೨೩ ॥**
**ವಿಕಾರಿತ್ವವಿವಕ್ಷಾಯಾಂ ನ ಚೈಕ ನಖಕೃಂತನಂ ।**
**ಸರ್ವಂ ಕಾರ್ಷ್ಣಾಯಸಂ ಚ ಸ್ಯಾದತಃ ಸಾದೃಶ್ಯ ಏವ ಚ ॥**
**ವಿವಕ್ಷಾಽತ್ರ ತು ನಿತ್ಯತ್ವೇ ಪ್ರಾಧಾನ್ಯೇ ಚೋಕ್ತವರ್ತ್ಮನಾ ॥ ೧೨೪ ॥**

ಅ ॥ ವಿಕಾರಿತ್ವವಿವಕ್ಷಾಯಾಂ ಚ=ಪರಿಣಾಮವೆಂದು ವಿವಕ್ಷಾಮಾಡಿದರೂ ವಿವರ್ತವೆಂದು ವಿವಕ್ಷಾಮಾಡಿದರೂ, ಏಕಶ್ಚೇತಿ=ಏಕಃ ಎನ್ನುವ, ಪಿಂಡಶ್ಚೇತಿ=ಮೃತ್ಪಿಂಡೇನ ಎನ್ನುವಲ್ಲಿದ್ದ ಪಿಂಡ ಎನ್ನುವ, ಮಣಿಶ್ಚೇತಿ=ಲೋಹಮಣಿನಾ ಎನ್ನುವಲ್ಲಿದ್ದ 'ಮಣಿ' ಎನ್ನುವ, ಪದವೈಯರ್ಥ್ಯಮೇವ=ಏಕ—ಪಿಂಡ—ಮಣಿ—ಎನ್ನುವ ಪದಗಳಿಗೆ, ಅರ್ಥವಿಲ್ಲದಿರುವಿಕೆಯು ವಿರುದ್ಧವಾದ ಅರ್ಥವಿರುವಿಕೆಯು ಅಪರಿಹಾರ್ಯವೇ ಆಗುತ್ತದೆ. ಏಕನಖಕೃಂತನಂ= ಒಂದು ಉಗುರು ಕತ್ತಿಯು, ಸರ್ವಂ ಚ ಕಾರ್ಷ್ಣಾಯಸಂ=ಎಲ್ಲಾ ಕಬ್ಬಿಣವೂ, ಕಾರ್ಯರೂಪವಾದುದು, ನ ಚ ಸ್ಯಾತ್=ಸರ್ವಥಾ ಆಗಲಾರದು. ಅತಃ = ಇತರ ಯಾವ ಅರ್ಥವೂ ಕೂಡದಿರುವುದರಿಂದ, ಉಕ್ತವರ್ತ್ಮನಾ=ಹಿಂದೆ ಹೇಳಿದ ಮಾರ್ಗದಿಂದ, ಸಾದೃಶ್ಯ ಏವ ಚ = ಸಾದೃಶ್ಯರೂಪಾರ್ಥದಲ್ಲಿಯೂ, ವಿವಕ್ಷಾ=(ಮೃತ್ಪಿಂಡಾದಿ ದೃಷ್ಟಾಂತಗಳಿಗೆ) ವಿವಕ್ಷೆಯು. (ವಾಚಾರಂಭಣದೃಷ್ಟಾಂತಕ್ಕಾದರೂ) ನಿತ್ಯತ್ವೇ = ನಿತ್ಯತ್ವವಿಷಯದಲ್ಲಿಯೂ, ಪ್ರಾಧಾನ್ಯೇ ಚ = ಪ್ರಾಧಾನ್ಯರೂಪ ಅರ್ಥದಲ್ಲಿಯೂ, ವಿವಕ್ಷಾ=ವಿವಕ್ಷೆಯು. ಅಥವಾ ಅತ್ರ=ಇಲ್ಲಿ, ಸಾದೃಶ್ಯೇ ಚ = ಸಾದೃಶ್ಯರೂಪ

ಅರ್ಥವಿಷಯದಲ್ಲಿ, (ಮೃತ್ಪಿಂಡಾದಿ ದೃಷ್ಟಾಂತತ್ರಯಕ್ಕೂ,) ನಿತ್ಯತ್ವೇ ತು ಪ್ರಾಧಾನ್ಯೇ ಚ= ನಿತ್ಯತ್ವದಿಂದ ಕೂಡಿರುವ ಪ್ರಾಧಾನ್ಯರೂಪ ಅರ್ಥವಿಷಯದಲ್ಲಿ ಆದರೂ, ವಿವಕ್ಷಾ = ಹೇಳಲಿಕ್ಕೆ ಇಷ್ಟವು.

**ತಾ ॥ ನ್ಯಾಯಸುಧಾ—** (1) ಜಗತ್ತು ಬ್ರಹ್ಮನ ವಿಕಾರವಾಗಿರುವುದರಿಂದಲೂ ಬ್ರಹ್ಮನಲ್ಲಿ ಆರೋಪಿತವಾಗಿರುವುದರಿಂದಲೂ ಒಂದು ವಸ್ತುವಿನ ಜ್ಞಾನದಿಂದ ಸರ್ವವಸ್ತುಗಳ ಜ್ಞಾನವು ವಿವಕ್ಷಿತವಾಗಿದ್ದರೆ 'ಮೃದಾ ವಿಜ್ಞಾತಯಾ ಮೃಣ್ಮಯಂ ವಿಜ್ಞಾತಂ ಸ್ಯಾತ್' 'ಲೋಹೇನ ವಿಜ್ಞಾತೇನ ಲೋಹಮಯಂ ವಿಜ್ಞಾತಂ ಸ್ಯಾತ್' 'ಕಾರ್ಷ್ಣಾಯಸಾ ವಿಜ್ಞಾತೇನ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್' ಇಷ್ಟರಿಂದಲೇ ಪೂರ್ತಿಯಾಗುವುದರಿಂದ ಮೂರು ಏಕ ಶಬ್ದಗಳೂ ಪಿಂಡ ಮಣಿನಖ ನಿಕೃಂತನಶಬ್ದಗಳೂ ಮೂರು ಸರ್ವಶಬ್ದಗಳೂ ಅರ್ಥವಿಲ್ಲದಿರುವವುಗಳು ಆಗುವವು. ಎಲ್ಲಾ ಮೃಣ್ಮಯಾದಿಗಳು ಒಂದು ಮೃತ್ಪಿಂಡಾದಿಗಳ ವಿಕಾರಗಳಾಗದಿರುವುದರಿಂದ ವಿರುದ್ಧವಾದ ಅರ್ಥವುಳ್ಳದ್ದು ಆಗಬೇಕಾಗುವುದು. (2) ಯಾವುದಾದರೊಂದು ಮೃಣ್ಮಯಕ್ಕೂ ಒಂದು ಮೃತ್ಪಿಂಡದಲ್ಲಿಯೂ ಆರೋಪಿತತ್ವವಿಲ್ಲ. ಎಲ್ಲಾ ಮೃಣ್ಮಯಗಳಿಗೆ ಆರೋಪಿತತ್ವವು ಸುತರಾಂ ಕೂಡಲಾರದು. (3) ಮತ್ತು ಆದ್ಯದೃಷ್ಟಾಂತ ಎರಡರಲ್ಲಿ ಕಾರ್ಯಕಾರಣಭಾವ ಮಾತ್ರವದೆ. ಆದರೆ ಏಕಾದಿಪದಗಳಿಗೆ ವೈಯರ್ಥ್ಯವೇ. ಇದಾದರೂ 'ಯಥಾ ಸೋಮ್ಯೈಕೇನ ನಖನಿಕೃಂತನೇನ' ಎನ್ನುವುದು ಸರ್ವಥಾ ಕೂಡುವುದಿಲ್ಲ. ನಖನಿಕೃಂತನವು ಅಂತ್ಯಾವಯವಿಯಾಗಿರುವುದರಿಂದ ಮತ್ತೊಂದು ಕಬ್ಬಿಣದ ಕಾರ್ಯವನ್ನು ಕುರಿತು ಕಾರಣತ್ವವೇ ಕೂಡಲಾರದು. ಒಂದು ನಖನಿಕೃಂತನವು ಸರ್ವಕ್ಕೆ ಕಾರಣವು ಸುತರಾಂ ಆಗಲಾರದು. (4) ಈ ಮೂರು ದೃಷ್ಟಾಂತಗಳಲ್ಲಿಯೂ ಪರಿಣಾಮವಾಗಲೀ ವಿವರ್ತವಾಗಲೀ ವಿವಕ್ಷಿತವಾಗದಿದ್ದರೆ ಮತ್ತೆ ಯಾವುದು ವಿವಕ್ಷಿತವೆಂದರೆ— ಮೃತ್ಪಿಂಡಾದಿ ದೃಷ್ಟಾಂತತ್ರಯವು ಸಾದೃಶ್ಯವಿಷಯಕವು. ವಾಚಾರಂಭಣಂ ಇತ್ಯಾದಿಗಳು ಪ್ರಾಧಾನ್ಯವಿಷಯಕಗಳು. (5) 'ಸಾದೃಶ್ಯಾಚ್ಚೈಕಸ್ತ್ರೀಜ್ಞಾನಾದನ್ಯಸ್ತ್ರೀಜ್ಞಾನಂ' ಸಾದೃಶ್ಯದಿಂದಲೇ ಒಂದು ಸ್ತ್ರೀಜ್ಞಾನದಿಂದ ಬೇರೆ ಸ್ತ್ರೀಜ್ಞಾನವು, ಎಂದು ತತ್ವನಿರ್ಣಯದಲ್ಲಿ ಹೇಳಿರುವರು. (6) **'ಯಥಾ ಮೃತ್ಪಿಂಡವಿಜ್ಞಾನಾತ್ಸಾದೃಶ್ಯಾದೇವ ಮೃಣ್ಮಯಾಃ ॥ ವಿಜ್ಞಾಯಂತೇ ತಥಾ ವಿಷ್ಣೋಃ ಸಾದೃಶ್ಯಾಜ್ಜಗದೇವ ಚ । ಯಥಾ ಸ್ವರ್ಣಸ್ಯ ವಿಜ್ಞಾನಾತ್ಸರ್ವೇ ಲೋಹಮಯಾಸ್ತಥಾ । ಪ್ರಾಧಾನ್ಯಾದ್ವಿಷ್ಣುವಿಜ್ಞಾನಾದ್ವಿಜ್ಞಾತಂ ಸ್ಯಾಜ್ಜಗತ್ಸದಾ ॥ ಅತ್ಯಲ್ಪೇಽಪಿ ಹಿ ವಿಜ್ಞಾತೇ ಸದೃಶೇ ಸದೃಶಂ ಬಹು । ಜ್ಞಾಯತೇ ನಖಕೃಂತನ್ಯಾ ಯಥಾ ಸರ್ವಮಯೋಮಯಂ । ಕಿಮು ವಿಷ್ಣೋರ್ಬಹೋರ್ಜ್ಞಾನಾದತ್ಯಲ್ಪಂ ಜಗದೀದೃಶಂ । ಅನಸ್ಯಾಧೀನವಿಜ್ಞಾನಾದನ್ಯಾಧೀನಂ ತಥೈವ ಚ । ಮೃದಯೋಲೋಹನಾಮ್ನಾಂ ಹಿ ಜ್ಞಾನಾತ್ಸಾಂಕೇತಿಕಂ ಯಥಾ'** ॥ ಇತ್ಯಾದಿ ಛಾಂದೋಗ್ಯ ಭಾಷ್ಯದಲ್ಲಿ ಹೇಳಿದಪ್ರಕಾರ ಇಲ್ಲಿಯೂ ಇಟ್ಟುಕೊಳ್ಳಬೇಕು ॥ ೧೨೩ ॥ ೧೨೪ ॥

ಹಾಗಾದರೆ, ಈ ಪಕ್ಷದಲ್ಲಿಯೂ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಉತ್ತರ ಗ್ರಂಥಗಳಿಗೆ ಸಂಗತ್ಯಭಾವವು ದೋಷವು. ನಮಗಾದರೂ ಕಾರ್ಯಕಾರಣ ಭಾವಾದಿಗಳನ್ನು ವಿಸ್ತರಿಸತಕ್ಕದಾದುದರಿಂದ ಉಪಯೋಗವಿದೆ ಎಂದರೆ—

**ಮೂ ॥ ಪ್ರಾಧಾನ್ಯಪ್ರತಿಪತ್ತ್ಯರ್ಥೇ (ರ್ಥಂ) ಸೃಷ್ಟ್ಯಾದೇಶ್ಚೈಷ(ವ) ವಿಸ್ತರಃ ॥ ೧೨೫ ॥**

**ತಸ್ಮಾತ್ಕೇನಾಪಿ ಮಾರ್ಗೇಣ ನ ವಿವರ್ತಮತಂ ಭವೇತ್ ॥**
**ತದಸಂಖ್ಯಾತದೋಷೇತಂ ಹೇಯಮೇವ ಶುಭಾರ್ಥಿಭಿಃ ॥ ೧೨೬ ॥**
**ಅಸಂಖ್ಯತ್ವೇನ ದೋಷಾಣಾಂ ಗ್ರಂಥಾಧಿಕ್ಯಭಯಾದಪಿ ॥**
**ಉಪರಮ್ಯತೇ ತತೋ ವಿಷ್ಣುರಿಚ್ಛಾಪೂರ್ವಕಮಶ್ರಮಃ ।**
**ಕರೋತಿ ಪಿತೃವದ್ವಿಶ್ವಂ ಪೂರ್ಣಾಶೇಷಗುಣಾತ್ಮಕಃ ॥ ೧೨೭ ॥**

ಅ ॥ ಪ್ರಾಧಾನ್ಯಪ್ರತಿಪತ್ತ್ಯರ್ಥೇ (ರ್ಥಂ) ಚ=ಬ್ರಹ್ಮನಿಗೆ ಪ್ರಾಧಾನ್ಯವಿದ್ದುದರಿಂದ ಆತನ ಜ್ಞಾನದಿಂದ ಸರ್ವ ವಸ್ತುಗಳ ಜ್ಞಾನದ ಫಲವೂ ಆಗುತ್ತದೆ ಎಂದು ಹೇಳಿದರೆ ಆ ಬ್ರಹ್ಮನಿಗೆ ಪ್ರಾಧಾನ್ಯವು ಹೇಗೆ ಎಂದು ಆಶಂಕಾ ಬರುವಾಗ) ಬ್ರಹ್ಮನಿಗೆ ಪ್ರಾಧಾನ್ಯವನ್ನು ತಿಳಿದುಕೊಳ್ಳುವುದಕ್ಕಾಗಿಯೇ ಉಪಾದಾನತ್ವಾದಿಗಳನ್ನು ತಿಳಿಸುವುದಕ್ಕಾಗಿ ಅಲ್ಲ.) ಸೃಷ್ಟ್ಯಾದೇಶ್ಚ=ಜಗತ್ಸೃಷ್ಟಿ, ಪ್ರಲಯಕಾಲದಲ್ಲಿ ಇರುವಿಕೆ, ತ್ರಿವೃತ್ಕರಣ ಜೀವ ಶಬ್ದಿತ ಅನಿರುದ್ಧರೂಪದಿಂದ ಪ್ರವೇಶ ಇತ್ಯಾದಿಗಳನ್ನು ಪ್ರತಿಪಾದಿಸತಕ್ಕ, ಏಷ ವಿಸ್ತರಃ=ಗ್ರಂಥವಿಸ್ತರವು (ಪ್ರವೃತ್ತವಾಗಿದೆ. ಆದ ಕಾರಣ ಅಸಂಗತಿಯಿಲ್ಲ) ತಸ್ಮಾತ್=ಆದಕಾರಣ, ವಿವರ್ತಮತಂ=ಸರ್ವ ಜಗತ್ತು ಬ್ರಹ್ಮನಲ್ಲಿ ಆರೋಪಿತವೆನ್ನುವ ಮತವು, ಕೇನಾಪಿ ಮಾರ್ಗೇಣ= ಬ್ರಹ್ಮನಿಗೆ ಅವಿದ್ಯೆಯು ಎನ್ನುವ ಪಕ್ಷದಿಂದಲಾಗಲೀ, ಜೀವನಿಗೆ ಅವಿದ್ಯೆಯು ಎನ್ನುವ ಪಕ್ಷದಿಂದಾಗಲೀ, ಒಬ್ಬನೇ ಜೀವನು ಎನ್ನುವ ಮತದಿಂದಲಾಗಲೀ, ಅನೇಕ ಜೀವರು ಎನ್ನುವ ಮತದಿಂದಲಾಗಲೀ, ಸ್ವಪಕ್ಷವನ್ನು ಸಾಧಿಸಿದುದರಿಂದಾಗಲೀ, ಪರಪಕ್ಷವನ್ನು ನಿರಾಕರಿಸಿದುದರಿಂದಾಗಲೀ, ಯುಕ್ತಿಪರ್ಯಾಲೋಚನೆಯಿಂದಾಗಲೀ, ಶ್ರುತಿಪರ್ಯಾಲೋಚನೆಯಿಂದಾಗಲೀ ವಿಚಾರಿಸಲ್ಪಟ್ಟರೆ, (ಉಪಪನ್ನಂ=ಯುಕ್ತವಾದುದು.) ನ ಭವೇತ್= ಆಗಲಾರದು. ತತ್= ಆದಕಾರಣ, ಅಸಂಖ್ಯಾತದೋಷೇತಂ= ಅಪರಿಮಿತದೋಷಗಳಿಂದ ಕೂಡಿರುವ, ವಿವರ್ತಮತವು, ಶುಭಾರ್ಥಿಭಿಃ=ಶುಭವನ್ನು ಇಚ್ಛೈಸುವವರಿಂದ, ಹೇಯಮೇವ= ಬಿಡತಕ್ಕುದೇ. ದೋಷಾಣಾಂ=ದೋಷಗಳಿಗೆ, ಅಸಂಖ್ಯತ್ವೇನ=ಅತಿ ಬಹುತ್ವವಿದ್ದುದರಿಂದ, (ಕೆಲವು ದೋಷಗಳನ್ನು ಹೇಳಿರುವರು. ಕೆಲವು ದೋಷಗಳಿಗೆ ಉಪಲಕ್ಷಣವು.) ಗ್ರಂಥಾಧಿಕ್ಯಭಯಾದಪಿ=ಗ್ರಂಥವು ಅತ್ಯಧಿಕವಾಗುತ್ತದೆ ಎನ್ನುವ ಭಯದಿಂದಲೂ (ಗ್ರಂಥವು ಅಧಿಕವಾದರೆ ಶ್ರೋತೃಗಳಿಗೆ ಪ್ರವೃತ್ತಿಯು ಬಾರದೆ ಹೋಗುವುದು. ಅಂತೂ ಮಾಡಿದರೂ ಮಾಡದಿದ್ದ ಹಾಗೆ ಎನ್ನುವ ಭಯದಿಂದಲೂ) ಉಪರಮ್ಯತೇ=ಅವಸಾನಮಾಡಲ್ಪಡುತ್ತದೆ. ತತಃ= ಪರಿಣಾಮಾದಿವಾದವು ನಿರಾಕರಿಸಲ್ಪಟ್ಟಿರುವುದರಿಂದ, ಪಿತೃವತ್=ತಂದೆಯಂತೆ, ಇಚ್ಛಾಪೂರ್ವಕಂ=ತನ್ನ ಇಚ್ಛಾಪೂರ್ವಕವಾಗಿ, ಅಶ್ರಮಃ=ವಿಚಿತ್ರಗಳಾದ ಅನೇಕ ಕಾರ್ಯಗಳನ್ನು ಮಾಡಿದಾಗ್ಯೂ ಶ್ರಮಾದಿದೋಷಗಳಪ್ರಸಕ್ತಿಯೇ ಇಲ್ಲದಿರುವ, ವಿಷ್ಣುಃ=ಶ್ರೀ ಪರಮಾತ್ಮನು, ವಿಶ್ವಂ=ಜಗತ್ತನ್ನು ಕರೋತಿ= ಸೃಷ್ಟಿಮಾಡುತ್ತಾನೆ. ವಿಷ್ಣುಃ= ಶ್ರೀ ಹರಿಯು, ಪೂರ್ಣಾಶೇಷಗುಣಾತ್ಮಕಃ= ಪ್ರತ್ಯೇಕವಾಗಿಯೂ ನಿರವಧಿಕಗಳಾದ ಸಮಸ್ತಗಳಾದ ಜ್ಞಾನ ಆನಂದ ಮೊದಲಾದ ಗುಣಗಳ ಸ್ವರೂಪನು.

ತಾ ॥ ಈ ಸಮನ್ವಯಾಧ್ಯಾಯದಲ್ಲಿ ನಾರಾಯಣಾಖ್ಯ ಪರಬ್ರಹ್ಮನಲ್ಲಿ ಪ್ರತಿಪಾದಿಸಲ್ಪಟ್ಟ ಸಕಲ ಶ್ರುತಿಸಮನ್ವಯಗಳಿಗೆ ಜನ್ಮಾದ್ಯಸ್ಯಯತಃ= ಎನ್ನುವ ಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿ ಕಾರಣತ್ವ ರೂಪಲಕ್ಷಣಸಿದ್ಧಿಯ ಫಲವೆಂದು ಸಿದ್ಧವಾಯಿತು. ತಥಾ ಚ ಈ ಸಮನ್ವಯಾಧ್ಯಾಯದಲ್ಲಿ ನಾಲ್ಕು ಪಾದಗಳಿಂದ ಅಪರ್ಯಾಯ ಅನಂತಾನಂತ ಶಬ್ದಗಳಿಗೆ ಮಹಾಯೋಗವಿದ್ವದ್ರೂಢಿಗಳಿಂದ ಪರಮಾತ್ಮನಲ್ಲಿಯೇ ಸಮನ್ವಯವನ್ನು ಪ್ರತಿಪಾದಿಸಿದುದರಿಂದ

ಆಯಾಯಾ ಶಬ್ದಗಳ ಪ್ರವೃತ್ತಿ ನಿಮಿತ್ತವಾದ ಪೂರ್ಣಾನಂದ ಮೊದಲಾದ ಅನಂತಗುಣಪೂರ್ಣತ್ವವು ಜನ್ಮಾದಿ ಸೂತ್ರದಲ್ಲಿ ಪ್ರಧಾನ ಲಕ್ಷಣವಾಗಿ ಅಭಿಪ್ರೇತವೆಂದು ಸಮರ್ಥಿತವಾಯಿತು. ॥ ೧೨೫ ॥ ೧೨೬ ॥ ೧೨೭ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ(ದ) ವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ಪ್ರಥಮಾಧ್ಯಾಯಸ್ಯ
ಚತುರ್ಥಃ ಪಾದಃ (ಯಃ) ॥ ಅಧ್ಯಾಯಶ್ಚ ಸಂಪೂರ್ಣಃ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ
ಒಂದನೇ ಅಧ್ಯಾಯದಲ್ಲಿ ನಾಲ್ಕನೇ ಪಾದವು ಸಮಾಪ್ತವಾಯಿತು ॥ ೧ ॥ ೪ ॥ ೬ ।

॥ ೧ನೇ ಅಧ್ಯಾಯವು ಸಂಪೂರ್ಣವಾಯಿತು ॥

ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯ ಯತಿನಾ ।
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತಾ
ವಯಂ ಪೂರ್ವಾಧ್ಯಾಯೇ ಚರಮಚರಣಃ ಪರ್ಯವಸಿತಃ ॥ ೧ ॥ ೪ ॥

ಆನಂದಾದಿಗುಣೋದ್ರಿಕ್ತಮಾನಂದಾದಿ ಪದಾಭಿದಂ ।
ಆನಂದಮುನಿಪಂ ವ್ಯಾಸಂ ಸ್ವಾನಂದಾಯ ಭಜೇ ಮುಹುಃ ॥

ಅನುವ್ಯಾಖ್ಯಾನಟೀಕೇಯಂ ಸುಧಾಸಾರಮನೋಹರಾ ।
ನ್ಯಾಯರತ್ನಾವಳೀನೀತಿಚಂದ್ರಿಕಾ ಭಾವಗರ್ಭಿತಾ ॥
ತಂತ್ರಿನಾರಾಯಣಾಖ್ಯೇನ ಭಾಷಾಯಾಂ ಸಾಧುತುಷ್ಟಯೇ ।
ರಚಿತಾ ಕೃಷ್ಣಪಾದಾಬ್ಜೇ ಸ್ವರ್ಪಿತಾ ಜಯತಾದ್ಭುವಿ ॥

